ಚಿದಾನಂದ ಸಮಗ್ರ ಸಂಪುಟ VI

# ಮಿಡುಕು : ಹುಡುಕು



ಚಿದಾನಂದ ಸಮಗ್ರ ಸಂಪುಟ VI

# ಮಿಡುಕು : ಹುಡುಕು




ಡಾ. ಎಂ. ಚಿದಾನಂದಮೂರ್ತಿ, ಎಂ.ಎ., ಪಿಎಚ್.ಡಿ.
ಕನ್ನಡ ಪ್ರಾಧ್ಯಾಪಕ (ನಿವೃತ್ತ), ಬೆಂಗಳೂರು ವಿಶ್ವವಿದ್ಯಾಲಯ




ಸಪ್ನ ಬುಕ್ ಹೌಸ್
ತುಂಗಾ ಕಾಂಪ್ಲೆಕ್ಸ್, ಗಾಂಧಿನಗರ, ಬೆಂಗಳೂರು - 560 009
ದೂರವಾಣಿ : 2266088

**MIḌUKU : HUḌUKU** — *(Chidananda Samagra Samputa, Vol-VI)* by **Dr. M. Chidananda Murthy**, Published by **Smt. Bhanumati S. Shah** on behalf of Sapna Book House, Gandhinagar, B'lore - 9 Tel. : 2266088.

ISBN : 81-280-0202-3





ಪುಟಗಳು : xxii + ii (ಚಿತ್ರಗಳು) + 667

ಪ್ರಥಮ ಮುದ್ರಣ : 2004

ಹಂಚಿಕೆದಾರರು :
**ಕರ್ನಾಟಕ ಬುಕ್ ಏಜೆನ್ಸಿ**
ತುಂಗಾ ಕಾಂಪ್ಲೆಕ್ಸ್, ಗಾಂಧಿನಗರ
ಬೆಂಗಳೂರು - 560 009
ದೂರವಾಣಿ : 2261871

ಮುಖಪುಟ ಕಲಾವಿದರು : ಶ್ರೀಪಾದ

ಅಕ್ಷರ ಜೋಡಣೆ : ಮನ್ಆನಂದ್ ಗ್ರಾಫಿಕ್ಸ್

ಮುದ್ರಣ : ರವಿ ಗ್ರಾಫಿಕ್ಸ್
ಬೆಂಗಳೂರು



# ಲೇಖಕನ ಮಾತು

"ಚಿದಾನಂದ ಸಮಗ್ರ ಸಂಪುಟ"ದ ಆರನೆಯ ಭಾಗವಾಗಿರುವ ಈ ಸಂಪುಟದ ಶೀರ್ಷಿಕೆ ಮೊದಲು "ಮಿಡುಕಾಟ : ಹುಡುಕಾಟ" ಎಂದಿದ್ದುದನ್ನು ಡಾ. ಎನ್.ಎಸ್. ತಾರಾನಾಥರ ಸಲಹೆ ಮೇರೆಗೆ "ಮಿಡುಕು : ಹುಡುಕು" ಎಂದು ಸಂಕ್ಷಿಪ್ತಗೊಳಿಸಿದೆ.

ಈ ಸಂಪುಟದಲ್ಲಿ ಮುಖ್ಯವಾಗಿ ಸಂಶೋಧನ ಚಟುವಟಿಕೆಗಳಿಗೆ, ಅದರ ವಿಧಾನ, ಅನುಭವಗಳು, ಕನ್ನಡದಲ್ಲಿ ನಡೆದಿರುವ ಸಂಶೋಧನೆಯ ವೀಕ್ಷಣೆ ಇವುಗಳನ್ನು ಕುರಿತಾದ ಬರಹಗಳೇ ಹೆಚ್ಚಾಗಿವೆ. ಯಾವನೇ ಸಂಶೋಧಕನ ಮನಸ್ಸಿನಲ್ಲಿ ಮೊದಲು ಯಾವುದೋ ಸ್ಪಂದನ, ಒಂದು ಅಲೆ, ಒಂದು ಮಿಡುಕು ಆರಂಭವಾಗುತ್ತದೆ. ಯಾವುದೋ ಸಮಸ್ಯೆಯು ಹೊಳೆಯುತ್ತಿದ್ದಂತೆ ಆ ಸಮಸ್ಯೆಗೆ ಅದರ ಬೆನ್ನಲ್ಲೇ ಏನೋ ತಾತ್ಕಾಲಿಕ ಪರಿಹಾರ ಕಾಣಿಸಿ ಕಣ್ಮರೆಯಾಗಿ ಅಥವಾ ಕಣ್ಣು ಮುಚ್ಚಾಲೆ ಆಟ ಆಡಿಸುತ್ತಿದ್ದಂತೆ ಸಂಶೋಧಕನ ಮನಸ್ಸು ಚಡಪಡಿಸುತ್ತದೆ; ಅವನಲ್ಲಿ ಒಂದು ಬಗೆಯ ಮಿಡುಕು ಆರಂಭವಾಗುತ್ತದೆ. ಒಳಗೇ ಆ ಕುದಿತ ಕ್ರಮೇಣ ಹೆಚ್ಚುತ್ತಾ ಬಂದು ಅವನು ಉತ್ತರಕ್ಕಾಗಿ ಚಡಪಡಿಸುತ್ತಾನೆ, ಉತ್ತರಕ್ಕಾಗಿ ವ್ಯವಸ್ಥಿತ ಪ್ರಯತ್ನವನ್ನು ಆರಂಭಿಸುತ್ತಾನೆ; ಉತ್ತರವನ್ನು ಹುಡುಕಲಿಕ್ಕೆ ಅವನು ಯತ್ನಿಸುತ್ತಾನೆ. ಒಟ್ಟು ಆ ಹಿನ್ನೆಲೆಯಲ್ಲಿ ಈ ಸಂಪುಟಕ್ಕೆ "ಮಿಡುಕು : ಹುಡುಕು" ಎಂಬ ಶೀರ್ಷಿಕೆಯನ್ನು ಇಟ್ಟಿದ್ದೇನೆ. ನನ್ನ ಜೀವನದ ಅನುಭವಗಳೂ ಕೂಡ ನನ್ನ ವೈಯಕ್ತಿಕ ಆಧ್ಯಾತ್ಮಿಕ ಮಿಡುಕು ಹುಡುಕುಗಳನ್ನು, ಅಂತೆಯೇ ಹೊರ ಪ್ರಪಂಚದ ಮಿಡುಕು ಹುಡುಕುಗಳನ್ನು ದಾಖಲಿಸಿವೆ. ಆಧ್ಯಾತ್ಮಿಕ ಹೊಯ್ದಾಟವೂ ಒಂದು ಬಗೆಯ ಸಂಶೋಧನೆಯೇ!

ಇಲ್ಲಿನ ಆಯಾ ವರ್ಷದ ಸಂಶೋಧನ ಸಮೀಕ್ಷೆಗಳು ಬೆಂಗಳೂರು ವಿಶ್ವವಿದ್ಯಾಲಯ ಹೊರ ತಂದ "ಸಾಹಿತ್ಯ ವಾರ್ಷಿಕ" ಸಂಪುಟಗಳಲ್ಲಿ ಪ್ರಕಟವಾದಂಥವು. ಕರಡು ತಿದ್ದುವಲ್ಲಿ ಸಹಕರಿಸಿರುವ ಡಾ. ಕೆ.ಪಿ. ಭಟ್ ಅವರಿಗೆ, ಈ ಸಂಪುಟವನ್ನು ಹೊರತಂದಿರುವ "ಸಪ್ನ ಬುಕ್ ಹೌಸ್" ಪ್ರಕಾಶನದವರಿಗೆ, ವಿಶೇಷವಾಗಿ ಶ್ರೀ ನಿತಿನ್ ಷಾ ಅವರಿಗೆ, ಹಾಗೂ ಶ್ರೀ ಆರ್. ದೊಡ್ಡೇಗೌಡ, ಅಕ್ಷರ ಜೋಡಣೆ ಮಾಡಿರುವ ಶ್ರೀಮತಿ ಮಂಜುಳ ಯೋಗಾನಂದ್ ಅವರಿಗೆ ನಾನು ಋಣಿಯಾಗಿದ್ದೇನೆ.

ಬೆಂಗಳೂರು - ಎಂ. ಚಿದಾನಂದ ಮೂರ್ತಿ
9-1-2003

# ಮುನ್ನುಡಿ

## ('ಸಂಶೋಧನೆ - ಒಂದು ಕಿರುಕೈಪಿಡಿ'ಗೆ)

ಸ್ನಾತಕೋತ್ತರ ಶಿಕ್ಷಣ ಮತ್ತು ಸಂಶೋಧನೆ ಈಚೀಚೆಗೆ ಎಲ್ಲ ವಿಶ್ವವಿದ್ಯಾನಿಲಯಗಳ ಪ್ರಧಾನ ಗುರಿಯಾಗುತ್ತಿದೆ. ಸಂಶೋಧನೆಯ ಮೂಲಕ ಹೊಸ ಹೊಸ ಸತ್ಯಗಳನ್ನು ಹೊರಹಾಕಿ ಜ್ಞಾನಕ್ಷಿತಿಜವನ್ನು ವಿಸ್ತಾರಗೊಳಿಸುವುದೇ ಅತ್ಯುಚ್ಚ ವಿದ್ಯಾಸಂಸ್ಥೆಗಳ ಮುಖ್ಯೋದ್ದೇಶವಾಗಿದೆ. ಈ ಕಾರಣದಿಂದ ಪದವಿಶಿಕ್ಷಣದ ನೇರ ಕಾರ್ಯಭಾರವನ್ನು ಬೇರೆ ಸಂಸ್ಥೆಗಳಿಗೆ ವರ್ಗಾಯಿಸಿ, ಅವರ ನಿಯಂತ್ರಣ ಕರ್ತವ್ಯವನ್ನು ಮಾತ್ರ ವಿಶ್ವವಿದ್ಯಾನಿಲಯಗಳು ತಮ್ಮಲ್ಲುಳಿಸಿಕೊಂಡಿವೆ.

ಸತ್ಯ ಶೋಧನೆಯೆ ಸಂಶೋಧನೆ. ಸತ್ಯಾನ್ವೇಷಣೆಯೆ ಸಕಲ ಜ್ಞಾನಶಾಖೆಗಳ ಲಕ್ಷ್ಯ. ಭೌತವಿಜ್ಞಾನವೊ ಭೂವಿಜ್ಞಾನವೊ, ಸಾಹಿತ್ಯವೊ ತತ್ತ್ವಶಾಸ್ತ್ರವೊ, ಚರಿತ್ರೆಯೊ ಭೂಗೋಳವೊ, ಸಮಾಜಶಾಸ್ತ್ರವೊ ಭಾಷಾಶಾಸ್ತ್ರವೊ ಯಾವುದೇ ಆಗಲಿ ಅದು ಸತ್ಯಾನ್ವೇಷಣೆಯ ಫಲ. ಅನ್ವೇಷ ಮಾರ್ಗ ಮಾಧ್ಯಮಗಳಲ್ಲಿ ಭಿನ್ನತೆ ಅಪಾರವಾಗಿರಬಹುದು. ದಾರಿ ಬೇರೆಯಾದರೂ ಕೂಡುದಾಣವೊಂದೆ. ಊಹೆ, ವೀಕ್ಷಣೆ, ಸಾಮಗ್ರಿಸಂಗ್ರಹ ಮತ್ತು ಪ್ರಯೋಗ ಸಂಶೋಧನೆಯ ತೇರಿನ ನಾಲ್ಕು ಚಕ್ರಗಳು. ಪ್ರತಿಭೆ ಕಲ್ಪನೆ ಪಾಂಡಿತ್ಯ ಮತ್ತು ಸತತ ಪ್ರಯತ್ನಗಳು ಅದರ ಚಾಲಕಶಕ್ತಿ ; ವಿಶ್ಲೇಷಣೆ ವಿವರಣೆಗಳು ಅದಕ್ಕೆ ಮಾಡುವ ಅಲಂಕಾರಗಳು. ಅಂಕಿ ಅಂಶಗಳ ಜಮಾವಣೆ, ಪ್ರಶ್ನಾವಳಿ, ಜನಸಂದರ್ಶನ, ಮಾದರಿಕಲೆತಗಳ ಮೂಲಕ ಸಾಮಗ್ರಿ ಸಂಗ್ರಹ ನಡೆಯುತ್ತದೆ. ಶಾಸ್ತ್ರಕಾರನಂತೆಯೇ ಒಂದಲ್ಲ ಒಂದು ರೀತಿಯಲ್ಲಿ ಸಾಹಿತಿ - ತತ್ತ್ವಜ್ಞಾನಿಯೂ ಸಂಶೋಧಕನಾಗಬೇಕಾಗುತ್ತದೆ. ಕಾದಂಬರಿ ನಾಟಕ ವಿಮರ್ಶೆಗಳಲ್ಲಿ ಗ್ರಂಥ ಸಂಪಾದನೆಯಲ್ಲಿ ಸಂಶೋಧನೆಯ ಪಾತ್ರ ಇದ್ದೇ ಇರುತ್ತದೆ ; ಸೃಜನಶಕ್ತಿಯ ಜತೆಗೆ ಪಾಂಡಿತ್ಯವೂ ಅತ್ಯವಶ್ಯವಾಗುತ್ತದೆ. ವಸ್ತುನಿಷ್ಠ ದೃಷ್ಟಿ ಸಂಶೋಧನೆಯ ಆದ್ಯ ಹಾಗೂ ಪ್ರಮುಖ ಲಕ್ಷಣವಾದರೂ ಪ್ರತಿಭೆ ಮತ್ತು ಕಲ್ಪನೆಗಳಿಗೆ ಅಲ್ಲಿ ಜಾಗವಿಲ್ಲವೆಂದು ಹೇಳುವಂತಿಲ್ಲ,

ಸಂಶೋಧಕ ಭಾವವಶನಾಗಬಾರದು, ನಿಜ ; ಆದರೆ ಕಲ್ಪನಾರಹಿತನಾಗಿರಲಾರ. ಭೂಮಿಗೆ ಬಿದ್ದ ಸೇಬನ್ನು ಕಂಡ ನ್ಯೂಟನ್ ಅಸಾಧಾರಣ ಕಲ್ಪನಾಶೀಲನಾಗದಿದ್ದಲ್ಲಿ ಆ ಅಸಾಮಾನ್ಯ ವಿಶ್ವ ತತ್ತ್ವ ಅವನ ಮತಿಯಲ್ಲಿ ಸ್ಫುರಿಸುತ್ತಿತ್ತೆ? ಅಸದೃಶ ಕಲ್ಪನೆ ಕ್ರಿಯಾಶಕ್ತಿಯಾಗಿದ್ದದ್ದರಿಂದಲೇ ಫ್ಯಾರಡೆ ಕಡಲಿನ ಮಿಂಚು ಮೀನುಗಳ ಮೂಲಕ ವಿದ್ಯುತ್ ಶಕ್ತಿಯ ಸೆರಗನ್ನು ಕಂಡದ್ದು. ಸ್ಫುರಣ ಧಾರಣ ಚಿಂತನಗಳ ಮೂಲಕ ಸಂಶೋಧನಕ್ರಿಯೆ ವಿಕಾಸಗೊಳ್ಳುತ್ತದೆ. ಬರಿಯ ಆಧಾರಗಳ ಮೂಲಕವೇ ಸದಾ ಸತ್ಯ ಸ್ಫುರಿಸುತ್ತದೆನ್ನುವಂತಿಲ್ಲ. ಎಷ್ಟೋ ವೇಳೆ ತಾತ್ಪೂರ್ವಿಕ ಸಿದ್ಧಾಂತ ಕಲ್ಪನೆ ಅದಕ್ಕೆ ಪ್ರೇರಕವಾದೀತು. ಸಂಶೋಧನೆಯಲ್ಲಿ ಕಲ್ಪನೆ ಹಿನ್ನೆಲೆಯಲ್ಲಿದ್ದು ವಸ್ತುನಿಷ್ಠ ದೃಷ್ಟಿ ಮುನ್ನೆಲೆಯಲ್ಲಿರಬೇಕಾದ್ದು ಅತ್ಯಗತ್ಯ.

ಆದರೆ ಸತ್ಯವೆನ್ನುವುದು ವಸ್ತುನಿಷ್ಠವಾದದ್ದಷ್ಟೇ ಅಲ್ಲ, ಆತ್ಮನಿಷ್ಠವೂ ಹೌದು. ಸಂಶೋಧಕ ವಸ್ತುನಿಷ್ಠ ಸತ್ಯದ ಆವಿಷ್ಕಾರದಲ್ಲಿ ತೊಡಗಿದ್ದರೆ ಕವಿ ಋಷಿಗಳು ಆತ್ಮನಿಷ್ಠ ಸತ್ಯದ ಅನುಭೂತಿಯಲ್ಲಿ ನಿರತರಾಗಿರುತ್ತಾರೆ. ಗಾಂಧೀಜಿ ತಮ್ಮ ಜೀವನವೆಲ್ಲ ಸತ್ಯಶೋಧನವೆಂದೇ ಬಗೆದರು, ತಮ್ಮ

ಆತ್ಮಕಥನವನ್ನು ಸತ್ಯ ಪ್ರಯೋಗಾನುಭವವೆಂದೆ ಭಾವಿಸಿದರು. ಕಾಲ ಪಾಠಾರ್ಥ - ನಿರ್ಣಯಕಾರರಂತೆ ಅವ್ಯಕ್ತವಾದ ಚಿರಂತನ ಸತ್ಯದ ಆವಿಷ್ಕಾರದಲ್ಲಿ ತೊಡಗಿರುವ ಕವಿ ಋಷಿಗಳಾಗಲಿ, ಅವರ ಕೃತಿಗಳಲ್ಲಡಗಿರುವ ನಿಜಾರ್ಥವನ್ನು ಹೊರಗೆಡಹುವ ವಿಮರ್ಶಕ ವ್ಯಾಖ್ಯಾನಕಾರರಾಗಲಿ ಸತ್ಯಸಂಶೋಧಕರೆಂಬ ಹೆಸರಿಗೆ ಪಾತ್ರರಾಗುತ್ತಾರೆ.

ಆದ್ದರಿಂದ ಸಂಶೋಧನೆಯಲ್ಲಿ ಎರಡು ವಿಧ ಕಂಡುಬರುತ್ತದೆ : ಶುದ್ಧ ಅಥವಾ ಪ್ರತ್ಯಕ್ಷ ಸಂಶೋಧನೆ ; ಸೃಜನಾತ್ಮಕ ಅಥವಾ ಪರೋಕ್ಷ ಸಂಶೋಧನೆ. ಎರಡರಲ್ಲೂ ಪ್ರಾಮಾಣಿಕತೆ ಅತ್ಯವಶ್ಯ ; ಆದರೆ ಅದರ ಸ್ವರೂಪ ಬೇರೆ ಬೇರೆ. ಜ್ಞಾನಕ್ಷೇತ್ರದಲ್ಲಿ ಎರಡಕ್ಕೂ ಸಮಾನಸ್ಥಾನವುಂಟು, ಬೆಲೆಯುಂಟು.

## 2

ಈ ಪುಸ್ತಿಕೆ ಶುದ್ಧ ಅಥವಾ ವಸ್ತುನಿಷ್ಠ ಸತ್ಯದ ಸಂಶೋಧನೆಯನ್ನು ವಿವೇಚಿಸುತ್ತದೆ. ಒಬ್ಬ ನಿಷ್ಠಾವಂತ ಮೇಧಾವಿಯ ಹತ್ತಾರು ವರ್ಷಗಳ ವ್ಯಾಸಂಗ - ಬೋಧನೆ - ಸಂಶೋಧನೆಗಳ ಫಲವಾಗಿ ಇದು ರೂಪತಾಳಿದೆ. ಡಾ. ಚಿದಾನಂದಮೂರ್ತಿಗಳು ಈಗಾಗಲೇ ವಿದ್ವದಾದರಣೆಗೆ ಪಾತ್ರವಾಗುವಂಥ ನಾನಾ ಸಂಶೋಧನ ಲೇಖನಗಳನ್ನೂ ಪುಸ್ತಕಗಳನ್ನೂ ಪ್ರಕಟಿಸಿದ್ದಾರೆ. ಅವರ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' ಕನ್ನಡ ಸಂಶೋಧನ ಮಾರ್ಗದಲ್ಲಿಯೇ ಒಂದು ಮೈಲಿಗಲ್ಲು. ವಿಷಯ ಬಾಹುಳ್ಯದಿಂದ, ಸಾಮಗ್ರಿ ಸಂಗ್ರಹ ಸಾಮರ್ಥ್ಯದಿಂದ, ಸರಳಪ್ರತಿಪಾದನ ಕ್ರಮದಿಂದ, ತರ್ಕ ಸಾಮಂಜಸ್ಯದಿಂದ, ಪ್ರಾಮಾಣಿಕತೆಯಿಂದ, ವಸ್ತುನಿಷ್ಠ ದೃಷ್ಟಿಯಿಂದ, ನೂತನತೆಯ ಮಹತ್ತಿನಿಂದ ಅವರ ಬರೆಹಗಳು ಸಾಂದ್ರವಾಗಿವೆ, ಆದರಣೀಯವಾಗಿವೆ.

ಸಂಶೋಧನೆ, ಸಂಶೋಧಕ, ಸಂಶೋಧನ ವಿಷಯ ಮತ್ತು ಸಂಶೋಧನ ವಿಧಾನಗಳನ್ನು ಈ ಹೊತ್ತಿಗೆ ಸಂಗ್ರಹವಾಗಿ ಕೂಲಂಕಷವಾಗಿ ಚರ್ಚಿಸಿದೆ. ಗ್ರಂಥಕಾರರ ಸ್ವಾನುಭವ ಸಂಗತಿಗಳ ನಿರೂಪಣೆಯಿಂದ ಇದರ ಮಹತ್ತು ಹೆಚ್ಚಿದೆ. ಇದು ವೈಜ್ಞಾನಿಕವಾಗಿದ್ದೂ ಸರಳವಾಗಿದೆ. ಸಂಶೋಧನೆಗೆ ಕೈ ಹಾಕುವ ವಿದ್ಯಾರ್ಥಿಯ ಪ್ರಾಥಮಿಕ ಅಗತ್ಯಗಳೇನು? ಅವನ ಶೈಲಿ ಎಷ್ಟರಮಟ್ಟಿಗೆ ನಿರಲಂಕೃತವಾಗಿರಬೇಕು? ಅವನು ಬಳಸುವ ಟಿಪ್ಪಣಿ ಚೀಟಿಗಳ ಆಕಾರ ಎಷ್ಟಿರಬೇಕು ? ಸಮಸ್ಯೆಗಳನ್ನು ಹೇಗೆ ಆರಿಸಿಕೊಳ್ಳಬೇಕು ? ಬಿಡಿಸಬೇಕು ? ಸಾಮಗ್ರಿ ಸಂಗ್ರಹಣ ಹೇಗೆ ನಡೆಯಬೇಕು ? ನಿರ್ದೇಶಕನ ಪಾತ್ರವೇನು ? - ಇವನ್ನು ಕುರಿತ ಚರ್ಚೆ ಇಲ್ಲಿ ಮೈಗೂಡಿದೆ. ಇದು ಶ್ರೀಯುತರ ಸಂಶೋಧನ ನಿಷ್ಠೆಗೂ ಪಾಂಡಿತ್ಯಕ್ಕೂ ವಿವೇಚನಸಾಮರ್ಥ್ಯಕ್ಕೂ ಸಾಕ್ಷಿಯಾಗಿದೆ. ಇಂಥ ಗ್ರಂಥವನ್ನು ಕನ್ನಡದಲ್ಲಿ ಪ್ರಪ್ರಥಮವಾಗಿ ಬರೆದ ಶ್ರೇಯಸ್ಸಿಗೆ ಶ್ರೀ ಮೂರ್ತಿಯವರು ಪಾತ್ರರಾಗಿದ್ದಾರೆ.

ಸಾಲಂಕೃತ ಶೈಲಿ ಸಂಶೋಧನ ವಿಚಾರಮಂಡನೆಗೆ ಅಡ್ಡಿಯಾಗುವ ಬದಲು ಅದನ್ನು ಸ್ವಾದುಗೊಳಿಸಬಲ್ಲುದೆಂಬುದಕ್ಕೆ ಅಲ್ಲಲ್ಲಿ ನುಸುಳಿ ಬಂದಿರುವ ಸುಂದರ ಉಪಮೆಗಳು ಸಾಕ್ಷಿಯಾಗಿವೆ. ಸಂಶೋಧನ ಕ್ಷೇತ್ರದಲ್ಲಿ ನಡೆಯುವ ಕೆಲಸವನ್ನು ಕೋಟೆಗಾಳಗಕ್ಕೆ ಹೋಲಿಸಿದ್ದಾರೆ. 'ಕುದುರೆ ತನ್ನ ಯಜಮಾನ ಒಮ್ಮೆ ಪ್ರೀತಿಯಿಂದ ತಟ್ಟಿದರೆ ಸಾಕು, ಹತ್ತು ಚಾಟಿ ಏಟುಗಳನ್ನು

ಸಹಿಸುತ್ತದೆ' ಎಂಬುದು ಮತ್ತೊಂದು ಉಪಮೆ. "ಬುದ್ಧಿಶಕ್ತಿ ಸ್ವಲ್ಪ ಕಡಿಮೆಯಿದ್ದರೂ, ವ್ಯವಸ್ಥಿತವಾದ ಶ್ರಮಕ್ಕೆ ಸಿದ್ಧರಾಗಿರುವ ಯಾರೂ ಸಂಶೋಧಕರಾಗಬಹುದು" ಎಂಬ ಅವರ ಹೇಳಿಕೆ ಆಂಶಿಕವಾಗಿ ಸರಿಯೆಂದು ತೋರುತ್ತದೆ. ಒಟ್ಟಿನಲ್ಲಿ ಸಂಶೋಧನೆಗೆ ತೊಡಗುವವರು ಮೊದಲೇ ಈ ಪುಸ್ತಿಕೆಯನ್ನೋದಿಕೊಂಡರೆ ತುಂಬ ಪ್ರಯೋಜನವಾಗುತ್ತದೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

ಸಂಶೋಧಕರ ಕೈಪಿಡಿಯಂತಿರುವ 'ಸಂಶೋಧನೆ' ಕನ್ನಡ ಅಧ್ಯಯನ ಸಂಸ್ಥೆಯ ಎರಡನೆಯ ಪ್ರಕಟಣೆಯಾಗಿ ಹೊರಬೀಳುತ್ತಿರುವುದು ಸಂತೋಷದ ಸಂಗತಿ. ಸಂಸ್ಥೆಯ ಮೇಲಣ ಅಭಿಮಾನದಿಂದ ಈ ಪುಸ್ತಿಕೆಯನ್ನು ಬರೆದುಕೊಟ್ಟ ಡಾ. ಎಂ. ಚಿದಾನಂದಮೂರ್ತಿಯವರಿಗೆ ವಂದನೆಗಳು ಸಲ್ಲಬೇಕಾಗಿವೆ. ಇದನ್ನು ಸುಂದರವಾಗಿ ಅಚ್ಚುಮಾಡಿಕೊಟ್ಟ ಮೈಸೂರು ವಿಶ್ವವಿದ್ಯಾನಿಲಯದ ಅಚ್ಚುಕೂಟದ ಡೆಪ್ಯೂಟಿ ಡೈರೆಕ್ಟರ್ ಶ್ರೀ ಎಚ್. ನರಸಣ್ಣ ಎಂ.ಎ. ಅವರಿಗೂ ಅವರ ಸಿಬ್ಬಂದಿ ಬಳಗಕ್ಕೂ ನನ್ನ ಮೆಚ್ಚುಗೆಯಿದೆ.

ದೇ. ಜವರೇಗೌಡ<br>ಪ್ರಧಾನ ಸಂಪಾದಕ

# ಅರಿಕೆ

## ('ಸಂಶೋಧನೆ - ಒಂದು ಕಿರುಕೈಪಿಡಿ'ಗೆ)

ಕನ್ನಡ ಸಂಶೋಧನ ಕ್ಷೇತ್ರದಲ್ಲಿ ಕೆಲಸಮಾಡುವವರ ಸಂಖ್ಯೆ ಹೆಚ್ಚುತ್ತಿದೆ. ಆದರೂ ಹಿರಿಯ ವಿದ್ವಾಂಸರಲ್ಲಿ ಒಂದಿಬ್ಬರು ತಾವು ಇತರ ಗ್ರಂಥಗಳಿಗೆ ಬರೆದ ಮುನ್ನುಡಿಗಳಲ್ಲಿ ಪ್ರಾಸಂಗಿಕವಾಗಿ ಸಂಶೋಧನೆಯನ್ನು ಕುರಿತಾದ ತಮ್ಮ ಕೆಲವು ಭಾವನೆಗಳನ್ನು ಪ್ರಕಟಪಡಿಸಿರುವರೇ ಹೊರತು ಅದನ್ನೇ ಕುರಿತಾದ ಪ್ರತ್ಯೇಕ ಬರಹವು ಕನ್ನಡದಲ್ಲಿ ಕಾಣಿಸಿಕೊಂಡಿಲ್ಲ. ನನಗೆ ಈ ಪುಟ್ಟ ಪುಸ್ತಕ ಬರೆಯಲು ಪ್ರಚೋದನೆ ಕೊಟ್ಟದ್ದು ಇದೇ.

ಇಂಗ್ಲಿಷಿನಲ್ಲಿ ಸಂಶೋಧನೆ, ಸಂಶೋಧನ ನಿಬಂಧ ಮತ್ತು ಲೇಖನಗಳನ್ನು ಸಿದ್ಧಪಡಿಸುವ ಬಗೆ ಮುಂತಾದುವನ್ನು ಕುರಿತ ಹಲವು ಗ್ರಂಥಗಳಿವೆ. ಅವುಗಳಲ್ಲಿ ಕೆಲವನ್ನು ನಾನು ಓದಿಯೂ ಇದ್ದೇನೆ. ಆದರೆ ಅದು ಬಹಳ ಹಿಂದೆ. ಪ್ರೊ. ತೀ. ನಂ. ಶ್ರೀಕಂಠಯ್ಯ, ಪ್ರೊ. ಡಿ. ಎಲ್. ನರಸಿಂಹಾಚಾರ್, ಡಾ. ಎ. ವೆಂಕಟಸುಬ್ಬಯ್ಯನವರಂತಹ ಶ್ರೇಷ್ಠ ಸಂಶೋಧಕರ ಬಳಿ ಒಡನಾಡಿ ಅವರೊಡನೆ ಹಲವು ಸಮಸ್ಯೆಗಳನ್ನು ಚರ್ಚಿಸಿದ್ದೇನೆ. ಅವರ ಹಲವಾರು ಅನುಭವಗಳನ್ನು ಪರಿಚಯಮಾಡಿಕೊಂಡಿದ್ದೇನೆ. ಈ ಹತ್ತು ವರ್ಷ ಸಂಶೋಧನ ಕ್ಷೇತ್ರದಲ್ಲಿ ಅಲ್ಪ ಸ್ವಲ್ಪ ಕೆಲಸಮಾಡಿ ನಾನೂ ನನ್ನದೇ ಆದ ಹಲವು ಅನುಭವಗಳನ್ನು ಪಡೆದಿದ್ದೇನೆ. ಈ ಎಲ್ಲ ಅನುಭವಗಳೇ ಈ ಪುಸ್ತಕದ ಮೂಲಸಾಮಗ್ರಿ. ಅವುಗಳನ್ನು ಹೇಳಿಕೊಳ್ಳುವುದರಿಂದ ಇತರ ಕಿರಿಯ ಸಂಶೋಧಕರಿಗೆ ಅನುಕೂಲವಾದೀತು ಎಂಬ ಆಸೆಯನ್ನೂ ಇಟ್ಟುಕೊಂಡಿದ್ದೇನೆ.

ಸಾಹಿತ್ಯ ಕ್ಷೇತ್ರದಲ್ಲಿ ಮಾತ್ರವಲ್ಲದೆ ಇತರ ಕ್ಷೇತ್ರಗಳಲ್ಲಿ ಕೆಲಸ ಮಾಡುವ ಸಂಶೋಧಕರಿಗೂ ಈ ಪುಸ್ತಕ ಸಹಾಯಕವಾಗಲಿ ಎಂಬ ಆಸೆ ನನ್ನದು. ಅದಕ್ಕಾಗಿ ಅರ್ಥಶಾಸ್ತ್ರ, ರಾಜ್ಯಶಾಸ್ತ್ರ, ಸಾಹಿತ್ಯಗಳಲ್ಲಿ ಸಂಶೋಧನೆ ನಡೆಸಿದ ಸಂಶೋಧಕರನ್ನು ಕುಳ್ಳಿರಿಸಿಕೊಂಡು ಈ ಪುಸ್ತಕದ ಬಹುಭಾಗವನ್ನು ಅವರ ಮುಂದೆ ಓದಿದೆ. ನಾವೆಲ್ಲರೂ ಕೂಡಿ ಹಲವು ಸಂಗತಿಗಳನ್ನು ಚರ್ಚಿಸಿದೆವು. ಸಂಶೋಧನೆಯ ಉದ್ದೇಶ ಬಹುಮಟ್ಟಿಗೆ ಎಲ್ಲ ಕ್ಷೇತ್ರಗಳಿಗೂ ಸಮಾನವಾದರೂ, ಸಮಸ್ಯೆಗಳನ್ನು ಬಿಡಿಸುವಲ್ಲಿ ಅನುಸರಿಸುವ ರೀತಿ ಎಲ್ಲ ಕಡೆಯಲ್ಲಿಯೂ ಒಂದೇ ಬಗೆಯಾಗಿರುವುದಿಲ್ಲವೆಂಬುದು ತಿಳಿಯಿತು. ಆದರೂ ಇಲ್ಲಿಯ ನಿರೂಪಣೆ ಆದಷ್ಟು ಸಾರ್ವತ್ರಿಕವಾಗಿರುವಂತೆ ಮಾಡಲು ಪ್ರಯತ್ನಿಸಿದ್ದೇನೆ.

ನನ್ನ ಜೊತೆ ಕುಳಿತು ಮೇಲೆ ಹೇಳಿದ ಚರ್ಚೆಗಳಲ್ಲಿ ಭಾಗವಹಿಸಿದ ಅರ್ಥಶಾಸ್ತ್ರ ವಿಭಾಗದ ಶ್ರೀಗಳಾದ ಅಬ್ದುಲ್ ಅಜೀಜ್ ಮತ್ತು ಜಿ. ಟಿ. ಮರುಳಸಿದ್ಧಪ್ಪ, ರಾಜ್ಯಶಾಸ್ತ್ರ ವಿಭಾಗದ ಎಂ. ಉಮಾಪತಿ, ಕನ್ನಡ ವಿಭಾಗದ ಪ್ರಧಾನ್ ಗುರುದತ್, ಎಚ್.ಎಸ್. ಹರಿಶಂಕರ್ ಮತ್ತು ಎಸ್. ಶಿವಣ್ಣ ಇವರಿಗೆ ನಾನು ಕೃತಜ್ಞನಾಗಿದ್ದೇನೆ.

ಈ ಪುಸ್ತಕದ ಪ್ರಕಟಣೆಯ ವಿಷಯದಲ್ಲಿ ಆಸಕ್ತಿಯನ್ನು ತೋರಿ ಇದು ಬೆಳಕಿಗೆ ಬರಲು ಮೂಲಕಾರಣರಾದ ಕನ್ನಡ ಅಧ್ಯಯನ ಸಂಸ್ಥೆಯ ಡೈರೆಕ್ಟರ್ ಪ್ರೊ. ದೇ. ಜವರೇಗೌಡ ಅವರಿಗೆ ವಂದನೆಗಳನ್ನು ಸಲ್ಲಿಸುವುದು ನನ್ನ ಸಂತೋಷದ ಕರ್ತವ್ಯವಾಗಿದೆ. ಕನ್ನಡ ಅಧ್ಯಯನ ಸಂಸ್ಥೆಯು ಇದನ್ನು ಪ್ರಕಟಿಸುತ್ತಿರುವುದು ಮತ್ತು ಮೈಸೂರು ವಿಶ್ವವಿದ್ಯಾನಿಲಯದ ಅಚ್ಚುಕೂಟ ಇದನ್ನು ಮುದ್ರಿಸುತ್ತಿರುವುದು ನನಗೆ ಹೆಮ್ಮೆಯನ್ನು ತಂದಿದೆ.

ಮೈಸೂರು - ಎಂ. ಚಿದಾನಂದ ಮೂರ್ತಿ
1-8-1967

# ಲೇಖಕನ ಮಾತು

## (ಎರಡನೆಯ ಮುದ್ರಣ)

ನನಗೆ ಪಿಎಚ್.ಡಿ. ಪದವಿ ಪ್ರದಾನವಾದ ಹೊಸತರಲ್ಲಿ ಆ ಉತ್ಸಾಹ ಸಂಭ್ರಮಗಳಲ್ಲಿ ಬರೆದ 'ಸಂಶೋಧನೆ' ಕಿರುಕೃತಿಯು ಮರುಮುದ್ರಣಗೊಂಡಿರುವುದು ನನಗೆ ಅತ್ಯಂತ ಹರ್ಷವನ್ನು ತಂದಿದೆ. ಶ್ರೇಷ್ಠರ ಮಾರ್ಗದರ್ಶನ ಪಡೆದು ಸಂಶೋಧನ ಮಾರ್ಗದಲ್ಲಿ ನಡೆದ ಅನುಭವದ ಹಿನ್ನೆಲೆ ಆಗ ಇದ್ದುದು ನಿಜವಾದರೂ, ಮುಂದೆ ಸಹಜವಾಗಿಯೇ ಆ ಅನುಭವ ಬೆಳೆಯಿತು, ಶ್ರೀಮಂತಗೊಂಡಿತು. ಸುಮಾರು ಇಪ್ಪತ್ತು ವರ್ಷಗಳಿಗೂ ಹಿಂದೆ ಅಂತಹ ಒಂದು ಪ್ರತ್ಯೇಕ ದೊಡ್ಡ ಕೃತಿಯನ್ನು ಬರೆಯುವ ಯೋಜನೆ ಹಾಕಿಕೊಂಡು ಕಾರ್ಯಪ್ರವೃತ್ತನಾದೆ. ಆ ಹೊತ್ತಿಗೆ ನಾನೇ ಹಲವು ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ಮಾಡಿದ್ದೆ, ಮತ್ತು ಅಂತಹ ಮಾರ್ಗದರ್ಶನದ ಲಾಭ ನನಗಾಗಿತ್ತು ಎಂಬುದನ್ನು ಹೇಳಬೇಕಾಗಿಲ್ಲ. ಸಂಶೋಧನ ವಿಧಿ ವಿಧಾನಗಳ ಬಗ್ಗೆ ಹಲವು ಕೃತಿಗಳನ್ನೂ ಓದಬೇಕಾಯ್ತು - ಏಕೆಂದರೆ ಆ ಕುರಿತಾಗಿ ನಾನು ಎಂ.ಎ. ವಿದ್ಯಾರ್ಥಿಗಳಿಗೆ ಕೆಲಕಾಲ ಪಾಠ ಹೇಳುವ ಅವಕಾಶವೂ ದೊರಕಿತ್ತು. ಆದರೆ ಆ ನಿಯೋಜಿತ ಕೃತಿ ಹೊರಬರಲಿಲ್ಲವೆಂಬ ಕೊರಗನ್ನಿಟ್ಟುಕೊಂಡು ಪ್ರಯೋಜನವಿಲ್ಲ.

ಈಗಲೂ ನನ್ನ 'ಸಂಶೋಧನೆ' ಪುಸ್ತಿಕೆ ಸಂಶೋಧನ ವಿದ್ಯಾರ್ಥಿಗಳಿಗೆ ಉಪಯುಕ್ತವಾಗಿರುವುದನ್ನು ಮನಗಂಡ ಶ್ರೀ ಡಿ.ವಿ.ಕೆ. ಮೂರ್ತಿಯವರು ಅದರ ಪುನರ್ಮುದ್ರಣವನ್ನು ಹೊರತಂದಿರುವುದಕ್ಕೆ, ಕರಡುಗಳನ್ನು ತಿದ್ದಿ ಸಹಾಯ ಮಾಡಿರುವ ಆತ್ಮೀಯ ಡಾ. ಎನ್. ಎಸ್. ತಾರಾನಾಥ ಅವರಿಗೆ ನಾನು ಬಹುವಾಗಿ ಋಣಿಯಾಗಿದ್ದೇನೆ. ಇಂದಿಗೂ ನನ್ನ ಅಧ್ಯಯನದ ಸಮಯದಲ್ಲಿ, ಕ್ಷೇತ್ರ ಕಾರ್ಯಗಳಲ್ಲಿ ಹೊಸ ಸಂಗತಿಗಳನ್ನು ಗುರುತಿಸಿ ಸಂತೋಷವನ್ನು ಅನುಭವಿಸುತ್ತಿದ್ದೇನೆ ಎಂಬ ಅಂಶವನ್ನು ದಾಖಲಿಸಲು ಬಯಸುತ್ತೇನೆ.

ಬೆಂಗಳೂರು - ಎಂ. ಚಿದಾನಂದ ಮೂರ್ತಿ
9-11-2001

# ಪ್ರಸ್ತಾವನೆ

## ("ಕನ್ನಡಾಯಣ")

ಈ ಕೃತಿಯನ್ನು 1985ರಲ್ಲಿ ಮಾಡಿಕೊಂಡ ಟಿಪ್ಪಣಿಗಳನ್ನು ಆಧರಿಸಿ ಬರೆದಿರುವುದರಿಂದ ಕೆಲವು ಮಿತಿಗಳು ಸಂಪ್ರಾಪ್ತವಾಗಿರುವುದು ನನಗೆ ಸ್ವಲ್ಪ ಬೇಸರವುಂಟುಮಾಡಿದೆ. 11.5.85 ರಿಂದ 23.6.85ರವರೆಗೆ ತುಮಕೂರು ಪಕ್ಕದ ಸಿದ್ಧಗಂಗೆಯಿಂದ ಹಂಪಿವರೆಗೆ ಒಬ್ಬನೇ ಕಾಲ್ನಡಗೆ ಪ್ರವಾಸವನ್ನು ಮಾಡುತ್ತ ಆಯಾ ದಿನವೇ (ಅಥವಾ ಮಾರನೆಯ ದಿನ) ಆಯಾ ದಿನ ಅಥವಾ ದಿನಗಳಲ್ಲಿ ಕಂಡದ್ದನ್ನು ಕೇಳಿದ್ದನ್ನು ಅನುಭವ ಆಲೋಚನೆಗಳನ್ನು ಟಿಪ್ಪಣಿ ಮಾಡಿದ್ದೆ. ಆ ವರ್ಷವೇ (1985 - 86) ಆ ಟಿಪ್ಪಣಿಗಳನ್ನು ಈ ರೀತಿ ಕೃತಿರೂಪಕ್ಕೆ ಇಳಿಸಿದ್ದರೆ ಚೆನ್ನಾಗಿತ್ತು. ಟಿಪ್ಪಣಿಗಳಲ್ಲದೆ ಅಲ್ಲಿಲ್ಲದ ಎಷ್ಟೋ ವಿಷಯಗಳು ಮನಸ್ಸಿನಲ್ಲಿ ಆಗ ಹಚ್ಚ ಹಸುರಾಗಿದ್ದವು. ಆದರೆ ನನ್ನನ್ನು ನಾನು ತೀವ್ರವಾಗಿ ಕನ್ನಡದ ಕೆಲಸಗಳಲ್ಲಿ ತೊಡಗಿಸಿಕೊಂಡದ್ದರಿಂದ ಆಗಾಗ ಬೇರೆ ಬೇರೆ ಸಣ್ಣ ಪುಟ್ಟ ಲೇಖನಗಳನ್ನು ಬರೆದೆನೇ ಹೊರತು ಈ ರೀತಿ ಒಂದು ಪೂರ್ಣಪ್ರಮಾಣದ ಕೃತಿಯನ್ನು ಬರೆಯಲು ಸಮಯವು ಲಭ್ಯವಾಗದೇ ಹೋಯ್ತು. ಇಲ್ಲಿಯವರೆಗೆ ಹೆಚ್ಚು ಕಡಿಮೆ ಹದಿನಾಲ್ಕು ವರ್ಷಗಳೇ ಕಳೆದಿವೆ. ಎಷ್ಟೋ ವಿಷಯಗಳು (ಸಂಗತಿಗಳು, ವ್ಯಕ್ತಿಗಳು, ಅನುಭವಗಳು) ನೆನಪಿನಿಂದ ಜಾರಿವೆ. ಇದರಿಂದ ಅನಿವಾರ್ಯವಾಗಿ ಬಹುಮಟ್ಟಿಗೆ ಟಿಪ್ಪಣಿಗಳನ್ನವಲಂಬಿಸಿ ಈ ಕೃತಿಯನ್ನು ರಚಿಸಬೇಕಾಯ್ತು. ನನ್ನ ಪ್ರವಾಸದಲ್ಲಿ ನನ್ನನ್ನು ಆತ್ಮೀಯವಾಗಿ ಕಂಡ ಕೆಲವರು ಈ ಮಧ್ಯೆ ದಿವಂಗತರಾಗಿರುವುದು ನನಗೆ ನೋವುಂಟುಮಾಡಿದೆ.

ಒಂದು ಮಾತಂತೂ ನಿಜ. ನನ್ನ ಈ ಅರವತ್ತೊಂಬತ್ತನೆಯ ವಯಸ್ಸಿನಲ್ಲಿ ಈ ಕೃತಿಯನ್ನು ರಚಿಸುವಾಗ ಮತ್ತೊಮ್ಮೆ ನನ್ನ ಆ ಕಾಲ್ನಡಗೆ ಪ್ರವಾಸವನ್ನು ಮಾನಸಿಕವಾಗಿ ಪುನರನುಭವಿಸಿದ ಲಾಭವನ್ನು ಪಡೆದೆ. ಇಂತಹ ಪುಸ್ತಕವನ್ನು ಅಥವಾ ಯಾವುದೇ ಪುಸ್ತಕವನ್ನು ಏಕೆ ಬರೆದೆ ಎಂಬಂತಹ ಪ್ರಶ್ನೆಗೆ ಯಾವುದೇ ಲೇಖಕನೂ ಉತ್ತರಿಸಲಾರ. ಇದನ್ನು ಬರೆಯುವುದರಲ್ಲಿ ಒಂದು ಸಂತೋಷವಿದೆಯೆಂಬುದು ಆ ಪ್ರಶ್ನೆಗೆ ಖಂಡಿತ ಪೂರ್ಣ ಉತ್ತರವಲ್ಲದಿದ್ದರೂ ಎಲ್ಲ ಲೇಖಕರೂ ಅಂತಹ ಮಾತನ್ನಾಡಿ ಪುಸ್ತಕ ಬರೆದುದಕ್ಕೆ ಅಂತಹ ಕಾರಣವನ್ನು ಕೊಡಲು ಮುಂದಾಗುತ್ತಾರೆ ಎಂಬುದು ಎಲ್ಲರಿಗೂ ತಿಳಿದ ವಿಷಯವಾಗಿದೆ. ಬರಹವು ಲೇಖಕ ತನ್ನನ್ನು ತಾನು ಹಗುರಗೊಳಿಸಿಕೊಳ್ಳುವ ಸಾಧನವೂ ಹೌದು.

ನಾನು ಕಾಲ್ನಡಗೆ ಪ್ರವಾಸವನ್ನು ಕೈಗೊಂಡುದಕ್ಕೆ ಇದ್ದ ಉದ್ದೇಶವನ್ನು ಕೃತಿಯಲ್ಲಿ ಒಂದಲ್ಲ ಹಲವು ಕಡೆ ಸ್ಪಷ್ಟಪಡಿಸಿದ್ದೇನೆ. ಈ ಪುಸ್ತಕವು ಮುಖ್ಯವಾಗಿ ಕರ್ನಾಟಕದ ಗ್ರಾಮೀಣ ಬದುಕಿನ ಒಂದು ಕಿರುನೋಟವನ್ನು ನೀಡುತ್ತದೆ. ನಾನು ಆ ಸುಮಾರು ನಲವತ್ತೆರಡು ದಿನಗಳಲ್ಲಿ ಬದುಕಿಗೆ ತೀರ ಸಮೀಪವಾಗಿ ಬದುಕಿದೆ. ಯಾವುದೋ ಊರು, ಯಾವುದೋ ಮನೆ, ಯಾರೋ ಅಪರಿಚಿತ ಜನ, ಊರಲ್ಲದೆ ನಡೆದು ಹೋಗುವಾಗ ಪರಿಚಯವಾದವರು

ಇವರ ಜೊತೆ, ಕಂಡ ಗದ್ದೆ ತೋಟ ಹೊಲ ಬೆಟ್ಟ ಗುಡ್ಡ ಮರ ಹಕ್ಕಿ ಇವುಗಳ ಜೊತೆ ತೀರ ಆತ್ಮೀಯವಾದ ಸಂಬಂಧವನ್ನು ಬೆಳೆಸಿಕೊಂಡೆ. ದಾರಿಯಲ್ಲಿ ಕಂಡ ದೇವಾಲಯಗಳು, ಶಾಸನಗಳು ಶಿಲ್ಪಗಳು, ಜಾನಪದ ನಂಬಿಕೆಗಳು ಇವನ್ನೆಲ್ಲ ಇಲ್ಲಿ ದಾಖಲಿಸಿದ್ದೇನೆ. ಗ್ರಾಮೀಣ ಬದುಕು, ಅಲ್ಲಿನ ಬಡತನ, ಮುಗ್ಧತೆ, ತೃಪ್ತಿ, ರಾಜಕೀಯ, ಜಾತಿ ಘರ್ಷಣೆಗಳು ಇತ್ಯಾದಿ ಎಷ್ಟೋ ವಿಷಯಗಳು ನನ್ನ ಕಣ್ಣಿಗೆ ಕಾಣಿಸಿದುವನ್ನು ಕಿವಿಗೆ ಕೇಳಿಸಿದುವನ್ನು ಇಲ್ಲಿ ಹಾಗೇ ಹಿಡಿದಿಟ್ಟಿದ್ದೇನೆ. ಹಾಗೆ ಮಾಡುವಾಗ ಯಾರಿಗಾದರೂ ನೋವುಂಟುಮಾಡುವ ಉದ್ದೇಶ ನನ್ನದಾಗಿರಲಿಲ್ಲವೆಂದು ನಾನು ಹೇಳಬೇಕಾಗಿಲ್ಲ. **ಸಾಹಿತ್ಯ ಪ್ರಿಯರಿಗೆ ಇದು ನನ್ನ ಅನುಭವ ಕಥನವೂ ಹೌದು, ಸಂಶೋಧಕರಿಗೆ ಒಂದು ರೀತಿಯ ಆಕರ ಗ್ರಂಥವೂ ಹೌದು.** ನನ್ನ ಬಗ್ಗೆ ಹೇಳಿಕೊಳ್ಳುವುದಾದರೆ ಆ ಕಾಲ್ನಡಗೆ ನಿಶ್ಚಿತವಾಗಿಯೂ ನನ್ನನ್ನು ಕನ್ನಡದ ಕಾರ್ಯಕರ್ತನನ್ನಾಗಿ ಮಾತ್ರವಲ್ಲ, ಒಬ್ಬ ವ್ಯಕ್ತಿಯನ್ನಾಗಿಯೂ ಬೆಳೆಸಿದ ಶಕ್ತಿ ವರ್ಧಕವೆಂಬಲ್ಲಿ ನನಗೆ ಅನುಮಾನವೇ ಇಲ್ಲ.

ಕೊನೆಯ ಸುಮಾರು ಹನ್ನೆರಡು ಪುಟಗಳು ಪ್ರವಾಸ ಕಥನವಲ್ಲದಿದ್ದರೂ, ಕನ್ನಡ ಚಳವಳಿಯ ಈಚಿನ ಕೆಲವು ಬೆಳವಣಿಗೆಗಳನ್ನು ಒಳಗೊಂಡಿದ್ದು ಆ ಬೆಳವಣಿಗೆಗಳೂ ಕೂಡ 'ಕನ್ನಡಾಯಣ'ದ ಕಥನಕ್ಕೆ ಹೊಂದಿಕೊಂಡಂತಿರುವುದರಿಂದ ಅವನ್ನು ಅನಿವಾರ್ಯವಾಗಿ ಬರೆದು ಸೇರಿಸಬೇಕಾಯ್ತು.

**ಈ ಕೃತಿಯನ್ನು (ದಿ) ಚಿರಂಜೀವಿ ಆಳ್ಲ ನೆನಪಿಗೆ ಅರ್ಪಿಸಿ, ಆ ಮೂಲಕ ಅವನಂತಹ ಸಾವಿರಾರು ಮುಗ್ಧ ತ್ಯಾಗ ಜೀವಿಗಳ ಬಗ್ಗೆ ನನಗಿರುವ ಪ್ರೀತಿ ಅಭಿಮಾನಗಳನ್ನು ವ್ಯಕ್ತಪಡಿಸಿದ್ದೇನೆ (ಪು. 666-7 ನೋಡಿ).**

ಈ ಕೃತಿಯನ್ನು ಪ್ರಕಟಿಸಲು ಮುಂದೆ ಬಂದಿರುವ ಡಾ. ಎಸ್. ವಿದ್ಯಾಶಂಕರ ಅವರ ಸ್ನೇಹವನ್ನು ಹೆಮ್ಮೆಯಿಂದ ನೆನೆಯುತ್ತೇನೆ. ಅಂತೆಯೇ ಇದರ ಮುದ್ರಣ ಕಾರ್ಯವನ್ನು ಅಚ್ಚುಕಟ್ಟಾಗಿ ನೆರವೇರಿಸಿರುವ "ವರ್ಷಿಣಿ ಗ್ರಾಫಿಕ್ಸ್"ನ ಶ್ರೀಮತಿ ಪ್ರಿಯದರ್ಶಿನಿ, "ಸ್ನೇಹಾ ಪ್ರಿಂಟರ್ಸ್"ನ ಶ್ರೀ ಎಸ್. ವಿ. ಮಹೇಶ್ ಇವರನ್ನು ನಾನು ನೆನೆಯದಿದ್ದರೆ ತಪ್ಪಾಗುತ್ತದೆ.

ರಕ್ಷಾಪತ್ರವನ್ನು ರೂಪಿಸುವಲ್ಲಿ ಕಲಾವಿದ ಮಿತ್ರ ಶ್ರೀ ಸಿ. ಚಂದ್ರಶೇಖರ್ ಅವರ, ಅಂತೆಯೇ ಸ್ಟುಡಿಯೊ ಸಫಾರಿಯ ಶ್ರೀ ನಾಗೇಂದ್ರಕುಮಾರ್ ಅವರ ಸಹಕಾರವನ್ನು ಇಲ್ಲಿ ಸ್ಮರಿಸುವುದು ನನ್ನ ಕರ್ತವ್ಯವಾಗಿದೆ. ಈ ಕೃತಿ ರೂಪುದಳೆವಲ್ಲಿ ಪರೋಕ್ಷವಾಗಿ ಸಹಾಯ ಮಾಡಿರುವ ಕಲಾವಿದ ಮಿತ್ರ ಶ್ರೀ ಆರ್. ಎಂ. ಹಡಪದ ಅವರನ್ನೂ ಅಂತೆಯೇ ಭೂವಿಜ್ಞಾನಿಯಾಗಿ ಸಾಂಸ್ಕೃತಿಕ ಆಸಕ್ತಿಗಳನ್ನು ಬೆಳೆಸಿಕೊಂಡಿರುವ ಡಾ. ಎಚ್. ಚಂದ್ರಶೇಖರ ಅವರನ್ನೂ ಸಂತೋಷದಿಂದ ಸ್ಮರಿಸುತ್ತೇನೆ.

ಕರ್ನಾಟಕದಲ್ಲಿ ಸಾರ್ವತ್ರಿಕ ಮಾತೃಭಾಷಾ ಮಾಧ್ಯಮವು ಸದ್ಯಕ್ಕೆ ಪ್ರಾಥಮಿಕ ಹಂತದಲ್ಲಾದರೂ ಜಾರಿಗೆ ಬರುವ ಕಾಲವು ದೂರ ಇಲ್ಲವೆಂಬುದರ ಸೂಚನೆಗಳು

ಕಾಣಿಸುತ್ತಿರುವುದು ನನ್ನಂತಹ ಜನಕ್ಕೆ ಸಮಾಧಾನ ತರುವ ಸಂಗತಿಯಾಗಿದೆ. ಪರಿಸ್ಥಿತಿ ಅಷ್ಟು ನಿರಾಶಾದಾಯಕವಾಗಿಲ್ಲವೆಂಬಷ್ಟಕ್ಕೆ ತೃಪ್ತಿಪಟ್ಟುಕೊಳ್ಳಬೇಕಾಗಿದೆ. ಬೆಂಗಳೂರಲ್ಲಿ ಇಂದು ಅಶ್ವಾರೂಢ ಕಿತ್ತೂರು ಚನ್ನಮ್ಮನ ಕಂಚಿನ ಪ್ರತಿಮೆ ಅನಾವರಣಗೊಂಡು ಕನ್ನಡ ಶಕ್ತಿ ಕೇಂದ್ರದ ನಿರಂತರ ಪ್ರಯತ್ನವು ಸಾರ್ಥಕವಾಗಿದೆ.

ಬೆಂಗಳೂರು - ಎಂ. ಚಿದಾನಂದ ಮೂರ್ತಿ

1-10-99

# ಪರಿವಿಡಿ

# ನನ್ನ ಬದುಕು : ಒಂದು ಕಿರುಚಿತ್ರ*

ತನ್ನ ಬದುಕನ್ನು ಕುರಿತ ತಾನು ತಾನೇ ಬರೆದುಕೊಳ್ಳುವುದು ಯಾವ ವ್ಯಕ್ತಿಗೇ ಆಗಲಿ ತಂತಿಯ ಮೇಲೆ ನಡೆಯುವಷ್ಟು ಸೂಕ್ಷ್ಮವಾದುದು. ಇನ್ನೊಬ್ಬರ ಬಗ್ಗೆ ಸುಲಭವಾಗಿ ಬರೆಯಬಹುದು. ಅಲ್ಲಿ, ಸ್ವಲ್ಪ ಹೆಚ್ಚು ಕಡಮೆಯಾದರೂ ನಡೆದೀತು. ಇಲ್ಲಿ ಎಲ್ಲಿ ಆತ್ಮಪ್ರಶಂಸೆಯಾಗಿದೆ ಎಂದು ಓದುಗರು ತಪ್ಪು ತಿಳಿಯುವರೋ ಎಂಬ ಅಳುಕು ಬೇರೆ. ತನ್ನ ದೌರ್ಬಲ್ಯಗಳನ್ನು ಮುಚ್ಚಿಟ್ಟು ಆದಷ್ಟು ಒಳ್ಳೆಯದನ್ನೇ ಸ್ವಲ್ಪ ಹೆಚ್ಚು ಬಣ್ಣದಿಂದ ಹೇಳಿಕೊಳ್ಳುವ ಚಾಪಲ್ಯಕ್ಕೆ ವ್ಯಕ್ತಿ ಗುರಿಯಾಗಿ ಸತ್ಯಕ್ಕೆ ಚ್ಯುತಿ ಬರುವ ಸಾಧ್ಯತೆಗಳೂ ಇಲ್ಲದಿಲ್ಲ. ಇನ್ನೊಬ್ಬನ ಬಗ್ಗೆ ವಸ್ತುನಿಷ್ಠವಾಗಿ ನಿಷ್ಠುರವಾಗಿ ಇರುವಂತೆ ತನ್ನ ಬಗ್ಗೆಯೂ ಇರುವುದು ಕಷ್ಟಸಾಧ್ಯವೆಂಬುದನ್ನು ವಿವರಿಸಬೇಕಾಗಿಲ್ಲ. ಅಲ್ಲದೆ ಇಂತಹ ಸೀಮಿತ ಅವಕಾಶದ ಬರಹದಲ್ಲಂತೂ ಯಾವುದು ಅಗತ್ಯ ವಿವರ ಯಾವುದು ಅಲ್ಲವೆಂಬುದನ್ನು ನಿರ್ಧರಿಸುವುದಂತೂ ತೀರ ಕಷ್ಟ. ಆತ್ಮಚರಿತ್ರಕಾರನಿಗಂತೂ ಎಲ್ಲವೂ ಮುಖ್ಯವೇ, ಎಲ್ಲವೂ ಹೇಳಿಕೊಳ್ಳಬೇಕಾದ್ದೇ - ಏಕೆಂದರೆ ಅದು ತಾನು, ಮಹತ್ವದ ತಾನು. ಇದು ಪೂರ್ಣಪ್ರಮಾಣದ ಆತ್ಮಚರಿತ್ರೆಯಲ್ಲವಾದ್ದರಿಂದ ಕೆಲವು ವಿವರಗಳನ್ನು ಮಾತ್ರ ಇಲ್ಲಿ ರೇಖಿಸುತ್ತೇನೆ.

ಪ್ರತಿಯೊಬ್ಬ ವ್ಯಕ್ತಿಗೂ ಅವನು ಹೇಳಿಕೊಳ್ಳಲಿ ಬಿಡಲಿ, ಅವನಿಗೇ ತಿಳಿದಿರಲಿ ತಿಳಿಯದಿರಲಿ ಅವನದೇ ಆದ ಒಂದು ಜೀವನದೃಷ್ಟಿ, ಜೀವನದರ್ಶನ ಉಂಟು. ಬದುಕನ್ನು ಅವನು ನೋಡುವ ರೀತಿ, ಸ್ವೀಕರಿಸುವ ರೀತಿ ಅಥವಾ ಅವನು ಸ್ಪಂದಿಸುವ ರೀತಿಯು ಅವನಿಗೂ ಪ್ರಪಂಚಕ್ಕೂ ಇರುವ ಸಂಬಂಧವನ್ನು ನಿರ್ಧರಿಸುತ್ತದೆ. ಅವನ ದೃಷ್ಟಿಯ ಆಯ್ಕೆ-ತಿರಸ್ಕಾರ, ಸುಂದರ-ಅಸುಂದರ, ಒಳ್ಳೆಯದು - ಕೆಟ್ಟದ್ದು, ಮಾಡಬೇಕಾದ್ದು - ಮಾಡಬಾರದ್ದು, ಅವನ ಬೆಳವಣಿಗೆ ಮತ್ತು ಅವನ ಮಿತಿ ಎಲ್ಲವೂ ಸ್ಥೂಲವಾದ ಆ ಜೀವನ ದರ್ಶನದ ಚೌಕಟ್ಟಿನೊಳಗೆ ನಿರ್ಧಾರವಾಗುತ್ತವೆ. ಅವನ ವ್ಯಕ್ತಿತ್ವವು ಆ ಚೌಕಟ್ಟಿನೊಳಗೆ ರೂಪುಗೊಳ್ಳುವುದಲ್ಲದೆ ಅವನು ಬದುಕಿನಲ್ಲಿ ಏನಾಗುತ್ತಾನೆ ಎಂಬುದನ್ನೂ ಅದು ನಿರ್ಧರಿಸುತ್ತದೆ. ಅವನ ನಡೆ ನುಡಿಗಳು ಆ ಚೌಕಟ್ಟಿನೊಳಗೆ ರೂಪುಗೊಳ್ಳುತ್ತವೆ. ಹಾಗೆಂದು ಯಾವನೇ ವ್ಯಕ್ತಿ ಮೊದಲು ಸ್ಪಷ್ಟವಾದ ಒಂದು ಜೀವನ ಸಿದ್ಧಾಂತವನ್ನು ರೂಪಿಸಿಕೊಂಡು ಅದರ ಮಿತಿಯೊಳಗೆ ಬದುಕಲು ಯತ್ನಿಸುತ್ತಾನೆ ಎಂಬುದು ನನ್ನ ಮಾತಿನ ಅರ್ಥವಲ್ಲ. ವ್ಯಕ್ತಿ ಬದಲಾದ ಸಂದರ್ಭಗಳಿಗೆ ಒಳಗಾದಂತೆ ಅವನ ಜೀವನ ನೋಟವೂ ಹಾಗೆಯೇ

*1990-1ರಲ್ಲಿ ಬರೆದುದು.

ಬದುಕಿನ ರೀತಿಯೂ ಬದಲಾಗಬಹುದು. ಅವನ ಕೌಟುಂಬಿಕ ಸಾಮಾಜಿಕ ಆರ್ಥಿಕ ಹಿನ್ನೆಲೆ ಮತ್ತು ಅವನ ಬದುಕಿನ ರೀತಿ ಅವನ ಜೀವನ ಸಿದ್ಧಾಂತವನ್ನು ಖಚಿತಗೊಳಿಸುತ್ತ ಹೋದಂತೆ ಅವನ ಜೀವನ ಸಿದ್ಧಾಂತ ಅವನ ಬದುಕನ್ನು ರೂಪಿಸುತ್ತ ಹೋಗುತ್ತದೆ. ಎರಡೂ ಪರಸ್ಪರಾವಲಂಬಿಗಳು ಮತ್ತು ಪರಸ್ಪರ ಪೋಷಕಗಳು. ಯಾವುದೇ ಜೀವನ ಸಿದ್ಧಾಂತವೂ ಇಲ್ಲವೆಂದು ನಮಗೆ ತೋರಬಹುದಾದ ವ್ಯಕ್ತಿಗೆ ಹಾಗೆ ಇಲ್ಲದುದೇ ಅವನ ಜೀವನ ಸಿದ್ಧಾಂತವೂ ಆಗಬಲ್ಲದು. ಅದನ್ನು ಇಲ್ಲಿ ವಿಸ್ತರಿಸಹೋಗುವುದಿಲ್ಲ.

ನಾನು ಒಬ್ಬ ಪೂರ್ಣ ಪ್ರಮಾಣದ ಸಂಶೋಧಕ (ಕನ್ನಡದ ಕಾರ್ಯಕರ್ತನಾದುದು 1982 ರಿಂದ ಈಚೆಗೆ ತಾನೇ!) ನನ್ನ ಅರವತ್ತೊಂದನೇ ವಯಸ್ಸಿನ ಮೊದಲಲ್ಲಿ ನಿಂತು ಹಿಂದಿನ ದಿನಗಳ ಕಡೆ ಕಣ್ಣು ಹಾಯಿಸಿದಾಗ ನನಗೆ ಅರಿವಿಲ್ಲದೆಯೇ ಅನೇಕ ಸಂದರ್ಭಗಳೂ ವ್ಯಕ್ತಿಗಳೂ ಶಕ್ತಿಗಳೂ ನನ್ನ ಬದುಕಿಗೆ ಆಕಾರವನ್ನು ಕೊಟ್ಟಿರುವುದನ್ನು ಗುರುತಿಸಿದ್ದೇನೆ. ಬದುಕಿನಲ್ಲಿ ಕೆಲವು ಸ್ಪಷ್ಟ ಗುರಿಗಳನ್ನು ಇಟ್ಟುಕೊಂಡು ಬದುಕಿದವ ನಾನು. ಸಂದರ್ಭಗಳು ತಳ್ಳಿದ ಕಡೆ ಹೋಗಿ ಹೇಗೆಂದರೆ ಹಾಗೆ ಬದುಕಿದವನಲ್ಲ. ನನಗೆ ಒಂದು ಸ್ಥೂಲವೂ ಹಾಗೆಯೇ ಸ್ಪಷ್ಟವೂ ಆದ ಒಂದು ಜೀವನ ಸಿದ್ಧಾಂತವಿದೆ. ಕೊನೆಯ ಪುಟಗಳನ್ನು ಬರೆಯುವ ಹೊತ್ತಿಗೆ ಅದು ನನಗೆ ಇನ್ನೂ ನಿಚ್ಚಳವಾಗಿ ಕಾಣುವ ಸಾಧ್ಯತೆಯಿರುವುದರಿಂದ ಅದನ್ನು ಕುರಿತಂತೆ ಕೊನೆಯಲ್ಲಿ ಬರೆಯುತ್ತೇನೆ. ಬರವಣಿಗೆ ಒಂದು ರೀತಿಯಲ್ಲಿ ವ್ಯಕ್ತಿ ತನ್ನನ್ನು ತಾನು ಅರ್ಥ ಮಾಡಿಕೊಳ್ಳುವ ಸಾಧನವೂ ಹೌದು. ನನ್ನ ಬದುಕು ಬೇರೆ ಬೇರೆ ಮಜಲುಗಳಲ್ಲಿ ಹಾದು ಬಂದಿರುವಲ್ಲಿ ಒಂದು ಕ್ರಮವಿರುವಂತೆ ಕಾಣುತ್ತದೆ - ಅದನ್ನೀಗ ಕಥನಿಸತೊಡಗುತ್ತೇನೆ.

ನಾನು ಹುಟ್ಟಿದ್ದು ಶಿವಮೊಗ್ಗ ಜಿಲ್ಲೆ ಚನ್ನಗಿರಿ ತಾಲೂಕಿನ (ಹಿರೇ) ಕೋಗಲೂರಿನಲ್ಲಿ, 1931ಮೇ 10ರಂದು, ವೀರಶೈವರಲ್ಲಿ ಜಂಗಮ ವರ್ಗಕ್ಕೆ ಸೇರಿದ ದಂಪತಿಗಳ ಎರಡನೆಯ ಮಗುವಾಗಿ, ಮೊದಲನೆಯ ಮಗನಾಗಿ. ಜಂಗಮರ ಬಗ್ಗೆ ಒಂದೆರಡು ಮಾತು ಹೇಳುವುದು ಅಗತ್ಯ. ಜಂಗಮರು ಲಿಂಗಾಯತ ಜನಾಂಗದ ಪುರೋಹಿತರೆಂಬುದು ಎಲ್ಲರಿಗೂ ತಿಳಿದ ವಿಷಯ. ಆ ಕಾಲಕ್ಕೆ ಶಿವಮೊಗ್ಗ ದಾವಣಗೆರೆ ಪ್ರದೇಶದಲ್ಲಿ 'ವೀರಶೈವ' ಮಾತು ಎಷ್ಟು ಜನಕ್ಕೆ ಅರ್ಥವಾಗುತ್ತಿತ್ತೋ ತಿಳಿಯದು. 'ಲಿಂಗಾಯತರು' ಎಂದರೆ ಎಲ್ಲರಿಗೂ ತಿಳಿಯುತ್ತಿತ್ತು. ಇಂದು 'ವೀರಶೈವ' 'ಲಿಂಗಾಯತ' ಸಮಾನಾರ್ಥಕ ಪದಗಳಾದರೂ ಆ ಕಾಲಕ್ಕೆ ಜಂಗಮರು (ಅಥವಾ 'ಅಯ್ನೋರು') ಜಂಗಮರಲ್ಲದ ವೀರಶೈವರನ್ನು 'ಲಿಂಗಾಯತ'ರೆಂದು ಕರೆಯುತ್ತಿದ್ದರು. "ಅವರು ಜಂಗಮರಾ?" ಎಂಬಂತಹ ಪ್ರಶ್ನೆಗೆ "ಛೇ ಛೇ ಅಲ್ಲ. ನಾವು ಜಂಗಮರು, ಅವರು ಲಿಂಗಾಯತರು" ಎಂಬಂತಹ ಉತ್ತರ ಬರುತ್ತಿತ್ತು. ಉಳಿದವರಿಗೆ ನಗಣ್ಯವಾಗಿ ಕಾಣುವ ಇಂತಹ ಸಂಗತಿ ಸೂಕ್ಷ್ಮ ಸಂಶೋಧಕರಿಗೆ ಯಾವುದೋ ಗತಕಾಲದ ಐತಿಹಾಸಿಕ ಸಂಗತಿಯೊಂದನ್ನು ಅವಶೇಷ ರೂಪದಲ್ಲಿ ಉಳಿಸಿಕೊಂಡಿರುತ್ತದೆ. ಆ ಮಾತು ಹಾಗಿರಲಿ. ಪುರೋಹಿತರಾಗಿದ್ದ ಅಯ್ನೋರು ಅಥವಾ ಜಂಗಮರಿಗೆ ಸ್ವಾಭಾವಿಕವಾಗಿ ತಮ್ಮ ಜಾತಿಯ ಬಗ್ಗೆ ಅಭಿಮಾನವೂ ಉಳಿದ 'ಲಿಂಗಾಯತ'ರ ಜೊತೆ ಹೋಲಿಸಿಕೊಂಡ ಮೇಲರಿಮೆಯೂ

ಇದ್ದಂತೆ ಅಷ್ಟೇ ಸ್ವಾಭಾವಿಕವಾಗಿ ಬಡತನವೂ ಅವರಿಗೆ ಅಂಟಿಕೊಂಡಿತ್ತು. ಅವರ ಮೇಲರಿಮೆಯನ್ನು ಅವರ ಬಡತನವು ನಿಯಂತ್ರಿಸುತ್ತಿತ್ತು. ಊರಲ್ಲಿನ 'ಲಿಂಗಾಯತರು' (ಸಾದರು) ಜಂಗಮರಿಗಿಂತ ಸುಸ್ಥಿತಿಯಲ್ಲಿದ್ದುದರಿಂದ ಜಂಗಮರು ತಮ್ಮ ಮೇಲರಿಮೆಯನ್ನು ತಮಗೆ ಸೀಮಿತವಾಗಿರಿಸಿಕೊಂಡು 'ಲಿಂಗಾಯತ'ರನ್ನು ಅನುಸರಿಸಿಕೊಂಡೇ ಬದುಕುತ್ತಿದ್ದರು. 'ಲಿಂಗಾಯತ'ರೂ ಕೂಡ ಇದನ್ನು ಬಲ್ಲವರಾಗಿದ್ದು, ಹುಟ್ಟು ಮದುವೆ ಸಾವು ಸಂದರ್ಭಗಳಲ್ಲಿ ಅವರನ್ನು ಕರೆದು ಪಾದ ಪೂಜೆ ಮಾಡಿ ಪಾದೋದಕವನ್ನು ಮನೆಗೆಲ್ಲ ಸಿಂಪಡಿಸಿ ಅವರಿಗೆ ಊಟ ಹಾಕಿ ದಕ್ಷಿಣೆ ಕೊಟ್ಟು ಕಳುಹಿಸಿಕೊಡುತ್ತಿದ್ದವರೇ ಸಂದರ್ಭ ಬಿದ್ದರೆ "ಏನೋ ಅಯ್ಯಪ್ಪಾ" ಎಂದು ಛೇಡಿಸಲೂ ಹಿಂದು ಮುಂದು ನೋಡುತ್ತಿರಲಿಲ್ಲ. ಸಾಮಾಜಿಕ ಮೇಲ್ಮೆ ಮತ್ತು ಆರ್ಥಿಕ ಮೇಲ್ಮೆಗಳು 'ಜಂಗಮ'ರು 'ಲಿಂಗಾಯತ'ರಲ್ಲಿ ಸಮತೋಲನವನ್ನು ಸೃಜಿಸಿದ್ದ ರೀತಿ ಹೀಗೆ.

ಈ ಬಗ್ಗೆ ಹೇಳಬೇಕಾದ್ದು ಎಷ್ಟೋ ಇದೆಯಾದರೂ ನೇರವಾಗಿ ನನ್ನ 'ಅಯ್ಯ' 'ಅವ್ವ'ರ ವಿಷಯಕ್ಕೆ ಬರುತ್ತೇನೆ. (ಜಂಗಮರಲ್ಲಿ ಮಕ್ಕಳು ತಮ್ಮ ತಂದೆಯನ್ನು 'ಅಯ್ಯ' ಎಂದು ಕರೆದರೆ ಲಿಂಗಾಯತರಲ್ಲಿ 'ಅಪ್ಪ' ಎಂದು ಕರೆಯುತ್ತಿದ್ದರು) ನನ್ನ ಅಯ್ಯ ಕೆ. ಕೊಟ್ರೂರಯ್ಯನವರು ನನ್ನ ಹುಟ್ಟೂರು ಕೋಗಲೂರಿಗೆ ತಮ್ಮ ಬಾಲ್ಯದಲ್ಲಿ ಅಲ್ಲಿಂದ ಹತ್ತು ಹನ್ನೆರಡು ಮೈಲು ದೂರದ ಹರೋಸಾಗರದಿಂದ ಬಂದವರು ತಮ್ಮ ಸ್ವಂತ ಊರಿನ ಕಡೆ ಸುಳಿಯಲಿಲ್ಲ. ಅವರ ಬದುಕು ಒಂದು ಅದ್ಭುತ ಸಾಹಸ, ಅತಿ ಸಾಮಾನ್ಯನೊಬ್ಬನ ಮೇಲೇರಬೇಕೆಂಬ, ಒಬ್ಬ 'ಮನುಷ್ಯ'ನೆಂದು ಜನರಿಂದ ಅನ್ನಿಸಿಕೊಳ್ಳುವ ಅಸೀಮ ಛಲದ ಒಂದು ಸಂಕೇತ. ಮೊದಲೇ ಬಡವರಾಗಿದ್ದ ಜಂಗಮರಲ್ಲೂ ಕಡು ಬಡ ಜಂಗಮರ ಮನೆಯಲ್ಲಿ ಎರಡನೆಯ ಮಗುವಾಗಿ ಅವರು ಹುಟ್ಟಿದರು. ಅವರು ಬದುಕಿರುವವರೆಗೂ ತಮ್ಮ ಹುಟ್ಟು, ಬಾಲ್ಯ, ತಂದೆ ತಾಯಿ ಬಾಂಧವರ ಬಗ್ಗೆ ಮಾತನಾಡಲಿಲ್ಲ, ಮಾತನಾಡಲು ಬಯಸಲಿಲ್ಲ. ಆ ಎಲ್ಲವನ್ನೂ ಅವರು ಮರೆಯಲು ಯತ್ನಿಸುತ್ತಿದ್ದರು. ಹೀಗಾಗಿ ನಾನು ಈ ಮುಂದೆ ಬರೆದಿರುವುದೆಲ್ಲ ಅವರ ಇವರ ಬಾಯಿಂದ ಅಲ್ಪಸ್ವಲ್ಪ ಕೇಳಿದ್ದು. ಅವರ ತಂದೆ ಶಿವಲಿಂಗಯ್ಯ ಎಂದು ಗೊತ್ತು, ಏಕೆಂದರೆ ಅವರು 'ಹರೋ ಸಾಗರದ ಶಿವಲಿಂಗಯ್ಯನವರ ಮಗನಾದ ಕೊಟ್ರಯ್ಯ' ಎಂದು ತಾವು ನೀಡಿದ ಸಾಲದ ಪತ್ರಗಳಲ್ಲಿ ಬರೆದುಕೊಳ್ಳುತ್ತಿದ್ದುದರಿಂದ ಮಾತ್ರ ನನಗೆ ಗೊತ್ತು. ಬಾಲ್ಯದಲ್ಲೇ ತಂದೆ ತಾಯಂದಿರನ್ನು ಕಳೆದುಕೊಂಡ ಅನಾಥ ಹುಡುಗಿ ಹುಡುಗರಿಬ್ಬರೂ, ಅಕ್ಕ - ತಮ್ಮ, ಅರ್ಥಾತ್ ನನ್ನ ಸೋದರತ್ತೆ ಮತ್ತು ಅಯ್ಯ ಇವರು ತಮ್ಮ ಹುಟ್ಟೂರಾದ ಹರೋಸಾಗರದಿಂದ ಹೊರಬಿದ್ದರು. ಮನೆ ಇಲ್ಲ, ಹೊಲ ಇಲ್ಲ, ಬಂಧುಗಳಿದ್ದೂ ಬಂಧುಗಳಿಲ್ಲ. ಇಂತಹ ಸ್ಥಿತಿಯಲ್ಲಿ ಅವರನ್ನು ಕಾಪಾಡಿದ್ದು ಅವರ ಜಂಗಮ ಜಾತಿ ಮತ್ತು ಆ ಜಾತಿಯ ಭಿಕ್ಷೆ ಬೇಡುವ ಆಜನ್ಮಸಿದ್ಧ ಹಕ್ಕು. ಕೈಯಲ್ಲಿ 'ಬೆತ್ತ' ಜೋಳಿಗೆ ಹಿಡಿದು ಹೊರಟ ಆ ಇಬ್ಬರು ಮಕ್ಕಳೂ ಹಗಲು ಊರಲ್ಲಿ ಭಿಕ್ಷೆ ಮಾಡುವುದು, ರಾತ್ರಿ ಗುಡಿಯಲ್ಲಿ ಮಲಗುವುದು. ಹೀಗೆ ಹಳ್ಳಿಯಿಂದ ಹಳ್ಳಿಗೆ ತಿರುಗುತ್ತಿದ್ದ ಅವರು ತಮ್ಮ ಮನೆಗಳಿಗೆ ಬಂದಾಗ ಆ ಪರದೇಶಿ ಮಕ್ಕಳ ಮೇಲೆ ಮರುಗಿ ತಮ್ಮ ಹೆಂಗಸರಿಗೆ ಹೇಳಿ

ಹೆಚ್ಚಿಗೆ ಭಿಕ್ಷೆ ಹಾಕಿಸುತ್ತಿದ್ದ ಮುದುಕರು ನಾನು ಹುಡುಗನಾಗಿದ್ದಾಗ ನೆನಪು ಮಾಡಿಕೊಳ್ಳುತ್ತಿದ್ದರು. ನನ್ನ ಸೋದರತ್ತೆಗೆ ಹೇಗೋ ಮದುವೆ ಆಯ್ತು. ಅಯ್ಯ ಏನೋ ಮಾಡಿ ನಾಲ್ಕಕ್ಷರ ಕಲಿತಿದ್ದರು. ಹೀಗೇ ಭಿಕ್ಷೆ ಮಾಡಿಕೊಂಡು ಹಳ್ಳಿ ಹಳ್ಳಿ ತಿರುಗುತ್ತಿದ್ದ ಅವರಿಗೆ ಭದ್ರಾವತಿ ತಾಲೂಕು ಆನವೇರಿ ಎಂಬ ಹಳ್ಳಿಯಲ್ಲಿ ಕೂಲಿಸಾಲೆ ಮೇಷ್ಟರಾಗುವ ಅವಕಾಶ ದೊರಕಿತು. ಅದು ಸರ್ಕಾರಿ ನೌಕರಿ ಅಲ್ಲ. ಊರಿನ ಜನ, ವಿಶೇಷವಾಗಿ ಪಟೇಲರು ಮೇಷ್ಟ್ರಿಗೆ ತಾವೇ ಸಂಬಳ (ಕೂಲಿ) ಕೊಟ್ಟು ತಮ್ಮ ಮನೆಯಲ್ಲೇ ಇಟ್ಟುಕೊಂಡು ಊರ ಮಕ್ಕಳಿಗೆ ಪಾಠ ಹೇಳಿಸಲು ಮಾಡಿಕೊಂಡಿದ್ದ ಒಂದು ವ್ಯವಸ್ಥೆ. ಆಗ ಅಯ್ಯನಿಗೆ ಬರುತ್ತಿದ್ದ 'ಸಂಬಳ' (ವಾಸ್ತವವಾಗಿ ಅದು 'ಕೂಲಿ') ವರ್ಷಕ್ಕೆ ಹತ್ತು ರೂಪಾಯಿ. ಅದರಲ್ಲಿ ಅವರು ಸಂತೆಗೆ ವರ್ಷಕ್ಕೊಮ್ಮೆ ಹೋಗಿ ಐದು ರೂಪಾಯಿಗೆ ಒಂದು ಜೊತೆ ಪಂಚೆ ಒಂದು ಜೊತೆ ಅಂಗಿ ಕೊಂಡುಕೊಂಡರೆ ಅದು ಇಡೀ ವರ್ಷದ ಬಡ್ಜೆಟ್ : ಉಳಿದ ಐದು ರೂಪಾಯಿ ಉಳಿತಾಯ. ಅವರ ಊಟ ಆ ಊರಿನ ಪಟೇಲರ ಮನೆಯಲ್ಲಿ, ವಸತಿ ಪಟೇಲರ ಮನೆಯ ಹೊರಗಿನ ಜಗುಲಿಯಲ್ಲಿ. ಅವರ ಕೆಲಸವೆಂದರೆ ಪಟೇಲರ ಮತ್ತು ಊರಿನ ಉಳಿದ ಉಳ್ಳವರ ಮಕ್ಕಳಿಗೆ ಪಾಠ ಹೇಳುವುದು ಮತ್ತು ಪಟೇಲರ ಲೆಕ್ಕ ಪತ್ರ ನೋಡಿಕೊಳ್ಳುವುದು. ಪಟೇಲರ ಕಬ್ಬಿಣದ ತಿಜೋರಿಯ ಬೀಗದ ಕೈ ಅಯ್ಯನ ಕೈಯಲ್ಲಿ. ಅಲ್ಲಿನ ಚಿನ್ನ ಬೆಳ್ಳಿ ಒಡವೆ ನಗದು ಹಣದ (ಬೆಳ್ಳಿಯ ರೂಪಾಯಿ) ಉಸ್ತುವಾರಿ ಅವರದೇ. ಅಪನಂಬಿಕೆಯ ಪ್ರಶ್ನೆಯೇ ಇರದ ಕಾಲದಲ್ಲಿ ಅದು ಆಶ್ಚರ್ಯದ ಸಂಗತಿಯೇನೂ ಆಗಿರಲಿಲ್ಲ. (ನಾನು ಆ ತಿಜೋರಿ ನೋಡಿದ್ದು ಈಚೆಗೆ ಸು. 1999ರಲ್ಲಿ) ಆ ಕಾಲದ ಪಟೇಲರೆಂದರೆ ಚಿಕ್ಕ ಪಾಳೇಗಾರರೇ ಆಗಿದ್ದರು. ವರ್ಷಕ್ಕೊಮ್ಮೆ ಮಕ್ಕಳಿಗೆ ಮಾರ್ನವಮಿ ಪದಗಳನ್ನು ಕಲಿಸಿ ಹಳ್ಳಿಗಳಲ್ಲಿ ಮನೆ ಮನೆಗೆ ಹೋಗಿ ಹಾಡಿಸಿ ಬರುತ್ತಿದ್ದ ಸ್ವಲ್ಪ ಆದಾಯವೂ ಅಯ್ಯನಿಗಿತ್ತು.

ಹಳ್ಳಿ ಗೌಡರು ತಲೆಗೆ ಪೇಟ ಕಟ್ಟುವುದನ್ನು ಕಂಡ ಅಯ್ಯನಿಗೂ ಅಂತಹ ಪೇಟ ಕಟ್ಟಬೇಕೆಂಬ ಬಯಕೆ. ಆಗಲೇ ವಯಸ್ಸು ಮೂವತ್ತರ ಸಮೀಪ. ಮದುವೆ ಇಲ್ಲ. ಹೆಣ್ಣು ಕೊಡಬೇಕು ಯಾರು? ಹಿಡಿದು ಮದುವೆ ಮಾಡುವವರು ಯಾರು? ಸತ್ತರೂ ಚಿಂತಿಸುವವರಿಲ್ಲದಿರುವಾಗ ಮದುವೆ ಆಗಿಲ್ಲ ಎಂದು ಕೊರಗುವವರು ಯಾರು? ಒಂದು ದಿನ ಅವರು ಸಂತೆಯಲ್ಲಿ ಒಂದು ರುಮಾಲು ಖರೀದಿ ಮಾಡಿ ಜರ್ಬಿನಿಂದ ಸುತ್ತಿಕೊಂಡು ಕೋಗಲೂರು ಪಕ್ಕದ ಆಲೂರಿಗೆ ಹೋದರು. ಅಲ್ಲಿನ ಒಬ್ಬ ಶ್ರೀಮಂತರು ತೀವ್ರವಾಗಿ ಕುಟುಕಿದರು - 'ಏನೋ ಅಯ್ಯಪ್ಪಾ, ನೀನೂ ಪೇಟ ಕಟ್ಟಿಕೊಳ್ಳುವಂತಾದೆ!". ಅಯ್ಯ ಆಗಾಗ್ಗೆ ಹೇಳುತ್ತಿದ್ದರು - ಅವರಿಗೆ ಅಲ್ಲೇ ಇರಿದುಕೊಂಡು ಪ್ರಾಣ ಬಿಡಬೇಕೆನ್ನಿಸುವಷ್ಟು ನೋವಾಯಿತು. ಆ ಕ್ಷಣವೇ ಅವರು ಸಂಕಲ್ಪಿಸಿದರು : 'ನಾನೂ ಒಬ್ಬ ಮನುಷ್ಯನಾಗಬೇಕು, ನಾಲ್ಕು ಜನರಂತೆ ಬಾಳಬೇಕು.' ಆ ದಿನ ತಮ್ಮನ್ನು ಆ ಶ್ರೀಮಂತರು (ಅವರನ್ನು ಚಿಕ್ಕಂದಿನಲ್ಲಿ ನೋಡಿದ್ದೆ) ಅಣಕಿಸಿ ಚುಚ್ಚಿದರೂ ಅವರಿಂದ ತಮಗೆ ಪರೋಕ್ಷವಾಗಿ ಉಪಕಾರವಾಯಿತೆಂದು ಅಯ್ಯ ಭಾವಿಸಿದ್ದರು.

ನಾಲ್ಕು ಜನರಂತೆ ತಲೆಯೆತ್ತಿ ಬದುಕಬೇಕಾದರೆ ನೆಲೆ ನಿಲ್ಲಬೇಕು, ಮದುವೆ ಆಗಬೇಕು. ಅಯ್ಯ ಕೋಗಲೂರಿನ ಹಿರಿಯರಲ್ಲಿ ಸಹಾಯ ಮಾಡಲು ಬೇಡಿಕೊಂಡರು. ಅವರು ನನ್ನ ಅಜ್ಜನ ಹತ್ತಿರ ಹೋಗಿ, 'ಹುಡುಗ ಹಾಳಾಗಿ ಹೋಗುತ್ತೆ. ಈಗ ದರಿದ್ರ ನಿಜ, ಮುಂದೆ ಆಗುವುದನ್ನು ಕಂಡವರಾದರೂ ಯಾರು. ನಿಮ್ಮ ದೊಡ್ಡ ಮಗಳನ್ನು ಕೊಟ್ಟು ಮದುವೆ ಮಾಡಿ" ಎಂದು ಸಲಹೆ ಕೊಟ್ಟರು. ದೂರದ ಸಂಬಂಧವೆಂದು ನನ್ನ ಅಜ್ಜ ಹೇಗೋ ಒಪ್ಪಿದರೂ ಅಜ್ಜಿ ಮತ್ತು ನನ್ನ ದೊಡ್ಡವ್ವ ಒಪ್ಪಲಿಲ್ಲ. "ಆ ಭಿಕಾರಿಗೆ ನನ್ನ ಮಗಳನ್ನು ಕೊಟ್ಟು ಮದುವೆ ಮಾಡುವುದಾದರೆ ನಾವಿಬ್ಬರೂ ಬಾವಿಗೆ ಬೀಳುತ್ತೇವೆ" ಎಂದು ಅಜ್ಜಿ ಗಲಾಟೆ ಮಾಡಿದರು. ಅಜ್ಜ ನನ್ನ ತಾಯಿಗೆ "ಏ ಪಾರ್ವತಿ, ನೀನು ಮದುವೆ ಆಗ್ತೀಯೇನೆ" ಎಂದು ಕೇಳಿದರು. ಆಧುನಿಕ ಕಾಲದಲ್ಲಿ ಮದುವೆ ಆಗುವ ಹುಡುಗಿಯರ ಅಭಿಪ್ರಾಯ ಕೇಳುವಷ್ಟು ಮುಂದುವರಿದಿದ್ದೇವೆ. ಆದರೆ ಸಾವಿರದ ಒಂಬಯ್ನೂರ ಇಪ್ಪತ್ತರ ದಶಕದಲ್ಲಿ ನನ್ನ ಅಜ್ಜ ನನ್ನ ಅವ್ವನ ಅಭಿಪ್ರಾಯ ಕೇಳಿದುದು ಅವರು ಮುಂದುವರಿದಿದ್ದುದರ ಕುರುಹು ಅಲ್ಲ, ನನ್ನ ಅಯ್ಯನ ಹೀನ ಸ್ಥಿತಿಯ ದ್ಯೋತಕ. ಅವ್ವನಿಗೆ ಹನ್ನೊಂದೋ ಹನ್ನೆರಡೋ ವಯಸ್ಸು - ಮದುವೆ ಎಂದರೇನು ತಿಳಿಯದ ಮತ್ತು ಸೀರೆ ಉಟ್ಟುಕೊಂಡು ದನಗಳ ಸೆಗಣಿ ಹಿಡಿಯಲು ಕುಕ್ಕೆ ಹಿಡಿದು ಅವುಗಳ ಹಿಂದೆ ತಿರುಗುತ್ತಿದ್ದ ವಯಸ್ಸು. "ಅಯ್ಯ ನನಗೇನು ಗೊತ್ತಾಗುತ್ತೆ, ನೀನು ಆಗು ಅಂದರೆ ಆಗ್ತೀನಿ" ಎಂದು ಅವ್ವ ಹೇಳಿದುದೇ ತಡ, ಅಜ್ಜ ಅಜ್ಜಿಗೆ ಅಬ್ಬರಿಸಿ ಹೇಳಿದರು - "ಏ ಚನ್ನವೀರೀ, ಕೊಟ್ರಯ್ಯನಿಗೆ ಪಾರ್ವತೀನ ಕೊಟ್ಟು ಮದುವೆ ಮಾಡ್ತೀನಿ. ನೀನೂ ನಿನ್ನ ಬಸವ್ವನೂ (ಹಿರಿಯ ಮಗಳು, ನನ್ನ ದೊಡ್ಡವ್ವ) ಬೇಕಾರೆ ಹೋಗಿ ಬಾವಿಗೆ ಬೀಳ್ರಿ". ಅಜ್ಜ ಆಗಲೇ ಮದುವೆಗೆ ಬಂದಿದ್ದ ಬಸವ್ವನನ್ನು ಬೇರೆ ಊರಿಗೆ ಕೊಟ್ಟು ಮದುವೆ ಮಾಡಿ, ಆ ಬಳಿಕ ಎರಡನೆಯ ಮಗಳ - ಅವ್ವನ - ಮದುವೆ ಮಾಡಿದರು. ಮದುವೆಯ ದಿನ ನನ್ನ ಅಜ್ಜಿ ಮದುಮಗಳನ್ನು ತಬ್ಬಿಕೊಂಡು ಅತ್ತದ್ದೇ ಅತ್ತದ್ದು. ನನ್ನ ಅಜ್ಜನನ್ನು ನಾನು ನೋಡಿಲ್ಲ, ಅಜ್ಜಿ ಮಾತ್ರ ಚೆನ್ನಾಗಿ ಗೊತ್ತು. ಒಳಗೆಲ್ಲ ಬಿಳಿಯ ಪ್ರೀತಿ ತುಂಬಿಕೊಂಡಿದ್ದ ಎತ್ತರದ ಸಣಕಲು ಕರಿ ಮೈಯ್ಯ ಚೂಟಿ ಮಾತಿನ ಹೆಂಗಸು ಆಕೆ.

ದಟ್ಟ ದರಿದ್ರ ಶಿವನನ್ನು ಮದುವೆ ಮಾಡಿಕೊಂಡು ಅವ್ವ (ನನ್ನ ಅಜ್ಜನೂ ಶ್ರೀಮಂತರೇನು ಅಲ್ಲ) ಅಯ್ಯನಂತೆ ಬದುಕನ್ನು ಒಂದು ಸವಾಲಾಗಿ ತೆಗೆದುಕೊಂಡರು. ಅಯ್ಯ ತುಮಕೂರಿನಲ್ಲಿ ಟ್ರೇನಿಂಗ್ ಪಡೆದು ಚನ್ನಗಿರಿ ತಾಲ್ಲೂಕಲ್ಲೇ ಸರ್ಕಾರಿ ಪ್ರಾಥಮಿಕ ಶಾಲಾ ಉಪಾಧ್ಯಾಯರಾದರು. ಇಬ್ಬರದೂ ಆದಷ್ಟು ಉಳಿಸುವ ಸ್ವಭಾವ. ದುಂದುಗಾರಿಕೆಗೆ ಹಣವಾದರೂ ಎಲ್ಲಿಯದು ? ನನ್ನ ತಂದೆಯ ಜಿಪುಣತನವಂತೂ ಪ್ರಾಂತ ಪ್ರಸಿದ್ಧವಾಗಿತ್ತು. ನಾನು ಹುಟ್ಟುವ ಹೊತ್ತಿಗೆ ಅಯ್ಯ ಅವ್ವ ಬಡತನದ ಸೀಗೆ ಮೆಳೆಯಿಂದ ಸ್ವಲ್ಪ ಹೊರ ಬಂದಿದ್ದರೂ ಮಕ್ಕಳಿಗಾಗಿ ಅವರು ಕೂಡಿಡುತ್ತ ಬಂದುದನ್ನು ಮರೆಯಲಾರೆ. ಸಣ್ಣ ಪುಟ್ಟ ಖರ್ಚಿಗೂ ಅಯ್ಯನಿಂದ ಅವ್ವ ಹಣ ಪಡೆಯಬೇಕಾದರೆ ಸಣ್ಣ ಜಗಳವೇ ಆಗುತ್ತಿತ್ತು. ಅವರಿಬ್ಬರೂ ಜಗಳದ ಮಧ್ಯೆಯೂ ಸಂಸಾರವನ್ನು ಸಾಗಿಸಿದರು, ಬೆಳಸಿದರು. ದಿನವೂ ಸ್ನಾನ ಮಾಡುತ್ತಿದ್ದ, ದಿನವೂ 'ನೆಲ್ಲಕ್ಕಿ' ಅನ್ನ ಊಟ ಮಾಡುತ್ತಿದ್ದ, ಮೈಗೆ ಮತ್ತು ಬಟ್ಟೆಗೆ

ಸೋಪು ಬಳಸುತ್ತಿದ್ದ ಊರಿನ ಎರಡು ಮೂರು ಕುಟುಂಬಗಳಲ್ಲಿ (ನನ್ನ ಹಳ್ಳಿಯಲ್ಲಿ ಸುಮಾರು ನಾನೂರು ಮನೆಗಳು) ನಮ್ಮದೂ ಒಂದು. ಮೈಸೋಪನ್ನು ಮೈಗೆ ಉಜ್ಜಿದರೆ ಅಯ್ಯ ಬಯ್ಯುತ್ತಿದ್ದರು. ಎರಡು ಕೈಗಳನ್ನೂ ಒದ್ದೆ ಮಾಡಿಕೊಂಡು ಮೃದುವಾಗಿ ಸೋಪನ್ನು ಒಂದು ಕೈಯಿಂದ ಇನ್ನೊಂದಕ್ಕೆ ವರ್ಗಾಯಿಸಿ ಆ ಕೈಯನ್ನು ಮೈಗೆ ಉಜ್ಜಬೇಕು. ಒದ್ದೆ ಕೈಗೆ ಅಂಟಿಕೊಂಡ ಸೋಪಿನ ಅವಶೇಷ ಮೈಯ ಕೊಳೆಯನ್ನೆಲ್ಲ ಸ್ವಚ್ಛ ಮಾಡಬೇಕು. ಅವ್ವ ಬೆಳಿಗ್ಗೆ ಎದ್ದು ಕೊಟಿಗೆ ಗುಡಿಸಿ ಸೆಗಣಿ ತೆಗೆದು ಹಾಕಿ ಎಮ್ಮೆ ಹಾಲು ಕರೆದು ಬೆಣ್ಣೆ ಕಡೆದು ಹೊಲಗಳಿಗೆ ಹೋಗಿ ಹುಲ್ಲು ತಂದು ಅಡಿಗೆ ಮಾಡಬೇಕು. ರಾತ್ರಿ ಉಳಿದಿದ್ದ ಮುದ್ದೆಗೋ ರೊಟ್ಟಿಗೋ ಅನ್ನಕ್ಕೋ ಮೊಸರು ಸೇರಿಸಿದರೆ ಅದೇ ಪ್ರಾತಃಕಾಲದ ಉಪಾಹಾರ. ಅದೇ ಕರೆದ ಬಿಸಿ ನೊರೆಹಾಲನ್ನು ಕುಡಿದರೆ ಅದೇ ಕಾಫಿ, ಟೀ. ಅವ್ವ ಒಮ್ಮೊಮ್ಮೆ ಬೆಣ್ಣೆ ಮಾರಿದ ದುಡ್ಡನ್ನು ಕುಡಿಕೆಯಲ್ಲಿ ಬಚ್ಚಿಟ್ಟು ಕೊಡುತ್ತಿದ್ದರು. ಅವರು ಕೊಟ್ಟ ಜೋಳ, ತೊಗರಿಬೇಳೆ, ಮೆಣಸಿನಕಾಯಿಯನ್ನು ಮೂರು ಮೈಲಿ ದೂರದ ಸಂತೆಗೆ ಹೋಗಿ ಮಾರಿ ಅದರಿಂದ ಬಂದ ಹಣದಲ್ಲಿ ಬೆಂಕಿಪೆಟ್ಟಿಗೆ, ಸೀಮೆಎಣ್ಣೆ, ಊದುಬತ್ತಿ ಮುಂತಾದುವನ್ನು ಕೊಂಡು ಉಳಿದ ಒಂದೆರಡು ಬಿಲ್ಲೆಗೆ ವಡೆ ತಿನ್ನುತ್ತಿದ್ದೆ. ಅಯ್ಯ ಅವ್ವ ಅತಿ ಕಷ್ಟಜೀವಿಗಳು. ಅವರು ತಮ್ಮ ಮಕ್ಕಳ ಬದುಕೇ ತಮ್ಮ ಬದುಕೆಂಬಂತೆ ನಮ್ಮನ್ನು ಬೆಳಸಿದರು, ಬೆಳಕು ಕಾಣಿಸಿದರು.

ಪ್ರಾಥಮಿಕ ಶಾಲಾ ಉಪಾಧ್ಯಾಯಿನಿಯಾಗಿದ್ದ ನನ್ನ ಅಕ್ಕ (ರುದ್ರವ್ವ) ಚೊಚ್ಚಲು ಹೆರಿಗೆಯಲ್ಲಿ ಮಗು ಹೆರಲಾರದೆ ಚಿಕ್ಕ ವಯಸ್ಸಿನಲ್ಲೇ ಮಡಿದಳು. ನನ್ನ ಮೂವರು ತಂಗಿಯರಲ್ಲಿ ಮೊದಲನೆಯವಳು ಬಾಲ್ಯದಲ್ಲೇ ಮಡಿದಳು. ಉಳಿದ ಇಬ್ಬರು ತಂಗಿಯರೂ (ರತ್ನಮ್ಮ, ದಾಕ್ಷಾಯಣಮ್ಮ. ಆ ಕಾಲಕ್ಕೆ ಆಧುನಿಕ ಎನ್ನಬಹುದಾದ ಈ ಹೆಸರುಗಳನ್ನು ಇಟ್ಟವನು ನಾನು) ತಮ್ಮ ಮಕ್ಕಳ ಜೊತೆ ಈಗ ಸುಖವಾಗಿದ್ದಾರೆ. ನಮ್ಮದು ನಮ್ಮ ಅಂದಿನ ಹಳ್ಳಿಗಳ ಜೊತೆ ಹೋಲಿಸುವುದಾದರೆ ತಕ್ಕಮಟ್ಟಿಗೆ ಇದ್ದವರ ಕುಟುಂಬವೇ. ಅಯ್ಯ ಹಳ್ಳಿಗೆ ತಕ್ಕಮಟ್ಟಿನ ಶ್ರೀಮಂತ ಎನ್ನಿಸಿಕೊಂಡರು, ತಲೆಗೆ ಪೇಟ ಕಟ್ಟಿದರು, ಭಾರಿ ಗಾತ್ರದ ಬೆಳ್ಳಿಯ ಕರಡಗೆಯನ್ನು ಕೊರಳಲ್ಲಿ ಹಾಕಿಕೊಂಡರು, ಕೈಗೆ ಚಿನ್ನದ ಉಂಗುರ ಧರಿಸಿದರು, ಮನೆಯಲ್ಲಿ ಕಬ್ಬಿಣದ ತಿಜೋರಿ ಇಟ್ಟರು. ಹಳ್ಳಿಯಲ್ಲಿ ಯಾರ ಹತ್ತಿರ ನಗದು ಇರದಿದ್ದರೂ ಅಯ್ಯನ ಹತ್ತಿರ ಸದಾ ಇರುತ್ತಿತ್ತು. ಉಪಾಧ್ಯಾಯರಾಗಿ ಪ್ರತಿ ತಿಂಗಳು ಸಂಬಳ ಬರುತ್ತಿದ್ದುದರಿಂದ ಮತ್ತು ಸಣ್ಣದಾಗಿ ಲೇವಾದೇವಿ ವ್ಯವಹಾರ ಇಟ್ಟುಕೊಂಡುದರಿಂದ ಭಾರಿ ರೈತರೂ ಅಯ್ಯನ ಹತ್ತಿರ ಹಣಕ್ಕಾಗಿ ಬರುತ್ತಿದ್ದರು. ಲೇವಾದೇವಿಯಲ್ಲಿ ಅನ್ಯಾಯದ ದರದ ಬಡ್ಡಿ ತೆಗೆದುಕೊಳ್ಳುತ್ತಿರಲಿಲ್ಲವೆಂದು, ಕೊಟ್ಟ ಬಡ್ಡಿಯನ್ನು ಸಾಲದ ಪತ್ರದಲ್ಲಿ ಮರೆಯದೆ ಬರೆದಿಡುತ್ತಿದ್ದರೆಂದು ಜನ ಮೆಚ್ಚಿಕೊಂಡಿದ್ದರು. (ಅಪ್ರಾಮಾಣಿಕತೆ ಯಾರಿಗೂ ಗೊತ್ತಿರಲಿಲ್ಲ). ಅವರು ನನ್ನನ್ನು ಪದವೀಧರನನ್ನಾಗಿ ಮಾಡಿದರು, ಹೆಣ್ಣು ಮಕ್ಕಳನ್ನು ಎಂಟನೇ ತರಗತಿವರೆಗೆ ಓದಿಸಿ ಮದುವೆ ಮಾಡಿದರು. ನನ್ನ ಹಳ್ಳಿಯ ಹಿರಿಯರ ದೃಷ್ಟಿಯಲ್ಲಿ ಅದೊಂದು ಪವಾಡವಾಗಿತ್ತು. ಅವ್ವನ 'ಕಾಲ್ಗುಣ' ಅದಕ್ಕೆ ಕಾರಣವೆಂದು ಅವರು ಹೇಳುತ್ತಿದ್ದರು. ಒಂಬತ್ತು

ಎಕರೆ ಗದ್ದೆ, ಆರು ಎಕರೆ ಬೆದ್ದಲೆ ಜಮೀನಿಗೆ ಒಡೆಯರಾದರೂ ಎಲ್ಲವನ್ನೂ ಕೋರಿಗೆ ಕೊಟ್ಟುದರಿಂದ ನಾನು ಜಮೀನಿದ್ದರೂ ರೈತನ ಮಗನಾಗಲಿಲ್ಲ.

ಅಯ್ಯ, ಅವ್ವ ಇಬ್ಬರೂ ದೀರ್ಘಾಯುಷಿಗಳು. ಅಯ್ಯ ತಮ್ಮ ತೊಂಬತ್ತನೇ ವಯಸ್ಸಿನಲ್ಲಿಯೂ ದಿನಕ್ಕೆ ಮೂರು ಬಾರಿ ಚೆನ್ನಾಗಿ ಊಟ ಮಾಡುತ್ತಿದ್ದರು. ಹೋಳಿಗೆ ಮಾಡಿದ ದಿನ ಅವರು ಅನ್ನ ಸಾರು ಊಟ ಮಾಡುತ್ತಿರಲಿಲ್ಲ. ಒಂದು ದಿನ ರಾತ್ರಿ ಅವರು ಒಂಬತ್ತೂವರೆ ಗಂಟೆಯಲ್ಲಿ ಎದ್ದು ಬಂದಾಗ ನಾನು ನನ್ನ ಹೆಂಡತಿ ಮಕ್ಕಳು ಒಟ್ಟಿಗೆ ಊಟ ಮಾಡುತ್ತಿದ್ದೆವು. ಏನೋ ಗೊಣಗಿ ಮತ್ತೆ ಹೋಗಿ ಮಲಗಿದರು. ವಿಚಾರಿಸಿದರೆ ಅವರು ಕೋಪದಿಂದ ನನ್ನನ್ನು ಆಕ್ಷೇಪಿಸಿದರು : “ಹಳ್ಳಿಯಿಂದ ನನ್ನನ್ನು ಪಟ್ಟಣಕ್ಕೆ ಉಪವಾಸ ಕೆಡವಲು ಕರೆದುಕೊಂಡು ಬಂದ್ಯಾ? ನೀನೂ ನಿನ್ನ ಹೆಂಡತಿ ಮಕ್ಕಳೂ ಚೆನ್ನಾಗಿ ಊಟ ಮಾಡ್ರಿ, ನಾನು ಹಸಿದುಕೊಂಡು ಮಲಗುತ್ತೇನೆ.” ನನಗೆ ಗಾಬರಿಯಾಗಿ ಹೆಂಡತಿಯನ್ನು ಕೇಳಿದೆ. ಅವಳು ಅಯ್ಯನ ಮಂಚದ ಕೆಳಗೆ ಕೈ ತೊಳೆದ ತಟ್ಟೆ ತೋರಿಸಿ, ಒಂದು ಗಂಟೆಯ ಹಿಂದೆ ಅವರು ಊಟ ಮಾಡಿದ್ದನ್ನು ನೆನಪಿಸಿದಳು. ಅಲ್ಲಿಗೆ ಅಯ್ಯನ ಕೋಪ ಸರ್‍ರನೆ ಇಳಿದು, “ಬಿಡವ್ವ, ಇತ್ತ ತಟ್ಟೆ ತಾರವ್ವಾ” ಎಂದು ಹೇಳಿ ಮತ್ತೆ ಅಚ್ಚುಕಟ್ಟಾಗಿ ಊಟ ಮಾಡಿ ಸಮಾಧಾನದಿಂದ ಮಲಗಿದರು. ಅವರ ಜ್ಞಾಪಕಶಕ್ತಿ ಕುಗ್ಗಿತ್ತು, ಪಚನಶಕ್ತಿ ಮಾತ್ರ ಹಾಗೇ ಇತ್ತು. ಅವರು ತಮ್ಮ ಸುಮಾರು ತೊಂಬತ್ತೊಂದನೇ ವಯಸ್ಸಿನಲ್ಲಿ, 12-6-1975ರಲ್ಲಿ ಕಣ್ಣುಮುಚ್ಚಿದರು. ಅವ್ವ ತಮ್ಮ ಸುಮಾರು ಎಂಬತ್ತೇಳನೇ ವಯಸ್ಸಿನಲ್ಲಿ, 1986ರಲ್ಲಿ ಕಣ್ಣುಮುಚ್ಚಿದರು.

ಛಲ, ಹಠ, ಕಷ್ಟ ಸಹಿಷ್ಣುತೆ, ನೇರ ನಡೆನುಡಿ, ಅದಮ್ಯೋತ್ಸಾಹ, ಸ್ವಾಭಿಮಾನ, ಸ್ವಾವಲಂಬಿತ್ವ ಇವು ಅಯ್ಯ ಅವ್ವರಿಂದ ನನಗೆ ಬಂದ ಗುಣಗಳೆಂದು ನಾನು ಭಾವಿಸಿದ್ದೇನೆ.

**ನನ್ನ ಹಳ್ಳಿ : ಪ್ರಾಥಮಿಕ ಶಿಕ್ಷಣ**

ಜಮೀನಿದ್ದೂ ರೈತನ ಮಗನಾಗುವ ಅವಕಾಶದಿಂದ ವಂಚಿತನಾದರೂ ನಾನು ಒಬ್ಬ ಶುದ್ಧ ಹಳ್ಳಿಯವ. ಎರಡು ಬಾರಿ ವಿದೇಶಕ್ಕೆ ಹೋದಾಗಲೂ ಚಿಕಾಗೋ, ಲಾಸ್ ಎಂಜಲೀಸ್, ನ್ಯೂಯಾರ್ಕ್, ಲಂಡನ್, ಟೋಕಿಯೊ, ರೋಮ್, ಬ್ಯಾಂಕಾಕ್ ಇವೇ ಮೊದಲಾದ ನಗರಗಳಲ್ಲಿ ನನ್ನ ಕನಸುಗಳಲ್ಲಿ ಕಾಣಿಸುತ್ತಿದ್ದುದು ನನ್ನ ಹಳ್ಳಿಯ ಕೆರೆ, ಬೀದಿ, ಗುಡಿ, ತಿಪ್ಪೆ, ಹೊಲಗಳು ಮಾತ್ರ. ಇವುಗಳ ಅಂಚಿನಲ್ಲಿ ಮೈಸೂರು ಬೆಂಗಳೂರು ನಗರಗಳು ಸೇರಿಕೊಂಡು ಮಿಶ್ರವಾಗಿ ಎಂತಹುದೋ ಅನುಭವ. ನಾನು ಒಬ್ಬ ಹುಟ್ಟಾ ಕನಸುಗಾರ. ಬಿಡುವು ಸಿಕ್ಕಾಗಲೆಲ್ಲ ಕನಸು ಕಾಣುವುದು ನನ್ನ ಜಾಯಮಾನ. ಒಮ್ಮೆ ಬಸ್ಸಿನಲ್ಲಿ ಹೋಗುತ್ತಿರುವಾಗ ವಿಶ್ವಸಂಸ್ಥೆಯಲ್ಲಿ ನಾನು ಹಾಡಿದಂತೆ, ಆ ಸಂಗೀತ ಆಯಾ ದೇಶದ ಪ್ರತಿನಿಧಿಗಳಿಗೆ ಆಯಾ ಸಂಗೀತವಾಗಿ ಕೇಳಿಸಿದಂತೆ ಹಗಲುಗನಸು ಕಂಡೆ. ಭೀಮಸೇನ ಜೋಶಿಯವರು ಹಾಡಿರುವ 'ಭಾಗ್ಯದ ಲಕ್ಷ್ಮಿ ಬಾರಮ್ಮ' ಗೇಯ ಕೃತಿಯನ್ನು ಅವರ ಧಾಟಿಯಲ್ಲಿ ಮನಸ್ಸಿನಲ್ಲೇ ಹಾಡುತ್ತ ಹಾಡುತ್ತ ಹಿಗ್ಗಿ ಇನ್ನೂ ಚೆನ್ನಾಗಿ ಹಾಡಿ ರಸಾನಂದವನ್ನು ಪಡೆದೆ; ಮಾನಸಿಕವಾಗಿ ಹಾಡಿದ್ದು

ನಾಲಗೆಯಿಂದ ರೂಪವನ್ನು ಪಡೆಯಲಾರದೆ ಹೋಯ್ತು. ಬಾಲ್ಯದಲ್ಲಿ ಶಿವನ ಸಾಕ್ಷಾತ್ಕಾರವಾದಂತೆ ನಾನೇ ಮಾರ್ಕಂಡೇಯನಾದಂತೆ ಕನಸು. ಒಂದು ವರ್ಷದ ಹಿಂದೆ ಬಿದ್ದ ಕನಸು - ನನ್ನ ಹಳ್ಳಿಗೆ ಎಲ್ಲಿಂದಲೋ ಬರುತ್ತಿದ್ದೇನೆ. ಊರ ಹೊರಗೆ ಕೆರೆ, ನನ್ನ ಹಳ್ಳಿಯ ವಾಸ್ತವ ಕೆರೆಯ ದಿವ್ಯರೂಪ ಅದು. ಅಲ್ಲಿ ದೊಡ್ಡ ಎಲೆಗಳು ತುಂಬಿವೆ, ದೊಡ್ಡ ಹೂವುಗಳು ಅರಳಿವೆ. ಮಧ್ಯೆ ಹಂಸಗಳಂತಹ ಹಕ್ಕಿಗಳು ತೇಲುತ್ತಿವೆ, ಹಾರುತ್ತಿವೆ. ಅವಾದರೂ ಎಂತಹ ಹಕ್ಕಿಗಳು - ಯುರೋಪಿನ ನದಿಗಳಲ್ಲಿ ನೋಡಿದ್ದ ಹಂಸಗಳು, ಬಣ್ಣ ಬಣ್ಣದ ಹಂಸಗಳು, ಬೊಂಬೆಯಂತಹ ಹಂಸಗಳು. ಅವು ನಿಧಾನಕ್ಕೆ ಹಾರುತ್ತ ರೆಕ್ಕೆ ಬಡಿಯುತ್ತ ಆಡುತ್ತಿವೆ. ನೋಡಿ ಸಂಭ್ರಮಗೊಳ್ಳುತ್ತಿದ್ದಂತೆ ತುಂಬಿದ್ದ ಕೆರೆ ಒಡೆದು ನೀರು ರಭಸದಿಂದ ಹರಿದು ಹೋಗುತ್ತಿರುವುದನ್ನು ಕಂಡು ಅತ್ತ ಓಡಿದೆ, ಕೂಗಿದೆ, ಎಲ್ಲೂ ಜನ ಇಲ್ಲ. ನಿಸ್ಸಹಾಯಕನಾಗಿ ನಾನೇ ಆ ಬಿರುಕಿಗೆ ಮೈಯೊಡ್ಡಿ ಕುಳಿತೆ. ನೀರು ಬಲವಾಗಿ ಕೊಚ್ಚಿ ನನ್ನನ್ನು ಆಕಾಶಕ್ಕೆ ಎಸೆಯಿತು. ಆ ಕ್ಷಣ ನಾನು ದೊಡ್ಡತುಂಡುಗಳಾಗಿ ಗಾಳಿಯಾಗಿ ಇಡೀ ಆಕಾಶದ ತುಂಬ ತುಂಬಿಕೊಂಡಂತಾಗಿ ಎಚ್ಚರಗೊಂಡೆ. ಯಾವುದೋ ಅವ್ಯಕ್ತ ಆನಂದ ನನ್ನಲ್ಲಿ ಉಕ್ಕಿ ಹರಿಯುತ್ತಿದೆ. ಇನ್ನೊಂದು ದಿನ ಇಡೀ ಆಕಾಶದ ತುಂಬ ವಿಚಿತ್ರ ಬಣ್ಣ ಬಣ್ಣದ ಮೋಡಗಳು ಹಕ್ಕಿಗಳಂತೆ ಹಾರಾಡುತ್ತ ಬಗೆ ಬಗೆಯ ವಿನ್ಯಾಸಗಳನ್ನು ರೂಪಿಸಿದ್ದನ್ನು ಕಂಡು ಎಚ್ಚರಿಗೊಂಡೆ - ಕನಸಿನಲ್ಲಿ ಕಂಡದ್ದನ್ನು ಕುಂಚದಲ್ಲಿ ಹಿಡಿಯುವ ವರ್ಣಶಿಲ್ಪಿಯಾಗಲಿಲ್ಲವಲ್ಲ ಎಂದು ಪೇಚಾಡಿದೆ.

ಕೆರೆ, ಮರ, ಹಕ್ಕಿ, ಮೋಡ, ಮಳೆ ಹಳ್ಳಿಯ ಹುಡುಗರ ಪ್ರಾಣ ಗೆಳೆಯರು. ಊರಿನ ಜನಕ್ಕೆ ಗುಡಿ ಇದ್ದಂತೆ ಹುಡುಗರಿಗೆ ಕೆರೆ; ಕೆರೆ ತುಂಬಿದ ವರ್ಷ ಹರ್ಷದ ವರ್ಷ. ತುಂಬದ ವರ್ಷವೆಲ್ಲ ಬರಡು ಬರಡು.

ಶಿವಮೊಗ್ಗ (ಈಗ ದಾವಣಗೆರೆ) ಜಿಲ್ಲೆ ಚನ್ನಗಿರಿ ತಾಲೂಕಿನ (ಹಿರೇ) ಕೋಗಲೂರಿನಲ್ಲಿ ಅವ್ವನ ತವರ್ಮನೆಯಲ್ಲಿ 1931ನೇ ಮೇ 10ರಂದು ಹುಟ್ಟಿದೆ. ನಾನು ಹುಟ್ಟುವ ಸ್ವಲ್ಪ ಮುನ್ನ ಅವ್ವನಿಗೆ ಸಿಂಹ ಕನಸಿಗೆ ಬಂದಿತ್ತಂತೆ (ಆಕೆ ಸಿಂಹ ನೋಡಿರಲಿಲ್ಲ!) ಅದನ್ನು ಹೇಳಿಕೊಳ್ಳಲು ಅಭಿಮಾನ ಮತ್ತು ಅವರು ಅದಕ್ಕೆ ತಮ್ಮದೇ ಅರ್ಥಗಳನ್ನು ಕಲ್ಪಿಸಿಕೊಂಡಿದ್ದರು. ಅವ್ವನೂ ನನ್ನಂತೆ ಕನಸುಗಾರ್ತಿ. ಅವರು ಕಣ್ಣು ಮುಚ್ಚುವ ಆರೆಂಟು ತಿಂಗಳ ಮೊದಲು ಮಧ್ಯಾಹ್ನ ಮಲಗಿದ್ದವರು ಇದ್ದಕ್ಕಿದ್ದಂತೆ ಅಳಲು ಆರಂಭಿಸಿದರು. ಅವರು ಹೇಳಿದಂತೆ, ಕಣ್ಣು ಬಿಟ್ಟು ನೋಡುತ್ತಿರುವಾಗಲೇ ಒಬ್ಬ ಜಂಗಮ ಮೈ ತುಂಬ ವಿಭೂತಿ ಧರಿಸಿ ಕೈಯಲ್ಲಿ ಬೆತ್ತ ಹಿಡಿದು ತನ್ನ ಜೊತೆ ಬಾ ಎಂದು ಕರೆದನಂತೆ. “ಸ್ವಲ್ಪ ತಡೀರಿ ಬರ್ತೀನಿ” ಎಂದು ಹೇಳುತ್ತಿದ್ದಂತೆ ಹೋಗಿ ಬಿಟ್ಟರು. “ಏನಪ್ಪ, ಈ ಜೋಜಿಗ” ಎಂದು ನನ್ನನ್ನು ಕೇಳುತ್ತ ಅತ್ತುಬಿಟ್ಟರು. ಅದು ಸಾವು ಸೂಚಕ ಎಂಬುದು ಅವರ ದುಃಖವಲ್ಲ, ಅಂತಹ ವ್ಯಕ್ತಿಯ ಜೊತೆ ಹೋಗುವ ಭಾಗ್ಯ ತಮ್ಮದಾಗಲಿಲ್ಲವೆಂಬುದು ಅವರ ದುಃಖಕ್ಕೆ ಕಾರಣ. ಕನಸು ಮತ್ತು ನಿಜ ಇವುಗಳ ಮಧ್ಯೆ ಅವ್ವನಿಗೆ ವ್ಯತ್ಯಾಸವಿರಲಿಲ್ಲ. ದನಗಳ ಕೊಟ್ಟಿಗೆ ನಡುಮನೆ ಒಂದೇ ಆಗಿದ್ದ ಪುಟ್ಟ ಹೆಂಚಿನ ಮನೆಯಲ್ಲಿ ಹುಟ್ಟಿದ ನನಗೆ ಚಿದಾನಂದಮೂರ್ತಿ ಎಂಬ

ಆಕರ್ಷಕ ಹೆಸರನ್ನು ಏಕೆ ಇಟ್ಟರೆಂಬುದು ನನಗಿನ್ನೂ ಒಗಟಾಗಿಯೇ ಉಳಿದಿದೆ. ಬಸಯ್ಯ, ಮರುಳಯ್ಯ, ಕಲ್ಲಯ್ಯ ಇವು ಜಂಗಮರಲ್ಲಿದ್ದ ಸಾಮಾನ್ಯ ಹೆಸರುಗಳು. ಅಯ್ಯ ಒಬ್ಬ ಮೇಷ್ಟ್ರಾಗಿದ್ದುದರಿಂದಲೋ ಏನೋ, ತಾವೂ ಒಬ್ಬ ಗೃಹಸ್ಥನಾದುದು ಮಾತ್ರವಲ್ಲ ಗಂಡುಮಗುವಿನ ತಂದೆಯಾದೆ, ಮನುಷ್ಯನಾದೆ ಎಂಬ ಆನಂದದ ಕುರುಹೋ, ತಮ್ಮ ಬಡತನಕ್ಕೆ ತಾವು ಜಂಗಮರಾಗಿ ಹುಟ್ಟಿ ಅದು ನೆನಪಿಗೆ ಬರಬಾರದು ಎಂದೋ (ಇವೆಲ್ಲ ನಡೆದಿದ್ದರೆ ಅದು ಅಪ್ರಜ್ಞಾಪೂರ್ವಕ) ಏನೋ ಒಂದು ರೀತಿಯಲ್ಲಿ ನನಗೆ ಜಾತ್ಯತೀತವೆನ್ನಬಹುದಾದ ಹೆಸರಿಟ್ಟರೂ ಹಳ್ಳಿಯವರು ಮಾತ್ರ ನನ್ನನ್ನು 'ಮೂರ್ತಯ್ಯಾ' ಎಂದೇ ಕರೆಯುತ್ತಿದ್ದರು. ನನ್ನ ಹೆಸರಿನ ಇನ್ನೊಬ್ಬ ವ್ಯಕ್ತಿಯನ್ನು ನೋಡಿದ್ದು ದಾವಣಗೆರೆಯಲ್ಲಿ. ನಾನು ಪ್ರೌಢಶಾಲೆಯಲ್ಲಿ ಮೊದಲ ತರಗತಿಯ ವಿದ್ಯಾರ್ಥಿಯಾಗಿದ್ದಾಗ ಅಲ್ಲಿನ ಒಂದು ಕ್ಷೌರದ ಪೆಟ್ಟಿಗೆ ಅಂಗಡಿಯ ಯಜಮಾನ 'ಮದ್ರಾಸ್ ಹೇರ್ ಕಟಿಂಗ್ ಸಲೂನ್' ಎಂಬ ಬೋರ್ಡ್ ಬರೆಸಿ ಕೆಳಗೆ 'ಪ್ರೊ. ಎಂ. ಚಿದಾನಂದಮೂರ್ತಿ' ಎಂದು ಬರೆಯಿಸಿಕೊಂಡಿದ್ದ (ಆ ಮಹಾಶಯ ಸದ್ಯ 'ಪ್ರೊಪ್ರೈಟರ್' ಆಗಿದ್ದನೇ ಹೊರತು 'ಪ್ರೊಫೆಸರ್' ಆಗಿರಲಿಲ್ಲ).

ನನ್ನ ಬಾಲ್ಯದ ಮೊತ್ತ ಮೊದಲ ನೆನಪುಗಳು ನೀತಿಗೆರೆ ಎಂಬ ಒಂದು ಸುಂದರ ಹಳ್ಳಿಗೆ ಸಂಬಂಧಿಸಿವೆ. ಅವ್ವ ಹುಲ್ಲು ತರಲು ಹೊಲಕ್ಕೆ ಹೋಗಿದ್ದಾರೆ, ನಾನು ಅಳುತ್ತ ಮೂತ್ರ ವಿಸರ್ಜನೆ ಮಾಡುತ್ತಾ ನಿಂತಿದ್ದೇನೆ - ಇದೇ ನನ್ನ ಬಾಲ್ಯದ ಅತಿ ಹಿಂದಿನ ನೆನಪು. ಆ ಊರಲ್ಲಿ ಅಯ್ಯ ಉಪಾಧ್ಯಾಯರಾಗಿದ್ದರು. ಊರ ಮುಂದೆ ವೀರಭದ್ರ, ಹನುಮಂತ ದೇವರ ಗುಡಿಗಳು, ಅಲ್ಲೇ ದೊಡ್ಡ ಹೊಂಡ, ಅದರಾಚೆ ಈಶ್ವರದೇವರ ಗುಡಿ, ಹೊಂಡದ ಒಂದು ಕಡೆ ಅತ್ತಿಹಣ್ಣಿನ ಮರ, ಇನ್ನೊಂದು ಕಡೆ ರುಚಿಯಾದ ಬೇಲದ ಹಣ್ಣಿನ ಮರ. ಊರಾಚೆ ಉದ್ದಕ್ಕೂ ಸಾಲು ಮಾವಿನ ಮರಗಳು - ಅಳಿಲುಗಳೂ ಹುಡುಗರೂ ದಾರಿಹೋಕರೂ ಉದುರಿಸಿ ತಿಂದು ಉಳಿದಿದ್ದ ಮಾಗಿದ ಕಾಯಿಗಳನ್ನು ಊರ ಜನ ಇಳಿಸಿ ಹಂಚಿಕೊಳ್ಳುತ್ತಿದ್ದರು. ಹೊಂಡದಲ್ಲಿ ವರ್ಷದುದ್ದಕ್ಕೂ ನೀರಿದ್ದರೂ ಹುಡುಗರಿಗೆ ಅದರಲ್ಲಿ ಈಜಲು ಅಡ್ಡಿಯಾಗುತ್ತಿದ್ದಾತ ಮುರುಗಜ್ಜ - ಅವನಂತೆಯೇ ಅವನ ಒಂದು ಎತ್ತೂ ಮಹಾಕೋಪಿಷ್ಠ. ಅಯ್ಯ ನನ್ನನ್ನು ಮೇಜಿನ ಮೇಲೆ ಕೂರಿಸಿಕೊಂಡು ತರಗತಿಗೆ ಪಾಠ ಹೇಳುತ್ತಿದ್ದರು. ಮುಂದಿನ ತರಗತಿಯ ಪಾಠಗಳನ್ನು ಹುಡುಗರು ಓದದಿದ್ದರೆ ನಾನೇ ಓದಿಬಿಡುತ್ತಿದ್ದೆ. ಆ ಹಳ್ಳಿಯಲ್ಲಿ ನಾವು ವಾಸವಾಗಿದ್ದ ಮನೆಯ ಹಿಂದೆ ಒಂದು ಭಾರಿ ನಾಗರಹಾವು ಹೆಡೆಯೆತ್ತಿ ಎರಡು ಮೂರು ನಿಮಿಷ ನಿಂತಿದ್ದು ಅದನ್ನು ಕೆಲವೇ ಅಡಿಗಳಲ್ಲಿದ್ದ ನಾವೆಲ್ಲ ನೋಡಿದ್ದು, ಜನ ಕೈ ಮುಗಿದು 'ಹೋಗಪ್ಪಾ ನಾಗಪ್ಪಾ' ಎಂದು ಬೇಡಿಕೊಂಡ ಮೇಲೆ ಪ್ರಸನ್ನನಾದ ನಾಗರಾಜ ಹೊರಟು ಹೋದುದು ಮರೆಯಲಾಗದ ದೃಶ್ಯ. ಅಯ್ಯ ಅಷ್ಟು ಜನ ಬಳಕೆಯವರಲ್ಲ - ಅವರನ್ನು ಬಾಲ್ಯದ ಕೀಳರಿಮೆ ಉದ್ದಕ್ಕೂ ಬಾಧಿಸುತ್ತಿತ್ತು. ಜನರ ಜೊತೆ ಎಷ್ಟೋ ಅಷ್ಟೇ ವ್ಯವಹಾರ. ಆದರೆ ಅವ್ವ ಸಮಾಜ ಜೀವಿ, ಅವರಿದ್ದ ಕಡೆ ಹೆಂಗಸರು ಗಂಡಸರು ಸೇರುತ್ತಿದ್ದರು. ನಾವು ಇದ್ದ ಪುಟ್ಟ ಕೇರಿಯ ಜನ ಒಂದು ಕುಟುಂಬದವರಂತೆ ಇದ್ದೆವು. ಅವ್ವ ಅಲ್ಲಿಯ ಕೇಂದ್ರ. ರಾತ್ರಿ ಊಟವಾದ ಮೇಲೆ ಎಲ್ಲರೂ

ಬೆಳದಿಂಗಳಲ್ಲಿ ಮನೆ ಮುಂದೆ ಹರಟುತ್ತಿದ್ದರೆ ನಾವು ಮಕ್ಕಳು ಸಂತೋಷವಾಗಿ ಸ್ವಚ್ಛಂದವಾಗಿ ಆಟವಾಡುತ್ತಿದ್ದೆವು.

ನೀತಿಗೆರೆ ಈಗಲೂ ಇದೆ - ಅಷ್ಟೇ. ನನ್ನ ಬಾಲ್ಯದ ಆ ಸುಂದರ ನೀತಿಗೆರೆಗೆ ಬಹಳ ದಿನಗಳ ಮೇಲೆ ಹೋದಾಗ ಆ ನನ್ನ ಬಾಲ್ಯದ ನೀತಿಗೆರೆ ಇರಲಿಲ್ಲ. ಅದೇ ಹೆಸರಿನ ಆಧುನಿಕಗ್ರಾಮ ಇತ್ತು. ನಾನು ಅಲ್ಲಿಗೆ ಹೋಗದೆ ಬಾಲ್ಯದ ನೀತಿಗೆರೆಯನ್ನೇ ಚಿರಸ್ಥಾಯಿಗೊಳಿಸಿಕೊಳ್ಳಬೇಕಾಗಿತ್ತೆಂದು ಒಮ್ಮೊಮ್ಮೆ ಯೋಚಿಸಿದ್ದೇನೆ.

ನನ್ನ ಪ್ರಾಥಮಿಕ ಶಿಕ್ಷಣ ಮುಗಿದು ಮಾಧ್ಯಮಿಕ ಶಿಕ್ಷಣದ ಸ್ವಲ್ಪ ಭಾಗ ಸಂತೇಬೆನ್ನೂರಿನಲ್ಲಿ ನಡೆದು ಬಳಿಕ ನನ್ನ ಹುಟ್ಟಿದೂರು ಕೋಗಲೂರಲ್ಲಿ ಮುಂದುವರೆಯಿತು. ಎಲ್ಲ ತರಗತಿಗಳಲ್ಲೂ ನಾನು ಓದಿನಲ್ಲಿ ಮೊದಲಿಗ. ಮಾಧ್ಯಮಿಕ ಶಿಕ್ಷಣದ ಎರಡನೆಯ ವರ್ಷ ಮುಖ್ಯೋಪಾಧ್ಯಾಯರು ತಮ್ಮ ಮಗನಿಗೂ ನನಗೂ ಕರ್ನಾಟಕದ ಬಗ್ಗೆ ಒಂದು ಚಿಕ್ಕ ಉಪನ್ಯಾಸ ಉರುವು ಹೊಡಿಸಿ ಉಪಾಧ್ಯಾಯರ ಸಭೆಗೆ ಕರೆದೊಯ್ದು ಭಾಷಣ ಮಾಡಿಸಿದರು. ನಾವಿಬ್ಬರೂ ಬಹಳ ಚೆನ್ನಾಗಿ ಮಾತನಾಡಿದೆವೆಂದು ಎಲ್ಲರೂ ಹೊಗಳಿದರು. ಸಭಾಧ್ಯಕ್ಷರ ಮುಂದೆ ಇಟ್ಟಿದ್ದ ಮೇಜಿನ ಮೇಲೆ ನಿಂತು "ಕಾವೇರಿಯಿಂದಮಾ ಗೋದಾವರಿವರಮ್...." ಎಂಬ ಪದ್ಯವನ್ನು ಹೇಳಿ ಕರ್ನಾಟಕದ ವೈಭವದ ಬಗ್ಗೆ ಮಾತನಾಡಿದ್ದೆ. ಮಾಧ್ಯಮಿಕ ನಾಲ್ಕನೆಯ ತರಗತಿಯಲ್ಲಿದ್ದಾಗ ಶ್ರೀ ಕೃಷ್ಣಪ್ಪನವರೆಂಬ ಇಡೀ ತಾಲೂಕಿಗೇ ಪ್ರಸಿದ್ಧರಾದವರು ಮುಖ್ಯೋಪಾಧ್ಯಾಯರಾಗಿ ನಮ್ಮ ಶಾಲೆಗೆ ಬಂದರು. ಅವರ ಮಗ ನಾನು ಒಳ್ಳೆಯ ಗೆಳೆಯರು. ಅವನು ನನ್ನ ಮನೆಗೆ ಬಂದು ಬೆಳ್ಳುಳ್ಳಿ ಈರುಳ್ಳಿಯ ಊಟ ತಿಂಡಿ ತಿಂದು ಅಪ್ಪನಿಗೆ ಹೇಳಬೇಡ ಎಂದು ಕೇಳಿಕೊಳ್ಳುತ್ತಿದ್ದ. ಆ ವರ್ಷವೋ ಅದರ ಹಿಂದಿನ ವರ್ಷವೋ ನನ್ನ ಹಿರಿಯ ತಂಗಿ ಲಂಗ ಬಿಟ್ಟು ಸೀರೆ ಉಡುವಂತಾದಾಗ, ಆಕೆ ತಲೆ ಮೇಲೆ ಮುಸುಕು ಹಾಕಿಕೊಳ್ಳಬೇಕೆಂದು ಅವ್ವ ಹಠ ಹಿಡಿದರೆ ನಾನು ಸೀರೆಯ ಸೆರಗನ್ನು ಬೆನ್ನ ಮೇಲೆ ಹಾಕಿಕೊಳ್ಳಬೇಕೆಂದು ವಾದಿಸಿ, ಹಠ ಮಾಡಿ ಗೆದ್ದ ದಿನ ತಂಗಿಗೆ ಸಂತೋಷವೋ ಸಂತೋಷ. (ಈಗ ಯಾರಾದರೂ ತಲೆ ಮೇಲೆ ಮುಸುಕು ಹಾಕಿಕೊಂಡಿದ್ದರೆ ಅದನ್ನು ನೋಡುವುದೇ ನನಗೆ ಒಂದು ಅನುಭವ). ಮುಖ್ಯೋಪಾಧ್ಯಾಯರು ಸೀಮೆ ಎಣ್ಣೆಯ ಲಾಟೀನು ಬೆಳಕಿನಲ್ಲಿ ರಾತ್ರಿ ಪಬ್ಲಿಕ್ ಪರೀಕ್ಷೆಗೆ ಸಿದ್ಧರಾಗುತ್ತಿದ್ದ ನಮಗೆ ಉಚಿತವಾಗಿ ಪಾಠ ಹೇಳುತ್ತಿದ್ದರು. ಆ ಪರೀಕ್ಷೆಯಲ್ಲಿ ಹೆಚ್ಚು ಜನ ಪಾಸಾದರೆ, ಒಬ್ಬಿಬ್ಬರು ಪ್ರಥಮದರ್ಜೆ ಪಡೆದರೆ ಮುಖ್ಯೋಪಾಧ್ಯಾಯರಿಗೆ ದೊಡ್ಡ ಕೀರ್ತಿ ಬರುತ್ತಿತ್ತು. ಅವರ ಖಾಸಗಿ ಪಾಠಕ್ಕೆ ನಾವು ಕೊಡುತ್ತಿದ್ದ ಗುರುದಕ್ಷಿಣೆಯೆಂದರೆ ಅವರ ಲಾಟೀನಿಗೆ ಎಂದಾದರೂ ಸೀಮೆ ಎಣ್ಣೆ ತುಂಬಿಸಿ ಕೊಡುವುದು, ಕೇಳಿದಾಗ ಒಂದು ಲೋಟ ಹಾಲು ಅಥವಾ ಒಂದು ತಂಬಿಗೆ ಮಜ್ಜಿಗೆ ತಂದುಕೊಡುವುದು, ಎಂದಾದರೊಮ್ಮೆ ಮುತ್ತುಗದ ಮರ ಹತ್ತಿ ಎಲೆ ಕಿತ್ತು ತಂದುಕೊಡುವುದು. ಪಬ್ಲಿಕ್ ಪರೀಕ್ಷೆಗಾಗಿ ಪರೀಕ್ಷಾ ಕೇಂದ್ರ ಹನ್ನೆರಡು ಮೈಲಿ ದೂರದ ಚನ್ನಗಿರಿಗೆ ಎತ್ತಿನ ಬಂಡಿ ಕಟ್ಟಿಸಿಕೊಂಡು ಕರೆದೊಯ್ದರು. ಹೋಟಲಲ್ಲಿ ದೋಸೆ ತಿಂದುದು ಅದೇ ಮೊದಲು. ಪರೀಕ್ಷೆ ಆರಂಭವಾಗುವ ಹಿಂದಿನ ದಿನ ಯಾರೋ ಕೃಷ್ಣಪ್ಪನವರನ್ನು "ನಿಮ್ಮಲ್ಲಿ ಫಸ್ಟ್

ಕ್ಲಾಸ್ ಎಷ್ಟು" ಎಂದು ಕೇಳಿದ್ದಕ್ಕೆ ಒಂದು ಎಂಬ ಉತ್ತರ ಬಂದಾಗ ನಾನು ಉಬ್ಬಿಹೋಗಿದ್ದೆ. ನಿರೀಕ್ಷಿಸಿದಂತೆ ನನ್ನದು ಪ್ರಥಮ ದರ್ಜೆಯಲ್ಲಿ ಪಾಸಾಯಿತು (1945). ಅದೊಂದು ಇಡೀ ಹಳ್ಳಿಗೆ, ಸುತ್ತಮುತ್ತಲ ಹಳ್ಳಿಗಳಿಗೆ ದೊಡ್ಡ ಸುದ್ದಿ. ಬೀದಿಯಲ್ಲಿ ಹೋಗುತ್ತಿದ್ದರೆ "ಕೊಟ್ರಯ್ನೋರ ಮಗ ಫಸ್ಟ್ ಕ್ಲಾಸು" ಎಂದು ಜನ ತೋರಿಸಿ ಮಾತನಾಡುತ್ತಿದ್ದುದು ಕೇಳಿಸಿತ್ತು. ಆಗಿನ ಲೋಯರ್ ಸೆಕಂಡರಿ (ಎಂಟನೆ ತರಗತಿ) ಈಗಿನ ಏಳನೇ ತರಗತಿಗೆ ಸಮಾನ.

ನನ್ನ ಹಳ್ಳಿಯಲ್ಲಿ ಆಗ ವಿದ್ಯುಚ್ಛಕ್ತಿ ಇರಲಿಲ್ಲ. ರೈಲು ಬಸ್ಸು ಸಮೀಪದ ದಾವಣಗೆರೆ ನಗರ ಇರಲಿ, ತಾಲೂಕು ಕೇಂದ್ರ ಚನ್ನಗಿರಿಯನ್ನು ನೋಡದೇ ಇದ್ದ ಜನರೂ ಇದ್ದರು. ಒಂದು ಶುಭ್ರ ಮುಗ್ಧ ವಾತಾವರಣ. ಆಗಿನ್ನೂ ಒಳ ಜಾತಿಕಾರಣ ಬಂದಿರಲಿಲ್ಲ. ಹಳ್ಳಿಯಲ್ಲಿ 'ಲಿಂಗಾಯತ'ರು ಎಂದರೆ ಸಾದರು ಜಾಸ್ತಿ; ರಕ್ತಸಂಬಂಧವೊಂದು ಆಗುತ್ತಿರಲಿಲ್ಲವೇ ಹೊರತು ಉಳಿದಂತೆ ಮಾವ, ಅತ್ತೆ, ಚಿಕ್ಕಪ್ಪ ಇತ್ಯಾದಿ ಸಂಬಂಧ ಸೂಚಕಗಳನ್ನು ಬಳಸಿಯೇ ಮಾತನಾಡುತ್ತಿದ್ದರು. ಇದು ವೀರಶೈವರಲ್ಲಿ ಮಾತ್ರವಲ್ಲ - ವಿಶ್ವಕರ್ಮರಾಗಲಿ ಬೇಡರಾಗಲಿ ದಲಿತರಾಗಲಿ ಮುಸ್ಲಿಮರಾಗಲಿ ಹೀಗೆಯೇ ನಡೆದುಕೊಳ್ಳುತ್ತಿದ್ದರು. ಇಡೀ ಹಳ್ಳಿಗೆ ನಾನು ಒಂದು ರೀತಿಯಲ್ಲಿ ಅಚ್ಚುಮೆಚ್ಚು. ಜಾಣ, ಚೂಟಿ, ಒಳ್ಳೆಯ ಹುಡುಗನೆಂಬ ಖ್ಯಾತಿಯ ಜೊತೆ (ಸಾತ್ವಿಕ ರೀತಿಯ) 'ತುಂಟ'ನೆಂದೂ ಜನ ಭಾವಿಸಿದ್ದರು. ಓದಿನಲ್ಲಂತೂ ಸರಿಯೇ; ಮರ ಹತ್ತುವುದು, ಈಜುವುದು, ಆಟ, ಜೇನು ಕೀಳುವುದು ಇವುಗಳಲ್ಲಿ ನಾನು ಇರಲೇಬೇಕು. ಅವ್ವ ಆಗಾಗ್ಗೆ ನಿನ್ನ ಕಾಲಲ್ಲಿ ಚಕ್ರ ಇದೆ ಎಂದು ಹೇಳುತ್ತಿದ್ದರು. ಅವ್ವ ಕೂಗಬೇಕು - ಆಟ ಆಡುತ್ತಿದ್ದವನು ಓಡಿ ಬಂದು ಅಡುಗೆ ಮನೆಯಲ್ಲಿ ನಿಲ್ಲಬೇಕು; ಏನೋ ತಿಂದ ಕ್ಷಣ ಅಲ್ಲಿಂದಲೇ ಓಟ ಆರಂಭ. ಸದಾ ಆಟ, ಆಟ. ಉಪಾಧ್ಯಾಯರಿಗೆಲ್ಲ ನಾನು ಅಚ್ಚು ಮೆಚ್ಚು. ಗುಡ್ಡಪ್ಪ ಮೇಷ್ಟ್ರು ನನಗೆ ಕನ್ನಡ ಹೇಳಿಕೊಟ್ಟ ಗುರುಗಳು. ಬೇಡರ ಜಾತಿಯವರಾದರೂ ಅವರು ವೀರಶೈವರ ಮನೆಗಳಲ್ಲಿ ಪುರಾಣ ಹೇಳಲು ಆಹ್ವಾನಿತರಾಗುತ್ತಿದ್ದರು. ಹಳ್ಳಿಯಲ್ಲಿ ಪ್ರೀತಿ ವಾತ್ಸಲ್ಯದ ವಾತಾವರಣವಿತ್ತು. ಅಯ್ಯನಿಗೆ ನನ್ನ ಹಳ್ಳಿಯಲ್ಲಿ 'ಬಿನ್ನ ತೀರಿಸುವ' ಅಧಿಕಾರವಿರಲಿಲ್ಲ. (ಅವರಿಗೆ ಅವರು ಬಿಟ್ಟುಬಂದ ಹರೋಸಾಗರದಲ್ಲಿತ್ತು. ಆ ಅಧಿಕಾರ ಅವ್ವನ ತವರ್ಮನೆಯವರಿಗಿತ್ತು.) ಹಬ್ಬಗಳ ದಿನ ಮಧ್ಯಾಹ್ನವಾದರೂ ಬಿನ್ನಕ್ಕೆ ಬೇರೆ ಗುರುಗಳು ಸಿಗದೆ ಪೂಜೆ ಆಗಿಲ್ಲವೆಂದೂ ಮಕ್ಕಳು ಹಸಿದಿದ್ದಾರೆಂದೂ ಒತ್ತಾಯ ಮಾಡಿ ಅಯ್ಯನನ್ನು ಕರೆದೊಯ್ಯುತ್ತಿದ್ದರು. ಅಯ್ಯ ನನಗೆ ಲಿಂಗದೀಕ್ಷೆ ಮಾಡಿಸಿರಲಿಲ್ಲವಾದ ಕಾರಣ ನನ್ನನ್ನು ಕರೆಯುವ ಕಾರಣವಿರಲಿಲ್ಲ. ನನಗೆ ಅಯ್ಯಾಚಾರ ಮಾಡಿಸಲು ಅವರು ಮುಂದಾಗಲೂ ಇಲ್ಲ, ಒತ್ತಾಯಿಸಲೂ ಇಲ್ಲ, ಮೈಮೇಲೆ ಲಿಂಗ ಧರಿಸಲು ಹೇಳಲೂ ಇಲ್ಲ. ಇದು ಅವರ ಪ್ರಗತಿಪರ ಧೋರಣೆ ಎನ್ನುವುದಕ್ಕಿಂತ ತಮ್ಮ ಜಂಗಮತನ ತಮ್ಮನ್ನು ಉಳಿಸಿತಾದರೂ ತಮ್ಮ ಹುಟ್ಟಾ ಬಡನತಕ್ಕೂ ಅದು ನಿಮಿತ್ತವೆಂಬ ಒಂದು ಬಗೆಯ ಸೂಕ್ಷ್ಮವಾದ ಅಮಮತೆ ಕಾರಣವಿರಬೇಕು. ಜಂಗಮತ್ವದ ಬಗ್ಗೆ ಅವರಿಗೆ ದ್ವೇಷವಿತ್ತೆಂದು ಹೇಳಿದರೆ ತಪ್ಪಾದೀತು. ಹಾಗೆಯೇ ಅತಿ ಮಮತೆ ಇತ್ತೆಂದೂ ಹೇಳಲಾರೆ. ಜಂಗಮನ ಮಗನಾಗಿಯೂ ಜಂಗಮತನದ

ವಾತಾವರಣದಲ್ಲಿ ನಾನು ಬೆಳೆಯಲಿಲ್ಲ. ನನಗೆ ಅಯ್ಯಾಚಾರವಾದುದು ಮೂವತ್ತ ಮೂರನೇ ವರ್ಷದಲ್ಲಿ, ನನ್ನ ಮದುವೆಯ ದಿನ (1964), ಅದೂ ಒಂದು ಶಾಸ್ತ್ರದ ಭಾಗವಾಗಿ.

ಅಯ್ಯ ನನ್ನನ್ನು ಸ್ವತಂತ್ರವಾಗಿ ಬೆಳೆಸಿದರು ಎನ್ನುವುದಕ್ಕಿಂತ, ಒಬ್ಬನೇ ಮಗನಾದ ನನ್ನನ್ನು ನಿರ್ಬಂಧಕ್ಕೆ ಗುರಿಪಡಿಸದೆ ಬೆಳಸಿದರು ಎನ್ನಬೇಕು. ಪ್ರಾಥಮಿಕ ತರಗತಿಯಲ್ಲಿರುವಾಗ ಒಬ್ಬ ಹರಿಜನ ಹುಡುಗನ ಜೊತೆ ಹಠ ಮಾಡಿ ಆಟ ಆಡಿದ್ದರಿಂದ ನನ್ನನ್ನು ಅಯ್ಯ ಮನೆ ಹೊರಗೆ ಉಪವಾಸ ನಿಲ್ಲಿಸಿ ಸರಳ ಶಿಕ್ಷೆ ವಿಧಿಸಿದರು. ಅಸ್ಪೃಶ್ಯತೆ ಒಂದು ಪಾಪವೆನ್ನುವ ಕಾಲ ಹಳ್ಳಿಗಳಿಗೆ ಬಂದಿರಲಿಲ್ಲ. ಸ್ವಾತಂತ್ರ್ಯ ಸಂಗ್ರಾಮದ ಚಳವಳಿಯಲ್ಲಿ ಭಾಗವಹಿಸಲು ನಾನು ಆಗ ಇನ್ನೂ ತೀರ ಚಿಕ್ಕವನು. ನನ್ನ ಹಳ್ಳಿಯ ಪಟೇಲರಾದಿಯಾಗಿ ರೈತರೆಲ್ಲ 'ಸರ್ಕಾರ'ದ ಕಡೆ, ಇಂಗ್ಲೀಷರ ಕಡೆ. ಬೇಡರ ಕರಿಯಪ್ಪನೆಂಬ ಒಬ್ಬ ಮಾತ್ರ 'ಕಾಂಗ್ರೆಸ್' ಕಡೆ, ನಾವು ಹುಡುಗರೆಲ್ಲ ಕರಿಯಪ್ಪನ ಕಡೆ. ಆಗ ಶಿವಮೊಗ್ಗ ಜಿಲ್ಲೆಯ ಪ್ರಮುಖ ದೇಶಪ್ರೇಮಿ ನಾಯಕ ಎಚ್. ಸಿದ್ಧಯ್ಯನವರ (ಅವರು ನನಗೆ ಬಂಧು ಕೂಡ) ಆಪ್ತನಾಗಿದ್ದ ಕರಿಯಪ್ಪ ಕಾಂಗ್ರೆಸ್ ಪರವಾದ ಭಿತ್ತಿಪತ್ರಗಳನ್ನು ಅಂಟಿಸುವುದು, ಗೌಡರು ಅದನ್ನು ಕೀಳಿಸುವುದು ಸಾಮಾನ್ಯವಾಗಿತ್ತು. ಅವನ ನಾಯಕತ್ವದಲ್ಲಿ ನಾವು ಮೆರವಣಿಗೆ ಹೋಗಿ ಊರ ಹೊರಗಿನ ಹೆಂಡದ ಗುಡಿಸಲಿಗೆ ನುಗ್ಗಿ ಮರದ ಪೀಪಾಯಿಯ ಬಿರಡೆ ಕಿತ್ತಾಗ ಚಿಲ್ಲೆಂದು ಚಿಮ್ಮಿದ ಹೆಂಡವನ್ನು ಅಲ್ಲಿಗೆ ಕುಡಿಯಲು ಬಂದ ಜನ ಅದಕ್ಕೆ ಬಾಯಿ ಹಾಕಿದ್ದು, ತಮ್ಮ ಕುಡಿಕೆ ಮಡಕೆಗಳಿಗೆ ತುಂಬಿಕೊಂಡು ಅವನ್ನು ಹೊಲದ ಗಿಡಗಳ ಮಧ್ಯೆ ಬಚ್ಚಿಟ್ಟಾಗ ನಾವು ವೀರಾವೇಶದಿಂದ ನುಗ್ಗಿ ಕಲ್ಲಿಂದ ಅವನ್ನು ಒಡೆದು ಪುಡಿ ಮಾಡಿ ಕಾಂಗ್ರೆಸ್‌ಗೆ ಜಯವನ್ನು ಗಾಂಧಿಗೆ ಜಯವನ್ನು ಘೋಷಿಸಿದ್ದು ಒಂದು ಸ್ಮರಣಾರ್ಹ ಘಟನೆ. ಸ್ವಾತಂತ್ರ್ಯವೇನೆಂಬುದು ತಿಳಿಯದಷ್ಟು ಮುಗ್ಧರಾಗಿದ್ದ ನಮಗೆ ಆ ಘೋಷಣೆಗಳು ಯಾವುದೋ ಉತ್ಸಾಹವನ್ನು ತುಂಬುತ್ತಿದ್ದವು. ಮುಂದೆ ದಾವಣಗೆರೆಯಲ್ಲಿ ಹೈಸ್ಕೂಲ್ ಓದುತ್ತಿರುವಾಗ ಅಲ್ಲಿನ ಸ್ವಾತಂತ್ರ್ಯದ ಮೆರವಣಿಗೆಯಲ್ಲಿ ಭಾಗವಹಿಸಲು ತೀವ್ರ ಹಂಬಲ, ಆದರೆ ಭಾಗವಹಿಸುವ ಮಾತು ದೂರವಿರಲಿ, ನಮಗೆ ತಲೆ ಮೇಲೆ ಹಾಕುತ್ತಿದ್ದ ಗಾಂಧಿ ಟೋಪಿ ತೆಗೆಯದಿದ್ದರೆ ಹಾಸ್ಟಲಿಂದ ತೆಗೆದುಹಾಕುತ್ತೇನೆ ಎಂಬ ಮ್ಯಾನೇಜರರ ಎಚ್ಚರದ ಬಗ್ಗೆ ಭಯ. ಒಂದು ದಿನ ಜನರ ಮೆರವಣಿಗೆ ಜಯಘೋಷಗಳಿಂದ ಪುಲಕಿತನಾಗಿ ನನ್ನ ಕೊಠಡಿಗೆ ಒಬ್ಬನೇ ಹೋಗಿ ಬಾಗಿಲು ಹಾಕಿಕೊಂಡು ತಲೆಯ ಮೇಲಿನ ಟೋಪಿ ತೆಗೆದು ತ್ರಿಕೋನಾಕಾರವಾಗಿ ಅದನ್ನು ಮಡಿಸಿ ಅದನ್ನೇ ಭಾರತಾಂಬೆಯೆಂದು ಕಣ್ಣೀರು ಸುರಿಸುತ್ತ ಆವೇಶದಿಂದ ನಮಸ್ಕರಿಸಿದೆ. ದೇಶಪ್ರೇಮದ ಮೊದಲ ಅಂಕುರಾರ್ಪಣ ಅದು. ನನ್ನ ಊರ ಆ ಸಾಮಾನ್ಯ ಕರಿಯಪ್ಪ ಸ್ವಾತಂತ್ರ್ಯ ಬಂದಮೇಲೆ ಅನೇಕ ವರ್ಷ ಬದುಕಿದ್ದ, ಬಡವನಾಗಿಯೇ ಮಡಿದ. ಈ ದಿನ ಅವನ ನೆನಪು ಸ್ವಾತಂತ್ರ್ಯ ಯೋಧರ ಪಟ್ಟಿಯಲ್ಲೂ ಇಲ್ಲ, ಊರ ಜನರ ಸ್ಮೃತಿಯಲ್ಲೂ ಇಲ್ಲ. ನನಗೆ ದೇಶಪ್ರೇಮದ ಮೊದಲ ಪಾಠಗಳನ್ನು ಕಲಿಸಿದ ಅವನಿಗೆ ಕರ್ನಾಟಕ ವಿಶ್ವವಿದ್ಯಾಲಯ ಪ್ರಕಟಿಸಿದ ನನ್ನ 'ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ' ಎಂಬ, ಮಹಾಪ್ರಬಂಧವನ್ನು

ಅಷ್ಟು ಪ್ರಾಚುರ್ಯಕ್ಕೆ ಬರದ, ಆದರೆ ಬಹುಮುಖ್ಯವೆಂದು ಭಾವಿಸಿರುವ ಕೃತಿಯನ್ನು ಅಂಕಿತಗೊಳಿಸಿ ನನ್ನ ಕಿರುಗೌರವವನ್ನು ಅವನಿಗೆ ಅರ್ಪಿಸಿದ್ದೇನೆ.

ನನ್ನ ಹಳ್ಳಿಯ ಹೊಲ, ಮನೆ ಎಲ್ಲ ಮಾರಿ ಪೇಟೆಗೆ ಅಯ್ಯ ಅವ್ವರೊಡನೆ ಹಿಂದೆಯೇ ಬಂದು ನೆಲಸಿದ ನನಗೆ ಹಳ್ಳಿಯ ಸಂಪರ್ಕ ಕಡಿದುಹೋಗಿರುವುದು ನೋವಿನ ಸಂಗತಿ. ಹಳ್ಳಿಯ ಬದುಕು ನನಗೆ ಸಹನೆ ಸಹಬಾಳುವೆ ಕಷ್ಟಸಹಿಷ್ಣುತೆಗಳನ್ನು ಕಲಿಸಿದೆ. ಇನ್ನೊಬ್ಬನ ಕಷ್ಟಸುಖದಲ್ಲಿ ಭಾಗಿಯಾಗುವುದನ್ನು ಕಲಿಸಿದೆ (ಇದರಲ್ಲಿ ಅವ್ವನ ಪಾತ್ರ ದೊಡ್ಡದು). ಪ್ರಕೃತಿ ಪ್ರೇಮ ರಕ್ತಗತವಾಗಿದೆ. ಈಗಲೂ ಬೆಂಗಳೂರಿನಲ್ಲಿ ಮಳೆ ಬೀಳಲಾರಂಭಿಸಿದರೆ ನಾನು ಓದು ನಿಲ್ಲಿಸಿ ಬಾಗಿಲ ಹತ್ತಿರ ಬಂದು ನಿಂತು ನೋಡುತ್ತೇನೆ. ರಾತ್ರಿ ಆಕಾಶದಲ್ಲಿ ಮಿಂಚು ಗುಡುಗು ಸಿಡಿಲುಗಳ ಆರ್ಭಟವನ್ನು ವೀಕ್ಷಿಸುವಲ್ಲಿ ಪರಮ ಸಂತೋಷವಿದೆ. ಈಚಲು ಮರದಿಂದ ಬಿಲ್ವದವರೆಗೆ ಹಲಸು ಸಪೋಟ ಅಂಜೂರ ಮಾವು ಅಶೋಕ ಸಂಪಿಗೆ ತೆಂಗು ಬೆಟ್ಟನೆಲ್ಲಿ ಕಿರುನೆಲ್ಲಿ ಸೀತಾಫಲ ನಾಗಲಿಂಗ ಇವೇ ಮೊದಲಾದ ಇಪ್ಪತ್ತೈದು ಮೂವತ್ತು ಮರಗಳಿರುವ ನನ್ನ ಮನೆಯ ತೋಟದ ಪ್ರತಿ ಚಿಗುರೂ ಹೊರಬಂದದ್ದು ನನ್ನ ಗಮನಕ್ಕೆ ಬರುತ್ತದೆ. ಒಂದು ಎಲೆ ಒಣಗಿದರೂ ನನ್ನ ಕಣ್ಣಿಗೆ ಕಾಣುತ್ತದೆ. ಈ ಲೇಖನ ಬರೆಯುತ್ತಿರುವಂತೆ ಈಚಲು ಮರದ ಮೇಲೆ ಒಂದು ಜೇನುಗೂಡು, ಕಾಯಿಗಳನ್ನು ನೆಲದ ಮೇಲೆ ಕೂರಿಸಿ ಫಲವತಿಯಾಗಿರುವ ಎಂಟಡಿ ಎತ್ತರದ ಮಾವಿನ ಮರದಲ್ಲಿ ಇನ್ನೊಂದು ಜೇನಗೂಡು ಕಟ್ಟಿರುವುದು ನನ್ನ ಸಂತೋಷಕ್ಕೆ ಪಾರವೇ ಇಲ್ಲವಾಗಿದೆ. ವರ್ಷದುದ್ದಕ್ಕೂ ನನ್ನ ಮನೆಯಲ್ಲಿ ನಾನು ಬೆಳೆದ ಹೂವು ಹಣ್ಣು ಇದ್ದೇ ಇರುತ್ತದೆ. ಗಿಡಗಳ ಲಾಲನೆ ಪಾಲನೆಯಲ್ಲಿ ನಾನು ಬೆಂಗಳೂರಲ್ಲಿದ್ದೂ ಗ್ರಾಮೀಣನಾಗಿರಲು ಸಾಧ್ಯವಾಗಿದೆ.

**ನಗರ-ಹೆಚ್ಚಿನ ಶಿಕ್ಷಣ**

ಆಗ ದಾವಣಗೆರೆಯೇ ನನ್ನ ಹಳ್ಳಿಗೆ ಅತ್ಯಂತ ಸಮೀಪದ (ಇಪ್ಪತ್ತೆರಡು ಮೈಲಿ) ಪ್ರೌಢಶಾಲೆಯಿದ್ದ ಜಾಗ. ನನ್ನ ಹಳ್ಳಿಯಿಂದ ಬಂಡಿ ಜಾಡಿನಲ್ಲಿ ನಡೆದು ಆರು ಮೈಲಿ ದೂರದ ತ್ಯಾವಣಿಗೆಗೆ ಹೋಗಿ ಅಲ್ಲಿಂದ ದಾವಣಗೆರೆಗೆ ಬಸ್ ಹಿಡಿಯಬೇಕು. ಪ್ರೌಢಶಾಲೆಗೆ ನನ್ನನ್ನು ಸೇರಿಸಲು ಅಯ್ಯ ನನ್ನನ್ನು ಬಸ್ ಹಿಡಿಯಲು ತ್ಯಾವಣಿಗೆಗೆ ಕರೆದೊಯ್ದರು. ತ್ಯಾವಣಿಗೆಯಲ್ಲಿ ಭಾರಿ ವಿದ್ಯುತ್ ಕಂಬಗಳ ಸಮೀಪ ಬಸ್ಸಿಗೆ ಕಾಯುತ್ತಿರುವಾಗ ಆ ಹಳ್ಳಿಯ ದನ ಕಾಯುವ ಹುಡುಗ ಕಂಬಗಳ ಅವಲಂಬನೆಗೆ ನೆಲಕ್ಕೆ ಸೇರಿಸಿ ಬಿಗಿದಿದ್ದ ತಂತಿ ಮುಟ್ಟಲು ಹೇಳಿದ. ಆ ಹುಡುಗನಿಗಿಂತ ನಾನು ಹಳ್ಳಿಗನಾಗಿದ್ದೆ. ಅವನು ಮುಟ್ಟಿದ ಮೇಲೆ ಹೆದರುತ್ತ ಮುಟ್ಟುವಷ್ಟು ಮುಗ್ಧ ನಾನು. ನಾವು ದಾವಣಗೆರೆ ಸೇರಿದಾಗ ಕತ್ತಲಾಗಿತ್ತು. ಅಂದು ರಾತ್ರಿ ದಾವಣಗೆರೆಯ ಉಚಿತ ವಿದ್ಯಾರ್ಥಿನಿಲಯಕ್ಕೆ ಸೇರಿಸಲು ಸಹಾಯ ಮಾಡಲಿಕ್ಕಾಗಿ ನಾವು ಕರೆದೊಯ್ದಿದ್ದ ಒಬ್ಬ ದೊಡ್ಡ ಜಮೀನುದಾರರು ಊಟದ ಹೋಟೆಲಲ್ಲಿ ತಟ್ಟೆಯಲ್ಲಿ ಊಟ ಮಾಡಿದರೆ ಅಯ್ಯ ಮತ್ತು ನಾನು ಊರಿಂದ ಒಯ್ದಿದ್ದ ರೊಟ್ಟಿ ಬುತ್ತಿಯನ್ನು ಅಂಗೈಯಲ್ಲಿ ಹಿಡಿದು ತಿಂದೆವು. ಹಣ ಕೊಟ್ಟರೆ ಊಟ ಸಿಗುತ್ತದೆಯೆಂಬುದು

ನನಗೆ ತಿಳಿದೇ ಇರಲಿಲ್ಲ. ಅಂದು ರಾತ್ರಿ ನಾವು ಮಲಗಿದ್ದು ಮಾರನೆಯ ದಿನ ನಾನು ಸೇರಿಕೊಂಡ ಮುನಿಸಿಪಲ್ ಪ್ರೌಢಶಾಲೆಯ ಕಟ್ಟೆಯ ಮೇಲೆ. ಕುದುರೆ ಗಾಡಿಯೊಂದು ಮುಂದಿನ ರಸ್ತೆಯಲ್ಲಿ ಹಾದು ಹೋದದ್ದು, ಯಾವನೋ ಲಾಳ ಕಟ್ಟಿದ್ದ ಚಪ್ಪಲಿ ಹಾಕಿಕೊಂಡು ಕಟ್ ಕಟ್ಟೆಂದು ಸದ್ದು ಮಾಡುತ್ತಾ ನಡೆದದ್ದು ನನಗಿನ್ನೂ ಸ್ಪಷ್ಟ ಜ್ಞಾಪಕವಿದೆ. ಹಳ್ಳಿಯ ಹುಡುಗನಿಗೆ ನಗರದ ಪರಿಚಯವಾದುದು (1945) ಹೀಗೆ. ವಿದ್ಯುದ್ದೀಪದ ಬೆಳಕನ್ನು ಮೊದಲ ಬಾರಿ ಕಂಡುದೂ ಅಂದೇ. ನಗರ ಇಂದಿಗೂ ನನಗೆ ಪರಿಚಯದ ವಸ್ತುವಾಗಿದೆಯೇ ಹೊರತು ಆತ್ಮೀಯ ವಸ್ತುವಾಗಿಲ್ಲ. ಇಂದಿಗೂ ನಾನೊಬ್ಬ ಹಳ್ಳಿಗ, 'ನಾಗರಿಕ' ಅಲ್ಲ.

ದಾವಣಗೆರೆಯ ಜಯದೇವ ವಿದ್ಯಾರ್ಥಿ ನಿಲಯದಲ್ಲಿ ಪ್ರವೇಶ ದೊರಕಿ ಅದು ಆರಂಭವಾಗುವ ತನಕ ಅದೇ ಊರಿನ ಧರ್ಮಪ್ರವರ್ತಕ ಹನಗವಾಡಿ ಮುರಿಗಪ್ಪಯ್ಯನವರ ಮಂಡಿ ಅಂಗಡಿಯಲ್ಲಿ ನನ್ನ ವಾಸ; ಊಟ ದಾವಣಗೆರೆಗೆ ಬಂದ ಮೊದಲ ದಿನ ಕಂಡ ಖಾನಾವಳಿಯಲ್ಲಿ.

ಜಯದೇವ ಉಚಿತ ವಿದ್ಯಾರ್ಥಿನಿಲಯ ಆ ಮುಂದೆ ನನ್ನನ್ನು ಐದು ವರ್ಷ ಸಾಕಿತು. ಎಲ್ಲದಕ್ಕೂ ಆಗ ರೇಷನ್. ಹಾಸ್ಟಲಿನಲ್ಲಿ 'ಹೊಟ್ಟೆ ತುಂಬ (ಜೋಳದ) ಮುದ್ದೆ, ಬಾಯಿ ತುಂಬ ಅನ್ನ' ದೊರಕುತ್ತಿತ್ತು. ಭಾನುವಾರದ ಮಧ್ಯಾಹ್ನ ಮಾತ್ರ ವಿಶೇಷ ಊಟ - ಜೋಳದ ರೊಟ್ಟಿ ಊಟ. ಅದಕ್ಕಾಗಿ ಭಾನುವಾರವನ್ನೇ ಚಾತಕ ಚಕೋರ ಪಕ್ಷಿಗಳಂತೆ ಕಾಯುತ್ತಿದ್ದೆವು. ಊರಿಗೆ ಹೋಗಿ ಬಂದಾಗಲೆಲ್ಲ ಅವ್ವ ಮಾಡಿಕೊಟ್ಟ ರೊಟ್ಟಿ, ಚಟ್ನಿಪುಡಿ, ಮಾಲ್ದಿಗಳನ್ನು ವಾರಗಟ್ಟಲೆ ಇಟ್ಟುಕೊಂಡು ತಿನ್ನುತ್ತಿದ್ದೆ. ನನ್ನಂತೆಯೇ ಹಳ್ಳಿಯ ಬಡ ಹುಡುಗರಿದ್ದ ವಿದ್ಯಾರ್ಥಿನಿಲಯದ ಊಟ ಅಷ್ಟಕ್ಕಷ್ಟೇ ಆದರೂ ಅದು ನನ್ನ ಕಾಲ ಮೇಲೆ ನಾನು ನಿಲ್ಲುವುದನ್ನು ಕಲಿಸಿಕೊಟ್ಟಿತು. ಅಯ್ಯ ನನ್ನನ್ನು ದಾವಣಗೆರೆಗೆ ಕರೆತಂದುದು ಬಿಟ್ಟರೆ ಅವರು ಇನ್ನೇನೂ ಸಹಾಯ ಮಾಡುವಂತಿರಲಿಲ್ಲ. ಹಾಸ್ಟಲ್ ಬದುಕು ಜನಗಳ ಜೊತೆ ನಡೆದುಕೊಳ್ಳಬೇಕಾದ ರೀತಿಯನ್ನೂ ಕಲಿಸಿಕೊಟ್ಟಿತು.

ಪ್ರೌಢಶಾಲೆಯಲ್ಲಿ ಕನ್ನಡ ಆನರ್ಸ್ ಪದವೀಧರರಾಗಿದ್ದ ನಾಡಿಗೇರ ಗೋವಿಂದರಾಯರು ಗುರುಗಳಾಗಿ ದೊರಕಿದರು. ಅವರಂತಹ ಎಷ್ಟೋ ಉಪಾಧ್ಯಾಯರು ನಮ್ಮನ್ನು ಬಹು ಆತ್ಮೀಯವಾಗಿ ಕಂಡರು. ಎಸ್.ಎಸ್.ಎಲ್.ಸಿ.ಯಲ್ಲಿ ನಗರದ ಹುಡುಗರು ಖಾಸಗಿ ಪಾಠಕ್ಕೆ ಹೋಗುತ್ತಿದ್ದ ಸರ್ಕಾರಿ ಹೈಸ್ಕೂಲಿನ ಒಬ್ಬ ಉಪಾಧ್ಯಾಯರನ್ನು ನಾವು ಭೇಟಿ ಮಾಡಿ ಕೇಳಿಕೊಂಡಾಗ ಅವರು "ನಗರದ ಹುಡುಗರು ಹಣ ಇರುವವರು, ದಡ್ಡರು; ನೀವು ಹಳ್ಳಿಯವರು, ಕಷ್ಟಪಟ್ಟು ಓದಬಲ್ಲಿರಿ. ಹೋಗಿ ಚೆನ್ನಾಗಿ ಓದಿ" ಎಂದು ಸ್ವಂತ ಓದಿಕೊಳ್ಳಲು ಉತ್ತೇಜಿಸಿ ಕಳುಹಿಸಿದ್ದು ಇಲ್ಲಿ ಹೇಳಬೇಕಾದ ಸಂಗತಿ. ಅಂದಿನ ದಾವಣಗೆರೆ ಪ್ರೌಢಶಾಲೆ ವಿದ್ಯಾರ್ಥಿನಿಲಯಗಳ ಬಗ್ಗೆ ಬರೆಯಬಹುದಾದ ಹಲವು ವಿಷಯಗಳಿದ್ದರೂ ಅವನ್ನು ಇಲ್ಲಿ ತಡೆಹಿಡಿಯುತ್ತೇನೆ.

ನನ್ನ ಹಳ್ಳಿಯಿಂದ ದಾವಣಗೆರೆಗೆ ಬರಲು ಎರಡು ಮಾರ್ಗ : ಆರು ಮೈಲಿ ನಡೆದು ಹೋಗಿ ಬಸ್ ಹಿಡಿಯುವುದು, ಅಥವಾ ಹತ್ತು ಮೈಲಿ ನಡೆದುಹೋಗಿ ರೈಲು ಹಿಡಿಯುವುದು. ಒಂದೆರಡಾಣೆ ಉಳಿಸಲು ಗಂಟು ಮೂಟೆ ಹೊತ್ತು ಹತ್ತು ಮೈಲಿ ನಡೆದು ರೈಲಿನಲ್ಲಿ ಹೋದದ್ದೂ ಇದೆ. ಮೂರನೆಯ ಬಿಟ್ಟಿ ಮಾರ್ಗವೊಂದಿತ್ತು. ಹಳ್ಳಿಯಿಂದ ದಾವಣಗೆರೆಗೆ ದಾವಣಗೆರೆಯಿಂದ ಹಳ್ಳಿಗೆ ಹೋಗಿ ಬರುತ್ತಿದ್ದ ಎತ್ತಿನ ಬಂಡಿಗಳು. ಹಬ್ಬ ಬಂತೆಂದರೆ, ಪರೀಕ್ಷೆ ಮುಗಿದರೆ ದಾವಣಗೆರೆಯ ಮಂಡಿ ಅಂಗಡಿಗಳಿಗೆ ಹೋಗಿ ವಾಪಸ್ ಹೋಗುವ ಗಾಡಿಗಳನ್ನು ಹುಡುಕುತ್ತಿದ್ದೆವು. ರಾತ್ರಿ ಕತ್ತಲಲ್ಲಿ ಅಥವಾ ಬೆಳದಿಂಗಳಲ್ಲಿ ಗಾಡಿಯಲ್ಲಿ ಹೊರಟರೆ ಬೆಳಗಿನ ಹೊತ್ತಿಗೆ ಹಳ್ಳಿ ಸೇರುತ್ತಿದ್ದೆವು. ಈಗ ಅನ್ನಿಸುತ್ತಿದೆ, ಎಂತಹ ಅಪೂರ್ವ ಅನುಭವ! ದೇಹವನ್ನು ಗಟ್ಟಿಗೊಳಿಸುವ, ಮನಸ್ಸನ್ನು ಅರಳಿಸುವ ಪ್ರಸಂಗಗಳು.

ಐದನೆಯ ತರಗತಿಯಲ್ಲಿ ಇಂಗ್ಲೀಷ್ ಕಲಿಕೆ ಆರಂಭವಾದರೂ ಹೈಸ್ಕೂಲಿನವರೆಗೆ ಕನ್ನಡದಲ್ಲೇ ಓದಿದ್ದ ನನಗೆ ಹೈಸ್ಕೂಲ್ ಇಂಗ್ಲೀಷ್ ಮಾಧ್ಯಮ ಕಷ್ಟವೆನ್ನಿಸಲಿಲ್ಲ. 1948ರಲ್ಲಿ ಎಸ್.ಎಸ್.ಎಲ್.ಸಿ.ಯಲ್ಲಿ ಪ್ರಥಮ ದರ್ಜೆಯಲ್ಲಿ ತೇರ್ಗಡೆಯಾದುದು ನನಗೆ ಸಂತೋಷವನ್ನು ತಂದರೆ ಅವ್ವ ಅಯ್ಯರಿಗೆ ಹಿಗ್ಗು. ಮಂಡಕ್ಕಿ ತರಿಸಿ ಉಸುಳಿ ಮಾಡಿಸಿ ಊರವರಿಗೆ ತಿನ್ನಿಸಿಯೇ ಅವರಿಗೆ ಸಮಾಧಾನ.

ದಾವಣಗೆರೆಯಲ್ಲಿ ಒಂದೆರಡು ವರ್ಷಗಳ ಹಿಂದೆ ತಾನೇ ಆರಂಭವಾಗಿದ್ದ ಇಂಟರ್ ಮಿಡಿಯೇಟ್ ಕಾಲೇಜಿಗೆ ವಿಜ್ಞಾನ - ಗಣಿತದ ವಿದ್ಯಾರ್ಥಿಯಾಗಿ ಸೇರಿಕೊಂಡೆ. ತರಗತಿಗಳೆಲ್ಲ ಮಧ್ಯಾಹ್ನದೊಳಗೆ ಮುಗಿಯುತ್ತಿದ್ದುದರಿಂದ ಓದಲು ಸಾಕಷ್ಟು ಸಮಯ ದೊರಕುತ್ತಿತ್ತು. ವಿಶೇಷವಾಗಿ ಗಣಿತದ ಗುರುಗಳು ನನ್ನ ಬಗ್ಗೆ ವಿಶೇಷ ಮಮತೆ ತೋರಿಸುತ್ತಿದ್ದರು - ಏಕೆಂದರೆ ನಾನು ಎಲ್ಲ ಲೆಕ್ಕಗಳನ್ನೂ ಸರಿಯಾಗಿ ಮಾಡುತ್ತಿದ್ದೆ. ಇಂಗ್ಲಿಷಿಗೆ ಪ್ರೊ॥ ವಿ. ಎ. ತ್ಯಾಗರಾಜನ್ ನನ್ನ ಗುರುಗಳು. ಪ್ರೊ. ತೀ. ನಂ. ಶ್ರೀಕಂಠಯ್ಯನವರು ಕೆಲವು ಕಾಲ ಸೂಪರಿಂಟೆಂಡೆಂಟ್ ಆಗಿ ಬಂದು ಕೆಲ ತಿಂಗಳು ನಮಗೆ ಪಾಠ ಹೇಳಿದರು. ಜೊತೆಗೆ ಡಾ॥ ಎಲ್. ಬಸವರಾಜು ಮೊದಲ ವರ್ಷ, ಡಾ॥ ಜಿ.ಎಸ್. ಶಿವರುದ್ರಪ್ಪ ಎರಡನೆಯ ವರ್ಷ ಕನ್ನಡವನ್ನು ಬೋಧಿಸಿದರು. ಇಬ್ಬರೂ ನಮ್ಮ ಹಾಸ್ಟಲಿನಲ್ಲಿ ವಾಸವಾಗಿದ್ದು ನಮಗೆಲ್ಲ ಬಹಳ ಆತ್ಮೀಯರಾಗಿದ್ದರು. ಶಿವರುದ್ರಪ್ಪನವರು 'ಚಿತ್ರಾಂಗದಾ' ಕಥನಕಾವ್ಯವನ್ನು ತರಗತಿಯಲ್ಲಿ ವಿಶೇಷ ಉತ್ಸಾಹದಿಂದ ಬೋಧಿಸಿದುದಲ್ಲದೆ, ಆಸಕ್ತರಾಗಿದ್ದ ನಮ್ಮಲ್ಲಿ ಕೆಲವರನ್ನು ಕೂರಿಸಿಕೊಂಡು ತಮ್ಮ ಕೊಠಡಿಯಲ್ಲಿ ಅದೇ ಪ್ರಕಟವಾಗಿದ್ದ 'ರಾಮಾಯಣ ದರ್ಶನಂ' ಮಹಾಕಾವ್ಯದ ಪ್ರಥಮ ಸಂಪುಟವನ್ನು ಓದಿ ಹೇಳಿ ವಿವರಿಸಿದರು. ಇದು ನಮ್ಮ ಮೇಲೆ ಗಾಢ ಪ್ರಭಾವವನ್ನು ಬೀರಿತು. ನನಗೆ ದೊರಕಿದ ಕನ್ನಡ ಉಪಾಧ್ಯಾಯರೆಲ್ಲ ಧ್ಯೇಯಜೀವಿಗಳೂ ಸಾತ್ವಿಕರೂ ದೇಶಪ್ರೇಮಿಗಳೂ ಆಗಿದ್ದರು. ಇದು ಉಳಿದ ಉಪಾಧ್ಯಾಯರ ಬಗ್ಗೆ ವ್ಯಾಖ್ಯಾನವಲ್ಲ. ಸಾಹಿತ್ಯದ ಪಾಠದ ಮೂಲಕ ಕನ್ನಡ ಉಪಾಧ್ಯಾಯರಿಗೆ ದೇಶ, ಸಮಾಜ, ಸತ್ಯ, ಚೆಲುವು, ಸಂಸ್ಕೃತಿ, ಭಾಷೆ ಇವುಗಳನ್ನು ತಿಳಿಸುವ ಅವಕಾಶಗಳು ಇರುವಂತೆ ಬೇರೆಯವರಿಗೆ (ಉದಾಹರಣೆಗೆ ಒಬ್ಬ ಭೌತವಿಜ್ಞಾನದ ಉಪಾಧ್ಯಾಯ) ಇರಲು ಸಾಧ್ಯವಿಲ್ಲ.

ನನ್ನ ತರಗತಿಯಲ್ಲಿ ಎಲ್ಲ ವಿಷಯಗಳಲ್ಲೂ ನಾನು ಮುಂದು. ಗಣಿತದಲ್ಲಿ ನೂರಕ್ಕೆ ನೂರು ತೆಗೆಯುವ ವಿಶ್ವಾಸ. ಪರೀಕ್ಷೆಯ ಹಿಂದಿನ ದಿನಗಳಲ್ಲಿ ರಾತ್ರಿ ಚಾ ಕುಡಿದು ಬಂದು ಮಧ್ಯರಾತ್ರಿಯವರೆಗೆ ಓದುತ್ತಿದ್ದುದುಂಟು. ಹಾಗೆಂದು ಹೇಳಿಕೊಂಡು ಚಾ ಕುಡಿದು ಬಂದು ಗೊರಕೆ ಹೊಡೆದುದೂ ಉಂಟು. ಒಂದು ದಿನ ರಾತ್ರಿ ಚಾ ಕುಡಿದು ಬಂದು, ಸ್ವಲ್ಪ ಹೊತ್ತು ಓದಿ ಮತ್ತೆ ಏಳಿಸಬೇಕೆಂದು ಗೆಳೆಯರಿಗೆ ಹೇಳಿ ಮಲಗಿದೆ. ಗಾಢ ನಿದ್ರೆ; ಗೆಳೆಯರು ಇದ್ದಕ್ಕಿದ್ದಂತೆ ಎಚ್ಚರಿಸಿ "ಗಣಿತದ ಪೇಪರ್ ಔಟಾಗಿದೆ, ಎಲ್ಲ ಲೆಕ್ಕ ಮಾಡಿಕೊಡು" ಎಂದರು. ನೋಡುತ್ತೇನೆ, ಪತ್ರಿಕೆ ಮೇಲೆ 1950 ಎಂದು ಕಾಣಿಸುತ್ತಿದೆ. "ಬಾಗಿಲು ಮುಚ್ಚಿ. ಯಾರಿಗೂ ಹೇಳಬೇಡಿ, ಎಲ್ಲ ಹೇಳಿಕೊಡ್ತೇನೆ" ಎಂದು ಲೆಕ್ಕ ಮಾಡಲು ಆಗಲೇ ಶುರುಮಾಡಿಬಿಟ್ಟೆ. ಗೆಳೆಯರಿಗೆ ನಗು ತಡೆಯಲಾಗಲಿಲ್ಲ. ಸರಿಯಾಗಿ ನೋಡುತ್ತೇನೆ, ಹಳೆಯ ಪತ್ರಿಕೆಯೊಂದರ ಇಸವಿಯನ್ನು ಜಾಣತನದಿಂದ ತಿದ್ದಿಬಿಟ್ಟಿದ್ದರು. ಗಣಿತದ ಜಾಣನು ದಡ್ಡನಾಗಿಬಿಟ್ಟಿದ್ದ.

### ಮೈಸೂರು – ಉನ್ನತ ಶಿಕ್ಷಣ

ಇಂಟರ್ ಪರೀಕ್ಷೆ ಮುಗಿಸಿಕೊಂಡು (1950) ಹಳ್ಳಿಗೆ ವಾಪಸಾದೆ. ನಾನು ಮೂಳೆಚಕ್ಕಳವಾಗಿದ್ದುದನ್ನು ಕಂಡು ಅವ್ವ ಅತ್ತುಬಿಟ್ಟರು. ಗೋಧಿರೊಟ್ಟಿ ತುಪ್ಪ ಕೊಡಲು ಆರಂಭಿಸಿದರು. ಪ್ರಥಮ ದರ್ಜೆಯಲ್ಲಿ ಪಾಸಾದರೆ ಒಂದು ಕೈ ಗಡಿಯಾರ ಕೊಡಿಸುವುದಾಗಿ ಅಯ್ಯ ಮಾತು ಕೊಟ್ಟರು. ಪ್ರಥಮ ದರ್ಜೆಯ ಬಗ್ಗೆ ನನಗೆ ಅನುಮಾನವೇ ಇರಲಿಲ್ಲ. ಗಣಿತದಲ್ಲಿ ಇನ್ನೂರಕ್ಕೆ ಇನ್ನೂರು ಅಂಕ ಬರುವ ತುಂಬು ಭರವಸೆ ಇತ್ತು. ಆ ಹೊತ್ತಿಗೆ ನನ್ನ ತಲೆಗೆ ಸಾಹಿತ್ಯದ ಹುಚ್ಚು ಏರಿತ್ತು. ಬಸವರಾಜು ಹಾಗೆ ಶಿವರುದ್ರಪ್ಪನವರ ಹಾಗೆ ಒಬ್ಬ ಕನ್ನಡ ಅಧ್ಯಾಪಕನಾಗುವ ಬಯಕೆ ತೀವ್ರವಾಗಿತ್ತು. ನನ್ನ ಗೆಳೆಯರಿಗೆ ಅದೆಲ್ಲ ಬಾಲಿಶವಾಗಿ ತಮಾಷೆಯಾಗಿ ಕಂಡಿತು. ಫಲಿತಾಂಶ ಪ್ರಕಟವಾಯಿತು. ಪ್ರಥಮ ದರ್ಜೆಯಲ್ಲಿ ಮಾತ್ರವಲ್ಲದೆ ಮೈಸೂರು ದೇಶಕ್ಕೆ ಹತ್ತನೆಯ ರ್‍ಯಾಂಕನ್ನೂ ಪಡೆದಿದ್ದೆ. ಅಯ್ಯನಿಗೆ ಅಮಿತ ಸಂತೋಷವಾಗಿ ಮಾಧ್ಯಮಿಕ ಶಾಲೆಯಲ್ಲಿ ಉಪಾಧ್ಯಾಯನಾಗಿದ್ದ ನನ್ನ ಗೆಳೆಯ ಕಟ್ಟಿಕೊಂಡಿದ್ದ 'ವೆಸ್ಟ್ ಎಂಡ್ ವಾಚ್' ಕೊಡಿಸಿದರು. ನಾನು ಕೊಂಡಾಗ ಬಹುಶಃ ಅದಕ್ಕೆ ನನಗಿಂತ ಹೆಚ್ಚು ವಯಸ್ಸಾಗಿತ್ತು. ಗಡಿಯಾರದ ರೋಲ್ಡ್ ಗೋಲ್ಡ್ ಕೇಸಿನ ತಳಭಾಗದ ಕೆಲಭಾಗ ಕಿಲುಬುಹಿಡಿದು ಸವೆದಿತ್ತು. ಆ ಗಡಿಯಾರ ಮುಂದೆ ಬೇರೆ ಬೇರೆ ದೇಹಗಳನ್ನು ಧರಿಸಿದರೂ ವಿದೇಶಗಳಿಗೆ ಎರಡು ಬಾರಿ ಪ್ರವಾಸ ಮಾಡಿತು, ವಿಶ್ವಪರ್ಯಟನ ಮಾಡಿತು.ಸುಮಾರು ಪ್ರಾಮಾಣಿಕವಾಗಿ ಸಮಯ ತೋರಿಸಿತು. 1980ರಲ್ಲಿ ಸ್ವಿಟ್ಜರ್ಲೆಂಡಿನ ಜೂರಿಕ್‌ನಲ್ಲಿ ಒಂದು ಹೊಸ ಗಡಿಯಾರವನ್ನು ಕೊಳ್ಳಲು ಮನಸ್ಸಾದರೂ ಅಯ್ಯ ಕೊಡಿಸಿದ ಗಡಿಯಾರ ಮೂಲೆಗೆ ಬೀಳುವುದೆಂದು ಆ ಬಯಕೆಯನ್ನು ತಳ್ಳಿ ಹಾಕಿದೆ. ಅದನ್ನು 1987ರಲ್ಲಿ ಇನ್ನು ರಿಪೇರಿ ಸಾಧ್ಯವೇ ಇಲ್ಲವೆಂದು ಗಡಿಯಾರದಂಗಡಿಯವ ನಕ್ಕು ನನ್ನ ಕೈಲಿಟ್ಟ - ಅದು ಈಗ ನನ್ನ

ಮನೆಯ ಕಪಾಟಿನಲ್ಲಿ ಆಂಟಿಕ್‌ಗಳ ಮಧ್ಯೆ ಸುರಕ್ಷಿತವಾಗಿದೆ. ನನ್ನ ಮೊಮ್ಮಕ್ಕಳು, ಮರಿಮಕ್ಕಳು ನೋಡಿ ಮನರಂಜನೆ ಪಡೆಯಲಿ.

ಮತ್ತೆ ನನ್ನ ಫಲಿತಾಂಶದ ವಿಷಯಕ್ಕೆ ಬರುತ್ತೇನೆ. ನಾನು ಮುಂದಿನ ಶಿಕ್ಷಣದ ಬಗ್ಗೆ ನನ್ನ ಬದುಕಿನಲ್ಲೇ ಅತ್ಯಂತ ಮಹತ್ವದ ಸ್ವತಂತ್ರದ ನಿರ್ಧಾರವನ್ನು ತೆಗೆದುಕೊಳ್ಳಬೇಕಾಗಿತ್ತು. ದಾವಣಗೆರೆ ಕಾಲೇಜಿಗೆ ರ್‍ಯಾಂಕ್ ಬಂದುದು ಅದೇ ಮೊದಲು. ಮೆಡಿಕಲ್, ಇಂಜಿನಿಯರಿಂಗ್, ಬಿ.ಎಸ್.ಸಿ. (ಆನರ್ಸ್) ಯಾವುದಕ್ಕೆ ಅರ್ಜಿ ಹಾಕಿದರೂ ಪ್ರವೇಶ ಖಚಿತ. ನಾನು ಬೆಂಗಳೂರಿನ ಸೆಂಟ್ರಲ್ ಕಾಲೇಜಿಗೆ ಗಣಿತದ ಆನರ್ಸಿಗೆ, ಮೈಸೂರಿನ ಮೆಡಿಕಲ್ ಕಾಲೇಜಿಗೆ, ಮಹಾರಾಜಾ ಕಾಲೇಜಿನ ಕನ್ನಡ ಆನರ್ಸಿಗೆ ಅರ್ಜಿ ಹಾಕಿದೆ. ಅನೇಕ ಮಿತ್ರರೂ ಹಿತೈಷಿಗಳೂ ಕನ್ನಡ ಆನರ್ಸಿಗೆ ಹೋಗುವುದು ಮೂರ್ಖತನವೆಂದು ಹೇಳಿದರು. ಅಯ್ಯನಿಗೂ ಹೇಳಿದರು. ಕೊನೆಗೆ ನನಗೆ ಹುಚ್ಚು ಹಿಡಿದಿದೆಯೆಂದೂ ಹೇಳಿದಂತೆ ಸುದ್ದಿ ಬಂತು. ಕನ್ನಡದ ವಿಷಯದಲ್ಲಿ ಕನಿಷ್ಠ ಭಾವನೆ ಇದ್ದ ಕಾಲದಲ್ಲಿ ಇಂತಹ ಮಾತುಗಳೆಲ್ಲ ತೀರ ಸ್ವಾಭಾವಿಕವಾಗಿದ್ದುವು. ಗಣಿತದ ಆನರ್ಸಿಗೆ ಪ್ರವೇಶ ಸಿಕ್ಕಿತ್ತು. ಮೆಡಿಕಲ್ ಕಾಲೇಜು ಸಂದರ್ಶನಕ್ಕೆ ನಾನು ಹೋಗಲಿಲ್ಲ. ಮೈಸೂರು ಮಹಾರಾಜಾ ಕಾಲೇಜಿಗೆ ಕನ್ನಡ ಆನರ್ಸ್ ವಿದ್ಯಾರ್ಥಿಯಾಗಿ ಕುವೆಂಪು ಅವರ ವಿದ್ಯಾರ್ಥಿಯಾಗುವ ಭಾಗ್ಯ ದೊರೆತುದಕ್ಕೆ ಹೆಮ್ಮೆಪಟ್ಟುಕೊಳ್ಳುತ್ತ ಸೇರಿಕೊಂಡೆ (1950). ಮುಂದಿನ ಮೂರು ವರ್ಷ ಸುತ್ತೂರು ಸಂಸ್ಥಾನದ ಉಚಿತ ವಿದ್ಯಾರ್ಥಿನಿಲಯ ನನ್ನನ್ನು ಸಾಕಿತು.

ನನ್ನ ಮಟ್ಟಿಗೆ ಸರಿಯಾದ ನಿರ್ಧಾರವನ್ನು ತೆಗೆದುಕೊಂಡಿದ್ದೆ. ಶಿಕ್ಷಣದ ವಿಷಯದಲ್ಲಿ ನಾನು, ನನ್ನ ಮನೋಭಾವ, ನನ್ನ ಗುರಿ ನಿರ್ಣಾಯಕವಾಗಬೇಕೇ ಹೊರತು ಬೇರೆಯವರ ಅನ್ನಿಸಿಕೆ ಅಲ್ಲವಲ್ಲ. ಒಂದು ಕಡೆ ವೈದ್ಯನೋ ಇಂಜಿನಿಯರೋ ಆಗಿ ಸಾಕಷ್ಟು ಹಣ ಸಂಪಾದಿಸುವ ಅವಕಾಶ (ನಾನು ವೈದ್ಯನಾಗಿದ್ದರೆ ಉಚಿತ ವೈದ್ಯಕೀಯ ಸೇವೆಗೆ ನನ್ನ ಬದುಕು ಮೀಸಲಿರುತ್ತಿತ್ತು ಎಂಬ ಮಾತು ಬೇರೆ). ಇನ್ನೊಂದು ಕಡೆ ಕನ್ನಡ ಅಧ್ಯಾಪಕನಾಗಿ ಕನ್ನಡ ಪಾಠ ಹೇಳುತ್ತ ಸಾತ್ವಿಕವೂ ಆದರ್ಶಮಯವೂ ಆದ ಬದುಕನ್ನು ನಡೆಸುವ ತೀವ್ರ ಹಂಬಲ. ಆಗ ಕನ್ನಡದ ಸೇವೆ ಎಂಬಂತಹ ಭಾವನೆಗಳು ನನ್ನ ಮನಸ್ಸಿನಲ್ಲಿ ಸುಳಿದಿರಲಿಲ್ಲ. ನನ್ನ ಆಯ್ಕೆ ನನಗೆ ಕಷ್ಟವಾಗಲಿಲ್ಲ. ನಿಜ ಹೇಳುವುದಾದರೆ, ಆ ಆಯ್ಕೆ ನನ್ನಲ್ಲಿ ಒಳತೋಟಿಯನ್ನುಂಟುಮಾಡಲೇ ಇಲ್ಲ.

ಕನ್ನಡದ ಪ್ರೇಮ ಇಂಟರಿನಲ್ಲಿ ಧಿಡೀರನೇ ಹುಟ್ಟಿಕೊಂಡುದಲ್ಲ. ನಾನು ಹುಟ್ಟಿದ ಓಡಾಡಿದ ಪ್ರದೇಶದಲ್ಲಿ ಲಂಬಾಣಿಗಳನ್ನು ಬಿಟ್ಟರೆ ಉಳಿದವರೆಲ್ಲರ ಮಾತು, ಮುಸ್ಲಿಮರೂ ಸೇರಿದಂತೆ ಕನ್ನಡವಾಗಿತ್ತು. ಕನ್ನಡವನ್ನು ಬಿಟ್ಟರೆ ಬೇರೆ ಭಾಷೆಯೇ ಕಿವಿಗೆ ಬೀಳುತ್ತಿರಲಿಲ್ಲ. ಉದ್ದಕ್ಕೂ ನನಗೆ ದೊರೆತ ಉತ್ತಮ ಕನ್ನಡ ಉಪಾಧ್ಯಾಯರು, ಜಯದೇವ ವಿದ್ಯಾರ್ಥಿನಿಲಯದಲ್ಲಿದ್ದಾಗ ವಚನಗಳ ಪರಿಚಯ, ಇದಕ್ಕೆಲ್ಲ ಮಕುಟಪ್ರಾಯವಾಗಿ ಶಿವರುದ್ರಪ್ಪನವರ ಪಾಠ ಇವು ನನ್ನನ್ನು ಕನ್ನಡದತ್ತ ಸೆಳೆದವು. ಈಗಲೂ ನನ್ನ ಸಮಕಾಲೀನರು

ನನ್ನ ಅಂದಿನ ನಿರ್ಧಾರವನ್ನು ನೆನಪಿಸಿದಾಗ ನಾನು ತಪ್ಪು ಮಾಡಿದೆನೆಂಬ ಭಾವನೆ ಎಂದೂ ಸುಳಿದಿಲ್ಲ. ಉದ್ದಕ್ಕೂ ನನ್ನದು ಚಲದ ದೃಢನಿರ್ಧಾರದ ಸ್ವತಂತ್ರ ರೀತಿಯ ಬದುಕು. ಆದರೆ ನನ್ನ ಸ್ವತಂತ್ರ ಪ್ರವೃತ್ತಿ ಸ್ವಚ್ಛಂದವಾಗದಂತೆ, ಜಂಬವಾಗದಂತೆ ನೋಡಿಕೊಂಡಿದ್ದೇನೆ. ಅಂದು ಹಲವರು ನನ್ನನ್ನು ಗೇಲಿ ಮಾಡಿದುದೂ ಮುಂದೆ ಆನರ್ಸ್ ಓದುತ್ತಿರುವಾಗ ಕೆಲವು ಗೆಳೆಯರು 'ಪಂಡಿತರೇ' ಎಂದು ಚುಚ್ಚಿ ಮಾತನಾಡಿದುದೂ ಅವರೇ ನನ್ನ ನಿರ್ಧಾರವನ್ನು ಮೆಚ್ಚಿ ಹೊಗಳಬೇಕೆನ್ನುವಷ್ಟರಮಟ್ಟಿಗೆ ಬೆಳೆಯಬೇಕು, ಹೆಸರು ಮಾಡಬೇಕು ಎಂಬ ನಿರ್ಧಾರವನ್ನು ಗರಿಗಟ್ಟಿಸಿತು.

ಕನ್ನಡದ ಬಗ್ಗೆ ಇಂತಹ ಪ್ರೀತಿ ಅಭಿಮಾನಗಳಿರುವಾಗ ನನ್ನಲ್ಲಿ ಕೀಳರಿಮೆ ಕಾಣಿಸಿಕೊಳ್ಳಲು ಸಾಧ್ಯವೇ ಇರಲಿಲ್ಲ. ಕುವೆಂಪು, ಡಿ.ಎಲ್. ನರಸಿಂಹಾಚಾರ್, ತ.ಸು. ಶಾಮರಾವ್, ಕ.ವೆಂ. ರಾಘವಾಚಾರ್ಯ, ಎಸ್. ಶ್ರೀಕಂಠಶಾಸ್ತ್ರಿಗಳಂತಹ ಗುರುಗಳಿರುವಾಗ ಮೇಲರಿಮೆ ಬರುವ ಸಾಧ್ಯತೆಗಳಿದ್ದರೂ ಅವರ ದೊಡ್ಡತನ ಅದಕ್ಕೆ ಅವಕಾಶ ಮಾಡಿಕೊಡಲಿಲ್ಲ. ಮೈಸೂರು ನಮಗಂತೂ ಭೂಲೋಕದ ನಂದನವನವಾಗಿತ್ತು. ಮಹಾರಾಜಾ ಕಾಲೇಜು, ವಿಶ್ವವಿದ್ಯಾನಿಲಯದ ದೊಡ್ಡ ಗ್ರಂಥಾಲಯ, ಓರಿಯಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟ್ ಇದ್ದ ಇಡೀ ಆ ವಾತಾವರಣ ಜ್ಞಾನ, ಉನ್ನತ ಆದರ್ಶಗಳ ವಾತಾವರಣದಿಂದ ತುಂಬಿಹೋಗಿತ್ತು. ನನ್ನ ಸಹಪಾಠಿ ಎಸ್.ಎಂ. ವೃಷಭೇಂದ್ರಸ್ವಾಮಿ ಆಗಾಗ್ಗೆ ಕುವೆಂಪು ಅವರ ಮನೆಗೆ ಹೋಗಿ 'ರಾಮಾಯಣ ದರ್ಶನಂ' ಮತ್ತು ಇತರ ವಿಷಯಗಳ ಬಗ್ಗೆ ಮಾತನಾಡಿಕೊಂಡು ಬಂದರೆ ಅವರು ಏನೇನು ಮಾತಾಡಿದರು ಎಂದು ಕುತೂಹಲದಿಂದ ಕೇಳಿ ತಿಳಿದು ಹರ್ಷಿಸುತ್ತಿದ್ದೆವೇ ಹೊರತು ಪ್ರಾಧ್ಯಾಪಕರ ಬಳಿಗೆ ನಾವು ಹೋಗಲು ಅವಕಾಶವಿಲ್ಲವೆಂಬ ಕೊರಗು, ಅಸೂಯೆ, ತಪ್ಪು ಕಲ್ಪನೆ ಎಂದೂ ಬರಲಿಲ್ಲ. ಕನ್ನಡ ಸಾಹಿತ್ಯದ ಜೊತೆ ಜೊತೆಯಾಗಿ ಕರ್ನಾಟಕದ ರಾಜಕೀಯ ಸಾಂಸ್ಕೃತಿಕ ಇತಿಹಾಸವನ್ನು, ಜೊತೆಗೆ ಸಂಸ್ಕೃತ ತಮಿಳು ಭಾಷೆಗಳನ್ನು ಕಲಿಯುವ ಅವಕಾಶವಿತ್ತು. ನರಸಿಂಹಾಚಾರ್ಯರಾಗಲಿ, ಶಾಮರಾಯರಾಗಲಿ ನಮ್ಮನ್ನು ಏಕವಚನದಿಂದ ಮಾತನಾಡಿಸಿದರೇ ಅದು ಆಪ್ಯಾಯಮಾನ. ಆ ಮೂರು ವರ್ಷವೂ ನಾನು ಶ್ರದ್ಧೆಯಿಂದ ಅಭ್ಯಾಸ ಮಾಡಿದೆ. ಎರಡನೆಯ, ಮೂರನೆಯ ವರ್ಷಗಳ ತರಗತಿಗಳು ಆರಂಭವಾಗುವ ಹಿಂದಿನ ಬೇಸಗೆ ರಜೆಯ ಬಹುಭಾಗವನ್ನು ಮೈಸೂರಲ್ಲಿ ಓದುತ್ತ ಕಳೆದೆ. ಬಿ.ಎ. (ಆನರ್ಸ್) ಅಂತಿಮ ಪರೀಕ್ಷೆಯಲ್ಲಿ (1953) ನಾನು ಪ್ರಥಮವರ್ಗ ಪ್ರಥಮ ರ್‍ಯಾಂಕ್ ಸಮೇತ ಉತ್ತೀರ್ಣನಾದೆ. ಒಂದು ಚಿನ್ನದ ಪದಕ ಮತ್ತು ಬಹುಮಾನಗಳಲ್ಲದೆ ಎಲ್ಲ ಆನರ್ಸ್ ತರಗತಿಗಳನ್ನೂ ಸೇರಿಸಿ ಅತಿ ಹೆಚ್ಚು ಅಂಕ ಪಡೆಯುವ ವಿದ್ಯಾರ್ಥಿಗೆ ದೊರೆಯುವ ಪ್ರತಿಷ್ಠಿತ ನಂಜುಂಡಯ್ಯ ಚಿನ್ನದ ಪದಕವನ್ನೂ ಪಡೆದೆ. ಬಿ.ಎ. (ಆನರ್ಸ್) ಪದವೀಧರನಾದಾಗ ಮುಂದೆ ನಾನೊಬ್ಬ ವಿಮರ್ಶಕನಾಗುತ್ತೇನೆ ಎಂದೇ ಭಾವಿಸಿದ್ದೆ.

**ಅಧ್ಯಾಪಕ :**

ವಿದ್ಯಾರ್ಥಿಯಾಗಿದ್ದಾಗ ಕುವೆಂಪು ಅವರ ಜೊತೆ ಅವರ ಮನೆಯಲ್ಲಿ ಕುಳಿತು ಸ್ವಲ್ಪ ಹೊತ್ತು ಮಾತನಾಡಿದ್ದು ಮೂರನೆಯ ಆನರ್ಸ್ ಪರೀಕ್ಷೆ ಮುಗಿದು ಊರುಗಳಿಗೆ ವಾಪಸಾಗುವ

ಮೊದಲು. ನನ್ನ ತರಗತಿಯ ಎಲ್ಲ ವಿದ್ಯಾರ್ಥಿಗಳೂ ಸೇರಿಕೊಂಡು ಅವರ ಮನೆಗೆ ಹೋದಾಗ ಅವರು ಒಬ್ಬೊಬ್ಬ ವಿದ್ಯಾರ್ಥಿಯ ಬಗ್ಗೆಯೂ ವಿಚಾರಿಸಿ ತಿಳಿದುಕೊಂಡರು. ನಾನು ಶಿವಮೊಗ್ಗ ಜಿಲ್ಲೆಯವನೆಂದು ತಿಳಿದು "ಶಿವಮೊಗ್ಗ ಜಿಲ್ಲೆ ಕನ್ನಡ ಸಾಹಿತ್ಯದ ಕೇಂದ್ರವೆಂಬುದಕ್ಕೆ ಇನ್ನೊಂದು ಸಮರ್ಥ ಸಾಕ್ಷಿ ಸಿಕ್ಕಿತು" ಎಂದು ಅರೆ ತಮಾಷೆಯ ಧ್ವನಿಯಲ್ಲಿ ಹೇಳಿ ಗಟ್ಟಿಯಾಗಿ ನಕ್ಕರೂ ನಾನು ಅದನ್ನು ಗಂಭೀರವಾಗಿಯೇ ತೆಗೆದುಕೊಂಡೆ. ಫಲಿತಾಂಶ ಪ್ರಕಟವಾದ ಮೇಲೆ ಮತ್ತೆ ಅವರನ್ನು ಭೇಟಿಯಾದಾಗ, ಒಂದು ಅಧ್ಯಾಪಕ ಹುದ್ದೆ ಖಾಲಿ ಇರುವುದಾಗಿಯೂ ಹೋಗುವುದಾದರೆ ಶಿಫಾರಸ್ ಮಾಡುವುದಾಗಿಯೂ ತಿಳಿಸಿದರು. ನನ್ನದೂ ಅದೇ ಅಪೇಕ್ಷೆಯಾಗಿತ್ತು. ನಾನು ಅದೇ ವರ್ಷ 1953ರ ಜುಲೈನಲ್ಲಿ ಬೆಂಗಳೂರು ಇಂಟರ್ ಮಿಡಿಯೆಟ್ ಕಾಲೇಜಿಗೆ (ಈಗಿನ ಸರ್ಕಾರಿ ಕಲಾ ಕಾಲೇಜು) ಅಧ್ಯಾಪಕನಾಗಿ ಸೇರಿಕೊಂಡೆ. ಸಣ್ಣಗೆ ಕುಳ್ಳಗೆ ಇದ್ದ ನನಗೆ ಆರಂಭದಲ್ಲಿ ತರಗತಿಗಳನ್ನು ಎದುರಿಸಲು ಭಯವಾದರೂ ಒಂದು ತಿಂಗಳಲ್ಲಿ 'ಪುಟ್ಟ ಮೇಷ್ಟ್ರು' ಚೆನ್ನಾಗಿ ಪಾಠ ಮಾಡುತ್ತಾರೆಂದು ವಿದ್ಯಾರ್ಥಿಗಳ ಶಿಫಾರಸು ದೊರಕಿತು. ಈ ಮಧ್ಯೆ ಅಧ್ಯಾಪಕರಾಗಿದ್ದ ಪ್ರೊ. ಎಂ.ವಿ. ಸೀತಾರಾಮಯ್ಯನವರಿಗೆ ಬೆಂಗಳೂರಿನಿಂದ ತುಮಕೂರಿಗೆ ವರ್ಗವಾದ ಸುದ್ದಿ ಅವರಿಗೆ ಆಘಾತವಾಗಿ ಪರಿಣಮಿಸಿತ್ತು. ಅವರ ಆರೋಗ್ಯ ಅವರ ಕೊನೆಯ ದಿನಗಳಲ್ಲಿ ಹೇಗಿತ್ತೋ ಆಗಲೂ (1953) ಹೆಚ್ಚು ಕಡಮೆ ಹಾಗೆಯೇ ಇತ್ತು. ಅವರ ವರ್ಗಾವಣೆ ರದ್ದಾಗಿ ಅವರ ಜಾಗಕ್ಕೆ ನಾನು ಹೋಗಬೇಕಾದರೆ ನನ್ನ ಒಪ್ಪಿಗೆ ಬೇಕಾಗಿತ್ತು. ನಾನು ಬೆಂಗಳೂರಿನಲ್ಲಿ ಪರಕೀಯತೆ ಅನುಭವದಲ್ಲಿದ್ದೆ. ಮೈಸೂರಲ್ಲಿ ಆನರ್ಸ್ ಓದುತ್ತಿರುವಾಗ ನಾನು ರಾಮಕೃಷ್ಣಾಶ್ರಮದ ಪ್ರಾರ್ಥನೆಗಳಿಗೆ ವಾರ ವಾರವೂ ಹೋಗುತ್ತಿದ್ದೆ. ಬೆಂಗಳೂರಿನಲ್ಲಿ ರಾಮಕೃಷ್ಣಾಶ್ರಮವಿದ್ದುದರಿಂದ ನಾನು ಬದುಕಿಕೊಂಡೆ. ಒಮ್ಮೊಮ್ಮೆ ಬೇಸರವಾಗಿ ನಗರದಿಂದ ತಪ್ಪಿಸಿಕೊಳ್ಳಲು ಬಸವನಗುಡಿ ದಾಟಿ ಬನಶಂಕರಿ ಕಡೆ ಹೋದರೆ ಅಲ್ಲಿ ಹೊಲ ತೋಟಗಳು ಸ್ವಾಗತಿಸುತ್ತಿದ್ದವು. ಎಂ.ವಿ.ಸೀ. ಅವರನ್ನು ಬೆಂಗಳೂರಲ್ಲಿ ಉಳಿಸಿ ನನ್ನನ್ನು ತುಮಕೂರಿಗೆ ವರ್ಗಾವಣೆಮಾಡಿದರು. ನಾನು ಸಂತೋಷದಿಂದಲೇ ಹೋದೆ, ತುಮಕೂರಿಗೆ. ಅಲ್ಲಿನ ಕಾಲೇಜಿನಲ್ಲಿ ಪದವಿ ತರಗತಿಗಳಿಗೂ ಪಾಠ ಹೇಳಬಹುದೆಂಬ ನಿರೀಕ್ಷೆಯಿತ್ತು.

ತುಮಕೂರಿನ ನನ್ನ ಒಂಬತ್ತು ತಿಂಗಳ ವಾಸ್ತವ್ಯ ನನ್ನ ವೃತ್ತಿ ಜೀವನದಲ್ಲಿ ನಿರೀಕ್ಷೆ ಮೀರಿದ ಆರಂಭ ಯಶಸ್ಸನ್ನು ತಂದಿತು. ಒಳ್ಳೆಯ ಉಪಾಧ್ಯಾಯನೆಂಬ ಹೆಸರು ಪಡೆದೆ. ತಮಾಷೆಯಾದರೂ ಒಂದು ಸ್ವಾರಸ್ಯದ ಅನುಭವ. ಆನರ್ಸ್ ಓದುತ್ತಿರುವಾಗ ನಾನು ಚನ್ನಾಗಿಲ್ಲವಾದ ಕಾರಣ ಹುಡುಗಿಯರನ್ನು ಮಾತನಾಡಿಸುವ ಅರ್ಹತೆಯಿಲ್ಲ ಎಂಬ ಕೀಳರಿಮೆ ಇತ್ತು. ತುಮಕೂರಿನಲ್ಲಿ ಮೇಷ್ಟ್ರಾದ ಹೊಸತರಲ್ಲಿ ಹುಡುಗಿಯರು ಉಪಾಧ್ಯಾಯರ ಕೊಠಡಿಗೆ ಬಂದು ಯಾವುದೋ ಪದ್ಯದ ಅರ್ಥ ಕೇಳಿದಾಗ ನಾನು ನಡುಗಿ ಹೋದೆ; ಕ್ರಮೇಣ ಆ ಕೀಳರಿಮೆ ಮಾಯವಾಯ್ತು. ಹುಡುಗಿಯರಿಂದ ಹುಟ್ಟಿದ್ದ ಕೀಳರಿಮೆ ಹುಡುಗಿಯರಿಂದಲೇ ಸತ್ತುಹೋಯ್ತು. ವಿದ್ಯಾರ್ಥಿಗಳ ಜೊತೆ ಸಂಕೋಚವಿಲ್ಲದೆ ಬೆರೆತೆ. ಅವರ ಹಾಸ್ಟಲುಗಳಿಗೆ ಹೋದೆ. ಆ ನಗರದಲ್ಲಿ ಎಲ್ಲಿ ಹೋದರೂ ನಮಸ್ಕಾರ ಹೇಳುವ ವಿದ್ಯಾರ್ಥಿಗಳು

ದೊರಕುತ್ತಿದ್ದರು. ನಾನು ಹೋದ ವರ್ಷವೇ ಬಿ.ಎ. ಐಚ್ಛಿಕ ಕನ್ನಡ ತರಗತಿಗಳೂ ಆರಂಭವಾಗಿದ್ದುದರಿಂದ ವಿಶೇಷ ಸಿದ್ಧತೆಗಳನ್ನು ಮಾಡಿಕೊಳ್ಳಬೇಕಾಗಿತ್ತು. ಬಿ.ಎ. ವಿದ್ಯಾರ್ಥಿಗಳಿಗೆ 'ಗಂಗಾವತರಣ' ಪಾಠ ಹೇಳಲು ಎಷ್ಟೋ ಭಾನುವಾರ ತುಮಕೂರಿನಿಂದ ಬೆಂಗಳೂರಿನ ಮಲ್ಲೇಶ್ವರಕ್ಕೆ ಬಂದು ಪು.ತಿ.ನ. ಅವರ ಜೊತೆ ಪಾಠ ಹೇಳಿಸಿಕೊಂಡು (ಅವರ ಮನೆಯಲ್ಲೇ ಊಟಮಾಡಿ) ವಾಪಸ್ ಹೋಗುತ್ತಿದ್ದೆ. ನನ್ನ ಬದುಕಿನ ಅಪೂರ್ವ ಅನುಭವಗಳಲ್ಲಿ ಅದೂ ಒಂದು.

ತುಮಕೂರಿನಿಂದ ಕೋಲಾರದ ಇಂಟರ್‌ಮಿಡಿಯೇಟ್ ಕಾಲೇಜಿಗೆ (ಆಗಸ್ಟ್ 1954) ವರ್ಗವಾಯ್ತು. 1955ರ ಬೇಸಗೆಯಲ್ಲಿ ಪುಣೆಯಲ್ಲಿ ನಡೆದ ಭಾಷಾವಿಜ್ಞಾನದ ಬೇಸಗೆ ಶಿಬಿರದಲ್ಲಿ ಶಿಕ್ಷಣವನ್ನು ಪಡೆದೆ. ತೀ.ನಂ. ಶ್ರೀಕಂಠಯ್ಯ, ಸುನೀತಿಕುಮಾರ ಚಟರ್ಜಿ, ಗಂಪರ್ಜ್, ಹನಿಗ್ಸ್‌ವಾಲ್ಡರಂತಹ ಶ್ರೇಷ್ಠ ಭಾಷಾವಿಜ್ಞಾನಿಗಳ ಪಾಠವನ್ನು ಕೇಳಿದೆ. ನನ್ನಂತೆಯೇ ಅಭ್ಯರ್ಥಿಗಳಾಗಿ ಬಂದಿದ್ದ ಎ.ಎನ್. ಉಪಾಧ್ಯೆ, ನಂ. ಶಿವರಾಮಶಾಸ್ತ್ರೀ, ಎನ್. ನಾಗಪ್ಪರಂತಹ ಹಿರಿಯರು ಟಿಪ್ಪಣಿ ಪುಸ್ತಕಗಳನ್ನು ಹಿಡಿದು ತರಗತಿಗಳಲ್ಲಿ ಕುಳಿತು ಪಾಠ ಕೇಳುತ್ತಿದ್ದುದು ಒಂದು ಅವಿಸ್ಮರಣೀಯ ಸಂಗತಿ. ಕೋಲಾರದಲ್ಲಿ ಎರಡು ವರ್ಷ ಪಾಠ ಹೇಳಿ, ರಜೆ ತೆಗೆದುಕೊಂಡು ಹೋಗಿ ಎಂ.ಎ. ಪದವಿ ತರಗತಿಗೆ ಸೇರಿಕೊಂಡೆ. ಆ ಹೊತ್ತಿಗೆ ಕುವೆಂಪು ಮೈಸೂರು ವಿಶ್ವವಿದ್ಯಾನಿಲಯದ ಕುಲಪತಿಗಳಾದುದರಿಂದ, ತೀ.ನಂ. ಶ್ರೀಕಂಠಯ್ಯನವರು ಧಾರವಾಡದಿಂದ ಮೈಸೂರಿಗೆ ಬಂದು ಕನ್ನಡ ವಿಭಾಗದ ಮುಖ್ಯರಾದರು. ಅವರು ವರ್ಷದ ಅಂತ್ಯದಲ್ಲಿ ಬಂದು ಕಾವ್ಯಮೀಮಾಂಸೆಯನ್ನು ಬೋಧಿಸಿದರು. ಎಂ.ಎ. ಪರೀಕ್ಷೆ ಮುಗಿಯುತ್ತಿದ್ದಂತೆ ಕೋಲಾರದಿಂದ ಮೈಸೂರಿನ ಯುವರಾಜಾ ಕಾಲೇಜಿಗೆ ವರ್ಗವಾದುದು ನನ್ನ ಒಂದು ಪುಣ್ಯ ವಿಶೇಷ. ಎಂ.ಎ. ಪರೀಕ್ಷೆಯಲ್ಲಿ (1957) ಪ್ರಥಮ ವರ್ಗ ಪ್ರಥಮ ರ್‍ಯಾಂಕಿನಲ್ಲಿ ಉತ್ತೀರ್ಣನಾದೆ. ಒಂದು ಚಿನ್ನದ ಪದಕವೂ ಲಭ್ಯವಾಯಿತು.

ಎಂ.ಎ.ನಲ್ಲಿ ಓದುತ್ತಿರುವಾಗ ಡಿ.ಎಲ್.ಎನ್. ಅವರ ಸೂಚನೆಯ ಮೇರೆಗೆ ಪಂಪ ಕವಿಗೆ ಹಿನ್ನೆಲೆಯಾಗಿದ್ದ ಸಾಮಾಜಿಕ ಬದುಕನ್ನು ಪುನಾರಚಿಸಲು ಅವನ ಕಾಲದ ಶಾಸನಗಳನ್ನು ಎಚ್ಚರಿಕೆಯಿಂದ ಅಭ್ಯಸಿಸಿ ಅವುಗಳಲ್ಲಿ ಹುದುಗಿದ್ದ ಮಾಹಿತಿಯ ಸಂಪತ್ತಿಗೆ ಬೆರಗಾಗಿ ಹೋಗಿದ್ದೆ. ಆಗ ಸಂಗ್ರಹಿಸಿದ್ದ ಮಾಹಿತಿಯನ್ನು ಬಳಸಿ 'ಪಂಪಕವಿ ಮತ್ತು ಮೌಲ್ಯಪ್ರಸಾರ' ಎಂಬ ಸಂಪ್ರಬಂಧವನ್ನು ಸಿದ್ಧಪಡಿಸಿ, ಟಿ.ಎನ್.ಎಸ್. ಮತ್ತು ಡಿ.ಎಲ್.ಎನ್. ಅವರು ಹಾಜರಿದ್ದ ಎಂ.ಎ. ತರಗತಿಯ ಗೋಷ್ಠಿಯಲ್ಲಿ ಅದನ್ನು ಓದಿದೆ. ಅದು ಪೂಜ್ಯಗುರುಗಳ ಬಹು ಮೆಚ್ಚುಗೆಯನ್ನು ಪಡೆದುದಲ್ಲದೆ, ಮುಂದೆ ಪಿಎಚ್.ಡಿ. ಪದವಿಗೆ ಸಂಶೋಧನೆ ನಡೆಸಲು ಮಾರ್ಗದರ್ಶನ ನೀಡಬೇಕೆಂದು ತೀ.ನಂ.ಶ್ರೀ.ಯವರನ್ನು ಕೇಳಿಕೊಂಡಾಗ, ಶಾಸನಗಳ ಅಧ್ಯಯನವನ್ನೇ ಮುಂದುವರಿಸಲು ಸೂಚನೆಕೊಟ್ಟುದು ಸ್ವಾಭಾವಿಕವಾಗಿತ್ತು. ಮೇಲ್ಕಂಡ ಸಂಪ್ರಬಂಧವು ಪ್ರಬುದ್ಧ ಕರ್ಣಾಟಕದಲ್ಲಿ ಪ್ರಕಟವಾದುದಲ್ಲದೆ ಸಂಶೋಧನ ಕ್ಷೇತ್ರಕ್ಕೆ ನಾನು ಕಾಲಿಡಲು ಸಹಾಯಕವಾಯಿತು.

ಮೈಸೂರಿಗೆ ಆಗಲೇ ವೃದ್ಧರಾಗಿದ್ದ ಅಯ್ಯ, ಅವ್ವರನ್ನು ಕರೆತಂದು ಮನೆಮಾಡಿದೆ. ಅದೊಂದು ಹುಚ್ಚು ಆದರ್ಶದ ಕಾಲ. ಯುವರಾಜಾ ಕಾಲೇಜಿನಲ್ಲಿ ಪಾಠ, ಅಲ್ಲಿಯ ಟೆನ್ನಿಸ್ ಕೋರ್ಟಿನಲ್ಲಿ ಆಟ (ಅಲ್ಲಿ ತಕ್ಕಮಟ್ಟಿಗೆ ಒಳ್ಳೆಯ ಆಟಗಾರನಾಗಿದ್ದೆ. ಅತಿಶ್ರೇಷ್ಠ ವಿದ್ಯಾರ್ಥಿ ಆಟಗಾರ ನನ್ನ ಜೊತೆ ಬೇಸರವಿಲ್ಲದೆ ಆಡುತ್ತಿದ್ದ), ಬೆಳಿಗ್ಗೆ ಈಜುಗೊಳದಲ್ಲಿ ಈಜು, ವಿಶ್ವವಿದ್ಯಾನಿಲಯದ ಗ್ರಂಥಾಲಯದಲ್ಲಿ ಬಿಡುವು ಸಿಕ್ಕಾಗಲೆಲ್ಲ ಮತ್ತು ರಜಾ ದಿನಗಳಲ್ಲಿ ಪಿಎಚ್.ಡಿ ಪದವಿಗಾಗಿ ಅಧ್ಯಯನ. ಉ.ಕಾ. ಸುಬ್ಬರಾಯಾಚಾರ್, ಜಿ.ಎಸ್. ಶಿವರುದ್ರಪ್ಪ, ಪ್ರಭುಶಂಕರ, ಎ. ವೆಂಕಟರಾಮ್, ಕೆ.ಬಿ. ಪ್ರಭುಪ್ರಸಾದರಂತಹ ಪ್ರಾಜ್ಞರ ನಿಕಟ ಸಹವಾಸ, ರಾಮಕೃಷ್ಣಾಶ್ರಮಕ್ಕೆ ಪ್ರತಿ ಭಾನುವಾರ ಸಂಜೆ ಭೇಟಿ. ಗಾಂಧಿ ಸಾಹಿತ್ಯ ಸಂಘದ ಜೊತೆ ಹತ್ತಿರದ ಸಂಬಂಧ. ನಾನು ಮದುವೆ ಮಾಡಿಕೊಳ್ಳದೆ ಬ್ರಹ್ಮಚಾರಿಯಾಗಿಯೇ ಉಳಿದು, ಸಮಾಜಸೇವಕನಾಗಬೇಕೆಂದು ದೃಢ ನಿರ್ಧಾರವನ್ನೂ ಮಾಡಿ, ಭೂದಾನ ಚಳವಳಿಗೆ ಸೇರಲು ಆಚಾರ್ಯ ವಿನೋಬ ಭಾವೆಯವರ ಒಪ್ಪಿಗೆ ಆಶೀರ್ವಾದವನ್ನೂ ಪಡೆದಿದ್ದೆ. 1962ರ ಭಾರತ - ಚೀನಾ ಯುದ್ಧ ಸಮಯದಲ್ಲಿ ಮೈಸೂರಿನ ಬೀದಿ ಬೀದಿಗಳಲ್ಲಿ ಹಣ ಸಂಗ್ರಹ ಮಾಡಿ (ಅದೇ ಮೊದಲು ಸಾರ್ವಜನಿಕ ಕೆಲಸಕ್ಕೆ ಬೀದಿಗೆ ಇಳಿದದ್ದು) ಯುದ್ಧ ನಿಧಿಗೆ ಕೊಟ್ಟುದಲ್ಲದೆ, ನಾವು ಹಾಗೆ ಹಣ ಸಂಗ್ರಹ ಮಾಡುತ್ತಿರುವಾಗ ಅಯ್ಯ ತಾವೇ ಬೃಹತ್ ಬಹಿರಂಗ ಸಭೆಯಲ್ಲಿ ನನ್ನ (ಆನರ್ಸ್) ಚಿನ್ನದ ಪದಕವನ್ನು ನಿಧಿಗೆ ಒಪ್ಪಿಸಿದರು. ಇನ್ನು ನಾನು ಹೆಚ್ಚು ಕಾಲ ಅಧ್ಯಾಪಕನಾಗಿ ಮುಂದುವರಿಯುವುದು ಬೇಡವೆಂದು ನನ್ನ ಎಲ್ಲ ಪುಸ್ತಕಗಳನ್ನೂ ಹರಾಜು ಹಾಕಿ, ಹುಣಸೂರಿಗೆ ಹೋಗಿ ಆ ಹಣದಿಂದ ಕಂಬಳಿಗಳನ್ನು ಖರೀದಿ ಮಾಡಿ ಹಿಮಾಲಯದ ಸೈನಿಕರಿಗೆ ಕಳಿಸಿಕೊಟ್ಟೆ. ರಾಷ್ಟ್ರದ ಒಳ ಸುರಕ್ಷತೆಗೆ ಅದೇ ಶುರುಮಾಡಿದ್ದ ಪ್ರಾದೇಶಿಕ ಸೈನ್ಯಕ್ಕೆ ಸೇರಿ ಮೂರು ತಿಂಗಳ ಕವಾಯತು ಶಿಕ್ಷಣವನ್ನೂ ಪಡೆದೆ. ಭಾನುವಾರದ ಸಂಜೆಗಳಲ್ಲಿ ಮೈಸೂರಿನ ಕುರುಡರ ಶಾಲೆಗೆ ಹೋಗಿ ಆ ಮಕ್ಕಳ ಮನೆಗಳಿಗೆ ಪತ್ರ ಬರೆದು ಹಾಕುವುದು, ಅವರಿಗೆ ಬೇಕಾದ ತಟ್ಟೆ ಲೋಟ ಬನೀನು ಇಂಥವನ್ನು ತಂದು ಕೊಡುವುದು ಈ ಕೆಲಸಗಳಲ್ಲದೆ, ಅವರಿಗೆ ಕತೆ ಕೂಡ ಹೇಳುತ್ತಿದ್ದೆ. ಎಂ.ಎ. ತರಗತಿಗಳಿಗೆ ಸಿದ್ಧವಾಗಿ ಹೋಗುತ್ತಿದ್ದಂತೆ ಅರೇಬಿಯನ್ ನೈಟ್ಸ್ ಮುಂತಾದ ಕತೆಗಳನ್ನು ಓದಿಕೊಂಡು ಹೋಗಿ ಇನ್ನಷ್ಟು ಸೇರಿಸಿ ಕತೆ ಹೇಳುತ್ತಿದ್ದೆ. ಕುರುಡು ಮಕ್ಕಳು ನಾನು ಹೋದರೆ ಅಕ್ಷರಶಃ ಅಂಟಿಕೊಳ್ಳುತ್ತಿದ್ದುವು. (ನಾನು ಮಕ್ಕಳ ಕತೆ ಹೇಳುವುದರಲ್ಲಿ ನಿಷ್ಣಾತನೆಂಬುದು ಹಲವರಿಗೆ ತಿಳಿಯದು). ಯುವರಾಜಾ ಕಾಲೇಜಿನ ಕಕ್ಕಸು ಗೋಡೆಗಳ ಮೇಲೆ ಕಾಣಿಸಿಕೊಂಡ ಹದಿಹರೆಯದ ಬರಹಗಳನ್ನು ಅಳಿಸಿ ಹಾಕಲು ನಾನು ಮುಂದಾದುದು ಹಲವು ಅಧ್ಯಾಪಕ ಮಿತ್ರರ ಗೇಲಿಗೂ ವಸ್ತುವಾಗಿತ್ತು. "ಅಳಿಸುತ್ತ ಅಳಿಸುತ್ತ ನೀವೇ ಅಂಥವನ್ನು ಬರೆಯಲು ಶುರುಮಾಡುವಿರಿ" ಎಂದು ಗೆಳೆಯರು ಗೋಳಾಡಿಸಿದರು. ನನ್ನ ವಿದ್ಯಾರ್ಥಿಗಳನ್ನು ಸೇರಿಸಿಕೊಂಡು ಮೈಸೂರಿನ ಅಶೋಕನಗರದ ದಲಿತರ ಕೇರಿಗಳನ್ನು ಗುಡಿಸಿದ್ದು, ಮಕ್ಕಳಿಗೆ ಹಾಲಿನ ಪುಡಿಯಿಂದ ಹಾಲು ಮಾಡಿ ಹಂಚಿದ್ದು ಕೆಲವು ಮರೆಯಲಾರದ ಅನುಭವಗಳನ್ನು ತಂದುಕೊಟ್ಟಿತು.

1960ರಲ್ಲಿ ಮೈಸೂರು ವಿಶ್ವವಿದ್ಯಾನಿಲಯವು ಮಾನಸಗಂಗೋತ್ರಿ ಆವರಣವನ್ನು ಆರಂಭಿಸಿದಾಗ ಅಲ್ಲಿಗೆ ಸ್ಥಳಾಂತರಗೊಂಡ ಮೂರು ಸ್ನಾತಕೋತ್ತರ ವಿಭಾಗಗಳಲ್ಲಿ ಕನ್ನಡವೂ ಒಂದು. ಆ ಹೊತ್ತಿಗೆ ನನ್ನ ಸಂಶೋಧನಾಸಕ್ತಿಗಳ ಬಗ್ಗೆ ಭರವಸೆ ಮೂಡಿಸಿಕೊಂಡಿದ್ದ ತೀ.ನಂ.ಶ್ರೀಕಂಠಯ್ಯನವರು ಯುವರಾಜಾ ಕಾಲೇಜಿನಿಂದ ಮಾನಸ ಗಂಗೋತ್ರಿಯ ಸ್ನಾತಕೋತ್ತರ ವಿಭಾಗಕ್ಕೆ ವರ್ಗಾವಣೆ ಮಾಡಿಸಿ ಕರೆಯಿಸಿಕೊಂಡರು. ನನ್ನ ಅಧ್ಯಾಪನ ಸಂಶೋಧನ ಜೀವನಕ್ಕೆ ಒಂದು ಹೊಸ ತಿರುವು ಅದರಿಂದ ಪ್ರಾಪ್ತವಾಯಿತು. ಮಾನಸಗಂಗೋತ್ರಿಗೆ ಹೋಗಿ ಹಾಜರಾದ ಮೊದಲನೆಯ ಅಧ್ಯಾಪಕ ನಾನು (ಕನ್ನಡ, ಸಂಸ್ಕೃತ, ರಾಜ್ಯಶಾಸ್ತ್ರ ಸ್ನಾತಕೋತ್ತರ ವಿಭಾಗಗಳಲ್ಲಿ ಪ್ರಾಧ್ಯಾಪಕರು ಮತ್ತು ರೀಡರುಗಳು ಮಾತ್ರ ಇದ್ದರು). ಹೀಗೆ ನನ್ನ ಪುಣ್ಯ ವಿಶೇಷದಿಂದ ಮೈಸೂರಿನಲ್ಲಿ ಅಧ್ಯಾಪನ, ಮೈಸೂರು ವಿಶ್ವವಿದ್ಯಾನಿಲಯದ ಸ್ನಾತಕೋತ್ತರ ವಿಭಾಗದಲ್ಲಿ ಅಧ್ಯಾಪಕತ್ವಗಳು ನನಗೆ ದೊರೆತುದನ್ನು ನಾನು ಅತ್ಯಂತ ಕೃತಜ್ಞತೆಯಿಂದ ಸ್ಮರಿಸಿಕೊಳ್ಳಬೇಕು. ಮಾನಸಗಂಗೋತ್ರಿಗೆ ಹೋದ ದಿನ ನಾನು, ಇನ್ನು ಇಲ್ಲಿ ಅಧ್ಯಾಪಕನಾಗಿಯೇ ನಿವೃತ್ತನಾದರೂ ವ್ಯಸನಪಡಬೇಕಾಗಿಲ್ಲವೆಂಬಷ್ಟು ಸಂತೋಷ ನನಗೆ. ತೀ. ನಂ. ಶ್ರೀ.ಯವರು ಆ ಸಮಯದಲ್ಲಿ ನನ್ನನ್ನು ಸ್ನಾತಕೋತ್ತರ ವಿಭಾಗಕ್ಕೆ ಕರೆಸಿಕೊಳ್ಳದೇ ಇದ್ದಿದ್ದರೆ ನಾನು ಪದವಿ ಕಾಲೇಜಿನಲ್ಲೇ ಉಪನ್ಯಾಸಕನಾಗಿ ಇರಬೇಕಾಗಿತ್ತು. ಪ್ರೊ|| ಶ್ರೀಕಂಠಯ್ಯನವರ ಆ ಉಪಕಾರ ಎಷ್ಟು ಹೇಳಿದರೂ ತೀರದು.

ಬದುಕಿನುದ್ದಕ್ಕೂ ಬ್ರಹ್ಮಚಾರಿಯೇ ಉಳಿದು ಸಾಮಾಜಿಕ ಸೇವೆಗೆ ಮೀಸಲಾಗಿರಬೇಕು ಎಂಬ ಸಂಕಲ್ಪ ನನ್ನ ವೃದ್ಧ ಅಯ್ಯ ಅವ್ವರನ್ನು ಬಹು ಚಿಂತೆಗೀಡುಮಾಡಿತ್ತು. ನನ್ನನ್ನು ಮದುವೆಗೆ ಒಪ್ಪಿಸಲು ಬಹಳವಾಗಿ ಯತ್ನಿಸಿ ಕೈ ಚೆಲ್ಲಿ ಕುಳಿತಿದ್ದರು. ನಾನೊಬ್ಬ ಉತ್ತಮ ಸಮಾಜಸೇವಕನಾಗಬಲ್ಲೆನೆಂಬ ಆತ್ಮವಿಶ್ವಾಸ ನನಗಿದ್ದರೂ ಮನುಷ್ಯನ ಸಹಜ ಲೈಂಗಿಕ ಪ್ರವೃತ್ತಿಯನ್ನು ಹತ್ತಿಕ್ಕುವುದರಲ್ಲೇ ನನ್ನ ಶ್ರಮದ ವಿನಿಯೋಗವಾದೀತೆಂಬ ಭಯ ನನ್ನನ್ನು ಕಾಡತೊಡಗಿತು. ಬ್ರಹ್ಮಚರ್ಯವೇ ಮದುವೆಯೇ ಎಂಬ ಭಯಂಕರ ಒಳತೋಟಿಯಲ್ಲಿ ಸಿಲುಕಿ, ಪುಟ್ಟಪರ್ತಿಗೆ ಹೋಗಿ ಶ್ರೀ ಸಾಯಿಬಾಬಾ ಅವರನ್ನೂ ಭೇಟಿ ಮಾಡಿದೆ. ಅವರ ಆಶೀರ್ವಾದದ ಮಾತು ಬಹುಶಃ ನನ್ನ ಮನಸ್ಸಿನಲ್ಲೇ ಮದುವೆಯ ಪರವಾಗಿದ್ದ ನಿರ್ಣಯವನ್ನು ದೃಢಗೊಳಿಸಿತು. ನಾನು ಹಿಂದಕ್ಕೆ ಮೈಸೂರಿಗೆ ಬಂದು ನನ್ನ ಮನೆಗೆ ಸಮೀಪದಲ್ಲಿದ್ದ ಡಾ|| ಶಿವರುದ್ರಪ್ಪನವರಿಗೂ ಅವರ ಶ್ರೀಮತಿಗೂ ನನ್ನ ನಿರ್ಧಾರವನ್ನು ತಿಳಿಸಿದಾಗ ಅವರಿಗೆ ಏಕಕಾಲಕ್ಕೆ ಆಶ್ಚರ್ಯವೂ ಸಂತೋಷವೂ ಆಯಿತು. ಆ ದಿನ ರಾತ್ರಿ ಹನ್ನೊಂದು ಗಂಟೆಗೆ ನನ್ನ ಮನೆಗೆ ಬಂದು ಹೊರಬಾಗಿಲ ಬಳಿ ನಿಂತು ಚಿಲಕದ ಸದ್ದು ಮಾಡಿದೆ. ಹಿಸ್ಸೆಂದು ಸದ್ದಾಯಿತು. ನನ್ನ ತಂಗಿ ಹಾಕಿದ ದೀಪದ ಬೆಳಕಿನಲ್ಲಿ ಹಾವೊಂದು ಹರಿದು ಹೋದಂತಾಯಿತು. ಆ ಪ್ರದೇಶದಲ್ಲಿ ಆಗಲೇ ಕಾಣಿಸಿಕೊಂಡಿದ್ದ ನಾಗರಹಾವು ನನಗೂ ಬಾಗಿಲಿಗೂ ಮಧ್ಯೆ ಹೆಡೆಯೆತ್ತಿ ನಿಂತಿತ್ತು. ಮತ್ತೊಂದು ಬಾರಿ ಆ ನಾಗರಹಾವು ಕಾಣಿಸಿಕೊಳ್ಳಲಿಲ್ಲ - ಆ ಮಾತು ಬೇರೆ ಮತ್ತು ಅದಕ್ಕೆಲ್ಲ ಅರ್ಥವನ್ನು ಹುಡುಕುತ್ತ ಕೂರಲಾರೆ. ಒಳಗೆ ಹೋಗಿ, ಹಾವಿನ ವಿಷಯ ಮತ್ತು ನನ್ನ ಮದುವೆಯ ನಿರ್ಧಾರದ ವಿಷಯವನ್ನು

ತಿಳಿಸಿದಾಗ ಎರಡನೆಯ ಸುದ್ದಿಯಿಂದ ಅವರಿಗಾದ ಹರ್ಷ ಹೇಳತೀರದು. ಆ ಬಳಿಕ ನಾನು ನೋಡಿದ ಮೊದಲ (ಮತ್ತು ಕೊನೆಯ) ಹೆಣ್ಣಿನ (ಎಂ. ವಿಶಾಲಾಕ್ಷಿ) ಜೊತೆ ಯಾವುದೇ ವರದಕ್ಷಿಣೆಯೂ ಇಲ್ಲದೆ ನನ್ನ ಹಳ್ಳಿ ಕೋಗಲೂರಲ್ಲಿ ಬಸವ ಜಯಂತಿಯ ದಿನ (ಮೇ 13, 1964) ಮದುವೆಯಾಯ್ತು. ಇಬ್ಬರು ಮಕ್ಕಳು ನನಗೆ - ಶೋಭಾ (ಮೇ 1, 1965), ವಿನಯ್ (ಜುಲೈ 1966). ನನ್ನ ಸಾಂಸಾರಿಕ ಜೀವನ ಸುಖಮಯವಾಗಿದೆ. ಅರ್ಥಮಾಡಿಕೊಳ್ಳುವ ಪತ್ನಿ ಮನೆಯ ಜವಾಬ್ದಾರಿ ಹೊತ್ತಿದ್ದಾಳೆ. ಜವಾಬ್ದಾರಿ ಅರಿತಿರುವ ಮಕ್ಕಳಿದ್ದಾರೆ. ಮಗಳಿಗೆ ಮದುವೆಯಾಗಿ ಒಳ್ಳೆಯ ಮನೆ ಸೇರಿದ್ದಾಳೆ. ಮಗ ಕೆಲಸದಲ್ಲಿದ್ದಾನೆ.

1967-8 ಒಂದು ವರ್ಷ ಚಿಕಾಗೋ ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಅಧ್ಯಾಪಕನಾಗಿ ಕೆಲಸ ಮಾಡಲು ಅವಕಾಶ ದೊರೆತುದು ಡಾ|| ಎ.ಕೆ. ರಾಮಾನುಜನ್ ಅವರಿಂದ. ಅಲ್ಲಿನ ನನ್ನ ಹುದ್ದೆಯ ಹೆಸರು 'ಕನ್ನಡ ಡ್ರಿಲ್ ಟೀಚರ್' ('ಡ್ರಿಲ್' ಎಂದರೆ ಆವರ್ತನಗಳ ಮೂಲಕ ಭಾಷೆ ಕಲಿಯುವುದು ಅಥವಾ ಕಲಿಸುವುದು ಎಂದು ಅರ್ಥ). ಅದೇ ಸಂದರ್ಭದಲ್ಲಿ ನಾನು ಭಾಷಾ ವಿಜ್ಞಾನದಲ್ಲಿ ಪೋಸ್ಟ್ ಡಾಕ್ಟೊರಲ್ ವಿದ್ಯಾರ್ಥಿಯಾಗಿ ಕೆಲವು ಕೋರ್ಸುಗಳನ್ನು ತೆಗೆದುಕೊಂಡೆ. ಬರ್ಕ್ಲಿಯಲ್ಲಿ ನಡೆದ ಅಮೆರಿಕನ್ ಓರಿಯಂಟಲ್ ಸೊಸೈಟಿಯ ವಾರ್ಷಿಕಾಧಿವೇಶನ ಮತ್ತು ಫಿಲಡೆಲ್ಫಿಯದಲ್ಲಿ ನಡೆದ ಏಷಿಯನ್ ಸೆಮಿನಾರಿನಲ್ಲಿ ಸಂಪ್ರಬಂಧಗಳನ್ನು ಮಂಡಿಸಿದೆ. ರಾಮಾನುಜನ್ ಅವರಿಂದ ನನಗೆ ಜಾನಪದಶಾಸ್ತ್ರದಲ್ಲಿ ಆಸಕ್ತಿ ಮೂಡಿತು. ವಾಪಸಾಗುವಾಗ ಇಂಗ್ಲೆಂಡ್, ಫ್ರಾನ್ಸ್, ಇಟಲಿ, ಗ್ರೀಸ್, ಈಜಿಪ್ಟ್ ದೇಶಗಳನ್ನು ನೋಡಿಕೊಂಡು ಬಂದೆ.

ಹಿಂದಕ್ಕೆ ಬಂದ ಕೆಲವು ತಿಂಗಳಲ್ಲಿಯೇ ಅದೇ ಮಾನಸಗಂಗೋತ್ರಿಯಲ್ಲಿ ಅಧ್ಯಾಪಕ ವೃತ್ತಿಯಿಂದ ಹಂಗಾಮಿ ರೀಡರ್ ಹುದ್ದೆಗೆ ಸೇರಿಕೊಂಡೆ. ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಆರಂಭಗೊಂಡಿದ್ದ ರೀಡರ್ ಹುದ್ದೆಗೂ ನಾನು ಆಯ್ಕೆಯಾದೆ. ಪ್ರೊ|| ತೀ.ನಂ.ಶ್ರೀ.ಯವರು ನಿಧನರಾದ ಮೇಲೆ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ವಿಭಾಗದಲ್ಲಿ ಹಲವು ಹೊರ ಒಳ ಬದಲಾವಣೆಗಳಾಗಿ ವ್ಯಕ್ತಿಸ್ವಾತಂತ್ರ್ಯವನ್ನು ಉಳಿಸಿಕೊಂಡು ಸ್ವಾಭಿಮಾನದಿಂದ ಬದುಕುವುದು ಕಷ್ಟವಾಗುತ್ತಿರುವ ಅನುಭವ ನನಗಾಗಲೇ ಸಾಕಷ್ಟು ಆಗಿತ್ತು. ಬೆಂಗಳೂರಿನಲ್ಲಿ ನನ್ನ ಅಧ್ಯಯನಕ್ಕೆ ಬೇಕಾದ ಗ್ರಂಥಸೌಲಭ್ಯಗಳು ಕಡಮೆಯಿದ್ದರೂ ಅದು ದುಬಾರಿ ಜಾಗವಾಗಿದ್ದರೂ ವ್ಯಕ್ತಿಸ್ವಾತಂತ್ರ್ಯದ ಬಯಕೆ ಮತ್ತು ಎಂದಾದರೊಮ್ಮೆ ಪ್ರಾಧ್ಯಾಪಕನಾಗಿ ವಿಭಾಗದ ಮುಖ್ಯನಾಗುವ ಸಾಧ್ಯತೆಗಳು ಇದ್ದುದರಿಂದ ಮೈಸೂರಿನಲ್ಲಿ ಸ್ವಂತ ಮನೆ ಮಾಡಿಕೊಂಡಿದ್ದರೂ 1968ರ ಡಿಸೆಂಬರ್ 31ರಂದು ಬೆಂಗಳೂರಿಗೆ ಬಂದು ಸೇರಿಕೊಂಡೆ. ಮುಂದೆ ಪ್ರಾಧ್ಯಾಪಕನಾದೆ. 1978ರ ಅಂತ್ಯದಲ್ಲಿ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ನಾಲ್ಕು ತಿಂಗಳ ಸಂದರ್ಶನ ಪ್ರಾಧ್ಯಾಪಕನಾಗಿ ಕೆಲಸ ಮಾಡಿ 1979ರ ಆರಂಭದಲ್ಲಿ ಸ್ಟಾನ್‌ಫೋರ್ಡ್ ವಿಶ್ವವಿದ್ಯಾಲಯದಲ್ಲಿ ನಡೆದ ನಾಲ್ಕನೆಯ ಅಂತಾರಾಷ್ಟ್ರೀಯ ಐತಿಹಾಸಿಕ ಭಾಷಾವಿಜ್ಞಾನ ಸಮ್ಮೇಳನದ ವಿಭಾಗೀಯ ಅಧ್ಯಕ್ಷನಾಗಿ ಹೋಗಿ, ಆಗ ತಿರುವನಂತಪುರದ ದ್ರಾವಿಡ

ಭಾಷಾವಿಜ್ಞಾನ ಸಂಸ್ಥೆಗಾಗಿ ಅಮೆರಿಕದ ವಿಶ್ವವಿದ್ಯಾಲಯಗಳಲ್ಲಿ ನಡೆದಿರುವ ದ್ರಾವಿಡ ಅಧ್ಯಯನಗಳನ್ನು ಕುರಿತು ಸಮೀಕ್ಷೆ ಮಾಡಿದೆ. ಈ ಬಾರಿ ಥೈಲೆಂಡ್, ಜಪಾನ್, ಹವಾಯಿ ಮೂಲಕ ಅಮೇರಿಕಕ್ಕೆ ಹೋಗಿ, ಯುರೋಪ್ ಮೂಲಕ ವಾಪಸಾದೆ. ಈ ಸಂದರ್ಭದಲ್ಲಿ ಎರಡನೆಯ ಬಾರಿ ಇಂಗ್ಲೆಂಡಿಗೆ ಹೋಗಿ ವರ್ಡ್ಸ್‌ವರ್ತ್ ಮನೆ ಮತ್ತು ಅವನಿಂದ ಜಗತ್ ಪ್ರಸಿದ್ಧವಾಗಿರುವ ಲೇಕ್ ಡಿಸ್ಟ್ರಿಕ್ಟ್ ಪ್ರಾಂತವನ್ನು ನೋಡಿದೆ. ಸ್ವಿಟ್ಸರ್ಲೆಂಡಿಗೆ ಹೋಗಿ ಆಲ್ಫ್ಸ್ ಪರ್ವತಶ್ರೇಣಿಯನ್ನು ನೋಡಿಕೊಂಡು ಬಂದೆ.

1982ರಲ್ಲಿ ನಡೆದ ಗೋಕಾಕ್ ಚಳವಳಿಯಿಂದಾಗಿ ನನ್ನನ್ನು ನಾನು ಪೂರ್ಣವಾಗಿ ಕನ್ನಡದ ಕೆಲಸಗಳಿಗೆ ತೊಡಗಿಸಿಕೊಳ್ಳುವ ಅಗತ್ಯ ಬಿದ್ದಿತು. ಕನ್ನಡ ವಿಭಾಗದ ಮುಖ್ಯಸ್ಥನಾಗಿ ನೇಮಕಾತಿ ಆಜ್ಞೆ ಬಂದರೂ ನಾನು ಅದನ್ನು ಬಿಟ್ಟುಕೊಟ್ಟುದಲ್ಲದೆ, 1990 ಅಕ್ಟೋಬರ್ 10ರಿಂದ ನನ್ನ ಹುದ್ದೆಯಿಂದ ಸ್ವಯಂ ಸೇವಾನಿವೃತ್ತಿಯನ್ನು ಪಡೆದು ಈಗ ಕನ್ನಡ ಪರ ಸಂಘಟನೆಯ ಕೆಲಸಗಳಲ್ಲಿ ಪೂರ್ತಿ ತೊಡಗಿಸಿಕೊಂಡಿದ್ದೇನೆ.

**ಸಂಶೋಧನೆ**

ಆನರ್ಸ್ ತರಗತಿಯ ವಿದ್ಯಾರ್ಥಿಯಾಗಿದ್ದೆನೆಂದು ತೋರುತ್ತದೆ - ಒಂದು ದಿನ, 'ಒ(ವ)ಂದಕ್ಕೆ' 'ಎ(ಯ)ರಡಕ್ಕೆ' ಮಾತುಗಳ ನಿಷ್ಪತ್ತಿ ಇದ್ದಕ್ಕಿದ್ದಂತೆ ಹೊಳೆಯಿತು. ಮೂತ್ರ ವಿಸರ್ಜನೆ ಮಾಡುವಾಗ ಬರೀ ಮೂತ್ರವೊಂದನ್ನೇ ಬಿಡುತ್ತೇವೆ. ಮಲವಿಸರ್ಜನೆ ಮಾಡುವಾಗ ಮೂತ್ರ ಮಲ ಎರಡನ್ನೂ ಹೊರಹಾಕುತ್ತೇವೆ. ಅಲ್ಲಿಯವರೆಗೆ ನನಗೆ ಅವುಗಳ ನಿಷ್ಪತ್ತಿ ಹೊಳೆದಿರಲಿಲ್ಲ. ನಾನು ಅದನ್ನು ಕಂಡುಕೊಂಡ ದಿನ ಬಹಳ ಹರ್ಷವಾಗಿತ್ತು. ಬೇಕಾದರೆ ಅದು ನನ್ನ ಮೊದಲ ಸಂಶೋಧನೆಯೆಂದು ಕರೆಯಬಹುದು! 1952 ಇರಬೇಕು - ಆಗ ನಾನು ಎರಡನೇ ಆನರ್ಸ್ ವಿದ್ಯಾರ್ಥಿ : ನೀತಿಗೆರೆ ಸಮೀಪದ ಬೊಮ್ಮೇನಹಳ್ಳಿಗೆ ಹೋಗಿ ಅಲ್ಲಿನ ಜಡೆ ಬಿಡಿಸಿದ ಅತ್ಯಂತ ಸುಂದರ ಮಾಸ್ತಿಶಿಲ್ಪಗಳನ್ನು ನೋಡಿ ಮೆಚ್ಚಿಕೊಂಡಿದ್ದೆ (ಮುಂದೆ, ಎರಡು ದಶಕಗಳಾದ ಮೇಲೆ ನಾನು ಮತ್ತೆ ಅಲ್ಲಿಗೆ ಹೋಗಿ ಅವು ಕರ್ನಾಟಕದಲ್ಲಿಯೇ ಏಕೆ ಬಹುಶಃ ಇಡೀ ಭಾರತದಲ್ಲಿಯೇ ಅತ್ಯಂತ ಸುಂದರ ಮಾಸ್ತಿ ಶಿಲ್ಪಗಳಿರಬೇಕೆಂದು ಗುರುತಿಸಿದೆ). ನಾನು ಬೆರಗುಗಣ್ಣಿಂದ ನೋಡಿದ ಮೊದಲ ಶಿಲ್ಪಗಳು ಅವು. ಅದೇ ಸಮಯದಲ್ಲಿ ಆ ಹಳ್ಳಿಯ, ಬಹುಶಃ ಅದೇ ಮದುವೆಯಾಗಿದ್ದ ಇಬ್ಬರು ಸುಂದರ ಬೆಡಗಿಯರನ್ನು ಆ ಊರಲ್ಲಿ ನೋಡಿ ಶಿಲ್ಪಗಳೇ ಜೀವಂತವಾಗಿ ಬಂದಿವೆಯೋ ಏನೋ ಎಂದು ಆಶ್ಚರ್ಯಪಟ್ಟಿದ್ದೆ.

'ಪಂಪಕವಿ ಮತ್ತು ಮೌಲ್ಯ ಪ್ರಸಾರ' ಎಂಬ ಸಂಪ್ರಬಂಧವನ್ನು ಸಿದ್ಧಪಡಿಸಲು ಎಂ.ಎ. ವಿದ್ಯಾರ್ಥಿಯಾಗಿದ್ದಾಗ ಡಿ.ಎಲ್. ನರಸಿಂಹಾಚಾರ್ಯರ ನೇತೃತ್ವದಲ್ಲಿ ಮಾಹಿತಿ ಸಂಗ್ರಹಿಸಿದುದೇ ಸಂಶೋಧಕನಾಗಿ ನಾನು ಕೈಗೊಂಡ ಮೊದಲ ವ್ಯವಸ್ಥಿತ ಪ್ರಯತ್ನ. ನಾನು ಒಬ್ಬ ಕವಿ (ನಾನು ಕೆಲವು ಪದ್ಯಗಳನ್ನು ಬರೆದುದೂ ಉಂಟು), ತಪ್ಪಿದರೆ ವಿಮರ್ಶಕನಾಗಬೇಕೆನ್ನುವ ಆಸೆಯಿಟ್ಟುಕೊಂಡಿದ್ದವನು. ಒಬ್ಬ ಸಂಶೋಧಕನಾಗಿ ಮಾರ್ಪಡಲು ತೀ.ನಂ.ಶ್ರೀ ಮತ್ತು

ಡಿ.ಎಲ್.ಎನ್. ಇಬ್ಬರೂ ಮುಖ್ಯ ಕಾರಣ. 1958ರಲ್ಲಿ ತೀ.ನಂ. ಶ್ರೀ.ಯವರ ಮಾರ್ಗದರ್ಶನದಲ್ಲಿ ಪಿಎಚ್.ಡಿ. ಪದವಿಗಾಗಿ ಶಾಸನಗಳ ಅಧ್ಯಯನವನ್ನು ಕೈಗೊಂಡಾಗ ಗುರುಗಳು ಕರ್ನಾಟಕವನ್ನು ಒಮ್ಮೆ ಸುತ್ತಾಡಿ ಐತಿಹಾಸಿಕ ಮಹತ್ವದ ಜಾಗಗಳನ್ನು ನೋಡಿಕೊಂಡು ಬರಲು ಹೇಳಿದರು. ಆಗ ದಸರೆಯ ರಜ: ನಾನೊಬ್ಬನೇ ಗದಗ್, ಲಕ್ಷ್ಮೇಶ್ವರ, ಲಕ್ಕುಂಡಿ, ಕೂಡಲಸಂಗಮ, ಐಹೊಳೆ, ಬಾದಾಮಿ, ಬಿಜಾಪುರ, ಗೋಕರ್ಣ ಇವೇ ಮೊದಲಾದ ಜಾಗಗಳನ್ನು ನೋಡಿಕೊಂಡು ಬಂದೆ. ಅದೊಂದು ಅಪೂರ್ವ ಅನುಭವ. ಮೊದಲಿನಿಂದಲೂ ನಾನೊಬ್ಬ ಅಲೆಮಾರಿಯಾಗಿದ್ದರೂ ಒಂದು ನಿರ್ದಿಷ್ಟ ಉದ್ದೇಶದಿಂದ ಸಂಚರಿಸಿದ್ದು ಅದೇ ಮೊದಲು. ಹೋದ ಕಡೆಯೆಲ್ಲ ಕಣ್ಣು, ಕಿವಿ, ಮನಸ್ಸುಗಳನ್ನು ತೆರೆದಿಟ್ಟುಕೊಂಡು ಎಲ್ಲವನ್ನೂ ಒಳಕ್ಕೆ ತೆಗೆದುಕೊಳ್ಳುವ ಶಿಕ್ಷಣ ದೊರೆತುದು ಅದೇ ಮೊದಲು. ಶಾಸನ, ಶಿಲ್ಪ, ಕೋಟೆ, ಜಾನಪದ ಇವನ್ನು ಬೆರಗುಗಣ್ಣಿಂದ ಗಮನಿಸಿದೆ. ಬೇರೆ ಬೇರೆ ಸಂಗತಿಗಳನ್ನು ಬೆಸೆಯುವ, ಅದರಿಂದ ಹೊಸ ಅರ್ಥವನ್ನು ಚಿಮ್ಮಿಸುವ ಸಾಧ್ಯತೆಗಳನ್ನು ಕಂಡುಕೊಳ್ಳುವುದು ಸಂಶೋಧನೆಯಲ್ಲಿ ಬಹು ಮುಖ್ಯ. ಒಂದು ಚಿಕ್ಕ ಸಂಗತಿ: ಬಾಗಲಕೋಟೆಯಿಂದ ಕೂಡಲಸಂಗಮಕ್ಕೆ ಹೋಗುವಾಗ ದಾರಿಯಲ್ಲಿ ಭಗವತಿ ಎಂಬ ಹೆಸರಿನ ಊರು ಮತ್ತು ದೇವಾಲಯ ಸಹಜವಾಗಿಯೇ ಪಂಪನಲ್ಲಿ ಬರುವ ಭಗವತಿ ಮಾತನ್ನು ಜ್ಞಾಪಕಕ್ಕೆ ತಂದಿತು. ಜನರನ್ನು ಗಮನಿಸುವುದು, ಅವರ ವಿಶ್ವಾಸವನ್ನು ಪಡೆಯುವುದು, ಅವರ ಜೊತೆ ಹೃದಯ ಸಂವಾದವನ್ನು ಪಡೆದು ಅವರಿಂದ ಮಾಹಿತಿ ಹೊರಡಿಸುವುದು ಇವು ಕ್ಷೇತ್ರಕರ್ತನಿಗೆ ಚೆನ್ನಾಗಿ ತಿಳಿದಿರಬೇಕು. ನಾನೊಬ್ಬ ಕ್ಷೇತ್ರಕರ್ತನಾಗಲು ಆ ಪ್ರವಾಸ ಸಹಾಯವನ್ನು ಮಾಡಿತು. ಪ್ರತಿಯೊಬ್ಬ ಪಿಎಚ್.ಡಿ ಅಭ್ಯರ್ಥಿಯೂ ಅವನು ಆಯ್ಕೆ ಮಾಡಿಕೊಂಡ ವಿಷಯವು ಯಾವುದೇ ಆಗಿರಲಿ, ಆರಂಭದಲ್ಲಿ ಏಕಾಂಗಿಯಾಗಿ ಪ್ರವಾಸ ಮಾಡುವುದು ಅತ್ಯಗತ್ಯವೆಂದು ನಾನು ಭಾವಿಸಿದ್ದೇನೆ. ಅಂತಹ ಪ್ರವಾಸವು ಜನಗಳ ಜೊತೆ ಬೆರೆಯುವುದನ್ನೂ ಒಂಟಿಯಾಗಿರುವುದನ್ನೂ ಕಲಿಸುತ್ತದೆ. ಒಂಟಿತನವು ಕ್ರಮಬದ್ಧ ಆಲೋಚನೆಯನ್ನು ಕಲಿಸುತ್ತದೆ.

ಪಿಎಚ್.ಡಿ ಸಂಶೋಧನ ಕಾರ್ಯದಲ್ಲಿ ನಾನು ತೀ.ನಂ.ಶ್ರೀ.ಯವರಿಗೆ ಸಂಪೂರ್ಣವಾಗಿ ಒಪ್ಪಿಸಿಕೊಂಡಿದ್ದೆ. ಅಂದಿನ ಶ್ರೇಷ್ಠ ವಿದ್ವಾಂಸರಾಗಿದ್ದ ಅವರು ತಮ್ಮ ವಿದ್ಯಾರ್ಥಿಯನ್ನು ಒಬ್ಬ ಸಂಶೋಧಕನನ್ನಾಗಿ ರೂಪುಗೊಳಿಸುವ ಬಗೆಯನ್ನು ಬಲ್ಲವರಾಗಿದ್ದರು. ಶ್ರಮಪಟ್ಟು ಕೆಲಸ ಮಾಡುವಲ್ಲಿ ಅವರೆಂದೂ ರಿಯಾಯ್ತಿ ತೋರಿಸಲಿಲ್ಲ. ಸಂದರ್ಭ ಬಿದ್ದಾಗ ಪ್ರಶಂಸಿಸದೆ ಇರುತ್ತಿರಲಿಲ್ಲ. ನನಗಿನ್ನೂ ನೆನಪಿದೆ. ನಾನು ಮೊದಲು ಬರೆದ ಅಧ್ಯಾಯವೆಂದರೆ ಜೈನ ಧರ್ಮಕ್ಕೆ ಸಂಬಂಧಿಸಿದ್ದು. ಆ ಬರಹದ ಅಪಕ್ವತೆಯನ್ನು ಅವರು ಮೃದುವಾಗಿಯೇ ತಿಳಿಸಿದ ದಿನ ನಾನು ಭೂಮಿಗೆ ಇಳಿದುಹೋದೆ. ಅವರು ನನ್ನನ್ನು ತಿದ್ದಿದರು, ತೀಡಿದರು, ಕಷ್ಟಪಟ್ಟು ಕೆಲಸ ಮಾಡಿಸಿದರು, ಮೆಚ್ಚಿಕೊಂಡರು. ಕೆಲವು ಅಧ್ಯಾಯಗಳನ್ನು ಓದಿ ಅವರು "ಸಮರ್ಪಕವಾಗಿದೆ" ಎಂದು ಒಂದು ಒಳ್ಳೆಯ ಮಾತಾಡಿ ಹಿಂದಕ್ಕೆ ಕೊಟ್ಟಾಗ ಆಗುತ್ತಿದ್ದ ಸಮಾಧಾನ ಅವರ್ಣನೀಯವಾಗಿರುತ್ತಿತ್ತು. ಅವರ ಜೊತೆ ಕಳೆಯುತ್ತಿದ್ದ ಒಂದೊಂದು

ಗಂಟೆಯೂ ಅತ್ಯಂತ ಲಾಭದಾಯಕ. ನನಗೋ ಅಮಿತ ಉತ್ಸಾಹ. ಕಾಲೇಜಿನಲ್ಲಿ ಪಾಠಗಳ ಜೊತೆ ಸಂಜೆ ಟೆನಿಸ್. ರಜಾ ದಿನಗಳಲ್ಲೆಲ್ಲ ನನಗೆ ಒಂದೇ ಕೆಲಸ - ಮಹಾರಾಜಾ ಕಾಲೇಜಿನ ಪಕ್ಕದ ವಿಶ್ವವಿದ್ಯಾನಿಲಯದ ಗ್ರಂಥಾಲಯದಲ್ಲಿ ಪಿಎಚ್.ಡಿ ಸಂಬಂಧವಾದ ಕೆಲಸ. ಎಂದೋ ಒಂದು ದಿನ ನಿಬಂಧವು ಸಿದ್ಧವಾಗಿ ವಿಶ್ವವಿದ್ಯಾನಿಲಯಕ್ಕೆ ಅದನ್ನು ಒಪ್ಪಿಸಿದೆ. ಅದಕ್ಕೆ ಹಿಂದೆ ಅವರ ಮಾರ್ಗದರ್ಶನದಲ್ಲಿ ಸಿದ್ಧವಾಗಿದ್ದ ಒಂದು ಶ್ರೇಷ್ಠ ನಿಬಂಧಕ್ಕೆ ಕೆಲವು ತೀರ ವೈಯಕ್ತಿಕ ಕಾರಣಗಳಿಗಾಗಿ ಪಿಎಚ್.ಡಿ. ಪದವಿಯು ಲಭ್ಯವಾಗಿರಲಿಲ್ಲ (ಆ ನಿಬಂಧವು ಪ್ರಕಟವಾಗಿರುವುದರಿಂದ ಯಾರು ಬೇಕಾದರೂ ಅದು ಪಿಎಚ್.ಡಿ.ಗೆ ಅರ್ಹವೇ ಅಲ್ಲವೇ ಎಂಬುದನ್ನು ಪರೀಕ್ಷಿಸಬಹುದು). ಆ ರೀತಿ ನನ್ನ ನಿಬಂಧವೂ ತಿರಸ್ಕೃತವಾಗಬಹುದೋ ಏನೋ ಎಂಬ ಅಳುಕು ಅವರಿಗಿತ್ತಾದರೂ ನನ್ನ ನಿಬಂಧದ ಪರೀಕ್ಷಕರ ಎರಡು ವರದಿಗಳೂ ಬಂದಾಗ ನನಗಿಂತ ಅವರಿಗೆ ಸಮಾಧಾನವಾಯಿತು. ನನಗೆ ಪಿಎಚ್.ಡಿ. ಪದವಿಯು ದೊರಕಿತು.

1966ರಲ್ಲಿ ನನ್ನ ಪಿಎಚ್.ಡಿ. ನಿಬಂಧವು ಪ್ರಕಟವಾಯಿತು. ಅದನ್ನು ನಾನು ಪೂಜ್ಯ ಗುರುಗಳಾದ ಪ್ರೊ॥ ತೀ.ನಂ. ಶ್ರೀಕಂಠಯ್ಯನವರಿಗೆ ಅರ್ಪಿಸಲು ಅವರ ಒಪ್ಪಿಗೆ ಪಡೆದು ಶ್ರದ್ಧೆಯಿಂದ ಅದರ ಕರಡುಗಳನ್ನು ನೋಡಿದ್ದೆ. ಅದು ಅಚ್ಚಾಗಿ ಹೊರಬರುವ ಮುನ್ನವೇ ಅವರು ದೂರದ ಕಲ್ಕತ್ತೆಯಲ್ಲಿ ಕಣ್ಣು ಮುಚ್ಚಿದ ಧಿನ (ಸೆಪ್ಟೆಂಬರ್ 7, 1966) ನಾನು ಮಾತ್ರವೇ ಅಲ್ಲ, ನನ್ನಂತೆ ಅನೇಕರು ಒಂದು ಬಗೆಯ ಅನಾಥಸ್ಥಿತಿಯನ್ನು ಅನುಭವಿಸಿದರು. ಅಂತಹ ವಿದ್ವಾಂಸರು ಆ ಕಾಲಕ್ಕೆ ಹೇಗೋ ಇಂದೂ ಅಪೂರ್ವವೆಂಬಲ್ಲಿ ನನಗೆ ಅನುಮಾನವಿಲ್ಲ. ನನ್ನನ್ನು ಅವರು ತಮ್ಮ 'ಜ್ಞಾನಪುತ್ರ' ಎಂದು ಭಾವಿಸಿದ್ದರು. ಹಾಗೆಂದು ಹೇಳಿಕೊಂಡೂ ಇದ್ದರು. ನನಗೆ ಪಿಎಚ್.ಡಿ ಪದವಿಯು ಪ್ರದಾನವಾದ ದಿನ "ನಾನಿನ್ನು ಬಂಜೆ ಅಲ್ಲ" ಎಂದು ಅವರು ತಮ್ಮ ಮಗ ತೀ. ಶ್ರೀ. ನಾಗಭೂಷಣನ ಜೊತೆ ಹೇಳಿ ಕೊಂಡುದು ಈಗಾಗಲೇ ದಾಖಲಾಗಿದೆ (ಅವರ ಬಳಿ ಕೆಲಸ ಮಾಡಿ ಆ ಪದವಿ ಪಡೆದವರಲ್ಲಿ ನಾನೇ ಮೊದಲಿಗ ಮತ್ತು ನಾನೇ ಕೊನೆಯವ). ಅವರು ನನ್ನನ್ನು ಒಬ್ಬ ಸಂಶೋಧಕನನ್ನಾಗಿ ರೂಪಿಸಿದರು. ನನ್ನಲ್ಲಿ ಭರವಸೆಯಿಟ್ಟುಕೊಂಡು ನನ್ನನ್ನು ಬೆಳೆಸಿದರು. ಅವರೂ ಅವರ ಕುಟುಂಬವರ್ಗವೂ ನನ್ನನ್ನು ನೋಡಿಕೊಂಡ ರೀತಿಯನ್ನು ಈಗಲೂ ಸ್ಮರಿಸಿದಾಗ ಕಣ್ಣಲ್ಲಿ ನೀರು ಬರುತ್ತವೆ. (ಆ ಸಂಬಂಧವು ಅವರು ನಿಧನರಾದ ಮೇಲೂ ಮುಂದುವರಿಯುತ್ತಿರುವುದು ನನ್ನ ಬದುಕಿನ ಭಾಗ್ಯ)

ಶ್ರೇಷ್ಠ ವಿದ್ವಾಂಸ ಡಿ.ಎಲ್. ನರಸಿಂಹಾಚಾರ್ ನನ್ನ ಇನ್ನೊಬ್ಬ ಗುರು. ಅಷ್ಟೇ ಏಕೆ, ನನ್ನ ಪಿಎಚ್.ಡಿ. ಸಂಶೋಧನೆಯ ಸಂದರ್ಭದಲ್ಲಿ ನನ್ನ ಅನಧಿಕೃತ ಮಾರ್ಗದರ್ಶಕರು. ತೀ.ನಂ.ಶ್ರೀ. ಯವರಂತೆಯೇ ಪ್ರೀತಿಯಿಂದ ನನ್ನನ್ನು ರೂಪಿಸಿದ ಅವರು ನನ್ನ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ'ದ ಅಚ್ಚಾದ ಕೃತಿಯನ್ನು ಓದಿ, ನನ್ನನ್ನು ತಬ್ಬಿಕೊಂಡು "ಪಿಎಚ್.ಡಿ. ನಿಬಂಧವೆಂದರೆ ಹೀಗಿರಬೇಕು" ಎಂದು ಉದ್ಗಾರ ತೆಗೆದ ಮಾತು ಎಷ್ಟು ಅಮೂಲ್ಯವೆಂದರೆ ಇಂದಿಗೂ ಅದನ್ನು ಜೋಪಾನವಾಗಿ ನನ್ನ ನೆನಪಿನ ತಿಜೋರಿಯಲ್ಲಿ

ಸುರಕ್ಷಿತವಾಗಿ ಇಟ್ಟಿದ್ದೇನೆ. ಇನ್ನೊಬ್ಬ ಗುರುಗಳಾದ ಕುವೆಂಪು ಆ ಕೃತಿಯನ್ನು "ಒಂದು ಕಾದಂಬರಿಯಂತೆ ಎಡೆಬಿಡದೆ ಓದುತ್ತಿದ್ದೇನೆ" ಎಂದು ಹೇಳಿದ ಮಾತನ್ನು ನನ್ನ ಹಿರಿಯ ಮಿತ್ರ ತ.ರಾ.ಸು. ತಿಳಿಸಿದಾಗ ನನಗೆ ತೀರ ಹರ್ಷವಾಯಿತು. ಡಾ॥ ಎ.ಕೆ. ರಾಮಾನುಜನ್ "ನಿಬಂಧದ ಗುಣಮಟ್ಟ ಉತ್ಕೃಷ್ಟ"ವೆಂದು ಹೊಗಳಿದರು. ಬಹುಶಃ ನನ್ನ ನಿಬಂಧವು ಅವರ ಮೇಲೆ ಬೀರಿದ ಸತ್ಪರಿಣಾಮದ ಫಲವಾಗಿ ನಾನು ಅಮೇರಿಕದ ಚಿಕಾಗೋ ವಿಶ್ವವಿದ್ಯಾನಿಲಯದಲ್ಲಿ ಒಂದು ವರ್ಷ ಕನ್ನಡದ ಉಪಾಧ್ಯಾಯನಾಗಿ, ಭಾಷಾವಿಜ್ಞಾನದ ಪೋಸ್ಟ್ ಡಾಕ್ಟೊರಲ್ ವಿದ್ಯಾರ್ಥಿಯಾಗಿ ಕೆಲಸ ಮಾಡುವಂತಾಯ್ತು. ಅಮೇರಿಕದ ನನ್ನ ಅಧ್ಯಯನಗಳು ಭಾಷಾ ವಿಜ್ಞಾನ ಮತ್ತು ಜಾನಪದಗಳಲ್ಲಿ ಹೆಚ್ಚಿನ ಆಸಕ್ತಿ ಮೂಡಿಸಿದುವು.

1969ರ ಆರಂಭದಲ್ಲಿ ಮೈಸೂರಿನಿಂದ ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಬಂದ ಮೇಲೆ ನಾನು ಅನಿವಾರ್ಯವಾಗಿ ನನ್ನ ಸಂಶೋಧನ ಕ್ಷೇತ್ರ ಮತ್ತು ವಿಧಾನಗಳನ್ನು ವಿಸ್ತರಿಸಿಕೊಳ್ಳುವ ಅಗತ್ಯ ಮೂಡಿತು. ಮೈಸೂರಿನಲ್ಲಿ ನನಗೆ ಬೇಕಾದ ಪುಸ್ತಕಗಳು, ಹಳೆಯ ಸಂಪತ್ರಿಕೆಗಳು (Journals) ದೊರೆಯುವ ಗ್ರಂಥಾಲಯಗಳ ಸೌಲಭ್ಯಗಳಿದ್ದುವು. ನನಗೆ ಪ್ರಿಯವಾದ ವಿಷಯಗಳ ಬಗ್ಗೆ ಚರ್ಚಿಸಲು ವಿದ್ವಾಂಸರು ಲಭ್ಯವಿದ್ದರು. ಬೆಂಗಳೂರಿನಲ್ಲಿ ಆ ಸೌಲಭ್ಯಗಳಿರಲಿಲ್ಲ. ಇಲ್ಲಿ ಆಧುನಿಕ ಸಾಹಿತ್ಯದ ಅಧ್ಯಯನಕ್ಕೆ ಹೆಚ್ಚು ಒತ್ತು ದೊರಕಿತ್ತು - ನನ್ನ ಅಧ್ಯಯನ ಕ್ಷೇತ್ರಗಳಲ್ಲಿ ಆಧುನಿಕ ಸಾಹಿತ್ಯ ಒಂದು ಅಲ್ಲ. ಹೀಗಿರುವಾಗ, ನನಗೆ ಬೇಕಾದ ಸೌಲಭ್ಯಗಳಿಲ್ಲವೆಂದು ಹೇಳಿಕೊಂಡು ನನಗೆ ನಾನೇ ಸಮಜಾಯಿಷಿ ಕೊಟ್ಟುಕೊಂಡು ಆರಾಮಾಗಿ ಇರಬಹುದಿತ್ತು. ಆದರೆ, ತೀ.ನಂ.ಶ್ರೀ. ಮತ್ತು ಡಿ.ಎಲ್.ಎನ್. ವಿದ್ಯಾರ್ಥಿಯಾದ ನಾನು ಅವರಿಂದ ಸಂಶೋಧನಾಭಿರುಚಿಯನ್ನು ನನ್ನ ಭಾಗವಾಗಿ ಮಾಡಿಕೊಂಡಿದ್ದು ಕೆಲಸ ಮಾಡದೇ ಇರಲು ಸಾಧ್ಯವೇ ಇರಲಿಲ್ಲ. ನನ್ನ ಇನ್ನೊಬ್ಬ ಗುರುಗಳಾದ ಡಾ॥ ಜಿ.ಎಸ್. ಶಿವರುದ್ರಪ್ಪನವರು ಕನ್ನಡ ವಿಭಾಗದ ಮುಖ್ಯಸ್ಥರಾಗಿದ್ದು ವಿಭಾಗದಲ್ಲಿ ವ್ಯಕ್ತಿಸ್ವಾತಂತ್ರ್ಯ ಸ್ನೇಹ ಪ್ರೀತಿಗಳ ವಾತಾವರಣವಿದ್ದಿತು. ಬೆಂಗಳೂರು ವಿಶ್ವವಿದ್ಯಾಲಯದ ಗ್ರಂಥಾಲಯ, ಪರಿಷತ್ತಿನ ಕನ್ನಡ ನಿಘಂಟು ಕಚೇರಿಯ ಗ್ರಂಥಾಲಯ, ಮಿಥಿಕ್ ಸೊಸೈಟಿ ಗ್ರಂಥಾಲಯಗಳು ನನ್ನ ಉಪಯೋಗಕ್ಕೆ ಬಂದುವು ಮೈಸೂರಿನಿಂದ (ದಿ) ಎ. ವೆಂಕಟಸುಬ್ಬಯ್ಯ ಮತ್ತು (ದಿ) ಡಿ.ಎಲ್.ಎನ್. ಅವರ ವೈಯಕ್ತಿಕ ಗ್ರಂಥ ಸಂಗ್ರಹಗಳು, ಸಾಂಗಲಿಯ ವೆಲ್ಲಿಂಗ್ಟನ್ ಕಾಲೇಜಿನಲ್ಲಿ ಡಾ॥ ರಂ.ಶ್ರೀ ಮುಗಳಿಯವರು ಕಟ್ಟಿ ಬೆಳೆಸಿದ್ದ ಕನ್ನಡ ಗ್ರಂಥಸಂಗ್ರಹ ಇವು ಬೆಂಗಳೂರು ವಿಶ್ವವಿದ್ಯಾಲಯದ ಗ್ರಂಥಾಲಯವನ್ನು ಸೇರಿದುವು. ಇಲ್ಲೆಲ್ಲ ನನ್ನ ಪಾತ್ರವಿದ್ದಿತೆಂಬುದನ್ನು ಸ್ಮರಿಸುವುದು ಅಗತ್ಯ. ಆದರೂ ನಾನು ಬೆಂಗಳೂರಿನಲ್ಲಿ ಗ್ರಂಥಾಲಯಕ್ಕೇ ಸೀಮಿತಗೊಳ್ಳುವ ಅಧ್ಯಯನಗಳ ಜೊತೆ ಹೆಚ್ಚು ಹೆಚ್ಚು ಕ್ಷೇತ್ರಕಾರ್ಯವನ್ನು ಬಯಸುವ ವಿಷಯಗಳತ್ತ ಗಮನವನ್ನು ಹರಿಸಿದೆ. ಇದರಿಂದಾಗಿ ಮೈಸೂರಿನಲ್ಲಿಯೇ ಇದ್ದಿದ್ದರೆ ಎಷ್ಟು ಸಂಶೋಧನೆಯಲ್ಲಿ ತೊಡಗಿರುತ್ತಿದ್ದೆನೋ ಅದಕ್ಕೆ ಚ್ಯುತಿಬಾರದಂತೆ ಬೆಂಗಳೂರಲ್ಲಿ ಕೆಲಸ ಮಾಡಲು ಸಾಧ್ಯವಾಯಿತು. ಅಂತಹ ಕೆಲವನ್ನು ಇಲ್ಲಿ ಉಲ್ಲೇಖಿಸಬಯಸುತ್ತೇನೆ.

ಹೊಳೇನರಸೀಪುರ ತಾಲೂಕಿನ ಕನ್ನಡದಲ್ಲಿ ತಾಲವ್ಯೀಕರಣವು ನಡೆದಿರುವ ಸಂಗತಿಯನ್ನು ನಾನು ಮೈಸೂರಿನಲ್ಲಿದ್ದಾಗಲೇ ಗುರುತಿಸಿದ್ದೆನಾದರೂ ಆ ತಾಲೂಕಿಗೆ ಹೋಗಿ ಕ್ಷೇತ್ರಕಾರ್ಯವನ್ನು ಕೈಗೊಂಡುದು ಬೆಂಗಳೂರಿಗೆ ಬಂದ ಮೇಲೆ. ತಾಲವ್ಯೀಕರಣ ಕ್ರಿಯೆಯನ್ನು (ಎಂದರೆ ಪದಾದಿಯ ಕಕಾರವು ಚಕಾರವಾಗುವುದು. ಉದಾ : ಕೆರೆ → ಚೆರೆ) ನಿರೀಕ್ಷಿಸಿಕೊಂಡು ಹೋಗಿದ್ದ ನನಗೆ ಆಶ್ಚರ್ಯವೊಂದು ಕಾದಿತ್ತು. ಅಲ್ಲಿನ ಕನ್ನಡದಲ್ಲಿ ತಾಲವ್ಯೀಕರಣದ ಜೊತೆ ಕಂಠ್ಯೀಕರಣವೂ (ಎಂದರೆ ಪದಾದಿಯ ಚ ಕಾರವು ಕ ಕಾರವಾಗುವುದು. ಉದಾ : ಚೆನ್ನಾಗಿ → ಕೆನ್ನಾಗಿ) ನಡೆದಿರುವ ಹೊಸ ಸಂಗತಿ ದೊರಕಿ ಅದನ್ನು ತಿರುವನಂತಪುರದಲ್ಲಿ ದ್ರಾವಿಡ ಭಾಷಾವಿಜ್ಞಾನದ ಮೊದಲ ಸಮ್ಮೇಳನದಲ್ಲಿ ಒಂದು ಸಂಪ್ರಬಂಧವಾಗಿ ಸಾದರಪಡಿಸಿದೆ. ಮುಂದೆ ಮತ್ತೆ ಆ ಪ್ರದೇಶಕ್ಕೆ ಹೋಗಿ ಹೆಚ್ಚಿನ ಸಾಮಗ್ರಿ ಸಂಗ್ರಹಿಸಿದೆ. ಅತಾಲವ್ಯೀಕರಣ ಭಾಷೆಯಾದ ಕನ್ನಡದ ಒಂದು ಉಪಭಾಷೆಯಲ್ಲಿ ತಾಲವ್ಯೀಕರಣ ನಡೆದಿರುವುದು ತೀರ ಒಂದು ಹೊಸ ಅಂಶ, ಮತ್ತು ಕಂಠ್ಯೀಕರಣವು ಅದರ ಜೊತೆಯಲ್ಲೇ ನಡೆದಿರುವುದು ಇನ್ನೂ ವಿಚಿತ್ರ. ಹೀಗಾಗಿ ಅದು ಎಲ್ಲರ ಗಮನವನ್ನು ಸೆಳೆಯಿತು. ಸ್ವನವ್ಯತ್ಯಾಸಗಳು ಒಂದು ಭಾಷೆಯಲ್ಲಿ ಪರಸ್ಪರ ವಿರುದ್ಧ ದಿಕ್ಕಿನಲ್ಲಿ ನಡೆಯಲು ಸಾಧ್ಯವೆಂಬುದನ್ನು ನಾನು ಪ್ರಕಟಿತ ಸಂಪ್ರಬಂಧದಲ್ಲಿ ತೋರಿಸಿಕೊಟ್ಟಿದ್ದೇನೆ. 1979ರಲ್ಲಿ ಎರಡನೆಯ ಬಾರಿ ಅಮೆರಿಕಕ್ಕೆ ಹೋದಾಗ ಅಲ್ಲಿನ ಕೆಲವು ಭಾಷಾವಿಜ್ಞಾನಿಗಳ ಮುಂದೆ ಸ್ವನವ್ಯತ್ಯಾಸಗಳ ಪಾರಸ್ಪರಿಕತೆಯನ್ನು (Reciprocality) ಪ್ರಸ್ತಾಪಿಸಿದಾಗ ಅವರು ಕೌತುಕ ವ್ಯಕ್ತಪಡಿಸಿದರು. 'ಪಗರಣ'ವು ಇನ್ನೂ ಜೀವಂತ ಜಾನಪದ ಕಲೆಯಾಗಿರುವುದನ್ನು ತಿಳಿದು ಉತ್ತರ ಕನ್ನಡ ಜಿಲ್ಲೆಗೆ ಹೋಗಿ ಆ ಬಗ್ಗೆ ಮಾಹಿತಿ ಸಂಗ್ರಹಿಸಿ ಪಗರಣದ ಸ್ವರೂಪವನ್ನು ಪುನಾರಚಿಸಿದೆ. ಮುಂದೆ ಚಿಕ್ಕಮಗಳೂರು ಜಿಲ್ಲೆಯಲ್ಲಿಯೂ ಆ ಕಲೆಯ ಅವಶೇಷವನ್ನು ಪತ್ತೆ ಹಚ್ಚಿದೆ. ಡಾ॥ ಆರ್. ಶೇಷಶಾಸ್ತ್ರಿಯವರ ಸಹಕಾರದಿಂದ ಕರ್ನಾಟಕದಲ್ಲಿ ದೊರಕಿರುವ ಏಕಮಾತ್ರ ಮಡಕೆ ಶಾಸನವನ್ನು (ಸುಮಾರು ಏಳನೇ ಶ.) ಪ್ರಕಟಿಸಿದೆ. ಬಳ್ಳಿಗಾವೆ ಸಮೀಪದಲ್ಲಿ ಅಲ್ಲಮನು ಕಂಡಿದ್ದ ಭೂಗತ ದೇವಾಲಯವನ್ನು ಗುರುತಿಸಿದೆ. ಅಷ್ಟೇ ಅಲ್ಲ, ಶಾಸನ ಮತ್ತು ಕಾವ್ಯಗಳ ಆಧಾರದಿಂದ ಅವನ ಹಿನ್ನೆಲೆ, ಅವನ ಸಾಧನೆಗಳನ್ನು ಕುರಿತಂತೆ ಬರೆದಿರುವ ನನ್ನ ಬರಹಗಳು ಈಗ ಸಾಮಾನ್ಯ ಜ್ಞಾನದ ಭಾಗವಾಗಿವೆ. ಹಂಪೆಯಲ್ಲಿ ಕವಿ ಹರಿಹರನ ವಾಸದ ಮನೆಯ ನಿವೇಶನ ಮತ್ತು ಚಾಮರಸನಿದ್ದ ಗುಹೆಗಳನ್ನು ಗುರುತಿಸಿರುವುದು ಮಾತ್ರವೇ ಅಲ್ಲ, ಹರಿಹರ ಕವಿಯು ತನ್ನ ಪುಷ್ಪರಗಳೆಯಲ್ಲಿ ವರ್ಣಿಸಿರುವ ಹೂದೋಟದ ಜಾಗವನ್ನು ಗುರುತಿಸಲಿದ್ದೇನೆ. 13ನೇ ಶತಮಾನದ 'ಪಂಪಾಪುರ'ದ ನಾಲ್ಕು ಗಡಿಗಳನ್ನು ನಾನು ಹೋಗಿ ಗುರುತಿಸಿ ಚಿತ್ರಗಳನ್ನು ತೆಗೆದುಕೊಂಡು ಬಂದಿರುವುದಲ್ಲದೆ ಹಂಪೆಯು ಈಗಿನ ವ್ಯಾಟಿಕನ್ನಿನಂತೆ ಸ್ವತಂತ್ರ ಪ್ರದೇಶವಾಗಿದ್ದು ಅಲ್ಲಿ ಒಂದೆರಡು ಶತಮಾನವಾದರೂ ಶ್ರೀ ವಿರೂಪಾಕ್ಷ ಸ್ವಾಮಿಯೇ ದೊರೆಯೆಂಬಂತೆ ವ್ಯವಹರಿಸಲಾಗುತ್ತಿತ್ತೆಂಬ ಅಪೂರ್ವ ಸಂಗತಿಯನ್ನು ಗುರುತಿಸಿದ್ದೇನೆ. ಈ ಸಂಗತಿಯು ಒಂದು ಸಿದ್ಧಾಂತವಾಗಿ ರೂಪುಗೊಳ್ಳುವ ಸಾಧ್ಯತೆ ಇದೆ. ಹಾಗಾದಾಗ ಅದೊಂದು ಅತ್ಯಂತ ಮಹತ್ವದ ಶೋಧವಾಗುತ್ತದೆ. ಪಂಪನ ಶಾಸನವಿರುವ ಆಂಧ್ರಪ್ರದೇಶದ ಕುರ್ಕ್ಯಾಲ

ಊರಿಗೆ ಹೋಗಿ ಅಲ್ಲಿ ವ್ಯಾಪಕ ಕ್ಷೇತ್ರ ಕಾರ್ಯವನ್ನು ಮಾಡಿ ಹಲವು ಮುಖ್ಯ ವಿಷಯಗಳನ್ನು ಬೆಳಕಿಗೆ ತಂದಿದ್ದೇನೆ. ಅವನಿಗೆ ದತ್ತಿಯಾಗಿ ದೊರಕಿದ ಧರ್ಮಪುರ ಅಗ್ರಹಾರದ ನಿವೇಶನವನ್ನು ಗುರುತಿಸಿದ್ದೇನೆ. ಕಲ್ಯದಲ್ಲಿ ಕವಿ ಪಾಲ್ಕುರಿಕೆ ಸೋಮನಾಥನ ಸಮಾಧಿಯನ್ನು ನೋಡಲು ಹೋದ ಕುತೂಹಲವು ಆ ಊರು ಒಂದು ದೊಡ್ಡ ಬೌದ್ಧ ಕೇಂದ್ರವಾಗಿದ್ದುದನ್ನು ಕಂಡುಹಿಡಿಯುವಲ್ಲಿ ಪರ್ಯವಸಾನವಾಯಿತು. ಶ್ರವಣಬೆಳ್ಗೊಳಕ್ಕಿಂತ ಆ ಊರಿನ ಪಕ್ಕದ ಹಳೆಯ ಬೆಳ್ಗೊಳವು ಪ್ರಾಚೀನವೆಂಬುದನ್ನು ತೋರಿಸಿಕೊಟ್ಟಿದ್ದೇನಲ್ಲದೆ ಅದೇ ನಿಜವಾದ 'ಬೆಳ್ಗೊಳ'ವೆಂಬುದನ್ನು ಸಾಬೀತು ಮಾಡಿದ್ದೇನೆ. ಈ ಎಲ್ಲ ಕ್ಷೇತ್ರಕಾರ್ಯಗಳೂ ದೈಹಿಕ ಶ್ರಮವನ್ನುಂಟುಮಾಡಿದರೂ ಅವು ಕೊಟ್ಟ ಫಲಗಳು ಆ ಶ್ರಮವನ್ನೆಲ್ಲ ಹೋಗಲಾಡಿಸಿ ಹೊಸ ಶೋಧಕ್ಕೆ ಉತ್ಸಾಹ ತುಂಬಿವೆ.

ಇದರ ಜೊತೆಗೆ, ಪೂರ್ಣ ಸೂರ್ಯ ಗ್ರಹಣವನ್ನು ಕುರಿತಂತೆ ನಡೆಸಿರುವ ಸಾಮಾಜಿಕ - ಜಾನಪದೀಯ ಅಧ್ಯಯನದ ಕೃತಿ ಜಾನಪದ ಕ್ಷೇತ್ರದಲ್ಲಿ ಒಂದು ಹೊಸ ಯತ್ನ. 'ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ' ಎಂಬ ಕೃತಿಯು ಎಷ್ಟು ಪ್ರಚಾರಕ್ಕೆ ಬರಬೇಕಾಗಿತ್ತೋ ಅಷ್ಟು ಬರಲಿಲ್ಲವೆಂಬ ಕೊರಗು ನನ್ನಲ್ಲಿದೆ. ಅದಕ್ಕೆ ಕಾರಣಗಳೇನೇ ಇರಲಿ, ಅದು ನನಗೆ ಬಹಳ ತೃಪ್ತಿ ತಂದುಕೊಟ್ಟಿರುವ ಕೃತಿಗಳಲ್ಲೊಂದು. ನಾನು ಮಾಡಬಹುದಾದಷ್ಟನ್ನು ಮಾಡಲಾಗಿಲ್ಲವೆಂಬ ತೀವ್ರ ಅತೃಪ್ತಿ ನನ್ನದು. ಅದರಲ್ಲೂ ಕನ್ನಡ ಚಳವಳಿಗೆ ನಾನು ಇಳಿದ ಮೇಲೆ ನನ್ನ ಓದು ಬರಹಗಳು ಸಾಕಷ್ಟು ಹಿಂದಕ್ಕೆ ಸರಿದುವು. ಆದರೂ ಸಾಹಿತ್ಯ, ಛಂದಸ್ಸು, ಶಾಸನಶಾಸ್ತ್ರ, ಭಾಷಾ ವಿಜ್ಞಾನ, ಜಾನಪದಶಾಸ್ತ್ರ, ಕರ್ನಾಟಕ ಸಂಸ್ಕೃತಿ ಇವೇ ಮೊದಲಾದ ಕ್ಷೇತ್ರಗಳಲ್ಲಿ ನನ್ನದೆಂದು ಹೇಳಿಕೊಳ್ಳಬಹುದಾದ ಕೊಡುಗೆಗಳಿವೆ ಎಂಬ ಸಮಾಧಾನ ನನ್ನದು. ವಿಜ್ಞಾನ ಕ್ಷೇತ್ರದಿಂದ ಸಾಹಿತ್ಯ ಕ್ಷೇತ್ರಕ್ಕೆ ನಾನು ಬಂದುದು ವ್ಯರ್ಥವಾಗಲಿಲ್ಲ.

ನನ್ನ ಮಾರ್ಗದರ್ಶನದಲ್ಲಿ ಕೆಲಸಮಾಡಿ ಪಿಎಚ್.ಡಿ ಪಡೆದ ಆರು ಜನ ವಿದ್ಯಾರ್ಥಿಗಳ ನಿಬಂಧಗಳೂ ಹೆಚ್ಚಿನ ಗುಣಮಟ್ಟದವು ಎಂಬ ಸಮಾಧಾನ ನನ್ನದಾಗಿದೆ.

ನನಗೆ ಸಾಹಿತ್ಯ ಅಕಾಡೆಮಿ ಬಹುಮಾನಗಳು ಲಭ್ಯವಾಗಿವೆ. ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಕನ್ನಡ ಸಾಹಿತ್ಯ ಪರಿಷತ್ತಿನ ವಜ್ರಮಹೋತ್ಸವ ಪ್ರಶಸ್ತಿ, ಕರ್ನಾಟಕ ರಾಜ್ಯದ ರಾಜ್ಯೋತ್ಸವ ಪ್ರಶಸ್ತಿಗಳು ದೊರೆಕಿವೆ. ಜನ ನನ್ನನ್ನು ಗುರುತಿಸಿದ್ದಾರೆ ಎಂಬುದು ಸಂತೋಷದ ಸಂಗತಿಯೆಂಬಲ್ಲಿ ಅನುಮಾನವಿಲ್ಲ. ಆದರೆ, ನನ್ನ ಬರಹಗಳ ಬಗ್ಗೆ ವಿಮರ್ಶೆಯ, ಕ್ರಿಯೆಯ ಬರಹಗಳು ಬಂದಿವೆ; ನೂರಾರು ಕಡೆ ನನ್ನ ಬರಹಗಳನ್ನು ವಿದ್ವಾಂಸರು ಉಲ್ಲೇಖ ಮಾಡಿದ್ದಾರೆ ಎಂಬುದು ನನಗೆ ಹೆಚ್ಚಿನ ಸಂತೋಷವನ್ನು ತಂದಿದೆ. ಅನೇಕ ಪ್ರತಿಷ್ಠಿತ ಸಮ್ಮೇಳನ, ಗೋಷ್ಠಿಗಳಿಗೆ ಅಧ್ಯಕ್ಷನಾಗಿದ್ದೇನೆ, ಹಲವಾರು ರಾಷ್ಟ್ರೀಯ ಅಂತಾರಾಷ್ಟ್ರೀಯ ಸಮ್ಮೇಳನಗಳಲ್ಲಿ ಸಂಪ್ರಬಂಧಗಳನ್ನು ಓದಿದ್ದೇನೆ. ಅಲ್ಲೆಲ್ಲ ನನ್ನ ಬರಹಗಳು ಒಂದು ನಿರ್ದಿಷ್ಟ ಗುಣಮಟ್ಟದವೇ ಆಗಿದ್ದುದನ್ನು ಅಲ್ಲಿನ ವಿದ್ವಾಂಸರು ಗುರುತಿಸಿದ್ದಾರೆ. 1979ರಲ್ಲಿ ಎರಡನೆಯ

ಬಾರಿ ಅಮೆರಿಕಕ್ಕೆ ಅಲ್ಲಿನ ಸ್ಟಾನ್‌ಫೋರ್ಡ್ ವಿಶ್ವವಿದ್ಯಾಲಯ ನಡೆಸಿದ ಅಂತಾರಾಷ್ಟ್ರೀಯ ಐತಿಹಾಸಿಕ ಭಾಷಾವಿಜ್ಞಾನ ಸಮ್ಮೇಳನದ ವಿಭಾಗೀಯ ಅಧ್ಯಕ್ಷನಾಗಿ ಹೋಗಿ, ಅಮೆರಿಕದ ವಿಶ್ವವಿದ್ಯಾಲಯಗಳಲ್ಲಿ ನಡೆದಿರುವ ದ್ರಾವಿಡ ಅಧ್ಯಯನಗಳ ಸಮೀಕ್ಷೆ ಮಾಡಿಕೊಂಡು ಬಂದೆ. 1986ರಲ್ಲಿ ಅಖಿಲ ಭಾರತ ದ್ರಾವಿಡ ಭಾಷಾ ವಿಜ್ಞಾನ ಸಮ್ಮೇಳನದ ಅಧ್ಯಕ್ಷನಾದುದು ಒಂದು ಉಲ್ಲೇಖಾರ್ಹ ಸಂಗತಿ.

ಕರ್ನಾಟಕದಲ್ಲಿ ಸಂಶೋಧಕರಿಗಿರುವ ಅವಕಾಶಗಳು ಅನಂತ. ಆದರೆ ವಿಶೇಷವಾಗಿ ಕನ್ನಡ ಭಾಷಾ ವಿಜ್ಞಾನದ ಕ್ಷೇತ್ರದಲ್ಲಿ ಕೆಲಸಮಾಡಬೇಕಾಗಿರುವ ಸಂಶೋಧಕರು ಸರಿಯಾದ ರೀತಿಯಲ್ಲಿ ರೂಪುಗೊಳ್ಳುತ್ತಿಲ್ಲವೆಂಬ ಕೊರಗು ನನ್ನಲ್ಲಿ ಉಳಿದಿದೆ. ಆ ಬಗ್ಗೆ ಹೇಳುವುದು ಸಾಕಷ್ಟಿದೆಯಾದರೂ ಅದನ್ನಿಲ್ಲಿ ವಿಸ್ತರಿಸುವುದಿಲ್ಲ.

ಸಂಶೋಧನೆ ಒಬ್ಬ ವ್ಯಕ್ತಿಯನ್ನು, ಅದನ್ನು ಅವನು ಗಂಭೀರವಾಗಿ ತೆಗೆದುಕೊಂಡರೆ ಅವನನ್ನು ಪ್ರಾಮಾಣಿಕನನ್ನಾಗಿ ರೂಪಿಸುತ್ತದೆ. ಬೌದ್ಧಿಕ ಕ್ರಿಯೆಯನ್ನಾಗಿ ಸಂಶೋಧನೆಯನ್ನು ಆರಿಸಿಕೊಂಡ ವ್ಯಕ್ತಿ ಅಲ್ಲಿ ಸತ್ಯವನ್ನೇ ಹೇಳಬೇಕೆನ್ನುವ ತತ್ವವನ್ನು ತನ್ನ ಜೀವನಕ್ಕೂ ಅನ್ವಯಿಸಿಕೊಳ್ಳಲು ಪ್ರಚೋದಿಸುತ್ತದೆ. ಕೆಲವೊಮ್ಮೆ ನನಗೆ ಕಂಡುಬಂದ ಸತ್ಯವನ್ನು ನಿರ್ಭಯವಾಗಿ ಹೇಳಿ ನಿಷ್ಠುರನೆನಿಸಿಕೊಂಡಿದ್ದರೂ ನನ್ನನ್ನು ಆಕ್ಷೇಪಿಸುವ ಜನರೇ ನನ್ನನ್ನು ಮೆಚ್ಚಿದ್ದಾರೆ. ಪಂಚಾಚಾರ್ಯರ ಬಗ್ಗೆ ಮತ್ತು ಸಿದ್ಧಾಂತ ಶಿಖಾಮಣಿಯ ಕಾಲ ವಿಚಾರದ ಬಗ್ಗೆ ಬೆಂಗಳೂರಿನ ಮಿಥಿಕ್ ಸೊಸೈಟಿಯಲ್ಲಿ ಏರ್ಪಾಟಾಗಿದ್ದ ನನ್ನ ಉಪನ್ಯಾಸದ ಆರಂಭಕ್ಕೆ ಬಹಳ ಗಲಾಟೆ ಆಯ್ತು, ನನ್ನ ಉಪನ್ಯಾಸವಾದ ಮೇಲೆ ನನ್ನ ದೃಷ್ಟಿ ಉದ್ದೇಶಗಳನ್ನರಿತ ಅದೇ ಗೊಂದಲ ಎಬ್ಬಿಸಿದವರು ನನ್ನ ಜೊತೆ ಸ್ನೇಹದಿಂದ ಮಾತನಾಡಿದುದಲ್ಲದೆ ತಮ್ಮ ಮನೆಗೂ ಆಹ್ವಾನಿಸಿದರು. ಗುರುಪೀಠ, ವಿರಕ್ತಪೀಠಗಳ ಬಗ್ಗೆ ಅವೆರಡೂ ಪರಸ್ಪರ ವಿರೋಧಿಗಳಲ್ಲ. ಪರಸ್ಪರ ಪೂರಕಗಳು ಎಂಬ ನನ್ನ ವಾದ ಬಹಳ ಜನಕ್ಕೆ ಪ್ರಿಯವಾಗಿದೆ. ಅವರು ವೀರಶೈವರೇ ಇರಲಿ ಯಾರೇ ಇರಲಿ - ಈಗಲೂ ನನ್ನ ನಂಬಿಕೆಯೆಂದರೆ, ಎಲ್ಲರಲ್ಲೂ ವಿವೇಕ ಇದೆ, ಅರ್ಥಮಾಡಿಕೊಳ್ಳುವ ಗುಣ ಇದೆ. ಸಾಧಾರವಾಗಿ ಪ್ರತಿಪಾದಿಸಿದರೆ ಜನ ಮೆಚ್ಚುತ್ತಾರೆ. ಏನೇ ಆದರೂ ನಮ್ಮದೇ ಸರಿ ಎನ್ನುವ ಕೆಲ ಬೆರಳೆಣಿಕೆಯ ಜನ ಎಲ್ಲರಲ್ಲೂ ಎಲ್ಲ ಕಾಲಕ್ಕೂ ಇರುತ್ತಾರೆ. ಅವರು ಉದಾಸೀನಾರ್ಹರು. ನಾನು ಆಧಾರವಿಲ್ಲದೆ ಕೇವಲ ಉಪಚಾರಕ್ಕಾಗಿ ಮಾತನಾಡುವವನಲ್ಲ, ಪ್ರಚಾರಕ್ಕಾಗಿ ಮಾತನಾಡುವವನಲ್ಲ ಎಂಬುದು ಬಹು ಜನರ ಮನಸ್ಸಿನಲ್ಲಿ ನಿಂತಿದೆ; ಇದನ್ನು ಹಲವರು ಬಾಯಿಬಿಟ್ಟು ಹೇಳಿಯೂ ಇದ್ದಾರೆ.

ನನ್ನ ಸಂಶೋಧನೆಗಳ ಬಗ್ಗೆ ಇಷ್ಟು ಬರೆದರೂ ಒಂದು ಮಾತು ನಿಜ. ಒಂದು ಸತ್ಯ ತಾನು ಹೊರಬರಲು ಯಾವನೋ ಸಂಶೋಧಕನನ್ನು ಆರಿಸಿಕೊಳ್ಳುತ್ತದೆ. ಸಂಶೋಧಕ ಇದು ತನ್ನ ಸಂಶೋಧನೆ ಎಂದು ಹೇಳಿಕೊಳ್ಳಲು ಹೆಮ್ಮೆಪಟ್ಟುಕೊಂಡರೆ ತಪ್ಪೇನಿಲ್ಲ. ಆದರೆ, ಸತ್ಯ ಹೊರಬರಲು ತನ್ನನ್ನು ನಿಮಿತ್ತವಾಗಿ ಆರಿಸಿಕೊಂಡು ತನ್ನನ್ನು ಧನ್ಯನನ್ನಾಗಿ ಮಾಡಿತು ಎಂಬ ಅರಿವು ಮಾತ್ರ ಅವನಲ್ಲಿ ಜಾಗೃತವಾಗಿರಬೇಕು.

**ಚಳವಳಿ :**

1982ರಲ್ಲಿ ನಡೆದ 'ಗೋಕಾಕ್ ಚಳವಳಿ' ನನ್ನ ಬದುಕಿಗೆ ತೀರ ಬೇರೆಯೇ ಆದ ತಿರುವನ್ನು ಕೊಟ್ಟಿತು. ಕನ್ನಡದ ಜೊತೆ ಕನ್ನಡಿಗರೂ ಸುರಕ್ಷಿತವಾಗಿದ್ದ ಮೈಸೂರಿನಿಂದ 1968ರ ಕೊನೆಯಲ್ಲಿ ಬೆಂಗಳೂರಿಗೆ ನೆಲಸಲು ಬಂದಮೇಲೆ ಇಲ್ಲಿನ ಕನ್ನಡಿಗರ ದೈನ್ಯ ಸ್ಥಿತಿಯ ಅರಿವಾಗತೊಡಗಿತು. 1982ಕ್ಕೆ ಸ್ವಲ್ಪ ಮುಂಚೆ ಬೆಂಗಳೂರಿನ ದಂಡು ಪ್ರದೇಶದಲ್ಲಿ ಮುಂಗಡ ಟಿಕೆಟ್ಟಿಗಾಗಿ ಸಾಲಲ್ಲಿ ನಿಂತು ಕನ್ನಡದಲ್ಲಿ "ನಾಲ್ಕು ಟಿಕೆಟ್ ಕೊಡಿ" ಎಂದು ಕೇಳಿ ಅಪಮಾನಿತನಾಗಿದ್ದೆ. ಆಗ ಸಿನಿಮಾ ಮ್ಯಾನೇಜರ್ ನಿನ್ನನ್ನು ಹೊರ ಹಾಕಿಸುತ್ತೇನೆ' ಎಂದು ಅಬ್ಬರಿಸಿದುದಕ್ಕಿಂತ ಹೆಚ್ಚಾಗಿ ಅದನ್ನೆಲ್ಲ ಕನ್ನಡಿಗರು ಮೂಕ ಪ್ರೇಕ್ಷಕರಾಗಿ ನೋಡುತ್ತ ನಿಂತುದು ಹೆಚ್ಚಿನ ನೋವುಂಟುಮಾಡಿತ್ತು. ಬೆಂಗಳೂರಿನಲ್ಲಿ ಕನ್ನಡ ಪರವಾದ ಚಳವಳಿ ಅಲ್ಲಲ್ಲಿ ನಡೆದರೂ ಅದರ ಬಗ್ಗೆ ವಿದ್ಯಾವಂತ ಜನಕ್ಕೆ ಸದಭಿಪ್ರಾಯವಿರಲಿಲ್ಲವೆಂದು ಹೇಳಿದರೆ ಅದರ ಮಹತ್ವವನ್ನು ನಾನು ಅಲ್ಲಗಳೆಯುತ್ತಿದ್ದೇನೆ ಎಂದು ಭಾವಿಸಬಾರದು. ಕನ್ನಡ ಚಳವಳಿಯ ನೇತಾರರಾಗಿದ್ದ ಅ.ನ.ಕೃ ಅಲ್ಲಿಂದ ಹಿಂದೆ ಸರಿದಿದ್ದರು. ಮ. ರಾಮಮೂರ್ತಿಯವರು ಆ ಹೊತ್ತಿಗೆ ದಿವಂಗತರಾಗಿದ್ದರು. ವಿದ್ಯಾವಂತರ ಹಾಗೂ ಆಲೋಚನೆ ಮಾಡಬಲ್ಲವರ ಬುದ್ಧಿಜೀವಿಗಳ ಸಹಾನುಭೂತಿಯನ್ನು ಗಳಿಸಿಕೊಂಡು ಅವರನ್ನು ಕನ್ನಡ ಚಳವಳಿಯಲ್ಲಿ ತೊಡಿಗಿಸಿಕೊಳ್ಳುವ ಯತ್ನವನ್ನು ಯಾರೂ ಮಾಡಲಿಲ್ಲವಾದ ಕಾರಣ ಅನೇಕರು ಅದರಿಂದ ದೂರವೇ ಉಳಿದಿದ್ದರು. ಎಲ್ಲೋ ಸಭೆ ನಡೆಯುತ್ತಿದೆ, ಏನೋ ಮಾಡಿಕೊಳ್ಳುತ್ತಿದ್ದಾರೆ ಎಂಬ ಒಂದು ಬಗೆಯ ಔದಾಸೀನ್ಯ ಅಥವಾ ಅಸಡ್ಡೆ ವಿದ್ಯಾವಂತರಲ್ಲಿತ್ತು. ನಾನೂ ಅದಕ್ಕೆ ಹೊರತಾಗಿರಲಿಲ್ಲ. ಗೋಕಾಕ್ ಚಳವಳಿಗೆ ಮುಂಚೆ 'ಕನ್ನಡ ಉಳಿಸಿ' ಸಮಿತಿಯೊಂದನ್ನು ರೂಪಿಸಿ ಅಲ್ಪ ಸ್ವಲ್ಪ ಕೆಲಸ ಮಾಡಿದ್ದೆವು. ಗೋಕಾಕ್ ಚಳವಳಿಯು ಒಂದು ರೀತಿಯಲ್ಲಿ ನನ್ನಂತಹ ಹಲವರನ್ನು ಕನ್ನಡ ಕಾರ್ಯಕರ್ತರನ್ನಾಗಿ ರೂಪಿಸಿದ ಒಂದು ದೊಡ್ಡ ಘಟನೆ. ಪ್ರೌಢಶಾಲೆಗಳಲ್ಲಿ ಕನ್ನಡ, ಸಂಸ್ಕೃತ ಮತ್ತು ಇತರ ಭಾಷೆಗಳ ಸ್ಥಾನವೇನಿರಬೇಕೆಂಬುದನ್ನು ನಿರ್ಧರಿಸಲು ಕರ್ನಾಟಕ ಸರ್ಕಾರವೇ ನೇಮಿಸಿದ್ದ ಗೋಕಾಕ್ ಸಮಿತಿಯ ವರದಿಯನ್ನು ಅನುಷ್ಠಾನಗೊಳಿಸಲು ಅಂದಿನ ಸರ್ಕಾರ ನಿರಾಕರಿಸಿದ ನಿಮಿತ್ತ ಕರ್ನಾಟಕದ ಈಚಿನ ಚರಿತ್ರೆಯಲ್ಲಿ ಸ್ಮರಣಾರ್ಹವಾದ 'ಗೋಕಾಕ್ ಚಳವಳಿ' ನಡೆಯಿತು. ಕರ್ನಾಟಕದ ಜನತೆ ಒಕ್ಕೊರಲಿನಿಂದ ಆ ಚಳವಳಿಗೆ ಸ್ಪಂದಿಸಿತು. ಗೋಕಾಕ್ ವರದಿಯೆಂದರೇನೆಂದು ತಿಳಿಯದ ಸಾಮಾನ್ಯರೂ ರೈತರೂ ಕಾರ್ಮಿಕರೂ ಸಾವಿರ ಸಂಖ್ಯೆಯಲ್ಲಿ ಭಾಗವಹಿಸಿ ಬಂಧನಕ್ಕೆ ಒಳಗಾಗಿ ರಾಷ್ಟ್ರೀಯ ಅಂತಾರಾಷ್ಟ್ರೀಯ ಸುದ್ದಿ ಮಾಧ್ಯಮಗಳಲ್ಲಿ ಪ್ರಮುಖವಾಗಿ ಉಲ್ಲೇಖವಾಗುವಂತಹ ರೀತಿಯಲ್ಲಿ ಅತ್ಯಂತ ಶಾಂತಿಯುತವಾಗಿ ಶಿಸ್ತುಬದ್ಧವಾಗಿ ಚಳವಳಿ ನಡೆಸಿದರು. ಬಹುತೇಕ ಜನರಿಗೆ ಕರ್ನಾಟಕಕ್ಕೆ ಏನೋ ಅನ್ಯಾಯವಾಗಿದೆ, ಅದಕ್ಕಾಗಿ ಹೋರಾಡುವುದು ತಮ್ಮ ಕರ್ತವ್ಯವೆಂದೂ ಅನ್ನಿಸಿತ್ತು. ಕನ್ನಡ ಚಳವಳಿಯಲ್ಲಿ ದೊಡ್ಡ ಸಂಖ್ಯೆಯಲ್ಲಿ ಸಾಹಿತಿಗಳೂ ಕಲಾವಿದರೂ ಬುದ್ಧಿಜೀವಿಗಳೂ ಭಾಗವಹಿಸಿದುದು ಅದೇ ಮೊದಲು.

ಗೋಕಾಕ್ ಚಳವಳಿ ತನ್ನ ಉದ್ದೇಶ ಸಾಧನೆಯಲ್ಲಿ ಸಫಲವಾಯಿತೆಂದು ಹೇಳಲಾರೆ. ಏಕೆಂದರೆ ಅಷ್ಟು ದೊಡ್ಡ ಪ್ರಮಾಣದ ಚಳವಳಿ ನಡೆದರೂ ಕನ್ನಡವನ್ನು ಏಕೈಕ ಕಡ್ಡಾಯ ಪ್ರಥಮ ಭಾಷೆಯಾಗಿ ಮಾಡಲಾಗಲಿಲ್ಲ. ಸರ್ಕಾರದ ಜೊತೆ ಏರ್ಪಟ್ಟ ಅಂತಿಮ ಸಂಧಾನದಲ್ಲಿ ಗೋಕಾಕ್ ವರದಿಯ ಸಡಿಲ ರೂಪವು ಅಂಗೀಕೃತವಾಯ್ತು. ಆದರೆ ಇನ್ನೊಂದು ದೃಷ್ಟಿಯಲ್ಲಿ ಆ ಚಳವಳಿಯು ಅತ್ಯಂತ ಯಶಸ್ವಿಯಾಯಿತು. ಕರ್ನಾಟಕದ ಸಮಸ್ಯೆಗಳ ಬಗ್ಗೆ ಅಲ್ಲಿಯವರೆಗೆ ಅವಜ್ಞತೆಯನ್ನು ತೋರುತ್ತಿದ್ದ ಜನತೆ ಅಲ್ಲಿಂದ ಮುಂದೆ ಅವುಗಳ ಬಗ್ಗೆ ಸ್ಪಂದಿಸುವಂತಾಯಿತು. ಬೆಂಗಳೂರಿನಲ್ಲಿ ಗೋಕಾಕ್ ಚಳವಳಿಯ ನೇತೃತ್ವವನ್ನು ವಹಿಸಿದ್ದ ಸಾಹಿತಿಗಳ ಕಲಾವಿದರ ಬಳಗವನ್ನು ಆ ಚಳವಳಿ ನಿಂತ ಮೇಲೆ ವಿಸರ್ಜಿಸಬೇಕೆಂಬ ಸಲಹೆ ಬಂದಾಗ, ಒಂದು ಕನ್ನಡ ಪರ ಸಂಘಟನೆಯನ್ನು ಹುಟ್ಟುಹಾಕುವುದು ಸುಲಭ, ಆದರೆ ಅದನ್ನು ಮುಂದುವರಿಸಿ ಅದರ ಮೂಲಕ ಗಟ್ಟಿ ಕೆಲಸಗಳನ್ನು ಕೈಗೊಳ್ಳುವುದು ಅಷ್ಟೇ ಕಷ್ಟ, ಕರ್ನಾಟಕದ ಪ್ರಮುಖ ಸಮಸ್ಯೆಗಳು ನಮ್ಮ ಮುಂದೆ ಎದ್ದು ನಿಂತಿರುವಾಗ ಬಳಗವನ್ನು ವಿಸರ್ಜಿಸದೆ ಮುಂದುವರಿಸುವುದೇ ವಿವೇಕವೆಂಬ ತೀರ್ಮಾನವನ್ನು ಕೈಗೊಂಡೆವು. ಆ ಹೊತ್ತಿಗೆ ನನ್ನ ಸಂಪರ್ಕಗಳು ವಿಸ್ತಾರಗೊಂಡಿದ್ದುವು. ಕನ್ನಡದ ಸಮಸ್ಯೆಗಳ ಅರಿವೂ ವಿಸ್ತಾರಗೊಂಡಿತ್ತು. ವಿಶೇಷವಾಗಿ ಕಾರ್ಮಿಕರ ಸಂಪರ್ಕದಿಂದಾಗಿ ಅನ್ಯಭಾಷೀಯರು ಕರ್ನಾಟಕದ ಹುದ್ದೆಗಳ ಮೇಲೆ ಹೊಂದಿರುವ ಹಿಡಿತ, ಅನ್ಯಭಾಷೀಯರ ವಲಸೆ ಸೃಷ್ಟಿಸಿರುವ ಮತ್ತು ಮುಂದೆ ಸೃಷ್ಟಿಸಲಿರುವ ಅಗಾಧ ಪ್ರಮಾಣದ ಸಮಸ್ಯೆಯ ಅರಿವು ನನಗಾಗಿತ್ತು. ಸಾಹಿತಿಗಳ ಕಲಾವಿದರ ಬಳಗದ ಪ್ರಧಾನ ಸಂಚಾಲಕನಾಗಿ ನಾನು ದೊಡ್ಡ ಜವಾಬ್ದಾರಿಯನ್ನು ಹೊರಬೇಕಾಯ್ತು. ಗೋಕಾಕ್ ಚಳವಳಿಯ ಮುಂದಿನ ಕನ್ನಡ ಚಳವಳಿಯೆಂದರೆ ಸಾಹಿತಿಗಳ ಕಲಾವಿದರ ಬಳಗದ ಚಳವಳಿಯೇ ಆಗಿದೆಯೆಂದರೆ ಅದು ಉತ್ಪ್ರೇಕ್ಷೆಯಲ್ಲ.

ಬಳಗವು ಸುವ್ಯವಸ್ಥಿತವಾಗಿ ರೂಪುಗೊಂಡಿತ್ತು. ಬಳಗದ ಪದಾಧಿಕಾರಿಗಳಲ್ಲಿ ಕಲಾವಿದ ಜಿ.ಕೆ. ಸತ್ಯ, ಸಾಹಿತಿ ಡಾ. ಪಿ.ವಿ. ನಾರಾಯಣ ತೀರ ಹತ್ತಿರವಾಗಿ ಕೆಲಸ ಮಾಡಿದರು, ಗೋಕಾಕ್ ಚಳವಳಿಯ ಕಾಲದಲ್ಲಿ ಮತ್ತು ಮುಂದೆ ಹಿರಿಯ ಸಾಹಿತಿಗಳು, ಕಲಾವಿದರು, ಪ್ರಾಧ್ಯಾಪಕರು, ಬುದ್ಧಿಜೀವಿಗಳು, ಪತ್ರಕರ್ತರು ನಮ್ಮ ಜೊತೆ ಅಖಂಡವಾಗಿ ನಿಂತರು. ಅವರೆಲ್ಲರ ಹೆಸರನ್ನು ಹೇಳಲು ಹೊರಟರೆ ದೊಡ್ಡ ಪಟ್ಟಿಯಾದೀತು - ಆದರೆ (ದಿ) ಪ್ರೊ॥ ಎಂ.ವಿ. ಸೀತಾರಾಮಯ್ಯ ಮತ್ತು ಪ್ರೊ ॥ ಎಲ್.ಎಸ್. ಶೇಷಗಿರಿರಾಯರಿಬ್ಬರೂ ನಮ್ಮ ಚಳವಳಿಗೆ ದೊಡ್ಡ ನೈತಿಕ ಶಕ್ತಿಯಾಗಿ ನಿಂತರು. ಮುಂದೆ ಅವಕಾಶ ಸಮಯ ದೊರಕಿದಾಗ ಚಳವಳಿಗೆ ಒಂದು ಶಕ್ತಿಯಾಗಿ ನಿಂತ ಹಿರಿಯರ ಮತ್ತು ಗೆಳೆಯರ ಹೆಸರುಗಳನ್ನೆಲ್ಲ ಉಲ್ಲೇಖ ಮಾಡಿ ಅದರ ಚರಿತ್ರೆಯನ್ನು ಬರೆಯುವ ಆಸೆಯಿದೆ.

ಗೋಕಾಕ್ ಚಳವಳಿಯ ಸಂದರ್ಭದಲ್ಲೇ ನನ್ನ ಮುಂದಿನ ಬದುಕು ಕೇವಲ ಅಧ್ಯಯನ ಅಧ್ಯಾಪನಗಳಿಗೆ ಮೀಸಲಿರುವುದು ಸಾಧ್ಯವಿಲ್ಲವೆಂಬುದು ನನಗೆ ಸ್ಪಷ್ಟವಾಗಿತ್ತು. ಕರ್ನಾಟಕದಲ್ಲಿ ಕನ್ನಡಿಗನಿಗಾಗಿ ಕನ್ನಡಕ್ಕಾಗಿ ದುಡಿಯುವ ಛಲ ನನ್ನಲ್ಲಿ ದಿನದಿಂದ ದಿನಕ್ಕೆ ಗರಿಗಟ್ಟಿತು. ಗೋಕಾಕ್ ವರದಿಯ ಪರಿಷ್ಕೃತ ರೂಪವನ್ನು ಸರ್ಕಾರವು ತನ್ನ ಮಾತಿನಂತೆ ಜಾರಿಗೆ

ತರಲು ವಿಳಂಬ ಮಾಡಿದಾಗ ನಡೆದ ದೀರ್ಘಕಾಲದ ಧರಣಿ ಕಾರ್ಯಕ್ರಮದ ಫಲಶ್ರುತಿಯಾಗಿ ಡಾ॥ ಸರೋಜಿನಿ ಮಹಿಷಿ ಆಯೋಗವು ರಚಿತವಾಯಿತು. ಡಾ॥ ಸರೋಜಿನಿ ಮಹಿಷಿ ಆಯೋಗವು ಉದ್ಯೋಗಗಳಲ್ಲಿ ಕನ್ನಡಿಗರಿಗೆ ಆಗುತ್ತಿರುವ ವಂಚನೆಯನ್ನು ಆಳದಲ್ಲಿ ಅಭ್ಯಸಿಸಿ ವರದಿಯನ್ನು ಒಪ್ಪಿಸಿತು. ಆ ವರದಿ ಹೊರಬರುವಲ್ಲಿ ಮತ್ತು ಕೊನೆಯ ಪಕ್ಷ ಅದರ ಶಿಥಿಲ ರೂಪವನ್ನು ಆಜ್ಞೆಯಾಗಿ ಕಳೆದ ಡಿಸೆಂಬರಿನಲ್ಲಿ ಕರ್ನಾಟಕ ಸರ್ಕಾರವು ಹೊರಡಿಸುವಲ್ಲಿ ಬಳಗದ ನಿರಂತರ ಪ್ರಯತ್ನವಿದೆ. ಬೆಂಗಳೂರು ದೂರದರ್ಶನ ಕೇಂದ್ರವು ಆರಂಭದಲ್ಲಿ ಕೇವಲ ಮರುಪ್ರಸಾರ ಮಾಡುವ ಕೇಂದ್ರವಾಗಿದ್ದು ಅದು ತಮಿಳು, ಹಿಂದಿ, ಮರಾಠಿ, ಕಾರ್ಯಕ್ರಮಗಳನ್ನು ಮಾತ್ರ ಬಿತ್ತರಿಸುತ್ತಿತ್ತು. ಈ ಅನ್ಯಾಯವನ್ನು ಪ್ರತಿಭಟಿಸಿ ಸಾಹಿತಿಗಳ ಕಲಾವಿದರ ಬಳಗದ ಕಾರ್ಯಕರ್ತರು ಎರಡು ಕಡೆ ಮೈಕ್ರೋ ವೇವ್ ಸಂಪರ್ಕವನ್ನು ಕಡಿದು ಹಾಕಿದುದಲ್ಲದೆ ಒಂದು ಸಾರಿ ಪ್ರಸಾರ ಕೇಂದ್ರದ ವಿದ್ಯುಚ್ಛಕ್ತಿ ಸಂಪರ್ಕವನ್ನೇ ನಿಲ್ಲಿಸಿದರು. ಅದರ ಫಲವಾಗಿ ಸೀಮಿತ ಪ್ರಸಾರಾವಧಿಯುಳ್ಳ ಸ್ವತಂತ್ರ ದೂರದರ್ಶನ ಕೇಂದ್ರವು ಬೆಂಗಳೂರಿನಲ್ಲಿ ಸ್ಥಾಪಿತವಾಗಿ ಕನ್ನಡ ಕಾರ್ಯಕ್ರಮಗಳು ಇಲ್ಲಿನ ಸ್ಟುಡಿಯೊದಲ್ಲಿ ತಯಾರಾಗಲು ಆರಂಭವಾದುವು. ಮುಂದೆ, ಪ್ರಸಾರಾವಧಿಯನ್ನು ಹೆಚ್ಚಿಸಲು ಮತ್ತು ಬೆಂಗಳೂರಿನ ಕಾರ್ಯಕ್ರಮಗಳು ಕರ್ನಾಟಕಾದ್ಯಂತ ಪ್ರಸಾರವಾಗಲು ಎರಡು ಬಾರಿ ದೂರದರ್ಶನಕ್ಕೆ 'ಮುತ್ತಿಗೆ' ಹಾಕಿದುದಲ್ಲದೆ ಒಂದು ಸಾರಿ ಅತ್ಯಂತ ಜನಪ್ರಿಯವಾಗಿದ್ದ ರಾಮಾಯಣದ ಪ್ರಸಾರವನ್ನೇ ನಿಲ್ಲಿಸಲಾಯಿತು. ಈ ಎಲ್ಲ ಸಂದರ್ಭದಲ್ಲಿ ವ್ಯಕ್ತವಾದ ಕನ್ನಡ ಕಾರ್ಯಕರ್ತರ ಶ್ರಮ ನಿಷ್ಠೆ ತ್ಯಾಗಗಳು ಅನುಪಮವಾದುವು. ಆ ಎಲ್ಲ ಪ್ರಯತ್ನಗಳೂ ಯಶಸ್ವಿಯಾಗಿ ಇಂದು ಫಲ ನೀಡಿವೆ; ಆದರೆ ಅಂದು ಬಂಧನಕ್ಕೊಳಗಾಗಿದ್ದ ಕನ್ನಡ ಕಾರ್ಯಕರ್ತರ ಮೇಲಿನ ಮೊಕದ್ದಮೆಗಳು ಮುಂದುವರಿದಿವೆ.

ಹಂಪೆಯಲ್ಲಿ ಕನ್ನಡ ವಿಶ್ವವಿದ್ಯಾಲಯವನ್ನು ಸ್ಥಾಪಿಸುವ ಬಗ್ಗೆ ಸಾಹಿತಿಗಳ ಕಲಾವಿದರ ಬಳಗವು ಪ್ರಮುಖ ಪಾತ್ರವನ್ನು ವಹಿಸಿದೆ. ಮಹಿಷಿ ವರದಿಯ ಬಗ್ಗೆ, ಸ್ವತಂತ್ರ ದೂರದರ್ಶನದ ಬಗ್ಗೆ, ಕನ್ನಡ ವಿಶ್ವವಿದ್ಯಾಲಯ ಸ್ಥಾಪನೆಯ ಬಗ್ಗೆ ಬಳಗದ ಕಾರ್ಯಕರ್ತರು ಮಾಡಿರುವ ಸಭೆ ಮೆರವಣಿಗೆಗಳಿಗೆ, ಕೊಟ್ಟಿರುವ ಮನವಿಗಳಿಗೆ, ಹಂಚಿರುವ ಕರಪತ್ರಗಳಿಗೆ, ಕೇಂದ್ರದ ಮತ್ತು ರಾಜ್ಯದ ಮಂತ್ರಿಗಳೊಡನೆ ಶಾಸಕರೊಡನೆ ನಡೆಸಿದ ಭೇಟಿಗಳಿಗೆ ಲೆಕ್ಕವಿಲ್ಲ. ಮಹಿಷಿ ವರದಿಯ ಸಾರಾಂಶವನ್ನೊಳಗೊಂಡ ಒಂದು ಲಕ್ಷಕ್ಕೆ ಮೀರಿ ಕರಪತ್ರಗಳನ್ನು ಹಂಚಲಾಗಿದೆಯೆಂದರೆ ಬಳಗದ ಕೆಲಸದ ಅಗಾಧತೆ ಗೊತ್ತಾದೀತು.

ಬೆಂಗಳೂರಿನ ಅಷ್ಟೇ ಏಕೆ ಕರ್ನಾಟಕದ ಯಾವುದೇ ಸಂಘಟನೆ ಕನ್ನಡಪರ ಕೆಲಸ ಅಥವಾ ಚಳವಳಿಯಲ್ಲಿ ತೊಡಗಿದರೂ ಅವುಗಳ ಜೊತೆ ಸೇರಿ ಬಳಗವು ಕೆಲಸ ಮಾಡಿದೆ. ಬೆಂಗಳೂರಿಗೆ ರೈಲ್ವೆ ನೈರುತ್ಯ ವಲಯ ಸ್ಥಾಪನೆಯ ವಿಷಯವಾಗಬಹುದು, ಬೆಳಗಾವಿಯ ಪ್ರಶ್ನೆ ಆಗಿರಬಹುದು, ರೋಮನ್ ಕ್ಯಾಥೊಲಿಕ್ ಕನ್ನಡ ಕ್ರೈಸ್ತರ ವಿಷಯ ಆಗಿರಬಹುದು, ಬ್ಯಾಂಕುಗಳಲ್ಲಿ ಕನ್ನಡಿಗರ ನೇಮಕಾತಿ ವಿಷಯ ಆಗಿರಬಹುದು, ಪ್ರಾದೇಶಿಕ ಪಕ್ಷ ಸ್ಥಾಪನೆಯ ವಿಷಯ ಆಗಿರಬಹುದು - ಇಂತಹ ವಿಷಯಗಳಲ್ಲಿ ಇತರರ ಜೊತೆ ಸೇರಿ ಕೆಲಸ

ಮಾಡಿದೆ. 'ಕನ್ನಡ ಸಂಸ್ಕೃತಿ ನಮ್ಮ ಹೆಮ್ಮೆ' 'ಸರೋಜಿನಿ ಮಹಿಷಿ ವರದಿ' 'ಕನ್ನಡತನ ಮತ್ತು ಭಾರತೀಯತೆ'ಯಂತಹ ಪುಸ್ತಕಗಳನ್ನು ಹೊರತಂದು ಜನತೆಗೆ ಕರ್ನಾಟಕದ ಪರಂಪರೆ ಮತ್ತು ಇಂದಿನ ವಾಸ್ತವಗಳ ಪರಿಚಯ ಮಾಡಿಕೊಟ್ಟಿದೆ. ಇಷ್ಟು ಮಾಡಿಯೂ ಬಳಗವು ಸಕ್ರಿಯ ರಾಜಕಾರಣದಿಂದ ದೂರವಿದೆಯೆಂಬುದನ್ನು ಒತ್ತಿ ಹೇಳಬೇಕು.

ಬಳಗದ ಚಟುವಟಿಕೆಗಳು ಕರ್ನಾಟಕಕ್ಕೆಲ್ಲ ಹಬ್ಬಬೇಕೆಂಬ ಉದ್ದೇಶದಿಂದ 1988ರ ಮೇ ತಿಂಗಳಲ್ಲಿ ಬಳಗವು ರಾಜ್ಯಮಟ್ಟದ ಕನ್ನಡ ಶಕ್ತಿ ಕೇಂದ್ರವನ್ನು ಹುಟ್ಟುಹಾಕಿತು. ಅದರ ಗೌರವಾಧ್ಯಕ್ಷರಾಗಿ ಪ್ರೊ॥ ಚನ್ನವೀರ ಕಣವಿಯವರು ಆಯ್ಕೆಯಾದರು, ನಾನು ಕಾರ್ಯಾಧ್ಯಕ್ಷನಾಗಿ ಆಯ್ಕೆಯಾದೆ. ಶಕ್ತಿ ಕೇಂದ್ರದ ಕಾರ್ಯಕಾರಿ ಸಮಿತಿಯಲ್ಲಿ ಮತ್ತು ಗೌರವ ಸಲಹೆಗಾರರಲ್ಲಿ ಹಲವು ಶ್ರೇಷ್ಠರಿದ್ದಾರೆ - ಅವರೆಲ್ಲರ ಜೊತೆ ಸೇರಿ ಕೆಲಸ ಮಾಡುವಲ್ಲಿ ಒಂದು ಹರ್ಷವಿದೆ. ಶಕ್ತಿ ಕೇಂದ್ರವು ಇಲ್ಲಿಯವರೆಗೆ ಹದಿಮೂರು ಜಿಲ್ಲೆಗಳಲ್ಲಿ ತನ್ನ ಶಾಖೆಗಳನ್ನು ಸ್ಥಾಪಿಸಿದೆ. ಬಳಗವು ಆರಂಭಿಸಿದ ಹಲವಾರು ಕನ್ನಡಪರ ಕೆಲಸಗಳನ್ನು ಮುಂದುವರಿಸಿರುವುದಲ್ಲದೆ, ಕಳೆದ ಅಕ್ಟೋಬರಿನಲ್ಲಿ 'ಕನ್ನಡ ಉಳಿಸಿ ವರ್ಷ' ಆಚರಣೆಯನ್ನು ಆರಂಭಿಸಿ ಕನ್ನಡ ಜನತೆಯಲ್ಲಿ ಎಚ್ಚರ ಮೂಡಿಸುವ ಕೆಲಸವನ್ನು ಮಾಡುತ್ತಿದೆ. ಅದು ಹಂಪೆ, ಬೀದರ್‌ಗಳಲ್ಲಿ ನಡೆಸಿದ ಎರಡು ಮಹಾಧಿವೇಶನಗಳು ಅದ್ಭುತ ಯಶಸ್ಸನ್ನು ಕಂಡವು. ಅದು ಪ್ರಕಟಿಸಿರುವ 'ಕನ್ನಡ ಕನ್ನಡಿಗ ಕರ್ನಾಟಕ' ಕೃತಿಯು ತನ್ನ ಅಪೂರ್ವ ಮಾಹಿತಿ ಸಂಪತ್ತಿನಿಂದ ಕನ್ನಡಿಗರ ಕಣ್ಣು ತೆರೆಯಿಸಿದೆ.

1982ರಿಂದ ನಾವು ಕನ್ನಡದ ಕೆಲಸಗಳಿಗಾಗಿ ಪ್ರತಿ ಬುಧವಾರ ಸಂಜೆ 6-30ಕ್ಕೆ ಸಭೆ ಸೇರುತ್ತ ಬಂದಿದ್ದೇವೆ. ಅಂದು ರಜೆ ಇರಬಹುದು, ಹಬ್ಬ ಇರಬಹುದು, ಬೆಂಗಳೂರು ಬಂದ್ ಇರಬಹುದು. ಪ್ರತಿ ಬುಧವಾರವೂ ತಪ್ಪದೇ ಸೇರಿ ವಿಚಾರ ವಿನಿಮಯ ಮಾಡಿಕೊಳ್ಳುತ್ತೇವೆ. ಅಂತಹ ಸಭೆ ಸೇರಲು ಬೆಂಗಳೂರಿನ ಸರ್ಪಭೂಷಣ ಮಠವು ಅವಕಾಶ ಮಾಡಿಕೊಟ್ಟು ಕನ್ನಡ ಚಳವಳಿಯನ್ನೂ ನಮ್ಮನ್ನೂ ಬೆಳೆಸಿದೆ.

ನನಗೆ ಕನ್ನಡ ಕಾರ್ಯಕರ್ತರೊಡನೆ ಇರುವ ಸಂಬಂಧ ತೀರ ಆತ್ಮೀಯವಾದುದು. ಅವರ ಜೊತೆ ಕೆಲಸ ಮಾಡುತ್ತ ಅವರಿಂದ ಕನ್ನಡ ಪ್ರೇಮವನ್ನೂ ನಿಸ್ವಾರ್ಥ ಕಾರ್ಯವನ್ನೂ ಕಲಿತಿದ್ದೇನೆ. ಅವರು ನನಗೆ ಸ್ಫೂರ್ತಿಯ ಸೆಲೆಯಾಗಿದ್ದಾರೆ. 1990ರ ಅಕ್ಟೋಬರ್ 10ರಂದು ನಾನು ನಿವೃತ್ತಿ ಪಡೆದು ಅವರ ಜೊತೆ ಸೇರಿ ಕನ್ನಡದ ಕೆಲಸವನ್ನು ಮುಂದುವರಿಸಿದ್ದೇನೆ. ನಾವೆಲ್ಲ ಸೇರಿ ಏನು ಮಾಡಿದ್ದೇವೆ ಅದು ಕಡಮೆಯಾದರೂ ನಮ್ಮೆಲ್ಲ ಸಮಯ ಶ್ರಮವನ್ನೂ ಅದಕ್ಕೆ ಧಾರೆ ಎರೆದಿರುವುದರಿಂದ ನಮಗೆ ಒಂದು ಬಗೆಯ ತೃಪ್ತಿ ಇದೆ. ಆಗಬೇಕಾಗಿರುವ ಕೆಲಸವನ್ನು ಜ್ಞಾಪಿಸಿಕೊಂಡಾಗ ತೀವ್ರ ಅತೃಪ್ತಿ ನಮ್ಮೆಲ್ಲರನ್ನೂ ಕಾಡಲಾರಂಭಿಸುತ್ತದೆ.

**ನನ್ನ 'ಜೀವನ ದರ್ಶನ' :**

ನಾನು ಈ ತೀರ ಸಂಕ್ಷಿಪ್ತ ಆತ್ಮಕಥನದ ಆರಂಭದಲ್ಲಿ ಆಡಿದ ಜೀವನ ದರ್ಶನದ ಮಾತಿಗೆ ಬರುತ್ತೇನೆ. ನನ್ನ ಹಿನ್ನೆಲೆ, ವ್ಯಾಸಂಗ, ಸಂಪರ್ಕಗಳು, ಅನುಭವ ಇವೆಲ್ಲವೂ ನನ್ನ

ಜೀವನ ದರ್ಶನವೊಂದನ್ನು ರೂಪಿಸಿವೆ. ದೈವದ ಬಗ್ಗೆ ನನಗೆ ನಂಬಿಕೆ ಮಾತ್ರವಲ್ಲ, ಶ್ರದ್ಧೆ ಇದೆ. ಯಾವುದೋ ನಿಗೂಢ ಶಕ್ತಿಯೊಂದು ನನ್ನನ್ನು ಕೈ ಹಿಡಿದು ನಡೆಸಿದೆ. ದೇವಾಲಯಗಳಿಗೆ ನಾನು ಹೋಗದಿದ್ದರೂ ದೇವರ ಪೂಜೆ ಮಾಡದಿದ್ದರೂ ಉದ್ದಕ್ಕೂ ನಾನು ಅಂತರಂಗದಲ್ಲಿ ದಿನವೂ ದೈವಪ್ರಾರ್ಥನೆಯನ್ನು ಮಾಡುತ್ತೇನೆ. ನನ್ನ ಹೊರಗಿನ ಕ್ರಿಯೆ, ಒಳಗಿನ ಆಲೋಚನೆ ಎರಡೂ ಒಂದೇ ಆಗಿರುವಂತೆ ಅನುಗ್ರಹಿಸಲು ದೈವವನ್ನು ಪ್ರಾರ್ಥಿಸಿದ್ದೇನೆ. "ನಾನು ತಪ್ಪು ಮಾಡಿದರೆ ನಿರ್ದಯವಾಗಿ ಶಿಕ್ಷಿಸು. ನಾನು ತಪ್ಪು ಮಾಡದಂತೆ ನೋಡಿಕೋ. ನಾನು ತಪ್ಪು ಮಾಡಿದರೆ ಅದು ನಿನ್ನದೇ ತಪ್ಪು" ಎಂದು ದೇವರಿಗೆ ಹಲವು ಬಾರಿ ಹೇಳಿದ್ದೇನೆ. ಸತ್ಯ ಇಂದಲ್ಲ ನಾಳೆ ಗೆಲ್ಲುತ್ತದೆ ಎಂಬ ಅಚಲ ವಿಶ್ವಾಸದವನು ನಾನು. ನಾನು ಕಠೋರ ಸಂಕಲ್ಪವನ್ನು ಮಾಡಿದ್ದೇನೆ - ದೇವರನ್ನು ನಾನು ಬದುಕಿರುವಾಗಲೇ 'ನೋಡ'ಬೇಕು. ಇದು ಹುಚ್ಚು, ಭ್ರಮೆ ಎಂಬ ಪ್ರತಿಕ್ರಿಯೆಗಳು ಬರಬಹುದು ಎಂಬ ಅರಿವಿದ್ದರೂ ಅದನ್ನು ಇಲ್ಲಿ ಹೇಳಿಕೊಳ್ಳುತ್ತಿದ್ದೇನೆ.

ಮೊದಲಿನಿಂದ ನಾನು ಸ್ವಂತಿಕೆಯ ಆರಾಧಕ. ಇನ್ನೊಬ್ಬ ವ್ಯಕ್ತಿಯಿಂದ ಪ್ರಚೋದನೆ ಪಡೆಯಬಹುದು. ಆದರೆ ನಾನು ಆ ಇನ್ನೊಬ್ಬ ವ್ಯಕ್ತಿಯ ಪಡಿನೆಳಲಾಗಿರಕೂಡದು. ಈ ನನ್ನ ಗುಣವನ್ನು ಹಟಮಾರಿತನವೆಂದು, ಹುಂಬತನವೆಂದು ಕೆಲವರು ಭಾವಿಸಿರುವುದುಂಟು. ಯಾವುದೇ ನನ್ನ ಬಗೆಗಿನ ಮಾತಿನಲ್ಲಿ ಹುರುಳಿದ್ದರೆ ಅದನ್ನು ತೀರ ಗಂಭೀರವಾಗಿ ಮನಸ್ಸಿಗೆ ತೆಗೆದುಕೊಳ್ಳುತ್ತೇನೆ. ನಿರಾಧಾರ ಟೀಕೆ ನನ್ನ ಬಗ್ಗೆ ಬಂದರೆ ಅದನ್ನು ಅಷ್ಟೇ ಸ್ಪಷ್ಟವಾಗಿ ಉದಾಸೀನ ಮಾಡುತ್ತೇನೆ. ಎಲ್ಲರಿಗೂ ಎಲ್ಲ ರೀತಿಯಿಂದಲೂ ಒಳ್ಳೆಯವನಾಗಿರಬೇಕೆಂಬುದು ನನ್ನ ಜಾಯಮಾನದಲ್ಲಿಲ್ಲ. ನನ್ನ ಅಂತರಂಗದ ಧ್ವನಿಗೆ ಮಾತ್ರ ನನ್ನಲ್ಲಿ ಮಹತ್ವ. ಹಾಗೆಯೇ ಮೊದಲಿನಿಂದ ನಾನೊಬ್ಬ ಅನ್ವೇಷಕ. ಆ ಗುಣವೇ ನನ್ನನ್ನು ಸಂಶೋಧನೆಗೆ ಕೊಂಡೊಯ್ದುದು. ಆ ಗುಣವೇ, ನಿಜ ಹೇಳುವುದಾದರೆ ಕನ್ನಡ ಚಳವಳಿಗೂ ಕೊಂಡೊಯ್ದುದು. ಹಾಗೆ ನೋಡಿದರೆ, ಕನ್ನಡ ಚಳವಳಿಯೂ ನನ್ನ ಮಟ್ಟಿಗೆ ಇನ್ನೊಂದು ಬಗೆಯ ಸಂಶೋಧನೆಯೇ ಆಗಿದೆ.

ಲೌಕಿಕವಾಗಿ ನಾನು ಅತೃಪ್ತಿ ಪಡುವಂತಹುದೇನೂ ಇಲ್ಲ. ನನಗೆ ಕಾಲದಿಂದ ಕಾಲಕ್ಕೆ ದೇವರ ದಯದಿಂದ ಸಿಗಬೇಕಾದ ಜಾಗಗಳೆಲ್ಲ ಗೌರವಗಳೆಲ್ಲ ಸಿಕ್ಕುವು. ಅದಕ್ಕಾಗಿ ನಾನು ನೇರಮಾರ್ಗವನ್ನು ಎಂದೂ ಬಿಡಲಿಲ್ಲ ಎಂಬ ಸಮಾಧಾನ ಇದೆ. ಆದರೆ ನನಗಿರುವ ಅತೃಪ್ತಿ - ಒಂದು, ಕರ್ನಾಟಕದ ಇಂದಿನ ಸ್ಥಿತಿ ಮತ್ತು ಮುಂದಿನ ಭವಿಷ್ಯದ ಬಗ್ಗೆ; ಎರಡನೆಯದು, ನನ್ನ ನಿಜಸ್ವರೂಪವನ್ನು ತಿಳಿಯುವ ಬಗ್ಗೆ. ಎರಡನೆಯದನ್ನು ನಾನು ಜತನದಿಂದ ಗೌಪ್ಯವಾಗಿ ಇಟ್ಟುಕೊಂಡು ಬಂದಿದ್ದೇನೆ ಎಂದರೆ ಯಾರೂ ಆಶ್ಚರ್ಯ ಪಡಬೇಕಾಗಿಲ್ಲ. ಕನ್ನಡದ ಕೆಲಸ ನನಗೆ ಪ್ರಾಮಾಣಿಕತೆಯ ಕೆಲಸ, ಆ ಕಾರಣ ಅದು ದೈವಕ್ಕೆ ತೃಪ್ತಿಯನ್ನೂ ತರುವಂತಹುದಾಗಿದೆ, ಮತ್ತು ಕನ್ನಡದ ಕೆಲಸದ ಮಾರ್ಗ ನನ್ನನ್ನು ನನ್ನ ನಿಜಸ್ವರೂಪದ ಸಾಕ್ಷಾತ್ಕಾರದತ್ತ ಕೊಂಡೊಯ್ಯುವುದೆಂಬ ಅಚಲ ಶ್ರದ್ಧೆ ನನ್ನದಾಗಿದೆ. ಆರು ವರ್ಷಗಳಿಗೆ ಹಿಂದೆ ತುಮಕೂರು ಸಮೀಪದ ಸಿದ್ಧಗಂಗೆಯಿಂದ ಹಂಪೆಗೆ ಕಾಲ್ನಡಿಗೆಯಲ್ಲಿ

ನಡೆದು ಹೋದೆ. ಮತ್ತೆ ಕಳೆದ ವರ್ಷ (ರೈಲಲ್ಲಿ) ಹಂಪೆಗೆ ಹೋದೆ - ಆ ಎರಡೂ ಭೇಟಿಗಳು ನನ್ನಲ್ಲಿನ ಕನ್ನಡ ಕಾರ್ಯಕರ್ತನನ್ನು ಮತ್ತು 'ದಿವ್ಯದ ಯಾಚಕ' ನನ್ನು ಒಟ್ಟಿಗೆ ಬೆಸೆಯಲು ಸಹಾಯಕವಾದುವು.

**ಕೊನೆಯ ಮಾತು** : ವ್ಯಕ್ತಿ ತನ್ನ ಬದುಕಿನ ಪುಸ್ತಕವನ್ನು ನೆನಪಿಸಿಕೊಂಡು ಪುಸ್ತಕದ ಬದುಕನ್ನು ಮುಂದುವರಿಸಬೇಕು. ಪುಸ್ತಕದ ಬದುಕು ಬದುಕಿನ ಪುಸ್ತಕವನ್ನು ಬರೆಯಲು ಸಹಾಯವಾಗಬೇಕು : ಅವೆರೆರಡೂ ಒಂದೇ ಬಗೆಯ ಪುಸ್ತಕಗಳೇ.

# ಸಂಶೋಧನೆ* (ಒಂದು ಕಿರು ಕೈಪಿಡಿ)

## ಸಂಶೋಧನೆಯ ಅರ್ಥ ಮತ್ತು ಉದ್ದೇಶ

'ಸಂಶೋಧನೆ' (Research) ಎನ್ನುವ ಮಾತು ನಮ್ಮಲ್ಲಿ ಈಚೆಗೆ ಹೆಚ್ಚು ಹೆಚ್ಚಾಗಿ ಬಳಕೆಗೆ ಬರುತ್ತಿದೆ. ಸಂಶೋಧನೆಗಾಗಿ ವಿಶ್ವವಿದ್ಯಾನಿಲಯಗಳೂ ಸರ್ಕಾರವೂ ಹೇರಳವಾಗಿ ಧನವನ್ನು ವ್ಯಯಿಸಲು ಸಿದ್ಧವಾಗಿವೆ. ಸಂಶೋಧನೆ ನಡೆಸಲು ಅವು ವಿದ್ಯಾರ್ಥಿ ವೇತನಗಳನ್ನೂ ಧನಸಹಾಯವನ್ನೂ ನೀಡುತ್ತಿವೆ. ವಿಜ್ಞಾನದಲ್ಲಿ, ಸಾಮಾಜಿಕ ವಿಜ್ಞಾನಗಳಲ್ಲಿ, ಸಾಹಿತ್ಯದಲ್ಲಿ, ಭಾಷೆಯಲ್ಲಿ ನೂರಾರು ವಿದ್ಯಾರ್ಥಿಗಳೂ ವಿದ್ವಾಂಸರೂ ಸಂಶೋಧನೆಗಳಲ್ಲಿ ತೊಡಗಿದ್ದಾರೆ. ಅವರ ಸಂಶೋಧನೆಯ ಫಲಗಳು ಸಂಪ್ರಬಂಧಗಳ ಮೂಲಕ, ಗ್ರಂಥಗಳ ಮೂಲಕ ನಮಗೆ ಲಭ್ಯವಾಗುತ್ತಿವೆ. ಹೀಗೆ ಸಂಶೋಧನೆಯ ವಿಷಯದಲ್ಲಿ ಆಸಕ್ತಿ ಹೆಚ್ಚುತ್ತಿದೆ. ಸಂಶೋಧನೆ ಎಂದರೆ ಏನು ? ಸಂಶೋಧಕನ ಗುರಿ ಯಾವುದು ? ಸಂಶೋಧನೆಯಲ್ಲಿ ತೊಡಗಿರುವಾಗ ಅವನು ಎದುರಿಸಬೇಕಾದ ಸಮಸ್ಯೆಗಳು - ಇತ್ಯಾದಿ ಪ್ರಶ್ನೆಗಳಿಗೆ ಉತ್ತರಗಳನ್ನು ಕಂಡುಕೊಳ್ಳುವ ಒಂದು ಸಣ್ಣ ಪ್ರಯತ್ನ ಇಲ್ಲಿದೆ. ನಾನು ಸಾಹಿತ್ಯದ, ಸಂಸ್ಕೃತಿಯ ವಿದ್ಯಾರ್ಥಿ; ಅಲ್ಲದೆ ಈ ಪುಸ್ತಿಕೆಯಲ್ಲಿ ಬಹುಮಟ್ಟಿಗೆ ನನ್ನ ಅನುಭವಗಳನ್ನೇ ಗಮನದಲ್ಲಿಟ್ಟುಕೊಂಡು ವಿಚಾರ ಮಾಡಿದ್ದೇನೆ. ಆದ್ದರಿಂದ ಈ ಕೃತಿಗೆ ಎಷ್ಟೋಂದು ಮಿತಿಗಳಿವೆ ಎಂಬುದನ್ನು ವಾಚಕರು ಲಕ್ಷಿಸಬೇಕು. ಇದು ಸಂಶೋಧನೆಯನ್ನು ಕುರಿತಾದ ಸಮಗ್ರವೂ ಪ್ರೌಢವೂ ಆದ ವಿವೇಚನೆಯಲ್ಲ. ಮುಖ್ಯವಾಗಿ ನನ್ನ ಅನುಭವಗಳನ್ನೂ ಆಲೋಚನೆಗಳನ್ನೂ ಇತರರೊಂದಿಗೆ ಹಂಚಿಕೊಳ್ಳಲು ಮಾಡಿರುವ ಒಂದು ಪ್ರಯತ್ನ. ಇದರಿಂದ ಏನಾದರೂ ಇತರರಿಗೆ ಲಾಭವಾದರೆ ನನಗೆ ನಿಜವಾಗಿಯೂ ಸಂತೋಷ.

'ಸಂಶೋಧನ' ಎಂದರೆ ಶುದ್ಧಿಗೊಳಿಸು, ತಿದ್ದು ಎಂದರ್ಥ. ಪರ್ಯಾಯವಾಗಿ ಇದಕ್ಕೆ 'ಹುಡುಕು' ಎಂಬರ್ಥ ಬಂದು ಈ ಅರ್ಥವೇ ಈಗ ಪ್ರಬಲವಾಗಿದೆ. ಸಂಶೋಧನೆಯು ಹುಡುಕುವಿಕೆಯನ್ನು ಸೂಚಿಸುತ್ತದೆ. ಲೋಕದಲ್ಲಿ ನಮಗೆ ಅನೇಕ ಸಂಗತಿಗಳು ಗೊತ್ತಿರುವುದಿಲ್ಲ. ಅಥವಾ ಅವುಗಳು ಗೊತ್ತಿದ್ದರೂ, ಅಲ್ಲಿ ಕೆಲವಾರು ಸಮಸ್ಯೆಗಳು ಉಳಿದುಕೊಂಡಿರುತ್ತವೆ. ಇನ್ನು ಕೆಲವು ಸಂಗತಿಗಳು ಇರುವುದು ಮಾತ್ರ ಗೊತ್ತು, ಆದರೆ ಅವುಗಳ ಸ್ವರೂಪ ಮಾತ್ರ ಸ್ಪಷ್ಟವಾಗಿರುವುದಿಲ್ಲ. ವಾಸ್ತವವಾಗಿ ಇರುವ, ಆದರೆ ನಮಗೆ ಗೊತ್ತಿಲ್ಲದ ಸಂಗತಿಗಳನ್ನು ಹುಡುಕಿ ಪ್ರಕಟಿಸುವುದೇ ಸಂಶೋಧನೆಯ ಉದ್ದೇಶ. ಎಂದರೆ ಸತ್ಯವನ್ನು ಪ್ರಕಟಿಸುವುದು ಸಂಶೋಧಕನ ಕೆಲಸ. ಅಲ್ಲಿ ಸಂಶೋಧಕನ ವೈಯಕ್ತಿಕವಾದ ಅನ್ನಿಸುವಿಕೆಗಳಿಗಾಗಲಿ,

ಕಲ್ಪನೆಗಾಗಲಿ ಬೆಲೆಯೇ ಇಲ್ಲ. ಅವನು ವಾಸ್ತವ ಸಂಗತಿಯೊಂದರ ಇರುವಿಕೆಯನ್ನು ಆಧಾರಗಳ ಸಹಾಯದಿಂದ ಊಹಿಸಬಹುದೇ ಹೊರತು ಅದನ್ನು ಕಲ್ಪಿಸುವಂತಿಲ್ಲ. ಇಲ್ಲಿ ಸಾಹಿತ್ಯಕ್ಕೂ ಸಂಶೋಧನೆಗೂ ಇರುವ ವ್ಯತ್ಯಾಸ ಎದ್ದು ಕಾಣುತ್ತದೆ. ಕವಿ ತನ್ನ ಕಲ್ಪನೆಯಲ್ಲಿ ತನ್ನದೇ ಆದ ಒಂದು ಸಂಗತಿಯನ್ನು ಕಟ್ಟಿ ಚಿತ್ರಿಸಬಹುದು. ಆದರೆ ಸಂಶೋಧಕ ತನ್ನಿಂದ ಸಂಪೂರ್ಣವಾಗಿ ಬೇರೆಯಾದ ಸಂಗತಿಯನ್ನು ಕಂಡುಹಿಡಿದು ಅದನ್ನು ಮಾತ್ರ ಹೇಳಬೇಕು. ವಾಸ್ತವ ಸಂಗತಿ ಅವನ ಮೂಲಕ ಪ್ರಕಾಶಕ್ಕೆ ಬರುತ್ತದೆ. ಆದ್ದರಿಂದ ಅವನದು ಸಂಪೂರ್ಣವಾಗಿ ವಸ್ತುನಿಷ್ಠವಾದ ದೃಷ್ಟಿ.

ಸಂಶೋಧನೆಯ ಉದ್ದೇಶ ಸತ್ಯವನ್ನು ಕಂಡುಹಿಡಿಯುವುದು ಎಂದು ಹಿಂದೆ ಹೇಳಿದೆ. ಆದರೆ ಅದಕ್ಕಿಂತ ಹೀಗೆ ಹೇಳುವುದು ಹೆಚ್ಚು ಸೂಕ್ತ - ಸಂಶೋಧನೆಯೆನ್ನುವುದು ಸತ್ಯವನ್ನು ಕಾಣಲು ಮಾಡುವ ಒಂದು ಪ್ರಾಮಾಣಿಕ ಪ್ರಯತ್ನ. ಏಕೆಂದರೆ ಒಬ್ಬ ಸಂಶೋಧಕ ಬಹು ಕಷ್ಟಪಟ್ಟು ಅನೇಕ ಆಧಾರಗಳನ್ನು ಹುಡುಕಿ ಅವುಗಳನ್ನು ವ್ಯಾಖ್ಯಾನಿಸಲು ಪ್ರಯತ್ನಪಟ್ಟರೂ ಅವನಿಗೆ ಸತ್ಯದ ದರ್ಶನವಾಗದೆಯೇ ಹೋಗಿರಬಹುದು, ಅವನು ಯಾವ ಗಂಟನ್ನು ಬಿಡಿಸಲು ಹೊರಟಿದ್ದನೋ ಅದರಲ್ಲಿ ಅವನು ವಿಫಲನಾಗಿರಬಹುದು. ಅವನ ಈ ವೈಫಲ್ಯವನ್ನು ಕಂಡುಕೊಂಡ ಇನ್ನೊಬ್ಬ ಅದೇ ಜಾಡನ್ನು ಹಿಡಿದು ಇನ್ನೂ ಮುಂದೆ ಹೋಗಿ ಸತ್ಯದ ಮೇಲೆ ಸ್ವಲ್ಪ ಬೆಳಕನ್ನು ಚೆಲ್ಲಿರಬಹುದು. ಇನ್ನೊಬ್ಬ ಇವರಿಬ್ಬರ ಪ್ರಯತ್ನಗಳನ್ನೂ ಉಪಯೋಗಿಸಿಕೊಂಡು ಆ ಸತ್ಯವನ್ನು ಸಂಪೂರ್ಣವಾಗಿ ಪ್ರಕಟಿಸಿರಬಹುದು. ಇದರಿಂದ ಮೂರನೆಯವನು ಮಾತ್ರ ನಿಜವಾದ ಸಂಶೋಧಕ, ಎರಡನೆಯವನು ಅಂಶತಃ ಸಂಶೋಧಕ, ಮೊದಲನೆಯವನು ಸಂಶೋಧಕನೇ ಅಲ್ಲ ಎಂಬ ತೀರ್ಮಾನಕ್ಕೆ ಬರುವುದು ಬಹು ದೊಡ್ಡ ತಪ್ಪಾಗುತ್ತದೆ. ಮೂರನೆಯವನ ಯಶಸ್ಸಿಗೆ ಮೊದಲನೆಯ ಇಬ್ಬರ ಪ್ರಯತ್ನಗಳೂ ಅಪಜಯಗಳೂ ಕಾರಣವಾಗಿವೆ. ಅವರಿಬ್ಬರ ಹೆಗಲ ಮೇಲೆ ಇವನು ನಿಂತದ್ದರಿಂದ ಇವನ ಕೆಲಸವು ಸುಲಭವಾಯಿತು, ಫಲವೂ ದೊರಕಿತು. ಆದ್ದರಿಂದ ಆ ಸತ್ಯ ಸಂಗತಿಯನ್ನು ಕಂಡುಹಿಡಿದ ವ್ಯಕ್ತಿಗೆ ಎಷ್ಟು ಗೌರವ ಸಲ್ಲಬೇಕೋ ಅಷ್ಟೇ ಗೌರವವು ಇತರ ಇಬ್ಬರಿಗೂ ಸಲ್ಲಬೇಕಾಗುತ್ತದೆ. ನಾವು ಸಂಶೋಧಕನನ್ನು ಗುರುತಿಸುವುದು ಅವನು ಕಂಡುಹಿಡಿದ ಸತ್ಯದಿಂದ ಅಲ್ಲ, ಆ ಸತ್ಯವನ್ನು ಕಂಡುಹಿಡಿಯಲು ಮಾಡಿದ ಪ್ರಯತ್ನದಿಂದ.

ಆದ್ದರಿಂದ ಸಂಶೋಧನ ಕ್ಷೇತ್ರದಲ್ಲಿ ವ್ಯಕ್ತಿಗಳು ನೆಪ ಮಾತ್ರ. ವಾಸ್ತವ ಸಂಗತಿ ಮುಖ್ಯ, ಅದರ ಪ್ರಕಾಶನ ಮುಖ್ಯ. ಆದರೆ ಈ ಹೇಳಿಕೆಯನ್ನು ತಪ್ಪು ತಿಳಿಯಬಾರದು. ಸಂಶೋಧನ ಕ್ಷೇತ್ರದಲ್ಲಿ ನಡೆಯುವ ಕೆಲಸವನ್ನು ಒಂದು ಕೋಟೆಗಾಳೆಗಕ್ಕೆ ಹೋಲಿಸಬಹುದು. ಶತ್ರುವಿನ ಕೋಟೆಯನ್ನು ಹಿಡಿಯುವುದು ಇಲ್ಲಿ ಮುಖ್ಯ ಉದ್ದೇಶ. ಅದಕ್ಕಾಗಿ ಸಾವಿರಾರು ಜನರು ಪ್ರಯತ್ನಪಡುತ್ತಾರೆ. ಮೊದಲು ಮುಂದೆ ನುಗ್ಗಿದವರು ಶತ್ರುಗಳಿಂದ ಹತರಾಗುತ್ತಾರೆ. ಅವರ ಹೆಣಗಳನ್ನೇ ತುಳಿದುಕೊಂಡು ಹಿಂದಿನವರು ಇನ್ನೂ ಮುಂದಕ್ಕೆ ನುಗ್ಗುತ್ತಾರೆ. ಅವರೂ ಮಡಿಯಬಹುದು. ಅವರ ಹೆಣಗಳನ್ನು ತುಳಿದುಕೊಂಡು ಹಿಂದಿನವರು ಇನ್ನೂ ಮುಂದೆ

ನುಗ್ಗುತ್ತಾರೆ, ಕೋಟೆ ಹಿಡಿಯುತ್ತಾರೆ. ಇಲ್ಲಿ ಗೆದ್ದು ಬದುಕಿದವರಿಗೆ ಎಷ್ಟು ಗೌರವವೋ ಅದಕ್ಕೂ ಮಿಗಿಲಾದ ಗೌರವ ದೊರಕುತ್ತದೆ, ಗೆಲುವು ದೊರೆಯುವ ಮುನ್ನವೇ ಸತ್ತ ವ್ಯಕ್ತಿಗಳಿಗೆ.

ಆದ್ದರಿಂದ ಸಂಶೋಧನೆ ಎನ್ನುವುದು ಜ್ಞಾನದ ದಿಗಂತವನ್ನು ವಿಸ್ತರಿಸುವ ಕಾರ್ಯವೂ ಹೌದು. ಸಂಶೋಧಕ ತನ್ನ ಹಿಂದಿನವರು ಒಂದು ಸಮಸ್ಯೆಯನ್ನು ಬಿಡಿಸ ಹೋಗಿ ಅದರ ಚರ್ಚೆಯನ್ನು ಎಲ್ಲಿಗೆ ತಂದು ನಿಲ್ಲಿಸಿದರೋ ಅಲ್ಲಿಂದ ಆ ಚರ್ಚೆಯನ್ನು ಮುಂದುವರಿಸುತ್ತಾನೆ. ಆ ಚರ್ಚೆಯನ್ನು ಅವನೇ ಕೊನೆ ಮುಟ್ಟಿಸಬಹುದು, ಅಥವಾ ಅವನಾದ ಮೇಲೆ ಬಂದವರು ಆ ಕೆಲಸವನ್ನು ಮಾಡಬಹುದು. ಆದ್ದರಿಂದ ಸಂಶೋಧನೆ ಎನ್ನುವುದು ಸತ್ಯವನ್ನು ಕಾಣಬೇಕೆಂಬ ಉತ್ಕಟ ಅಪೇಕ್ಷೆಯುಳ್ಳ ವ್ಯಕ್ತಿಯೊಬ್ಬನ ಒಂದು ಪ್ರಾಮಾಣಿಕ ಪ್ರಯತ್ನ. ಇಂತಹ ಪ್ರಯತ್ನವನ್ನು ಕೈಗೊಳ್ಳುವವನೇ ಸಂಶೋಧಕ.

ಸಂಶೋಧನೆ ಎಂದರೆ ಏನು ಎಂದು ಬಹು ಸ್ಥೂಲವಾಗಿ ಮೇಲೆ ನಿರ್ದೇಶಿಸಲಾಯಿತು. ಆದರೆ ಯಾವುದು ಸಂಶೋಧನೆ, ಯಾವುದು ಸಂಶೋಧನೆ ಅಲ್ಲ ಎಂದು ನಿರ್ಣಯಿಸುವುದು ಬಹಳ ಕಷ್ಟದ ಕೆಲಸ. ಇತರರು ಹೇಳಿದ್ದನ್ನೇ ಇನ್ನೊಂದು ರೀತಿಯಲ್ಲಿ ಹೇಳುವುದು ಸಂಶೋಧನೆ ಅಲ್ಲ. ಹೇಳಿದ್ದರಲ್ಲಿ ಏನಾದರೂ ಹೊಸತು ಇರಬೇಕು. ಆದರೆ ಸೃಜನಾತ್ಮಕ ಸಾಹಿತ್ಯದಲ್ಲಿಯೂ ಹೊಸತನವಿರುತ್ತದೆ. ಆದ್ದರಿಂದ ಸಂಶೋಧನೆ ಎಂದರೆ ಹೊಸತನ್ನು ಹೇಳುವುದು ಎಂದು ಮಾತ್ರ ಹೇಳಿದರೆ ಸಾಲದು. ಆಧಾರಗಳನ್ನು ಸಂಗ್ರಹಿಸಿ, ಅವುಗಳ ಸಹಾಯದಿಂದ ಒಂದು ಸಂಗತಿಯ ಮೇಲೆ ಹೊಸ ಬೆಳಕನ್ನು ಬೀರುವುದು ಎಂದು ಹೇಳಿದರೆ, ವಿಮರ್ಶೆಯೂ ಆ ಕೆಲಸವನ್ನು ಮಾಡುತ್ತದೆಯಲ್ಲವೇ ಎಂಬ ಆಕ್ಷೇಪಣೆಗೆ ಅವಕಾಶವಿದೆ. ಪ್ರಕಟವಾಗದೇ ಇರುವ ಕೃತಿಯೊಂದನ್ನು ಕಂಡುಹಿಡಿದು ಅಥವಾ ಅದರ ಪ್ರತಿಗಳನ್ನು ಸಂಗ್ರಹಿಸಿ ಆ ಕೃತಿಯನ್ನು ಶಾಸ್ತ್ರೀಯವಾಗಿ ಸಂಪಾದಿಸಿ ಪ್ರಕಟಿಸುವುದು ಸಂಶೋಧನೆಯಾದರೆ ಹಾಗೆ ಪ್ರಕಟಿತವಾದ ಕೃತಿಯನ್ನು ವಿಶ್ಲೇಷಿಸುವುದು, ಗುಣಾವಗುಣಗಳನ್ನು ಕುರಿತು ವಿಚಾರ ಮಾಡುವುದು ವಿಮರ್ಶೆ. ವಿಮರ್ಶೆಯಲ್ಲಿ ವಿಮರ್ಶಕನ ಸ್ವಂತ ಅನ್ನಿಸುವಿಕೆ, ಅನುಭವಗಳು ಮುಖ್ಯ. ಅಲ್ಲಿ ಭಿನ್ನ ವ್ಯಾಖ್ಯಾನಗಳಿಗೆ ಅವಕಾಶವಿದೆ. ಅದು ವಸ್ತುನಿಷ್ಠವಾದರೂ ವ್ಯಕ್ತಿನಿಷ್ಠವೂ ಹೌದು. ಸಂಶೋಧನೆ ಸಂಪೂರ್ಣವಾಗಿ ವಸ್ತುನಿಷ್ಠ.

ಸಂಶೋಧನೆಯು ಸಾಮಗ್ರಿ ಸಂಗ್ರಹ ಮತ್ತು ವ್ಯಾಖ್ಯಾನಗಳೆರಡನ್ನೂ ಒಳಗೊಳ್ಳುತ್ತದೆ (ಇದರ ವಿವರಗಳು ಮುಂದೆ ಬರುತ್ತವೆ). ಸಂಶೋಧನೆಯ ದೃಷ್ಟಿಯಿಂದ ಸಾಮಗ್ರಿ ಸಂಗ್ರಹ ಮಾಡುವುದು ಅಥವಾ ಮುಂದಿನವರ ಸಂಶೋಧನೆಗೆ ಸಹಾಯಕವಾಗಲಿ ಎಂಬ ದೃಷ್ಟಿಯನ್ನಿಟ್ಟುಕೊಂಡು ಸಾಮಗ್ರಿ ಸಂಗ್ರಹ ಮಾಡುವುದೂ ಸಂಶೋಧನೆಯೆನ್ನಿಸಿಕೊಳ್ಳುತ್ತದೆ. ಬರಿಯ ವಿಷಯ ಸಂಗ್ರಹವು ಸಂಶೋಧನೆಯೆನ್ನಿಸಿಕೊಳ್ಳುವುದಿಲ್ಲ. ವ್ಯಾಖ್ಯಾನದ ವಿಷಯದಲ್ಲಿ ಸ್ವಲ್ಪ ಎಚ್ಚರ ಅಗತ್ಯ. ವ್ಯಾಖ್ಯಾನದಲ್ಲಿ ಗಂಭೀರ ವ್ಯಾಖ್ಯಾನ ಉಂಟು, ಚಮತ್ಕಾರದ ವ್ಯಾಖ್ಯಾನ ಉಂಟು. ಹತ್ತು ಜನರು ಬರೆದ ಲೇಖನಗಳನ್ನು ಗ್ರಂಥಗಳನ್ನು ಓದಿ, ಅಲ್ಲಿಂದ

ವಿಷಯಗಳನ್ನು ಸಂಗ್ರಹಿಸಿ, ಒಂದು ಸಂಗತಿಗೆ ಸಂಬಂಧಿಸಿದಂತೆ ಚಮತ್ಕಾರದ ಆಕರ್ಷಕ ವ್ಯಾಖ್ಯಾನವನ್ನು ನೀಡುವುದು ಸಂಶೋಧನೆಯಲ್ಲ. ಇಂತಹ ವ್ಯಾಖ್ಯಾನಗಳು ತಮ್ಮ ರಂಗಿನಿಂದ ಬಹಳ ಜನರನ್ನು ಆಕರ್ಷಿಸುತ್ತವೆ, ನಿಜ. ಆದರೆ ಅವುಗಳ ವಿಷಯದಲ್ಲಿ ಜಾಗರೂಕರಾಗಿರುವುದು ಕ್ಷೇಮಕರ. ಸಂಶೋಧಕ ಆದಷ್ಟು ತಾನೇ ಮೂಲ ಆಕರಗಳಿಗೆ ಹೋಗುವುದು ಒಳ್ಳೆಯದು. ಅದು ಇಲ್ಲದಿದ್ದರೆ, ಇತರರ ಬರಹಗಳನ್ನು ಓದಿ, ಅಲ್ಲಿರುವ ಸಾಮಗ್ರಿಯನ್ನು ತೀವ್ರ ಚಿಂತನೆಗೆ ಒಳಗುಮಾಡಿ, ಒಂದು ಸಂಗತಿಗೆ ಸಂಬಂಧಿಸಿದಂತೆ ಹೊಸ ಬೆಳಕು ಬೀರಿದರೆ, ಸರ್ವ ಸಮ್ಮತವಾದ ವ್ಯಾಖ್ಯಾನವೊಂದನ್ನು ನೀಡಿದರೆ ಅಂತಹ ಕಾರ್ಯವು ಮಾತ್ರ ಸಂಶೋಧನೆ ಎನ್ನಿಸಿಕೊಳ್ಳುತ್ತದೆ. ಅಥವಾ ಒಬ್ಬ ಲೇಖಕ ತನ್ನ ಒಂದು ಲೇಖನದಲ್ಲಿ ತನಗೆ ಲಭ್ಯವಾದ ಸಾಮಗ್ರಿಯನ್ನು ಸರಿಯಾಗಿ ವ್ಯಾಖ್ಯಾನಿಸದೆ ಒಂದು ತಪ್ಪು ತೀರ್ಮಾನಕ್ಕೆ ಬಂದಿದ್ದರೆ, ಇನ್ನೊಬ್ಬ ಲೇಖಕ ಅದೇ ಸಾಮಗ್ರಿಯ ಸಹಾಯದಿಂದ ಒಂದು ಸರಿಯಾದ ತೀರ್ಮಾನಕ್ಕೆ ಬಂದರೆ ಅದಕ್ಕೂ ಸಂಶೋಧನೆಯ ಬೆಲೆ ಕೊಡಬೇಕು.

**ಸಂಶೋಧಕ**

ಸಂಶೋಧಕನ ಗುರಿ ಸತ್ಯವನ್ನು ಕಾಣುವುದು. ಅದಕ್ಕಾಗಿ ಅವನು ಪ್ರಯತ್ನಪಡುತ್ತಾನೆ. ಇದರಿಂದ ಅವನಿಗೆ ಕೀರ್ತಿ ಬರಬಹುದು, ಅಥವಾ ಅಪಕೀರ್ತಿಯೂ ಬರಬಹುದು. ಇವುಗಳು ಸತ್ಯದ ಮುಂದೆ ಅವನಿಗೆ ಅಮುಖ್ಯವಾಗಿ ಕಾಣುತ್ತವೆ.

'ಸತ್ಯವನ್ನು ಕಾಣುವುದು' ಎಂಬ ಮಾತು ಎಷ್ಟು ಸರಳವೋ ಕಾರ್ಯತಃ ಅದು ಅಷ್ಟು ಸುಲಭವಲ್ಲ. "ನಾನು ಸಂಶೋಧಕನಾಗಬೇಕು, ಸಂಶೋಧಕನಾಗಿ ಸತ್ಯವನ್ನು ಕಾಣಬೇಕು" ಎಂದು ಪ್ರತಿಜ್ಞೆ ಮಾಡಿ ಹೊರಡುವವರೆಲ್ಲರೂ ಸಂಶೋಧಕರಾಗಲಾರರು. ಮೃಗಗಳೇ ಇಲ್ಲದ ಕಾಡಿಗೆ ಹೋಗಿ, 'ನಾನು ಮೃಗಗಳನ್ನು ಕೊಂದು ಬೇಟೆಗಾರನೆನ್ನಿಸಿಕೊಳ್ಳಬೇಕು' ಎಂದು ಆಸೆಪಟ್ಟರೆ ಪ್ರಯೋಜನವೇನು? ಇಲ್ಲವೇ ಅವನು ಮೃಗಗಳನ್ನು ಕಣ್ಣಾರೆ ಕಂಡಿರಬೇಕು, ಅಥವಾ ಇತರರಿಂದ ಅವು ಇರುವ ಸಂಗತಿಯನ್ನು ತಿಳಿದಿರಬೇಕು. ಹಾಗೆಯೇ ಸಂಶೋಧಕ ತನ್ನ ಕ್ಷೇತ್ರದಲ್ಲಿ ಏನು ಸಮಸ್ಯೆಗಳಿವೆ, ಇತರರು ಅವುಗಳನ್ನು ಬಿಡಿಸಲು ಎಷ್ಟು ಪ್ರಯತ್ನಿಸಿದ್ದಾರೆ - ಇವುಗಳನ್ನು ತಾನಾಗಿ ಅರಿತಿರಬೇಕು, ಅಥವಾ ಇತರರಿಂದ ಅವುಗಳನ್ನು ತಿಳಿದಿರಬೇಕು. ಸಮಸ್ಯೆಗಳನ್ನು ಅರಿಯುವುದು ಸಂಶೋಧನೆಯ ಮೊದಲ ಹೆಜ್ಜೆ, ಅತ್ಯಂತ ಪ್ರಮುಖವಾದ ಹೆಜ್ಜೆ. ಇದನ್ನು ರೋಗಪರೀಕ್ಷೆಗೆ ಹೋಲಿಸಬಹುದು. ದೇಹದಲ್ಲಿ ಎಲ್ಲಿ ಯಾವ ತೊಂದರೆಯಿದೆ ಎಂಬುದನ್ನು ಕಂಡುಹಿಡಿಯುವುದು ಬಹಳ ಮುಖ್ಯವಾದುದು, ಬಹುಶಃ ಹೆಚ್ಚು ಕಷ್ಟಕರವಾದುದು. ಮುಂದೆ ಬರುವ ಚಿಕಿತ್ಸೆ ಇಷ್ಟು ಕಷ್ಟಕರವಾಗಿರುವುದಿಲ್ಲ. ಹಾಗೆಯೇ ಸಂಶೋಧಕ ಎಲ್ಲಿ ಸಮಸ್ಯೆಗಳಿವೆ, ಯಾವ ಕ್ಷೇತ್ರದಲ್ಲಿ ಕೆಲಸ ಆಗಿಲ್ಲ ಅಥವಾ ಸರಿಯಾಗಿ ಕೆಲಸ ಆಗಿಲ್ಲ, ಎಲ್ಲಿ ತೊಂದರೆಗಳಿವೆ ಇತ್ಯಾದಿಗಳನ್ನು ಅರಿಯುವುದು ಬಹಳ ಮುಖ್ಯವಾದುದು.

ಒಂದು ಸಮಸ್ಯೆ ಅವನಿಗೆ ಗೋಚರವಾದಾಗ, ಅವನು ಅದನ್ನು ಉಪೇಕ್ಷೆ ಮಾಡಿದರೆ ಬಹುಶಃ ಆ ಸಮಸ್ಯೆ ಹಾಗೆಯೇ ಉಳಿದುಬಿಡುತ್ತದೆ. ಅವನಿಗೆ ಅದರ ವಿಷಯದಲ್ಲಿ

ಕುತೂಹಲ ಮೂಡಬೇಕು. ಎಲ್ಲ ಸಂಶೋಧನೆಯ ಮೂಲದಲ್ಲೂ ಈ ಕುತೂಹಲವಿರುತ್ತದೆ. ಇತರರು ಸಮಸ್ಯೆಗಳನ್ನೆದುರಿಸಿದಾಗ ಇಲ್ಲವೇ ಅವನ್ನು ಉಪೇಕ್ಷೆ ಮಾಡುತ್ತಾರೆ ಅಥವಾ ತಮ್ಮ ಸಮಾಧಾನಕ್ಕೆ ತಾವೇ ಒಂದು ಉತ್ತರ ಕಲ್ಪಿಸಿಕೊಂಡು ತೃಪ್ತರಾಗುತ್ತಾರೆ. ಈ ತೋರಿಕೆಯ ತೃಪ್ತಿ ಸಂಶೋಧಕನ ನಿಜವಾದ ಶತ್ರು. ಅದರ ವಿಷಯದಲ್ಲಿ ಎಚ್ಚರಿಕೆಯಿಂದಿರಬೇಕು. ಅವನಿಗೆ ಒಂದು ಸಮಸ್ಯೆ ತೋರಿ ಬಂದಾಗ, ಅದು ಅವನ ಮನಸ್ಸಿನಲ್ಲಿ ಏಳಿಸುವ ಪ್ರತಿಕ್ರಿಯೆಯೆಂದರೆ ಸಂಶಯ. ಇದು ಅವನ ಮನಸ್ಸಿನ ಆಳದಲ್ಲಿ ಗಾಢವಾಗಿ ಮೂಡಿಬಿಡುತ್ತದೆ ಸಂಶೋಧಕನೊಬ್ಬ ಸಂಶಯ ಪಿಶಾಚಿಗ್ರಸ್ತ. ಒಂದು ಸಮಸ್ಯೆಗೆ ಪರಿಹಾರವು ಕಂಡುಬಂದಾಗ, ಮೊದಲು ಅದರ ವಿಷಯದಲ್ಲಿ ಮಾತ್ರವಲ್ಲ, ಅದಕ್ಕಿಂತ ಹೆಚ್ಚಾಗಿ ತನ್ನ ವಿಷಯದಲ್ಲಿಯೇ, ತನ್ನ ತೀರ್ಮಾನಗಳ ವಿಷಯದಲ್ಲಿಯೇ ಸಂಶಯವಿರುತ್ತದೆ. ಆದ್ದರಿಂದ ಒಂದು ಸಮಸ್ಯೆ ಸಮರ್ಪಕವಾಗಿ ಪರಿಹಾರವಾಗುವವರೆಗೆ ಅವನು ಸಂಶಯವನ್ನು ಉಳಿಸಿಕೊಳ್ಳಲು ಬಯಸುತ್ತಾನೆ.

ಒಮ್ಮೆ ಒಂದು ಸಮಸ್ಯೆ ಅವನ ಮನಸ್ಸನ್ನು ಹೊಕ್ಕುಬಿಟ್ಟರೆ ಅದನ್ನು ಬಿಡಿಸುವವರೆಗೆ ಅವನಿಗೆ ಸಮಾಧಾನವಿಲ್ಲ. ಅದು ದೊಡ್ಡದಿರಬಹುದು, ಸಣ್ಣದಿರಬಹುದು. ಅದನ್ನು ಬಿಡಿಸಿದರೆ ಏನಾದರೂ ಉಪಯೋಗಕ್ಕೆ ಬರಬಹುದು ಅಥವಾ ಅದು ಮುಂದೆ ಎಂದಾದರೂ ಉಪಯೋಗಕ್ಕೆ ಬರಬಹುದೆಂಬ ಅರಿವಿರಬಹುದು ಅಥವಾ ಏನೂ ಉಪಯೋಗವಾಗದೇ ಇರಬಹುದು. ಇತರರಿಗೆ ಆ ಸಮಸ್ಯೆಯ ವಿಷಯದಲ್ಲಿ ತಲೆಕೆಡಿಸಿಕೊಳ್ಳುವುದು ವ್ಯರ್ಥ ಎಂದು ಅನ್ನಿಸಬಹುದು. ಆದರೆ ಒಂದು ಸಂಗತಿಯನ್ನು ನೆನಪಿಡಬೇಕು - ಸಂಶೋಧಕನ ಮುಂದೆ ಇರುವುದು ಸಮಸ್ಯೆ ಮಾತ್ರ, ಅದರಲ್ಲಿ ದೊಡ್ಡದು ಸಣ್ಣದು, ಉಪಯುಕ್ತ ಅನುಪಯುಕ್ತ ಎಂಬ ಭೇದವಿಲ್ಲ. ಎಲ್ಲ ಸಮಸ್ಯೆಗಳಿಗೂ ಅವನ ದೃಷ್ಟಿಯಲ್ಲಿ ಸಮಾನ ಸ್ಥಾನವಿದೆ. ಇತರರಿಗೆ ದೊಡ್ಡ ಸಮಸ್ಯೆಯೆಂದು ಕಾಣಿಸಿದ ಸಮಸ್ಯೆಯನ್ನು ಬಿಡಿಸಿದಾಗ ಅವನಿಗೆ ಎಷ್ಟು ಸಂತೋಷವೋ ಅಷ್ಟೇ ಸಂತೋಷ ಸಣ್ಣ ಸಮಸ್ಯೆಯನ್ನು ಬಿಡಿಸಿದಾಗ.

ಒಮ್ಮೆ ಒಂದು ಸಮಸ್ಯೆ ಅವನ ಮನಸ್ಸಿನಲ್ಲಿ ಹೊಕ್ಕರೆ ಮನಸ್ಸು ಅದನ್ನು ಬಿಡಿಸುವುದರಲ್ಲೇ ಸದಾ ಮಗ್ನವಾಗುತ್ತದೆ. ಬಿಡುವು ಸಿಕ್ಕಾಗ, ನಿದ್ದೆ ಬಾರದಿದ್ದಾಗ, ಬಸ್ಸಿನಲ್ಲಿ ಕುಳಿತಿರುವಾಗ ಅದನ್ನೇ ಕುರಿತು ಚಿಂತನೆ ನಡೆಯುತ್ತದೆ. ಆ ಸಮಸ್ಯೆಯ ಮೇಲೆ ಎಲ್ಲಿಂದ ಬೆಳಕು ಬರಬಹುದೆಂದು ನಿರೀಕ್ಷಿಸುವನೋ ಅಲ್ಲೆಲ್ಲಾ ಅದಕ್ಕೆ ಸಂಬಂಧಿಸಿದ ಸಾಮಗ್ರಿಯನ್ನು ಅವನು ಸಂಗ್ರಹಿಸುತ್ತಾನೆ. ಯಾರೋ ಮಾತನಾಡುತ್ತಿದ್ದಾಗ ಅಕಸ್ಮಾತ್ ಆಡಿದ ಮಾತು, ಎಲ್ಲೋ ಹೋಗುತ್ತಿರುವಾಗ ನೋಡಿದ ಒಂದು ಊರಿನ ಹೆಸರು, ಕೇಳಿದ ಒಬ್ಬ ವ್ಯಕ್ತಿಯ ಹೆಸರು, ಯಾವುದೋ ಪುಸ್ತಕವನ್ನು ಓದುತ್ತಿರುವಾಗ ಅಲ್ಲಿ ಅಕಸ್ಮಾತ್ ಸಿಕ್ಕ ಒಂದು ಸೂಚನೆ - ಇವು ಸಣ್ಣ ಸಂಗತಿಗಳಾದರೂ ಅವನು ಚಿಂತಿಸುತ್ತಿರುವ ಸಮಸ್ಯೆ ಮೇಲೆ ಥಳಕ್ಕನೆ ಮಿಂಚಿ ಬೆಳಕನ್ನು ಬೀರಬಹುದು. ಅವನು ಆ ಸಮಸ್ಯೆಗೆ ಸಂಬಂಧಿಸಿದ ಸಾಮಗ್ರಿಯನ್ನು ಸಂಗ್ರಹಿಸಿಯಾದ ಮೇಲೆ ಅದನ್ನು ವಿವೇಚನೆಗೆ ಈಡು ಮಾಡುತ್ತಾನೆ. ಸಾಮಗ್ರಿ ಅಥವಾ ಸಾಕ್ಷ್ಯಾಧಾರಗಳು ಯಾವ ದಿಕ್ಕಿಗೆ ಕೊಂಡೊಯ್ಯುತ್ತವೆ ಅತ್ತ ನಡೆಯುತ್ತಾನೆ. ಅವುಗಳು

ಧ್ವನಿಸುವ ಸತ್ಯವನ್ನು ಮಾತ್ರ ನುಡಿಯುತ್ತಾನೆ. ಅವನು ಸಂಗ್ರಹಿಸಿದ ಸಾಕ್ಷ್ಯಾಧಾರಗಳಿಂದಲೂ ಸಮಸ್ಯೆ ಪರಿಹಾರವಾಗದಿದ್ದರೆ, ಇನ್ನೂ ಹೆಚ್ಚು ಆಧಾರ ಸಾಮಗ್ರಿ ಸಿಗುವವರೆಗೆ ಕಾಯುವಷ್ಟು ತಾಳ್ಮೆ ಅವನಲ್ಲುಂಟು. ಅವಸರವೆನ್ನುವುದು ಸಂಶೋಧಕನ ಮತ್ತೊಂದು ದೊಡ್ಡ ಶತ್ರು. ತನ್ನಿಂದ ಪರಿಹರಿಸಲು ಸಾಧ್ಯವಾಗದಿದ್ದರೆ ಆ ಸಮಸ್ಯೆಯನ್ನು ಸಮಸ್ಯೆಯನ್ನಾಗಿಯೇ ಉಳಿಸುವನೇ ಹೊರತು ಅದನ್ನು ಅವಸರವಸರವಾಗಿ ಬಿಡಿಸ ಹೊರಟು, ತಪ್ಪು ತೀರ್ಮಾನಕ್ಕೆ ಬಂದು ಉಳಿದವರನ್ನು ಅವನು ತಪ್ಪು ದಾರಿಗೊಯ್ಯುವುದಿಲ್ಲ.

ಏಕೆಂದರೆ ಇಂತಹ ತಪ್ಪು ತೀರ್ಮಾನಗಳು ಒಮ್ಮೆ ಪ್ರಚಾರಕ್ಕೆ ಬಂದು ಬಿಟ್ಟರೆ ಅವುಗಳನ್ನು ಅಳಿಸುವುದು ಕಷ್ಟವಾಗುತ್ತದೆ. ಅದರಲ್ಲೂ ಅವು ಜನರ ಸಾಮಾನ್ಯ ಅನ್ನಿಸಿಕೆಯನ್ನು ತೃಪ್ತಿಪಡಿಸುವಂತಿದ್ದರಂತೂ ಅವುಗಳಿಂದ ಅಪಾಯವೇ ಹೆಚ್ಚು. ಆದರೆ ಸಂಶೋಧಕನು ಸತ್ಯವಲ್ಲದೆ ಇನ್ನೇನನ್ನೂ ಹೇಳುವುದಿಲ್ಲ ಎಂದು ಭಾವಿಸಬಾರದು. ಅವನೂ ಒಬ್ಬ ಮನುಷ್ಯ. ಅವನು ಸಂಗ್ರಹಿಸಿದ ಸಾಮಗ್ರಿ ಮಿತವಾಗಿರಬಹುದು. ಇಂತಹ ಸಮಯದಲ್ಲಿ ಅವನು ತಪ್ಪು ತೀರ್ಮಾನಗಳಿಗೆ ಬಂದಿರಬಹುದು. ಆ ತೀರ್ಮಾನ ತಪ್ಪಾದುದು ಎಂಬುದು ಮುಂದಿನವರು ಕಂಡುಕೊಂಡದ್ದೇ ಹೊರತು, ಅವನು ಆ ಕ್ಷಣಕ್ಕೆ ತನ್ನ ತೀರ್ಮಾನವೇ ಸರಿ ಎಂದು ನಂಬಿರಲೂ ಸಾಧ್ಯ. ಒಟ್ಟಿನಲ್ಲಿ ಸಂಶೋಧಕ ತನ್ನ ಮನಸ್ಸಿಗೆ ತೃಪ್ತಿಯೆಂದು ತೋರಿದ್ದನ್ನು ಮಾತ್ರ ಹೇಳುತ್ತಾನೆ. ಅದು ಸತ್ಯವಾಗಿದ್ದರೆ ಸಂತೋಷ. ಇಲ್ಲದಿದ್ದರೆ ಮುಂದಿನವರು ಅದನ್ನು ತಿದ್ದುತ್ತಾರೆ.

ಇಲ್ಲಿ ಸಂಶೋಧಕನ ಎರಡು ಪ್ರಮುಖ ಗುಣಗಳನ್ನು ಹೇಳಲೇಬೇಕು. ಒಂದು - ಆಧಾರಗಳ ಸಹಾಯದಿಂದ ಪುಷ್ಟವಾದ ಸತ್ಯವನ್ನು ಹೇಳುವುದರಲ್ಲಿ ನಿರ್ಭೀತಿ. ಅವನು ಹೇಳುವ ಸತ್ಯ ಆ ಕಾಲದಲ್ಲಿ ಜನರು ಸತ್ಯವೆಂದು ನಂಬಿರುವ ಭಾವನೆಗೆ ವಿರುದ್ಧವಾಗಿರಬಹುದು, ಅದನ್ನು ಹೇಳಿದ್ದರಿಂದ ಅವರ ಅಪ್ರೀತಿಗೆ ಅವನು ಗುರಿಯಾಗಬಹುದು. ಅದರಿಂದ ಅವನಿಗೆ ಸ್ವಲ್ಪ ತೊಂದರೆಯೂ ಆಗಬಹುದು. ಆದರೆ ನಾಳೆ ನಿಲ್ಲುವುದು ಸತ್ಯವೇ ಹೊರತು ಭ್ರಮೆಯಲ್ಲ, ಭಾವೋದ್ರೇಕವಲ್ಲ ಎಂಬ ಅರಿವು ಅವನಿಗಿರುತ್ತದೆ. ಅದೇ ಅವನ ಧೈರ್ಯವೂ ಹೌದು. ಅವನು ಎಂದೂ ಇತರರಿಗೆ ಹೆದರಿ ಸತ್ಯವನ್ನು ವಿರೂಪಗೊಳಿಸುವುದಿಲ್ಲ. ಅವನ ಇನ್ನೊಂದು ಗುಣ - ತಾನು ಹೇಳಿದ್ದು ಸತ್ಯವಲ್ಲ, ತನ್ನದು ಸರಿಯಾದ ತೀರ್ಮಾನವಲ್ಲ ಎಂದು ಇತರರು ಸಾಧಾರವಾಗಿ ತೋರಿಸಿಬಿಟ್ಟರೆ, ಅಥವಾ ಕೆಲವು ಕಾಲದ ಬಳಿಕ ತನಗೇ ಹಾಗನ್ನಿಸಿದರೆ ತನ್ನ ತಪ್ಪನ್ನು ಮನಃಪೂರ್ವಕವಾಗಿ ಒಪ್ಪಿಕೊಳ್ಳುವುದು. ಇಲ್ಲಿ ಮಾನ, ಅವಮಾನಗಳ ಪ್ರಶ್ನೆಯೇ ಇಲ್ಲ. ಇಲ್ಲಿಯವರೆಗೆ ಕೆಲಸಮಾಡಿರುವ ಸಂಶೋಧಕರು ಹೇಳಿದ್ದೆಲ್ಲವೂ ಸರಿಯಾಗಿದ್ದಿದ್ದರೆ ಅವರನ್ನು ಹಿಡಿಯುವವರು ಯಾರು ? ಅಥವಾ ಈಗ ಬಿಡಿಸಲು ನಮಗೆ ಸಮಸ್ಯೆಗಳಾದರೂ ಇರುತ್ತಿದ್ದುವೇ ? ಸಂಶೋಧಕನಿಗೆ ಸತ್ಯ ಸಂಗತಿ ಹೊರಕ್ಕೆ ಬರುವುದು ಮುಖ್ಯವೇ ಹೊರತು, ಹೊರಕ್ಕೆ ತಂದವರು ಯಾರು ಎಂಬುದಲ್ಲ; ಅದಕ್ಕೆ ತಾನು ಕಾರಣನಾಗಿದ್ದರೆ

ಸಂತೋಷವಾಗುತ್ತಿತ್ತು, ನಿಜ. ಆದರೆ ಈಗ ತಾನು ಕಾರಣನಾಗಿರದಿದ್ದರೂ ಇತರರು ಆ ಸತ್ಯವನ್ನು ಕಾಣಲು ತಾನು ಪ್ರಚೋದನೆಯನ್ನಾದರೂ ಕೊಟ್ಟೆನಲ್ಲ ಎಂಬ ಹೆಮ್ಮೆ ಅವನಿಗಿರುತ್ತದೆ.

ಸತತವಾದ ಅಭ್ಯಾಸವಿಲ್ಲದವರಾರೂ ಸಂಶೋಧಕರಾಗಲಾರರು. ಸಂಶೋಧನೆಗೆ ಬುದ್ಧಿಶಕ್ತಿ ಮುಖ್ಯವೇ ಶ್ರಮ ಮುಖ್ಯವೇ ಎಂಬ ಪ್ರಶ್ನೆ ಹಾಕಿದರೆ ಉತ್ತರ ಸ್ವಲ್ಪ ಕಷ್ಟವಾಗಬಹುದು. ಆದರೆ ಸಂಶೋಧನೆಯಲ್ಲಿ ಶ್ರಮ ಬಹುಮುಖ್ಯವಾದುದು ಎಂಬುದರಲ್ಲಿ ಸಂದೇಹವಿಲ್ಲ. ಬರಿಯ ಬುದ್ಧಿಶಕ್ತಿ ಮನುಷ್ಯನನ್ನು ಬಹುದೂರ ಕೊಂಡೊಯ್ಯಲಾರದು. ಬುದ್ಧಿಶಕ್ತಿ ಸ್ವಲ್ಪ ಕಡಮೆಯಿದ್ದರೂ ವ್ಯವಸ್ಥಿತವಾದ ಶ್ರಮಕ್ಕೆ ಸಿದ್ಧರಾಗಿರುವ ಯಾರೂ ಸಂಶೋಧಕರಾಗಬಹುದು. ಆದ್ದರಿಂದ ಸಂಶೋಧಕನೊಬ್ಬ ಮಾನಸಿಕ (ಮತ್ತು ದೈಹಿಕ) ಶ್ರಮಜೀವಿ.

'ವ್ಯವಸ್ಥಿತ ಶ್ರಮ' ಎಂಬ ಮಾತನ್ನು ಬೇಕೆಂದೇ ಬಳಸುತ್ತಿದ್ದೇನೆ. ಕೆಲವರು ಯಾವಾಗಲೂ ಕೈಗೆ ಸಿಕ್ಕಿದ್ದನ್ನೆಲ್ಲ ಓದುತ್ತಿರುತ್ತಾರೆ. ಅವರ ಜ್ಞಾಪಕಶಕ್ತಿ ಅದ್ಭುತ. ಹತ್ತಾರು ಬೇರೆ ಬೇರೆ ವಿಷಯಗಳ ಮೇಲೆ ಹಲವು ಗಂಟೆಗಳ ಕಾಲ ಮಾತನಾಡಬಲ್ಲರು. ಇನ್ನು ಕೆಲವರು ಯಾವುದೋ ಒಂದು ವಿಷಯವನ್ನು ಪಟ್ಟಾಗಿ ಹಿಡಿದು ಅದಕ್ಕೆ ಸಂಬಂಧಿಸಿದ ಸಾಂಪ್ರದಾಯಕ ಜ್ಞಾನವನ್ನು ಕರತಲಾಮಲಕ ಮಾಡಿಕೊಂಡಿರುತ್ತಾರೆ. ಆದರೆ ಇವರಿಬ್ಬರೂ ಯಾವ ಹೊಸತನ್ನೂ ಹೇಳಲಾರರು, ಯಾವ ಸಮಸ್ಯೆಯನ್ನೂ ತೆಗೆದುಕೊಂಡು ಬಿಡಿಸಿ ಪ್ರಚಲಿತ ಜ್ಞಾನಕ್ಕೆ ತಮ್ಮ ಕಾಣಿಕೆಯನ್ನು ನೀಡಲಾರರು. ಇವರಲ್ಲಿ ಸಂಶೋಧಕರಾಗುವವರ ಸಂಖ್ಯೆ ಅತ್ಯಪೂರ್ವ. ಇದಕ್ಕೆ ಕಾರಣ, ಇವರಿಬ್ಬರಲ್ಲೂ ಶ್ರಮವಿದ್ದರೂ ಆ ಶ್ರಮಕ್ಕೆ ಒಂದು ವ್ಯವಸ್ಥೆ ಇಲ್ಲದಿರುವುದು. ಮೊದಲನೆಯ ವರ್ಗದವರಿಗೆ ಆದಷ್ಟು ಓದಿ ಆದಷ್ಟು ತಿಳಿದುಕೊಳ್ಳಬೇಕೆನ್ನುವ ಕಾತರವಿರುತ್ತದೆ. ಅವರಿಗೆ ಸಮಸ್ಯೆಗಳನ್ನು ಕಂಡುಕೊಳ್ಳಲು ಬೇಕಾದಷ್ಟು ಆಳವಾದ ಜ್ಞಾನವಿರುವುದಿಲ್ಲ ಮತ್ತು ಅದರಲ್ಲಿ ಅವರು ಸಂಪೂರ್ಣ ಅನಾಸಕ್ತರು. ಎರಡನೆಯ ವರ್ಗದವರು ಒಂದು ವಿಷಯವನ್ನು ಆಳವಾಗಿ ಅಭ್ಯಾಸ ಮಾಡಿ ಅದಕ್ಕೆ ಸಂಬಂಧಿಸಿದ ಎಲ್ಲ ಸಾಂಪ್ರದಾಯಕ ತಿಳಿವಳಿಕೆಯನ್ನು ವಶಪಡಿಸಿಕೊಂಡು, ಹೀಗೆ ಕಲಿತದ್ದನ್ನು ಕಲಿತ ಹಾಗೆಯೇ ಹೇಳುವುದರಲ್ಲಿ ತೃಪ್ತರು. ತಾವು ಕಲಿತದ್ದರಲ್ಲಿ ಬಿಡಿಸಬೇಕಾದ ಸಮಸ್ಯೆಗಳಿವೆ ಎಂಬ ಅರಿವೇ ಅವರಿಗಿರುವುದಿಲ್ಲ. ಇವರ ಜ್ಞಾನಕ್ಕೆ ಆಳವುಂಟು, ಅಗಲವಿಲ್ಲ. ಆದರೆ ಸಂಶೋಧಕನಿಗೆ ಜ್ಞಾನದ ವಿಷಯದಲ್ಲಿ ತಕ್ಕ ಮಟ್ಟಿಗೆ ಆಳ, ಅಗಲಗಳೆರಡೂ ಅತ್ಯವಶ್ಯಕ. ಅವನು, ಎಲ್ಲೋ ಕೆಲವು ಪ್ರಸಂಗಗಳನ್ನು ಬಿಟ್ಟರೆ, ಓದುವುದೆಲ್ಲವೂ ಯಾವುದೋ ಉದ್ದೇಶವನ್ನಿಟ್ಟುಕೊಂಡೇ. ಓದಿಗೋಸ್ಕರ ಓದು ಎಂಬುದು ಸಾಮಾನ್ಯವಾಗಿ ಅವನಲ್ಲಿರುವುದಿಲ್ಲ. ಉದಾಹರಣೆಗೆ, ಅವನು ಯಾವುದಾದರೂ ಪ್ರಾಚೀನ ಗ್ರಂಥವನ್ನು ಓದುತ್ತಿರುವನೆಂದು ಭಾವಿಸೋಣ. ಉಳಿದವರು ಕೇವಲ ರಸಾಸ್ವಾದನೆಗಾಗಿ ಓದಬಹುದು. ಅಲ್ಲಿ ಮಧ್ಯೆ ಅರ್ಥವಾಗದ ಯಾವುದೋ ಪದ ಬಂದಿದ್ದರೆ ಅಥವಾ ಕ್ಲೇಶದಾಯಕವಾದ ಪಾಠಾಂತರವಿದ್ದರೆ ಅವರು ಪಾಯಸದಲ್ಲಿನ ಕಲ್ಲಿನಂತೆ ಅದನ್ನು ಭಾವಿಸಿ ಮುಂದಕ್ಕೆ ತೆರಳುತ್ತಾರೆ. ಆದರೆ ಸಂಶೋಧಕ ಅಂತಹ ಸಮಸ್ಯೆಗಳು ಬಂದಾಗ

ಕುತೂಹಲ ತಾಳುತ್ತಾನೆ. ಆ ಕ್ಲೇಶಗಳನ್ನು ಪರಿಹರಿಸಲು ಪ್ರಯತ್ನಿಸುತ್ತಾನೆ. ಉಳಿದ ಕಾವ್ಯಗಳನ್ನು ಓದುವಾಗ ಆ ಕ್ಲೇಶಗಳನ್ನು ಪರಿಹರಿಸುವಂತಹ ಸಹಾಯಕ ಸಾಮಗ್ರಿ ಅಲ್ಲಿ ಸಿಗಬಹುದೋ ಏನೋ ಎಂದು ಆಸೆಯನ್ನಿಟ್ಟುಕೊಂಡಿರುತ್ತಾನೆ.

ಸಂಶೋಧಕನ ಮನಸ್ಸಿನಲ್ಲಿ ಹೀಗೆ ಬಿಡಿಸದ ಹತ್ತಾರು ಸಮಸ್ಯೆಗಳಿರುತ್ತವೆ. ಅವನ ಮನಸ್ಸನ್ನು ಭರ್ತಿಮಾಡಲು ಬಿಟ್ಟಿರುವ ಖಾಲಿ ಜಾಗಗಳುಳ್ಳ ಒಂದು ಪತ್ರಿಕೆಗೆ ಹೋಲಿಸಬಹುದು. ಅವನ ಅಧ್ಯಯನ ಸಾಗಿದಂತೆ, ಸಂಶೋಧನೆ ಮುಂದುವರಿದಂತೆ ಈ ಖಾಲಿಜಾಗಗಳು ಭರ್ತಿಯಾಗುತ್ತಾ ಹೋಗುತ್ತವೆ, ಹೊಸ ಖಾಲಿ ಜಾಗಗಳು ಸೃಷ್ಟಿಯಾಗುತ್ತಾ ಹೋಗುತ್ತವೆ. ಅವನ ಮನಸ್ಸೊಂದು ಸಂಶಯಗಳ ಸೃಷ್ಟಿ ಕೇಂದ್ರವೂ ಹೌದು, ನಿವಾರಣಾ ಕೇಂದ್ರವೂ ಹೌದು.

ಸಂಶೋಧಕನೊಬ್ಬ ತನ್ನ ಸಮಸ್ಯೆಗಳ ವಿಷಯದಲ್ಲಿ ಸದಾ ಎಚ್ಚತ್ತಿರುವ ಜೀವಿ. ಯಾವ ಕ್ಷಣದಲ್ಲಿ ಬೇಕಾದರೂ, ಯಾವುದರ ಸಹಾಯದಿಂದಲಾದರೂ ಅವುಗಳ ಮೇಲೆ ಬೆಳಕು ಬೀಳಬಹುದು ಎಂಬ ನಿರೀಕ್ಷೆಯಿಟ್ಟುಕೊಂಡಿರುವವನು. ಒಂದು ಸಮಸ್ಯೆಗೆ ಸಂಬಂಧಿಸಿದ ಸಾಮಗ್ರಿಯನ್ನೆಲ್ಲ ಕಣ್ಣ ಮುಂದೆ ಇಟ್ಟುಕೊಂಡು ಅದನ್ನು ಒಂದು ವ್ಯವಸ್ಥಿತ ರೂಪಕ್ಕೆ ತಂದು, ಕುಳಿತು ಯೋಚಿಸಿದರೂ ಬಿಡಿಸಲಾಗದ ಗಂಟು ಎಲ್ಲೋ ಅನಿರೀಕ್ಷಿತವಾದ ಕಡೆ ಇದ್ದಕ್ಕಿದ್ದಂತೆ ಪರಿಹಾರವಾಗಬಹುದು. ಆದ್ದರಿಂದ ಅವನು ಹೊರನೋಟಕ್ಕೆ ಎಲ್ಲರಂತೆ ಕಂಡುಬಂದರೂ, ಒಳಗೆ ಅವನ ಮನಸ್ಸು ಯಾವುದೋ ಒಂದು ಸಮಸ್ಯೆಯನ್ನು ಕುರಿತು ಚಿಂತಿಸುತ್ತಿದ್ದಿರಬಹುದು.

ವಿದ್ಯೆಗೆ ಎಂತೋ ಅಂತೆಯೇ ಸಂಶೋಧಕನಿಗೂ ಶತ್ರುಗಳು ಮೂರು : ಅಶುಶ್ರೂಷೆ, ತ್ವರೆ ಮತ್ತು ಶಂಸೆ ("ಅಶುಶ್ರೂಷಾ ತ್ವರಾ ಶಂಸಾ ವಿದ್ಯಾಯಾಃ ಶತ್ರವಃ ತ್ರಯಃ"). ಗುರುಗಳ ಅಥವಾ ವಿದ್ಯೆಯ, ಸರಸ್ವತೀ ದೇವಿಯ ಶುಶ್ರೂಷೆ ಮಾಡದಿರುವುದೇ ಅಶುಶ್ರೂಷೆ. ಸಂಶೋಧಕ ಆರಂಭದಲ್ಲಾದರೂ ಶ್ರೇಷ್ಠ ವಿದ್ವಾಂಸರ ಬಳಿ ಶಿಷ್ಯವೃತ್ತಿಯನ್ನವಲಂಬಿಸುವುದು ಒಳ್ಳೆಯದು. ಇದರ ಜೊತೆಗೆ ಇತರ ಅನೇಕ ಸಂಶೋಧಕರ ಬರಹಗಳನ್ನು ಎಚ್ಚರಿಕೆಯಿಂದ ಅಧ್ಯಯನ ಮಾಡಬೇಕು. ಅವನು ವಿದ್ಯೆಗೆ ತನ್ನನ್ನು ತಾನು ಮಾರಿಕೊಂಡಿರುವ ವ್ಯಕ್ತಿ. ಆದ್ದರಿಂದ ಅವನು ತನ್ನ ಬಹುಕಾಲವನ್ನು ಗ್ರಂಥಾವಲೋಕನದಲ್ಲಿ ಕಳೆಯುತ್ತಾನೆ. ತ್ವರೆ - ಅವಸರ, ಎಂದರೆ ಆದಷ್ಟು ಬೇಗ ಎಲ್ಲವನ್ನೂ ಕಲಿತುಬಿಡಬೇಕು ಎಂಬ ಅವಸರ. ಸಂಶೋಧನೆಯಲ್ಲಿ ಅವಸರವೆನ್ನುವುದು ಸಲ್ಲದು. ಒಬ್ಬ ಸಂಶೋಧಕ ನಾಲ್ಕು ಪುಟಗಳ ಒಂದು ಪುಟ್ಟ ಸಂಪ್ರಬಂಧವನ್ನು ಬರೆಯಲು ನಾಲ್ಕು ತಿಂಗಳು ಶ್ರಮಿಸಿರಬಹುದು. ಅಥವಾ ಒಂದು ಸಮಸ್ಯೆಯ ಮೇಲೆ ಅನೇಕ ವಾರಗಳು ಶ್ರಮಿಸಿ, ಆಮೇಲೂ ಏನೂ ಬರೆಯದೆ ಹೋಗಬಹುದು. ಜ್ಞಾನವೆನ್ನುವುದು ನಿಧಾನವಾಗಿ ಗಳಿಸಬೇಕಾದ ವಸ್ತು. ಶಂಸೆ ಅಥವಾ ಪ್ರಶಂಸೆ ಎಂದರೆ ಹೊಗಳಿಕೆ. ಸಂಶೋಧಕನೂ ಇತರರಂತೆ ಇತರರಿಂದ ಒಳ್ಳೆಯ ಮೆಚ್ಚುಗೆಯ ಮಾತುಗಳನ್ನು ನಿರೀಕ್ಷಿಸುತ್ತಾನೆ. ಆದರೆ ಅದಕ್ಕಾಗಿ ಅವನು ಸಂಶೋಧನೆಯನ್ನು

ಕೈಗೊಂಡಿರುವುದಿಲ್ಲ. ಸಂಶೋಧಕರಿಗೆ ಹೆಚ್ಚು ಕೀರ್ತಿಯ ಆಸೆಯೂ ಇರಬಾರದು. ಅಥವಾ ಅಕಸ್ಮಾತ್ ಕೀರ್ತಿ ಬಂದಾಗ ಅದರಿಂದ ಸಂತೋಷಪಟ್ಟು, ಅದನ್ನು ಮರುಕ್ಷಣದಲ್ಲಿ ಮರೆತು ತನ್ನ ಕೆಲಸಗಳನ್ನು ಮುಂದುವರಿಸಬೇಕು. ಅವನೊಬ್ಬ ಸದಾ ಅತೃಪ್ತ ಜೀವಿ. ಏಕೆಂದರೆ ಒಂದು ಸಮಸ್ಯೆಯನ್ನು ಬಿಡಿಸುತ್ತಿರುವಂತೆಯೇ ಅಥವಾ ಬಿಡಿಸುತ್ತಿರುವಾಗಲೇ ಮತ್ತೆ ನಾಲ್ಕಾರು ಸಮಸ್ಯೆಗಳು ಅವನಲ್ಲಿ ಮನೆಮಾಡಿಕೊಂಡಿರುತ್ತವೆ. ಅವು ಅವನನ್ನು ಕಾಡತೊಡಗುತ್ತವೆ. ಒಂದು ಕೆಲಸದಿಂದ ಮತ್ತೊಂದು ಕೆಲಸಕ್ಕೆ ಹೋಗುವುದೇ ಅವನಿಗೆ ಬಿಡುವು.

ಸಾಹಿತ್ಯಕ ವಿದ್ಯಾರ್ಥಿಗಳ ದೃಷ್ಟಿಯಿಂದ ಹೇಳುವುದಾದರೆ ಸಂಶೋಧನೆ ನೀರಸ ಕೆಲಸ. ಆದರೂ ಸಂಶೋಧಕನಿಗೆ ಆನಂದದ ಕ್ಷಣಗಳು ಇಲ್ಲದಿಲ್ಲ. ಇತರರಿಗೆ ಹೊಳೆಯದಿದ್ದ ಯಾವುದೋ ಸಮಸ್ಯೆ ಹೊಳೆದಾಗ, ಅಪೂರ್ವ ಸಂಗತಿಯೊಂದು ಕಣ್ಣಿಗೆ ಬಿದ್ದಾಗ, ಒಂದು ಸಮಸ್ಯೆ ಪರಿಹಾರವಾದಾಗ ಅವನಿಗೆ ಸಂತೋಷವಾಗುತ್ತದೆ. ಈ ಸಂತೋಷ ಅವನ ಆಯಾಸವನ್ನು ಪರಿಹರಿಸಿ ಹೊಸ ಉತ್ಸಾಹವನ್ನೂ ಚೈತನ್ಯವನ್ನೂ ಅವನಲ್ಲಿ ತುಂಬುತ್ತದೆ.

**ಸಮಸ್ಯೆಗಳನ್ನು ಆರಿಸಿಕೊಳ್ಳುವುದು**

ಸಂಶೋಧನೆ ಎನ್ನುವುದು ಬರಿಯ ಒಂದು ಪುಸ್ತಕ ಬರೆಯುವುದಲ್ಲ. ಅದರ ಉದ್ದೇಶ ಒಂದು ಹೊಸ ಸಮಸ್ಯೆಯ ಮೇಲೆ ಬೆಳಕು ಬೀರುವುದು ಅಥವಾ ಹಿಂದಿನವರು ಆರಿಸಿಕೊಂಡಿದ್ದ ಸಮಸ್ಯೆಯ ಮೇಲೆ ಇನ್ನೂ ಹೊಸ ಬೆಳಕು ಬೀರುವುದು. ಎಲ್ಲರಿಗೂ ಈಗಾಗಲೇ ಗೊತ್ತಿರುವ ವಿಷಯಗಳನ್ನೇ ಒಂದು ವ್ಯವಸ್ಥಿತ ರೂಪಕ್ಕಿಳಿಸಿ, ಅವುಗಳನ್ನೇ ಎಷ್ಟು ಮನೋಹರವಾದ ರೀತಿಯಲ್ಲಿ ಹೇಳಿದರೂ ಅದು ಸಂಶೋಧನೆ ಎನ್ನಿಸಿಕೊಳ್ಳಲಾರದು. ಅಂತಹ ಗ್ರಂಥವು ಹೆಚ್ಚೆಂದರೆ ವಿದ್ಯಾರ್ಥಿಗಳಿಗೆ ಸಹಾಯಕವಾಗುವ ಒಂದು ಪಠ್ಯ ಪುಸ್ತಕವೆನ್ನಿಸಿಕೊಳ್ಳಬಹುದು.* ಇತರ ಭಾಷೆ ಅಥವಾ ಭಾಷೆಗಳಲ್ಲಿರುವ ವಿಷಯಗಳನ್ನು ಇನ್ನೊಂದು ಭಾಷೆಯಲ್ಲಿ ನಿರೂಪಿಸುವುದೂ ಕೂಡ ಅಷ್ಟೇ. ಹೊಸತನ ಎಂಬುದು ಸಂಶೋಧನೆಯ ಜೀವಾಳ. ಸಂಶೋಧಕ ತನಗಿಂತ ಹಿಂದೆ ಕೆಲಸ ಮಾಡಿರುವವರಿಗಿಂತ ಮುಂದೆ ಹೋಗದಿದ್ದರೆ, ಹೊಸ ದೃಷ್ಟಿಯೊಂದನ್ನು ತೋರದಿದ್ದರೆ ಅವನ ಕೆಲಸ ಸಂಶೋಧನೆ ಎನ್ನಿಸಿಕೊಳ್ಳಲಾರದು. ಅವನ ಕೆಲಸ ಸಂಪೂರ್ಣವಾಗಿ ವ್ಯರ್ಥವಾಗುತ್ತದೆ. ಇದು ಸಂಶೋಧನ ಕ್ಷೇತ್ರವನ್ನು ಪ್ರವೇಶಿಸುವವರೆಲ್ಲರೂ ಮುಖ್ಯವಾಗಿ ಗಮನಿಸಬೇಕಾದ ಅಂಶ.

ವಿದ್ಯಾರ್ಥಿಗಳು ತಮ್ಮ ಎಂ.ಎ. ಪರೀಕ್ಷೆಯನ್ನು ಮುಗಿಸಿಕೊಂಡು ಪಿಎಚ್.ಡಿ. ಪದವಿಗಾಗಿ ಸಂಶೋಧನೆಯನ್ನು ಆರಂಭಿಸುವ ಹೊಸದರಲ್ಲಿ ಅನೇಕ ಕಷ್ಟಗಳನ್ನು ಎದುರಿಸುತ್ತಾರೆ. ಅದನ್ನು ಕುರಿತು ನಾಲ್ಕು ಮಾತುಗಳನ್ನು ಹೇಳುವುದು ಅವಶ್ಯಕ. ಅವರು

---

* ಐದು ನೂರು ಪುಟಗಳ ಅಂತಹ ಪುಸ್ತಕಕ್ಕಿಂತ ಐದು ಪುಟಗಳ ಸಂಶೋಧನ ಲೇಖನಕ್ಕೆ ಹೆಚ್ಚಿನ ಬೆಲೆಯಿದೆ. ಇದು ಉಪಯೋಗದ ದೃಷ್ಟಿಯಿಂದ ಹೇಳಿದ ಮಾತಲ್ಲ : ಒಟ್ಟು ಜ್ಞಾನಕ್ಕೆ ವ್ಯಕ್ತಿ ಕೊಡಬಹುದಾದ ಅವನ ಸ್ವಂತ ಕಾಣಿಕೆಯ ದೃಷ್ಟಿಯಿಂದ ಹೇಳಿದ ಮಾತು.

ವಿದ್ಯಾರ್ಥಿಗಳಾಗಿದ್ದಾಗ ತರಗತಿಗಳಲ್ಲಿ ಕುಳಿತು ಉಪಾಧ್ಯಾಯರಿಂದ ಪಾಠಗಳನ್ನು ಕೇಳಿ, ಅವರ ಸೂಚನೆಯನ್ನನುಸರಿಸಿ ಪಾಠಗಳಿಗೆ ಸಂಬಂಧಿಸಿದಂತೆ ಪುಸ್ತಕ ಭಂಡಾರದಲ್ಲಿ ಲೇಖನಗಳನ್ನೂ ಗ್ರಂಥಗಳನ್ನೂ ಓದಿ ಟಿಪ್ಪಣಿ ಮಾಡಿಕೊಂಡು, ಪರೀಕ್ಷೆಯ ದೃಷ್ಟಿಯಿಂದ ಮೊದಲೇ ಪ್ರಬಂಧಗಳನ್ನು ಸಿದ್ಧಪಡಿಸಿಕೊಂಡು, ಪರೀಕ್ಷೆಯಲ್ಲಿ ತೇರ್ಗಡೆ ಹೊಂದುತ್ತಾರೆ. ಒಂದು ಸಂಗತಿಗೆ ಸಂಬಂಧಿಸಿದಂತೆ ಇತರರು ಏನು ಹೇಳಿದ್ದಾರೆ ಎಂಬುದನ್ನು ಆದಷ್ಟು ಸಂಗ್ರಹಿಸಿ ಆದಷ್ಟು ಜ್ಞಾಪಕದಲ್ಲಿಟ್ಟುಕೊಂಡು ಆದಷ್ಟು ಚೆನ್ನಾಗಿ ಹೇಳುವುದೇ ಅಲ್ಲಿ ವಿದ್ಯಾರ್ಥಿಯ ಗುರಿಯಾಗಿರುತ್ತದೆ. ಅಲ್ಲಿ ಸ್ವತಂತ್ರವಾದ ಆಲೋಚನೆಗೆ ಅಷ್ಟು ಅವಕಾಶವಿರುವುದಿಲ್ಲ. ಅಂತಹ ವಿದ್ಯಾರ್ಥಿಗಳು ಇದ್ದಕ್ಕಿದ್ದಂತೆಯೇ ಸಂಶೋಧನೆಗೆ ತೊಡಗಿದಾಗ ಅನೇಕ ಸಾರಿ ದಿಕ್ಕು ತಪ್ಪಿದಂತಾಗುತ್ತದೆ. ತಾವು ಸಂಪೂರ್ಣವಾಗಿ ಅಪರಿಚಿತವಾದ ಕ್ಷೇತ್ರವೊಂದಕ್ಕೆ ಬಂದ ಅನುಭವವಾಗುತ್ತದೆ. ತಾಯಿಯ ಕೈ ಹಿಡಿದುಕೊಂಡೇ ನಡೆಯುತ್ತಿದ್ದ ಮಗುವನ್ನು ತಾಯಿ ಇದ್ದಕ್ಕಿದ್ದಂತೆ ಕೈಬಿಟ್ಟು ನೀನೇ ನಿಂತುಕೊ, ನಡೆ ಎಂದು ಹೇಳಿದಾಗ ಹೊಸದರಲ್ಲಿ ಆ ಮಗುವಿಗಾಗುವ ಅನುಭವ ಅವರಿಗಾಗುತ್ತದೆ. ಇನ್ನು ಕೆಲವರು ಧೈರ್ಯಮಾಡಿ, ತಮ್ಮ ಮಾರ್ಗದರ್ಶಕರಿಂದ (The Guide) ಸೂಚಿತವಾದ ಸಮಸ್ಯೆಗೆ ಸಂಬಂಧಿಸಿದ ಹತ್ತಾರು ಗ್ರಂಥಗಳನ್ನು ಓದಿ, ಅವುಗಳ ಸಾರಾಂಶವನ್ನು ಶೇಖರಿಸಿ ಮೂರು ನಾಲ್ಕು ತಿಂಗಳಲ್ಲೇ ನೂರಾರು ಪುಟಗಳನ್ನು ಬರೆದುಹಾಕುತ್ತಾರೆ. ಇನ್ನೂ ಕಾಲಕಳೆದಂತೆ ತಮ್ಮ ಜವಾಬ್ದಾರಿಯ ಅರಿವಾದಾಗ ತಾವು ಬರೆದದ್ದು ಏನೂ ಬೆಲೆಯಿಲ್ಲದ್ದು ಎಂಬ ನೋವಿನ ಅನುಭವವಾಗುತ್ತದೆ.

ಹೊಸದಾಗಿ ಸಂಶೋಧನರಂಗಕ್ಕೆ ಇಳಿಯುವವರು ತಾವು ಆರಿಸಿಕೊಳ್ಳುವ ಸಮಸ್ಯೆಯನ್ನು ಕುರಿತು ತಮ್ಮ ಮಾರ್ಗದರ್ಶಕರೊಡನೆ, ಇತರ ಉಪಾಧ್ಯಾಯರೊಡನೆ, ಮಿತ್ರರೊಡನೆ ಮೊದಲು ಕೂಲಂಕಷವಾಗಿ ಚರ್ಚಿಸುವುದೊಳ್ಳೆಯದು. ಅಂತಹ ಸಂದರ್ಭದಲ್ಲಿ ಒಂದಲ್ಲ, ಹತ್ತಾರು ಸಮಸ್ಯೆಗಳನ್ನು ಅವರು ನಮ್ಮ ಮುಂದೆ ಇಡುತ್ತಾರೆ. ಅವುಗಳಲ್ಲಿ ಯಾವುದು ತನ್ನ ಮನಸ್ಸಿಗೆ, ಅಭಿರುಚಿಗೆ ಒಪ್ಪುವಂತಹುದು, ಯಾವುದರ ವಿಷಯದಲ್ಲಿ ಒಳ್ಳೆಯ ಕೆಲಸವನ್ನು ಮಾಡಲು ಸಾಧ್ಯ, ಅದಕ್ಕೆ ಸಂಬಂಧಿಸಿದಂತೆ ಎಷ್ಟು ಸಾಮಗ್ರಿ ದೊರೆಯುತ್ತದೆ, ಆ ಸಾಮಗ್ರಿಯು ತನಗೆ ಲಭ್ಯವಾಗುತ್ತದೆಯೇ ಇತ್ಯಾದಿಗಳ ಸ್ಥೂಲಪರಿಚಯ ಅತ್ಯಂತ ಅವಶ್ಯಕ. ಮಾರ್ಗದರ್ಶಕರಿಂದ ಸೂಚಿತವಾದ ಒಂದು ಸಮಸ್ಯೆಯನ್ನು ಹೆಚ್ಚು ಯೋಚನೆಯಿಲ್ಲದೆ ಒಪ್ಪಿಕೊಂಡು ಬಿಟ್ಟು, ಕೆಲವು ತಿಂಗಳ ಬಳಿಕ ನಿಜವಾದ ಕಷ್ಟಗಳನ್ನು ಅನುಭವಿಸಿದ ಸಂಶೋಧನ ವಿದ್ಯಾರ್ಥಿಗಳೂ ಇಲ್ಲದಿಲ್ಲ. ಸಂಶೋಧನ ವಿದ್ಯಾರ್ಥಿಗಳಿಗೆ ಒಂದು ಸಣ್ಣ ಸಲಹೆ. ಕೆಲವರು ಅತಿಯಾಸೆಯಿಂದ, ಮುಗಿಸಲು ಅನೇಕ ವರ್ಷ ಹಿಡಿಯುವ ಅಥವಾ ನಾಲ್ಕಾರು ಜನ ಕೂಡಿ ಮಾಡಬೇಕಾದ ದೊಡ್ಡ ವಿಷಯವನ್ನು ಆರಂಭದಲ್ಲಿ ಆರಿಸಿಕೊಂಡು ಮುಂದೆ ಕಷ್ಟಪಡುತ್ತಾರೆ. ಆದ್ದರಿಂದ ಮೊದಲೇ ಎಚ್ಚರಿಕೆ ವಹಿಸುವುದು ಒಳ್ಳೆಯದು. ಸಂಶೋಧನೆಯಲ್ಲಿ ಕೆಲಸ ಮಾಡುವವನು ಸಂಶೋಧಕನೇ. ಹೆಸರೇ ಹೇಳುವಂತೆ 'ಮಾರ್ಗದರ್ಶಕ'ರು ದಾರಿ ತೋರುವವರು ಮಾತ್ರ. ಅವರು ಸೂಚಿಸುವ ಸಮಸ್ಯೆಯ ವಿಷಯದಲ್ಲಿ ಅವರಿಗೆ ಅಸ್ಪಷ್ಟವಾದ, ಅತ್ಯಂತ ಸ್ಥೂಲವಾದ ಜ್ಞಾನವಿರುತ್ತದೆ. ಕೆಲಸಮಾಡುವ ರೀತಿ, ಓದಬಹುದಾದ ಕೆಲವು

ಪುಸ್ತಕಗಳು, ಲೇಖನಗಳು, ಸಮಸ್ಯೆಗಳನ್ನು ಎದುರಿಸುವ ರೀತಿ, ನಿಬಂಧವನ್ನು ಸಿದ್ಧಪಡಿಸುವ ವಿಧಾನ, ಭಾಷೆ ಇತ್ಯಾದಿಗಳ ವಿಷಯದಲ್ಲಿ ಮಾತ್ರ ಅವರು ಮಾರ್ಗದರ್ಶನವನ್ನು ಮಾಡಬಲ್ಲರು. ಆಗಾಗ್ಗೆ ಎಚ್ಚರಿಸಿ, ಕಟುಮಾತಾಡಿ, ಉತ್ತೇಜನ ಕೊಟ್ಟು ಸಂಶೋಧನ ವಿದ್ಯಾರ್ಥಿಯಿಂದ ಕೆಲಸಮಾಡಿಸಬಹುದು. ಆದರೆ ವಿಷಯದ ದೃಷ್ಟಿಯಿಂದ ಹೇಳುವುದಾದರೆ ನಾಲ್ಕಾರು ತಿಂಗಳಲ್ಲಿಯೇ ಸಂಶೋಧಕ ತನ್ನ ಮಾರ್ಗದರ್ಶಕರಿಗಿಂತ ಆ ವಿಶಿಷ್ಟ ಕ್ಷೇತ್ರದಲ್ಲಿ ಹೆಚ್ಚು ಪುಸ್ತಕಗಳನ್ನು ಓದಿರುತ್ತಾನೆ, ಹೆಚ್ಚು ಜ್ಞಾನವನ್ನು ಸಂಪಾದಿಸುತ್ತಾನೆ. ಇದು ಬಹಳ ಸಹಜವೇ. ಆದ್ದರಿಂದ ಸಂಶೋಧಕ ತನ್ನ ಅಭಿರುಚಿ, ಶಕ್ತಿಯ ಇತಿಮಿತಿಗಳನ್ನು ಅರಿತು ಸಮಸ್ಯೆಯನ್ನು ಆರಿಸಿಕೊಳ್ಳುವುದು ಶ್ರೇಯಸ್ಕರ.

ಒಮ್ಮೆ ಆರಿಸಿಕೊಂಡ ಸಮಸ್ಯೆಯನ್ನು ಮುಂದೆ ಕೈಬಿಡಲೇಕೂಡದು, ಹೇಗೋ ಏನೋ ಅದನ್ನೇ ಮುಂದುವರಿಸಬೇಕೆಂಬ ಹಠ ಸರಿಯಾದುದಲ್ಲ. ಮೊದಲ ಎರಡು, ಮೂರು ತಿಂಗಳು ಅದಕ್ಕೆ ಸಂಬಂಧಿಸಿದಂತೆ ಅಧ್ಯಯನವನ್ನು ನಡೆಸಿ ಓದಬೇಕಾದ ಗ್ರಂಥಗಳ ಲೇಖನಗಳ ಪಟ್ಟಿಯನ್ನು ಸಂಪಾದಿಸಿ, ಆ ಕ್ಷೇತ್ರದಲ್ಲಿ ಕೆಲಸಮಾಡಲು ಎಷ್ಟರಮಟ್ಟಿಗೆ ಅವಕಾಶವಿದೆ ಎಂಬುದನ್ನು ಅವನೂ ಅವನ ಮಾರ್ಗದರ್ಶಕರೂ ಕುಳಿತು ತೀರ್ಮಾನಿಸಬೇಕು. ಆಮೇಲೆ ಆವಶ್ಯಕತೆಯಿದ್ದರೆ ಬೇರೆ ವಿಷಯವನ್ನು ಆರಿಸಿಕೊಳ್ಳಬಹುದು. ಆದರೆ ವಿಷಯದ ಆಯ್ಕೆಯಲ್ಲೇ ಬಹಳ ಕಾಲವನ್ನು ಕಳೆಯದೆ ಸ್ವಲ್ಪ ಕಾಲದಲ್ಲೇ ಅಂತಿಮವಾಗಿ ಅಧ್ಯಯನದ ವಿಷಯವನ್ನು ಆರಿಸಿಕೊಂಡು ವಿದ್ಯಾರ್ಥಿ ತನ್ನ ಕೆಲಸವನ್ನು ಆರಂಭಿಸಬೇಕು. ಇತರರಿಗೆ ಆ ವಿಷಯ ಎಷ್ಟೇ ನೀರಸವಾಗಿರಲಿ, ಅಲ್ಪವಾದುದಾಗಿರಲಿ - ಅದನ್ನು ಅವನು ಲೆಕ್ಕಿಸಕೂಡದು. ಅವನಿಗೆ ಅದರಲ್ಲಿ ಆಸಕ್ತಿಯಿರುವುದು ಮುಖ್ಯ. ಆ ಕೆಲಸದಲ್ಲಿ ಅವನಿಗೆ ಸಂತೋಷದ ಅನುಭವವಾದರೆ ಅದೇ ಅವನಿಗೆ ಆಸಕ್ತಿಯಿರುವುದರ ನಿಜವಾದ ಒರೆಗಲ್ಲು.

ಇಲ್ಲಿ ಒಂದು ಸಲಹೆಯನ್ನು ಸೂಚಿಸಬಯಸುತ್ತೇನೆ. ವಿದ್ಯಾರ್ಥಿಗಳು ನೇರವಾಗಿ ಸಂಶೋಧನ ಕ್ಷೇತ್ರವನ್ನು ಪ್ರವೇಶಿಸಿದಾಗ, ಅವರು ಪಿಎಚ್.ಡಿ. ಪದವಿಗೆ ದೊಡ್ಡ ವಿಷಯವೊಂದನ್ನು ಆರಿಸಿಕೊಂಡು ಕೆಲಸ ಆರಂಭಿಸುವ ಮುನ್ನ ಅವರಿಂದ ಸಣ್ಣ ವಿಷಯಗಳಿಗೆ ಸಂಬಂಧಿಸಿದ ಮೂರು ನಾಲ್ಕು ಸಂಪ್ರಬಂಧಗಳನ್ನು ಬರೆಸುವುದು ಒಳ್ಳೆಯದು. ಹಿಂದಿನವರು ಯಾವ ಕ್ರಮದಲ್ಲಿ ಕೆಲಸ ಮಾಡಿದರು, ಹೇಗೆ ನಿರೂಪಿಸಿದರು ಮುಂತಾದ ಸಂಗತಿಗಳ ಅನುಭವ ಅವರಿಗೆ ಬರುತ್ತದೆ. ಅವರಿಗೆ ಸಂಶೋಧನೆಯಲ್ಲಿ ನಿಜವಾದ ಆಸಕ್ತಿ ಇದೆಯೇ ಇಲ್ಲವೇ ಅಥವಾ ಆಸಕ್ತಿಯನ್ನು ಬೆಳೆಸಿಕೊಳ್ಳಲು ಸಿದ್ಧರಾಗಿರುವರೇ ಇಲ್ಲವೇ ಎಂಬುದೂ ಗೊತ್ತಾಗುತ್ತದೆ. ವಿದ್ಯಾರ್ಥಿಗಳಿಂದ ಇಂತಹ ಸಣ್ಣ ಕೆಲಸಗಳನ್ನು ಮಾಡಿಸಿದರೆ ಅವರು ಹೆಚ್ಚು ಧೈರ್ಯ, ಆತ್ಮ ವಿಶ್ವಾಸಗಳಿಂದ ದೊಡ್ಡ ಸಮಸ್ಯೆಗೆ ಕೈ ಹಾಕಬಹುದು. ಅನೇಕ ವಿದ್ಯಾರ್ಥಿಗಳು ತಮ್ಮ ಮೊದಲ ವರ್ಷದ ಅಥವಾ ಮೊದಲ ಎರಡು ವರ್ಷಗಳ ಕೆಲಸ ಸಂಪೂರ್ಣ ವ್ಯರ್ಥವಾಯಿತು ಎಂದು ಕೊರಗಿರುವುದನ್ನು ಕೇಳಿದ್ದೇನೆ. ಈ ಅಪವ್ಯಯವನ್ನು ತಪ್ಪಿಸಲು ಮೇಲಿನದು ಉತ್ತಮ ಸಾಧನ. ಹೊಳೆಯಲ್ಲಿ ಈಸುವವರು ಹೊಳೆಯ ಅಂಚಿನಲ್ಲಿ ಅಥವಾ ಹೊಂಡದಲ್ಲಿ ಈಸು ಕಲಿಯುತ್ತಾರೆ, ಅಲ್ಲವೇ?

ಇಲ್ಲಿಯೇ ಇನ್ನೂ ಒಂದು ಸಣ್ಣ ಸಲಹೆಯನ್ನು ಸೂಚಿಸಬಯಸುತ್ತೇನೆ. ವಿದ್ಯಾರ್ಥಿಗಳಿಗೆ ಸಂಶೋಧನಕಾರ್ಯವನ್ನಾರಂಭಿಸುವ ಮುನ್ನ ಹಿರಿಯ ವಿದ್ವಾಂಸರಿಂದ ಸಂಶೋಧಕರಿಂದ ಸಂಶೋಧನೆಗೆ ಸಂಬಂಧಪಟ್ಟಂತೆ ಉಪನ್ಯಾಸಗಳನ್ನು ಕೊಡಿಸಬಹುದು. ಕೆಲವು ವಿಶ್ವವಿದ್ಯಾನಿಲಯಗಳಲ್ಲಿರುವಂತೆ ವಿದ್ಯಾರ್ಥಿ ತಾನು ಸಂಶೋಧನ ಕಾರ್ಯವನ್ನು ಕೈಗೊಳ್ಳಲು ಅರ್ಹನೆಂಬುದನ್ನು ಪ್ರತ್ಯೇಕ ಪರೀಕ್ಷೆಯೊಂದರಲ್ಲಿ ತೋರಿಸಿಕೊಟ್ಟನಂತರ ಅವನಿಗೆ ಸಂಶೋಧನೆ ಆರಂಭಿಸಲು ಅನುಮತಿಯೀಯುವ ಪದ್ಧತಿ ನಿಜವಾಗಿಯೂ ಉತ್ತಮವಾದುದು.

ಇದು ವಿದ್ಯಾರ್ಥಿಗಳನ್ನು ಕುರಿತದ್ದಾಯಿತು. ಸಂಶೋಧನ ಕ್ಷೇತ್ರದಲ್ಲಿ ತಕ್ಕಮಟ್ಟಿಗೆ ಕೆಲಸಮಾಡಿ ಅದರಲ್ಲಿ ಆಸಕ್ತಿಯನ್ನು ಬೆಳೆಸಿಕೊಂಡವರಿಗಂತೂ ಸಮಸ್ಯೆಗಳು ಒಂದಲ್ಲ, ಹತ್ತಾರು ಹೊಳೆಯುತ್ತವೆ. ಅವು ಹೇಗೆ ಹೊಳೆಯುತ್ತವೆ, ಯಾವಾಗ ಹೊಳೆಯುತ್ತವೆ ಎಂಬುದನ್ನು ಹೇಳಲು ಸಾಧ್ಯವೇ ? ಸಮಸ್ಯೆಯನ್ನು ಕಂಡುಕೊಳ್ಳುವುದು ಸಂಶೋಧನೆಯ ಕಾಲುಭಾಗ, ಉಳಿದದ್ದು ಅದನ್ನು ಬಿಡಿಸುವುದು.

ಸಂಶೋಧಕ ವಸ್ತುವನ್ನು ಆರಿಸಿಕೊಳ್ಳುವವರೆಗೆ ಸಮಸ್ಯೆ ಅವನ ವಶದಲ್ಲಿರುತ್ತದೆ. ಆರಿಸಿಕೊಂಡಾದಮೇಲೆ ಅವನು ಅದರ ವಶವಾಗುತ್ತಾನೆ.

**ವಸ್ತು ವಿಶ್ಲೇಷಣೆ**

ಸಮಸ್ಯೆಯನ್ನು ಅಂತಿಮವಾಗಿ ಆಯ್ಕೆ ಮಾಡಿದ್ದಾಯಿತು. ಬಳಿಕ ಸಂಶೋಧನ ವಿದ್ಯಾರ್ಥಿಯು ತನ್ನ ನಿರ್ದೇಶಕರೊಡನೆ ಮತ್ತು ಇತರರೊಡನೆ ಕುಳಿತು ಚರ್ಚೆ ಮಾಡಿ ಆ ಸಮಸ್ಯೆಯನ್ನು ವಿಶ್ಲೇಷಿಸಬೇಕು. ಅಂತಹುದೇ ಸಮಸ್ಯೆಯ ಮೇಲೆ ಹಿಂದಿನವರು ಕೆಲಸ ಮಾಡಿದ್ದು ಅವರ ಕೃತಿಗಳು ಅಚ್ಚಿನ ರೂಪದಲ್ಲೋ ಹಸ್ತಪ್ರತಿಯಲ್ಲೋ ದೊರಕುವಂತಿದ್ದರೆ, ಆ ಗ್ರಂಥಗಳ ಆರಂಭದಲ್ಲಿ ಕೊಟ್ಟಿರುವ ವಿಷಯಾನುಕ್ರಮಣಿಕೆಗಳು (Contents) ಅವನಿಗೆ ಬಹಳ ಸಹಾಯ ಮಾಡುತ್ತವೆ. ತಾನು ಆರಿಸಿಕೊಂಡಿರುವ ವಿಷಯವನ್ನು ಬೇರೆ ಬೇರೆ ಅಧ್ಯಾಯಗಳಾಗಿ ವಿಂಗಡಿಸಿಕೊಳ್ಳಬೇಕು. ಇಲ್ಲಿ ಅವನು ಎಷ್ಟು ಎಚ್ಚರಿಕೆ ವಹಿಸಿದರೂ ಒಳ್ಳೆಯದೇ. ನಾವು ವಿಷಯವನ್ನು ಯಾವ ಅಧ್ಯಾಯಗಳಾಗಿ ವಿಂಗಡಿಸಿಕೊಳ್ಳುತ್ತೇವೆಯೋ ಆ ದೃಷ್ಟಿಯಿಂದ ಮಾತ್ರ ನಾವು ಸಾಮಗ್ರಿಯನ್ನು ಸಂಗ್ರಹಿಸುತ್ತ ಹೋಗುತ್ತೇವೆ. ಆ ಅಧ್ಯಾಯಗಳು ನಮ್ಮ ದೃಷ್ಟಿಯನ್ನು ಮಿತಗೊಳಿಸುತ್ತವೆ. ಮುಂದೆ ನಾವು ಇನ್ನೊಂದು ಹೊಸ ಅಧ್ಯಾಯವನ್ನು ಬರೆಯಬೇಕೆಂದು ಹೊರಟಾಗ ಅದಕ್ಕೆ ಮತ್ತೆ ಹೊಸದಾಗಿ ಸಾಮಗ್ರಿಯನ್ನು ಸಂಗ್ರಹಿಸಲು ಆರಂಭಿಸಬೇಕಾಗುತ್ತದೆ. ಇದರಿಂದ ಅಪಾರವಾದ ಕಾಲವೂ ಶ್ರಮವೂ ವ್ಯರ್ಥವಾಗಿ ಹೋಗುತ್ತದೆ. ಇದನ್ನು ತಪ್ಪಿಸಬೇಕಾದರೆ ಪ್ರಾರಂಭದಲ್ಲೇ ದೊಡ್ಡ ಚೌಕಟ್ಟನ್ನು ಸಿದ್ಧಪಡಿಸಿಕೊಳ್ಳಬೇಕು. ನಾವು ಆರಂಭದಲ್ಲಿ ಯಾವ ಅಧ್ಯಾಯಗಳನ್ನಿಟ್ಟುಕೊಂಡೆವೋ ಕೊನೆಯವರೆಗೂ ಅವೇ ಮುಂದುವರಿಯುತ್ತವೆ ಎಂದಲ್ಲ. ಕ್ರಮೇಣ ನಮ್ಮ ಯೋಜನೆಯಲ್ಲಿ ಖಂಡಿತವಾಗಿಯೂ ವ್ಯತ್ಯಾಸಗಳಾಗುತ್ತವೆ.

ಕೆಲವು ಅಧ್ಯಾಯಗಳಾಗಿ ಸಮಸ್ಯೆಯನ್ನು ವಿಶ್ಲೇಷಿಸಿಕೊಳ್ಳುವುದರಿಂದ ದೊಡ್ಡ ಅನುಕೂಲವುಂಟು. ನಮಗೆ ಏನು ಬೇಕು, ನಾವು ಯಾವುದನ್ನು ನಿರೀಕ್ಷಿಸಬಹುದು ಎಂಬುದು ಇದರಿಂದ ಖಚಿತವಾಗುತ್ತದೆ. ಉದಾಹರಣೆಗೆ ನಾವು ಒಂದು ಪುಸ್ತಕವನ್ನು ಓದುತ್ತೇವೆಂದು ಭಾವಿಸೋಣ. ಅದರಲ್ಲಿರುವುದೆಲ್ಲಾ ನಮಗೆ ಬೇಕಾಗಿರುವುದಿಲ್ಲ. ಆದ್ದರಿಂದ ಅದರ ಆದಿಯಿಂದ ಅಂತ್ಯದವರೆಗೆ ಎಲ್ಲ ವಿಷಯಗಳನ್ನೂ ಟಿಪ್ಪಣಿ ಮಾಡಿಕೊಳ್ಳುತ್ತ ಹೋಗುವುದು ವ್ಯರ್ಥಾಯಾಸ ಮತ್ತು ಅದಕ್ಕೆ ಕೊನೆಯೆಂಬುದೇ ಇಲ್ಲ. ನಮಗೆ ಯಾವ ಸಾಮಗ್ರಿ ಉಪಯುಕ್ತ, ಯಾವ ಸಾಮಗ್ರಿ ನಿರುಪಯುಕ್ತ ಎಂಬುದರ ಅರಿವು ಅತ್ಯವಶ್ಯಕ. ಈ ಅರಿವು ಮೊದಲು ಇಲ್ಲದಿದ್ದರೂ ಸ್ವಲ್ಪ ಕಾಲದಲ್ಲೇ ಅದನ್ನು ರೂಢಿಸಿಕೊಳ್ಳುವುದು ಬಹುಮುಖ್ಯ.

**ಸಾಮಗ್ರಿ ಸಂಗ್ರಹಣ**

ವಿಷಯ ಸಾಮಗ್ರಿಯನ್ನು ಸ್ಥೂಲವಾಗಿ ಎರಡು ಬಗೆಯಾಗಿ ವಿಂಗಡಿಸಬಹುದು. ಒಂದು - ಮೂಲಸಾಮಗ್ರಿ (basic material) ; ಮತ್ತೊಂದು - ದ್ವಿತೀಯ ಸಾಮಗ್ರಿ (secondary material) ಹಾಗೂ ಮೂರನೆಯ ತೃತೀಯ (tertiary) ಸಾಮಗ್ರಿ. ಇವುಗಳಲ್ಲಿ ಮೂಲ ಸಾಮಗ್ರಿಗೆ ಅಗ್ರಸ್ಥಾನ. ಮೂಲ ಆಕರಗಳಿಂದ ನಾವು ಸಂಗ್ರಹಿಸುವ ಸಾಮಗ್ರಿಯೇ ಮೂಲಸಾಮಗ್ರಿ. ಮೂಲ ಆಕರವು ಸಾಹಿತ್ಯಕೃತಿಗಳಾಗಿರಬಹುದು, ಶಾಸನಗಳಾಗಿರಬಹುದು, ಹಳ್ಳಿಯವರು ಆಡುವ ಭಾಷೆಯಾಗಿರಬಹುದು, ಒಂದು ಸಮಾಜದ ಜೀವನ ವಿಧಾನವಾಗಿರಬಹುದು, ಸರ್ಕಾರದ ರಿಪೋರ್ಟುಗಳಾಗಿರಬಹುದು ಇತ್ಯಾದಿ. ನಮ್ಮ ಸಮಸ್ಯೆಯನ್ನು ಬಿಡಿಸಬೇಕಾಗಿರುವುದು ಇಂತಹ ಸಾಮಗ್ರಿಯ ಸಹಾಯದಿಂದಲೇ. ಯಾರೂ ಉತ್ತು ಬಿತ್ತಿರದ ಕನ್ನೆನೆಲದಂತಿರುವ ಆ ಮೂಲ ಆಕರಗಳನ್ನು ನಾವು ಎಷ್ಟೆಷ್ಟು ವಿವೇಚನೆಯಿಂದ ಬಳಸಿಕೊಳ್ಳುತ್ತೇವೆಯೋ ಅಷ್ಟಷ್ಟು ನಮ್ಮ ಕಾರ್ಯಕ್ಕೆ ಗುರುತ್ವವೂ ಹೊಸತನವೂ ಬೆಲೆಯೂ ಲಭ್ಯವಾಗುತ್ತದೆ. ಇವುಗಳಿಂದ ಸಾಮಗ್ರಿಯನ್ನು ಸಂಗ್ರಹಿಸುವಲ್ಲಿಯೇ ಸಂಶೋಧನ ವಿದ್ಯಾರ್ಥಿ ಬಹು ಶ್ರಮಪಡಬೇಕಾಗಿರುವುದು. ದ್ವಿತೀಯ ಸಾಮಗ್ರಿ - ಇತರ ಲೇಖಕರು ಬರೆದ ಗ್ರಂಥಗಳಿಂದ, ಲೇಖನಗಳಿಂದ ಸಂಗ್ರಹಿಸುವ ಸಾಮಗ್ರಿ. ಇದು ಎಷ್ಟೇ ಮಹತ್ವದ್ದಾದರೂ ಇದಕ್ಕೆ ಸಂಶೋಧನೆಯಲ್ಲಿ ಎರಡನೆಯ ಸ್ಥಾನ. ಸಂಶೋಧಕ ಈ ಸಾಮಗ್ರಿಯನ್ನು ಉಪಯೋಗಿಸಿಕೊಳ್ಳುತ್ತಾನೆ, ನಿಜ. ಆದರೆ ಅದಕ್ಕೆ ಅವನು ಪ್ರಾಧಾನ್ಯವನ್ನು ಕೊಡಬಾರದು. ದ್ವಿತೀಯ ಸಾಮಗ್ರಿ ಸ್ಥೂಲವಾಗಿ ಎರಡು ಬಗೆಯಾಗಿರುತ್ತದೆ. ಒಂದು - ಆ ಲೇಖಕನು ಬಳಸಿಕೊಂಡಿರುವ ಮೂಲ ಸಾಮಗ್ರಿ; ಎರಡು - ಅವನ ವ್ಯಾಖ್ಯಾನ, ವಿಮರ್ಶೆ, ತೀರ್ಮಾನ. ದ್ವಿತೀಯ ಸಾಮಗ್ರಿಯಲ್ಲಿ ಮೂಲಸಾಮಗ್ರಿ ದೊರೆತರೆ ಸಂಶೋಧಕನು ಕೇವಲ ಅದನ್ನೇ ನಂಬಿ, ಅದನ್ನೇ ಆಧಾರವಾಗಿಟ್ಟುಕೊಂಡು ಮುಂದುವರಿಯುವುದಕ್ಕಿಂತ ಅದಕ್ಕೆ ಮೂಲವಾಗಿರುವ ಆಕರಕ್ಕೆ ಹೋಗಿ ತಾನೇ ಪರಿಶೀಲಿಸುವುದು ಸರ್ವೋತ್ತಮ. ಏಕೆಂದರೆ ಆ ಮೂಲಸಾಮಗ್ರಿಯನ್ನು ಲೇಖಕನು ಸರಿಯಾಗಿ ಬಳಸಿಕೊಳ್ಳದೇ ಇರಬಹುದು, ಅಥವಾ ತನ್ನ ಉದ್ದೇಶಕ್ಕನುಗುಣವಾಗಿ ಮಾರ್ಪಾಟುಗೊಳಿಸಿ ಬಳಸಿಕೊಂಡಿರಬಹುದು. ದ್ವಿತೀಯ

ಸಾಮಗ್ರಿಯನ್ನು ಬಳಸಿಕೊಂಡು, ಬರವಣಿಗೆಯಲ್ಲಿ ಮಾತ್ರ ಅದು ಮೂಲ ಸಾಮಗ್ರಿಯೆಂಬ ಭ್ರಮೆಯನ್ನು ಸಂಶೋಧಕ ಬರಿಸಿದರೆ ಅವನು ಅಪ್ರಾಮಾಣಿಕನಾಗುತ್ತಾನೆ. ಇನ್ನು ಇನ್ನೊಬ್ಬ ಲೇಖಕನ ವ್ಯಾಖ್ಯಾನ, ವಿಮರ್ಶೆ, ತೀರ್ಮಾನ ದೃಷ್ಟಿಗಳನ್ನು ಒಪ್ಪುವುದು ಬಿಡುವುದು ಸಂಶೋಧಕನಿಗೆ ಸೇರಿದ್ದು. ಅವುಗಳನ್ನು ಪೂರ್ಣ ಪರೀಕ್ಷೆಗೆ ಒಳಗುಮಾಡುವುದು ಅವನ ಕರ್ತವ್ಯ. ಇವೆರಡೂ ಅಲ್ಲದ್ದು, ತೃತೀಯ ಸಾಮಗ್ರಿ.

ಮೂಲಸಾಮಗ್ರಿಯಾಗಲಿ, ದ್ವಿತೀಯ ಸಾಮಗ್ರಿಯಾಗಲಿ - ಅವುಗಳನ್ನು ಟಿಪ್ಪಣಿ ಮಾಡಿಕೊಳ್ಳುವುದರಲ್ಲಿ ನಾವು ಶ್ರಮ, ಕಾಲಗಳ ಅಪಾರವಾದ ಅಪವ್ಯಯವಾಗುವುದನ್ನು ತಪ್ಪಿಸಬಹುದು, ಸರಿಯಾದ ಕ್ರಮವನ್ನು ಅನುಸರಿಸಿದರೆ. ಕೆಲವರು ಆ ಎರಡು ಸಾಮಗ್ರಿಗಳನ್ನೂ ನೋಟ್ ಪುಸ್ತಕಗಳಲ್ಲಿ ಟಿಪ್ಪಣಿ ಮಾಡಿಕೊಳ್ಳುತ್ತಾ ಹೋಗುತ್ತಾರೆ. ಇದಕ್ಕಿಂತ ದೊಡ್ಡ ತಪ್ಪು ಮತ್ತೊಂದಿಲ್ಲ. ಒಂದು ಸಣ್ಣ ಲೇಖನವನ್ನು ಬರೆಯುವಲ್ಲಿ ನಮ್ಮ ಜ್ಞಾಪಕ ಶಕ್ತಿಯನ್ನು ನಂಬಿ ಮುಂದುವರಿಯಬಹುದು. ಆದರೆ ನಿಬಂಧಗಳನ್ನು ಅಥವಾ ದೊಡ್ಡ ಸಂಪ್ರಬಂಧಗಳನ್ನು ಬರೆಯುವಲ್ಲಿ ಮಾತ್ರ ಜ್ಞಾಪಕಶಕ್ತಿಗಿಂತ ಕಣ್ಣು ಹೆಚ್ಚು ವಿಶ್ವಾಸಾರ್ಹ. ನಾವು ಸಮಸ್ಯೆಯನ್ನು ಕುರಿತು ಚಿಂತಿಸುವಾಗ, ಕೊನೆಗೆ ಅದನ್ನು ಬಿಡಿಸಿ ಬರಹಕ್ಕಿಳಿಸುವಾಗ ಇಡೀ ಸಾಮಗ್ರಿ ನಮ್ಮ ಕಣ್ಣ ಮುಂದಿರಬೇಕು. ಅಥವಾ ಬೇಕೆಂದ ತಕ್ಷಣ ಸಿಗುವಂತಿರಬೇಕು. ನೋಟ್ ಪುಸ್ತಕದಲ್ಲಿ ಟಿಪ್ಪಣಿ ಮಾಡಿಕೊಂಡರೆ, ಒಂದೊಂದು ಅಂಶಕ್ಕೂ ಅದರಲ್ಲಿ ಹುಡುಕಬೇಕು. ಅಥವಾ ಅದರಲ್ಲಿ ಬರೆದುಕೊಂಡಿರುವ ವಿಷಯಗಳಿಗೆ ಒಂದು ಪದಕೋಶವನ್ನು ಮಾಡಿಕೊಳ್ಳಬೇಕು. ಅದರ ಬದಲು ಬಿಡಿಹಾಳೆಗಳಲ್ಲಿ ಟಿಪ್ಪಣಿ ಮಾಡಿಕೊಳ್ಳುವುದು ಒಳ್ಳೆಯದು. ಅದರಲ್ಲೂ ದೊಡ್ಡ ಹಾಳೆಗಳಿಗಿಂತ ಅರ್ಧ ಹಾಳೆಗಳು ಒಳ್ಳೆಯದು; ಒಂದೊಂದು ಹಾಳೆಯಲ್ಲೂ ಎರಡು ಮೂರು ವಿಷಯಗಳನ್ನು ಬರೆದುಕೊಳ್ಳುವುದಕ್ಕಿಂತ ಒಂದು ವಿಷಯವನ್ನು ಮಾತ್ರ ಬರೆದುಕೊಂಡು ಹೋಗುವುದು ಉತ್ತಮ. ಆದರೆ ಇದರಿಂದ ಹಾಳೆಗಳು ವ್ಯರ್ಥವಾಗುತ್ತವೆ ಮತ್ತು ಅವು ಹೆಚ್ಚಿದಷ್ಟು ಅವುಗಳನ್ನು ಉಪಯೋಗಿಸಿಕೊಳ್ಳುವುದು ಕಷ್ಟವಾಗುತ್ತದೆ.

ಇದಕ್ಕಿಂತ ಸಣ್ಣ ಸಣ್ಣ ಚೀಟಿಗಳು ಅಥವಾ ಪಟ್ಟಿಕೆಗಳು ಬಹಳ ಅನುಕೂಲ. ಆರಂಭದಲ್ಲೇ ಒಳ್ಳೆಯ ಕಾಗದದಲ್ಲಿ ಹತ್ತಿಪ್ಪತ್ತು ಸಾವಿರ ಚೀಟಿಗಳನ್ನು ಮಾಡಿಸಿ ಇಟ್ಟುಕೊಳ್ಳಬಹುದು (ಮುದ್ರಣಾಲಯದಲ್ಲಿ ಕತ್ತರಿಸುವ ಯಂತ್ರಗಳಿಂದ ಸ್ವಲ್ಪ ಹೊತ್ತಿನಲ್ಲೇ ಸಿದ್ಧಪಡಿಸಿಕೊಳ್ಳಬಹುದು). ಚೀಟಿಯ ಗಾತ್ರವನ್ನು ನಮ್ಮ ಅನುಕೂಲಕ್ಕೆ ತಕ್ಕಂತೆ ಆರಿಸಿಕೊಳ್ಳಬೇಕು. ಸಾಮಾನ್ಯವಾಗಿ 5.5 x 3.5 ಅಂಗುಲ ಗಾತ್ರದ ಚೀಟಿಗಳು ಹಿಡಿದು ಉಪಯೋಗಿಸಲು ಸರಿಯಾಗಿರುತ್ತವೆ. ಒಂದೊಂದು ಚೀಟಿಯಲ್ಲೂ ಒಂದು ಅಂಶ ಅಥವಾ ಸಂಗತಿಯನ್ನು ಮಾತ್ರ ಬರೆದುಕೊಳ್ಳಬೇಕು. ಆ ಅಂಶ ಆ ಚೀಟಿಯ ಎರಡು ಮಗ್ಗುಲುಗಳನ್ನು ತುಂಬಿ ಮುಂದುವರಿದರೆ, ಅದನ್ನು ಇನ್ನೊಂದು ಚೀಟಿಗೆ ಮುಂದುವರೆಸಿ ಅವೆರಡನ್ನೂ ಸ್ಟೇಪಲ್ಸ್ ಯಂತ್ರದಿಂದ ಹೊಲಿಯಬಹುದು. ಆ ಚೀಟಿಯ ಮೊದಲ ಪುಟದಲ್ಲಿ ಎಡಗಡೆ ಆ ಸಂಗತಿಯ ಆಕರವನ್ನೂ, ಬಲಗಡೆ ಆ ಸಂಗತಿ ಯಾವ ಅಧ್ಯಾಯದಲ್ಲಿ ಉಪಯೋಗಕ್ಕೆ

ಬರುವುದೋ ಆ ಅಧ್ಯಾಯವನ್ನು ಬರೆದುಕೊಳ್ಳಬೇಕು (ಒಂದೊಂದು ಅಧ್ಯಾಯಕ್ಕೂ ಒಂದೊಂದು ಸಂಜ್ಞೆಯನ್ನು ಇಟ್ಟುಕೊಳ್ಳಬಹುದು). ಓದಿದ ಪುಸ್ತಕದ ಪುಟವನ್ನು ಮರೆಯದೆ ನಮೂದಿಸಿಕೊಳ್ಳಬೇಕು. ಹೀಗೆ ವಿಷಯ ಸಂಗ್ರಹ ಮಾಡುತ್ತಾ ಹೋದರೆ ಕೆಲವು ತಿಂಗಳುಗಳಲ್ಲೇ ಚೀಟಿಗಳ ಸಂಖ್ಯೆ ಅನೇಕ ಸಾವಿರವಾಗುತ್ತದೆ. ಅವುಗಳನ್ನು ಒಂದು ಕಡೆ ಸುಮ್ಮನೆ ಜೋಡಿಸಿ ಇಟ್ಟಿರಬೇಕು. ಯಾವುದೂ ಕಳೆದುಹೋಗದಂತೆ ಎಚ್ಚರಿಕೆ ವಹಿಸಬೇಕೆಂಬುದೂ ಸ್ಪಷ್ಟವಾಗಿದೆ.

ಮೂಲ ಸಾಮಗ್ರಿಗೆ ಒಂದು ಬಣ್ಣದ ಗಾತ್ರದ ಚೀಟಿಗಳನ್ನು ಬಳಸಿದರೆ ದ್ವಿತೀಯ ಸಾಮಗ್ರಿಗೆ ಇನ್ನೊಂದು ಬಣ್ಣದ ಇನ್ನೊಂದು ಗಾತ್ರದ ಚೀಟಿಗಳನ್ನು ಬಳಸುವುದರಲ್ಲಿ ಹೆಚ್ಚು ಅನುಕೂಲಗಳಿವೆ. ಚೀಟಿಯನ್ನು ನೋಡಿದೊಡನೆಯೇ ಅದು ಮೂಲಸಾಮಗ್ರಿಯನ್ನು ಒಳಗೊಂಡಿದೆಯೇ ಅಥವಾ ಬೇರೆ ಸಾಮಗ್ರಿ ಇದೆಯೇ ಎಂಬುದು ಗೊತ್ತಾಗುತ್ತದೆ. ಇನ್ನೊಂದು ಬಣ್ಣದ, ಗಾತ್ರದ ಚೀಟಿಗಳಲ್ಲಿ ನಮ್ಮ ಸ್ವಂತ ಅನ್ನಿಸಿಕೆಗಳನ್ನು ಆಲೋಚನೆಗಳನ್ನು ಸಂದೇಹಗಳನ್ನು ಗುರುತುಮಾಡಿಕೊಳ್ಳುವುದೂ ಅಪೇಕ್ಷಣೀಯವಾದುದು.

ಇದೆಲ್ಲ ಕಷ್ಟವೆಂದು ತೋರಬಹುದು, ಆರಂಭದಲ್ಲಿ. ಆದರೆ ಒಮ್ಮೆ ಅಭ್ಯಾಸವಾಗಿಬಿಟ್ಟರೆ ಕಷ್ಟ ತೋರುವುದಿಲ್ಲ. ಆದರೆ ನಾವು ಸಂಗ್ರಹಿಸಿದ ಸಾಮಗ್ರಿಯನ್ನು ಪರಿಶೀಲಿಸಲು ಒಂದು ವ್ಯವಸ್ಥೆಗೆ ತರುವ ಘಟ್ಟದಲ್ಲಿ ಚೀಟಿಗಳ ಪದ್ಧತಿಯ ಬೆಲೆ ಗೊತ್ತಾಗುತ್ತದೆ. ನಮ್ಮ ಶ್ರಮವು ಕಡಮೆಯಾಗುತ್ತದೆ ಮಾತ್ರವಲ್ಲ, ನಾವು ಸಂಗ್ರಹಿಸಿದ ಯಾವ ಸಾಮಗ್ರಿಯೂ ನಮ್ಮ ಗಮನಕ್ಕೆ ಬಾರದೆ ವ್ಯರ್ಥವಾಗುವುದಿಲ್ಲ.

ಈ ಪಟ್ಟಿಕೆಗಳ ಪದ್ಧತಿಯು ಬಹುಶಃ ಎಲ್ಲ ರೀತಿಯ ಕೆಲಸಗಳಿಗೂ ಅನ್ವಯವಾಗದೇ ಇರಬಹುದು. ಎಲ್ಲಿ ಈ ಪದ್ಧತಿಯು ಹೊಂದುತ್ತದೆಯೋ ಅಲ್ಲಿ ಅದರ ಅನುಕೂಲಗಳು ಅಪಾರ. ಪಟ್ಟಿಕೆಗಳನ್ನು ಇಸ್ಪೀಟ್ ಎಲೆಗಳಂತೆ ನಮಗೆ ಬೇಕಾದ ರೀತಿಯಲ್ಲಿ ಜೋಡಿಸಿಕೊಳ್ಳಬಹುದು : ವಿಷಯಾನುಕ್ರಮವಾಗಿ, ಕಾಲಾನುಕ್ರಮವಾಗಿ ಇತ್ಯಾದಿ. ಒಂದು ಚೀಟಿಯಲ್ಲಿನ ಒಂದು ಸಂಗತಿಯು ಇನ್ನೊಂದು ಅಧ್ಯಾಯಕ್ಕೂ ಬರುವಂತಿದ್ದರೆ ಅದನ್ನು ಒಂದು ಗುಂಪಿನಿಂದ ಇನ್ನೊಂದು ಗುಂಪಿಗೆ ವರ್ಗಾಯಿಸಬಹುದು.

ಸಾಮಗ್ರಿ ಸಂಗ್ರಹದ ವಿಷಯವಾಗಿ ಒಂದು ಸ್ಪಷ್ಟವಾದ ಸೂಚನೆ - ಯಾವ ಘಟ್ಟದಲ್ಲಿಯೇ ಆಗಲಿ ಆಲಸ್ಯ ಅಥವಾ ಸೋಮಾರಿತನವು ಅಕ್ಷಮ್ಯ. ಮೂಲ ಸಾಮಗ್ರಿಯನ್ನು ಕೂಡಿ ಹಾಕುವಾಗ ನಾವು ಎಷ್ಟು ವಿಸ್ತಾರವಾಗಿ, ಎಷ್ಟು ಹೆಚ್ಚು ಪ್ರಮಾಣದಲ್ಲಿ ಸಂಗ್ರಹಿಸಿದರೂ ಅದರಲ್ಲಿ ತಪ್ಪೇನೂ ಇಲ್ಲ. ನಮಗೆ ಬೇಡವಾದ ಸಾಮಗ್ರಿಯನ್ನು ಕೈಬಿಡಬಹುದು. ಅಂತಹ ಸಾಮಗ್ರಿಯ ಸಹಾಯದಿಂದ ಆಮೇಲೆ ಅನೇಕ ಬಿಡಿ ಸಂಶೋಧನ ಲೇಖನಗಳನ್ನು ಬರೆದು ಪ್ರಕಟಿಸಲು ಬರುತ್ತದೆ. ಆದರೆ ಸಂಗ್ರಹದಲ್ಲಿ ಕೃಪಣತೆ ತೋರಿದರೆ ಮುಂದೆ ನಾವು ಕಷ್ಟಪಡಬೇಕಾಗುತ್ತದೆ. ಹಾಗೆಯೇ ದ್ವಿತೀಯ ಸಾಮಗ್ರಿಯ ಸಂಗ್ರಹದಲ್ಲೂ. ಒಂದು ಸಮಸ್ಯೆಗೆ ಸಂಬಂಧಿಸಿದಂತೆ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಇತರರು ಆಗಲೇ ಏನೇನು ವಿಚಾರ

ಮಾಡಿರುವರೋ ಅದನ್ನೆಲ್ಲವನ್ನೂ ಸಂಗ್ರಹಿಸಬೇಕು. ಕೆಲವು ಕಡೆಗಳಲ್ಲಿ ಅವರ ಬರಹಗಳ ಸಾರಾಂಶ ಸಾಕಾಗಬಹುದು. ಇನ್ನು ಕೆಲವು ಕಡೆ ಉದ್ಧರಿಸಲು ಅರ್ಹವೆಂದು ತೋರುವ ವಾಕ್ಯಗಳನ್ನು ಅಲ್ಲಿರುವಂತೆಯೇ ಬರೆದುಕೊಳ್ಳಬೇಕಾಗಬಹುದು. ಸಾರಾಂಶ ಯಾವುದು, ಯಥಾವತ್ತಾಗಿ ಪ್ರತಿಮಾಡಿಕೊಂಡಿರುವುದು ಯಾವುದು ಎಂಬುದನ್ನು ಬೇರ್ಪಡಿಸಲು ಉಚಿತ ಚಿಹ್ನೆಗಳನ್ನು ಬಳಸುವುದು ಅತ್ಯಗತ್ಯ.

ಸಂಶೋಧನ ವಿದ್ಯಾರ್ಥಿಗಳು ಸಾಮಗ್ರಿ ಸಂಗ್ರಹದ ಆರಂಭದಲ್ಲಿ ಅನುಭವದ ಅಭಾವದಿಂದಾಗಿ ಬಹುಮುಖ್ಯವಾದದ್ದನ್ನು ಟಿಪ್ಪಣಿ ಮಾಡಿಕೊಳ್ಳದೇ ಬಿಡುವುದುಂಟು. ಅತಿ ಅಮುಖ್ಯವಾದುದನ್ನು ಉತ್ಸಾಹದಿಂದ ಬರೆದುಕೊಳ್ಳುತ್ತ ಹೋಗುವುದುಂಟು. ಹೆಚ್ಚು ಹೆಚ್ಚು ಅನುಭವ ಬಂದಂತೆ ಯಾವುದು ಮುಖ್ಯ - ಅಮುಖ್ಯ, ಅಗತ್ಯ - ಅನಗತ್ಯ ಎಂಬ ವಿವೇಚನೆ ಅವರಲ್ಲಿ ತಲೆದೋರುತ್ತದೆ. ಅವರಿಗೆ ಮಾರ್ಗದರ್ಶಕರಾಗಿರಲು ಒಪ್ಪಿಕೊಂಡಿರುವ ವ್ಯಕ್ತಿಗಳಂತೆಯೇ ಅನುಭವವೂ ಇನ್ನೊಬ್ಬ ಮಾರ್ಗದರ್ಶಕನಾಗಿ ಪರಿಣಮಿಸುತ್ತದೆ.

ಸಾಮಗ್ರಿ ಸಂಗ್ರಹ ಮಾಡುತ್ತಿರುವಾಗಲೇ ತಾವು ಓದಿದ ಪುಸ್ತಕಗಳ, ಲೇಖನಗಳ ಹೆಸರು, ಅವುಗಳ ಕರ್ತೃಗಳು, ಪುಸ್ತಕವಾಗಿದ್ದರೆ ಅದರ ಪ್ರಕಾಶಕರು ಮತ್ತು ಪ್ರಕಟಣೆಯ ವರ್ಷ, ಲೇಖನವಾಗಿದ್ದರೆ ಅದು ಪ್ರಕಟವಾದ ಪತ್ರಿಕೆ, ಅದರ ಸಂಖ್ಯೆ (ಸಂಪುಟ, ಸಂಚಿಕೆ ಇತ್ಯಾದಿ) ಮತ್ತು ಪ್ರಕಟಣೆಯ ವರ್ಷ ಇತ್ಯಾದಿಗಳನ್ನು ಟಿಪ್ಪಣಿಗಳ ಒಂದು ಪಕ್ಕದಲ್ಲಿ ಮಾತ್ರವಲ್ಲದೆ, ಅದಕ್ಕಾಗಿ ಇಟ್ಟಿರುವ ಒಂದು ಸಣ್ಣ ನೋಟ್ ಪುಸ್ತಕದಲ್ಲಿಯೂ ಗುರುತುಹಾಕಿ ಕೊಳ್ಳುವುದರಿಂದ ಎಷ್ಟೋ ತೊಂದರೆಗಳನ್ನು ತಪ್ಪಿಸಬಹುದು. ಪುಟಸಂಖ್ಯೆಯನ್ನು ಟಿಪ್ಪಣಿಯ ಆರಂಭದಲ್ಲಿ ಸೂಚಿಸುವುದನ್ನಂತೂ ಅಪ್ಪಿ ತಪ್ಪಿಯೂ ಮರೆಯಬಾರದು. ಏಕೆಂದರೆ ಯಾವುದೋ ಒಂದು ಭಾಗವನ್ನು ಉದ್ಧರಿಸಬೇಕಾಗಿ ಬಂದಾಗ ಅದಕ್ಕಾಗಿ ಇಡೀ ಪುಸ್ತಕವನ್ನೋ ಲೇಖನವನ್ನೋ ಮತ್ತೆ ತಿರುವಿಹಾಕುವ ಅಥವಾ ಓದುವ ಪ್ರಸಂಗ ಬರಬಹುದು. ಒಂದು ಗ್ರಂಥವನ್ನೋ ಲೇಖನವನ್ನೋ ಓದುತ್ತಿರುವಾಗ ಅಲ್ಲಿ ಹೆಸರಿಸುವ ಗ್ರಂಥಗಳು, ಲೇಖನಗಳು ನಮ್ಮ ಕೆಲಸಕ್ಕೆ ಸಹಾಯವಾಗುವಂತಿದ್ದರೆ ಅವುಗಳನ್ನೂ ಕೂಡ ತಕ್ಷಣವೇ ನೋಟ್ ಪುಸ್ತಕದಲ್ಲಿ ಗುರುತುಹಾಕಿಕೊಳ್ಳುವುದು ಸರ್ವೋತ್ತಮವಾದುದು.

**ಸಮಸ್ಯೆಗಳನ್ನು ಬಿಡಿಸುವುದು**

ಕೆಲವು ಸಮಸ್ಯೆಗಳಲ್ಲಿ ಒಂದೊಂದು ಅಧ್ಯಾಯಕ್ಕೇ ಪ್ರತ್ಯೇಕ ಪ್ರತ್ಯೇಕವಾಗಿ ಸಾಮಗ್ರಿಯನ್ನು ಸಂಗ್ರಹಿಸಿ, ಅದನ್ನು ವಿವೇಚನೆಗೆ ಒಳಗುಮಾಡಿ ಬರಹದ ರೂಪಕ್ಕೆ ಇಳಿಸಲು ಸಾಧ್ಯ. ಇನ್ನು ಕೆಲವು ಸಮಸ್ಯೆಗಳಲ್ಲಿ ಎಲ್ಲ ಅಧ್ಯಾಯಗಳಿಗೂ ವಿಷಯ ಸಂಗ್ರಹವಾಗದೆ ಅವರ ವಿವೇಚನೆ ಸಾಧ್ಯವಾಗುವುದಿಲ್ಲ. ಇನ್ನು ಕೆಲವು ಸಮಸ್ಯೆಗಳಲ್ಲಿ ಒಂದೊಂದು ಅಧ್ಯಾಯಕ್ಕೂ ಪ್ರತ್ಯೇಕ ಪ್ರತ್ಯೇಕವಾಗಿ ಸಾಮಗ್ರಿ ಸಂಗ್ರಹ ಸಾಧ್ಯವಾಗುವುದಿಲ್ಲ.

ಅಂತೂ, ಸಾಮಗ್ರಿ ಸಿದ್ಧವಾಗಿದೆ. ನಮ್ಮ ಕಣ್ಣ ಮುಂದೆ ಬೇರೆ ಬೇರೆ ಬಣ್ಣದ, ಗಾತ್ರದ ಚೀಟಿ ಅಥವಾ ಪಟ್ಟಿಕೆಗಳ ರಾಶಿ ಕುಳಿತಿದೆ. ನಾವು ಆರಿಸಿಕೊಂಡಿರುವ ಸಮಸ್ಯೆಯನ್ನು ಬಿಡಿಸಬೇಕಾಗಿದೆ. ಸಂಶೋಧನೆಯಲ್ಲಿ ನಾವು ಅತ್ಯಂತ ಮಹತ್ವದ ಘಟ್ಟವನ್ನು ತಲುಪಿದ್ದೇವೆ.

ಮಿಶ್ರವಾಗಿ ಹೋಗಿರುವ ಚೀಟಿಗಳನ್ನು ಒಂದೊಂದು ಅಧ್ಯಾಯಕ್ಕೂ ಸಂಬಂಧಿಸಿದಂತೆ ಬೇರೆ ಬೇರೆಯಾಗಿ ತೆಗೆದು ಬೇರೆ ಬೇರೆ ವರ್ಗಗಳಾಗಿ ಮಾಡಿಕೊಳ್ಳಬೇಕು. ಎಂದರೆ ಹತ್ತು ಅಧ್ಯಾಯಗಳಿದ್ದರೆ ಹತ್ತು ಕಟ್ಟುಗಳಿರುತ್ತವೆ. ಒಂದೊಂದು ಅಧ್ಯಾಯದಲ್ಲೂ ಬರಬೇಕಾದ ವಿಷಯಕ್ಕೆ ಸಂಬಂಧಿಸಿದ ಸಾಮಗ್ರಿ ಒಂದೊಂದು ಕಟ್ಟಿನಲ್ಲಿ ಸಿಗುತ್ತದೆ. ಬಿಡಿ ಹಾಳೆಗಳಲ್ಲಿ ಟಿಪ್ಪಣಿ ಮಾಡಿಕೊಂಡಿದ್ದರೆ, ಆಯಾ ಅಧ್ಯಾಯಕ್ಕೆ ಸಂಬಂಧಿಸಿದ ಹಾಳೆಗಳನ್ನೇ ಒತ್ತಟ್ಟಿಗೆ ತೆಗೆದಿರಿಸಿಕೊಳ್ಳಬೇಕು.

ಈಗ ಸಮಗ್ರ ಸಾಮಗ್ರಿ ನಮ್ಮ ಮುಂದಿದೆ. ಸಾಮಗ್ರಿಯನ್ನು ಸಂಗ್ರಹಿಸುತ್ತಿರುವಾಗಲೇ ಮನಸ್ಸು ಸಮಸ್ಯೆಯನ್ನು ಕುರಿತು ಯೋಚಿಸಲು ಆರಂಭಿಸಿರುತ್ತದೆ. ಆಗಲೇ ಒಂದು ಸಮಸ್ಯೆ ಹತ್ತಾರು ಸಮಸ್ಯೆಗಳನ್ನು ಹುಟ್ಟಿಸಿರುತ್ತದೆ. ಒಂದು ಮಾರ್ಗದಲ್ಲಿ ಹೋಗುತ್ತಿರುವಾಗ ಅಕ್ಕಪಕ್ಕದಲ್ಲಿ ಅನೇಕ ಸಣ್ಣ ಮಾರ್ಗಗಳೂ ಇರುವುದು ಗಮನಕ್ಕೆ ಬಂದಿರುತ್ತದೆ. ಸಮಸ್ಯೆಯೇ ಅಲ್ಲ ಎಂದುಕೊಂಡಿದ್ದ ಸಂಗತಿ ಇದ್ದಕ್ಕಿದ್ದಂತೆ ಕಠಿಣ ಸಮಸ್ಯೆಯಾಗಿ ಪರಿಣಮಿಸುತ್ತದೆ, ಸಮಸ್ಯೆ ಎಂದುಕೊಂಡಿದ್ದ ಸಂಗತಿ ಸರಳವಾಗುತ್ತದೆ. ಬೆಳಕಿರುವ ಕಡೆ ಕತ್ತಲು ಬೀಳುತ್ತದೆ, ಕತ್ತಲಿದ್ದ ಕಡೆ ಬೆಳಕು ಬಿದ್ದಿರುತ್ತದೆ, ಅಥವಾ ಬೆಳಕು ಬೀಳುವ ಸೂಚನೆ ಕಂಡುಬರುತ್ತದೆ. (ಎಷ್ಟೋ ಸಾರಿ ನಾವು ಬೆನ್ನಟ್ಟಿಕೊಂಡು ಹೋಗುತ್ತಿರುವ ದೊಡ್ಡ ಸಮಸ್ಯೆಯೊಂದನ್ನು ಬಿಟ್ಟು ಅದು ಪ್ರಾಸಂಗಿಕವಾಗಿ ಏಳಿಸಿದ ಸಮಸ್ಯೆಗಳೇ ನಮ್ಮ ಗಮನವನ್ನು ಸೆಳೆಯಬಹುದು. ನಿಬಂಧವೊಂದನ್ನು ಮುಗಿಸುವ ಹೊತ್ತಿಗೆ ಸಂಶೋಧನ ವಿದ್ಯಾರ್ಥಿ ಅದರ ಉಪಸೃಷ್ಟಿಗಳಂತಿರುವ ಅನೇಕ ಸಣ್ಣ ಸಂಪ್ರಬಂಧಗಳನ್ನು ಬರೆಯಲು ಸಾಧ್ಯ). ಈಗ ಎಂದರೆ ಸಾಮಗ್ರಿ ಸಂಗ್ರಹ ಮುಗಿಯುವ ಹೊತ್ತಿಗೆ ಸಮಸ್ಯೆಯನ್ನು ನೋಡುವ ವಿಧಾನ, ಆಧಾರಸಾಮಗ್ರಿಗಳನ್ನು ಬಳಸಿಕೊಳ್ಳುವ ಪರಿಶೀಲಿಸುವ ಅವುಗಳ ಆಧಾರದಿಂದ ನಿರ್ಣಯಗಳನ್ನು ಕೈಕೊಳ್ಳುವ ರೀತಿ ಮುಂತಾದವುಗಳಲ್ಲಿ ಹೆಚ್ಚಿನ ಪರಿಣತಿ ಬಂದಿರಬಹುದು. ಒಂದು ಅಧ್ಯಾಯಕ್ಕೆ ಸಂಬಂಧಿಸಿದ ಚೀಟಿಗಳನ್ನು ಮತ್ತೆ ನಮಗೆ ಬೇಕಾದ ರೀತಿಗಳಲ್ಲಿ ಜೋಡಿಸಿಕೊಳ್ಳಬಹುದು. ಅವುಗಳನ್ನು ನಮ್ಮ ಕಣ್ಣ ಮುಂದೆ ಹರಡಿಕೊಂಡು ಮತ್ತೆ ಮತ್ತೆ ಯೋಚಿಸಬೇಕು. ನಾವು ಬಿಟ್ಟರೂ ವಿಷಯ ನಮ್ಮನ್ನು ಬಿಡಬಾರದು - ಅಷ್ಟರಮಟ್ಟಿಗೆ ಅದು ನಮ್ಮ ಮನಸ್ಸಿನಲ್ಲಿ ಇಂಗಿ ಹೋಗಬೇಕು. ಸಾಕ್ಷ್ಯಾಧಾರಗಳು ಯಾವ ತೀರ್ಮಾನದ ಕಡೆ ನಮ್ಮನ್ನು ಕೊಂಡೊಯ್ಯುತ್ತವೆಯೋ ಅತ್ತ ಸಾಗಬೇಕು.

ಇಲ್ಲಿ ಒಂದು ಸಣ್ಣ ಎಚ್ಚರಿಕೆ ಅಗತ್ಯ. ನಾವು ಸಂಶೋಧನ ಕಾರ್ಯವನ್ನು ಆರಂಭಿಸುವ ಮೊದಲೇ ಅಥವಾ ಆರಂಭಿಸಿ ಸಾಮಗ್ರಿ ಸಂಗ್ರಹವನ್ನು ಮಾಡುತ್ತಿರುವಾಗಲೇ ಯಾವುದೋ ಸಮಸ್ಯೆಯ ವಿಷಯದಲ್ಲಿ ಒಂದು ತೀರ್ಮಾನಕ್ಕೆ ಬಂದುಬಿಡುವುದು ಅತ್ಯಂತ

ಅಪಾಯಕಾರಿಯಾದುದು. ಹಾಗೆ ತೀರ್ಮಾನಕ್ಕೆ ಬರಲು ಅನೇಕ ಪ್ರಚೋದನೆಗಳಿರಬಹುದು. ಪ್ರಚಲಿತವಾಗಿರುವ ಆಧಾರಗಳು, ಜನರ ನಂಬಿಕೆಗಳು, ತನ್ನ ಶ್ರದ್ಧೆ, ಅಥವಾ ತನಗೆ ಚೆನ್ನಾಗಿದೆಯೆಂದು ತೋರುವುದು ಅಥವಾ ಸುಲಭವಾಗಿರುವುದು ಅಥವಾ ಅದರಿಂದ ಹಲವು ಜನರನ್ನು ಮೆಚ್ಚಿಸಬಹುದೆಂಬ ಬಯಕೆ - ಇವುಗಳಲ್ಲಿ ಒಂದೊಂದೂ ಅಥವಾ ಎಲ್ಲವೂ ಒಟ್ಟು ಸೇರಿ ಪ್ರಭಾವವನ್ನು ಬೀರಿರಬಹುದು. ಇಷ್ಟೇ ಅಪಾಯಕಾರಿ, ಇತರ ವಿದ್ವಾಂಸರ ನಿರ್ಣಯಗಳು. ನಾವು ಯಾರ ವಿಷಯದಲ್ಲಿ ಗೌರವವಿಟ್ಟಿರುತ್ತೇವೆಯೋ ಅವರ ಅಭಿಪ್ರಾಯಗಳನ್ನು ಒಪ್ಪಲೇಬೇಕೆಂದೇನೂ ಇಲ್ಲ. ಏಕೆಂದರೆ ಅವರು ಹೇಳಿದ್ದೆಲ್ಲವೂ ಸರಿಯಾಗಿರುತ್ತದೆಯೆಂದು ಹೇಗೆ ಹೇಳುವುದು ? ಒಂದು ಸಂಗತಿ ಸಂಶಯಕ್ಕೆ ಆಸ್ಪದವಿಲ್ಲದಂತೆ, ಸಮರ್ಪಕವಾಗಿ ತೀರ್ಮಾನವಾಗಿದ್ದರೆ ಅಲ್ಲಿ ಸಮಸ್ಯೆಯೇ ಇರುವುದಿಲ್ಲ. ಆದ್ದರಿಂದ ಸಂಶೋಧಕ ಎಂದಿಗೂ ಅವಸರವಸರವಾಗಿ ಮೊದಲೇ ಒಂದು ತೀರ್ಮಾನಕ್ಕೆ ಬಂದುಬಿಡಬಾರದು. ಹಾಗೆ ಅಕಸ್ಮಾತ್ ಒಂದು ತೀರ್ಮಾನಕ್ಕೆ ಬಂದದ್ದೇ ಆದರೆ, ಅವನ ಮನಸ್ಸು ಎಲ್ಲ ಆಧಾರಗಳನ್ನೂ ಆ ತೀರ್ಮಾನಕ್ಕೆ ಸರಿಯಾಗಿ ಹೊಂದಿಸುವ ಯತ್ನದಲ್ಲಿ ತೊಡಗುತ್ತದೆ. ಆಧಾರಗಳು ವಿರುದ್ಧವಾಗಿದ್ದರೆ ಅವನ್ನು ಹಿಂದಕ್ಕೆ ತಳ್ಳುತ್ತದೆ ಅಥವಾ ವಿರೂಪಗೊಳಿಸುತ್ತದೆ. ಆದ್ದರಿಂದ ಸಂಶೋಧಕ ಇಂತಹ ತೀರ್ಮಾನಗಳ ವಿಷಯದಲ್ಲಿ ಬಹಳ ಎಚ್ಚರಿಕೆ ಉಳ್ಳವನಾಗಿರಬೇಕು.

ಆಧಾರಗಳ ಬೆಂಬಲದಿಂದ ಮೂಡಿಬರುವ ತೀರ್ಮಾನವೇ ನಿಲ್ಲತಕ್ಕದ್ದು. ಸಂಶೋಧನೆಗೆ ಆಧಾರಗಳೇ ಬೆನ್ನೆಲುಬು. ಯಾವ ತೀರ್ಮಾನವು ಆಧಾರಗಳ ಬೆಂಬಲವಿಲ್ಲದೆ ಕೇವಲ ಊಹೆಯ ಮೇಲೆ ಅಥವಾ ಕಲ್ಪನೆಯ ಮೇಲೆ ನಿಂತಿರುತ್ತದೆಯೋ ಅದನ್ನು ನಿರ್ದಾಕ್ಷಿಣ್ಯವಾಗಿ ತಿರಸ್ಕರಿಸಬೇಕು. ಕಲ್ಪನೆಗೆ ಸಾಹಿತ್ಯದಲ್ಲಿ ಪ್ರಥಮ ಸ್ಥಾನವಿರಬಹುದು, ಆದರೆ ಇಲ್ಲಿ ಅದಕ್ಕೆ ಸ್ಥಾನವಿಲ್ಲವೆಂದಲ್ಲ, ಇದೆ; ಆದರೆ ಕೊನೆಯ ಸ್ಥಾನ.

ಆದರೆ ಎಲ್ಲ ಸಮಯಗಳಲ್ಲಿಯೂ ಆಧಾರಗಳು ಸಂಗ್ರಹವಾದ ಮೇಲೆಯೇ ಸತ್ಯ ಮನಸ್ಸಿನಲ್ಲಿ ಮೂಡಿಬರಬೇಕು ಎಂದು ನಿರೀಕ್ಷಿಸುವುದು ತಪ್ಪಾಗುತ್ತದೆ. ಏನನ್ನೋ ಓದುತ್ತಿರುವಾಗ ಅಥವಾ ಯಾವುದನ್ನೋ ಕುರಿತು ಆಲೋಚಿಸುತ್ತಿರುವಾಗ ನಮ್ಮ ಮನಸ್ಸಿಗೆ ಒಂದು ಸಂಗತಿ ಹೊಳೆಯಬಹುದು, ವಾಸ್ತವ ಸಂಗತಿ ಹೀಗಿರಬಹುದೇ ಎಂದು ಅನ್ನಿಸಬಹುದು. ಆ ಸಂಗತಿಯನ್ನು ನಾವು ಮನಸ್ಸಿನಲ್ಲಿಟ್ಟುಕೊಂಡು ಇತರ ಆಧಾರಗಳನ್ನು ಹುಡುಕಿಕೊಂಡು ಹೊರಡುತ್ತೇವೆ. ಒಮ್ಮೆ ನಮ್ಮ ಮನಸ್ಸಿಗೆ ಹೊಳೆದದ್ದು ಆಧಾರಗಳಿಂದ ಪುಷ್ಟವಾಗಿ ಸತ್ಯವೆಂದು ನಿರ್ಣಯವಾಗಬಹುದು. ಅಥವಾ ಸತ್ಯವಲ್ಲವೆಂದೂ ನಿರ್ಣಯವಾಗಬಹುದು. ನಮಗೆ ಅನ್ನಿಸಿದ್ದೇ ಸತ್ಯವೆಂಬ ಹಠವಿರಕೂಡದು. ಆರಂಭದಲ್ಲೇ ಪ್ರಮೇಯಗಳನ್ನು (Hypothesis) ಮಾಡಿಕೊಳ್ಳುವುದು ಕೆಲವು ಸಾರಿ ಅಗತ್ಯವಾಗಬಹುದು. ಹಾಗೆ ಮಾಡಿಕೊಳ್ಳುವುದರಲ್ಲಿ ತಪ್ಪೇನೂ ಇಲ್ಲ. ಆದರೆ ಪ್ರಮೇಯಗಳು ನಿರ್ಣಯಗಳೆಂಬ ಭ್ರಾಂತಿಯಿರಕೂಡದು.

ಒಂದು ಸಂಗತಿ ತೀರ್ಮಾನವಾಗಬೇಕಾದರೆ ಎಷ್ಟು ಆಧಾರಗಳು ಬೇಕು ? ಸರಿಯಾದ ಆಧಾರ ದೊರೆತರೆ ಒಂದೇ ಸಾಕು. ಸರಿಯಾದುವು ದೊರೆಯದಿದ್ದರೆ ಹತ್ತಾರು ಆಧಾರಗಳಿಂದಲೂ ಒಂದು ಸಮಸ್ಯೆ ಬಗೆಹರಿಯದೆಯೇ ಇರಬಹುದು. ನಾಲ್ಕು ಆಧಾರಗಳ ಸಹಾಯದಿಂದ ನಾವು ಒಂದು ತೀರ್ಮಾನಕ್ಕೆ ಬರಬಹುದೋ ಏನೋ ಎಂದುಕೊಳ್ಳುವಷ್ಟರಲ್ಲಿ ಐದನೆಯ ಆಧಾರವು ದೊರೆತು ಸಮಸ್ಯೆಯನ್ನು ಜಟಿಲಗೊಳಿಸಬಹುದು. ಒಂದು ಸಂಗತಿಗೆ ಸಂಬಂಧಿಸಿದ ಒಂದು ಉಲ್ಲೇಖವನ್ನು ನೋಡಿದಾಗ ಏನೂ ಸಮಸ್ಯೆ ಕಾಣಿಸದೆ ಇದ್ದದ್ದು, ಎರಡನೆಯ ಉಲ್ಲೇಖದಿಂದ ಅದು ಸಮಸ್ಯೆಯಾಗಿ ಪರಿಣಮಿಸಿ, ಮೂರನೆಯ ಉಲ್ಲೇಖದಿಂದ ಅದು ಪರಿಹಾರವಾಗಬಹುದು.

ಒಮ್ಮೊಮ್ಮೆ ನಾವು ಸಂಗ್ರಹಿಸಿದ ಆಧಾರಗಳು ಪರಸ್ಪರ ವಿರುದ್ಧವಾದ ತೀರ್ಮಾನಗಳಿಗೆ ಕೊಂಡೊಯ್ಯುವಂತಿರಬಹುದು. ಆಧಾರಗಳ ಸಹಾಯದಿಂದ ಒಂದು ಸಮಸ್ಯೆ ಬಗೆಹರಿದರೆ ಸಂತೋಷವೇ. ಬಗೆಹರಿಯದಿದ್ದರೆ ಅದನ್ನು ಜೀವಂತವಾಗಿ ಉಳಿಸುವುದು ಅತ್ಯವಶ್ಯಕ. ಮುಂದೆ ಇನ್ನೂ ಹೆಚ್ಚು ಆಧಾರಗಳು ದೊರೆತಾಗ ತಾನೇ ಅದನ್ನು ಪರಿಹರಿಸಬಹುದು ಅಥವಾ ಇತರರು ಅದನ್ನು ಪರಿಹರಿಸಬಹುದು. ಸಮಸ್ಯೆ ಪರಿಹಾರವಾಗದಿದ್ದಾಗ ಅದನ್ನು ಸಮಸ್ಯೆಯಾಗಿಯೇ ಉಳಿಸದವನು ಸಂಶೋಧಕನೆನ್ನಿಸಿಕೊಳ್ಳಲಾರ. ಆದರೆ ಮೇಲೆ ಹೇಳಿದಂತೆ ಆಧಾರಗಳು ಪರಸ್ಪರ ವಿರುದ್ಧವಾಗಿದ್ದರೆ ಏನು ಮಾಡುವುದು ? ಈ ಪ್ರಶ್ನೆಗೆ ಉತ್ತರ ಹೇಳುವುದು ಕಷ್ಟವಾದರೂ ಕೆಳಗಿನ ಕೆಲವು ಸೂಚನೆಗಳು ಅಂತಹ ಕಷ್ಟದ ಸನ್ನಿವೇಶಗಳಲ್ಲಿ ಸಹಾಯವನ್ನು ಮಾಡಬಹುದು. ಸಂಶೋಧಕನಿಗೆ ಬಹು ಮುಖ್ಯವಾದುದು ಐತಿಹಾಸಿಕ ದೃಷ್ಟಿ ಮತ್ತು ವಾಸ್ತವಿಕತೆಯ ದೃಷ್ಟಿ. ಎಲ್ಲ ಸಾಕ್ಷ್ಯಾಧಾರಗಳಿಗೂ ಸಮಾನ ಸ್ಥಾನವು ದೊರಕಲಾರದು. ಅವುಗಳಲ್ಲಿ ಕೆಲವು ವಿಶ್ವಾಸಪಾತ್ರವಾಗಿರುತ್ತವೆ, ಕೆಲವು ಸಂಶಯಾಸ್ಪದವಾಗಿರುತ್ತವೆ. ಇನ್ನು ಕೆಲವು ತಳ್ಳಿಹಾಕಲು ಯೋಗ್ಯವಾಗಿರುತ್ತವೆ. ಇವುಗಳಲ್ಲಿ ಮೊದಲನೆಯ ವರ್ಗದವಕ್ಕೇ ಹೆಚ್ಚು ಮನ್ನಣೆ ಎಂಬುದು ಸ್ಪಷ್ಟವಾಗಿದೆ. ಎರಡನೆಯ ವರ್ಗದ ಆಧಾರಗಳ ಮೇಲೆ ಒಂದು ಸಿದ್ಧಾಂತವನ್ನು ಕಟ್ಟಲು ಸಾಧ್ಯವಿಲ್ಲ. ಬೇರೆ ಆಧಾರಗಳಿಂದ ಕಟ್ಟಿದ ಸಿದ್ಧಾಂತಕ್ಕೆ ಇವು ಪುಷ್ಟಿಯನ್ನು ಒದಗಿಸುತ್ತವೆ. ಅಥವಾ ಇತರ ವಿಶ್ವಾಸಪಾತ್ರ ಆಧಾರಗಳೇ ಇಲ್ಲದಿರುವಾಗ ಅನಿವಾರ್ಯವಾಗಿ ಇವಕ್ಕೆ ಹೆಚ್ಚು ಬೆಲೆಯನ್ನು ಕೊಡಬೇಕಾಗುತ್ತದೆ. ಮೂರನೆಯ ವರ್ಗದ ಆಧಾರಗಳಂತೂ ಸಂಪೂರ್ಣವಾಗಿ ತ್ಯಾಜ್ಯ.

ಆದರೆ ಆಧಾರಗಳನ್ನು ನಂಬಲರ್ಹ, ನಂಬಲನರ್ಹ ಎಂಬ ವಿಂಗಡಿಸಲು ಆಧಾರವೇನು ಎಂಬ ಪ್ರಶ್ನೆಗೆ ಉತ್ತರ ಸುಲಭವಲ್ಲ. ಇನ್ನೊಬ್ಬರಿಂದ ಕೇಳಿ ತಿಳಿದುಕೊಂಡವರ ಹೇಳಿಕೆಗಳಿಗಿಂತ ಪ್ರತ್ಯಕ್ಷ ದರ್ಶಿಗಳ ಹೇಳಿಕೆಗಳು ಹೆಚ್ಚು ವಿಶ್ವಾಸಾರ್ಹ. ಕಾಲದ ದೃಷ್ಟಿಯಿಂದ ಒಂದು ಘಟನೆ ಅಥವಾ ಸಂಗತಿಗೆ ದೂರದಲ್ಲಿರುವವರ ಹೇಳಿಕೆಗಳಿಗಿಂತ ಹತ್ತಿರದಲ್ಲಿರುವವರ ಹೇಳಿಕೆಗಳು ಹೆಚ್ಚು ವಿಶ್ವಾಸಾರ್ಹ. ಕಲ್ಪನಾಪ್ರಧಾನರೂ ಭಾವುಕರೂ ಆದವರ ಹೇಳಿಕೆಗಳಿಗಿಂತ ಅಂತಹ ಸ್ವಭಾವದವರಲ್ಲದ ವ್ಯಕ್ತಿಗಳ ಹೇಳಿಕೆಗಳು ಹೆಚ್ಚು ನಂಬಲರ್ಹ. ಒಬ್ಬ ವ್ಯಕ್ತಿ ಒಂದು ಸಂಗತಿ

ಅಥವಾ ಒಂದು ಘಟನೆ ಇವುಗಳನ್ನು ದ್ವೇಷದ ದೃಷ್ಟಿಯಿಂದ ನೋಡಿದವನು ಸಹಜವಾಗಿಯೇ ವಾಸ್ತವ ಸಂಗತಿಯನ್ನು ಮಾರ್ಪಡಿಸುತ್ತಾನೆ. ದ್ವೇಷ ಎಂತೋ ಅಂತೆಯೇ ಆತ್ಮಾಭಿಮಾನವೂ ವಾಸ್ತವ ಸಂಗತಿಯನ್ನು ಮಾರ್ಪಡಿಸುತ್ತದೆ. ಸತ್ಯವನ್ನು ನಿರ್ಣಯಿಸುವಾಗ ಈ ಎರಡೂ ದೃಷ್ಟಿಗಳನ್ನೂ ತೋಲನ ಮಾಡಬೇಕಾಗುತ್ತದೆ. ಒಂದು ಸಂಗತಿಯನ್ನು ಒಬ್ಬ ಒಂದು ರೀತಿಯಲ್ಲಿ ಹೇಳಿ, ಇನ್ನೊಬ್ಬ ಇನ್ನೊಂದು ರೀತಿಯಲ್ಲಿ ನಿರೂಪಿಸಿರುತ್ತಾನೆ ಎಂದು ಭಾವಿಸೋಣ. ಅವೆರಡರಲ್ಲಿ ಯಾವುದು ಮೂಲಸತ್ಯಕ್ಕೆ ಹತ್ತಿರ ಎಂಬುದನ್ನು ನಿರ್ಣಯಿಸುವಾಗ ಆ ಸಂಗತಿಯನ್ನು ಮಾರ್ಪಡಿಸಲು ಕಾರಣವೇನು, ಉದ್ದೇಶವೇನು ಎಂಬುದರ ವಿವೇಚನೆ ಸಹಾಯಮಾಡುತ್ತದೆ. ಎಂದರೆ ಸಂಗತಿಯನ್ನು ಮಾರ್ಪಡಿಸಲು ನಾವು ಕಾರಣವನ್ನು ಹೇಳುವಂತಿರಬೇಕು. ಧಾರ್ಮಿಕ ವಿಷಯಗಳಲ್ಲಿ ಸಹಜವಾದದ್ದನ್ನು, ಮಾನವೀಯವಾದದ್ದನ್ನು ಮುಂದಿನವರು ಅಸಹಜವಾಗಿ, ದೈವಿಕವಾಗಿ ಮಾರ್ಪಡಿಸುವ ಪ್ರವೃತ್ತಿ ಇರುತ್ತದೆ. ಇಂತಹ ಕಡೆಗಳಲ್ಲಿ ಸಹಜವೂ ಮಾನವೀಯವೂ ಆದ ಘಟನೆಗಳು ಹೆಚ್ಚು ವಿಶ್ವಾಸಾರ್ಹ.

ಮೇಲಿನವು ಕೆಲವು ಕೇವಲ ಸೂಚನೆಗಳು ಮಾತ್ರ. ಇಂಥವೇ ಸರಿಯಾದ ಆಧಾರಗಳು, ಇಂಥವೇ ಸರಿಯಾದ ಆಧಾರಗಳಲ್ಲ ಎಂದು ಖಚಿತವಾದ ನಿಯಮಗಳನ್ನು ಹಾಕುವುದು ಕಷ್ಟ.

ಸಾಮಗ್ರಿಯನ್ನು ನಮ್ಮ ಮುಂದಿಟ್ಟುಕೊಂಡು ಸಮಸ್ಯೆಗಳನ್ನು ಬಿಡಿಸಲು ಹೊರಟಾಗ ನಮ್ಮ ಮುಂದಿನ ಮಾರ್ಗವೆಲ್ಲವೂ ಸುಗಮವಾಗಿರುತ್ತದೆ ಎಂದು ಹೇಳಲು ಬರುವಂತಿಲ್ಲ. ಅಂತಹ ಸಮಯದಲ್ಲಿ ಮಾರ್ಗದರ್ಶಕರ ಯಾವುದೋ ಸೂಚನೆ, ಯಾವುದೋ ಲೇಖನವನ್ನು ಓದುತ್ತಿರುವಾಗ ಆ ಲೇಖಕ ಆಡಿರುವ ಒಂದು ಮಾತು ಅಥವಾ ಅವನು ಉಲ್ಲೇಖಿಸಿರುವ ಇನ್ನಾವುದೋ ಲೇಖನ, ಅಥವಾ ಸಮಸ್ಯೆಯನ್ನು ಕುರಿತು ನಾವು ಚಿಂತಿಸುತ್ತಿರುವಾಗ ಬಂದ ಒಂದು ಹೊಳಹು - ಇವು ನಮ್ಮನ್ನು ಇನ್ನೊಂದು ರೀತಿಯ ಆಲೋಚನಾ ವಿಧಾನಕ್ಕೆ ಕೊಂಡೊಯ್ಯಬಹುದು, ಸಮಸ್ಯೆಯ ಪರಿಹಾರಕ್ಕೆ ಬೇಕಾದ ಹೊಸ ಸಾಮಗ್ರಿಯನ್ನು ಒದಗಿಸಬಹುದು. ಅಂತಹ ಸಮಯಗಳಲ್ಲಿ ನಮಗೆ ಹೊಸದಾಗಿ ತೋರಿದ ಮಾರ್ಗದಲ್ಲಿ ಕಡೆತನಕ ನಡೆಯುವುದು ಒಳ್ಳೆಯದು. ಅಲ್ಲಿ ಏನೂ ಸಿಗದೆ ನಿರಾಶರಾಗಿ ಹಿಂದಕ್ಕೆ ಬರಲೂ ಸಿದ್ಧವಾಗಿರಬೇಕು.

ನಾವು ಆರಿಸಿಕೊಂಡ ಒಂದು ವಿಷಯವನ್ನು ಹಿಂದಿನವರು ಯಾರೂ ಆರಿಸಿಕೊಳ್ಳದೆ ಇದ್ದು, ಅದನ್ನು ಕುರಿತು ಆಲೋಚಿಸುವವರಲ್ಲಿ ನಾವೇ ಮೊದಲಿಗರಾಗಿದ್ದರೆ ಅದರ ವಿಷಯವಾಗಿ ನಾವು ನಮ್ಮ ಅಭಿಪ್ರಾಯಗಳನ್ನು ನಿರಾಳವಾಗಿ ವ್ಯಕ್ತಪಡಿಸಬಹುದು. ಆದರೆ ಅದರ ವಿಷಯವಾಗಿ ಹಿಂದಿನವರು ಆಗಲೇ ಚರ್ಚಿಸಿ, ಒಂದು ಖಚಿತವಾದ ನಿರ್ಧಾರಕ್ಕೆ ಬಂದಿದ್ದರೆ ನಾವು ಅದನ್ನು ಮತ್ತೆ ವಿಸ್ತಾರವಾಗಿ ಚರ್ಚಿಸುವುದು ಸಂಪೂರ್ಣವಾಗಿ ಅನವಶ್ಯಕ. ಆ ತೀರ್ಮಾನವನ್ನು ನಾವು ಒಪ್ಪಿಕೊಂಡು ಮುಂದುವರಿಯಬಹುದು, ನಮ್ಮ ವಿವೇಚನೆಗೆ ಅದು ಸಹಾಯವನ್ನು ಮಾಡುವಂತಿದ್ದರೆ ಅದನ್ನು ಬಳಸಿಕೊಳ್ಳಬಹುದು. ಆದರೆ ಹಿಂದಿನವರು

ಚರ್ಚಿಸಿ ಒಂದು ತೀರ್ಮಾನಕ್ಕೆ ಬರಲು ವಿಫಲರಾಗಿದ್ದರೆ, ಅಥವಾ ಅವರ ತೀರ್ಮಾನವು ಸಾಧುವಲ್ಲ ಎಂದು ತೋರಿದರೆ ಅವರ ಚರ್ಚೆಗಳ ಸಾರಾಂಶಗಳನ್ನು ಹೇಳಿ, ಅವರ ಚರ್ಚೆಗಳಲ್ಲಿನ ದೋಷಗಳನ್ನು ತೋರಿಸಿ ತನ್ನ ತೀರ್ಮಾನವನ್ನು ಕೊಡಬೇಕು. ಅವರಿಗಿಂತ ತಾನು ಎಲ್ಲಿ, ಎಷ್ಟು ದೂರ ಮುಂದೆ ಹೋಗಿದ್ದೇನೆ ಎಂಬುದನ್ನು ಸಂಶೋಧಕ ತೋರಿಸಬೇಕು. ಆದರೆ ಅವರಿಗೆ ಅವನು ಕೃತಜ್ಞನಾಗಿರಬೇಕಾಗುತ್ತದೆ. ಅವರ ತಪ್ಪುಗಳ ಸಹಾಯದಿಂದ ಅಲ್ಲವೇ ಇವನು ಮುಂದೆ ಹೋಗಲು ಸಾಧ್ಯವಾದದ್ದು?

ಊಹೆಗೆ ಸಂಶೋಧನೆಯಲ್ಲಿ ಸ್ಥಾನವಿಲ್ಲ ಎಂದು ಹಿಂದೆ ಹೇಳಿದೆ. ಆದರೆ ಆಧಾರ ಸಾಮಗ್ರಿಗಳ ಸಹಾಯದಿಂದ ಸ್ಪಷ್ಟವಾದ ಒಂದು ನಿರ್ಣಯಕ್ಕೆ ಬರಲು ಸಾಧ್ಯವಾಗದಂತಿದ್ದು ವಾಸ್ತವ ಸಂಗತಿಯನ್ನು ಊಹಿಸಲು ಬರುವಂತಿದ್ದರೆ ಅದಕ್ಕೆ ಸ್ವಲ್ಪಮಟ್ಟಿನ ಅವಕಾಶವಿದೆ. ಈ ಆಧಾರಗಳ ಸಹಾಯದಿಂದ ಇಷ್ಟರಮಟ್ಟಿನ ಊಹೆಗೆ ಅವಕಾಶವಿದೆ, ಊಹೆಯ ಸಹಾಯದಿಂದ ಇಷ್ಟು ದೂರ ಹೋಗಲು ಸಾಧ್ಯ ಎಂದು ಸ್ಪಷ್ಟವಾಗಿ ಹೇಳಬೇಕು. ಆದರೆ ಊಹೆ ಎನ್ನುವುದು ಕುದುರೆ ಇದ್ದಂತೆ, ಅದನ್ನು ಸಂಪೂರ್ಣವಾಗಿ ನಮ್ಮ ವಶದಲ್ಲಿಟ್ಟುಕೊಳ್ಳಬೇಕು. ಇಲ್ಲದಿದ್ದರೆ ಸಂಶೋಧನ ಕ್ಷೇತ್ರದಲ್ಲಿ ಅದಕ್ಕಿಂತಲೂ ಅನರ್ಥಕಾರಿ ಮತ್ತೊಂದಿಲ್ಲ.

ನಮಗೆ ದೊರಕಿರುವ ಆಧಾರಗಳ ಸಹಾಯದಿಂದ ನಾವು ಒಂದು ತೀರ್ಮಾನಕ್ಕೆ ಬರಬಹುದು. ಆದರೆ ಆ ತೀರ್ಮಾನಕ್ಕೆ ನಾವು ಕಂಡ ಮುಖ ಮಾತ್ರವಲ್ಲದೆ, ಇನ್ನೊಂದು ಮುಖವೂ ಇರಲು ಸಾಧ್ಯ. ಆದ್ದರಿಂದ ಅದರ ಮೇಲೆ ಇತರರು ಎತ್ತಬಹುದಾದ ಆಕ್ಷೇಪಣೆಗಳನ್ನು ಅಥವಾ ಅದಕ್ಕೆ ಸಂಬಂಧಿಸಿದಂತೆ ತನಗೇ ಕಂಡು ಬಂದಿರುವ ತೊಡಕುಗಳನ್ನು ಆಲೋಚಿಸುವುದು ಅಗತ್ಯ. ಅವುಗಳನ್ನು ಸಾಧ್ಯವಾದರೆ ಪರಿಹರಿಸಬೇಕು. ಅಂತಹ ಪ್ರಯತ್ನದಲ್ಲಿ ತನ್ನ ಮೊದಲಿನ ತೀರ್ಮಾನ ಸರಿಯಾದುದಲ್ಲ, ಸತ್ಯಸಂಗತಿ ಅದಕ್ಕಿಂತ ಬೇರೆಯಾಗಿದೆ ಎಂದು ಅನ್ನಿಸಿದರೂ ಆಶ್ಚರ್ಯವಿಲ್ಲ.

**ಬರವಣಿಗೆ (ಭಾಷೆ ಮತ್ತು ರೀತಿ)**

ಸಾಹಿತ್ಯದಲ್ಲಿ ಶೈಲಿ ಮತ್ತು ಶೈಲಿಯ ಅಂಗವಾದ ಭಾಷೆಗೆ ಮುಖ್ಯ ಸ್ಥಾನವಿದೆ. ಸಂಶೋಧನೆಯಲ್ಲಿ ಶೈಲಿ ಮತ್ತು ಭಾಷೆಗಳಿಗೆ ಅಷ್ಟು ಪ್ರಧಾನ ಸ್ಥಾನವಿಲ್ಲ. ವಿಷಯವನ್ನು ಎಷ್ಟು ನೇರವಾಗಿ ಸ್ಪಷ್ಟವಾಗಿ ನಿರೂಪಿಸಬೇಕೋ ಅಷ್ಟು ಕೆಲಸವಾದರೆ ಸಾಕು. ಭಾಷೆ ಬಹಳ ನೀರಸವಾಗಿರಬೇಕು ಎಂಬುದು ಇದರ ಅರ್ಥವಲ್ಲ. ವಿಷಯವನ್ನು ಮನೋಹರವಾಗಿ ನಿರೂಪಿಸುವುದರಲ್ಲಿ ತಪ್ಪಿಲ್ಲ. ಆದರೆ ಮನೋಹರವಾದ ನಿರೂಪಣೆ ಎಷ್ಟೋ ಸಾರಿ ಸಂಶೋಧನೆಗೆ ಹೊಂದುವುದಿಲ್ಲ. ಸಂಶೋಧನೆಯ ಭಾಷೆಗೆ ಇರಬೇಕಾದುದು ವಾಚ್ಯಾರ್ಥ ಒಂದೇ. ಸಂಶೋಧಕ ತನ್ನ ಅಭಿಪ್ರಾಯಗಳನ್ನು ಸ್ಪಷ್ಟವಾಗಿ ನಿರೂಪಿಸಬೇಕೇ ಹೊರತು ಯಾವುದನ್ನೂ ಓದುಗರ ಊಹೆಗೆ ಬಿಡಬಾರದು. ಸಂಪ್ರಬಂಧದ ಭಾಷೆಯನ್ನು ಕುರಿತೇ ನಾಲ್ಕು ಮಾತುಗಳನ್ನು ಹೇಳುವುದು ಅವಶ್ಯಕ. ಆಮೇಲೆ ರೀತಿ ಅಥವಾ ಕ್ರಮಕ್ಕೆ ಬರುತ್ತೇನೆ.

ಸಂಪ್ರಬಂಧ ಸಾಧ್ಯವಾದಷ್ಟು ನಿರಲಂಕೃತವಾಗಿರಬೇಕು. ಅಲಂಕಾರಭೂಯಿಷ್ಠವೂ ಕೃತಕವೂ ಕ್ಲಿಷ್ಟವೂ ಆದ ಭಾಷೆ ಸತ್ವದ ಕೊರತೆಯ ಸೂಚನೆ. ನಮ್ಮಲ್ಲಿ ವಿಷಯದಿಂದ ಇತರರನ್ನು ಆಕರ್ಷಿಸಲು ಯಾವಾಗ ಶಕ್ತಿಯಿಲ್ಲವೋ ಆಗ ಭಾಷೆಯಿಂದ ಅವರನ್ನು ಸೆಳೆಯಲು ಪ್ರಯತ್ನಿಸುತ್ತೇವೆ. ತಿರುಳಿನ ಕೊರತೆಯನ್ನು ಭಾಷೆಯ ಕ್ಲಿಷ್ಟತೆಯಿಂದ ಮರೆಮಾಡುತ್ತೇವೆ. ಹೊಸದಾಗಿ ಸಂಶೋಧನಕಾರ್ಯದಲ್ಲಿ ತೊಡಗಿದವರ ಮೊದ ಮೊದಲ ಬರಹವನ್ನೂ ಕೊನೆಯ ಬರಹವನ್ನೂ ಹೋಲಿಸಿ ನೋಡಿದರೆ ಇದರ ಸತ್ಯತೆ ಅರಿವಾಗುತ್ತದೆ. ಆರಂಭದಲ್ಲಿ ಅವರಿಗೆ ಇನ್ನೂ ವಿಷಯದ ಮೇಲೆ ಪ್ರಭುತ್ವ ದೊರಕಿರುವುದಿಲ್ಲ. ಮನಸ್ಸಿನಲ್ಲಿ ಏನೇನೋ ಅಸ್ಪಷ್ಟ ಆಲೋಚನೆಗಳು, ತಮಗೇ ನಂಬಿಕೆಯಿಲ್ಲದ ತೀರ್ಮಾನಗಳು ಸುಳಿಯುತ್ತಿರುತ್ತವೆ. ಅದರ ಜೊತೆಗೆ ತಮ್ಮ ಭಾಷೆಯಿಂದ ಇತರರನ್ನು ಮೆಚ್ಚಿಸಬೇಕೆಂಬ ಆಸೆಯೂ ಇರುತ್ತದೆ. ಆದರೆ ಕಾಲಕಳೆದಂತೆ ವಿಷಯ ಅವರ ಅಧೀನವಾದಂತೆ ಬರವಣಿಗೆ ಅವರಿಗೆ ತೊಡಕಾಗಿ ಪರಿಣಮಿಸುವುದಿಲ್ಲ. ಅವರ ಲೇಖಣಿ ನಿರಾತಂಕವಾಗಿ ಓಡುತ್ತದೆ. ಭಾಷೆ ಅವರಿಗೇ ಆಶ್ಚರ್ಯವಾಗುವ ರೀತಿಯಲ್ಲಿ ಸರಳವಾಗುತ್ತದೆ.

ಆದ್ದರಿಂದ ಸಂಶೋಧನ ಲೇಖನಗಳ ಭಾಷೆ ಸರಳವಾಗಿರಬೇಕು. ಒಂದು ಬರಹ ವಿಷಯದ ಗಹನತೆಯಿಂದಾಗಿ, ಪಾರಿಭಾಷಿಕ ಪದಗಳ ಬಾಹುಲ್ಯದಿಂದಾಗಿ ಅರ್ಥವಾಗದಿದ್ದರೆ ಅದಕ್ಕೆ ಏನೂ ಮಾಡಲಾಗುವುದಿಲ್ಲ. ಆದರೆ ಭಾಷೆಯ ಕ್ಲಿಷ್ಟತೆ ಅರ್ಥವಾಗುವುದಕ್ಕೆ ಅಡ್ಡಿಯಾಗಿದ್ದರೆ ಅದೊಂದು ದೋಷವಾಗುತ್ತದೆ. ಆಲಂಕಾರಿಕ ಭಾಷೆಯನ್ನು ಉಪಯೋಗಿಸದಿರುವುದು ಕ್ಷೇಮಕರ. ಅಲ್ಲೊಮ್ಮೆ, ಇಲ್ಲೊಮ್ಮೆ ಹೇಳುವ ರೀತಿಯಲ್ಲಿ ಒಂದು ಸೊಗಸು ಬಂದರೆ ಭೂಷಣವಾಗಿರುತ್ತದೆ. ಆದರೆ ಸಂಪ್ರಬಂಧದ ಉದ್ದಕ್ಕೂ ಅಂತಹ ಶೈಲಿ ಸಂಪೂರ್ಣ ಅನಗತ್ಯ. ಅಷ್ಟೇ ಅಲ್ಲದೆ ಎಷ್ಟೋ ಸಾರಿ ಆಲಂಕಾರಿಕ ಭಾಷೆ ಓದುವವರಿಗೆ ಬೇರೊಂದು ಅರ್ಥವನ್ನು ಕೊಡುವ ಸಂಭವವೂ ಇರುತ್ತದೆ. ಸಂಶೋಧನ ಲೇಖನಗಳಲ್ಲಿ ವಿಷಯವೇ ಪ್ರಧಾನವಾದ್ದರಿಂದ ಶೈಲಿ ಉತ್ಕೃಷ್ಟವಲ್ಲದಿದ್ದರೂ ಅದರ ಒಟ್ಟು ಬೆಲೆಗೆ ಯಾವ ಚ್ಯುತಿಯೂ ಬರುವುದಿಲ್ಲ. ಆದರೆ ಶೈಲಿಯೂ ಚೆನ್ನಾಗಿದ್ದು ವಿಷಯವೂ ಗಹನವಾಗಿದ್ದರೆ, ಆಗ ಓದಲು ಹಿತವಾಗುವುದೇ ಹೊರತು, ಶೈಲಿಯಿಂದಲೇ ಅದರ ಬೆಲೆ ಏರುವುದಿಲ್ಲ. ಉತ್ಕೃಷ್ಟ ಶೈಲಿ ಮತ್ತು ಅಲಂಕಾರಿಕ ಭಾಷೆಗಳೆರಡೂ ಸಮಾನಾರ್ಥಕಗಳಲ್ಲ ಎಂಬುದನ್ನು ನಾವು ನೆನಪಿಡಬೇಕು.

ಸಂಪ್ರಬಂಧದಲ್ಲಿ ವಾಕ್ಯಗಳು ಚಿಕ್ಕ ಚಿಕ್ಕವಾಗಿದ್ದು, ಲೇಖಕನ ಅಭಿಪ್ರಾಯ ಅಲ್ಲಿ ಸ್ಪಷ್ಟವಾಗಿ ಮೂಡಿರಬೇಕು. ಮಾತುಗಳ ದುಂದುಗಾರಿಕೆಯನ್ನು ಆದಷ್ಟು ಕಡಮೆ ಮಾಡಬೇಕು. ಅಸ್ಪಷ್ಟತೆ, ಅನಿರ್ದಿಷ್ಟತೆ, ಸಂದಿಗ್ಧತೆಗಳು ಇಂತಹ ಬರಹಗಳಲ್ಲಿ ದೋಷಗಳಾಗುತ್ತವೆ.

ಸಂಪ್ರಬಂಧದ ಭಾಷೆ ಅಥವಾ ಶೈಲಿಯ ವಿಷಯದಲ್ಲಿ ಹೆಚ್ಚು ಖಚಿತವಾಗಿ ಹೇಳಲು ಸಾಧ್ಯವಿಲ್ಲ. ಅದನ್ನು ಕುರಿತು ನಾಲ್ಕಾರು ಸಲಹೆಗಳನ್ನು ಮಾತ್ರ ಮೇಲೆ ಸೂಚಿಸಿದೆ. ಆದರೆ

ಸಂಪ್ರಬಂಧವನ್ನು ಸಿದ್ಧಪಡಿಸುವ ವಿಷಯದಲ್ಲಿ ವಿದ್ವಾಂಸರು ಸಾಮಾನ್ಯವಾಗಿ ಕೆಲವು ಕ್ರಮಗಳನ್ನು ಅನುಸರಿಸುತ್ತಾರೆ. ಅವುಗಳನ್ನು ಕುರಿತು ಕೆಳಗೆ ಪ್ರಸ್ತಾಪ ಮಾಡಲಾಗಿದೆ. ಮುಖ್ಯವಾಗಿ ಸಂಶೋಧನ ನಿಬಂಧಗಳನ್ನು (Research Dissertation) ಕುರಿತು ಕೆಳಗಿನ ಮಾತುಗಳನ್ನಾಡಿದ್ದರೂ ಸಂಪ್ರಬಂಧಗಳಿಗೂ (Research paper / paper) ಅವು ಒಟ್ಟಾರೆ ಅನ್ವಯಿಸುತ್ತವೆ.

ನಿಬಂಧದ ಆರಂಭದಲ್ಲಿ ಆರಿಸಿಕೊಂಡಿರುವ ಸಮಸ್ಯೆ, ಸಮಸ್ಯೆಯ ವ್ಯಾಪ್ತಿ, ಸಾಧ್ಯವಾದರೆ ಆ ಸಮಸ್ಯೆಯನ್ನು ಆರಿಸಿಕೊಳ್ಳಲು ಕಾರಣ ಅಥವಾ ಒದಗಿದ ಸನ್ನಿವೇಶ, ಮೂಲಸಾಮಗ್ರಿ ದೊರೆತ ಆಕರಗಳು, ಅಧ್ಯಯನದ ಕ್ರಮ, ಆ ಕ್ಷೇತ್ರದಲ್ಲಿ ಹಿಂದೆ ಆಗಲೆ ಆಗಿರುವ ಕೆಲಸದ ಸಂಕ್ಷಿಪ್ತ ವಿವೇಚನೆ, ಆ ವಿಷಯಕ್ಕೆ ತಾನು ಕೊಟ್ಟಿರುವ ವಿಶಿಷ್ಟ ಕಾಣಿಕೆ, ತನ್ನ ನಿಬಂಧದ ಇತಿಮಿತಿಗಳು, ಮುಂದೆ ಆಗಬೇಕಾಗಿರುವ ಕೆಲಸ ಇತ್ಯಾದಿ ಸಂಗತಿಗಳ ಪ್ರಸ್ತಾಪವಿರಬೇಕು. ಇದು ನಿಬಂಧದ ಮೊದಲ ಅಧ್ಯಾಯವಾದರೂ ಕೆಲವರು ಇದನ್ನು ಕೊನೆಯಲ್ಲಿ ಬರೆಯುತ್ತಾರೆ. ಮೊದಲ ಅಧ್ಯಾಯವಾದ ಬಳಿಕ, ವಿಷಯಕ್ಕೆ ನೇರವಾಗಿ ಸಂಬಂಧಿಸಿದ ಅಧ್ಯಾಯಗಳು ಬರುತ್ತವೆ.

ಸಾಧ್ಯವಾದರೆ ಒಂದೊಂದು ಅಧ್ಯಾಯವನ್ನೂ ಮತ್ತೆ ಒಳ ಅಧ್ಯಾಯಗಳಾಗಿ ವಿಂಗಡಿಸಿಕೊಂಡು ಒಂದೊಂದಕ್ಕೂ ಒಂದು ಹೆಸರು ಕೊಡುವುದರಲ್ಲಿ ಅನೇಕ ಸೌಕರ್ಯಗಳಿವೆ. ಇದು ನಮ್ಮ ಆಲೋಚನೆಯನ್ನು ಖಚಿತಗೊಳಿಸುತ್ತದೆಯಲ್ಲದೆ ನಮ್ಮ ಕಣ್ಣ ಮುಂದಿರುವ ಸಾಮಗ್ರಿಯನ್ನು ವಿಂಗಡಿಸಲು ಸಹಾಯಮಾಡುತ್ತದೆ. ಆ ಅಧ್ಯಾಯಕ್ಕೆ ಸಂಬಂಧಿಸಿದ ಸಾಮಗ್ರಿಯುಳ್ಳ ಸಾವಿರಾರು ಚೀಟಿಗಳನ್ನು ಮತ್ತೆ ಬೇರೆ ಬೇರೆಯಾಗಿ ವಿಂಗಡಿಸಬಹುದು. ಹೀಗೆ ಒಂದೊಂದು ಗುಂಪಿನಲ್ಲೂ ಸೇರ್ಪಡೆಯಾಗುವ ಪರಿಮಿತ ಸಂಖ್ಯೆಯ ಚೀಟಿಗಳನ್ನು ಹಿಡಿತದಲ್ಲಿಟ್ಟುಕೊಳ್ಳಬಹುದು. ಎರಡು ಮೂರು ಪುಟಗಳ ಒಳ ಅಧ್ಯಾಯಕ್ಕೆ ಸಂಬಂಧಿಸಿದಂತೆ ಯೋಚನೆ ಮಾಡುವುದೂ ಸುಲಭವಾಗುತ್ತದೆ. ಆದರೆ ಒಳ ಶೀರ್ಷಿಕೆಗಳನ್ನು ಕೊಡುವ ವಿಧಾನವು ಎಲ್ಲ ಕಡೆಗಳಲ್ಲೂ ಸರಿಹೋಗದೇ ಇರಬಹುದು.

ಸಮಸ್ಯೆಯನ್ನು ಬಿಡಿಸಿ ಸತ್ಯವನ್ನು ಕಾಣುವುದು ಆಧಾರಗಳ ಸಹಾಯದಿಂದ ಎಂದು ಆಗಲೇ ಒತ್ತಿ ಹೇಳಿದೆಯಷ್ಟೆ. ನಮ್ಮ ಚರ್ಚೆಯ ಸಮಯದಲ್ಲಿ ಆಧಾರಗಳನ್ನು ಅಡಿ ಟಿಪ್ಪಣಿಗಳಲ್ಲಿ ತೋರಿಸುವುದು ಅತ್ಯವಶ್ಯಕ. ಕೆಲವು ಸಂಗತಿಗಳು ಸಾಮಾನ್ಯ ಜ್ಞಾನದ ಅಂಗವಾಗಿ ಪರಿಣಮಿಸಿರುತ್ತವೆ. ಅವುಗಳನ್ನು ನಾವು ಎಲ್ಲೋ ಒಂದು ಕಡೆ ಓದಿ ಗ್ರಹಿಸಿರುತ್ತೇವೆ. ಅಂತಹ ಸಂಗತಿಗಳಿಗೆ ಆಧಾರಗಳನ್ನು ಹೇಳಿ ಅಡಿಟಿಪ್ಪಣಿಗಳಲ್ಲಿ ತೋರಿಸುವುದು ಅನವಶ್ಯಕ. ಆದರೆ ಮೂಲ ಸಾಮಗ್ರಿಯಾಗಲಿ ಅಥವಾ ದ್ವಿತೀಯ ಸಾಮಗ್ರಿಯಾಗಲಿ ಅವುಗಳ ಆಕರಗಳನ್ನು ಹೇಳುವುದರಿಂದ ಅನೇಕ ಅನುಕೂಲಗಳಿವೆ. ಒಂದು - ನಾವು ಊಹೆಯ ಮೇಲೆ ನಿರ್ಣಯವನ್ನು ಮಾಡುತ್ತಿಲ್ಲ, ನಿರ್ಣಯಕ್ಕೆ ಆಧಾರಗಳಿವೆ, ಸಂಶಯವಿರುವವರು ಅವುಗಳನ್ನು ಪರೀಕ್ಷಿಸಿ ನೋಡಬಹುದು ಎಂಬುದನ್ನು ತೋರಿಸಿ

ಕೊಟ್ಟಂತಾಗುತ್ತದೆ. ಎರಡನೆಯದು - ನಾವು ಉದ್ಧರಿಸಿರುವ ಆಧಾರಗಳನ್ನು ನೋಡಿ, ಅವುಗಳನ್ನು ಮೂಲದಲ್ಲೇ ನೋಡಬೇಕೆಂದು ಬಯಸುವ ಇತರರಿಗೂ ಅವುಗಳಿಂದ ಸಹಾಯವಾಗುತ್ತದೆ. ಮೂಲಸಾಮಗ್ರಿ ಯಾವುದು, ಇತರರ ಅಭಿಪ್ರಾಯಗಳು ಯಾವುವು, ಸಂಶೋಧಕನ ನಿರ್ಣಯ ಯಾವುದು ಎಂಬುದನ್ನು ಸ್ಪಷ್ಟವಾಗಿ ತೋರಿಸಬಹುದು, ಅಡಿಟಿಪ್ಪಣಿಗಳ ಸಹಾಯದಿಂದ.

ಇತರ ಲೇಖಕರ ಅಭಿಪ್ರಾಯಗಳನ್ನು ತಮ್ಮ ಅಭಿಪ್ರಾಯಗಳೆಂಬ ಭಾವನೆ ಬರುವಂತೆ ಬಳಸಿಕೊಳ್ಳುವುದು ಪ್ರಾಮಾಣಿಕತೆ ಲಕ್ಷಣವಲ್ಲ. ಯಾರಿಗೆ ತಮ್ಮದು ಎಂದು ಹೇಳಿಕೊಳ್ಳಲು ಏನೂ ಇರುವುದಿಲ್ಲವೋ ಅಂಥವರು ಮಾತ್ರ ಆ ಕೆಲಸಕ್ಕೆ ಕೈ ಹಾಕುತ್ತಾರೆ. ಆದರೆ ತನ್ನ ವಿಶಿಷ್ಟ ಕಾಣಿಕೆಯಿದೆ ಎಂದು ಆತ್ಮ ವಿಶ್ವಾಸವಿರುವವನು ಇತರರ ಅಭಿಪ್ರಾಯಗಳು ಯಾವುವು ಎನ್ನುವುವನ್ನು ಅಡಿ ಟಿಪ್ಪಣಿಯಲ್ಲಿ ಸೂಚಿಸುವುದರ ಮೂಲಕ, ತನ್ನ ಅಭಿಪ್ರಾಯಗಳನ್ನು ಬೇರ್ಪಡಿಸಿ ತೋರಿಸುತ್ತಾನೆ. ನಮಗಿಂತ ಹಿಂದೆ ಕೆಲಸಮಾಡಿ ಶ್ರಮಿಸಿರುವವರ ವಿಷಯದಲ್ಲಿ ಸಂಶೋಧಕ ಗೌರವವನ್ನು ಸಲ್ಲಿಸಿ ಮುಂದಕ್ಕೆ ಹೊರಡಬೇಕಾದುದು ಅವನ ಕರ್ತವ್ಯ. ಅವರ ಹೆಸರು, ಕೃತಿ ಲೇಖನಗಳನ್ನು ಉಲ್ಲೇಖಿಸಿ, ಅವರ ಅಭಿಪ್ರಾಯಗಳನ್ನು ಉದ್ಧರಿಸುವುದರ ಮೂಲಕ ಆ ಗೌರವವನ್ನು ಸಲ್ಲಿಸಬೇಕು.

ಹಿಂದೆ ಕೆಲಸ ಮಾಡಿರುವವರಲ್ಲಿ ಕೆಲವರು ಪ್ರಸಿದ್ಧರಿರಬಹುದು, ಕೆಲವರು ಅಪ್ರಸಿದ್ಧರಿರಬಹುದು. ಅವರ ಬರಹಗಳು ಯಾವುದೇ ಭಾಷೆಯಲ್ಲಿ ಪ್ರಕಟವಾಗಿರಬಹುದು. ಕೆಲವರ ಅಭಿಪ್ರಾಯಗಳನ್ನು ಅವನು ಮಾನ್ಯ ಮಾಡಬಹುದು, ಇನ್ನು ಕೆಲವರ ಅಭಿಪ್ರಾಯಗಳನ್ನು ಅವನು ಒಪ್ಪದೆಯೆ ಇರಬಹುದು. ಆದರೆ ಸಂಶೋಧಕ ತನ್ನ ಹಿಂದಿನವರ ಕೆಲಸಗಳನ್ನು ಸ್ಮರಿಸುವಾಗ ಇವಾವುವೂ ಲೆಕ್ಕಕ್ಕೆ ಬರುವುದಿಲ್ಲ. ಅವರ ಅಭಿಪ್ರಾಯಗಳನ್ನು ಸಕಾರಣವಾಗಿ ಒಪ್ಪಲಿ, ಬಿಡಲಿ ಆ ಮಾತು ಬೇರೆ. ಅವರ ಕೆಲಸವನ್ನು ಸ್ಮರಿಸುವುದೇ ಅವರಿಗೆ ತೋರುವ ಗೌರವ. .

ಕೆಲವರ ಅಭಿಪ್ರಾಯಗಳು ನಮಗೆ ಒಪ್ಪಿಗೆಯಾಗಿ ಅವುಗಳು ನಮ್ಮ ವಿಚಾರಧಾರೆಗೆ ಸಹಾಯ ಮಾಡುವಂತಿದ್ದರೆ ಅವುಗಳನ್ನು ಉದ್ಧರಿಸಬೇಕು. ಅಥವಾ ಅವರ ಅಭಿಪ್ರಾಯಗಳು ನಮಗೆ ಒಪ್ಪಿಗೆಯಾಗದಿದ್ದರೆ ಅವುಗಳನ್ನೂ ಉದ್ಧರಿಸಿ ಅವುಗಳನ್ನು ವಿಮರ್ಶಿಸಬೇಕು ಮತ್ತು ತನ್ನ ಅಭಿಪ್ರಾಯಗಳನ್ನು ಹೇಳಬೇಕು. ಇತರರ ಅಭಿಪ್ರಾಯಗಳು ತಪ್ಪು ಎಂದು ಹೇಳುವಾಗ, ಮೊದಲು ಅವರ ಅಭಿಪ್ರಾಯಗಳನ್ನು ತಾನು ಸರಿಯಾಗಿ ಗ್ರಹಿಸಿರುವೆನೇ ಇಲ್ಲವೇ ಎಂಬುದನ್ನು ಮತ್ತೊಮ್ಮೆ ಖಚಿತಪಡಿಸಿಕೊಳ್ಳುವುದು ಅತ್ಯವಶ್ಯಕ. ತನಗೆ ದೊರಕಿರುವ ಆಧಾರಗಳಿಂದ ಅವರ ಅಭಿಪ್ರಾಯಗಳು ಸರಿಯಾದುವಲ್ಲವೆಂಬುದು ನಿರ್ಧಾರವಾದ ಮೇಲೆ ಅವರ ಅಭಿಪ್ರಾಯಗಳನ್ನು ವಿಮರ್ಶಿಸಲು ಹೊರಡಬೇಕು. ಇಲ್ಲಿ ವಿಮರ್ಶಿಸ ಹೊರಟಿರುವುದು ವ್ಯಕ್ತಿಗಳ ಅಭಿಪ್ರಾಯಗಳನ್ನೇ ಹೊರತು ವ್ಯಕ್ತಿಗಳನ್ನಲ್ಲ ಎಂಬುದನ್ನು ಸಂಶೋಧಕ ಯಾವಾಗಲೂ ನೆನಪಿನಲ್ಲಿಡುವುದು ಒಳ್ಳೆಯದು. ಅಭಿಪ್ರಾಯಗಳನ್ನು, ಅವುಗಳು ಬಹು ದೊಡ್ಡ ವಿದ್ವಾಂಸರ

ಅಭಿಪ್ರಾಯಗಳೇ ಆಗಿರಲಿ, ತುಂಡು ತುಂಡಾಗಿ ಕತ್ತರಿಸಲಿ, ಅವುಗಳಲ್ಲಿ ಏನೂ ಸತ್ವವಿಲ್ಲ ಎಂದು ಬೇಕಾದರೆ ಹೇಳಲಿ, ಆದರೆ ಆ ಲೇಖಕರ ಮನಸ್ಸಿಗೆ ನೋವಾಗದ ಭಾಷೆಯನ್ನು ಬಳಸುವ ಸಂಯಮವು ಯಾವಾಗಲೂ ಅಪೇಕ್ಷಣೀಯ. ವ್ಯಂಗ್ಯ, ಕುಚೋದ್ಯ ಬರಹ ತನ್ನ ಗುರುತ್ವವನ್ನು ಕಳೆದುಕೊಳ್ಳುತ್ತದೆ. ಪ್ರತಿಯೊಬ್ಬ ಸಂಶೋಧಕನೂ ತನ್ನ ಅಭಿಪ್ರಾಯಗಳು ವಿಮರ್ಶೆಗೆ ಒಳಗಾಗಬೇಕೆಂದು ಅಪೇಕ್ಷೆಪಡುತ್ತಾನೆ, ಇತರರ ವಿಮರ್ಶೆಗಳನ್ನು ಸ್ವಾಗತಿಸುತ್ತಾನೆ. ತನ್ನಿಂದ ಕಾಣಲಾಗದ ಸತ್ಯವನ್ನು ಇತರರು ಕಂಡರೆ, ಅವರಿಗೆ ತಾನು ಸಹಾಯಕನಾದೆ ಎಂದು ಸಂತೋಷಪಡುತ್ತಾನೆ.

ಸತ್ಯ ನಿಷ್ಠುರತೆ, ನಿರ್ದಾಕ್ಷಿಣ್ಯ ಗುಣ, ಭಾಷೆಯಲ್ಲಿ ಸಂಯಮ, ತನ್ನ ತಪ್ಪನ್ನು ತಿದ್ದಿಕೊಳ್ಳಲು ಸದಾ ಸಿದ್ಧನಾಗಿರುವುದು - ಇವುಗಳಿಂದ ಒಬ್ಬನು ಶ್ರೇಷ್ಠ ಸಂಶೋಧಕನೆನ್ನಿಸಿಕೊಳ್ಳುತ್ತಾನೆ.

ನಿರೂಪಣೆಯಲ್ಲಾಗಲಿ, ಅಡಿಟಿಪ್ಪಣಿಗಳಲ್ಲಾಗಲಿ ವ್ಯಕ್ತಿಗಳ ಹೆಸರುಗಳನ್ನು ಹೇಳುವಾಗ ನನ್ನ ಪೂಜ್ಯ ಗುರುಗಳಾದ,' 'ಮಹಾವಿದ್ವಾಂಸರಾದ' ಮುಂತಾದ ಉಕ್ತಿಗಳು ಅನವಶ್ಯಕ., ನಿರೂಪಣೆಯಲ್ಲಿ ಬೇಕಾದರೆ 'ಶ್ರೀ' 'ಪ್ರೊ'. 'ಡಾ.' ಎಂಬ ಸಂಜ್ಞೆಗಳನ್ನು ಹೆಸರಿನ ಹಿಂದೆ ಬಳಸಬಹುದು. ಅಡಿಟಿಪ್ಪಣಿಗಳಲ್ಲಿ ಇವೂ ಅನವಶ್ಯಕ.

ಅಡಿಟಿಪ್ಪಣಿಗಳನ್ನು ಕೊಡುವಾಗ ಸಾಮಾನ್ಯವಾಗಿ ಅನುಸರಿಸುವ ಮಾರ್ಗ ಇದು.

**ಕೃತಿಯಾದರೆ**

ಲೇಖಕನ ಹೆಸರು : ಕೃತಿಯ ಹೆಸರು (ಪ್ರಕಾಶನದ ಊರು, ಪ್ರಕಾಶಕರು. ವರ್ಷ), ಪುಟ.

**ಲೇಖನವಾದರೆ**

ಲೇಖಕನ ಹೆಸರು : 'ಲೇಖನದ ಹೆಸರು', ಪತ್ರಿಕೆಯ ಹೆಸರು, ಸಂಪುಟ, ಸಂಚಿಕೆ (ವರ್ಷ), ಪುಟ.

**ಪ್ರಾಚೀನ ಕೃತಿಯೊಂದರಿಂದ ಉಲ್ಲೇಖಿಸುವಾಗ**

ಕೃತಿಯ ಹೆಸರು (ಸಂಪಾದಕನ ಹೆಸರು. ಪ್ರಕಾಶನದ ಊರು, ಪ್ರಕಾಶಕರು, ವರ್ಷ), ಪುಟ

ಇಲ್ಲಿ ಸಂಪಾದನಕ ಹೆಸರಿನ ಹಿಂದೆ 'ಸಂ:' ಎಂಬುದು ಇರುತ್ತದೆ, ಅವನು ಕೃತಿಯ ಸಂಪಾದಕ ಎಂಬುದನ್ನು ತೋರಿಸಲು. ಪುಟದ ಬದಲು ಆಶ್ವಾಸದ ಮತ್ತು ಪದ್ಯದ ಸಂಖ್ಯೆಯನ್ನು ಕೊಡಬಹುದು.

**ಇತರರು ಸಂಪಾದಿಸಿದ ಲೇಖನಗಳ ಸಂಕಲನವೊಂದರಿಂದ ಉಲ್ಲೇಖಿಸುವಾಗ**

ಲೇಖಕನ ಹೆಸರು : 'ಲೇಖನ'. ಗ್ರಂಥದ ಹೆಸರು (ಸಂಪಾದಕ. ಪ್ರಕಾಶನದ ಊರು, ಪ್ರಕಾಶಕರು. ವರ್ಷ), ಪುಟ

ಇಲ್ಲಿಯೂ ಸಂಪಾದನಕ ಹೆಸರಿನ ಹಿಂದೆ 'ಸಂ:' ಎಂಬ ಸಂಜ್ಞೆ ಇರಬೇಕು. ಇಂಗ್ಲಿಷಿನಲ್ಲಿ ಲೇಖನದ ಹೆಸರನ್ನು ರೋಮನ್ ಅಕ್ಷರಗಳಲ್ಲೂ, ಪುಸ್ತಕದ ಹೆಸರನ್ನು ಇಟ್ಯಾಲಿಕ್ ಅಕ್ಷರಗಳಲ್ಲೂ ಕೊಡುತ್ತಾರೆ. ಒಂದು ಕೃತಿ ಅಥವಾ ಲೇಖನದಿಂದ ಒಮ್ಮೆ ಉದ್ಧರಿಸಿ, ಮತ್ತೆ ಅಲ್ಲಿಂದ ಉದ್ಧರಿಸುವಾಗ, ಎರಡನೆಯ ಅಡಿಟಿಪ್ಪಣಿಯಲ್ಲಿ ಅದರ ಹೆಸರನ್ನು ಹೇಳದೆ 'ಅದೇ' ಎಂದು ಹೇಳಿದರೆ ಸಾಕು.

ಕೆಲವರು ಅಡಿಟಿಪ್ಪಣಿಗಳನ್ನು ಅಧ್ಯಾಯದ ಕೊನೆಯಲ್ಲಿ, ಇನ್ನು ಕೆಲವರು ಪುಸ್ತಕದ ಕೊನೆಯಲ್ಲಿ ಕೊಡುತ್ತಾರೆ. ಓದುಗರು ಪ್ರತಿಬಾರಿಯೂ ಹಾಳೆಗಳನ್ನು ಮಗುಚಿ ಅವುಗಳನ್ನು ನೋಡುವಷ್ಟು ತಾಳ್ಮೆಯುಳ್ಳವರಾಗಿರುವುದಿಲ್ಲ. ಆದ್ದರಿಂದ ಆಯಾ ಅಡಿಟಿಪ್ಪಣಿಗಳನ್ನು ಆಯಾ ಪುಟದ ಕೆಳಗೇ ಕೊಡುವುದು ಉತ್ತಮ. ಇನ್ನು ಕೆಲವರು ಆಯಾ ಪುಟದ ಅಡಿಟಿಪ್ಪಣಿಗಳಿಗೆ ಬೇರೆ ಬೇರೆ ಸಂಖ್ಯೆಗಳನ್ನು ಕೊಡುತ್ತಾರೆ. ಅದರ ಬದಲು ಒಂದೊಂದು ಅಧ್ಯಾಯಕ್ಕೂ ಬೇರೆ ಬೇರೆ ಸಂಖ್ಯೆಗಳನ್ನು ಕೊಡುವುದು ಅನೇಕ ಸಮಸ್ಯೆಗಳನ್ನು ಪರಿಹರಿಸುತ್ತದೆ. ಉದಾಹರಣೆಗೆ ಒಂದು ಅಧ್ಯಾಯದಲ್ಲಿ ನೂರು ಅಡಿಟಿಪ್ಪಣಿಗಳಿದ್ದರೆ, ಅವುಗಳಿಗೆ ಒಂದರಿಂದ ನೂರರವರೆಗಿನ ಸಂಖ್ಯೆಗಳನ್ನು ಕೊಟ್ಟು ಮುಂದಿನ ಅಧ್ಯಾಯದ ಅಡಿಟಿಪ್ಪಣಿಗಳನ್ನು ಮತ್ತೆ ಒಂದರಿಂದ ಪ್ರಾರಂಭಿಸಬಹುದು.

ಅಡಿಟಿಪ್ಪಣಿಗಳನ್ನು ಕೊಡುವಾಗ ಎಷ್ಟು ಎಚ್ಚರಿಕೆ ವಹಿಸಿದರೂ ತೀರದು. ಅದರಲ್ಲೂ ಪತ್ರಿಕೆಗಳ ಸಂಖ್ಯೆಗಳನ್ನು ಪುಟಗಳ ಸಂಖ್ಯೆಗಳನ್ನು ಕೊಡುವಾಗ ನಾವು ಹೆಚ್ಚು ಎಚ್ಚರಿಕೆ ವಹಿಸಬೇಕು. ನಿರೂಪಣೆಯಲ್ಲಿ ಯಾವುದಾದರೂ ಪದವನ್ನು ತಪ್ಪಾಗಿ ಬರೆದಿದ್ದರೆ, ಕೊನೆಗೆ ತಮ್ಮ ನಿರ್ಣಯ ತಪ್ಪಾಗಿದ್ದರೂ ಇಂದಲ್ಲ ನಾಳೆ ಸರಿಪಡಿಸಿಕೊಳ್ಳಬಹುದು. ಆದರೆ ಸಂಖ್ಯೆಗಳಲ್ಲಿ ತಪ್ಪಾದರೆ ಆ ತಪ್ಪು ಕೊನೆಯವರೆಗೂ ಉಳಿಯುವ ಸಂಭವ ಹೆಚ್ಚು. ಆದ್ದರಿಂದ ನಾವು ಟಿಪ್ಪಣಿ ಮಾಡಿಕೊಳ್ಳುವಾಗಲೂ, ಟಿಪ್ಪಣಿಗಳ ಸಹಾಯದಿಂದ ಸಂಖ್ಯೆಗಳನ್ನು ಉದ್ಧರಿಸುವಾಗಲೂ ಹೆಚ್ಚು ಗಮನದಿಂದಿರಬೇಕು.

ಯಾವುದಾದರೂ ಸಂಗತಿಯನ್ನು ಇತರರಿಂದ ಕೇಳಿ ತಿಳಿದಿದ್ದರೆ ಅಥವಾ ಒಂದು ಸಂಗತಿಯನ್ನು ಪಡೆಯಲು ಇತರರ ಸಹಾಯವನ್ನು ಪಡೆದಿದ್ದರೆ, ಅಥವಾ ಇತರರ ಅಭಿಪ್ರಾಯವೊಂದನ್ನು ಸಂಭಾಷಣೆಯ ಸಮಯದಲ್ಲೋ ಅಥವಾ ಉಪನ್ಯಾಸವೊಂದರಲ್ಲೋ ಕೇಳಿ ತಿಳಿದುಕೊಂಡಿದ್ದು ಅದು ತನಗೆ ಒಪ್ಪಿಗೆಯಾಗಿದ್ದರೆ, ಅಥವಾ ಒಂದು ಕೃತಿಯನ್ನು ಹಸ್ತಪ್ರತಿಯಲ್ಲೇ ಓದಿದ್ದರೂ ಅವುಗಳನ್ನು ಅಡಿಟಿಪ್ಪಣಿಗಳಲ್ಲಿ ಸ್ಮರಿಸಿಕೊಳ್ಳುವುದು ಸಂಶೋಧಕನ ಕರ್ತವ್ಯ. ಇತರರ ಒಂದು ಅಭಿಪ್ರಾಯವು ಮಾತಿನಲ್ಲಿ ಮಾತ್ರ ವ್ಯಕ್ತವಾಗಿದ್ದು, ಅದನ್ನು

ತಾನು ಒಪ್ಪದೆ ಇದ್ದರೆ, ಅದನ್ನು ತನ್ನ ನಿರೂಪಣೆಯಲ್ಲಿ ಉಲ್ಲೇಖಿಸಿ ಖಂಡಿಸುವುದು ಅನವಶ್ಯಕ.

ಸಂಪ್ರಬಂಧದಲ್ಲಿ ವಿಷಯಕ್ಕೆ ನೇರವಾಗಿ ಸಂಬಂಧಪಡದೆ ಇದ್ದುದಕ್ಕೆ ಅವಕಾಶವೇ ಇಲ್ಲ. ವಿಷಯಕ್ಕೆ ಪರೋಕ್ಷವಾಗಿ ಸಂಬಂಧಿಸಿದ್ದು ಏನಾದರೂ ಇದ್ದರೆ, ಅಥವಾ ವಿಷಯವನ್ನು ಕುರಿತು ಚಿಂತಿಸುತ್ತಿರುವಾಗ ಏನಾದರೂ ಒಂದು ಆಲೋಚನೆ ಹೊಳೆದರೆ ಅಂಥವುಗಳನ್ನು ಸಂಪ್ರಬಂಧದಲ್ಲಿ ಹೇಳುವುದಕ್ಕಿಂತ ಅಡಿಟಿಪ್ಪಣಿಗಳಲ್ಲಿ ಹೇಳುವುದು ಉತ್ತಮ.

ಆಧಾರಗಳ ಸಹಾಯದಿಂದ ಒಂದು ಖಚಿತವೂ ಸಂದೇಹಕ್ಕಾಸ್ಪದವಿಲ್ಲದಂತಹುದೂ ಆದ ತೀರ್ಮಾನಕ್ಕೆ ಬಂದರೆ ಆಗ ಅದನ್ನು ಖಚಿತೋಕ್ತಿಗಳಲ್ಲಿ ಹೇಳುವುದು ನ್ಯಾಯವಾದುದು. ಆದರೆ ಎಷ್ಟೋ ಸಾರಿ ನಾವು ತಾತ್ಕಾಲಿಕ ತೀರ್ಮಾನಗಳಿಗೆ ಬರಬೇಕಾಗುತ್ತದೆ, ನಮ್ಮ ತೀರ್ಮಾನಗಳ ವಿಷಯದಲ್ಲಿ ನಮಗೇ ವಿಶ್ವಾಸವಿರುವುದಿಲ್ಲ. ಇಂತಹ ಕಡೆಗಳಲ್ಲಿ ಸಂಪೂರ್ಣವಾಗಿ ಪ್ರಾಮಾಣಿಕವಾಗಿರಬೇಕು. ಸಂದೇಹವಿದ್ದ ಕಡೆ ಅದನ್ನು ಸ್ಪಷ್ಟವಾಗಿ ಸೂಚಿಸಬೇಕು : 'ಈ ತೀರ್ಮಾನಕ್ಕೆ ಸದ್ಯಕ್ಕೆ ಬರಬಹುದು', 'ಎಂಬ ಊಹೆಗೆ ಅವಕಾಶವಿದೆ', 'ಇದು ಸತ್ಯಸಂಗತಿಗೆ ಅಷ್ಟೇನೂ ದೂರವಿರಲಾರದು' ಮುಂತಾದ ರೀತಿಯ ಉಕ್ತಿಗಳನ್ನು ಸಂಶೋಧನ ಪ್ರಬಂಧಗಳಲ್ಲಿ ಬಳಸುವುದು ಕ್ಷೇಮಕರ. ಇದರಿಂದ ಸಂಶೋಧಕ ಇತರರು ತನ್ನ ತಪ್ಪನ್ನು ತೋರಿಸಿಕೊಟ್ಟರೆ ತಿದ್ದಿಕೊಳ್ಳಲು ಸಿದ್ಧನಾಗಿದ್ದಾನೆ ಎಂಬುದು ಗೊತ್ತಾಗುತ್ತದೆ. ಕೆಲವು ಸಲ ಸಮಸ್ಯೆಯನ್ನು ಸಮಸ್ಯೆಯನ್ನಾಗಿಯೇ ಉಳಿಸುವ ಪ್ರಸಂಗ ಬಂದರೂ ಬರಬಹುದು. ಹರಕು ಮುರುಕು ತೀರ್ಮಾನಕ್ಕೆ ಬರುವುದಕ್ಕಿಂತ ಇದು ಬಹಳ ಒಳ್ಳೆಯದು.

ಆದರೆ ಸಂಶೋಧಕ ತನ್ನ ಅಭಿಪ್ರಾಯಗಳನ್ನು ಸ್ಪಷ್ಟವಾಗಿ ನಿರೂಪಿಸಬೇಕು. ಗೊತ್ತಿಲ್ಲದಿದ್ದರೆ ಗೊತ್ತಿಲ್ಲವೆಂದು, ಸಂದೇಹವಿದ್ದ ಕಡೆ ಸಂದೇಹವಿದೆಯೆಂದು, ಖಚಿತವಾಗಿದ್ದರೆ ಖಚಿತವಾಗಿ, ವೈಯಕ್ತಿಕ ಅಭಿಪ್ರಾಯವಾಗಿದ್ದರೆ ಹಾಗೆಂದು ಹೇಳಬೇಕು. ಅವನ ಅಭಿಪ್ರಾಯಗಳನ್ನು ಎರಡು ರೀತಿಗಳಲ್ಲಿ ಅರ್ಥಮಾಡುವುದಕ್ಕೆ ಅವಕಾಶವಿರಬಾರದು. ಅಪ್ಪಟ ಪ್ರಾಮಾಣಿಕತೆ ಶ್ರೇಷ್ಠ ಸಂಶೋಧಕರ ಗುಣಗಳಲ್ಲೊಂದು.

ಸರಳವಾದ ಸಮಸ್ಯೆಯನ್ನು ಅನವಶ್ಯಕವಾಗಿ ಜಟಿಲಗೊಳಿಸುವುದು, ನಿಜವಾಗಿಯೂ ಜಟಿಲವಾದ ಸಮಸ್ಯೆಯನ್ನು ಸರಳಗೊಳಿಸುವುದು - ಇವೆರಡೂ ಸರಿಯಾದ ಕಾರ್ಯಗಳಲ್ಲ.

ಹಾಗೆಯೇ ಬರಹದಲ್ಲಿ ಅನವಶ್ಯಕ ವಿಸ್ತಾರವು ಪ್ರಬಂಧವನ್ನು ಜಾಳು ಜಾಳಾಗಿ ಮಾಡುತ್ತದೆ. ಹೇಳುವುದನ್ನು ಪರಿಣಾಮಕಾರಿಯಾಗಿ ಹೇಳಬೇಕಾದರೆ ಅದಕ್ಕೆ ಉತ್ತಮ ಸಾಧನ ಸಂಕ್ಷಿಪ್ತತೆ. ಹೆಚ್ಚು ಮಾತುಗಳು ನಮ್ಮ ವಾದವನ್ನು ಹಗುರಗೊಳಿಸುತ್ತವೆ. ಸಂಶೋಧಕರು ಆದಷ್ಟು ಕಡಮೆ ಬರೆಯುವುದು ಒಳ್ಳೆಯದು. ಸಂಶೋಧನೆ ಸೃಜನಾತ್ಮಕ ಸಾಹಿತ್ಯವಲ್ಲ. ಆದ್ದರಿಂದ ಒಂದೆರಡು ತಿಂಗಳಲ್ಲಿ ನೂರಾರು ಪುಟಗಳನ್ನು ತುಂಬುವ ಸಂಶೋಧನ ಕಾರ್ಯವನ್ನು ಮಾಡಿ ಮುಗಿಸುವುದು ಅಸಾಧ್ಯ. ಹಾಗೆ ಮಾಡಿದರೆ ಅದು ಸಂಶೋಧನೆ ಎನ್ನಿಸಿಕೊಳ್ಳಲಾರದು.

ಸಂಶೋಧನೆ ಎನ್ನುವುದು ಗಣಿಯಿಂದ ಚಿನ್ನವನ್ನು ತೆಗೆದಂತೆ, ಅಗೆದು ಬಿಸಾಡುವುದು ಬಹಳ ಇರುತ್ತದೆ; ಆರಿಸಿಕೊಳ್ಳುವುದು ಬಹಳ ಸ್ವಲ್ಪ ಇರುತ್ತದೆ.

ನಿಬಂಧದ ಒಂದೊಂದೇ ಅಧ್ಯಾಯವನ್ನು ಬರೆದು ಮುಗಿಸಿದಂತೆಲ್ಲ ಅದನ್ನು ಮಾರ್ಗದರ್ಶಕರಿಗೆ ಕೊಡುವ ಮುನ್ನ ಸಂಶೋಧಕ ತಾನೇ ಎರಡು ಮೂರು ಸಾರಿ, ಅವಶ್ಯವಿದ್ದೆಡೆ ತಿದ್ದಿ, ಅಗತ್ಯಬಿದ್ದರೆ ಇಡೀ ಅಧ್ಯಾಯವನ್ನು ಮತ್ತೊಮ್ಮೆ ಬರೆಯಬೇಕು ಅಥವಾ ಪ್ರತಿಮಾಡಬೇಕು. ಲೇಖಕ ತನ್ನ ಬರಹವನ್ನು ತಾನೇ ಪ್ರತಿಮಾಡುವುದರಲ್ಲಿ ಒಂದು ದೊಡ್ಡ ಅನುಕೂಲವಿದೆ. ಒಂದೊಂದು ಸಾರಿ ಪ್ರತಿಮಾಡಿದಾಗಲೂ ಬರಹದ ಗುಣ ಹೆಚ್ಚುತ್ತ ಹೋಗುತ್ತದೆ. ಏಕೆಂದರೆ ಅದರಲ್ಲಿ ಅವನು ಅನೇಕ ತಿದ್ದುಪಾಟುಗಳನ್ನು ಮಾಡುತ್ತಾ ಹೋಗುತ್ತಾನೆ.

ಮಾರ್ಗದರ್ಶಕರು ನಿಬಂಧವನ್ನು ಅಥವಾ ಅಧ್ಯಾಯವನ್ನು ನೋಡಿ ಕೊಟ್ಟಮೇಲೆ ಹೊಸದಾಗಿ ಅನೇಕ ಗ್ರಂಥಗಳನ್ನೂ ಲೇಖನಗಳನ್ನೂ ಓದಬೇಕಾಗಿ ಬರಬಹುದು. ಅಥವಾ ಈಗಾಗಲೇ ಓದಿ ಟಿಪ್ಪಣಿ ಮಾಡಿಕೊಂಡಿರುವ ಆಕರಗಳಿಗೇ ಮತ್ತೊಮ್ಮೆ ಹೋಗಬೇಕಾಗಿ ಬರಬಹುದು. ಅಥವಾ ಇಡೀ ಅಧ್ಯಾಯವನ್ನು ಹೊಸದಾಗಿ ಬರೆಯಬೇಕಾಗಬಹುದು. ಓದಿ ತಕ್ಷಣ ಪ್ರಶಂಸೆ ವ್ಯಕ್ತಪಡಿಸುವ ನಿರ್ದೇಶಕರಿಗಿಂತ, ಓದಿ ಅತೃಪ್ತಿ ವ್ಯಕ್ತಪಡಿಸುವ ನಿರ್ದೇಶಕರಿಂದ ಸಂಶೋಧಕನಿಗೆ ಹೆಚ್ಚಿನ ಉಪಕಾರವುಂಟು. ಆದ್ದರಿಂದ ಸಂಶೋಧಕನಿಗೆ ತಾಳ್ಮೆಯೂ ಬಿರುಸು ಮಾತುಗಳನ್ನು ಕೇಳಿಯೂ ಸಮಾಧಾನದಿಂದಿರಬಲ್ಲ ಚಿತ್ತ ಸ್ಥಿತಿಯೂ ಅತ್ಯಗತ್ಯ. ಆದರೆ ಸದಾ ಅತೃಪ್ತಿ ವ್ಯಕ್ತಪಡಿಸುವ ಮಾರ್ಗದರ್ಶಕರು ದೊರೆಯುವುದು ಅವನ ದುರದೃಷ್ಟವೇ. ಆಗಾಗ್ಗೆ ಮಾರ್ಗದರ್ಶಕರಿಂದ ಬರುವ ಒಳ್ಳೆಯ ಮಾತುಗಳು ಅವನ ನಿರಾಸೆಯನ್ನೂ ಅಧೈರ್ಯವನ್ನೂ ಶ್ರಮವನ್ನೂ ಹೋಗಲಾಡಿಸುತ್ತವೆ. ಕುದುರೆ ತನ್ನ ಯಜಮಾನ ಒಮ್ಮೆ ಪ್ರೀತಿಯಿಂದ ತಟ್ಟಿದರೆ ಸಾಕು, ಹತ್ತು ಚಾಟಿ ಏಟುಗಳನ್ನು ಸಹಿಸುತ್ತದೆ.

ನಿಬಂಧದ ಕೊನೆಯಲ್ಲಿ ಅನುಬಂಧಗಳು ಏನಾದರೂ ಇದ್ದರೆ ಕೊಡಬಹುದು. ನಿಬಂಧದ ಒಳಗೆ ತರಲು ಸಾಧ್ಯವಾಗದ ವಿಸ್ತಾರವಾದ ಚರ್ಚೆಗಳಿದ್ದರೆ ಅವುಗಳನ್ನು ಅನುಬಂಧಗಳಲ್ಲಿ ಕೊಡಬಹುದು. ಅಥವಾ ಕೆಲವು ಮುಖ್ಯ ಆಕರಗಳನ್ನು ಆರಿಸಿ ಕೊಡಬಹುದು.

ಅನುಬಂಧಗಳ ಬಳಿಕ ಅತ್ಯವಶ್ಯಕವಾಗಿ ಗ್ರಂಥಗಳ ಪಟ್ಟಿ ಬರಬೇಕು. ನಿಬಂಧದ ರಚನೆಯಲ್ಲಿ ಬಳಸಿಕೊಂಡಿರುವ ಮೂಲ ಆಕರಗಳು, ಆನುಷಂಗಿಕ ಆಕರಗಳು, ಪತ್ರಿಕೆಗಳು, ರಿಪೋರ್ಟುಗಳು - ಇವೆಲ್ಲವನ್ನೂ ಅಲ್ಲಿ ಪಟ್ಟಿ ಮಾಡಬೇಕು. ಲೇಖಕ, ಪುಸ್ತಕ, ಪ್ರಕಟಣೆಯ ವರ್ಷ ಮತ್ತು ಪ್ರಕಾಶಕರು, ಆವೃತ್ತಿ ಇದ್ದರೆ ಅದು - ಈ ವಿವರಗಳು ಅಲ್ಲಿರಬೇಕು. ಕೆಲವರು ಬಿಡಿ ಲೇಖನಗಳನ್ನು ಪಟ್ಟಿಮಾಡಿಕೊಡುವುದುಂಟು. ಇನ್ನು ಕೆಲವರು ಅವುಗಳನ್ನು ಕೊಡದೆ ಬಿಡುತ್ತಾರೆ.

ಸಂಶೋಧಕರಲ್ಲಿ ಎರಡು ಮನೋಭಾವದವರುಂಟು. ಕೆಲವರು ತಮಗೆ ಹೊಳೆದದ್ದನ್ನೆಲ್ಲ ಅಥವಾ ಅನ್ನಿಸಿದ್ದನ್ನೆಲ್ಲ ತಕ್ಷಣ ಬರೆಯುತ್ತಾರೆ. ಅವರಿಗೆ ತಾವು ಬರೆದದ್ದರಲ್ಲಿ 'ಹೆಚ್ಚು ಕಡಿಮೆ'ಗಳಾದರೂ ಚಿಂತೆಯಿಲ್ಲ. ಇವರ ಧೈರ್ಯ, ಆತ್ಮವಿಶ್ವಾಸಗಳು ದೊಡ್ಡವಾದರೂ ಅನುಕರಣೀಯವಲ್ಲ. ಇನ್ನು ಕೆಲವರು ತಮಗೆ ಒಂದು ಸಮಸ್ಯೆ ಸಂಪೂರ್ಣವಾಗಿ ಬಗೆಹರಿಯಿತೆಂದು ತೃಪ್ತಿಯಾಗುವವರೆಗೆ ಬರಹಕ್ಕೆ ಕೈಹಾಕುವುದಿಲ್ಲ. ಅಥವಾ ಅದನ್ನು ಕುರಿತು ಬರೆಯದೆ ಇದ್ದರೂ ಯೋಚನೆಯಿಲ್ಲ. ತಾವು ಅದರ ಮೇಲೆ ಬರೆದನಂತರ ಅದನ್ನು ಕುರಿತು ಇತರರು ಮತ್ತೆ ಬರೆಯುವಂತಿರಕೂಡದು - ಅಷ್ಟರಮಟ್ಟಿನ ಪರಿಪೂರ್ಣತೆಯನ್ನು ಅವರು ಬಯಸುತ್ತಾರೆ. ಈ ಸಂಯಮ ಮತ್ತು ಆದರ್ಶಗಳು ಮೆಚ್ಚಬೇಕಾದುದೇ. ಆದರೆ ಇದರಲ್ಲಿ ಒಂದು ಅಪಾಯವೂ ಇದೆ. ಅವರು ಏನನ್ನೂ ಬರೆಯದೆಯೇ ಹೋಗಬಹುದು ಅಥವಾ ಬರೆದರೂ ಹೆಚ್ಚು ಬರೆಯಲಾರರು. ಈ ಎರಡು ಪರಸ್ಪರ ವಿರುದ್ಧವಾದ ದೃಷ್ಟಿಗಳಿಗಿಂತ ಮಧ್ಯಮವಾದ ಒಂದು ದೃಷ್ಟಿಯಿದೆ. ಅನ್ನಿಸಿದ್ದನ್ನು ತಕ್ಷಣ ಬರೆಯದೆ, ಕೆಲವುಕಾಲ ಕಾದು, ಪೋಷಕ ಸಾಮಗ್ರಿಯನ್ನು ಸಂಗ್ರಹಿಸಿ, ಯೋಚನೆ ಮಾಡಿ, ಆಗಲೂ ಸಮಸ್ಯೆ ಸಂಪೂರ್ಣವಾಗಿ ಬಗೆಹರಿಯದಿದ್ದರೆ, ಆ ಸಾಮಗ್ರಿಯನ್ನು ಅದರ ಆಧಾರದ ಮೇಲೆ ತಾನು ನಡೆಸಿರುವ ಚಿಂತನೆಯನ್ನೂ - ತಾತ್ಕಾಲಿಕವಾದ ತನ್ನ ತೀರ್ಮಾನವನ್ನೂ ಪ್ರಕಟಿಸುವುದು ಶ್ರೇಯಸ್ಕರ. ಆ ತೀರ್ಮಾನವನ್ನು ಇತರರು ಒಪ್ಪಬಹುದು, ಅಥವಾ ಆ ಚಿಂತನೆಯನ್ನು ಮುಂದುವರಿಸಿ ಗುರಿ ಮುಟ್ಟಬಹುದು. ಆ ದೃಷ್ಟಿಯಿಂದಲಾದರೂ ನಮ್ಮ ಸಂಶೋಧನೆ ಅಪೂರ್ಣವಾಗಿದ್ದರೂ ಅದರ ಫಲಗಳು ಇತರರಿಗೆ ಲಭ್ಯವಾಗುವಂತೆ ಮಾಡುವುದು ಒಳ್ಳೆಯದು. ಆದರೆ ತನಗೆ ಸಂದೇಹಗಳಿರುವ ಕಡೆ, ಅಪೂರ್ಣ ಎನ್ನಿಸಿದ ಕಡೆ ಅದನ್ನು ಸ್ಪಷ್ಟವಾಗಿ ಹೇಳಿಬಿಡಬೇಕು.

**ಪ್ರಕಟಣೆ**

ಸಂಶೋಧನ ವಿದ್ಯಾರ್ಥಿಯು ತನ್ನ ನಿಬಂಧಕ್ಕೆ ಪಿಎಚ್.ಡಿ. ಪ್ರಶಸ್ತಿಯು ದೊರೆತ ಮೇಲೆ ಅದರ ಪ್ರಕಟಣೆಯ ವಿಷಯವಾಗಿ ತಪ್ಪದೆ ಆಸ್ಥೆ ವಹಿಸಬೇಕು. ಅನೇಕ ನಿಬಂಧಗಳು ಪ್ರಕಟವಾಗದೆ ಹಾಗೆಯೇ ಉಳಿಯುವುದು ದೊಡ್ಡ ನಷ್ಟ. ಪ್ರಕಟಣೆಗೆ ಮುನ್ನ ಪರೀಕ್ಷಕರು ಏನಾದರೂ ಸೂಚನೆಗಳನ್ನಿತ್ತಿದ್ದರೆ ಅವುಗಳನ್ನು ಲಕ್ಷ್ಯದಲ್ಲಿಟ್ಟುಕೊಂಡು ಇಡೀ ನಿಬಂಧವನ್ನು ಒಮ್ಮೆ ಪರಿಶೀಲಿಸಿ ಪ್ರಕಟಣೆಗೆ ಯೋಗ್ಯವಾಗುವಂತೆ ಮಾಡಬೇಕು. ನಿಬಂಧವನ್ನು ಪ್ರಕಟಿಸಲು ಸಾಧ್ಯವಾಗದೇ ಹೋದರೆ ಅದನ್ನು ಸಂಶೋಧನ ಪತ್ರಿಕೆಗಳಲ್ಲಿ ಬಿಡಿ ಬಿಡಿ ಲೇಖನಗಳಾಗಿಯಾದರೂ ಪ್ರಕಟಿಸಬೇಕು. ಎಷ್ಟೋ ನಿಬಂಧಗಳು ಬಹಳ ತಡವಾಗಿ ಪ್ರಕಟವಾಗುವುದುಂಟು. ಅವು ಪ್ರಕಟವಾಗುವ ಹೊತ್ತಿಗೆ ಆಯಾ ಕ್ಷೇತ್ರದಲ್ಲಿ ಅನೇಕ ಬದಲಾವಣೆಗಳಾಗಿರುತ್ತವೆ. ಅಲ್ಲಿಯವರೆಗೆ ಒಪ್ಪಿಗೆಯಾಗಿದ್ದ ಎಷ್ಟೋ ಸಿದ್ಧಾಂತಗಳು ತಲೆಕೆಳಗಾಗಿರಬಹುದು. ಇವನ್ನೆಲ್ಲ ಲಕ್ಷ್ಯದಲ್ಲಿಟ್ಟುಕೊಂಡು ನಿಬಂಧವನ್ನು ತಿದ್ದಲು ಹೋದರೆ ಅದೇ ಒಂದು ಪ್ರತ್ಯೇಕ ಕೆಲಸವಾಗಲೂ ಸಾಧ್ಯ. ಅಲ್ಲದೆ ನಿಬಂಧದಲ್ಲಿ ಅಪಕ್ವ ಬರಹವೂ

ತೀರ್ಮಾನಗಳೂ ಇದ್ದರೆ ಅವು ಮೊದಲು ಪ್ರಕಟವಾಗಿದ್ದರೆ ಸಹ್ಯವಾಗುತ್ತಿದ್ದಿರಬಹುದು. ಆದರೆ ಎಷ್ಟೋ ಕಾಲವಾದ ಮೇಲೆ ಅವು ಪ್ರಕಟವಾದಾಗ ಅವು ಸಹ್ಯವಾಗುವುದಿಲ್ಲ. ಅಂತಹ ಲೇಖಕನ ವಿಷಯದಲ್ಲಿ ಸಹಾನುಭೂತಿಯನ್ನು ತೋರುವುದು ಕಷ್ಟವಾಗುತ್ತದೆ.

ಈ ಮಾತು ಸಂಪ್ರಬಂಧಗಳಿಗೂ ಅನ್ವಯವಾಗುತ್ತದೆ. ಸಂಶೋಧನ ಕ್ಷೇತ್ರದಲ್ಲಿ ಗ್ರಂಥಗಳಿಗಿಂತ ಸಂಪ್ರಬಂಧಗಳಿಗೆ ಹೆಚ್ಚಿನ ಸ್ಥಾನವುಂಟು. ಒಂದು ಹೊಸ ಆವಿಷ್ಕಾರ, ಒಂದು ಹೊಸ ಸಂಗತಿ, ಒಂದು ನೂತನ ಶೋಧನೆ ಮೊದಲು ಲೇಖನ ರೂಪದಲ್ಲಿ ಅಥವಾ ಒಂದು ಟಿಪ್ಪಣಿ ರೂಪದಲ್ಲಿ ಪ್ರಕಟವಾಗುತ್ತದೆ. ಇಂತಹ ಲೇಖನಗಳು ಅಥವಾ ಟಿಪ್ಪಣಿಗಳು ಅಮೂಲ್ಯ. ಏಕೆಂದರೆ ಅವುಗಳಲ್ಲಿ ಲೇಖಕ ತನ್ನ ಸ್ವಂತತನವನ್ನು ಸಂಪೂರ್ಣವಾಗಿ ಪ್ರಕಟಿಸಿರುತ್ತಾನೆ. ಆದರೆ ಗ್ರಂಥಗಳಲ್ಲಿ ತನ್ನದೆಂಬುದು ಸ್ವಲ್ಪ ಇರಬಹುದು, ಇಲ್ಲದೇ ಹೋಗಬಹುದು; ಇತರರಿಂದ ಕಡ ತಂದು ಪುಟಗಳನ್ನು ತುಂಬಿಸಿರುವುದೇ ಹೆಚ್ಚು. ಆದ್ದರಿಂದ ಸಂಶೋಧಕ ಪಿಎಚ್.ಡಿ. ನಿಬಂಧವನ್ನು ಮುಗಿಸಿಯಾದ ಮೇಲೆ ಸಂಶೋಧನ ಲೇಖನಗಳ ಕಡೆ ಗಮನವೀಯಬೇಕು.

ಪಿಎಚ್.ಡಿ. ಪದವಿ ಸಂಶೋಧಕನಾದವನು ತನ್ನ ಗುರಿಯನ್ನು ಮುಟ್ಟಿದ್ದರ ಸಂಕೇತವಲ್ಲ. ಅವನಿಗೆ ಸಂಶೋಧನೆಯಲ್ಲಿ ಆಸಕ್ತಿಯಿದೆ, ಕೆಲಸಮಾಡಲು ಶಕ್ತಿಯಿದೆ, ಅನುಭವವಿದೆ ಎಂಬುದರ ಒಂದು ಶಿಫಾರಸು ಪತ್ರ. ಆ ಪದವಿಯನ್ನು ಪಡೆದಾದ ಮೇಲೆ ವ್ಯಕ್ತಿ ಏನು ಮಾಡಿದ್ದಾನೆ, ಮಾಡುತ್ತಿದ್ದಾನೆ ಎಂಬುದರ ಮೇಲೆ ಅವನ ಬೆಲೆ ನಿಂತಿದೆ.

ಸಂಶೋಧನ ಲೇಖನಗಳನ್ನು ಎಲ್ಲ ಪತ್ರಿಕೆಗಳವರೂ ಪ್ರಕಟಿಸುವುದಿಲ್ಲ. ಪ್ರಕಟಿಸಲು ಸಿದ್ಧವಾಗಿದ್ದರೂ ಅಂತಹ ಪತ್ರಿಕೆಗಳಿಗೆ ಕೊಡದಿರುವುದು ಒಳ್ಳೆಯದು. ಸಂಶೋಧನ ಲೇಖನಗಳಿಗೇ ಮೀಸಲಾದ ಪತ್ರಿಕೆಗಳಲ್ಲಿ, ಸಂಭಾವನಾ ಗ್ರಂಥ, ಸ್ಮಾರಕ ಗ್ರಂಥಗಳಲ್ಲಿ ಲೇಖನಗಳನ್ನು ಪ್ರಕಟಿಸುವುದರಿಂದ ಇತರ ಸಂಶೋಧಕರಿಗೆ ಅವು ತಲಪುತ್ತವೆ, ಅವರು ಅವುಗಳ ಉಪಯೋಗವನ್ನು ಇಂದಲ್ಲ ನಾಳೆ ಪಡೆದುಕೊಳ್ಳುತ್ತಾರೆ. ಇಂತಹ ಪತ್ರಿಕೆಗಳಲ್ಲಿ ವಿದ್ವಾಂಸರಿಗೆ ಯಾವುದೋ ಒಂದು ಸಮಸ್ಯೆಯ ಮೇಲೆ ವಾದ ವಿವಾದಗಳು ಏಳಬಹುದು. ವೈಯಕ್ತಿಕವಾಗಿ ಸ್ನೇಹವನ್ನು ಉಳಿಸಿಕೊಂಡು, ಪರಸ್ಪರರ ಅಭಿಪ್ರಾಯಗಳ ಮೇಲೆ ಉಗ್ರಧಾಳಿಯನ್ನು ನಡೆಸುವ ಸಂಶೋಧಕರ ಇಂತಹ ವಿದ್ವತ್‌ಸಮರಗಳನ್ನು ಓದಲು ಬಹು ಹಿತವಾಗಿರುತ್ತದೆ.

ಸಂಶೋಧನ ಲೇಖನವು ಹತ್ತಾರು ಪುಟಗಳನ್ನು ತುಂಬುವಷ್ಟಿರಬಹುದು. ಅಥವಾ ನಾಲ್ಕು ಸಾಲಿನ ಒಂದು ಟಿಪ್ಪಣಿಯಾಗಿರಬಹುದು. ಇಂತಹ ಪುಟ್ಟ ಟಿಪ್ಪಣಿಗಳು ಯಾವುದೋ ಒಂದು ಸಂಗತಿಯ ಮೇಲೆ ಬೆಳಕು ಬೀರಬಹುದಾದ್ದರಿಂದ ಇವೂ ಕೂಡ ಸ್ವಾಗತಾರ್ಹವಾಗಿರುತ್ತವೆ.

**ಕನ್ನಡದಲ್ಲಿ ಸಂಶೋಧನೆಗೆ ಅವಕಾಶಗಳು**

ಕನ್ನಡದಲ್ಲಿ ಇಲ್ಲಿಯವರೆಗೆ ಆಗಿರುವ ಸಂಶೋಧನೆ ಆಗಬೇಕಾಗಿರುವ ಕೆಲಸದೊಡನೆ ಹೋಲಿಸಿ ನೋಡಿದಾಗ ಅಲ್ಪವೆಂದೇ ಹೇಳಬೇಕು. ಅನೇಕ ಕ್ಷೇತ್ರಗಳಲ್ಲಿ ಅಲ್ಪ ಸ್ವಲ್ಪ ಕೆಲಸ ನಡೆದಿರಬಹುದು. ಆದರೆ ಇನ್ನೂ ಅನೇಕ ಕ್ಷೇತ್ರಗಳಿಗೆ ಸಂಶೋಧಕರ ಪ್ರವೇಶವೇ ಆಗಿಲ್ಲ. ಕನ್ನಡ ಭಾಷೆ ಮತ್ತು ಸಾಹಿತ್ಯಗಳ ವಿದ್ಯಾರ್ಥಿ ಎಡವಿದರೆ ಒಂದು ಸಮಸ್ಯೆಯ ಮೇಲೆ ಬೀಳುತ್ತಾನೆ. ಅಷ್ಟೊಂದು ಸಮಸ್ಯೆಗಳಿವೆ. ಈ ದೃಷ್ಟಿಯಿಂದ ಕನ್ನಡವು ಸಂಶೋಧಕರ ಸ್ವರ್ಗವೇ ಸರಿ. ಹತ್ತು ಹದಿನೈದು ವರ್ಷಗಳ ನಂತರ ಈ ಪರಿಸ್ಥಿತಿ ಖಂಡಿತ ಇರುವುದಿಲ್ಲ. ಅಥವಾ ಇರಬಾರದು. ಈಗ ಅನೇಕ ವಿಷಯಗಳಲ್ಲಿ ನಾವು ಏನು ಹೇಳಿದರೂ ಆ ವಿಷಯದಲ್ಲಿ ಮೊದಲಿಗರಾಗುವ ಗೌರವವನ್ನು ಪಡೆಯಲವಕಾಶವಿದೆ.

ಹಳೆಯ ಸಾಹಿತ್ಯದಲ್ಲಿ ಎಲ್ಲೋ ಕೆಲವರನ್ನು ಬಿಟ್ಟರೆ, ಅನೇಕ ಕವಿಗಳ ವಿಷಯವಾಗಿ ಏನೂ ಕೆಲಸವೇ ನಡೆದಿಲ್ಲ. ಕನ್ನಡ ಕವಿಗಳ ಮೇಲೆ ಸಂಸ್ಕೃತ, ಪ್ರಾಕೃತ ಕವಿಗಳ ಪ್ರಭಾವವೇನು ಎಂಬುದರ ವಿವೇಚನೆ ಆಗಬೇಕಾಗಿದೆ. ನಮ್ಮ ಕವಿಗಳ ಕೃತಿಗಳಲ್ಲಿ ಚಿತ್ರತವಾಗಿರುವ ಜನಜೀವನವನ್ನೇ ಕುರಿತು ಪ್ರತ್ಯೇಕ ಅಧ್ಯಯನ ನಡೆಯಬಹುದು. ಪ್ರಕೃತಿ ವರ್ಣನೆ, ಯುದ್ಧ ವರ್ಣನೆಗಳ ಮೇಲೆಯೇ ಕೆಲಸ ಮಾಡಲವಕಾಶವಿದೆ. ಬೇರೆ ಬೇರೆ ಕವಿಗಳನ್ನು ಆರಿಸಿಕೊಂಡು ಪರಸ್ಪರ ತೌಲನಿಕ ಅಧ್ಯಯನ ನಡೆಸಬಹುದು. ಜೈನ ಪುರಾಣಗಳು, ವೀರಶೈವ ಪುರಾಣಗಳು, ವಚನಕಾರರು ಮತ್ತು ಅವರ ಜೀವನ ಚರಿತ್ರೆಗಳು, ಬೆಡಗಿನ ವಚನಕಾರರು, ವ್ಯಾಖ್ಯಾನಕಾರರು ಇತ್ಯಾದಿಗಳು ಸಂಶೋಧನೆಗೆ ವಸ್ತುಗಳನ್ನೊದಗಿಸುತ್ತವೆ. ಕನ್ನಡ ಕವಿಗಳ ಮೇಲೆ ತೆಲುಗು, ತಮಿಳು, ಮರಾಠಿ ಕವಿಗಳ ಪ್ರಭಾವ ಮತ್ತು ಅವರ ಮೇಲೆ ಇವರ ಪ್ರಭಾವ - ಇದನ್ನು ಕುರಿತು ಕೆಲಸ ಮಾಡಬಹುದು. ಹೊಸ ಸಾಹಿತ್ಯಕ್ಕೆ ಬಂದರೂ ಅಷ್ಟೇ ಅವಕಾಶಗಳಿವೆ. ಪ್ರತ್ಯೇಕವಾಗಿ ಕವಿಗಳನ್ನೂ ಅಥವಾ ಸಾಹಿತ್ಯ ಪ್ರಕಾರಗಳನ್ನೂ ಕುರಿತು ಕೆಲಸಮಾಡಬಹುದು. ಹತ್ತೊಂಬತ್ತು ಇಪ್ಪತ್ತನೇ ಶತಮಾನಗಳ ಸಂಧಿಕಾಲದ ಭಾಷೆ, ಸಾಹಿತ್ಯಗಳ ವಿಷಯವೂ ಅಷ್ಟೇ ಫಲಪ್ರದವಾಗಿರುತ್ತದೆ.

ಶಾಸ್ತ್ರ ವಿಷಯಗಳಿಗೆ ಬಂದರೆ ಅಲ್ಲೂ ಹತ್ತಾರು ಅವಕಾಶಗಳಿವೆ. ಕನ್ನಡ ವ್ಯಾಕರಣಗಳ ತೌಲನಿಕ ಅಧ್ಯಯನ, ಹನ್ನೊಂದನೆಯ ಶತಮಾನದಿಂದ ಈಚಿನ ಕನ್ನಡಭಾಷೆಯ ಬೇರೆ ಬೇರೆ ಘಟ್ಟಗಳು, ಅದು ವಿಕಾಸ ಹೊಂದಿದ ರೀತಿ, ಆಧುನಿಕ ಯುಗದ ಪ್ರಾದೇಶಿಕ ವೈಲಕ್ಷಣ್ಯಗಳು ಇತ್ಯಾದಿ ಅನೇಕ ವಿಷಯಗಳಿವೆ. ಕನ್ನಡ ಶಾಸನಗಳಿಗೆ ಸಂಬಂಧಿಸಿದಂತೆ ಕನ್ನಡ ಸಾಹಿತ್ಯದ ವಿದ್ಯಾರ್ಥಿಗಳು ಕೆಲಸ ಮಾಡಲವಕಾಶವಿದೆ. ವ್ಯಕ್ತಿನಾಮಗಳು, ಸ್ಥಳನಾಮಗಳ ಮೇಲಂತೂ ಇಲ್ಲಿಯವರೆಗೆ ಏನೂ ಕೆಲಸ ನಡೆದಿಲ್ಲ. ವೈದ್ಯಗ್ರಂಥಗಳು, ಸೂಪಶಾಸ್ತ್ರ, ಗಣಿತಶಾಸ್ತ್ರ ಇತ್ಯಾದಿ ಶಾಸ್ತ್ರಗ್ರಂಥಗಳ ಶಾಸ್ತ್ರೀಯವಾದ ಅಧ್ಯಯನದ ವಿಷಯದಲ್ಲೂ ಇದೇ ಮಾತನ್ನು ಹೇಳಬಹುದು.

ಮೇಲೆ ಸೂಚಿಸಿರುವ ಕೆಲವು ವಿಷಯಗಳು ಪಿಎಚ್.ಡಿ. ವಿದ್ಯಾರ್ಥಿಗಳು ಆರಿಸಿಕೊಳ್ಳಬಹುದಾದಂಥವು. ಸಂಶೋಧನ ನಿಬಂಧಗಳಿಗೆ ವಸ್ತುವಾಗಬಲ್ಲ ವಿಷಯಗಳು ಕನ್ನಡದಲ್ಲಂತೂ ಅಸಂಖ್ಯಾತ. ಹೀಗೆ ಮಾಡಲು ಕೆಲಸವೇನೋ ಬೇಕಾದಷ್ಟಿದೆ; ಈಚೆಗೆ ಕೆಲಸವೂ ನಡೆಯುತ್ತಿದೆ.

**ಕೊನೆಯ ಮಾತು**

ಕೊನೆಯದಾಗಿ ಒಂದು ಮಾತನ್ನು ಹೇಳಲೇಬೇಕು. ಮೇಲೆ ಹೇಳಿದ್ದರಲ್ಲಿ ನಿಯಮವೆಂದು ಹೇಳಬಹುದಾದದ್ದು ಯಾವುದೂ ಇಲ್ಲ. ಸಂಶೋಧನೆ ಎಂದರೇನು ಎಂಬುದನ್ನು ಪುಸ್ತಕದಲ್ಲಿ ಓದಿ ಯಾರೂ ಸಂಶೋಧಕರಾಗಲಾರರು. ಪ್ರತಿಯೊಬ್ಬ ಸಂಶೋಧಕನೂ ತನ್ನ ಸ್ವಂತ ಅನುಭವದಿಂದ ಶ್ರಮದಿಂದ ತನ್ನ ಮಾರ್ಗವನ್ನು ತಾನೇ ಕಂಡುಕೊಳ್ಳುತ್ತಾನೆ. ಆದ್ದರಿಂದ ಮೇಲೆ ಹೇಳಿರುವುದೆಲ್ಲವನ್ನೂ ಕೇವಲ ಸೂಚನೆಗಳೆಂದು ಭಾವಿಸಬೇಕು.

# ಸಂಪ್ರಬಂಧ

ಈ ಪದದ ಟಂಕೀಕರಣದ ಹಿನ್ನೆಲೆಯನ್ನು ಕೊಡುವುದು ಅಗತ್ಯ. ಕನ್ನಡದಲ್ಲಿ 'ಪ್ರಬಂಧ' ಎಂಬ ಮಾತಿಗೆ ಇಂಗ್ಲಿಷಿನ 'Essay' ಎಂಬರ್ಥವು ಪ್ರಾಪ್ತವಾಗಿದೆ. ಪ್ರಾಚೀನ ಕಾಲದಲ್ಲಂತೂ ಮಹಾಕಾವ್ಯ ಎಂಬರ್ಥದಲ್ಲಿ ಅದು ಬಳಕೆಯಾಗುತ್ತಿತ್ತು (ನೋಡಿ "ಲೀಲಾವತಿ ಪ್ರಬಂಧಂ"). "ಪ್ರಬಂಧ" ಎಂದರೆ ಚೆನ್ನಾಗಿ ಕಟ್ಟಿದ್ದು, ಒಳ್ಳೆಯ ಶಿಲ್ಪವುಳ್ಳದ್ದು, ಒಂದು ರಚನೆಯುಳ್ಳದ್ದು ಎಂಬುದು ಮೂಲಾರ್ಥ. ಈ ಅರ್ಥದಲ್ಲಿ "ಪ್ರಬಂಧ"ಕ್ಕೆ ಅಷ್ಟಾದಶ ವರ್ಣನೆಗಳುಳ್ಳ, ಹಲವಾರು ಅಲಂಕಾರಗಳಿಂದ ಕೂಡಿದ ಸಂಸ್ಕೃತ ಛಂದೋರೂಪಗಳ ಬಳಕೆಯ, ಮಾರ್ಗೀಶೈಲಿಯ ಪದ್ಯಕಾವ್ಯವೆಂಬ ಅರ್ಥ ಕನ್ನಡದಲ್ಲಿ ಹಿಂದೆ ಬಂದಿದ್ದುದು ತೀರ ಸ್ವಾಭಾವಿಕವಾಗಿದೆ. ಹೊಸಗನ್ನಡದಲ್ಲಿ ಆ ಪದಕ್ಕೆ ಪ್ರಾಪ್ತವಾಗಿರುವ ಭಿನ್ನಾರ್ಥವು ಸ್ಪಷ್ಟವಾಗಿದೆ.

ಇಂಗ್ಲೀಷಿನಲ್ಲಿ essay ಎಂದರೆ ಯಾವುದೇ ಚಿಕ್ಕ ಗದ್ಯ ಬರಹ ಆಗಬಹುದು. ಪಾರಿಭಾಷಿಕ ಅರ್ಥದಲ್ಲಿ ಸಾಹಿತ್ಯದ ಒಂದು ಪ್ರಕಾರದ ಹೆಸರೂ ಆಗಬಹುದು. ಹೊಸ ಕನ್ನಡದಲ್ಲಿ ಪ್ರಬಂಧವೆಂಬ ಮಾತಿಗೆ ಎರಡೂ ಅರ್ಥಗಳಿದ್ದರೂ ಸಾಹಿತ್ಯದ ಪ್ರಕಾರವನ್ನು ಹೇಳುವಾಗ ಕೆಲವರು "ಲಲಿತ ಪ್ರಬಂಧ"ವೆಂಬ ಮಾತನ್ನು ಬಳಸುತ್ತಾರೆ. ಸಾಮಾನ್ಯಾರ್ಥದಲ್ಲಿ ಪ್ರಬಂಧವು ವಿಜ್ಞಾನದ ವಿಷಯದ ಬರಹವೂ ಆಗಿರಬಹುದು. ಆದರೆ ಅಂತಹ ಪ್ರಬಂಧವನ್ನು ಖಂಡಿತವಾಗಿಯೂ "ಲಲಿತ ಪ್ರಬಂಧ"ವೆಂದು ಕರೆಯಲು ಸಾಧ್ಯವಿಲ್ಲ. ವಿ.ಸೀ., ಗೊರೂರು, ಮೂರ್ತಿರಾಯರ ಪ್ರಬಂಧಗಳು "ಲಲಿತ ಪ್ರಬಂಧ"ಗಳು.

ದುರದೃಷ್ಟವೆಂದರೆ ಪಿಎಚ್.ಡಿ. ಪದವಿಗಾಗಿ ಒಪ್ಪಿಸಿದ ಬರಹವನ್ನು "ಪ್ರಬಂಧ"ವೆಂದೂ, "ಪ್ರೌಢ ಪ್ರಬಂಧ", "ಮಹಾ ಪ್ರಬಂಧ"ವೆಂದೂ ಬೇರೆ ಬೇರೆಯವರು ಕರೆದಿದ್ದಾರೆ. ಈ ಪದಪ್ರಯೋಗಗಳ ಅನೌಚಿತ್ಯವಂತೂ ಎದ್ದು ಕಾಣಿಸುತ್ತದೆ.

ಇಂಗ್ಲೀಷಿನ 'thesis' ಅಥವಾ "dissertation" ಒಬ್ಬ ವಿದ್ವಾಂಸ ಸಂಶೋಧನೆಗಳನ್ನು ನಡೆಸಿ ಅಂತ್ಯದಲ್ಲಿ ತನ್ನ ಶೋಧದ ಫಲಗಳನ್ನು ಪದವಿಗಾಗಿ ತಜ್ಞರ ಪರೀಕ್ಷೆಗಾಗಿ ಒಪ್ಪಿಸುವ ಕೃತಿ. ಅದು "ಪ್ರಬಂಧ"ವಂತೂ ಅಲ್ಲ. ಅದನ್ನು "ಮಹಾಪ್ರಬಂಧ"ವೆಂದು ಕರೆಯುವುದರಲ್ಲಿ ಯಾವುದೇ ಔಚಿತ್ಯ ಕಾಣದು. "ಮಹಾ" ವಿಶೇಷಣವು ಕೃತಿಯ ಗಾತ್ರವನ್ನು ಹೇಳುತ್ತದೆ, ನಿಜ. "thesis" ಗಾತ್ರದಲ್ಲಿ ಬಿಡಿ ಬರಹಕ್ಕಿಂತ ದೊಡ್ಡದಿರುತ್ತದೆಯೆಂಬುದೂ ನಿಜ. ಆದರೆ, ಅದು ಖಂಡಿತವಾಗಿಯೂ "ಪ್ರಬಂಧ"ದ

ಹಿಗ್ಗಿದ ರೂಪವಲ್ಲ. ಈ ಹಿನ್ನೆಲೆಯಲ್ಲಿ, ಸಂಶೋಧನೆಯು ಒಂದು ಮಾನ್ಯ ಶಿಸ್ತಾಗಿ ಕನ್ನಡದಲ್ಲಿ ನೆಲೆಗೊಂಡಿರುವುದರಿಂದ, ಕೆಲವು ಮೂಲಭೂತ ಪದಗಳನ್ನು ಟಂಕಿಸುವ ಅಥವಾ ಹಳೆಯ ಪದಗಳಿಗೆ ಹೊಸ ಅರ್ಥಗಳನ್ನು ಆರೋಪಿಸಿ ಬಳಕೆಗೆ ತರುವ ಅಗತ್ಯ ಕಾಣಿಸಿದೆ.

ಹೀಗಾಗಿ, thesis ಅಥವಾ dissertation ಎಂಬರ್ಥದಲ್ಲಿ "ನಿಬಂಧ" ಶಬ್ದವನ್ನು ನಾನು ಕಳೆದ ಹಲವು ವರ್ಷಗಳಿಂದ ಬಳಸುತ್ತಿದ್ದೇನೆ. "ನಿಬಂಧ" ಪದವನ್ನು ಆ ಅರ್ಥದಲ್ಲಿ ಬಳಸಲು ಸೂಚಿಸಿದವರು ನನ್ನ ಪಿಎಚ್.ಡಿ. ನಿಬಂಧಕ್ಕೆ ಮಾರ್ಗದರ್ಶಕರಾಗಿದ್ದ (ದಿ) ಪ್ರೊ. ತೀ.ನಂ. ಶ್ರೀಕಂಠಯ್ಯನವರೆಂದು ನಾನು ಅಂದುಕೊಂಡಿದ್ದೇನೆ. ಏಕೆಂದರೆ, 1966ರಲ್ಲಿ ಪ್ರಕಟವಾಗಿರುವ ನನ್ನ "ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ" ಕೃತಿಯನ್ನು ನಾನು "ನಿಬಂಧ"ವೆಂದೇ ಕರೆದುಕೊಂಡಿದ್ದೇನೆ. ಆದರೆ ಇಲ್ಲೇ ಒಂದು ಮಾತನ್ನು ಸ್ಪಷ್ಟಪಡಿಸಬೇಕು. "ನಿಬಂಧ" ಪದದಲ್ಲಿ ಯಾವುದೇ ವೈಶಿಷ್ಟ್ಯವಾಗಲಿ ಪಾವಿತ್ರ್ಯವಾಗಲಿ ಇಲ್ಲ. "ನಿಬಂಧ" ಎಂಬುದೂ ಒಂದು ರೀತಿಯಲ್ಲಿ "ಪ್ರಬಂಧ"ದ ರೀತಿಯ ಶಬ್ದವೇ. ಒಂದರಲ್ಲಿ "ನಿ..." ಎಂಬ ಇನ್ನೊಂದರಲ್ಲಿ "ಪ್ರ..." ಎಂಬ ಪೂರ್ವಪ್ರತ್ಯಯಗಳು "ಬಂಧ" ಪದಕ್ಕೆ ಸೇರಿವೆ. ಎರಡೂ ಒಳ್ಳೆಯ ಜೋಡಣೆಯನ್ನು ಸುವ್ಯವಸ್ಥಿತ ರಚನೆಯನ್ನು ಹೇಳುತ್ತವೆ. ಆದರೆ "ನಿಬಂಧ" ಪದಕ್ಕೆ "ಪ್ರಬಂಧ" ಪದಕ್ಕೆ ಸಮಾವೇಶಗೊಂಡಿರುವಂತೆ ಖಚಿತ ಅಥವಾ ಪಾರಿಭಾಷಿಕ ಅರ್ಥ ಇಲ್ಲ. "ಪ್ರಬಂಧ"ಕ್ಕೆ ಹೊಸ ಅರ್ಥದ ಛಾಯೆಯನ್ನು ಮೂಡಿಸಬಾರದು. ಹಾಗೆ ಪ್ರಯತ್ನಿಸಿದರೂ ಅದು ವ್ಯರ್ಥವಾಗುತ್ತದೆ ಮತ್ತು ಅದು ಅನಗತ್ಯವೂ ಹೌದು. "ನಿಬಂಧ"ಕ್ಕೆ ಆ ರೀತಿಯ ಪ್ರತಿಬಂಧಕಗಳಿಲ್ಲವಾದ್ದರಿಂದ ಅದನ್ನು "dissertation" ಅಥವಾ "thesis" ಎಂಬರ್ಥದಲ್ಲಿ ಬಳಸುವುದು ಉಚಿತವಾಗಿದೆ. ನಾನೇನೋ ಈಗಾಗಲೇ ಹಲವಾರು ಬಾರಿ ಬಳಸಿದ್ದೇನೆ. ಅದನ್ನು ಹಲವರು ಬಳಸಿ ರೂಢಿಗೆ ತಂದಿರುವುದನ್ನು ನಾನು ಗುರುತಿಸಿದ್ದೇನೆ.

ಇಂಗ್ಲೀಷಿನಲ್ಲಿ "essay" ಪದಕ್ಕಿಂತ ಭಿನ್ನವಾದ ಅರ್ಥವನ್ನು ಹೊಂದಿದೆ "research paper" ಎಂಬ ಪದ. ಸಾಂದರ್ಭಿಕವಾಗಿ "paper" ಪದಕ್ಕೆ "research paper" ಎಂಬರ್ಥವೂ ಬರುತ್ತದೆ. "ನಾನು ಬೆಳಿಗ್ಗೆ paper ಓದಿಲ್ಲ" ಈ ವಾಕ್ಯದ ಪದಕ್ಕೆ ವೃತ್ತಪತ್ರಿಕೆ ಎಂಬುದಷ್ಟೇ ಅರ್ಥ. "ನಾನು paper ಬರೆಯಬೇಕಾಗಿದೆ" "ಗೋಷ್ಠಿಯಲ್ಲಿ ನನ್ನ paper ಚರ್ಚಿತವಾಯ್ತು" : ಇಲ್ಲೆಲ್ಲ ಆ ಪದಕ್ಕೆ ಸಂಶೋಧನಾತ್ಮಕ ಬರಹ ಎಂದೇ ಅರ್ಥ. Essay ಒಂದು ಸೃಜನಾತ್ಮಕ ಬರಹವಾದರೆ, paper ಸಂಶೋಧನಾತ್ಮಕ ಬರಹವನ್ನು ಹೇಳುತ್ತದೆ. ಒಬ್ಬ ವ್ಯಕ್ತಿ ಸಂಶೋಧನೆಗಳನ್ನು ನಡೆಸಿ ಆ ಸಂಶೋಧನೆಗಳನ್ನು ಒಂದು ಲೇಖನರೂಪವಾಗಿ ವರದಿ ಮಾಡಿರುವುದೇ research paper ಅಥವಾ paper. ಸಂಶೋಧನೆ ಎಂದರೇನು? ಒಂದು ಲೇಖನವು ಸಂಶೋಧನಾತ್ಮಕ ಹೌದೇ ಅಲ್ಲವೇ ಎಂಬುದನ್ನು ಗುರುತಿಸಲು ಮಾನದಂಡಗಳು ಯಾವುವು ಎಂಬುದು ಸದ್ಯಕ್ಕೆ ಸಂಪೂರ್ಣವಾಗಿ ಅಪ್ರಸ್ತುತ. research paper ಎಂಬರ್ಥದಲ್ಲಿ "ಸಂಪ್ರಬಂಧ" ಪದವನ್ನು ನಾನು ಬಳಸುತ್ತಿದ್ದೇನೆ. ಲೇಖನವು ಪ್ರಬಂಧದ ರೂಪದಲ್ಲಿರುತ್ತದೆ. ಹಿಂದಿನ "ಸಂ" ಎಂಬುದು

"ಸಂಶೋಧನ"ದ ಸಂಕ್ಷಿಪ್ತ ರೂಪ. research paper ಅಥವಾ ಸಂಶೋಧನ ಪ್ರಬಂಧವನ್ನು "ಸಂಪ್ರಬಂಧ"ವೆಂದು ಸಂಕ್ಷೇಪಗೊಳಿಸಲಾಗಿದೆ.

"ಪ್ರಬಂಧ"ಕ್ಕೆ ಸಾಹಿತ್ಯಕವಾದ ಅರ್ಥವಿರುವಾಗ ಅದನ್ನು ಕೈಬಿಟ್ಟು, "ಲೇಖನ" ಪದದ ಹಿಂದೆ "ಸಂ"ಸೇರಿಸಿ ಪದವನ್ನು ಸೃಷ್ಟಿಮಾಡಿಕೊಳ್ಳಬಹುದಿತ್ತು. research article (paper) ಎಂಬುದು ಆಗ "ಸಂಶೋಧನ ಲೇಖನ" ಅಥವಾ "ಸಲ್ಲೇಖನ"ವಾಗುತ್ತಿತ್ತು. "ಸಲ್ಲೇಖನ"ಕ್ಕೆ ಜೈನರಲ್ಲಿ ವ್ಯಕ್ತಿ ಮೋಕ್ಷಾಪೇಕ್ಷಿಯಾಗಿ ಮಾಡಿಕೊಳ್ಳುವ ಆತ್ಮಬಲಿ ಎಂಬರ್ಥವಿರುವುದರಿಂದ ಅದನ್ನು ಕೈಬಿಡಲಾಯ್ತು. paper ಪದಕ್ಕೆ "ಪತ್ರಿಕೆ" ಎಂದಿರುವಾಗ research paper ಎಂಬುದನ್ನು "ಸಂಪತ್ರಿಕೆ" ಎಂದು ಮಾಡಿಕೊಳ್ಳಬಹುದಿತ್ತು. ಆದರೆ Research Journal ಅಥವಾ Journal ಎಂಬರ್ಥಕ್ಕೆ "ಸಂಪತ್ರಿಕೆ"ಯನ್ನು ನಾನು ಮೀಸಲಿಡುವುದರಿಂದ ಅದನ್ನೂ ಕೈಬಿಟ್ಟೆ. ಹೀಗಾಗಿ "ಸಂಪ್ರಬಂಧ"ವೆಂಬ ಪದವನ್ನು research paper ಎಂಬರ್ಥದಲ್ಲಿ ಬಳಸಲು ಆರಂಭಿಸಿದ್ದೇನೆ. ಮತ್ತು ಅದು ಹಲವರು ಬಳಸಿ ರೂಢಿಗೆ ಬರುತ್ತಿರುವುದು ಸಂತೋಷದ ವಿಷಯ.

ಈ ಹಿನ್ನೆಲೆಯಲ್ಲಿ ಈ ಕೆಳಗಿನ ಪದಗಳ ಬಳಕೆಯ ವ್ಯಾಪ್ತಿಯನ್ನು ನಿಗದಿಗೊಳಿಸಬಹುದು.

**1. ಲೇಖನ (article)** : ಯಾವುದೇ ಬರಹ; ಪತ್ರಿಕೆಗಳಿಗೆ (ವಾರ, ದಿನ, ಮಾಸಿಕ ಪತ್ರಿಕೆಗಳಿಗೆ) ಬರೆದುದು. ವಿಷಯ ಯಾವುದೇ ಇರಬಹುದು. ಒಟ್ಟಾರೆ ಅದು ಜನಪ್ರಿಯ ಧಾಟಿಯ ಬರಹ.

**2. ಪ್ರಬಂಧ (essay)** : ಸಾಹಿತ್ಯದ ಒಂದು ಪ್ರಕಾರವಾಗಿ. ಇಲ್ಲಿ ವಿಷಯಕ್ಕಿಂತ ಹೇಳುವ ರೀತಿ ಮುಖ್ಯ. ಶೈಲಿಪ್ರಧಾನವಾದುದು. ಕೆಲವು ವೈಯಕ್ತಿಕ ಆಲೋಚನೆ ಅಥವಾ ಅನುಭವಗಳನ್ನು ಪ್ರಬಂಧದಲ್ಲಿ ಹೇಳಲಾಗುತ್ತದೆ. ಗೊರೂರು, ಮೂರ್ತಿರಾವ್, ಪು.ತಿ.ನ., ವಿ.ಸೀ. ಅವರ ಬರಹಗಳು ಪ್ರಬಂಧಗಳು (ಲಲಿತ ಪ್ರಬಂಧಗಳು)

**3. ಸಂಪ್ರಬಂಧ** : ಸಂಶೋಧನಾತ್ಮಕ ಬರಹ (research paper)

**4. ನಿಬಂಧ thesis / dissertation** : ಪಿಎಚ್.ಡಿ., ಎಂ.ಫಿಲ್. ಪದವಿಗಳಿಗಾಗಿ ಅರ್ಪಿಸುವ ದೊಡ್ಡ ಪ್ರಮಾಣದ ಬರಹ. ಸುಮಾರು 100 ರಿಂದ 500, 600 ಪುಟಗಳವರೆಗೆ ಇರಬಹುದು.

**5. ಸಂಪತ್ರಿಕೆ Research Journal** : ಸಂಪ್ರಬಂಧಗಳನ್ನು ಪ್ರಕಟಿಸುವ ಪತ್ರಿಕೆಯೇ ಸಂಪತ್ರಿಕೆ. (ಸಂಶೋಧನ + ಪತ್ರಿಕೆ = ಸಂಪತ್ರಿಕೆ)

# ಕಿರಿಯ ಸಂಶೋಧಕರಿಗೆ ಕೆಲವು ಕಿವಿ ಮಾತುಗಳು

ಎಂ.ಎ. ಮುಗಿಸಿದ ಬಳಿಕ ಸಂಶೋಧನೆಯನ್ನು ಕೈಗೆತ್ತಿಕೊಳ್ಳಬೇಕೆಂದಿರುವ ವಿದ್ಯಾರ್ಥಿಗಳಿಂದ ಇಂತಹ ಪ್ರಶ್ನೆಗಳನ್ನು ನಾನು ಆಗಾಗ ಎದುರಿಸಿದ್ದೇನೆ -

"ಸರ್, ನಾನು ಸಂಶೋಧನೆ ಮಾಡಬೇಕೆಂದಿದ್ದೇನೆ, ನನ್ನಿಂದ ಆ ಕೆಲಸ ಸಾಧ್ಯವೇ?"

"ಸರ್, ನನಗೆ ಒಂದು ವಿಷಯ ಸೂಚಿಸಿ"

ದ್ವಿತೀಯ ದರ್ಜೆಯಲ್ಲಿ ತೇರ್ಗಡೆಯಾಗಿರುವವರಲ್ಲಿ ಕೆಲವರಂತೂ ತಮ್ಮ ಶಕ್ತಿಯ ಬಗ್ಗೆ ತೀರ ಅಳುಕನ್ನು ವ್ಯಕ್ತಪಡಿಸಿರುವ ಸಂದರ್ಭಗಳೂ ಇಲ್ಲದಿಲ್ಲ.

ಮೇಲಿನ ಪ್ರಶ್ನೆಗಳಲ್ಲಿ ಮೊದಲನೆಯದಕ್ಕೆ ನನ್ನ ಹತ್ತಿರ ಸಿದ್ಧ ಉತ್ತರವೊಂದುಂಟು. ಪ್ರಯತ್ನಪಟ್ಟರೆ, ವ್ಯವಸ್ಥಿತವಾದ ಶ್ರಮಕ್ಕೆ ಸಿದ್ಧವಿದ್ದರೆ ಯಾರು ಬೇಕಾದರೂ ಸಂಶೋಧಕರಾಗಬಹುದು. ಪ್ರತಿಭಾಶಾಲಿಯೊಬ್ಬ ಶ್ರಮ ಪಡದಿದ್ದರೆ ಅವನು ಹೇಗೆ ತನ್ನ ಶಕ್ತಿಯನ್ನು ಸಂಪೂರ್ಣ ಸಾರ್ಥಕಪಡಿಸಿಕೊಳ್ಳಲಾರನೋ, ಹಾಗೆಯೇ ಅಷ್ಟು ಬುದ್ಧಿವಂತನಲ್ಲದ ವ್ಯಕ್ತಿ ವಿಶೇಷ ಶ್ರಮ ಪ್ರಯತ್ನಗಳಿಂದ ತನ್ನ ಕಾರ್ಯದಲ್ಲಿ ಯಶಸ್ವಿಯಾಗಬಲ್ಲನೆಂಬುದಕ್ಕೆ ಉದಾಹರಣೆಗಳಿವೆ. ಬುದ್ಧಿಶಕ್ತಿ, ಶ್ರಮ ಇವುಗಳಲ್ಲಿ ಯಾವುದಕ್ಕೆ ಹೆಚ್ಚು ಪ್ರಾಮುಖ್ಯ ಕೊಡಬೇಕು ಎಂಬ ಪ್ರಶ್ನೆಗೆ ನನ್ನ ಹತ್ತಿರ ಉತ್ತರವಿಲ್ಲ. ಆದರೆ ಇಷ್ಟು ಮಾತ್ರ ನಿಜ. ಬೇರೆ ಕಡೆ ಹೇಗೋ ತಿಳಿಯದು, ಸಂಶೋಧನೆಯಲ್ಲಿ ವ್ಯಕ್ತಿಯ ಶ್ರಮ, ಪ್ರಯತ್ನಗಳಿಗೆ ಒಂದು ಪ್ರಮುಖಸ್ಥಾನ ಖಂಡಿತ ಇದೆ.

ಮೇಲಿನ ಎರಡನೆಯ ಪ್ರಶ್ನೆಗೆ ಆ ಕ್ಷಣದಲ್ಲಿ ಉತ್ತರ ಹೇಳುವುದು ಎಂಥವರಿಗೂ ಕಷ್ಟ. ಆದರೆ, ಕನ್ನಡಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ ಸಂಶೋಧನ ವಸ್ತುಗಳಿಗೆ ಕೊರತೆ ಇಲ್ಲ. ಮತ್ತು ಕೆಲವು ವರ್ಷಗಳಾದರೂ ಆ ಪರಿಸ್ಥಿತಿ ವ್ಯತ್ಯಾಸಗೊಳ್ಳುವುದಿಲ್ಲ. ಒಬ್ಬ ವಿದ್ಯಾರ್ಥಿ ವಸ್ತುವನ್ನು ಆರಿಸಿಕೊಳ್ಳುವಾಗ ಗಮನಿಸಬೇಕಾದ ಸಂಗತಿಗಳು ಕೆಲವಿವೆ. ಒಂದು- ಆ ವಸ್ತು ತನ್ನ ಅಭಿರುಚಿಗೆ ಶಕ್ತಿಗೆ ಹೊಂದಿಕೊಳ್ಳುತ್ತದೆಯೇ ? (ತನ್ನ ಮಾರ್ಗದರ್ಶಕನಿಗೆ ಅದು ಒಪ್ಪಿಗೆಯಾಗುತ್ತದೆಯೇ?). ಎರಡು - ಅದರ ಬಗ್ಗೆ ಎಷ್ಟು ಕೆಲಸ ಆಗಿದೆ ? ಮೂರು - ಆರಿಸಿಕೊಂಡ ವಸ್ತುವಿನ ಪ್ರಮಾಣ, ಎಂದರೆ ಒಂದು ನಿರ್ದಿಷ್ಟ ಅವಧಿಯಲ್ಲಿ, ನಿರಂತರ ಶ್ರಮದ ಸುಮಾರು ಮೂರು ವರ್ಷದಲ್ಲಿ ಆ ಕೆಲಸವನ್ನು ಒಂದು ನಿರ್ಣಾಯಕ ಘಟ್ಟಕ್ಕೆ ತರಲು ಸಾಧ್ಯವೇ ? ಇದೇ ವಸ್ತುವನ್ನು ಕುರಿತು ಯಾರಾದರೂ ಕೆಲಸ

ಮಾಡುತ್ತಿದ್ದಾರೆಯೇ ? ಇವನ್ನೆಲ್ಲ ಲೆಕ್ಕಕ್ಕೆ ತೆಗೆದುಕೊಳ್ಳಬೇಕಾಗುತ್ತದೆ. ಸಂಶೋಧನೆಗೆ ವಸ್ತುವೊಂದನ್ನು ಆಯ್ಕೆ ಮಾಡುವಾಗ, ವಿದ್ಯಾರ್ಥಿ ತನ್ನ ಅಭಿರುಚಿಯೇನೆಂಬುದನ್ನು ಸ್ಥೂಲವಾಗಿ ಕಂಡುಕೊಳ್ಳಬಲ್ಲ. ಆದರೆ ಉಳಿದ ಅಂಶಗಳ ಬಗ್ಗೆ ಅವನೇ ನಿರ್ಣಯ ತೆಗೆದುಕೊಳ್ಳುವುದು ಕಷ್ಟವಾಗುತ್ತದೆ. ಅವನು ತನ್ನ ಮಾರ್ಗದರ್ಶಕನ ಬಳಿಯೋ ಇತರರ ಹತ್ತಿರವೋ ಕುಳಿತು ಒಂದಲ್ಲ ಹಲವು ಬಾರಿ ಚರ್ಚೆಮಾಡಿ ಆ ಬಗ್ಗೆ ನಿರ್ಣಯ ತೆಗೆದುಕೊಳ್ಳಬೇಕು. ಇಲ್ಲಿ ದುಡುಕಿ ಪ್ರಯೋಜನವಿಲ್ಲ. ಒಂದೆರಡು ತಿಂಗಳು ಕೆಲಸ ಮಾಡಿ ಪ್ರಬಂಧವೊಂದನ್ನು ಬರೆಯಲು ಸಾಧ್ಯವಾಗುವ ವಸ್ತುಗಳಿವೆ. ಹತ್ತು ವರ್ಷ ಕಳೆದರೂ ಮುಗಿಸಲಾರದಂತಹ ವಸ್ತುಗಳಿವೆ. ಆ ವಸ್ತುವನ್ನು ಕುರಿತು ಆಗಲೇ ಯಾರೋ ಕೆಲಸ ಮಾಡಿರಬಹುದು, ಅಥವಾ ಮಾಡುತ್ತಿರಬಹುದು. ಇದನ್ನೆಲ್ಲ ಪರ್ಯಾಲೋಚನೆಗೆ ತೆಗೆದುಕೊಂಡು, ಒಂದಲ್ಲ ನಾಲ್ಕು ಬಾರಿ ವಿಚಾರಮಾಡಿ ವಸ್ತುವನ್ನು ಆಯ್ಕೆ ಮಾಡಿಕೊಳ್ಳಬೇಕು. ಒಮ್ಮೆ ಆಯ್ಕೆಯಾಗಿ ಸಾಕಷ್ಟು ಕಾಲ ಕಳೆದ ನಂತರ ತಮ್ಮ ವಸ್ತುವನ್ನು ಬದಲಾಯಿಸಿಕೊಂಡಿರುವವರುಂಟು. ಅಥವಾ ಹಾಗೆ ಬದಲಾವಣೆ ಮಾಡಲು ಸಾಧ್ಯವಾಗದೆ ಕೊರಗಿರುವವರುಂಟು. ಇದರಿಂದ ಆಗುವ ನಷ್ಟ, ಯಾತನೆ ಅವರ್ಣನೀಯ. ವಿದ್ಯಾರ್ಥಿಗೆ ತಾನು ಆಯ್ಕೆಮಾಡಿಕೊಳ್ಳುವ ವಸ್ತುವಿನ ವ್ಯಾಪ್ತಿ, ಸಾಧ್ಯತೆಗಳ ಸ್ಪಷ್ಟ ಕಲ್ಪನೆ ಮೊದಲೇ ಇರಬೇಕು ಎಂದು ನಿರೀಕ್ಷಿಸುವುದು ತಪ್ಪಾಗುತ್ತದೆ. ಮಾರ್ಗದರ್ಶಕರಿಗಾದರೂ ಅಂತಹ ಸ್ಪಷ್ಟ ಕಲ್ಪನೆ ಇದ್ದರೆ ಸಮಸ್ಯೆಯೇ ಇಲ್ಲ. ಹಾಗಿಲ್ಲದ ಪಕ್ಷದಲ್ಲಿ ಕೊನೆಯ ಪಕ್ಷ ತಾನು ಆರಿಸಿರುವ ವಸ್ತುವಿನ ಬಗ್ಗೆ, ಅದನ್ನು ಕುರಿತಂತೆ ಏನು ಮಾಡಬೇಕೆಂಬುದರ ಬಗ್ಗೆ ಸ್ಥೂಲವಾದ ಕಲ್ಪನೆಯಾದರೂ ಇಲ್ಲದಿದ್ದರೆ ಆ ಕಾರ್ಯದಲ್ಲಿ ಮುಂದುವರಿಯುವುದು ಕಷ್ಟವಾಗುತ್ತದೆ. ಈ ಘಟ್ಟದಲ್ಲಿ ಮಾರ್ಗದರ್ಶಕನ ಪಾತ್ರ ಬಹು ಮಹತ್ವದ್ದು ಎಂಬುದನ್ನು ಒತ್ತಿ ಹೇಳಬೇಕಾಗಿಲ್ಲ. ವಿಷಯವನ್ನು ಆರಿಸಿಕೊಳ್ಳುವವರೆಗೆ ವಿದ್ಯಾರ್ಥಿಗೆ ಒಂದು ಬಗೆಯ ಥ್ರಿಲ್ ಇರುತ್ತದೆ (ಕೆಲವರಂತೂ ಅಲ್ಲಿಗೆ ತಾವು ಒಂದು ನಿರ್ದಿಷ್ಟ ಘಟ್ಟವನ್ನು ತಲಪಿದವರಂತೆ ತಣ್ಣಗಾಗಿ ಬಿಡುತ್ತಾರೆ). ಎಲ್ಲ ನಿಶ್ಚಿತವಾಗಿ ಅವನು ವಾಸ್ತವವಾಗಿ ಕೆಲಸ ಆರಂಭಿಸುವಾಗ ಅವನಿಗೆ ಮುಂದೆ ಏನು ಮಾಡಬೇಕು ಎಂಬುದು ದೊಡ್ಡ ಪ್ರಶ್ನೆಯಾಗಿ ಕುಳಿತು ಅವನು ಕಂಗಾಲಾಗುವ ಪರಿಸ್ಥಿತಿಗಳು ಉಂಟು. ಕೆಲವರು ಸಂಶೋಧನೆಯೆಂದರೆ ಪುಸ್ತಕ ಬರೆಯುವುದೆಂದು ತಿಳಿದು ನಾಲ್ಕಾರು ತಿಂಗಳಲ್ಲಿ ನೂರಾರು ಪುಟಗಳ ಕಗ್ಗವನ್ನು ಬರೆದುಹಾಕಿಬಿಡುತ್ತಾರೆ. ಸಂಶೋಧನೆಯೆಂಬುದು ಯಾರೂ ಒಗ್ಗಿಸಿಕೊಳ್ಳಬೇಕಾದ ಒಂದು ಶಿಸ್ತು. ವ್ಯಕ್ತಿ ಆರಂಭದಲ್ಲಿ ಎಚ್ಚರಿಕೆಯಿಂದ, ತಾಳ್ಮೆಯಿಂದ ಮುಂದುವರಿದರೆ ಅವನ ಮನಸ್ಸು ತನಗೆ ತಾನೇ ಸಂಶೋಧನ ವಸ್ತುವಿಗೆ ಅನುಗುಣವಾಗಿ ವ್ಯವಸ್ಥೆಗೊಳ್ಳುತ್ತ ಹೋಗುತ್ತದೆ. ಅವನ ಉದ್ದೇಶ ತನ್ನ ವಸ್ತುವನ್ನು 'ಸಾಕ್ಷಾತ್ಕರಿಸಿ'ಕೊಳ್ಳುವುದು. ಎಂದರೆ ಅದರಲ್ಲಿ ಅವನು ತಾದಾತ್ಮ್ಯವನ್ನು ಪಡೆಯುವುದು, ಆ ವಸ್ತು ಅವನ ಮನಸ್ಸಿನಲ್ಲಿ ಇಂಗುವುದು ಮುಖ್ಯ. ಇಲ್ಲಿ ಸಂಶೋಧಕ ಅನುಸರಿಸಬೇಕಾದ ಕೆಲವು ಮಾರ್ಗಗಳಿವೆ.

1. ವಿಸ್ತಾರವಾದ ಮತ್ತು ಆಳವಾದ ವ್ಯಾಸಂಗ. ಈ ವ್ಯಾಸಂಗದಲ್ಲಿ ಎರಡು ಮೂರು ಬಗೆಯ ಗ್ರಂಥಗಳು ಸೇರ್ಪಡೆಯಾಗುತ್ತವೆ. ಒಂದು - ಅವನ ವಸ್ತುವಿಗೆ ಸಂಬಂಧಿಸಿದಂತೆ

ಪ್ರಕಟವಾಗಿರುವ ಲೇಖನಗಳು, ಗ್ರಂಥಗಳು; ಎರಡು - ಅವನು ತನ್ನ ಅಧ್ಯಯನಕ್ಕೆ ಮಾದರಿಯಾಗಿ ತೆಗೆದುಕೊಳ್ಳಬಹುದಾದ ಗ್ರಂಥಗಳು. ಮೂರು - ಸಂಶೋಧನ ವಿಧಾನಕ್ಕೆ (methodology) ಸಂಬಂಧಿಸಿದ ಕೃತಿಗಳು. ಮೊದಲ ವರ್ಗದ ಬರಹಗಳು ಅವನಿಗೆ ತನ್ನ ವಸ್ತುವಿಗೆ ಸಂಬಂಧಿಸಿದಂತೆ ನಡೆದಿರುವ ಕೆಲಸವನ್ನು ಪರಿಚಯ ಮಾಡಿಕೊಡುತ್ತವೆಯಲ್ಲದೆ, ಆ ಕೆಲಸದ ಕೊರತೆಯನ್ನು ಅವನಿಗೆ ತಿಳಿಸಿ ಕೊಟ್ಟು ಅವನು ವಿಶೇಷ ಗಮನ ಕೊಡಬೇಕಾದ ಭಾಗಗಳನ್ನು ಮನವರಿಕೆ ಮಾಡಿಕೊಡುತ್ತವೆ. ಅವನ ನಿಜವಾದ ಕಾಣಿಕೆ ಇರುವುದು ತನ್ನ ಹಿಂದಿನವರ ಬರಹಗಳನ್ನು ಓದಿ ಉಕ್ತಿಸುವುದರಲ್ಲಿ (quote) ಅಲ್ಲ; ಅವರು ಎಡವಿರುವ ಅಥವಾ ಕ್ರಮಿಸದಿರುವ ಭಾಗಗಳನ್ನು ಗುರುತಿಸಿ ಅಲ್ಲಿ ಕೆಲಸ ಮಾಡುವುದರಲ್ಲಿ, ಅವನ್ನು ತಿದ್ದುವುದರಲ್ಲಿ ಅಥವಾ ಅವರು ಗಮನಿಸದ ಸಂಗತಿಗಳನ್ನು ಗುರುತಿಸುವುದರಲ್ಲಿ. ಎರಡನೆಯ ವರ್ಗದ ಬರಹಗಳು ಅವನ ವಸ್ತುವಿಗೆ ನೇರವಾಗಿ ಸಂಬಂಧ ಪಡದಿದ್ದರೂ ತನ್ನಂತೆ ಹಿಂದೆ ಕೆಲಸ ಮಾಡಿರುವವರ ಬರಹಗಳಾದ್ದರಿಂದ ಅವು ಅವನಿಗೆ ಒಂದು ಮಾದರಿಯನ್ನು (model) ಒದಗಿಸಿಕೊಡುತ್ತವೆ. ಮೂರನೆಯ ವರ್ಗದ ಬರಹಗಳು ಸಂಶೋಧನೆಯ ವಿಧಾಗಳನ್ನು ತಿಳಿಸಿಕೊಡುವ ಉಪಯುಕ್ತ ತಾತ್ವಿಕ (theoretical) ಗ್ರಂಥಗಳು; ಅವು ಈಜು ಕಲಿಯುವುದನ್ನು ಹೇಳಿಕೊಡುವ ಪುಸ್ತಕಗಳಿದ್ದಂತೆ.

2. ಸಂಶೋಧಕನಿಗೆ ಅಧಿಕೃತವಾಗಿ ಇರುವ ಮಾರ್ಗದರ್ಶಕ ಒಬ್ಬ; ಆದರೆ ಅವನು ತನ್ನ ಕ್ಷೇತ್ರದಲ್ಲಿ ಕೆಲಸ ಮಾಡುವವರೆಲ್ಲ ಅನಧಿಕೃತ ಮಾರ್ಗದರ್ಶಕರೆಂದು ಭಾವಿಸುವುದರಲ್ಲಿ ತಪ್ಪಿಲ್ಲ. ತನ್ನ ವಸ್ತುವಿನ ಬಗ್ಗೆ, ಸಮಸ್ಯೆಗಳ ಬಗ್ಗೆ ಆಗಾಗ್ಗ ಬೇರೆಯವರ ಹತ್ತಿರ, ಸಹೋದ್ಯೋಗಿಗಳ ಹತ್ತಿರ ಚರ್ಚೆ ಮಾಡುವುದು ಚಿಂತಿಸುವುದು ಅತ್ಯಂತ ಅಗತ್ಯ. ಈ ವಿಷಯದಲ್ಲಿ ಯಾವುದೇ ಸಂಕೋಚವನ್ನೂ ಅನುಭವಿಸಕೂಡದು. ತನ್ನ ಅಧ್ಯಯನದ ವಿಷಯವನ್ನು ಕುರಿತು ಸದಾ ಚಿಂತಿಸುವುದು ಅದರ ಬೇರೆ ಬೇರೆ ಮುಖಗಳನ್ನೂ ಸಾಧ್ಯತೆಗಳನ್ನೂ ಅವನಿಗೆ ತೋರಿಸಿಕೊಡುತ್ತದೆ. ದಿನ ಕಳೆದಂತೆ ದೂರವಿದ್ದುದು ಹತ್ತಿರವಾಗುವ, ಜಟಿಲವಾಗಿದ್ದುದು ಸುಲಭವಾಗುವ, ಅಸಾಧ್ಯವೆನಿಸಿದ್ದು ಸಾಧ್ಯವೆನ್ನಿಸುವ ಅನುಭವವಾಗುತ್ತದೆ. ಇದು ಸಂಶೋಧಕರಿಗೆ ಧೈರ್ಯ ಆತ್ಮವಿಶ್ವಾಸಗಳನ್ನು ತಂದು ಕೊಡುತ್ತದೆ.

3. ವೈಚಾರಿಕ ಉಪನ್ಯಾಸ ಮತ್ತು ವಿಚಾರ ಸಂಕಿರಣಗಳಲ್ಲಿ ಭಾಗವಹಿಸುವುದು ತನ್ನಂತೆ ಯೋಚಿಸುವ ಮತ್ತು ಕೆಲಸ ಮಾಡುವ ವ್ಯಕ್ತಿಗಳ ಪರಿಚಯವನ್ನು ಮಾಡಿ ಕೊಡುತ್ತದೆ. ಒಮ್ಮೊಮ್ಮೆ ತನಗೆ ಒಂದು ಶ್ರೇಷ್ಠ ಸಂಪ್ರಬಂಧ - ಉಪನ್ಯಾಸ ಅರ್ಥವಾಗದಿದ್ದರೂ ಸಂಶೋಧನ ವಿದ್ಯಾರ್ಥಿ ಅಂಥವನ್ನು ಕೇಳುವುದರಲ್ಲಿ ಲಾಭವಿದೆ - ಏನಿಲ್ಲದಿದ್ದರೂ ಆ ಸಂಪ್ರಬಂಧವನ್ನು ಬರೆದವನ ಆಲೋಚನ ವಿಧಾನ ಬರವಣಿಗೆಯ ರೀತಿ ತಿಳಿಯುವುದಲ್ಲದೆ, ಸಂಶೋಧನ ವಿದ್ಯಾರ್ಥಿಗೆ ತಾನೂ ಕೆಲಸ ಮಾಡುವ ಉತ್ಸಾಹವನ್ನೂ, ಆರೋಗ್ಯಕರವಾದ ಹುರುಪನ್ನೂ ತಂದುಕೊಡುತ್ತದೆ. ಅವಕಾಶವಿದ್ದರೆ ತಾನೂ ಒಂದು ಸಂಪ್ರಬಂಧವನ್ನು ಬರೆದು ಓದಲು ಪ್ರಯತ್ನಿಸಬಹುದು. ಸಂಶೋಧನ ವಿದ್ಯಾರ್ಥಿ ತನ್ನ ಕಾರ್ಯದ ಆರಂಭದಲ್ಲಿ ಚಿಕ್ಕ

ಚಿಕ್ಕ ಸಮಸ್ಯೆಗಳನ್ನು ಆರಿಸಿಕೊಂಡು ಸಂಪ್ರಬಂಧ ಬರೆಯುವುದು, ತಿದ್ದುವುದು, ಪ್ರಕಟಿಸುವುದು ಬಹು ಉಪಯುಕ್ತವಾದುದು.

ವಸ್ತುವನ್ನು ಆಯ್ಕೆ ಮಾಡಿಕೊಂಡಾಗಲೇ ವಿದ್ಯಾರ್ಥಿ ಒಂದು ವಿಷಯಸೂಚಿಯನ್ನು (synopsis) ಸಿದ್ಧಪಡಿಸಿರುತ್ತಾನೆ. ಇದು ಅವನ ಮಾರ್ಗದರ್ಶನಕ್ಕಾಗಿ ಮಾತ್ರ ಮತ್ತು ಮುಂದೆ ಅದು ಮಾರ್ಪಾಟಾಗಬಹುದು, ಬಹು ಸಂದರ್ಭಗಳಲ್ಲಿ ಮಾರ್ಪಾಟಾಗುತ್ತದೆ. ವಿಷಯಸೂಚಿ ಜೊತೆಗೆ ಅವನು ಪುಸ್ತಕ ಭಂಡಾರದಲ್ಲಿ ತಾನು ಕಂಡ ಕೇಳಿದ, ಮಾರ್ಗದರ್ಶಕರಿಗೆ ಗೊತ್ತಿರುವ ಗ್ರಂಥಯಾದಿಯನ್ನೂ (bibliography) ತಯಾರಿಸುತ್ತಾನೆ. ವಿಷಯಸೂಚಿಯು ಸಂಶೋಧಕ ಕಟ್ಟುನಿಟ್ಟಾಗಿ ಕೊನೆಯವರೆಗೆ ಪಾಲಿಸಬೇಕಾದ್ದು ಎಂಬ ಭ್ರಾಂತಿ ಅನೇಕರಿಗಿರುತ್ತದೆ. ಇದಕ್ಕಿಂತ ಅಪಾಯಕಾರಿ, ಗ್ರಂಥಯಾದಿಯೆಂಬುದು ನಿರಂತರವಾಗಿ ಬೆಳೆಯಬೇಕಾದ್ದು ಎಂಬುದು ಗೊತ್ತಿಲ್ಲದಿರುವುದು. ಗ್ರಂಥಯಾದಿಯನ್ನು ಬೆಳೆಸಿಕೊಳ್ಳುವುದು ಸ್ವಲ್ಪ ಶ್ರಮದಾಯಕವಾದ, ಆದರೆ ಅತ್ಯಂತ ಅಗತ್ಯವಾಗಿ ಮಾಡಬೇಕಾದ ಕಾರ್ಯ. ವಿಶ್ವಕೋಶಗಳಲ್ಲಿ ಆಯಾ ಲೇಖನದ ಮುಂದೆ ಗ್ರಂಥಯಾದಿಯಿರುತ್ತದೆ. ಸಂಶೋಧಕ ಓದುವ ಲೇಖನ ಗ್ರಂಥಗಳ ಕೊನೆಯಲ್ಲೆಲ್ಲ ಗ್ರಂಥಯಾದಿಗಳಿರುತ್ತವೆ. ಇವನ್ನೆಲ್ಲ ಎಚ್ಚರಿಕೆಯಿಂದ ಪರಿಶೀಲಿಸಿ ತನ್ನ ಗಮನಕ್ಕೆ ಬಾರದಿದ್ದ ಪುಸ್ತಕಗಳನ್ನು ಲೇಖನಗಳನ್ನು ಪಟ್ಟಿ ಮಾಡಿಕೊಳ್ಳುತ್ತ ಹೋಗಬೇಕು. ಪ್ರೌಢ ಪತ್ರಿಕೆಗಳ ಹಿಂದಿನ ಸಂಪುಟಗಳನ್ನು ಅಥವಾ ಅವುಗಳ ವಿವರಣಾತ್ಮಕ ಲೇಖನ ಸೂಚಿಗಳನ್ನು (descriptive catalogues) ಎಚ್ಚರಿಕೆಯಿಂದ ತಿರುವಿಹಾಕಬೇಕು. ಕೆಲವು ವಿಷಯಗಳಿಗೆ ಸಂಬಂಧಿಸಿದಂತೆ ಅಲ್ಲಿಯವರೆಗೆ ಬಂದಿರುವ ಬರಹಗಳ ಸಮಗ್ರ ವಿವರಣಾತ್ಮಕ ಪಟ್ಟಿಗಳು ದೊರೆಯುತ್ತವೆ. ಇವಂತೂ ಸಂಶೋಧಕರ ತಾಪತ್ರಯ (ಶತ?) ಗಳನ್ನು ಉಳಿಸುವ ವರಪ್ರಸಾದಗಳು. ಕೆಲವು ಸಂಸ್ಥೆಗಳಲ್ಲಿ ಮತ್ತು ಪುಸ್ತಕ ಭಂಡಾರಗಳಲ್ಲಿ ಒಂದು ವಿಷಯಕ್ಕೆ ಸಂಬಂಧಿಸಿದ ಗ್ರಂಥಯಾದಿಯನ್ನು ಸಿದ್ಧಪಡಿಸಿಕೊಡುವ ವ್ಯವಸ್ಥೆಯಿರುತ್ತದೆ. ನಮ್ಮ ದೇಶದಲ್ಲಿ ಇಂತಹ ಅನುಕೂಲಗಳು ಕಡಮೆ. ಯಾವುದೋ ಸಂಪತ್ರಿಕೆಯ ಲೇಖನವೊಂದನ್ನು ಓದುತ್ತಿರುವಾಗ ಅಲ್ಲಿ ಉಕ್ತವಾಗಿರುವ ಪುಸ್ತಕ ಅಥವಾ ಲೇಖನಗಳನ್ನು ಮರೆಯದೆ ಗುರುತು ಹಾಕಿಕೊಳ್ಳಬೇಕು. ಇದು ಸತತವಾಗಿ ನಡೆಯುತ್ತಿದ್ದರೆ ಕೆಲವು ತಿಂಗಳಲ್ಲಿಯೇ ಒಂದು ಸಮರ್ಪಕವಾದ ಗ್ರಂಥಯಾದಿ ಸಿದ್ಧವಾಗುತ್ತದೆ. ಸಮಕಾಲೀನ ಪ್ರೌಢ ಪತ್ರಿಕೆಗಳ ಸಂಚಿಕೆಗಳಲ್ಲಿ ಮತ್ತು ವಾರ-ದಿನ-ಮಾಸಪತ್ರಿಕೆಗಳಲ್ಲಿ ಬರುವ ಪ್ರಕಟಣೆಗಳೂ ಮತ್ತು ವಿಮರ್ಶೆಗಳೂ ಗಮನಿಸಬೇಕಾದುವೆಂಬುದನ್ನು ಹೇಳಬೇಕಾಗಿಲ್ಲ.

ಒಂದೊಂದು ಗ್ರಂಥ ಅಥವಾ ಲೇಖನದ ಹೆಸರನ್ನೂ ಒಂದೊಂದು ಪಟ್ಟಿಕೆಯ (slip) ಮೇಲೆ ವಿವರಗಳೊಡನೆ ಬರೆದಿಟ್ಟುಕೊಳ್ಳುವುದು ಒಳ್ಳೆಯದು. ಅವುಗಳನ್ನು ಓದಿ ಟಿಪ್ಪಣಿ ತೆಗೆದುಕೊಂಡ ನಂತರ ಓದಿ ಮುಗಿಸಿದ್ದಕ್ಕೆ ಅದರ ಮೇಲೆ ಗುರುತು ಮಾಡಿಕೊಳ್ಳಬಹುದು. ಮುಂದೆ ನಿಬಂಧದ (thesis) ಕೊನೆಯಲ್ಲಿ ಗ್ರಂಥಯಾದಿ ಕೊಡುವಾಗ ಪ್ರಕಾಶನ, ಪ್ರಕಟಣ ವರ್ಷ ಇತ್ಯಾದಿ ವಿವರಣೆಗಳಿಗೆ ಮತ್ತೆ ಪುಸ್ತಕಗಳಿಗೇ ಹೋಗುವ ಅಗತ್ಯವಿರುವುದಿಲ್ಲ. ಪಟ್ಟಿಕೆಗಳನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ ಜೋಡಿಸಿಕೊಳ್ಳಲು ಬರುತ್ತದೆ.

ಇವೆಲ್ಲ ಎಲ್ಲರಿಗೂ ಗೊತ್ತಿರುವ ಸಂಗತಿಗಳಾದರೂ ಆಲಸ್ಯ ಅಥವಾ ಅಲಕ್ಷ್ಯದಿಂದಲೋ ಅಥವಾ ಸರಿಯಾದ ವಾತಾವರಣದ ಅಭಾವದಿಂದಲೋ ಈ ಕಡೆ ನಮ್ಮ ಸಂಶೋಧಕರು ಹೆಚ್ಚಿನ ಗಮನ ಕೊಡುತ್ತಿಲ್ಲವೆಂದು ಅನೇಕ ಸಾರಿ ನನಗೆ ಅನ್ನಿಸಿದೆ.

ಕನ್ನಡದಲ್ಲಿ ಸಂಶೋಧನೆ ಮಾಡುವ ಹಲವರಿಗೆ ಪುಸ್ತಕ - ಲೇಖನಗಳಿಂದ ಹೇಗೆ ಟಿಪ್ಪಣಿ ತೆಗೆದುಕೊಳ್ಳಬೇಕೆಂದು ಗೊತ್ತಿರುವುದಿಲ್ಲ. ಹಾಳೆಗಳಲ್ಲಿ, ಅಥವಾ ಅದಕ್ಕಿಂತ ಕೆಟ್ಟುದೆಂದರೆ ನೋಟ್ ಪುಸ್ತಕಗಳಲ್ಲಿ ಉದ್ದಕ್ಕೆ ಟಿಪ್ಪಣಿ ಬರೆದುಕೊಳ್ಳುತ್ತ ಹೋಗುತ್ತಾರೆ. ಒಂದು ವರ್ಷದೊಳಗೆ ತಯಾರಾಗುವ ಈ ಟಿಪ್ಪಣಿಗಳ ರಾಶಿಯಲ್ಲಿ ಎಲ್ಲಿ ಏನಿದೆ ಎಂಬುದನ್ನು ಹುಡುಕುವುದೇ ಕಷ್ಟವಾಗಿಬಿಡುತ್ತದೆ. ಯಾವ ಬರಹದಿಂದ ಎಷ್ಟು ತೆಗೆದುಕೊಳ್ಳಬೇಕು, ಬರಿಯ ಸಾರಾಂಶವನ್ನು ಹೇಗೆ ಬರೆದುಕೊಳ್ಳಬೇಕು, ನಾಳೆ ಉಕ್ತಿಸಲನುಕೂಲವಾಗುವಂತೆ ಯಾವುದನ್ನು ಹಾಗೆಯೇ ಬರೆದಿಟ್ಟುಕೊಳ್ಳಬೇಕು - ಈ ಬಗ್ಗೆ ಖಚಿತ ಅಭಿಪ್ರಾಯಗಳಿಲ್ಲದಿದ್ದರೆ ಶ್ರಮವೆಲ್ಲ ವ್ಯರ್ಥವಾಗುವುದು ಮಾತ್ರವಲ್ಲದೆ ಟಿಪ್ಪಣಿಗಳಿಂದ ಉಪಯೋಗವೇ ಇಲ್ಲದಂತಾಗುತ್ತದೆ. ಪಟ್ಟಿಕೆಗಳ ಮೇಲೆ ಟಿಪ್ಪಣಿಗಳನ್ನು ಮಾಡಿಕೊಳ್ಳುವುದು ಬಹುತೇಕ ಸಂದರ್ಭಗಳಲ್ಲಿ ಬಹಳ ಅನುಕೂಲ ವಿಧಾನವೆಂದು ತೋರಿದೆ. ಒಂದು ಪಟ್ಟಿಕೆಯಲ್ಲಿ ಒಂದು ವಿಷಯ ಮಾತ್ರ ಲಿಖಿತವಾಗಿರಬೇಕು. ಅದು ಒಂದು ವಾಕ್ಯವಾಗಿರಬಹುದು ಅಥವಾ ಎರಡು ಮೂರು ಪಟ್ಟಿಕೆಗಳನ್ನು ತುಂಬುವಷ್ಟು ದೊಡ್ಡದಿರಬಹುದು. (ಆಗ ಆ ಪಟ್ಟಿಕೆಗಳನ್ನು ಒಟ್ಟಿಗೆ ಪಿನ್ನಿಸಬೇಕಾಗುತ್ತದೆ) ಒಂದೊಂದು ಪಟ್ಟಿಕೆಯಲ್ಲೂ ಗ್ರಂಥ - ಲೇಖನದ ಹೆಸರು, ಪುಟ ಇತ್ಯಾದಿ ವಿವರಗಳಿರಬೇಕು. (ಗ್ರಂಥ, ಲೇಖನಗಳಿಗೆ ಚಿಹ್ನೆಗಳನ್ನು ಕೊಟ್ಟು ಕೊಂಡರೆ ಪ್ರತಿ ಪಟ್ಟಿಕೆಯಲ್ಲೂ ಎಲ್ಲ ವಿವರಗಳನ್ನು ಬರೆಯುವ ಬೇಸರದ ಕೆಲಸ ತಪ್ಪುತ್ತದೆ) ಹೀಗೆ ಸಿದ್ಧವಾಗುವ ಸಾವಿರಾರು ಪಟ್ಟಿಕೆಗಳನ್ನು ವಿಷಯಾನುಗುಣವಾಗಿ ಅಥವಾ ನಮ್ಮ ಅನುಕೂಲಕ್ಕೆ ತಕ್ಕಂತೆ ಜೋಡಿಸಿಕೊಳ್ಳಲು ಬರುತ್ತದೆ. ಪಟ್ಟಿಕೆಗಳಿಂದಾಗಿ ನಾವು ಟಿಪ್ಪಣಿ ಮಾಡಿಕೊಂಡ ಯಾವ ಸಂಗತಿಯೂ ನಮ್ಮ ಗಮನದಿಂದ ತಪ್ಪಿಸಿಕೊಳ್ಳುವುದಿಲ್ಲ - ಯಾವುದನ್ನು ಹೇಗೆ ಎಷ್ಟು ಬಳಸಿಕೊಳ್ಳಬೇಕು ಎಂಬ ವಿವೇಚನೆ ನಮಗೆ ಸೇರಿದ್ದು.

ಪಟ್ಟಿಕೆಗಳ ಮೇಲೆ ಟಿಪ್ಪಣಿ ಬರೆದಿಟ್ಟುಕೊಳ್ಳುವುದು, ಅವನ್ನು ಸಂರಕ್ಷಿಸಿಟ್ಟುಕೊಳ್ಳುವುದು, ಸದಾ ನಮ್ಮ ಬಳಿ ಖಾಲಿ ಪಟ್ಟಿಕೆಗಳನ್ನಿಟ್ಟುಕೊಂಡಿರುವುದು ಕ್ಲೇಶದ ಕೆಲಸ, ನಿಜ. ಆದರೆ ಆರಂಭದ ಕ್ಲೇಶವನ್ನು ಪಟ್ಟಿಕೆಗಳಿಲ್ಲದಿದ್ದರೆ ಮುಂದೆ ಒದಗಬಹುದಾದ ಮಹಾ ಕ್ಲೇಶಕ್ಕೆ ಹೋಲಿಸಿಕೊಂಡರೆ ಏನೇನೂ ಅಲ್ಲವೆಂದೇ ಹೇಳಬೇಕಾಗುತ್ತದೆ. ಕ್ಲೇಶದ ಮಾತು ಹಾಗಿರಲಿ - ಸಂಶೋಧನೆಯೇ ಕ್ಲೇಶದ (ಶ್ರಮದ) ಕೆಲಸವಲ್ಲವೆ ? ಸಂಶೋಧನೆಯ ಗುಣಮಟ್ಟವನ್ನು ಕಾಪಾಡುವ ದೃಷ್ಟಿಯಿಂದಂತೂ ಪಟ್ಟಿಕೆಗಳ ಬಳಕೆ ಬಹು ಅಗತ್ಯ.

ನಮ್ಮ ಓದು ಸಾಗಿದಂತೆ, ಟಿಪ್ಪಣಿಗಳು ಬೆಳೆದಂತೆ ವಿದ್ಯಾರ್ಥಿ ಆರಿಸಿಕೊಂಡ ವಸ್ತು ಅವನ ಹಿಡಿತಕ್ಕೆ ಬಂದಂತೆ ಭಾಸವಾಗುತ್ತದೆ. ಅವನು ತನ್ನ ಅಭ್ಯಾಸದ ಸಮಯದಲ್ಲಿ ಬೇರೆಯವರ ಅಭಿಪ್ರಾಯಗಳನ್ನು ಗ್ರಹಿಸುತ್ತ ಹೋದಂತೆ, ಮನಸ್ಸು ಹಾಗೆ ಸ್ವೀಕರಿಸುವುದನ್ನು

ಮಾತ್ರವೇ ಮಗ್ನವಾಗದೆ ಅದು ಆಲೋಚಿಸುತ್ತಲೂ ಹೋಗುತ್ತದೆ. ಹೊಸ ಅಭಿಪ್ರಾಯಗಳು, ಸಂಬಂಧಗಳು, ಸಾಧ್ಯತೆಗಳು ಹೊಳೆಯುತ್ತವೆ. ಹಿಂದಿನವರ ಅಭಿಪ್ರಾಯಗಳು ತಪ್ಪು ಎಂದು ಅನ್ನಿಸಬಹುದು. ಅಥವಾ ಅವನ್ನು ತಿದ್ದಲು ಅವಕಾಶವಿದೆಯೆಂದು ಅನ್ನಿಸಬಹುದು. ಬೇರೊಂದು ಕ್ಷೇತ್ರವು ಬಾಗಿಲು ತೆರೆದುಕೊಳ್ಳಬಹುದು. ಅಲ್ಲಿಯವರೆಗೆ ಯಾವುದೇ ವಿವರಣೆಗೆ ಒಗ್ಗದಿದ್ದ ಸಂಗತಿಯೊಂದು ಇದ್ದಕ್ಕಿದ್ದಂತೆ ತನ್ನ ರಹಸ್ಯವನ್ನು ಬಿಚ್ಚಿಟ್ಟು ನಿಂತುಕೊಳ್ಳಬಹುದು. ತೀರ ಸರಳವೆಂದು ಅಂದುಕೊಂಡಿದ್ದುದು ಜಟಿಲವಾಗಬಹುದು. ಈ ಅನುಭವಗಳನ್ನು ಪಡೆಯಲು ಮನಸ್ಸು ಅಂತಹ ಶಿಕ್ಷಣವನ್ನು ಪಡೆಯುತ್ತ ಹೋಗುತ್ತದೆ. ಹಿಂದಿನವರು ಗಮನಿಸದಿದ್ದ ಯಾವುದೋ ಸಂಗತಿ ಪ್ರಪ್ರಥಮವಾಗಿ ಹೊಳೆದಾಕ್ಷಣ ಸಂಶೋಧನ ವಿದ್ಯಾರ್ಥಿಯು ಸಂಶೋಧಕನಾಗುತ್ತಾನೆ. ಹೊಸದನ್ನು ಕಂಡುಹಿಡಿದ ಆ ಅನುಭವ ಅವನಿಗೆ ಎಲ್ಲಿಲ್ಲದ ಹುಮ್ಮಸ್ಸನ್ನೂ ಆತ್ಮವಿಶ್ವಾಸವನ್ನೂ ತಂದುಕೊಡುವುದಲ್ಲದೆ, ಅಂತಹ ಅನುಭವಗಳು ಆಗಾಗ ಅವನಿಗೆ ಆಯಾಸದ ಮಧ್ಯೆ ವಿಶ್ರಾಂತಿಯಾಗಿ, ಕತ್ತಲ ಮಧ್ಯೆ ಬೆಳಕಾಗಿ, ಜಡತ್ವದ ಮಧ್ಯೆ ಚೈತನ್ಯವಾಗಿ ಪರಿಣಮಿಸುತ್ತದೆ. ಅವುಗಳಿಂದ ಉತ್ಸಾಹ ದ್ವಿಗುಣ, ತ್ರಿಗುಣ, ಶತಗುಣವಾಗಿ ವರ್ಧಿಸುತ್ತದೆ. ಯಾವನೇ ಸಂಶೋಧನ ವಿದ್ಯಾರ್ಥಿ ಆರಂಭದಲ್ಲೇ ಫಲಗಳನ್ನು ನಿರೀಕ್ಷಿಸದೆ ತನ್ನ ಶ್ರಮ ಪ್ರಯತ್ನ ವಿಷಯ ಸ್ವರೂಪಗಳಿಗನುಗುಣವಾಗಿ ಮುಂದೆ ತಾನು ಜಯಶೀಲನಾಗಿಯೇ ಆಗುತ್ತೇನೆ ಎಂಬ ಭರವಸೆಯಿಟ್ಟುಕೊಂಡು ಮುಂದುವರಿಯಬೇಕು. ತನ್ನ ಆಲೋಚನೆ, ಅನ್ನಿಸಿಕೆ, ಸಂದೇಹಗಳನ್ನು ವಿದ್ಯಾರ್ಥಿ ಸೂಕ್ತ ಸ್ಥಳಗಳಲ್ಲಿ ಮತ್ತೆ ಪಟ್ಟಿಕೆಗಳ ಮೇಲೆ ನಮೂದಿಸಿಕೊಂಡಿದ್ದರೆ ಒಳ್ಳೆಯದು. ಲೇಖಕರ ಅಭಿಪ್ರಾಯಗಳನ್ನು ಟಿಪ್ಪಣಿಸಿಕೊಳ್ಳುವಾಗ ಅವುಗಳಿಗೆ ಸಂಬಂಧಿಸಿದ ತನ್ನದೇ ಹೊಸ ಆಲೋಚನೆಗಳಿದ್ದರೆ ಅಲ್ಲೇ ಪ್ರತ್ಯೇಕವಾಗಿ ಗುರುತುಮಾಡಿಕೊಳ್ಳಬೇಕು. 'ಬೇಕು' ಎಂದು ಹೇಳಿದ್ದರೂ ಇಲ್ಲೆಲ್ಲ ಅನುಕೂಲ, ಅಗತ್ಯ, ಸ್ಮೃತಿ ಸಾಮರ್ಥ್ಯಗಳಿಗನುಗುಣವಾಗಿ ಅವರವರು ತಮ್ಮ ದಾರಿಯನ್ನು ಹಿಡಿಯಲು ಅವಕಾಶವಿದ್ದೇ ಇದೆ.

'ಇದೆಲ್ಲ ಸರಿಯೇ - ನಾವು ಈ ಎಲ್ಲ ಶ್ರಮಕ್ಕೂ ಸಿದ್ಧರಿದ್ದೇವೆ. ಆದರೆ ಗ್ರಂಥಯಾದಿಯಲ್ಲಿನ ಪುಸ್ತಕಗಳಾಗಲಿ ಪತ್ರಿಕೆಗಳಾಗಲಿ ಸಿಗುವುದೇ ಇಲ್ಲ. ಏನು ಮಾಡಲಿ?' - ಇದು ದುರದೃಷ್ಟವಶಾತ್ ನಮ್ಮ ಅನೇಕ ಸಂಶೋಧಕರು ಎದುರಿಸುತ್ತಿರುವ ಪ್ರಶ್ನೆ. ಸಂಶೋಧಕನ ಶಕ್ತಿಯ ಬಹುಭಾಗ ತನಗೆ ಬೇಕಾದ ಪುಸ್ತಕ ಮತ್ತು ಸಂಪತ್ರಿಕೆಗಳ 'ಸಂಶೋಧನೆ' ಅಥವಾ ಹುಡುಕುವಿಕೆಯಲ್ಲೇ ಹೋಗಿಬಿಡುತ್ತದೆಯೆಂಬುದು ನಿಜ. ಈ ಸಮಸ್ಯೆಗೆ ಶಾಶ್ವತ ಉತ್ತರವಿಲ್ಲ. ಮತ್ತು ಇದು ಸಂಶೋಧಕನ ತಾಳ್ಮೆಯನ್ನು ಪರೀಕ್ಷಿಸಿಬಿಡುವುದಲ್ಲದೆ ಉತ್ಸಾಹವನ್ನೂ ಬತ್ತಿಸಿಬಿಡುವಷ್ಟು ಮಾರಕವಾಗಬಹುದು. ಇಲ್ಲೂ ಕೆಲವು ಪ್ರಯತ್ನಗಳನ್ನು ವಿದ್ಯಾರ್ಥಿ ಮಾಡಬಹುದು. ಅದೇ ಸ್ಥಳದ ಬೇರೆ ಪುಸ್ತಕ ಭಂಡಾರಗಳಲ್ಲಿಯೂ ಬೇರೆ ಊರಿನ ಪುಸ್ತಕ ಭಂಡಾರಗಳಲ್ಲಿಯೂ ಪ್ರಯತ್ನಿಸಬಹುದು. ಬೇರೆ ಊರಿಗೆ ಹೋಗಲಾಗದಿದ್ದರೆ, ಅಲ್ಲಿಯ ವಿಶ್ವವಿದ್ಯಾಲಯಗಳ ಪುಸ್ತಕ ಭಂಡಾರಗಳು ಅವರಿಗೆ ಬೇಕಾದ ಪುಸ್ತಕಗಳನ್ನು ಬೇರೆ ಊರುಗಳ ಪುಸ್ತಕ ಭಂಡಾರಗಳಿಂದ ಎರವಲಾಗಿ ತರಿಸಿಕೊಡುವ ವ್ಯವಸ್ಥೆಯನ್ನು

ಉಪಯೋಗಿಸಿಕೊಳ್ಳಬಹುದು. ಇಂತಹ ಸೇವೆಯೊಂದಿದೆ ಎಂಬುದೇ ಹಲವರಿಗೆ ಗೊತ್ತಿರುವುದಿಲ್ಲ. ಇಂತ ಸಾಧ್ಯತೆಗಳನ್ನೆಲ್ಲ ಉಪಯೋಗಿಸಿಕೊಂಡೂ ನಾವು ಸಫಲರಾಗದಿರಬಹುದು. ಮನುಷ್ಯರಾಗಿ ನಾವು ಮನುಷ್ಯ ಪ್ರಯತ್ನಕ್ಕಿಂತ ಹೆಚ್ಚಿನದನ್ನು ಏನು ತಾನೇ ಮಾಡಲು ಸಾಧ್ಯ.

ಇಲ್ಲಿಗೆ ವಿಷಯ ಸಂಗ್ರಹಕಾರ್ಯ ಮುಗಿದು ಅದರ ವಿಶ್ಲೇಷಣೆಯ ಕಾರ್ಯ ಮತ್ತು ಬರಹ ಆರಂಭವಾಗುತ್ತದೆ. ಸಾಮಗ್ರಿ ಅಥವಾ ದತ್ತ (Data) ಎಷ್ಟು ಕರಾರುವಾಕಾಗಿ ಸಮಗ್ರವಾಗಿ ಇರುತ್ತದೋ ಅದನ್ನು ಅವಲಂಬಿಸಿದ ನಮ್ಮ ತೀರ್ಮಾನ ಅಷ್ಟು ನಿರ್ದುಷ್ಟವಾಗಿ ಇರುತ್ತದೆ. ಅನೇಕರಿಗೆ, ಹಿಂದೆ ಆಗಲೇ ಸೂಚಿಸಿದಂತೆ ಬೇರೆಯವರ ಅಭಿಪ್ರಾಯಗಳನ್ನು ಇನ್ನೊಂದು ರೀತಿಯಲ್ಲಿ ಅಥವಾ ಸಾಧ್ಯವಾದರೆ ಇನ್ನೂ ಹೆಚ್ಚು ಆಕರ್ಷಕ ರೀತಿಯಲ್ಲಿ ಹೇಳುವುದರಲ್ಲಿ ಅವರ ಕಾರ್ಯ ಪರ್ಯವಸಾನವಾಗುತ್ತದೆ. ಸಂಶೋಧನೆಯ ಉದ್ದೇಶ ಸತ್ಯವನ್ನು ಕಾಣುವುದು, ಹಿಂದಿನವರಿಗಿಂತ ಮುಂದೆ ಹೋಗುವುದು, ಜ್ಞಾನದ ಪರಿಧಿಯನ್ನು ವಿಸ್ತರಿಸುವುದು. ನೀವು ಸಂಗ್ರಹಿಸಿರುವ ದತ್ತ, ಅದು ಮೂಲ ಸಾಮಗ್ರಿಯಿರಬಹುದು (primary) ಅಥವಾ ದ್ವಿತಿಯವಿರಬಹುದು (secondary) ನಮ್ಮನ್ನು ಯಾವೆಡೆಗೆ ಕೊಂಡೊಯ್ಯುತ್ತದೆಯೋ ಹಾಗೆ ಸಾಗಬೇಕೆ ಹೊರತು, ನಮ್ಮ ತೀರ್ಮಾನಕ್ಕೆ ದತ್ತವನ್ನು ಒಗ್ಗಿಸಿಕೊಳ್ಳುವುದು ಸಂಶೋಧನ ತತ್ವಕ್ಕೆ ತೀರ ವಿರುದವಾದುದು. ನಾವು ಒಂದು ಸಮಸ್ಯೆಯ ಬಗ್ಗೆ ಚಿಂತನೆ ಮಾಡುತ್ತಿರುವಾಗಲೇ ಮತ್ತು ಅದಕ್ಕೆ ಸಂಬಂದಿಸಿದ ಸಾಮಗ್ರಿ ಸಂಗ್ರಹಣ ಪೂರ್ಣಗೊಳ್ಳುವ ಮೊದಲೇ ನಮ್ಮ ಮನಸ್ಸಿನಲ್ಲಿ ಒಂದು 'ತೀರ್ಮಾನ'ವನ್ನು ಮೂಡಿಸಿಕೊಳ್ಳುವುದು ತಪ್ಪಲ್ಲ, ಅಥವಾ ಹೀಗೆ ಒಂದು ತೀರ್ಮಾನ ಮೂಡದಿರುವುದು ಸಾಧ್ಯವೇ ಇಲ್ಲವಾದರೂ ಆ 'ತೀರ್ಮಾನ'ವೂ ಒಂದು ರೀತಿಯಲ್ಲಿ ತಾತ್ಕಾಲಿಕವೆಂದೂ, ಹೆಚ್ಚೆಂದರೆ ಒಂದು ಪ್ರಮೇಯವೆಂದೂ (hypothesis) ಭಾವಿಸಬೇಕೇ ಹೊರತು, ಅದನ್ನು ಕೊನೆಯ ತೀರ್ಮಾನವೆಂದು ತೆಗೆದುಕೊಳ್ಳಬಾರದು. ದತ್ತವು ಸಂಪೂರ್ಣವಾದಾಗ, ಆ ದತ್ತವನ್ನಿಟ್ಟುಕೊಂಡು ನಾವು ಆಲೋಚನೆಮಾಡಿದಾಗ ಈಗಾಗಲೇ ನಾವು ತಲುಪಿರುವ ನಿರ್ಣಯವು ಪೂರ್ತಿ ಸರಿಯಲ್ಲವೆಂದೋ ಅಥವಾ ಅದಕ್ಕೆ ಕೆಲವು ತಿದ್ದುಪಡಿಗಳು ಅಗತ್ಯವೆಂದೋ ನಮಗೇ ತೋರಬಹುದು. ನಾವು ಗ್ರಹಿಸಿದ ಅಭಿಪ್ರಾಯಗಳನ್ನು ಬಿಟ್ಟುಕೊಡುವುದು ಅಷ್ಟು ಸುಲಭವಲ್ಲ. ಆದರೆ, ನಿಜವಾದ ಸಂಶೋಧಕನಿಗೆ ಸತ್ಯ ಮುಖ್ಯವಾಗುತ್ತದೆಯೇ ಹೊರತು ಅದು ಯಾರು ಹೇಳಿದ್ದು, ಅದರಿಂದ ಯಾರಿಗೆ ಗೌರವವುಂಟಾಗುತ್ತದೆ ಅಥವಾ ಅದನ್ನು ಹೇಳುವುದರಿಂದ ಯಾರಿಗೆ ಕುಂದುಂಟಾಗುತ್ತದೆ ಇತ್ಯಾದಿಗಳು ತೀರ ಅಮುಖ್ಯವಾಗುತ್ತವೆ. ಒಮ್ಮೊಮ್ಮೆ ಸತ್ಯ ಕೆಲವು ಕಾರಣಗಳಿಂದಾಗಿ ಹಲವರಿಗೆ ಅಪ್ರಿಯವಾಗಿದ್ದರೂ ಅದನ್ನು ಮುಚ್ಚುಮರೆಯಿಲ್ಲದೆ ಹೇಳಲು ಅಳುಕಬಾರದು.

ವಿಷಯ ವಿಶ್ಲೇಷಣೆಯಲ್ಲಿ ಸಂಶೋಧಕನ ಮುಂದೆ ಇಷ್ಟು ಸಾಮಗ್ರಿಯಿದೆ - ಒಂದು ಸಮಸ್ಯೆಗೆ ಸಂಬಂಧಿಸಿದ ದತ್ತ ; ಆ ಸಮಸ್ಯೆಯ ಬಗ್ಗೆ ಇತರರು ನಡೆಸಿದ ಆಲೋಚನೆ:

ಇವುಗಳ ಆಧಾರದ ಮೇಲೆ ಅವನೇ ಸ್ವತಃ ನಡೆಸಿರುವ ಚಿಂತನೆ. ಇಲ್ಲಿ ಅವನು ಬೇರೆ ಬೇರೆ ವಿದ್ವಾಂಸರ ಅಭಿಪ್ರಾಯಗಳನ್ನು ಪರೀಕ್ಷೆಗೆ ಗುರಿಪಡಿಸಿ ಒಮ್ಮೊಮ್ಮೆ ಅವನ್ನು ತಳ್ಳಿಹಾಕುವ ಪ್ರಸಂಗಗಳೂ ಬರುತ್ತವೆ. ಇದು ಬಹಳ ಜನಕ್ಕೆ ಕಷ್ಟದ ಕೆಲಸವಲ್ಲ. ಆದರೆ ಅಷ್ಟು ಪ್ರಖ್ಯಾತರಲ್ಲದವರು ಅಥವಾ ವೈಯಕ್ತಿಕವಾಗಿ ಅಷ್ಟು ಪ್ರಿಯರಲ್ಲದವರ ಅಭಿಪ್ರಾಯಗಳು ಮಾನ್ಯವೆಂದು ಕಂಡು ಬಂದರೂ ಅವನ್ನು ಮಾನ್ಯಮಾಡುವುದು ಅನೇಕರಿಗೆ ನಿಜವಾಗಿಯೂ ಕಷ್ಟವಾಗುತ್ತದೆ. ಅವರ ಅಭಿಪ್ರಾಯಗಳನ್ನು ಅನಗತ್ಯವಾಗಿ ಟೀಕಿಸುವುದರಲ್ಲಿ ಉತ್ಸಾಹವನ್ನು ತಾಳುವುದೂ ಸುಲಭ. ಆದರೆ, ನಿಜವಾದ ಸಂಶೋಧಕ ನಿರ್ಮತ್ಸರನಾಗಿಯೂ ವಸ್ತುನಿಷ್ಠನಾಗಿಯೂ ಇರುವುದನ್ನು ಪ್ರಯತ್ನಪೂರ್ವಕವಾಗಿ ಅಭ್ಯಾಸಮಾಡಬೇಕು.

ಅವನ ಬರವಣಿಗೆಯಲ್ಲಿ ಸಾಮಾನ್ಯ ಸಂಗತಿ (general information) ಯಾವುದು, ಬೇರೆ ಲೇಖಕರಿಂದ ಸ್ವೀಕರಿಸಿದ ಅಭಿಪ್ರಾಯಗಳು ಯಾವುವು, ತನ್ನ ಸ್ವಂತ ತೀರ್ಮಾನ ಯಾವುದು ಇವು ಓದುಗರಿಗೆ ಎದ್ದು ಕಾಣುವಂತಿರಬೇಕು. ಸಾಮಾನ್ಯ ಸಂಗತಿಗೆ ಆಕರಗಳನ್ನು (sources) ಸೂಚಿಸಬಹುದು, ಅಥವಾ ಸೂಚಿಸದಿದ್ದರೂ ನಡೆಯುತ್ತದೆ. ಆದರೆ ಬೇರೆ ಲೇಖಕರ ಅಭಿಪ್ರಾಯಗಳನ್ನು ಕೊಡುವಾಗ ಮಾತ್ರ ಆಕರಗಳನ್ನು ತಪ್ಪದೆ ಕೊಡಬೇಕು. ಎಷ್ಟೋ ಸಾರಿ ಅನ್ಯರ ಅಭಿಪ್ರಾಯಗಳನ್ನು ತಮ್ಮವೆಂಬ ಭಾವನೆ ಬರುವಂತೆ ಹೇಳಿಕೊಂಡಿರುವ ವಿದ್ವಾಂಸರೂ ಇದ್ದಾರೆ. ಅದು ಒಂದು ಬಗೆಯ ಚೌರ್ಯವೇ ಸರಿ. ವಿದ್ಯಾರ್ಥಿಗಳಿಗೆ ಉದ್ಧರಿಸುವ ಒಂದು ಚಾಪಲ್ಯ ಸಹಜವಾಗಿರುತ್ತದೆ. ಏಕೆಂದರೆ ಎಷ್ಟು ಉದ್ಧರಣೆಗಳೋ ಅಷ್ಟು ಅಡಿಟಿಪ್ಪಣಿಗಳು, ಅಡಿಟಿಪ್ಪಣಿಗಳು ಹೆಚ್ಚಾದಷ್ಟು ಬರಹ ಪ್ರೌಢವೆಂಬ ಭ್ರಮೆ. ಆದರೆ ಅನಗತ್ಯವಾಗಿ ಉಕ್ತಿಸುವುದೂ ಒಂದು ದೋಷವೇ. ಕೆಲವು ಲೇಖಕರು - ಇದು ಸಂಶೋಧನ ವಿದ್ಯಾರ್ಥಿಗಳಿಗೆ ಅನ್ವಯಿಸುವುದಿಲ್ಲವೆಂದು ಸ್ಪಷ್ಟವಾಗಿದೆ - ತಮ್ಮ ಬಗ್ಗೆ ಅತಿಯಾದ ಸ್ವಪ್ರೇಮವನ್ನು ಬೆಳಸಿಕೊಂಡು ತಮ್ಮ ಮಾತುಗಳನ್ನೇ ಉದ್ಧರಿಸುತ್ತ ಹೋಗುತ್ತಾರೆ. ಬೇರೆಯವರು ತಮ್ಮನ್ನು ಗುರುತಿಸುತ್ತಿಲ್ಲವೆಂಬ ಅಳುಕು ಹೀಗೆ ವ್ಯಕ್ತವಾಗುತ್ತಿರುತ್ತದೆ. ಯಾರೇ ಆಗಲಿ, ತಮ್ಮ ಬರಹಗಳಲ್ಲಿ ತಮ್ಮದೇ ಇತರ ಲೇಖನಗಳನ್ನು ಉಲ್ಲೇಖಿಸಬಾರದೆಂದೇನೂ ಇಲ್ಲ. ಆದರೆ ಇಲ್ಲಿ ಔಚಿತ್ಯದ ಪ್ರಶ್ನೆಯಿರುತ್ತದೆ, ಅಷ್ಟೇ. ನಾವು ಬಳಸುವ ಭಾಷೆ, ನಮ್ಮ ಧೋರಣೆ, ಕೃತಿಚೌರ್ಯ ಇವುಗಳಿಂದ ನಾವು ಹಗುರವಾಗಿಬಿಡುವ ಸಂಭವವಿರುತ್ತದೆ.

ಅನೇಕರಿಗೆ ಸರಳವಾಗಿ ಹೇಳಲು ಸಾಧ್ಯವಿರುವುದನ್ನು ಜಟಿಲವಾಗಿಸುವ ಪ್ರವೃತ್ತಿಯಿರುತ್ತದೆ. ಸಾಹಿತ್ಯ ಕ್ಷೇತ್ರಗಳಲ್ಲಿ ಭಾಷೆಯನ್ನು ಅದರ ಚೆಲುವಿಗಾಗಿ ಬಳಸುವುದು ಉಚಿತವಾಗಿರುತ್ತದೆ ಮಾತ್ರವಲ್ಲ, ಅಪೇಕ್ಷಣೀಯವೂ ಹೌದು. ಆದರೆ ಸಂಶೋಧನ ಕ್ಷೇತ್ರದಲ್ಲಿ ಸಂಗತಿ ಮುಖ್ಯ - ಅದನ್ನು ಸ್ಪಷ್ಟವಾಗಿ ತಿಳಿಸಿಕೊಡಬೇಕೆನ್ನುವಷ್ಟರ ಮಟ್ಟಿಗೆ ಭಾಷೆಗೆ ಮಹತ್ವವಿದೆ. ಒಂದು ತಪ್ಪು ವಾದವನ್ನು ಎಷ್ಟೇ ಆಕರ್ಷಣೀಯ ಭಾಷೆಯಲ್ಲಿ ಮುಂದಿಟ್ಟರೂ ಅದು ತಿರಸ್ಕಾರಾರ್ಹವೇ. ಸಂಶೋಧನ ಭಾಷೆ ಆದಷ್ಟು 'ತೀರ' ಎಂದು ಹೇಳಲಾರೆ - ನಿರಲಂಕೃತವಾಗಿಯೂ ನೇರವಾಗಿಯೂ ಇದ್ದು ವಿಷಯ ಪ್ರತಿಪಾದನೆ ಮಾಡುವಂತಿರಬೇಕು.

ಮಿತವ್ಯಯವು ಸಂಶೋಧನ ಭಾಷೆಯ ಇನ್ನೊಂದು ಅಪೇಕ್ಷಣೀಯ ಗುಣ. ಈ ದೃಷ್ಟಿಯಿಂದ ಒಳ್ಳೆಯ ಸಂಶೋಧನ ಕೃತಿಗಳನ್ನು ಎಚ್ಚರಿಕೆಯಿಂದ ಅಭ್ಯಾಸ ಮಾಡಬೇಕು. ಸಂಶೋಧನ ವಿದ್ಯಾರ್ಥಿಗಳ ಮೊದಲ ಬರಹಗಳು ಅಥವಾ ಅವರ ನಿಬಂಧಗಳ ಮೊದಲ ಅಧ್ಯಾಯಗಳು ಅಪಕ್ವಭಾಷೆಯಿಂದ ಕೂಡಿದ್ದು, ಉದ್ದುದ್ದನೆಯ ಗಂಟುಗಂಟಾದ ವಾಕ್ಯಗಳು, ತನಗೇ ಅರ್ಥವಾಗದ ಭಾಷೆ, ಬೇರೆ ಭಾಷೆಯ (ಉದಾ : ಇಂಗ್ಲೀಷ್) ಛಾಟು ಹೊಡೆಯುವ ವಾಕ್ಯರಚನೆಯಿಂದ ಕೂಡಿರುವುದನ್ನು ಗುರುತಿಸಬಹುದು. ಇದು ಅನಿವಾರ್ಯ ಮತ್ತು ವಿದ್ಯಾರ್ಥಿ ಪ್ರಯತ್ನಪಟ್ಟರೆ ಸ್ವಲ್ಪ ಕಾಲದಲ್ಲೇ ಸಮುಚಿತವಾದ ಭಾಷೆಯನ್ನೂ ರೂಢಿಸಿಕೊಳ್ಳಲು ಸಾಧ್ಯವಾಗುತ್ತದೆ.

ಸಂಶೋಧಕ ತಾನು ಒಂದು ವಾದವನ್ನು ಮುಂದಿಡುತ್ತಿರುವಂತೆಯೇ ಅದರ ವಿರೋಧವಾಗಿ ಎತ್ತಬಹುದಾದ ಆಕ್ಷೇಪಣೆಗಳನ್ನೂ ಗಮನಿಸುತ್ತ ಹೋಗುವುದು ಬಹು ಒಳ್ಳೆಯದು. ನಮ್ಮ ವಾದಕ್ಕೆ ಇತರ ಮುಖಗಳಿರುವುದು ನಮಗೇ ಗೊತ್ತಿರುವುದಿಲ್ಲ. ಒಮ್ಮೊಮ್ಮೆ ನಮ್ಮ ದತ್ತದ ಆಧಾರದ ಮೇಲೆಯೇ ನಮ್ಮ ತೀರ್ಮಾನಕ್ಕೆ ವಿರುದ್ಧವಾದ ತೀರ್ಮಾನ ಹೊರಡುವಂತಿರುತ್ತದೆ. ಹೀಗೆ ಸಂಶೋಧಕ ತಾನೇ ತನ್ನ ಪ್ರತಿಪಕ್ಷದಲ್ಲಿ ನಿಂತು ನೋಡಲು ಸಾಧ್ಯವಾದರೆ ಅವನಲ್ಲಿ ಎಚ್ಚರ ಮೂಡಿ ಅವನ ವಾದ ಅಷ್ಟೂ ದೃಢವಾಗುತ್ತದೆ. ಕೆಲವರಿಗೆ ಇದರ ಯೋಚನೆಯೇ ಇರುವುದಿಲ್ಲ. ತಮ್ಮ ಮನಸ್ಸಿಗೆ ಅನ್ನಿಸಿದ್ದೇ ಸರಿ ಎಂದೂ ಒಂದು ವೇಳೆ ಬೇರೆಯವರು ತಮ್ಮ ವಾದವನ್ನು ತಪ್ಪು ಎಂದು ಅಲ್ಲಗಳೆದರೂ ಅದರಿಂದ ತಮಗೇನೂ ಆಗುವುದಿಲ್ಲವೆಂದೂ ಒಂದು ಬಗೆಯ ಗಟ್ಟಿ ಚರ್ಮವನ್ನು ಬೆಳಸಿಕೊಂಡಿರುತ್ತಾರೆ. ಆದರೆ ಸಂಶೋಧಕ ಒರಟನೂ ಆಗಿರಬೇಕು, ಸೂಕ್ಷ್ಮನೂ (sensitive) ಆಗಿರಬೇಕು. ತನ್ನ ವಾದ ಬಲವಾದುದೆಂಬ ನಂಬಿಕೆಯಿದ್ದು ಯಾರು ಎಷ್ಟೇ ವಿರೋಧಿಸಿದರೂ ತನ್ನ ವಾದವನ್ನು ಬಿಟ್ಟುಕೊಡುವುದಿಲ್ಲವೆಂಬ ಹಠವೂ, ತನ್ನ ವಾದ ದುರ್ಬಲವೆಂದು ತೋರಿದ ತಕ್ಷಣ ಅದನ್ನು ತ್ಯಜಿಸುವ ಅಥವಾ ಮಾರ್ಪಡಿಸುವ ಸೌಜನ್ಯವೂ ಇರಬೇಕು. ಕೃತಿಚೌರ್ಯದ ಆರೋಪದ ಬಗ್ಗೆ ಮಾತ್ರ ಸಿಡುಬುರೋಗಕ್ಕೆ ಹೇಗೋ ಹಾಗೆ ಹೆದರಿಕೆಯಿರಬೇಕು. ಈ ಗುಣವನ್ನು ಬೆಳೆಸಿಕೊಳ್ಳುವುದು ಅಷ್ಟು ಸುಲಭವಲ್ಲವಾದರೂ ಇದು ಸಂಶೋಧಕನ ಆದರ್ಶವಾಗಿರಬೇಕು. ಇನ್ನೊಬ್ಬ ಲೇಖಕನ ಅಭಿಪ್ರಾಯಗಳನ್ನು ಸ್ಪಷ್ಟವಾಗಿ ತಿರಸ್ಕರಿಸುವಾಗಲೂ ವೈಯಕ್ತಿಕ ನಿಂದೆಗೆ ಸ್ವಲ್ಪವೂ ಅವಕಾಶ ಕೊಡಕೂಡದು. ಲೇಖಕನ ಅಭಿಪ್ರಾಯಗಳನ್ನು ಖಂಡತುಂಡವಾಗಿ ಹರಿದು ಹಾಕುವಾಗಲೂ ವ್ಯಕ್ತಿಶಃ ಅವನಿಗೆ ಅಗೌರವ ಉಂಟುಮಾಡಬಾರದು. ಎಷ್ಟೋ ಸಾರಿ ಒಬ್ಬ ಸಂಶೋಧಕ ಮಾಡಿದ ತಪ್ಪು ಇನ್ನೊಬ್ಬ ಸಂಶೋಧಕ ಸರಿಯಾದುದನ್ನು ಕಾಣಲು ಅವಕಾಶ ಮಾಡಿಕೊಟ್ಟಿರುತ್ತದೆಯಾದ್ದರಿಂದ, ಆ ಸಂಶೋಧನೆಯ ಗೌರವಕ್ಕೆ ಇಬ್ಬರೂ ಪಾತ್ರರಾಗಿರುತ್ತಾರೆ. ಆದರೆ, ಇಂದಿನ ಕನ್ನಡ ಸಂಶೋಧನ ಕ್ಷೇತ್ರದ ಬಹುದೊಡ್ಡ ದೋಷವೆಂದರೆ ಈ ವೈಯಕ್ತಿಕ ನಿಂದೆ. ಸಂಶೋಧನ ವಿದ್ಯಾರ್ಥಿಗಳು ಈ ಅಂಶವನ್ನು ತೀವ್ರವಾಗಿ ಗಮನಿಸಬೇಕು.

ಈ ಹಿಂದೆ ಅಡಿಟಿಪ್ಪಣಿಗಳನ್ನು ಕುರಿತು ಪ್ರಸ್ತಾಪಿಸಿದೆ. ಅನೇಕರಿಗೆ ಅಡಿಟಿಪ್ಪಣಿಗಳನ್ನು ಹೇಗೆ ಕೊಡಬೇಕು, ಒಂದೊಂದು ಅಡಿಟಿಪ್ಪಣಿಯಲ್ಲಿ ಎಷ್ಟು ವಿವರಗಳಿರಬೇಕೆಂಬುದು ತಿಳಿದಿರುವುದಿಲ್ಲ. ಇದು ಸಣ್ಣ ವಿಷಯವೆಂದು ಅಲಕ್ಷ್ಯ ಸಲ್ಲದು. ಲೇಖಕನ ಹೆಸರು, ಕೃತಿ ಅಥವಾ ಲೇಖನ, (ಲೇಖನವಾಗಿದ್ದರೆ ಅದು ಪ್ರಕಟವಾದ ಪತ್ರಿಕೆ ಮತ್ತು ಪತ್ರಿಕೆಯ ಸಂಪುಟ - ಸಂಚಿಕೆ ಸಂಖ್ಯೆ), ಪ್ರಕಾಶಕ, ಪ್ರಕಟಿತ ವರ್ಷ, ಪುಟ ಇಷ್ಟು ವಿವರಗಳಾದರೂ ಈ ಕ್ರಮದಲ್ಲಿಯೇ ಇರಬೇಕು. ಅಡಿಟಿಪ್ಪಣಿಗಳನ್ನು ಕೊಡುವ ಕ್ರಮದಲ್ಲಿಯೂ ಎರಡು ಮೂರು ವಿಧಾನಗಳಿವೆ. ಅವುಗಳಲ್ಲಿ ಒಂದು - ಆಯಾ ಅಧ್ಯಾಯದ ಅಡಿಟಿಪ್ಪಣಿಗಳಿಗೆ ಅನುಕ್ರಮ ಸಂಖ್ಯೆ ಕೊಟ್ಟು, ಆಯಾ ಪುಟದ ಅಡಿಟಿಪ್ಪಣಿಗಳನ್ನು ಅಲ್ಲೇ ಕೆಳಗೆ ಕಾಣಿಸುವುದು ಅಥವಾ ಅದನ್ನು ಅಧ್ಯಾಯದ ಕೊನೆಗೆ ಕೊಡುವುದು. ಇವುಗಳಲ್ಲಿ ಮೊದಲನೆಯದು ಓದುಗನಿಗೆ ಅನುಕೂಲ, ಎರಡನೆಯದು ಮುದ್ರಣಾಲಯದವರಿಗೆ ಅನುಕೂಲ. ಈಚಿನ ಬರವಣಿಗೆಗಳಲ್ಲಿ ಇನ್ನೊಂದು ವಿಧಾನವೂ ಕಂಡುಬರುತ್ತದೆ. ಪುಸ್ತಕದ ಕೊನೆಯಲ್ಲಿ ಕೊಡುವ ಗ್ರಂಥಯಾದಿಯಲ್ಲಿ ಆಯಾ ಲೇಖನಕ ಪುಸ್ತಕ ಲೇಖನಗಳನ್ನು ಸೂಚಿಸಿ ಪ್ರಕಟಣ ವರ್ಷವನ್ನು ಕೊಟ್ಟಿರುತ್ತದೆಯಲ್ಲವೇ ? ಪ್ರತಿಬಾರಿಯೂ ಅಡಿಟಿಪ್ಪಣಿಯಲ್ಲಿ ಎಲ್ಲ ವಿವರಗಳನ್ನು ಕೊಡುವ ಬದಲು, ಬರಹದ ಮಧ್ಯದಲ್ಲಿಯೇ ಕಂಸದಲ್ಲಿ ಲೇಖಕನ ಹೆಸರು, ವರ್ಷ, ಪುಟ ಹೇಳಿದರೆ, ಆ ಲೇಖಕನ ಆ ವರ್ಷದಲ್ಲಿ ಪ್ರಕಟವಾದ ಪುಸ್ತಕ ಅಥವಾ ಲೇಖನವನ್ನು ಸೂಚಿಸಿದಂತಾಗುತ್ತದೆ. (ಲೇಖಕ, ವರ್ಷ, ಪುಟ) - ಹೀಗೆ ಬರಹದ ಮಧ್ಯದಲ್ಲೇ ಬಂದಿರುತ್ತದೆ. ಇವೆಲ್ಲ ತಾಂತ್ರಿಕ ವಿವರಗಳು. ಮುಖ್ಯ ಸಂಗತಿಯೆಂದರೆ, ಸಂಶೋಧಕ ಯಾವುದಾದರೂ ಒಂದು ಮಾರ್ಗವನ್ನು ಕಟ್ಟುನಿಟ್ಟಾಗಿ ಅನುಸರಿಸಿದರೆ ಸಾಕು. ಇವುಗಳ ವಿವರ ತಿಳಿಯಲು ಹೆಚ್ಚು ಶ್ರಮಿಸಬೇಕಾಗಿಲ್ಲ - ಯಾವುದೇ ಉತ್ತಮ ಇಂಗ್ಲೀಷ್, ಕನ್ನಡ ಗ್ರಂಥಗಳನ್ನು ತೆಗೆದರೂ ತಿಳಿಯುತ್ತದೆ.

ಒಂದು ಸಂಪ್ರಬಂಧ ಅಥವಾ ಕೃತಿಯೆಂದರೆ ಅದರ ತಾಂತ್ರಿಕ ವಿವರಗಳು ಅಲ್ಲವೇ ಅಲ್ಲ, ಅದು ಏನು ಹೊಸದನ್ನು ಹೇಳಿದೆ ಎನ್ನುವುದು ಆಗಿದೆ. ಅಡಿ ಟಿಪ್ಪಣಿ ಕೊಡುವುದರಲ್ಲಿ, ಉಕ್ತಿಗಳನ್ನು ಉದ್ಧರಿಸುವುದರಲ್ಲಿ, ಗ್ರಂಥಯಾದಿ ಸಿದ್ಧಪಡಿಸಿರುವುದರಲ್ಲಿ, ಭಾಷೆಯ ಬಳಕೆಯಲ್ಲಿ ಕೊರತೆಗಳಾಗಿರಬಹುದು. ಎಲ್ಲಕ್ಕಿಂತ ಮುಖ್ಯ - ಸಂಶೋಧಕ ಏನು ಸಂಶೋಧನೆ ಮಾಡಿದ್ದಾನೆ ಎಂಬುದು. ಸಂಶೋಧನ ವಿದ್ಯಾರ್ಥಿ ತನ್ನ ಬರಹವನ್ನು ತಾನೇ ಇನ್ನೊಮ್ಮೆ, ಮತ್ತೊಮ್ಮೆ ಓದಿದಾಗ ಅದು ಅವನಿಗೇ ತೃಪ್ತಿ ತರಬೇಕು. ತಾನು ಹತ್ತು ಸಂಗತಿಗಳನ್ನು ಅನ್ಯರಿಂದ ತೆಗೆದುಕೊಂಡಿದ್ದರೂ ಹನ್ನೊಂದನೆಯದಾದರೂ ತನ್ನದು ಎಂದು ಅನ್ನಿಸಬೇಕು. ಉತ್ತಮ ಸಂಪ್ರಬಂಧದ ಮೊದಲ ನಿಜವಾದ ಪರೀಕ್ಷಕ ಅದರ ಲೇಖಕನೇ. ತನ್ನ ಕೃತಿಯನ್ನು ಓದಿ ಮುಗಿಸಿದವರಿಗೆ ತಮಗೆ ಇಲ್ಲಿಯವರೆಗೂ ತಿಳಿಯದಿದ್ದುದನ್ನು ತಿಳಿದುದರ ಅನುಭವವಾಗದಿದ್ದರೆ ಆ ಕೃತಿಯ ಭಾಷೆ ಉತ್ಕೃಷ್ಟವಾಗಿರಬಹುದು, ಅದರ ರಚನೆಯಲ್ಲಿ ಅಚ್ಚುಕಟ್ಟುತನವಿರಬಹುದು, ಅದರೂ ಅದು ಸಾಮಾನ್ಯ ಕೃತಿಯೇ ಆಗಿಬಿಡುತ್ತದೆ. ಹೆಚ್ಚೆಂದರೆ, ಹಲವು ಗ್ರಂಥಗಳನ್ನು ಓದಿ ಜೀರ್ಣಿಸಿಕೊಂಡು ಅವುಗಳ ಸಾರಾಂಶವನ್ನು ಕೊಡುವ ಒಂದು ಪಠ್ಯ ಗ್ರಂಥವಾಗಬಹುದು. (text book). ಕನ್ನಡದಲ್ಲಿ ಸಂಶೋಧನ ಕೃತಿಗಳೆಂದು ಬಂದಿರುವ

ಹಲವು ಹೆಚ್ಚೆಂದರೆ ಇಂತಹ ಪಠ್ಯಗ್ರಂಥಗಳು. ಸಂಶೋಧನ ಕೃತಿ ಮತ್ತು ಪಠ್ಯಗ್ರಂಥಗಳಿಗಿರುವ ವ್ಯತ್ಯಾಸವನ್ನು ನಾವು ಗಮನಿಸಬೇಕು.

ಈ ಚಿಕ್ಕ ಲೇಖನದಲ್ಲಿ ಸಂಶೋಧನೆಯ ಎಲ್ಲ ಪ್ರಭೇದಗಳನ್ನೂ, ಸಂಶೋಧನ ವಿದ್ಯಾರ್ಥಿ ಎದುರಿಸುವ ಎಲ್ಲ ಸಮಸ್ಯೆಗಳನ್ನೂ ಚರ್ಚಿಸುವುದು ಸಾಧ್ಯವಿಲ್ಲ. ಕ್ಷೇತ್ರ ಸಂಶೋಧನೆಯ ಬಗ್ಗೆ (Field Research) ಏನನ್ನೂ ಇಲ್ಲಿ ಹೇಳಿಲ್ಲವೆಂಬುದನ್ನು ಗಮನಿಸಬೇಕು. ಈ ಲೇಖನ ಮುಖ್ಯವಾಗಿ ಸಂಶೋಧನೆಯನ್ನು ಪ್ರಾರಂಭಿಸುವ ವಿದ್ಯಾರ್ಥಿಗಳನ್ನೂ, ಅವರ ಸಮಸ್ಯೆಗಳನ್ನೂ ಗಮನದಲ್ಲಿಟ್ಟುಕೊಂಡಿದೆ. ಅವರ ಎಲ್ಲ ಸಮಸ್ಯೆಗಳಿಗೆ ಇಲ್ಲಿ ಉತ್ತರಗಳಿವೆಯೆಂದು ಹೇಳಲು ಸಾಧ್ಯವಿಲ್ಲವಾದರೂ ಇಲ್ಲಿನ ಕೆಲವು ಅಂಶಗಳಾದರೂ ಅವರಿಗೆ ಸೂಕ್ತ ಸೂಚನೆಗಳನ್ನು ನೀಡುತ್ತವೆಯೆಂಬ ನಂಬಿಕೆ ನನಗಿದೆ. ಸಂಶೋಧನ ಕ್ಷೇತ್ರ ಹಿಂದಿಗಿಂತ ಇಂದು ಹೆಚ್ಚು ಉತ್ಸಾಹಿ ಜನರನ್ನು ಆಕರ್ಷಿಸುತ್ತಿದೆ. ಅದೇ ಪ್ರಮಾಣದಲ್ಲಿ ಸಂಶೋಧನೆಯ ಗುಣಮಟ್ಟವೂ ಹೆಚ್ಚಾಗಬೇಕಾಗಿದೆ. ವಿದ್ಯಾರ್ಥಿಗಳಿಗೆ ಹೆಚ್ಚಿನ ಗುಣಮಟ್ಟದ ಮಾರ್ಗದರ್ಶನವೂ ದೊರೆಯಬೇಕಾಗಿದೆ (ಕೆಲವು ಮಾರ್ಗದರ್ಶಕರಿಗೆ ಸಂಶೋಧನೆಯ ಪ್ರಥಮ ಪಾಠಗಳೂ ಗೊತ್ತಿಲ್ಲದಿರುವುದು ಅತ್ಯಂತ ಶೋಚನೀಯ ಸಂಗತಿಯಾಗಿದೆ). ಆದರೆ ಈ ಬಗ್ಗೆ ತೀರ ನಿರಾಸೆ ಪಡುವಂತಹ ವಾತಾವರಣವೇನೂ ಇಲ್ಲದಿದ್ದರೂ, ತೃಪ್ತಿಕರವಾದ ಕೆಲಸ ನಡೆಯುತ್ತಿದೆಯೆಂದೂ ಹೇಳಲು ಬರುವಂತಿಲ್ಲ. ಕನ್ನಡದಲ್ಲಿ ಸಂಶೋಧನೆಯ ಗುಣಮಟ್ಟ ಹೆಚ್ಚಲಿ ಎಂಬ ಹಾರೈಕೆಯೊಡನೆ, ಉತ್ಸಾಹ ಮತ್ತು ಶ್ರದ್ಧೆಯಿರುವ ಯಾರೇ ಸ್ವಪ್ರಯತ್ನದಿಂದ ಉತ್ತಮ ಸಂಶೋಧಕರಾಗಲು ಸಾಧ್ಯವೆಂಬ ಮಾತನ್ನು ಮತ್ತೆ ಒತ್ತಿ ಹೇಳುವುದರೊಡನೆ ಈ ಲೇಖನವನ್ನು ಮುಕ್ತಾಯ ಮಾಡುತ್ತೇನೆ.

# ಸಂಶೋಧಕರಿಗೊಂದು ಸೂಚನೆ

ಸಂಶೋಧನೆಯಲ್ಲಿ ತೀರ ಈಚಿನ ಚರ್ಚೆಗಳನ್ನು ಗಮನಿಸದೇ ಹೋದರೆ ಏನಾಗುತ್ತದೆ ಎಂಬುದಕ್ಕೆ ಡಾ. ಎಂ.ಬಿ. ಭೋಯಿಯವರ ಎರಡು ಬರಹಗಳು ಎರಡು ಮಾದರಿಗಳನ್ನು ಕೊಡುತ್ತವೆ. 'ಕಾಲವಿಷಯಕ ಚರ್ಚೆಯಲ್ಲಿ ವಡ್ಡಾರಾಧನೆಯ ಸ್ಥಾನ' ಎಂಬ ತಮ್ಮ ಲೇಖನದಲ್ಲಿ (ಸಾಧನೆ 9 : 2. 1980, ಪು. 40) ರ್ / ೞ್ ಸ್ವನಗಳ ವಿನಿಯಮಕ್ಕೆ ಸಂಬಂಧಿಸಿದಂತೆ ನಾನು 1967ರಲ್ಲಿ "ಉಪಾಯನ" ಎಂಬ ಅಭಿನಂದನ ಗ್ರಂಥದಲ್ಲಿ ಬರೆದ ಲೇಖನವನ್ನು ಉಲ್ಲೇಖಿಸಿ, ನನ್ನ ಅಭಿಪ್ರಾಯ ಸರಿಯಲ್ಲವೆಂದು ಹೇಳುತ್ತಾರೆ. ನಾನೇ back - formation ಎಂಬ ಪ್ರಕ್ರಿಯೆಯನ್ನು ನಿರಾಕರಿಸಿ, ನನ್ನ ಅಭಿಪ್ರಾಯವನ್ನು ತಿದ್ದಿಕೊಂಡು ಬರೆದ ಲೇಖನ ('ಶಾಸನಗಳಲ್ಲಿ "ೞ್" ಸ್ವನಿಮಕ್ಕೆ ಸಂಬಂಧಿಸಿದ ಒಂದು ಲಿಪಿ ಸಮಸ್ಯೆ ಮತ್ತು ಕೇಶಿರಾಜ') ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆಯಲ್ಲಿ ಪ್ರಕಟವಾಗಿದೆ[1] (ಸಂಪುಟ 62. 1-2-1977). ಒಬ್ಬ ಸಂಶೋಧಕ ತನ್ನ ಅಭಿಪ್ರಾಯಗಳನ್ನೂ ತೀರ್ಮಾನಗಳನ್ನೂ ಮಾರ್ಪಡಿಸಿಕೊಂಡಾಗ ಅವನ ತೀರ ಈಚಿನ ಹೇಳಿಕೆಗಳನ್ನು ಮಾತ್ರ ಗಮನಿಸಬೇಕಾಗುತ್ತದೆ.

ಹಾಗೆಯೇ -ವರ / -ವಾರ ಎಂಬ ಸ್ಥಳನಾಮ ವಾರ್ಗಿಕಗಳ ಬಗ್ಗೆ ನಾನು "ಸಾಧನೆ"ಯಲ್ಲಿ (7:1) ಲೇಖನ ಪ್ರಕಟಿಸಿದ ಮೇಲೆ, ಡಾ. ಕಲಬುರ್ಗಿಯವರು ಕೆಲವು ಆಕ್ಷೇಪಗಳನ್ನೆತ್ತಿ ಒಂದು ಲೇಖನ ಬರೆದರು (ಸಾಧನೆ 9.1) ನಾನು ಅವರ ಆಕ್ಷೇಪಗಳಿಗೆ ಉತ್ತರ ಕೊಟ್ಟು ನನ್ನ ವಾದವನ್ನು ಸಮರ್ಥಿಸಿಕೊಂಡು ಬರೆದ ಲೇಖನವನ್ನು (ಸಾಧನೆ 9.4) ಡಾ. ಭೋಯಿಯವರು ಗಮನಿಸದೆ 'ಸ್ಥಳವಾಚಕಗಳ -ವರ ಮತ್ತು -ವಾರಗಳು' ಎಂಬ ಲೇಖನವನ್ನು ಬರೆದು (ಸಾಧನೆ 10:3) ನನ್ನ ಮೊದಲ ಲೇಖನವನ್ನು ವಿಮರ್ಶಿಸಿದ್ದಾರೆ. ಇದು ಸಂಶೋಧನೆಯಲ್ಲಿ ಸರಿಯಾದ ಕ್ರಮವಲ್ಲವೆಂದು ಇಲ್ಲಿ ಸೂಚಿಸಬೇಕಾಗಿದೆ.

ಸಂಶೋಧನೆಯಲ್ಲಿ ನನಗೆ ನಿರಾಧಾರ ಊಹೆಗಳು ತ್ಯಾಜ್ಯವಾಗುತ್ತವೆ; ಗಟ್ಟಿ ಆಧಾರಗಳನ್ನು ಕೊಟ್ಟ ಹೊರತು ಯಾವುದೇ ವಾದವೂ ನಿಷ್ಫಲವಾಗುತ್ತದೆ. ನನ್ನ ಲೇಖನಗಳಲ್ಲಿ ಹೇಳಿರುವಂತೆ, ಸ್ಥಳನಾಮಗಳ ಅಧ್ಯಯನದಲ್ಲಿ ಯಾವಾಗಲೂ ಆದಷ್ಟು ಹಿಂದಿನ ರೂಪಗಳಿಗೆ ಹೋಗಬೇಕು. ಈ ದಿನ -ವಾರ ಎಂದು ಕೊನೆಯಾಗುವ ಊರಿನ ಹೆಸರುಗಳು-ಪುರ

---

1. ಈ ಲೇಖನ ನನ್ನ "ವಾಗರ್ಥ" ಎಂಬ (ಬಾಪ್ಕೋ ಪ್ರಕಾಶನ. 1981) ಸಂಪ್ರಬಂಧ ಸಂಗ್ರಹದಲ್ಲಿ ಪುನರ್ಮುದ್ರಣಗೊಂಡಿದೆ.

ಎಂದು ಕೊನೆಯಾಗುತ್ತಿದ್ದುದನ್ನು ತೋರಿಸಿದ್ದೇನೆ. ಗಂಗವಾರ, ದಿಂಡವಾರ, ಯಾಳವಾರ, ಇಂದವಾರ ಇವುಗಳ ಹಳೆಯ ಹೆಸರುಗಳು ಕ್ರಮವಾಗಿ ಗಂಗಪುರ, ದಿಂಡಾಪುರ, ಏಳಾಪುರ ಮತ್ತು ಇಂದಪುರ. ಡಾ. ಘೋಯಿಯವರು ಹಿಂದೆ-ಆಹಾರದಿಂದ ಕೊನೆಯಾಗುತ್ತಿದ್ದ ಊರಿನ ಹೆಸರು ಈ ದಿನ-ವಾರದಿಂದ ಕೊನೆಯಾಗುತ್ತಿರುವ ನಿದರ್ಶನಗಳನ್ನು ಕೊಡದ ಹೊರತು ಅವರ ವಾದಕ್ಕೆ ಯಾವುದೇ ಪುಷ್ಟಿಯೂ ಬರುವುದಿಲ್ಲ.

-ವರ, -ವಾರಗಳು ಪೂರಕ ಪ್ರಸಾರದಲ್ಲಿರುವುದರಿಂದ (complementary distribution) ಅವೆರಡಕ್ಕೂ ಮೂಲ ಒಂದೇ ಎಂಬಲ್ಲಿ ಅನುಮಾನವಿಲ್ಲ. -ವಾಡ ಎಂಬ ವಾರ್ಗಿಕವು ಎಲ್ಲಾದರೂ -ವಾರ ಎಂದಾಗಿದ್ದರೆ ಅದಕ್ಕೆ ಬೇರೆ ವಿವರಣೆ ಸಾಧ್ಯ. ಸ್ವನ ಸಾದೃಶ್ಯ (phonetic similarity), ಸಾಮ್ಯ (analogy)ಗಳಂತಹ ಪ್ರಕ್ರಿಯೆಗಳಿಂದ ಅಂತಹ ವಿರಳ ಉದಾಹರಣೆಗಳನ್ನು ವಿವರಿಸಲು ಸಾಧ್ಯ.

## ಮುನ್ನುಡಿ (ಡಾ. ಎಸ್.ಎಸ್. ತಾರಾನಾಥರ 'ಶೋಧನ ಲೋಕ'ಕ್ಕೆ)

ಶ್ರೀ ಎಸ್.ಎಸ್. ತಾರಾನಾಥ ಅವರು ತಮ್ಮ 'ಶೋಧನ ಲೋಕ'ಕ್ಕೆ ನನ್ನಿಂದ ಮುನ್ನುಡಿಯನ್ನು ಬಯಸಿದ್ದಾರೆ. ನನ್ನ ಮುನ್ನುಡಿ ಅವರ ಗ್ರಂಥದ ಬೆಲೆಯನ್ನು ಹೆಚ್ಚಿಸೀತು ಎಂಬ ನಂಬಿಕೆ ನನಗೆ ಅಷ್ಟಾಗಿ ಇಲ್ಲವಾದರೂ ಪ್ರವರ್ಧಮಾನಕ್ಕೆ ಬರುತ್ತಿರುವ ಈ ಪ್ರತಿಭಾಶಾಲಿ ತರುಣ ಸಂಶೋಧಕನಿಗೆ ಅಂತಹ ಮುನ್ನುಡಿಯಿಂದ ಹೆಚ್ಚಿನ ಪ್ರೋತ್ಸಾಹವೂ ಆತ್ಮವಿಶ್ವಾಸವೂ ಲಭ್ಯವಾಗುವುದಾದರೆ ಅದಕ್ಕಿಂತ ಹೆಚ್ಚಿನ ಫಲಿತಾಂಶವನ್ನೇನನ್ನೂ ನಾನು ನಿರೀಕ್ಷಿಸುವುದಿಲ್ಲ.

'ಶೋಧನ ಲೋಕ' ಲೇಖಕರು ಆಗಾಗ್ಗೆ ಬರೆದ ಬಿಡಿ ಪ್ರಬಂಧಗಳ ಸಂಕಲನ. ಇಲ್ಲಿಯ ಎಲ್ಲ ಬರಹಗಳೂ ಸಂಪ್ರಬಂಧಗಳಾಗಿರುವುದರಿಂದ - 'ಸಂಪ್ರಬಂಧ' ಎಂಬ ಮಾತನ್ನು ಸಂಶೋಧನ ಪ್ರಬಂಧ, research paper ಎಂಬರ್ಥದಲ್ಲಿ ಬಳಸುತ್ತಿದ್ದೇನೆ- ಎಂದರೆ ಒಂದೊಂದರಲ್ಲೂ ಯಾವುದೋ ಸಮಸ್ಯೆಯನ್ನು ಆರಿಸಿಕೊಂಡು ಬಿಡಿಸುವ, ಅದರ ಮೇಲೆ ಬೆಳಕು ಚೆಲ್ಲುವ ಪ್ರಯತ್ನವಿರುವುದರಿಂದ ತಮ್ಮ ಚೊಚ್ಚಲ ಕೃತಿಗೆ ಆ ಉಚಿತವಾದ ಹೆಸರನ್ನು ಇಟ್ಟಿದ್ದಾರೆ. ಅವರು ಶೋಧಿಸ ಹೊರಟಿರುವ ಲೋಕ ವೈವಿಧ್ಯದಿಂದ ಕೂಡಿದೆ. ವ್ಯಾಕರಣ, ಜೈನಧರ್ಮ, ತೌಲನಿಕ ಸಾಹಿತ್ಯ, ಛಂದಸ್ಸು, ಶಾಸನ ಇತ್ಯಾದಿ. ಇಲ್ಲಿಯ ಸಂಪ್ರಬಂಧಗಳಲ್ಲಿ ಸಿಂಹಪಾಲು ಹಳಗನ್ನಡ ಭಾಷೆ ಅಥವಾ ವ್ಯಾಕರಣಕ್ಕೆ ಸಂದಿದೆ. ಪ್ರಾಚೀನ ಕನ್ನಡ ವ್ಯಾಕರಣ ಗ್ರಂಥಗಳು, ವರ್ಣಮಾಲೆಯ ವಿಚಾರ, ಸಂಧಿಗಳು ಇವು ಚರ್ಚಿತವಾಗಿರುವ ಸಂಗತಿಗಳಲ್ಲಿ ಕೆಲವು. ಇಲ್ಲೆಲ್ಲ ತಾರಾನಾಥ ಆಳವಾದ ಅಧ್ಯಯನವನ್ನು ತೋರುವುದಲ್ಲದೆ, ಸಂಸ್ಕೃತ ಕನ್ನಡ ವೈಯಾಕರಣರ ವಿಚಾರಗಳನ್ನು ಹೋಲಿಸಿ ನೋಡುವಲ್ಲಿ ಪ್ರೌಢ ತೌಲನಿಕ ದೃಷ್ಟಿಯನ್ನು ವ್ಯಕ್ತಪಡಿಸುತ್ತಾರೆ. ಹಳಗನ್ನಡ ವ್ಯಾಕರಣಗಳನ್ನು ಅವರು ಆಳವಾಗಿ ಅಧ್ಯಯನ ಮಾಡಿದ್ದಾರೆ. ಕವಿರಾಜಮಾರ್ಗಕಾರ ಕನ್ನಡದಲ್ಲಿ ಪ್ರಥಮಾ ವಿಭಕ್ತಿ ಪ್ರತ್ಯಯವಿಲ್ಲವೆಂಬುದನ್ನು ಮನಗಂಡಿದ್ದನೆಂಬಂತಹ ಸಂಗತಿಗಳನ್ನು ಅವರು ಗುರುತಿಸಿದ್ದಾರೆ. ಅನ್ಯ ವಿದ್ವಾಂಸರ ಅಭಿಪ್ರಾಯಗಳನ್ನು ಸ್ವೀಕರಿಸಿ ಅವುಗಳ ಆಕರಗಳನ್ನು ನಿರ್ದೇಶಿಸುವುದರ ಮೂಲಕ ತಮ್ಮ ಋಣವನ್ನು ಸೂಚಿಸುವುದು ಅವರ ಪ್ರಾಮಾಣಿಕತೆಯ ಕುರುಹು. ಆದರೆ ಅವರು ದಿವಂಗತ ತೀ.ನಂ.ಶ್ರೀ.ಯವರ ಶಬ್ದಮಣಿದರ್ಪಣದ ತರಗತಿಯ ಟಿಪ್ಪಣಿಗಳನ್ನು ಉಲ್ಲೇಖಿಸಿರುವುದು ಆ ಪ್ರಾಮಾಣಿಕತೆಯ ಫಲವಾದರೂ ಒಮ್ಮೊಮ್ಮೆ ಮೂಲ ಲೇಖಕರಿಗೆ ಅದರಿಂದ ಸ್ವಲ್ಪ ಅನ್ಯಾಯವಾಗುವ ಸಾಧ್ಯತೆಗಳೂ ಉಂಟು. ಕನ್ನಡ ಸಂಧಿಯಲ್ಲಿ ಕ್ ತ್ ಪ್ ಗಳಿಗೆ ಗ್ ದ್ ಬ್‌ಗಳು ಆದೇಶವಾಗುವಂತೆ ಚ್, ಟ್‌ಗಳಿಗೆ ಜ್, ಡ್‌ಗಳು

ಆದೇಶವಾಗಿ ಬರುವುದಿಲ್ಲ. ಇದಕ್ಕೆ ಕಾರಣವೇನಿರಬಹುದು ಎಂಬುದಕ್ಕೆ ತೀ.ನಂ.ಶ್ರೀ.ಯವರ ತರಗತಿಯ ಟಿಪ್ಪಣಿಗಳಿಂದ ಕೆಲವು ವಾಕ್ಯಗಳನ್ನು ತಾರಾನಾಥ ಅವರು ಉಲ್ಲೇಖಿಸುತ್ತಾರೆ (ಪು. 76) ತೀ.ನಂ.ಶ್ರೀ.ಯವರು ತಮ್ಮ ಟಿಪ್ಪಣಿಗಳನ್ನು ಅಚ್ಚು ಮಾಡಿಸುವ ವಿಷಯದಲ್ಲಿ ಸಂಪೂರ್ಣ ಅನಾಸಕ್ತರಾಗಿದ್ದರು. ಅವರು ಟಿಪ್ಪಣಿ ಬರೆದದ್ದೇ ಅಚ್ಚು ಮಾಡಿಸಲೆಂದಲ್ಲ. ಮತ್ತು ಅವರು ಟಿಪ್ಪಣಿ ಸಿದ್ಧಪಡಿಸಿದ ಮೇಲೆ ಎಷ್ಟೋ ವಿಚಾರಗಳು ಬೆಳೆದುವು, ಅವರೂ ಬೆಳೆದರು. ಅವರು ತಮ್ಮ ಟಿಪ್ಪಣಿಗಳು ಅಚ್ಚಾಗಲೇಬೇಕಿದ್ದರೆ ಎಷ್ಟೋ ಭಾಗಗಳನ್ನು ಹೊಡೆದುಹಾಕುತ್ತಿದ್ದರು ಅಥವಾ ತಿದ್ದುತ್ತಿದ್ದರು. ಈಗಿರುವಂತೆ ಚ್ - ಜ್, ಟ್ - ಡ್ ಗಳ ಬಗ್ಗೆ ಅವರ ವಿಚಾರಗಳಲ್ಲಿ ಹುರುಳಿದೆಯಾದರೂ ಅವರ ವಿವರಣೆ ಬಹಳ ಅಸಮರ್ಪಕ. ಮೂಲ ದ್ರಾವಿಡದ ಎಷ್ಟೋ ಲಕ್ಷಣಗಳನ್ನು ಉಳಿಸಿಕೊಂಡು ಬಂದಿದೆಯೆಂದು ಹೇಳಲಾದ ತಮಿಳಲ್ಲಿ ಜ್ ಉಂಟು ಮತ್ತು ಅದು ಪದಮಧ್ಯೆ ಅನುನಾಸಿಕದ ಬಳಿಕ ಬರುತ್ತದೆ. ಪದಾದಿಯ, ಪದಮಧ್ಯದ (ಚ್) ಉಚ್ಚಾರವು ಘರ್ಷವಾಗಿದೆಯಾದರೂ, ಪದಮಧ್ಯದಲ್ಲಿ ಸ್ವಜಾತೀಯ ದ್ವಿತ್ವವಾಗಿ ಬಂದಾಗ ಅದು ಕನ್ನಡ, ತೆಲುಗುಗಳ ಚ್ ಉಚ್ಚಾರವನ್ನು ಪಡೆದುಕೊಳ್ಳುತ್ತದೆ. ಈ ಎಲ್ಲ ಸಂಗತಿಗಳನ್ನು ತೀ.ನಂ.ಶ್ರೀ.ಯವರು ಗಮನಿಸುತ್ತಿದ್ದರು. ಆ ಸಮಸ್ಯೆಯ ಬಗ್ಗೆ ಅವರೇನಾದರೂ ಈಚೆಗೆ ವಿಚಾರ ಮಾಡಿದ್ದರೆ, ತಾರಾನಾಥ ಅವರೇ "ಈ ವಿವರಣೆಯಲ್ಲಿ ಕೆಲವು ಆಕ್ಷೇಪಗಳನ್ನು ಎತ್ತಲು ಸಾಧ್ಯವಿದೆಯಾದರೂ ಈಗಿರುವಂತೆ ಕೆಲಮಟ್ಟಿಗಾದರೂ ಇದು ತೃಪ್ತಿಕರವಾಗಿದೆ ಎನ್ನಬಹುದು" ಎಂದು ಎಚ್ಚರಿಕೆ ವಹಿಸಿದ್ದರೂ, ಇಂಥ ಕಡೆಗಳಲ್ಲಿ ಹೀಗೆ ಮಾಡಬಹುದು ಎಂದು ತೋರುತ್ತದೆ : ನಮ್ಮ ವಿವರಣೆ ಏನಿದೆ ಅದನ್ನು ಕೊಟ್ಟು, ಅಲ್ಲಿ ಇಂಥವರ ಟಿಪ್ಪಣಿಗಳಿಂದ (ಅಥವಾ ತರಗತಿಯ ಉಪನ್ಯಾಸಗಳಿಂದ) ಇಂಥ ಸೂಚನೆಗಳನ್ನು ಪಡೆದಿದ್ದೇನೆ ಎಂದು ಸೂಚಿಸಬಹುದು. ಎಲ್ಲಿ ನಿಜವಾಗಿಯೂ ಹೊಸ ಅಂಶ ಉಂಟು ಅಲ್ಲಿ ಮಾತ್ರ ಸಂಪೂರ್ಣವಾಗಿ ಮೂಲವನ್ನು ಉಲ್ಲೇಖಿಸಬಹುದು. ಯಾವ ಸಂಶೋಧಕನಿಗೆ ತನ್ನದೇ ಸ್ವಂತ ಅಭಿಪ್ರಾಯಗಳಿವೆ ಎಂಬ ವಿಶ್ವಾಸವಿದೆಯೋ ಅವನು ಮಾತ್ರ ಇತರರ ಅಭಿಪ್ರಾಯಗಳನ್ನು ಇತರರವು ಎಂದು ಬೇರ್ಪಡಿಸಿ ತೋರಲು ಬಯಸುತ್ತಾನೆ. ಏಕೆಂದರೆ, ಆಕರವನ್ನು ತೋರಿಸದೆ ಇತರರ ಒಂದೆರಡು ವಿಚಾರಗಳನ್ನು ಉಪಯೋಗಿಸಿಕೊಂಡರೂ ತನ್ನ ಎಲ್ಲ ವಿಚಾರಗಳೂ ಅನ್ಯರಿಂದ ಕದ್ದಂಥವು ಎಂದು ಓದುಗರು ಭಾವಿಸಿದರೆ ಗತಿ ಏನು ಎಂಬ ಭಯ ಅವನನ್ನು ಕಾಡಬೇಕು. ಇದರ ಅರಿವು ತಾರಾನಾಥರಲ್ಲಿರುವುದು ಬಹುವಾಗಿ ಮೆಚ್ಚಬೇಕಾದ ಸಂಗತಿ.

ಭಾಷೆಯ ಅಧ್ಯಯನ ನಿರೀಕ್ಷಿತ ಪ್ರಮಾಣದಲ್ಲಿ ನಡೆಯದಿರುವುದು ಕನ್ನಡದ ದುರದೃಷ್ಟ. ಸಾಂಪ್ರದಾಯಕ ವ್ಯಾಕರಣಗಳ ತೌಲನಿಕ ಅಭ್ಯಾಸ ಇನ್ನೂ ಆಗಬೇಕಾಗಿದೆ. ನಡುಗನ್ನಡ ಶಾಸನಗಳ, ಕೃತಿಗಳ ವಿವರಣಾತ್ಮಕ ಅಧ್ಯಯನವಾಗಲಿ ಆಧುನಿಕ ಉಪಭಾಷೆಗಳ ಅಧ್ಯಯನವಾಗಲಿ, ಪರಿವೀಕ್ಷಣೆಯಾಗಲಿ ಹಾಗೇ ಉಳಿದಿವೆ. ಸ್ಥಳನಾಮ, ವ್ಯಕ್ತಿನಾಮಗಳ ಶಾಸ್ತ್ರೀಯ ಅಭ್ಯಾಸದ ಕೊರತೆಯಂತೂ ಎದ್ದು ಕಾಣುತ್ತಿದೆ. ಭಾಷಾ ವಿಜ್ಞಾನ ಸಮ್ಮೇಳನಗಳಿಗೆ ಹೋದಾಗ ಅಲ್ಲಿ ಕನ್ನಡವನ್ನು ಪ್ರತಿನಿಧಿಸುವ ವಿದ್ವಾಂಸರ ಸಂಖ್ಯೆ ತೀರ ಕಡಮೆಯಿರುತ್ತದೆಯೆಂಬ

ಸಂಗತಿ ಯಾರಿಗೇ ತಾನೇ ನೋವುಂಟುಮಾಡುವುದಿಲ್ಲ ? ಇಂಥ ಸಂದರ್ಭದಲ್ಲಿ ಸಾಂಪ್ರದಾಯಕ ವ್ಯಾಕರಣಗಳ ಕಡೆ ಗಮನ ಹರಿಸುತ್ತಿರುವ ತಾರಾನಾಥರಂತಹ ವಿರಳ ಸಂಖ್ಯೆಯ ತರುಣರು ಭರವಸೆ ಮೂಡಿಸುತ್ತಾರೆ. ನಮ್ಮ ಹಿಂದಿನ ವ್ಯಾಕರಣಗಳಲ್ಲಿರುವ ಅಮೂಲ್ಯ ಸಾಮಗ್ರಿಯನ್ನು ಹೊಸ ದೃಷ್ಟಿಯಿಂದ ವಿವೇಚಿಸುವ ಕಾರ್ಯವನ್ನು ಅವರು ಕೈಗೊಳ್ಳುತ್ತಾರೆಂದು ನಿರೀಕ್ಷಿಸಬಹುದು. ಈ ದಿಸೆಯಲ್ಲಿ ಡಾ. ಎಚ್.ಎಸ್. ಬಿಳಿಗಿರಿಯವರ 'ಆಲೋಕ' (ಭಾಗ 1) ಒಂದು ಗಮನಾರ್ಹ ಕೊಡುಗೆಯಾಗಿದೆ.

ಈ ಕಾಲದಲ್ಲಿ ಆಧುನಿಕ ಸಾಹಿತ್ಯಕ್ಕೆ ಒತ್ತು ಬಿದ್ದು ನಮ್ಮ ಪ್ರಾಚೀನ ಸಾಹಿತ್ಯ ಅಲಕ್ಷ್ಯಕ್ಕೆ ಈಡಾಗುತ್ತಿದೆ. ಯಾವುದೇ ಸಾಹಿತ್ಯ ಜೀವಂತವಾಗಿರಬೇಕಾದರೆ ಅದು ಬೆಳೆಯಬೇಕು, ಹೊಸ ಹೊಸ ದಿಕ್ಕುಗಳತ್ತ ಮುಖ ಮಾಡಬೇಕು, ಹೊಸ ಹೊಸ ಪ್ರಯೋಗಗಳಿಗೆ ಕೈ ಹಾಕಬೇಕು. ಹಳೆಯದು ಹಳೆಯದೇ, ಅದನ್ನು ನಾವು ಉಳಿಸಬಹುದೇ ಹೊರತು ಬೆಳೆಸಲಾರೆವು (ಅದರ ಅರ್ಥವಂತಿಕೆಯನ್ನು ಬೆಳೆಸುವ ವಿಷಯ ಬೇರೆ). ಈ ದೃಷ್ಟಿಯಿಂದ ನೋಡಿದರೆ ಯಾವುದೇ ಭಾಷೆಯ ಆಧುನಿಕ ಸಾಹಿತ್ಯ ಮುಖ್ಯವಾಗುತ್ತದೆ, ಅದು ಆ ಸಾಹಿತ್ಯದ ಚಿಗುರುತ್ತಿರುವ ಭಾಗವಾಗಿರುವುದರಿಂದ. ಹೀಗೆಂದು ನಾವು ನಮ್ಮ ಹಿಂದಿನ ಸಾಹಿತ್ಯವನ್ನು ಅಲಕ್ಷಿಸುವುದಾಗಲಿ ಅದರಲ್ಲಿ ಕೆಲವು ಅಪವಾದಗಳನ್ನು ಬಿಟ್ಟರೆ ಗಮನಾರ್ಹ ಕೃತಿಗಳೇ ಇಲ್ಲವೆಂದಾಗಲಿ ಭಾವಿಸುವುದು ನಮಗೇ ಮಾಡಿಕೊಳ್ಳಬಹುದಾದ ಅಪಚಾರ. ನಮ್ಮ ಹಿಂದಿನ ಸಾಹಿತ್ಯ ಅಚ್ಚಾಗಿ ಪುಸ್ತಕಗಳಲ್ಲಿ ಉಳಿದುಕೊಳ್ಳುತ್ತಿದೆ. ಓದುಗರ ಅಧ್ಯಯನದ ವಸ್ತುವಾಗಿ ಉಳಿಯುತ್ತಿಲ್ಲ ಮತ್ತು ಅದನ್ನು ಓದಬೇಕಾದವರೇ ಆ ಬಗ್ಗೆ ಅನಾದರವನ್ನು ತೋರುತ್ತಿದ್ದಾರೆ. ಪಶ್ಚಿಮದ ನಾಗರಿಕತೆ ನಮ್ಮ ಜೀವನದ ಎಲ್ಲ ಮುಖಗಳನ್ನು ವ್ಯಾಪಿಸಿರುವಂತೆ ಅಲ್ಲಿನ ಸಾಹಿತ್ಯವೂ ನಮ್ಮ ಜನರ ಕಣ್ಣು ಕೋರೈಸುವಷ್ಟು, ನಮ್ಮ ಶ್ರೀಮಂತ ಸಾಹಿತ್ಯಕ ಪರಂಪರೆಗೆ ಕುರುಡರನ್ನಾಗಿ ಮಾಡುವಷ್ಟು ಪ್ರಮುಖವಾಗಿ ನಿಂತಿದೆ. ಪಾಶ್ಚಾತ್ಯ ಸಾಹಿತ್ಯವನ್ನು ಓದಿಕೊಂಡು, ಕನ್ನಡ ಆಧುನಿಕ ಕೃತಿಗಳ ಅಧ್ಯಯನದಿಂದ ಭಾಷೆಯನ್ನು ರೂಪಿಸಿಕೊಂಡರೆ ಸಾಕು, ಕನ್ನಡದಲ್ಲಿ ಸಾಹಿತ್ಯ ರಚನೆ ಮಾಡಲು ಸಾಧ್ಯವೆಂಬ ನಂಬಿಕೆ ಹಲವರಲ್ಲಿ ಉಂಟು ಮತ್ತು ಅಂಥವರ ಬರಹ ನಮ್ಮ ಜನಕ್ಕೆ ಶ್ರೇಷ್ಠವಾಗಿಯೂ ಕಾಣಬಹುದು. ಯಾವುದಾದರೂ ಭಾಷೆಯಲ್ಲಿ ಅದರ ಹಿಂದಿನ ಸಾಹಿತ್ಯವನ್ನು ಆಳವಾಗಿ ಅಭ್ಯಸಿಸದೆ ಆ ಸಾಹಿತ್ಯದಲ್ಲಿ ಕೃಷಿ ಮಾಡಲು ಸಾಧ್ಯವಿದ್ದರೆ ಆಗ ಎರಡು ಸಾಧ್ಯತೆಗಳಿರುತ್ತವೆ : ಆ ಹಿಂದಿನ ಸಾಹಿತ್ಯ ನಿಸ್ಸತ್ವವಾಗಿರಬಹುದು, ಅಥವಾ ಅದನ್ನು ಓದದೇ ರಚಿತವಾಗುವ ನಂತರದ ಸಾಹಿತ್ಯದಲ್ಲಿ ಏನೋ ಕೊರತೆ ಇರಬಹುದು. ನಮ್ಮ ಹಿಂದಿನ ಸಾಹಿತ್ಯದಲ್ಲಿ ಸಾಕಷ್ಟು ಸಂಖ್ಯೆಯ ಸತ್ವಪೂರ್ಣ ಕೃತಿಗಳಿವೆಯೆಂಬ ಬಗ್ಗೆ ನನಗೆ ಅನುಮಾನವಿಲ್ಲ. ಇಂದಿನ ಅನೇಕ ಸಾಹಿತಿಗಳು ಪಂಪ, ರನ್ನ, ನಾಗಚಂದ್ರ, ಬಸವ, ಅಲ್ಲಮ, ಹರಿಹರ, ಚಾಮರಸ, ಕುಮಾರವ್ಯಾಸ, ಲಕ್ಷ್ಮೀಶರನ್ನು ಅಭ್ಯಸಿಸುವುದಾದರೆ ಅವರ ಭಾಷಿಕ ಸಂವೇದನೆ ಇನ್ನೂ ಆಳವಾಗುತ್ತದೆಂಬಲ್ಲಿ ನನಗೆ ಸಂದೇಹವಿಲ್ಲ. ಮತ್ತು ಅವರು ತಮ್ಮ ಪರಂಪರೆಯನ್ನು ಕನ್ನಡ ಕವಿಗಳಲ್ಲಿ ಕಂಡುಕೊಳ್ಳುವಂತಹ ಕಾಲ ಬಂದೀತೇ ಎಂದು ಹಾರೈಸಬೇಕಾಗಿದೆ. ಈ

ಮುರದೃಷ್ಟಕರ ಪರಿಸ್ಥಿತಿ ನನಗೆ ತಿಳಿದಮಟ್ಟಿಗೆ, ಭಾರತೀಯ ಭಾಷೆಗಳಲ್ಲಿ ಕನ್ನಡಕ್ಕೇ ವಿಶಿಷ್ಟವಾಗಿರುವಂತೆ ತೋರುತ್ತದೆ.

. ಪ್ರಾಚೀನ ಕೃತಿಗಳನ್ನು ಅಭ್ಯಸಿಸುವುದರಲ್ಲಿ ಅವುಗಳ ತೌಲನಿಕ ವಿವೇಚನೆ ವಿಮರ್ಶೆಗಳಲ್ಲಿ ಆಸಕ್ತಿಯನ್ನೂ ಪರಿಣತಿಯನ್ನೂ ತೋರುತ್ತಿರುವ ಶ್ರೀ ತಾರಾನಾಥರ ಬರಹಗಳು ಮೇಲಿನ ಹಿನ್ನೆಲೆಯಲ್ಲಿ ಅತ್ಯಂತ ಸ್ವಾಗತಾರ್ಹವಾಗಿವೆ. ಅವರ ಸಂಶೋಧನ ದೃಷ್ಟಿ, ಭಾಷೆಯ ಮೇಲಿರುವ ಪ್ರಭುತ್ವ, ನಿರೂಪಣೆಯಲ್ಲಿ ತೋರಿರುವ ಸಂಯಮ, ಕೊನೆಗೆ ಅಚ್ಚು ಮಾಡಿಸುವಲ್ಲಿ ಕೂಡ ತೋರಿರುವ ಶ್ರದ್ಧೆ ಎಲ್ಲವೂ ಮೇಲ್ತರಗತಿಯವು. 'ಚಾಮುಂಡರಾಯ ಪುರಾಣ'ಕ್ಕೂ 'ಅಜಿತ ಪುರಾಣ'ಕ್ಕೂ ಇರುವ ದಟ್ಟವಾದ ಹೋಲಿಕೆಗಳನ್ನು ಗಮನಿಸಿ, ಚಾಮುಂಡರಾಯ ಮತ್ತು ರನ್ನರಿಬ್ಬರೂ 'ಚಾಮುಂಡರಾಯ ಪುರಾಣ'ದ ಈ ಭಾಗದ ರಚನೆಯಲ್ಲಿ ಸಹಕರಿಸಿರಬಹುದೆಂದು ತಾರಾನಾಥನು ಊಹಿಸಿರುವುದು (ಪು. 130) ಸ್ಪಷ್ಟವಾಗುವುದಿಲ್ಲ. ಅವರ ವಿಮರ್ಶನ ಪ್ರಜ್ಞೆಗೆ ಶಾಂತಿಕೀರ್ತಿಯ ಬಗ್ಗೆ ಬರೆದಿರುವ ಪ್ರಬಂಧ ಒಳ್ಳೆಯ ಸಾಕ್ಷಿ. ಆ ಅಷ್ಟೊಂದು ಪ್ರಸಿದ್ಧನಲ್ಲದ ಕವಿಯನ್ನು ಕುರಿತಂತೆ ಸಹಾನುಭೂತಿಪರವೂ ಅಷ್ಟೇ ನೇರವೂ ಆದ ಮೌಲ್ಯಮಾಪನವನ್ನು ಅಲ್ಲಿ ಕಾಣಬಹುದು. ಹಲ್ಮಿಡಿ ಶಾಸನದ ಪಾಠವನ್ನು 'ಕನಿಷ್ಠ ಎರಡು ಬಾರಿ, ಭಿನ್ನ ಸಂದರ್ಭಗಳಲ್ಲಿ' ಬರೆದು ಟಂಕಿಸಿರಬೇಕು ಎಂಬ ಅವರ ಊಹೆಗೆ ಅಷ್ಟು ಆಧಾರಗಳು ಸಾಲದೇನೋ ಎಂದು ಅನ್ನಿಸುತ್ತದೆ. ಷಟ್ಪದಿ ಕವಿಗಳು ಐ, ಔಗಳನ್ನು ಪ್ರಾಸಸ್ಥಾನದಲ್ಲಿ ತಂದಿಡುವುದರ ಬಗ್ಗೆ ಹೇಳಿಕೊಂಡಿರುವ ಸಂಗತಿಗಳನ್ನು ಒಂದೆಡೆ ಕೂಡಿಸಿ ಕೊಟ್ಟಿರುವುದು ಸ್ವಾಗತಾರ್ಹ. 'ಕಾವ್ಯಾವಲೋಕನ'ದಲ್ಲಿ ಬಂದಿರುವ 'ವಿಕ್ರಮವಹ್ನಿ....' ಎಂಬ ಪದ್ಯ - ಪೊಲಕೇಶಿವಲ್ಲಭನ ಪ್ರಶಸ್ತಿಯಿರುವ ಪದ್ಯ ರನ್ನನ ಅನುಪಲಬ್ಧವಾದ 'ಚಕ್ರೇಶ್ವರ ಚರಿತೆ'ಯದಿರಬಹುದೆಂಬ ಊಹೆಯನ್ನು ಎತ್ತಿ ಹಿಡಿದಿದ್ದಾರೆ. 'ಚಕ್ರೇಶ್ವರ ಚರಿತೆ'ಯ ವಸ್ತುವೇ ಅನಿರ್ದಿಷ್ಟವಾಗಿರುವಾಗ ಅಂತಹ ಊಹೆ ಇನ್ನೂ ದುರ್ಬಲವಾಗುತ್ತದೆ. ಆದರೆ ಜಯಕೀರ್ತಿ ಹೇಳುವ 'ಕರ್ಣಾಟೇಶ್ವರ ಕಥಾ' ಎಂಬ ಕೃತಿ ಐತಿಹಾಸಿಕ ಕಾವ್ಯವಾಗಿರುವ ಸಾಧ್ಯತೆಗಳಿರುವುದರಿಂದ, ಮತ್ತು ಬಾದಾಮಿ ಚಾಲುಕ್ಯರು ತಮ್ಮನ್ನು 'ಕರ್ಣಾಟ'ರೆಂದು ಕರೆದುಕೊಳ್ಳುವುದರಲ್ಲಿ ಹೆಮ್ಮೆಪಡುತ್ತಿದ್ದುದರಿಂದ ಆ ಪದ್ಯವು 'ಕರ್ಣಾಟೇಶ್ವರ ಕಥಾ'ಕ್ಕೆ ಸೇರಿದ್ದಿರಬಹುದೆಂಬ ನನ್ನ ಊಹೆಯನ್ನು (ನೋಡಿ : 'ಕವಿರಾಜಮಾರ್ಗಕ್ಕೆ ಹಿಂದಿನ ಕನ್ನಡ ಸಾಹಿತ್ಯ'. ಕವಿರಾಜಮಾರ್ಗ. ಐ.ಬಿ.ಎಚ್. ಪ್ರಕಾಶನ, ಪುಟ 28) ಇಲ್ಲಿ ಮತ್ತೊಮ್ಮೆ ಜ್ಞಾಪಿಸಲು ಬಯಸುತ್ತೇನೆ.

ಸಂಶೋಧನೆಯಲ್ಲಿ ಆಸಕ್ತರಾಗಿರುವವರೆಲ್ಲರ ಪರವಾಗಿ ಈ ಯುವ ಸಂಶೋಧಕನನ್ನು ಆ ಕ್ಷೇತ್ರಕ್ಕೆ ಸಂತೋಷದಿಂದ ಸ್ವಾಗತಿಸುತ್ತೇನೆ.

# ಪ್ರಾಚ್ಯವಸ್ತು ಸಂಶೋಧನೆ ಮತ್ತು ಸಂರಕ್ಷಣೆ

ಪ್ರಾಚ್ಯವಸ್ತು ಎಂದರೆ ಯಾವುದೇ ಪ್ರಾಚೀನವಾದ ಗಮನಾರ್ಹ ವಸ್ತು. 'ಗಮನಾರ್ಹ' ಎಂದರೆ ಮನುಷ್ಯನ ಸಂಸ್ಕೃತಿಯ ಬಗ್ಗೆ ಬೆಳಕು ಬೀರಬಲ್ಲ ಎಂದರ್ಥ ಮಾಡಿಕೊಳ್ಳಬೇಕು. ಉದಾಹರಣೆಗೆ ಬೀದಿಯಲ್ಲಿ ಬಿದ್ದಿರುವ ಕಲ್ಲು ಬಹಳ ಪ್ರಾಚೀನ. ಆದರೆ ನಮಗೆ ಮನುಷ್ಯನ ಬಗ್ಗೆ ಏನನ್ನೂ ತಿಳಿಸುವುದಿಲ್ಲ. ಆದರೆ ಅದು ಪ್ರಾಕ್ತನ ಮಾನವನ ಶಿಲಾಯುಧವಾಗಿದ್ದರೆ ಆಗ ಸಾಂಸ್ಕೃತಿಕವಾಗಿ ಅದರ ಬೆಲೆ ಬೇರೆಯಾಗುತ್ತದೆ. ಪ್ರಾಚ್ಯವಸ್ತುಗಳಲ್ಲಿ ಸಾಮಾನ್ಯವಾಗಿ ದೇವಾಲಯ, ಶಿಲ್ಪ, ಶಾಸನ, ನಾಣ್ಯ, ಪ್ರಾಕ್ತನ ನಿವೇಶನ (ಅದರಲ್ಲಿ ದೊರಕುವ ಅವಶೇಷಗಳು), ಕೋಟೆ, ಹಸ್ತಪ್ರತಿಗಳು, ಆಯುಧಗಳು ಇವೇ ಮುಂತಾದ ಕೆಲವು ಮುಖ್ಯವಾಗಿ ಸೇರ್ಪಡೆಯಾಗುತ್ತವೆ. ಪ್ರಾಚ್ಯವಸ್ತುಗಳೆಂದರೆ ನಿಕರವಾಗಿ ಯಾವುವು ಎಂಬ ಸಮಗ್ರ ಪಟ್ಟಿಯನ್ನು ತಯಾರಿಸುವುದು ಸಾಧ್ಯವಿಲ್ಲ. ಏಕೆಂದರೆ, ಯಾವುದೇ ಗಮನಾರ್ಹ ವಸ್ತುವೂ ಪ್ರಾಚ್ಯವಸ್ತುವೇ. ಅವೆಲ್ಲವನ್ನೂ ಸಂರಕ್ಷಿಸಿಡುವುದು ನಮ್ಮ ಮುಂದಿರುವ ಮುಖ್ಯವಾದ ಕೆಲಸ. ಅವುಗಳ ಬಗ್ಗೆ ವಿಚಾರ ಮಾಡುವುದು, ಅವುಗಳನ್ನು ಉಪಯೋಗಿಸಿಕೊಂಡು ದೇಶದ ಇತಿಹಾಸವನ್ನು ಬರೆಯುವುದು ಆಮೇಲೆ ನಡೆಯಬೇಕಾದ್ದು. ಆ ಕಾರಣದಿಂದ ಸಂರಕ್ಷಣೆಗೆ ಆದ್ಯ ಗಮನ ಸಲ್ಲಬೇಕಾದ್ದು ಅಗತ್ಯವಾಗಿದೆ.

### ದೇವಾಲಯ, ಶಿಲ್ಪಗಳು

ದೇವಾಲಯ ಮತ್ತು ಬಿಡಿ ಶಿಲ್ಪಗಳ ಸಂರಕ್ಷಣೆಯ ಬಗ್ಗೆ ಹೆಚ್ಚಿನ ಗಮನ ಸಲ್ಲುತ್ತಿದೆ. ಕೇಂದ್ರ ಸರ್ಕಾರದ ಪುರಾತತ್ತ್ವ ವಿಭಾಗ, ಕರ್ನಾಟಕ ಸರ್ಕಾರದ ಪುರಾತತ್ತ್ವ ವಿಭಾಗಗಳು ಈ ದಿಸೆಯಲ್ಲಿ ಕಾರ್ಯನಿರತವಾಗಿವೆ. ದೇವಾಲಯವೊಂದು ವಾಸ್ತು ಮತ್ತು ಶಿಲ್ಪಗಳ ದೃಷ್ಟಿಯಿಂದ ಬಹು ಗಮನಾರ್ಹವಾಗಿದ್ದರೆ ಆ ದೇವಾಲಯಕ್ಕೆ ಕಾವಲುಗಾರನನ್ನು ನೇಮಿಸುತ್ತಾರೆ. ಬೇಲೂರು, ಹಳೇಬೀಡುಗಳಂತಹ ಕಡೆ ಶಿಕ್ಷಣ ಪಡೆದ ಮಾರ್ಗದರ್ಶಕರೂ ದೊರೆಯುತ್ತಾರೆ. ಇಂತಹ ಮಾರ್ಗದರ್ಶಕರು ಸುಂದರ ದೇವಾಲಯಗಳಿರುವ ಕಡೆಗಳಲ್ಲೆಲ್ಲ ದೊರಕುವಂತಹ ಕಾಲ ಬಹು ದೂರ ಇರಲಾರದು. ಎಲ್ಲ ದೇವಾಲಯಗಳಿಗೂ ಕಾವಲುಗಾರರು ಇದ್ದಾರೆ ಎಂದು ಹೇಳಲು ಬರುವಂತಿಲ್ಲ. ಈ ಬಗ್ಗೆ ಆಗಾಗ್ಗೆ ಪತ್ರಿಕೆಗಳಲ್ಲಿ ಪತ್ರಗಳು ಪ್ರಕಟವಾಗುತ್ತಲೇ ಇವೆ. ತಮ್ಮ ಊರಿನ ದೇವಾಲಯದ ರಕ್ಷಣೆಗೆ ಕಾವಲುಗಾರ ಯಾರೂ ಇಲ್ಲ ಎಂದು ಜನರು ಹೇಳಿಕೊಂಡಿದ್ದಾರೆ. ತಕ್ಷಣಕ್ಕೆ ಎಲ್ಲ ಕಡೆಗೂ ಕಾವಲುಗಾರರನ್ನು ನೇಮಿಸಲು ಹಣದ ಕೊರತೆಯಿರಬಹುದು. ಪ್ರಾಚ್ಯವಸ್ತು ಇಲಾಖೆಯೂ ಒಂದು ಸರ್ಕಾರದ ಇಲಾಖೆ ತಾನೇ.

ಆದ್ದರಿಂದ ಅಲ್ಲಿಯ ಅಧಿಕಾರಿಗಳಿಗೂ ಆಡಳಿತದ ತೊಂದರೆಗಳಿರುತ್ತವೆ. ಕರ್ನಾಟಕ ಸರ್ಕಾರವು ಪ್ರಾಚ್ಯವಸ್ತು ಇಲಾಖೆಯ ಬಗ್ಗೆ ಇನ್ನೂ ಉದಾರದಿಂದ ನಡೆದುಕೊಂಡು, ಎಲ್ಲ ದೇವಾಲಯಗಳ ಸಂರಕ್ಷಣೆಗೆ ಸೂಕ್ತವಾದ ರಕ್ಷಣೆ ಒದಗಿಸಬೇಕೆಂದು ಆ ಇಲಾಖೆಗೆ ಸೂಚನೆ ಕೊಡುವುದಲ್ಲದೆ, ಅದಕ್ಕೆ ಬೇಕಾದ ಎಲ್ಲ ಅನುಕೂಲಗಳನ್ನು ತಾನು ಒದಗಿಸುವುದಾಗಿ ಭರವಸೆ ಕೊಡಬೇಕು.

**ಮಾರ್ಗದರ್ಶಕರ ನೇಮಕ**

ಈಗ ಇರುವಂತೆ, ಶಿಕ್ಷಣ ದೊರೆತ ಮಾರ್ಗದರ್ಶಕರ ಸಂಖ್ಯೆ ಬಹಳ ಇಲ್ಲ. ಆದರೆ ಕೆಲವು ದೇವಾಲಯಗಳಿಗಾದರೂ ಅಥವಾ ಊರುಗಳಿಗಾದರೂ ಅಂತಹ ಮಾರ್ಗದರ್ಶಕರು ದೊರೆಯುವಂತಿರಬೇಕು. ಒಂದು ಸಣ್ಣ ಉದಾಹರಣೆಯನ್ನು ಕೊಡುತ್ತೇನೆ. ಅಮೃತಾಪುರದಲ್ಲಿ ಒಂದು ಬಹು ಸುಂದರವಾದ ಹೊಯ್ಸಳ ದೇವಾಲಯವಿದೆ. ಅದಕ್ಕೆ ಒಬ್ಬ ಕಾವಲುಗಾರನೂ ಇದ್ದಾನೆ. ಅವನಿಗೆ ಆ ದೇವಾಲಯದ ಬಗ್ಗೆ ಹೆಚ್ಚು ತಿಳಿಯದು. ಅಲ್ಲಿಗೆ ಇಲಾಖೆಯ ಅಧಿಕಾರಿಗಳು ಬಂದು ಮಾತನಾಡಿಕೊಂಡಾಗ, ಅಥವಾ ತಿಳಿದವರು ಬೇರೆ ಪ್ರವಾಸಿಗರಿಗೆ ಅಲ್ಲಿಯ ಶಿಲ್ಪ ಇತಿಹಾಸಗಳನ್ನು ವಿವರಿಸುವಾಗ ತಾನು ಕೇಳಿಕೊಂಡು ಗ್ರಹಿಸಿದ್ದರ ಜೊತೆಗೆ ತನ್ನದೇ ಕೆಲವು ಸಂಗತಿಗಳನ್ನೂ ಸೇರಿಸಿ ವಿವರಿಸುತ್ತಾನೆ. ಇಂತಹ ಕಡೆಗಳಲ್ಲಿ ಕಾವಲುಗಾರನ ಜೊತೆ ಇನ್ನೊಬ್ಬ ಮಾರ್ಗದರ್ಶಕರನ್ನು ನೇಮಿಸಲು ಸಾಧ್ಯವಾಗದಿದ್ದರೆ, ಕಾವಲುಗಾರನಿಗೆ ಅವನ ಮನಸ್ಸಿಗೆ ಮುಟ್ಟುವಂತೆ ಕೆಲವು ಸಂಗತಿಗಳನ್ನು ತಿಳಿಸಿ ಅವನಿಗೆ ಅವನ ಮಟ್ಟದ ಶಿಕ್ಷಣ ಕೊಟ್ಟರೂ ಸಾಕು. ಆದರೆ ಬಳ್ಳಿಗಾವೆಯಂತಹ ಕಡೆಯಂತೂ ಕೆಲವು ಕಾವಲುಗಾರರನ್ನು ನೇಮಿಸಿ, ಒಬ್ಬ ಪ್ರತ್ಯೇಕ ಮಾರ್ಗದರ್ಶಿಯನ್ನೇ ಇಡುವುದು ಅತ್ಯಂತ ಅಗತ್ಯ. ನನಗೆ ತಿಳಿದಮಟ್ಟಿಗೆ ಅಲ್ಲಿ ಈಗ ಇರುವುದು ಒಬ್ಬ ಕಾವಲುಗಾರ ಮಾತ್ರ.

**ಮಾಹಿತಿ ಹಲಗೆಗಳ ಪ್ರದರ್ಶನ**

ಒಂದು ದೇವಾಲಯ ಅಥವಾ ಕೋಟೆ ನೋಡಲು ಹೋದವರಲ್ಲಿ ಕೆಲವರಿಗಾದರೂ ಅದರ ನಿಜವಾದ ಇತಿಹಾಸ ತಿಳಿಯಲು ಕಾತರ ಇರುತ್ತದೆ. ಅಲ್ಲಿ ಮಾರ್ಗದರ್ಶಿ ಇರಲಿ, ಇಲ್ಲದಿರಲಿ - ಆ ಇಡೀ ದೇವಾಲಯದ ಸಂಕ್ಷಿಪ್ತ ಇತಿಹಾಸವನ್ನೂ ಶೈಲಿಯನ್ನೂ ಅಲ್ಲಿ ಗಮನಿಸಬೇಕಾದ ಅಂಶಗಳನ್ನೂ ಒಂದು ದೊಡ್ಡ ಹಲಗೆಯ ಮೇಲೆ ದೇವಸ್ಥಾನದ ಅಥವಾ ಕೋಟೆಯ ಪ್ರವೇಶ ದ್ವಾರದಲ್ಲಿ ತೂಗು ಹಾಕುವುದು ಬಹಳ ಅಗತ್ಯ.

**ಜೀರ್ಣೋದ್ಧಾರದ ಅಗತ್ಯತೆ**

ಅನೇಕ ದೇವಾಲಯಗಳು ಬಹು ಹೀನಸ್ಥಿತಿಯಲ್ಲಿವೆ. ಹಾಗೆ ಹೀನಸ್ಥಿತಿಯಲ್ಲಿದ್ದ ಅನೇಕ ದೇವಾಲಯಗಳನ್ನು ಇಲಾಖೆಗಳು ಮರಸ್ತುಪಡಿಸಿವೆ. ಮರಸ್ತಿ ಕೆಲಸ ಬಹಳ ದುಬಾರಿಯದು ಎಂಬಲ್ಲಿ ಸಂದೇಹವಿಲ್ಲ. ಮತ್ತು ಅದು ಬಹು ಜವಾಬ್ದಾರಿಯ ಕೆಲಸವೂ ಹೌದು. ಈ ಬಗ್ಗೆ ಎಷ್ಟು ಕೆಲಸ ನಡೆದರೂ ಇನ್ನೂ ಆಗಬೇಕಾದ್ದು ಸಾಕಷ್ಟು ಇದೆ ಎನ್ನುವಂತಹ ಪರಿಸ್ಥಿತಿ ಇದೆ. ಆದರೂ ಇಲ್ಲಿಯವರೆಗೆ ಆಗಿರುವ ಕಾರ್ಯ ಆಗಬೇಕಾಗಿರುವ ಕಾರ್ಯದ ಜೊತೆ

ಹೋಲಿಸಿದಾಗ ಅಲ್ಪವೆಂದೇ ಹೇಳಬೇಕು. ಸದ್ಯಕ್ಕೆ ಪುರಾತತ್ವ ಇಲಾಖೆಗಳು ಮಹತ್ವದ ದೇವಾಲಯಗಳಿಗೆ ಗಮನ ಕೊಡುತ್ತಿರುವುದು ಸಹಜವಾಗಿದೆ. ಇದು ಸ್ವಾಭಾವಿಕ ಮತ್ತು ಅನಿವಾರ್ಯ ಮಾತ್ರವಲ್ಲ ಅಗತ್ಯ. ಇದು ದುಬಾರಿಯ ಕೆಲಸವೆಂದೂ ಇದಕ್ಕೆ ಹಣ, ಜನ ಎರಡೂ ಬೇಕಾದ್ದರಿಂದ ಇಂತಹ ಕೆಲಸಗಳು ತಕ್ಷಣ ಆಗಬೇಕೆಂದು ನಿರೀಕ್ಷಿಸುವುದು ತಪ್ಪಾಗುತ್ತದೆ. ಆದರೂ ಕೆಲವು ಚಿಕ್ಕ ದೇವಾಲಯಗಳಾದರೂ ನಿಜವಾಗಿಯೂ ಸಂರಕ್ಷಣ ಯೋಗ್ಯವಾಗಿದ್ದು ಅವುಗಳ ಕಡೆ ತಕ್ಷಣ ಗಮನ ಕೊಡಬೇಕಾದ್ದು ಬಹು ಅಗತ್ಯವಾಗಿದೆ. ಒಂದು ಸಣ್ಣ ಉದಾಹರಣೆಯನ್ನು ಕೊಡುತ್ತೇನೆ. ಹೊಸಕೋಟೆ ತಾಲ್ಲೂಕಿನ ದೊಡ್ಡಹುಲ್ಲೂರಿನ ಕೆರೆಗೆ ಅಂಟಿಕೊಂಡಂತೆ, ಹನ್ನೊಂದನೇ ಶತಮಾನದ ಶಾಸನವಿರುವ ಒಂದು ಸುಂದರ ಪುಟ್ಟ ದೇವಾಲಯವಿದೆ. ನೀರಿನ ಕೊರೆತ, ಮರದ ಬೇರುಗಳಿಂದಾಗಿ ಅದರ ಕಲ್ಲಿನ ಗೋಡೆಗಳಲ್ಲಿ ಉದ್ದನೆಯ ದೊಡ್ಡ ಬಿರುಕುಗಳು ಕಾಣಿಸಿಕೊಂಡು ಇಂದೋ ನಾಳೆಯೋ ಎನ್ನುವಂತಹ ಸ್ಥಿತಿಯಲ್ಲಿದೆ. ಇಂತಹ ದೇವಾಲಯವೊಂದು ಬಿದ್ದುಹೋದರೆ ಅದು ಎಂದೆಂದಿಗೂ ನಾಶವಾದಂತೆಯೇ. ಒಂದು ಸುಂದರ ದೇವಾಲಯ ತಕ್ಕಮಟ್ಟಿಗೆ ಗಟ್ಟಿಮುಟ್ಟಾಗಿದ್ದು, ಅದಕ್ಕೆ ರಿಪೇರಿ ಸ್ವಲ್ಪ ತಡವಾದರೂ ಚಿಂತೆಯಿಲ್ಲವೆಂಬಂತಿದ್ದರೆ, ಅದಕ್ಕಿಂತ ಬಿದ್ದುಹೋಗುವಂತಿರುವ ಸಾಮಾನ್ಯ ದೇವಾಲಯಗಳ ರಿಪೇರಿಗೆ ತುರ್ತು ಗಮನ ಕೊಡುವುದು ಅಗತ್ಯ.

**ಶಿಲ್ಪಗಳ ಸಂರಕ್ಷಣೆ, ಊರಿನ ಜನರ ಸಹಕಾರ**

ದೇವಾಲಯಗಳನ್ನು ಕದಿಯಲು ಸಾಧ್ಯವಿಲ್ಲ, ಆದರೆ ಬಿಡಿ ಶಿಲ್ಪಗಳನ್ನು ಕದಿಯಬಹುದು, ಅಥವಾ ಈಗಾಗಲೇ ಕದ್ದು ಮಾರಿ ಶ್ರೀಮಂತರಾಗಿರುವವರೂ ಹಲವರುಂಟು. ಕಳ್ಳತನದಲ್ಲಿ ಶಿಲ್ಪಗಳನ್ನು ಪರದೇಶಕ್ಕೆ ಸಾಗಿಸುವುದು ಒಂದು ಲಾಭದಾಯಕ ಉದ್ದಿಮೆ. ಈಗ ಅಂತಹ ಕಳ್ಳ ವ್ಯಾಪಾರಕ್ಕೆ ಏಟು ಬಿದ್ದಿದೆಯಾದರೂ, ಅದು ನಿಂತುಹೋಗಿದೆಯೆಂದಾಗಲಿ ಅಥವಾ ಮುಂದೆ ನಿಂತುಹೋಗುತ್ತದೆಯೆಂದಾಗಲಿ ಭಾವಿಸುವುದು ಮೂರ್ಖತನವಾಗುತ್ತದೆ. ವ್ಯಕ್ತಿಗಳ ಬಳಿ, ಸಂಸ್ಥೆಗಳ ಹತೋಟಿಯಲ್ಲಿ ಇರುವ ಶಿಲ್ಪ, ನಾಣ್ಯ ಇತ್ಯಾದಿಗಳನ್ನು ರಿಜಿಸ್ಟರ್ ಮಾಡಿಸುವ ಕಾಯಿದೆ ಬಂದಿದೆ. ಇದರಿಂದ ಕಳ್ಳ ವ್ಯಾಪಾರ ಎಷ್ಟೋ ಕಡಮೆಯಾದೀತು. ಆದರೂ ಹಳ್ಳಿ ಹಳ್ಳಿಗಳಲ್ಲಿ ಅನಾಥವಾಗಿ ಬಿದ್ದಿರುವ ಎಷ್ಟೋ ಅಪೂರ್ವ ಶಿಲ್ಪಗಳನ್ನು ಯಾರು ರಿಜಿಸ್ಟರ್ ಮಾಡಿಸುತ್ತಾರೆ ? ಅವುಗಳ ಜವಾಬ್ದಾರಿಯನ್ನು ಯಾರು ಹೊರುತ್ತಾರೆ ? ಮೊದಲು ಆಗಬೇಕಾಗಿರುವ ಕಾರ್ಯವೆಂದರೆ ಇದು : ಭಗ್ನವಾಗದಿರುವ, ಭಗ್ನವಾಗಿರುವ ಅಥವಾ ಯಾವುದೇ ಸ್ಥಿತಿಯಲ್ಲಿರುವ ಶಿಲ್ಪಗಳ ವೀಕ್ಷಣ ಕಾರ್ಯ ಮೊದಲಾಗಬೇಕು. ಅವೆಲ್ಲವನ್ನೂ ಹತ್ತಿರದ ಸುರಕ್ಷಿತ ಸ್ಥಳಗಳಿಗೆ ಸಾಗಿಸುವ ಕಾರ್ಯ ನಡೆಯಬೇಕು. ನಾಡಿನ ವಿಸ್ತಾರ, ಅಂತಹ ಶಿಲ್ಪಗಳ ಸಂಖ್ಯೆ, ಇದನ್ನು ಗಮನಿಸಿದಾಗ ಅದು ಅಷ್ಟು ಸುಲಭ ಕಾರ್ಯವೆಂದೇನೂ ಅನಿಸುವುದಿಲ್ಲ. ಆದರೂ ಇದು ಅಗತ್ಯವಾಗಿ ಆಗಬೇಕಾದ ಕಾರ್ಯ. ಒಂದು ಹಳ್ಳಿಯಲ್ಲಿ ಅರಕ್ಷಿತವಾಗಿ ಬಿದ್ದಿರುವ ಶಿಲ್ಪವನ್ನು ಅದೇ ಊರಿನ ದೇವಾಲಯಕ್ಕೋ ಗ್ರಾಮಪಂಚಾಯತಿ

ಮನೆಗೋ ಸಾಗಿಸಿದರೂ ಸಾಕು. ಅವುಗಳಲ್ಲಿ ಸುಂದರವಾದುದನ್ನು ಅದೇ ಜಿಲ್ಲೆಯ ಮ್ಯೂಜಿಯಮ್‌ಗೆ ಸಾಗಿಸಬಹುದು. ಮುಂದೆ ನಾನು ಪ್ರತಿಪಾದನೆ ಮಾಡುವಂತೆ, ಈ ವಿಷಯದಲ್ಲಿ ಎಲ್ಲವನ್ನೂ ಸರ್ಕಾರವೇ ಮಾಡಬೇಕೆಂದು ನಿರೀಕ್ಷಿಸುವುದು ತಪ್ಪು. ಆಯಾ ಊರಿನ ಜನ ಆ ಕೆಲಸವನ್ನು ಕೈಗೊಳ್ಳುವುದು ಅಪೇಕ್ಷಣೀಯವೆಂಬುದೇನೋ ನಿಜ. ಆದರೆ ಅವರು ಎಚ್ಚರದಪ್ಪಿ ವಿಗ್ರಹಗಳನ್ನು ಭಗ್ನ ಮಾಡುವ ಸಂಭವವೂ ಉಂಟು. ಬಹುಶಃ ಪುರಾತತ್ವ ಇಲಾಖೆಯ ಅಧಿಕಾರಿಯೊಬ್ಬರ ಮಾರ್ಗದರ್ಶನದಲ್ಲಿ, ಊರಿನ ಜನರಿಂದ ಶಿಲ್ಪಗಳ ಸಂರಕ್ಷಣೆ ಕಾರ್ಯ ನಡೆದರೆ ಎಷ್ಟೋ ಕೆಲಸವಾದೀತು.

**ಕೋಟೆಗಳ ರಕ್ಷಣೆ**

ದೇವಾಲಯ, ಶಿಲ್ಪಗಳ ಕಡೆ ನಮ್ಮ ಗಮನ ಹೋಗಿರುವಂತೆ ಕೋಟೆಗಳ ಕಡೆ ನಮ್ಮ ಗಮನ ಇನ್ನೂ ಅಷ್ಟಾಗಿ ಹರಿದಂತೆ ತೋರುವುದಿಲ್ಲ. ಒಂದು ಸಣ್ಣಕೋಟೆಯ ಸಂರಕ್ಷಣೆಯೂ ಅಗಾಧ ಕಾರ್ಯವಾಗಿರುವಾಗ ದೊಡ್ಡ ಕೋಟೆಗಳ ಬಗ್ಗೆ ಇನ್ನು ಹೇಳಲೇಬೇಕಾಗಿಲ್ಲ. ಆದರೂ ಅವುಗಳ ಸಂರಕ್ಷಣೆ ಅಗತ್ಯ. ಜನ ಅಗೆದು ಹಾಳು ಮಾಡುವುದನ್ನು ನಿಲ್ಲಿಸಬೇಕು. ಬೆಳೆದಿರುವ ಮರಗಿಡಗಳನ್ನು ಕಡಿದುಹಾಕಿ ಗೋಡೆಗಳು ಬಿರುಕು ಬಿಡದಂತೆ ಮಾಡಬೇಕು. ನಮಗೆ ತಿಳಿದಿರುವಂತೆಯೇ ಅನೇಕ ಕೋಟೆ, ಬುರುಜುಗಳು ನೆಲಸಮವಾಗಿವೆ, ಇನ್ನು ಕೆಲವು ಆಗುವುದರಲ್ಲಿವೆ. ಇವುಗಳ ಸಂರಕ್ಷಣೆ ಬೇಗ ಆಗಬೇಕಾಗಿರುವ ಕೆಲಸ. ಮತ್ತು ನಮ್ಮ ವಾಸ್ತುಶಿಲ್ಪಗಳಿಗೆ ಸಂಬಂಧಿಸಿದಂತೆ ನಡೆದಿರುವ ಸಂಶೋಧನೆ ಕೋಟೆಗಳ ಬಗ್ಗೆ ಆಗಿಲ್ಲ. ದಖನ್ನಿನ ಕೋಟೆಗಳ ಬಗ್ಗೆ ಇಂಗ್ಲೀಷಿನಲ್ಲಿ ಒಂದು ಚಿಕ್ಕ ಪುಸ್ತಕ ಪ್ರಕಟವಾಗಿದೆ. ಬಾದಾಮಿ ಕೋಟೆಯ ಬಗ್ಗೆ ಒಬ್ಬರು ಪಿಎಚ್.ಡಿ ಗೆ ಸಂಶೋಧನೆ ಮಾಡುತ್ತಿರುವುದು ನನಗೆ ಗೊತ್ತು. ಎಷ್ಟು ಕೋಟೆಗಳು ಇವೆ ಎಂಬುದರ ವೀಕ್ಷಣೆ ನಡೆಯಬೇಕಾಗಿರುವುದು ಮೊದಲ ಕಾರ್ಯ. ಎಷ್ಟೋ ಹಳ್ಳಿಗಳಲ್ಲಿ ಕೋಟೆಯ ಗೋಡೆ ಇರುವುದಿಲ್ಲ, ಹಿಂದೆಯೂ ಇದ್ದಿರಲಾರದು. ಆದರೆ ಸ್ವಲ್ಪ ಎತ್ತರದ ದಿಣ್ಣೆ, ಅದರ ಸುತ್ತ ತಗ್ಗು, ದಿಣ್ಣೆಯ ಮೇಲೆ ಗೋಡೆಯ ಜಾಗದಲ್ಲಿ ದಿಣ್ಣೆಯ ಅಂಚಿನಲ್ಲಿ ಮನೆಗಳು. ದಿಣ್ಣೆಗೆ ಪ್ರವೇಶ ದ್ವಾರ ಒಂದೇ - ಇದು ಕೋಟೆ ಹೋಲುವಂತಹ ಒಂದು ರಚನೆ. ಇಂತಹ ವಿನ್ಯಾಸದ 'ಕೋಟೆ'ಗಳ ವೀಕ್ಷಣೆಯೂ ಆಗಬೇಕು. ಬುರುಜು ಅಥವಾ ಹುಡೇವುಗಳೂ ಈ ವೀಕ್ಷಣೆಯಲ್ಲಿ ಸೇರಬೇಕು. (ಚನ್ನಗಿರಿ ತಾಲ್ಲೂಕು ಸಂತೇಬೆನ್ನೂರಲ್ಲಿದ್ದ ದೊಡ್ಡ ಬುರುಜುಗಳು ಈಗ ಬಹುತೇಕ ನಾಶವಾಗಿವೆ). ಅವುಗಳ ರಕ್ಷಣೆಯ ಕಡೆ ಗಮನ ಕೊಡಬೇಕು.

ಕೋಟೆಗಳ ವಾಸ್ತುವಿನ್ಯಾಸ, ಆಯಕಟ್ಟು, ಇತಿಹಾಸಗಳ ಬಗ್ಗೆ ಇನ್ನೂ ಸಂಶೋಧನೆ ನಮ್ಮಲ್ಲಿ ನಡೆಯಬೇಕಾಗಿದೆ. ಕನ್ನಡ ಸಾಹಿತ್ಯ, ಶಾಸನಗಳಲ್ಲಿ ಬರುವ ಕೋಟೆ ವರ್ಣನೆಗಳು, ವಿದೇಶೀಯರ ಬರವಣಿಗೆಗಳನ್ನು ಈ ವಿಷಯದಲ್ಲಿ ನಾವು ಧಾರಾಳವಾಗಿ ಬಳಸಿಕೊಳ್ಳಬಹುದು.

**ಕವಿಗಳ ಸಮಾಧಿಗಳ ಸಂರಕ್ಷಣೆ**

ವಾಸ್ತವವಾಗಿ ಇಲ್ಲದ ಪಂಪನ 'ಸಮಾಧಿ'ಯ ಬಗ್ಗೆ ನಮ್ಮ ಪತ್ರಿಕೆಗಳಲ್ಲಿ ಕೆಲ ಕಾಲ ಘಯ್ಯಲು ಎದ್ದುದು ಈಗಲೂ ನೆನಪಿರಬಹುದು. ಆದರೆ, ನಿಜವಾಗಿಯೂ ಇರುವ ರಾಘವಾಂಕನ ಸಮಾಧಿ (ಬೇಲೂರಿನಲ್ಲಿ) ಷಡಕ್ಷರಿಯ ಸಮಾಧಿ (ಯಳಂದೂರಿನಲ್ಲಿ) ಸರ್ವಜ್ಞನ ಹುಟ್ಟಿನ ಜಾಗ (ಅಬ್ಬಲೂರಲ್ಲಿ) ಇವುಗಳ ಕಡೆ ಗಮನ ಕೊಟ್ಟಿಲ್ಲ. ಇವನ್ನೂ ರಾಷ್ಟ್ರೀಯ ಸ್ಮಾರಕಗಳೆಂದು ಘೋಷಿಸಿ ಅವುಗಳ ರಕ್ಷಣೆ ಕಾರ್ಯವನ್ನು ಕೈಗೊಳ್ಳಬೇಕು.

**ಶಾಸನಗಳ ಸಂರಕ್ಷಣೆ**

ಶಾಸನ ಕ್ಷೇತ್ರದಲ್ಲಿ ನಡೆಯಬೇಕಾಗಿರುವ ಕೆಲಸವನ್ನು ಎರಡು ವಿಭಾಗಗಳಾಗಿ ವಿಂಗಡಿಸಬಹುದು. ಒಂದು ಪರಿವೀಕ್ಷಣೆ, ಪಾಠ ಶೋಧನೆ ಮತ್ತ ಪ್ರಕಟಣೆ; ಮತ್ತೊಂದು ಸಂಶೋಧನೆ. ದಕ್ಷಿಣ ಕರ್ನಾಟಕ ಅಥವಾ ಹಳೆಯ ಮೈಸೂರಿಗೆ ಸಂಬಂಧಿಸಿದಂತೆ ಶಾಸನಗಳ ಪರಿವೀಕ್ಷಣೆ ಕಾರ್ಯ ಸಮರ್ಪಕವಾಗಿ ನಡೆದಿದೆ. ಅಲ್ಲಿ ಇಲ್ಲಿ ಕೆಲವು ಹೊಸ ಶಾಸನಗಳು ಪತ್ತೆಯಾಗಬಹುದು. ಅಥವಾ ಪ್ರಕಟವಾದ ಶಾಸನವನ್ನೇ ಮತ್ತೆ ಓದಿ ಹಿಂದಿನ ಪಾಠವನ್ನು ಪರಿಷ್ಕರಿಸಬಹುದು. ಒಟ್ಟಾರೆ, ಹಳೆಯ ಮೈಸೂರಿನ ಶಾಸನಗಳ ಪ್ರಕಟಣ ಕಾರ್ಯ ತೃಪ್ತಿಕರವೆಂದೇ ಹೇಳಬೇಕು. ಆದರೆ ಉತ್ತರ ಕರ್ನಾಟಕದಲ್ಲಿ, ಅದರಲ್ಲೂ ಕಲ್ಯಾಣ ಕರ್ನಾಟಕ ಪ್ರದೇಶದಲ್ಲಿ ಆಗಿರುವ ಶಾಸನ ಪರಿವೀಕ್ಷಣ ಕಾರ್ಯ ಬಹಳ ಅತೃಪ್ತಿಕರ. ಜೊತೆಗೆ, ಇಂದಿನ ಕರ್ನಾಟಕದ ಹೊರಗಿರುವ, ಒಂದು ಕಾಲಕ್ಕೆ ಅಚ್ಚಗನ್ನಡ ಪ್ರದೇಶಗಳಾಗಿದ್ದ ಜಾಗಗಳಲ್ಲಿ ಇರುವ ಕನ್ನಡ ಶಾಸನಗಳ ವೀಕ್ಷಣೆ, ಪ್ರಕಟಣೆಗಳ ಕಾರ್ಯದಲ್ಲಿ ಹತ್ತರಲ್ಲೊಂದು ಭಾಗವೂ ಆಗಿಲ್ಲ. ಮಹಾರಾಷ್ಟ್ರದ ನಾಂದೇಡ್ ಜಿಲ್ಲೆಯ ಶಾಸನಗಳಂತಹ ಸಂಪುಟಗಳು ಕರ್ನಾಟಕಕ್ಕೆ ಅಂಟಿಕೊಂಡಂತಿರುವ ಎಲ್ಲ ಜಿಲ್ಲೆಗಳಿಗೂ ಬಂದರೆ ಆಗ ನಮ್ಮ ಇತಿಹಾಸದ ಮೇಲೆ ಎಷ್ಟೋ ಬೆಳಕು ಬೀಳುವಂತಾಗುತ್ತದೆ. ಮೈಸೂರಿನ ಕೇಂದ್ರ ಶಾಸನ ಇಲಾಖೆಯಲ್ಲಿ ಪಾಠ ಶೋಧನೆಯಾಗಿ ಪ್ರಕಟವಾಗದಿರುವ ಸಾವಿರಾರು ಶಾಸನಗಳು ಇವೆ. ಅವು ಬೇಗ ಪ್ರಕಟವಾಗಬೇಕಾಗಿದೆ.

**ಉತ್ತರ ಕರ್ನಾಟಕದ ಶಾಸನಗಳ ಜಿಲ್ಲಾವಾರು ಪ್ರಕಟಣೆ**

ಹಳೆಯ ಮೈಸೂರಿನ ಶಾಸನಗಳು ಬೇರೆ ಬೇರೆ ಸಂಪುಟಗಳಲ್ಲಿ ಜಿಲ್ಲಾವಾರು ದೊರಕುತ್ತವೆ (ಮತ್ತು ಆ ಸಂಪುಟಗಳು ಪುನರ್ಮುದ್ರಣವಾಗುತ್ತಿವೆ). ಆದರೆ ಉತ್ತರ ಕರ್ನಾಟಕದ ಶಾಸನಗಳಿಗೆ ಆ ಸೌಲಭ್ಯವಿಲ್ಲ. ಬೇರೆ ಬೇರೆ ಶಾಸನ ಸಂಪುಟಗಳಲ್ಲಿ ಮತ್ತು ಪತ್ರಿಕೆಗಳಲ್ಲಿ ಚದುರಿಹೋಗಿರುವ ಶಾಸನಗಳನ್ನು ಜಿಲ್ಲಾವಾರು ಸಂಪುಟಗಳಲ್ಲಿ ಹೊರತರುವ ಮಾತುಗಳು ಕೇಳಿಬರುತ್ತಿವೆ. ಇದು ಅಗತ್ಯವಾಗಿ ಆಗಬೇಕಾದ ಕೆಲಸ ಮತ್ತು ಇಂತಹ ಯೋಜನೆಯೊಂದು ಬಂದರೆ ಸರ್ಕಾರ ಮುಕ್ತಹಸ್ತದಿಂದ ಹಣವನ್ನು ನೀಡಬೇಕು. ಉತ್ತರ ಭಾರತದ ರಾಜವಂಶಗಳ ಶಾಸನಗಳು ಪ್ರತ್ಯೇಕ ಸಂಪುಟಗಳಲ್ಲಿ ಪ್ರಕಟವಾಗಿವೆ. ಅದೇ

ರೀತಿ ಕರ್ನಾಟಕದಲ್ಲೂ ಬಾದಾಮಿ ಚಾಲುಕ್ಯ, ರಾಷ್ಟ್ರಕೂಟ ಇತ್ಯಾದಿ ರಾಜವಂಶಗಳಿಗೇ ಮೀಸಲಾದ ಶಾಸನ ಸಂಪುಟಗಳು ಹೊರಬರುವುದು ಅಗತ್ಯವಾಗಿದೆ.

**ಶಾಸನ ಶಿಲೆಗಳ ಸಂರಕ್ಷಣೆ.**

ಒಂದು ಶಾಸನವನ್ನು ಪತ್ತೆಹಚ್ಚಿ, ಓದಿ ಅದನ್ನು ಪ್ರಕಟಿಸಿದರೆ ಅಲ್ಲಿಗೆ ಆ ಶಾಸನ ಶಿಲೆಯ ಉಪಯೋಗ ಮುಗಿಯಿತು ಎಂದು ಭಾವಿಸಬೇಕೆ ? ಒಂದು ದೇವಾಲಯ ಅಥವಾ ಶಿಲ್ಪದಂತೆ ಅದು 'ಪ್ರೇಕ್ಷಣೀಯ'ವೇನೂ ಅಲ್ಲ. ಆದ್ದರಿಂದ ಅವುಗಳನ್ನು ಸಂರಕ್ಷಿಸುವ ಅವಶ್ಯಕತೆ ಇದೆಯೇ ಎಂಬ ಪ್ರಶ್ನೆ ಏಳಬಹುದು. ಅವು ಹಾಳಾಗಲಿ ಎಂದು ಯಾರೂ ಹೇಳದಿದ್ದರೂ, ದೇವಾಲಯಗಳಂತೆ ಶಿಲ್ಪಗಳಂತೆ ಅವು ಸಂರಕ್ಷಣೀಯ ಎಂದು ಬಲವಾಗಿ ವಾದಿಸುವವರು ಹೆಚ್ಚು ಜನ ಸಿಗಲಾರರು. ಆದರೂ ಅವು ಸಂರಕ್ಷಣೀಯವೆಂಬುದರಲ್ಲಿ ಸಂದೇಹವಿಲ್ಲ. ಒಂದು ಊರಲ್ಲಿ ಇರುವ ಶಾಸನವನ್ನು ಅಲ್ಲಿಯ ಜನ ಈಗ ಓದಲಾರರು. ಅದು ಪ್ರಕಟವಾಗಿದೆಯೆಂಬ ಸಂಗತಿಯೂ ಅವರಿಗೆ ತಿಳಿದಿರಲಾರದು. ಈ ಪರಿಸ್ಥಿತಿ ಹೀಗೆಯೇ ಮುಂದುವರಿಯಬಾರದು. ಇಂದಲ್ಲ ನಾಳೆ ಆ ಹಳ್ಳಿಯ ಜನ ತಮ್ಮ ಗ್ರಾಮದ ಇತಿಹಾಸದ ಬಗ್ಗೆ ಅಭಿಮಾನ ತಾಳಿದಾಗ, ತಮ್ಮ ಊರಿನ ಶಾಸನ ಪುಸ್ತಕದಲ್ಲಿ ನೋಡಲು ಸಿಗುತ್ತಿದ್ದು ಅದು ಲಿಖಿಸಿದ್ದ ಶಿಲೆ ಮಾಯವಾಗಿದ್ದರೆ ಅವರು ತಮ್ಮ ಹಿಂದಿನ ಜನಾಂಗವನ್ನು ಶಪಿಸದೆ ಇರಲಾರರು. ಆ ಊರಿನ ದೇವಾಲಯ, ಶಿಲ್ಪದಷ್ಟೇ ಅಲ್ಲಿಯ ಶಿಲಾಶಾಸನಗಳು ಆ ಊರಿನ ಇತಿಹಾಸವನ್ನು ಹೇಳುತ್ತವೆ; ತೇದಿ ಸಮೇತ, ಹೆಸರುಗಳ ಸಮೇತ ಮಾಹಿತಿಯನ್ನು ಒದಗಿಸುತ್ತವೆ. ಶಾಸನಗಳ ಉಳಿವಿಗೆ ನಾವು ತೀವ್ರ ಗಮನ ಕೊಡದಿದ್ದರೆ ಅವು ಭೂಗತವಾಗಿ, ಒಡೆದು ಮನೆಯ ಮೆಟ್ಟಲಿಗೋ ಬಟ್ಟೆ ಒಗೆಯುವ ಕಲ್ಲಿಗೋ ಬಳಕೆಯಾಗಲಾರಂಭವಾಗುತ್ತವೆ. ಈ ವಿಷಯದಲ್ಲಿ ನಾನು ಕೊಡುವ ಸಲಹೆ ಇದು. ಪುರಾತತ್ವ ಇಲಾಖೆಗಿಂತ ಈ ವಿಷಯದಲ್ಲಿ ಆಯಾ ಊರಿನ ಜನ ತಮ್ಮ ಸರಹದ್ದಿನಲ್ಲಿರುವ ಶಾಸನಗಳ ಬಗ್ಗೆ ತೀವ್ರ ಆಸಕ್ತಿ ತಳೆಯುವಂತೆ ಮಾಡುವುದೊಂದೇ ನಮಗಿರುವ ಮಾರ್ಗ. ಶಾಸನಗಳ ಬಗ್ಗೆ ಪ್ರಚಾರ ನಡೆದು ವೀರಗಲ್ಲು, ಮಾಸ್ತಿಗಲ್ಲುಗಳನ್ನು ಶಿಲ್ಪಗಳ ಸಹಾಯದಿಂದ ಗುರುತಿಸಬಹುದೆಂಬುದನ್ನು ಅವರಿಗೆ ಮನವರಿಕೆ ಮಾಡಿಕೊಡಬೇಕು. ಶಾಸನಗಳಲ್ಲಿ ಗುಪ್ತನಿಧಿ ದೊರಕುವ ವಿಷಯ ಬರೆದಿಲ್ಲ, ಆ ಊರಿನ ಇತಿಹಾಸ ಲಿಖಿತವಾಗಿದೆಯೆಂಬುದನ್ನು ಅವರಿಗೆ ತಿಳಿಸಬೇಕು. ಸರ್ಕಾರದ ವಾರ್ತಾ ಇಲಾಖೆ, ಪುರಾತತ್ವ ಇಲಾಖೆಗಳು ಸಂಚಾರಿ ವಾಹನಗಳ, ಚಲನಚಿತ್ರಗಳ ಮೂಲಕ ಹಳ್ಳಿ ಹಳ್ಳಿಯ ಜನರಿಗೆ ಶಾಸನಗಳ ಬಗ್ಗೆ ಅರಿವನ್ನು ಮೂಡಿಸಲು ಶ್ರಮಿಸಬೇಕು. ಊರಿನ ಗ್ರಾಮಪಂಚಾಯಿತಿ ಅಥವಾ ಯುವಕ ಸಂಘ ಅಥವಾ ಶಾಲೆ ಅವುಗಳನ್ನು ಒಂದು ಕಡೆ ಸಾಗಿಸಿ ರಕ್ಷಿತವಾಗಿ ಇಡುವಂತೆ ಪ್ರೋತ್ಸಾಹಿಸಬೇಕು. ದೇವಾಲಯದ ಪೌಳಿ ಅಥವಾ ಅಂಗಳ, ಪಂಚಾಯ್ತಿ ಮನೆಯ ಅಂಗಳ ಒಳ್ಳೆಯ ಭಾಗಗಳು. ಶಾಲೆಯ ಮುಂಭಾಗದಲ್ಲಿ ಅವನ್ನು ಪ್ರದರ್ಶಿಸಿದರೆ ಶಾಲೆಗೂ ಶೋಭೆ ತರುತ್ತದೆ. ಊರಲ್ಲಿ ಪ್ರೌಢಶಾಲೆ ಇದ್ದರೆ ಅವರು ತಮ್ಮ ಪುಸ್ತಕ ಭಂಡಾರಕ್ಕೆ ಎಪಿಗ್ರಾಫಿಯ ಕರ್ನಾಟಿಕದಂತಹ ಶಾಸನ ಸಂಪುಟಗಳನ್ನು ತರಿಸಿಟ್ಟುಕೊಳ್ಳಬೇಕು.

ಕರ್ನಾಟಕವಲ್ಲಿ ಪ್ರಕಟವಾಗಿರುವ, ಹಸ್ತಪ್ರತಿಯಲ್ಲಿರುವ ಎಲ್ಲ ಶಾಸನಗಳ ಯಾದಿಯೊಂದು ಸಿದ್ಧವಾಗಬೇಕಾಗಿದೆ. ಒಂದು ಊರಲ್ಲಿ ಇರುವ ಶಾಸನ ಪ್ರಕಟವಾಗಿದೆಯೇ ಇಲ್ಲವೇ ಎಂಬುದನ್ನು ತಿಳಿಯುವುದು ಸದ್ಯಕ್ಕೆ ತೀರ ಶ್ರಮದ ಕೆಲಸ. ಊರುಗಳ ಅನುಕ್ರಮಣಿಕೆಯಲ್ಲಿ ಅಂತಹ ಯಾದಿಯೊಂದು ದೊರಕುವುದಾದರೆ ಶಾಸನ ಸಂಶೋಧನೆಯ ಕೆಲಸ ಎಷ್ಟೋ ಸುಲಭವಾದೀತು.

ತಾಮ್ರಪಟಗಳು, ನಾಣ್ಯಗಳು, ಮುದ್ರೆಗಳು ಇತ್ಯಾದಿ ಲೋಹದ ಸ್ಮಾರಕಗಳು ವೈಯಕ್ತಿಕ ಆಸ್ತಿಗಳಾಗಿರುತ್ತವೆ. ಅವನ್ನು ಪತ್ತೆ ಹಚ್ಚುವುದು ಅಷ್ಟು ಸುಲಭದ ಕೆಲಸವಲ್ಲ. ಈ ವಿಷಯದಲ್ಲಿ ಕಾನೂನಿಗಿಂತ ಜನತೆಯಲ್ಲಿ ಅವುಗಳ ಮಹತ್ವದ ಬಗ್ಗೆ ಅರಿವನ್ನು ಮೂಡಿಸುವುದು ಬಹು ಉತ್ತಮ ಮಾರ್ಗ.

**ಹಸ್ತಪ್ರತಿಗಳ ದುಃಸ್ಥಿತಿ**

ಈಗ ಹಸ್ತಪ್ರತಿಗಳ ವಿಚಾರಕ್ಕೆ ಬರುತ್ತೇನೆ. ಹಸ್ತಪ್ರತಿಗಳ ವಿಷಯದಲ್ಲಿ ಆಗಿರುವಷ್ಟು ಅನಾಹುತ ಬಹುಶಃ ಮತ್ತೆಲ್ಲೂ ಆಗಿಲ್ಲ. ತಾಳೆಗರಿಗಳು ಮತ್ತು ಕಾಗದ ಬಾಳಿಕೆ ಬರುವುದಿಲ್ಲ. ನೀರು, ಹೊಗೆ, ಹುಳುಗಳ ಹಾವಳಿಗೆ ಬೇಗ ತುತ್ತಾಗುತ್ತವೆ. ಹೀಗಾಗಿ ಸಾವಿರಾರು ಹಸ್ತಪ್ರತಿಗಳು ಮತ್ತೆ ಕೈಗೆ ಸಿಗದಂತೆ ಹಾಳಾಗಿವೆ. ಮೂಟೆಗಟ್ಟಲೆ ತಾಳೆ ಗ್ರಂಥಗಳನ್ನು ಜನ ತಿಪ್ಪೆಗೆ ಎಸೆದೋ, ಬೆಂಕಿಯಲ್ಲಿ ಹಾಕಿಯೋ, ನದಿಗೆ ಹಾಕಿಯೋ ನಾಶಪಡಿಸಿದ್ದಾರೆ. ಆದರೂ ನಮ್ಮ ಪುಣ್ಯ - ಅಷ್ಟೋ ಇಷ್ಟೋ ಇನ್ನೂ ಉಳಿದುಕೊಂಡಿವೆ. ಮೈಸೂರು, ಬೆಂಗಳೂರು, ಧಾರವಾಡಗಳಲ್ಲಿ ಅವುಗಳನ್ನು ಸಂಗ್ರಹಿಸಿಡುವ ಸಂಸ್ಥೆಗಳಿವೆ. ಮೂಡಬಿದರೆಯಂತಹ ಕಡೆಗಳಲ್ಲಿ ಧಾರ್ಮಿಕ ಸಂಸ್ಥೆಗಳು ಅವನ್ನು ಕಾಪಾಡುತ್ತಿವೆ. ಆದರೂ ಅವುಗಳನ್ನು ಸಂಗ್ರಹಿಸುವ ವ್ಯವಸ್ಥಿತ ಕಾರ್ಯಕ್ರಮವೊಂದು ಇಲ್ಲಿಯವರೆಗೂ ನಡೆದಿಲ್ಲ. ಹಸ್ತಪ್ರತಿಗಳನ್ನು ಅವುಗಳ ಒಡೆಯರ ಹತ್ತಿರ ಬಿಡುವುದರಲ್ಲಿ ಅರ್ಥವಿಲ್ಲ. ಆದರೆ ಹಸ್ತಪ್ರತಿಗಳನ್ನು ಅವುಗಳ ಒಡೆಯರಿಂದ ಸಂಗ್ರಹಿಸುವುದು ತೀರ ಕಷ್ಟದ ಕೆಲಸ. ಅವುಗಳ ಬಗ್ಗೆ ಅವರಿಗೆ ಭಾವನಾತ್ಮಕ ಸಂಬಂಧಗಳಿರುತ್ತವೆ. ಆದ್ದರಿಂದ ಕಾನೂನು ಮಾಡಿ ತಮ್ಮ ಹತ್ತಿರವಿರುವ ಹಸ್ತಪ್ರತಿಗಳನ್ನೆಲ್ಲ ಸರ್ಕಾರಕ್ಕೆ ಒಪ್ಪಿಸಬೇಕೆಂದು ಒತ್ತಾಯಪಡಿಸುವುದು ಸದ್ಯಕ್ಕೆ ಅಪೇಕ್ಷಣೀಯವಲ್ಲವೆಂದು ತೋರುತ್ತದೆ. ಅಂತಹ ಕಾನೂನು ಬಂತೆಂದರೆ, ಕೊಡಲು ಇಷ್ಟವಿಲ್ಲದ ಜನ ಅವನ್ನು ಹಾಳುಮಾಡಲೂ ಮನಸ್ಸು ಮಾಡಬಹುದು, ಅಥವಾ ಬಚ್ಚಿಡಬಹುದು. ಇದಕ್ಕೆ ಪರಿಹಾರ ಮಾರ್ಗವೆಂದರೆ ಜನರಿಗೆ ಹಸ್ತಪ್ರತಿಗಳ ಬಗ್ಗೆ ತಿಳಿವಳಿಕೆ ಕೊಡುವುದು. ಅವುಗಳನ್ನು ಕೇವಲ ಕುರುಡು ನಂಬಿಕೆಯಿಂದ ತಾವು ಇಟ್ಟುಕೊಳ್ಳುವುದಕ್ಕಿಂತ ಸಾರ್ವಜನಿಕ ಸಂಸ್ಥೆಗಳಿಗೆ ಕೊಟ್ಟು ಅವು ಪ್ರಕಟವಾಗಲು ಸಹಾಯಕವಾದರೆ ತಾವು ಇಲ್ಲಿಯವರೆಗೆ ಸಂರಕ್ಷಿಸಿದ್ದು ಸಾರ್ಥಕವಾಗುತ್ತದೆಂದು ನಂಬಿಕೆ ಹುಟ್ಟಿಸಬೇಕು. ಪತ್ರಿಕೆಗಳ ಮೂಲಕ, ಚಿಕ್ಕ ಚಿಕ್ಕ ಪುಸ್ತಕಗಳ ಮೂಲಕ ಈ ವಿಷಯ ಪ್ರಚಾರವಾಗಿ ಜನ ತಮ್ಮ ಮೂಢ ನಂಬಿಕೆಗಳನ್ನು ಬಿಡುವಂತಾಗಬೇಕು. ನನ್ನ ಸ್ವಂತ ಅನುಭವದಿಂದ ಹೇಳುವುದಾದರೆ, ತೀರ ದಡ್ಡರಿಂದ ಸಂಗ್ರಹಿಸುವುದು ಬಹು ಸುಲಭ. ತಿಳಿದವರಿಂದ ಸ್ವಲ್ಪ ಸುಲಭ, ಆದರೆ ಮಧ್ಯದ ಜನರಿಂದ ಮಾತ್ರ ತೀರ ಕಷ್ಟ.

**ಕೇಂದ್ರ ಹಸ್ತಪ್ರತಿ ಭಾಂಡಾಗಾರ**

ಬೆಂಗಳೂರಲ್ಲಿ ಒಂದು ಕೇಂದ್ರ ಹಸ್ತಪ್ರತಿ ಭಾಂಡಾಗಾರವಾಗಿ, ಅಲ್ಲಿಗೆ ಎಲ್ಲ ಹಸ್ತಪ್ರತಿಗಳೂ ಬಂದು ಸೇರುವಂತಾಗಬೇಕು. ಮೈಸೂರು, ಬೆಂಗಳೂರು, ಧಾರವಾಡಗಳಲ್ಲಿರುವ ಹಸ್ತಪ್ರತಿ ವಿಭಾಗಗಳು ಬೆಳೆಯಲು ಪ್ರೋತ್ಸಾಹ ನೀಡಬೇಕು. ಕೇಂದ್ರ ಹಸ್ತಪ್ರತಿ ಭಾಂಡಾಗಾರವು ದೇಶದ ಬೇರೆ ಬೇರೆಡೆಗಳಿಗೆ ತನ್ನ ಕೆಲಸಗಾರರನ್ನು ಕಳುಹಿಸಿ, ಸಂಗ್ರಹಿಸಿಕೊಂಡು ಬಂದ ಹಸ್ತಪ್ರತಿಗಳ ಧೂಳು ಕೊಡಹಿ, ಫ್ಯೂಮಿಗೇಷನ್ ಮೂಲಕ ಸಂಸ್ಕರಿಸಿ, ಜೋಡಿಸಿ ಅವುಗಳಲ್ಲಿ ಏನಿದೆ ಎಂಬುದನ್ನು ಸೂಚಿಗಳ ಮೂಲಕ ಕಾಲದಿಂದ ಕಾಲಕ್ಕೆ ತಿಳಿಸಬೇಕು. ಹಸ್ತಪ್ರತಿಗಳನ್ನು ಮೈಕ್ರೋ ಫಿಲಂ ಮಾಡುವ ಅನುಕೂಲವಿದ್ದರೆ, ಯಾರಾದರೂ ಹಸ್ತಪ್ರತಿ ಕೊಡಲು ಸಿದ್ಧವಿಲ್ಲದಿದ್ದರೆ - ಅದನ್ನು ಮೈಕ್ರೋಫಿಲಂ ಮಾಡಿ ಇಟ್ಟುಕೊಳ್ಳಬಹುದು. ಆಯಾ ತಿಂಗಳಲ್ಲಿ ಬಂದು ಸೇರ್ಪಡೆಯಾದ ಹಸ್ತಪ್ರತಿಗಳ ವಿಷಯ ಸಂಶೋಧಕರ ಗಮನಕ್ಕೆ ಬರುವ ಏರ್ಪಾಡಿರಬೇಕು. ಹಸ್ತಪ್ರತಿಗಳ ಸಂರಕ್ಷಣೆ ಇಂದಿನ ಸಮಯದಲ್ಲಿ ತೀರ ಅಗತ್ಯವಾಗಿ ಆಗಬೇಕಾಗಿರುವ ಕೆಲಸ. ಪರಿಷತ್ತು 'ಹಸ್ತಪ್ರತಿ ವರ್ಷ'ವೆಂದು ಒಂದು ವರ್ಷವನ್ನು ಮೀಸಲಿರಿಸಿ ಒಂದು ಚಳವಳಿಯನ್ನೇ ಆರಂಭಿಸಲಿರುವುದನ್ನು ತೀವ್ರವಾಗಿ ಯೋಚಿಸುತ್ತಿರುವುದು ಶುಭದ ಸಂಗತಿಯಾಗಿದೆ.

ಬೆಂಗಳೂರಿನಂತಹ ಕಡೆ ಒಂದು ಕೇಂದ್ರ ಹಸ್ತಪ್ರತಿ ವಿಭಾಗ ಇರುವುದು ಅಗತ್ಯವೆಂದ ತಕ್ಷಣ, ಜಿಲ್ಲೆಗಳ ಮಟ್ಟದಲ್ಲಿ ಇರಬಾರದೆಂದೇನೂ ಇಲ್ಲ. ಒಂದೊಂದು ಜಿಲ್ಲೆಯ ಕೇಂದ್ರದಲ್ಲಿ ಇರಬೇಕಾದ ಮ್ಯೂಜಿಯಮ್ಮುಗಳಲ್ಲಿ ಅವುಗಳನ್ನು ಸಂಗ್ರಹಿಸಬಹುದು. ಆದರೆ, ನಿಜವಾದ ಸಮಸ್ಯೆ ಏನೆಂದರೆ - ಈಗಾಗಲೇ ಸಾಕಷ್ಟು ಹಸ್ತಪ್ರತಿಗಳು ಸೇರಿರುವ ಮಠಗಳ ವಿಷಯವೇನು? ಮೂಡಬಿದರೆಯಂತಹ ಕಡೆ ಹಸ್ತಪ್ರತಿ ಸಂಗ್ರಹವನ್ನು ವ್ಯವಸ್ಥಿತವಾಗಿ ನೋಡಿಕೊಳ್ಳಲಾಗುತ್ತಿದೆ. ಅಂತಹ ಒಂದೆರಡು ಖಾಸಗಿ ಸಂಸ್ಥೆಗಳಿಗೆ ವಿನಾಯ್ತಿ ಕೊಟ್ಟರೂ ಕೊಡಬಹುದು. ಉಳಿದಂತೆ, ಹಸ್ತಪ್ರತಿಗಳು ಅಧಿಕೃತ ಸಂಸ್ಥೆಗಳ ವಶಕ್ಕೆ ಬರುವುದೇ ಉತ್ತಮ.

ಎಲ್ಲ ಹಸ್ತಪ್ರತಿಗಳ ಬೃಹತ್ ಸೂಚಿ ಇಲ್ಲದಿರುವುದು ಒಂದು ದೊಡ್ಡ ಕೊರತೆ. ಬೇರೆ ಬೇರೆ ಹಸ್ತಪ್ರತಿ ವಿಭಾಗಗಳಲ್ಲಿ, ಮಠಗಳಲ್ಲಿ, ಮ್ಯೂಜಿಯಂಗಳಲ್ಲಿ, ಸಂಸ್ಥೆಗಳಲ್ಲಿ ವೈಯಕ್ತಿಕ ಸಂಗ್ರಹಗಳಲ್ಲಿ ಇರುವ ಹಸ್ತಪ್ರತಿಗಳ ವಿವರಣಾತ್ಮಕ ಸೂಚಿ ತಯಾರಾಗಬೇಕಾಗಿದೆ.

**ಪತ್ರಾಗಾರ (ಸ್ಟೇಟ್ ಆರ್ಕೈವ್ಸ್)**

ಇವಲ್ಲದೆ ಅನೇಕ ಚಾರಿತ್ರಿಕ ದಾಖಲೆಗಳು, ವೈಯಕ್ತಿಕ ಕಾಗದ ಪತ್ರಗಳು ಅನೇಕರ ವಶದಲ್ಲಿವೆ. ಕೆಲವು ವರ್ಷಗಳ ಹಿಂದೆ ಉತ್ಸಾಹದಿಂದ ಕರ್ನಾಟಕ ಸರ್ಕಾರ ಆರಂಭಿಸಿದ ಪತ್ರಾಗಾರವು ಚಾರಿತ್ರಿಕ ದಾಖಲೆಗಳ ಸಂಕಲನ, ಮೈಕ್ರೋಫಿಲ್ಮಿಂಗ್ ಕಾರ್ಯವನ್ನು ಕೈಗೊಂಡಿದೆ. ಈ ಕಾರ್ಯ ಇನ್ನೂ ಚೇತನಗೊಳ್ಳಬೇಕಾಗಿದೆ.

ಪ್ರಾಚೀನ ಕಾಲಕ್ಕೆ ಸೇರಿದ ಅನೇಕ ಅಪೂರ್ವ ವಸ್ತುಗಳು ಅನೇಕರ ಮನೆಗಳಲ್ಲಿ ಹುದುಗಿವೆ. ಕಿತ್ತೂರು ರಾಣಿ ಚೆನ್ನಮ್ಮನದೆಂದು ಹೇಳಲಾದ ಸೀರೆ, ಬನವಾಸಿ

ಪ್ರದೇಶವಲ್ಲಿದೆಯೆಂದು ತಿಳಿದುಬಂದ ಹಿಂದಿನ ಕಾಲದ ಗಡಿಯಾರ ('ಜಲಘಟಿಗೆ') ಇವು ಕೆಲವು ಉದಾಹರಣೆಗಳು. ಇಂತಹ ವಸ್ತುಗಳ ಪಟ್ಟಿ ಬೆಳೆಸುವುದು ಸಾಧ್ಯವೂ ಇಲ್ಲ, ಅನಗತ್ಯವೂ ಹೌದು. ಇವುಗಳ ಸಂಗ್ರಹದ ಬಗ್ಗೆ ಎರಡನೆಯ ಮಾತಿಲ್ಲ.

**ಮ್ಯೂಜಿಯಂ ಕೊರತೆ**

ಕನ್ನಡಿಗರಿಗೆ ಎದ್ದು ಕಾಣುವ ಒಂದು ದೊಡ್ಡ ಕೊರತೆಯೆಂದರೆ ಸರಿಯಾದ ಮ್ಯೂಜಿಯಂ ಇಲ್ಲದಿರುವುದು. ಕನ್ನಡಿಗರಿಗೆ ತಮ್ಮ ಪರಂಪರೆಯ ಬಗ್ಗೆ ಸರಿಯಾದ ತಿಳಿವಳಿಕೆ ಕೊಡಬಲ್ಲ ಮ್ಯೂಜಿಯಂ ಇನ್ನೂ ರೂಪುಗೊಳ್ಳಬೇಕಾಗಿದೆ. ಈಗ ಇರುವ ಮ್ಯೂಜಿಯಮ್ಮುಗಳು ವ್ಯಾಪ್ತಿಯಲ್ಲಿ ತೀರಾ ಸೀಮಿತವಾಗಿವೆ. ಅವುಗಳನ್ನು ಇಲ್ಲಿ ವಿಮರ್ಶಿಸಿ ಪ್ರಯೋಜನವಿಲ್ಲ. ಮುಖ್ಯ ಸಂಗತಿಯೆಂದರೆ ಬೆಂಗಳೂರು, ಮೈಸೂರುಗಳಲ್ಲಿ ಎರಡು ದೊಡ್ಡ ಮ್ಯೂಜಿಯಮ್ಮುಗಳು ಆಗಬೇಕು. ಮೈಸೂರಿನ ಇಡೀ ಅರಮನೆಯನ್ನು ಪ್ರಾಚ್ಯವಸ್ತು ವಿಭಾಗಕ್ಕೆ ಬಿಟ್ಟುಕೊಡುವರೆಂದೂ ಅದೊಂದು ಭವ್ಯ ವಸ್ತು ಸಂಗ್ರಹಾಲಯವಾಗುತ್ತದೆಂದೂ ಭಾವಿಸಿದವರಿಗೆ ದೊಡ್ಡ ನಿರಾಸೆ ಕಾದಿದೆ. ವಾಸ್ತವವಾಗಿ ಅರಮನೆಯ ಹಿಂಭಾಗದ ಮೂಲೆಯನ್ನು ಬಿಟ್ಟುಕೊಟ್ಟಿದ್ದಾರೆ. ಇಂಜಿನಿಯರಿಂಗ್ ಇತ್ಯಾದಿ ಅನೇಕ ಕಚೇರಿಗಳು ಅಲ್ಲಿಗೆ ಸ್ಥಳಾಂತರಗೊಂಡು ಇಡೀ ಪ್ರದೇಶ ತನ್ನ ಗಾಂಭೀರ್ಯವನ್ನು ಕಳೆದುಕೊಂಡಿದೆ. ನಮ್ಮ ಸರ್ಕಾರ ದೊಡ್ಡ ಮನಸ್ಸು ಮಾಡಿ ಅರಮನೆಯ ಪ್ರಾಕಾರವೂ ಸೇರಿದಂತೆ ಇಡೀ ಪ್ರದೇಶವನ್ನೂ ಅರಮನೆಯನ್ನೂ ಪ್ರಾಚ್ಯವಸ್ತು ವಿಭಾಗಕ್ಕೆ ಬಿಟ್ಟುಕೊಡಬೇಕು.

ಬೆಂಗಳೂರಿನಲ್ಲಿರುವ ಅರಮನೆಯನ್ನು ವಸ್ತು ಸಂಗ್ರಹಾಲಯವಾಗಿ ಮಾಡಿ ಅದರ ಸುತ್ತ ಇರುವ ಉದ್ಯಾನವನ್ನು ಮಕ್ಕಳ ದೃಷ್ಟಿಯಿಂದ ಬೆಳೆಸಬೇಕು. ಹೈದರಾಬಾದಿನಲ್ಲಿ ಒಂದು ಸಾಲಾರ್ ಜಂಗ್ ಮ್ಯೂಜಿಯಂ ಇದ್ದರೆ ಕರ್ನಾಟಕದಲ್ಲಿ ಮೈಸೂರು ಬೆಂಗಳೂರುಗಳಲ್ಲಿ ಅಂತಹ ಅದೇ ಪ್ರಮಾಣದ ಎರಡು ಮ್ಯೂಜಿಯಮ್ಮುಗಳನ್ನು ಮಾಡಬೇಕು. ವಾಸ್ತು, ಶಿಲ್ಪ, ಚಿತ್ರ, ಸಾಹಿತ್ಯಗಳಲ್ಲಿ ಎಲ್ಲ ಪ್ರಾಂತಗಳಿಗಿಂತ ಮುಂದೆ ಇರುವ ಕರ್ನಾಟಕಕ್ಕೆ ಅದರ ಭವ್ಯ ಪರಂಪರೆಯ ಕನ್ನಡಿಗಳಂತಿರುವ ಮ್ಯೂಜಿಯಮ್ಮುಗಳು ತೀರ ಅಗತ್ಯವಾಗಿವೆ. ಅವುಗಳಲ್ಲಿ ಸಮಕಾಲೀನ ಚಿತ್ರ, ಶಿಲ್ಪಗಳಿಗೂ ಪ್ರತ್ಯೇಕ ವಿಭಾಗವಿರಬೇಕು. ಚಿತ್ರದುರ್ಗ, ಶಿವಮೊಗ್ಗ, ಬಿಜಾಪುರಗಳಲ್ಲಿರುವಂತೆ ಪ್ರತಿ ಜಿಲ್ಲಾ ಕೇಂದ್ರದಲ್ಲಿಯೂ ಒಂದೊಂದು ಮ್ಯೂಜಿಯಂ ಆಗಿ, ಆಯಾ ಜಿಲ್ಲೆಯ ಸಾಂಸ್ಕೃತಿಕ ಪರಂಪರೆಯನ್ನು ಅವು ಪ್ರತಿಬಿಂಬಿಸುವಂತಾಗಬೇಕು.

**ಇಂಗ್ಲಿಷಿನಲ್ಲಿ ಸಂಶೋಧನ ಪತ್ರಿಕೆ**

ಕರ್ನಾಟಕದ ಇತಿಹಾಸ, ಕಲೆ, ಸಾಹಿತ್ಯಗಳ ಬಗ್ಗೆ ಒಂದು ಸಂಶೋಧನ ಮಂಡಲಿ ತೀರ ಅಗತ್ಯವಾಗಿದೆ. ವಿಶ್ವವಿದ್ಯಾಲಯಗಳು ಮತ್ತು ಪ್ರಾಚ್ಯವಸ್ತು ಇಲಾಖೆಗಳಲ್ಲಿರುವವರು ಮಾಡುತ್ತಿರುವ ಸಂಶೋಧನೆಗಳಿಂದ ನಮಗೆ ಲಾಭವಾಗುತ್ತಿದೆ. ಅದರಲ್ಲೂ ಮೈಸೂರು, ಧಾರವಾಡಗಳಲ್ಲಿ ನಡೆಯುತ್ತಿರುವ ಕಾರ್ಯ ಗಮನಾರ್ಹವಾಗಿದೆ. ಬೆಂಗಳೂರು ಈ ದಿಸೆಯಲ್ಲಿ

ಹಿಂದೆ ಬಿದ್ದಿದೆ. ಇಲ್ಲಿಯ ಮಿಥಿಕ್ ಸೊಸೈಟಿ ಚೇತರಿಸಿಕೊಂಡು ತನ್ನ ಹಿಂದಿನ ಚಟುವಟಿಕೆಗಳ ಕಾಲವನ್ನು ಮರಳಿ ಪಡೆಯುತ್ತದೆಯೆಂಬ ಆಸೆಯನ್ನು ನಾವು ಇಟ್ಟುಕೊಳ್ಳಬೇಕಾಗಿದೆ. ಅದರ ಮುಖವಾಣಿಯಾದ Quarterly Journal of the Mythic Society ಈಗ ಅಷ್ಟು ನಿಯತವಾಗಿ ಬರುತ್ತಿಲ್ಲ. ನಮ್ಮಲ್ಲಿ, ಕರ್ನಾಟಕ ಅಧ್ಯಯನಗಳಿಗೇ ಮೀಸಲಾದ ಇಂಗ್ಲೀಷ್ ಪ್ರೌಢ ಪತ್ರಿಕೆಯೊಂದು ಇಲ್ಲದಿರುವುದು ಬಹು ದೊಡ್ಡ ಕೊರತೆ. ಮಿಥಿಕ್ ಸೊಸೈಟಿಯ ಪತ್ರಿಕೆಯನ್ನೇ ಅಂತಹ ಪತ್ರಿಕೆಯಾಗಿ ಬೆಳಸುವುದು ಸಾಧ್ಯ. ಈ ಬಗ್ಗೆ ನಾವೆಲ್ಲ ಗಂಭೀರವಾಗಿ ಆಲೋಚಿಸಬೇಕು. ನಮ್ಮ ವಿದ್ವಾಂಸರು ಇಂಗ್ಲಿಷಿನಲ್ಲಿ ಬರೆದ ಲೇಖನಗಳ ಪ್ರಕಟಣೆಗೆ ಬೇರೆ ಪತ್ರಿಕೆಗಳನ್ನು ಆಶ್ರಯಿಸಬೇಕಾಗಿದೆ. ನಾವು ಇಂಗ್ಲಿಷಿನಲ್ಲಿ ಬರೆಯದೆ ಕರ್ನಾಟಕದ ವಿಷಯ ಹೊರಗಿನವರಿಗೆ ಗೊತ್ತಾಗುವುದಿಲ್ಲ.

ಇದು ನಮ್ಮಲ್ಲಿ ಆಗಬೇಕಾಗಿರುವ ಸಂಶೋಧನ ಕಾರ್ಯದ ರೂಪುರೇಷೆ. ನಮ್ಮಲ್ಲಿ ಈಗ ಆಗುತ್ತಿರುವ ಸಂಶೋಧನೆ ಏನೇನೂ ಸಾಲದು. ಆ ಅತೃಪ್ತಿಯನ್ನು ನಾನು ದೊಡ್ಡದು ಮಾಡಲು ಬಯಸುವುದಿಲ್ಲ. ಆದರೆ ಕೆಲಸ ನಡೆಯುತ್ತಿದೆ ಎಂಬಲ್ಲಿ ಅನುಮಾನವಿಲ್ಲ. ಹಿಂದಿನ ಸಾಹಿತ್ಯ, ಇತಿಹಾಸಗಳನ್ನು ಕುರಿತಂತೆ ನಮ್ಮ ಜನಕ್ಕೆ ಆಸಕ್ತಿ ಮೂಡಿದೆ. ಅದನ್ನು ತಿಳಿಯುವ ಆಸೆ ಅವರಲ್ಲಿ ಕುದುರಿದೆ. ಅದು ನಮಗೆಲ್ಲ ಸಮಾಧಾನ ತರುವಂತಹ ವಿಷಯ. ಸಂಶೋಧನೆ ಇಂದಲ್ಲ ನಾಳೆ ನಡೆಯುತ್ತದೆ. ಆದರೆ ಮುಂದಿನ ಸಂಶೋಧಕರ ದೃಷ್ಟಿಯಿಂದಲಾದರೂ ಇಂದು ನಾವು ಅಳಿದುಳಿದ ವಸ್ತುಗಳ ಸಂರಕ್ಷಣೆ ಮಾಡಬೇಕಾಗಿದೆ. ಈ ವಿಷಯದಲ್ಲಿ ಮಾತ್ರ ನಿರಾಸೆ ಉಂಟು ಮಾಡುವ ಪರಿಸ್ಥಿತಿಯಿದೆ. ಸಂರಕ್ಷಣೆಯ ಸಮಸ್ಯೆ ಬಹು ಗಂಭೀರವಾದುದು. ಆದ್ದರಿಂದಲೇ ಅದರ ಬಗ್ಗೆ ಆಸಕ್ತರಾಗಿರುವವರು ಗಂಭೀರವಾಗಿ ಆಲೋಚಿಸುವುದು ತೀರ ಅಗತ್ಯವಾಗಿದೆ. ಸಮಸ್ಯೆಯ ಗಹನತೆ, ಮತ್ತು ಸಾಧ್ಯವಾದ ಕಡೆ ಆ ಸಮಸ್ಯೆಯನ್ನು ಎದುರಿಸಬೇಕಾದ ವಿಧಾನಗಳೆರಡನ್ನೂ ಈ ಯೋಜನೆಯಲ್ಲಿ ನಾನು ಸಂಕ್ಷಿಪ್ತವಾಗಿ ಚರ್ಚಿಸಿದ್ದೇನೆ.

# ಸಂಶೋಧನೆ ಮತ್ತು ವಿಮರ್ಶೆ

'ಸೃಜನಾತ್ಮಕ ಸಂಶೋಧನೆ' ಯೆಂಬ ಮಾತನ್ನು ಹಲವರು ತಮ್ಮ ಮಾತು ಕತೆಗಳಲ್ಲಿ ಬಳಸುವುದನ್ನು ಕೇಳಿದ್ದೇನೆ. ಆದರೆ ಆ ಮಾತಿನ ಬಳಕೆಯ ವ್ಯಾಪ್ತಿಯೇನು ಎಂಬುದರ ಅರಿವು ಹಾಗೆ ಬಳಸುವವರಲ್ಲೆಲ್ಲ ಇದೆಯೇ ಎಂಬ ಸಂದೇಹ ನನಗಿದೆ. ನಾನು ಜ್ಞಾಪಕ ಮಾಡಿಕೊಳ್ಳುವುದಾದರೆ ಹಾಗೆ ಆ ಮಾತನ್ನು ಬಳಸಿರುವವರೆಲ್ಲ ಬಹುಮಟ್ಟಿಗೆ ಸಾಹಿತ್ಯದ ಅಭ್ಯಾಸಿಗಳು ಮತ್ತು 'ಸಂಶೋಧನ' ಮಾತಿನ ಹಿಂದೆ 'ಸೃಜನಾತ್ಮಕ'ವನ್ನು ತರುವುದರಲ್ಲಿ ಅವರಿಗೆ ಒಂದು ಬಗೆಯ ಸಂತೋಷವುಂಟು; ಆ ಪದದ ಜೋಡಣೆಯ ಮೂಲಕ ಅನೇಕರ ಕಣ್ಣಲ್ಲಿ ಅಷ್ಟು ಮಹತ್ವದ್ದಲ್ಲದ ಚಟುವಟಿಕೆಯಾದ ಸಂಶೋಧನೆಗೆ ಏನೋ ಒಂದು ಮಾನ್ಯಸ್ಥಾನವನ್ನು ತಂದುಕೊಡುತ್ತಿದ್ದೇವೆ ಎಂಬ ಭಾವನೆ ಅವರಿಗೆ ಇರುವಂತಿದೆ. ಹೀಗೆ ಅಂದುಕೊಳ್ಳುತ್ತಿರುವುದು ಸ್ವಲ್ಪಮಟ್ಟಿಗೆ ನನ್ನ ಕಲ್ಪನೆಯಿರಬಹುದಾದರೂ, 'ಸೃಜನಾತ್ಮಕ' ಮಾತಿನ ಬಳಕೆಯ ಕಾರಣ ತೀರ ಸ್ಪಷ್ಟವಾಗಿದೆ. ಸಾಹಿತ್ಯದಲ್ಲಿ ಸೃಜನಾತ್ಮಕ ಸಾಹಿತ್ಯ ಮತ್ತು ವಿಮರ್ಶೆ ಎಂಬ ಎರಡು ಚಟುವಟಿಕೆಗಳಿವೆ. ಇವುಗಳಲ್ಲಿ ಪ್ರಾಶಸ್ತ್ಯ ಮೊದಲನೆಯದಕ್ಕೆ ಮತ್ತು ಮೊದಲನೆಯದರಲ್ಲಿ ನಿಷ್ಫಲನಾದವನು ಎರಡನೆಯದಕ್ಕೆ ಕೈಹಾಕುತ್ತಾನೆ ಎಂಬ ಸ್ವಲ್ಪ ನಿಜವಿರಬಹುದಾದ ಮಾತುಕತೆಯುಂಟು. ಇವೆರಡರ ಜೊತೆಗೆ ಸಾಹಿತ್ಯದಲ್ಲಿ ಸಂಶೋಧನೆ ಎಂಬುದೂ ಒಂದು ಉಂಟು ತಾನೆ? ಮೇಲೆ ನೋಡಿದಂತೆ, ಸಾಹಿತ್ಯದಲ್ಲಿ ಸೃಜನಾತ್ಮಕ ಮತ್ತು ಸೃಜನಾತ್ಮಕೇತರ (ಅಥವಾ ವಿಮರ್ಶೆ) ಎಂದು ಎರಡು ವಿಭಾಗಗಳನ್ನು ಸಾಹಿತ್ಯಜ್ಞರು ಏರ್ಪಡಿಸಿಕೊಳ್ಳಲು ಬಯಸುತ್ತಿರುವಂತೆ ತೋರುತ್ತದೆ ಮತ್ತು ಅವರೆಡರಲ್ಲಿ ಸೃಜನಾತ್ಮಕ ಭಾಗವೇ ಉತ್ಕೃಷ್ಟವೆಂಬ ಭಾವನೆ ಇರುವಂತೆ ತೋರುತ್ತದೆ.

ಹಾಗೆ ನೋಡಿದರೆ ಎಲ್ಲ ಸಂಶೋಧನೆಯೂ ಒಂದಲ್ಲ ಒಂದು ರೀತಿಯಲ್ಲಿ ಸೃಜನಾತ್ಮಕವೇ (ಈ ಮಾತನ್ನು ಹೇಳುವುದರ ಮೂಲಕ ಸಂಶೋಧನೆಗೆ ಒಂದು ಸ್ಥಾನ ಅಥವಾ ಮಹತ್ವವನ್ನು ಕಲ್ಪಿಸಲು ಯತ್ನಿಸುತ್ತಿದ್ದೇನೆಂದು ಯಾರೂ ಭಾವಿಸಬಾರದು). ಕಲೆಗಳ ಹೊರತು ಉಳಿದ ಎಲ್ಲ ಶಿಸ್ತುಗಳಲ್ಲಿ ಸಂಶೋಧನೆಯೊಂದೇ ಮಹತ್ವದ ಚಟುವಟಿಕೆ. ಆ ಶಿಸ್ತುಗಳ ಚಟುವಟಿಕೆಗಳಲ್ಲಿ ಇಲ್ಲವೇ ಸಂಶೋಧಕರಿರುತ್ತಾರೆ, ಇಲ್ಲವೇ ಪಠ್ಯಪುಸ್ತಕ ಲೇಖಕರಿರುತ್ತಾರೆ. ಸಂಶೋಧಕರು ಹೊಸದನ್ನು ಕಾಣುವವರು ಮತ್ತು ತನ್ಮೂಲಕ ಪ್ರಚಲಿತ ಜ್ಞಾನವನ್ನು ಹೆಚ್ಚಿಸುವವರು. ಆಯಾ ಕಾಲಕ್ಕೆ ಬೆಳವಣಿಗೆ ಹೊಂದುತ್ತ ಬಂದ ಜ್ಞಾನವನ್ನು ಸಂಗ್ರಹಿಸಿ ಅದನ್ನು ತಿಳಿಗೊಳಿಸಿ ಹೇಳುವವರು ಪಠ್ಯಪುಸ್ತಕ ಲೇಖಕರು. ಇವರಿಬ್ಬರ

ಚಟುವಟಿಕೆಗಳೂ ಮಾನ್ಯ ಮತ್ತು ಪರಸ್ಪರ ಪೂರಕಗಳೇ ಆಗಿದ್ದರೂ, ಇವರಿಬ್ಬರಲ್ಲಿ ಸಂಶೋಧಕನಿಗೆ ಹೆಚ್ಚಿನ ಮಾನ್ಯಸ್ಥಾನ ಲಭ್ಯವಾಗುವುದರಲ್ಲಿ ಆಶ್ಚರ್ಯವೇನೂ ಇಲ್ಲ. ಅರ್ಥಶಾಸ್ತ್ರ, ಸಮಾಜ ವಿಜ್ಞಾನ, ಮನೋವಿಜ್ಞಾನಗಳಂತಹ ಸಾಮಾಜಿಕ ವಿಜ್ಞಾನಗಳಲ್ಲಿ, ಭೌತವಿಜ್ಞಾನ ರಸಾಯನ ವಿಜ್ಞಾನಗಳಂತಹ ಭೌತಿಕ ವಿಜ್ಞಾನಗಳಲ್ಲಾಗಲಿ, ಸಸ್ಯವಿಜ್ಞಾನದಂತಹ ಜೀವವಿಜ್ಞಾನಗಳಲ್ಲಾಗಲಿ ಲೇಖನ ವ್ಯವಸಾಯವನ್ನು ಕೈಗೊಳ್ಳುವವರು ಎರಡು ಬಗೆಯ ಜನ : ಇಲ್ಲವೇ ಸಂಶೋಧಕರು ಅಥವಾ ಪಠ್ಯಪುಸ್ತಕ ಲೇಖಕರು. (ಬೇಕಾದರೆ 'ಜನಪ್ರಿಯ ಲೇಖಕರು' ಎಂಬ ಒಂದು ವರ್ಗವನ್ನು ಸೇರಿಸಿಕೊಳ್ಳಬಹುದು). ಎಂದರೆ, ಆ ಶಿಸ್ತುಗಳಲ್ಲಿ ಸಂಶೋಧನೆಗೆ ಪ್ರಬಲ ಪ್ರತಿಸ್ಪರ್ಧಿಯ ಮಾತಿರಲಿ, ಪ್ರತಿಸ್ಪರ್ಧಿಯೇ ಇಲ್ಲ. ಇದರಿಂದಾಗಿ, ಆ ಶಿಸ್ತುಗಳಲ್ಲಿ ಸಂಶೋಧಕರು ಮತ್ತು ಸಂಶೋಧನೆಗಳಿಗೆ ಅಗ್ರಸ್ಥಾನವಿದೆ.

ಇದೇ ಮಾತನ್ನು ಸಾಹಿತ್ಯದಂತಹ 'ಸೃಜನಾತ್ಮಕ' ಚಟುವಟಿಕೆಗಳ ಕಲಾ ಮಾಧ್ಯಮ ಕ್ಷೇತ್ರಗಳಲ್ಲಿ ಹೇಳಲು ಸಾಧ್ಯವಿಲ್ಲ. ಇಲ್ಲಿ ಸಂಶೋಧನೆಗೆ ತೀವ್ರ ಸ್ಪರ್ಧಿಗಳು (ಈ ಮಾತಿನ ಬಗ್ಗೆ ಆಕ್ಷೇಪಿಸುವವರು ಮುಂದೆ ಬರುವ ನನ್ನ ವಿವರಣೆಯನ್ನು ನೋಡಬೇಕು) ಸೃಜನಾತ್ಮಕ ಸಾಹಿತ್ಯ (ಕಾವ್ಯ, ನಾಟಕ, ಕಾದಂಬರಿ, ಸಣ್ಣಕತೆ) ಮತ್ತು ವಿಮರ್ಶೆ. ಸೃಜನಾತ್ಮಕ ಸಾಹಿತ್ಯವು ವ್ಯಕ್ತಿಯ ಅಂತರಂಗದ ಮೂಲ ದ್ರವ್ಯದಿಂದ ಜನಿಸಿ ಬಂದುದಾಗಿದ್ದು, ಅದನ್ನು ಸೃಜಿಸಿದ ಸಾಹಿತಿ ತನ್ನ ಸಾಹಿತ್ಯ ಕೃತಿಗೆ ತನ್ನಿಂದ ಹೊರಗೆ ಏನು ಆಧಾರವೆಂದು ತೋರಿಸಬೇಕಾಗಿಲ್ಲ. ಸಣ್ಣ ಕತೆಯೊಂದನ್ನು ಬರೆದ ಕತೆಗಾರ ತಾನು ಕಂಡ ಜಗತ್ತಿನ ಯಾವುದೋ ಒಂದು ಘಟನೆ ಅಥವಾ ಘಟನೆಗಳನ್ನೇ ಆಧರಿಸಿದ್ದರೂ, ಅವನ ಕೃತಿ ಆ ಘಟನೆಗೆ 'ಪ್ರಾಮಾಣಿಕ'ವಾಗಿರಬೇಕಾಗಿಲ್ಲ, ಮತ್ತು ಅವನ ಕೃತಿಯ ನಿರ್ಮಿತಿಗೆ ಪ್ರೇರಕವಾದ ಘಟನೆಯನ್ನು ಅವನು ಸಾಮಾನ್ಯವಾಗಿ ದಾಖಲು ಮಾಡುವುದಿಲ್ಲ. ದಾಖಲು ಮಾಡಿದರೂ ಆ ಒಂದು ಘಟನೆ ಒಂದು ಸಾಹಿತ್ಯ ಕೃತಿಯಾಗಿ ಹೊರಬರುವಾಗ ಏನು ರೂಪಾಂತರವನ್ನು ತಾಳಬಹುದು ಎಂಬುದನ್ನು ಕುರಿತು ಚಿಂತಿಸುವವನಿಗೆ ಒಳ್ಳೆಯ ಸಾಮಗ್ರಿಯಾಗಬಹುದೇ ಹೊರತು ಆ ಸಾಹಿತ್ಯಕೃತಿಯ ಮೌಲ್ಯ ನಿರ್ಣಯಕ್ಕೆ ಸಹಾಯಕವಾಗುವುದಿಲ್ಲ ಮತ್ತು ಕೃತಿಯ ಆಸ್ವಾದನಕ್ಕಂತೂ ಅದು ತೀರ ಅನಗತ್ಯ (ಮೂಲ ಕೃತಿಯೊಂದರ ವಸ್ತುವಿನ ಆಧಾರದ ಮೇಲೆ ರಚಿತವಾದ ಇನ್ನೊಂದು ಕೃತಿಯ ವಿಷಯಕ್ಕೆ ಇದು ಅನ್ವಯಿಸಲಾರದು). ಒಟ್ಟು ಈ ಚರ್ಚೆಯ ಸಾರಾಂಶವೆಂದರೆ, ಸೃಜನಾತ್ಮಕ ಕಲೆಯನ್ನು ಅದರದೇ ರೀತಿ ನೀತಿಗಳಿಂದ ಪರಿಗಣಿಸುತ್ತೇವೆಯೇ ಹೊರತು, ಅದಕ್ಕೆ ಹೊರಗೆ ನಿಲ್ಲುವ ಅಂಶಗಳ ಜೊತೆ ಅದನ್ನು ಸಂಬಂಧಿಸುವುದಿಲ್ಲ.

ವಿಮರ್ಶೆಯು ಸೃಜನಾತ್ಮಕ ಸಾಹಿತ್ಯವನ್ನು ಅವಲಂಬಿಸಿದ್ದು. ಅಂತಹ ಸಾಹಿತ್ಯವಿಲ್ಲದಿದ್ದರೆ ವಿಮರ್ಶೆ ಎಂಬುದೇ ಇರಲಾರದು. ವಿಮರ್ಶೆ ಏಕೆ ಎಂಬ ಪ್ರಶ್ನೆಗೆ ಸಾಹಿತ್ಯ ಕೃತಿಯನ್ನು ಹೆಚ್ಚು ಚೆನ್ನಾಗಿ ತಿಳಿದುಕೊಳ್ಳಲು ಎಂಬ ಉತ್ತರದಲ್ಲೇ ಅದರ ಪರಾವಲಂಬಿತ್ವ ಸೂಚಿತವಾಗುತ್ತದೆ. ಒಂದು ಸಾಹಿತ್ಯ ಕೃತಿಯನ್ನು ಬೇರೆ ಬೇರೆ ನಿಲುವುಗಳಿಂದ ವಿಶ್ಲೇಷಿಸಿ ಅದು ಒಂದು ಅನುಭವವನ್ನು ಏಕೆ ತಂದುಕೊಟ್ಟಿತು (ಅಥವಾ ತಂದುಕೊಡಲಿಲ್ಲ), ಕೃತಿಕಾರನ

ಉದ್ದೇಶ ಅದರಲ್ಲಿ ಮೂಡಿದೆಯೇ ಇಲ್ಲವೇ ಇವುಗಳನ್ನು ವಿಚಾರ ಮಾಡುವುದಾಗಬಹುದು. ಆ ಕೃತಿಯ ಬೆಲೆಗಟ್ಟುವ ಕೆಲಸವೂ ನಡೆಯಬಹುದು. ಏನೇ ಆಗಲಿ ವಿಮರ್ಶೆ ಸಾಹಿತ್ಯವನ್ನೇ ಅವಲಂಬಿಸಿ ನಡೆಯುವ ಕ್ರಿಯೆ ಎಂಬುದು ಸ್ಪಷ್ಟ. ಸಾಹಿತ್ಯದ ವಲಯಗಳಲ್ಲಿ ಉತ್ಕೃಷ್ಟ ವಿಮರ್ಶೆಗ, ವಿಮರ್ಶಕನಿಗೆ ಬೆಲೆಯಿರುವುದಾದರೂ ಯಾರು ಏನೇ ಹೇಳಲಿ ಶ್ರೇಷ್ಠ ಸಾಹಿತ್ಯ ಸಾಹಿತಿಗಳಿಗಿಂತ ಎರಡನೆಯ ಸ್ಥಾನವನ್ನು ಅವಕ್ಕೆ ಕೊಡಲಾಗುತ್ತದೆ.

ಈ ಹಿನ್ನೆಲೆಯಲ್ಲಿ ಸಂಶೋಧನೆಯನ್ನು ನೋಡಬೇಕು. ಸಾಹಿತ್ಯದ ಉದ್ದೇಶ ರಸಾನುಭವ (ಇದನ್ನು ಬೇರೆ ಜ್ಞಾನಗಳಿಗಿಂತ ಭಿನ್ನವಾದ ಒಂದು ವಿಶಿಷ್ಟ ಜ್ಞಾನ, 'ಕಲಾತ್ಮಕ ಜ್ಞಾನ' ಎಂದು ಕರೆದರೂ ತಪ್ಪೇನೂ ಕಾಣದು). ವಿಮರ್ಶೆ ಸಾಹಿತ್ಯದ ಉದ್ದೇಶಕ್ಕೆ ಸಮೀಪವಾದುದೆಂದು ಭಾವಿಸಲಾಗುವುದರಿಂದ ಅವೆರಡೂ ನೇರವಾಗಿ ಪರಸ್ಪರ ಸಂಬಂಧಿಸಿರುವ ಚಟುವಟಿಕೆಗಳೆಂದೇ ಪರಿಗಣಿತವಾಗಿವೆ. ಸಂಶೋಧನೆಯು ಸಾಹಿತ್ಯದ ಉದ್ದೇಶದಿಂದ ಬಹುದೂರ ನಿಲ್ಲುವುದೆಂಬ ಕಲ್ಪನೆಯೇ ಪ್ರಧಾನವಾಗಿರುವುದರಿಂದ ಅದನ್ನು ಬಹುದೂರವೇ ನಿಲ್ಲಿಸಲಾಗುತ್ತದೆ ಮತ್ತು ಸಾಹಿತ್ಯಕ ವಲಯಗಳಲ್ಲಿ ಸಂಶೋಧನೆಗೆ ಅಂತಹ ಆದರದ ಸ್ವಾಗತವಿರುವಂತೆ ಕಾಣುವುದಿಲ್ಲ. ಹಿಂದೆ 'ಸ್ಪರ್ಧೆ'ಗಳ ಮಾತು ಹೇಳುವಾಗ, ಸಂಶೋಧನೆಗೆ ಸಾಹಿತ್ಯ ಮತ್ತು ವಿಮರ್ಶೆಗಳು ಕ್ರೂರ ಶತ್ರುಗಳು ಮತ್ತು ಅವುಗಳಿಂದ ಅದು ಸೋಲನ್ನು ಅನುಭವಿಸಿದೆ ಎಂಬ ಧ್ವನಿಯೂ ಅನುದ್ದೇಶಿತವಾಗಿ ಹೊರಟಿತೋ ಏನೋ ಎಂಬ ಅಳುಕು ನನಗಿರುವುದರಿಂದ ಅದನ್ನು ಸ್ಪಷ್ಟಪಡಿಸುವುದು ನನ್ನ ಕರ್ತವ್ಯವೆಂದು ಭಾವಿಸುತ್ತೇನೆ. ಸಾಹಿತ್ಯಕ ವಲಯಗಳಲ್ಲಿ ಸಾಹಿತ್ಯ ಮತ್ತು ವಿಮರ್ಶೆಗಳಿಗಿರುವ ಪ್ರಾಶಸ್ತ್ಯ ಸಂಶೋಧನೆಗೆ ಇಲ್ಲವೆಂಬುದು ಕನ್ನಡದಲ್ಲಂತೂ ನಿಜ. ಇದು ಸರಿಯೇ. ಅದಕ್ಕೆ ಕಾರಣಗಳೇನು, ಆ ಭಾವನೆ ಇರಲು ಸಂಶೋಧಕರು ತಾವೇ ಎಷ್ಟು ಕಾರಣ ಅಥವಾ ಸಂಶೋಧನೆಯ ಬಗ್ಗೆ ಸರಿಯಾದ ತಿಳಿವಳಿಕೆ ಇಲ್ಲದಿರುವುದು ಎಷ್ಟು ಕಾರಣ ಎನ್ನುವ ಬಗ್ಗೆ ಹೆಚ್ಚಿನ ವಿಚಾರ ಮಾಡಲು, ಸಂಶೋಧಿಸಲು ಅವಕಾಶವುಂಟು. ಕನ್ನಡದಲ್ಲಿ ಕೆಲಸ ಮಾಡಲು ಬಯಸುವ ವ್ಯಕ್ತಿ ಮೊದಲು ಸಾಹಿತಿಯಾಗಲು ಬಯಸುತ್ತಾನೆ, ವಿಮರ್ಶಕನಾಗಲೂ ಬಯಸುತ್ತಾನೆ. ತಾನೊಬ್ಬ ಸಂಶೋಧಕನಾಗಬೇಕೆಂಬ ಬಯಕೆ ತೀರ ವಿರಳ. ಸಂಶೋಧನೆ ಸಾಹಿತ್ಯದಿಂದ ಪೂರ್ತಿ ಬೇರೆಯಾದ, ಮೂಳೆ ಕಡಿಯುವ ನೀರಸ ಚಟುವಟಿಕೆಯೆಂದೇ ಅನೇಕರ ಕಲ್ಪನೆ. ಸಂಶೋಧನೆ ಉತ್ಕೃಷ್ಟ ವ್ಯಕ್ತಿಗಳನ್ನು ಹೆಚ್ಚು ಪ್ರಮಾಣದಲ್ಲಿ ತನ್ನೆಡೆಗೆ ಸೆಳೆಯಲು ಅಸಮರ್ಥವಾಗಿ ಬಹಳ ನಷ್ಟವನ್ನು ಅನುಭವಿಸಿದೆ. ಬೇರೆ ಶಿಸ್ತುಗಳಲ್ಲಿ ಅದ್ವಿತೀಯ ಅತ್ಯಾಧುನಿಕ ಚಟುವಟಿಕೆ ಎನ್ನಿಸಿಕೊಂಡ ಸಂಶೋಧನೆಗೆ ಸಾಹಿತ್ಯ ಕ್ಷೇತ್ರದಲ್ಲಿ ಈ ರೀತಿಯ ದುರ್ಗತಿ ಒದಗಬಾರದಿತ್ತೆಂದು ಯಾರಿಗಾದರೂ ಅನ್ನಿಸುತ್ತದೆ. ಸಮಗ್ರ ದೃಷ್ಟಿಗೆ ಎಲ್ಲವೂ ಸಮಾನ, ಗೌರವಕ್ಕೆ ಅರ್ಹವಾದ ಚಟುವಟಿಕೆ ಎಂಬುದು ಒಂದು ಆದರ್ಶ. ಆದರೆ ಇಂದಿನ ವಾಸ್ತವ ಪರಿಸ್ಥಿತಿ ಬೇರೆ.

ಈಗ ವಿಚಾರ ಮಾಡೋಣ. ಸಂಶೋಧನೆ ಸಾಹಿತ್ಯದಿಂದ ಬಹುದೂರ ನಿಲ್ಲುವ ಕ್ರಿಯೆಯೇ ? ಅದು ವಿಮರ್ಶೆಯಿಂದ ನಿಜವಾಗಿಯೂ ಬೇರೆಯೇ ? ಅದನ್ನು ಕೈಗೊಳ್ಳುವವನು 'ಅಸಾಹಿತಿ' ಯೇ ಆಗಿರಬೇಕೇ ? ಅಥವಾ ತನ್ನ ಕೈಹಿಡಿದ 'ಸಾಹಿತಿ' ಯನ್ನು

'ಅಸಾಹಿತಿ'ಯನ್ನಾಗಿ ಮಾಡುವ ಮಾಟಗಾತಿ ಗುಣ ಅದರಲ್ಲಿದೆಯೇ ? ಸಾಹಿತ್ಯ ವಲಯದಲ್ಲಿ ಸಂಶೋಧನೆಯು ಸಾಹಿತ್ಯದ ಉದ್ದೇಶದಿಂದ ದೂರನಿಲ್ಲುತ್ತದೆಯೇ, ಅಥವಾ ಆ ಉದ್ದೇಶವನ್ನು ಈಡೇರಿಸುವಲ್ಲಿ ಅದೂ ತನ್ನದೇ ಪಾತ್ರವನ್ನು ವಹಿಸುತ್ತದೆಯೇ ? ಅಥವಾ ಈ ಪ್ರಶ್ನೆಗಳೇ ಅನಗತ್ಯವಾಗಿದ್ದು ಸಂಶೋಧನೆಯ ಬಗ್ಗೆ ಒಂದು ಬಗೆಯ ತಪ್ಪು ಕಲ್ಪನೆ ಅಥವಾ ತಪ್ಪು ಅನ್ನಿಸಿಕೆ ಎಲ್ಲಕ್ಕೂ ಕಾರಣವಾಗಿದೆಯೇ ? ಸಂಶೋಧನೆ ನಿಜವಾಗಿಯೂ ಅಗತ್ಯದ ಗೌರವಾರ್ಹ ಚಟುವಟಿಕೆಯೇ ಸರಿ ಎಂದು ಪ್ರಾಮಾಣಿಕವಾಗಿ ಹೇಳುವವರ ಮನಸ್ಸಿನ ಅಂತರಾಳದಲ್ಲಿಯೂ ಸಂಶೋಧನೆಯೆಂಬುದು ಅಸಾಹಿತ್ಯಕ ಚಟುವಟಿಕೆಯೆಂಬ ಒಂದು ಬಗೆಯ ಸೂಕ್ಷ್ಮ ಅಸಡ್ಡೆ ಇದ್ದೇ ಇದೆ. 'ಅಸಡ್ಡೆ' ಎಂಬುದಕ್ಕಿಂತ ನಯವಾದ ಇನ್ನೊಂದು ಪದವಿದ್ದಿದ್ದರೆ ಚೆನ್ನಾಗಿತ್ತು. ಸಾಹಿತ್ಯಜ್ಞರಾಗಲಿ, ವಿಮರ್ಶಕರಾಗಲಿ, ಸಂಶೋಧಕರನ್ನು ಅಸಡ್ಡೆಯಿಂದ ಕಾಣುತ್ತಾರೆ ಎಂದು ಹೇಳಿದರೆ ತಪ್ಪಾಗುತ್ತದೆ. ಆದರೂ ಅವರಿಗೇ ಗೊತ್ತಿಲ್ಲದಂತೆ ಸಂಶೋಧನೆ ಸಂಶೋಧಕರ ಬಗ್ಗೆ ಒಂದು ಬಗೆಯ ವಿಮುಖತೆ ಅವರಲ್ಲಿ ಇದೆಯೆಂಬುದು ನಿಜ. ನನಗೆ ಆ ಮನೋಭಾವವನ್ನು ಹೇಳಲು ಬೇರೆ ಪದ ಸಿಗುತ್ತಿಲ್ಲ. ಮತ್ತು ಈ ಮಾತುಗಳನ್ನು ಬರೆಯುವಾಗ ನನಗೆ ಯಾವುದೇ ಅಸಮಾಧಾನವಿಲ್ಲ. ಒಂದು ಸಂಗತಿಯನ್ನು ಮಾತ್ರ ಇಲ್ಲಿ ನಿರೂಪಿಸುತ್ತಿದ್ದೇನೆಯೆಂದು ಭಾವಿಸಬೇಕು.

ಮುಂದಿನ ಮಾತುಗಳಲ್ಲಿ ನಾನು ಸಂಶೋಧನೆಯ ಪರವಾಗಿ ವಕಾಲತ್ತು ಮಾಡಿ ಅದಕ್ಕೆ ಗೌರವ ಸಂಪಾದಿಸಲು ಯತ್ನವನ್ನು ಮಾಡುತ್ತಿದ್ದೇನೆಂದು ಯಾರೂ ಭಾವಿಸಬಾರದು. ಕೆಲವು ತಪ್ಪು ಕಲ್ಪನೆಗಳನ್ನು ಹೋಗಲಾಡಿಸಲು ಯತ್ನಿಸುತ್ತಿದ್ದೇನೆ ಮತ್ತು ನಾನು ಹೇಳುವ ಮಾತುಗಳು ಸಾಹಿತ್ಯ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಮಾತ್ರ ಎಂಬುದನ್ನು ನೆನಪಿಟ್ಟುಕೊಳ್ಳಬೇಕು. ಏಕೆಂದರೆ, ಸಂಶೋಧನೆ ಎಲ್ಲ ಶಿಸ್ತುಗಳಿಗೂ ಸಂಬಂಧಿಸಿದಂತೆ ನಡೆಯುವ ಒಂದು ಚಟುವಟಿಕೆ. ಸಾಹಿತ್ಯವನ್ನೇ ಸಾಮಗ್ರಿಯಾಗಿಟ್ಟುಕೊಂಡು ಸಾಹಿತ್ಯಕ ಉದ್ದೇಶಕ್ಕೆ ಹೊರತಾಗಿ ನಿಲ್ಲುವ ಸಂಶೋಧನೆಗಳೂ ಉಂಟು. ಉದಾಹರಣೆಗೆ, ಸಾಹಿತ್ಯವನ್ನು ಭಾಷಾವಿಜ್ಞಾನಿ, ಜಾನಪದ ಶಾಸ್ತ್ರಜ್ಞ, ಇತಿಹಾಸಕಾರ, ಮನೋವಿಜ್ಞಾನಿಗಳು ತಮ್ಮದೇ ರೀತಿಯಲ್ಲಿ ಆನ್ವಯಿಕವಾಗಿ ಬಳಸಿಕೊಳ್ಳಬಹುದು. ಇಂಥ ಅಧ್ಯಯನಗಳನ್ನು ಗಮನಿಸುವುದರಿಂದ ಸಾಹಿತ್ಯದ ವಿದ್ಯಾರ್ಥಿಗಳಿಗೆ ಲಾಭವುಂಟು. ಈಗಂತೂ ಯಾವುದೇ ಶಿಸ್ತು ತಾನೇ ಸರ್ವತಂತ್ರ ಸ್ವತಂತ್ರವಾಗಿ ಉಳಿಯುತ್ತಿಲ್ಲ. ಸಸ್ಯವಿಜ್ಞಾನಿಗಳೂ ಪಂಪ ಹರಿಹರರನ್ನು ಓದಿ ಲಾಭ ಪಡೆಯಬಲ್ಲರು ಮತ್ತು ಆ ಸಸ್ಯ ವಿಜ್ಞಾನಿಗಳ ಬರಹಗಳಿಂದ ಸಾಹಿತ್ಯದ ವಿದ್ಯಾರ್ಥಿಗಳಿಗೂ ಲಾಭವುಂಟು. ಆ ಎಲ್ಲ ಮಾತುಗಳು ಹಾಗಿರಲಿ. ನಾನು ಹೇಳಬೇಕಾಗಿರುವುದೆಂದರೆ ಸಂಶೋಧನೆ ಎಂಬುದು ಸಾಹಿತ್ಯವನ್ನೇ ವಸ್ತುವಾಗಿ ಮಾಡಿಕೊಂಡು ನಡೆಯಬಲ್ಲ ಒಂದು ಸ್ವತಂತ್ರ ಚಟುವಟಿಕೆ. ಅದರ ಸಾಹಿತ್ಯದ ಉದ್ದೇಶಕ್ಕೆ ಅನುಗುಣವಾಗಿಯೂ ಸಂಶೋಧನೆ ಹೇಗೆ ಪ್ರಸ್ತುತವಾಗಿದೆಯೆಂಬುದರ ಕಡೆ ನಾನು ಇಲ್ಲಿ ಹೆಚ್ಚು ಗಮನ ಕೊಡಲು ಪ್ರಯತ್ನಿಸುತ್ತೇನೆ.

ಸಂಶೋಧನೆ ಮತ್ತು ವಿಮರ್ಶೆಗಳು ಮೂಲತಃ ಭಿನ್ನ ಚಟುವಟಿಕೆಗಳೇನೂ ಅಲ್ಲ. ಅವೆರಡೂ ಸಾಹಿತ್ಯವನ್ನು ಅರ್ಥಮಾಡಿಕೊಳ್ಳಲು ಮತ್ತು ಅರ್ಥೈಸಲು ಪ್ರಯತ್ನಿಸುತ್ತವೆ.

ಮತ್ತು ಬಹುತೇಕ ಸಂದರ್ಭಗಳಲ್ಲಿ ಅವುಗಳಲ್ಲಿ ಒಂದನ್ನು ಇನ್ನೊಂದರಿಂದ ಬೇರ್ಪಡಿಸಲಾಗದಷ್ಟು ಹೆಣೆದುಕೊಂಡಿರುತ್ತವೆ, ಕೆಲವು ಸಾರಿ ಅವೆರಡೂ ಒಂದೇ ಆಗಿರುತ್ತವೆ. ಒಂದನ್ನೊಂದು ಛೇದಿಸಿಕೊಂಡು ಹೋಗುವ ಎಗಡು ವೃತ್ತಗಳಲ್ಲಿ ಮಧ್ಯದ ಪ್ರದೇಶ ಎರಡೂ ವೃತ್ತಗಳಿಗೆ ಸೇರಿರುವಂತೆ. ಸಂಶೋಧನೆ ಮತ್ತು ವಿಮರ್ಶೆಗಳಿಗೆ ಸಮಾನವಾಗಿ ಸೇರುವ ಕ್ಷೇತ್ರಗಳಿವೆ. ಒಂದು ಸ್ಪಷ್ಟ ಉದಾಹರಣೆಯೆಂದರೆ ಸಾಹಿತ್ಯ ಚರಿತ್ರೆ. ಯಾವುದೇ ಸಾಹಿತ್ಯದ ಚರಿತ್ರೆ ಬರಿಯ ಸಂಶೋಧನೆಯೂ ಅಲ್ಲ, ಬರಿಯ ವಿಮರ್ಶೆಯೂ ಅಲ್ಲ; ಅಥವಾ ಅದು ಸಂಶೋಧನೆಯೂ ಹೌದು, ವಿಮರ್ಶೆಯೂ ಹೌದು. ಅದು ಸಂಶೋಧನೆ, ಏಕೆಂದರೆ ಸಾಹಿತ್ಯಕ್ಕೆ ಹಿನ್ನೆಲೆಯಾದ ರಾಜಕೀಯ, ಸಾಮಾಜಿಕ, ಮತೀಯ ಶಕ್ತಿಗಳ ಪರಸ್ಪರ ಪ್ರತಿಕ್ರಿಯೆಗಳು, ಕವಿಕಾಲ ವಿಚಾರಗಳು, ಆಕರಗಳು ಇತ್ಯಾದಿಗಳ ವಿವೇಚನೆ ಅಲ್ಲುಂಟು. ಅದು ವಿಮರ್ಶೆ, ಏಕೆಂದರೆ ಕೃತಿಯ ವಿಶ್ಲೇಷಣೆ, ಮೌಲ್ಯನಿರ್ಣಯ ಅಲ್ಲುಂಟು. ಈ ಎಲ್ಲವನ್ನೂ ಒಟ್ಟು ಸಾಹಿತ್ಯದ ಅಖಂಡ ಬೆಳವಣಿಗೆಯ ಜೊತೆ ಸಾವಯವ ಸಂಬಂಧವನ್ನು ಹೊಂದಿರುವಂತೆ ಬಳಸಿಕೊಂಡಿರಲಾಗುತ್ತದೆ. ಮತ್ತು ಅಲ್ಲಿ, ಎಂದರೆ ಸಾಹಿತ್ಯ ಚರಿತ್ರೆಯಲ್ಲಿ ಇದು ಸಂಶೋಧನೆ, ಇದು ವಿಮರ್ಶೆ ಎಂದು ಬೇರ್ಪಡಿಸುವಷ್ಟು ಸಡಿಲವಾಗಿ ಚರ್ಚೆಗಳು ಬಂದಿರುವುದಿಲ್ಲ. ಕಾವ್ಯಮೀಮಾಂಸೆ ಸಂಶೋಧನೆಯೂ ಹೌದು, ವಿಮರ್ಶೆಯೂ ಹೌದು. ಇಲ್ಲಿ ವಿಶಿಷ್ಟ ಕೃತಿ ಅಥವಾ ಕೃತಿಗಳ ವಿಚಾರಕ್ಕಿಂತ, ಒಟ್ಟು ಸಾಹಿತ್ಯ ಮೂಡಿ ಬರುವ ರೀತಿ, ಸಾಹಿತ್ಯದ ಲಕ್ಷಣಗಳು, ಭಾಷಿಕ ವಿಶ್ಲೇಷಣೆ, ಅನುಭವದ ಮನೋವೈಜ್ಞಾನಿಕ ಚರ್ಚೆ ಇವೇ ಮೊದಲಾದ ಸಾಮಾನ್ಯ (general) ಸಂಗತಿಗಳ ವಿಚಾರ ನಡೆಯುತ್ತದೆ. ಆದ್ದರಿಂದ ಅದು ಸಂಶೋಧನೆಯೂ ಹೌದು. ಕಾವ್ಯ ಭಾಷೆಯ ವಿಶ್ಲೇಷಣೆಯು ವಿಮರ್ಶೆಯೂ ಹೌದು ಎಂಬುದನ್ನು ಗಮನಿಸಿದಾಗ, ಕಾವ್ಯ ಮೀಮಾಂಸೆ ಒಟ್ಟಾರೆ ಸಂಶೋಧನೆಯೇ ವಿಮರ್ಶೆಯೇ ಎಂಬ ಪ್ರಶ್ನೆಗೆ ತಟಕ್ಕನೆ ಉತ್ತರ ಕೊಡುವುದು ಕಷ್ಟ. ಎರಡೂ ಹೌದು ಅಥವಾ ಎರಡೂ ಅಲ್ಲ ಎಂಬ ಉತ್ತರಗಳಲ್ಲಿ ಒಂದನ್ನು ಅಥವಾ ಎರಡನ್ನೂ ಸಮರ್ಥಿಸಿಕೊಳ್ಳಬಹುದು. ಆದರೆ ಅದು ಸಂಶೋಧನೆಯೇ ಸರಿ ಅಥವಾ ವಿಮರ್ಶೆಯೇ ಸರಿ ಎಂಬ ವಾದಗಳ ವಿರುದ್ಧವಾಗಿ ಬೇಕಾದಷ್ಟು ಮಾತನಾಡಬಹುದು.

ಒಬ್ಬ ಕವಿಯ ಕಾಲ, ದೇಶಗಳ ಚರ್ಚೆ ಸ್ಪಷ್ಟವಾಗಿ ಸಂಶೋಧನೆ; ಒಂದು ಕೃತಿಯ ವಿಶ್ಲೇಷಣೆ ಸ್ಪಷ್ಟವಾಗಿ ವಿಮರ್ಶೆ. ಸಂಶೋಧನೆ ಮತ್ತು ವಿಮರ್ಶೆಗಳನ್ನು ಹೀಗೆ ಬೇರ್ಪಡಿಸಿಕೊಳ್ಳುವುದು ಅಗತ್ಯ ಮತ್ತು ತರ್ಕಬದ್ಧ. ಆದರೆ ಅಂತಹ ಬೇರ್ಪಾಟನ್ನು ಬಹು ದೂರ ಕೊಂಡೊಯ್ಯುವುದು ಅಪಾಯಕಾರಿ. ಅವೆರಡೂ ಪರಸ್ಪರ ಸಂಧಿಸುವ, ಒಂದರ ಕ್ಷೇತ್ರವನ್ನೊಂದು ಛೇದಿಸಿಕೊಂಡು ಹೋಗುವ, ಎರಡೂ ಬಹಳ ಹತ್ತಿರಕ್ಕೆ ಬರುವ ಮತ್ತು ಎರಡೂ ಒಂದಾಗುವ ಸಂಗತಿಯನ್ನಾಗಲೇ ಹಿಂದೆ ಗುರುತಿಸಲಾಗಿದೆ. ಸಂಶೋಧನೆಯೆಂದರೆ ಕವಿಯ ಕಾಲ ದೇಶ ಮತ, ಶಬ್ದಾರ್ಥ, ಗ್ರಂಥ ಸಂಪಾದನೆ ಇವುಗಳ ಚರ್ಚೆ ಮಾತ್ರ ಎಂಬ ತಪ್ಪು ಕಲ್ಪನೆ ಮಾಡಿರುವ ಹಾವಳಿ ಅನೂಹ್ಯ. ಸಂಶೋಧಕರೆಂದರೆ ಆಧುನಿಕತೆಯಿಂದ ದೂರವಾದ, ಒಣ ಸಂಗತಿಗಳನ್ನೇ ಮೆಲುಕು ಹಾಕುವ ನೀರಸರು ಎಂಬ ಭಾವನೆ ಇದೆ.

ಮೇಲಿನಂತಹ ತಪ್ಪು ಕಲ್ಪನೆಗಳಿಂದಾಗಿ ಸಂಶೋಧನ ಕ್ಷೇತ್ರಕ್ಕೆ ಉತ್ತಮ ಮನಸ್ಸುಗಳು ಪ್ರವೇಶ ಮಾಡಲು ಬಹಳವಾಗಿ ಹಿಂದೇಟು ಹಾಕುತ್ತಿವೆ. ನಾನು ಆ ಬಗ್ಗೆ ವಿವರವಾದ ಚರ್ಚೆಗೆ ಹೋಗುವುದಿಲ್ಲ, ಏಕೆಂದರೆ, ಇಲ್ಲೆಲ್ಲ ಸುಲಭಕೀರ್ತ್ಯಪೇಕ್ಷೆ ಕಡಮೆ ಶ್ರಮ ಇತ್ಯಾದಿ ಆಕರ್ಷಣೆಗಳೂ ಸಂಶೋಧನ ಕ್ಷೇತ್ರಕ್ಕೆ ಹಲವರು ಪ್ರವೇಶಿಸುವುದಕ್ಕೆ ಅಡ್ಡಿಯಾದಂತೆ ತೋರುತ್ತದೆ. ನನ್ನ ಮುಖ್ಯ ವಾದವೆಂದರೆ, ಕಾರಣಗಳು ಏನೇ ಇರಲಿ, ಅನೇಕ ಶ್ರೇಷ್ಠ ಮನಸ್ಸುಗಳನ್ನು ಕಳೆದುಕೊಂಡಿರುವ ಸಂಶೋಧನ ಕ್ಷೇತ್ರವು ನಷ್ಟಗಳನ್ನು ಅನುಭವಿಸಿದೆ.

ಯಾವುದೇ ಪ್ರಾಚೀನ ಸಾಹಿತ್ಯದ ಸರಿಯಾದ ತಿಳುವಳಿಕೆಗೆ ಕಾಲ, ದೇಶ, ಮತಗಳ ಚರ್ಚೆ ತೀರ ಅಗತ್ಯ. ಒಬ್ಬ ಕವಿಯ ಕಾಲ ಗೊತ್ತಿಲ್ಲದೆ ಅವನ ಬಗ್ಗೆ ಯಾವುದೇ ಸಾರ್ಥಕ ಚರ್ಚೆಯೂ, ಕೊನೆಗೆ ಸರಿಯಾದ ವಿಮರ್ಶೆಯೂ ಅಸಾಧ್ಯವಾಗುತ್ತದೆ. ಇದಕ್ಕೆ ಒಂದು ಸ್ಪಷ್ಟ ಉದಾಹರಣೆಯನ್ನು ತೆಗೆದುಕೊಳ್ಳುತ್ತೇನೆ. ಹಿಂದಿನ ಕವಿಗಳಲ್ಲಿ ಪಂಪನನ್ನು ಕುರಿತು ನಾವು ಎಷ್ಟೋ ಚರ್ಚೆ ಮಾಡಬಹುದು. ಅವನ ಕಾಲ, ದೇಶ, ಮತ, ರಾಜಾಶ್ರಯ, ವಂಶ ತಂದೆ ತಾಯಿ ಸೋದರ, ಹುಟ್ಟೂರು, ಸಾಮಾಜಿಕ ಹಿನ್ನೆಲೆ ಇತ್ಯಾದಿಗಳು ಗೊತ್ತಿವೆ. ಅವನ ಕಾವ್ಯಭಾಷೆಯಾದ ಬೆಳ್ವೊಲದ (ಧಾರವಾಡ) ಕನ್ನಡವು ದೂರದ ಆಂಧ್ರದಲ್ಲಿದ್ದ ಪಂಪನಿಗೆ ಕರಗತವಾದ ಬಗೆ ಹೇಗೆ ಎಂಬುದನ್ನು ವಿವರಿಸುವ ಸ್ಥಿತಿಯಲ್ಲಿ ನಾವಿದ್ದೇವೆ. ಆ ಕವಿಯ ಬಗ್ಗೆ ತಿಳಿಯಬೇಕಾದ ಎಷ್ಟೋ ಸಂಗತಿಗಳು ಇನ್ನೂ ಇವೆ ಎಂಬುದು ನಿಜವಾದರೂ ಪಂಪ ಕವಿ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ನಮ್ಮ ಅದೃಷ್ಟಕ್ಕೆ ಅನಾಥನಾಗಿ ನಿಂತಿಲ್ಲ. ಒಂದು ವೇಳೆ, ಅವನ ಎರಡೂ ಕೃತಿಗಳೂ ಲಭ್ಯವಾಗಿ ಅವುಗಳಲ್ಲಿ ಪಂಪನ ಸ್ವಕೀಯ ವೃತ್ತಾಂತದ ಒಂದು ಮಾತೂ ಇರಲಿಲ್ಲವೆಂದು, ಕವಿಯ ಹೆಸರೂ ಇರಲಿಲ್ಲವೆಂದೂ ಇಟ್ಟುಕೊಳ್ಳೋಣ. ಆಗ ಪಂಪನ ಕೃತಿಗಳನ್ನು ಕುರಿತಂತೆ ಮಾತನಾಡುವಾಗ ಎಷ್ಟು ಕೈಕಟ್ಟುತ್ತದೆ ಎಂಬುದನ್ನು ಸುಲಭವಾಗಿ ಕಲ್ಪಿಸಿಕೊಳ್ಳಬಹುದು. ಕವಿಯ ಸ್ವಕೀಯ ಸಂಗತಿಗಳು, ಅವನ ಕಾಲದ ಹಿನ್ನೆಲೆ ಇವು ಕವಿಯನ್ನು ಒಂದು ನಿರ್ದಿಷ್ಟ ಪರಿಸರದಲ್ಲಿಟ್ಟು ನೋಡಲು ಅನುವು ಮಾಡಿಕೊಡುತ್ತವೆ. ಮೀನನ್ನೋ ಕಾಡುಪ್ರಾಣಿಯನ್ನೋ ಅವುಗಳ ವಾಸಸ್ಥಾನಗಳಾದ ನೀರಲ್ಲಿ ಕಾಡಲ್ಲಿ ನೋಡಿದಂತಾಗುತ್ತದೆ. ಬರಿಯ ಕೃತಿ ಸಿಕ್ಕು ಕವಿಯ ಬಗ್ಗೆ ಏನೂ ಗೊತ್ತಿರದಿದ್ದರೆ ಮೀನನ್ನೂ ಕಾಡುಪ್ರಾಣಿಯನ್ನೂ ಪ್ರತ್ಯೇಕಿಸಿ ಗಾಜಿನ ಪೆಟ್ಟಿಗೆಯಲ್ಲಿ ಅಥವಾ ಪಂಜರದಲ್ಲಿಟ್ಟು ನೋಡಿದಂತಹ ಅನುಭವವಾಗುತ್ತದೆ. ಇದಕ್ಕೆ ಬಹಳ ಒಳ್ಳೆಯ ಉದಾಹರಣೆ, ವಡ್ಡಾರಾಧನೆ. ಈ ಅತಿಶ್ರೇಷ್ಠ ಪ್ರಾಚೀನ ಗದ್ಯಕೃತಿಯ ಹೆಸರು, ಕವಿ, ಅವನ ಕಾಲ ದೇಶ ಸಮಾಜ ಇವು ಯಾವುವೂ ಸರಿಯಾಗಿ ನಮಗೆ ತಿಳಿದಿಲ್ಲ. ಎಲ್ಲವೂ ಸಂದೇಹಾಸ್ಪದ. ದೊರೆತಿರುವ ಹತ್ತೊಂಬತ್ತು ಕತೆಗಳೊಂದೇ ಖಚಿತ. ವಡ್ಡಾರಾಧನೆಯ ಕಥನ ಶೈಲಿ, ಅದರ ಗದ್ಯದ ಸೊಗಸಿನ ಬಗ್ಗೆ ಮಾತನಾಡಬಹುದು. ಹೆಚ್ಚಿನ ಆಳ ವ್ಯಾಖ್ಯಾನಗಳಿಗೆ, ಆ ಕೃತಿಯನ್ನು ಅದು ಹುಟ್ಟಿದ ಕಾಲ, ಪರಿಸರದಲ್ಲಿ ಇಟ್ಟು ನೋಡಲು ಅವಕಾಶವಾಗದೆ, ದೊರಕಿದ್ದಷ್ಟಕ್ಕೆ ಸಮಾಧಾನ ಪಟ್ಟುಕೊಂಡು ಸುಮ್ಮನಾಗಬೇಕಾಗಿದೆ. ಪಂಪನ ಬಗ್ಗೆ ಅರ್ಥಪೂರ್ಣ ವಿಮರ್ಶೆ ಸಾಧ್ಯವಾಗಿರುವುದಕ್ಕೆ ವಡ್ಡಾರಾಧನೆಯ ಬಗ್ಗೆ ಅಷ್ಟು ಸಾಧ್ಯವಾಗದ್ದಕ್ಕೆ ಕಾರಣಗಳಲ್ಲಿ ವಡ್ಡಾರಾಧನೆಯ ಬಗ್ಗೆ ಹೆಚ್ಚಿನ

ಅರಿವು ನಮಗಿಲ್ಲದೇ ಹೋಗಿರುವುದು. ಇತಿಹಾಸ, ಶಾಸನ ಸಂಶೋಧನೆಗಳು ಪಂಪನ ಹಿನ್ನೆಲೆಯನ್ನು ಕೊಟ್ಟಿವೆ; ಗ್ರಂಥಸಂಪಾದನೆ ಪಂಪನ ಕೃತಿಗಳ ತಕ್ಕಮಟ್ಟಿನ ಒಳ್ಳೆಯ ಪಾಠಗಳನ್ನು ಒದಗಿಸಿದೆ. ಜಿನಸೇನ ವ್ಯಾಸರೊಂದಿಗೆ ಮಾಡಿರುವ ತೌಲನಿಕ ವಿವೇಚನೆ ಅವನ ವೈಶಿಷ್ಟ್ಯವನ್ನು ಗುರುತಿಸಿದೆ. ವಡ್ಡಾರಾಧನೆಯ ಬಗ್ಗೆ ಹೆಚ್ಚಿನ ಸಾಮಗ್ರಿ ದೊರೆತು ಸಂಶೋಧನೆಗಳು ನಡೆದಲ್ಲಿ ಆ ಕೃತಿಯ ಬಗ್ಗೆಯೂ ಅರ್ಥಪೂರ್ಣ ಸಂವಾದ ಸಾಧ್ಯವಾಗುತ್ತದೆ. ವಡ್ಡಾರಾಧನೆಯ ಒಳ್ಳೆಯ ಪಾಠ ನಮಗೆ ದೊರೆತಿದೆಯೆಂಬ ಸಂಗತಿಯನ್ನು ಬಿಟ್ಟರೆ ಉಳಿದಂತೆ ಎಲ್ಲವೂ ಅತೃಪ್ತಿಕರ.

ಅಂಬಿಗರ ಚೌಡಯ್ಯನ ಯಾವುದೇ ವೈಯಕ್ತಿಕ ವಿವರಗಳು ನಮಗೆ ಲಭ್ಯವಾಗದಿರುವುದು, ಕೊನೆಗೆ ಅವನ ಬಗ್ಗೆ ದಂತಕತೆಗಳೂ ದೊರೆಯದಿರುವುದು ಆ ಗಣ್ಯ ವಚನಕಾರನನ್ನು ಓದುಗರಿಂದ ದೂರವಿಟ್ಟಿರಲು ಕಾರಣವಾಗಿದೆ. ಅವನ ಬಗ್ಗೆ ಏನಾದರೂ ಹೆಚ್ಚಿನ ಮಾಹಿತಿ ಸಂಶೋಧನೆಗಳಿಂದ ಲಭ್ಯವಾದುದಾದರೆ, ಅವನ ಅಧ್ಯಯನಕ್ಕೆ ಒಂದು ಹೊಸ ಚಾಲನೆ, ಒಂದು ಹೊಸ ಆಯಾಮ ಲಭ್ಯವಾಗುತ್ತದೆ.

ಸಂಶೋಧನೆ ಮತ್ತು ವಿಮರ್ಶೆಗಳು ಬೌದ್ಧಿಕ ಚಟುವಟಿಕೆಗಳು. ವಿಮರ್ಶೆ ಸಾಹಿತ್ಯವನ್ನು ಅನುಭವದ ರೂಪೀಕರಣವಾಗಿ ನೋಡುತ್ತದೆ, ಮತ್ತು ಸಾಹಿತ್ಯವನ್ನು ಒಂದು ಅನುಭವವಾಗಿ ಅರ್ಥೈಸುವ, ಅರ್ಥೈಸಿಕೊಳ್ಳಲು ಇತರರಿಗೆ ಸಹಾಯ ಮಾಡುವ ಮತ್ತು ಬೆಲೆ ಕಟ್ಟುವ ಉದ್ದೇಶಗಳನ್ನು ಹೊಂದಿರುತ್ತದೆ. ವಸ್ತುನಿಷ್ಠ ವಿಮರ್ಶೆ ಎಂಬುದು ಇನ್ನೂ ಸಾಧ್ಯವಾಗಿಲ್ಲ. ಎಂದರೆ ಒಂದು ಕೃತಿಯ ಸ್ವರೂಪ, ಅದರ ಬೆಲೆ ಇಷ್ಟೇ ಎಂಬುದನ್ನು ಸರ್ವಸಮ್ಮತ ರೀತಿಯಲ್ಲಿ ಹೇಳುವಂತಹ ಸೂತ್ರಗಳು ಇನ್ನೂ ಹುಟ್ಟಿಕೊಂಡಿಲ್ಲ. ಅಂತಹ ಸೂತ್ರಗಳನ್ನು ರೂಪಿಸುವುದು ಒಂದು ರೀತಿಯಲ್ಲಿ ಅಸಾಧ್ಯವೂ ಹೌದು ಮತ್ತು ಅದಕ್ಕಿಂತ ಹೆಚ್ಚಾಗಿ ಅನಗತ್ಯವೂ ಹೌದೋ ಏನೋ ! ಒಂದು ಕಲಾಕೃತಿ ಒಬ್ಬ ಓದುಗ ಅಥವಾ ನೋಟಕನಿಗೆ ಕಾಲದಿಂದ ಕಾಲಕ್ಕೆ ತನ್ನ ಅರ್ಥಗಳನ್ನು ಬೇರೆ ಬೇರೆ ರೀತಿಗಳಲ್ಲಿ ಬಿಟ್ಟುಕೊಡಲು ಸಾಧ್ಯವಿರುವಾಗ, ಎಂದರೆ ಒಬ್ಬನೇ ವ್ಯಕ್ತಿ ಬೇರೆ ಬೇರೆ ಕಾಲಗಳಲ್ಲಿ ಒಂದೇ ಕೃತಿಯ ಬಗ್ಗೆ ಭಿನ್ನ ರೀತಿಯಲ್ಲಿ ಪ್ರತಿಕ್ರಿಯಿಸುವ ಸಾಧ್ಯತೆಗಳಿರುವಾಗ, ಭಿನ್ನ ಕಾಲದ ವ್ಯಕ್ತಿಗಳ ಅಥವಾ ಒಂದೇ ಕಾಲದ ಭಿನ್ನ ವ್ಯಕ್ತಿಗಳ ಪ್ರತಿಕ್ರಿಯೆಗಳೂ ಭಿನ್ನವಾಗಿರುವುದು ಸಾಧ್ಯ; ಸಾಧ್ಯ ಮಾತ್ರವಲ್ಲ, ಅದೇ ವಾಸ್ತವ ಸಂಗತಿ. ಹೀಗೆ ಭಿನ್ನವಾಗಿರುವುದು ಸಾಹಿತ್ಯದ ಉದ್ದೇಶದ ದೃಷ್ಟಿಯಿಂದ ಒಂದು ಕೊರತೆ ಎನಿಸುವುದಿಲ್ಲ.

ಸಂಶೋಧನೆ ಸಾಹಿತ್ಯ ಕೃತಿಯನ್ನು ಒಂದು ದಾಖಲೆಯಾಗಿ ನೋಡುತ್ತದೆ. ವಿಮರ್ಶೆಯಂತೆಯೇ ಸಂಶೋಧನೆಯ ಗುರಿಯೂ ಸಾಹಿತ್ಯವನ್ನು ಬೇರೆ ಬೇರೆ ನಿಲುವುಗಳಿಂದ ದೀಪ್ತವಾಗುವಂತೆ ಮಾಡುವುದು. ಹೀಗೆ ಮಾಡುವಲ್ಲಿ, ಅದರ ರೀತಿ ವಸ್ತುನಿಷ್ಠವಾಗಿರುತ್ತದೆ. ಅದು ನೀಡುವ ಹೇಳಿಕೆ ಸರ್ವಸಮ್ಮತವಾಗಿರಬೇಕು. ಹಾಗೆ ಸರ್ವಸಮ್ಮತವಾಗಿರದಿದ್ದರೆ ಅದನ್ನೂ ಅಲ್ಲೇ ಸೂಚಿಸಬೇಕು. ಎಂದರೆ, ಅದರ ಫಲಿತಾಂಶಗಳನ್ನು ಇತರರು ಪರೀಕ್ಷಿಸಿ

ತಾಳೆ ನೋಡಲು (verify) ಬರುತ್ತದೆ. ತಾತ್ವಿಕವಾಗಿ ಹೇಳುವುದಾದರೆ, ಸಾಕ್ಷ್ಯಾಧಾರಗಳು ಒಬ್ಬನಿಗೆ ಒಂದು ನಿರ್ದಿಷ್ಟ ತೀರ್ಮಾನಕ್ಕೆ ಬರಲು ಅನುವು ಮಾಡಿಕೊಟ್ಟರೆ ಅದೇ ಸಾಕ್ಷ್ಯಾಧಾರಗಳು ಇನ್ನೊಬ್ಬ ಸಂಶೋಧಕನಿಗೂ ಅದೇ ತೀರ್ಮಾನಕ್ಕೆ ಬರಲು ಅನುವು ಮಾಡಿಕೊಡುತ್ತವೆ (ಸಾಕ್ಷ್ಯಾಧಾರಗಳು ವಿಶ್ವಾಸ ಪಾತ್ರವಾಗಿರಬೇಕು ಅಷ್ಟೇ). ಎಂದರೆ, ಒಂದೇ ಬಗೆಯ ಸಾಕ್ಷ್ಯಾಧಾರಗಳನ್ನು ಇಟ್ಟುಕೊಂಡು ಇಬ್ಬರು ಸಂಶೋಧಕರು ಎರಡು ಬಗೆಯ ತೀರ್ಮಾನಗಳಿಗೆ ಬರಲು ಸಾಧ್ಯವಾಗದು. ಇದು, ಮೇಲೆ ಸೂಚಿಸಿದಂತೆ ತತ್ವ (theory) ಮತ್ತು ಬಹುತೇಕವಾಗಿ ಸಂಶೋಧನೆಯ ರೀತಿ ಎಂದರೆ ಅದೇ. ಆದರೆ ಇಲ್ಲೂ ಅಪವಾದಗಳುಂಟು. ಮತ್ತು ಒಂದೇ ಬಗೆಯ ಸಾಕ್ಷ್ಯಾಧಾರಗಳನ್ನು ಭಿನ್ನ ರೀತಿಯಲ್ಲಿ ನೋಡಿ ವ್ಯಾಖ್ಯಾನಿಸುವುದೂ ಸಾಧ್ಯ. ಆದರೆ ವಿಮರ್ಶೆಯಲ್ಲಿರುವಂತೆ ವೈಯಕ್ತಿಕವಾದ ಅನ್ನಿಸಿಕೆಗಳಿಗೆ ಇಲ್ಲಿ ಸ್ಥಾನವಿಲ್ಲ. ಇದು ಆದರ್ಶ ಮತ್ತು ಇದನ್ನು ಸಾಧಿಸಿದಷ್ಟು ಒಬ್ಬನು ಶ್ರೇಷ್ಠ ಸಂಶೋಧಕನೆನ್ನಿಸಿಕೊಳ್ಳುತ್ತಾನೆ.

ಸಂಶೋಧನ ಚಟುವಟಿಕೆ ವಿಮರ್ಶೆಯಿಂದ ಮುಕ್ತಿಗೊಂಡು ಸ್ವತಂತ್ರವಾಗಿ ನಡೆಯುತ್ತದೆ. ಎಂದರೆ, ಸಂಶೋಧಕನಿಗೆ ವಿಮರ್ಶೆಯ ಪರಿಚಯ ಇರಬಹುದು, ಇಲ್ಲದಿರಬಹುದು. ಅವನಿಗೆ ಸಾಹಿತ್ಯ ವಿಮರ್ಶೆಯ ಪರಿಚಯವಿದ್ದರೆ ಅವನಿಗೆ ಅವನ ದೃಷ್ಟಿಯಿಂದ ಒಳ್ಳೆಯದೇ. ಸಂಶೋಧಕನಿಗೆ ಯಾವುದು ಬೇಕು ಬೇಡ ಎಂಬ ಪ್ರಶ್ನೆಯೇ ಉದ್ಭವಿಸುವುದಿಲ್ಲ. ಆದರೆ ಅವನ ಚಟುವಟಿಕೆ ವಿಮರ್ಶೆಯ ಸಹಾಯವಿಲ್ಲದೆಯೇ ನಡೆಯಬಲ್ಲುದು. ಆದರೆ, ಸಂಶೋಧನೆಯ ಸಹಾಯವಿಲ್ಲದೆ ನಡೆಯುವ ವಿಮರ್ಶೆಯ ಚಟುವಟಿಕೆಯನ್ನು ಕಲ್ಪಿಸಿಕೊಳ್ಳಲು ಸಾಧ್ಯವೇ ಇಲ್ಲ. ಒಂದು ಕೃತಿಯ ಶುದ್ಧ ಪಾಠದಿಂದ ಹಿಡಿದು ಆ ಕೃತಿಯ ಹಿನ್ನೆಲೆಯ ಸಮಸ್ತದವರೆಗೆ ಆ ಕೃತಿಯ ಅಭ್ಯಾಸಕ್ಕೆ ಬೇಕಾದ ಎಲ್ಲ ಸಾಮಗ್ರಿಯು ಸಂಶೋಧನೆಯ ಕಾರ್ಖಾನೆಯಿಂದ ಸರಬರಾಜಾಗಬೇಕಾಗುತ್ತದೆ. ಸಂಶೋಧನೆಯ ಒಂದು ಹೊಸ ಶೋಧವು ವಿಮರ್ಶೆಯ ಒಂದು ಹೊಸ ನೋಟಕ್ಕೆ ಕಾರಣವಾಗಬಹುದು. ಇಲ್ಲಿ ಸಂಶೋಧನೆಯ ಮೇಲ್ಮೆಯನ್ನು ನಾನು ಸ್ಥಾಪಿಸಲು ಯತ್ನಿಸುತ್ತಿದ್ದೇನೆಂದು ಯಾರಾದರೂ ಭಾವಿಸಿದರೆ ಅದು ತೀರ ತಪ್ಪು. ಮೇಲು ಕೀಳುಗಳ ಪ್ರಶ್ನೆಗಿಂತ ಯಾವುದು ಮೊದಲು ಯಾವುದು ಅನಂತರ ಅಥವಾ ಯಾವುದು ಯಾವುದು ಏನೇನು ಎಂಬುದು ಮಾತ್ರ ಇಲ್ಲಿ ಮುಖ್ಯಪ್ರಶ್ನೆ. ವಿಮರ್ಶೆಯ ಹೊಸ ನಿಲುವುಗಳಿಂದ ಸಂಶೋಧನೆಯ ಚಟುವಟಿಕೆಯ ಮೇಲೆ ಯಾವುದೇ ಪರಿಣಾಮವೂ ಆಗುವುದಿಲ್ಲ; ಏಕೆಂದರೆ ಸಂಶೋಧನೆಯು ವಿಮರ್ಶೆಯಿಂದ ಸ್ವತಂತ್ರವಾದ ಚಟುವಟಿಕೆ. ಆದರೆ, ಹೊಸ ಸಂಶೋಧನೆಗಳು ಒಂದು ಕೃತಿಯನ್ನು ನೋಡುವ ನಿಲುವನ್ನು ಬದಲಾಯಿಸಬಲ್ಲವು. ಎಂದರೆ, ಯಾವುದೇ ವಿಮರ್ಶೆ ಕಾಲದಿಂದ ಕಾಲಕ್ಕೆ ನಡೆಯುವ ಶೋಧಗಳನ್ನು ಗುರುತಿಸುತ್ತ, ಅಲ್ಲಿಂದ ಲಾಭವನ್ನು ಪಡೆದು ಬೆಳೆಯಬೇಕಾಗುತ್ತದೆ. ಒಂದು ಕೃತಿಯನ್ನು ಅಥವಾ ಕವಿಯನ್ನು ಹೆಚ್ಚು ವಿಶದವಾಗಿ ಗ್ರಹಿಸಲು ಸಂಶೋಧನೆ ಒದಗಿಸುವ ಸಹಾಯಗಳನ್ನು ವಿಮರ್ಶೆ ತೆಗೆದುಕೊಳ್ಳುತ್ತ ಹೋಗುವುದು ಸಹಜವಾದುದೇ.

ಇದಕ್ಕೆ ಕೆಲವು ಉದಾಹರಣೆಗಳನ್ನು ತೆಗೆದುಕೊಳ್ಳುತ್ತೇನೆ. ಪಂಪನ ತಮ್ಮ ಜಿನವಲ್ಲಭನ ಶಾಸನ ದೊರೆತು, ಪಂಪನ ತಾಯಿ ಧಾರವಾಡ ಜಿಲ್ಲೆಯ ಅಣ್ಣಿಗೇರಿಯವಳು ಎಂಬ ಅಲ್ಲಿನ ಸಂಗತಿ ನೇರವಾಗಿ ಪಂಪವನ್ನು ಕರ್ನಾಟಕಕ್ಕೆ ಸಂಬಂಧಿಸುತ್ತದೆ. ಮತ್ತು ತನ್ನ ಕಾವ್ಯದ ಭಾಷೆ ಪುಲಿಗೆರೆಯ ಕನ್ನಡ ಎಂಬ ಅವನದೇ ಹೇಳಿಕೆ ಇದ್ದಕ್ಕಿದ್ದಂತೆ ಅರ್ಥಪೂರ್ಣವಾಗುತ್ತದೆ. ಪಂಪನ ಭಾಷೆಯನ್ನು ಕುರಿತು ವಿಶ್ಲೇಷಿಸುವವರು ಮೇಲಿನ ಅಂಶವನ್ನು ಗಮನಿಸದಿರಲು ಸಾಧ್ಯವೇ ಇಲ್ಲ. ಹನ್ನೊಂದನೆಯ ಶತಮಾನದಲ್ಲಿ, ಅದರಲ್ಲೂ ಆರನೆಯ ವಿಕ್ರಮಾದಿತ್ಯನ ಕಾಲದಲ್ಲಿ ಬ್ರಾಹ್ಮಣರಿಗೆ ಮತ್ತು ಅಗ್ರಹಾರಗಳಿಗೆ ಹಿಂದೆಂದೂ ಇಲ್ಲದಷ್ಟು ಹೆಚ್ಚಿನ ದತ್ತಿ, ಅಧಿಕಾರಗಳು, ರಾಜಕೀಯ ಹುದ್ದೆಗಳು ದೊರಕಿದುವು ಎನ್ನುವ ಶೋಧ ಮುಂದಿನ ಶತಮಾನದಲ್ಲಿ ನಡೆದ ವೀರಶೈವ ಚಳವಳಿಯ ವ್ಯಾಖ್ಯಾನಕ್ಕೆ ಎಷ್ಟು ಒಳ್ಳೆಯ ಸೂಚನೆಗಳನ್ನು ಕೊಡುತ್ತದೆ ! ಅಲ್ಲಮ ಸಾಮಾನ್ಯ ಮನೆತನವೊಂದರಲ್ಲಿ, ಬಹುಶಃ ಶೂದ್ರ ಜಾತಿಯಲ್ಲಿ ಹುಟ್ಟಿ ಬಂದ ಕಲಾವಿದನೆನ್ನುವ ಸಂಗತಿ ಅವನ ವಚನಗಳನ್ನು ಬೇರೊಂದು ಸ್ತರದಲ್ಲಿ ನಿಲ್ಲಿಸುತ್ತದೆ; 'ಎನಗೆಯೂ ಗೊಗೇಶ್ವರ ಲಿಂಗಕ್ಕೆಯೂ ಎತ್ತಣಿಂದೆತ್ತಣ ಸಂಬಂಧವಯ್ಯಾ' ಎಂಬ ಅವನ ಉದ್ಗಾರ ಸ್ವಾಭಾವಿಕವಾದುದೆನ್ನಿಸುತ್ತದೆ. ಕಾಮಲತೆಯ ಸಾವಿನಿಂದ ದಿಕ್ಕುದಪ್ಪಿದಂತಾಗಿದ್ದ ಅವನಿಗೆ ಇಷ್ಟಲಿಂಗ ದೊರೆತುದು ಅವನ ಬದುಕಿನ ದಿಕ್ಕನ್ನೇ ಬದಲಾಯಿಸಿತು. ದೇವರ ದಾಸಿಮಯ್ಯ ಬೇರೆ ಜೇಡರ ದಾಸಿಮಯ್ಯ ಬೇರೆ, ಜೇಡರ ದಾಸಿಮಯ್ಯ ಬಸವನ ಹಿರಿಯ ಸಮಕಾಲೀನನಾದ ವಚನಕಾರ ಎಂಬ ಈಚಿನ ಶೋಧ ದಾಸಿಮಯ್ಯನನ್ನು ವಚನ ಚಳವಳಿಯ ಕಕ್ಷೆಯೊಳಕ್ಕೆ ನಿಲ್ಲಿಸುತ್ತದೆ. 'ಉಳ್ಳವರು ಶಿವಾಲಯವ ಮಾಡುವರು' ಎಂಬ ಬಸವನ ವಚನಕ್ಕೆ ಆ ಶತಮಾನದ ಪ್ರಬಲ ಲಕುಲೀಶ-ಪಾಶುಪತ ಪರಂಪರೆಯ ಭದ್ರ ಕೋಟೆಯಂತಿದ್ದ ದೇವಾಲಯ ಸಂಪ್ರದಾಯದ ಸಹಾಯವಿಲ್ಲದೆ ಅರ್ಥೈಸಲು ಸಾಧ್ಯವೇ ಇಲ್ಲ. ಎಂದರೆ, ಸಂಶೋಧನೆ ಉದ್ದಕ್ಕೂ ಸಾಹಿತ್ಯದ ಮೇಲೆ ಶೋಧನ ಬೆಳಕನ್ನು ಚೆಲ್ಲುತ್ತಾ ಹೋಗುವುದರಿಂದ ಸಾಹಿತ್ಯವು ಹೆಚ್ಚು ಅರ್ಥಪೂರ್ಣವಾಗುತ್ತಾ ಹೋಗುತ್ತದೆ.

ಆದರೆ, ಸಾಹಿತ್ಯ ಅರ್ಥಪೂರ್ಣವಾಗಲಿ ಎಂಬ ಉದ್ದೇಶವನ್ನಿಟ್ಟುಕೊಂಡು ಸಂಶೋಧನೆ ಹೊರಡುವುದಿಲ್ಲ. ಈ ಮಾತನ್ನು ನಾನು ಸ್ಪಷ್ಟಪಡಿಸದಿದ್ದರೆ ಅಪಾರ್ಥಕ್ಕೆ ಎಡೆಮಾಡಿಕೊಡಬಹುದು. ಸಂಶೋಧನೆಯ ಉದ್ದೇಶ ಹೊಸ ಜ್ಞಾನ ಹೊಸ ನೋಟ. ವಾಸ್ತವವನ್ನು ಅದು ಎತ್ತಿ ತೋರಿಸುತ್ತದೆ ಮತ್ತು ಹಾಗೆ ತೋರಿಸುವುದರಿಂದ ಏನು ಪರಿಣಾಮ ಆಗುತ್ತದೆ ಅಥವಾ ಪ್ರಯೋಜನವೇನು ಎಂಬ ಪ್ರಶ್ನೆ ಸಂಶೋಧಕನಿಗೆ ಅಪ್ರಸ್ತುತ. ತನ್ನ ಸಂಶೋಧನೆಯಿಂದ ಸಾಹಿತ್ಯ ವಿಮರ್ಶೆಗೆ, ಅಥವಾ ಸಾಹಿತ್ಯದ ಮೆಚ್ಚುಗೆಗೆ ಲಾಭವಾದರೆ ಅವನು ಸಂತೋಷಪಡದಷ್ಟು ದಡ್ಡನೇನೂ ಅವನಲ್ಲ. ಅವನ ಆ ಸಂತೋಷ ಅವನ ಸಂಶೋಧನೆಯ ಫಲಿತಾಂಶದ ಪರಿಣಾಮದ ಬಳಿಕದ್ದು. ಆದರೆ ಅವನು ಮೊದಲೇ ಅಂತಹ ನಿರ್ದಿಷ್ಟ ಉದ್ದೇಶವನ್ನಿಟ್ಟುಕೊಂಡು ಹೊರಡುವುದಿಲ್ಲ. ಅಥವಾ ಹೊರಡಬೇಕಾಗಿಲ್ಲ ಎಂಬುದು ಮುಖ್ಯ. ಅವನ ಉದ್ದೇಶ ಸತ್ಯವನ್ನು, ಸತ್ಯವೊಂದನ್ನೇ ಕಾಣುವುದಾಗಿದೆ.

ಸಂಶೋಧನೆಯ ಆರಾಧ್ಯ ದೈವ ಸತ್ಯದ ಸೌಂದರ್ಯ, ವಿಮರ್ಶೆಯ ಆರಾಧ್ಯ ದೈವ ಸೌಂದರ್ಯದ ಸತ್ಯ. ಸತ್ಯದ ಸೌಂದರ್ಯ ಮತ್ತು ಸೌಂದರ್ಯದ ಸತ್ಯಗಳು ಕೇವಲ ಮಾತಿನ ಸ್ತರದಲ್ಲಿ ಮಾತ್ರವಲ್ಲದೆ, ಒಳ ತಿರುಳಿನಲ್ಲೂ ಒಂದರ ಜೊತೆ ಒಂದು ಸೇರಿ ಹೋಗುತ್ತವೆ ಎಂಬುದನ್ನು ಗಮನಿಸಬೇಕು.

ವಿಮರ್ಶೆ ಮತ್ತು ಸಂಶೋಧನೆಗಳು ಮೂಲತಃ ಬೇರೆ ಬೇರೆಯೇ ಆದ ಚಟುವಟಿಕೆಗಳಾಗಿ ತೋರುವುದಿಲ್ಲ. ಅವೆರಡಕ್ಕೂ ಇರುವ ವ್ಯತ್ಯಾಸ ತೋರಿಕೆಯದು ಮತ್ತು ಅನುಕೂಲದ್ದು. ಎರಡರ ವಿಧಾನದಲ್ಲೂ ಮಾಹಿತಿ ಸಂಗ್ರಹ, ವಿಶ್ಲೇಷಣೆ, ಪ್ರಮೇಯ ರೂಪಣೆ (Hypothesis), ಪುನಾಪರಿಶೀಲನೆ, ಸಂಯೋಜನೆ ನಡೆಯುತ್ತದೆಯೆಂದರೂ ಅದೂ ಕೂಡ ಅವುಗಳಿಂದ ಹೊರತಾಗಿ ನಿಲ್ಲುವ ಎಷ್ಟೋ ಸಾಮಗ್ರಿಯ ಸಹಾಯವನ್ನು ಪಡೆಯುತ್ತದೆ. ಸಂಶೋಧನೆಯಂತೆಯೇ ವಿಮರ್ಶೆಯೂ ತನ್ನ ಹೇಳಿಕೆಗಳು ಸಾರ್ವಕಾಲಿಕ ಸತ್ಯವಾಗಿರಬೇಕೆಂಬ ಬಯಕೆಯನ್ನು, ಅದು ಈಡೇರಲಿ ಬಿಡಲಿ, ಹೊಂದಿರುತ್ತದೆ. ತನ್ನ ವಿಮರ್ಶೆ ತನಗೆ ಮಾತ್ರ ನಿಜ, ಅನ್ಯರಿಗೆ ಅಥವಾ ಅನ್ಯಕಾಲಕ್ಕೆ ಅಲ್ಲ ಎಂದು ಯಾವ ವಿಮರ್ಶಕನೂ ಭಾವಿಸುವುದಿಲ್ಲ. ಅತಿಶ್ರೇಷ್ಠ ವಿಮರ್ಶೆಯು ಸಂಶೋಧನೆಯಂತೆ ಎಲ್ಲ ಕಾಲಕ್ಕೂ ಉಳಿಯುವ ಹೇಳಿಕೆಗಳನ್ನೂ ಒಳಗೊಳ್ಳಬಲ್ಲುದು. ಆದರೆ ಎಲ್ಲ ಕಾಲಕ್ಕೂ ನಿಜವಾಗಿರಬೇಕೆಂಬುದೇ ವಿಮರ್ಶೆಯ ಮಾನದಂಡವಲ್ಲ.

ಈ ಮುಂದಿನ ಹೇಳಿಕೆಯನ್ನು ಹಲವರು ಒಪ್ಪುವುದಿಲ್ಲ; ಕೆಲವರು ಪ್ರತಿಭಟಿಸಲೂಬಹುದು. ಪ್ರಕ್ರಿಯೆಯನ್ನು (process) ಗಮನಿಸಿ ಹೇಳುವುದಾದರೆ ಸಾಹಿತ್ಯ ವಿಮರ್ಶೆ ಮತ್ತು ಸಂಶೋಧನೆಗಳು ತೀರ ಮೂಲದಲ್ಲಿ ಒಂದೇ ಬಗೆಯ ಚಟುವಟಿಕೆಗಳು. ವಿಮರ್ಶೆ ಮತ್ತು ಸಂಶೋಧನೆಗಳಲ್ಲಿ ಅನುಭವದ ಅಥವಾ ವಸ್ತುವಿನ ವಿಶ್ಲೇಷಣೆ (Analysis) ಒಂದು ಘಟ್ಟ, ಬಳಿಕ ಅವುಗಳ ಸಂಯೋಜನೆ (Synthesis) ಇನ್ನೊಂದು ಘಟ್ಟ. ಈ ವಿಶ್ಲೇಷಣೆ ಮತ್ತು ಸಂಯೋಜನೆಗಳೆರಡೂ ಪ್ರಜ್ಞೆಯ ಸ್ತರದಲ್ಲಿ ನಡೆಯುತ್ತವೆ. ಭಿನ್ನ ಭಿನ್ನ ಮೂಲದಿಂದ ಬಂದ ಬಿಡಿ ಘಟಕಗಳು ಇಲ್ಲಿ ಒಂದು ಸಮಗ್ರವಾಗಿ ಸಂಯೋಜನೆಗೊಳ್ಳುತ್ತವೆ. 'ಸೃಜನಾತ್ಮಕ' ಸಾಹಿತ್ಯದಲ್ಲೂ ಈ ಕ್ರಿಯೆ ಬೇರೊಂದು ಸ್ತರದಲ್ಲಿ, ಪ್ರಜ್ಞೆಯ ಆಚೆಯ ವಲಯದಲ್ಲಿ ನಡೆಯುತ್ತದೆ. ಇಷ್ಟೇ ವ್ಯತ್ಯಾಸ, ಸಾಹಿತ್ಯದಲ್ಲಿ ನಮಗೆ ಸಂಯೋಜನೆಗೊಂಡು ಹೊರಬಂದ ಸಿದ್ಧವಸ್ತು ಮುಖ್ಯವಾಗುತ್ತದೆ. ವಿಮರ್ಶೆ, ಸಂಶೋಧನೆಗಳಲ್ಲಿ ಸಿದ್ಧ ವಸ್ತುವಿನಷ್ಟೇ ಅದು ಸಿದ್ಧವಾಗಬೇಕಾದರೆ ಬಳಕೆಗೊಂಡ ಸಾಮಗ್ರಿಗಳೂ ವಿಧಾನವೂ ಗಮನಾರ್ಹವಾಗುತ್ತವೆ.

ಹಾಗಿದ್ದರೆ ಸಾಹಿತ್ಯ, ವಿಮರ್ಶೆ, ಸಂಶೋಧನೆಗಳಿಗೆ ಮೂಲ ವ್ಯತ್ಯಾಸವಿರುವುದು ಬಾಹ್ಯದಲ್ಲಿ ಎನ್ನಬಹುದೇ ? 'ಸೃಜನಾತ್ಮಕ' ಎಂಬ ವಿಶೇಷಣ ಮೂರಕ್ಕೂ ಅನ್ವಯವಾಗುತ್ತದೆಯೇ ? ಉತ್ತರವೇನೋ 'ಹೌದು' ಎಂದು ಕಾಣುತ್ತದೆ.

ವಿಚಾರ ಮಾಡಬೇಕು.

# ಕನ್ನಡದಲ್ಲಿ ಸಂಶೋಧನೆ (ಒಂದು ಸ್ಥೂಲ ಸಮೀಕ್ಷೆ)

ಕನ್ನಡದಲ್ಲಿ ಆರಂಭದಿಂದ ಇಲ್ಲಿಯವರೆಗೆ* ನಡೆದಿರುವ ಸಂಶೋಧನ ಕಾರ್ಯವನ್ನು ನಾಲ್ಕಾರು ಪುಟಗಳಲ್ಲಿ ಪರಿಚಯ ಮಾಡಿಕೊಡುವುದು ಅಸಾಧ್ಯದ ಕೆಲಸವೇ ಸರಿ. ಅಂತಹ ಕಾರ್ಯಕ್ಕೆ ಹೆಚ್ಚು ಕಾಲವೂ ಶ್ರಮವೂ ಅಗತ್ಯ ಮಾತ್ರವಲ್ಲದೆ, ಅದರ ಬಗ್ಗೆ ಪ್ರತ್ಯೇಕ ಗ್ರಂಥವನ್ನೇ ಬರೆಯಬೇಕಾಗಬಹುದು. ಇವೆಲ್ಲಕ್ಕೂ ಇಲ್ಲಿ ಅವಕಾಶ ಇಲ್ಲವಾಗಿರುವುದರಿಂದ, ಕೆಲವು ಪ್ರಮುಖರ, ಕೆಲವು ಪ್ರಮುಖ ಕೃತಿಗಳ ಹೆಸರುಗಳನ್ನು ಮಾತ್ರ ಇಲ್ಲಿ ಲಕ್ಷಿಸಬೇಕಾಗಿದೆ. ಇಲ್ಲಿ ವಿವರಗಳಿಗಿಂತ ಹೆಚ್ಚಾಗಿ ಮೈಲಿಗಲ್ಲುಗಳಂತಿರುವ ಕೃತಿಗಳಿಗೆ, ವಿಮರ್ಶೆಗಿಂತ ಪರಿಚಯಕ್ಕೆ, ಆಗಬೇಕಾಗಿರುವುದಕ್ಕಿಂತ ಆಗಿರುವುದಕ್ಕೆ ಹೆಚ್ಚು ಲಕ್ಷ್ಯವನ್ನು ಕೊಟ್ಟಿದ್ದೇನೆ. ಆದ್ದರಿಂದಲೇ ಈ ಲೇಖನವನ್ನು 'ಒಂದು ಸ್ಥೂಲ ಸಮೀಕ್ಷೆ' ಎಂದು ಕರೆದಿದ್ದೇನೆ. ಈ ಲೇಖನ ವಿಶೇಷಜ್ಞರಿಗೆ ಅತೃಪ್ತಿ ತರಬಹುದು. ಲೇಖನ ಆದಷ್ಟು ಸಮೀಕ್ಷಾತ್ಮಕವಾಗಿರಲಿ, ಸಾಮಾನ್ಯ ಓದುಗರನ್ನು ಗಮನದಲ್ಲಿಟ್ಟುಕೊಂಡಿರಲಿ ಎಂಬ ಸೂಚನೆ ಪತ್ರಿಕಾ ಸಂಪಾದಕರಿಂದ ಬಂದಿರುವುದರಿಂದ ಇಲ್ಲಿ ಲೇಖಕರ ಕಾಲಾನುಕ್ರಮಣಿಕೆಯನ್ನು ಕೊಡುವ ಅಥವಾ ಎಲ್ಲ ಕಡೆಗೂ ತೇದಿಗಳನ್ನು ನಿರೂಪಿಸುವ ಗೋಜಿಗೆ ಹೋಗಿಲ್ಲ. ಸಾಮಾನ್ಯ ಓದುಗರಿಗೆ ಕನ್ನಡದಲ್ಲಿ ಎಂತಹ ಸಂಶೋಧನೆ ನಡೆದಿದೆ ಎಂಬುದರ ಒಂದು ಸ್ಥೂಲ ಚಿತ್ರ ಬಂದರೆ ಸಾಕು. ಈ ಲೇಖನದಲ್ಲಿ ಸಹಜವಾಗಿಯೇ ಸಂಶೋಧನ ಲೇಖನಗಳನ್ನು ಹೆಸರಿಸದಿದ್ದರೂ, ಅಂತಹ ಲೇಖನಗಳನ್ನು ಬರೆದಿರುವವರಲ್ಲಿ ಪ್ರಮುಖರಾದವರ ಹೆಸರುಗಳು ಒಂದಲ್ಲ ಒಂದು ರೀತಿಯಲ್ಲಿ ಉಕ್ತವಾಗಿಯೇ ಇವೆ.

ಕನ್ನಡಕ್ಕೆ ಸಂಬಂಧಿಸಿದಂತೆ ಸಂಶೋಧನೆ ನಡೆಯಲು ಮೂಲ ಸಾಮಗ್ರಿಯನ್ನೊದಗಿಸಿದವರು ಮತ್ತು ದೇಶೀಯ ವಿದ್ವಾಂಸರಲ್ಲಿ ಸಂಶೋಧನ ದೃಷ್ಟಿಯನ್ನು ಬೆಳಸಿ ಅವರಿಗೆ ಆಸಕ್ತಿ ಹುಟ್ಟುವಂತೆ ಮಾಡಿದವರು ಪಾಶ್ಚಾತ್ಯರು. ಇವರಲ್ಲಿ ಮುಖ್ಯವಾಗಿ ಮೂವರ ಹೆಸರನ್ನು ಹೇಳಬೇಕು : ರೆ.ಎಫ್. ಕಿಟ್ಟಲ್ ಅವರು ಕನ್ನಡಕ್ಕೆ ಮಾಡಿರುವ ಸೇವೆ ಅನುಪಮವಾದುದು. ಅವರು ಸಿದ್ಧಪಡಿಸಿದ ಸುಪ್ರಸಿದ್ಧಕೋಶ A Kannada English Dictionary (1884) ಇಂದಿಗೂ ಉಪಯೋಗದಲ್ಲಿದೆ ಮತ್ತು ಹಳೆಯ ಕಾವ್ಯಗಳನ್ನು ಅಭ್ಯಸಿಸುವವರಿಗೆ ಒಂದು ಅನಿವಾರ್ಯ ಸಹಾಯಕ ಗ್ರಂಥವಾಗಿದೆ. ಜೊತೆಗೆ, ಇಂಗ್ಲಿಷಿನಲ್ಲಿ ಹಳಗನ್ನಡದ ವ್ಯಾಕರಣವನ್ನು ಬರೆದದ್ದಲ್ಲದೆ, ನಾಗವರ್ಮನ **ಛಂದೋಬುಧಿ** (1875)ಯನ್ನು

* 22-9-1970. ಈ ಲೇಖನವನ್ನು ಸಿದ್ಧಪಡಿಸುವಲ್ಲಿ ಬೆಂಗಳೂರು ವಿಶ್ವವಿದ್ಯಾಲಯದ ಪುಸ್ತಕ ಭಂಡಾರದ ಶ್ರೀ ಟಿ.ವಿ. ವೆಂಕಟರಮಣಯ್ಯನವರ ಸಹಕಾರ ದೊರೆತುದನ್ನು ಇಲ್ಲಿ ಸ್ಮರಿಸುತ್ತೇನೆ.

ಪ್ರಕಟಿಸಿ, ಅದಕ್ಕೆ ಮುನ್ನುಡಿ ರೂಪದಲ್ಲಿ ಸಂಕ್ಷಿಪ್ತವಾಗಿ ಕನ್ನಡ ಸಾಹಿತ್ಯ ಚರಿತ್ರೆಯನ್ನು ಬರೆದರು. ಬಿ.ಎಲ್. ರೈಸ್ ಮತ್ತು ಜೆ.ಎಫ್. ಫ್ಲೀಟ್ ಅವರು ಕರ್ನಾಟಕ ಶಾಸನ ಶಾಸ್ತ್ರಕ್ಕೆ ಮಾಡಿರುವ ಸೇವೆ ಅನುಪಮವಾದುದು. ರೈಸ್ ಅವರ Epigraphia Carnatica ಸಂಪುಟಗಳಾಗಲಿ, Indian Antiquary ಮುಂತಾದ ಪತ್ರಿಕೆಗಳಲ್ಲಿ ಮುನ್ನುಡಿ, ಟಿಪ್ಪಣಿಗಳೊಡನೆ ಫ್ಲೀಟ್ ಅವರು ಪ್ರಕಟಿಸಿದ ಶಾಸನಗಳಾಗಲಿ ಬಹುಕಾಲ ಉಳಿಯುವಂತಹ ಕೆಲಸಗಳು. ರೈಸ್ ಅವರು ಇದರ ಜೊತೆಗೆ **ಪಂಪ ಭಾರತ** (1898), **ಪಂಪ ರಾಮಾಯಣ** (1892) **ಕರ್ನಾಟಕ ಭಾಷಾ ಭೂಷಣ** (1884) ಮತ್ತು **ಕರ್ನಾಟಕ ಶಬ್ದಾನುಶಾಸನ** (1890) ಗಳಂತಹ ಕೃತಿಗಳನ್ನು ಅಚ್ಚುಮಾಡಿಸಿ ಪ್ರಕಟಿಸಿದರು. ಫ್ಲೀಟ್ ಅವರ Dynasties of the Kanarese Districts ಕನ್ನಡ ನಾಡಿನ ಪ್ರಾಚೀನ ರಾಜಮನೆತನಗಳಿಗೆ ಸಂಬಂಧಿಸಿದ ಚರಿತ್ರ ಗ್ರಂಥವಾಗಿದ್ದು ಈ ಹೊತ್ತಿಗೂ ಓದಬಹುದಾದ ಕೃತಿಯಾಗಿದೆ.

ಇವರ ಪರಂಪರೆಯನ್ನು ಮುಂದುವರಿಸಿದವರು ನಮ್ಮ ದೇಶದ ವಿದ್ವಾಂಸರು. ಇವರು ಇಂಗ್ಲೀಷ್ ವಿದ್ಯಾಭ್ಯಾಸವನ್ನು ಪಡೆದವರಾಗಿದ್ದುದು ಮಾತ್ರವಲ್ಲದೆ ಪಾಶ್ಚಾತ್ಯರ ಸಂಶೋಧನ ಪದ್ಧತಿಗಳಲ್ಲಿ ಶಿಕ್ಷಣವನ್ನು ಪಡೆದವರಾಗಿದ್ದರು. ಇಂಥವರಲ್ಲಿ ಮೊದಲ ಹೆಸರಾಗಿ ಹೇಳಬೇಕಾದವರೆಂದರೆ ರಾ. ಬ. ಆರ್. ನರಸಿಂಹಾಚಾರ್ ಅವರು. ಇವರ **ಕರ್ನಾಟಕ ಕವಿಚರಿತೆ**ಯ ಮೂರು ಸಂಪುಟಗಳು (ಮೊದಲ ಸಂಪುಟ, 1907) ಅಪಾರ ಶ್ರಮದ ಪ್ರತೀಕಗಳು ಮತ್ತು ಕನ್ನಡ ಸಾಹಿತ್ಯ ಚರಿತ್ರೆಗೆ ಮೂಲಭೂತ ಆಕರ ಗ್ರಂಥಗಳು. ಕನ್ನಡ ಸಾಹಿತ್ಯದ ಆಳ, ಅಗಲಗಳು ಗೊತ್ತಾದದ್ದು ಮೊತ್ತ ಮೊದಲಿಗೆ ಅವರ ಕೃತಿಗಳಿಂದ. ಕನ್ನಡ ಸಾಹಿತ್ಯಕ್ಕೆ ಸಂಬಂಧಿಸಿದ ಕೆಲಸ ಮಾಡಿರುವ ಮುಂದಿನ ಸಂಶೋಧಕರೆಲ್ಲ ಒಂದಲ್ಲ ಒಂದು ರೀತಿಯಲ್ಲಿ ಈ ಸಂಪುಟಗಳಿಗೆ ಋಣಿಗಳಾಗಿದ್ದಾರೆ. ಜೊತೆಗೆ, **ಕಾವ್ಯಾವಲೋಕನ, ಭಾಷಾ ಭೂಷಣ**ಗಳನ್ನು (1903) ಸಂಪಾದಿಸಿ ಬೆಲೆಬಾಳುವ ಮುನ್ನುಡಿಗಳನ್ನು ಬರೆದರು. ಇವರು ಅನೇಕ ಕವಿಗಳಿಗೆ ಸೂಚಿಸಿದ ಕಾಲವನ್ನು ಕೆಲವು ವಿದ್ವಾಂಸರು ಒಪ್ಪಲಿಲ್ಲ. ಅವರಲ್ಲಿ ಪ್ರಮುಖರಾದವರು ಡಾ. ಎ. ವೆಂಕಟಸುಬ್ಬಯ್ಯನವರು. ಅವರ **ಕೆಲವು ಕನ್ನಡ ಕವಿಗಳ ಜೀವನ ಕಾಲ ವಿಚಾರ**ದಲ್ಲಿ ಪುನರ್ವಿಮರ್ಶಿತವಾಗಿರುವ ಎಲ್ಲ ತೇದಿಗಳನ್ನಲ್ಲವಾದರೂ ಕೆಲವನ್ನಾದರೂ ಕವಿಚರಿತೆಕಾರರು ಒಪ್ಪಿಕೊಂಡರು. ಇದೇ ಪೀಳಿಗೆಗೆ ಸೇರುವ ಎಂ. ಗೋವಿಂದ ಪೈ, ಕೆ. ಬಿ. ಪಾಠಕ್, ಎಸ್.ಎಸ್. ರಾಜಪುರೋಹಿತ್ ಮುಂತಾದ ವಿದ್ವಾಂಸರು ಅನೇಕ ಕವಿಗಳ ಕಾಲ, ಮತಗಳಿಗೆ ಸಂಬಂಧಿಸಿದ ಬೆಲೆಯುಳ್ಳ ಲೇಖನಗಳನ್ನು ಬರೆದು ಚರ್ಚೆ ಮಾಡಿದರು.* ಪಾಠಕ್ ಅವರು **ಕವಿರಾಜಮಾರ್ಗ**ವನ್ನು (1898) ಮೊತ್ತಮೊದಲು ಸಂಪಾದಿಸಿ ಪ್ರಕಟಿಸಿದ್ದಾರೆ. ಚೆನ್ನಪ್ಪ ಉತ್ತಂಗಿಯವರು ಬಹು ಶ್ರದ್ಧೆಯಿಂದ **ಸರ್ವಜ್ಞನ ವಚನ**ಗಳನ್ನು (1924) ಸಂಪಾದಿಸಿ ವಿಸ್ತಾರವಾದ ಬೆಲೆಯುಳ್ಳ ಮುನ್ನುಡಿಯನ್ನು ಬರೆದರು. ಆರ್. ನರಸಿಂಹಾಚಾರ್ಯರ ಸಹವರ್ತಿಗಳಾಗಿದ್ದ ಎಸ್.ಜಿ. ನರಸಿಂಹಾಚಾರ್ಯರು

---

* ಗೋವಿಂದಪೈಯವರ ಬರಹಗಳ ಸುವ್ಯವಸ್ಥಿತವಾದ ಪರಿಚಯವನ್ನು ಶ್ರೀ ಶ್ರೀನಿವಾಸ ಹಾವನೂರ ಅವರು **ಗೋವಿಂದಪೈ, ವಾಙ್ಮಯ ದರ್ಶನ**ವೆನ್ನುವ ಕೃತಿಯಲ್ಲಿ ಮಾಡಿಕೊಟ್ಟಿದ್ದಾರೆ.

**ಆದಿಪುರಾಣ**ವನ್ನು ಸಂಪಾದಿಸಿದ್ದರಲ್ಲದೆ, **ಕವಿಚರಿತೆ**ಯ ಮೊದಲ ಸಂಪುಟವನ್ನು ಸಿದ್ಧಪಡಿಸಲು ಆರ್. ನರಸಿಂಹಾಚಾರ್ಯರೊಡನೆ ಶ್ರಮಿಸಿದರು.

ಇದೇ ಪೀಳಿಗೆಗೆ ಸೇರಿದ ಇಬ್ಬರು ಮಹನೀಯರ ಹೆಸರುಗಳನ್ನು ಇಲ್ಲಿ ಹೇಳುವುದು ಅತ್ಯಗತ್ಯವಾಗಿದೆ. ದಕ್ಷಿಣ ಕರ್ನಾಟಕದಲ್ಲಿ ಎಂ.ಎ. ರಾಮಾನುಜ ಅಯ್ಯಂಗಾರರು (1862 - 1937) 'ಕಾವ್ಯಕಲಾನಿಧಿ' ಎಂಬ ಹೆಸರಿನ ಗ್ರಂಥಮಾಲೆಯಲ್ಲಿ ಅನೇಕ ಪ್ರಾಚೀನ ಕೃತಿಗಳನ್ನು ಪ್ರಕಟಿಸಿದರು. ಉತ್ತರ ಕರ್ನಾಟಕದಲ್ಲಿ ಫ.ಗು. ಹಳಕಟ್ಟಿಯವರು (1880-1964) ಮುಖ್ಯವಾಗಿ ವೀರಶೈವ ಕೃತಿಗಳನ್ನು, ಅದರಲ್ಲೂ ಅನೇಕ ವಚನಕಾರರ ವಚನಗಳನ್ನು, ಹರಿಹರನ ರಗಳೆಗಳನ್ನು ತಮ್ಮ 'ಶಿವಾನುಭವ ಗ್ರಂಥಮಾಲೆ'ಯಲ್ಲಿ ಪ್ರಕಟಿಸಿದರು. ಹುಳು ತಿಂದುಹೋಗಿ ಹಾಳಾಗಬಹುದಾಗಿದ್ದ ಸಾಹಿತ್ಯರಾಶಿಯನ್ನು ಈ ಇಬ್ಬರು ಮಹನೀಯರು ಉಳಿಸಲು ಪ್ರಯತ್ನಪಟ್ಟರು. ಈಚಿನವರು ಅವರು ಮೊದಲು ಅಚ್ಚು ಮಾಡಿಸಿದ ಅನೇಕ ಕೃತಿಗಳನ್ನು ಶಾಸ್ತ್ರೀಯವಾಗಿ ಸಂಪಾದಿಸಿ ಆಕರ್ಷಕವಾಗಿ ಪ್ರಕಟಿಸಿದ್ದಾರೆ.

ಹರಿದಾಸ ಸಾಹಿತ್ಯ ಪ್ರಕಟನೆಗಾಗಿ ವಿಶೇಷ ಶ್ರಮಿಸಿದವರಲ್ಲಿ ಸುಬೋಧ ರಾಮರಾವ್, ಗೊರಬಾಳ ಹನುಮಂತರಾವ್, ಬೆಟಗೇರಿ ಕೃಷ್ಣಶರ್ಮ ಮತ್ತು ಬೆಂಗೇರಿ ಹುಚ್ಚರಾಯರ ಹೆಸರುಗಳು ಉಲ್ಲೇಖನೀಯ. ಹರಿದಾಸರ ಕೃತಿಗಳನ್ನು ಶಾಸ್ತ್ರೀಯವಾಗಿ ಸಂಪಾದಿಸುವ ಕಾರ್ಯವನ್ನು ಮೈಸೂರು ವಿಶ್ವವಿದ್ಯಾನಿಲಯ ಎತ್ತಿಕೊಂಡಿದ್ದು, ಮೊದಲ ಸಂಪುಟ ಅಚ್ಚಿನ ಮನೆಯಲ್ಲಿದೆ.

ಮುಂದಿನ ಪೀಳಿಗೆ ಈ ಪಾಂಡಿತ್ಯದ ಪರಂಪರೆಯನ್ನು ಮುಂದುವರಿಸಿತು. ಬಿ.ಎಂ. ಶ್ರೀಕಂಠಯ್ಯನವರು ಕವಿಗಳಾಗಿದ್ದು ಅನೇಕ ಭಾಷಾ ಸಾಹಿತ್ಯಗಳಲ್ಲಿ ಅಪೂರ್ವ ಪಾಂಡಿತ್ಯವನ್ನು, ವಿದ್ವದ್ದೃಷ್ಟಿಯನ್ನು ಬೆಳಸಿಕೊಂಡವರಾಗಿದ್ದರು. ಅವರು ಛಂದಸ್ಸಿನ ಬಗ್ಗೆ ಮೈಸೂರಲ್ಲಿ ಕೊಟ್ಟ ಅಪೂರ್ವವಾದ ಉಪನ್ಯಾಸಗಳು ಮುಂದೆ ವಿಸ್ತ್ರತಗೊಂಡು ಕನ್ನಡ ಕೈಪಿಡಿಯ ಛಂದಸ್ಸಿನ ಭಾಗದಲ್ಲಿ ಸೇರ್ಪಡೆಯಾದವು. ಇವು ಛಂದಸ್ಸಿನ ಕ್ಷೇತ್ರದಲ್ಲಿ ಹೊಸ ದಿಕ್ಕನ್ನೇ ತೆರೆದು ತೋರಿಸಿದುವು. ಟಿ.ಎಸ್. ವೆಂಕಣ್ಣಯ್ಯನವರು ಕನ್ನಡ ಸಾಹಿತ್ಯ ಚರಿತ್ರೆಗೆ ಸಂಬಂಧಿಸಿದ ಅನೇಕ ಲೇಖನಗಳನ್ನು ಬರೆದಿರುವರಲ್ಲದೆ, ತಾವೇ ಸ್ವತಃ **ಬಸವರಾಜದೇವರ ರಗಳೆ**ಯನ್ನೂ, ಡಿ.ಎಲ್. ನರಸಿಂಹಾಚಾರ್ಯರ ಜೊತೆಗೂಡಿ **ಸಿದ್ಧರಾಮ ಚಾರಿತ್ರ**ವನ್ನೂ ಸಂಪಾದಿಸಿ ಪ್ರಕಟಿಸಿದರು. ಇವರ ಸಹೋದ್ಯೋಗಿಗಳಾಗಿದ್ದ ಎ.ಆರ್. ಕೃಷ್ಣಶಾಸ್ತ್ರಿಗಳವರು ಸಂಸ್ಕೃತ ಸಾಹಿತ್ಯಕ್ಕೆ ಸಂಬಂಧಿಸಿದ ಹಲವಾರು ಅಪೂರ್ವ ಗ್ರಂಥಗಳನ್ನು ಪ್ರಕಟಿಸಿದ್ದಾರೆ. (ಉದಾ : **ಭಾಸಕವಿ, ಸಂಸ್ಕೃತ ನಾಟಕ, ವಚನ ಭಾರತ**). ಆಯಾ ವಿಷಯಗಳಲ್ಲಿನ ತಜ್ಞರೂ ಇವುಗಳನ್ನು ಓದಿ ಲಾಭ ಪಡೆಯಬಹುದಾಗಿದೆ. ಇವರು ಹುಟ್ಟು ಹಾಕಿದ **ಪ್ರಬುದ್ಧ ಕರ್ಣಾಟಕ** (ಆರಂಭ 1919) ಕನ್ನಡದಲ್ಲಿ ಬಹು ಪ್ರಮುಖ ಸಂಶೋಧನ ಪತ್ರಿಕೆಯಾಗಿ ಬೆಳೆದುಕೊಂಡು ಬಂದಿದೆ. ಎಂ.ಆರ್. ಶ್ರೀನಿವಾಸಮೂರ್ತಿಯವರ **ವಚನ ಧರ್ಮಸಾರ**ವು ವಚನ ಸಾಹಿತ್ಯ ಪರಂಪರೆಯ ಬಗ್ಗೆ ಸೊಗಸಾದ ಪ್ರಾವೇಶಿಕ ಗ್ರಂಥವಾದರೆ, **ಭಕ್ತಿ ಭಾಂಡಾರಿ**

ಬಸವಣ್ಣನವರು ಹೃದ್ಯವಾದ ಒಂದು ಜೀವನ ಚಿತ್ರ. ಮುಳಿಯ ತಿಮ್ಮಪ್ಪಯ್ಯನವರ **ನಾಡೋಜ ಪಂಪ** (1938) ಈ ದಿನ ಹಳತಾಗಿ ಕಂಡುಬಂದರೂ ಕನ್ನಡದ ಒಬ್ಬ ಶ್ರೇಷ್ಠ ಕವಿಯ ಬಗ್ಗೆ ಬಂದ ಮೊದಲ ಅಭ್ಯಾಸಪೂರ್ಣ ಗ್ರಂಥವಾಗಿದೆ. ಶಿ.ಶಿ. ಬಸವನಾಳರು **ಪ್ರಭುಲಿಂಗಲೀಲೆ, ಚನ್ನಬಸವಪುರಾಣ, ಬಸವಣ್ಣನವರ ವಚನಗಳು** ಇತ್ಯಾದಿಗಳನ್ನು ಸಂಪಾದಿಸಿ ಪ್ರಕಟಿಸಿದರು. ಶಂ.ಬಾ. ಜೋಷಿಯವರು ಕನ್ನಡ ನಾಡು, ನುಡಿಗಳ ಬಗ್ಗೆ ಗಮನಾರ್ಹ ಕೃತಿಗಳನ್ನು ರಚಿಸಿದ್ದಾರೆ. ಡಿ.ಕೆ. ಭೀಮಸೇನರಾಯರ **ಶಬ್ದಮಣಿದರ್ಪಣದ ಪಾಠಾಂತರಗಳು** ಎಂಬ ಕೃತಿ **ಶಬ್ದಮಣಿ ದರ್ಪಣದ** ಅಧ್ಯಯನಕ್ಕೆ ಅಗತ್ಯವಾದ ಒಂದು ಪೂರಕ ಗ್ರಂಥ. ತೀ.ನಂ. ಶ್ರೀಕಂಠಯ್ಯನವರು ಅಪೂರ್ವ ಶಕ್ತಿ ಸಮನ್ವಿತರಾಗಿದ್ದ ವ್ಯಕ್ತಿ. ಸಾಹಿತ್ಯ, ಶಾಸ್ತ್ರಗಳೆರಡರಲ್ಲೂ ಏಕರೀತಿಯಾದ ಪ್ರಭುತ್ವವನ್ನು ಪಡೆದಿದ್ದವರಾಗಿದ್ದರೂ ಅವರು ಬರೆಯಬೇಕಾದಷ್ಟನ್ನು ಬರೆಯಲಾಗದಿದ್ದುದು ದುರದೃಷ್ಟ. ಅವರ **ಗದಾಯುದ್ಧ ಸಂಗ್ರಹ, ನಂಬಿಯಣ್ಣನ ರಗಳೆಗಳು** ಗ್ರಂಥ ಸಂಪಾದನೆಗೆ ಮಾದರಿಗಳು. ಅವರ **ಸಮಾಲೋಕನದಲ್ಲಿ** ಪ್ರಕಟವಾಗಿರುವ, ಅದರಲ್ಲೂ ಛಂದಸ್ಸಿಗೆ ಸಂಬಂಧಪಟ್ಟುವು ಅವರ ಹುಡುಕು ನೋಟವನ್ನೂ ರಸಜ್ಞತೆಯನ್ನೂ ತೋರಿಸುತ್ತವೆ. ಕನ್ನಡ ಭಾಷೆಯ ಬಗ್ಗೆ ಪ್ರಕಟವಾಗಿರುವ ಅವರ ಕನ್ನಡ ಮತ್ತು ಇಂಗ್ಲಿಷ್ ಲೇಖನಗಳು ಭಾಷಾ ವಿಜ್ಞಾನದಲ್ಲಿ ಅವರಿಗಿದ್ದ ಪ್ರಭುತ್ವವನ್ನು ತೋರುತ್ತವೆ. ಅವರ **ಭಾರತೀಯ ಕಾವ್ಯ ಮೀಮಾಂಸೆ** ಆ ವಿಷಯಕ್ಕೆ ಸಂಬಂಧಿಸಿದ ಯಾವುದೇ ಭಾಷೆಯಲ್ಲಿ ಪ್ರಕಟವಾಗಿರುವ ಶ್ರೇಷ್ಠ ಕೃತಿಗಳ ಸಾಲಲ್ಲಿ ನಿಲ್ಲಬಲ್ಲುದೆಂದು ಹೇಳುತ್ತಾರೆ. ಪಾಂಡಿತ್ಯದಲ್ಲಿ ಅವರ ಸೋದರ ಡಿ.ಎಲ್. ನರಸಿಂಹಾಚಾರ್ಯರು. ಇವರ **ವಡ್ಡಾರಾಧನೆ, ಶಬ್ದಮಣಿದರ್ಪಣಗಳು** ಬಹು ಸಮರ್ಪಕವಾಗಿ ಸಂಪಾದಿತವಾಗಿರುವ ಕೃತಿಗಳು. ಅವರ **ಕನ್ನಡ ಗ್ರಂಥ ಸಂಪಾದನೆ** ಆ ಕ್ಷೇತ್ರದಲ್ಲಿ ಒಂದು ಮೈಲಿಗಲ್ಲು. ಕನ್ನಡ ನಿದರ್ಶನಗಳೊಡನೆ ಗ್ರಂಥಸಂಪಾದನೆಯ ತತ್ವಗಳನ್ನು ಪ್ರತಿಪಾದಿಸಿರುವ ಆ ಕೃತಿ ಆ ಶಾಸ್ತ್ರಕ್ಕೇ ಒಂದು ಅಪೂರ್ವ ಕಾಣಿಕೆಯಾಗಿದೆ. ಅವರ **ಶಬ್ದವಿಹಾರ** ಪುಟ್ಟ ಕೃತಿ; ಆದರೆ ನಿಘಂಟು ರಚನಾ ಶಾಸ್ತ್ರಕ್ಕೆ ದೊಡ್ಡ ಕೊಡುಗೆ. ಚೆದರಿ ಹೋಗಿರುವ ಅವರ ಬಹುಸಂಖ್ಯೆಯ ವಿದ್ವತ್ಪೂರ್ಣ ಲೇಖನಗಳ ಸಂಕಲನ ಸಂಪುಟ ಸದ್ಯದಲ್ಲಿಯೇ ಹೊರಬರಲಿದೆ. (ಅಂತೆಯೇ ಅವರು **ಪಂಪಭಾರತಕ್ಕೆ** ಬರೆದಿರುವ ವ್ಯಾಖ್ಯಾನ.) ಡಾ॥ ಶಿವರಾಮ ಕಾರಂತರ **ಯಕ್ಷಗಾನ ಬಯಲಾಟ** ಆ ವಿಷಯಕ್ಕೆ ಸಂಬಂಧಿಸಿದ ಮೊತ್ತಮೊದಲ ಅಧಿಕೃತ ಬರಹವಾಗಿದೆ. ಎ. ವೆಂಕಟರಾವ್ ಮತ್ತು ಎಚ್. ಶೇಷ ಅಯ್ಯಂಗಾರ್ಯರು ಸಂಪಾದಿಸಿರುವ **ಖಗೇಂದ್ರಮಣಿ ದರ್ಪಣ, ಪುಷ್ಪದಂತ ಪುರಾಣಂ, ಅಭಿಧಾನ ವಸ್ತುಕೋಶ** ಇತ್ಯಾದಿಗಳನ್ನೂ, ಎಚ್. ಶೇಷ ಅಯ್ಯಂಗಾರರೊಬ್ಬರೇ ಸಂಪಾದಿಸಿರುವ **ನೇಮಿನಾಥ ಪುರಾಣ** ಇತ್ಯಾದಿಗಳನ್ನೂ ಮದ್ರಾಸ್ ವಿಶ್ವವಿದ್ಯಾನಿಲಯ ಪ್ರಕಟಿಸಿದೆ. ಅದೇ ವಿಶ್ವವಿದ್ಯಾನಿಲಯ ಪ್ರಕಟಿಸಿರುವ **ಶಬ್ದಮಣಿ ದರ್ಪಣಕ್ಕೆ** ಎಚ್. ಚೆನ್ನಕೇಶವ ಅಯ್ಯಂಗಾರ್ಯರು ವಿಸ್ತಾರವೂ ಪ್ರೌಢವೂ ಆದ ಮುನ್ನುಡಿಯನ್ನು ಬರೆದಿದ್ದಾರೆ. ಎಂ. ಮರಿಯಪ್ಪಭಟ್ಟರು **ವರ್ಧಮಾನ ಪುರಾಣ, ವ್ಯವಹಾರಗಣಿತ, ಜಾತಕತಿಲಕಂ** ಮುಂತಾದ ಪ್ರಾಚೀನ ಕೃತಿಗಳನ್ನು ಸಂಪಾದಿಸಿರುವರಲ್ಲದೆ, ಅಲಭ್ಯವಾಗಿದ್ದ ಕಿಟ್ಟೆಲ್ ಅವರ

ಕನ್ನಡ ಇಂಗ್ಲಿಷ್ ಕೋಶವನ್ನು ಹೊಸ ಸಾಮಗ್ರಿಯೊಡನೆ ಪರಿಷ್ಕರಿಸಿ, ಹೊರಕ್ಕೆ ತರುತ್ತಿದ್ದಾರೆ. (ಅದರ ಎರಡು ಭಾಗಗಳು ಈಗಾಗಲೇ ಪ್ರಕಟವಾಗಿವೆ). ಎಂ.ವಿ. ಸೀತಾರಾಮಯ್ಯನವರು **ಕವಿರಾಜಮಾರ್ಗ**ವನ್ನು ಸೊಗಸಾದ ಪೀಠಿಕೆ, ಟಿಪ್ಪಣಿಗಳೊಡನೆ ಹೊರತಂದಿದ್ದಾರೆ. ಎಚ್. ದೇವೀರಪ್ಪನವರ **ಶರಣಚರಿತಮಾನಸ** ಹರಿಹರನ ರಗಳೆಗಳ ಸೊಗಸಾದ ಸಂಪಾದನೆ. ಡಾ॥ ಡಿ.ಎಸ್. ಕರ್ಕಿಯವರ **ಕನ್ನಡ ಛಂದೋವಿಕಾಸ** ಕನ್ನಡ ಛಂದಸ್ಸಿನ ಕ್ಷೇತ್ರದಲ್ಲಿ ಮಾಡಿರುವ ಮೊದಲ ಅತಿ ದೊಡ್ಡ ಪ್ರಯತ್ನವಾಗಿದೆ.

ಕರ್ಣಾಟಕ ಸಂಸ್ಕೃತಿಗೆ ಸಂಬಂಧಪಟ್ಟಂತೆ ಕೆಲಸ ಮಾಡಿರುವವರಲ್ಲಿ ಎನ್. ಲಕ್ಷ್ಮೀ ನಾರಾಯಣರಾವ್, ಎಚ್. ಕೃಷ್ಣಶಾಸ್ತ್ರಿ, ಎಂ.ಎಚ್. ಕೃಷ್ಣ, ಆರ್.ಎಸ್. ಪಂಚಮುಖಿ, ಕೆ.ಜಿ. ಕುಂದಣಗಾರ, ಪಿ.ಬಿ. ದೇಸಾಯಿ ಮತ್ತು ಜಿ.ಎಸ್. ಗಾಯಿ ಅವರ ಹೆಸರುಗಳನ್ನು ಮುಖ್ಯವಾಗಿ ಉಲ್ಲೇಖಿಸಬೇಕು. ಈ ಮಹನೀಯರು ಸಾವಿರಾರು ಶಾಸನಗಳನ್ನು ಸಂಗ್ರಹಿಸಿ, ಸಂಪಾದಿಸಿ South Indian Inscriptions, Karnataka Inscriptions ಮುಂತಾದ ಸಂಪುಟಗಳಲ್ಲಿ ಪ್ರಕಟಿಸಿದ್ದಾರೆ. ಲಕ್ಷ್ಮೀ ನಾರಾಯಣರಾವ್ ಮತ್ತು ಪಂಚಮುಖಿಯವರ **ಕರ್ಣಾಟಕದ ಅರಸು ಮನೆತನಗಳು** ಶಾಸನಾಧಾರಗಳಿಂದ ಮೊದಮೊದಲ ರಾಜಮನೆತನಗಳ ಇತಿಹಾಸವನ್ನು ಕೊಡುವ ಶ್ರೇಷ್ಠ ಪ್ರಯತ್ನವಾಗಿದೆ. ಪಂಚಮುಖಿಯವರ ಈಚೆಗೆ ಪ್ರಕಟವಾದ **ಕರ್ಣಾಟಕದ ಇತಿಹಾಸ** ಒಂದು ಗಮನಾರ್ಹ ಕೃತಿ. ಪಿ.ಬಿ. ದೇಸಾಯಿಯವರ Basaveshwara and his Times ಬಸವಣ್ಣನವರಿಗೆ ಸಂಬಂಧಿಸಿದ ಉನ್ನತ ಸಂಶೋಧನ ಗ್ರಂಥ. ಮೈಸೂರು ಸರ್ಕಾರದವರು ಈಚೆಗೆ ಪ್ರಕಟಿಸಿರುವ Karnataka through the Ages, ಅದರ ಕೊರತೆಗಳೇನೇ ಇರಲಿ ಕರ್ಣಾಟಕದ ಇತಿಹಾಸ ಮತ್ತು ಸಂಸ್ಕೃತಿಗಳ ವಿದ್ಯಾರ್ಥಿಗಳು ಸ್ವಾಗತಿಸಬೇಕಾದ ಕೃತಿ. (ಇದರ ಕನ್ನಡ ಅನುವಾದ ಸಿದ್ಧವಾಗಿದ್ದು, ಮೊದಲ ಸಂಪುಟ ಸದ್ಯದಲ್ಲಿಯೇ ಹೊರಬೀಳಲಿದೆ.)

ಈ ಹಿರಿಯ ಪೀಳಿಗೆಯಿಂದ ಮುಂದೆ ಬಂದರೆ ಎದ್ದು ಕಾಣುವ ಕೆಲವು ಕೃತಿಕಾರರ, ಕೃತಿಗಳ ಹೆಸರುಗಳನ್ನು ನೋಡಬಹುದು. ಡಾ. ಆರ್.ಸಿ. ಹಿರೇಮಠ ಸಂಪಾದಕತ್ವದಲ್ಲಿ ಅನೇಕ ವಚನ ಸಂಪುಟಗಳು ಸಂಪಾದಿತವಾಗಿ ಹೊರಬಂದಿವೆ. ಫ.ಗು. ಹಳಕಟ್ಟಿಯವರು ಆಗಲೇ ಪ್ರಕಟಿಸಿದ್ದ ವಚನಗಳಿಗಿಂತ ಹೆಚ್ಚಿನ ಸಾಮಗ್ರಿಯನ್ನು ಪಾಠಾಂತರಗಳ ಸಮೇತ ಒದಗಿಸಲು ಸಾಧ್ಯವಾಗಿದೆ. ಈ ಪ್ರಕಟಣೆಗಳಿಂದ ವಚನ ಸಾಹಿತ್ಯದ ಕ್ರಮಬದ್ಧ ಅಧ್ಯಯನಕ್ಕೆ ಒಂದು ಸುಭದ್ರವಾದ ಅಡಿಪಾಯವು ಸಿದ್ಧವಾದಂತಾಗಿದೆ. ಜೊತೆಗೆ, **ತಿಷಷ್ಠಿ ಪುರಾತನ ಚಾರಿತ್ರ** ಮುಂತಾದ ಅನೇಕ ವೀರಶೈವ ಪುರಾಣಗಳೂ ಸಂಪಾದಿತವಾಗಿ ಹೊರಬಂದಿವೆ. ಗ್ರಂಥ ಸಂಪಾದನ ಕ್ಷೇತ್ರದಲ್ಲಿ ಇನ್ನೊಂದು ಗಣ್ಯ ಹೆಸರೆಂದರೆ ಎಲ್. ಬಸವರಾಜು ಅವರದು. ಅವರು ಬಹು ಸೊಗಸಾಗಿ ಸಂಪಾದಿಸಿದ **ಅಲ್ಲಮನ ವಚನ ಚಂದ್ರಿಕೆ** ಮತ್ತು **ಶಿವದಾಸ ಗೀತಾಂಜಲಿ**ಗಳಿಗೆ ಡಿ.ಲಿಟ್ ಪ್ರಶಸ್ತಿ ದೊರೆತದ್ದು ಅವರ ಕೆಲಸದ ಶ್ರೇಷ್ಠತೆಯ ಕುರುಹು. ಅವರು ಸಂಪಾದಿಸಿರುವ ಶಿವಗಣ ಪ್ರಸಾದಿ ಮಹಾದೇವಯ್ಯನ **ಶೂನ್ಯಸಂಪಾದನೆ** ಇನ್ನೊಂದು ಒಳ್ಳೆಯ ಕೆಲಸ. ಡಾ. ಜಿ. ವರದರಾಜಾರಾಯರ **ಕುಮಾರ ರಾಮನ ಸಾಂಗತ್ಯಗಳು**

ಒಂದು ಶ್ರೇಷ್ಠ ವರ್ಗದ ಸಂಶೋಧನ ಕೃತಿ. ಕುಮಾರರಾಮನಿಗೆ ಸಂಬಂಧಿಸಿದ ಕೃತಿಗಳ ತೌಲನಿಕ ವಿವೇಚನೆಯನ್ನು ಇಲ್ಲಿ ಕಾಣಬಹುದು. ಎಸ್. ಅನಂತನಾರಾಯಣ ಅವರ **ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ** ನಿಜವಾಗಿಯೂ ಒಳ್ಳೆಯ ಗ್ರಂಥ. ಹೊಸಗನ್ನಡ ಕಾವ್ಯದ ಆರಂಭ ದೆಸೆಗೆ ಸಂಬಂಧಿಸಿದಂತೆ ಅನೇಕ ನೂತನ ಸಂಗತಿಗಳನ್ನು ಸಂಗ್ರಹಿಸಿಕೊಟ್ಟಿದ್ದಾರೆ. ಐ.ಮಾ. ಮುತ್ತಣ್ಣನವರ **ಹತ್ತೊಂಬತ್ತನೇ ಶತಮಾನದಲ್ಲಿ ಪಾಶ್ಚಾತ್ಯ ವಿದ್ವಾಂಸರ ಕನ್ನಡ ಸೇವೆ,** ಹಲವಾರು ದೋಷಗಳಿಂದ ಕೂಡಿದುದಾದರೂ ಅನೇಕ ಅಪೂರ್ವ ವಿಷಯಗಳನ್ನೊಳಗೊಂಡ ಕೃತಿ. ಪ್ರಾಕ್ತನ ಸಂಗತಿಗಳ ಬಗ್ಗೆ ಅಭಿರುಚಿಯನ್ನು ಬೆಳೆಸಿಕೊಳ್ಳುತ್ತಿರುವವರಲ್ಲಿ ಶ್ರೀನಿವಾಸ ಹಾವನೂರ ಅವರೂ ಒಬ್ಬರು. ಅವರ ಕೆಲಸದ ಉಲ್ಲೇಖ ಈಗಾಗಲೇ ಬಂದಿದೆ.

ಜಿ.ಎಸ್. ಶಿವರುದ್ರಪ್ಪನವರ ಪಿಎಚ್.ಡಿ. ನಿಬಂಧವಾದ **ಸೌಂದರ್ಯ ಸಮೀಕ್ಷೆಯಲ್ಲಿ** ಆದಿಯಿಂದ ಆಧುನಿಕ ಕಾಲದವರೆಗೆ ವ್ಯಕ್ತವಾಗಿರುವ ಕನ್ನಡ ಕವಿಗಳ ಸೌಂದರ್ಯ ಪ್ರಜ್ಞೆಯ ಪಕ್ವ ವಿವೇಚನೆ ದೊರಕುತ್ತದೆ. ಎಚ್.ಎಸ್. ಬಿಳಿಗಿರಿಯವರ **ಆಲೋಕ, ಭಾಗ 1** ಕೇಶಿರಾಜನ **ಶಬ್ದಮಣಿದರ್ಪಣಕ್ಕೆ** ಬರೆದ ಒಂದು ಆಧುನಿಕ ಪ್ರೌಢ ವ್ಯಾಖ್ಯಾನವಾಗಿದೆ. ಎಂ. ಚಿದಾನಂದಮೂರ್ತಿಯವರ **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನವು** ಶಾಸನಗಳನ್ನು ಆಧಾರವಾಗಿಟ್ಟುಕೊಂಡು ಕ್ರಿ.ಶ. ಐದನೇ ಶತಮಾನದಿಂದ ಹನ್ನೆರಡನೇ ಶತಮಾನದವರೆಗಿನ ಕರ್ನಾಟಕದ ಸಂಸ್ಕೃತಿಯನ್ನು ಕಟ್ಟಿಕೊಡುವ ಒಂದು ಪ್ರಯತ್ನವಾಗಿದೆ. ಅವರ **ಸಂಶೋಧನ ತರಂಗವು** ಸಂಶೋಧನ ಲೇಖನಗಳ ಸಂಕಲನ. **ಸಂಶೋಧನ ರತ್ನಮಾಲಿಕೆ** ಟಿ. ಕೇಶವ ಭಟ್ಟರ ಲೇಖನಗಳ ಸಂಕಲನ. ಟಿ.ವಿ. ವೆಂಕಟಾಚಲ ಶಾಸ್ತ್ರಿಯವರ **ಕನ್ನಡ ಛಂದಸ್ಸು** ಆ ವಿಷಯಕ್ಕೆ ಸಂಬಂಧಿಸಿದ ಈಚಿನ ಬಹು ಒಳ್ಳೆಯ ಗ್ರಂಥ. ಡಿ.ಎನ್. ಶಂಕರಭಟ್ಟರ **ಕನ್ನಡ ಭಾಷೆಯ ಸಂಕ್ಷಿಪ್ತ ಚರಿತ್ರೆ** ಆ ಕ್ಷೇತ್ರಕ್ಕೆ ಒಂದು ಹೊಸ ಮಾರ್ಗವನ್ನು ತೋರಿಸುವ ಕೃತಿ.

ಕೋ. ವ್ಯಾ ರಮೇಶ್, ಬಾ.ರಾ. ಗೋಪಾಲ್, ಶ್ರೀನಿವಾಸ ರಿತ್ತಿ, ಮಾಧವ ಕಟ್ಟಿ, ಪಿ. ಗುರುರಾಜ ಭಟ್, ಸೂರ್ಯನಾಥ ಕಾಮತ್, ಎಸ್. ನಾಗರಾಜ್ ಮುಂತಾದವರು ಕರ್ನಾಟಕದ ಇತಿಹಾಸದ ಬಗ್ಗೆ ಶ್ರದ್ಧೆಯಿಂದ ದುಡಿಯುತ್ತಿರುವ ತರುಣ ವಿದ್ವಾಂಸರು. ರಮೇಶ್ ಮತ್ತು ಗುರುರಾಜ ಭಟ್ ಅವರು ತುಳು ನಾಡಿನ ಬಗ್ಗೆ ಗ್ರಂಥಗಳನ್ನು ಪ್ರಕಟಿಸಿ, ಅನೇಕ ಹೊಸ ಸಂಗತಿಗಳನ್ನು ಹೊರಗೆಡಹಿದ್ದಾರೆ. ರಿತ್ತಿಯವರು ನಾಂದೇಡ್ ಜಿಲ್ಲೆಯ ಶಾಸನಗಳನ್ನು ಪ್ರಕಟಿಸಿ, ಗೋದಾವರೀ ತೀರದ ಪ್ರದೇಶ ಈಗ ಮಹಾರಾಷ್ಟ್ರದಲ್ಲಿ ಸೇರಿ ಹೋಗಿದ್ದರೂ ಒಂದು ಕಾಲಕ್ಕೆ ಅದು ಕನ್ನಡ ಪ್ರದೇಶವಾಗಿದ್ದಿತೆಂಬುದನ್ನು ಸ್ಪಷ್ಟವಾಗಿ ತೋರಿಸಿದ್ದಾರೆ.

ಇನ್ನೂ ಕೆಲವು ಉತ್ಸಾಹೀ ತರುಣರು ಇತರರಿಗೆ ನೀರಸವೆಂದು ಕಾಣಬಹುದಾದ ಸಂಶೋಧನ ಕ್ಷೇತ್ರದಲ್ಲಿ ಆಸಕ್ತಿ ತೋರಿಸುತ್ತಿದ್ದಾರೆ. ಮಲ್ಲಿನಾಥ ಕಲಬುರ್ಗಿಯವರು ತಮ್ಮ ಹಲವು ಲೇಖನಗಳಿಂದ ಒಳ್ಳೆಯ ಕೆಲಸವನ್ನು ಮಾಡುವ ಭರವಸೆ ತೋರಿದ್ದಾರೆ. ಕನ್ನಡದ

ಪ್ರಾರಂಭಿಕ ಸಾಹಿತ್ಯದ ಬಗ್ಗೆ ಬರೆದ ಅವರ ನಿಬಂಧಕ್ಕೆ ಈಚೆಗೆ ಪಿಎಚ್.ಡಿ. ಪ್ರಶಸ್ತಿ ದೊರಕಿದೆ. ಎಸ್. ಶಿವಣ್ಣ ಅಂತಹ ಇನ್ನೊಬ್ಬ ಉತ್ಸಾಹಿಗಳು. ಅವರ **ಕರ್ಣಾಟಕ ಕವಿಚರಿತೆಯ ಅನುಕ್ತಕೃತಿ ಸೂಚಿ** ಕನ್ನಡ ಸಾಹಿತ್ಯ ಚರಿತ್ರೆಯ ನಿಷ್ಠಾವಂತ ವಿದ್ಯಾರ್ಥಿಗಳು ಅಗತ್ಯವಾಗಿ ಸಂಗ್ರಹಿಸಬೇಕಾದ ಗ್ರಂಥ.

ಜಾನಪದ ಕ್ಷೇತ್ರ ಈಚೆಗೆ ಅನೇಕರನ್ನು ಆಕರ್ಷಿಸುತ್ತಿದೆ. ಹಿಂದಿನಿಂದ ಜಾನಪದವೆಂದರೆ ಜಾನಪದ ಕಾವ್ಯ ಎನ್ನುವ ಭಾವನೆಯಿದ್ದಿತು. ಹಾಗೆ ಜಾನಪದ ಗೀತಗಳನ್ನು ಸಂಗ್ರಹಿಸಿ ಪ್ರಕಟಿಸಿರುವವರಲ್ಲಿ ಹಲಸಂಗಿ ಚನ್ನಮಲ್ಲಪ್ಪ, ಮತಿಘಟ್ಟ ಕೃಷ್ಣಮೂರ್ತಿ, ಗೊರೂರು ರಾಮಸ್ವಾಮಿ ಅಯ್ಯಂಗಾರ್, ಬಿ.ಎಸ್. ಗದ್ದಗೀಮಠ, ಆರ್.ಎಸ್. ಪಂಚಮುಖಿ, ಎಲ್.ಆರ್. ಹೆಗ್ಗಡೆ, ಕ.ರಾ.ಕೃ., ಜೀ. ಶಂ. ಪರಮಶಿವಯ್ಯ ಮುಂತಾದವರು ಉಲ್ಲೇಖನೀಯರಾಗಿದ್ದಾರೆ. ಈಚೆಗೆ ಜಾನಪದ ಕಲ್ಪನೆಯ ವ್ಯಾಪ್ತಿ ವಿಶಾಲವಾಗಿದ್ದು, ಜಾನಪದ ಕತೆಗಳು, ಗಾದೆಗಳು, ಒಗಟುಗಳು ಇತ್ಯಾದಿಗಳ ಸಂಗ್ರಹಕಾರ್ಯ ಭರದಿಂದ ನಡೆಯುತ್ತಿದೆ. ಹಳ್ಳಿಯ ಆಟಗಳು, ಹಬ್ಬಗಳು, ನಂಬಿಕೆಗಳು, ಆಚಾರ ವ್ಯವಹಾರಗಳು ಇತ್ಯಾದಿಗಳ ಕಡೆಗೂ ಗಮನ ಹರಿಯುತ್ತಿದೆ. ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ರೂಪುಗೊಳ್ಳುತ್ತಿರುವ ಜಾನಪದ ವಸ್ತು ಸಂಗ್ರಹಾಲಯ ವಿಶೇಷವಾಗಿ ಉಲ್ಲೇಖಾರ್ಹವಾಗಿದೆ. ಚಂದ್ರಶೇಖರ ಕಂಬಾರರ **ಉತ್ತರ ಕರ್ಣಾಟಕದ ಜಾನಪದ ರಂಗಭೂಮಿ** ಒಂದು ವ್ಯವಸ್ಥಿತವಾದ ಅಧ್ಯಯನದ ಫಲವಾಗಿದೆ. ಜಾನಪದ ಕ್ಷೇತ್ರದಲ್ಲಿ ಇಂತಹ ಕೆಲಸಗಳ ಅಗತ್ಯ ಬಹಳವಿದೆ.

ಮೊದಲಿನಿಂದಲೂ ಸಂಶೋಧನೆಗಾಗಿಯೇ ಮೀಸಲಾದ ಕನ್ನಡ ಪತ್ರಿಕೆಗಳು ಸಂಖ್ಯೆಯಲ್ಲಿ ಕಡಮೆಯೇ. **ಜಯಕರ್ಣಾಟಕ, ಶಿವಾನುಭವ, ಶರಣಸಾಹಿತ್ಯ ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ, ಪ್ರಬುದ್ಧ ಕರ್ಣಾಟಕ** ಮುಂತಾದ ಪತ್ರಿಕೆಗಳು ಇತರ ಲೇಖನಗಳ ಜೊತೆಗೆ ಸಂಶೋಧನ ಲೇಖನಗಳನ್ನೂ ಪ್ರಕಟಿಸಿವೆ. ಕರ್ಣಾಟಕಕ್ಕೆ ಸಂಬಂಧಿಸಿದ ಅಧ್ಯಯನಗಳಿಗಾಗಿಯೇ ಮೀಸಲಾದ Kannada Studies ಎಂಬ ಇಂಗ್ಲೀಷ್ ಪತ್ರಿಕೆ ದೇ. ಜವರೇಗೌಡ ಮತ್ತು ಹಾ. ಮಾ. ನಾಯಕರ ಸಂಪಾದಕತ್ವದಲ್ಲಿ ಮೈಸೂರಿನಿಂದ ಹೊರಬರುತ್ತಿದೆ. ಕನ್ನಡದಲ್ಲಿ ಈಗ ಲೇಖನಗಳನ್ನು ಬರೆಯುವವರಿಗೆ ಇರುವ ಪತ್ರಿಕೆಗಳು ಮುಖ್ಯವಾಗಿ ಮೂರು - ಮೈಸೂರಿನ **ಪ್ರಬುದ್ಧ ಕರ್ಣಾಟಕ**, ಬೆಂಗಳೂರಿನ **ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ**, ಧಾರವಾಡದ **ಕರ್ನಾಟಕ ಭಾರತಿ**. ಈ ಸಂಖ್ಯೆ ತೀರಾ ಕಡಮೆಯಾಯ್ತು ಎಂದು ಯಾರಿಗಾದರೂ ಅನ್ನಿಸುತ್ತದೆ. ಜಾನಪದಕ್ಕೇ ಮೀಸಲಾದ ಅದೇ ಹೆಸರಿನ ಪತ್ರಿಕೆ ಮೈಸೂರಿನಿಂದ ಪ್ರಕಟವಾಗುತ್ತಿದೆ.

ಕನ್ನಡ ಸಂಶೋಧನೆಗೆ ವಿಶ್ವವಿದ್ಯಾನಿಲಯಗಳು ಮತ್ತು ಇತರ ಸಂಸ್ಥೆಗಳು ದುಡಿದಿವೆ. ಅಂಥ ಸಂಸ್ಥೆಗಳಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಒಂದು. **ಪಂಪಭಾರತ, ಪಂಪ ರಾಮಾಯಣ, ಶಬ್ದಮಣಿ ದರ್ಪಣ, ಕವಿ ಚರಿತ್ರೆ ಸಂಪುಟ 1** (ಪರಿಶೋಧಿತ ಮುದ್ರಣ, 1961)

ಇಂತಹ ಉದ್ಗ್ರಂಥಗಳನ್ನು ಪ್ರಕಟಿಸಿದೆ. ಅದು ಈಗ ಕನ್ನಡ - ಕನ್ನಡ ಕೋಶದ ನಿರ್ಮಾಣದ ಬಹು ದೊಡ್ಡ ಕಾರ್ಯವನ್ನು ಕೈಗೊಂಡು, ಆರಂಭದ ಕೆಲವು ಸಂಚಿಕೆಗಳನ್ನು ಪ್ರಕಟಿಸಿದೆ. ಕನ್ನಡದಲ್ಲಿ ಇಲ್ಲಿಯವರೆಗೆ ಕಿಟ್ಟೆಲ್ ಕೋಶವೂ ಸೇರಿದಂತೆ ಅನೇಕ ನಿಘಂಟುಗಳು ಪ್ರಕಟವಾಗಿವೆ. ಆದರೆ, ಪರಿಷತ್ತಿನ ನಿಘಂಟು ಹಿಂದಿನ ಎಲ್ಲ ನಿಘಂಟುಗಳನ್ನೂ ಗಾತ್ರ ಮತ್ತು ಗುಣ ವ್ಯಾಪ್ತಿಗಳಲ್ಲಿ, ಶಾಸ್ತ್ರ ದೃಷ್ಟಿಯಲ್ಲಿ ಮೀರಿಸಲಿದೆ. ಆ ಕೋಶ ಪೂರ್ತಿ ಪ್ರಕಟವಾದಾಗ ಕನ್ನಡದಲ್ಲಿ ನಡೆಯುವ ಸಂಶೋಧನೆಗೆ ಒಂದು ಭದ್ರ ಬುನಾದಿ ನಿರ್ಮಾಣವಾದಂತಾಗುತ್ತದೆ. ಇದರ ನಿರ್ಮಾಣ ಕಾರ್ಯದಲ್ಲಿ ಆಡಳಿತ ವರ್ಗದ ಕಡೆಯಿಂದ ಪರಿಷತ್ತಿನ ಅಧ್ಯಕ್ಷರಾದ ಜಿ. ನಾರಾಯಣ ಅವರು, ಸಂಪಾದಕೀಯ ವರ್ಗದಲ್ಲಿ ವಿಶೇಷವಾಗಿ ಡಿ.ಎಲ್. ನರಸಿಂಹಾಚಾರ್ ಮತ್ತು ಎಸ್. ಬಸವಾರಾಧ್ಯರು ಶ್ರಮಿಸುತ್ತಿದ್ದಾರೆ. ಎಸ್. ಬಸವಾರಾಧ್ಯರ ಅಚ್ಚಿನಲ್ಲಿರುವ **ಕನ್ನಡ ನಿಘಂಟು** ಪ್ರಾಚೀನ ಕನ್ನಡ ನಿಘಂಟುಗಳ ಪಾಠವನ್ನು ಸಮಗ್ರ ಶಬ್ದಸೂಚಿಯೊಡನೆ ಒಂದೆಡೆ ಕೊಡುವ ಒಂದು ಹೊಸ ಪ್ರಯತ್ನ. ಅವರ ಈ ಕೃತಿ ನಿಘಂಟು ಕ್ಷೇತ್ರಕ್ಕೆ ಒಂದು ವಿಶಿಷ್ಟ ಕೊಡುಗೆಯಾಗಲಿದೆ.

ಇಲ್ಲಿಯವರೆಗೆ, ಕನ್ನಡಕ್ಕೆ ಸಂಬಂಧಿಸಿದಂತೆ ನಡೆದಿರುವ ಕೆಲಸದ ಒಂದು ಒಟ್ಟು ಪರಿವೀಕ್ಷಣೆ ಮತ್ತು ಪರಿಶೀಲನೆಯನ್ನು ನಡೆಸಿದಂತಾಯಿತು. ಆಗಿರುವ ಸಂಶೋಧನ ಕಾರ್ಯ ತೃಪ್ತಿಕರವಾಗಿದೆಯೇ ಎಂಬ ಪ್ರಶ್ನೆಗೆ ಯಾರಾದರೂ 'ಸಾಲದು' ಎಂಬ ಮಾತನ್ನು ಹೇಳಿದರೆ ಅದನ್ನು ನಿರಾಶೆಯ ಮಾತೆಂದು, ಇಲ್ಲಿಯವರೆಗೆ ಆಗಿರುವ ಕೆಲಸವನ್ನು ಅಲ್ಲಗಳೆದಂತಾಯಿತೆಂದು ಯಾರೂ ಭಾವಿಸಬೇಕಾಗಿಲ್ಲ. ಏನೂ ಇಲ್ಲದೇ ಇದ್ದ ಒಂದು ಕಾಲಕ್ಕೂ, ಈಗ ಯಾವುದೇ ಕ್ಷೇತ್ರದಲ್ಲೂ ಹತ್ತಾರು ಗಮನಾರ್ಹ ಪುಸ್ತಕಗಳನ್ನು ತೋರಿಸಲು ಸಾಧ್ಯವಿರುವ ಕಾಲಕ್ಕೂ ಖಂಡಿತ ವ್ಯತ್ಯಾಸವಿದೆ. ಕಾವ್ಯಮೀಮಾಂಸೆಯಂತಹ ವಿಷಯವನ್ನೇ ತೆಗೆದುಕೊಂಡರೂ ತೀರ ಹಿಂದೆ ಬೇಡ, ನಾನು ವಿದ್ಯಾರ್ಥಿಯಾಗಿದ್ದ ಕಾಲದಲ್ಲಿ (1950-3) ಆ ವಿಷಯಕ್ಕೆ ಸಂಬಂಧಿಸಿದಂತೆ ಕನ್ನಡ ಕೈಪಿಡಿಯ ಅಲಂಕಾರ ಶಾಸ್ತ್ರ ಭಾಗವನ್ನೂ, ಇನ್ನೂ ಒಂದೆರಡು ಪುಸ್ತಕಗಳನ್ನೂ ಕೆಲವು ಲೇಖನಗಳನ್ನೂ ಬಿಟ್ಟರೆ ಕನ್ನಡದಲ್ಲಿ ಇನ್ನೇನಿತ್ತು? ಆದರೆ ಈ ದಿನ ತೀ.ನಂ.ಶ್ರೀಕಂಠಯ್ಯನವರ ಪುಸ್ತಕವೇ ಮೊದಲಾದ ಅನೇಕ ಗ್ರಂಥಗಳು ಸಿಗುವುದಲ್ಲವೆ ಪ್ರಮುಖ ಸಂಸ್ಕೃತ, ಇಂಗ್ಲಿಷ್ ಕೃತಿಗಳ ಅನುವಾದಗಳು ದೊರೆಯುತ್ತವೆ. ಸಂಸ್ಕೃತ ಅಲಂಕಾರಶಾಸ್ತ್ರ ಗ್ರಂಥಗಳ ವಿದ್ವತ್ಪೂರ್ಣ ಅನುವಾದಕ್ಕಾಗಿ ಡಾ. ಕೆ. ಕೃಷ್ಣಮೂರ್ತಿ ಅಭಿನಂದನೀಯರಾಗಿದ್ದಾರೆ. ಇದು ಸಂತೋಷಪಡಬೇಕಾದ್ದೇನೋ ನಿಜ. ಆದರೆ ಇಲ್ಲಿಯವರೆಗೆ ನಡೆದಿರುವ ಕೆಲಸದ ವಿಷಯದಲ್ಲಿ ತೃಪ್ತರಾಗುವ ಸ್ಥಿತಿಯಲ್ಲಂತೂ ನಾವಿಲ್ಲ. ಕನ್ನಡವಂತೂ ಈಗ ಸಂಶೋಧಕರ ಸ್ವರ್ಗವೇ ಸರಿ. ಯಾವ ಕ್ಷೇತ್ರಕ್ಕೆ ಹೋದರೂ ಯಾರೂ ಮುಟ್ಟದೇ ಇರುವ ಅಥವಾ ಗಮನಿಸದಿರುವ ಸಮಸ್ಯೆಗಳ ತಂಡವನ್ನೇ ಎದುರಿಸಬಹುದು. ಕನ್ನಡ ಸಂಶೋಧನ ಕ್ಷೇತ್ರವೇನೋ ತನ್ನ ಹಲವು ಬಾಗಿಲುಗಳನ್ನು ತೆರೆದಿಟ್ಟುಕೊಂಡು ಸಿದ್ಧವಾಗಿದೆ. ಅಂತೆಯೇ ಅದು ಹೆಚ್ಚು ಸಂಖ್ಯೆಯ ನಿಷ್ಠಾವಂತ ಕೆಲಸಗಾರರನ್ನೂ ನಿರೀಕ್ಷಿಸುತ್ತಿದೆ.

# ಸಂಶೋಧನ ಸಮೀಕ್ಷೆ

ಕನ್ನಡದಲ್ಲಿ ಸಂಶೋಧನೆ ಎಂದಾಗ ನಮಗೆ ಕೊನೆಯ ಪಕ್ಷ ಮೂರು ಕ್ಷೇತ್ರಗಳಾದರೂ ಜ್ಞಾಪಕ್ಕೆ ಬರುತ್ತವೆ - ಕನ್ನಡ ಭಾಷೆ, ಕನ್ನಡ ಸಾಹಿತ್ಯ ಮತ್ತು ಕನ್ನಡ ನಾಡಿನ ಇತಿಹಾಸ. ಇವುಗಳಲ್ಲಿ ಈಚೆಗೆ ಏನೇನು ಕೆಲಸ ಆಗಿದೆ ಎಂಬುದರ ಸಂಕ್ಷಿಪ್ತ ಪರಿಚಯವನ್ನು ಈ ಚಿಕ್ಕ ಲೇಖನದಲ್ಲಿ ಮಾಡಿಕೊಡಲು ಪ್ರಯತ್ನಮಾಡಲಾಗಿದೆ.

ಭಾರತೀಯ ಭಾಷೆಗಳಲ್ಲಿ ಕನ್ನಡವು ಒಂದು ರೀತಿಯಲ್ಲಿ ಅದೃಷ್ಟಶಾಲಿ. ಏಕೆಂದರೆ ಅದರ ಬಗ್ಗೆ ಕೆಲಸ ಮಾಡಲು ಉತ್ಸಾಹದಿಂದಿರುವ ಒಂದು ತರುಣರ ಪೀಳಿಗೆ ಸಿದ್ಧವಾಗಿದೆ. ಅವರಲ್ಲಿ ಅನೇಕರಾಗಲೇ ಕೆಲವು ಬಹು ಒಳ್ಳೆಯ ಗ್ರಂಥಗಳನ್ನು ಲೇಖನಗಳನ್ನು ಪ್ರಕಟಿಸಿದ್ದಾರೆ. ಪುಣೆಯ ಡೆಕ್ಕನ್ ಕಾಲೇಜಿನಲ್ಲಿರುವ ಡಾ. ಎಚ್.ಎಸ್. ಬಿಳಿಗಿರಿಯವರು ಕನ್ನಡದ ಬಗ್ಗೆ ಇಂಗ್ಲೀಷಿನಲ್ಲಿ ಕನ್ನಡದಲ್ಲಿ ಅನೇಕ ಲೇಖನಗಳನ್ನು ಈಗಾಗಲೇ ಪ್ರಕಟಿಸಿದ್ದಾರೆ. ಅವರು ಕೇಶಿರಾಜನ **ಶಬ್ದಮಣಿದರ್ಪಣ**ದ ಬಗ್ಗೆ ಕನ್ನಡದಲ್ಲಿ **ಆಲೋಕ** ಎಂಬ ವಿವರಣಾತ್ಮಕ ಗ್ರಂಥವೊಂದನ್ನು ರಚಿಸಿ, ಅದರ ಮೊದಲನೆಯ ಭಾಗವನ್ನು ಇನ್ನೇನು ಹೊರತರಲಿದ್ದಾರೆ. ಅದನ್ನು ಹಸ್ತಪ್ರತಿಯಲ್ಲಿ ಓದಿರುವ ವಿದ್ವಾಂಸರು ಅದರ ಬಗ್ಗೆ ಭಾಷಾ ವಿಜ್ಞಾನದಲ್ಲಿ ಆಸಕ್ತರಾಗಿರುವವರ ಕುತೂಹಲವನ್ನು ಕೆರಳಿಸಿದ್ದಾರೆ. ಡಾ. ಡಿ.ಎನ್. ಶಂಕರ ಭಟ್ಟರ **ಕನ್ನಡ ಭಾಷೆಯ ಸಂಕ್ಷಿಪ್ತ ಚರಿತ್ರೆ**ಯು ಪ್ರಕಟವಾಗಿದೆ. ಕನ್ನಡ ಭಾಷೆಯ ಇತಿಹಾಸದ ಬಗ್ಗೆ ಒಂದು ಶಾಸ್ತ್ರೀಯ ಗ್ರಂಥದ ಆವಶ್ಯಕತೆಯಿತ್ತು. ಅದನ್ನು ಈ ಪುಟ್ಟ ಗ್ರಂಥವು ತಕ್ಕಮಟ್ಟಿಗೆ ಪೂರೈಸಿದೆ. ಇಲ್ಲಿಯವರೆಗೆ ನಡೆದಿರುವ ಸಂಶೋಧನೆಗಳ ಫಲವನ್ನು ಇಲ್ಲಿ ಕಾಣಬಹುದಲ್ಲದೆ, ಅನೇಕ ಹೊಸ ಸಂಗತಿಗಳನ್ನು ಇಲ್ಲಿ ಶ್ರೀ ಭಟ್ಟರು ಕೊಟ್ಟಿದ್ದಾರೆ, ಅನೇಕ ಸಮಸ್ಯೆಗಳನ್ನು ತೋರಿಸಿಕೊಟ್ಟಿದ್ದಾರೆ. ಸಮಗ್ರವಾದ ಕನ್ನಡ ಭಾಷೆಯ ಇತಿಹಾಸ ಹೇಗಿರಬಹುದೆಂಬುದಕ್ಕೆ ಒಂದು ಮಾದರಿಯನ್ನು ಒದಗಿಸಿದ್ದಾರೆ. ಪ್ರ. ಗೋ. ಕುಲಕರ್ಣಿಯವರ **ಕನ್ನಡ ಭಾಷೆಯ ಚರಿತ್ರೆ**ಯಲ್ಲಿ ಹೊಸ ಸಂಗತಿಗಳೂ ಅಷ್ಟಿಲ್ಲ, ಹೊಸ ದೃಷ್ಟಿಯೂ ಇಲ್ಲ. ಅದರ ಲೇಖಕರ ಇತಿಮಿತಿಗಳನ್ನು ಅರಿತು ಓದುವವರು ಆ ಕೃತಿಯ ಬಗ್ಗೆ ಹೆಚ್ಚು ಸಹಾನುಭೂತಿಪರರಾಗುತ್ತಾರೆ. ಡೆಕ್ಕನ್ ಕಾಲೇಜಿನವರು ಕನ್ನಡ ಉಪಭಾಷೆಗಳ ಬಗ್ಗೆ ಸಾಮಗ್ರಿಯನ್ನು ಸಂಗ್ರಹಿಸುವ ದಿಕ್ಕಿನಲ್ಲಿ ಹಾಲಕ್ಕಿ ಕನ್ನಡ, ಗುಲ್ಬರ್ಗ ಕನ್ನಡ ಮತ್ತು ನಂಜನಗೂಡು ಕನ್ನಡಗಳ ಬಗ್ಗೆ ಪುಸ್ತಕಗಳನ್ನು ಹೊರತಂದಿದ್ದಾರೆ. ಮೈಸೂರಿನ ಮಾನಸ ಗಂಗೋತ್ರಿಯ ಆವರಣದಲ್ಲಿ ಆರಂಭವಾಗಲಿರುವ ಭಾರತೀಯ ಭಾಷೆಗಳ ಅಧ್ಯಯನ ಕೇಂದ್ರದಿಂದ ಕನ್ನಡ ಭಾಷಾ ಕ್ಷೇತ್ರದಲ್ಲಿ ಇನ್ನೂ ಹೆಚ್ಚಿನ

ಕೆಲಸ ಆಗಲಿದೆ. ಡೆಕ್ಕನ್ ಕಾಲೇಜಿನಿಂದ ಪ್ರಕಟವಾಗುತ್ತಿರುವ **ಲಿಂಗ್ವಿಸ್ಟಿಕ್ ಸರ್ವೆ ಬುಲೆಟಿನ್ನಿನ**ಲ್ಲಿ ಪ್ರಕಟವಾಗುತ್ತಿರುವ ಡಾ. ಡಿ.ಎನ್. ಶಂಕರ ಭಟ್ಟರ ವಿಮರ್ಶೆಗಳು ಖಂಡಿತವೂ ನಿರ್ದಿಷ್ಟವೂ ಆಗಿದ್ದು, ಅಂತಹ ವಿಮರ್ಶೆಗಳು ಕನ್ನಡದಲ್ಲಿಯೂ ಹೆಚ್ಚುಹೆಚ್ಚಾಗಿ ಬರಬಾರದೇ ಎಂದು ಅನೇಕರಿಗೆ ಅನ್ನಿಸಿದೆ.

**ವಚನಗಳು**

ಹಳೆಯ ಕನ್ನಡ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಅನೇಕ ಗ್ರಂಥಗಳು ಪ್ರಕಟವಾಗಿವೆ. ಕರ್ನಾಟಕ ವಿಶ್ವವಿದ್ಯಾಲಯವು ಕೈಗೊಂಡ ವಚನ ಸಂಸ್ಕರಣ, ಪ್ರಕಟಣ ಯೋಜನೆಯಲ್ಲಿ ಅನೇಕ ಗ್ರಂಥಗಳು ಹೊರಬಿದ್ದಿವೆ. ಈಚೆಗೆ **ಸಿದ್ಧರಾಮೇಶ್ವರನ ವಚನಗಳು, ಬಸವಣ್ಣನವರ ವಚನಗಳು** ಮತ್ತು **ಶಿವಶರಣೆಯರ ವಚನಗಳು** ಪ್ರಕಟವಾಗಿವೆ. ಅನೇಕ ವಚನಕಾರರ ಹೊಸ ಹೊಸ ವಚನಗಳು ಇಲ್ಲಿ ಹೊರ ಬಂದಿರುವುದಲ್ಲದೆ, ಹಲವಾರು ಹಸ್ತ ಪ್ರತಿಗಳಿಂದ ಪಾಠಾಂತರಗಳನ್ನು ಎತ್ತಿಕೊಡುವುದರಿಂದ ವಚನಗಳ ಬೇರೆ ಬೇರೆ ಆಕರಗಳಿಗೆ ಸಂಬಂಧಿಸಿದ ಅನೇಕಾನೇಕ ವಿವರಗಳನ್ನು ಕೊಡುವುದರಿಂದ ಮುಂದಿನ ಸಂಶೋಧನೆಗೆ ಹೆದ್ದಾರಿಗಳನ್ನು ತೆರೆದಿವೆ. ಈ ಗ್ರಂಥಗಳ ಗ್ರಂಥ ಸಂಪಾದನೆಯಲ್ಲಿ ಹೆಚ್ಚಿನ ಶಾಸ್ತ್ರೀಯ ದೃಷ್ಟಿ ಮುನ್ನುಡಿಗಳಲ್ಲಿ ಇನ್ನೂ ಹೆಚ್ಚಿನ ಪ್ರೌಢಿಮೆಗಳಿದ್ದಿದ್ದರೆ ಇವುಗಳ ಬೆಲೆ ಇನ್ನೂ ಹೆಚ್ಚುತ್ತಿದ್ದಿತು. ಪ್ರೊ. ಎಸ್.ಎಸ್. ಭೂಸನೂರಮಠ ಅವರ **ಶೂನ್ಯ ಸಂಪಾದನೆಯ ಪರಾಮರ್ಶೆ** ಸುಮಾರು ಒಂದು ಸಾವಿರ ಪುಟಗಳ ಬೃಹದ್ಗ್ರಂಥ. ಹಿಂದೆ ಗೂಳೂರು ಸಿದ್ಧವೀರಣ್ಣೊಡೆಯನ **ಶೂನ್ಯ ಸಂಪಾದನೆ**ಯನ್ನು ಅಚ್ಚುಕಟ್ಟಾಗಿ ಸಂಪಾದಿಸಿ ಸುಂದರವಾಗಿ ಪ್ರಕಟಿಸಿದ್ದ ಈ ವಿದ್ವಾಂಸರಿಂದ ನಾವು ಆ ಕೃತಿಗೆ ಸಂಬಂಧಿಸಿದಂತೆ ಒಂದು ವಿದ್ವತ್‌ಪೂರ್ಣ ಕೃತಿಯನ್ನು ನಿರೀಕ್ಷಿಸಿದ್ದೆವು. 'ಪರಾಮರ್ಶೆ'ಯಲ್ಲಿ ಮಾತು ಬಹಳ ಹೆಚ್ಚು, ಶೈಲಿ ಜಾಳು ಜಾಳು. ಇಡೀ ಕೃತಿಯನ್ನು ಓದಿದ ಮೇಲೆ 'ಶೂನ್ಯ ಸಂಪಾದನೆ'ಯ(ಗಳ) ವಿಷಯ ಬಿಟ್ಟು ಇನ್ನು ಉಳಿದದ್ದು ಏನೇನೋ ಇದೆ ಎಂದು ಅನ್ನಿಸುತ್ತದೆ. ಈಚೆಗೆ ಡಾ.ಎಲ್. ಬಸವರಾಜು ಅವರು ಶಿವಗಣ ಪ್ರಸಾದಿ ಮಹಾದೇವಯ್ಯನ **'ಶೂನ್ಯ ಸಂಪಾದನೆ'**ಯನ್ನು ಪ್ರಕಟಿಸಿ ವಚನಾಭ್ಯಾಸಿಗಳಿಗೆ ದೊಡ್ಡ ಉಪಕಾರವನ್ನು ಮಾಡಿದ್ದಾರೆ. ಇವರು ಗ್ರಂಥ ಸಂಪಾದನೆಯಲ್ಲಿ ಬಹು ಶ್ರಮ ವಹಿಸಬಲ್ಲರು, ಬೇರೆ ಬೇರೆ ಕಡೆಗಳಿಂದ ಅಷ್ಟೇ ಶ್ರಮ ವಹಿಸಿ ವಿಷಯ ಸಾಮಗ್ರಿಯನ್ನು ಸಂಗ್ರಹಿಸಿ ಕ್ರಮಬದ್ಧವಾಗಿ ಒಂದೆಡೆ ಕೊಡಬಲ್ಲರು. ಆದರೆ ಎಲ್ಲಿ ತಾವು ಒಂದು ಹೊಸ ತೀರ್ಮಾನಕ್ಕೆ ಬರಬೇಕಾಗಿದೆಯೋ ಅಲ್ಲಿ ಸಾಮಾನ್ಯವಾಗಿ ಅವರು ತಪ್ಪುತ್ತಾರೆ. ಅವರ ಮುನ್ನುಡಿಗಳನ್ನು ಓದಿದರೆ ಅಲ್ಲಿ ಕಾಣುವ ವ್ಯರ್ಥವಾದ ಶಬ್ದಾಡಂಬರ, ತಮ್ಮ ಅಭಿಪ್ರಾಯಗಳನ್ನು ಒಪ್ಪದವರ ಬಗ್ಗೆ ಸಿಡುಕು, ಅಸಹನೆ, ಕಟು ನುಡಿಗಳನ್ನು ಮೆಚ್ಚುವುದು ಕಷ್ಟವಾಗುತ್ತದೆ. ಎಚ್. ದೇವೀರಪ್ಪನವರು ಸಂಪಾದಿಸಿರುವ **ಶರಣ ಚರಿತ ಮಾನಸ** ವಿದ್ವತ್ಪ್ರಪಂಚ ಆದರದಿಂದ ಬರಮಾಡಿಕೊಂಡಿರುವ ಗ್ರಂಥ. ಅದರ ಮುನ್ನುಡಿಯಲ್ಲಿ ಹರಿಹರನ ರಗಳೆಗಳ ಸಂಖ್ಯೆಯನ್ನು ಕುರಿತಾಗಿ ಅವರು ಮಾಡಿರುವ ಚರ್ಚೆಯನ್ನು ಉಳಿದವರು ಮುಂದುವರಿಸಬೇಕಾಗಿದೆ.

**ಪ್ರೌಢ ಪತ್ರಿಕೆಗಳು**

**ಕಿಟ್ಟೆಲ್ ಕೋಶವನ್ನು** ಪರಿಷ್ಕರಿಸಿ ಅದನ್ನು ಬೇರೆ ಬೇರೆ ಸಂಪುಟಗಳಲ್ಲಿ ಪ್ರಕಟಿಸುವ ಯೋಜನೆಯನ್ನು ಹಾಕಿಕೊಂಡ ಮದ್ರಾಸ್ ವಿಶ್ವವಿದ್ಯಾನಿಲಯವು ಅದರ ಮೊದಲ ಸಂಪುಟವನ್ನು ಹೊರತಂದಿದೆ. ಇದಕ್ಕಾಗಿ ದುಡಿಯುತ್ತಿರುವ ಪ್ರೊ. ಎಂ. ಮರಿಯಪ್ಪ ಭಟ್ಟ ಮತ್ತು ಅವರ ಸಹೋದ್ಯೋಗಿಗಳು ಅಭಿನಂದನಾರ್ಹರು 'ಪ್ರಬುದ್ಧ ಕರ್ಣಾಟಕ'ದಂತಹ ಪ್ರೌಢ ಪತ್ರಿಕೆಗೆ ಸಂವಾದಿಯಾಗಿ ಕರ್ನಾಟಕ ವಿಶ್ವವಿದ್ಯಾನಿಲಯವು ಕರ್ನಾಟಕ ಭಾರತಿಯನ್ನು ಆರಂಭಿಸಿದೆ. ಇವುಗಳ ಜೊತೆಗೆ, ಕರ್ನಾಟಕ ಪರಿಷತ್ ಪತ್ರಿಕೆಯನ್ನು ಹೊಸ ಜೀವತುಂಬಿ ಬೆಳಸುವುದಾದರೆ ಮೈಸೂರು ಧಾರವಾಡ ಬೆಂಗಳೂರುಗಳಲ್ಲಿ ಸಂಶೋಧನ ಲೇಖನಗಳಿಗೆ ಜಾಗವಿರುವ ಮೂರು ಪ್ರೌಢ ಪತ್ರಿಕೆಗಳಿದ್ದಂತಾಗುತ್ತದೆ.

ಜಾನಪದ ಸಾಹಿತ್ಯದ ಬಗ್ಗೆ ಉತ್ಸಾಹ ಹೆಚ್ಚಿರುವುದು ಗಮನಿಸಬೇಕಾದ ಸಂಗತಿ. ಈ ದಿಕ್ಕಿನಲ್ಲಿ ಮೈಸೂರಿನ ಕನ್ನಡ ಅಧ್ಯಯನ ಸಂಸ್ಥೆಯು ಪ್ರೊ. ದೇ. ಜವರೇಗೌಡರ ನೇತೃತ್ವದಲ್ಲಿ ಒಳ್ಳೆಯ ಕೆಲಸವನ್ನು ಮಾಡುತ್ತಿದೆ. ಅದು ಓರಣಗೊಳಿಸುತ್ತಿರುವ ಜಾನಪದ ಮ್ಯೂಜಿಯಮ್ ಕ್ರಮೇಣ ರೂಪುಗೊಂಡು ಒಂದು ವಿಶಿಷ್ಟ ಪ್ರದರ್ಶನಾಲಯವಾಗಲಿದೆ. ಅದೇ ಸಂಸ್ಥೆ ಪ್ರಕಟಿಸಿರುವ ಡಾ. ಎಲ್.ಆರ್. ಹೆಗ್ಗಡೆಯವರ **ತಿಮ್ಮಕ್ಕನ ಪದಗಳು** ಹಾಲಕ್ಕಿ ಒಕ್ಕಲಿಗರ ಜಾನಪದ ಗೀತಗಳ ಸುಂದರ ಸಂಗ್ರಹವಾಗಿದೆ. ಅಲ್ಲಿಂದ ಪ್ರಕಟವಾಗುತ್ತಿರುವ 'ಜಾನಪದ' ಪತ್ರಿಕೆಯ ಎರಡನೆಯ ಸಂಚಿಕೆ ಪ್ರಕಟವಾಗಬೇಕಾಗಿದೆ. ಕನ್ನಡ ಸಂಶೋಧನೆಯ ದೃಷ್ಟಿಯಿಂದ ಈಚಿನ ಒಂದು ಬೆಳವಣಿಗೆಯೆಂದರೆ ಧಾರವಾಡದಲ್ಲಿ ಡಾ. ಆರ್.ಸಿ. ಹಿರೇಮಠರ ನೇತೃತ್ವದಲ್ಲಿ ಆರಂಭವಾಗಿರುವ ಕನ್ನಡ ಅಧ್ಯಯನ ಪೀಠ.

ಶ್ರೀ ಐ.ಮಾ. ಮುತ್ತಣ್ಣನವರ **ಹತ್ತೊಂಬತ್ತನೆಯ ಶತಮಾನದಲ್ಲಿ ಪಾಶ್ಚಾತ್ಯ ವಿದ್ವಾಂಸರ ಕನ್ನಡ ಸೇವೆ** ಗಮನಾರ್ಹವಾದ ಕೃತಿಗಳಲ್ಲೊಂದು. ಭಾರತದಲ್ಲಿ ಅಲಭ್ಯವಾಗಿರುವ ಅನೇಕ ಕೃತಿಗಳನ್ನು ಹೊರ ದೇಶಗಳಲ್ಲಿ ಕಣ್ಣಾರೆ ಕಂಡು ಅವುಗಳ ಬಗ್ಗೆ ಬಹಳ ಸ್ವಾರಸ್ಯವಾದ ಮಾಹಿತಿಗಳನ್ನು ಸಂಗ್ರಹಿಸಿಕೊಟ್ಟಿರುವ ಈ ಕೃತಿ ಬೆಲೆಯುಳ್ಳದ್ದಾಗಿದೆ. ಆದರೂ ಭಾರತಕ್ಕೆ ಆಂಗ್ಲರು ಇಷ್ಟು ಬೇಗ ಸ್ವಾತಂತ್ರ್ಯವನ್ನು ಕೊಡಬಾರದಿತ್ತು ಮುಂತಾದ ಆಭಾಸಕರ ಮಾತುಗಳಿಂದಾಗಿ ಈ ಕೃತಿಯ ಯೋಗ್ಯತೆ ಕೆಳಗಿಳಿಯುತ್ತದೆಯೆಂದು ಹೇಳದೆ ವಿಧಿಯಿಲ್ಲ. ಆಂಗ್ಲ ವಿದ್ವಾಂಸರನ್ನು ಋಷಿಗಳೆಂದು ಪ್ರಾಮಾಣಿಕರೆಂದು ಪದೇ ಪದೇ ಹೊಗಳುವ ಭರದಲ್ಲಿ ಭಾರತೀಯ ವಿದ್ವಾಂಸರ ಪ್ರಾಮಾಣಿಕತೆಯನ್ನು ಶಂಕಿಸಿರುವ ಈ ಲೇಖಕರ ಪ್ರಾಮಾಣಿಕತೆಯೂ ಶಂಕಾಸ್ಪದವಾದುದು ಎಂದು ಓದುಗರಿಗೆ ಅಲ್ಲಲ್ಲಿ ಅನ್ನಿಸಿದರೆ ಆಶ್ಚರ್ಯವಿಲ್ಲ.

**ಇತಿಹಾಸ**

ಕರ್ನಾಟಕದ ಇತಿಹಾಸಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ ಶ್ರೀ ಆರ್.ಎಸ್. ಪಂಚಮುಖಿಯವರ **ಕರ್ನಾಟಕ ಇತಿಹಾಸ** ಒಂದು ಒಳ್ಳೆಯ ಪುಸ್ತಕ. ಇದು ಹತ್ತನೆಯ ಶತಮಾನಕ್ಕೆ ಕರ್ನಾಟಕದ ರಾಜಕೀಯ, ಧಾರ್ಮಿಕ, ಸಾಂಸ್ಕೃತಿಕ, ಇತಿಹಾಸಗಳನ್ನು ತಂದು

ನಿಲ್ಲಿಸುತ್ತದೆ. ಮೈಸೂರು ಸರಕಾರದವರು ಬೇರೆ ಬೇರೆ ಲೇಖಕರಿಂದ ಲೇಖನಗಳನ್ನು ಬರೆಯಿಸಿ ಹೊರತಂದಿರುವ ಬೃಹದ್ಗ್ರಂಥ Karnataka through the Ages ಒಂದು ಸ್ವಾಗತಾರ್ಹವಾದ ಕೃತಿ. ಇದರ ಲೋಪದೋಷಗಳೇನೇ ಇರಲಿ, ಕರ್ನಾಟಕದ ಸರ್ವಾಂಗೀಣವಾದ ಸಮಗ್ರ ಇತಿಹಾಸ ಒಂದೆಡೆ ಸಿಗದಿದ್ದುದರ ಕೊರತೆಯನ್ನು ಇದು ಬಹುಮಟ್ಟಿಗೆ ನಿವಾರಿಸಿದೆ. ಇದರ ಕನ್ನಡ ಅನುವಾದವು ಸಿದ್ಧವಾಗುತ್ತಿದ್ದು ಕೆಲವು ತಿಂಗಳುಗಳಲ್ಲಿ ಹೊರಬೀಳಲಿದೆ.

ಮೈಸೂರು ಮತ್ತು ಧಾರವಾಡಗಳಲ್ಲಿ ಕನ್ನಡ ಶಾಸನಗಳ ಸಂಗ್ರಹ, ಪರಿಷ್ಕರಣಗಳು ಸಾಕಷ್ಟು ಚಟುವಟಿಕೆಯಿಂದ ನಡೆದಿವೆ. ಈಚೆಗೆ ಡಾ. ಬಿ.ಆರ್. ಗೋಪಾಲ್ ಅವರ 'Karnataka Inscrptions. Vol. V' ಹೆಸರಿನಲ್ಲಿ ಅನೇಕ ಶಾಸನಗಳನ್ನು ಟಿಪ್ಪಣಿ ಸಮೇತ ಪ್ರಕಟಿಸಿ, ಸೊಗಸಾದ ಮುನ್ನುಡಿಯನ್ನು ಬರೆದಿದ್ದಾರೆ. ಡಾ. ಎ.ವಿ. ನರಸಿಂಹಮೂರ್ತಿಯವರ **ಕನ್ನಡ ಲಿಪಿಯ ಉಗಮ ಮತ್ತು ವಿಕಾಸ** ವಿದ್ಯಾರ್ಥಿಗಳಿಗೆ ಉಪಯುಕ್ತವಾಗುವ ಒಂದು ಸಂಕ್ಷಿಪ್ತ ಪಠ್ಯಪುಸ್ತಕ.

ಡಾ. ಎಚ್. ತಿಪ್ಪೇರುದ್ರಸ್ವಾಮಿಯವರ **ಕರ್ನಾಟಕ ಸಂಸ್ಕೃತಿ ಸಮೀಕ್ಷೆ** ಕನ್ನಡ ನಾಡಿನ ಸಂಸ್ಕೃತಿಯ ಎಲ್ಲ ಮುಖಗಳನ್ನು ತಕ್ಕಮಟ್ಟಿಗೆ ವಿಸ್ತಾರವಾಗಿ ಪರಿಚಯ ಮಾಡಿಕೊಡುವ ದೊಡ್ಡ ಆಸೆಯನ್ನಿಟ್ಟುಕೊಂಡು ಹೊರಟಿರುವ ಗ್ರಂಥ. ಹತ್ತಾರು ಪುಸ್ತಕಗಳನ್ನು ಓದಿ ಅಲ್ಲಿರುವುದನ್ನು ತಂದು ಕನ್ನಡದಲ್ಲಿ ಹೇಳುವಂತಹ ಪುಸ್ತಕಗಳು ಅಗತ್ಯವಾಗಿ ಬೇಕೆಂಬುದೇನೋ ನಿಜ. ನಿಜ ಹೇಳುವುದಾದರೆ ಸಂಶೋಧನೆಯಲ್ಲಿ ಆಸಕ್ತರಾಗಿರುವ ಗಂಭೀರಪ್ರವೃತ್ತಿಯ ಇತಿಹಾಸದ ವಿದ್ಯಾರ್ಥಿಗಳಿಗೆ ಇಂತಹ ಗ್ರಂಥಗಳಲ್ಲಿ ಆಸಕ್ತಿ ಕಡಮೆ. ಆದರೆ ಕರ್ನಾಟಕ ಸಂಸ್ಕೃತಿಯನ್ನು ತಿಳಿಯಬಯಸುವವರಿಗೆ ಈ ಪುಸ್ತಕವನ್ನು ಮನಃಪೂರ್ವಕವಾಗಿ ಶಿಫಾರಸು ಮಾಡಲು ಕಷ್ಟವಾಗುತ್ತದೆ. ಕಾರಣ - ಗ್ರಂಥದ ತುಂಬ ಅತ್ಯುಕ್ತಿಗಳು, ಅನೇಕ ತಪ್ಪು ಹೇಳಿಕೆಗಳು ತುಂಬಿವೆ. ಇದಕ್ಕೆ ಒಂದು ನಿದರ್ಶನ ಸಾಕು. ಮತಂಗ ಎಂಬುವನದೆಂದು ಹೇಳಲಾದ 'ಬೃಹದ್ದೇಶಿ' ಎಂಬ, ತೇದಿ ಖಚಿತವಾಗಿ ಗೊತ್ತಿಲ್ಲದ ಸಂಸ್ಕೃತ ಸಂಗೀತ ಗ್ರಂಥದ ಹಸ್ತಪ್ರತಿಯನ್ನು ತಾವು ವಾಸ್ತವವಾಗಿ ನೋಡದೆ, ಅದರಲ್ಲಿ ಕನ್ನಡ ಕೀರ್ತನೆಗಳಿವೆ ಎಂದು ಯಾರೋ ಹೇಳಿದ್ದನ್ನು ನಂಬಿಕೊಂಡು ಕನ್ನಡ ಸಾಹಿತ್ಯದ ಇತಿಹಾಸವನ್ನು ಕ್ರಿ.ಶ. ಐದನೆಯ ಶತಮಾನಕ್ಕೆ ಒಯ್ಯಬಹುದು ಎಂದು ತೀರ ಖಚಿತವಾದ ಉಕ್ತಿಗಳಲ್ಲಿ ಹೇಳಿಬಿಡುತ್ತಾರೆ. ಇಂತಹ ಹೇಳಿಕೆಗಳು ಎಷ್ಟು ಅಪಾಯಕಾರಿ ಎಂಬುದನ್ನು ಒತ್ತಿಹೇಳಬೇಕಾಗಿಲ್ಲ.

**ಸಂಖ್ಯೆಗೇ ಮನ್ನಣೆ**

ಈ ಪರಿಮಿತವಾದ ಅವಕಾಶದಲ್ಲಿ ಬಹು ಈಚೆಗೆ ಬಂದ ಕೆಲವು ಗ್ರಂಥಗಳನ್ನು ಮಾತ್ರ ಇಲ್ಲಿ ಪರಿಶೀಲಿಸಲಾಗಿದೆ. ಕನ್ನಡದಲ್ಲಿ ಬಹಳ ಸಂಶೋಧನೆ ಆಗುತ್ತಿದೆ ಎಂದು ಅನೇಕರು ತೃಪ್ತಿಯ ಮಾತನ್ನಾಡುತ್ತಾರೆ. ಗಾತ್ರಕ್ಕಿಂತ ಹೆಚ್ಚಾಗಿ ಗುಣವನ್ನು ಬಯಸುವ

ವ್ಯಕ್ತಿಗಳು ಬೇರೆಯದೇ ಅಭಿಪ್ರಾಯವನ್ನು ಹೊಂದಿದ್ದಾರೆ. ಹಿಂದಿನ ಪೀಳಿಗೆಯಲ್ಲಿ ಇದ್ದ ಸಂಶೋಧಕರ ಸಂಖ್ಯೆ ಮಿತವಾಗಿದ್ದರೂ ಅವರು ಸಂಶೋಧನ ಕಾರ್ಯವನ್ನು ಪ್ರೀತಿಸಿದ್ದರು ಮತ್ತು ಆ ಬಗ್ಗೆ ತಾದಾತ್ಮ್ಯವನ್ನು ಹೊಂದಿದ್ದರು. ಈಗ ಸಂಶೋಧಕರ ಸಂಖ್ಯೆ ಹೆಚ್ಚಿದೆ. ಆದರೆ ಅವರಲ್ಲಿ ಬಹುಪಾಲು ಜನ ಹೆಸರು, ಹಣ, ಪದವಿಗಳಿಗಾಗಿ ಕೆಲಸ ಮಾಡುವವರು. ಅವರು ಹೆಚ್ಚು ಶ್ರಮಪಡಲು ಸಿದ್ಧರಾಗಿಲ್ಲ. ತಮ್ಮನ್ನು ಯಾರೂ ಪ್ರಶ್ನಿಸುವುದಿಲ್ಲವೆಂಬ ಧೈರ್ಯವಿರುವುದರಿಂದ ಏನು ಬೇಕಾದರೂ ಬರೆದು ಶ್ರೇಷ್ಠ ಸಂಶೋಧನೆಯೆಂದು ಪ್ರಕಟಿಸುತ್ತಾರೆ. ಯಾರಾದರೂ ಪ್ರಶ್ನಿಸಿದರೆ ಅವರ ಮೈಮೇಲೆ ಬೀಳುತ್ತಾರೆ. ಓದುಗರೂ ಕೂಡ ಪುಟಗಳ ಸಂಖ್ಯೆಯಿಂದ ಕೃತಿಯ, ಕೃತಿಗಳ ಸಂಖ್ಯೆಯಿಂದ ವ್ಯಕ್ತಿಯ ಬೆಲೆಯನ್ನು ಕಟ್ಟುತ್ತಿರುವಾಗ ಕೃತಿಕಾರ ಅದರ ಸಂಪೂರ್ಣ ಉಪಯೋಗ ಪಡೆಯಲು ಪ್ರಯತ್ನಿಸುವುದು ಸಹಜವೇ. ವಿಜ್ಞಾನ ಕ್ಷೇತ್ರಗಳಲ್ಲಿ, ಸಂಸ್ಕೃತ ಭಾಷಾಸಾಹಿತ್ಯ ಕ್ಷೇತ್ರದಲ್ಲಿ ಅಥವಾ ಪಾಶ್ಚಾತ್ಯರಲ್ಲಿ ವಿದ್ವತ್ತಿನ ಸಂಶೋಧನೆಯ ಕಠೋರ ಸಂಪ್ರದಾಯ ಸ್ಥಾಪಿತವಾಗಿರುವಂತೆ ಕನ್ನಡದಲ್ಲಿ ಇನ್ನೂ ಆಗಿಲ್ಲ. ರಾ. ಬ. ನರಸಿಂಹಾಚಾರ್, ಡಾ. ಎ. ವೆಂಕಟಸುಬ್ಬಯ್ಯ, ಪ್ರೊ. ತೀ.ನಂ.ಶ್ರೀ., ಪ್ರೊ. ಡಿ.ಎಲ್.ಎನ್. ಅವರು ಹಾಕಿಕೊಟ್ಟ ಮಾರ್ಗ ಅಲ್ಲಿಗೇ ನಿಂತಿದೆ. ಸಂಶೋಧನೆಯಲ್ಲಿ ಮುಖ್ಯವಾಗಿ ನಿರೀಕ್ಷಿಸುವುದು ಸಂಪ್ರಬಂಧಗಳನ್ನು (Research papers). ಕನ್ನಡದಲ್ಲಿ ಇಂತಹ ಸಂಪ್ರಬಂಧಗಳಿಗಿಂತ ಪುಸ್ತಕಗಳನ್ನು ಬರೆಯುವುದರ ಕಡೆಗೇ ಆಸಕ್ತಿ ಹೆಚ್ಚು. ಇಷ್ಟಾದರೂ ತೀರಾ ನಿರಾಶರಾಗಬೇಕಾಗಿಲ್ಲವೆಂಬುದೊಂದೇ ಸಮಾಧಾನ. ಸಂಶೋಧನೆಯನ್ನು ಒಂದು ವ್ರತವೆನ್ನುವಂತೆ ಭಾವಿಸಿ ಅದರಲ್ಲಿ ಕಾರ್ಯೋನ್ಮುಖರಾಗುವ ಹೆಚ್ಚು ಹೆಚ್ಚು ಉತ್ಸಾಹೀ ತರುಣರನ್ನು ನಿರೀಕ್ಷಿಸಬಹುದಾಗಿದೆ.

# ಸಂಶೋಧನ ಸಮೀಕ್ಷೆ : 1971

ಈ ಪರಿವೀಕ್ಷಣೆಯಲ್ಲಿ ಇತಿಹಾಸ, ಸಂಸ್ಕೃತಿಗಳಿಗೆ ಸಂಬಂಧಿಸಿದ ಆರು ಗ್ರಂಥಗಳು, ಒಂದು ವಿಶ್ವಕೋಶ ಸೇರ್ಪಡೆಯಾಗಿದೆ. ಆರು ಗ್ರಂಥಗಳಲ್ಲಿ ಎರಡು ಪಠ್ಯಗ್ರಂಥಗಳ ರೀತಿಯವು, ಒಂದು ಅನೇಕ ಗ್ರಂಥಗಳ ಸಾರಾಂಶ ರೀತಿಯದು, ಒಂದು ಅನುವಾದಿತ, ಎರಡು ಸ್ವತಂತ್ರ ಕೃತಿಗಳು. ಮೊದಲು ಒಟ್ಟು ಭಾರತಕ್ಕೆ ಸಂಬಂಧಿಸಿದ ಕೃತಿಗಳನ್ನು ಪರಿಶೀಲಿಸಿ, ಬಳಿಕ ಕರ್ನಾಟಕಕ್ಕೆ ಸಂಬಂಧಿಸಿದ ಗ್ರಂಥಗಳನ್ನು ಪರಿಶೀಲಿಸಲಾಗುತ್ತದೆ. ಕೊನೆಯಲ್ಲಿ ವಿಶ್ವಕೋಶ ಬರುತ್ತದೆ.

**ಯುಗಯಾತ್ರೀ ಭಾರತೀಯ ಸಂಸ್ಕೃತಿ - ಸಂಪುಟ 2** : ಇದು ಕಲ್ಕತ್ತೆಯ ರಾಮಕೃಷ್ಣ ಮಿಶನ್ ಇನ್‌ಸ್ಟಿಟ್ಯೂಟ್ ಆಫ್ ಕಲ್ಚರ್ ಸಂಸ್ಥೆ ಪ್ರಕಟಿಸಿದ Cultural Heritage of India ಗ್ರಂಥಮಾಲಿಕೆಯ ಎರಡನೆಯ ಸಂಪುಟದ 'ಕನ್ನಡ ಅವತಾರ'. ಅನುವಾದವನ್ನು 'ಅವತಾರ'ವೆಂದು ಪ್ರಕಾಶಕರು ಹೆಸರಿಸಿ ಅವತಾರ ಎಂಬ ಮಾತಿನ ಅರ್ಥಗಾಂಭೀರ್ಯಕ್ಕೆ ಚ್ಯುತಿಯನ್ನು ತಂದಿರುವುದಲ್ಲದೆ ಶ್ರೀ ರಾಮಕೃಷ್ಣ ಮಹಾಸಂಘ, ರಾಮಕೃಷ್ಣ ಪರಮಹಂಸರ ಬಗ್ಗೆ, ಕನ್ನಡ ಮಾಧ್ಯಮದ ಬಗ್ಗೆ ಅನಗತ್ಯ ಪ್ರಚಾರ ಮಾಡಲು ಹೊರಟಂತೆ ತೋರುತ್ತದೆ. ವಸ್ತುನಿಷ್ಠ ಇತಿಹಾಸ ಗ್ರಂಥದ ಆರಂಭದಲ್ಲಿ ಆವೇಶದ, ಆಡಂಬರದ ಮಾತುಗಳು ಸೊಗಸುವುದಿಲ್ಲ. ಈ ಕನ್ನಡ ಗ್ರಂಥಕ್ಕೆ ಬಹು ಉಚಿತವಾದ ನಾಮಕರಣವನ್ನು ಮಾಡಿದ್ದಾರೆ ಕೆ.ವಿ. ಪುಟ್ಟಪ್ಪನವರು.

ಭಾರತೀಯರಿಂದಲೇ ಭಾರತೀಯ ಸಂಸ್ಕೃತಿಯ ವ್ಯಾಖ್ಯಾನ ಈ ಪ್ರಮಾಣದಲ್ಲಿ ಬಂದಿರುವುದು ಇದೇ ಮೊದಲು (ಇಂಗ್ಲೀಷ್ ಮೂಲ 1937). Cultural Heritage of India ಮಾಲಿಕೆಗೆ ಬೊಂಬಾಯಿನ ಭಾರತೀಯ ವಿದ್ಯಾಭವನ ಪ್ರಕಟಿಸಿರುವ ಭಾರತೀಯ ಇತಿಹಾಸ ಗ್ರಂಥಮಾಲಿಕೆ (ಪ್ರಥಮ ಸಂಪುಟ. 1951) ಒಂದು ರೀತಿಯಲ್ಲಿ ಪೂರಕ. ಒಂದರಲ್ಲಿ ಸಾಂಸ್ಕೃತಿಕ ಇತಿಹಾಸಕ್ಕೆ ಪ್ರಾಧಾನ್ಯ, ಮತ್ತೊಂದರಲ್ಲಿ ರಾಜಕೀಯ ಇತಿಹಾಸಕ್ಕೆ ಪ್ರಾಧಾನ್ಯ.

ಈ ಎರಡನೆಯ ಸಂಪುಟವು ಇತಿಹಾಸಗಳು, ಪುರಾಣಗಳು, ಧರ್ಮ ಮತ್ತು ಇತರ ಶಾಸ್ತ್ರಗಳನ್ನು ಒಳಗೊಂಡಿದೆ. ಅತ್ಯಂತ ಸುಪ್ರಸಿದ್ಧ, ಶ್ರೇಷ್ಠ ವಿದ್ವಾಂಸರು ಭಾರತೀಯ ಸಂಸ್ಕೃತಿಯ ನಾನಾ ಮುಖಗಳ ಬಗ್ಗೆ ಲೇಖನಗಳನ್ನು ಬರೆದಿದ್ದಾರೆ. ಕೆ.ಕೆ. ಹಂದಿಕಿ, ಎ.ಡಿ. ಪುಸಲ್ಕರ್,

ಸಿ.ಎಲ್. ವೈದ್ಯ, ಆರ್.ಎನ್. ದಾಂಡೇಕರ್, ಯು.ಎನ್. ಘೋಷಾಲ್, ಕೆ.ಎ. ನೀಲಕಂಠ ಶಾಸ್ತ್ರೀ ಮುಂತಾದ ಮಹನೀಯರ ಲೇಖನಗಳು ಇಲ್ಲಿವೆ. ಇವರ ಇಂಗ್ಲೀಷ್ ಲೇಖನಗಳನ್ನು ಅನುವಾದಿಸಿರುವವರಲ್ಲಿ ಎಲ್ಲರೂ ಭಾರತೀಯ ಸಂಸ್ಕೃತಿಯನ್ನು ಅಧ್ಯಯನ ಮಾಡಿದವರು ಮತ್ತು ಲೇಖನ ವ್ಯವಸಾಯದಲ್ಲಿ ಪಳಗಿದವರು. ಇದರಿಂದ ಶ್ರೇಷ್ಠ ಗ್ರಂಥವೊಂದರ ಶ್ರೇಷ್ಠ ಕನ್ನಡಾವತರಣಿಕೆ ('ಅವತರಣಿಕೆ' ಪ್ರಯೋಗ ಕ್ಷಮ್ಯ) ಕನ್ನಡಿಗರಿಗೆ ಲಭ್ಯವಾಗಿದೆ. ಅದಕ್ಕಾಗಿ ಮೈಸೂರು ವಿಶ್ವವಿದ್ಯಾನಿಲಯವನ್ನೂ ಪ್ರಸಾರಾಂಗದ ನಿರ್ದೇಶಕ ಪ್ರಭುಶಂಕರ ಅವರನ್ನೂ ಅಭಿನಂದಿಸಬೇಕು.

**ಯುಗಯಾತ್ರೀ ಭಾರತೀಯ ಸಂಸ್ಕೃತಿಯ** ಮೊದಲ ಸಂಪುಟ ಭಾರತದ ಇತಿಹಾಸ ಪೂರ್ವಯುಗದಿಂದ ಆರಂಭಿಸಿ ಸೈಂಧವ ಕಣಿವೆ ಸಂಸ್ಕೃತಿ, ವೈದಿಕ ಯುಗ, ಬೌದ್ಧ ಜೈನ ಧರ್ಮಗಳ ಕಾಲದವರೆಗಿನ ಚಿತ್ರವನ್ನು ಕೊಡುತ್ತದೆ. ಅಲ್ಲಿಂದ ಮುಂದಿನ ಚಿತ್ರ ಈ ಎರಡನೆಯ ಸಂಪುಟದಲ್ಲಿ ದೊರಕುತ್ತದೆ. ಪ್ರಾರಂಭದಲ್ಲಿ ಬರುವ ರಾಮಾಯಣ ಮತ್ತು ಮಹಾಭಾರತಗಳನ್ನು ಕುರಿತಾದ ಏಳು ಲೇಖನಗಳು ಅತ್ಯಂತ ಉದ್ಬೋಧಕವಾಗಿವೆ. ಆ ಕೃತಿಗಳ ಮೂಲವಸ್ತು, ಅವು ಕ್ರಮೇಣ ಪ್ರಕ್ಷೇಪಗಳನ್ನು ಮೈಗೂಡಿಸಿಕೊಂಡು ಬೆಳೆದದ್ದು, ಕಥಾಪ್ರಭೇದಗಳು, ಭಾರತೀಯ ಜನಜೀವನ ಮತ್ತು ಸಾಹಿತ್ಯಗಳ ಮೇಲೆ ಆ ಮಹಾಕಾವ್ಯಗಳು ಬೀರಿರುವ ಅಚ್ಚಳಿಯದ ಪ್ರಭಾವ ಇವೆಲ್ಲವನ್ನೂ ಇಲ್ಲಿ ವಿಸ್ತಾರವಾಗಿ ಚರ್ಚಿಸಿದೆ. ಆಗ್ನೇಯ ಏಷ್ಯಾದ ಮೇಲೆ ಅವು ಬೀರಿರುವ ಪ್ರಭಾವ ಒಂದು ಅಧ್ಯಾಯದ ವಸ್ತು. ಜಾವಾದ ರಾಮಾಯಣ ಕಥಾಂತರವೊಂದರಲ್ಲಿ ಸೀತೆ ರಾವಣನ ಚಿತ್ರಪಟವನ್ನು ಅನುದ್ದೇಶಪೂರ್ವಕವಾಗಿ ಇಟ್ಟುಕೊಂಡದ್ದು ಅವಳ ಮತ್ತು ರಾಮನ ಮಧ್ಯೆ ವಿರಸ ಬೆಳೆಯಲು ಕಾರಣವಾಯಿತೆಂದಿದೆ. ಇಂತಹ ಒಂದು ಕತೆ ಭಾರತೀಯ ಜಾನಪದದಲ್ಲೂ ಉಂಟೆಂಬುದನ್ನು ಇಲ್ಲಿ ನೆನೆಯಬಹುದು.

ಭಗವದ್ಗೀತೆ ಭಾರತೀಯ ಗ್ರಂಥಗಳಲ್ಲೆಲ್ಲ ಅತ್ಯಂತ ಸುಪ್ರಸಿದ್ಧವಾದುದು. ಅದು ಭಾರತೀಯರ ಆಧ್ಯಾತ್ಮಿಕ ಜೀವನವನ್ನು ಉದ್ದಕ್ಕೂ ರೂಪಿಸುತ್ತಿರುವ ಮಹಾಗ್ರಂಥ. ಆದರೆ, ವಿದ್ವಾಂಸರಿಗೆ ಅದು ಅನೇಕ ಸಮಸ್ಯೆಗಳನ್ನೂ ಹುಟ್ಟಿಸಿದೆ. ಇವೆಲ್ಲವುಗಳ ಜೊತೆಗೆ ಅದನ್ನು ಅನುಸರಿಸಿ ಹುಟ್ಟಿದ ಅನೇಕ 'ಗೀತೆ'ಗಳನ್ನೂ (ಉದಾ : ಬ್ರಾಹ್ಮಣ ಗೀತಾ, ಮನುಗೀತಾ, ಸೂರ್ಯಗೀತಾ) ಇಲ್ಲಿ ಪರಿಚಯ ಮಾಡಿಕೊಟ್ಟಿದೆ.

ವಿದ್ವಾಂಸರಿಂದ ಮೊನ್ನೆ ಮೊನ್ನೆಯವರೆಗೆ ಅನಾದರಿತವಾಗಿದ್ದ ಭಾಗವೊಂದು ಸಂಸ್ಕೃತದಲ್ಲಿದ್ದಿತು. ಅದೇ ಪುರಾಣಗಳು. ಪುರಾಣಗಳನ್ನು 'ಪುರಾತನರ ಭಾಷೆ'ಯೆಂದೂ ಕರೆಯುವುದುಂಟು. ಕತೆಗಳ ಮೂಲಕ ಜಗತ್ತನ್ನು ಅರ್ಥ ಮಾಡಿಕೊಳ್ಳುವ ಮಾಡಿಕೊಡುವ ಪ್ರಯತ್ನ ಪುರಾಣಗಳಲ್ಲಿದೆ. ಜೊತೆಗೆ, ವೇದಾಧ್ಯಯನಕ್ಕೆ ಅನರ್ಹರಾದ 'ಸ್ತ್ರೀ ಶೂದ್ರ'ರ ಬೋಧೆಗಾಗಿ ಪುರಾಣಗಳು ಹುಟ್ಟಿವೆ ಎಂಬ ನಂಬಿಕೆಯೂ ಉಂಟು. ಪುರಾಣ ವಿಭಾಗದಲ್ಲಿ ಬಂದಿರುವ ಆರ್.ಎನ್. ದಾಂಡೇಕರ್ ಅವರ 'ಭಾರತೀಯ ಪುರಾಣ ಸಾಹಿತ್ಯ' ಒಂದು ಮೌಲಿಕ ಪ್ರಬಂಧ.

ಮುಂದಿನ ಅಧ್ಯಾಯಗಳಲ್ಲಿ ಧರ್ಮಸೂತ್ರಗಳು, ಪ್ರಾಯಶ್ಚಿತ್ತ ಮತ್ತು ವ್ರತಗಳು, ಸಂಸ್ಕಾರಗಳ ವಿಷಯ ಬಂದಿವೆ. ಹಿಂದೂ ಸಾಮಾಜಿಕ, ರಾಜಕೀಯ ವ್ಯವಸ್ಥೆಗಳ ಅಧ್ಯಾಯಗಳು ಗಮನಾರ್ಹವಾಗಿವೆ. ಈ ಅಧ್ಯಾಯಗಳ ಮಧ್ಯೆ ತಮಿಳಿನ "ತಿರುಕ್ಕುರಳ್" ಗ್ರಂಥಕ್ಕೇ ಒಂದು ಪ್ರತ್ಯೇಕ ಅಧ್ಯಾಯ ಮೀಸಲಾಗಿರುವುದು ಆಶ್ಚರ್ಯ. ಅಂತಹ ಗ್ರಂಥಗಳು ಬೇರೆ ದೇಶೀಯ ಭಾಷೆಗಳಲ್ಲೂ ಉಂಟು. ಮಧ್ಯಯುಗದ ಭಾರತದ ಸಾಮಾಜಿಕ ಸುಧಾರಕರ ಬಗ್ಗೆ ಒಂದು ಪ್ರತ್ಯೇಕ ಅಧ್ಯಾಯವಿದೆ. ಅದರಲ್ಲಿ ಉಲ್ಲೇಖವಾಗಿರುವ ಅನೇಕರು ಮುಖ್ಯವಾಗಿ ಭಕ್ತರು ಅಷ್ಟೇ. ಸಮಾಜ ಸುಧಾರಕರಾಗಿ ಬಸವಣ್ಣನವರ ಹೆಸರು ಬಂದಿದ್ದರೂ ಕರ್ನಾಟಕದಲ್ಲಿ ನಡೆದ ಸಾಮಾಜಿಕ ಕ್ರಾಂತಿಗೆ ಸಿಗಬೇಕಾದಷ್ಟು ಸ್ಥಾನ ಇಲ್ಲಿ ಸಿಕ್ಕಿಲ್ಲ. 1962ರಲ್ಲಿ ಇಂಗ್ಲಿಷ್ ಗ್ರಂಥದ ಎರಡನೆಯ ಸಂಪುಟ ಪರಿಷ್ಕೃತವಾದಾಗ, ಆ ಕೊರತೆಯನ್ನು ಹೋಗಲಾಡಿಸಲವಕಾಶವಿದ್ದಿತು. 'ಹಿಂದೂ ಆರ್ಥಿಕ ವಿಚಾರಗಳು' ಲೇಖನವನ್ನು ಅನುವಾದಿಸಿರುವವರು ಲೇಖನದ ಕೊನೆಯಲ್ಲಿ ಪಟ್ಟಿ ಮಾಡಿರುವ ಇಂಗ್ಲೀಷ್ ಗ್ರಂಥಗಳನ್ನೂ ಅನುವಾದಿಸಿ ಕೊಟ್ಟಿರುವುದು ಸರಿಯಲ್ಲ. ಈ ಬಗ್ಗೆ ಸಂಪಾದಕರು ಎಚ್ಚರ ವಹಿಸಬೇಕಿದ್ದಿತು.

ಈ ಪುಸ್ತಕದ ದೊಡ್ಡ ಕೊರತೆಯೆಂದರೆ ಗ್ರಂಥದ ಕೊನೆಯಲ್ಲಿ ಶಬ್ದಸೂಚಿಯಿಲ್ಲದಿರುವುದು (ಮೂಲ ಗ್ರಂಥಕ್ಕೆ ವಿಸ್ತಾರವಾದ ಶಬ್ದ ಸೂಚಿಯಿದೆ). ಸರಿಯಾದ ಶಬ್ದ ಸೂಚಿಯಿಲ್ಲದಿದ್ದರೆ ಇಂತಹ ಪುಸ್ತಕದ ಉಪಯುಕ್ತತೆ ಬಹಳ ಕಡಮೆಯಾಗುತ್ತದೆ.

'ಯುಗಯಾತ್ರೀ ಭಾರತೀಯ ಸಂಸ್ಕೃತಿ'ಯು ಭಾರತೀಯ ಶಾಸ್ತ್ರದ (Indology) ವಿದ್ಯಾರ್ಥಿಗಳಿಗೆ ಒಂದು ಉತ್ತಮ ಸಂದರ್ಭಗ್ರಂಥ. ಅದರ ಅನುವಾದ ಮೂಲಕ್ಕೆ ಭಂಗವನ್ನು ತಂದಿಲ್ಲ. ಅಚ್ಚಿನ ದೋಷಗಳು ಕನಿಷ್ಠ ಸಂಖ್ಯೆಯಲ್ಲಿವೆ. ಅಚ್ಚು ಮಾಡಿಸಿರುವ ರೀತಿ, ಪುಸ್ತಕದ ಹೊರಸೋಟ (ಇದೂ ಮೂಲಗ್ರಂಥದಂತೆಯೇ ಇದೆ) ಎಲ್ಲವೂ ಪ್ರಥಮ ವರ್ಗದವು. ಇಂತಹ ಗ್ರಂಥಗಳ ಪ್ರಕಟಣೆ ಕನ್ನಡದ ಶ್ರೀಮಂತಿಕೆಯನ್ನು ಅದರ ನಿಜವಾದ ಅರ್ಥದಲ್ಲಿ ಹೆಚ್ಚಿಸುತ್ತದೆ.

**ಸಾಂಸ್ಕೃತಿಕ ಬೃಹದ್ಭಾರತ** : ಭಾರತ ತನ್ನ ಪೂರ್ವದೇಶಗಳಾದ ಬರ್ಮಾ, ಥೈಲ್ಯಾಂಡ್, ಇಂಡೋನೇಷಿಯ, ಮಲೇಶಿಯಾ, ವಿಯೆಟ್ನಾಂ ಮುಂತಾದ ದೇಶಗಳ ಮೇಲೆ ಬೀರಿದ ಅಪಾರವಾದ ಪ್ರಭಾವ ಅದರ ಸಾಂಸ್ಕೃತಿಕ ಇತಿಹಾಸದ ಒಂದು ಉಜ್ವಲ ಅಧ್ಯಾಯ. 'ಸಾಂಸ್ಕೃತಿಕ ಬೃಹದ್ಭಾರತ' ಎಂಬ ಶೀರ್ಷಿಕೆ ಗಮನಿಸಬೇಕಾದ್ದು. ಇಂದಿನ 'ಭಾರತ' 1947ಕ್ಕಿಂತ ಹಿಂದಿನದಕ್ಕಿಂತ ಕುಗ್ಗಿಹೋಗಿದೆ. ಏಕೆಂದರೆ ಪಶ್ಚಿಮ ಪಾಕಿಸ್ತಾನ ಮತ್ತು ಬಾಂಗ್ಲಾದೇಶಗಳು ಅದರಿಂದ ಸಿಡಿದು ನಿಂತಿವೆ. ಇದು ರಾಜಕೀಯ ಭಾರತದ ವಿಷಯವಾಯಿತು. ಸಾಂಸ್ಕೃತಿಕವಾಗಿ ನೋಡಿದಾಗ ಭಾರತದ ನಕ್ಷೆ ಇನ್ನೂ ವಿಶಾಲವಾದುದು, ಗ್ರಂಥ ಲೇಖಕ ಎ.ವಿ. ನರಸಿಂಹಮೂರ್ತಿಯವರ ಪ್ರಕಾರ. ಅವರಂತೆ ಸಾಂಸ್ಕೃತಿಕ ಬೃಹದ್ಭಾರತವು ಈಗಿನ ಭಾರತ, ಪಶ್ಚಿಮ ಪಾಕಿಸ್ತಾನ ಮತ್ತು ಬಾಂಗ್ಲಾ ದೇಶಗಳನ್ನು ಕೇಂದ್ರವಾಗಿ ಹೊಂದಿ, ಸುತ್ತಮುತ್ತಣ ಬರ್ಮಾ, ಥೈಲ್ಯಾಂಡ್, ಇಂಡೋನೇಷಿಯ, ಮಲಯೇಷಿಯ,

ಕ್ಯಾಂಬೋಡಿಯಾ, ವಿಯೆಟ್ನಾಂ, ಸಿಂಹಳ, ನೇಪಾಳ, ಚೀನಾ (ಟಿಬೆಟ್ ಸೇರಿದಂತೆ) ಆಫ್ಘಾನಿಸ್ತಾನಗಳನ್ನು ಒಳಗೊಳ್ಳುತ್ತದೆ. ಒಂದು ಕಾಲಕ್ಕೆ ಇಲ್ಲೆಲ್ಲ ಒಂದು 'ಸಂಸ್ಕೃತಿ'ಯು ವ್ಯಾಪಿಸಿದ್ದಿತು ಅಥವಾ ಆ 'ಸಂಸ್ಕೃತಿ'ಯ ಪ್ರಭಾವ ಮುದ್ರೆ ಸ್ಫಷ್ಟವಾಗಿದ್ದಿತು. ಅದು ಪ್ರಧಾನವಾಗಿ 'ಭಾರತೀಯ'ವಾಗಿದ್ದುದರಿಂದ ಅವೆಲ್ಲ ದೇಶಗಳನ್ನೂ ಸಾಂಸ್ಕೃತಿಕ ಬೃಹದ್ಭಾರತವೆಂದು ಕರೆದು, ಅಲ್ಲಿಯ ಸಂಸ್ಕೃತಿಗಳ ಭಾರತೀಯತೆಯನ್ನು ಪರಿಚಯ ಮಾಡಿಕೊಟ್ಟಿದ್ದಾರೆ ಎ.ವಿ. ನರಸಿಂಹ ಮೂರ್ತಿಯವರು.

ಈ ವಿಷಯವನ್ನು ಕುರಿತು ಇಲ್ಲಿಯವರೆಗೆ ಇಂಗ್ಲೀಷಿನಲ್ಲಿ (ಮತ್ತು ಫ್ರೆಂಚ್, ಡಚ್ ಭಾಷೆಗಳಲ್ಲಿ) ಗ್ರಂಥಗಳು ರಚಿತವಾಗಿದ್ದುವು. ಕನ್ನಡದಲ್ಲಿ ಪ್ರಾಸಂಗಿಕವಾಗಿ ಅಲ್ಲಿ ಇಲ್ಲಿ ಉಲ್ಲೇಖಗಳು ಬಂದಿದ್ದುವು. ಒಂದೆರಡು ಲೇಖನಗಳೂ ಪ್ರಕಟರಾಗಿದ್ದುವು. ಆ ವಿಷಯದ ಬಗ್ಗೆ ಒಂದು ಸಮಗ್ರ ಗ್ರಂಥವನ್ನೇ ಬರೆದು ಹೊರತಂದಿರುವುದು ಸ್ವಾಗತಾರ್ಹವಾಗಿದೆ.

ಈ ಗ್ರಂಥದಲ್ಲಿ ಒಟ್ಟು ಹದಿನಾಲ್ಕು ಅಧ್ಯಾಯಗಳಿವೆ. ಮೊದಲ ಎರಡು ಅಧ್ಯಾಯಗಳಲ್ಲಿ ವಿಷಯ ಪ್ರವೇಶ ಮತ್ತು ಸಾಂಸ್ಕೃತಿಕ ಬೃಹದ್ಭಾರತದಲ್ಲಿ ಸಮಾವೇಶಗೊಳ್ಳುವ ದೇಶಗಳ ಭೂಗೋಳ ಮತ್ತು ಪೂರ್ವೇತಿಹಾಸಗಳು ನಿರೂಪಿತವಾಗಿವೆ. ಮುಂದಿನ ಹತ್ತು ಅಧ್ಯಾಯಗಳಲ್ಲಿ ಬೇರೆ ಬೇರೆ ದೇಶಗಳ ರಾಜಕೀಯ, ಸಾಂಸ್ಕೃತಿಕ ಇತಿಹಾಸಗಳು, ವಿಶೇಷವಾಗಿ ಭಾರತೀಯ ಸಂಸ್ಕೃತಿಗೆ ಸಂಬಂಧಿಸಿದಂತೆ ಬಂದಿವೆ. ಕೊನೆಯ ಎರಡು ಅಧ್ಯಾಯಗಳು ರಾಜ್ಯಭಾರ ಕ್ರಮ ಮತ್ತು ವಾಸ್ತುಶಿಲ್ಪಗಳಿಗೆ ಮೀಸಲಾಗಿವೆ.

ಮೊದಲ ಅಧ್ಯಾಯದಲ್ಲಿ "ಬೃಹದ್ಭಾರತ ಎನ್ನುವುದು ಕೇವಲ ಸಂಸ್ಕೃತಿಯ ದೃಷ್ಟಿಯಿಂದ ಮಾತ್ರ, ಭೌಗೋಳಿಕ ಅರ್ಥವ್ಯಾಪ್ತಿ ಅದಕ್ಕೆ ಇಲ್ಲ" ಎಂದು ತಮ್ಮ ಗ್ರಂಥದ ಉದ್ದೇಶವನ್ನು ಸ್ಪಷ್ಟಪಡಿಸಿ, ಬೃಹದ್ಭಾರತದ ಸಂಸ್ಕೃತಿಯ ಬಗ್ಗೆ ಕೆಲಸ ಮಾಡಿರುವ ವಿಶೇಷವಾಗಿ ಫ್ರೆಂಚ್, ಡಚ್, ಭಾರತೀಯ ವಿದ್ವಾಂಸರನ್ನು ಹೆಸರಿಸಿದ್ದಾರೆ. ಆಯಾ ದೇಶಗಳ ಭೂಶೋಧನೆ, ಶಾಸನಗಳು, ದೇವಾಲಯಗಳು, ಗ್ರಂಥಗಳು ಇತ್ಯಾದಿಗಳು ಅಂತಹ ಅಧ್ಯಯನಕ್ಕೆ ವಿಶೇಷ ಸಾಮಗ್ರಿಯನ್ನು ಒದಗಿಸುತ್ತವೆ. ಉದಾಹರಣೆಗೆ ಜಾವಾದ ಇತಿಹಾಸವನ್ನರಿಯಲು 'ನಗರಕೃತಾಗಮ' 'ವರರತನ್' ಎಂಬ ಗ್ರಂಥಗಳು, ಜಾವ ಮತ್ತು ಬಲಿ ದ್ವೀಪಗಳ ಇತಿಹಾಸವನ್ನರಿಯಲು ಜಾವ ಭಾಷೆಯಲ್ಲಿ ಬರೆದ 'ರಾಮಾಯಣ' 'ಮೇಘಾಂತಕ' 'ಭೌಮ ಕಾವ್ಯ' ಮುಂತಾದ ಕೃತಿಗಳು, ಸಿಂಹಳ ದ್ವೀಪದ ಇತಿಹಾಸವನ್ನು ತಿಳಿಯಲು 'ದೀಪವಂಶ' 'ಮಹಾವಂಶ' 'ಚೂಲವಂಶ'ಗಳೆಂಬ ಕೃತಿಗಳು ಸಹಾಯಕವಾಗಿವೆ. ಕಂಬುಜದ (ಈಗಿನ ಕ್ಯಾಂಬೋಡಿಯ) ಪ್ರಾಚೀನ ಚರಿತ್ರೆಗೆ ಸಂಬಂಧಿಸಿದಂತೆ ಸುಮಾರು ಮುನ್ನೂರು ನಾಗರೀಲಿಪಿಯ ಸಂಸ್ಕೃತ ಶಾಸನಗಳು ದೊರಕಿವೆ.

ಪ್ರಾಚೀನ ಭಾರತೀಯರು ಕಡಲಾಚೆಯ ದೇಶಗಳಿಗೆ ಹೋಗಿ ಅಲ್ಲಿ ನೆಲಸಲು ಕಾರಣಗಳೇನಿರಬಹುದು ಎಂಬ ಪ್ರಶ್ನೆಯ ಜೊತೆಗೆ ಹಾಗೆ ನೆಲಸಿದವರು ಭಾರತದ ಯಾವ ಪ್ರದೇಶಕ್ಕೆ ಸೇರಿದವರು ಎಂಬುದೂ ಒಂದು ಸಮಸ್ಯೆಯಾಗಿಯೇ ಉಳಿದಿದೆ. ಈ ಬಗ್ಗೆ

ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿರುವುದನ್ನು ನರಸಿಂಹಮೂರ್ತಿಯವರು ಚರ್ಚಿಸಿ ವಲಸೆಗಾರರು ಮುಖ್ಯವಾಗಿ ತಮಿಳುನಾಡಿನವರಾಗಿದ್ದರೂ, ಭಾರತದ ನಾನಾ ಭಾಗಗಳಿಂದಲೂ (ಬಂಗಾಳ, ಆಂಧ್ರ, ಕರ್ನಾಟಕ) ವಲಸೆಗಾರರು ಹೋಗಿದ್ದಿರಬಹುದೆಂಬ ತೀರ್ಮಾನಕ್ಕೆ ಬರುತ್ತಾರೆ.

ಮೂರನೆಯ ಅಧ್ಯಾಯದಿಂದ ಮುಂದಕ್ಕೆ ಒಂದೊಂದು ದೇಶವನ್ನು ಆರಿಸಿಕೊಂಡು, ಆ ದೇಶದ ರಾಜಕೀಯ, ಧಾರ್ಮಿಕ, ಸಾಂಸ್ಕೃತಿಕ ಇತಿಹಾಸಗಳಲ್ಲಿ ಭಾರತೀಯ ಸಂಸ್ಕೃತಿಯ ಪ್ರಭಾವವನ್ನು ಗುರುತಿಸಲು ಪ್ರಯತ್ನಿಸಿದ್ದಾರೆ. ಕಂಬುಜದ ಕತೆಗಳ ಪ್ರಕಾರ ಆ ರಾಜ್ಯಸ್ಥಾಪಕ ಆರ್ಯದೇಶದಿಂದ ಬಂದ ಕಂಬು ಸ್ಥಾಯಂಭುವ ಎಂಬ ಶಿವಭಕ್ತ. ಈ ರಾಜವಂಶದವರ ಮನೆದೇವತೆ ಭದ್ರೇಶ್ವರ ಶಿವ. ಈ ರಾಜವಂಶದಲ್ಲಿ ಕ್ರಿ.ಶ. 802-54ರವರೆಗೆ ಆಳಿದ ಎರಡನೆಯ ಜಯವರ್ಮ ಅತ್ಯಂತ ಸಮರ್ಥ. ಇವನೇ ಆಂಗ್ಕೊರ್ ಪಟ್ಟಣದ ಸುಪ್ರಸಿದ್ಧ ದೇವಾಲಯವನ್ನು ಸ್ಥಾಪಿಸಿದವನು.

ಈ ವಂಶದ ರಾಜರು ಮರಣಾನಂತರ ಎರಡನೆಯ ಹೆಸರನ್ನು ಪಡೆಯುತ್ತಿದ್ದ ಸಂಗತಿ ವಿಲಕ್ಷಣವಾದುದು. ಉದಾಹರಣೆಗೆ ಮೇಲೆ ಹೇಳಿದ ಜಯವರ್ಮನು ಮರಣಾ ನಂತರ ಪರಮೇಶ್ವರ ಎಂಬ ಹೆಸರನ್ನು, ಇವನ ಮಗ ಮೂರನೆಯ ಜಯವರ್ಮನು (854-77) ವಿಷ್ಣುಲೋಕ ಎಂಬ ಹೆಸರನ್ನು ಪಡೆದರು. ಕ್ರಿ.ಶ. 908ರಲ್ಲಿ ಮಡಿದ ಯಶೋಲೋಕನು 'ಪರಮಶಿವಲೋಕ' ಎಂಬ ಹೆಸರನ್ನು ಪಡೆದ.

ಕಂಬುಜದ ಸಾಮಾನ್ಯ ಜನಜೀವನದ ಮೇಲೂ ಭಾರತೀಯ ಸಂಸ್ಕೃತಿಯ ಪ್ರಭಾವ ಅಪರಿಮಿತವಾಗಿದ್ದಿತು. ಅವರು ಶೈವ (ಪಾಶುಪತ), ವೈಷ್ಣವ, ಬೌದ್ಧ ಧರ್ಮಗಳಿಗೆ ಸೇರಿದವರಾಗಿದ್ದರು. ಅನೇಕ ಸ್ತ್ರೀಯರು ವಿದ್ಯಾವತಿಯರಾಗಿದ್ದುದು ಮಾತ್ರವಲ್ಲದೆ, ಬೌದ್ಧಮಠಗಳಲ್ಲಿ ಪ್ರಾಧ್ಯಾಪಕಿಯರೂ ಆಗಿದ್ದರು. ವಿವಿಧ ಮತಗಳ 'ಆಶ್ರಮ'ಗಳಲ್ಲಿ ಪುಸ್ತಕ ಭಂಡಾರಗಳಿದ್ದು, ಅಲ್ಲಿ ಅಧ್ಯಯನ ಅಧ್ಯಾಪನಗಳು ನಡೆಯುತ್ತಿದ್ದುವು.

ಚಂಪಾರಾಜ್ಯದಲ್ಲಿ (ಈಗಿನ ವಿಯೆಟ್ನಾಮ್) ಕ್ರಿ.ಶ. 2ನೆಯ ಶತಮಾನದಲ್ಲಿ ಹಿಂದೂಗಳು ಬಂದು ನೆಲಸಿದಂತೆ ಕಾಣುತ್ತದೆ. ಇಲ್ಲ ಆಳಿದ ಪಾಂಡುರಂಗ ವಂಶ, ಭೃಗು ವಂಶದ ದೊರೆಗಳು ಹಿಂದೂಗಳಾಗಿದ್ದರು. ಈ ರಾಜರು, ಭಾರತದ ಪದ್ಧತಿಯನ್ನನುಸರಿಸಿ ತಮ್ಮ ಹೆಸರಿನಲ್ಲಿ ಈಶ್ವರ ದೇವಾಲಯಗಳನ್ನು ನಿರ್ಮಿಸುತ್ತಿದ್ದರು. (ಉದಾಹರಣೆಗೆ, ಭದ್ರವರ್ಮನು ಭದ್ರೇಶ್ವರ ಲಿಂಗ ಇತ್ಯಾದಿ). ಇದು ದಕ್ಷಿಣ ಭಾರತಕ್ಕೆ ವಿಶಿಷ್ಟವಾದ ಪದ್ಧತಿಯಾಗಿರುವಂತೆ ತೋರುತ್ತದೆ. ಇಲ್ಲಿಯ ಶಾಸನಗಳಲ್ಲಿ ಲಕ್ಷ್ಮಿಗೆ ಪ್ರಾಧಾನ್ಯವಿದ್ದಿತು. ವಿವಾಹ ಕರ್ಮಗಳಲ್ಲಿ ಬ್ರಾಹ್ಮಣರದು ಪ್ರಧಾನ ಪಾತ್ರವಾಗಿದ್ದಿತು. ಸಹಗಮನ ಪದ್ಧತಿಯು ರೂಢಿಯಲ್ಲಿದ್ದು ಸಹಗಮನ ಮಾಡದೆ ಉಳಿದ ವಿಧವೆಯರು ತಲೆಯ ಕೂದಲನ್ನು ಬಾಚಿಕೊಳ್ಳುತ್ತಿರಲಿಲ್ಲ.

ಮಲಯ ದ್ವೀಪಸ್ತೋಮದಲ್ಲಿ ಜಾವದ್ವೀಪ (ಯವದ್ವೀಪ) ಭಾರತೀಯ ಸಂಸ್ಕೃತಿಯ ದೃಷ್ಟಿಯಿಂದ ಪ್ರಮುಖವಾದುದು. ಕ್ರಿ.ಶ. 5ನೆ ಶತಮಾನದಲ್ಲಿ ಅಲ್ಲಿ ಬೌದ್ಧಧರ್ಮಕ್ಕಿಂತ ವೈದಿಕ ಧರ್ಮ ಪ್ರಬಲವಾಗಿದ್ದಿತು. ಸುಮಾತ್ರ ದ್ವೀಪದ ಅತಿಮುಖ್ಯ ರಾಜ್ಯವೆಂದರೆ ಶ್ರೀವಿಜಯ. ಬೋರ್ನಿಯಾ ದ್ವೀಪದಲ್ಲಿ ಯೂಪಸ್ತಂಭದ ಮೇಲೆ ಶಾಸನಗಳು ಸಿಕ್ಕಿವೆ. ಅದೇ ದ್ವೀಪಸ್ತೋಮದಲ್ಲಿನ ಬಲಿದ್ವೀಪದ ಜನಸಂಖ್ಯೆಯಲ್ಲಿ ಇಂದಿಗೂ ಶೇಕಡ ಎಂಬತ್ತರಷ್ಟು ಹಿಂದೂಗಳೇ. ಇಲ್ಲಿ ಆಳಿದ ಸುಪ್ರಸಿದ್ಧ ರಾಜವಂಶ ಶೈಲೇಂದ್ರರದು.

ನೇಪಾಲವು ಇಂದಿಗೂ ಮುಖ್ಯವಾಗಿ ಹಿಂದೂಗಳ ರಾಜ್ಯವೇ ಆಗಿದ್ದು, ವೈದಿಕ ಸಂಸ್ಕೃತಿಯನ್ನು ಉಳಿಸಿಕೊಂಡಿರುವ ದೇಶ.

ಬರ್ಮ, ಟಿಬೆಟ್, ಸಿಂಹಳ, ಚೀನಾ ದೇಶಗಳು ಪ್ರಧಾನವಾಗಿ ಬೌದ್ಧ ಧರ್ಮಾನುಯಾಯಿಗಳಾದ್ದರಿಂದ ಅವೂ ಭಾರತೀಯ ಸಂಸ್ಕೃತಿಯ ವ್ಯಾಪ್ತಿಯೊಳಕ್ಕೇ ಬರುತ್ತವೆ ಎಂದು ನರಸಿಂಹಮೂರ್ತಿಯವರ ಅಭಿಪ್ರಾಯ. ಮಧ್ಯ ಏಷ್ಯಾದಲ್ಲಿ 1891ರಲ್ಲಿ ಕರ್ನಲ್ ಬೋವರ್ ಕಂಡುಹಿಡಿದ 'ಬೋವರ್ ಹಸ್ತಪ್ರತಿ' ಕ್ರಿಸ್ತಶಕ ನಾಲ್ಕನೇ ಶತಮಾನದಲ್ಲಿ ಲಿಖಿತವಾದ ಒಂದು ವೈದ್ಯಗ್ರಂಥ. ಅದೇ ಪ್ರದೇಶದಲ್ಲಿ ಕ್ರಿಸ್ತಶಕ ಎರಡನೇ ಶತಮಾನದ ದಮ್ಮಪದದ ಹಸ್ತಪ್ರತಿ ದೊರಕಿದೆ. ಈ ಪ್ರದೇಶ ಅನೇಕ ಬೌದ್ಧ ವಿಹಾರಗಳನ್ನೊಳಗೊಂಡಿದ್ದಿತು. ಆಫ್ಘಾನಿಸ್ತಾನವು ಭಾರತೀಯ ಸಂಸ್ಕೃತಿಯ ಪ್ರಭಾವಕ್ಕೆ ಒಳಗಾಗಿದ್ದಿತು. ಒಂದು ಕಾಲಕ್ಕೆ ಇಲ್ಲಿ ಬೌದ್ಧಧರ್ಮದ ಜೊತೆಗೆ ಶೈವಧರ್ಮವೂ ಪ್ರಚಾರದಲ್ಲಿದ್ದಿತು.

ಹೀಗೆ, ಸಾಂಸ್ಕೃತಿಕ ಬೃಹದ್ಭಾರತದ ದೇಶಗಳ ಆಡಳಿತ ವಿಧಾನ, ಮತಗಳು ಮತ್ತು ವಾಸ್ತುಶಿಲ್ಪದ ಮೇಲೆ ಭಾರತದ ಪ್ರಭಾವ ಅಪರಿಮಿತ. ಕ್ಯಾಂಬೋಡಿಯದ ಆಂಗ್ಕೊರ್‌ವಾಟ್, ಸಂಬೊರ್ ಪ್ರೈಕುಕ್ ಹಿಂದೂ ದೇವಾಲಯಗಳು ಶ್ರೇಷ್ಠ ಕಲೆಗೆ ನಿದರ್ಶನಗಳು. ಜಾವಾದ ಬೊರೊಬುದೂರಿನ ಸ್ತೂಪವು ವಿಶ್ವವಿಖ್ಯಾತವಾಗಿದೆ.

**ಸಾಂಸ್ಕೃತಿಕ ಬೃಹದ್ಭಾರತ** ಎಂಬ ಹೆಸರೇನೋ ಆಕರ್ಷಕವಾಗಿದೆ. ಮತ್ತು ಅದರಿಂದ ಭಾರತೀಯರು ಹೆಮ್ಮೆಪಟ್ಟುಕೊಳ್ಳಲೂಬಹುದು. ಆದರೆ, ಬೇರೊಂದು ದೇಶದ ಮೇಲೆ ಇಲ್ಲಿಯ ಪ್ರಭಾವ ಎಷ್ಟೇ ತೀವ್ರವಾಗಿದ್ದರೂ, ಅಲ್ಲಿಯ ಸಂಸ್ಕೃತಿಯನ್ನು ಇಲ್ಲಿಯ ಸಂಸ್ಕೃತಿಯ ಒಂದು ಭಾಗವೆಂದು ಗಣಿಸುವುದು ಉಚಿತವಾದೀತೆ ? ಚೀನಾಕ್ಕೆ ತನ್ನದೇ ಆದ, ಭಾರತಕ್ಕಿಂತಲೂ ಪ್ರಾಚೀನವಾದ ಒಂದು ಸಂಸ್ಕೃತಿಯಿದೆ. 'ಸಾಂಸ್ಕೃತಿಕ ಬೃಹದ್ಭಾರತ'ವು ಚೀನಾವನ್ನು ಒಳಗೊಳ್ಳುವಷ್ಟು ಸಮರ್ಥವಾಗುತ್ತದೆಯೇ ? ನೇಪಾಲ, ಸಿಂಹಲದಂತಹ ಇನ್ನೂ ಹತ್ತಿರದ ಚಿಕ್ಕ ರಾಷ್ಟ್ರಗಳು ಭಾರತದಿಂದ ತಾವು ರಾಜಕೀಯವಾಗಿ ಮಾತ್ರವಲ್ಲದೆ ಸಾಂಸ್ಕೃತಿಕವಾಗಿಯೂ ಭಿನ್ನವೆಂಬುದನ್ನು ಸ್ಥಾಪಿಸಲು ಬಯಸುತ್ತಿರುವ ಈ ಕಾಲದಲ್ಲಿ ದೂರದ ವಿಯೆಟ್ನಾಂನಂತಹ ದೇಶವೂ ಐತಿಹಾಸಿಕವಾಗಿ ಸಾಂಸ್ಕೃತಿಕ ಬೃಹದ್ಭಾರತದ ಭಾಗವಾಗಿತ್ತೆಂದು ವಾದಿಸುವುದು ಸರಿಯೇ ? ಅದು ಸರಿ ಎನ್ನುವುದಾದರೆ, ಇಸ್ಲಾಂ ಪ್ರಭಾವವಿರುವ ದೇಶಗಳನ್ನೆಲ್ಲ - ಭಾರತವನ್ನೂ ಸೇರಿಸಿಕೊಂಡು 'ಸಾಂಸ್ಕೃತಿಕ ಬೃಹದರೇಬಿಯ' ಎಂದು ಕರೆದರೆ ನಾವು

ಸಹಿಸುತ್ತೇವೆಯೇ ?. **ಸಾಂಸ್ಕೃತಿಕ ಬೃಹದ್ಭಾರತ** ಎಂಬ ಮಹದಾಶಯದ ಶೀರ್ಷಿಕೆಯ ಬದಲು Wales H.G. Qaurtitch ಅವರ The Making of Greater India ಗ್ರಂಥದ ಹೆಸರಿನ ಬಗ್ಗೆಯೂ ಇದೇ ಆಕ್ಷೇಪಣೆ ಎತ್ತಬಹುದು) ಭಾರತೀಯ ಸಂಸ್ಕೃತಿಯ ಪ್ರಸಾರ, ಪ್ರಭಾವ ಎಂಬರ್ಥಗಳನ್ನು ಒಳಗೊಳ್ಳುವ ಬೇರೊಂದು ಶೀರ್ಷಿಕೆಯನ್ನು ಕೊಟ್ಟಿದ್ದರೆ ಹೆಚ್ಚು ಉಚಿತವಾಗಿರುತ್ತಿತ್ತು.

ಆಗ್ನೇಯ ಏಷ್ಯಾದಲ್ಲಿ ಭಾರತ, ರಾಮಾಯಣಗಳಂತೆ ಪಂಚತಂತ್ರವೂ ಪ್ರಚಲಿತವಾಗಿದ್ದಿತು. ಅದನ್ನು ಲೇಖಕರು ಗಮನಿಸಿಲ್ಲ. ಅದರ ಬಗ್ಗೆ ವಿಶೇಷವಾಗಿ ಕೆಲಸಮಾಡಿ ಇಂಗ್ಲೀಷ್ ಕನ್ನಡಗಳಲ್ಲಿ ಹತ್ತಾರು ಲೇಖನಗಳನ್ನು ಬರೆದಿರುವ ಡಾ॥ ಎ. ವೆಂಕಟಸುಬ್ಬಯ್ಯನವರ ಬರಹಗಳನ್ನು ಲೇಖಕರು ಉಪಯೋಗಿಸಿಕೊಳ್ಳಬಹುದಿತ್ತು.

ಈ ಪುಸ್ತಕದ ಉಪಯುಕ್ತತೆಯ ಬಗ್ಗೆ ಹೆಚ್ಚು ಹೇಳುವ ಅಗತ್ಯವಿಲ್ಲ. ಭಾಷೆ ಲಲಿತವಾಗಿದ್ದರೂ, ನಿರೂಪಣೆಯಲ್ಲಿ ಗರಿಗರಿತನ ಅಷ್ಟಾಗಿ ಕಾಣಿಸದು. ಅನೇಕ ಗ್ರಂಥಗಳನ್ನು ಓದಿ, ಅವುಗಳ ಸಾರವನ್ನು ಭಟ್ಟಿ ಇಳಿಸಿ ಕೊಟ್ಟಿರುವ ಈ ಪಠ್ಯಗ್ರಂಥ ಭಾರತೀಯ ಸಂಸ್ಕೃತಿಯ ಬಗ್ಗೆ ನಮಗಿರುವ ತಿಳಿವನ್ನು ಹೆಚ್ಚಿಸುತ್ತದೆ ಎಂಬುದರ ಬಗ್ಗೆ ಅನುಮಾನವಿಲ್ಲ.

**ಋಗ್ವೇದಸಾರ, ನಾಗಪ್ರತಿಮಾವಿಚಾರ** - ಇತ್ತೀಚೆಗೆ ಬಂದಿರುವ ಅತ್ಯಂತ ವಿಲಕ್ಷಣ ಗ್ರಂಥಗಳಲ್ಲಿ ಶಂ. ಬಾ. ಜೋಶಿಯವರ **ಋಗ್ವೇದಸಾರ, ನಾಗಪ್ರತಿಮಾ ವಿಚಾರ** ಒಂದು. ಒಂಬೈನೂರು ಪುಟಗಳನ್ನು ಮೀರಿಸಿರುವ ಬೃಹತ್ ಗ್ರಂಥವೊಂದನ್ನು ಓದಿಯೂ ಲೇಖಕರು ನಿರ್ದಿಷ್ಟವಾಗಿ ಏನು ಹೇಳಲು ಪ್ರಯತ್ನಿಸುತ್ತಿದ್ದಾರೆಂದು ತಿಳಿಯದೇ ಹೋಗುವ ಸಂಗತಿ ಅಸಾಧಾರಣವಾದದ್ದೇ. ಈ ಗ್ರಂಥವನ್ನು ಓದಿ ಮುಗಿಸುವುದು ಒಂದು ಸಾಹಸ. ಆದರೆ ಶ್ರಮಕ್ಕೆ ಪ್ರತಿಫಲವಿದೆ ಎನ್ನುವುದು ಬಹಳ ಸಂದೇಹಾಸ್ಪದ.

ಇದಕ್ಕೆ ಏನು ಕಾರಣ ? ಪುಸ್ತಕದ ಯಾವ ಪುಟವೂ, ಪುಟದ ಯಾವ ಪ್ಯಾರಾವೂ ಅರ್ಥವಾಗುವುದಿಲ್ಲವಲ್ಲ. - ಇದಕ್ಕೆ ಏನು ಕಾರಣ ? ಲೇಖಕರೇ ಅಥವಾ ಓದುಗರೇ?

ಜೋಶಿಯವರ ಅದ್ಭುತ ಜ್ಞಾಪಕ ಶಕ್ತಿ, ಅವರ ವ್ಯಾಸಂಗದ ವೈಶಾಲ್ಯ ಎಂಥವರನ್ನೂ ದಂಗುಬಡಿಸುತ್ತದೆ. ಆದರೆ ಅವರಲ್ಲಿ ಕಂಡುಬರುವ ದೊಡ್ಡ ಕೊರತೆ - ವ್ಯವಸ್ಥಿತ ಆಲೋಚನೆಯಿಲ್ಲದಿರುವುದು. ಅನುಚಿತ ಶೈಲಿ ಲೇಖಕನಿಗೂ ಓದುಗನಿಗೂ ಹೇಗೆ ಅಡ್ಡಿಯಾಗಿ ನಿಲ್ಲಬಲ್ಲುದೆಂಬುದಕ್ಕೆ ಜೋಶಿಯವರ ಅನುಚಿತ ಬರಹ ಉತ್ತಮ ನಿದರ್ಶನಗಳನ್ನು ಒದಗಿಸುತ್ತದೆ.

ಜೋಶಿಯವರು ತಾವು ಏನೇನನ್ನು ಓದಿದ್ದಾರೆ, ಏನೇನು ನೆನಪಿಗೆ ಬರುತ್ತದೆ, ಆಲೋಚನೆಗಳು ಯಾವ ಕ್ರಮದಲ್ಲಿ ಹೊಳೆಯುತ್ತವೆ ಹಾಗೆ ಹಾಗೆಯೇ ಬರೆದು ಬಿಡುತ್ತಾರೆ. ಇದು ಸರಿಯೇ, ಈ ಅಭಿಪ್ರಾಯಕ್ಕೆ ಆಕ್ಷೇಪಣೆಗಳಿಲ್ಲವೇ, ಹೀಗೆ ಹೇಳಿದರೆ ಅದು ಓದುಗರನ್ನು ಮುಟ್ಟುತ್ತದೆಯೇ ಎಂಬ ಪ್ರಶ್ನೆಗಳು ಅವರನ್ನು ಬಾಧಿಸಿದಂತೆ ತೋರುವುದಿಲ್ಲ. ಪದಗಳನ್ನು

ಒಡೆಯುವ ರೀತಿ, ಅಚ್ಚು ಮಾಡಿಸುವ ರೀತಿ, ಮಧ್ಯೆ ಮಧ್ಯೆ ಬೇರೆಯವರ ಮಾತನ್ನೂ ಹೆಸರುಗಳನ್ನೂ ಉಲ್ಲೇಖಿಸುವ ರೀತಿ ಎಲ್ಲವೂ ಬೇಸರವುಂಟುಮಾಡುತ್ತವೆ. ವ್ಯಾಕರಣ ಎಲ್ಲೋ ಹಾರಿರುತ್ತದೆ. ವಾಕ್ಯ ಪೂರ್ತಿಯಾಗಬೇಕೆಂದಿಲ್ಲ. ಭಾಷೆಯ ಇತಿಹಾಸ, ರಚನೆಗಳಿಗೆ ಬೆಲೆ ಇಲ್ಲ. ಯಾವ ಸಂಗತಿಯನ್ನು ಯಾವುದರ ಜೊತೆಗಾದರೂ ಹೊಂದಿಸಬಹುದು. ಅಚ್ಚಿನ ತಪ್ಪುಗಳಿಗೆ ಮಿತಿಯಲ್ಲ. ಹೀಗಾಗಿ ಇಡೀ ಗ್ರಂಥ ಮೇಧಾವಿ ವಿದ್ವಾಂಸನೊಬ್ಬನ ಕನವರಿಕೆಯಾಗಿ ತೋರುತ್ತದೆ.

ನನ್ನ ಈ ಮಾತುಗಳಿಂದ, ಇದು ಗ್ರಂಥವನ್ನು ಓದಿ ಅರ್ಥಮಾಡಿಕೊಳ್ಳಲಾಗದ ಸೋಮಾರಿ ಅಥವಾ ದುರ್ಬಲನ ಅಭಿಪ್ರಾಯವೆಂಬ ಭಾವನೆ ಓದುಗರಿಗೆ ಬರಬಹುದು. ಕೆಳಗೆ, ಪುಸ್ತಕ ತೆಗೆದಾಗ ಕಾಣಿಸಿದ ಒಂದು ಪ್ಯಾರಾವನ್ನು, ಅದು ಇರುವಂತೆಯೇ ಉದ್ಧರಿಸಿಕೊಡುತ್ತೇನೆ, ಓದುಗರ ಅವಗಾನೆಗಾಗಿ :

"'ಅಕ್ಷ' (:ಕಣ್ಣು), ಎಂಬಲ್ಲಿ ನೇತ್ರಕ್ಕಿಂತ ಭಿನ್ನ ಅರ್ಥವು ಅಭಿಪ್ರೇತವಿದೆ ! ನೇತ್ರ, ನಯನ ಈ ಶಬ್ದ ಸಂಕೇತಗಳಲ್ಲಿ ಹುದುಗಿರುವ ನೀ → ನಯ್ - (ಮುಂದೆ ಒಯ್ಯು) ಈ ಧಾತ್ವರ್ಥವೇ ಬೇರೆ; 'ಚಕ್ಷು' ಎಂಬಲ್ಲಿ ಬೆಳಕನ್ನು ಕಾಣುವ ಇಂದ್ರಿಯ ಎಂಬ ಅರ್ಥ ಸ್ಪಷ್ಟವಿದೆ. ಈ ಬೆಳಕೂ ಸಹ ಅಭೌತವೇ. ಆದರೆ ಕಣ್ಣು (→ ಗಣ್ಣು, ಗ್ರಂಥಿ ಅಥವಾ ತೂತು) ಮತ್ತು 'ಅಕ್ಷ' 'ಅಕ್ಷಿ' ಎಂಬಲ್ಲಿ (ಕ್ಷಯರಹಿತ ಜ್ಞಾನದ ದೃಷ್ಟಿ) ಬೇರೊಂದು ಪಾತಳಿಯ ಅನುಭವ ಅಭಿಪ್ರೇತವಿದೆ. ನಯನ - ಚಕ್ಷು ಸವಿತೃ ಪ್ರಕಾಶಗ್ರಹಣದ ಇಂದ್ರಿಯ; ಆದರೆ ಅಕ್ಷ : ಕಣ್ಣು : ತ್ರೀ (ಅಥವಾ ಷಟ) ಚಕ್ರಯೋಗದ ದಿವ್ಯಾಧ್ಯಾತ್ಮದ ಅನುಭಾವದ ಮೂಲಕ ಉತ್ಪನ್ನವಾಗುವ 'ಶಾಶ್ವತ' ದೃಷ್ಟಿ ಎಂಬ ಧ್ವನ್ಯರ್ಥವು ಇಲ್ಲಿದೆ. ಆದರೆ! ಚಕ್ಷು ನೇತ್ರ, ನಯನವು ಲೌಕಿಕ ಜೀವನದ ಮಾರ್ಗಕ್ರಮಣದಲ್ಲಿ ಮಾತ್ರ ಉಪಯುಕ್ತ ದೃಷ್ಟಿ ಎಂದು ತತ್: ಏಕಂ ಪಂಥೀಯ ಮತ ! **ಅಕ್ಷವಂತರು ದಿವ್ಯ ಅಕ್ಷರು, ಬಿಡುಗಣ್ಣವರು!** ಈ ಒಮ್ಮೆ ತೆರೆದ ಕಣ್ಣು ಮುಚ್ಚುವುದಿಲ್ಲ ! ಬಿಡುಗಣ್ಣರಿಗೆ ಪಕ್ಷ್ಮಗಳು ಇರುವುದಿಲ್ಲ, ಎಂಬ ಸಾಂಪ್ರದಾಯಿಕ ನಂಬುಗೆಯುಂಟು ! ಇವರಿಗೆ ನಿದ್ರೆಯೆಲ್ಲಿ ! ಈ ಕಾರಣದಿಂದಲೇ ಬಿಡುಗಣ್ಣರಿಗೆ ಹಗಲು - ಇರುಳು ಭೇದವಿಲ್ಲ ! ಈ 'ಅಕ್ಷ' ಶಬ್ದ ಸಂಕೇತಕ್ಕೆ 'Knowledge, religious knowledge' ಎಂಬ ಅರ್ಥವಿರುವುದಾಗಿ ಸೂಚಿಸಿ, ಈ ಪ್ರಯೋಗಗಳು ವಿರಳ ಎಂದೂ ಮೊ. ವಿ. ಕೋಶ ನಮೂದಿಸಿದೆ: 'ಜ್ಞಾನ'ವು, ತತ್ ಮಯತೆಯ ರಸಾನಂದದಲ್ಲಿ ಅಕ್ಷದಿಂದ ಬರುವ 'ಅಕ್ಷ':-ರ ಒಳಗಣ್ಣು ಅರಳಿದಾಗ **ಕಣಿಯ ಮೂಲಕ ಪ್ರಾಪ್ತವಾಗುವ 'ಜ್ಞಾನ'** ; ವಿದ್ಯೆಯಿಂದ ಇದು ಬೇರೆ ಎಂದು ಉಪನಿಷತ್ತುಗಳು, ಗೀತೆ ಹೇಳಿರುವುದರ ಮರ್ಮವು ಹೀಗಿದೆ. ಈ ಒಳಕಣ್, 'ಅಕ್ಷ' (: axle : ಇರಸು) : ಇದರ ಮೂಲಕ ಆಗುವ ಜ್ಞಾನವು ಸ್ಪರ್ಶೇಂದ್ರಿಯ ಜನ್ಮಪ್ರಜ್ಞೆ. ಆದುದರಿಂದ ಈ ದಿವ್ಯಾಧ್ಯಾತ್ಮ ಜ್ಞಾನೋಪಲಬ್ಧಿಯ ಜೀವನ ಪರಿಸರವನ್ನು ಗ್ರಹಿಸಿಕೊಳ್ಳಲು ಶ್ರಮ ಪಡಬೇಕಾಗಿಲ್ಲ, 'ಸರ್ + ಪ' ನಾಗ ಎಂಬ **ಸಾರ್ಥ ಅಕ್ಷವು ಸ್ಪರ್ಶಜ್ಞಾನದ ಕಣ್ಣು**, ಎಂದಲ್ಲಿ ಅವಾಸ್ತವವೇನಿದೆ? ಈ ದೃಷ್ಟಿಯಿಂದ ಕಂದಮಿಳ ಕಣ್ಣು, ಕಣಿ → ಗಣಿ ಈ ಅಕ್ಷರ ಸಾಂಕೇತಿಕ ಪ್ರತಿಮೆಗಳು ಮಾನವರ ಜ್ಞಾನದ ವಿಕಾಸದ ಶ್ರೀಕಾರ : ಗಣ - ಪತಿಯೆ ಆಗಿರುವುದನ್ನು ನಿದರ್ಶನಕ್ಕೆ ತಂದುಕೊಡುತ್ತಿಲ್ಲವೆ ? ಸರಸ್ವತಿಯನ್ನು 'ಅಂಬ, ಅಂಬಿತಮೆ' ಎಂದುದೂ (ii, 42.16) ಅಂಬೆ = ಗೌರಿ : ಸಹಸ್ರಾಕ್ಷರಾ ಎಂದುದೂ (I, 164-11) ಅರ್ಥಪೂರ್ಣವಿಲ್ಲವೆ? ಮೊ.ವಿ. ಕೋಶವು ನಮೂದಿಸಿರುವ ಈ ಅರ್ಥ : ಅಕೃತಿ ಸಮೀಕ್ಷಾರ್ಹವಾಗಿವೆ: 3 ಅಕ್ಷ: an organ of sense, Sensual perception, the soul : ಕಣ್ → ಗಣ್ಣು = **soul**

= ಜೀವಾಳ ! 'ಅಕ್ಷ'ವು, (ಬಾಡಬ ಅಗ್ನಿ) 'ಕುಮಾರ' ಶಕ್ತಿಯ ನಿತ್ಯ ಸನಾತನ ಪ್ರತಿಮೆ, ಎಂದರೆ ಅಪರಾಧವಾದೀತೆ? 1. **ಉತ್ತಾನಪದ** : (: ಅಕ್ಷ : ಬಡ್ಡಿ (ವ್ಯಕ್ತ) ಮತ್ತು 2. **'ಧ್ರುವ' (:ಕುಮಾರ)** ಎರಡೂ ಏಕಕಾಲಕ್ಕೆ ! ಈ ಪ್ರಾತಿನಿಧಿಕ ಸಂಕೇತವು ಒಂದು ನೈತಿಕ ಕಥೆ (Parable) ಮೂಲತಃ! ಆದರೆ ಅಖ್ಯಾಯಿಕಾ (legend) ಸ್ವರೂಪದ ಜರತಾರೀ ವಸನ ಧರಿಸದಿದ್ದರೆ, ಈ ನಾಗ: ಲಿಂಗನ ಪ್ರತಿಮೆಯನ್ನು ಈವರೆಗೆ ಉಳಿಸಿಕೊಳ್ಳಲು ಸಾಮಾಜಿಕ ಪ್ರಜ್ಞೆ : ಮನುಜರ ಹಂತದ ಅಂತಃಸ್ಸಾಕ್ಷಿ, ಒಪ್ಪಬಹುದಿತ್ತೆ ಎಂಬ ಸಂದೇಹಕ್ಕೆ ಅವಕಾಶವಿದೆ. 'ಉತ್ತಾನ - ಪದ' ಈ ಸಂಕೇತವು **ನಿಗುರಿ ನಿಂತ ದಕ್ಷ** : ಬಡ್ಡಿ (ವೃಕ್ಷ) ಎಂಬರ್ಥದಲ್ಲಿ ಋಗ್ವೇದದಲ್ಲಿದೆ! (X. 72, 3) ಎಂದರೆ ಅಲ್ಲಿ ಈ ಉತ್ತಾನಪದ ಪ್ರಚ್ಛನ್ನ 'ದಕ್ಷ'ನೇ ಎಂದು ಸಿದ್ಧವಾಗುತ್ತದೆ, ವೃಕ್ಷ (ಬಡ್ಡಿ) : ಉತ್ತಾನಪದ ಇದು ದಕ್ಷವಿಲ್ಲದಾಗ - ಬರಿ ಕೊರಡು ಆದಾಗ, ಜಾತೀ - ಹೆಣ್ಣು ಒದ್ದಲ್ಲಿ ಅದು ಮರಳಿ ಚಿಗಿ (ಜಿಗಿ)ಯ ತೊಡಗುತ್ತದೆ, ಇದರ ಹೆಸರು ಅಶೋಕವೃಕ್ಷ ! ಅಂದರೆ ಅ-ದಕ್ಷ ಉತ್ತಾನಪದ ಶೋಕವೃಕ್ಷ ತಾನೆ, ಕಾಲಿದಾಸಾದಿ ಕವಿಪುಂಗವರು ಬಲ್ಲ ಈ 'ಸಮಯ'ದ ಅರ್ಥವು ದಿವ್ಯಾಕ್ಷದ ಸಂದರ್ಭದಲ್ಲಿ ಮಾತ್ರ ಗೋಚರಕ್ಕೆ ಬರುತ್ತಿರುವ ಈ ಸೋಜಿಗ ಅಭ್ಯಸನೀಯವಿದೆ"

ಬರವಣಿಗೆ ಹೀಗೆಯೇ ಸಾಗುತ್ತದೆ. ಜೋಶಿಯವರು ಅಲ್ಲೇ ನಿಲ್ಲುತ್ತಾರೆ, ಓದುಗ ಇಲ್ಲೇ ಉಳಿಯುತ್ತಾನೆ.

**ಗಣಪತಿ** : ಗಣಪತಿ ಭಾರತೀಯ ದೇವತೆಗಳಲ್ಲೆಲ್ಲ ಬಹು ಗಮನ ಸೆಳೆದವನು. ಅವನ ವಿಚಿತ್ರ ಆಕಾರ ಗೂಢ ಸಂಕೇತಗಳನ್ನೊಳಗೊಂಡಿದೆಯೆಂಬ ಭಾವನೆಯನ್ನು ಹುಟ್ಟಿಸುತ್ತದೆ. ಭಾರತದಲ್ಲಿ ಜಾತಿ ಮತಗಳ ಭೇದವಿಲ್ಲದೆ ಎಲ್ಲರಿಂದಲೂ ಅವನು ಪೂಜೆಗೊಳ್ಳುತ್ತಾನೆ. ಅವನ ವಿಗ್ರಹಗಳು ಭಾರತದಾಚೆ, ದೂರದೇಶಗಳಲ್ಲೂ ದೊರಕಿವೆ. ಅವನ ಹಬ್ಬವನ್ನು ರಾಷ್ಟ್ರೀಯ ಉತ್ಸವವಾಗಿ ಪರಿವರ್ತಿಸಲು ತಿಲಕರಂಥವರು ಪ್ರಯತ್ನಿಸಿದರು. ಹೀಗೆ ಗಣಪತಿಯ ಕಲ್ಪನೆ, ಇತಿಹಾಸ, ಹರಹುಗಳ ಅಧ್ಯಯನ ಅನೇಕ ದೃಷ್ಟಿಗಳಿಂದ ಸ್ವಾರಸ್ಯವಾದುದು.

ಕನ್ನಡದಲ್ಲಿ ಗಣಪತಿ ಬಗ್ಗೆ ಒಂದೆರಡು ಚಿಕ್ಕ ಬರಹಗಳನ್ನು ಬಿಟ್ಟರೆ ಹೆಚ್ಚಿಗೆ ದೊರೆಯುವುದಿಲ್ಲ. (ಇವುಗಳನ್ನು ಲೇಖಕರು ಬಲ್ಲವರಾದರೂ ಇವುಗಳ ಹೆಸರನ್ನು 'ಗ್ರಂಥ ಋಣ'ದಲ್ಲಿ ಕಾಣಿಸಿಲ್ಲ). ಇಂಗ್ಲೀಷಿನಲ್ಲಿ ಈ ದೇವತೆಯ ಬಗ್ಗೆ ಸಾಕಷ್ಟು ಬರಹ ಬಂದಿವೆ. ಮರಾಠಿ, ಹಿಂದಿಯಲ್ಲಿಯೂ ಉಂಟು. ಅವುಗಳನ್ನೆಲ್ಲ ಶ್ರದ್ಧೆಯಿಂದ ಅಧ್ಯಯನ ಮಾಡಿ ಅವುಗಳ ಸಾರವನ್ನು ಮ. ಶ್ರೀಧರಮೂರ್ತಿಯವರು 'ಗಣಪತಿ' ಪುಸ್ತಕದಲ್ಲಿ ಕೊಟ್ಟಿದ್ದಾರೆ. "ವಸ್ತುಶಃ ಈ ಪುಸ್ತಕಕ್ಕಾಗಿ ನಾನು ಮಾಡಿದ 'ಸಂಶೋಧನೆ' ಎಂಬುದು ಏನೂ ಇಲ್ಲ. ಈ ಹಿಂದೆ ಅನೇಕಾನೇಕ ವಿದ್ವನ್ಮಣಿಗಳೂ ಸಂಶೋಧಕರೂ ಪಟ್ಟಿರುವ ಶ್ರಮವನ್ನು ನಾನು ಧಾರಾಳವಾಗಿ ಬಳಸಿಕೊಂಡಿದ್ದೇನಷ್ಟೆ" ಎಂದು ಲೇಖಕರೇ ಹೇಳಿಕೊಂಡಿದ್ದರೂ ಈ ಪುಸ್ತಕದ ಉಪಯುಕ್ತತೆಯ ಬೆಲೆ ಕಡಮೆಯಾಗುವುದಿಲ್ಲ.

ಆರಂಭದಲ್ಲಿ ಲೇಖಕರು ಗಣಪತಿಯ ಹುಟ್ಟು - ವಿಕಾಸಗಳನ್ನು ಕುರಿತು ಚರ್ಚಿಸುತ್ತಾರೆ. ವೇದಯುಗದಲ್ಲಿ 'ಗಣಪತಿ' ಇರಲಿಲ್ಲ. ಋಗ್ವೇದದ ರುದ್ರನ ಮಕ್ಕಳಾದ ಮರುತರು ಮತ್ತು

ಬೃಹಸ್ಪತಿ ಸೇರಿ ಮುಂದೆ ವಿನಾಯಕ - ಗಣಪತಿಯಾಗಿರಬೇಕು ಎಂದು ವಿದ್ವಾಂಸರು ಊಹಿಸಿದ್ದಾರೆ. ಏಕೆಂದರೆ ಮರುತರು ವಿಘ್ನಕಾರಿಗಳು ಮತ್ತು ವಿಘ್ನಪರಿಹಾರಕರು, ಬೃಹಸ್ಪತಿ ವಿಘ್ನನಿವಾರಕ ಮತ್ತು ಮರುತರ ಯಜಮಾನ. ರುದ್ರ ಮತ್ತು ಮುಂದೆ ಕಾಣಿಸಿಕೊಂಡ ಶಿವ ಇಬ್ಬರಿಗೂ ಅಭೇದತ್ವ ಕಲ್ಪನೆಯಾಯಿತೆಂಬುದನ್ನು ನೆನೆದರೆ, ಅಂತಹ ಊಹೆ ಸಾಧ್ಯವೇನೋ ಎಂದು ಅನ್ನಿಸುತ್ತದೆ. ಆದರೆ ಇವೆಲ್ಲ ಊಹೆಯೇ ! ಸ್ಮೃತಿಗಳ ಕಾಲದಲ್ಲಿ ಕೇಡಿಗರಾದ ಅನೇಕ 'ವಿನಾಯಕ'ರ ಹೆಸರು ಬರುತ್ತವೆ. ವಿನಾಯಕನಿಗೆ 'ಗಜಮುಖ' ಪ್ರಾಪ್ತವಾದದ್ದು ಹೇಗೆ ಎಂಬ ಸಮಸ್ಯೆ ಇದ್ದೇ ಇದೆ. ಆನೆಗಳಿಗೆ ಹೆದರಿದ ಕಾಡುಜನ ಆನೆಯ ತಲೆಯ ದೇವತೆಯನ್ನು ಕಲ್ಪಿಸಿ ಅವನನ್ನು ಆರಾಧಿಸುವುದರಿಂದ ಕೇಡು ತಪ್ಪುತ್ತದೆ ಎಂದು ಭಾವಿಸಿದ್ದೇ ಗಜಮುಖನ ಹುಟ್ಟಿಗೆ ಕಾರಣ ಎನ್ನುವವರೂ ಇದ್ದಾರೆ. ಹೀಗೆ ಈ ದೇವತೆಯ ಉಗಮ, ಬೆಳವಣಿಗೆ ಬಹಳ ಜಟಿಲವಾದ ಸಮಸ್ಯೆ. ಕೊನೆಗೆ ಈ ದೇವತೆ ಆರ್ಯರದ್ದೇ, ದ್ರಾವಿಡರದ್ದೇ ಎಂಬ ಸಮಸ್ಯೆ ಹಾಗೆಯೇ ಇದೆ. ಇಂತಹ ಕಡೆ ಯಾವುದೇ ಅಭಿಪ್ರಾಯವನ್ನೂ ಪಟ್ಟಾಗಿ ಹಿಡಿಯದೆ ಅವುಗಳನ್ನು ನೇರವಾಗಿ ನಿರೂಪಿಸಿರುವ ಲೇಖಕರು ತೋರಿರುವ ಸಂಯಮ ಮೆಚ್ಚತಕ್ಕದ್ದಾಗಿದೆ.

ಪುರಾಣಕಾಲಕ್ಕೆ ಗಣಪತಿಯ ಕಲ್ಪನೆ ಪೂರ್ಣವಾಯಿತು. ಅವನ ಬಗ್ಗೆ ಅನೇಕ ಕತೆಗಳೂ ಹುಟ್ಟಿಕೊಂಡುವು. ಶ್ರೀಧರಮೂರ್ತಿಯವರು ಕೆಲವು ಕತೆಗಳ ಸಾರಾಂಶ ಕೊಟ್ಟಿರುವುದು ತೌಲನಿಕ ಅಧ್ಯಯನಕ್ಕೆ ಸಹಾಯವನ್ನುಂಟುಮಾಡುತ್ತದೆ.

ಗಣಪತಿಯ ವಿಗ್ರಹ ಕಲ್ಪನೆ ಒಂದು ಅಧ್ಯಾಯವನ್ನು ತುಂಬಿದೆ. ಗಣಪತಿ ಪಾರ್ವತಿಯ ಮೈಯ ಮಣ್ಣಿನಿಂದ, ಸ್ನಾನದ ಸಮಯದಲ್ಲಿ ಹುಟ್ಟಿದವನು ಎಂಬಂತಹ ಸಂಗತಿಗಳನ್ನು ನೋಡಿದರೆ ಅವನು ಪ್ರಜನನ ದೇವತೆ (Fertility god) ಎಂಬ ಕಲ್ಪನೆಗೆ ಅವಕಾಶವಾಗುತ್ತದೆ. ಗಣಪತಿಯಲ್ಲಿ ತಾಂತ್ರಿಕ ಆರಾಧನೆಯ ಸಂಕೇತಗಳನ್ನು ವಿದ್ವಾಂಸರು ಕಂಡಿದ್ದಾರೆ. 'ವಿಗ್ರಹ ಲಕ್ಷಣ ವೈವಿಧ್ಯ' ಅಧ್ಯಾಯದಲ್ಲಿ ಬರುವ ಗಣೇಶನ ರೂಪ ವೈವಿಧ್ಯ ಎಂಥವರನ್ನೂ ಬೆರಗುಗೊಳಿಸುತ್ತದೆ. ಗಣಪತಿಯ ಶಿಲ್ಪ ಲಕ್ಷಣದ ಬಗ್ಗೆಯೇ ಒಂದು ಪ್ರತ್ಯೇಕ ನಿಬಂಧವನ್ನು ಬರೆಯಬಹುದು.

'ವಿದೇಶಗಳಲ್ಲಿ ಗಣಪತಿ' ಎಲ್ಲ ಓದುಗರಿಗೂ ಕುತೂಹಲ ಹುಟ್ಟಿಸುವ ಅಧ್ಯಾಯ. ಬಹುಶಃ ಹಿಂದೂ ವ್ಯಾಪಾರಿಗಳ ಜೊತೆ ವಿಘ್ನ ನಿವಾರಕನಾಗಿ ಹೋಗಿ ಸಿಂಹಳ, ಇಂಡೋನೇಷಿಯಾ, ಚೀನಾ ಮುಂತಾದ ದೇಶಗಳಲ್ಲಿ ಗಣಪತಿ ನೆಲಸಿದ. ಈ ಪುಸ್ತಕದಲ್ಲಿ ಆ ದೇಶಗಳ ಗಣಪತಿ ವಿಗ್ರಹಗಳ ಚಿತ್ರಗಳನ್ನು ಕೊಟ್ಟಿದ್ದಾರೆ.

'ಗಣಪತಿ ಸಾಹಿತ್ಯ' ವಿಭಾಗದಲ್ಲಿ ಹೊಸಗನ್ನಡದಲ್ಲಿ ಬಂದಿರುವ ಕುವೆಂಪು, ಪು.ತಿ.ನ. ಅವರ ಸುಪ್ರಸಿದ್ಧ ಕವಿತೆಗಳನ್ನು ಪರಿಚಯ ಮಾಡಿಕೊಡಬಹುದಿತ್ತು.

ರೇಖಾ, ಭಾವಚಿತ್ರಗಳು ಪುಸ್ತಕವನ್ನು ಆಕರ್ಷಕವಾಗಿ ಮಾಡಿವೆ. ಗಣಪತಿಯ ಬಗ್ಗೆ ಕುತೂಹಲವುಳ್ಳವರಿಗೆ ಈ ಪುಸ್ತಕ ಉಪಯುಕ್ತ ಮಾಹಿತಿಯನ್ನೊದಗಿಸುತ್ತದೆ. ಆಡಂಬರ ಆರ್ಭಟವಿಲ್ಲದ ತಿಳಿಭಾಷೆಯ ಈ ಪುಸ್ತಕದ ಕೊನೆಯಲ್ಲಿ ಹೆಚ್ಚಿನ ಅಭ್ಯಾಸ ಮಾಡಲು ಬಯಸುವವರಿಗೆ ದೊಡ್ಡ 'ಗ್ರಂಥ ಋಣ'ದ ಪಟ್ಟಿ ಇದೆ.

**ಕದಂಬ ಮತ್ತು ಗಂಗರ ಇತಿಹಾಸ** : ಕದಂಬರು ಕನ್ನಡ ಪ್ರದೇಶದಲ್ಲಿ ಸ್ವತಂತ್ರವಾಗಿ ಆಳಿದ ಮೊತ್ತ ಮೊದಲ ದೇಶೀಯ ದೊರೆಗಳು. ಅವರ ಸಮಕಾಲೀನರಾಗಿ ಇನ್ನೂ ದಕ್ಷಿಣದಲ್ಲಿ ಆಳಿದವರು ಗಂಗರು. ಕರ್ನಾಟಕದ ಇತಿಹಾಸ ಕ್ರಿಸ್ತಪೂರ್ವ ಮೂರನೆಯ ಶತಮಾನದ ಅಶೋಕನಿಂದ ಆರಂಭವಾಗುತ್ತದೆ. ನಂತರ ಶಾತವಾಹನರು. ಬಳಿಕ ಪಲ್ಲವರು ಕನ್ನಡನಾಡಿದಲ್ಲಿ ಆಳಿದರು. ಆದರೆ ಕರ್ನಾಟಕ ತನ್ನ ಅಸ್ತಿತ್ವವನ್ನು ರೂಪಿಸಿಕೊಂಡು ವ್ಯಕ್ತಿತ್ವವನ್ನು ಕಂಡುಕೊಂಡದ್ದು ಕದಂಬ - ಗಂಗರ ಕಾಲದಲ್ಲಿ. ಈ ದೃಷ್ಟಿಯಿಂದ ಆ ಎರಡು ರಾಜಮನೆತನಗಳ ಇತಿಹಾಸ ನಮಗೆ ಮುಖ್ಯವಾಗಿರುತ್ತದೆ.

ಈ ರಾಜವಂಶಗಳನ್ನು ಕುರಿತಂತೆ ಸ್ವಲ್ಪ ಕೆಲಸ ನಡೆದಿದೆ. ಹಲವು ಲೇಖನಗಳ ಜೊತೆ, ಮೊರೇಸ್ ಅವರ The Kadamba Kula, ಎಂ.ವಿ. ಕೃಷ್ಣರಾವ್ ಅವರ The Gangas of Talakad ಎಂಬ ಗ್ರಂಥಗಳು ಇಲ್ಲಿ ಉಲ್ಲೇಖಾರ್ಹ. ಎನ್. ಲಕ್ಷ್ಮೀನಾರಾಯಣರಾವ್ ಮತ್ತು ಆರ್.ಎಸ್. ಪಂಚಮುಖಿಯವರ 'ಕರ್ನಾಟಕದ ಅರಸು ಮನೆತನಗಳು' ಪುಸ್ತಕದಲ್ಲಿಯೂ ಈ ಎರಡು ರಾಜಮನೆತನಗಳ ವಿಷಯವನ್ನು ಶಾಸ್ತ್ರೀಯವಾಗಿ ಚರ್ಚಿಸಿದೆ (ಪ್ರಸ್ತುತ ಗ್ರಂಥದ ಕರ್ತೃಗಳಾದ ಎ.ಎಸ್. ನಂಜುಂಡಸ್ವಾಮಿಯವರು ತಮ್ಮ ಗ್ರಂಥಪಟ್ಟಿಯಲ್ಲಿ ಈ ಪುಸ್ತಕದ ಹೆಸರನ್ನೇ ಹೇಳುವುದಿಲ್ಲ). ಈ ರಾಜವಂಶಗಳ ಬಗ್ಗೆ ಕನ್ನಡದಲ್ಲಿ ಎಷ್ಟು ಬರಹ ಬಂದರೂ ಸ್ವಾಗತಾರ್ಹವೇ.

ಕದಂಬರ ಬಗ್ಗೆ ಬರೆಯುತ್ತ ನಂಜುಂಡಸ್ವಾಮಿಯವರು ಆರಂಭದಲ್ಲಿ ಮಯೂರ ಶರ್ಮನಿಂದ ಹಿಡಿದು ಈಚಿನ ರಾಜರ ಬಗ್ಗೆ ಏನು ತಿಳಿದು ಬಂದಿದೆಯೋ ಅಷ್ಟನ್ನು ನಿರೂಪಿಸುತ್ತಾರೆ. ಕದಂಬರ ಬೇರೆ ಬೇರೆ ಶಾಖೆಗಳ ಬಗ್ಗೆಯೂ ಪ್ರಸ್ತಾಪಿಸುತ್ತಾರೆ. ಇಲ್ಲೆಲ್ಲ ಮೊರೇಸರ ಗ್ರಂಥಾನುವಾದವಿದೆ. ಹಾಗೆ ಅನುವಾದಿಸುವಲ್ಲಿ ತಪ್ಪೂ ಮಾಡುತ್ತಾರೆ. ಮಾಂಧಾತೃವರ್ಮ ಎಂಬುದನ್ನು 'ಮಂದ್ರಾತ್ರಿವರ್ಮ' ಎಂದು ಕರೆಯುತ್ತಾರೆ. ಹಾಗೆಯೇ 'ಕಟುಮುಖವಾದಿತ್ವ' ಎಂಬುದನ್ನು 'ಕತುಮುಖವದಿತ್ರ' ಎಂದು ಬರೆಯುತ್ತಾರೆ. ಇದಕ್ಕೆ ಕಾರಣ ಇಂಗ್ಲೀಷ್ ಲಿಪ್ಯಂತರ ('Katumukhavaditra'). 'ಗೌರವ' ಎಂದು ಅವರು ಹೇಳುವ ಯಾವ ಶೈವಶಾಖೆಯೂ ಕರ್ನಾಟಕದಲ್ಲಿರಲಿಲ್ಲ. (ಅವರ ಅಭಿಪ್ರಾಯ 'ಗೊರವ' ಎಂದಿರಬಹುದು. ಆದರೆ 'ಗೊರವ' ಎಂಬ ಮಾತಿಗೆ ಸನ್ಯಾಸಿ ಎಂದು ಮಾತ್ರ ಅರ್ಥ). ಕದಂಬರ ಕಾಲದ ಆಡಳಿತ ಚಿತ್ರಕಲೆ ಅಧ್ಯಾಯಗಳಲ್ಲಿ ಮಾಮೂಲಿ ಸಂಗತಿಗಳಿವೆ.

ಗಂಗರ ಇತಿಹಾಸ ಬರೆಯುವಾಗಲಂತೂ ಲೇಖಕರು ಮೂಲ ಶಾಸನಗಳನ್ನೇ ನೋಡದೆ - ಆದರೂ ಅವುಗಳನ್ನು ಯಥೇಷ್ಟವಾಗಿ ಉದ್ಧರಿಸಿ - ಇತರರ ಬರಹಗಳನ್ನೇ ಅವಲಂಬಿಸಿದ್ದಾರೆ (ಆ ಬರಹಗಳಲ್ಲಿ ಶಾಸನಗಳ ಆಕರಗಳು ಸಿಗುತ್ತವೆ ತಾನೆ!). 'ಕೊಂಗುದೇಶ ರಾಜಕ್ಕಲ್' (=ಕೊಂಗುವೇಶ ರಾಜಾಕ್ಕಳ್), ವಾಡಿಭಸಿಂಹ (=ವಾದೀಭ ಸಿಂಹ), 'ತಾಡಮಂಗಲ ಮಾಧವ' (=ತಡಂಗಾಲ ಮಾಧವ), ಬಾಳ್ಗಲ್ಚ (=ಬಾಳ್ಗಚ್ಚು), ಪಿಟ್ಟುವಿಪತಿ (=ಪಿಟ್ಟುವಿಪತಿ, ಪೃಥ್ವೀಪತಿ), 'ಬಡ್ಡೆಗ' (=ಬದ್ದೆಗ) ಇಂಥವನ್ನು ಬೇಕಾದಷ್ಟು ಹೆಸರಿಸಬಹುದು. ಗಂಗರ ಕಾಲದ ಸಾಮಾಜಿಕ ಸ್ಥಿತಿಗತಿಗಳ ಬಗ್ಗೆ ಬರೆಯುತ್ತ "ತಾಂಬೂಲ ಚರ್ವಣಕ್ಕೆ ಬಡವ ಬಲ್ಲಿದರೆಂಬ ಭೇದವಿರಲಿಲ್ಲ" ಎಂದು ಮುಂತಾಗಿ ಹೇಳುವುದು ನಗೆ ಬರಿಸುತ್ತದೆ.

ಅಲ್ಲಲ್ಲಿ ರೈಸ್, ಮೊರೇಸ್ ಮೊದಲಾದ ವಿದ್ವಾಂಸರ ಹೆಸರುಗಳನ್ನು ಉಲ್ಲೇಖಿಸಿರುವುದು ಅವರ ಗ್ರಂಥಗಳಿಂದ ವಿಷಯ ಸಂಗ್ರಹ ಮಾಡಿರುವುದನ್ನು ಮರಸುವುದಕ್ಕಾಗಿ. ಇಂತಹ ಪುಸ್ತಕ ಪ್ರಕಟಣೆಯಿಂದ ಯಾರಿಗೂ ಯಾವ ರೀತಿಯಲ್ಲಿಯೂ ಉಪಯೋಗವಾಗುವುದಿಲ್ಲ.

**ಕರ್ನಾಟಕ ಶಾಸನ ಸಮೀಕ್ಷೆ** : ಕರ್ನಾಟಕದ ಶಾಸನಗಳ ವಿಷಯವಾಗಿ ಕೆ.ವಿ. ರಮೇಶ್ ಅವರು ಬೆಂಗಳೂರು ವಿಶ್ವವಿದ್ಯಾಲಯದ ಆಶ್ರಯದಲ್ಲಿ ಕೊಟ್ಟ ಮೂರು ವಿಶೇಷೋಪನ್ಯಾಸಗಳ ಸಂಗ್ರಹ ಈ ಪುಸ್ತಕ.

ಮೊದಲ ಉಪನ್ಯಾಸದಲ್ಲಿ ಭಾರತದ ಇತಿಹಾಸ ರಚನೆಯಲ್ಲಿ ಶಾಸನಗಳ ಪಾತ್ರವೇನೆಂಬುದನ್ನು ಚರ್ಚಿಸುತ್ತಾರೆ. ಚೀನಾದಲ್ಲಿ ಶಾಸನಗಳನ್ನು ಕ್ರಮಬದ್ಧವಾಗಿ ಅಧ್ಯಯನಮಾಡುವ ಪ್ರವೃತ್ತಿ ಕ್ರಿಸ್ತಶಕ ಹನ್ನೊಂದನೇ ಶತಮಾನದಷ್ಟು ಹಳೆಯದಾದರೂ ಭಾರತದಲ್ಲಿ ಶಾಸನಗಳನ್ನು ಗಮನಕ್ಕೆ ತೆಗೆದುಕೊಂಡದ್ದು ಹದಿನೆಂಟನೇ ಶತಮಾನದ ಕೊನೆಯ ಭಾಗದಲ್ಲಿ. ಶಾಸನಗಳ ಕ್ರಮಬದ್ಧ ಅಧ್ಯಯನ ಇಲ್ಲಿ ಹೇಗೆ ಆರಂಭವಾಯಿತೆಂಬುದರ ಸ್ಥೂಲ ಚಿತ್ರವನ್ನು ರಮೇಶ್ ಕೊಟ್ಟಿದ್ದಾರೆ. 12ನೇ ಶತಮಾನದ ಕಲ್ಹಣ ತಾನು ಕಾಶ್ಮೀರದ ಇತಿಹಾಸ ಬರೆಯುವಲ್ಲಿ ತಾಮ್ರಪಟಗಳಂತಹ ದಾಖಲೆಗಳನ್ನು ನೋಡಿರುವುದಾಗಿ ಹೇಳಿಕೊಂಡಿದ್ದಾನೆ. ಶಾಸನವೆಂದ ತಕ್ಷಣ ಅದು ಹೇಳುವುದೆಲ್ಲ ನಿಜವಾಗಿರುವುದಿಲ್ಲ. ಅಲ್ಲಿರಬಹುದಾದ ಉತ್ಪ್ರೇಕ್ಷೆಗಳ ಬಗ್ಗೆ ಎಚ್ಚರ ಬೇಕೆಂದು ಸೂಚಿಸಿದ್ದಾರೆ. ಶಾಸನಗಳು ನಮಗೆ ಐತಿಹಾಸಿಕವಾದ ಹೊಸ ಸಂಗತಿಗಳನ್ನು ತಿಳಿಸುವುದಲ್ಲದೆ ಸಾಹಿತ್ಯದಂತಹ ಬೇರೆ ಮೂಲಗಳಿಂದ ತಿಳಿದುಬರುವ ಸಂಗತಿಗಳಿಗೆ ಸಮರ್ಥನೆ ನೀಡುತ್ತವೆ. ರಮೇಶ್ ಅನೇಕ ಉದಾಹರಣೆಗಳೊಡನೆ ಇದನ್ನು ಸಮರ್ಥಿಸಿದ್ದಾರೆ.

ಭಾರತೀಯ ಶಾಸನಗಳ ಹಿನ್ನೆಲೆಯಲ್ಲಿ ಕರ್ನಾಟಕದ ಶಾಸನಗಳ ಸ್ವರೂಪ ಎಂತಹುದು ಎಂಬುದು ಎರಡನೆಯ ಉಪನ್ಯಾಸದ ಸಾರಾಂಶ. ಕರ್ನಾಟಕದ ಶಾಸನಗಳ ಇತಿಹಾಸ ಅಶೋಕನಿಂದ ಆರಂಭವಾಗುತ್ತದೆ (ಅಶೋಕನ 'ಐದು' ಶಾಸನಗಳು ಕರ್ನಾಟಕದಲ್ಲಿವೆ ಎಂಬ ಮಾತು ರಮೇಶರಿಗೆ ಅರಿಯದಂತೆ ಆಗಿರುವ ಪ್ರಮಾದ : ಸಿಕ್ಕಿರುವ ಅಶೋಕನ

ಶಾಸನಗಳ ಸಂಖ್ಯೆ ಆರು). ಕರ್ನಾಟಕದಲ್ಲಿ ಮೊದಮೊದಲು ಬರಿಯ ಪ್ರಾಕೃತ ಶಾಸನಗಳು ದೊರೆತು, ಬಳಿಕ ಸಂಸ್ಕೃತ ಶಾಸನಗಳು ಪ್ರಬಲವಾಗಿ, ಮುಂದೆ ಕನ್ನಡ ಭಾಷೆಯ ಶಾಸನಗಳು ಕ್ರಮೇಣ ಹೆಚ್ಚುತ್ತಾ ಹೋಗುವುದನ್ನು ತೋರಿಸಿದ್ದಾರೆ. ಇದಕ್ಕೆ ಕಾರಣ - ದೇಶೀಯ ಭಾಷೆಗಳ ವಿಷಯದಲ್ಲಿ ಜನತೆ ಮತ್ತು ವಿದ್ವಾಂಸರು ಬೆಳೆಸಿಕೊಳ್ಳುತ್ತ ಬಂದ ಅಭಿಮಾನ ಎಂಬುದರಲ್ಲಿ ಸಂದೇಹವಿಲ್ಲ. ಚಾಲುಕ್ಯರ ಮೂಲ ಹೆಸರು ನಿಜವಾಗಿ 'ಚಲುಕ್ಯ' ಎಂಬ ರಮೇಶರ ವಾದ ಗಮನಾರ್ಹವಾದ್ದು. ಆದರೆ ಆ ವಂಶದ ಪೊಗವರ್ಮ ಎಂಬುದರ ಮೂಲ 'ಪುಗಟ್ವರ್ಮ' ಎಂದೂ (ಪುಗಟ್ = ಹೊಗಳು) ಆದ್ದರಿಂದ ಪೂಗವರ್ಮ ಮತ್ತು ಕೀರ್ತಿವರ್ಮ ಅಭಿನ್ನರು ಎಂಬ ಅವರ ವಾದ ಅಷ್ಟೇನೂ ಸಮರ್ಥನೀಯವೆಂಬಂತೆ ತೋರದು. ಕರ್ನಾಟಕದಲ್ಲಿ ಹಿಂದೆ ಮತ್ತು ಈಚೆಗೆ ದೊರಕಿರುವ ಅನೇಕ ಶಾಸನಗಳ ಪ್ರಾಮುಖ್ಯವನ್ನು ರಮೇಶ್ ವಿಸ್ತಾರವಾಗಿ ಚರ್ಚಿಸಿದ್ದಾರೆ. ಉಪನ್ಯಾಸದ ಕೊನೆಯಲ್ಲಿ ಇತಿಹಾಸದ ವಿದ್ಯಾರ್ಥಿಗಳು ಶಾಸನಗಳ ಸಾರಾಂಶವನ್ನು (ಅಥವಾ ಇಂಗ್ಲೀಷ್ ಅನುವಾದವನ್ನು) ಅವಲಂಬಿಸುತ್ತಿರುವ ಪ್ರವೃತ್ತಿಯನ್ನು ಖಂಡಿಸುತ್ತ ಶಾಸನಗಳ ಮೂಲಪಾಠವನ್ನು ತಾವೇ ಅಧ್ಯಯನ ಮಾಡುವುದರ ಅಗತ್ಯವನ್ನು ಒತ್ತಿ ಹೇಳಿದ್ದಾರೆ. "ಇತಿಹಾಸದ ಪುನಾರಚನೆಯೇನೂ ಗುರಿಯಿಲ್ಲದ ಒಂದು ಅಧ್ಯಯನ ಕ್ಷೇತ್ರವಲ್ಲ. ಅದರ ಮುಖ್ಯಗುರಿ ನಮ್ಮನ್ನು ನಮಗೇ ಪರಿಚಯ ಮಾಡಿಕೊಡುವುದು" ಎಂಬ ಅವರ ಮಾತು ಗಮನಾರ್ಹವಾದುದು.

ಮೂರನೆಯ ಉಪನ್ಯಾಸದ ವಿಷಯ ಕರ್ನಾಟಕ ಮತ್ತು ಹೊರನಾಡಿನ ಶಾಸನಗಳು. ಆಗ್ನೇಯ ಏಷ್ಯಾದಲ್ಲಿ ಭಾರತೀಯ ಸಂಸ್ಕೃತಿ ಅನೇಕ ಶತಮಾನ ಪ್ರಬಲವಾಗಿತ್ತೆಂಬುದು ಇತಿಹಾಸದ ವಿದ್ಯಾರ್ಥಿಗಳಿಗೆ ಗೊತ್ತಿರುವ ವಿಷಯ. ಆಗ್ನೇಯ ಏಷ್ಯಾದಲ್ಲಿ ಯಾವ ಕನ್ನಡ ಶಾಸನವೂ ದೊರೆಯದಿದ್ದರೂ ಅಲ್ಲಿಯ ರಾಜರ ಕೊನೆಯ 'ವರ್ಮನ್' 'ಮಾರ' ಎಂಬ ಭಾಗಗಳು, 'ದಿಂಡಿಗ' ಎಂಬ ರಾಜನ ಹೆಸರು, ಕ್ಯಾಂಬೋಡಿಯದ ಸಮ್ರೋನ್ ಶಾಸನ ರಾಷ್ಟ್ರಕೂಟರ ಕಾಲದ ಕನ್ನಡ ಲಿಪಿಯಲ್ಲಿರುವುದು - ಇವೇ ಮೊದಲಾದ ಸಾಕ್ಷ್ಯಾಧಾರಗಳು ಕರ್ನಾಟಕಕಕ್ಕೂ ಆಗ್ನೇಯ ಏಷ್ಯಾಕ್ಕೂ ಇದ್ದ ಸಾಂಸ್ಕೃತಿಕ ಸಂಬಂಧವನ್ನು ತೋರಿಸುತ್ತವೆ.

ಕರ್ನಾಟಕ ಬಿಟ್ಟು ಭಾರತದ ಬೇರೆ ಬೇರೆ ಪ್ರದೇಶಗಳಲ್ಲಿ ಇಲ್ಲಿನ ದೊರೆಗಳ ಶಾಸನಗಳು ಸಾಕಷ್ಟು ದೊರೆತಿವೆ. ಇಮ್ಮಡಿ ಪುಲಿಕೇಶಿಯ ಮಗ ಒಂದನೆಯ ವಿಕ್ರಮಾದಿತ್ಯನ ತಾಮ್ರಶಾಸನಗಳು ತಮಿಳುನಾಡು, ಆಂಧ್ರ, ಮಹಾರಾಷ್ಟ್ರಗಳಲ್ಲಲ್ಲದೆ ಗುಜರಾತಿನ ಬರೋಡ ಜಿಲ್ಲೆಯಲ್ಲಿಯೂ ದೊರೆತಿವೆ. ಮಧ್ಯಪ್ರದೇಶದ ಸಾತ್ನಾ ಜಿಲ್ಲೆಯ ಜೂರಾ ಎಂಬಲ್ಲಿ ದೊರೆತಿರುವ ಕನ್ನಡ ಶಾಸನ ರಾಷ್ಟ್ರಕೂಟ ಮೂರನೆಯ ಕೃಷ್ಣನ ಪ್ರಶಸ್ತಿಯನ್ನು ಒಳಗೊಂಡಿದೆ. ಹೊರನಾಡಿನ ಕನ್ನಡ ಶಾಸನಗಳಲ್ಲಿ ಆಯಾ ಪ್ರಾದೇಶಿಕ ಭಾಷೆಗಳ ಪ್ರಭಾವದ ಕಡೆ ರಮೇಶ್ ಗಮನ ಸೆಳೆದಿದ್ದಾರೆ. ಈಚೆಗೆ ಸಿಕ್ಕ ಹೊರನಾಡಿನ ಶಾಸನಗಳಲ್ಲಿ ಆಂಧ್ರಪ್ರದೇಶದ ಜಿನವಲ್ಲಭನ ಶಾಸನ ಬಹಳ ಗಮನಾರ್ಹವಾದುದು. ಜಿನವಲ್ಲಭ ಮತ್ತು ಪಂಪರ ತಾಯಿ ಅಬ್ಬಣಬ್ಬೆ ಎಂಬುದನ್ನು ತೋರಿಸಿ ಕೊಟ್ಟವರಲ್ಲಿ ಜಿ.ಎಸ್. ಗಾಯಿ ಮೊದಲಿಗರೇನೂ

ಅಲ್ಲ. ಅವರಿಗಿಂತ ಮೊದಲೇ ಆ ವಿಷಯದ ಬಗ್ಗೆ ಮತ್ತು ಇಡೀ ಶಾಸನದ ಬಗ್ಗೆ ಚರ್ಚೆ ನಡೆದು ತೀರ್ಮಾನವೂ ಆಗಿತ್ತು ಎಂಬುದನ್ನು ರಮೇಶ್ ಸೂಚಿಸಿದ್ದರೆ ಉಚಿತವಾಗುತ್ತಿತ್ತು.

ಹೀಗೆ ತಮ್ಮ ಉಪನ್ಯಾಸಗಳಲ್ಲಿ ರಮೇಶ್ ಕರ್ನಾಟಕದ ಒಳಗಿನ ಮತ್ತು ಹೊರಗಿನ ಶಾಸನಗಳನ್ನು ಸಮೀಕ್ಷೆ ಮಾಡಿ ಅವುಗಳ ಮಹತ್ವವನ್ನು ಎತ್ತಿ ತೋರಿಸುತ್ತಾ, ಅವುಗಳ ಅಧ್ಯಯನದಲ್ಲಿ ಎದುರಾಗುವ ಸಣ್ಣ ಸಣ್ಣ ಸಮಸ್ಯೆಗಳನ್ನು ಬಿಡಿಸಲು ಪ್ರಯತ್ನಿಸಿದ್ದಾರೆ. ಇದರ ಫಲವಾಗಿ ಅನೇಕ ಹೊಸ ಸಂಗತಿಗಳ ಬಗ್ಗೆ ಪ್ರಪ್ರಥಮವಾಗಿ ಚರ್ಚಿಸಿರುವರಲ್ಲದೆ ಆ ನೆಪದಲ್ಲಿ ಅನೇಕ ಅಪ್ರಕಟಿತ ಶಾಸನಗಳನ್ನೂ ಪ್ರಸ್ತಾಪಿಸಿದ್ದಾರೆ. ಈ ಚಿಕ್ಕ ಪುಸ್ತಕ ಶಾಸನಗಳ ಶಾಸ್ತ್ರೀಯ ಅಧ್ಯಯನ ಮಾಡುವವರಿಗೆ ಒಂದು ದಾರಿದೀಪವಾಗಬಲ್ಲುದು. ಖಚಿತ ವಿಷಯ ಪರಿಜ್ಞಾನ, ಸಂದೇಹಕ್ಕೆಡೆಯಿಲ್ಲದ ನಿರೂಪಣೆ, ಸೊಗಸಾದ ಭಾಷೆ, ಅಲ್ಲಲ್ಲಿ ತಿಳಿಹಾಸ್ಯ ಇವು ಇದನ್ನು ಒಂದು ಸಂಗ್ರಹಯೋಗ್ಯ ಪುಸ್ತಕವನ್ನಾಗಿ ಮಾಡಿವೆ.

**ಕನ್ನಡ ವಿಶ್ವಕೋಶ, ಸಂಪುಟ 3 :** ಕನ್ನಡದಲ್ಲಿ ವಿಶ್ವಕೋಶವನ್ನು ತರುವ ಮಹಾಪ್ರಯತ್ನದಲ್ಲಿ ಮೂರನೆಯ ಸಂಪುಟ ಪ್ರಕಟವಾಗಿದೆ. ಇದರಲ್ಲಿ "ಎರಟೋ"ದಿಂದ "ಕರೀಲಿಯ"ದವರೆಗೆ ಆಕಾರಾದಿಯಾಗಿ ಲೇಖನಗಳು ಬಂದಿದೆ.

ಇಲ್ಲಿಯ ಲೇಖನಗಳನ್ನು ಆಯಾ ಕ್ಷೇತ್ರದಲ್ಲಿ ಪರಿಣತರಾದವರ ಕೈಯಲ್ಲಿ ಬರೆಯಿಸಿದ್ದಾರೆ. ಆದ್ದರಿಂದ ಸಹಜವಾಗಿಯೇ ಆಯಾ ಕ್ಷೇತ್ರದ ತಜ್ಞವಿದ್ವಾಂಸರು ಅವುಗಳನ್ನು ವಿಮರ್ಶಿಸಬೇಕಾಗುತ್ತದೆ. ಇತಿಹಾಸ, ಭೂಗೋಳ, ಸಾಹಿತ್ಯ, ಸಮಾಜಶಾಸ್ತ್ರ, ಮನಶ್ಶಾಸ್ತ್ರ, ಭಾಷಾವಿಜ್ಞಾನ, ಮತಧರ್ಮ, ವಿಜ್ಞಾನದ ಬೇರೆ ಬೇರೆ ಶಾಖೆಗಳು - ಇತ್ಯಾದಿ ನೂರಾರು ವಿಷಯಕ ಲೇಖನಗಳಿವೆ. ಇದರಿಂದ ವಿಶ್ವಕೋಶದಂತಹ ಗ್ರಂಥವನ್ನು ಒಬ್ಬ ವ್ಯಕ್ತಿ ವಿಮರ್ಶಿಸಲು ಅಸಾಧ್ಯ. ಅಲ್ಲದೆ ವಿಜ್ಞಾನಕ್ಕೆ ಸಂಬಂಧಿಸಿದ ಲೇಖನಗಳೇ ಹೆಚ್ಚಾಗಿರುವ ಇಲ್ಲಿ - ಇದು ಸಹಜ ಮತ್ತು ಅನಿವಾರ್ಯ - ಸಾಹಿತ್ಯ ಸಂಸ್ಕೃತಿಗಳ ವಿದ್ಯಾರ್ಥಿಯಾದ ನನ್ನ ಇತಿಮಿತಿಗಳು ಸ್ಪಷ್ಟವಾಗಿ ಎದ್ದು ಕಾಣುತ್ತದೆ.

ಆದರೆ, ಇಲ್ಲಿಯ ಲೇಖನಗಳು ತಾಂತ್ರಿಕವಾಗಿರಬೇಕೆಂದಲ್ಲ. ವಿಶ್ವಕೋಶವು ಸಂಶೋಧನ ಲೇಖನಗಳಿಗೆ ಸ್ಥಳ ಅಲ್ಲವೇ ಅಲ್ಲ. ಈಗಾಗಲೇ ಪ್ರಕಟವಾಗಿರುವ ಜ್ಞಾನವನ್ನು ಸಾರವತ್ತಾಗಿ ತಿಳಿಯಾಗಿ ಸ್ಪಷ್ಟವಾಗಿ ನಿರೂಪಿಸುವುದು ಅದರ ಉದ್ದೇಶ. ಲೇಖನದಲ್ಲಿ ಸಾಧ್ಯವಾದಷ್ಟು ವಿವರಗಳಿರಬೇಕು. ಸಾಮಾನ್ಯ ಬಳಕೆಯಲ್ಲಿಲ್ಲದ ಪಾರಿಭಾಷಿಕ ಪದವೊಂದನ್ನು ಬಳಸಿದಾಗ ಅದನ್ನು ವಿವರಿಸಬೇಕು. ಇಲ್ಲಿ ಗಮನಿಸಬೇಕಾದ ಸಂಗತಿಯೆಂದರೆ ವಿಶ್ವಕೋಶದ ಎಲ್ಲ ಲೇಖನಗಳನ್ನೂ ಎಲ್ಲರೂ ಓದುವುದಿಲ್ಲ. ಯಾವುದೋ ಸಂಗತಿಯ ಬಗ್ಗೆ ತಿಳಿಯಲಪೇಕ್ಷಿಸುವವರಿಗೆ ತಕ್ಕಮಟ್ಟಿನ ವಿವರಗಳನ್ನು ಕೊಟ್ಟು, ಹೆಚ್ಚಿನ ಅಧ್ಯಯನಕ್ಕೆ ಸೂಚನೆಗಳಿರಬೇಕು. ಭಾಷೆ ಮಕ್ಕಳ ಪುಸ್ತಕದ ಭಾಷೆಯಂತೆ ಪ್ರಾಥಮಿಕವಾಗಿರಲೂಬಾರದು, ಸ್ವತಂತ್ರ ಲೇಖನಗಳಷ್ಟು ಪ್ರೌಢವೂ ಆಗಿರಬಾರದು. ವಿಶ್ವಕೋಶ ಯಾವುದೇ ನಿರ್ದಿಷ್ಟ

ವಯಸ್ಸಿನ, ಶಿಕ್ಷಣದ ವ್ಯಕ್ತಿಗಳನ್ನೂ ಗಮನದಲ್ಲಿಟ್ಟುಕೊಳ್ಳುವುದಿಲ್ಲವಾದ್ದರಿಂದ, ಭಾಷೆ ಮತ್ತು ನಿರೂಪಣಾ ವಿಧಾನಗಳು ಸುವರ್ಣಮಾಧ್ಯಮದಲ್ಲಿರುವುದು ಯಾವಾಗಲೂ ಅಪೇಕ್ಷಣೀಯವಾಗಿರುತ್ತದೆ.

ಕನ್ನಡ ವಿಶ್ವಕೋಶದಲ್ಲಿ ಯಾವುದೇ ವಿಷಯ ಬಂದರೂ ಸಾಮಾನ್ಯವಾಗಿ ಮೊದಲ ವಾಕ್ಯ ಅಥವಾ ವಾಕ್ಯಗಳು ಆ ವಿಷಯವನ್ನು ಸ್ಪಷ್ಟಪಡಿಸುತ್ತವೆ, ಬಳಿಕ ಅದಕ್ಕೆ ಸಂಬಂಧಿಸಿದ ವಿವರಗಳು ಬರುತ್ತವೆ. ಉದಾಹರಣೆಗೆ - "**ಕಡಲು ದರೋಡೆ** : ಸಾಮಾನ್ಯವಾಗಿ ಯಾವ ದೇಶದ ಹದ್ದಿಗೂ ಒಳಪಡದ ಸಮುದ್ರ ಪ್ರದೇಶದಲ್ಲಿ ಅನಧಿಕೃತವಾಗಿ ಹಡಗುಗಳ ಮೇಲೆ ನಡೆಸಿದ ದರೋಡೆ, ಹಿಂಸಾಕೃತ್ಯ (ಪೈರೆಸಿ)". ಬಳಿಕ ಕಡಲು ದರೋಡೆಯ ಇತಿಹಾಸ, ಪ್ರಭೇದಗಳ (ಈಗಿನ ಸ್ಕೈಜಾಕಿಂಗ್ ಕೂಡ ಒಂದು ರೀತಿಯ ಕಡಲು ದರೋಡೆಯೇ) ಸಂಗತಿಗಳು ಬಂದಿವೆ ಭಿನ್ನಾಭಿಪ್ರಾಯಗಳಿದ್ದ ಕಡೆ ಅಲ್ಲಿ ಹೆಚ್ಚು ಚರ್ಚೆಗೆ ಹೋಗದೆ ಅದನ್ನು ಸೂಚಿಸಿ ಬಹುಜನಸಮ್ಮತ ಅಭಿಪ್ರಾಯವನ್ನಷ್ಟನ್ನೇ ನಿರೂಪಿಸುವುದು ವಿಶ್ವಕೋಶದ ಲೇಖನಗಳ ಸಾಮಾನ್ಯ ಲಕ್ಷಣ. ತೀರ ವೈಯಕ್ತಿಕವಾದ ಭಾವ, ಅಭಿಪ್ರಾಯಗಳಿಗೆ ಅಲ್ಲಿ ಸಾಮಾನ್ಯವಾಗಿ ಜಾಗವಿಲ್ಲ.

ಮೇಲಿನ ಸೂಚನೆಗಳನ್ನನುಸರಿಸಿ ಕೆಲವು ಸಂಗತಿಗಳನ್ನು ಪ್ರಸ್ತಾಪಿಸಬಯಸುತ್ತೇನೆ (ಈ ಪರಿಶೀಲನೆಯಲ್ಲಿ ವೈಜ್ಞಾನಿಕ ಲೇಖನಗಳನ್ನು ಬಿಟ್ಟಿದ್ದೇನೆ).

ಪ್ರಸ್ತುತ ಸಂಪುಟದಲ್ಲಿ ಒಂದನೆಯ ಮತ್ತು ಎರಡನೆಯ ಮಹಾಯುದ್ಧಗಳಿಗೆ ಸಂಬಂಧಿಸಿದ ಲೇಖನಗಳು - ಅದರಲ್ಲೂ ಎರಡನೆಯದು - ವಿಸ್ತಾರವಾಗಿದ್ದು ವಿಪುಲ ಸಾಮಗ್ರಿಯಿಂದ ತುಂಬಿರುವುದು ಮಾತ್ರವಲ್ಲದೆ ಸ್ವಾರಸ್ಯ ನಿರೂಪಣೆಯಿಂದಲೂ ಕೂಡಿವೆ. ಅಲ್ಲಲ್ಲಿ ಬಂದಿರುವ ಚಿತ್ರಗಳು ಯುದ್ಧದ ಚಿತ್ರವನ್ನು ಕಣ್ಣಿಗೆ ಕಟ್ಟುತ್ತವೆ. ಲೇಖನದ ಕೊನೆಯಲ್ಲಿ ಎರಡನೆಯ ಮಹಾಯುದ್ಧದ ಮುಖ್ಯ ಘಟನೆಗಳನ್ನು ಕಾಲಾನುಕ್ರಮವಾಗಿ ಕೊಟ್ಟಿದೆ. ಎಲಿಫೆಂಟ, ಎಲ್ಲೋರದ ಲೇಖನಗಳು ಸಚಿತ್ರವಾಗಿದ್ದು ಸೊಗಸಾಗಿವೆ. ಒಬ್ಬ ಕವಿಯ ಪರಿಚಯವನ್ನು ವಿಶ್ವಕೋಶದಲ್ಲಿ ಹೇಗೆ ಮಾಡಿಕೊಡಬಹುದೆಂಬುದಕ್ಕೆ ಟಿ.ಎಸ್. ಎಲಿಯಟ್ಟನ ಬಗ್ಗೆ ಬಂದಿರುವ ಬರಹ ಮಾದರಿಯಾಗಿದೆ. ಅವನ ಜೀವನ ಚರಿತ್ರೆ, ಕೃತಿ ಪರಿಚಯ, ಎಷ್ಟು ಬೇಕೋ ಅಷ್ಟು ವಿಮರ್ಶೆ, ಒಟ್ಟಿನಲ್ಲಿ ಆಧುನಿಕ ಇಂಗ್ಲೀಷ್ ಸಾಹಿತ್ಯದಲ್ಲಿ ಅವನ ಸ್ಥಾನ - ಇವು ಚೊಕ್ಕವಾಗಿ ಬಂದಿವೆ. ಎಲ್ಲಮ್ಮ ದೇವತೆಯ ಬಗ್ಗೆ ಬಂದಿರುವ ಬರಹವೂ ಕೂಡ ಅವಳ ಇತಿಹಾಸ, ಅವಳ ಬಗ್ಗೆ ದಂತಕಥೆ, ಭಕ್ತರ ಆಚರಣೆಗಳನ್ನು ಹೊಂದಿದ್ದು ಓದಿಸಿಕೊಂಡು ಹೋಗುತ್ತದೆ. ಎಲ್ಲಿಸ್ ಫ್ರಾನ್ಸಿಸ್ ವೈಟನನ್ನು ಕುರಿತ ಬರಹ ಚೆನ್ನಾಗಿದ್ದರೂ, ದ್ರಾವಿಡ ಭಾಷಾ ವಿಜ್ಞಾನದ ಇತಿಹಾಸದಲ್ಲಿ ಅವನ ಸ್ಥಾನವೇನೆಂಬುದನ್ನು ಇನ್ನೂ ವಿಶದ ಪಡಿಸಬಹುದಿತ್ತು. ಐರ್ಲೆಂಡ್ ಈಚೆಗೆ ನಡೆಯುತ್ತಿರುವ ಮತೀಯ ಗಲಭೆಗಳಿಂದ ವಿಶ್ವದ ಗಮನವನ್ನು ಸೆಳೆದಿದೆ. 'ಐರ್ಲೆಂಡ್' ಕುರಿತ ಲೇಖನದಲ್ಲಿ ಉತ್ತರ ಐರ್ಲೆಂಡ್ ಇನ್ನೂ ಏಕೆ ಪ್ರತ್ಯೇಕವಾಗಿ ಉಳಿದಿದೆ, ಅದಕ್ಕೂ ಇಂಗ್ಲೆಂಡಿಗೂ ರಾಜಕೀಯವಾಗಿ ಸಂಬಂಧ

ಎಂತಹುದು ಎಂಬುದು ಸ್ಪಷ್ಟವಾಗುವುದಿಲ್ಲ. 'ಒಗಟು' ಬಗ್ಗೆ ನಿಜವಾಗಿ ಮೂರು ಲೇಖನಗಳ ಅಗತ್ಯವಿದೆಯೇ ಎಂದು ಅನ್ನಿಸುತ್ತದೆ. ಇಷ್ಟಾದರೂ ಯಾವುದರಲ್ಲೂ ಅವುಗಳ ಕ್ರಮಬದ್ಧ ವಿಶ್ಲೇಷಣೆ ಇಲ್ಲ. ಓಣಂ, ಕರಗ ಹಬ್ಬಗಳನ್ನು ಕುರಿತ ಬರಹಗಳು ರಸವತ್ತಾಗಿವೆ. ಒರಿಸ್ಸದ ಇತಿಹಾಸ, ವಾಸ್ತುಶಿಲ್ಪ, ಭೂಗೋಳ, ಈಗಿನ ಪರಿಸ್ಥಿತಿ ಇತ್ಯಾದಿಗಳ ಬಗ್ಗೆ ಒಂಬತ್ತು ಪುಟ ಇರುವುದನ್ನು ನೋಡಿದರೆ ಒರಿಯಾ ಭಾಷಾ ಸಾಹಿತ್ಯಕ್ಕೆ ಎಂಟು ಪುಟ ಜಾಸ್ತಿ ಎಂದು ಅನ್ನಿಸುತ್ತದೆ. 'ಕಂಕ' (=ಯುಧಿಷ್ಠಿರನ ಹೆಸರು) ಎಂಬ ಪ್ರತ್ಯೇಕ ಲೇಖನದ ಅಗತ್ಯ ಕಾಣಿಸುವುದಿಲ್ಲ. ಉತ್ತರ ಪ್ರದೇಶದ ಜೈನಕ್ಷೇತ್ರ ಕಂಪಿಲ ನಗರದ ಬಗ್ಗೆ ಲೇಖನವಿಲ್ಲದಿದ್ದರೂ ನಡೆಯುತ್ತಿತ್ತು. ಆದರೆ ಕರ್ನಾಟಕದ ಕಂಪಿಲಿ, ಕಂಪಿಲರಾಯನ ಬಗ್ಗೆ ಲೇಖನವಿಲ್ಲದಿರುವುದು ಆಶ್ಚರ್ಯವಾಗುತ್ತದೆ. 'ಏಕೋತ್ತರ ಶತಸ್ಥಲ'ದ ಬಗ್ಗೆ ತಿಳಿದುಕೊಳ್ಳಬಯಸುವವರು ಆ ಹೆಸರಿನ ಲೇಖನವನ್ನು ಓದದಿರುವುದು ಒಳ್ಳೆಯದು ; ಹಾಗೆಯೇ 'ಕದಳಿ'ಯ ಬಗ್ಗೆ.

ಕನ್ನಡಕ್ಕೆ ಸಂಬಂಧಿಸಿದಂತೆ ಅನೇಕ ಲೇಖನಗಳು ಇಲ್ಲಿ ಬಂದಿವೆ. ಈ ವಿಶ್ವಕೋಶವನ್ನು ಪ್ರಕಟಿಸುತ್ತಿರುವ ಕನ್ನಡ ಅಧ್ಯಯನ ಸಂಸ್ಥೆಯನ್ನು ಕುರಿತಾದ ಬರಹ ಭಾವುಕತನದಿಂದ ಮುಕ್ತವಾಗಿ ಸಂಗತಿನಿಷ್ಠ (factual)ವಾಗಿದ್ದರೆ ಚೆನ್ನಾಗಿರುತ್ತಿತ್ತು. 'ಕನ್ನಡ ಜಾನಪದ' ಲೇಖನದಲ್ಲಿ ಲೇಖಕರು ಸಂಗತಿಗಳನ್ನು ಕೊಡುವಲ್ಲಿ ತೋರುವ ಪ್ರಬುದ್ಧತೆಯನ್ನು ವಿಮರ್ಶೆಯಲ್ಲಿ ತೋರುವುದಿಲ್ಲ. 'ಕನ್ನಡದಲ್ಲಿ ಗದ್ಯ ಸಾಹಿತ್ಯ' ಕೆಟ್ಟ ಮಾದರಿಗೆ ಒಂದು ನಿದರ್ಶನ. "ಸು. 11ನೇ ಶತಮಾನದಿಂದ 18ನೆಯ ಶತಮಾನದ ಮಧ್ಯದಲ್ಲಿ ಪದ್ಯ ಶಾಸನಗಳೇ ಹೇರಳವಾಗಿ ದೊರೆಯುತ್ತವೆ. ವೀರಗಲ್ಲು, ದತ್ತಿಶಾಸನಗಳು ವಿಶೇಷವಾಗಿ ಗದ್ಯದಲ್ಲಿಯೇ ದೊರೆಯುತ್ತವೆ" ಎಂಬ ಹೇಳಿಕೆಯಲ್ಲಿನ ವಿಸಂಗತಿ, ಪರಸ್ಪರ ವಿರೋಧಗಳು ಎದ್ದು ಕಾಣುತ್ತವೆ. ಈ ಲೇಖನದಲ್ಲಿ ವಿಶ್ವಕೋಶದ ಗದ್ಯವನ್ನೂ ಹೊಗಳಿರುವುದು ಸೋಜಿಗದ ಸಂಗತಿ. ಕನ್ನಡದಲ್ಲಿ ಪ್ರಬಂಧ ಸಾಹಿತ್ಯ ಬರಹದಲ್ಲಿ "ಈ ಕ್ಷೇತ್ರಕ್ಕೆ ಅಮರ ಕೊಡುಗೆಯೆಂದರೆ ಹಾ. ಮಾ. ನಾಯಕರ 'ನಮ್ಮ ಮನೆಯ ದೀಪ" ಎಂಬಂತಹ ಅಪ್ರಬುದ್ಧ ಹೇಳಿಕೆಗಳಿವೆ. ಕನ್ನಡದಲ್ಲಿ ವಚನ ಸಾಹಿತ್ಯದ ಬಗ್ಗೆ ಬರೆಯುತ್ತ ವಚನಗಳನ್ನು ಬೆಂಗಳೂರಿನ ಬಸವ ಸಮಿತಿಯವರೂ ಪರಿಷ್ಕರಿಸಿ ಪ್ರಕಟಿಸುತ್ತಿದ್ದಾರೆಂದು ಹೇಳಿಬಿಟ್ಟಿದ್ದಾರೆ. ವಿಮರ್ಶೆಯ ಕ್ಷೇತ್ರದಲ್ಲಿ ದೇ. ಜ. ಗೌ. ಅವರದು ಮುಖ್ಯ ಹೆಸರು ಎಂಬುದು ಇನ್ನೊಂದು ಹೇಳಿಕೆ. ಇಂತಹ ಕಡೆಗಳಲ್ಲೆಲ್ಲ ವಿಮರ್ಶೆ ಎಷ್ಟು ಹದಗೆಡಬಹುದೆಂಬುದಕ್ಕೆ ಸಂಯಮದ ಅಭಾವಕ್ಕೆ ನಿದರ್ಶನಗಳನ್ನು ನೋಡಬಹುದು.

ಬಹುಶಃ ಈ ರೀತಿಯ ಸಂಗತಿ ನಿಷ್ಠವಲ್ಲದ ಮಾತುಗಳೇ ವಿಶ್ವಕೋಶದ ಚೌಕಟ್ಟಿಗೆ ಹೊಂದಿಕೆಯಾಗುವುದಿಲ್ಲವೆಂದು ತೋರುತ್ತದೆ. 'ಕನ್ನಡದಲ್ಲಿ ನಾಟಕ ಸಾಹಿತ್ಯ', 'ಕನ್ನಡ ಪತ್ರಿಕೋದ್ಯಮ' 'ಕನ್ನಡ ಛಂದಸ್ಸು' ಮೊದಲಾದ ತೂಕದ ಬರಹಗಳೂ ಇಲ್ಲಿವೆ.

ವಿಶ್ವಕೋಶದ ರೇಖಾಚಿತ್ರಗಳು, ಭಾವ ಮತ್ತು ವರ್ಣಚಿತ್ರಗಳು ಸುಂದರವಾಗಿವೆ. ಇಡೀ ಪುಸ್ತಕವನ್ನು ಹೊರತಂದಿರುವ ರೀತಿಯಿಂದಾಗಿ ಈ ವಿಶ್ವಕೋಶ ಕನ್ನಡ ಪ್ರಕಟಣ ಪ್ರಪಂಚದಲ್ಲಿ ಒಂದು ಮೈಲಿಗಲ್ಲಾಗಿದೆ.

ವಿಶ್ವಕೋಶ ಅನೇಕರ ಬರಹಗಳ ಸಂಗ್ರಹ. ಇದರಲ್ಲಿ ತೂಕದ್ದು, ಜಳ್ಳು ಎರಡೂ ಇರಲು ಸಾಧ್ಯ. ಜಳ್ಳನ್ನು ಕಳೆಯಲವಕಾಶವಿದ್ದರೂ, ಕೆಲಸ ಬೇಗ ಆಗಲೆಂಬ ಕಾರಣದಿಂದಲೋ ಸರಿಯಾದವರು ಪರಿಶೀಲಿಸದಿದ್ದುದರಿಂದಲೋ ಉಳಿದುಬಿಡಬಹುದು. ಆದರೆ ಇಂತಹ ಒಂದು ಬೃಹತ್ ಕಾರ್ಯಕ್ಕೆ ಬೇಕಾಗುವ ಕಾರ್ಯಕೌಶಲ, ಯೋಜನೆ, ತಾಳ್ಮೆ, ಶ್ರಮಗಳು ಕಡಮೆಯಲ್ಲ. "ಜಗತ್ತಿನ ಆಧುನಿಕ ವಿಶ್ವಕೋಶಗಳ ಸಾಲಿನಲ್ಲಿ ನಿಲ್ಲಬೇಕೆಂಬ ಮಹದಾಶಯ" - ಇದು ಸಂಪಾದಕರ ಆದರ್ಶ. ಇದರಲ್ಲಿ ಅರೆಕೊರೆಗಳಿವೆಯೆಂಬ ಅರಿವೂ ಸಂಪಾದಕರಿಗೆ ಇದೆ. ಅವುಗಳನ್ನು ಅವರು ಮುಂದೆ ತಿದ್ದಿಕೊಳ್ಳುತ್ತಾರೆ. ವಿಶ್ವಕೋಶವನ್ನು ಕನ್ನಡಿಗರು ಕಾಣುವಂತೆ ಮಾಡಿದ್ದಕ್ಕಾಗಿ ಮೈಸೂರು ವಿಶ್ವವಿದ್ಯಾನಿಲಯವನ್ನು ಹೃತ್ಪೂರ್ವಕವಾಗಿ ಅಭಿನಂದಿಸಬೇಕಾಗಿದೆ.

# ಸಂಶೋಧನ ಸಮೀಕ್ಷೆ : 1972

ಈ ವಿಭಾಗದಲ್ಲಿ ಪರಿಶೀಲನೆಗೆ ಒಳಗಾಗಿರುವ ಹತ್ತು ಗ್ರಂಥಗಳಲ್ಲಿ ಎರಡು ಗ್ರಂಥಸಂಪಾದನೆಗೆ ಸಂಬಂಧಿಸಿವೆ, ಒಂದು ಅಭಿನಂದನ ಗ್ರಂಥ, ಒಂದು ಕವಿರಾಜ ಮಾರ್ಗಕ್ಕೆ ಸಂಬಂಧಿಸಿದ ಸಂಶೋಧನ ಕೃತಿ. ಉಳಿದ ಆರು ಒಂದಲ್ಲ ಒಂದು ರೀತಿಯಲ್ಲಿ ಭಾಷೆಗೆ, ಭಾಷಾ ವಿಜ್ಞಾನಕ್ಕೆ ಸಂಬಂಧಿಸಿವೆ.

ಎಸ್.ಆರ್. ರಾಮಸ್ವಾಮಿಯವರ **ಮಹಾಭಾರತದ ಬೆಳವಣಿಗೆ** ಸಂಸ್ಕೃತದಲ್ಲಿ ವ್ಯಾಸರಿಂದ ರಚಿತವಾದದ್ದೆಂದು ನಂಬಲಾಗಿರುವ ಮಹಾಭಾರತದ ಪಾಠ ಪರಿಶೋಧನೆಗೆ ಸಂಬಂಧಿಸಿದ ಕೃತಿ. ಮಹಾಭಾರತ ಯಾರಿಂದ ಯಾವಾಗ ರಚಿತವಾಯಿತು, ರಚಿತವಾದಾಗ ಅದರ ಮೂಲಸ್ವರೂಪವೇನಿದ್ದಿತು ಎಂಬುದು ಇನ್ನೂ ವಾದದ ವಿಷಯವಾಗಿಯೇ ಉಳಿದಿದೆ. ಈ ಬಗ್ಗೆ ಭಾರತೀಯ ಮತ್ತು ಪಾಶ್ಚಾತ್ಯ ವಿದ್ವಾಂಸರು ಬೇರೆ ಬೇರೆ ಸಿದ್ಧಾಂತಗಳನ್ನು ಮಂಡಿಸಿದ್ದಾರೆ. ಆದರೆ, ಈಗ ಭಿನ್ನಪಾಠಗಳಲ್ಲಿ ದೊರಕುವ ಮಹಾಭಾರತವು ಏಕಕರ್ತೃಕವಲ್ಲವೆಂಬುದರಲ್ಲಿ, ಕಾಲದಿಂದ ಕಾಲಕ್ಕೆ ಈ ಮಹಾಕಾವ್ಯ ಬೆಳೆದುಕೊಂಡು ಬಂದಿದೆಯೆಂಬ ವಿಷಯದಲ್ಲಿ ಅಷ್ಟು ಭಿನ್ನಾಭಿಪ್ರಾಯವಿಲ್ಲ. ಹೀಗೆ ಬೆಳೆದುಕೊಂಡು ಬರಲು ಆಗಾಗ್ಗೆ ಅದರ ಮೂಲಪಾಠಕ್ಕೆ ಪ್ರಕ್ಷಿಪ್ತವಾಗಿ ಬಂದು ಸೇರಿಕೊಂಡ ಭಾಗಗಳೇ ಕಾರಣ. ಇದರಿಂದಾಗಿ, ಮಹಾಭಾರತದ ಪಾಠದ ನಿಜಸ್ವರೂಪವನ್ನು ಕಂಡುಹಿಡಿಯುವುದು ಕಷ್ಟವಾಗಿದೆ. ಆದರೂ ಪೂನಾದ ಭಾಂಡಾರ್ಕರ್ ಸಂಸ್ಥೆಯವರು ಅದರ ಸಂಪಾದನ ಕಾರ್ಯವನ್ನು ಆರಂಭಿಸಿ ಅತ್ಯಂತ ಶ್ಲಾಘನೀಯ ರೀತಿಯಲ್ಲಿ ಮುಗಿಸಿ ವಿಶ್ವದ ವಿದ್ವಜ್ಜನರ ಗೌರವಕ್ಕೆ ಪಾತ್ರರಾಗಿದ್ದಾರೆ. ಆ ಸಂಪಾದನ ಕಾರ್ಯದ ಪರಿಚಯವನ್ನು ಪ್ರಧಾನ ಉದ್ದೇಶವಾಗಿಟ್ಟುಕೊಂಡು ಒಟ್ಟು ಮಹಾಭಾರತದ ಪಾಠವು ಕಾಲದಿಂದ ಕಾಲಕ್ಕೆ ಬೆಳೆದುಕೊಂಡು ಬಂದ ಪರಿಯನ್ನು ಚಿತ್ರಿಸುತ್ತದೆ ರಾಮಸ್ವಾಮಿಯವರ ಈ ಪುಟ್ಟಪುಸ್ತಕ. ವಿಷಯಕ್ಕೆ ಸಂಬಂಧಿಸಿದ ಅನೇಕ ಗ್ರಂಥಗಳನ್ನೂ ಲೇಖನಗಳನ್ನೂ ಎಚ್ಚರಿಕೆಯಿಂದ ಅಭ್ಯಾಸಮಾಡಿ ವಿಷಯ ಸಂಗ್ರಹಣ ಮಾಡಿದ್ದಾರೆ. ಇಂತಹ ಬರಹಗಳಿಗೆ ಅನುಗುಣವಾದ ಭಾಷೆ, ಶೈಲಿಗಳಲ್ಲಿ ರಚಿತವಾಗಿರುವ ಇದು ಬಹು ಸ್ವಾಗತಾರ್ಹವಾದ ಪುಸ್ತಕವಾಗಿದೆ.

ಪುಸ್ತಕದ ಆರಂಭದಲ್ಲಿ ಮಹಾಭಾರತ ಮತ್ತು ಅದನ್ನು ಶಾಸ್ತ್ರೀಯವಾಗಿ ಅಧ್ಯಯನ ಮಾಡಿರುವ ವಿದ್ವಾಂಸರ ಇತಿಹಾಸವಿದೆ. ಆ ಮಹಾಕಾವ್ಯದಲ್ಲಿ ಪ್ರಕ್ಷಿಪ್ತಗಳಾಗಲು ಕಾರಣಗಳೇನು

ಎಂಬುದರ ವಿವೇಚನೆ ಇದೆ. ಮೂಲಕೃತಿಯ ಸ್ವರೂಪ ಏನಿದ್ದಿರಬಹುದು ಎಂಬುದರ ಬಗ್ಗೆ ಇರುವ ಭಿನ್ನ ಭಿನ್ನ ವಾದಗಳ ಸಮೀಕ್ಷೆ ಇದೆ.

ಈ ಪುಸ್ತಕದ ಬಹು ಮುಖ್ಯ ಭಾಗವೆಂದರೆ ಪೂನಾದ ಭಾಂಡಾರ್ಕರ್ ಸಂಸ್ಥೆಯವರು ಎತ್ತಿಕೊಂಡ ಮಹಾಭಾರತದ ಪರಿಷ್ಕರಣ ವಿಚಾರ. ಈ ಕಾರ್ಯವನ್ನು ಹೇಗೆ ಆರಂಭಿಸಿ ಮುಂದುವರಿದರು ಎಂಬುದರ ಸಂಪೂರ್ಣ ಮಾಹಿತಿ ಇಲ್ಲಿದೆ. ಸಂಪಾದಕರು ಎದುರಿಸಿದ ಸಮಸ್ಯೆಗಳ ಸ್ವರೂಪವೇನೆಂಬುದನ್ನು ಉದಾಹರಣೆಗಳೊಡನೆ ಮಂಡಿಸಲಾಗಿದೆ. ಮಹಾಭಾರತದ ಬಗ್ಗೆ, ಗ್ರಂಥಸಂಪಾದನಾ ಕ್ಷೇತ್ರದ ಬಗ್ಗೆ ಆಸಕ್ತಿಯಿರುವವರೆಲ್ಲ ಅತ್ಯವಶ್ಯಕವಾಗಿ ಓದಬೇಕಾದ ಪುಸ್ತಕ ಇದು.

ಎಂ. ಎಂ. ಕಲಬುರ್ಗಿಯವರ **ಕನ್ನಡ ಗ್ರಂಥಸಂಪಾದನ ಶಾಸ್ತ್ರ** ಡಿ.ಎಲ್. ನರಸಿಂಹಾಚಾರ್ಯರ **'ಕನ್ನಡ ಗ್ರಂಥಸಂಪಾದನೆ'** ಹೊರಬಂದ ಏಳು ವರ್ಷಗಳ ಬಳಿಕ ಪ್ರಕಟವಾಗಿದೆ. ನರಸಿಂಹಾಚಾರ್ಯರ ಪುಸ್ತಕ ಕನ್ನಡ ಗ್ರಂಥಸಂಪಾದನೆಯ ಶಾಸ್ತ್ರಕ್ಕೆ ಒಂದು ಭದ್ರವಾದ ತಾತ್ವಿಕ ಬುನಾದಿಯನ್ನು ಹಾಕಿತು. ಕಲಬುರ್ಗಿಯವರು ತಮ್ಮ ಗ್ರಂಥ 'ಆದಿಪ್ರಯತ್ನ, ಸ್ವತಂತ್ರ ಪ್ರಯೋಗ' ಎಂದು ಕರೆದುಕೊಂಡಿದ್ದರೂ ಅದು ಸಮರ್ಥನೀಯವಾಗಿ ಕಾಣುವುದಿಲ್ಲ.

ಏಕೆಂದರೆ, ಕಲಬುರ್ಗಿಯವರು ನರಸಿಂಹಾಚಾರ್ಯರ ಜಾಡಿನಲ್ಲೇ ನಡೆದಿದ್ದಾರೆ. ಅವರ ಪುಸ್ತಕದ ಅಧ್ಯಾಯಗಳ ಕ್ರಮವನ್ನೇ ಇಲ್ಲಿಯೂ ಬಹುಮಟ್ಟಿಗೆ ಅನುಸರಿಸಿದ್ದಾರೆ. ಕಲಬುರ್ಗಿಯವರ ಗ್ರಂಥದಲ್ಲಿ ಹೊಸ ಸಂಗತಿಗಳಿವೆ, ಹೊಸ ಉದಾಹರಣೆಗಳಿವೆ; ಆದರೆ ಸೈದ್ಧಾಂತಿಕವಾಗಿ ಹೊಸದೇನನ್ನೂ ಕೊಟ್ಟಂತೆ ತೋರುವುದಿಲ್ಲ.

ಆರಂಭದಲ್ಲಿ ಗ್ರಂಥಸಂಪಾದನೆಯ ಇತಿಹಾಸವನ್ನು ಚಿತ್ರಿಸಿದ್ದಾರೆ. ಇದರಲ್ಲಿ 'ಪ್ರಾಚೀನ ಇತಿಹಾಸ' ಮತ್ತು 'ಆಧುನಿಕ ಇತಿಹಾಸ' ಎಂಬ ಎರಡು ಭಾಗಗಳಿವೆ. ಗ್ರಂಥ ಸಂರಕ್ಷಣೆ, ಪಾಠ ಸಂರಕ್ಷಣೆಗಾಗಿ ಹಿಂದಿನವರು ಮಾಡಿದ್ದ ಕೆಲವು ಪ್ರಯತ್ನಗಳನ್ನು ಮೊದಲ ಭಾಗದಲ್ಲಿ ಉಲ್ಲೇಖಿಸಿದ್ದಾರೆ. ಪ್ರಾಚೀನರೂ ಕೂಡ ಭಿನ್ನ ಪಾಠಗಳನ್ನು ಗುರುತಿಸಿದ್ದರು ಮತ್ತು ಅವರಲ್ಲಿಯೂ ಪಾಠನಿರ್ಣಯದ ಪ್ರಯತ್ನಗಳು ನಡೆದಿದ್ದವೆಂಬುದನ್ನು ಪ್ರಮಾಣಬದ್ಧವಾಗಿ ಪ್ರತಿಪಾದಿಸಿದ್ದಾರೆ. ಕನ್ನಡದಲ್ಲಿ ಗ್ರಂಥಸಂಪಾದನೆ ನಡೆದುಬಂದಿರುವ ಇತಿಹಾಸ ನಿರೂಪಣೆ ಸಮರ್ಪಕವಾಗಿ ಬಂದಿದೆ (ಇಲ್ಲಿಯೂ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಸಾಹಿತ್ಯ ಪರಿಷತ್ತಿನ ಹೆಸರುಗಳಿಲ್ಲದಿರುವುದು ಒಂದು ಕೊರತೆಯಾಗಿ ಉಳಿದಿದೆ)

ಆದರೆ, ಮೌಲ್ಯ ನಿರ್ಣಯ ಮಾಡುವಾಗ ಲೇಖಕರು ಸಂಪೂರ್ಣವಾಗಿ ಎಡವಿದ್ದಾರೆ ಎಂದು ಅನ್ನಿಸುತ್ತದೆ. ಇಂದಿಗೂ ಕನ್ನಡ ಗ್ರಂಥ ಸಂಪಾದನೆಯ ಇತಿಹಾಸದಲ್ಲಿ ಬಹು ದೊಡ್ಡ ಹೆಸರುಗಳೆಂದರೆ ತೀ. ನಂ. ಶ್ರೀಕಂಠಯ್ಯನವರು ಮತ್ತು ಡಿ.ಎಲ್. ನರಸಿಂಹಾಚಾರ್ಯರು. ಅವರು ಸಂಪಾದಿಸಿದ ಕೃತಿಗಳ ಸಂಖ್ಯೆ ಕಡಮೆ. ಆದರೆ ಅವರು ಸಂಪಾದಿಸಿರುವ ಯಾವುದೇ ಕೃತಿಯನ್ನು ತೆಗೆದುಕೊಂಡರೂ ಅಲ್ಲಿ ಪಾಠಗಳನ್ನು ಗುರುತಿಸುವುದರಿಂದ ಹಿಡಿದು ಪಾಠ ನಿರ್ಣಯ ಮಾಡುವವರೆಗೆ ತೋರಿರುವ ಎಚ್ಚರ, ಪ್ರೌಢಿಮೆ ಅಸಾಧಾರಣವಾದುವು.

ನಂಬಿಯಣ್ಣನ ರಗಳೆ, ಗದಾಯುದ್ಧ ಸಂಗ್ರಹಗಳಾಗಲಿ ವಡ್ಡಾರಾಧನೆ ಮತ್ತು ಶಬ್ದಮಣಿದರ್ಪಣಗಳಾಗಲಿ ಇಂದಿಗೂ ಗ್ರಂಥಸಂಪಾದನೆ ಮಾಡುವವರಿಗೆ ಮಾರ್ಗದರ್ಶಿಯಾಗಬಲ್ಲ ಕೃತಿಗಳು. ಅವರಿಗಿಂತ ಆರ್.ಸಿ. ಹಿರೇಮಠರು ದೊಡ್ಡ ಸಂಪಾದಕರು ಎಂಬರ್ಥ ಬರುವಂತೆ ನಿರೂಪಿಸುವುದು ಅನುಚಿತವಾಗುತ್ತದೆ. ಕರ್ನಾಟಕ ವಿಶ್ವವಿದ್ಯಾಲಯ ವಚನಗಳ ಸಂಪಾದನ ಕಾರ್ಯವನ್ನಾರಂಭಿಸಿ ಅನೇಕ ಸಂಪುಟಗಳನ್ನು ಹೊರತಂದಿದೆ. ಆರ್.ಸಿ. ಹಿರೇಮಠ ಸಂಪಾದಕತ್ವದ ಹೆಸರಲ್ಲಿ ಹೊರಬಂದಿರುವ ಆ ಕೃತಿಗಳು ಒಂದು ಶ್ಲಾಘನೀಯ ಕಾರ್ಯವನ್ನು ಮಾಡಿವೆ. ಅವುಗಳ ಮೂಲಕ ಸಾವಿರಾರು ಹೊಸ ವಚನಗಳು ಹೊರಬಂದದ್ದಲ್ಲದೆ, ಅವು ಯಾವ ಯಾವ ಕಟ್ಟುಗಳಲ್ಲಿ ದೊರಕುತ್ತವೆ ಎಂಬ ವಿವರಗಳನ್ನು ಪಾಠಾಂತರ ಸಮೇತ ಅಲ್ಲಿ ಕೊಡಲಾಗಿದೆ. ಎಂದರೆ, ಹೆಚ್ಚಿನ ಪರಿಷ್ಕರಣಕ್ಕೆ ಮುಂದಿನ ಸಂಶೋಧನೆಗೆ ವಿಪುಲ ಸಾಮಗ್ರಿ ದೊರಕುತ್ತದೆ. ಆದರೆ ಅಲ್ಲಿ ಪಾಠನಿರ್ಣಯದ ಬಗ್ಗೆ ಆಗಿರುವ ಕೆಲಸ ನಿರಾಸೆಯುಂಟು ಮಾಡುತ್ತದೆ. ಹಾಗೆ ನೋಡಿದರೆ, ಬಸವಣ್ಣನವರ ವಚನಗಳ ವಿಶ್ವವಿದ್ಯಾಲಯದ ಆವೃತ್ತಿಗಿಂತ ಹಿಂದೆ ಬಂದಿದ್ದ ಬಸವನಾಳರ ಆವೃತ್ತಿಯೇ ಎಷ್ಟೋ ಪಾಲು ಹೆಚ್ಚು ವಿಶ್ವಾಸಾರ್ಹವಾಗಿದೆ.

'ಲೇಖನಕಾಂಡ' ವಿಭಾಗದಲ್ಲಿ 'ಕಪ್ಪನಿಡು' ಎಂಬ ಮಾತಿಗೆ 'ಬರೆದ ಓಲೆಗರಿಗೆ ಕಪ್ಪುಬಣ್ಣ ಹಚ್ಚು' ಎಂದು ಹೊಸ ವ್ಯಾಖ್ಯಾನ ಕೊಟ್ಟಿರುವುದು ಸರಿಯಾಗಿದೆ.

'ಸ್ಖಾಲಿತ್ಯಕಾಂಡ'ದಲ್ಲಿ ಕೊಟ್ಟಿರುವ ಅನೇಕ ಉದಾಹರಣೆಗಳು ವಾಸ್ತವವಾಗಿ ಅಕ್ಷರಗಳ ಸಾಮ್ಯಭ್ರಾಂತಿಯಿಂದಾದ ತಪ್ಪುಗಳಲ್ಲ, ಅರ್ಥವಾಗದೆಯೋ ಅಥವಾ ಬೇರೆ ಕಾರಣಗಳಿಗಾಗಿಯೋ ತಿದ್ದಿದ್ದಕ್ಕೆ ನಿದರ್ಶನಗಳಾಗುತ್ತದೆ. 'ತಾಳವಟ್ಟದ ಬಿಲ್ಲಂ ಕೆಂದಳ-ದೊಳಮರೆ ನೀವಿ' (ಪಂಪಭಾರತ. 12. 135.ವ) ಎಂಬಲ್ಲಿ 'ತಾ' ಬದಲು 'ಕಾ' ಎಂಬ ಪಾಠ ದೊರಕುತ್ತದೆ. ಇದನ್ನು ಸ್ಖಾಲಿತ್ಯವೆಂದು ಭಾವಿಸುವುದಕ್ಕಿಂತ 'ಕಾ' ಎಂಬುದೇ ಮೂಲಪಾಠವೆಂದು ಅಂಗೀಕರಿಸುವುದು ಉತ್ತಮ. ಏಕೆಂದರೆ ಕರ್ಣನ ಬಿಲ್ಲು ಕಾಲಪೃಷ್ಠ - ಇದೇ ತದ್ಭವವಾಗಿ ಕಾಳವಟ್ಟ ಎಂದಾಗಿದೆ. ತಾಲವೃಕ್ಷದಿಂದಲೂ ಬಿಲ್ಲನ್ನು ಮಾಡುತ್ತಿದ್ದುದರಿಂದ (ಇಂತಹ ಬಿಲ್ಲನ್ನು 'ಕಾರ್ಮುಕ' ಎಂದು ಅರ್ಥಶಾಸ್ತ್ರ ಕರೆದಿದೆ) ಕಾಳವಟ್ಟ ಎಂಬುದು ಅರ್ಥವಾಗದೆ, ಈಚಿನವರು 'ತಾಳವಟ್ಟ' ಎಂದು ತಿದ್ದಿರಬೇಕು.

ಅದೇ 'ಸ್ಖಾಲಿತ್ಯಕಾಂಡ'ದಲ್ಲಿ 'ಟ' ಮತ್ತು 'ಳ'ಗಳು ತಪ್ಪಾಗಿ ಒಂದರ ಜಾಗದಲ್ಲಿ ಇನ್ನೊಂದು ಬರುವುದಕ್ಕೆ ಕೇವಲ ಧ್ವನಿಸಾದೃಶ್ಯ ಕಾರಣವಲ್ಲ, ಬೇರೆ ಐತಿಹಾಸಿಕ ಕಾರಣವುಂಟು. ಅದನ್ನು ಇಲ್ಲಿ ಗುರುತಿಸಿಲ್ಲ. ಖ, ಘ, ಛ, ಝ, ಠ, ಥ ಗಳನ್ನು ಪ್ರಾಚೀನಕಾಲದಲ್ಲಿ ಸಾಮಾನ್ಯವಾಗಿ ಶುದ್ಧರೂಪದಲ್ಲಿ ಬರೆಯುತ್ತಿದ್ದರು ಎಂದು ಕಲಬುರ್ಗಿಯವರು ಹೇಳಿವರೆ, ಅವುಗಳನ್ನೂ ಢ, ಧ ಗಳಂತೆಯೇ ಅಲ್ಪಪ್ರಾಣಗಳಾಗಿ ಬರೆಯುತ್ತಿದ್ದರೆಂದು ನರಸಿಂಹಾಚಾರ್ಯರು ಹೇಳಿ ಉದಾಹರಣೆಗಳನ್ನು ಕೊಡುತ್ತಾರೆ.

'ತುಯ್ಯಲಿಲ್ಲದ ತೋಟ । ತುಯ್ಯಲಿಲ್ಲದ ಊಟ' ಎಂದು ಆರಂಭವಾಗುವ ಸರ್ವಜ್ಞನ ವಚನವೊಂದಿದೆ. ಇದರ ನಿಜವಾದ ಪಾಠ 'ಗುಯ್ಯಲಿಲ್ಲದ ತೋಟ'ವಿರಬೇಕೆಂದು ಊಹೆಯ ಮೇಲೆ ನಾನು ನಿರ್ಧರಿಸಿದ್ದೆ. ಕಲಬುರ್ಗಿಯವರು ಇದನ್ನು ಒಪ್ಪದೆ 'ಕುಯ್ಯಲಿಲ್ಲದ ತೋಟ....'ವೆಂಬ ಊಹೆಯನ್ನು ಮುಂದಿಟ್ಟಿದ್ದಾರೆ. (ಆದರೆ ಎಲ್. ಬಸವರಾಜು ಅವರ ಈಚಿನ ಸರ್ವಜ್ಞನ ವಚನಗಳ ಆವೃತ್ತಿಯಲ್ಲಿ 'ಗುಯ್ಯಲು' ಎಂಬ ಪಾಠವಿರುವುದನ್ನು ಗುರುತಿಸಬಹುದು). ('ಗುಯ್ಯಲು' ಎಂದರೆ ತೋಟದ ಬಾವಿ, ನೀರಿನ ಸಂಗ್ರಹ ಜಾಗ.) ಇಂತಹ ಕೆಲವನ್ನು ಬಿಟ್ಟರೆ, ಕಲಬುರ್ಗಿಯವರು ಅನೇಕ ಒಳ್ಳೆಯ ಉದಾಹರಣೆಗಳನ್ನೆತ್ತಿಕೊಂಡು, ಪಾಠ ನಿರ್ಣಯದಲ್ಲಿ ಸಂಪಾದಕ ಅನುಸರಿಬೇಕಾದ ಕ್ರಮಗಳನ್ನು ಬಹು ಸಮರ್ಥವಾಗಿ ಪ್ರತಿಪಾದಿಸಿದ್ದಾರೆ.

ಪು. 188ರಲ್ಲಿ ಮೈಲುಗ ಮತ್ತು ವಿನಾಶಕ್ತಿರಾಯರ ಕತೆಗಳು ತಿಳಿಯದಿದ್ದರೆ 'ಪಾಠ ನಿರ್ಣಯ ಅಸಾಧ್ಯವಾಗುತ್ತದೆ' ಎಂದಿದ್ದಾರೆ. ಆದರೆ, ಅವುಗಳನ್ನು ಕುರಿತು ಪಿ.ಬಿ. ದೇಸಾಯಿ, ಎಸ್. ಶಿವಣ್ಣನವರು ಲೇಖನಗಳನ್ನು ಬರೆದು ಸಮಸ್ಯೆಗಳನ್ನು ಬಗೆಹರಿಸಿದ್ದಾರೆ. ಒಂದು ಸಂಪಾದಿತ ಕೃತಿಯಲ್ಲಿ ಒಂದು ರೂಪವನ್ನೇ ಉದ್ದಕ್ಕೂ ಬಳಸಬೇಕು ಎಂಬುದನ್ನು ಸರಿಯಾಗಿ ಹೇಳಿದ್ದಾರೆ ಕಲಬುರ್ಗಿಯವರು (ಪು. 197). ಆದರೆ, ಅವರು ತಮ್ಮ ಕೃತಿಯಲ್ಲಿ "ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ"ದ ಹೆಸರನ್ನು "ಕನ್ನಡ ಶಾಸನಗಳಲ್ಲಿ ಸಾಂಸ್ಕೃತಿಕ ಅಧ್ಯಯನ" ಎಂದು ಮೂರು ಕಡೆ "ಶಾಸನಗಳಲ್ಲಿ ಸಾಂಸ್ಕೃತಿಕ ಅಧ್ಯಯನ" ಎಂದು ಎರಡು ಕಡೆ ಉಲ್ಲೇಖಿಸುವುದು ಅಕ್ಷಮ್ಯವಾಗುತ್ತದೆ. ಬೇರೆ ಕಡೆಗಳಲ್ಲಿ ಬೇರೆ ಬೇರೆ ಲೇಖಕರ ಹೆಸರುಗಳನ್ನು ಹೇಳಬೇಕಾದ ಕಡೆ ತೋರಿರುವ ಅಶ್ರದ್ಧೆಯನ್ನೂ ಮೆಚ್ಚುವುದು ಕಷ್ಟವಾಗುತ್ತದೆ. ಉದಾಹರಣೆಗೆ "ಊರ ಸೀರೆ ಮತ್ತು ಅಸಗ" ಎಂಬ ಲೇಖನವನ್ನು ಹೆಸರಿಸಿ, ಅದರ ಲೇಖಕರು ಮಾಡಿರುವ ಪಾಠ ನಿರ್ಣಯವನ್ನು ಬಳಸಿಕೊಳ್ಳುತ್ತಾರೆ. ಆದರೆ ಲೇಖಕರ ಹೆಸರನ್ನು ಹೇಳುವುದಿಲ್ಲ.

ಇಂತಹ ಶಾಸ್ತ್ರ ಗ್ರಂಥವೊಂದನ್ನು ರಚಿಸಲು ಬೇಕಾದ ಪಾಂಡಿತ್ಯ, ದೃಷ್ಟಿಗಳು ಕಲಬುರ್ಗಿಯವರಲ್ಲಿವೆ. ಇದೊಂದು ಲಕ್ಷಿಸಬೇಕಾದ ಗ್ರಂಥವೆಂಬ ಕಾರಣದಿಂದಲೇ ಇಷ್ಟೊಂದು ವಿಸ್ತಾರವಾಗಿ ಅದರ ವಿಮರ್ಶೆಯನ್ನು ಮಾಡಲಾಗಿದೆ. ತಮ್ಮ ಕೃತಿಯಿಂದ ಗ್ರಂಥ ಸಂಪಾದನ ಶಾಸ್ತ್ರದ ಸಂಪತ್ತನ್ನು ಹೆಚ್ಚಿಸಿರುವ ಕಲಬುರ್ಗಿಯವರು ಅಭಿನಂದನಾರ್ಹರಾಗಿದ್ದಾರೆ.

ಭೀಮರಾವ್ ಚಿಟಗುಪ್ಪಿಯವರ **ಕವಿರಾಜಮಾರ್ಗಪ್ರಶಸ್ತಿ** ಈಚೆಗೆ ಪ್ರಕಟವಾಗಿರುವ ಗಮನಾರ್ಹ ಕೃತಿಗಳಲ್ಲಿ ಒಂದು. ಕವಿರಾಜಮಾರ್ಗವು ಸದ್ಯಕ್ಕೆ ಕನ್ನಡದ ಆದಿಗ್ರಂಥವಾಗಿರುವುದರಿಂದ ಆ ಕೃತಿಯ ಬಗ್ಗೆ ವಿದ್ವಾಂಸರಲ್ಲಿ ಕುತೂಹಲ ಎಂದೆಂದೂ ಬತ್ತುವುದಿಲ್ಲ. ಅದರ ಕರ್ತೃತ್ವ ವಿಚಾರ ಅನೇಕ ದಶಕಗಳಿಂದ ಚರ್ಚೆಯ ವಿಷಯವಾಗಿದ್ದರೂ ಇಂದಿಗೂ ಆ ಚರ್ಚೆ ನಿಲುಗಡೆಗೆ ಬಂದಿಲ್ಲ, ಚರ್ಚೆ ಮುಂದುವರಿದಿದೆ. ಹಾಗೆಯೇ ಮುಂದುವರಿಯುತ್ತಾ ಹೋಗುವ ಸೂಚನೆಗಳಿವೆ. ಜೊತೆಗೆ, ಕವಿರಾಜಮಾರ್ಗಕಾರ ಕೇವಲ

ಅನುವಾದಕನಲ್ಲ, ಒಟ್ಟು ಕಾವ್ಯಮೀಮಾಂಸೆಯ ಕ್ಷೇತ್ರಕ್ಕೆ ಕೆಲವು ಮೌಲಿಕ ಕೊಡುಗೆಗಳನ್ನಿತ್ತಿದ್ದಾನೆ ಎಂಬುದರತ್ತ ವಿದ್ವಾಂಸರ ಗಮನ ಹೊರಳುತ್ತಿರುವುದು ಸ್ವಾಗತಾರ್ಹ ಸಂಗತಿಯಾಗಿದೆ.

'ನೃಪತುಂಗನ ಕಾವ್ಯಲಕ್ಷಣ ನಿರೂಪಣೆಯು ಭಾರತೀಯ ಕಾವ್ಯಮೀಮಾಂಸೆಗೆ ಒಂದು ಮಹತ್ವದ ಕೊಡುಗೆ' ಎಂದು ಹೇಳುವ ಚಿಟಗುಪ್ಪಿಯವರು ಕವಿರಾಜಮಾರ್ಗವನ್ನು ಅದಕ್ಕಿಂತ ಹಿಂದಿನ ಅಲಂಕಾರ ಶಾಸ್ತ್ರಗ್ರಂಥಗಳ ಜೊತೆ ಹೋಲಿಸಿ, ಆ ಕೃತಿಯ ಸ್ಥಾನನಿರ್ದೇಶನವನ್ನು ಮಾಡಲು ಪ್ರಯತ್ನಿಸಿದ್ದಾರೆ. ಚಿಟಗುಪ್ಪಿಯವರ ಪ್ರಕಾರ, "ಅಲಂಕಾರಗಳ ವೈಜ್ಞಾನಿಕ" ವಿಂಗಡಣೆಗೆ ಶ್ರೀಕಾರ ಹಾಕಿದವರಲ್ಲಿ ನೃಪತುಂಗನೇ ಮೊದಲಿಗ (ಪು. 39). ಅಲಂಕಾರ, ರೀತಿ ಎಂಬ ಪ್ರಸ್ಥಾನಗಳನ್ನು ಗುರುತಿಸುವಂತೆ, ಭಾವ ಪ್ರಸ್ಥಾನವನ್ನೂ ಆ ಪ್ರಸ್ಥಾನಕಾರನಾಗಿ ನೃಪತುಂಗ ಮತ್ತು ಅವನ ಗುರು ಜಿನಸೇನಾಚಾರ್ಯರನ್ನೂ ಗುರುತಿಸಬೇಕೆಂಬ ಚಿಟಗುಪ್ಪಿಯವರ ವಾದವು ಅಲಂಕಾರಶಾಸ್ತ್ರ ವಿದ್ಯಾರ್ಥಿಗಳು ಗಮನಿಸಬೇಕಾದ ಅಂಶವಾಗಿದೆ.

ಕನ್ನಡದಲ್ಲಿ ಕವಿರಾಜಮಾರ್ಗದ ವಸ್ತುವಿಗಿಂತ ಅದರ ಕರ್ತೃತ್ವ ಹೆಚ್ಚು ಮಹತ್ವದ ಚರ್ಚೆಯ ವಿಷಯವಾಗಿದೆ. ಆದರೆ ಚಿಟಗುಪ್ಪಿಯವರು ತಮ್ಮ ಗ್ರಂಥಾರಂಭದಲ್ಲಿ ಅದರ ವಸ್ತುವನ್ನು ಚರ್ಚಿಸಿ, ಅದಕ್ಕೆ ಹೆಚ್ಚಿನ ಪ್ರಾಮುಖ್ಯವನ್ನು ಕೊಟ್ಟಿರುವುದು ಮೆಚ್ಚಬೇಕಾದ ಸಂಗತಿ.

ಗ್ರಂಥಕರ್ತೃತ್ವ ವಿಭಾಗದಲ್ಲಿ ತಮಗಿಂತ ಹಿಂದೆ ನಡೆದಿರುವ ಎಲ್ಲ ಚರ್ಚೆಗಳನ್ನು ಸಂಗ್ರಹಿಸಿ ಅವುಗಳ ಸಾಧಕ ಬಾಧಕಗಳನ್ನು ವಿಚಾರ ಮಾಡಿದ್ದಾರೆ. ಕವಿರಾಜಮಾರ್ಗದ ಕರ್ತೃ ನೃಪತುಂಗನೆಂದೂ, ಅದಕ್ಕೆ ಮೂಲ ಶ್ರೀವಿಜಯನ (ಈಗ ದೊರೆಯದ) ಕವಿಮಾರ್ಗವೆಂದೂ ಊಹಿಸಿದ್ದಾರೆ. ಶ್ರೀ ವಿಜಯ ಇನ್ನಾರೂ ಅಲ್ಲ, ನೃಪತುಂಗನ ಗುರು ಜಿನಸೇನಾಚಾರ್ಯರೇ ಎಂದು ಚಿಟಗುಪ್ಪಿಯವರ ವಾದ. ಜಿನಸೇನನಿಗೆ ಶ್ರೀ ವಿಜಯನೆಂಬ ಉಪನಾಮವಿದ್ದಿತೆಂದೂ ಅವರು ಕನ್ನಡದಲ್ಲಿ ಕೃತಿರಚನೆ ಮಾಡಿರುವರೆಂದೂ ಖಚಿತವಾಗಿ ತೋರಿಸುವವರೆಗೆ ಮೇಲಿನ ನಿರ್ಣಯಗಳನ್ನು ಇತರ ಊಹೆಗಳ ಮಾಲಿಕೆಯಲ್ಲಿಯೇ ಸೇರಿಸಿ ಇಡಬೇಕಾಗುತ್ತದೆ. ಅದೇನೇ ಇರಲಿ, ಕವಿರಾಜಮಾರ್ಗದ ಅಧ್ಯಯನಕ್ಕೆ ಈ ಗ್ರಂಥದಿಂದ ಒಂದು ಹೊಸ ತಿರುವು ಪ್ರಾಪ್ತವಾಗಿದೆಯೆಂಬುದರಲ್ಲಿ ಸಂದೇಹವಿಲ್ಲ.

ಭಾಷಾ ವಿಜ್ಞಾನಕ್ಕೆ ಸಂಬಂಧಿಸಿದ ಆರು ಪುಸ್ತಕಗಳಲ್ಲಿ ಗುರುರಾಜ ಭೀ. ಜೋಶಿಯವರ **"ಭಾರತೀಯ ಶಬ್ದವ್ಯುತ್ಪತ್ತಿಯಲ್ಲಿ ಸ್ಫೋಟದ ಸ್ಥಾನ"** ಬಹು ಕುತೂಹಲವನ್ನು ಹುಟ್ಟಿಸುವ ಗ್ರಂಥ; ಓದಿ ಮುಗಿಸಿದ ಮೇಲೆ ಅದಕ್ಕಿಂತ ಹೆಚ್ಚು ನಿರಾಸೆ ಹುಟ್ಟಿಸುವ ಗ್ರಂಥವೂ ಹೌದು.

ಸ್ಫೋಟ ತತ್ವವು ಭಾರತೀಯ ವೈಯಾಕರಣರು ಒಟ್ಟು ಭಾಷಾ ವಿಜ್ಞಾನಕ್ಕೆ ಕೊಟ್ಟಿರುವ ಅಮೂಲ್ಯ ಕೊಡುಗೆ. ಶಬ್ದಕ್ಕೂ ಅರ್ಥಕ್ಕೂ ಇರುವ ಸಂಬಂಧವನ್ನು ಕುರಿತು ಭಾರತೀಯರು ಮಾಡಿದ ಆಲೋಚನೆಯ ಫಲ ಅದು. ಭಾಷಾವಿಜ್ಞಾನದ ಹೊಸ ಆವಿಷ್ಕಾರಗಳ ಬೆಳಕಿನಲ್ಲಿ ಆ ತತ್ವವನ್ನು ಪರಿಶೀಲಿಸಿದರೂ ಅದರ ಬೆಲೆಯೇನೂ ಕುಂದುವುದಿಲ್ಲ. ಅದರ ಬಗ್ಗೆ ಪ್ರತ್ಯೇಕ ಗ್ರಂಥವೊಂದನ್ನು ಬರೆಯಲು ಹೊರಟ ಜೋಶಿಯವರು ಆಧುನಿಕ ಭಾಷಾ ವಿಜ್ಞಾನದ

ಹಿನ್ನೆಲೆಯಲ್ಲಿ ಸ್ಫೋಟತತ್ವವನ್ನು ನಿರೂಪಿಸುವ ಉದ್ದೇಶವನ್ನಿಟ್ಟುಕೊಂಡು ಮುಂದುವರಿದವರೂ ಇತ್ತ ಪ್ರಾಚೀನವಾದ ಸ್ಫೋಟ ತತ್ವವನ್ನು ಅದು ಇರುವಂತೆಯೂ ಪರಿಚಯ ಮಾಡಿಕೊಟ್ಟಂತಾಗಲಿಲ್ಲ, ಲೇಖಕರಿಗೆ ಭಾಷಾವಿಜ್ಞಾನದ ಪರಿಚಯವಿದೆ ಎಂಬ ಭಾವನೆಯೂ ಬರುವುದಿಲ್ಲವಾದ್ದರಿಂದ ಸ್ಫೋಟ ತತ್ವದ ಹೊಸ ವ್ಯಾಖ್ಯಾನವೂ ಲಭಿಸಿದಂತಾಗಲಿಲ್ಲ. ಮನುಷ್ಯನ ಉಚ್ಚಾರಾಂಗಗಳು ಹೇಗೆ ಕೆಲಸಮಾಡುತ್ತವೆ ಎಂಬುದನ್ನು ಅವರು ಹೀಗೆ ವಿವರಿಸುತ್ತಾರೆ - "ಹೃದಯದ ಅಂತರಾಳದಿಂದ ಹೊರಟ ನಾದವನ್ನು ಬಹು ಪ್ರಯಾಸದಿಂದ 'ಧ್ವನಿ ಪೆಟ್ಟಿಗೆ'ಯೊಳಗಿಂದ ಹೊರಡಿಸಿ, ನಯವಾದ ಪರಿಮಿತಗಳ ಸಹಾಯದಿಂದ, ದಪ್ಪ ಸಣ್ಣ ಧ್ವನಿರೂಪದಲ್ಲಿ ಹೊರಡಿಸಿ ಇನ್ನೂ ಅನೇಕ ಶಾರೀರಕ ಸಹಾಯದಿಂದ ನಯವಾದ ಪ್ರಭೇದಗಳನ್ನು ಕಲ್ಪಿಸಿ, ವರ್ಣಗಳ ರೂಪವನ್ನು ತಾಳಬೇಕಾದರೆ ಅನೇಕ ಯುಗಗಳು ಕಳೆದಿರಬೇಕು." ಅವರ ಬರವಣಿಗೆಯ ಒಂದು ಮಾದರಿ ಇದು. ವೇದ ಉಪನಿಷತ್ತು ನಿರುಕ್ತಿಗಳಲ್ಲಿ ಭಾಷೆಯನ್ನು ಕುರಿತಾದ ವಿಚಾರವೇನಿದೆಯೆಂಬುದನ್ನು ಹೇಳುವಾಗ ಅಲ್ಲಿಂದ ಉಕ್ತಿಗಳನ್ನು ತಂದು ಪೇರಿಸುತ್ತಾರೆ. 40ನೇ ಪುಟದಲ್ಲಿ ಈ ಮಾತಿದೆ - "ಭಾಷಾಶಾಸ್ತ್ರದ ಅಂಗವಾಗಿ ಶಬ್ದವ್ಯುತ್ಪಾದನೆಯನ್ನು ಆಮೂಲವಾಗಿ ಅಭ್ಯಾಸ ಮಾಡುತ್ತಾ ಬಂದೆವು"- ಮೊದಲನೆಯದಾಗಿ ಈ ಮಾತಿಗೆ ಏನರ್ಥವೋ ತಿಳಿಯದು. ಎರಡನೆಯದಾಗಿ ಆ ಹಿಂದಿನ ನಲವತ್ತು ಪುಟಗಳಲ್ಲಿ ಅವರು ಏನು ಬರೆದಿದ್ದಾರೆಂಬುದನ್ನು ಓದುಗ ತಿಳಿಯಲಾರದೇ ಹೋಗುವುದರಿಂದ ಆ ಮಾತಿನ ಸತ್ಯಾಸತ್ಯತೆಯನ್ನು ಪರೀಕ್ಷಿಸುವ ಮಾತು ದೂರವೇ ಉಳಿಯಿತು. ಆ ನಲವತ್ತು ಪುಟಗಳು ಸ್ಫೋಟಕ್ಕೆ 'ಹಿನ್ನೆಲೆಯಾಯಿತು' ಎಂದು ನಿರೂಪಿಸುತ್ತಾರೆ. ಮುಂದಿನ 60 ಪುಟಗಳೂ ಹಿಂದಿನಂತೆಯೇ ನಿರಾಸೆಗೊಳಿಸುತ್ತವೆ. ಇದಕ್ಕೆ ಕಾರಣ - ವಿಷಯವನ್ನು ಶಾಸ್ತ್ರೀಯವಾಗಿ ಮಂಡಿಸುವ ರೀತಿ ಲೇಖಕರಿಗೆ ಅಷ್ಟಾಗಿ ಗೊತ್ತಿಲ್ಲದಿರುವುದು.

**ಹವ್ಯಕ ಪದ ಸಂಚಯವು** ಟಿ. ಕೇಶವಭಟ್ಟರ ಪದ್ಯರೂಪವಾದ ಒಂದು ನಿಘಂಟು. ನಮ್ಮ ಹಿಂದಿನವರು ನಿಘಂಟುಗಳಂತಹ ಶುದ್ಧ ವಿಷಯಪ್ರಧಾನ ಕೃತಿಗಳನ್ನೂ ಪದ್ಯರೂಪದಲ್ಲೇ ಬರೆಯುತ್ತಿದ್ದು ಶ್ರೀ ಭಟ್ಟರು ಅದೇ ಮಾರ್ಗವನ್ನು ಅನುಸರಿಸಿದ್ದಾರೆ. ಹಿಂದಿನ ಪರಂಪರೆಯೊಂದರ ಮುಂದುವರಿಕೆಯೆಂಬ ಮಾತೊಂದನ್ನು ಬಿಟ್ಟರೆ, ಇಂತಹ ನಿಘಂಟುಗಳ ಉಪಯುಕ್ತತೆ ಬಹಳ ಸೀಮಿತವಾಗುತ್ತದೆ. ತಮ್ಮ ಕಂದಪದ್ಯಗಳಲ್ಲಿ ಬರುವ ಪದಗಳನ್ನು ಬಿಡಿಸಿ ಅರ್ಥಸಮೇತ ಅಡಿಟಿಪ್ಪಣಿಯಲ್ಲಿ ಕೊಟ್ಟಿದ್ದಾರೆ. ಪುಸ್ತಕದ ಕೊನೆಯಲ್ಲಿ ಅನುಬಂಧವಾಗಿ ಶಬ್ದಗಳ ಅಕಾರಾದಿ ಇದೆ. ನಾವು ಆ ಅನುಬಂಧದಲ್ಲಿ ಶಬ್ದವನ್ನು ನೋಡಿಕೊಂಡು, ಆ ಶಬ್ದದ ಅರ್ಥವನ್ನು ಅಡಿಟಿಪ್ಪಣಿಯಿಂದ ತಿಳಿದುಬಿಟ್ಟರೆ ಅಲ್ಲಿಗೆ ಕೆಲಸ ಮುಗಿಯಿತು. ಪದ್ಯಗಳನ್ನು ಪ್ರಾಯಶಃ ಯಾರೂ ಓದುವುದಿಲ್ಲ.

ಹವ್ಯಕ ಕನ್ನಡವು ಕನ್ನಡದ ವಿಶಿಷ್ಟ ಉಪಭಾಷೆಗಳಲ್ಲಿ ಒಂದು. ಅದರ ಅನೇಕ ವ್ಯಾಕರಣಾಂಶಗಳು ಮತ್ತು ಶಬ್ದರೂಪಗಳು ವಿಶಿಷ್ಟವಾದುವು. ಕನ್ನಡದ ಅನೇಕ ಪ್ರಾಚೀನ ಲುಪ್ತ ಪ್ರಯೋಗಗಳು ಅದರಲ್ಲಿ ಇಂದಿಗೂ ಉಸಿರಾಡುತ್ತಿವೆ. ಈ ಉಪಭಾಷೆಯ ಒಂಬತ್ತು ನೂರಕ್ಕೆ ಮೇಲ್ಪಟ್ಟ ಪದಗಳನ್ನು ಆರಿಸಿಕೊಂಡು ಅವುಗಳ ಅಂತ್ಯಾಕ್ಷರವನ್ನು ಮುಖ್ಯವಾಗಿ

ಲಕ್ಷಿಸಿ, ಕ್ರಮವಾಗಿ ಕಂದಪದ್ಯಗಳಲ್ಲಿ ಹೆಣೆದಿದ್ದಾರೆ. ಗಳಿಗೆ, ಕೈಪೆ, ಮದನಕ್ಕೈ, ರೆಂಕೆ, ತಂಗೆ, ಪಾರಂಗಿ, ನಾಡಾಡಿ, ಅಬ್ಬಿ, ತೂಂಬು, ಕೂಸು (= ಹೆಣ್ಣು ಮಗು), ಹಿಳ್ಳು - ಇತ್ಯಾದಿ ಪದಗಳು ಸಾಹಿತ್ಯ ವಿದ್ಯಾರ್ಥಿಗಳ ಗಮನವನ್ನು ಸೆಳೆಯುತ್ತವೆ.

ಶ್ರೀ ಭಟ್ಟರು ಹೀಗೆ ಪದ್ಯರೂಪವಾಗಿ ಬರೆಯುವುದಕ್ಕಿಂತ ಹವ್ಯಕದ ಎಲ್ಲ ವಿಶಿಷ್ಟ ಪದಗಳನ್ನೂ ಸಂಗ್ರಹಿಸಿ, ಅವುಗಳನ್ನು ಅಕಾರಾದಿಯ ಕೋಶರೂಪದಲ್ಲಿ ಕೊಟ್ಟರೆ ಹೆಚ್ಚು ಉಪಯುಕ್ತವಾಗಬಲ್ಲದು.

ಜೆ.ಎಂ. ಹನಸೋಗೆಯವರ **ಕನ್ನಡ ಶಬ್ದಸಾಗರ** ಇನ್ನೊಂದು ರೀತಿಯ ಶಬ್ದಕೋಶ. ಇದರಲ್ಲಿ ನೂರಿಪ್ಪತ್ತೊಂದು ಕನ್ನಡ ಶಬ್ದಗಳಿಗೆ ಸಮಾನಾರ್ಥಕ ಮತ್ತು ವಿರೋಧಾರ್ಥಕ ಶಬ್ದಗಳನ್ನು ಕೊಟ್ಟಿದೆ. ಇಂತಹ ಪ್ರಯತ್ನ ಕನ್ನಡಕ್ಕಂತೂ ಹೊಸತು ಮತ್ತು ಆ ಕಾರಣಕ್ಕಾಗಿ, ಬಹುಶಃ ಆ ಕಾರಣಕ್ಕಾಗಿ ಮಾತ್ರ, ಅಭಿನಂದನೀಯ (ಭಾರತೀಯ ಜೀವಂತ ಭಾಷೆಗಳಲ್ಲಿ 'ಪ್ರಥಮ' ಎಂಬ ಲೇಖಕರ ಹೇಳಿಕೆಯ ಸತ್ಯಾಸತ್ಯತೆ ಎಂತೋ ತಿಳಿಯದು).

ಇಂತಹ ಈ ಕೋಶವನ್ನು ಸಿದ್ಧಪಡಿಸುವಲ್ಲಿ ಬೇಕಾಗುವ ಪರಿಶ್ರಮ, ಎಚ್ಚರಗಳು ಇಲ್ಲಿ ವಿನಿಯೋಗವಾಗಿಲ್ಲವೆಂದು ಹೇಳಬೇಕಾಗಿದೆ. ಮೊದಲ ದಾಖಲೆಯನ್ನೇ ನೋಡೋಣ. 'ಅಭ್ಯುದಯ' ಎಂಬುದಕ್ಕೆ 'ಕಳಾಗಮ' 'ದಾಗಮ'ಗಳನ್ನೂ ಸಮನಾರ್ಥಕಗಳೆಂದು ಕೊಟ್ಟಿದೆ. 'ಕಳಾಗಮ' 'ದಾಗಮ'ಗಳು 'ಕಳ್' ಮತ್ತು 'ದ್' ಎಂಬ ಆಗಮಗಳನ್ನು ಸೂಚಿಸುತ್ತವೆ. ಕಿಟ್ಟೆಲ್ ಕೋಶದಲ್ಲಿ 'the augment of ಕಳ್' ಎಂಬರ್ಥವಿರುವುದನ್ನು ನೋಡಿ ಆ ಪದಗಳನ್ನು ಇಲ್ಲಿ ಪಟ್ಟಿಮಾಡಿರುವಂತಿದೆ (`augment' ಎಂಬ ಪದಕ್ಕೆ ವೃದ್ಧಿ ಎಂಬರ್ಥವಿರುವುದು ಅವರನ್ನು ತಪ್ಪು ದಾರಿಗೆಳೆದಂತಿದೆ). ನಾಲ್ಕನೆಯ ದಾಖಲೆ 'ಆನೆ': ಅದಕ್ಕೆ 'ಗಂಧದ್ವೀಪ', 'ಗಂಧದ್ವೀಪದ್ವಿರದ' ಎಂಬ ಸಮಾನಾರ್ಥಕಗಳನ್ನು ಕೊಟ್ಟಿದೆ. ವಾಸ್ತವವಾಗಿ 'ಗಂಧದ್ವಿಪ' ಎಂದಿರಬೇಕು. 'ಗ್ರಾಹಿ' ಎಂಬ ಇನ್ನೊಂದು ಸಮಾನಾರ್ಥಕವನ್ನು ಇಲ್ಲಿ ಕೊಟ್ಟಿದೆ. ಕಿಟ್ಟೆಲ್ ತೆಗೆದುನೋಡಿದರೆ, 'ಗ್ರಾಹಿ' ಪದಕ್ಕೆ `the elephant or wood apple' ಎಂಬರ್ಥ ಕೊಟ್ಟಿದೆ. ಇದರ ಅರ್ಥ 'the elephant apple or the wood apple' ಎಂದು. ಆದರೆ ಸಂಗ್ರಹಕಾರರು 'the elephant' ಎಂಬಷ್ಟನ್ನು ಮಾತ್ರ ಗ್ರಹಿಸಿ, 'ಆನೆ'ಗೆ 'ಗ್ರಾಹಿ'ಯನ್ನು ಸಮನಾರ್ಥಕವಾಗಿ ಕೊಟ್ಟಿದ್ದಾರೆ. 'ಆನೆ'ಯ ಇತರ ಸಮಾನಾರ್ಥಕಗಳಲ್ಲಿ 'ದೀವ' 'ದೀಹ'ಗಳೂ ಉಂಟು. ನನಗೆ ಗಾಬರಿಯಾಗಿ ಕಿಟ್ಟೆಲ್ ತೆಗೆದುನೋಡಿದರೆ ಈ ಅರ್ಥವಿದೆ - a bird or elephant, an antelope etc trained as decoy': ಇತರ ಮೃಗಗಳನ್ನು ಆಕರ್ಷಿಸಲು ಉಪಯೋಗಿಸುವ ಹಕ್ಕಿ, ಆನೆ, ಜಿಂಕೆಯಂತಹ ಯಾವುದೇ ಶಿಕ್ಷಿತ ಪ್ರಾಣಿ 'ದೀವ'. 'ದೀವ' ಎಂದರೆ ಆನೆ ಆಗುವುದಿಲ್ಲ. ಕೋಶವನ್ನು ಸಿದ್ಧಪಡಿಸಿದವರು `elephant' ಎಂಬುದನ್ನು ಮಾತ್ರ ಗಮನಿಸಿ 'ಆನೆ = ದೀವ' ಎಂದು ಅರ್ಥಕೊಟ್ಟಿದ್ದಾರೆ. 'ಮನೆ'ಗೆ 'ದೇಹಲಿ' ಸಮಾನಾರ್ಥಕವಲ್ಲ 'ದೇಹಲಿ' ಎಂದರೆ ಮನೆಯ ಹೊಸ್ತಿಲು. ಬಾವುಟಕ್ಕೆ 'ಹಾಪೆ' ಸಮಾನಾರ್ಥಕವಲ್ಲ. (ಹಾಪೆ =

ಬೊಂಬೆ, ಹಡಗಿನ ಪಟ). 'ರಾಮ' ಪದಕ್ಕೆ 'ಹಲಿ, ಹಲಾಯುಧ'ಗಳು ಸಮಾನಾರ್ಥಕಗಳೆಂದಿದೆ. 'ಹಲಿ' 'ಹಲಾಯುಧ'ಗಳು ಬಲರಾಮನನ್ನು ಸೂಚಿಸುತ್ತವೆ. 'ಗುಬ್ಬಿ'ಗೆ ಸಮಾನಾರ್ಥಕವಾಗಿ ಬಂದಿರುವ 'ಬಲಿಭುಕ್' ಪದಕ್ಕೆ ಇರುವ ಅರ್ಥ 'ಕಾಗೆ' ಎಂದು. ಇಂತಹ ಉದಾಹರಣೆಗಳು ಇನ್ನೂ ಸಾಕಷ್ಟಿವೆ.

ಯಾವುದು ಸಮಾನಾರ್ಥಕ ಪದ ಎಂಬುದನ್ನು ನಿರ್ಣಯಿಸಲು ಯಾವುದೇ ವಿವೇಚನೆಯನ್ನೂ ಬಳಸಿಲ್ಲ. 'ಗಂಡ' (husband) ಮಾತಿಗೆ ಮದನ, ಲಲಿತಾಂಗ, ವೀರ, ಹೃದ್ಯಗಳು ಹೇಗೆ ಸಮಾನಾರ್ಥಕಗಳಾಗಬಲ್ಲವು ? ಸಂದರ್ಭ ಬಿದ್ದಾಗ ಆ ಅರ್ಥದಲ್ಲಿ ಕವಿಗಳು ಆ ಪದಗಳನ್ನು ಬಳಸಿರಬಹುದು ಅಷ್ಟೇ. 'ಚೆಲುವು' ಪದಕ್ಕೆ ಯಶಸ್ಸು, ಯೌವನ, ಕಟ್ಟಣಕ (?) ಇತ್ಯಾದಿಗಳು ಹೇಗೆ ಸಮಾನಾರ್ಥಕ? ಕೋಶದಲ್ಲಿ ಕೊಟ್ಟಿರುವ ಅರ್ಥಗಳನ್ನೇ ಕುರುಡಾಗಿ ಅನುಸರಿಸಿದರೆ ಆಗುವ ಅನಾಹುತಗಳು ಇವು. ಯಾವುದಕ್ಕೆ ಯಾವುದು ಹೆಚ್ಚು ಕಡಮೆ ಸಮಾನಾರ್ಥಕ ಎಂಬುದನ್ನು ನಿರ್ಧರಿಸಬೇಕಾದರೆ ಸಾಕಷ್ಟು ಎಚ್ಚರವಹಿಸಬೇಕಾಗುತ್ತದೆ.

'ದಡ್ಡತನ' ಪದಕ್ಕೆ 'ಜಾಣ, ಬುದ್ಧಿವಂತ' ಅಲ್ಲ ವಿರೋಧ ಪದಗಳು; 'ಜಾಣತನ, ಬುದ್ಧಿವಂತಿಕೆ'ಗಳು ವಿರೋಧ ಪದಗಳು. 'ಸೂರ್ಯ' ಪದಕ್ಕೆ 'ಆದಿತ್ಯ' ಸಮಾನಾರ್ಥಕ ಪದ; ಅದರ ಜೊತೆಗೇ 'ಉದಯಾದಿತ್ಯ' ಪದವನ್ನೂ ಪಟ್ಟಿಮಾಡಿದರೆ ಹೇಗೆ ?

ಚಿಹ್ನೆ ಬಳಕೆಯಲ್ಲಿಯೂ ಇನ್ನೂ ಹೆಚ್ಚು ಎಚ್ಚರವಹಿಸಬೇಕಿದ್ದಿತು. ಪದಗಳನ್ನು ಜೋಡಿಸಿ ಕೊಡುವಲ್ಲಿ ಅನೇಕ ಕಡೆ ಸಂದಿಗ್ಧತೆಗಳು ಉಳಿಯುತ್ತವೆ. ಉದಾಹರಣೆಗೆ 'ದೇವಕೀತನಯ, -ಸುತ, -ನಂದನ' ಎಂದು ಪಟ್ಟಿಮಾಡಿದರೆ ದೇವಕೀತನಯ, ದೇವಕೀ ಸುತ, ದೇವಕೀ ನಂದನ ಎಂದು ಓದಿಕೊಳ್ಳಬೇಕೆಂಬುದು ಲೇಖಕರ ಉದ್ದೇಶವೆಂಬುದು ಸ್ಪಷ್ಟ ತಾನೇ ? 'ತೇವ, -ನ, ತೇಮ, -ನ' ಎಂದು ಪಟ್ಟಿಮಾಡಿದರೆ ಅವುಗಳನ್ನು 'ತೇವ, ತೇನ, ತೇಮ, ತೇನ' ಎಂದು ಓದಬೇಕೆಂದು ಮನಸ್ಸಾಗುತ್ತದೆ. ವಾಸ್ತವವಾಗಿ ಅವುಗಳನ್ನು ತೇವ, ತೇವನ, ತೇಮ, ತೇಮನ ಎಂದು ಓದಬೇಕು.

ಇಂತಹ ಕೋಶಗಳ ಉಪಯುಕ್ತತೆ ಬಹಳ ಮಿತವಾದುದು. ಬೇರೆ ಭಾಷೆಯಿಂದ ಅನುವಾದಿಸುವಾಗ, ಲೇಖನಗಳನ್ನು ಬರೆಯುವಾಗ ಯಾವುದಾದರೂ ಪದ ಮರೆತು ಹೋದರೆ ಅಥವಾ ಬೇಕಾದರೆ ಆಗ ಇಂತಹ ಕೋಶಗಳನ್ನು ಉಪಯೋಗಮಾಡಿ ಕೊಳ್ಳಬಹುದು. ಅದೇನೇ ಆಗಲಿ, ಇಂತಹ ಕೋಶಗಳು ಅಗತ್ಯವೆಂಬುದರಲ್ಲಿ ಅನುಮಾನವಿಲ್ಲ. ಇನ್ನೂ ಸಮರ್ಪಕವಾದ, ಸಮಗ್ರವಾದ ಇಂತಹ ಕೋಶವೊಂದು ಕನ್ನಡಕ್ಕೆ ಲಭ್ಯವಾಗಬೇಕಾಗಿದೆ ಎಂದು ಮಾತ್ರ ಹೇಳಬಹುದು.

ಕೃಷ್ಣ ಪರಮೇಶ್ವರ ಭಟ್ಟರ **ಉಪಭಾಷೆ** ಉಪಭಾಷೆಯ ಅಧ್ಯಯನದ ಮಹತ್ವವನ್ನು ಕುರಿತಾಗಿ ಬಂದಿರುವ ಪುಟ್ಟಪುಸ್ತಕ. ಮೊದಲ ಅಧ್ಯಾಯ ಉಪಭಾಷೆಯ ವಿವರಣೆಗೆ ಮೀಸಲಾಗಿದ್ದರೆ, ಎರಡನೆಯ ಅಧ್ಯಾಯ ಅದರ ಪರಿವೀಕ್ಷಣೆಯನ್ನು ಕೈಗೊಳ್ಳುವ ಬಗೆಯನ್ನು

ಚರ್ಚಿಸುತ್ತದೆ. ಎರಡನೆಯ ಅಧ್ಯಾಯ ಅವರ ಅನೇಕ ಸ್ವಾನುಭವಗಳನ್ನೊಳಗೊಂಡು ಸ್ವಾರಸ್ಯವಾಗಿದೆ. ಮೂರನೆಯ ಅಧ್ಯಾಯದಲ್ಲಿ 'ಶೈಲಿ' (Style) ಮತ್ತು 'ನಮನ' (register)ಗಳ ವಿವರಣೆಯನ್ನು ಕೊಡುತ್ತಾರೆ. ಅವುಗಳಿಗಿರುವ ವ್ಯತ್ಯಾಸವನ್ನು ತೋರಿಸಿರುವರಾದರೂ, ಮುಂದೆ ಹವ್ಯಕ ಉಪಭಾಷೆಯ ಬಗ್ಗೆ ಮಾತನಾಡುವಾಗ ಅವೆರಡನ್ನೂ ಒಂದೇ ಎಂದು ಭಾವಿಸುವುದಾಗಿ ಹೇಳಿಕೊಂಡಿದ್ದಾರೆ. ಆರಂಭದಲ್ಲಿ ಅವುಗಳಿಗಿರುವ ವ್ಯತ್ಯಾಸವನ್ನು ವಿಸ್ತರಿಸಿದ್ದೇಕೆ ಎಂಬುದು ಮಾತ್ರ ಅರ್ಥವಾಗುವುದಿಲ್ಲ. ಉಪಭಾಷೆಗಳ ಪರಿವೀಕ್ಷಣೆಯ ಉದ್ದೇಶಗಳಲ್ಲಿ ಒಂದು ಉಪಭಾಷಾ ಭೂಪಟಗಳನ್ನು ತಯಾರಿಸುವುದು. ನಾಲ್ಕನೆಯ ಅಧ್ಯಾಯದಲ್ಲಿ ಭೂಪಟಗಳನ್ನು ತಯಾರಿಸುವುದರ ಬಗ್ಗ ಅನೇಕ ಉದಾಹರಣೆಗಳೊಡನೆ - ಕೆಲವು ಅವರವೇ ಆದ ಉದಾಹರಣೆಗಳು - ಬಹು ಪರಿಣಾಮಕಾರಿಯಾದ ಪ್ರತಿಪಾದನೆಯಿದೆ. ಐದನೆಯ 'ರಚನಾತ್ಮಕ ಉಪಭಾಷಾ ವಿಜ್ಞಾನ' ಎಂಬ ಅಧ್ಯಾಯ ವಿವರಣೆಯ ಅಭಾವದಿಂದಾಗಿ ಸೊರಗಿದೆ.

ಶ್ರೀ ಭಟ್ಟರಿಗೆ ಶಾಸ್ತ್ರ ನಿರೂಪಣೆಗೆ ಬೇಕಾದ ಭಾಷೆಯಿದೆ ; ಖಚಿತವಾಗಿರಬೇಕೆಂಬ ಪ್ರಜ್ಞೆಯಿದೆ. ಉಪಭಾಷೆಯ ಬಗ್ಗೆ ಕನ್ನಡದಲ್ಲಿ ಇಲ್ಲಿಯವರೆಗೆ ಬಂದಿರುವ ಬರಹಗಳಲ್ಲೆಲ್ಲ ಇದು ಸಮಗ್ರವಾದುದು, ಶ್ರೇಷ್ಠವಾದುದು. ಉಪಭಾಷೆಯ ಬಗ್ಗೆ ಇನ್ನೂ ವಿಸ್ತಾರವಾದ ದೊಡ್ಡ ಗ್ರಂಥವೊಂದು ಬರಬೇಕಾಗಿದೆ.

ಜೆ.ಎಸ್. ಕುಳ್ಳಿಯವರ **ಭಾಷಾಸೌಧ**ವು ಹನ್ನೆರಡು ಲೇಖನಗಳ ಸಂಗ್ರಹ. ಇವೆಲ್ಲವೂ ಭಾಷೆಗೆ ಒಂದಲ್ಲ ಒಂದು ರೀತಿಯಲ್ಲಿ ಸಂಬಂಧಿಸಿವೆ, ಅಷ್ಟೇ. ಆದರೆ ಎಲ್ಲವೂ ಬಿಡಿ ಸಂಪ್ರಬಂಧಗಳೇ. ಎಲ್ಲವನ್ನೂ ಓದಿದಾಗ ಭಾಷೆಯ ಶಿಲ್ಪದ ಬಗ್ಗೆ ಒಂದು ಸ್ಥೂಲಚಿತ್ರ ಮೂಡುತ್ತದೆ. ('ಭಾಷಾ ಸೌಧ' ಎಂಬ ಹೆಸರಿನ ಸಂಪ್ರಬಂಧವೇ ಇದೆ. ಅದೇ ಹೆಸರನ್ನು ಪುಸ್ತಕಕ್ಕೂ ಇಟ್ಟಿದ್ದಾರೆ)

ಇಲ್ಲಿನ ಅನೇಕ ಸಂಪ್ರಬಂಧಗಳನ್ನು ಪತ್ರಿಕೆಗಳಿಗಾಗಿ ಬರೆದುದಾಗಿ ಲೇಖಕರೇ ಹೇಳಿಕೊಂಡಿದ್ದಾರೆ. ಉಳಿದವು ಈ ಪುಸ್ತಕಕ್ಕಾಗಿ ಬರೆದಂಥವು. ಎಲ್ಲ ಸಂಪ್ರಬಂಧಗಳೂ ತೀರಾ ಜನಪ್ರಿಯ ಶೈಲಿಯಲ್ಲಿವೆ. ಶಾಸ್ತ್ರ ವಿಷಯಗಳನ್ನು ಜನಪ್ರಿಯಗೊಳಿಸುವ ಅಗತ್ಯವಿದೆ. ಆದರೆ, ಇಲ್ಲಿಯ ಸಂಪ್ರಬಂಧಗಳು ಜಾಳು ಜಾಳಾಗಿವೆ ಎಂಬುದೇ ನಮ್ಮ ಮುಖ್ಯ ಆಕ್ಷೇಪಣೆ. ಜೊತೆಗೆ, ಇವುಗಳನ್ನು ಹಿಡಿದಿಡುವ ಸೂತ್ರವೊಂದಿಲ್ಲವಾದ್ದರಿಂದ ಒಂದೊಂದೂ ಬರಹವು ಕಟ್ಟಿನಿಂದ ಬಿಚ್ಚಿ ನಿಂತಂತೆ ಕಾಣುತ್ತದೆ. 'ಭಾಷೆಯ ವೈವಿಧ್ಯ'ದಂತಹ ಒಂದೆರಡು ಸಂಪ್ರಬಂಧಗಳು ಸ್ವಾರಸ್ಯವಾಗಿವೆ. ಆದರೆ, ಅನೇಕ ಸಂಪ್ರಬಂಧಗಳಲ್ಲಿ ಒಂದೇ ವಿಷಯ ಮತ್ತೆ ಮತ್ತೆ ಕಾಣಿಸಿಕೊಂಡು ಬೇಸರವುಂಟಾಗುತ್ತದೆ. ಹಿಂದಿ, ಬಂಗಾಳಿ ಮುಂತಾದುವು ಸಂಸ್ಕೃತಜನ್ಯ ಭಾಷೆಗಳು ಎಂಬಂತಹ ಹೇಳಿಕೆಗಳು ಆಶ್ಚರ್ಯವನ್ನುಂಟುಮಾಡುತ್ತವೆ. ಅಂತಹ ಉತ್ಸಾಹವನ್ನು ಹುಟ್ಟಿಸುವ ಪುಸ್ತಕ ಅಲ್ಲ ಎಂದು ಮಾತ್ರ ಈ ಕೃತಿಯ ಬಗ್ಗೆ ಹೇಳಬಹುದು.

ವಿ. ಶಿವಾನಂದರ **ಕೇಶಿರಾಜನ ಶಬ್ದಮಣಿದರ್ಪಣ ವಿಳಾಸವು** ಕೇಶಿರಾಜನ ವ್ಯಾಕರಣದ ಬಗ್ಗೆ ಕೆಲವು ಅಭ್ಯಾಸಗಳನ್ನೊಳಗೊಂಡಿದೆ. ನಾನು ಈಚೆಗೆ ಓದಿದ - ಓದಬೇಕಾಗಿ ಬಂದ - ಬಹು ಕೆಟ್ಟ ಪುಸ್ತಕಗಳಲ್ಲಿ ಇದೂ ಒಂದು.

ಶಬ್ದಮಣಿದರ್ಪಣದಂತಹ ವ್ಯಾಕರಣ ಗ್ರಂಥದ ಬಗ್ಗೆ ಅದನ್ನು ಸುಲಭಗೊಳಿಸಿ ತಿಳಿಸಿಕೊಡುವ ಯಾವುದೇ ಗ್ರಂಥ ಬಂದರೂ ಸ್ವಾಗತಾರ್ಹ. ಆ ವ್ಯಾಕರಣವು ಕನ್ನಡವನ್ನು ವಿಶೇಷವಾಗಿ ಅಧ್ಯಯನ ಮಾಡುವ ಒಂದಲ್ಲ ಒಂದು ಮಟ್ಟದ ವಿದ್ಯಾರ್ಥಿಗಳಿಗೆ ಪಠ್ಯಪುಸ್ತಕವಾಗಿರುತ್ತದೆ. ಆದ್ದರಿಂದ ಆ ವ್ಯಾಕರಣದ ಬಗ್ಗೆ ಬರುವ ಯಾವುದೇ ಬರಹಕ್ಕೆ ಒಳ್ಳೆಯ ಬೇಡಿಕೆಯಿರುತ್ತದೆ. ಆದರೆ ಶಿವಾನಂದರ ಈ ಪುಸ್ತಕವನ್ನು ವಿದ್ಯಾರ್ಥಿಗಳು ಓದುತ್ತಾರಲ್ಲ ಎಂಬ ಭಯ ನನ್ನನ್ನು ಆವರಿಸಿದೆ.

ಏಕೆಂದರೆ, ಮೊದಲನೆಯದಾಗಿ ಶಿವಾನಂದರಿಗೆ ಶಬ್ದಮಣಿದರ್ಪಣವನ್ನು ಆಧುನಿಕ ಭಾಷಾ ವಿಜ್ಞಾನದ ಬೆಳಕಿನಲ್ಲಿ ವ್ಯಾಖ್ಯಾನಿಸಬೇಕೆಂಬ ಒಳ್ಳೆಯ ಉದ್ದೇಶವಿದ್ದರೂ ಅವರಿಗೆ ಭಾಷಾವಿಜ್ಞಾನದ ಬಗ್ಗೆ ಏನೇನೂ ಸ್ಪಷ್ಟ ತಿಳುವಳಿಕೆಯಿಲ್ಲವೆಂಬುದು ಸ್ಪಷ್ಟ. ಇದಕ್ಕೆ ಪುಸ್ತಕದ ತುಂಬ ನಿದರ್ಶನಗಳಿವೆ. ಕೇಶಿರಾಜ ಹೇಳುವ 'ಘನಸ್ವನಾದಿ ಧ್ವನಿ'ಯು 'ಧ್ವನಿ' (phone) ಎಂದೂ, 'ಶುದ್ಧಾಕ್ಷರ'ವನ್ನು 'ಧ್ವನಿಮಾ' (phoneme) ಎಂದೂ ಕರೆಯಬೇಕೆಂಬ ಅವರ ವಾದವನ್ನು ಇಲ್ಲಿ ನೆನೆಯಬಹುದು. 'ಘನಸ್ವನಾದಿ ಧ್ವನಿ'ಗಳು ಬರೀ ಸದ್ದೇ ಹೊರತು, ಸ್ವನ (phone) ಅಲ್ಲ. ಬರೋ ಎಮಿನೋ ಹತ್ತೊಂಬತ್ತನೇ ಶತಮಾನದ ಭಾಷಾ ವಿಜ್ಞಾನಿಗಳೆಂದು (ಪು. 17) ಶಿವಾನಂದರು ಬರೆದಿದ್ದಾರೆ (ಅವರು ನನ್ನ ಹಿರಿಯ ಸಮಕಾಲೀನರು ; ಎಮಿನೋ ನನ್ನ ಗುರುಗಳು). ಇಂಗ್ಲೀಷ್ ವರ್ಣಮಾಲೆಯ ಇಪ್ಪತ್ತಾರು ಚಿಹ್ನೆಗಳನ್ನು ಸ್ವನಿಮಗಳೆಂದು ಭಾವಿಸಿ, ಆ ಭಾಷೆಯಲ್ಲಿ ಅಷ್ಟೇ ಇರುವುದು ಎಂದು ಹೇಳುವುದು ಬಹು ವಿಲಕ್ಷಣವಾಗಿದೆ. 'ಕನ್ನಡ' 'ಪಟಿಗನ್ನಡ'ಗಳಲ್ಲಿ ಕ್ ಮತ್ತು ಗ್ ಗಳು 'ವರ್ಣಾಂಗ' (allophone) ಗಳಾಗಿವೆಯಂತೆ! (ಪು. 75). ಇಂಗ್ಲೀಷಿನ receive, deceive, conceive and perceive ಪದಗಳಲ್ಲಿನ re-, de-, con-, per-, ಪ್ರತ್ಯಯಗಳು ತದ್ಧಿತ ಪ್ರತ್ಯಯಗಳಂತೆ (ಪು. 164-5). ಕನ್ನಡದಲ್ಲಿ 'ಎಲ್ಲಿದಂ' ಎಂಬ ದಿಗ್ವಾಚಿಯನ್ನು (?) ಇನ್ನೂ ಹುಡುಕಬೇಕಾಗಿದೆ. ರಾಘವಾಂಕ, ಪದ್ಮಣಾಂಕ, ಗೌರಾಂಕ ಮತ್ತು ಗೊರವಂಕ ಪದಗಳ ಕೊನೆಯಲ್ಲಿ ಬರುವ 'ಅಂಕ'ವು ಕೇಶಿರಾಜ ಗುರುತಿಸದೇ ಬಿಟ್ಟಿರುವ ತದ್ಧಿತ ಪ್ರತ್ಯಯಗಳಲ್ಲಿ ಒಂದು ಎಂದು ಹೇಳುತ್ತಾರೆ (ಪು. 165) 'ಗೊರವಂಕ'ದ ವಿಷಯವೇನೋ ತಿಳಿಯದು ; ಅದರ ನಿಷ್ಪತ್ತಿ ಲೇಖಕರೇ ಹೇಳಬೇಕು. ಉಳಿದ ಪದಗಳ ಕೊನೆಯಲ್ಲಿ ಬರುವ 'ಅಂಕ' ಎಂಬುದು ಒಂದು ಸ್ವತಂತ್ರ ಆಕೃತಿಮ, ಪ್ರತ್ಯಯವಲ್ಲ. ಒಂದು ಕಡೆ Haplology ಅಥವಾ ಸದೃಶಾಕ್ಷರಲೋಪಕ್ಕೆ ವೀರರಾಜಪೇಟೆ → ವಿರಾಜಪೇಟೆ ಎಂದು ಸರಿಯಾಗಿ ಉದಾಹರಣೆ ಕೊಟ್ಟು* ಇನ್ನೊಂದು ಕಡೆ (ಪು. 217) ಮಹಾಪಾತಕ → ಮಾಪಾತಕ, ವಿನಾಯಕಂ → ಬೆನಕಂ ಇವುಗಳನ್ನು ಅದಕ್ಕೆ ಉದಾಹರಣೆ ಕೊಟ್ಟಿರುವುದು

ವಿಚಿತ್ರವಾಗಿದೆ. ವರ್ಣವಿಪರ್ಯಯಕ್ಕೆ (metathesis) ಹಂಸೆ → ಅಂಚೆ, ಜಟಾ → ಜಡೆ ಇತ್ಯಾದಿಗಳನ್ನು ಕೊಟ್ಟಿರುವುದು ಆಭಾಸದ ಪರಮಾವಧಿ. "ಸಂಸ್ಕೃತದಲ್ಲಿ ವಿಭಕ್ತಿ ಪ್ರತ್ಯಯಗಳು ಕೇವಲ ಆಖ್ಯಾತ ಪದಗಳಿಗೆ ಮಾತ್ರ ಹತ್ತುತ್ತವೆ" (ಪು. 146) ಎಂಬ ವಾಕ್ಯ ನಗುವನ್ನು ಉಕ್ಕಿಸುತ್ತದೆ. ಋ, ಋೂ, ಹ್ರಸ್ವ ಮತ್ತು ದೀರ್ಘ ಲೃಗಳು, ಐ, ಔಗಳು ವಿವೃತ - ನಿಮ್ನ - ಅಂತ್ಯಸ್ವರಗಳಂತೆ! (ಪು. 284). 'ಳ' ಅವರ ಪ್ರಕಾರ 'ದಂತ್ಯ' ವ್ಯಂಜನ. ಕೇಶಿರಾಜ 'ಬೆಳೆ → ಬಳೆ' ಪದಗಳಲ್ಲಿ ಸಂದಿಗ್ಧ ಯುಗ್ಮ (suspicious pair)ವನ್ನು ಗುರುತಿಸಿ ಹೇಳಿದ್ದಾನಂತೆ (ಪು. 285) ಇಂತಹುವನ್ನು ಪುಸ್ತಕದ ಉದ್ದಕ್ಕೂ ಗುರುತಿಸಬಹುದು.

ಅಚ್ಚಿನ ದೋಷಗಳಂತೂ ಕಿಕ್ಕಿರಿದಿವೆ. ಇದು ಪೇಜ್ ಫ್ರೂಫನ್ನೇ ಅಚ್ಚು ಮಾಡಿರುವಂತಿದೆ.

ಈ ಪುಸ್ತಕಕ್ಕೆ ಡಾ॥ ಆರ್.ಸಿ. ಹಿರೇಮಠರು ಮುನ್ನುಡಿ ಬರೆದಿದ್ದಾರೆ.

---

* ಈ ಮತ್ತು ಇತರ ಅನೇಕ ಸಂಗತಿಗಳನ್ನು ನನ್ನ "ಭಾಷಾ ವಿಜ್ಞಾನದ ಮೂಲ ತತ್ವಗಳು" ಪುಸ್ತಕದಿಂದ ತೆಗೆದುಕೊಂಡಿದ್ದರೂ, ಗ್ರಂಥ ಋಣದ ಪಟ್ಟಿಯಲ್ಲಿ ಆ ಪುಸ್ತಕದ ಹೆಸರು ಕಾಣಿಸುವುದಿಲ್ಲ.

# ಸಂಶೋಧನ ಸಮೀಕ್ಷೆ : 1973

ಇಲ್ಲಿ ಸಮೀಕ್ಷೆಗೆ ಒಳಗಾಗಿರುವ ಪುಸ್ತಕಗಳಲ್ಲಿ ಮೂರು ಪಿಎಚ್.ಡಿ. ಪ್ರಶಸ್ತಿಗಾಗಿ ಒಪ್ಪಿಸಿದ್ದ ನಿಬಂಧಗಳು; ಎರಡು ಭಾಷಾ ವಿಜ್ಞಾನಕ್ಕೆ ಸಂಬಂಧಿಸಿದುವು; ಬಸವಣ್ಣನವರಿಗೆ ಸಂಬಂಧಿಸಿದ ಎರಡು ಗ್ರಂಥಗಳು; ಕರ್ನಾಟಕ ಇತಿಹಾಸಕ್ಕೆ ಸಂಬಂಧಿಸಿದುವು ಎರಡು ಗ್ರಂಥಗಳು. ಒಟ್ಟು ಸಂಖ್ಯೆ ಒಂಬತ್ತು. ಇವುಗಳ ಪರಿಚಯ ವಿಮರ್ಶೆಯನ್ನು ಮಾಡಿ ಕೊನೆಯಲ್ಲಿ ಒಂದು ಸಂಕ್ಷಿಪ್ತ ವಿಶ್ಲೇಷಣೆಯನ್ನು ಕೊಡಲಾಗಿದೆ.

ಡಾ. ನ. ಸುಬ್ರಹ್ಮಣ್ಯಂ ಅವರ **ಮಹಾಭಾರತ ಸಮೀಕ್ಷೆ**ಯು ವ್ಯಾಸ, ಪಂಪ, ನಾರಣಪ್ಪರ ಮಹಾಭಾರತ ಕೃತಿಗಳ 'ಒಂದು ತೌಲನಿಕ ವಿಮರ್ಶೆ'ಯ ಬೃಹತ್ ಗ್ರಂಥ. ಪಂಪ, ನಾರಣಪ್ಪರು ಕನ್ನಡದ ಅಗ್ರಕವಿಗಳು. ಅವರು ಮೂಲ ವ್ಯಾಸ ಭಾರತಕ್ಕೆ ಎಷ್ಟು ಕಡೆ, ಎಷ್ಟು ಬಗೆಯಾಗಿ ಋಣಿಗಳು ಎಂಬುದನ್ನು ಕುರಿತು ಅಲ್ಲಲ್ಲಿ ಚಿಕ್ಕ ಲೇಖನಗಳು ಬಂದಿದ್ದುವು. ಆದರೆ ಸುಬ್ರಹ್ಮಣ್ಯಂ ಅವರು ಅದನ್ನು ತಮ್ಮ ಪಿಎಚ್.ಡಿ. ಪದವಿಗೆ ವಿಷಯವನ್ನಾಗಿ ಆರಿಸಿಕೊಂಡು, ಆ ಸಮಸ್ಯೆಯನ್ನು ವಿಸ್ತಾರವಾಗಿ ಚರ್ಚಿಸಿದ್ದಾರೆ, ವಿಮರ್ಶಿಸಿದ್ದಾರೆ. ಕನ್ನಡ ಮಹಾಭಾರತಗಳನ್ನು ಕುರಿತು ವ್ಯಾಸಂಗ ಮಾಡುವವರಿಗೆ ಸುಬ್ರಹ್ಮಣ್ಯಂ ಅವರ ಪುಸ್ತಕ ಒಂದು ಆಕರ ಗ್ರಂಥವಾಗುವುದರಲ್ಲಿ ಸಂದೇಹವಿಲ್ಲ.

ಈ ಗ್ರಂಥದಲ್ಲಿ ವ್ಯಾಸಮಹಾಭಾರತದ ಪರಿಚಯವಾಗುವುದಲ್ಲದೆ, ಅದು ಕಾಲಕ್ರಮೇಣ ಹೇಗೆ ಬೇರೆ ಬೇರೆ ಪಾಠಾಂತರಗಳನ್ನು ಪಡೆಯಿತು ಎಂಬುದರ ಚಿತ್ರವೂ ದೊರಕುತ್ತದೆ. ವ್ಯಾಸ-ಪಂಪ, ವ್ಯಾಸ-ನಾರಣಪ್ಪ ಈ ವಿಷಯಗಳ ಜೊತೆಗೆ ಪಂಪ ಮತ್ತು ನಾರಣಪ್ಪನವರನ್ನು ತೌಲನಿಕವಾಗಿ ಅಭ್ಯಸಿಸಿ, ನಾರಣಪ್ಪ ಕವಿ ಪಂಪನಿಗೆ ಎಷ್ಟು ಬಗೆಯಾಗಿ ಋಣಿಯಾಗಿದ್ದಾನೆಂಬುದನ್ನು ವಿಸ್ತಾರವಾಗಿ ತೋರಿಸಿಕೊಟ್ಟಿರುವುದು, ನನಗೆ ತಿಳಿದಮಟ್ಟಿಗೆ ಹೊಸದು. ಇದಕ್ಕೆ ಉದಾಹರಣೆಯಾಗಿ ಶಂತನುವು ಸತ್ಯವತಿಯಲ್ಲಿ ಮೋಹಗೊಂಡ ಪ್ರಸಂಗವನ್ನೂ ಅಂಬೆಯ ಪ್ರಸಂಗವನ್ನೂ (ಪು. 722-3) ನೋಡಬಹುದು. ಬೃಹನ್ನಳೆಯು ಕೌರವ ಸೈನ್ಯದ ಮುಂದೆ ಅರ್ಜುನನಾಗಿ ವೇಷಾಂತರಗೊಳ್ಳುವ ಪ್ರಸಂಗದಲ್ಲಿ ಬರುವ ವರ್ಣನಾ ಭಾಗದಲ್ಲಿರುವ ಭಾಷೆಯ ಸಾಮ್ಯ ಪಂಪನಿಂದ ಕುಮಾರವ್ಯಾಸ ಪ್ರಭಾವಿತನಾಗಿರುವುದಕ್ಕೆ ಸ್ಪಷ್ಟ ಸಾಕ್ಷಿಗಳಲ್ಲೊಂದು. "ಎಲ್ಲೆಲ್ಲಿ ಪಂಪ ಅದ್ಭುತ ರೀತಿಯಲ್ಲಿ ಧ್ವನಿಪೂರ್ಣವಾಗುವಂತೆ ಕಾವ್ಯದ ಸೊಬಗನ್ನು ತರುತ್ತಾನೋ ಅಂತಹ ಎಡೆಗಳಲ್ಲಿ ನಾರಣಪ್ಪ ತನಗೂ ಅದೇ ಮಟ್ಟದಲ್ಲಿ ಕಾವ್ಯವನ್ನು ನಿರ್ವಹಿಸುವುದು ಶಕ್ಯವಿದ್ದರೆ, ಅಥವಾ ಇನ್ನೂ

ಭವ್ಯತೆಗೇರಿಸುವ ಸಾಮರ್ಥ್ಯವಿದ್ದರೆ ಕೈಹಾಕುತ್ತಾನೆ. ಇಲ್ಲವಾದರೆ ಸದ್ದುಮಾಡದೆ ಅಂತಹ ಸನ್ನಿವೇಶಗಳನ್ನು ಜಾರಿಸಿ ಮುಂದುವರಿಯುತ್ತಾನೆ" ಎಂಬ ಒಳ್ಳೆಯ ಹೊಸ ಅಂಶವನ್ನು ಈ ಸಂದರ್ಭದಲ್ಲಿ ಗಮನಿಸಿರುವುದನ್ನು ಇಲ್ಲಿ ನೆನೆಯಬೇಕು.

ಆರಂಭದ ಅಧ್ಯಾಯವೊಂದರಲ್ಲಿ ಮಹಾಭಾರತ ಕತೆಯನ್ನು ಕುರಿತು ಕಾವ್ಯ ಬರೆಯುವಾಗ ಪಂಪ, ನಾರಣಪ್ಪರ ದೃಷ್ಟಿಗಳಾವುವು, ಅವುಗಳಿಗಿರುವ ಮೂಲಭೂತ ಭೇದವೇನೆಂಬುದನ್ನು ಪೀಠಿಕಾ ರೂಪವಾಗಿ ಚರ್ಚಿಸಿದ್ದಾರೆ. ಮುಂದೆ, ಆಯಾ ಕವಿ ತನ್ನ ದೃಷ್ಟಿಗನುಸಾರವಾಗಿ ಮೂಲಕಥೆಯಿಂದ ತೆಗೆದು ಹಾಕಿರುವ ಭಾಗಗಳನ್ನು, ಹೊಸದಾಗಿ ಸೇರಿಸಿರುವ ಅಂಶಗಳನ್ನು ಸಮೀಕ್ಷಿಸಿದ್ದಾರೆ. ಮೂಲಕಥೆಯ ಕೆಲವು ಭಾಗಗಳು ಈ ಇಬ್ಬರು ಕವಿಗಳಲ್ಲಿ ಸ್ಥಳಾಂತರಗೊಂಡ ಸನ್ನಿವೇಶಗಳು ಯಾವುವು ಎಂಬುದರ ಸಮೀಕ್ಷೆಯೂ ಒಂದು ಅಧ್ಯಾಯದಲ್ಲಿ ದೊರಕುತ್ತದೆ. ಮೂಲದ ಕತೆಯನ್ನು ಸಂಕ್ಷಿಪ್ತವಾಗಿ ಸೂಚಿಸಿ, ಅದು ಕನ್ನಡ ಕಾವ್ಯಗಳಲ್ಲಿ ಹೇಗೆ ಮೂಡಿ ಬಂದಿದೆಯೆಂಬುದನ್ನು ಉದ್ದಕ್ಕೂ ಚಿತ್ರಿಸುತ್ತಾ ಹೋಗಿದ್ದಾರೆ. ಇದೇ ಒಂದು ಬಗೆಯಲ್ಲಿ ಪರೋಕ್ಷವಾಗಿ ಆಯಾ ಕನ್ನಡ ಕೃತಿಯ ವಿಮರ್ಶೆಯೂ ಆಗುತ್ತದೆ. ಜೊತೆಗೆ ಲೇಖಕರೇ ಅಲ್ಲಲ್ಲಿ ಹೋಲಿಕೆ ಮಾಡುವುದರ ಜೊತೆಗೆ ಕವಿಯ ಬಗ್ಗೆ ವ್ಯಾಖ್ಯಾನ ಮಾಡುತ್ತ ವಿಮರ್ಶೆಯ ಮಾತುಗಳನ್ನೂ ಆಡುತ್ತಾರೆ. ಕೆಲವು ಕಡೆ, ಆಲಂಕಾರಿಕ ಭಾಷೆಯನ್ನು ಬಳಸುವ ಅನಗತ್ಯ ಉತ್ಸಾಹವನ್ನು ತೋರುತ್ತಾರೆ. ಉದಾಹರಣೆಗೆ ಈ ವಾಕ್ಯವನ್ನು ನೋಡಬಹುದು : "ದನ ಸತ್ವಯುತವಾದ ಹುಲ್ಲು, ಕಾಳು, ಕಡ್ಡಿ, ಹಿಂಡಿ ಮೊದಲಾದುವನ್ನು ಸೇವಿಸಿ ಅವುಗಳ ಸಾರಸರ್ವಸ್ವವನ್ನು ಹಾಲಿನ ರೂಪದಲ್ಲಿ ಕೊಡುವಂತೆ ಪಂಪ ಇಡೀ ಮಹಾಭಾರತವನ್ನು ಮೊದಲು ಮನಸ್ಸಿನಿಂದ ಗ್ರಹಿಸಿ ತನ್ನ ಪ್ರತಿಭಾ ಪ್ರಭಾವದಿಂದ ಅದನ್ನು ವಿನೂತನ ಕವಿತೆಯಾಗಿ ಹೊರ ಹೊಮ್ಮಿಸಿದ್ದಾನೆ" (ಪು.43). ಇಲ್ಲಿ ವಿಷಯ ನಿರೂಪಣೆಗೆ ಮೊದಲ ಉಪಮೆ ಸಂಪೂರ್ಣ ಅನಗತ್ಯವೆಂಬುದು ಮಾತ್ರವಲ್ಲದೆ ಆ ಉಪಮೆ ಸಂಗತಿಯನ್ನು ವಿರೂಪಗೊಳಿಸಲೂ ಕಾರಣವಾಗಬಹುದು. 'ದನ'ದ ಬದಲು 'ಹಸು' ಎಂಬ ಪದ ಪ್ರಯೋಗವೇ ಎಷ್ಟೋ ಸಹ್ಯವಾಗುತ್ತಿತ್ತು. ವಿಮರ್ಶೆ ಅತ್ಯುತ್ಸಾಹದ ಫಲವಾಗಿ ಮೂಡಿಬಂದಾಗ, "ನಾರಣಪ್ಪ 'ವಶ್ಯವಾಕ್!' ಅವನು ಅಗಾಧ ಶಬ್ದ ಸಂಪತ್ತಿಯುಳ್ಳವನು. ಶಬ್ದ ಪ್ರಯೋಗದಲ್ಲಿ ಸರ್ವಸ್ವತಂತ್ರ. ಇತರರಲ್ಲಿ ಶಬ್ದಗಳು ಅರ್ಥವನ್ನು ಹಿಂಬಾಲಿಸಿದರೆ ಇವನಲ್ಲಿ ಅರ್ಥವೇ ಶಬ್ದವನ್ನು ಹಿಂಬಾಲಿಸುತ್ತದೆ" ಎಂಬ ಉದ್ಗಾರಗಳನ್ನು (ಪು. 74) ತೆಗೆಯಲಾರಂಭಿಸುತ್ತಾರೆ. "ಹಲವೆಡೆಗಳಲ್ಲಿ ಶಬ್ದ ಬಾಹುಳ್ಯದ ಮತ್ತು ಪುನರುಕ್ತಿಯ ದೋಷಕ್ಕೆ ಗುರಿಯಾಗಿದ್ದಾನೆ" ಎಂದು ಹೇಳಿದ ಉಸಿರಿನಲ್ಲೇ "ಆದರೂ ಎಲ್ಲೂ ಅಯುಕ್ತ ಪದಪ್ರಸಾರವಿಲ್ಲ" ಎಂದು ಹೇಳುತ್ತಾರೆ. ಎರಡು ಮಾತಿಗೂ ಇರುವ ವಿರೋಧ ಎದ್ದು ಕಾಣುತ್ತದೆ.

ಸಂಶೋಧನ ಬರಹಗಳಿಗೆ ಅವಶ್ಯವಾದ ಭಾಷೆ ಸುಬ್ರಹ್ಮಣ್ಯಮ್ ಅವರಿಗೆ ಸಿದ್ಧಿಸಿಲ್ಲ. ಅನೇಕ ಕಡೆಗಳಲ್ಲಿ ತೀರಾ ಅನಗತ್ಯವಾದ ವಿವರಗಳನ್ನು ಕೊಡುತ್ತಾರೆ. ಉದಾಹರಣೆಗೆ, 'ಪಂಪ ಹೊಸದಾಗಿ ಸೇರಿಸಿರುವ ಅಂಶಗಳು' ಎಂಬ ಅಧ್ಯಾಯದಲ್ಲಿ ಪಂಪ ತನ್ನ ಸ್ವಂತ

ವಿಷಯ ಹೇಳಿಕೊಂಡ ಭಾಗಗಳನ್ನೆಲ್ಲ ವಿವರಿಸುತ್ತಾರೆ (ಪು. 226). ಇಂಥವನ್ನೆಲ್ಲ ಪಟ್ಟಿ ಮಾಡುತ್ತಾ ಕುಳಿತರೆ ಅದಕ್ಕೆ ಕೊನೆಯೆಂಬುದಿರುವುದಿಲ್ಲ. ಪ್ರತಿ ಆಶ್ವಾಸಾಂತ್ಯದ ಕೊನೆಯ ಸ್ವವಿಷಯಕ ಗದ್ಯವನ್ನೂ ಹೇಳಬೇಕಾಗುತ್ತದೆ. ಪಂಪನ ಬನವಾಸಿಯ ವರ್ಣನೆ ಹೊಸದಾಗಿ ಸೇರಿಸಿದ ಅಂಶ ಎಂದು ಹೇಳಿ ಮುಂದುವರಿದರೆ ಸಾಕಿತ್ತು : ಆ ವರ್ಣನೆಯನ್ನೆಲ್ಲ ಗದ್ಯದಲ್ಲಿ ನಿರೂಪಿಸುವುದು ಅನಗತ್ಯ. ಅದೇ ರೀತಿ, ಅರ್ಜುನ ಸುಭದ್ರೆಯರ ಪ್ರಣಯದ ವಿವರಗಳನ್ನೆಲ್ಲ - ಅವರ ಏಕಾಂತದ ವರ್ಣನೆಯನ್ನೂ ಕೂಡ ವಿವರವಾಗಿ ನಿರೂಪಿಸುತ್ತಾರೆ. (ಪು. 245-51) ಇದರಿಂದಾಗಿ ಇಡೀ ನಿಬಂಧ ಜಾಳು ಜಾಳಾಗಿ ಪರಿಣಮಿಸಿದೆ. ಈ ಶೈಥಿಲ್ಯ ಪ್ಯಾರಾಗಳ ರಚನೆಯಲ್ಲೂ ಕಾಣುತ್ತವೆ. ಒಂದು ವಾಕ್ಯ, ಕವಿಯ ಒಂದು ಉಲ್ಲೇಖ (quotation) ಅಥವಾ ಉಲ್ಲೇಖಗಳು (quotations) ಒಂದು ಪ್ಯಾರಾ ಆಗಿಬಿಡಬಹುದು. ಉದಾಹರಣೆಗೆ "ಈಶ್ವರ ನಿಗಮ ಮಹಿಮಾಮೌಳಿ ನೀರಾಜಿತಾಂಘ್ರಿಸರೋಜ!" ಎಂಬುದು (ಪು. 74) ಒಂದು ಪ್ಯಾರಾದ ಜಾಗದಲ್ಲಿ ಬರುತ್ತದೆ. ಈ ಮಾತುಗಳ ಸಮರ್ಥನೆಗೆ ಇಡೀ ನಿಬಂಧದಲ್ಲಿ ಉದಾಹರಣೆಗಳು ಸಿಗುತ್ತವೆ.

ಪುಸ್ತಕದ ಕೊನೆಯಲ್ಲಿ ಕೊಟ್ಟಿರುವ ಗ್ರಂಥಋಣ ತೀರಾ ಅಸಮರ್ಪಕ. ತಾವು ಮಹಾಭಾರತದ ದಾಕ್ಷಿಣಾತ್ಯ ಪಾಠವನ್ನು ಅನುಸರಿಸಿರುವುದಾಗಿ ಹೇಳಿಕೊಂಡಿದ್ದಾರೆ. ಆದರೆ ಗ್ರಂಥಋಣದಲ್ಲಿರುವುದು ಭಾಂಡಾರ್ಕರ್ ಸಂಶೋಧನಾಲಯದ ಪ್ರಕಟಣೆಯ ಮಹಾಭಾರತ ಮಾತ್ರ. ನಿಬಂಧದಲ್ಲಿ ಆಯಾ ಕಡೆಗಳಲ್ಲಿ ಕೆಲವು ಲೇಖನಗಳನ್ನು ಗಮನಿಸಬಹುದಿತ್ತು. ಕನ್ನಡ ಭಾರತದ ಶೃಂಗಾರ ಸನ್ನಿವೇಶಗಳಿಗೆ ಸಂಬಂಧಿಸಿದ ತೀ. ನಂ. ಶ್ರೀಕಂಠಯ್ಯನವರ ಲೇಖನ, ಅಕ್ಷಯ ವಸ್ತ್ರ ಪ್ರಸಂಗಕ್ಕೆ ಸಂಬಂಧಿಸಿದ ಜಿ.ಎಸ್. ಶಿವರುದ್ರಪ್ಪನವರ ಲೇಖನ ಇತ್ಯಾದಿಗಳನ್ನು ಗಮನಿಸಿಲ್ಲ. ಪಂಪನ ಬಗ್ಗೆ 1968ರಿಂದ ಈಚೆಗೆ ಬಂದಿರುವ ಈಚಿನ ಬರಹಗಳನ್ನು, ನಡೆದಿರುವ ಸಂಶೋಧನೆಗಳನ್ನು ಗಮನಿಸಿಲ್ಲವಾದ್ದರಿಂದ, ಮತ್ತೆ ಅವನಿಗೂ ಬನವಾಸಿಗೂ ನಂಟುತನ ಕಲ್ಪಿಸುವ ಹಿಂದಿನವರ ತಪ್ಪನ್ನೇ ಇಲ್ಲಿ ಮಾಡಲಾಗಿದೆ. (ಪು. 229) ಎಲ್ಲಾದರೂ ಲೇಖನಗಳನ್ನು ಉಲ್ಲೇಖಿಸಿದಾಗಲೂ ಯಾರ ಲೇಖನ, ಯಾವ ಸಂಚಿಕೆಯಲ್ಲಿ ಪ್ರಕಟವಾಗಿದೆ ಎಂಬ ವಿವರಗಳನ್ನು ಕೊಡುವುದಿಲ್ಲ. (ಪು. 322) ಕೆಲವು ಸಾರಿ ಅಡಿಟಿಪ್ಪಣಿಯಲ್ಲಿ 'ಬಾಣನ ಕಾದಂಬರಿಯ ಪ್ರಭಾವವಿದೆ' ಎಂಬಂತಹ ಮಾತುಗಳು ಬರುತ್ತವೆ (ಪು. 784, 564, 510). ಇಂತಹ ಕಡೆ ಕೆಲವು ವಿವರಗಳಾದರೂ ಇರುವುದು ಅಗತ್ಯವಾಗುತ್ತದೆ.

ಪಂಪನಲ್ಲಿ ಅರ್ಜುನ ಶಿವನನ್ನು ಸೋಲಿಸಿ ಕೆಳಕ್ಕೆ ಉರುಳಿದ ಶಿವನ ಗಂಟಲನ್ನು ಮೆಟ್ಟಿದಂತೆ ವರ್ಣನೆಯಿದೆ. "ಪಾರಮಾರ್ಥಿಕ ದೃಷ್ಟಿಯನ್ನುಳಿದ ಪಂಪನಿಗೆ ಅದು ಸರಿತೋರಿದ್ದಿರಬಹುದಾದರೂ ನಮ್ಮ ಮನಸ್ಸಿಗೆ ಸಮಂಜಸವೆನಿಸದು" ಎಂದು (ಪು. 319) ಈ ಹಿಂದಿನ ವಿಮರ್ಶಕರಂತೆಯೇ ಸುಬ್ರಹ್ಮಣ್ಯಂ ಅವರೂ ನುಡಿದಿದ್ದಾರೆ. ಈ ಬಗ್ಗೆ ಈಚೆಗೆ ಡಾ. ಎಂ.ಎಸ್. ನಾಗರಾಜರಾಯರು ಗಮನಿಸಿರುವ ಪಂಪಪೂರ್ವ ಶಿಲ್ಪಗಳು ಬೇರೆಯ ಸಂಗತಿಯನ್ನು ಧ್ವನಿಸುತ್ತವೆ. ಶಿವನೇ ಸೋತು, ಅರ್ಜುನನೇ ವಿಜಯಿಯಾದಂತೆ

ಅನೇಕ ಪ್ರಾಚೀನ ಹಿಂದೂ ದೇವಾಲಯಗಳಲ್ಲಿ ಚಿತ್ರಿತವಾಗಿರುವುದನ್ನು ನೋಡಿದರೆ, ಮೇಲಿನದು ಪಂಪನ ಮಾರ್ಪಾಟು ಅಲ್ಲವೆಂದೂ ತನ್ನ ಕಾಲದ ಶೈವರಲ್ಲಿ ಬಳಕೆಯಾಗಿದ್ದ ಕಥಾ ಪ್ರಭೇದವೊಂದನ್ನು ಬಳಸಿಕೊಂಡಿದ್ದಾನೆಂದೂ ನಾಗರಾಜರಾಯರು ಅಭಿಪ್ರಾಯ ಪಡುತ್ತಾರೆ.

ಲೇಖಕರು 'ಮೊದಲ ಮಾತಿ'ನಲ್ಲಿ ಹೀಗೆ ಹೇಳುತ್ತಾರೆ - "ರಸಕವಳವನ್ನು ಜಗಿಯುವಾಗ ನಡುನಡುವೆ ಕಲ್ಲ ಹರಳು ಸಿಕ್ಕಿದ ಹಾಗೆ ಅಚ್ಚಿನ ದೋಷಗಳು ಕಾಣಿಸಿಕೊಂಡಿವೆ. ಕರಡು ಪ್ರತಿಗಳನ್ನು ಮತ್ತೆ ಮತ್ತೆ ಎಚ್ಚರಿಕೆಯಿಂದ ಪರಿಶೀಲಿಸಿ ಅಚ್ಚು ಮಾಡಿಸುವ ವ್ಯವಧಾನ ನನಗಿರಲಿಲ್ಲ. ಆ ಬೇಸರದ ಕೆಲಸವನ್ನು ಇತರರಿಗೆ ವಹಿಸಿ ನಾನು ಹಿಂದೆ ಉಳಿದೆ". ಪುಸ್ತಕದ ಕೊನೆಯಲ್ಲಿ ಇಪ್ಪತ್ತೊಂದು ಪುಟಗಳ ತಪ್ಪು - ಸರಿಗಳ ಪಟ್ಟಿಯಿದೆ. ಸರಿಯಾಗಿ ಪಟ್ಟಿಮಾಡಿದ್ದರೆ ವಾಸ್ತವವಾಗಿ ಆ ಗಾತ್ರ ದ್ವಿಗುಣವಾಗಬಹುದು.

ಕಟುವಾದರೂ, ಒಟ್ಟು ಇಂದಿನ ಪ್ರವೃತ್ತಿಯ ಬಗ್ಗೆ ಕೆಲವು ಮಾತುಗಳನ್ನು ಆಡುವುದು ಅಗತ್ಯವೆಂದು ತೋರುತ್ತದೆ. ನಮ್ಮಲ್ಲಿ ಶ್ರದ್ಧೆಯ ಅಭಾವದಿಂದಾಗಿ, ಲೇಖನ ವ್ಯವಸಾಯವನ್ನು ಲಘುವಾಗಿ ಭಾವಿಸುವ ಮನೋಭಾವ ಬೆಳೆಯುತ್ತಿರುವುದು ದುರದೃಷ್ಟ. ಬರೆದದ್ದನ್ನು ಅಚ್ಚು ಮಾಡಿಸುವ ಬಗ್ಗೆಯೂ ತೋರುವ ಔದಾಸೀನ್ಯ ಅಕ್ಷಮ್ಯ. ಬರೆದದ್ದೆಲ್ಲವೂ ಅಚ್ಚಾಗಬೇಕು, ಬೇಗ ಅಚ್ಚಾಗಬೇಕು, ಆದಷ್ಟು ಆಕರ್ಷಕವಾಗಿ ಅಚ್ಚಾಗಬೇಕು - ಇದೇ ಸಾರ್ವತ್ರಿಕವಾಗಿ ಬಿಟ್ಟಿದೆ. ಖಚಿತತೆ, ಅಚ್ಚಿನ ದೋಷರಾಹಿತ್ಯಗಳ ಕಡೆ ಗಮನವೇ ಹೋಗುವುದಿಲ್ಲ. ಒಂದು ವೇಳೆ ಪುಸ್ತಕ ನೋಡಲು ಆಕರ್ಷಕವಾಗಿರದಿದ್ದರೂ ತಪ್ಪಿಲ್ಲದೆ ಅಚ್ಚಾಗುವುದು ಮುಖ್ಯವೆನ್ನುವ ಭಾವನೆ ಬೆಳೆಯುವುದು ಅಗತ್ಯವಾಗಿದೆ. ಜೊತೆಗೆ ಪಿಎಚ್.ಡಿ. ನಿಬಂಧಗಳು ಯಾವುದೋ ಪದವಿಗಾಗಿ ಒಪ್ಪಿಸಿದ ಬರಹಗಳು. ನಿಬಂಧಗಳೆಲ್ಲವೂ ಅಚ್ಚಾಗಲೇಬೇಕು, ಇರುವಂತೆಯೇ ಅಚ್ಚಾಗಬೇಕು ಎಂಬ ಭಾವನೆಯೂ ತಪ್ಪೆಂದು ನನಗೆ ತೋರುತ್ತದೆ. ಅಚ್ಚಿಗೆ ಮುನ್ನ ಬರಹವನ್ನು ಪೂರ್ತಿಯಾಗಿ ಪರಿಷ್ಕರಿಸುವುದು, ತಪ್ಪಿಲ್ಲದಂತೆ ಅಚ್ಚುಮಾಡಿಸುವುದು - ಎರಡೂ ಮುಖ್ಯವೆಂದು ಇಲ್ಲಿ ಒತ್ತಿ ಹೇಳಲು ಬಯಸುತ್ತೇನೆ.

ವಸ್ತುವಿನ ದೃಷ್ಟಿಯಿಂದ ಡಾ. ಸುಬ್ರಹ್ಮಣ್ಯಂ ಅವರ ನಿಬಂಧವನ್ನು ಹೋಲುವ ಕೃತಿಯೆಂದರೆ ಡಾ. ಟಿ.ವಿ. ವೆಂಕಟಾಚಲ ಶಾಸ್ತ್ರಿಯವರ **ಕನ್ನಡ ನೇಮಿನಾಥ ಪುರಾಣಗಳ ತೌಲನಿಕ ಅಧ್ಯಯನ.** ಆದರೆ ಎರಡಕ್ಕೂ ಎಂತಹ ವ್ಯತ್ಯಾಸ ! 548 ಪುಟಗಳ ಶಾಸ್ತ್ರಿಯವರ ಬೃಹತ್ ಗ್ರಂಥದಲ್ಲಿ ಕಣ್ಣಿಟ್ಟು ಹುಡುಕಿದರೂ ನಾಲ್ಕಾರು ಅಚ್ಚಿನ ದೋಷಗಳು ಮಾತ್ರ ಕಾಣಬಹುದು - ಎಂದರೆ ಪ್ರೂಫ್ ನೋಡುವಲ್ಲಿ ತೋರಿರುವ ಶ್ರದ್ಧೆ, ಅದಕ್ಕಿಂತ ಮುಖ್ಯವಾಗಿ ಒಟ್ಟು ನಿಬಂಧದ ವಿಷಯವನ್ನು ನಡೆಸಿಕೊಂಡು ಹೋಗಿರುವ ರೀತಿ ಅತ್ಯಂತ ಪ್ರಶಂಸಾರ್ಹ.

ಡಾ. ಶಾಸ್ತ್ರಿಯವರು ಕನ್ನಡದ ಚಾವುಂಡರಾಯ ಪುರಾಣದ ನೇಮಿನಾಥ ಕಥಾಭಾಗ, ಕರ್ಣಪಾರ್ಯನ ನೇಮಿನಾಥಪುರಾಣ, ನೇಮಿಚಂದ್ರನ ಅರ್ಧನೇಮಿಪುರಾಣಗಳನ್ನು ಇಟ್ಟುಕೊಂಡು ಅವುಗಳನ್ನು ಮೂಲಕೃತಿಗಳೊಡನೆ ಮತ್ತು ಪರಸ್ಪರವಾಗಿ ಹೋಲಿಸಿದ್ದಾರೆ,

ಇರುವ ವ್ಯತ್ಯಾಸಗಳನ್ನು ಎತ್ತಿ ತೋರಿಸಿದ್ದಾರೆ, ಮಾರ್ಪಾಟುಗಳನ್ನು ಗುರುತಿಸಿದ್ದಾರೆ. ತನ್ಮೂಲಕ ಕನ್ನಡ ಕೃತಿಗಳ ಮೌಲ್ಯ ನಿರ್ಣಯವನ್ನೂ ಮಾಡಲು ಪ್ರಯತ್ನಿಸಿದ್ದಾರೆ. ಈ ಪ್ರಯತ್ನದಲ್ಲಿ ಸಂಪೂರ್ಣ ಯಶಸ್ವಿಯಾಗಿದ್ದಾರೆ. ಇಲ್ಲಿ ಶಾಸ್ತ್ರಿಯವರು ತೋರಿರುವ ಸಂಶೋಧನ ದೃಷ್ಟಿ, ಪಟ್ಟಿರುವ ಶ್ರಮ ಎರಡೂ ಮೆಚ್ಚುಗೆಗೆ ಪಾತ್ರವಾಗುತ್ತವೆ. ಈ ಹಿಂದೆ ನೇಮಿಚಂದ್ರನ ಬಗ್ಗೆ ಬಿ.ಎಸ್. ಕುಲಕರ್ಣಿಯವರ ನಿಬಂಧವು ಅಚ್ಚಾಗಿದ್ದು, "ಕನ್ನಡ ನೇಮಿನಾಥ ಚರಿತ್ರೆಗಳ ಮೇಲೆ ಈವರೆಗೆ - 1969 - ಒಂದೊಂದೂ ಕೃತಿಯನ್ನು ಕುರಿತಂತೆ ಸ್ವತಂತ್ರವಾಗಿಯಾಗಲಿ ಒಟ್ಟಿಗೆ ತೌಲನಿಕವಾಗಲಿ ಯಾವ ಕೆಲಸವೂ ನಡೆದಿರಲಿಲ್ಲ" ಎಂದು ಶಾಸ್ತ್ರಿಯವರು ಮುನ್ನುಡಿಯಲ್ಲಿ ಹೇಳಿರುವುದು ಸರಿಯಾಗಿ ತೋರುವುದಿಲ್ಲ. ಕೊನೆಯಪಕ್ಷ ಕುಲಕರ್ಣಿಯವರ ಪುಸ್ತಕದ ಹೆಸರನ್ನು ಪುಸ್ತಕಗಳ ಪಟ್ಟಿಯಲ್ಲಾದರೂ ಸೇರಿಸಬಹುದಿತ್ತು. ಕುಲಕರ್ಣಿಯವರ ನಿಬಂಧ ಒಂದು ವಿಷಯವನ್ನು ಕುರಿತು ಅಭ್ಯಾಸ ಮಾಡುವ ವ್ಯಕ್ತಿಯು ಮಾಡಿಕೊಳ್ಳುವ ಟಿಪ್ಪಣಿಗಳ ಪುಸ್ತಕವಿದ್ದಂತಿದೆಯೆಂಬುದನ್ನು ಆ ಪುಸ್ತಕವನ್ನು ಓದಿದ ಎಲ್ಲರೂ ಬಲ್ಲರು.

ನೇಮಿನಾಥ ತೀರ್ಥಂಕರನ ಕತೆ ಅನೇಕ ದೃಷ್ಟಿಗಳಿಂದ ಮುಖ್ಯವಾದುದು. ಅವನ ಕಥಾ ವೃತ್ತಾಂತದ ಜೊತೆ "ಭಾರತ ಭಾಗವತಗಳ ಕಥೆಗಳು ಸೇರಿಕೊಂಡು ಬಂದಿರುವುದೇ ಅದರ ಆಕರ್ಷಣೆಯನ್ನು ಹೆಚ್ಚಿಸಿರುವ ಒಂದು ವಿಶೇಷ ಸಂಗತಿಯಾಗಿದೆ" (ಪು 18). ಜೈನ ರಾಮಾಯಣದ ಪರಂಪರೆಯಿರುವಂತೆ ಜೈನಭಾರತದ ಪರಂಪರೆಯೂ ಇದೆ. ಜೈನಭಾರತದ ಪರಂಪರೆಯ ವೈಶಿಷ್ಟ್ಯಗಳನ್ನು ನೋಡಬಯಸುವವರು ನೇಮಿನಾಥನ ಕತೆಗಳಿಗೇ ಹೋಗಬೇಕು.

ನಿಬಂಧದ ಆರಂಭದಲ್ಲಿ ಸಂಸ್ಕೃತ ಮತ್ತು ಪ್ರಾಕೃತಗಳಲ್ಲಿ ಬಂದಿರುವ ನೇಮಿನಾಥ ಚರಿತ್ರೆಗಳ ಸಂಕ್ಷಿಪ್ತ ಸಮೀಕ್ಷೆಯಿದೆ (ಇವುಗಳಲ್ಲಿ ಜಿನಸೇನಾಚಾರ್ಯರ ಕ್ರಿ.ಶ. 783ರ ಸಂಸ್ಕೃತ ಹರಿವಂಶ ಪುರಾಣ ಮತ್ತು ಕ್ರಿ.ಶ. 898-9ರ ಗುಣಭದ್ರಾಚಾರ್ಯರ ಸಂಸ್ಕೃತ ಭಾಷೆಯ ಉತ್ತರ ಪುರಾಣಾಂತರ್ಗತ ನೇಮಿನಾಥನ ಕತೆ ಬಹು ಮುಖ್ಯವಾದುವು). ಕನ್ನಡದಲ್ಲಿ ಉಪಲಬ್ಧವಿರುವ ಎಲ್ಲ ನೇಮಿನಾಥ ಸಂಬಂಧಿ ಕೃತಿಗಳನ್ನೂ ಇಲ್ಲಿ ಪರಿಚಯಮಾಡಿ ಕೊಟ್ಟಿದ್ದಾರೆ. ಈ ಮಾಲಿಕೆಯಲ್ಲಿ ಕನ್ನಡದಲ್ಲಿ ನಮಗೆ ತಿಳಿದಮಟ್ಟಿಗೆ ಮೊದಲ ಗುಣವರ್ಮನ (ಸು. ಕ್ರಿ.ಶ. 900) 'ಹರಿವಂಶ'ವೇ ಮೊದಲನೆಯದು. ಈ ಗ್ರಂಥ ದೊರಕದಿದ್ದರೂ ಇದರ ಕೆಲವು ಪದ್ಯಗಳು ಮುಂದಿನ ಸಂಕಲನಗಳಲ್ಲಿ ಉಕ್ತವಾಗಿವೆ. ಹೆಸರಿನ ಸಾಮ್ಯದ ಮೇಲೆ, ಜಿನಸೇನರ ಹರಿವಂಶವೇ ಇದಕ್ಕೂ ಮೂಲವಾಗಿರಬಹುದೆಂದು ತರ್ಕಿಸಿದ್ದಾರೆ (ಪು. 47). ಮೇಲೆ ತಿಳಿಸಿದಂತೆ, ಮುಖ್ಯವಾಗಿ ಕನ್ನಡದ ಮೂರು ಕೃತಿಗಳನ್ನು ಮೂಲಕೃತಿಗಳೊಡನೆ ಹೋಲಿಸಿ ವಿವೇಚಿಸಿರುವುದೇ ಈ ನಿಬಂಧದ ಪ್ರಮುಖ ಭಾಗ. ಉಪಸಂಹಾರ ಭಾಗದಲ್ಲಿ ತಮ್ಮ ಒಟ್ಟು ವಿವೇಚನೆಯ ಸಾರಾಂಶವನ್ನು ಕೊಟ್ಟಿದ್ದಾರೆ - ಮುಖ್ಯವಾಗಿ ಚಾವುಂಡರಾಯ, ಕರ್ಣಪಾರ್ಯ, ನೇಮಿಚಂದ್ರರ ಕತೆಗಳು ಹೇಗೆ ತಮ್ಮ ತಮ್ಮ ವೈಶಿಷ್ಟ್ಯಗಳನ್ನು ಕಾಯ್ದುಕೊಂಡಿವೆ ಎಂಬುದನ್ನು ಎತ್ತಿ ತೋರಿಸಿದ್ದಾರೆ. ಈ ಸಾರಾಂಶ ತೀರಾ ಅಗತ್ಯವಾಗಿತ್ತು ಎಂದು ನಮಗೆ ಅನ್ನಿಸಿದೆ. ಸುಬ್ರಹ್ಮಣ್ಯಂ ಮತ್ತು ಶಾಸ್ತ್ರಿಗಳವರ ಕೃತಿಗಳನ್ನು ಓದಿದ ಮೇಲೆ, ತೌಲನಿಕ ಅಧ್ಯಯನಗಳ ಕೆಲಸವು ಒಂದು ದೃಷ್ಟಿಯಿಂದ ಸುಲಭವೂ ಹೌದು, ಹಾಗೇ ಕಷ್ಟವೂ

ಹೌದು ಎಂದು ಭಾಸವಾಗುತ್ತದೆ. ಆದರೆ ಅವುಗಳನ್ನು ಓದುವುದು ಕಷ್ಟದ ಕೆಲಸವೇ. ಕಥೆ ಓದುವುದು ಸಂತೋಷದ ಕೆಲಸ ನಿಜ. ಆದರೆ ಕಥೆಗಳನ್ನು ಪರಸ್ಪರ ಹೋಲಿಸಿ ಬರೆದದ್ದನ್ನು ಓದಲು ತೀರಾ ತಾಳ್ಮೆ ಬೇಕು. ಎಚ್ಚರಿಕೆಯಿಂದ ಓದಿದರೂ ಒಟ್ಟು ವಿಷಯದ ಗ್ರಹಿಕೆಯಾಯಿತೆಂದು ಹೇಳುವುದೂ ಕಷ್ಟವಾಗುತ್ತದೆ. ಈ ದೃಷ್ಟಿಯಿಂದ ಶಾಸ್ತ್ರಿಯವರು ಓದುಗರ ದೃಷ್ಟಿಯಿಂದ ಒಂದು ಅನುಕೂಲವನ್ನು ಒದಗಿಸಿಕೊಟ್ಟಿದ್ದಾರೆ. ಪುಸ್ತಕದ ಕೊನೆಯಲ್ಲಿ ವಿಸ್ತಾರವಾದ ಶಬ್ದಸೂಚಿಯ ಅಗತ್ಯವಿದ್ದಿತು.

ತೌಲನಿಕ ಅಧ್ಯಯನಗಳಿಗೆ ಮಾದರಿಯಾಗಬಲ್ಲಂತಹ ಶ್ರೇಷ್ಠ ಗ್ರಂಥವೊಂದನ್ನು ರಚಿಸಿದ್ದಕ್ಕಾಗಿ ಡಾ. ಶಾಸ್ತ್ರಿಯವರನ್ನು ಹೃತ್ಪೂರ್ವಕವಾಗಿ ಅಭಿನಂದಿಸಬೇಕು.

ಈಚೆಗೆ ಕನ್ನಡ ಸಂಶೋಧನ ಕ್ಷೇತ್ರದಲ್ಲಿ ಪ್ರಕಟವಾಗಿರುವ ಕೃತಿಗಳಲ್ಲಿ ಡಾ. ಎಂ.ಎಂ. ಕಲಬುರ್ಗಿಯವರ **ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ**ವು ಒಂದು ಗಮನಾರ್ಹ ಗ್ರಂಥವಾಗಿದೆ. ವಿಸ್ತಾರವಾದ ವ್ಯಾಸಂಗ, ಖಚಿತವಾದ ವಿಷಯ ಪರಿಜ್ಞಾನ, ಸಂಶೋಧನ ತತ್ವಗಳ ಗ್ರಹಿಕೆ, ಹೊಸದನ್ನು ಹೇಳಬೇಕೆನ್ನುವ ಹಂಬಲ - ಇವುಗಳಿಂದಾಗಿ ಕಲಬುರ್ಗಿಯವರು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಕೆಲಸಮಾಡುತ್ತಿರುವವರು ಸ್ವಾಗತಿಸುವಂತಹ ಮೌಲಿಕ ಕೃತಿಯೊಂದನ್ನು ನೀಡಲು ಸಮರ್ಥರಾಗಿದ್ದಾರೆ.

'ಕವಿರಾಜಮಾರ್ಗದ ಪರಿಸರ' ಎಂಬುದಕ್ಕೆ ಎರಡು ಗಡಿಗಳನ್ನು ನಿರ್ಮಿಸಿಕೊಂಡಿದ್ದಾರೆ. ಕವಿರಾಜಮಾರ್ಗಕ್ಕಿಂತ ಹಿಂದಿನ ಸಾಹಿತ್ಯ - ಅದರ ಗಡಿ ಅನಿರ್ದಿಷ್ಟ ; ಮತ್ತು ಕವಿರಾಜಮಾರ್ಗಕ್ಕಿಂತ ಈಚೆಗೆ ಪಂಪನವರೆಗೆ, ಆದರೆ ಪಂಪನನ್ನು ಬಿಟ್ಟು. ಈ ಅವಧಿಯಲ್ಲಿ ದೊರಕುವ ಕೃತಿಗಳು ಎರಡು ಮಾತ್ರ : ಒಂದು 'ಕವಿರಾಜಮಾರ್ಗ', ಮತ್ತೊಂದು 'ವಡ್ಡಾರಾಧನೆ'. ಇವೆರಡೂ ಇಂದಿಗೂ ಸಮಸ್ಯಾತ್ಮಕಗಳಾಗಿವೆ. ಕವಿರಾಜಮಾರ್ಗದ ಕಾಲದ ಬಗ್ಗೆ ಅಂತಹ ಭಿನ್ನಾಭಿಪ್ರಾಯಗಳಿಲ್ಲ. ಆದರೆ ಅದರ ಕರ್ತೃತ್ವ ತೀವ್ರ ಭಿನ್ನಾಭಿಪ್ರಾಯಗಳಿಗೆ ಒಳಗಾಗಿದೆ. 'ವಡ್ಡಾರಾಧನೆ'ಯ ಕಾಲ, ಹೆಸರು, ಕರ್ತೃತ್ವ, ಮೂಲ ಆಕರಗಳೆಲ್ಲವೂ ವಿವಾದಕ್ಕೆ ಗುರಿಯಾಗಿವೆ. ಇದರ ಕಾಲ ಸು. 920 ಎಂಬ ಡಾ. ಡಿ.ಎಲ್. ನರಸಿಂಹಾಚಾರ್ಯರ ಅಭಿಪ್ರಾಯವನ್ನೇ ಕಲಬುರ್ಗಿಯವರೂ ಒಪ್ಪಿರುವುದರಿಂದ ಈ ಕೃತಿ ಅವರ ಅಧ್ಯಯನದ ವ್ಯಾಪ್ತಿಗೆ ಸೇರುತ್ತದೆ. ಈಚೆಗೆ, ಡಾ. ಎ.ಎನ್. ಉಪಾಧ್ಯೆಯವರು ಹೊಸ ಆಧಾರವೊಂದಿಗೆ ಅದು ಪಂಪೋತ್ತರ ಯುಗಕ್ಕೆ ಬರುತ್ತದೆಯೆಂದು ವಾದಿಸಿರುವುದನ್ನು ಇಲ್ಲಿ ಸ್ಮರಿಸಬಹುದು. 'ವಡ್ಡಾರಾಧನೆ'ಯ ಭಾಷೆಯ ಮೇಲೆ ಪಂಪನ ಪ್ರಭಾವವನ್ನು ಗುರುತಿಸಲು ಅವಕಾಶವಿದೆ. ಹೀಗೆ 'ವಡ್ಡಾರಾಧನೆ'ಯು ಪಂಪನಿಗಿಂತ ಈಚಿನದೆಂದು ನಿರ್ಣೀತವಾದರೆ ಆಗ ಆ ಕೃತಿ ಈ ನಿಬಂಧಕ್ಕೆ ಹೊರಗಾಗುತ್ತದೆ. ಉಳಿದಂತೆ ಕಲಬುರ್ಗಿಯವರು ಆರಿಸಿಕೊಂಡಿರುವ ಅವಧಿಗೆ ಸಂಬಂಧಿಸಿದ ಎಲ್ಲ ಸಾಹಿತ್ಯಕ ವಿಷಯಗಳೂ ಒಂದಲ್ಲ ಒಂದು ರೀತಿಯಲ್ಲಿ ವಿವಾದಾಸ್ಪದವಾಗಿವೆ. ಹೆಚ್ಚೆಂದರೆ ಒಂದು ದೊಡ್ಡ ಲೇಖನಕ್ಕೆ (Essay) ವಸ್ತುವಾಗಬಲ್ಲುದೆಂದು ಸಾಮಾನ್ಯವಾಗಿ ಭಾವಿಸಲಾಗುವ ವಿಷಯವನ್ನು ನಿಬಂಧಕ್ಕೆ (thesis)

ಆರಿಸಿಕೊಂಡಿರುವುದು ಮೇಲ್ನೋಟಕ್ಕೆ ಆಶ್ಚರ್ಯವುಂಟುಮಾಡುತ್ತದೆ. ಆದರೆ ನಿಬಂಧವನ್ನು ಒಳಹೊಕ್ಕು ನೋಡಿದಾಗ ಮಾತ್ರ ಎಷ್ಟು ಬಗೆಯ ಸಮಸ್ಯೆಗಳು, ಕೆಲವಂತೂ ಎಂದೆಂದಿಗೂ ಹಾಗೇ ಉಳಿಯಬಹುದಾದ ಸಮಸ್ಯೆಗಳು ಇವೆ ಎನ್ನುವುದರ ಅರಿವಾಗುತ್ತದೆ. ಕಲಬುರ್ಗಿಯವರು ಒಂದೊಂದು ಸಮಸ್ಯೆಯನ್ನು ಎತ್ತಿ ತೋರಿಸಿದ್ದಾರೆ, ವಿಶ್ಲೇಷಿಸಿದ್ದಾರೆ, ಈವರೆಗೆ ಆ ಬಗ್ಗೆ ನಡೆದಿರುವ ಚರ್ಚೆಗಳ ಸಾರಾಂಶವನ್ನು - ಕೆಲವೆಡೆ ಅನಗತ್ಯ ವಿಸ್ತಾರದೊಡನೆ ಕೊಟ್ಟಿದ್ದಾರೆ, ಅನೇಕ ಪ್ರಶ್ನೆಗಳನ್ನು ಕೇಳಿದ್ದಾರೆ; ಸಾಧ್ಯವಾದೆಡೆಗಳಲ್ಲಿ ಪರಿಹಾರವನ್ನು ಸೂಚಿಸಿದ್ದಾರೆ. ಆದರೆ ಅವರು ಹೊಸ ತೀರ್ಮಾನಗಳನ್ನು ಕೊಟ್ಟಿರುವುದು ಕಡಮೆಯೆಂದೇ ಹೇಳಬೇಕಾಗುತ್ತದೆ. ಹೆಚ್ಚೆಂದರೆ ಅವರದೂ ಒಂದು ಊಹೆಯಾಗಿ, ಅಭಿಪ್ರಾಯವಾಗಿ ನಿಲ್ಲಬಹುದು. ಇದಕ್ಕೆ ಕಾರಣ ವಿಷಯದ ಜಟಿಲತೆ ಅಥವಾ ಸಾಮಗ್ರಿಯ ತೀವ್ರ ಅಭಾವ.

ಉದಾಹರಣೆಗೆ ಕವಿರಾಜಮಾರ್ಗದ ಕರ್ತೃತ್ವವನ್ನೇ ತೆಗೆದುಕೊಳ್ಳಬಹುದು. ದುರ್ಗಸಿಂಹನು 'ಶ್ರೀವಿಜಯ' ಎಂಬ ಕವಿಯನ್ನು ಸ್ತೋತ್ರಮಾಡಿದ್ದಾನೆ.

ಶ್ರೀವಿಜಯರ ಕವಿಮಾರ್ಗಂ । ಭಾವಿಪ ಕವಿಜನದ ಮನಕೆ ಕನ್ನಡಿಯುಂ ಕೈ।
ದೀವಿಗೆಯುಮಾದುವದಜ಼ಿಂ । ಶ್ರೀವಿಜಯರ್ ದೇವರವರನೇವಣ್ಣಿಪುದೋ ॥

ಇಲ್ಲಿ ಶ್ರೀ ವಿಜಯನ ಬಗ್ಗೆ ಬಹುವಚನ ಪ್ರಯೋಗ ಮಾಡಿರುವುದನ್ನು, 'ದೇವರ್' ಎಂದು ಮತ್ತೆ ಅವನನ್ನು ವಿಶೇಷಿಸಿರುವುದನ್ನು ಗಮನಿಸಿದರೆ, ಆತ ಒಬ್ಬ ಸನ್ಯಾಸಿಯಂತಹ ವ್ಯಕ್ತಿ ಎಂದು ಹೇಳಬೇಕೇ ಹೊರತು, ಲೌಕಿಕ ವರ್ಗದ ವ್ಯಕ್ತಿಯಲ್ಲವೆಂಬುದು ಸ್ಪಷ್ಟವಾಗುತ್ತದೆ. (ಇಲ್ಲಿ "ಪರಮ ಶ್ರೀವಿಜಯ ಕವೀಶ್ವರ...." ಎಂಬ ಕವಿರಾಜಮಾರ್ಗದ ಪದ್ಯದಲ್ಲಿ 'ಪರಮ' ಎಂಬುದು 'ಶ್ರೀವಿಜಯ'ನಿಗೆ ಮಾತ್ರ ವಿಶೇಷಣವಿರಬೇಕೆಂದೆನ್ನಿಸುತ್ತದೆ). ನಾನು ಸೂಚಿಸಬೇಕೆಂದಿರುವ ಸಮಸ್ಯೆ - 'ದೀವಿಗೆಯುಮ್ ಆದುವು' ಎಂಬಲ್ಲಿನ ಕ್ರಿಯಾಪದದ ಬಹುವಚನಕ್ಕೆ ಸಂಬಂಧಿಸಿದ್ದು. "ಕವಿಮಾರ್ಗಂ....ಆದುವು" ಎಂಬಲ್ಲಿ "ಕವಿಮಾರ್ಗಂ" ಎಂಬುದೇ ಕರ್ತೃಪದ, 'ಆದುವು' ಕ್ರಿಯಾಪದ. ಆದ್ದರಿಂದ, "ಕವಿಮಾರ್ಗಂ" ಎಂಬುದು ಒಂದು ಕೃತಿಯನ್ನು ಸೂಚಿಸುವುದಿಲ್ಲ. ಆ ಕಾರಣದಿಂದ ಕವಿರಾಜಮಾರ್ಗಕ್ಕೆ ಮೂಲವಾಗಿದ್ದಿರಬಹುದಾದ ಕೃತಿ ಅದು ಎಂಬ ಕಲಬುರ್ಗಿಯವರ ವಾದ ಅಷ್ಟೊ ಸಡಿಲವಾಗುತ್ತದೆ. 'ಕವಿಮಾರ್ಗ' 'ಕಾವ್ಯಮಾರ್ಗ' ಎಂಬುವು 'ಸಂಪ್ರದಾಯ' (tradition, heritage) ಎಂಬರ್ಥದಲ್ಲಿ ಬಳಕೆಯಾಗುತ್ತಿದ್ದುವೆಂಬುವಕ್ಕೆ ಈ ಪದ್ಯವನ್ನು ನೋಡಬಹುದು.

ಛಂದಮಿದಾವುದೆಂದೊಡಿಜ಼ಿವರ್, ಪದಬಂಧದೊಳೀ ಪ್ರಯೋಗಮೆಂ
ತೆಂದೊಡೆ ಬಯ್ವರ್, ಆವ ಕವಿಮಾರ್ಗಮಿದೆಂದೊಡೆ ಪೊಯ್ವರ್, ಅರ್ಥಮೇ

ನೆಂದೊಡೆ ತೊಂಡು ಭಂಡಗೆಡೆದುಟ್ಟುದನಿಕ್ಕುವರ್, ಆವ ನೀತಿ ಪೇ
ಱೆಂದೊಡೆ ಕೊಲ್ವರ್ ಈಗಳಿನ ದೇಸಿಗೆ ಬಿಟ್ಟಿ ಮಹಾಕವೀಶ್ವರರ್ ॥ *

ಇಲ್ಲಿ 'ಕವಿ ಮಾರ್ಗ' ಎಂದರೆ tradition ಎಂದೇ ಅರ್ಥ. ಆದ್ದರಿಂದ ಶ್ರೀ ವಿಜಯ ತನ್ನ ಅನೇಕ ಕೃತಿಗಳ ಮೂಲಕ ನಿರ್ಮಿಸಿದ 'ಕವಿಮಾರ್ಗ'ವು (ಇಲ್ಲಿ ಬಹುವಚನದ ಬದಲು ಏಕವಚನ ಬಂದಿರಬಹುದು) ಅನೇಕ ಕವಿಗಳಿಗೆ ಕನ್ನಡಿಯೂ, ಕತ್ತಲೆಯ ದಾರಿದೀಪವೂ ಆದುವೆಂಬುದು ಹಿಂದಿನ ಪದ್ಯದ ಅರ್ಥ. "Durgasimha's phrase ಶ್ರೀ ವಿಜಯರ ಕವಿಮಾರ್ಗ may refer to his poetic manner and style, not to any work on ಮಾರ್ಗ" ಎಂಬ ಬಿ.ಎಂ. ಶ್ರೀ.ಯವರ ಮಾತು ಸರಿಯಲ್ಲವೆಂದು ವಾದಿಸುತ್ತ, ಕಲಬುರ್ಗಿಯವರು "....'ಶ್ರೀ ವಿಜಯರ ಕವಿಮಾರ್ಗಂ' ಎಂಬುದಕ್ಕೆ ಬದಲು ಶ್ರೀ ವಿಜಯರ 'ಕಾವ್ಯ ಮಾರ್ಗಂ' ಎಂದಿದ್ದರೆ ಮಾತ್ರ 'ಶ್ರೀ'ಯವರ ಮಾತು ಸತ್ಯವಾಗಬಹುದಿತ್ತು" ಎಂದು ವಾದಿಸುತ್ತಾರೆ. 'ಕವಿಮಾರ್ಗ' ಎಂಬುದಕ್ಕೆ 'ಶ್ರೀ'ಯವರು ಕೊಟ್ಟ ವ್ಯಾಖ್ಯಾನವೇ ಒಟ್ಟು ಸ್ಥೂಲಾರ್ಥದಲ್ಲಿ ಸರಿಯೆನ್ನಿಸುತ್ತದೆ. ಮಣ್ಣೆ ತಾಮ್ರ ಶಾಸನದಲ್ಲಿ (ಕ್ರಿ.ಶ. 802) ಬರುವ 'ಶ್ರೀ ವಿಜಯ' ಎಂಬ ಸಾಮಂತ ದೊರೆಯೂ ದುರ್ಗಸಿಂಹ ಹೇಳುವ 'ಶ್ರೀ ವಿಜಯರೂ' ಅಭಿನ್ನರಿರಬಹುದು ಎಂದು ಕಲಬುರ್ಗಿಯವರು ಅಭಿಪ್ರಾಯಪಡುತ್ತಾರೆ (ಪು. 32). ಶಾಸನೋಕ್ತ ವ್ಯಕ್ತಿಯನ್ನು ಮಹಾನುಭಾವನೆಂದೂ, ಮಹಾಜಿನಭಕ್ತನೆಂದೂ ರಸಿಕರಲ್ಲಿ ಅಗ್ರಣಿಯೆಂದೂ ಕಾವ್ಯರಚನೆಗಳಿಗೆ 'ಸ್ರಷ್ಟಾ' (Creator) ಎಂದೂ ಬಣ್ಣಿಸಿರುವುದನ್ನು ಎತ್ತಿ ತೋರಿಸಿದ್ದಾರೆ. ದುರ್ಗಸಿಂಹನು ಶ್ರೀವಿಜಯನ ಬಗ್ಗೆ ಬಳಸಿರುವ ಬಹುವಚನ 'ದೇವರ್' ಎಂಬ ವಿಶೇಷಣವು ಶಾಸನೋಕ್ತ ರಾಜನನ್ನು ದುರ್ಗಸಿಂಹ ಹೇಳುವ ವ್ಯಕ್ತಿಯೊಡನೆ ಸಮೀಕರಿಸಲು ಅಡ್ಡಿಪಡಿಸುತ್ತದೆ. ಶಾಸನಗಳಲ್ಲಿ ಸಮಾನ ಮನೋಭಾವದ ಒಂದೇ ಹೆಸರಿನ ಭಿನ್ನ ವ್ಯಕ್ತಿಗಳು ದೊರಕುವುದಕ್ಕೆ ಬೇಕಾದಷ್ಟು ಉದಾಹರಣೆಗಳಿರುವುದರಿಂದ ಬೇರೆ ಸಮರ್ಥ ಆಧಾರಗಳು ದೊರೆಯುವವರೆಗೆ ಮೇಲಿನ ಸಮೀಕರಣವನ್ನು ಸಂದೇಹದಿಂದ ನೋಡಬೇಕಾಗಿದೆ. 'ಶ್ರೀ ವಿಜಯರ್ ದೇವರ್' ಬಹುಶಃ ಒಬ್ಬ ಸನ್ಯಾಸಿ.

ಕವಿರಾಜಮಾರ್ಗದ ಹಸ್ತಪ್ರತಿಗಳಲ್ಲಿ ದೊರಕುವ ಪಾಠಭೇದಗಳನ್ನು ವಿಶ್ಲೇಷಿಸಿ, ಅದರ ಆಧಾರದ ಮೇಲೆ, ಇತರ ಸೂಚನೆಗಳನ್ನಿಟ್ಟುಕೊಂಡು ಶ್ರೀ ವಿಜಯ ತಾನು ಮೊದಲು ಬರೆದ 'ಕವಿಮಾರ್ಗ' ಎಂಬ ಗ್ರಂಥದಲ್ಲಿ ನೃಪತುಂಗನ ಅಭಿಪ್ರಾಯಗಳನ್ನು ಸೇರಿಸಿ ಪರಿಷ್ಕಾರಗೊಳಿಸಿ 'ಕವಿರಾಜಮಾರ್ಗ'ವನ್ನು ನಿರ್ಮಿಸಿದ ಎಂಬುದು ಕಲಬುರ್ಗಿಯವರ

---

* ಇಲ್ಲಿಯ 'ಮಹಾ ಕವೀಶ್ವರರ್' ಎಂಬ ವ್ಯಂಗ್ಯ ಗಮನಾರ್ಹ. 'ಈಗಳಿನ' ಎಂಬುದನ್ನು ನೋಡಿದರೆ ಈ ಪದ್ಯದಲ್ಲಿ ಸೂಕ್ತಿ ಸುಧಾರ್ಣವಕ್ಕಿಂತ ಹಿಂದೆ ಇದ್ದ ಹರಿಹರ, ರಾಘವಾಂಕಾದಿ ಕವಿಗಳನ್ನು ವ್ಯಂಗ್ಯ ಮಾಡಿರುವಂತೆ ತೋರುತ್ತದೆ. 'ದೇಸಿ' ಎಂಬುದು ಪ್ರಯೋಗಶೀಲತೆಯನ್ನು 'ಮಾರ್ಗ' ಎಂಬುದು ಎಲ್ಲರೂ ಒಪ್ಪಿ ಅನುಸರಿಸುತ್ತ ಬಂದಿರುವ ಸಂಪ್ರದಾಯವನ್ನು ಸೂಚಿಸುವಂತೆ ಕಾಣುತ್ತದೆ. ಮೇಲಿನ ಪದ್ಯವು ಸಂಪ್ರದಾಯ ಮತ್ತು ಪ್ರಯೋಗಗಳ ತಿಕ್ಕಾಟವನ್ನು ಹೇಳುವುದಲ್ಲದೆ, ಅದು ಎಲ್ಲ ಕಾಲಕ್ಕೂ - ಆಧುನಿಕ ಕಾಲಕ್ಕೂ - ಅನ್ವಯಿಸಲು ಬರುವಂತಿದೆ.

ನಿಲುವು. ಜೈನನಾದ ಶ್ರೀ ವಿಜಯನ ಕೃತಿಯಲ್ಲಿ ವೈದಿಕ ಅಂಶಗಳು ಕಾಣಿಸಿಕೊಳ್ಳಲು ವೈದಿಕನಾದ ನೃಪತುಂಗ ದೊರೆಯೇ 'ಪ್ರತ್ಯಕ್ಷ ಇಲ್ಲವೆ ಅಪ್ರತ್ಯಕ್ಷ ಹೊಣೆಗಾರನಾಗಿರಬಹುದು' ಎನ್ನುತ್ತಾರೆ (ಪು. 42). ಕಲಬುರ್ಗಿಯವರ ವಾದ ನಿಜವಾಗಿದ್ದರೆ, ನೃಪತುಂಗನ ಪ್ರಭಾವ ಇಷ್ಟಕ್ಕೆ ಮಾತ್ರ ಸೀಮಿತವಾಗಿರಲಾರದು. ಶಾಸ್ತ್ರಕ್ಕೆ ಅವನದೇ ಕೊಡುಗೆ ಇದ್ದಿರಬೇಕು. ಕವಿರಾಜಮಾರ್ಗದ ಹಸ್ತಪ್ರತಿಗಳಲ್ಲಿ ಯಾವುದಾದರೂ ಒಂದು ಪ್ರತಿಯಲ್ಲಿ ಕೇವಲ ಜೈನ ವಾತಾವರಣವಿರುವಂತಹುದು ದೊರಕುವವರೆಗೆ, ಒಂದು ಹಸ್ತಪ್ರತಿಯಲ್ಲಿ ಕೇವಲ ಶಾಸ್ತ್ರ ಸಂಬಂಧಿಯಾದ ಸಾಂಪ್ರದಾಯಕ ವಿಚಾರಗಳಿದ್ದು ಇನ್ನೊಂದರಲ್ಲಿ ಹೊಸ ಅಂಶಗಳು ಸೇರ್ಪಡೆಯಾಗಿವೆ ಎಂದು ಸ್ಪಷ್ಟವಾಗಿ ತೋರಿಸಲು ಸಾಧ್ಯವಾಗುವವರೆಗೆ ಕಲಬುರ್ಗಿಯವರದು ಇಲ್ಲಿಯವರೆಗೆ ನಡೆದಿರುವ ಚರ್ಚೆಗಳಂತಹುದೇ ಇನ್ನೊಂದು ಎಂದು ನಾವು ಭಾವಿಸಬೇಕಾಗುತ್ತದೆ. (ಈಚೆಗೆ ಭೀಮರಾವ್ ಚಿಟಗುಪ್ಪಿಯವರು ಸ್ವತಂತ್ರವಾಗಿ ಕಲಬುರ್ಗಿಯವರ ತೀರ್ಮಾನದಂತಹ ತೀರ್ಮಾನಕ್ಕೆ ಬಂದಿದ್ದಾರೆ. ಅವರ ಪ್ರಕಾರ ಶ್ರೀವಿಜಯ ಮತ್ತು ಜಿನಸೇನಾಚಾರ್ಯರು ಅಭಿನ್ನರು).

ವಡ್ಡಾರಾಧನೆಯ ಕರ್ತೃತ್ವ ಕೃತಿನಾಮಗಳ ಬಗ್ಗೆ ಕಲಬುರ್ಗಿಯವರು ಕುತೂಹಲವನ್ನು ಕೆರಳಿಸಿದ್ದಾರೆ. ಕನ್ನಡ ವಡ್ಡಾರಾಧನೆಗೆ ಮೂಲ ಈಗ ಸಾಮಾನ್ಯವಾಗಿ ಭಾವಿಸಿರುವಂತೆ ಸಿವಜ್ಜ ಕೃತ 'ಆರಾಧನಾ' ಅಲ್ಲವೆಂದೂ, ಸಮಂತಭದ್ರನ ಶಿಷ್ಯ ಶಿವಕೋಟಿ ರಚಿತ 'ಮೂಲಾರಾಧನಾ' ಎಂದೂ (ಈ ಕೃತಿ ಅನುಪಲಬ್ಧ) ವಾದಿಸುತ್ತಾರೆ : ಇದು ಹೊಸ ಸಂಗತಿ. ವಡ್ಡಾರಾಧನೆಯ ನಿಜವಾದ ಹೆಸರು 'ಆರಾಧನಾ ಕರ್ಣಾಟ ಟೀಕಾ' ಎಂದೂ, ಕರ್ತೃ ಭ್ರಾಜಿಷ್ಣು ಎಂದೂ ವಾದಿಸಿರುವುದು ಹೊಸ ಸಂಗತಿ. "ಭ್ರಾಜಿಷ್ಣೋರಾರಾಧನಾ" ಎಂಬುದಕ್ಕೆ 'ಭ್ರಾಜಿಷ್ವಾರಾಧನಾ' ಎಂಬ ಪಾಠಾಂತರವಿರುವುದನ್ನು ಪ್ರೊ. ಎಂ.ವಿ. ಸೀತಾರಾಮಯ್ಯನವರು ಕಲಬುರ್ಗಿಯವರ ಪ್ರಸಕ್ತ ಗ್ರಂಥದ ತಮ್ಮ ವಿಮರ್ಶೆಯಲ್ಲಿ ಗಮನಿಸಿ (ಕನ್ನಡ ನುಡಿ. ಆಗಸ್ಟ್ 1973), "ಒಂದು ಮುಖ್ಯ ಪಾಠ ಸಂದಿಗ್ಧವಾಗಿರುವಾಗ, ಕಲಬುರ್ಗಿಯವರು ವಡ್ಡಾರಾಧನೆಯ ಕರ್ತೃ ಭ್ರಾಜಿಷ್ಣು ಎಂದು ಹೇಳಿರುವುದನ್ನು ಒಂದು ಊಹೆಯಾಗಿ ಪರಿಶೀಲಿಸಬಹುದೇ ಹೊರತು, ತೀರ್ಮಾನವಾಗಿ ಅಂಗೀಕರಿಸಲು ಸಾಧ್ಯವಿಲ್ಲ" ಎಂದು ಹೇಳಿರುವುದು ಉಚಿತವಾಗಿ ತೋರುತ್ತದೆ.*

ತಾವು ಆರಿಸಿಕೊಂಡಿರುವ ಕಾಲದ ಇತರ ಕವಿಗಳ ಬಗ್ಗೆ ಈಗಾಗಲೇ ನಮಗೆ ತಿಳಿದು ಬಂದಿರುವ ಸಂಗತಿಗಳ ಸಾರಾಂಶವನ್ನು ಕೊಟ್ಟಿದ್ದಾರೆ. ಪಂಪನಿಂದ ಈಚಿನ ಕೃತಿಗಳಲ್ಲಿ ಸಿಗುವ ಧವಳದ ಹಾಡು, ಅಂಟಿಸುಂಟಿ, ಜೋಕುಮಾರನ ಹಾಡು, ಬೀರನ ಕಥೆ ಮುಂತಾದುವುಗಳನ್ನು ಸಮೀಕ್ಷಿಸಿ, ಇವು ಪಂಪಪೂರ್ವಯುಗದಲ್ಲೂ ಇದ್ದಿರಬೇಕು ಎನ್ನುತ್ತಾರೆ.

---

*ವಡ್ಡಾರಾಧನೆಯ ಒಂದು ಕತೆಯ ಆರಂಭದಲ್ಲಿ "ಈ ಕಥೆಯಂ ಭ್ರಾಜಿಷ್ಣ್ವಾರಾಧನ ಕಥೆಯೊಳ್ ಪೇೞ್ದುದು" ಎಂಬ ಮಾತಿದೆ. ವಡ್ಡಾರಾಧನೆ ಕೃತಿಕಾರ ತನ್ನ ಒಂದು ಕಥೆಯ ಮೂಲ ಭ್ರಾಜಿಷ್ಣುವಿನ ಕೃತಿ ಎಂದಿರುವಾಗ, ಭ್ರಾಜಿಷ್ಣುವೇ ವಡ್ಡಾರಾಧನೆಯ ಕೃತಿಕಾರ ಆಗಿರುವುದು ಅಸಾಧ್ಯ.

ಈ ಮಾತನ್ನು ನಿರಾಕರಿಸಲು ಸಾಧ್ಯವಿಲ್ಲ - ಇವೆಲ್ಲ ಜನಪದ ಸಾಹಿತ್ಯ ಪ್ರಕಾರಗಳು. ಎಲ್ಲ ಕಾಲಕ್ಕೂ ಒಂದಲ್ಲ ಒಂದು ರೀತಿಯಲ್ಲಿ ಇರತಕ್ಕುವೇ. ಆದರೆ, ಅವುಗಳ ಚರ್ಚೆ ಈ ನಿಬಂಧದಲ್ಲಿ ಅನಗತ್ಯವೆಂಬಂತೆ ಬಂದಿದೆಯೆಂದು ಭಾಸವಾಗುತ್ತದೆ.

ಚತ್ತಾಣ - ಬೆದಂಡೆಗಳ ಬಗ್ಗೆಯಾಗಲಿ, ಕವಿರಾಜಮಾರ್ಗೋಕ್ತ ಕವಿಗಳ ಬಗ್ಗೆಯಾಗಲಿ ಹೆಚ್ಚಿನ ಬೆಳಕನ್ನು ಬೀರಲು ಸಾಧ್ಯವಾಗಿಲ್ಲ. ದುರ್ವಿನೀತನ ಕಿರಾತಾರ್ಜುನೀಯ ಟೀಕೆಯ ಭಾಷೆಯ ಬಗ್ಗೆ ಸಂದೇಹವನ್ನು ಉಳಿಸಿಕೊಳ್ಳುವುದು ಒಳ್ಳೆಯದು ಎಂದು ಕಲಬುರ್ಗಿಯವರು ಸೂಚಿಸಿರುವುದು (ಪು. 80) ಸೂಕ್ತವಾಗಿದೆ. ಅವರು ಬೇರೆ ವಿದ್ವಾಂಸರ ಅಭಿಪ್ರಾಯಗಳನ್ನು ಸಂಗ್ರಹಿಸಿಕೊಡುತ್ತಾರೆ - ಸಮರ್ಪಕವಾಗಿ. ಆದರೆ, ಎಲ್ಲಿ ನೂತನ ವ್ಯಾಖ್ಯಾನವನ್ನು ನಿರೀಕ್ಷಿಸುತ್ತೇವೆಯೋ ಅಲ್ಲಿ ಕಲಬುರ್ಗಿಯವರು ನಿರಾಸೆಗೊಳಿಸುತ್ತಾರೆ. ಉದಾ. 'ಖಂಡಪ್ರಾಸ'ದ ಬಗ್ಗೆ (ಪು. 106), ನುಸುಳ್, ಒರ್ನುಡಿ ಎಂಬ 'ಹೊಸಬಂಧ'ಗಳ (?) ಬಗ್ಗೆ (ಪು. 117); ಬಹಳ ಕಡೆ ತೇಲಿಸಿಕೊಂಡು ಹೋಗುವ ಪ್ರವೃತ್ತಿಯಿದೆ. ಅವರಲ್ಲಿ ಸಮಸ್ಯೆಯನ್ನು ವಿಶ್ಲೇಷಿಸಿ, ಎದುರಿಸುವ ಪ್ರವೃತ್ತಿ ಹೆಚ್ಚಾಗಿ ಕಾಣುವುದಿಲ್ಲ.

'ಶಾಸನ ಸಾಹಿತ್ಯ'ದ ಬಗ್ಗೆ ಪ್ರತ್ಯೇಕ ಅಧ್ಯಾಯವಿರುವುದು ಸ್ವಾಗತಾರ್ಹ. ಕವಿರಾಜಮಾರ್ಗಕ್ಕಿಂತ ಹಿಂದಿನ ಸಾಹಿತ್ಯವನ್ನರಿಯಲು ಶಾಸನಗಳು ಸಹಕಾರಿ ಎಂಬುದನ್ನು ಗುರುತಿಸಿದ್ದಾರೆ. (ಆದರೆ ಇದೇ ಮೊದಲ ಪ್ರಯತ್ನ ಎಂಬ ಡಾ. ಆರ್.ಸಿ. ಹಿರೇಮಠರ ಅಭಿಪ್ರಾಯ ಸರಿಯಾದುದಲ್ಲ). ಈ ಭಾಗದಲ್ಲಿ ಸಾಹಿತ್ಯಕ ಮೌಲ್ಯವುಳ್ಳ ಶಾಸನಗಳನ್ನು ಕಾಲಾನುಕ್ರಮವಾಗಿ ವಿವೇಚಿಸಿದ್ದಾರೆ. ಶಾಸನ ಕವಿಗಳ ಪರಿಚಯ ಮಾಡಿಕೊಟ್ಟಿದ್ದಾರೆ. 'ಪ್ರಮುಖ ಕವಿಗಳು' ಎಂಬ ಭಾಗದಲ್ಲಿ ಈಗಾಗಲೇ ತಿಳಿದಿರುವ ಸಂಗತಿಗಳ ಸಾರಾಂಶವಿದೆ. ಹೆಚ್ಚೆಂದರೆ ಒಂದೆರಡು ಹೊಸ ಊಹೆಗಳು ಇರಬಹುದು. ಛಂದೋನುಶಾಸನದಲ್ಲಿ ಉಕ್ತವಾಗಿರುವ ಕೃತಿಗಳೆಲ್ಲ ಪಂಪಪೂರ್ವಯುಗಕ್ಕೆ ಸೇರಿದುವು ಎಂಬುದು ತೀರಾ ಅವಸರದ ತೀರ್ಮಾನ.

ತಮಗಿಂತ ಹಿಂದೆ ಬೇರೆ ಬೇರೆ ಕ್ಷೇತ್ರಗಳಲ್ಲಿ ಕೆಲಸಮಾಡಿರುವವರನ್ನು ಸ್ಮರಿಸುವಾಗ ತೋರಿರುವ ಅತಿ ಔದಾರ್ಯ ಮತ್ತು ಅದೇ ಪ್ರಮಾಣದ ಕೃಪಣತೆ ಎರಡನ್ನೂ ಮೆಚ್ಚುವುದು ಕಷ್ಟವಾಗಿದೆ. ಪುಸ್ತಕದ ಕೊನೆಯಲ್ಲಿ ಶಬ್ದಸೂಚಿ ಇಲ್ಲದಿರುವುದು ಪುಸ್ತಕದ ಉಪಯುಕ್ತತೆಯನ್ನು ಕಡಮೆಮಾಡಿದೆ.

ಏನೇ ಆದರೂ, ಈಚೆಗೆ ಕನ್ನಡದಲ್ಲಿ ಬಂದಿರುವ ಶ್ರೇಷ್ಠ ನಿಬಂಧಗಳ ಮಾಲಿಕೆಯಲ್ಲಿ ಇದೂ ಒಂದು. ತಮ್ಮ ಸಂಶೋಧನೆಯ ಉದ್ದೇಶಕ್ಕಾಗಿ ಎಲ್ಲೆಲ್ಲಿಂದ ವಿಷಯ ಸಂಗ್ರಹ ಮಾಡಿದ್ದಾರೆ ಎಂಬುದನ್ನು ನೋಡಿದರೆ, ಕಲಬುರ್ಗಿಯವರ ಅಧ್ಯಯನದ ಆಳ, ವಿಸ್ತಾರಗಳೆರಡೂ ಗೋಚರವಾಗುತ್ತವೆ. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಆಸಕ್ತರಾಗಿರುವವರೆಲ್ಲ ಬಹುಕಾಲ ಈ ಗ್ರಂಥದ ಉಪಯೋಗವನ್ನು ಪಡೆಯುತ್ತಿರುತ್ತಾರೆ ಎಂಬುದರಲ್ಲಿ ಸಂದೇಹವಿಲ್ಲ.

ವರ್ಣನಾತ್ಮಕ ಭಾಷಾ ವಿಜ್ಞಾನದ ಬಗ್ಗೆ ಕೆಲವು ವರ್ಷಗಳ ಹಿಂದೆ ಪುಸ್ತಕವನ್ನು ರಚಿಸಿದ ಡಾ. ಜೆ. ಎಸ್. ಕುಳ್ಳಿಯವರು ಅದಕ್ಕೆ ಸಂವಾದಿಯಾಗಿ **ಐತಿಹಾಸಿಕ ಭಾಷಾವಿಜ್ಞಾನ** ಎಂಬ ಇನ್ನೊಂದು ಗ್ರಂಥವನ್ನು ತಂದಿದ್ದಾರೆ. 'ವಿವರಣಾತ್ಮಕ' (ಅಥವಾ 'ವರ್ಣನಾತ್ಮಕ') ಮತ್ತು 'ಐತಿಹಾಸಿಕ' ಎಂಬುವು ಭಾಷೆಯನ್ನು ಅಭ್ಯಸಿಸುವ ಎರಡು ನಿಲುವುಗಳನ್ನು ಸೂಚಿಸುತ್ತವೆ. ಈ ಎರಡೂ ಭಾಷಾ ವಿಜ್ಞಾನ ಶಾಖೆಗಳಿಗೆ ಸಂಬಂಧಿಸಿದ ಪ್ರತ್ಯೇಕ ಗ್ರಂಥಗಳನ್ನು ಕನ್ನಡದಲ್ಲಿ ಮೊದಲು ಬರೆದ ಲೇಖಕರಾಗಿದ್ದಾರೆ, ಡಾ ಕುಳ್ಳಿಯವರು.

ಭಾಷೆ ಅಥವಾ ಭಾಷೆಗಳ ಬೆಳವಣಿಗೆಯನ್ನು ಕಾಲಾನುಕ್ರಮವಾಗಿ ಪರಿಶೀಲಿಸುವುದು ಐತಿಹಾಸಿಕ ಭಾಷಾವಿಜ್ಞಾನ. ಆದುದರಿಂದಲೇ ಭಾಷೆಯ ಸ್ವನವ್ಯತ್ಯಾಸ, ಭಾಷೆಯಲ್ಲಿ ನಡೆಯುವ ಸ್ವೀಕರಣ ಕಾರ್ಯ ಮತ್ತು ಸಾದೃಶ್ಯ ಸೃಷ್ಟಿಗಳು, ಭಾಷೆಯಲ್ಲಿರುವ ಪ್ರಾದೇಶಿಕ ಮತ್ತು ಸಾಮಾಜಿಕ ವಿಭಿನ್ನತೆಗಳು, ಒಂದೇ ವಂಶದ ಭಾಷೆಗಳ ಪರಸ್ಪರ ತುಲನೆ ಮತ್ತು ಮೂಲಭಾಷೆಯ ಪುನಾರಚನೆ ಇತ್ಯಾದಿ ಸಂಗತಿಗಳು ಐತಿಹಾಸಿಕ ಭಾಷಾವಿಜ್ಞಾನದಲ್ಲಿ ಸೇರ್ಪಡೆಯಾಗುತ್ತವೆ. ಈ ಪುಸ್ತಕದ ಇಪ್ಪತ್ತೊಂದು ಅಧ್ಯಾಯಗಳಲ್ಲಿ ಮೇಲಿನ ವಿಷಯಗಳ ವಿವರಣೆಯಿರುವುದಲ್ಲದೆ, ಕೃತಕ ಭಾಷೆಗಳಂತಹ ಸ್ವಾರಸ್ಯ ಸಂಗತಿಯೂ ಆಂತರಿಕ ಪುನರ್ವಿರಚನೆಯಂತಹ ತಾಂತ್ರಿಕ ವಿಷಯವೂ ಬಂದಿರುವುದು ಸ್ವಾಗತಾರ್ಹ ಸಂಗತಿ. 'ಜಗತ್ತಿನ ಭಾಷೆಗಳು' ಎಂಬ ಹೆಸರಿನ ಅಧ್ಯಾಯದಲ್ಲಿ ಪ್ರಪಂಚದ ಭಾಷಾವಂಶಗಳ ಮತ್ತು ಅವುಗಳಲ್ಲಿ ಸೇರ್ಪಡೆಯಾಗುವ ಭಾಷೆಗಳ ಒಂದು ಸ್ಥೂಲ ಸಮೀಕ್ಷೆಯಿದೆ. 'ಪ್ರಮಾಣಭಾಷೆ' ಯೆಂಬುದು ಸ್ವಾರಸ್ಯವನ್ನು ಹುಟ್ಟಿಸುವ ಕೊನೆಯ ಅಧ್ಯಾಯ. ಈ ಗ್ರಂಥವನ್ನು ರಚಿಸಲು ಕುಳ್ಳಿಯವರು ಬಹುವಾಗಿ ಶ್ರಮಿಸಿದ್ದಾರೆ ಎಂಬುದರಲ್ಲಿ ಅನುಮಾನವಿಲ್ಲ. ಸಾಧ್ಯವಾದ ಕಡೆಗಳಲ್ಲೆಲ್ಲ ಕನ್ನಡದಿಂದ ಉದಾಹರಣೆಗಳನ್ನು ಆರಿಸಿಕೊಳ್ಳಲು ಅವರು ಪ್ರಯತ್ನಿಸಿರುವುದು ಎದ್ದು ಕಾಣುತ್ತದೆ.

ಪುಸ್ತಕವನ್ನು ಒಮ್ಮೆ ಓದಿದಾಗ, ಲೇಖಕರು ಶ್ರಮದ ಜೊತೆಗೆ ಸ್ವಲ್ಪ ಎಚ್ಚರವನ್ನು ವಹಿಸಿದ್ದರೆ ಈ ಗ್ರಂಥ ಐತಿಹಾಸಿಕ ಭಾಷಾ ವಿಜ್ಞಾನಕ್ಕೆ ಸಂಬಂಧಿಸಿದ ಒಂದು ಪಠನೀಯ ಗ್ರಂಥವಾಗುತ್ತಿತ್ತು. ಕೆಲವು ಕಡೆಗಳಲ್ಲಂತೂ ತೀರಾ ಸಾಮಾನ್ಯವಾದ ತಪ್ಪುಗಳು ಘಟಿಸಿರುವುದು ಬಹಳ ಆಶ್ಚರ್ಯವನ್ನುಂಟುಮಾಡುತ್ತದೆ. 'ಭಾಷಿಕ ಬದಲಾವಣೆ' ಎಂಬ ಅಧ್ಯಾಯದಲ್ಲಿ ಕನ್ನಡ ಭಾಷೆಯ ಬೇರೆ ಬೇರೆ ಕಾಲದ ಮಾದರಿಗಳನ್ನು ಕೊಡುವಾಗ, ಹಲ್ಮಿಡಿ ಶಾಸನದ ಪಾಠದಲ್ಲಿ ಏಳು ತಪ್ಪುಗಳಾಗಿರುವುದು ಮಾತ್ರವಲ್ಲದೆ, ಪಂಪಭಾರತದ ಕಾಲ ಕ್ರಿ.ಶ. 941 ಎಂದು ನಮೂದಿಸಿರುವುದು (ಪು. 4-5) ಆಶ್ಚರ್ಯವನ್ನುಂಟುಮಾಡುತ್ತದೆ. 'ಕಚ್ಚು' ಪ್ರಯೋಗವೇ ಇಂದಿನ 'ಕರ್ಚು' (ಪು.6) ಎಂದು ಹೇಳುತ್ತಾರೆ. ಈ ಪದ 'ಕಲಗಚ್ಚು' ಎಂಬ ಸಮಸ್ತಪದವನ್ನು ಬಿಟ್ಟರೆ ಇಂದಿನ ಕನ್ನಡದಲ್ಲಿ ಬಳಕೆಯಲ್ಲಿಲ್ಲ. ಹಿಂದೆ ಬಳಕೆಯಲ್ಲಿದ್ದು ಇಂದು ಬಿದ್ದು ಹೋಗಿರುವ ಪದಗಳೆಂದು ಬ್ರಹ್ಮಾಸ್ತ್ರ ದಿವ್ಯಾಸ್ತ್ರಗಳೆಂಬುವನ್ನು ಉದಾಹರಣೆ ಕೊಡುತ್ತಾರೆ. (ಪು. 6) ಹಿಂದೆಯೂ ಪೌರಾಣಿಕ ಕತೆಗಳ ಪರಿಸರದಲ್ಲಿ ಬಳಕೆಯಾಗುತ್ತಿದ್ದಂತೆಯೇ ಇಂದೂ ಕೂಡ ಆ ಪದಗಳು ಬಳಕೆಯಾಗುತ್ತಿವೆಯೆಂಬುದನ್ನು ಎಲ್ಲರೂ ಬಲ್ಲರು. ಹಳಗನ್ನಡದ ಟ್ ಮತ್ತು

ಜ್‌ಗಳು ಬೇರೆ ಬೇರೆ ಕಾಲಗಳಲ್ಲಿ ಕನ್ನಡದಿಂದ ಮರೆಯಾದಾಗ ಕನ್ನಡದ ಧ್ವನಿಮಾ ಸಂಖ್ಯೆಯಲ್ಲಿ ಕಡಮೆಯಾಯಿತು, ನಿಜ. ಆದರೆ ಹಳಗನ್ನಡದ ಪ್ ಕಾರವು ಹ್ ಆದಾಗ ಕನ್ನಡಕ್ಕೆ 'ಒಂದು ಹೊಸ ಧ್ವನಿಮಾ ಸೇರಿಕೊಂಡಂತಾಯಿತು' ಎಂಬ ಮಾತು ಸರಿಯಲ್ಲ. ಪೂರ್ವದ ಹಳಗನ್ನಡ ಮತ್ತು ಹಳಗನ್ನಡಗಳಲ್ಲಿ ಸಂಸ್ಕೃತ ಸ್ವೀಕರಣಗಳಲ್ಲಿ ನಮಗೆ ಹಕಾರ ಸಮೇತ ಪದಗಳು (ದೇಹ, ಮಹಾ, ಹರಿ, ಇತ್ಯಾದಿ) ದೊರಕುವುದರಿಂದ, ಅದನ್ನೂ ಒಂದು ಧ್ವನಿಮವಾಗಿಯೇ ತೆಗೆದುಕೊಳ್ಳಬೇಕು. ಹೀಗಿರುವಾಗ, ಪಕಾರವು ಹಕಾರವಾದಾಗ ಕನ್ನಡದ ಧ್ವನಿಮಾಗಳ ಸಂಖ್ಯೆ ಹೆಚ್ಚಿತು ಎಂಬುದು ತಪ್ಪಾಗುತ್ತದೆ. ಇಂಗ್ಲೀಷಿನಲ್ಲಿ 'horse and donkey came' ಎಂಬ ವಾಕ್ಯ (ಪು.15) ಸಾಧ್ಯವೇ? ನ್ಯಾಯವಾಗಿ ಅಲ್ಲಿಯ ನಾಮಪದಗಳ ಹಿಂದೆ `the' ಇರಬೇಕು. ಹೊಸಗನ್ನಡದ 'ಪಾಡು' (=ಸ್ಥಿತಿ) 'ಹಾಡು' (=a song) ಈ ಎರಡೂ ಪದಗಳು ಮೂಲತಃ ಒಂದೇ ಪದದಿಂದ ಬಂದಿವೆ (ಪು. 16) ಎಂಬುದನ್ನು ಸಾಮಾನ್ಯವಾಗಿ ಎಲ್ಲರೂ ನಂಬಿದ್ದಾರೆ. ಆದರೆ 'ಪಾಡು' ಎಂಬುದು ವಾಸ್ತವವಾಗಿ 'ಪಡು' (=to have an experience, to suffer) ಧಾತುವಿನಿಂದ ಬಂದದ್ದು. ಪು. 17ರಲ್ಲಿ ಹಳಗನ್ನಡದವೆಂದು ಕೊಟ್ಟಿರುವ ಕೆಲ್ಫವು ಉದಾಹರಣೆಗಳು (ಉದಾ. ವಿತ್ತು, ವೆಳೆ) ವಾಸ್ತವವಾಗಿ ಪೂರ್ವದ ಹಳಗನ್ನಡದವು. ಹಳಗನ್ನಡದಲ್ಲಿ 'ಎಣ್ಣೆ'ಯು ಒಂದು ವಿಶಿಷ್ಟ ಎಣ್ಣೆಯನ್ನು ಸೂಚಿಸುತ್ತದೆಂಬ ಹೇಳಿಕೆ (ಪು. 18) ಸರಿಯಲ್ಲ. ಬಸವಣ್ಣನವರಲ್ಲಿ ಬರುವ 'ಕುನ್ನಿ' ಎಂಬ ಮಾತಿಗೆ ಗಂಡು ಮಗು ಎಂಬರ್ಥವಿಲ್ಲ. ಅಲ್ಲಿಯೂ ನಾಯಿಮರಿ ಎಂದೇ ಅರ್ಥ.

ಭಾಷಾ ವ್ಯತ್ಯಾಸದ ತಂತ್ರಗಳಲ್ಲಿ ಒಂದಾದ 'ದೂಷಣೆ'ಗೆ (Contamination) ಸಂಸ್ಕೃತದಿಂದ ಕೊಟ್ಟಿರುವ ಉದಾಹರಣೆ ಸರಿಯಾಗಿದೆ. ಕನ್ನಡದಿಂದ 'ಉಗುರು ಬೆಚ್ಚಗೆ' ಎಂಬುದನ್ನು ಅದಕ್ಕೆ ಉದಾಹರಣೆ ಕೊಟ್ಟು, ಅದು ಮೂಲತಃ 'ಅಗುರು ಬೆಚ್ಚಗೆ' (ಅ + ಗುರು = ಹೆಚ್ಚಿಲ್ಲದ) ಎಂದಿರಬೇಕೆಂದೂ, 'ಉಗುರು'ವಿನ ಸಾಹಚರ್ಯದಿಂದ ಅದು 'ಉಗುರು ಬೆಚ್ಚಗೆ' ಆಯಿತೆಂದೂ ಹೇಳುತ್ತಾರೆ. ಶಾಂತಿಪುರಾಣ ಮತ್ತು ಜಗನ್ನಾಥ ವಿಜಯಗಳ ಪ್ರಾಚೀನ ಪ್ರಯೋಗಗಳನ್ನು ನೋಡಿದರೆ (ಕನ್ನಡ ನಿಘಂಟು, ಪು. 858) 'ಉಗುರು ಬೆಚ್ಚಗೆ' ಎಂಬುದೇ ಮೂಲರೂಪ ಮತ್ತು ಸಾಧುಪ್ರಯೋಗ. ದೂಷಣೆಗೆ ಕನ್ನಡದಿಂದ 'ಶ್ರವ' (=ಶವ)ವನ್ನು ಉದಾಹರಣೆಯಾಗಿ ಕೊಡಬಹುದು. ಬಹುಶಃ 'ಶ್ರಮ'ದ (ಅಥವಾ 'ಶ್ರಾದ್ಧ'ದ) ಸಾಹಚರ್ಯದಿಂದ 'ಶವ'ವು 'ಶ್ರವ' (ಸ್ರವ) ಆಗಿರಬಹುದು. ರಾಯಚೂರು ಕಡೆಯ 'ಕಷ್ಟ' (=ಕ್ಷೌರ)ವೂ ಕೂಡ ಮೂಲತಃ 'ಕಟ್ಟ' (ತಮಿಳು. ಕಟ್ಟಂ, ಕನ್ನಡ. ಗಡ್ಡ) ಆಗಿದ್ದು, 'ಕಷ್ಟ'ಕ್ಕೂ ಅದಕ್ಕೂ ಸಂಬಂಧವಿದೆಯೆಂದು ಭಾವಿಸಿ, ಅದನ್ನು 'ಕಷ್ಟ'ವೆಂದೇ ಮಾಡಿರುವಂತೆ ಕಾಣುತ್ತದೆ. ಇದೂ ದೂಷಣೆಗೆ ಉದಾಹರಣೆ. ಈಗಿನ 'ಉಪಾಕರ್ಮ' ವಾಸ್ತವವಾಗಿ ಮೂಲತಃ 'ಉಪಕ್ರಮ' (=ಆರಂಭ, ವಿದ್ಯೆಯ ಆರಂಭ)ವಾಗಿದ್ದು, ಅದಕ್ಕೂ 'ಕರ್ಮ'ಕ್ಕೂ ಸಂಬಂಧವಿದೆಯೆಂದು ಜನ ಭ್ರಮಿಸಿದ್ದರಿಂದ 'ಉಪಾಕರ್ಮ'ವೆಂಬ ರೂಪ ಬಂದಿತು. ಇದೂ 'ದೂಷಣೆ'ಗೆ ನಿದರ್ಶನವಾಗುತ್ತದೆ. 'ಅರಿಕೆ' ಎನ್ನುವ ರೂಪ (ಪು. 27) ಕನ್ನಡದಲ್ಲಿ ಎಲ್ಲೂ ಸಿಗುವುದಿಲ್ಲ.

ಪು. 35 ಮತ್ತು 78ರಲ್ಲಿ ಕೊಟ್ಟಿರುವ ತದ್ಭವಗಳು ಸಂಸ್ಕೃತದಿಂದ ಬಂದಿಲ್ಲ, ಬಹುತೇಕ ಪ್ರಾಕೃತದಿಂದ ಬಂದಿವೆ. ಅಂತೆಯೇ ಲಚ್ಮಿ, ಲಚ್ಚಿ, ಸಗ್ಗ ಎಂಬ ರೂಪಗಳು. 'ಇಸು' ಪ್ರತ್ಯಯ ಹತ್ತುವುದರ ಬಗ್ಗೆ (ಪು. 56-7) ಇನ್ನೂ ಶಾಸ್ತ್ರೀಯ ವಿವೇಚನೆ ನಡೆಯಬಹುದಿತ್ತು. ಅದು ಸಕರ್ಮಕ ಧಾತುಗಳಿಗೆ ಮಾತ್ರವಲ್ಲ, ಅಕರ್ಮಕಗಳಿಗೂ ಹತ್ತಿ ಪ್ರೇರಣಾರ್ಥವನ್ನು ಉಂಟುಮಾಡುತ್ತದೆ. ಹರಿಹರ ಪ್ರತಿಭಟಿಸಿದ್ದು ರಳದ ಬಗ್ಗೆಯೇ ಹೊರತು, ಕುಳ್ಳಿಯವರು ಭಾವಿಸಿರುವಂತೆ (ಪು. 75) ರ ಮತ್ತು ಱಗಳನ್ನು ಭಿನ್ನವಾಗಿ ಭಾವಿಸುವುದರ ಬಗ್ಗೆ ಅಲ್ಲ. ಹಿಂದಿ, ಪಂಜಾಬಿ, ಮರಾಠಿ, ಬಂಗಾಲಿ ಭಾಷೆಗಳು ಸಂಸ್ಕೃತವನ್ನು ಮೂಲವಾಗಿ ಹೊಂದಿವೆ ಎಂಬ ಅವರ ಹೇಳಿಕೆ (ಪು. 135, 170) ಮೇಲಿನದರಂತೆಯೇ ಅತ್ಯಂತ ಹಾಸ್ಯಾಸ್ಪದವಾದುದು. ಭಾಷೆಯ ಪ್ರಾರಂಭಿಕ ವಿದ್ಯಾರ್ಥಿಗಳೂ ಬಹುಶಃ ಈ ತಪ್ಪುಗಳನ್ನು ಮಾಡಲಾರರು. ಉದಾಹರಣೆಗಳನ್ನು ಕೊಡುವಾಗ ಅನೇಕ ಕಡೆ ತೀರಾ ಅಲಕ್ಷ್ಯವನ್ನು ತೋರುತ್ತಾರೆ. ಪು. 146ರಲ್ಲಿ ತಮಿಳಿನ ಕಾಲ್, ಕಣ್, ಕೇಳ್ ಕೊಟ್ಟವರು ಕನ್ನಡದಿಂದ ಕಾಲು, ಕಣ್ಣು, ಕೇಳು ಏಕೆ ಕೊಡಬೇಕು ? ಅದೇ ವ್ಯಂಜನಾಂತಗಳನ್ನು ಕೊಡಬೇಕು. ತೆಲುಗಿನಲ್ಲಿ ವ್ಯಂಜನಾಂತಗಳಿಲ್ಲ, ಆದರೂ 'ಕಣ್' (ನ್ಯಾಯವಾಗಿ 'ಕನ್ನು') ಎಂದು ತೆಲುಗಿನ ಉದಾಹರಣೆ ಕೊಡುತ್ತಾರೆ. ತಮಿಳಿನ ಪಕಾರ ಕನ್ನಡದ ಹಕಾರಕ್ಕೆ ಸಂವಾದಿ ಎನ್ನುತ್ತಾರೆ (ಪು. 147) ; ಆದರೆ ಹಳಗನ್ನಡದಲ್ಲಿ ಅಲ್ಲೆಲ್ಲ ಪಕಾರವೇ ಇತ್ತೆಂಬ ತಮ್ಮ ಹಿಂದಿನ ಹೇಳಿಕೆಯನ್ನು ಮರೆಯುತ್ತಾರೆ. ಪು. 159ರಲ್ಲಿ ತಾಲವ್ಯೀಕರಣದ ಇತಿಹಾಸದ ಬಗ್ಗೆ ದೊಡ್ಡ ತಪ್ಪು ಮಾಡುತ್ತಾರೆ. ಅಶೋಕನ ಶಾಸನಗಳಲ್ಲಿ 'ಕೇರ' ಎಂಬ ರೂಪವಿರುವುದು, ಸಂಗಮ್ ಸಾಹಿತ್ಯದಲ್ಲಿ 'ಚೇರ' ಎಂಬ ರೂಪವಿರುವುದು ತಮಿಳಿನಲ್ಲಿ ತಾಲವ್ಯೀಕರಣ ಕ್ರಿ.ಪೂ. 3ನೇ ಶತಮಾನ ಕ್ರಿ.ಶ. 1ನೇ ಶತಮಾನದ ಅವಧಿಯಲ್ಲಿ ನಡೆದಿರಬಹುದೆಂಬ ಊಹೆಗೆ ಎಡೆಗೊಟ್ಟಿದೆ. ಕ್ರಿ.ಪೂ. 3ನೇ ಶತಮಾನದ ನಂತರ ಆರಂಭವಾದ ತಾಲವ್ಯೀಕರಣದ ಘಟನೆ ಕನ್ನಡದಲ್ಲಿ ಕಾಣುವುದಿಲ್ಲವಾದ್ದರಿಂದ, "ಕ್ರಿ.ಪೂ. 3ನೇಯ ಶತಮಾನದ ನಂತರ ಕನ್ನಡ ದ್ರಾವಿಡ ಮೂಲದಿಂದ ಬೇರ್ಪಟ್ಟಿರಬಹುದು" ಎಂಬ ತೀರ್ಮಾನಕ್ಕೆ ಬಂದಿರುವುದು ಅವೈಜ್ಞಾನಿಕವಾಗಿದೆ.

ಇದೇ ಲೇಖಕರ 'ವರ್ಣನಾತ್ಮಕ ಭಾಷಾ ವಿಜ್ಞಾನ'ವನ್ನು ಓದಿದವರಿಗೆ, ಈ ಕೃತಿಯಲ್ಲಿ ಅವರ ಭಾಷೆ ಎಷ್ಟೋ ಸುಧಾರಿಸಿದೆಯೆಂದು ಭಾಸವಾಗುತ್ತದೆ. ಆದರೂ ಅವರಿಗೆ ಶಾಸ್ತ್ರೀಯ ವಿಷಯಗಳನ್ನು ಯಾವುದೇ ಸಂದೇಹಕ್ಕೆಡೆಯಿಲ್ಲದಂತೆ ಸ್ಪಷ್ಟವಾಗಿ ಸಂಗ್ರಹವಾಗಿ ಹೇಳುವ ರೀತಿ ಇನ್ನೂ ಕರಗತವಾಗಬೇಕಾಗಿದೆ. ಕೆಲವು ಕಡೆ ಭಾಷಾವಿಜ್ಞಾನದ ಪರಿಚಯವಿಲ್ಲದವರಿಗೂ ಈ ಕೃತಿ ಉಪಯೋಗವಾಗಲಿ ಎಂದು ತೀರಾ ಸಾಮಾನ್ಯ ಸಂಗತಿಗಳನ್ನೂ ವಿವರಣೆಗಳೊಂದಿಗೆ ಆರಂಭಿಸುತ್ತಾರೆ. ಇನ್ನು ಕೆಲವು ಕಡೆ ನೇರವಾಗಿ, ಪೂರ್ವಭಾವಿ ವಿವರಣೆಯಿಲ್ಲದೆ ಆರಂಭಿಸುತ್ತಾರೆ - "ಹಳೆಯ ಸಂಬಂಧದಿಂದ ಈ ಉಪಭಾಷೆಗಳು ಭಾಷೆ ಹೊಂದಿದಂತೆಯೇ ಭಿನ್ನತೆಯನ್ನು ಹೊಂದಿದ್ದುವು" ಎಂಬಂತಹ ವಾಕ್ಯಗಳು (ಪು. 115) ತಮ್ಮ ಶೈಥಿಲ್ಯದಿಂದಾಗಿ

ಲೇಖಕರು ಹೇಳಬೇಕಾಗಿರುವುದನ್ನು ಸರಿಯಾಗಿ ವ್ಯಕ್ತಪಡಿಸುವುದಿಲ್ಲ. "ತೋಲನ ಪದ್ಧತಿಗಳು" ಎಂಬ ಅಧ್ಯಾಯ ಹೀಗೆ ಆರಂಭವಾಗುತ್ತದೆ - "ಯಾವುದೇ ವಿಜ್ಞಾನ ತನ್ನ ಅಂತಸ್ಸಾಮರ್ಥ್ಯವನ್ನು ಪೂರ್ಣಪ್ರಕಟಿಸಲು ಕೈಕೊಳ್ಳಬೇಕಾದ ವಿಧಾನಗಳಲ್ಲಿ ಕೇವಲ ವಿವರಣೆಯನ್ನು ದಾಟಿ, ತಾನು ಅಭ್ಯಸಿಸುವ ವಿಷಯಗಳ ತುಲನೆ ಹಾಗೂ ವರ್ಗೀಕರಣ ಕೈಕೊಳ್ಳಬೇಕಾದುದು ಅವಶ್ಯ". ಈ ಮಾತುಗಳ ನಂತರ, ಲೇಖಕರು ನೇರವಾಗಿ ತೋಲನ ಪದ್ಧತಿಗಳಿಗೆ ಹೋಗಿಬಿಡುತ್ತಾರೆ. ಓದುಗರಿಗೆ ಭಾಷಾವಿಜ್ಞಾನದ ಪರಿಸರದಲ್ಲಿ 'ತುಲನ' (Comparison) ಎಂದರೇನೆಂಬುದು ಸ್ಪಷ್ಟವಾಗದೇ ಹೋಗುವ ಸಾಧ್ಯತೆಯಿದೆ.

ಈ ಪುಸ್ತಕದ ಅಚ್ಚಿನ ತಪ್ಪುಗಳ ಬಗ್ಗೆ ಏನು ಹೇಳಬೇಕೋ ತಿಳಿಯದು. ಪುಸ್ತಕದ ಕೊನೆಯಲ್ಲಿ ಒಂದೂವರೆ ಪುಟಗಳ ಒಪ್ಪೋಲೆಯಿದೆ. ಎಲ್ಲವನ್ನೂ ಪಟ್ಟಿ ಮಾಡಿದರೆ ಏನಿಲ್ಲವೆಂದರೂ ಇಪ್ಪತ್ತು ಪುಟಗಳಾದರೂ ಆಗಬಹುದು. ಪುಸ್ತಕದ ರಟ್ಟಿನ ಎರಡೂ ಒಳಭಾಗಗಳಲ್ಲಿ ತಮ್ಮ ಹಿಂದಿನ ಪುಸ್ತಕದ ಬಗ್ಗೆ ಬಂದಿರುವ ಕೆಲವರ ಔದಾರ್ಯದ ಅಭಿಪ್ರಾಯಗಳನ್ನು ಕೊಟ್ಟಿದ್ದಾರೆ - ಅದರಲ್ಲಿ ಒಟ್ಟು ಹನ್ನೊಂದು ತಪ್ಪುಗಳಿವೆ. ಪುಸ್ತಕದಲ್ಲಂತೂ ಅಚ್ಚಿನ ತಪ್ಪುಗಳು ಕಿಕ್ಕಿರಿದಿದ್ದು, ಈ ಪುಸ್ತಕದ ಮೌಲ್ಯವನ್ನು ಬಹುವಾಗಿ ಕುಗ್ಗಿಸಿವೆ. ಹೀಗಾಗಿ, ಒಟ್ಟಾರೆ ಇದು ನಮಗೆ ನಿರಾಶೆಯುಂಟುಮಾಡುವ ಕೃತಿಯಾಗಿ ಪರಿಣಮಿಸಿದೆ.

**ಭಾಷೆ** ಎಂಬ ಹಂಪ. ನಾಗರಾಜಯ್ಯನವರ ಪುಟ್ಟ ಪುಸ್ತಕ ಭಾಷೆ ಮತ್ತು ಭಾಷಾ ವಿಜ್ಞಾನದ ಬಗ್ಗೆ ಜನಪ್ರಿಯ ರೀತಿಯಲ್ಲಿ ಪರಿಚಯ ಮಾಡಿಕೊಡುವ ಸೀಮಿತ ಉದ್ದೇಶವನ್ನು ಹೊಂದಿದೆ. ಆರಂಭದಲ್ಲಿ ಭಾಷೆಯ ವಿವಿಧ ವ್ಯಾಖ್ಯೆಗಳನ್ನು ಕೊಟ್ಟು, ಮುಖ್ಯವಾಗಿ ಒಂದು ವ್ಯಾಖ್ಯೆಯನ್ನು ವಿಸ್ತರಿಸಿದ್ದಾರೆ. ಭಾಷಾವಿಜ್ಞಾನದ ಬೇರೆ ಬೇರೆ ಶಾಖೆಗಳ ಪರಿಚಯವನ್ನೂ ಇಲ್ಲಿ ಮಾಡಿಕೊಡುತ್ತಾರೆ. ಇದರಲ್ಲಿ ಧ್ವನಿವಿಜ್ಞಾನ, ಉಪಭಾಷೆ, ಲಿಪಿಯ ಮಹತ್ವ, ಭಾಷೆ ಮತ್ತು ಸಂಸ್ಕೃತಿ ಇತ್ಯಾದಿ ಅನೇಕ ವಿಷಯಗಳ ಪ್ರಸ್ತಾಪ ಬರುತ್ತದೆ. ಇಂತಹ ಎಲ್ಲ ವಿಷಯಗಳನ್ನೂ ಒಂದೇ ಕೃತಿಯಲ್ಲಿ ಪರಿಚಯ ಮಾಡಿಕೊಡಲು ಒಂದು ದೊಡ್ಡ ಗ್ರಂಥವನ್ನೇ ಬರೆಯಬೇಕು. ಇಲ್ಲದಿದ್ದರೆ ಇಂತಹ ಚಿಕ್ಕ ಪುಸ್ತಕದಲ್ಲಿ ಅವುಗಳ ಹೆಸರು ಮಾತ್ರ ತಿಳಿಯುತ್ತದೆ. ಆದರೆ ವಿವರಗಳು ದೊರಕುವುದಿಲ್ಲ. ಅದರ ಬದಲು ಯಾವುದಾದರೂ ಒಂದು ಸಂಗತಿಯನ್ನು ಆರಿಸಿಕೊಂಡು ಅದನ್ನು ಜನಪ್ರಿಯಗೊಳಿಸುವ ಉದ್ದೇಶದಿಂದ ಇಂತಹ ಪುಟ್ಟ ಪುಸ್ತಕಗಳನ್ನು ಹೊರತಂದರೆ ಉದ್ದೇಶ ಸಾರ್ಥಕವಾಗುತ್ತದೆ. ಭಾಷಾಶೈಲಿಯ ದೃಷ್ಟಿಯಿಂದ ಒಂದು ಮಾತನ್ನು ಹೇಳುವುದು ಅಗತ್ಯ. ನಮ್ಮ ಕಣ್ಣಮುಂದೆ ಯಾವ ಮಟ್ಟದ ಓದುಗರನ್ನು ನಾವು ಕಲ್ಪಿಸಿಕೊಳ್ಳುತ್ತೇವೆಯೋ ಅದು ಭಾಷಾಶೈಲಿಯನ್ನು ನಿರ್ಧರಿಸುತ್ತದೆ. ನಾಗರಾಜಯ್ಯನವರು ಅಂತಹ ಸ್ಪಷ್ಟ ಕಲ್ಪನೆಯನ್ನು ಹೊಂದಿರುವಂತೆ ಕಾಣುವುದಿಲ್ಲ. ಕೆಲವೆಡೆ ಅವರ ಭಾಷೆ ತೀರಾ ಹಗುರವಾಗುತ್ತದೆ (ಪು. 46ರಲ್ಲಿ 'ಭಾರೀ ಕುಳ'ದ ವಿಷಯ ಬರುವ ವಾಕ್ಯಗಳನ್ನು ನೋಡಿ) ; ಕೆಲವೆಡೆ ಅದು ಬಿಗಿಯಾಗುತ್ತದೆ (ಪು. 46 ರಿಂದ ಮುಂದೆ ಬರುವ ಹಾಕೆಟ್ ವಿದ್ವಾಂಸನ ಅಭಿಪ್ರಾಯಗಳ ವಿವರಣೆ ನೋಡಿ).

**ಬಸವಣ್ಣನವರು – ಲಿಂಗವಂತ ಧರ್ಮ ಸಂಸ್ಥಾಪಕರು** ಎಂಬುದು, ಹೆಸರೇ ಹೇಳುವಂತೆ, ಬಸವಣ್ಣನವರೇ ವೀರಶೈವ ಅಥವಾ ಲಿಂಗವಂತ ಮತಸ್ಥಾಪಕರು ಎಂಬುದನ್ನು ಪ್ರತಿಪಾದಿಸ ಹೊರಡುವ ಗ್ರಂಥ. ಶ್ರೀ ಗುರುಲಿಂಗಪ್ಪ ಮಲ್ಲಪ್ಪ ಪಾಟೀಲ ಅವರು ಇದರ ಕರ್ತೃಗಳು.

ವೀರಶೈವ ಧರ್ಮದ ಇತಿಹಾಸದಲ್ಲಿ ಬಿಡಿಸಲಾಗದೇ ಹೋಗಿರುವ ಒಂದು ಸಮಸ್ಯೆ ಹಾಗೇ ಉಳಿದಿದೆ. ಈ ಧರ್ಮದ ಸ್ಥಾಪಕರಾರು? ಬಸವಣ್ಣನವರೇ, ಅವರಿಗಿಂತ ಹಿಂದೆ ಇದ್ದರೆಂದು ನಂಬಲಾಗಿರುವ ಪಂಚಾಚಾರ್ಯರೇ? ಇದರ ಬಗ್ಗೆ ಆಗಿರುವ ವಾದವಿವಾದಗಳೆಷ್ಟು, ಜಗಳಗಳೆಷ್ಟು! ಎಬ್ಬಿಸಿರುವ ಧೂಳೆಷ್ಟು! ಒಂದು ಧರ್ಮದ ಶ್ರೇಷ್ಠತೆಯೆಲ್ಲ ಅದರ ಪ್ರಾಚೀನತೆಯೊಂದರ ಮೇಲೇ ನಿಂತಿದೆ ಎಂದು ಭಾವಿಸಿ ವಾದಿಸುವವರ ಸಂಖ್ಯೆಯೂ ಕಡಮೆಯಿಲ್ಲ. ವೀರಶೈವಧರ್ಮದ ಮೂಲ ಗ್ರಂಥಗಳು ಕನ್ನಡ ವಚನಗಳೇ, ಸಂಸ್ಕೃತ ಆಗಮಗಳೇ? ವೀರಶೈವವು ವೇದ ಸಮ್ಮತವೇ, ವೇದ ವಿರೋಧಿಯೇ? ಇವೆಲ್ಲ ಗಂಭೀರ ಸಂಶೋಧನೆಗೆ ಅರ್ಹವಾದ ಸಂಗತಿಗಳೆಂಬುದರಲ್ಲಿ ಸಂದೇಹವಿಲ್ಲ. ಆದರೆ ಎಲ್ಲಿ ತಮಗೆ ಇಷ್ಟವಾದ ಸಂಗತಿಯೇ ನಿಜವೆಂದು ಸ್ಥಾಪಿಸುವ ಹಠವೇ ಮುಖ್ಯವಾಗುತ್ತದೋ ಅಲ್ಲಿ ವಿಚಾರ ಹಿನ್ನೆಲೆಗೆ ಸರಿಯುತ್ತದೆ.

ಮೇಲೆ ಹೇಳಿದ ವಾದ ವಿವಾದಗಳ ಪರಂಪರೆಯನ್ನು ಶ್ರೀ ಪಾಟೀಲರ ಪುಸ್ತಕವೂ ಮುಂದುವರಿಸುತ್ತದೆ. ತಮಗೆ ಸತ್ಯವೆಂದು ಕಂಡ ಸಂಗತಿಯನ್ನು ಸ್ಪಷ್ಟವಾಗಿ ನಿರೂಪಿಸುವುದರಲ್ಲಿ ತಪ್ಪೇನೂ ಇಲ್ಲ. ಆದರೆ ತಮಗೆ ಸತ್ಯವೆಂದು ತೋರುವ ಸಂಗತಿಗೆ ವಿರುದ್ಧವಾಗಿ ವಾದಿಸಲೂ ಸಾಧ್ಯವಿರುವ ಕಡೆ, ಸಂಶೋಧಕ ಅದನ್ನೂ ಗಮನಿಸಬೇಕಾಗುತ್ತದೆ. ತನ್ನ ವಾದಕ್ಕೆ ಪೋಷಕವಾಗುವ ಆಧಾರಗಳನ್ನು ಎತ್ತಿ ಹಿಡಿಯುವಂತೆ, ಇನ್ನೊಂದು ವಾದದ ಆಧಾರಗಳನ್ನೂ ವಿರೂಪಗೊಳಿಸದಂತೆ ಹೇಳಬೇಕಾಗುತ್ತದೆ. ಬಸವಣ್ಣನವರೇ ಲಿಂಗವಂತ ಧರ್ಮದ ಸ್ಥಾಪಕರು ಎಂದು ಸ್ಥಾಪಿಸುವ ಭರದಲ್ಲಿ ಅವರ ಮತ್ತು ಇತರ ವಚನಕಾರರ ಕೃತಿಗಳಲ್ಲಿ ಬರುವ ಸಂಸ್ಕೃತ ಶ್ಲೋಕಗಳೆಲ್ಲವೂ ಪ್ರಕ್ಷಿಪ್ತ (ಪು.10) ಎಂಬ ಅತ್ಯಂತ ದುರ್ಬಲ ವಾದವನ್ನು ಮುಂದಿಡುವುದು ಯುಕ್ತವಲ್ಲವೆಂದೇ ನನ್ನ ಭಾವನೆ. ತಮ್ಮ ಕೃತಿ ಸಂಶೋಧನಾತ್ಮಕವಾದುದು ಎಂದು ಕರೆದುಕೊಳ್ಳುವ ಪಾಟೀಲರು ಅವಕಾಶ ಸಿಕ್ಕಾಗಲೆಲ್ಲ 'ಮುಕ್ತಿಕಂಠಾಭರಣ'ವೆಂಬ ಸಂಕಲನದ ಬಗ್ಗೆ, ಅದರ ಸಂಪಾದಕರ ಬಗ್ಗೆ ಸಭ್ಯತೆಯನ್ನು ಮೀರಿದ ಭಾಷೆಯನ್ನು ಬಳಸುವುದನ್ನು ಕಂಡಾಗ (ಪು. 14) ಲೇಖಕರ ಇಡೀ ಪ್ರಾಮಾಣಿಕತೆಯೇ ಪ್ರಶ್ನಾರ್ಹವಾಗುತ್ತದೆ. 'ಮುಕ್ತಿಕಂಠಾಭರಣ'ವು ಒಳ್ಳೆಯ ಸಂಕಲನವಲ್ಲದಿರಬಹುದು - ಅದರಲ್ಲಿ ಅನೇಕ ದೋಷಗಳು ಅದರ ಕೃತಿಕಾರನಿಂದ ಅರಿತೋ ಅರಿಯದೆಯೋ ಘಟಿಸಿರಬಹುದು; ಆದರೆ ಅದನ್ನು ಸಂಪಾದಿಸಿ ಪ್ರಕಟಿಸಿರುವ ವ್ಯಕ್ತಿಗಳು ಈ ಬಗೆಯ ಟೀಕೆಗೆ ಅರ್ಹರಲ್ಲ ಎಂಬ ನನ್ನ ಅಭಿಪ್ರಾಯವನ್ನು ಈ ಹಿಂದೆಯೇ ನಾನು ಪತ್ರಿಕೆಗಳಲ್ಲಿ ಪ್ರಕಟಿಸಿರುವುದನ್ನು (ಪ್ರಜಾವಾಣಿ) ಇಲ್ಲಿ ಸೂಚಿಸಬಯಸುತ್ತೇನೆ. ತಮ್ಮ ಅನ್ನಿಸುವಿಕೆಗಿಂತ ಭಿನ್ನವಾದ ಅಭಿಪ್ರಾಯಗಳನ್ನು

ಹೊಂದಿರುವ ಇತರ ಲೇಖಕರ ಬಗ್ಗೆಯೂ ಪಾಟೀಲರು ಅಗೌರವದಿಂದ ಮಾತನಾಡುತ್ತಾರೆ ಎಂಬುದು ಕ್ಷಮ್ಯ ಸಂಗತಿಯಲ್ಲ.

ರೇಣುಕಾಚಾರ್ಯರ ಬಗ್ಗೆ ಬರೆಯುತ್ತ ಅವರು ಅಗಸ್ತ್ಯರಿಗೆ ಬೋಧಿಸಿದರು ಇತ್ಯಾದಿ ಕತೆಗಳೆಲ್ಲ ಇಂದಿನ ಶಾಸ್ತ್ರೀಯ ಯುಗದಲ್ಲಿ 'ವಿಶ್ವಸನೀಯವಾಗಲಾರವು' ಎಂದು ಹೇಳಿ, ಸಂಸ್ಕೃತ ಭಾಷೆಯ 'ಸಿದ್ಧಾಂತ ಶಿಖಾಮಣಿ' ಗ್ರಂಥವು ಹದಿನೇಳನೇ ಶತಮಾನದಷ್ಟು ಈಚಿನದೆಂದು ಅದರ ಪ್ರಾಮಾಣ್ಯವನ್ನು ತಳ್ಳಿಹಾಕುತ್ತಾರೆ. ನಾನು ಅವರ ವಾದವನ್ನು ತಿರಸ್ಕರಿಸುವುದೂ ಇಲ್ಲ, ಸಮರ್ಥಿಸುವುದೂ ಇಲ್ಲ. ಆದರೆ, ಬಸವಣ್ಣನವರಿಗಿಂತ ಸ್ವಲ್ಪ ಈಚಿನ ಹರಿಹರ ತನ್ನ ರೇವಣಸಿದ್ಧೇಶ್ವರ ರಗಳೆಯಲ್ಲಿ ರೇವಣಸಿದ್ಧ (ಅಥವಾ ರೇಣುಕಾಚಾರ್ಯರು) ಸಿದ್ಧರಾಮನ ಹಿರಿಯ ಸಮಕಾಲೀನ ಎಂಬರ್ಥ ಬರುವಂತೆ ಮಾಡಿರುವ ನಿರೂಪಣೆಯನ್ನು ಪಾಟೀಲರು ಲಕ್ಷಿಸದಿರುವುದು ದುರದೃಷ್ಟ. ಆ ರಗಳೆಯಲ್ಲಿ ಅನೇಕ ಐತಿಹಾಸಿಕ ಪುರುಷರ ಹೆಸರುಗಳಿದ್ದು, ಆ ಪಂಕ್ತಿಯಲ್ಲಿ ರೇವಣಸಿದ್ಧರು ಕಾಣಿಸಿಕೊಳ್ಳುತ್ತಾರೆ. ನಾವು ರೇವಣಸಿದ್ಧರ ಐತಿಹಾಸಿಕತೆಯನ್ನು ಪ್ರಶ್ನಿಸುವ ಸ್ಥಿತಿಯಲ್ಲಿಲ್ಲ - ಏಕೆಂದರೆ ಆತನ ಬಗ್ಗೆ ಹುಟ್ಟಿರುವ ಮೇಲಿನ ರಗಳೆಯಾಗಲಿ, ಸಿರಿವಾಳದ ಶಾಸನವಾಗಲಿ ಅದಕ್ಕೆ ಅವಕಾಶ ಕೊಡಲಾರದು. ರೇವಣಸಿದ್ಧರ ವೀರಶೈವ, ಬಸವಣ್ಣನವರ ವೀರಶೈವ - ಇವೆರಡೂ ಬೇರೆ ಬೇರೆಯೇ, ಒಂದೆಯೇ, ಅಥವಾ ಒಂದು ಇನ್ನೊಂದರ ಸುಧಾರಿತರೂಪವೇ ಇತ್ಯಾದಿ ಸಮಸ್ಯೆಗಳಿವೆ. ಅವುಗಳನ್ನು ನಾವು ಎತ್ತಬೇಕು, ಚರ್ಚಿಸಬೇಕು. ಉತ್ತರ ಸಿಗದಿದ್ದರೆ ಅಲ್ಲಿಗೆ ಪ್ರಶ್ನೆಯೊಡನೆ ಅದನ್ನು ಮುಕ್ತಾಯ ಮಾಡಬೇಕು. ಆಧಾರಗಳನ್ನೇ ಬಚ್ಚಿಡುವುದು ಅಥವಾ ಅಲಕ್ಷಿಸುವುದು ಸಂಶೋಧಕನ ಲಕ್ಷಣವೇ ಅಲ್ಲ. ಯಾವ ಸಮಸ್ಯೆಯ ಬಗ್ಗೆಯೂ ಒಳನೋಟವನ್ನು ಬೀರಲಾರದೆ ಹೋಗಿರುವ ಪಾಟೀಲರ ಈ ಕೃತಿ ಕನ್ನಡದ ವಾದ ಸಾಹಿತ್ಯದ ಗಾತ್ರವನ್ನು ಬೆಳೆಸಿದೆ.

ಹಾಗಾದರೆ, ವೀರಶೈವ ಧರ್ಮದ ಪ್ರಾಚೀನತೆಯ ಬಗ್ಗೆ ನಿಮ್ಮ ಅಭಿಪ್ರಾಯವೇನು ಎಂಬ ಪ್ರಶ್ನೆಯನ್ನು ಅನೇಕ ಸಾರಿ ಎದುರಿಸಿದ್ದೇನೆ. ಈ ಸಮಸ್ಯೆ ನಾವು ತಿಳಿದಿರುವಷ್ಟು ಸರಳವಾಗಿ ತೋರುವುದಿಲ್ಲ. ಆ ಬಗ್ಗೆ ನನ್ನದೇ ಆದ ಕೆಲವು ಸೂಚನೆಗಳಿವೆ. ಅದನ್ನು ಇಲ್ಲಿ ವ್ಯಕ್ತಪಡಿಸುವುದು ಅನುಚಿತವೂ ಆಗಬಹುದು, ಅಪಕ್ವವೂ ಆಗಬಹುದು. ವೀರಶೈವ ಧರ್ಮದ ಸಂಸ್ಥಾಪಕರು ಯಾರೇ ಇರಲಿ - ಆ ಧರ್ಮಕ್ಕೆ ಒಟ್ಟು ಭಾರತೀಯ ಪರಿಸರದಲ್ಲಿ ಮಾನ್ಯತೆ ಬಂದಿರುವುದು, ಬರಬೇಕಾಗಿರುವುದು ಬಸವಣ್ಣ ಮತ್ತು ಅವರ ಸಮಕಾಲೀನರಿಂದ ಎಂಬುದು ನನ್ನ ದೃಢ ನಂಬಿಕೆಯಾಗಿದೆ. ಈ ಬಗ್ಗೆ ಪಾಟೀಲರಿಗೂ ನನಗೂ ಏಕಾಭಿಪ್ರಾಯವಿದೆ.

**ಬಸವಣ್ಣನವರ ವಚನ ಪದಪ್ರಯೋಗ ಕೋಶವು** ಬಸವಣ್ಣನವರ ವಚನಗಳ ಅಧ್ಯಯನಕ್ಕೆ, ಅರ್ಥಾತ್ ವಚನ ಸಾಹಿತ್ಯದ ಅಧ್ಯಯನಕ್ಕೆ ಒಂದು ಅಪೂರ್ವ ಕೊಡುಗೆ. 'ಬಸವ ಸಾಹಿತ್ಯ ದರ್ಪಣ'ದ ಕರ್ತೃಗಳಾದ ಎಸ್.ಆರ್. ಗುಂಜಾಳರೇ ಮೇಲಿನ ಕೃತಿಯನ್ನೂ ರಚಿಸಿದ್ದಾರೆ ಎನ್ನುವುದು ಗಮನಾರ್ಹ ಸಂಗತಿ.

ಪದಪ್ರಯೋಗ ಕೋಶ (ಇಂಗ್ಲೀಷ್ Concordance) ಒಂದು ಕೃತಿಯಲ್ಲಿ ಬಳಕೆಯಾಗಿರುವ ಎಲ್ಲ ಪದಗಳನ್ನೂ ಅವುಗಳ ಆಕರ, ಪ್ರಯೋಗಗಳೊಡನೆ ಅಕಾರಾದಿಯಾಗಿ ಕೊಡುವ ಗ್ರಂಥ. ಇಂತಹ ಕೋಶಗಳು ಇಂಗ್ಲೀಷಿನ ಸುಪ್ರಸಿದ್ಧ ಕೃತಿಕಾರರಿಗೆಲ್ಲ ಸಿದ್ಧವಾಗಿವೆ. ವೇದಗಳಿಗೆ ಒಂದು ಕೋಶ ಹಿಂದೆಯೇ ಪ್ರಕಟವಾಗಿದೆ. ಕನ್ನಡದಲ್ಲಿ ಪ್ರಪ್ರಥಮವಾಗಿ ಬಸವಣ್ಣನವರ ವಚನಗಳಿಗೆ ಅಂತಹ ಪದಪ್ರಯೋಗ ಕೋಶವೊಂದು ಹೊರಬಂದಿರುವುದನ್ನು ಸಾಹಿತ್ಯಾಭ್ಯಾಸಿಗಳು ಸ್ವಾಗತಿಸುತ್ತಾರೆ.

ಇದಕ್ಕೆ ಕಾರಣಗಳು ಹಲವು. ವಚನಾಭ್ಯಾಸವನ್ನು ಕೈಕೊಳ್ಳುವ ಯಾರೇ ಆಗಲಿ ಬಸವಣ್ಣನವರಿಂದ ಆರಂಭಿಸುತ್ತಾರೆ. ಆ ಅಭ್ಯಾಸದಲ್ಲಿ ಮುಂದುವರಿದವರೂ ಕೂಡ ಮತ್ತೆ ಮತ್ತೆ ನೋಡಬೇಕಾದ ವಚನಕಾರರೆಂದರೆ ಬಸವಣ್ಣನವರೇ. ಆ ಅಭ್ಯಾಸವು ವಿಮರ್ಶೆಯ ದೃಷ್ಟಿಯಿಂದ ನಡೆಯಬಹುದು, ಸಂಶೋಧನೆಯ ದೃಷ್ಟಿಯಿಂದಲೂ ಅದನ್ನು ಕೈಗೊಂಡಿರಬಹುದು. ಬಸವಣ್ಣನವರ ವಚನಗಳನ್ನು ನಾಲ್ಕಾರು ಬಾರಿ ಓದಿದ್ದರೂ, ಎಲ್ಲ ವಚನಗಳೂ ಪೂರ್ತಿಯಾಗಿ ಜ್ಞಾಪಕದಲ್ಲಿ ಉಳಿಯಲು ಸಾಧ್ಯವಿಲ್ಲ. ಯಾವುದಾದರೂ ವಚನದ ಒಂದು ಸಾಲು, ಅಥವಾ (ಅಂಕಿತವನ್ನು ಬಿಟ್ಟು) ಯಾವುದೇ ಪದ ನೆನಪಿದ್ದರೂ ಸಾಕು, ಆ ವಚನವನ್ನು ಈ ಕೋಶದ ಸಹಾಯದಿಂದ ಗುರುತಿಸಬಹುದು. ಇಲ್ಲಿ ಆಯಾ ಪದ ಎಲ್ಲೆಲ್ಲಿ ಬಂದಿದೆ ಎಂಬುದರ ಮಾಹಿತಿ ಸಿಗುವುದಲ್ಲದೆ, ಆಯಾ ಪದ ಬಂದಿರುವ ವಾಕ್ಯವನ್ನೂ ಕೊಡುವುದರಿಂದ, ಎಷ್ಟೋ ಕಡೆ ಬಸವಣ್ಣನವರ ವಚನಗಳ ಮೂಲ ಗ್ರಂಥವನ್ನು ನೋಡುವ ತೊಂದರೆ ತಪ್ಪುತ್ತದೆ. 'ಅನುಭಾವ'ದ ಬಗ್ಗೆ ಬಸವಣ್ಣನವರ ಅಭಿಪ್ರಾಯಗಳೇನಿದ್ದುವು ಎಂಬುದನ್ನು ತಿಳಿಯಬಯಸುವವರು 'ಅನುಭಾವ' ಪದದ ಕೆಳಗೆ ಕೊಟ್ಟಿರುವ ಇಪ್ಪತ್ತಮೂರು ಉಲ್ಲೇಖಗಳನ್ನು ಯಥೋಚಿತವಾಗಿ ಬಳಸಿಕೊಳ್ಳಬಹುದು. (ಹೆಚ್ಚಿನ ವಿವರಗಳನ್ನು ಬಯಸುವವರು ಮೂಲಗ್ರಂಥವನ್ನು ನೋಡಬೇಕಾಗುತ್ತದೆ). ಅವರ ಪದ ಪ್ರಯೋಗದ ವೈವಿಧ್ಯ ಎಂತಹುದು, ಎಷ್ಟು ಬಗೆಯ ಪ್ರತಿಮೆಗಳನ್ನು ಹೇಗೆ ಹೇಗೆ ಬಳಸಿಕೊಂಡಿದ್ದಾರೆ ಎಂಬುದನ್ನು ತಿಳಿಯಲು ಈ ಗ್ರಂಥವನ್ನು ಒಮ್ಮೆ ತೆರೆದು ನೋಡಿದರೆ ಸಾಕು - ಇಡೀ ಸಾಮಗ್ರಿ ಅನಾಯಾಸವಾಗಿ ನಮ್ಮ ಕೈವಶವಾಗುತ್ತದೆ. ಸಮಾನರೂಪದ, ಆದರೆ ಭಿನ್ನಾರ್ಥದ ಪದಗಳನ್ನು (Homonyms) ಬೇರೆ ಬೇರೆಯಾಗಿ ಪಟ್ಟಿ ಮಾಡಿರುವುದರಿಂದ ಗೊಂದಲಕ್ಕೆ ಅವಕಾಶವಿಲ್ಲ. "ಕೆಸಱಿಲ್ಲಿ ಬಿದ್ದ ಬಡಪಶುವಿನಂತೆ" ಎಂಬ ಮಾತು ಕೆಸಱು, ಬೀಳು, ಬಡಪಶು, ಪಶು, ಅಂತೆ - ಹೀಗೆ ಐದು ಶೀರ್ಷಿಕೆಗಳ ಕೆಳಗೆ ದೊರಕುತ್ತದೆ. 'ಅಂತೆ' ಶೀರ್ಷಿಕೆಯ ಕೆಳಗಿನ ಉಲ್ಲೇಖಗಳನ್ನಷ್ಟೇ ಇಟ್ಟುಕೊಂಡು ಬಸವಣ್ಣನವರ ಉಪಮೆಗಳ ಬಗ್ಗೆ ದೊಡ್ಡ ಪ್ರಬಂಧವನ್ನು ಬರೆಯಬಹುದು.

1154 ಪುಟಗಳ ಈ ಬೃಹತ್ ಕೃತಿಯನ್ನು ಸಿದ್ಧಪಡಿಸಲು ತೆಗೆದುಕೊಂಡಿರುವ ಕಾಲ, ಪಟ್ಟ ಶ್ರಮ, ತೋರಿರುವ ಎಚ್ಚರ - ಎಲ್ಲವೂ ಕೃತಿಕಾರರ ಬಗ್ಗೆ ಮೆಚ್ಚುಗೆ ಉಂಟಾಗುವಂತೆ ಮಾಡುತ್ತವೆ. ಬಸವಣ್ಣನವರಿಗೆ ಸಂಬಂಧಿಸಿದಂತೆ ನಡೆದ ಈ ಕೆಲಸದ ಮಾದರಿಯಲ್ಲೇ ಇತರ ವಚನಕಾರರಿಗೂ ನಡೆಯಬೇಕಾಗಿದೆ, ಇತರ ಸಾಹಿತ್ಯ ಕೃತಿಗಳಿಗೂ

ಆಗಬೇಕಾಗಿದೆ, ಶಾಸನಗಳಿಗಂತೂ ಅತ್ಯಗತ್ಯವಾಗಿ ಆಗಬೇಕಾಗಿದೆ. ಈ ದಿಸೆಯಲ್ಲಿ ಮೊದಲ ಅತ್ಯಂತ ಸಾರ್ಥಕ ಪ್ರಯತ್ನವನ್ನು ಮಾಡಿರುವ ಶ್ರೀ ಗುಂಜಾಳರು ಅಭಿನಂದನೀಯರಾಗಿದ್ದಾರೆ.

ಕರ್ನಾಟಕದ ಇತಿಹಾಸವನ್ನು ಸಂಕ್ಷಿಪ್ತವಾಗಿ, ಆದರೆ ಸಮಗ್ರವಾಗಿ ನಿರೂಪಿಸುವ ಗ್ರಂಥವೊಂದರ ಕೊರತೆ ಬಹು ಈಚಿನವರೆಗೆ ಇದ್ದಿತು. 1970ರಲ್ಲಿ ಡಾ. ಪಿ.ಬಿ. ದೇಸಾಯಿ ಮತ್ತು ಇತರರಿಂದ ರಚಿತವಾಗಿ ಪ್ರಕಟಿಸಲ್ಪಟ್ಟ ಇಂಗ್ಲಿಷ್ ಗ್ರಂಥ ಆ ಕೊರತೆಯನ್ನು ಹೋಗಲಾಡಿಸಿತು. ಡಾ. ಸೂರ್ಯನಾಥ ಕಾಮತರು **ಕರ್ನಾಟಕದ ಸಂಕ್ಷಿಪ್ತ ಇತಿಹಾಸವನ್ನು** ಕನ್ನಡದಲ್ಲಿ ಬರೆದು, ಅಂತಹ ಗ್ರಂಥ ಕನ್ನಡದಲ್ಲಿ ಇಲ್ಲವಲ್ಲಾ ಎಂಬ ಕೊರತೆಯನ್ನು ನಿವಾರಿಸಿದ್ದಾರೆ.

ಕರ್ನಾಟಕದ ಇತಿಹಾಸ ಪೂರ್ವಕಾಲದಿಂದ ಕರ್ನಾಟಕ ಏಕೀಕರಣವಾಗುವವರೆಗಿನ ಸುದೀರ್ಘ ಇತಿಹಾಸವನ್ನು ಸುಮಾರು ಇನ್ನೂರು ಪುಟಗಳಲ್ಲಿ ಹಿಡಿದಿಟ್ಟಿರುವುದು ಒಂದು ಮೆಚ್ಚಬೇಕಾದ ಸಂಗತಿ. ಇತಿಹಾಸಪೂರ್ವ ಕಾಲದ ಭಾಗವನ್ನು ಬಿಟ್ಟು ಈಚಿನ ಇತಿಹಾಸ ಯುಗದ ಬಗ್ಗೆ ಬರೆಯುವಾಗ, ಆಯಾ ಕಾಲದ ರಾಜವಂಶಗಳ ರಾಜಕೀಯ ಇತಿಹಾಸವನ್ನು ಮಾತ್ರ ಇಲ್ಲಿ ಕೊಡಲಾಗಿದೆ. ಕರ್ನಾಟಕದ ಸಾಂಸ್ಕೃತಿಕ ಇತಿಹಾಸದ ಬಗ್ಗೆಯೂ ಪ್ರತ್ಯೇಕ ಕೃತಿಯೊಂದನ್ನು ರಚಿಸುವ ಉದ್ದೇಶವಿರುವುದಾಗಿ ಲೇಖಕರಿಂದ ತಿಳಿದುಬಂದಿದೆ.

ಒಂದೊಂದು ರಾಜಕುಲವನ್ನು ಪರಿಚಯ ಮಾಡಿಕೊಡುವಾಗಲೂ, ಅನುಕ್ರಮವಾಗಿ ಆ ವಂಶದ ಆಯಾ ದೊರೆಯ ಸಾಧನೆ, ಸಿದ್ಧಿಗಳನ್ನು ಕುರಿತು ಚರ್ಚಿಸುತ್ತಾರೆ. ರಾಜಕೀಯ ಇತಿಹಾಸವನ್ನು ನಿರೂಪಿಸುವುದೇ ಮುಖ್ಯವಾಗಿದ್ದರೂ, ಅಲ್ಲಲ್ಲಿ ಆಯಾ ದೊರೆಯ ಕಾಲದ ಸಾಂಸ್ಕೃತಿಕ ಚಟುವಟಿಕೆಗಳ ಸೂಕ್ಷ್ಮ ಪರಿಚಯವನ್ನೂ ಕೊಡುವುದು ಮೆಚ್ಚಬೇಕಾದ ಸಂಗತಿ. ಇಲ್ಲಿಯವರೆಗೆ ಕರ್ನಾಟಕ ಇತಿಹಾಸದ ಬಗ್ಗೆ ಬಂದಿರುವ ಬರಹಗಳನ್ನೆಲ್ಲ ಓದಿ, ಮನನ ಮಾಡಿ ಅವುಗಳ ಸಾರಾಂಶರೂಪವಾದ ಒಂದು ವಿಶ್ವಾಸಾರ್ಹ ಕೃತಿಯನ್ನು ಒದಗಿಸಿದ್ದಾರೆ.

ಕರ್ನಾಟಕದಲ್ಲಿ ನಡೆದ ಸ್ವಾತಂತ್ರ್ಯ ಸಂಗ್ರಾಮದ ಬಗ್ಗೆ ಇರುವ ಭಾಗದಲ್ಲಿ ಡಾ. ಕಾಮತರ ಸ್ವತಂತ್ರ ಸಂಶೋಧನೆಗಳ ಫಲವನ್ನು ಕಾಣಬಹುದು. ಇಲ್ಲಿಯೂ ತಮಗಿಂತ ಹಿಂದಿನವರ ಬರಹಗಳನ್ನು ಬಳಸಿಕೊಂಡಿದ್ದಾರೆ. ಆದರೆ ಆ ವಿಷಯದ ಬಗ್ಗೆ ವಿಶೇಷ ಕೆಲಸಮಾಡಿ, ಈಚೆಗೆ ಬೃಹದ್ಗ್ರಂಥವನ್ನೂ ಹೊರತಂದಿರುವ ಕಾಮತರ ಬಳಿ ಇತರರಿಗೆ ಅಲಭ್ಯವಾದ ಸಾಮಗ್ರಿ ಇದ್ದಿತೆಂಬುದರ ಬಗ್ಗೆ ಅನುಮಾನವಿಲ್ಲ. ಈ ದೃಷ್ಟಿಯಿಂದ ಕೊನೆಯ ನಲವತ್ತೆಂಟು ಪುಟಗಳು ಓದುಗರಿಗೆ ಹೊಸ ಅನುಭವವನ್ನು ತಂದುಕೊಡುತ್ತವೆ.

ಬಹುತೇಕ ವಿಶ್ವಾಸಾರ್ಹ ಕೃತಿಯೆಂದು ಭಾವಿಸಬಹುದಾದ ಈ ಗ್ರಂಥದಲ್ಲಿ ಗ್ರಂಥಕರ್ತರ ಅವಸರದಿಂದಾಗಿ, ಮರವಿನಿಂದಾಗಿ ಕೆಲವು ಸಣ್ಣ, ಒಂದೆರಡು ದೊಡ್ಡ ದೋಷಗಳು ಉಳಿದಿವೆ. ಅವುಗಳಲ್ಲಿ ಕೆಲವನ್ನು ಇಲ್ಲಿ ತೋರಿಸಬಯಸುತ್ತೇನೆ. ಅಶೋಕನ ಬ್ರಹ್ಮಗಿರಿ ಶಾಸನದಲ್ಲಿ ಕಂಡುಬರುವ ಪ್ರಾಚೀನ ಕನ್ನಡ ಪದ 'ಇಸಿಲಾ' ಅಲ್ಲ (ಪು.1), 'ಇಸಿಲ'.

ಪು. 3ರಲ್ಲಿ ಪಂಪನ ಪದ್ಯವನ್ನು ಉದ್ಧರಿಸುವಾಗ ಮೂರು ತಪ್ಪುಗಳಾಗಿವೆ. ಬೇರೆ ಕಡೆಗಳಲ್ಲೂ ಪದ್ಯಗಳನ್ನು ಉದ್ಧರಿಸುವಾಗ ತಪ್ಪುಗಳಾಗಿವೆ. ತಾಳಗುಂದದ ದೇವಾಲಯ ಪ್ರಣವೇಶ್ವರ ದೇವರದು, ಪ್ರಾಣೇಶ್ವರ ಅಲ್ಲ (ಪು.13). ಪುಲಿಕೇಶಿಯ ಐಹೊಳೆ ಶಾಸನ, ಮಂಗಲೇಶನ ಬಾದಾಮಿ ಗುಹೆಯ ಶಾಸನಗಳೆರಡರ ತೇದಿಯೂ ತಪ್ಪಾಗಿ ಉಕ್ತವಾಗಿವೆ. (ಪು. 18-19, ಪು. 207) ಪುಲಿಕೇಶಿಯ ಸೊಸೆ ವಿಜ್ಜಿಕಾ ಅವನ ಎರಡನೆಯ ಮಗ ಚಂದ್ರಾದಿತ್ಯನ ಹೆಂಡತಿ. (ಕಾಮತರು ಆದಿತ್ಯವರ್ಮನ ಹೆಂಡತಿ ಎಂದಿದ್ದಾರೆ. ಪು. 21. ಆದಿತ್ಯವರ್ಮ ಪುಲಿಕೇಶಿಯ ಮೊದಲನೆಯ ಮಗ). ಕೆಲವೆಡೆ ಹೆಸರುಗಳನ್ನು ಕೊಡುವಾಗ ಇನ್ನೂ ಸ್ವಲ್ಪ ಎಚ್ಚರಿಕೆ ವಹಿಸಬೇಕಿತ್ತು. (ಉದಾ ಚಂದ್ರೋಬಲಬ್ಬೆ, ಭೂತುಗ ಎರಡೂ ತಪ್ಪು. ಚಂದ್ರಬ್ಬಲಬ್ಬೆ, ಬೂತುಗ - ಇವು ಸರಿಯಾದ ರೂಪಗಳು).

ಕೆಲವೆಡೆ ಭಾಷೆ ತೀರಾ ಸಡಿಲವಾಗಿ, ಆತುರಾತುರವಾಗಿ ಇಂಗ್ಲೀಷಿನಿಂದ ಅನುವಾದ ಮಾಡಿದಂತಿದೆ.

**ಕರ್ನಾಟಕದ ಸಂಸ್ಕೃತಿಯ ವಿಶ್ವರೂಪ** ಎಂಬ ಪುಟ್ಟ ಪುಸ್ತಕದಲ್ಲಿ ಶ್ರೀ ವ್ಹಿ. ಜಿ. ಮಾರೀಹಾಳರು ದೊಡ್ಡ ಉದ್ದೇಶವಿಟ್ಟುಕೊಂಡು ಹೊರಡುತ್ತಾರೆ. ತಮಗೆ ಪರಿಚಯವಿಲ್ಲದ ಕ್ಷೇತ್ರದಲ್ಲಿ ಲೇಖನ ವ್ಯವಸಾಯವನ್ನು ಕೈಗೊಂಡಾಗ ಇನ್ನೂ ಹೆಚ್ಚಿನ ಎಚ್ಚರ ವಹಿಸುವುದು ಯಾವಾಗಲೂ ಅಪೇಕ್ಷಣೀಯ. ಸಂಸ್ಕೃತಿ ಎಂದರೇನೆಂಬುದನ್ನು ತಮಗೆ ತಾವು ಸ್ಪಷ್ಟಪಡಿಸಿಕೊಳ್ಳುವಾಗಲೇ (ಪು. 3-5) ಮಾರಿಹಾಳರು ವಿಫಲರಾಗಿದ್ದಾರೆ. ತಾವು ಓದಿದ ಬೇರೆ ಬೇರೆ ಗ್ರಂಥಗಳಿಂದ ಯಾವುದೇ ಆಯ್ಕೆಯೂ ಇಲ್ಲದೆ ವಿಷಯಗಳನ್ನು, ಅನಗತ್ಯ ಉಲ್ಲೇಖಗಳನ್ನು ತಪ್ಪು ತಪ್ಪಾಗಿ ತಂದು ಸುರಿಯುತ್ತಾರೆ. "ಭಾರತದಲ್ಲಿಯೇ ಆರು ರಸಗಳನ್ನು ಸಮರಸವಾಗಿ ತಿನ್ನುವ ಜನಾಂಗವೆಂದರೆ ಕನ್ನಡಿಗರೇ" (ಪು. 82) ಎಂಬಂತಹ ಬರವಣಿಗೆಯಿಂದ ಈ ಪುಸ್ತಕವನ್ನು ಗಂಭೀರವಾಗಿ ತೆಗೆದುಕೊಳ್ಳುವುದು ಕಷ್ಟವಾಗುತ್ತದೆ. ದಾನಚಿಂತಾಮಣಿ ಅತ್ತಿಮಬ್ಬೆಯು ಲಕ್ಕುಂಡಿಯಲ್ಲಿ ಶಿಕ್ಷಣಕ್ಕಾಗಿ ಅಸದೃಶದಾನವನ್ನು ಮಾಡಿದಳು ಎಂದು ಹೊಗಳುವ ಲೇಖಕರಿಗೆ (ಪು.35) ಆ ವ್ಯಕ್ತಿಯ ಬಗ್ಗೆ ಸರಿಯಾದ ಮಾಹಿತಿಯೇ ಗೊತ್ತಿಲ್ಲವೆಂಬುದು ಸ್ಪಷ್ಟವಾಗುತ್ತದೆ.

ಸಾರಾಂಶ, ಇಲ್ಲಿ ಸಮೀಕ್ಷೆಗೆ ಒಳಗಾಗಿರುವ ಗ್ರಂಥಗಳೆಲ್ಲ ಒಂದು ಬಗೆಯವಲ್ಲ. ಸೃಜನಾತ್ಮಕ ಸಾಹಿತ್ಯ ಕೃತಿಗಳಿಂದ ಇವು ಭಿನ್ನವೆಂಬುದೇ ಇವುಗಳಲ್ಲಿ ನಾವು ಕಾಣಬಹುದಾದ ಸಮಾನ ಲಕ್ಷಣ. ಸಾಹಿತ್ಯದ ವಿದ್ಯಾರ್ಥಿಗಳು ಇಂಥವನ್ನು 'ಶಾಸ್ತ್ರ' ಎಂಬ ಸಡಿಲವಾದ ಹೆಸರಿನಿಂದ ಕರೆಯುತ್ತಾರೆ.

'ಭಾಷೆ'ಯೊಂದನ್ನು ಬಿಟ್ಟರೆ ಉಳಿದೆಲ್ಲ ಗ್ರಂಥಗಳು ಆಕರ್ಷಕವಾಗಿ ಹೊರಬಂದಿವೆ. ಕೆಲವು ಲೇಖಕರು ಅಚ್ಚಿನ ತಪ್ಪುಗಳನ್ನು ತಿದ್ದುವ ಕಡೆ ಗಮನವನ್ನೇ ಕೊಟ್ಟಿಲ್ಲದಿರುವುದು ಅಕ್ಷಮ್ಯವಾಗಿದೆ.

ಪಿಎಚ್.ಡಿ. ನಿಬಂಧಗಳಲ್ಲಿ ಎರಡು ಸ್ವತಂತ್ರ ವಿಚಾರ ಶಕ್ತಿಯನ್ನು ವ್ಯಕ್ತಪಡಿಸಿವೆ. ಇನ್ನೊಂದನ್ನು ('ಮಹಾಭಾರತ ಸಮೀಕ್ಷೆ') ಪ್ರಕಟಣೆಗೆ ಮುನ್ನ ತೀವ್ರ ತಿದ್ದುಪಡಿಗೆ ಗುರಿಪಡಿಸಿದ್ದರೆ ಚೆನ್ನಾಗಿತ್ತು.

ಭಾಷಾ ವಿಜ್ಞಾನಕ್ಕೆ ಸಂಬಂಧಿಸಿದ ಎರಡು ಪುಸ್ತಕಗಳೂ ನಿರಾಸೆಗೊಳಿಸುತ್ತವೆ.

ಕನ್ನಡದಲ್ಲಿ ಪದಪ್ರಯೋಗ ಕೋಶಗಳ ರಚನೆಗೆ ನಾಂದಿಯನ್ನು ಹಾಡಿದೆ, ಗುಂಜಾಳರ ಪುಸ್ತಕ.

ಇತಿಹಾಸ - ಸಂಸ್ಕೃತಿಗೆ ಸಂಬಂಧಿಸಿದ ಪುಸ್ತಕಗಳು ಎರಡೇ ಎಂಬುದು ನಿರಾಸೆ ಹುಟ್ಟಿಸುವ ಸಂಗತಿ.

# ಸಂಶೋಧನ ಸಮೀಕ್ಷೆ : 1974

ಈ ಸಮೀಕ್ಷೆಯಲ್ಲಿ ಏಳು ಪುಸ್ತಕಗಳು ಸಮಾವೇಶವಾಗಿವೆ. ಈ ಏಳೂ ಒಂದು ಪ್ರಕಾರಕ್ಕೆ ಸೇರಿದ ಕೃತಿಗಳಲ್ಲ. ಎರಡು ಸಾಹಿತ್ಯಕ್ಕೆ ಸಂಬಂಧಿಸಿದ ಕೃತಿಗಳು ; ಎರಡು ಪ್ರಾಚೀನ ಸಂಸ್ಕೃತ ವಾಙ್ಮಯಕ್ಕೆ ಸಂಬಂಧಿಸಿವೆ ; ಎರಡು ಕರ್ನಾಟಕ ಶಾಸನ, ಕಲೆಗಳನ್ನು ಕುರಿತಾದ ಗ್ರಂಥಗಳಾದರೆ ಇನ್ನೊಂದು ವ್ಯಾಕರಣಕ್ಕೆ ಸಂಬಂಧಿಸಿದ ಕೃತಿಯಾಗಿದೆ. ಇವೆಲ್ಲವೂ ವಿಷಯ ಪ್ರಧಾನವಾದ, ಸಂಶೋಧನಾತ್ಮಕ ಗ್ರಂಥಗಳೆಂಬುದೇ ಇವೆಲ್ಲವಕ್ಕೆ ಹೇಳಬಹುದಾದ ಸಮಾನ ಅಂಶವಾಗಿವೆ.

ಈ ಗ್ರಂಥಗಳಲ್ಲಿ ಅಗ್ರಮಾನ್ಯವಾದುದು. ಡಾ. ಶ್ರೀನಿವಾಸ ಹಾವನೂರರ **ಹೊಸಗನ್ನಡದ ಅರುಣೋದಯ.** ಇದು ಅವರಿಗೆ ಪಿಎಚ್.ಡಿ. ಪದವಿಯನ್ನು ದೊರಕಿಸಿಕೊಟ್ಟಿದೆ. ಮೌಲಿಕ ಸ್ವತಂತ್ರ ಸಂಶೋಧನೆಯ ಫಲವಾದ ಇದು ಹಾವನೂರರಿಗೆ ಕೀರ್ತಿಯನ್ನು ತರಬಲ್ಲ, ತಂದಿರುವ ಹೆಮ್ಮೆಯ ಗ್ರಂಥವೂ ಆಗಿದೆ.

ಆಧುನಿಕ ಕನ್ನಡ ಸಾಹಿತ್ಯದ ಆರಂಭಯುಗವಾದ ನವೋದಯ ಸಾಹಿತ್ಯದ ಇತಿಹಾಸವನ್ನು ಸ್ಥೂಲವಾಗಿ ಇಪ್ಪತ್ತನೆಯ ಶತಮಾನದ ಮೊದಲ ದಶಕಗಳಿಂದ ಆರಂಭಿಸುವುದು ರೂಢಿ. ಆದರೆ ಯಾವುದೇ ಸಾಹಿತ್ಯ ಒಂದು ಭಾಷೆಯಲ್ಲಿ ಇದ್ದಕ್ಕಿದ್ದಂತೆ ಮೂಡಿ ಬರುವುದಿಲ್ಲ. ಅದರ ಹಿಂದೆ ಅನೇಕ ಬಗೆಯ, ಅನೇಕರ ಚಟುವಟಿಕೆಗಳು ಇರುತ್ತವೆ, ಅನೇಕ ಬಗೆಯ ಪ್ರಯೋಗಗಳು ನಡೆದಿರುತ್ತವೆ; ಹೊಸ ಮಾರ್ಗಗಳನ್ನು ಹುಡುಕುವ ಪ್ರಯತ್ನಗಳಾಗಿರುತ್ತವೆ. ಪೈರು ಬೆಳೆದು ನಿಂತಿರುವ ಹೊಲವನ್ನು ನೋಡಿದಾಗ, ಅದರ ಹಿಂದೆ ಎಷ್ಟು ಬಗೆಯ ಕೃಷಿ ಸಂಬಂಧ ಕಾರ್ಯಗಳು ನಡೆದಿರುತ್ತವೆಯೆಂಬುದನ್ನು ನಾವು ಬಲ್ಲೆವು. ನವೋದಯ ಸಾಹಿತ್ಯಕ್ಕೆ ಹಿನ್ನೆಲೆಯಾಗಿ ನಡೆದ ಹತ್ತೊಂಬತ್ತನೇ ಶತಮಾನದ ವಿವಿಧ ಚಟುವಟಿಕೆಗಳ ಸವಿಸ್ತಾರವಾದ ಸಮೀಕ್ಷೆ ಮತ್ತು ಮೌಲ್ಯಮಾಪನ ಡಾ. ಹಾವನೂರರ ಗ್ರಂಥದ ಉದ್ದೇಶ. ಅವರು ತಮ್ಮ ಸಮೀಕ್ಷೆಗೆ ಹತ್ತೊಂಬತ್ತನೆಯ ಶತಮಾನವನ್ನು ಆಯ್ದುಕೊಂಡು, ಆ ಶತಮಾನಕ್ಕೆ ಮಾತ್ರ ಸಂಶೋಧನ ಕಾರ್ಯವನ್ನು ತೀವ್ರ ನಿಷ್ಠೆಯಿಂದ ಸೀಮಿತಗೊಳಿಸಿಕೊಂಡಿದ್ದಾರೆ. 'ಹೊಸಗನ್ನಡದ ಅರುಣೋದಯ' ಎಂಬ ಅರ್ಥಪೂರ್ಣ ಶೀರ್ಷಿಕೆಯನ್ನು ತಮ್ಮ ಕೃತಿಗೆ ಕೊಟ್ಟಿದ್ದಾರೆ. ಹತ್ತೊಂಬತ್ತನೆಯ ಶತಮಾನವು ನವೋದಯ ಸಾಹಿತ್ಯದ ಅರುಣೋದಯವೂ ಹೌದು, ಹೆರಿಗೆಯ ಬೇನೆಯೂ ಹೌದು.

ಡಾ. ಹಾವನೂರರ ಶ್ರದ್ಧೆ ಮತ್ತು ಪರಿಶ್ರಮಗಳು ಅಪೂರ್ವವಾದಂಥವು. ತಮ್ಮ ಸಂಶೋಧನೆಗಾಗಿ ಅವರು ಅನೇಕ ಆಕರಗಳನ್ನು ಬೇಸರವಿಲ್ಲದೆ ತಲಸ್ಪರ್ಶಿಯಾಗಿ ಪರಿಶೋಧಿಸಿದ್ದಾರೆ. ನಮಗೆ ಈಗಾಗಲೇ ಗೊತ್ತಿರುವ ಪ್ರಸಿದ್ಧ ಆಕರಗಳಲ್ಲದೆ ಬೇರೆ ಬೇರೆ ಕಡೆಗಳಿಂದಲೂ ವಿಷಯ ಸಂಗ್ರಹಮಾಡಿದ್ದಾರೆ. ಹೆಚ್ಚು ಹೆಚ್ಚು ಸಂಗತಿಗಳು ತಿಳಿದು ಬಂದಂತೆಲ್ಲ ನಮ್ಮ ಅನೇಕ ತೀರ್ಮಾನಗಳು ವ್ಯತ್ಯಾಸವನ್ನು ಹೊಂದುತ್ತ ಹೋಗುವುದು ಸಹಜ. (ನಿಜವಾದ ಸಂಶೋಧನೆಯೆಂದರೆ ಇದೇ ತಾನೇ). ಉದಾಹರಣೆಗೆ, ಮೊದಲ ಕನ್ನಡ ಪತ್ರಿಕೆ ಯಾವುದು ಎಂಬುದರ ಬಗ್ಗೆ ಹಾವನೂರರ ಬರಹವನ್ನು ನೋಡಿದವರಿಗೆ ಇದು ಸ್ಪಷ್ಟವಾಗುತ್ತದೆ. ತಮಗಿಂತ ಹಿಂದೆ ಈ ಕ್ಷೇತ್ರದಲ್ಲಿ ಆಲೋಚನೆ ಮಾಡಿದವರ ಕಾರ್ಯವನ್ನು ಉಪಯೋಗಿಸಿಕೊಂಡು ತಮ್ಮ ಸಂಶೋಧನ ಸಾಮರ್ಥ್ಯದಿಂದ ನಮ್ಮ ಅರಿವಿನ ಪರಿಧಿಯನ್ನು ಹೆಚ್ಚಿಸಿದ್ದಾರೆ.

'ಅರುಣೋದಯದ ಹಿನ್ನೆಲೆ'ಯೆಂಬ ಮೊದಲ ಅಧ್ಯಾಯದಲ್ಲಿ ಕನ್ನಡ ಸಾಹಿತ್ಯದ ಸಂಕ್ಷಿಪ್ತ ಚರಿತ್ರೆಯನ್ನು ಕೊಟ್ಟಿದ್ದಾರೆ. ಇಲ್ಲಿ ಬಂದಿರುವ ಒಂದೆರಡು ಹೇಳಿಕೆಗಳು ಭಿನ್ನಾಭಿಪ್ರಾಯಕ್ಕೆ ಅವಕಾಶ ಮಾಡಿಕೊಡುತ್ತವೆ. ಉದಾಹರಣೆಗೆ, ಕವಿರಾಜಮಾರ್ಗದಲ್ಲಿ ಬಂದಿರುವ 'ಪಟಿಗನ್ನಡ' ಎಂಬ ಮಾತು ಹಿಂದಿನ ಭಾಷೆಯನ್ನು ಸೂಚಿಸದೆ ಕಾವ್ಯ ಶೈಲಿಯನ್ನು ಸೂಚಿಸುತ್ತದೆ ಎಂಬ ಹಾವನೂರರ ಅಭಿಪ್ರಾಯ ಪ್ರಶ್ನಾರ್ಹವಾದುದು. ಹಳಗನ್ನಡ - ನಡುಗನ್ನಡಗಳ ಸಂಕ್ರಮಣ ಸ್ಥಿತಿಯಲ್ಲಿ ಐಕಾರವು ವಿಕಲ್ಪ ಸ್ಥಿತಿಯಲ್ಲಿದ್ದಿತು ಎಂಬ ಅವರ ಹೇಳಿಕೆಯೂ ಅಷ್ಟೇ. ಇಂಥವು ಅತ್ಯಲ್ಪ ಮತ್ತು ತೀರಾ ಗೌಣವಾದುವು. ಆದರೆ, ವಿಷಯ ಪರಿಪುಷ್ಟವಾದ ಹಾವನೂರರ ಗ್ರಂಥದಲ್ಲಿ ಅಲ್ಲಲ್ಲಿ ಅಭಿಪ್ರಾಯ ಭೇದಗಳನ್ನು ತೋರಬಹುದೇ ಹೊರತು, ಸಂಗತಿ ದೋಷಗಳನ್ನು ತೋರುವುದು ಕಷ್ಟ. ಇದಕ್ಕೆ ಕಾರಣ ಸ್ಪಷ್ಟವಾಗಿದೆ. ಹಾವನೂರರು ಸಾಧ್ಯವಾದಷ್ಟು ಮೂಲ ಆಕರಗಳಿಗೆ ಹೋಗಿದ್ದಾರೆ. ಇದರಿಂದ ಅವರ ಗ್ರಂಥಕ್ಕೆ ನಿರ್ದುಷ್ಟತೆ ಪ್ರಾಪ್ತವಾಗಿದೆ. ಧರ್ಮ ಪ್ರಸಾರಕ್ಕಾಗಿ ಭಾರತಕ್ಕೆ ಬಂದ ಮಿಷನರಿಗಳಿಂದ ಆಗಿರುವ ಕಾರ್ಯ, ಮುದ್ರಣಯಂತ್ರ ವೃತ್ತಪತ್ರಿಕೆಗಳು ಇವುಗಳಿಂದಾಗಿ ಜನರಲ್ಲಿ ಉಂಟಾವ ಎಚ್ಚರ, ಪಾಶ್ಚಾತ್ಯ ವಿದ್ಯಾಭ್ಯಾಸ, ಕನ್ನಡದ ಬಗ್ಗೆ ಉಂಟಾದ ಪ್ರಜ್ಞೆ ಇವೆಲ್ಲವನ್ನೂ ಮಾಹಿತಿಯೊಂದಿಗೆ ಹಾವನೂರರು ಚರ್ಚಿಸಿದ್ದಾರೆ. ಅನೇಕ ಕಡೆಗಳಲ್ಲಿ ಮೂಲ ಗ್ರಂಥಗಳಿಂದ ಉಪಯುಕ್ತ ಭಾಗಗಳನ್ನು ಎತ್ತಿಕೊಟ್ಟಿರುವುದು ಇದನ್ನು ಒಂದು ಆಕರ ಗ್ರಂಥವಾಗಿ ಮಾಡುತ್ತದೆ.

ಪುಸ್ತಕಕ್ಕೆ 'ಹೊಸಗನ್ನಡದ ಅರುಣೋದಯ' ಎಂಬ ಹೆಸರನ್ನಿಟ್ಟಿರುವುದರ ಬಗ್ಗೆ ಎರಡು ಮಾತು ಹೇಳುವುದು ಆವಶ್ಯಕ. ಶೀರ್ಷಿಕೆ ಇದು ಹೊಸಗನ್ನಡ ಭಾಷೆಯ ಆರಂಭಕ್ಕೆ ಸಂಬಂಧಿಸಿದ ಗ್ರಂಥವೆಂಬ ಭಾವನೆಯನ್ನು ಹುಟ್ಟಿಸುತ್ತದೆ 'Beginnings of Modern Kannada' ಎಂದು ತಮ್ಮ ಕೃತಿಯನ್ನು ಇಂಗ್ಲೀಷಿನಲ್ಲಿ ಕರೆದಿರುವುದೂ ಇದನ್ನೇ ಸಮರ್ಥಿಸುತ್ತದೆ. 'ಹೊಸಗನ್ನಡ ಸಾಹಿತ್ಯದ ಅರುಣೋದಯ' ಎಂಬ ಶೀರ್ಷಿಕೆ ಬಹುಶಃ ಹೆಚ್ಚು ಖಚಿತವಾಗಿರುತ್ತದೆ.

**ಸಂಶೋಧನ ಪಂಚದಶಿ** ಎಂಬುದು ಶ್ರೀ ಭೀಮರಾವ್ ಚಿಟಗುಪ್ಪಿಯವರ ಹದಿನೈದು ಸಂಶೋಧನ ಪ್ರಬಂಧಗಳ ಸಂಕಲನ. ಬೇರೆ ಬೇರೆ ಪತ್ರಿಕೆಗಳಲ್ಲಿ ಆಗಾಗ್ಗೆ ಪ್ರಕಟವಾಗಿದ್ದ ಲೇಖನಗಳು ಈಗ ಒಂದೆಡೆ ಸಿಗುವಂತಾಗಿರುವುದು ಸಂತೋಷದ ಸಂಗತಿ. ಇಲ್ಲಿಯ ಎಲ್ಲ ಸಂಪ್ರಬಂಧಗಳು ಕನ್ನಡ ಸಾಹಿತ್ಯಕ್ಕೆ (ಕರ್ನಾಟಕಕ್ಕೆ) ಸಂಬಂಧಿಸಿದ ಒಂದಲ್ಲ ಒಂದು ಸಮಸ್ಯೆಯನ್ನು ಕುರಿತು ಚರ್ಚಿಸುವ ಪ್ರಯತ್ನಗಳು.

ಈ ಸಂಪ್ರಬಂಧಗಳನ್ನು ಓದುವ ಯಾರಿಗೇ ಆದರೂ ಮೊದಲ ಬಾರಿಗೇ ಎದ್ದು ಕಾಣುವ ಅಂಶವೆಂದರೆ ಚಿಟಗುಪ್ಪಿಯವರ ಅಧ್ಯಯನದ ಆಳ ಮತ್ತು ಅಗಲ. ಅವರು ಪ್ರಾಚೀನ ಕನ್ನಡ ಸಾಹಿತ್ಯದ ನಿಷ್ಠಾವಂತ ಅಭ್ಯಾಸಿಯೆಂಬುದು ಸ್ಪಷ್ಟ. ಛಂದಸ್ಸು, ಕರ್ತೃತ್ವ, ಪ್ರಕಾರದ ಉಗಮ, ಕಾಲವಿಚಾರ ಇತ್ಯಾದಿ ಬಗೆಬಗೆಯ ಸಮಸ್ಯೆಗಳನ್ನು ಇನ್ನೂ ಬಗೆಹರಿಯದಿರುವ ಸಮಸ್ಯೆಗಳನ್ನು ಆರಿಸಿಕೊಂಡು ವಿಚಾರ ಮಾಡಿದ್ದಾರೆ; ವಿಶ್ಲೇಷಿಸಿ, ಕೆಲವೆಡೆ ತೀರ್ಮಾನಗಳನ್ನು ಕೊಟ್ಟಿದ್ದಾರೆ. ಇಂತಹ ಬರಹಗಳಿಗೆಲ್ಲ ಅನ್ವಯವಾಗುವಂತಹ ಒಂದು ಮಾತನ್ನು ಹೇಳುವುದಾದರೆ - ಸಮಸ್ಯೆಗಳನ್ನು ಪರಿಹರಿಸುವುದರಲ್ಲಿ ಕೆಲವೆಡೆ ಸಫಲರಾಗಿದ್ದಾರೆ, ಕೆಲವೆಡೆ ಅಷ್ಟೊಂದು ಸಫಲರಾಗಿಲ್ಲ ; ಆದರೆ ಒಟ್ಟು ಕೃತಿ ಚಿಟಗುಪ್ಪಿಯವರು ಸಮರ್ಥ ಸಂಶೋಧಕರೆಂಬುದನ್ನು ತೋರಿಸಿಕೊಡುತ್ತದೆ.

ಮೊದಲನೆಯ ಪ್ರಬಂಧ 'ಕವಿಪರಮೇಷ್ಠಿ ಕನ್ನಡದಲ್ಲಿ ಬರೆದಿದ್ದನೆ?' ಎಂಬುದನ್ನೇ ತೆಗೆದುಕೊಳ್ಳೋಣ. ಸಮಂತಭದ್ರ, ಪೂಜ್ಯಪಾದ, ಕವಿಪರಮೇಷ್ಠಿಗಳು ಕನ್ನಡ ಕೃತಿಕಾರರಿರಬಹುದು ಎಂಬ ಭಾವನೆ ಕವಿಚರಿತಕಾರರ ಕಾಲದಿಂದಲೂ ಪ್ರಚಲಿತವಾಗಿದ್ದರೂ ಆ ಊಹೆಯನ್ನು ಸಮರ್ಥಿಸುವ ಖಚಿತ ಆಧಾರವೊಂದೂ ಇನ್ನೂ ದೊರಕಿಲ್ಲ. ಕವಿ ಪರಮೇಷ್ಠಿ ಅರವತ್ತು ಮೂವರು ಶಲಾಕಾ ಪುರುಷರ ಪುರಾಣವನ್ನು ಬರೆದಿದ್ದಾನೆ ಎಂಬುದಕ್ಕೆ ಅನೇಕ ಕನ್ನಡ ಕವಿಗಳ ಹೇಳಿಕೆಗಳು ಸಾಕ್ಷ್ಯಾಧಾರಗಳಾಗಿವೆ. ಆತನ ಆ ಕೃತಿಯು 'ಗದ್ಯಕಥಾ' ರೂಪದಲ್ಲಿದ್ದಿತೆಂದು ಗುಣಭದ್ರ ಹೇಳುತ್ತಾನೆ. ಇಷ್ಟೇ ಸಾಕು ಅದು ಕನ್ನಡದಲ್ಲಿದ್ದಿತೆಂಬುದಕ್ಕೆ ಎಂಬ ಚಿಟಗುಪ್ಪಿಯವರ ವಾದ ಬಹಳ ದುರ್ಬಲವಾಗಿ ತೋರುತ್ತದೆ. ಗದ್ಯಕಥೆಯು ಸಂಸ್ಕೃತದಲ್ಲಾದರೂ ಇರಬಹುದು, ಇತರ ಭಾಷೆಗಳಲ್ಲಾದರೂ ಇರಬಹುದು. ಕನ್ನಡದಲ್ಲಿ ಕವಿರಾಜಮಾರ್ಗಕ್ಕಿಂತ ಹಿಂದೆ 'ಗದ್ಯಕಥೆ'ಗಳಿದ್ದುವೆಂದು ತಿಳಿದುಬಂದರೂ, ಆ ಗದ್ಯಕಥೆಗಳಲ್ಲಿ ಪರಮೇಷ್ಠಿಯ ಕೃತಿಯೂ ಒಂದು ಎಂದು ಹೇಳಲು ಹೆಚ್ಚಿನ ಆಧಾರಗಳು ಬೇಕು. ಚಾವುಂಡರಾಯ ಪುರಾಣದಲ್ಲಿ ಪೂಜ್ಯಪಾದನವೆಂದು ಹೇಳುವ ಪದ್ಯಗಳು ಸಂಸ್ಕೃತದಲ್ಲಿರುವುದರಿಂದ ಆತನ ಕೃತಿ ಸಂಸ್ಕೃತ ಭಾಷೆಯಲ್ಲಿದ್ದಿತು ಎಂಬುದಕ್ಕೆ ಪ್ರತಿಯಾಗಿ ವಾದಿಸುವುದು ಸದ್ಯದಲ್ಲಿ ಕಷ್ಟವಾಗಿದೆ.

ವಡ್ಡಾರಾಧನೆಯ ಬಗ್ಗೆ ಬರೆಯುತ್ತ ಆ ಕೃತಿಯ ಹೆಸರನ್ನು ನ್ಯಾಯವಾಗಿ 'ವಡ್ಡಾರಾಧನೆಯ ಕವಚ' ಎಂದಿಟ್ಟುಕೊಳ್ಳಬೇಕೆಂಬ ಚಿಟಗುಪ್ಪಿಯವರ ವಾದದಲ್ಲಿ ಸತ್ಯಾಂಶವಿರುವಂತೆ ತೋರುತ್ತದೆ. ಆದರೆ ವಡ್ಡಾರಾಧನೆಯ ಕಾಲದ ಬಗ್ಗೆ ಬರೆಯುತ್ತ

ಅದು ಸು. 920ರ ಕೃತಿ ಎಂಬುದನ್ನು ಸ್ವೀಕರಿಸಬಹುದೆಂಬ ವಾದ ದುರ್ಬಲಗೊಂಡಿದೆ. ಈಚೆಗೆ ಡಾ. ಎ.ಎನ್. ಉಪಾಧ್ಯೆ ಅದು ಇನ್ನೂ ಈಚಿನ, ಪಂಪೋತ್ತರ ಕಾಲದ ಕೃತಿ ಎಂದು ಬೇರೆ ಆಧಾರದೊಡನೆ ಪ್ರತಿಪಾದಿಸಿರುವುದನ್ನು ಚಿಟಗುಪ್ಪಿಯವರು ಗಮನಿಸಿದಂತೆ ತೋರುವುದಿಲ್ಲ.

ಪಂಪನ ಪ್ರಕಾರ ಪಾಂಡವರೈವರೂ ದ್ರೌಪದಿಯನ್ನು ಮದುವೆಮಾಡಿಕೊಂಡಿದ್ದರು ಎಂಬುದನ್ನು ಸಮರ್ಥಿಸುವುದಕ್ಕೆ ಪಂಪಭಾರತದ ಪದ್ಯವೊಂದರ ಪೂರ್ವಾರ್ಧವನ್ನು ಮಾತ್ರ ಉದ್ಧರಿಸಿದ್ದಾರೆ (ಪು. 30). ಆದರೆ ಇಡೀ ಪದ್ಯವನ್ನು ಸರಿಯಾಗಿ ಗಮನಿಸಿದ್ದರೆ, 'ಪಾಂಡವರು ದ್ರುಪದರಾಯನ ಪಟ್ಟಣದಲ್ಲಿದ್ದಾರೆ. ಪಾಂಚಾಲಿಯನ್ನು ಗೆದ್ದು ಯುದ್ಧದಲ್ಲಿ ಕರ್ಣನನ್ನು ಸೋಲಿಸಿದವನು ಅರ್ಜುನ, ಶಲ್ಯನನ್ನು ಗೆದ್ದವನು ಭೀಮ ಎಂಬ ಸಂಗತಿಯನ್ನು ಚಾರರು ಹಸ್ತಿನಾಪುರಕ್ಕೆ ಹೋಗಿ ದುರ್ಯೋಧನನಿಗೆ ತಿಳಿಸಿದರು' ಎಂಬ ಅರ್ಥ ಸ್ಪಷ್ಟವಾಗಿರುವುದು ಗೊತ್ತಾಗುತ್ತಿತ್ತು. ಪಂಪ ರನ್ನರ 'ವಸ್ತುವಿನ ಸಂಗತಿ'ಯ ಬಗ್ಗೆ ಚಿಟಗುಪ್ಪಿಯವರ ಇಡೀ ವಾದ ನಿರಾಧಾರವಾದುದು. ರನ್ನನ ಮೂರು ಸಮಸ್ಯಾತ್ಮಕ ಛಂದೋಬಂಧಗಳ ಬಗ್ಗೆ ಇರುವ ಸಮಸ್ಯೆಯನ್ನು ಅವರು ಬಿಡಿಸಿದಂತೆ ಕಾಣದು.

ಚಿಟಗುಪ್ಪಿಯವರ ಪಾಂಡಿತ್ಯ ನಮ್ಮ ಮೆಚ್ಚುಗೆ ಗಳಿಸುತ್ತದೆ. ಆದರೆ ತಮ್ಮ ಅಭಿಪ್ರಾಯಗಳನ್ನು ಸ್ಪಷ್ಟವಾಗಿ ಬಿಡಿಸಿ ತೋರಿಸುವ ಕಲೆ ಅವರಿಗೆ ಇನ್ನೂ ಕರಗತವಾಗಬೇಕಾಗಿದೆ. ಎಷ್ಟೋ ಸಾರಿ ಅಗತ್ಯವಿರಲಿ ಇಲ್ಲದಿರಲಿ ತಮಗೆ ಗೊತ್ತಿದೆಯೆಂಬ ಒಂದು ಕಾರಣದಿಂದ ಸಂಗತಿಗಳನ್ನು ಪ್ರಬಂಧಕ್ಕೆ ಸೇರಿಸುತ್ತಾ ಹೋಗುತ್ತಾರೆ. ಕೆಲವೆಡೆ ಅವರ ಆಲೋಚನೆಯ ಸರಣಿಯನ್ನು ಅನುಸರಿಸಿಕೊಂಡು ಹೋಗುವುದು ಕಷ್ಟವಾಗುತ್ತದೆ. ಅವರ ಒಂದು ಸಂಪ್ರಬಂಧವನ್ನು ಎಷ್ಟು ಕುತೂಹಲದಿಂದ ಓದಲು ಆರಂಭಿಸುತ್ತೇವೆಯೋ ಆ ಕುತೂಹಲ ಬೇಗ ಕಂದಿಬಿಡುತ್ತದೆ. ಸಂಶೋಧನ ಪ್ರಬಂಧಗಳಿಗೂ ಅವುಗಳವೇ ಆದ ಖಚಿತ ಆದರೆ ಲಲಿತ ಶೈಲಿಯಿದ್ದರೆ ಅವುಗಳನ್ನು ಓದುವುದು ಅಷ್ಟು ಕ್ಲೇಶದಾಯಕವಾಗದು. ಇಷ್ಟಾದರೂ ಚಿಟಗುಪ್ಪಿಯವರ ವಿಸ್ತಾರವಾದ ಅಭ್ಯಾಸ, ಜ್ಞಾಪಕಶಕ್ತಿ, ಉತ್ಸಾಹ ಶಕ್ತಿಗಳು ಎಂಥವರನ್ನೂ ಬೆರಗುಗೊಳಿಸುತ್ತವೆಯೆಂಬುದನ್ನು ಮಾತ್ರ ಹೇಳಲೇಬೇಕಾಗುತ್ತದೆ.

ಬಿ.ಕೆ. ತಿಮ್ಮಪ್ಪನವರ **ಸುರಪತಿ** ಎಂಬ ಚಿಕ್ಕ ಕೃತಿ ಒಂದು ರೀತಿಯಲ್ಲಿ ವಿಶಿಷ್ಟವಾದುದು. ವೇದಗಳಲ್ಲಿ ಪ್ರಮುಖ ದೇವತೆಯಾಗಿರುವ ಇಂದ್ರನನ್ನು ಕುರಿತಂತೆ ಸಂಸ್ಕೃತ ವಾಙ್ಮಯದಲ್ಲಿ ದೊರಕುವ ಸಾಮಗ್ರಿಯನ್ನು ಒಂದು ಕಡೆ ಸಂಗ್ರಹಿಸಿದ್ದಾರೆ. ತೌಲನಿಕ ಪುರಾಣಶಾಸ್ತ್ರಕ್ಕೆ (Comparative Mythology) ಇಂತಹ ಸಂಕಲನಗಳಿಂದ ಬಹುವಾದ ಸಹಾಯವುಂಟು. ಒಂದು ದೈವದ ಬಗ್ಗೆ ಒಂದು ದೇಶ ಎಷ್ಟು ಬಗೆಬಗೆಯಾಗಿ ಕತೆಗಳನ್ನು ಕಲ್ಪಿಸಬಹುದೆಂಬುದಕ್ಕೆ ಇದು ಒಳ್ಳೆಯ ಸಾಕ್ಷಿ. ತಿಮ್ಮಪ್ಪನವರು ಈ ದೈವದ ಬಗ್ಗೆ ತೌಲನಿಕವಾಗಿ ಅಭ್ಯಾಸ ನಡೆಸಿ ಪುರಾಣಶಾಸ್ತ್ರದ ಅಧ್ಯಯನದ ಮಹತ್ವವನ್ನು ಸೂಚಿಸುವ ಚಿಕ್ಕ ಪ್ರಬಂಧವೊಂದನ್ನು ಈ ಕೃತಿಗೆ ಸೇರಿಸಿದ್ದರೆ ಎಷ್ಟು ಚೆನ್ನಾಗಿತ್ತು ಎಂದು ಅನ್ನಿಸುತ್ತದೆ, ಪುಸ್ತಕ ಓದಿ ಮುಗಿಸಿದ

ಮೇಲೆ. ಆಯಾ ಕತೆಯ ನಿರ್ದಿಷ್ಟ ಆಕರವನ್ನು ಕೊಟ್ಟಿದ್ದರೆ, ಇಂದ್ರನ ಬಗ್ಗೆ ಹೆಚ್ಚಿನ ಕೆಲಸ ಮಾಡುವವರಿಗೆ ಒಳ್ಳೆಯ ಮಾರ್ಗದರ್ಶನ ದೊರಕುತ್ತಿತ್ತು.

ಇರಾವತಿ ಕರ್ವೆಯವರ **ಯುಗಾಂತ** ಎಂಬುದು ಅತ್ಯಂತ ಅಪೂರ್ವ ಕೃತಿಗಳಲ್ಲಿ ಒಂದು. ಮೂಲ ಮರಾಠಿ ಕೃತಿಯನ್ನು ಕನ್ನಡಕ್ಕೆ ಅನುವಾದಿಸಿ ಸರಸ್ವತಿ ಗಜಾನನ ರಿಸಬೂಡ ಅವರು ಒಂದು ಒಳ್ಳೆಯ ಕಾರ್ಯವನ್ನು ಮಾಡಿದ್ದಾರೆಂಬುದೇನೋ ನಿಜ. ಆದರೆ ಅನುವಾದ ಅಸಮರ್ಪಕವಾಗಿದೆಯೆಂಬ ಮಾತನ್ನೂ ಆ ಉಸಿರಿನಲ್ಲೇ ಹೇಳಬೇಕಾಗಿರುವುದು ದುರದೃಷ್ಟ. ಮೂಲ ಮರಾಠಿಯಲ್ಲಿ ಏನೇ ಇರಲಿ critical ಎಂಬುದನ್ನು 'ಸಂಶೋಧಿತ' ಎಂದು ಅನುವಾದಿಸುವುದಕ್ಕಿಂತ 'ಸಂಪಾದಿತ' ಎಂಬ ಈಗಿನ ಪಾರಿಭಾಷಿಕ ಪದವನ್ನೇ ಬಳಸಿದ್ದರೆ ಚೆನ್ನಾಗಿತ್ತು. ಅನುವಾದದ ಭಾಷೆಯೂ ಅಸಮರ್ಪಕವಾಗಿದೆ. ಮೂಲದಲ್ಲಿದ್ದುದನ್ನು ಕೆಲವೆಡೆ ಬಹುಶಃ ಅದೇ ಸರಣಿಯಲ್ಲಿ ಅನುವಾದಿಸಹೋದದ್ದರ ಫಲವಾಗಿ ಅನೇಕ ಕಡೆ ಭಾಷೆ ಕೃತಕವಾಗಿದೆ. 'ಕ್ಷತ್ರಿಯನಿಗೆ ಬ್ರಹ್ಮದೇವನು ನಿರ್ಮಿಸಿದ್ದು ಎದೆಯಿಂದ' ಎಂಬಂತಹ ವಾಕ್ಯಗಳನ್ನು ನೋಡಬಹುದು (ನ್ಯಾಯವಾಗಿ 'ಕ್ಷತ್ರಿಯನನ್ನು' ಎಂದಿರಬೇಕು). ಅಚ್ಚಿನ ತಪ್ಪುಗಳು ಭಾಷೆಯ ಗಾಯದ ಮೇಲೆ ಬರೆ ಎಳೆಯುತ್ತವೆ.

ಇಷ್ಟಾದರೂ ಈ ಪುಸ್ತಕ ಓದಿಸಿಕೊಳ್ಳುವುದು ತನ್ನ ಮೂಲಸತ್ವದಿಂದ. ಶ್ರೀಮತಿ ಕರ್ವೆಯವರು ಸುಪ್ರಸಿದ್ಧ ಮಾನವಶಾಸ್ತ್ರಜ್ಞೆ ಮತ್ತು ಸಮಾಜಶಾಸ್ತ್ರಜ್ಞೆ. 'ಯುಗಾಂತ' ಎಂಬುದು ವ್ಯಾಸಭಾರತದ ಬಗ್ಗೆ ಅವನು ನಡೆಸಿರುವ ಚಿಂತನೆಯ ಫಲ. ಅವರು ಎಷ್ಟು ಆಳವಾಗಿ, ಎಚ್ಚರದಿಂದ ವ್ಯಾಸಭಾರತವನ್ನು ಅಧ್ಯಯನ ಮಾಡಿದ್ದಾರೆಂಬುದು ಈ ಪುಸ್ತಕದ ಪ್ರತಿ ಪುಟದಲ್ಲೂ ವ್ಯಕ್ತವಾಗಿದೆ. ಜೊತೆಗೆ, ವಿದ್ವಾಂಸೆಯಾಗಿ ಸಮಾಜ ಚಿಂತಕಿಯಾಗಿ ಆಧುನಿಕ ಯುಗದ ಸ್ತ್ರೀಯಾಗಿ ವ್ಯಾಸಭಾರತವನ್ನು ವಿಮರ್ಶನ ದೃಷ್ಟಿಯಿಂದ ಪರಿಶೀಲಿಸಿರುವುದರ ಫಲವಾಗಿ ಒಂದು ಅಸಾಧಾರಣ ಗ್ರಂಥವೊಂದು ನಮಗೆ ಲಭ್ಯವಾದಂತಾಗಿದೆ. ಇದು ಓದುಗರನ್ನು ಕೆರಳಿಸುತ್ತದೆ, ದಿಗ್ಭ್ರಮೆಗೊಳಿಸುತ್ತದೆ, ಚಿವುಟುತ್ತದೆ, ಅನೇಕ ಪ್ರಶ್ನೆಗಳನ್ನು ಹಾಕಿ ನಮಗೆ ಸವಾಲನ್ನೆಸೆಯುತ್ತದೆ. ಬಹುಶಃ ಇದೇ ಈ ಗ್ರಂಥದ ಮುಖ್ಯ ಲಕ್ಷಣವೆಂದರೂ ತಪ್ಪಾಗುವುದಿಲ್ಲ.

ಭೀಷ್ಮ ತಾನು ಕೊನೆಯವರೆಗೂ ಬ್ರಹ್ಮಚರ್ಯವನ್ನು ಕಾಪಾಡಿಕೊಂಡು ಬರುವ ಪ್ರತಿಜ್ಞೆಯನ್ನು ನಡೆಸಿದ್ದರಿಂದ ಸಾಧಿಸಿದ್ದೇನು? ಅಂಬಾ, ಅಂಬಿಕಾ, ಅಂಬಾಲಿಕಾ, ಗಾಂಧಾರಿ, ಕುಂತಿ, ಮಾದ್ರಿಯರ ನೋವಿಗೆಲ್ಲ ಅವನೇ ಕಾರಣನಲ್ಲವೇ ? ತನ್ನ ಸ್ವಂತಕ್ಕಾಗಿ ಅದ್ಭುತಸಾಧನೆ ಮಾಡುವ ವ್ಯಕ್ತಿಗೆ ಗೌರವದ ಸ್ಥಾನ ದೊರೆಯಬಹುದು, ಅಂತಹ ಸಮಯದಲ್ಲಿ ಅವನಿಗೆ ಆತ್ಮ ವಿಸ್ಮರಣೆಯೂ ಆಗಿ ಅವನಿಂದ ದುಷ್ಕೃತಿಗಳು ನಡೆಯುವ ಸಂಭವವಿರುತ್ತದೆ. ಭೀಷ್ಮ ಅಂಥವನಲ್ಲವೆ? ಗಾಂಧಾರಿ ತನ್ನ ಕಣ್ಣು ಕಟ್ಟಿಕೊಂಡು ಕುರುಡಳನ್ನಾಗಿ ಮಾಡಿಕೊಂಡದ್ದು ಪಾತಿವ್ರತ್ಯದಿಂದಲ್ಲ, ಕುರುಡು ಗಂಡನ ಮೇಲಿನ ಸೇಡಿನಿಂದ. ಕುಂತಿ ದೂರ್ವಾಸನ 'ಸೇವೆ' ಮಾಡಿದ್ದರ ಫಲವೇ ಕರ್ಣ; ಧರ್ಮರಾಜ ಕುಂತಿಯಲ್ಲಿ ವಿದುರನಿಂದ ಹುಟ್ಟಿದವನು ಇತ್ಯಾದಿ

ಪ್ರಶ್ನೆಗಳನ್ನು ಇಟ್ಟುಕೊಂಡು ಅತ್ಯಂತ ರಮ್ಯವೂ ನಾಟಕೀಯವೂ ಪ್ರಚೋದನೀಯವೂ ಆದ ಶೈಲಿಯಲ್ಲಿ ಶ್ರೀಮತಿ ಕರ್ವೆಯವರು ವಿಚಾರಮಾಡಿದ್ದಾರೆ. 'ನಾನು ಯಾರು?' ಎಂಬ ಪ್ರಶ್ನೆಗೆ ಜೀವನದುದ್ದಕ್ಕೂ ಪ್ರಶ್ನೆ ಹಾಕಿಕೊಂಡ ಕರ್ಣನನ್ನು ಕುರಿತಾದ ಅಧ್ಯಾಯವನ್ನು ಅದರ ಸೊಗಸಿಗಾಗಿಯೇ ಓದಬೇಕು. ಹಾಗೆಯೇ 'ಕೃಷ್ಣ - ವಾಸುದೇವ' ಎಂಬ ಅಧ್ಯಾಯವನ್ನು. ಮಹಾಭಾರತವು ಶ್ರೀಮತಿ ಕರ್ವೆಯವರಿಗೆ ಒಂದು ಕಲ್ಪಿತ ಕತೆಯಲ್ಲ. ಅದು ಈಗಿನ ಅರ್ಥದಲ್ಲಿಯೂ 'ಇತಿಹಾಸ'ವೇ. ಇಷ್ಟೇ. ಅಲ್ಲಿ ಬಂದಿರುವ ಕತೆಯ ಆಳಕ್ಕೆ ಹೋಗಿ ನೋಡುವುದನ್ನು ಕಲಿಯಬೇಕು. ಆಗ ಅದು ನಮಗೆ ನಿಜವಾದ ಪರಿಚಯವನ್ನು ಮಾಡಿಕೊಡಬಲ್ಲದು. ಅವರು ಹೇಳುತ್ತಾರೆ - "ಮಹಾಭಾರತವೆಂದರೆ ಆ ಕಾಲದ ಒಂದು ವಿಶಿಷ್ಟ ಕೋಮಿನವರು ಯಾವ ರೀತಿಯಲ್ಲಿ ಬಾಳುತ್ತಿದ್ದರು ಎಂಬುದರ ಕ್ರಮಪಟ್ಟಿ ಮಾಹಿತಿಯಾಗಿರದೇ ಒಂದು ನಿರ್ದಿಷ್ಟವಾದ ಮನೆತನವನ್ನು ಅನುಲಕ್ಷಿಸಿ, ಹಾಗೆಯೇ ಅದಕ್ಕೆ ಸಂಬಂಧಿತವಾದ ಆ ಕಾಲದ ಜೀವನ, ವಿಚಾರಗಳು, ಇವುಗಳ ಆಳವಾದ, ವ್ಯಾಪಕವಾದ, ಪರಿಶೀಲನೆಯ ಚಿತ್ರಣ ಇರುವ ಒಂದು ಪ್ರದೀರ್ಘವಾದ ಕಥೆಯಾಗಿದೆ". ಇದರ ಸಮರ್ಥನೆಯನ್ನು ಅವರು "ಯುಗಾಂತ" ಎಂಬ ಕೊನೆಯ ಅಧ್ಯಾಯದಲ್ಲಿ ಮಾಡಿದ್ದಾರೆ. ಮೂರು ಸಾವಿರ ವರ್ಷಗಳ ಹಿಂದಿನ ಆ ಕತೆಯಲ್ಲಿ 'ತನ್ನ' ಪ್ರತಿಬಿಂಬವನ್ನು ಕಾಣಬಲ್ಲೆ ಎನ್ನುತ್ತಾರೆ. ಒಂದು ಮಹಾಕೃತಿ ಹೇಗೆ ಎಲ್ಲ ಕಾಲಕ್ಕೂ ನಿಜವಾಗುತ್ತದೆಯೆಂಬುದನ್ನು ತೋರಿಸಿಕೊಟ್ಟಿದ್ದಾರೆ. ಮಹಾಭಾರತದ ಬಗ್ಗೆ, ಭಾರತೀಯ ಸಂಸ್ಕೃತಿಯ ಬಗ್ಗೆ ಆಸಕ್ತಿಯಿರುವವರು ಅತ್ಯವಶ್ಯವಾಗಿ ಓದಬೇಕಾದ ಗ್ರಂಥ ಇದು.

ಶ್ರೀ ಎ.ಎಂ. ಅಣ್ಣೀಗೇರಿಯವರ **ಐಹೊಳೆ, ಸಂಸ್ಕೃತಿ ಮತ್ತು ಕಲೆ** ಎಂಬುದು ಅತ್ಯಂತ ಸ್ವಾಗತಾರ್ಹವಾದ ಕೃತಿ. ಸ್ವತಃ ಇತಿಹಾಸಜ್ಞರೂ ಶಾಸನಜ್ಞರೂ ಆಗಿರುವ ಅಣ್ಣೀಗೇರಿಯವರ ಈ ಪುಸ್ತಕಕ್ಕೆ ಒಂದು ಅಧಿಕಾರತ್ವ ಪ್ರಾಪ್ತವಾಗಿದೆ.

ಮೊದಲ ಹದಿನೈದು ಪುಟಗಳಲ್ಲಿ ಐಹೊಳೆಯ ಹಿನ್ನೆಲೆ ಕೊಟ್ಟಿದ್ದಾರೆ. ಈ ಊರಿನ ಹೆಸರಿನ ಉತ್ತರಾರ್ಧ ನದಿ ಎಂಬ ಅರ್ಥದ 'ಹೊಳೆ' ಎಂದು ಅಣ್ಣೀಗೇರಿಯವರು ಭಾವಿಸಿರುವುದು ಸರಿಯಾಗಿ ತೋರುವುದಿಲ್ಲ. ಪ್ರಾಚೀನ ಶಾಸನಗಳಲ್ಲಿ 'ಆರ್ಯಪುರ' ಎಂಬ ಸಂಸ್ಕೃತೀಕರಿಸಿದ ರೂಪ ದೊರಕುವುದನ್ನು ಗಮನಿಸಿದರೆ, ಉತ್ತರಾರ್ಧವು ಪಟ್ಟಣ ಎಂಬರ್ಥದ 'ಪೊಟಿಲ್' ಇದ್ದಿರಬೇಕು.

ಅಯ್ಯ + ಪೊಟಿಲ್ → ಅಯ್ಯವೊಟಿಲ್ → ಅಯ್ಯಾವೊೞ →

ಅಯ್ಯಾವೊಳೆ → ಐವೊಳೆ

ಇಲ್ಲಿಯ 'ವೊಳೆ'ಗೂ ಹೊಳೆಗೂ ಸಂಬಂಧವಿದೆಯೆಂಬ ಭ್ರಾಂತಿಯಿಂದ ಮುಂದೆ ಅದು ಐಹೊಳೆ ಎಂದು ತಿದ್ದುಪಾಟಾಗಿರುವ ಸಂಭವವಿದೆ. ಆರಂಭದಲ್ಲಿ ಕೊಟ್ಟಿರುವ ಚಾರಿತ್ರಿಕ ಹಿನ್ನೆಲೆಯು ಐಹೊಳೆಯ ಐತಿಹಾಸಿಕ ಮಹತ್ವವನ್ನು ತಿಳಿಯುವುದಕ್ಕೆ ಸಹಾಯಕವಾಗಿದೆ.

ಎರಡನೆಯ 'ವಾಸ್ತುಶಿಲ್ಪ' ಭಾಗವು ವಿಸ್ತಾರವಾಗಿದೆ ಮತ್ತು ಇದೇ ಈ ಕೃತಿಯ ಅತ್ಯಂತ ಮುಖ್ಯವಾದ ಭಾಗ. ಐಹೊಳೆಯ ಒಂದೊಂದು ದೇವಾಲಯವನ್ನೂ ವಿವರವಾಗಿ ವರ್ಣಿಸಿ, ಅಲ್ಲಲ್ಲಿ ಅದರದರ ವೈಶಿಷ್ಟ್ಯವನ್ನು ಎತ್ತಿ ತೋರಿದ್ದಾರೆ. ಹಾಗೆಯೇ ಅಲ್ಲಿ ಬಂದಿರುವ ಶಿಲ್ಪಮೂರ್ತಿಗಳ ಪರಿಚಯವನ್ನು ಆದಷ್ಟು ಸುಲಭ ರೀತಿಯಲ್ಲಿ ಮಾಡಿಕೊಟ್ಟಿದ್ದಾರೆ. ಒಂದೊಂದು ದೇವಸ್ಥಾನದ ಇತಿಹಾಸದ ಜೊತೆಗೆ, ತಿಳಿದಿದ್ದರೆ ಅದನ್ನು ಕಟ್ಟಿಸಿದ ಶಿಲ್ಪಿಯ ವಿವರಗಳನ್ನೂ ಕೊಟ್ಟು ಸಹಾಯ ಮಾಡಿದ್ದಾರೆ. ಐಹೊಳೆಯ ಬೌದ್ಧ ಚೈತ್ಯಾಲಯದ ಬಗ್ಗೆ ಕೊಟ್ಟಿರುವ ವಿವರಗಳು ಅತ್ಯಂತ ಉಪಯುಕ್ತವಾಗಿವೆ. ಚಾಲುಕ್ಯ ವಾಸ್ತು ಮತ್ತು ಶಿಲ್ಪದ ಮಹತ್ವಗಳನ್ನು ಸಂಕ್ಷಿಪ್ತವಾಗಿ ಚಿತ್ರಿಸಿದ್ದಾರೆ. ಅಂತ್ಯದಲ್ಲಿ ಐಹೊಳೆಯ ಪ್ರಮುಖ ಶಾಸನಗಳನ್ನು ಒಂದು ಕಡೆ ಕೊಟ್ಟಿರುವುದು ಅಣ್ಣೀಗೇರಿಯವರು ಮಾಡಿರುವ ಮತ್ತೊಂದು ಉಪಕಾರ (ಎಲ್ಲವನ್ನೂ ಏಕೆ ಕೊಡಲಿಲ್ಲವೋ!). ಕಾಲ ಕಾಲಕ್ಕೆ ಐಹೊಳೆಯು ಪಡೆದಿದ್ದ ಪ್ರಾಮುಖ್ಯವನ್ನು ಇವು ಚಿತ್ರಿಸುತ್ತವೆ.

ಅಣ್ಣೀಗೇರಿಯವರ ಭಾಷೆ ಶಾಸ್ತ್ರೀಯವಾದರೂ ಸರಳತೆಯನ್ನು ಬಿಡುವುದಿಲ್ಲ. ಇದು ಅನೇಕರ ಬರಹಗಳನ್ನು ಓದಿ ತಯಾರಿಸಿದ ಗ್ರಂಥವಲ್ಲ - ಸ್ವಂತ ಪರಿವೀಕ್ಷಣೆಯಿಂದ ಮೂಡಿ ಬಂದ ಗ್ರಂಥ. ಇಂತಹ ಸ್ವತಂತ್ರ ಮೌಲಿಕ ಕೃತಿಯೊಂದನ್ನು ಕೊಟ್ಟಿರುವ ಅಣ್ಣೀಗೇರಿಯವರು ನಿಜವಾಗಿಯೂ ಅಭಿನಂದನಾರ್ಹರಾಗಿರುತ್ತಾರೆ.

ಎಂ.ಎಂ. ಕಲಬುರ್ಗಿಯವರ **ಶಾಸನ ವ್ಯಾಸಂಗವು** ಕರ್ನಾಟಕದ, ವಿಶೇಷವಾಗಿ ಕನ್ನಡದ ಶಾಸನಗಳನ್ನು ಕುರಿತಂತೆ ನಡೆಸಿದ ಅಧ್ಯಯನದ ಫಲ. ಇದರಲ್ಲಿ ಹತ್ತು ಅಧ್ಯಾಯಗಳಿದ್ದು ಒಂದೊಂದೂ ಶಾಸನ ವಾಙ್ಮಯದ ಬೇರೆ ಬೇರೆ ಮುಖಗಳನ್ನು ಪರಿಚಯಮಾಡಿಕೊಡಲು ಪ್ರಯತ್ನಿಸುತ್ತದೆ. ಕನ್ನಡ ಶಾಸನ ಶಾಸ್ತ್ರದಲ್ಲಿ ಕೆಲಸ ಮಾಡುವವರಿಗೆ ಇದೊಂದು ಅತ್ಯಂತ ಸಹಾಯಕವಾದ ಗ್ರಂಥ. ಇದರಲ್ಲಿ ಶಾಸನ ಕವಿಗಳು, ಶಾಸನ ಲಿಪಿಕಾರರು, ಶಿಲ್ಪಿಗಳು, ಶಾಸನಗಳ ಸಾಹಿತ್ಯಕ ಮೌಲ್ಯ ಇತ್ಯಾದಿ ಒಟ್ಟು ಹತ್ತು ವಿಷಯಗಳನ್ನು ಕುರಿತಂತೆ ಸಾಮಗ್ರಿಯನ್ನು ಸಂಗ್ರಹಿಸಿಕೊಟ್ಟಿದ್ದಾರೆ. ಇಲ್ಲಿಯ "ಒಂದೊಂದು ಪ್ರಕರಣ ಒಂದೊಂದು ಸ್ವತಂತ್ರ ಗ್ರಂಥವ್ಯಾಪ್ತಿಯುಳ್ಳದು. ಈ ದಿಸೆಯಲ್ಲಿ ದುಡಿಯುವವರಿಗೆ ಈ ಪ್ರಕರಣಗಳು ತಲವಿನ್ಯಾಸವಾದರೂ ನನ್ನ ಶ್ರಮ ಸಾರ್ಥಕವೆಂದು ಬಗೆಯುತ್ತೇನೆ" ಎಂಬ ಕಲಬುರ್ಗಿಯವರ ಮಾತುಗಳನ್ನು ಗಮನಿಸಬೇಕು. ಹೆಚ್ಚಿನ ಅಭ್ಯಾಸಕ್ಕೆ ಮಾಹಿತಿಯನ್ನು ಒದಗಿಸಿಕೊಡುವುದು ಕಲಬುರ್ಗಿಯವರ ಉದ್ದೇಶವಾಗಿದೆ ಮತ್ತು ಆ ಉದ್ದೇಶದಲ್ಲಿ ಸಾರ್ಥಕತೆಯನ್ನು ಪಡೆದಿದ್ದಾರೆ.

'ಶಾಸನ ಕವಿಗಳು' ಎಂಬ ಪ್ರಕರಣವನ್ನೇ ತೆಗೆದುಕೊಳ್ಳೋಣ. ಶಾಸನಗಳ ಕೊನೆಯಲ್ಲಿ ಬರುವ ಶಾಸನಗಳ ಕವಿಗಳ ಬಗ್ಗೆ ತಮಗೆ ದೊರೆತ ಮಾಹಿತಿಯನ್ನು ಕೊಟ್ಟಿದ್ದಾರೆ. ಶಾಸನ ಕವಿಗಳು ತಮ್ಮ ಸ್ವಕೀಯ ವಿಷಯ ಹೇಳಿಕೊಳ್ಳುವುದು, ಅವರ ಶಾಸನ ಕಾವ್ಯಗಳನ್ನು

ತಿದ್ದಿಕೊಟ್ಟವರ ಹೆಸರುಗಳು, ಒಬ್ಬೊಬ್ಬ ಕವಿ ಅನೇಕ ಶಾಸನಗಳನ್ನು ಬರೆದಿರುವ ಸಂಗತಿ, ಇತ್ಯಾದಿಗಳನ್ನು ಸಂಗ್ರಹಿಸಿ ಕೊಟ್ಟಿದ್ದಾರೆ. ಇದರ ಜೊತೆಗೆ ಶಾಸನ ಸಾಹಿತ್ಯ ಎಂಬ ಪ್ರಕರಣವನ್ನು ಇಟ್ಟು ನೋಡಬೇಕು. ಮೊದಲ ಪ್ರಕರಣದಲ್ಲಿ ಬರೀ ಕವಿಗಳಿಗೆ ಸಂಬಂಧಿಸಿದ ವಿಷಯವಿದ್ದರೆ ಇಲ್ಲಿ ಶಾಸನಗಳನ್ನು ಸಾಹಿತ್ಯವಾಗಿ ನೋಡಬೇಕಾದುದರ ಅಗತ್ಯವನ್ನು ಉದಾಹರಣೆ ಸಮೇತ ಪ್ರತಿಪಾದಿಸಿದ್ದಾರೆ. ಶಾಸನಸಾಹಿತ್ಯ ಚರಿತ್ರೆಯನ್ನು ನೃಪತುಂಗಪೂರ್ವ ಯುಗ, ನೃಪತುಂಗೋತ್ತರ ಯುಗ, ವಿಜಯನಗರ ಯುಗ ಎಂದು ಸ್ಥೂಲವಾಗಿ ಮೂರು ಹಂತಗಳಾಗಿ ವಿಭಜಿಸಿ, ಮೂರನ್ನೂ ಪ್ರಾರಂಭ ಯುಗ, ಪ್ರೌಢ ಯುಗ, ಪತನಯುಗ ವೆಂದು ಅನುಕ್ರಮವಾಗಿ ಹೆಸರಿಸಿರುವುದು ಉಚಿತವಾಗಿದೆ. ಕಲಬುರ್ಗಿಯವರ ಗಮನ ಉದ್ದಕ್ಕೂ ಸಂಗತಿಗಳನ್ನು ಕಲೆ ಹಾಕುವುದರ ಕಡೆಗೆ ಇದೆಯೇ ಹೊರತು, ವಿವರಣೆ ವ್ಯಾಖ್ಯಾನಗಳ ಕಡೆ ಅಷ್ಟು ಗಮನ ಕೊಟ್ಟಿಲ್ಲ. ಅದು ಅವರ ಉದ್ದೇಶವೇ ಅಲ್ಲ ಎಂದು ಹೇಳಲೂ ಬರುವಂತಿಲ್ಲ. 'ಶಾಸನ ಸಾಹಿತ್ಯ' ಪ್ರಕರಣದ ಕೊನೆಯಲ್ಲಿ ಬರುವ ಮಾತುಗಳನ್ನು ಗಮನಿಸಿ - "ಇದು ಕರ್ನಾಟಕದ ಶಾಸನಗಳಲ್ಲಿ ನಿಕ್ಷಿಪ್ತವಾಗಿರುವ ಸಾಹಿತ್ಯ ಸ್ವರೂಪ. ಸುಮಾರು 2000 ವರ್ಷಗಳ ಇತಿಹಾಸವುಳ್ಳ ಈ ಸಾಹಿತ್ಯದ ಅಧ್ಯಯನ, ಕವಿ ಸಾಹಿತ್ಯಾಧ್ಯಯನಕ್ಕೆ ಪೂರಕವಾಗಿದೆ. ವಿವರವಾದ ಅಭ್ಯಾಸದಿಂದ ಈ ಕ್ಷೇತ್ರದಲ್ಲಿ ಮೂಡಿ ಮರೆಯಾಗಿರುವ ಅನೇಕ ಹಾದಿಗಳು ಬೆಳಕಿಗೆ ಬಂದು ಅವೂ ವಿಸ್ತಾರಗೊಂಡು, ನಮ್ಮ ಸಾಹಿತ್ಯ ಚರಿತ್ರೆಯ ತಿಳಿವಳಿಕೆಯೂ ವಿಸ್ತಾರಗೊಳ್ಳುವ ಸಾಧ್ಯತೆಯಿದೆ." ಕಲಬುರ್ಗಿಯವರ ಹಿಂದಿನ ಪ್ರತಿಪಾದನೆ ಈ ಸೂಚನೆಗಳನ್ನು ಸಮರ್ಥಿಸುವಂತಿಲ್ಲ. ಈ ಸೂಚನೆಗಳು ಸರಿಯಲ್ಲವೆಂದು ನಾನು ಹೇಳುತ್ತಿಲ್ಲ. ಕಲಬುರ್ಗಿಯವರು ವಿಷಯ ಸಂಗ್ರಹದ ಮೇಲ್ಪದರದಲ್ಲಿಯೇ ಸುಳಿದಾಡುತ್ತಿರುತ್ತಾರೆ, ಆಳಕ್ಕೆ ಇಳಿಯುವುದಿಲ್ಲ.

ಏಕೆಂದರೆ, ಶಾಸನ ಸಾಹಿತ್ಯದ ವೈಲಕ್ಷಣ್ಯಗಳೇನು? ಅದರ ಉದ್ದೇಶ ಇತಿಮಿತಿಗಳೇನು? ಸಾಹಿತ್ಯಕ್ಕೂ ಶಾಸನ ಸಾಹಿತ್ಯಕ್ಕೂ ಇರುವ ಸಂಬಂಧ ಎಂತಹುದು? ಇಲ್ಲಿ ಬರುವ ಪ್ರತಿಮೆಗಳೆಂತಹವು ? ಭಾಷಾ ಸ್ವರೂಪ ಯಾವುದು? ಇವುಗಳ ಅರಿವು ಓದುಗನಿಗೆ ಸ್ಪಷ್ಟವಾಗಿ ಮೂಡುವುದಿಲ್ಲ. ಹೀಗಾಗಿ ಇಲ್ಲಿ ಇಟ್ಟಿಗೆಗಳ ಜೋಡಣೆ ಉಂಟು, ಮನೆ ಕಟ್ಟುವುದಿಲ್ಲ ಎಂಬ ಭಾವನೆ ಓದುಗನಿಗೆ ಮೂಡುತ್ತದೆ.

'ಶಾಸನ ಪರಿಭಾಷೆ' ಎಂಬ ಅಧ್ಯಾಯದಲ್ಲಿ ಆಡಳಿತದ, ವಾದ್ಯಗಳ, ದೇಶದ ಆಡಳಿತ ಘಟಕಗಳ, ಬೇರೆ ಬೇರೆ ಪದ್ಧತಿಗಳ, ತೆರಿಗೆಗಳ ಅಪೂರ್ವ ಪದಗಳನ್ನು ರಾಶಿ ಹಾಕುತ್ತಾರೆ. ಅಂತಹ ಪದಗಳು ಶಾಸನಗಳಲ್ಲಿ ಬರುತ್ತವೆ ಎಂಬ ಒಂದು ಸಾಮಾನ್ಯಜ್ಞಾನ ಶಾಸನಗಳ ಆರಂಭ ವಿದ್ಯಾರ್ಥಿಗೆ ಉಂಟಾಗಬಹುದು. ಆದರೆ ಅವರು ಯಾವ ಸಮಸ್ಯೆಯನ್ನೂ ಎದುರಿಸುವುದಿಲ್ಲ. ಅಧ್ಯಾಯದ ಕೊನೆಯಲ್ಲಿ ಮಾತ್ರ ಹೀಗಿದೆ - "ಹೀಗೆ ಹತ್ತು ಮುಖಗಳಲ್ಲಿ ಹಬ್ಬಿನಿಂತ ಈ ಪರಿಭಾಷೆಗಳಿಂದ ಸಮಕಾಲೀನ ಸಮಾಜದ ಎಲ್ಲ ಕ್ಷೇತ್ರಗಳ ಪರಿಚಯ ಸಾಧ್ಯವಾಗುತ್ತದೆ"- ಆದರೆ ಇದು ಆ ಪ್ರಕರಣದಿಂದ ಸಿದ್ಧವಾಗುವ ಅಭಿಪ್ರಾಯವಾಗದೆ ಪ್ರತ್ಯೇಕವಾಗಿ ನಿಲ್ಲುವಂತಹ ಮಾತಾಗುತ್ತದೆ.

'ಶಾಸನಗಳ ಪಾಠಪರಿಷ್ಕರಣ'ವು ಇಲ್ಲಿಯ ಬಹು ಸ್ವಾರಸ್ಯವಾದ ಅಧ್ಯಾಯಗಳಲ್ಲೊಂದು. ಪ್ರಾಸ, ಛಂದಸ್ಸು, ಧಾಟಿ ಇವುಗಳ ಮೇಲೆ ಹೇಗೆ ಎಷ್ಟೋ ಸಾರಿ ಊಹೆಯ ಮೇಲೆ ಪಾಠವನ್ನು ಪರಿಷ್ಕರಿಸಲು ಸಾಧ್ಯವಾಗುತ್ತದೆ ಎಂಬುದನ್ನು ಒಳ್ಳೆಯ ಉಧಾಹರಣೆಗಳೊಡನೆ ಪ್ರತಿಪಾದಿಸಿದ್ದಾರೆ.

'ಶಾಸನ ವ್ಯಾಸಂಗ'ವು ಕನ್ನಡ ಶಾಸನ ಶಾಸ್ತ್ರದಲ್ಲಿ ಆಸಕ್ತರಾಗಿರುವವರು ಅತ್ಯವಶ್ಯ ಮತ್ತೆ ಮತ್ತೆ ಉಪಯೋಗಿಸಿಕೊಳ್ಳಬೇಕಾದ ಪುಸ್ತಕವೆಂಬುದರಲ್ಲಿ ಅನುಮಾನವಿಲ್ಲ. ಅಚ್ಚಿನ ತಪ್ಪುಗಳು ಹೆಚ್ಚಿನ ಸಂಖ್ಯೆಯಲ್ಲಿರುವುದು ಎಳ್ಳಷ್ಟೂ ಕ್ಷಮ್ಯವಲ್ಲ.

**ಲೀಲಾತಿಲಕಂ** ಎಂಬುದು ಪಿ. ಸುಬ್ರಾಯಭಟ್ ಮತ್ತು ಬಿ.ಕೆ. ತಿಮ್ಮಪ್ಪನವರು ಮಾಡಿರುವ ಅದೇ ಹೆಸರಿನ ಮಲಯಾಳಂ ಲಕ್ಷಣ ಗ್ರಂಥದ ಮೊದಲ ಮೂರು ಶಿಲ್ಪಗಳ ಕನ್ನಡ ಅನುವಾದ. ಹದಿನಾಲ್ಕನೇ ಶತಮಾನದ ಈ ಗ್ರಂಥದಲ್ಲಿ ವ್ಯಾಕರಣವುಂಟು, ಅಲಂಕಾರ ಶಾಸ್ತ್ರವುಂಟು. ಲೀಲಾ ತಿಲಕಕಾರನಿಗೆ ಸಂಸ್ಕೃತ, ತಮಿಳುಗಳಲ್ಲದೆ ಕನ್ನಡ ಕೃತಿಗಳ ಪರಿಚಯವೂ ಇದ್ದಂತೆ ತೋರುತ್ತದೆ. ಸದ್ಯಕ್ಕೆ ಅನುವಾದವಾಗಿರುವ ಭಾಗವು ವ್ಯಾಕರಣಕ್ಕೆ ಮೀಸಲಾಗಿದೆ. ಕನ್ನಡ ವ್ಯಾಕರಣಾಭ್ಯಾಸಿಗಳಿಗೆ ಇದು ವರವಾಗಿ ಪರಿಣಮಿಸಿದೆ. ಲೀಲಾತಿಲಕದ ಮೊದಲ ಶಿಲ್ಪದಲ್ಲಿ ಬರುವ 'ಮಣಿ ಪ್ರವಾಳ' ಶೈಲಿಯ ವಿಷಯ ಉದ್ಬೋಧಕವಾಗಿದೆ. ಲೀಲಾತಿಲಕಕ್ಕೆ ಇಳಂಕುಳಂ ಕುಂಜನ್ ಪಿಳ್ಳೆಯವರು ಟಿಪ್ಪಣಿ ಬರೆದಿದ್ದು ಅವೂ ಇಲ್ಲಿ ಅನುವಾದವಾಗಿರುವುದು ಕೃತಿಯ ಯೋಗ್ಯತೆಯನ್ನು ಹೆಚ್ಚಿಸಿದೆ. ಅನುವಾದ ಸರಳವೂ ಖಚಿತವೂ ಆಗಿದೆ. ಶಾಸ್ತ್ರದ ಪರಿಭಾಷೆಯ ಬಿಗಿಯು ಅನುವಾದದಲ್ಲೂ ಉಳಿದುಬಂದಿದೆ.

## ಸಂಶೋಧನ ಸಮೀಕ್ಷೆ : 1975

ಈ ಸಮೀಕ್ಷೆಯಲ್ಲಿ ಹನ್ನೆರಡು ಗ್ರಂಥಗಳು ಒಳಗೊಂಡಿವೆ. ಇವು ಭಾಷೆ, ಸಾಹಿತ್ಯ, ಸಂಸ್ಕೃತಿಗಳಿಗೆ ಸಂಬಂಧಿಸಿವೆ. ಇವೆಲ್ಲವೂ ಸಂಶೋಧನಾತ್ಮಕವಾಗಿವೆಯೆಂಬುದೊಂದೇ ಇವುಗಳಲ್ಲಿರುವ ಸಮಾನಗುಣ. ಇವುಗಳಲ್ಲಿ ಮೂರು ಪಿಎಚ್.ಡಿ. ನಿಬಂಧಗಳು, ಮೂರು ನೇರವಾಗಿ ಶಾಸನಶಾಸ್ತ್ರಕ್ಕೆ ಸಂಬಂಧಿಸಿದುವು, ಮೂರು ಭಾಷೆಗೆ ಸಂಬಂಧಿಸಿದುವು. ಎರಡು ಸಂಸ್ಕೃತಿಗೆ ಸಂಬಂಧಿಸಿದುವಾಗಿದ್ದರೆ, ಒಂದು ಒಬ್ಬರೇ ಲೇಖಕರ ಬಿಡಿ ಬರಹಗಳ ಸಂಕಲನವಾಗಿದೆ.

ಬಹು ದೊಡ್ಡ ವಿದ್ವಾಂಸರಾಗಿದ್ದು ಸಾವಿರಾರು ವಿದ್ಯಾರ್ಥಿಗಳಿಗೆ ಇತಿಹಾಸವನ್ನು ಬೋಧಿಸಿ ಗಣ್ಯ ಸಂಶೋಧಕರೆಂದೂ ಅಧ್ಯಾಪಕರೆಂದೂ ಕೀರ್ತಿವಂತರಾಗಿದ್ದ ಡಾ. ಎಸ್. ಶ್ರೀಕಂಠಶಾಸ್ತ್ರಿಗಳವರ ಕನ್ನಡ ಬಿಡಿ ಲೇಖನಗಳ ಸಂಕಲನವೇ **ಸಂಶೋಧನ ಲೇಖನಗಳು** (ಸಂ. : ಬಾ.ರಾ. ಗೋಪಾಲ್ ಮತ್ತು ಟಿ.ವಿ. ವೆಂಕಟಾಚಲಶಾಸ್ತ್ರೀ). ಅವರ ಬರಹಗಳು ಬೇರೆ ಬೇರೆ ಸಂಭಾವನಾ ಗ್ರಂಥಗಳಲ್ಲಿ, ವಿದ್ವತ್ ಪತ್ರಿಕೆಗಳಲ್ಲಿ, ದಿನ ಪತ್ರಿಕೆಗಳಲ್ಲಿ, ವಾರ್ಷಿಕ ಸಾಪ್ತಾಹಿಕ ಪತ್ರಿಕೆಗಳಲ್ಲಿ ಚದುರಿಹೋಗಿದ್ದುವು. ಸಂಶೋಧನೆಯಲ್ಲಿ ಆಸಕ್ತರಾಗಿರುವವರಿಗೆ ಅವರ ಕೆಲವು ಬರಹಗಳು ಲಭ್ಯವಾಗುವುದು ಅಸಾಧ್ಯವಾಗಿದ್ದಿತು. ಹೀಗಿರುವಾಗ ಅವರ ಎಲ್ಲ ಕನ್ನಡ ಲೇಖನಗಳನ್ನೂ ಒಂದೆಡೆಗೆ ತಂದು ಸಂಪಾದಕರು ದೊಡ್ಡ ಉಪಕಾರವನ್ನು ಮಾಡಿದ್ದಾರೆ.

ಇಲ್ಲಿಯ ಸಂಪ್ರಬಂಧಗಳೆಲ್ಲ ಒಂದೇ ಮಟ್ಟದವಲ್ಲ, ಸಹಜವಾಗಿಯೇ. ಪ್ರೌಢ ಪ್ರಬಂಧಗಳಂತೆಯೇ ಜನಪ್ರಿಯ ಬರಹಗಳೂ ಇಲ್ಲಿವೆ. ಕೆಲವು ಕಡೆ ವಿಷಯಗಳು ಪುನರಾವರ್ತನಗೊಳ್ಳುತ್ತವೆ. ಇಷ್ಟಾದರೂ ಈ ಸಂಕಲನ ಒಂದು ಚಿಕ್ಕ ವಿಶ್ವಕೋಶದಂತಿದೆ. ಇಲ್ಲಿಯ ವಿಷಯ ವೈವಿಧ್ಯ ಎಂಥವರನ್ನೂ ಬೆರಗುಗೊಳಿಸುತ್ತದೆ. ಪ್ರಾಚೀನ ವಿಷಯದಂತೆಯೇ ಅತ್ಯಾಧುನಿಕ ವಿಷಯವೂ ಡಾ. ಶಾಸ್ತ್ರಿಯವರ ವಿವೇಚನೆಗೆ ವಸ್ತುವಾಗುತ್ತದೆ. ನಿಜವಾದ ಇತಿಹಾಸಕಾರನಂತೆ ಮೂಲ ಸಾಮಗ್ರಿಗಳನ್ನು ಕಂಡುಹಿಡಿದು ಸಮಸ್ಯೆಯನ್ನು ವಿಶ್ಲೇಷಿಸಿ ಸತ್ಯವನ್ನು ಕಾಣಲು ಯತ್ನಿಸುತ್ತಾರೆ. ತಮ್ಮನ್ನು ತಾವು ಸತ್ಯಾನ್ವೇಷಕನೆಂದು ಭಾವಿಸಿರುವ ಡಾ. ಶಾಸ್ತ್ರಿಯವರು ನಿಷ್ಠುರವಾಗಿಯೇ ಮಾತನಾಡಬಲ್ಲರು. ಅವರ ಆಳವಾದ ವಿಸ್ತಾರವಾದ ಅಧ್ಯಯನ ಯಾರನ್ನೂ ಬೆರಗುಗೊಳಿಸುತ್ತದೆ. ಸಿಂಧೂ ಸಂಸ್ಕೃತಿಯನ್ನು ಕುರಿತ ಅವರ ಬರಹಗಳನ್ನಾಗಲಿ ಚಾಮುಂಡೇಶ್ವರಿ ಕುರಿತ ದೀರ್ಘ ಸಂಪ್ರಬಂಧವನ್ನಾಗಲಿ ಇಲ್ಲಿ

ಹೆಸರಿಸಬಹುದು. ಡಾ. ಶಾಸ್ತ್ರಿಗಳ ಅನೇಕ ಸಂಪ್ರಬಂಧಗಳ ದೊಡ್ಡ ಕೊರತೆಯೆಂದರೆ ಅವುಗಳ ಮುಕ್ತಾಯದ ಭಾಗ. ಇದು ಶೈಲಿಯ ಪ್ರಶ್ನೆಯಲ್ಲ. ಬೇರೆ ಬೇರೆ ಸಂಗತಿಗಳನ್ನು ಒಂದರ ಮೇಲೊಂದರಂತೆ ಪೇರಿಸುತ್ತ ಹೋಗುವ ಅವರು ಕೊನೆಗೆ ಏನು ತೀರ್ಮಾನ ಹೇಳುತ್ತಾರೆ ಅಥವಾ ಯಾವ ಸಂಗತಿಯನ್ನು ಓದುಗರ ಮನಸ್ಸಿನಲ್ಲಿ ನಾಟಿಸಬೇಕೆಂದಿದ್ದಾರೆ ಎಂಬುದೇ ಕೊನೆಗೆ ಅಜ್ಞಾತವಾಗಿ ಉಳಿಯುತ್ತದೆ 'ರಾಮಾಯಣದ ಮೇಲೆ ಹೊಸ ಬೆಳಕು' ಎಂಬ ಸಂಪ್ರಬಂಧವೇ ಅದಕ್ಕೆ ಉದಾಹರಣೆಯಾಗುತ್ತದೆ. ಅವರ ಪಾಂಡಿತ್ಯವೇ ಪ್ರಬಂಧಗಳಲ್ಲಿ ಮುಂದೆ ನಿಂತುಬಿಡುತ್ತದೆ. ಕೆಲವೆಡೆ 'ಶಾಸನಗಳಿಂದ ತಿಳಿದುಬರುತ್ತದೆ' ಎಂದು ಹೇಳಿಬಿಡುತ್ತಾರೆ. ಆದರೆ ವಾಸ್ತವ ಸಂಗತಿ ಹಾಗಿರುವುದಿಲ್ಲ. ಕಲಚೂರ್ಯ ಬಿಜ್ಜಳನು "ಕ್ರಿ.ಶ. 1168ರಲ್ಲಿ ರಾಜ್ಯ ತ್ಯಜಿಸಿದನೇ ವಿನಾ ಕೊಲ್ಲಲ್ಪಡಲಿಲ್ಲ ಎಂಬುದೂ ಶಾಸನಗಳಿಂದ ಸ್ಪಷ್ಟವಾಗುವುದು" ಎಂದು ಹೇಳುತ್ತಾರೆ. ಶಾಸನಗಳಿಂದ ಆ ಸಂಗತಿ ಸ್ಪಷ್ಟವಾಗುವುದಿಲ್ಲವೆಂಬುದನ್ನು ನಾವು ಬಲ್ಲೆವು. "ಲಕ್ಷ್ಯಗಳನ್ನು ಗಮನಿಸಿದರೂ ಸುಮಾರು ಒಂಬತ್ತನೆಯ ಶತಾಬ್ದದಲ್ಲಿಯೇ ಬೆದಂಡೆ ಚತ್ತಾಣ ತಿವದಿ ಮದನವತಿ ಅಕ್ಕರ ಒನಕೆವಾಡು ಸಾಂಗತ್ಯ ಏಲೆ ಚೌಪದಿ ಇತ್ಯಾದಿ ರೂಪಗಳಿದ್ದವೆಂದು ಕವಿರಾಜಮಾರ್ಗ ಮುಂತಾದ ಗ್ರಂಥಗಳಿಂದ ಕಂಡುಬರುತ್ತದೆ" : ಈ ವಾಕ್ಯ ಅವರ ಅವಸರದ ಬರವಣಿಗೆಗೆ ಸಾಕ್ಷಿ. ಆ ವಾಕ್ಯದ 'ಮುಂತಾದ' ಎನ್ನುವ ಪದಕ್ಕೆ ಔಚಿತ್ಯವೇ ಇಲ್ಲ. 'ಸಾಂಗತ್ಯ' ಹದಿನೈದನೆಯ ಶತಮಾನದಷ್ಟು ಈಚಿನದು. ಬೆಂಗಳೂರಿನ ಧರ್ಮರಾಯನ (ಕರಗ) ಹಬ್ಬಕ್ಕೂ ಬೌದ್ಧ ಧರ್ಮಕ್ಕೂ ಸಂಬಂಧವಿಲ್ಲವೆಂದು ಒಂದು ಕಡೆ ಹೇಳಿದರೆ (ಪು. 276) ಸಂಬಂಧವಿದೆಯೆಂದು ಇನ್ನೊಂದೆಡೆ ಹೇಳುತ್ತಾರೆ (ಪು. 463). ಬೇರೆ ಬೇರೆ ಕಾಲಗಳಲ್ಲಿ ಬರೆದ ಲೇಖನಗಳಾದರೂ, ತಮ್ಮ ಮುಂಚಿನ ಅಭಿಪ್ರಾಯವನ್ನು ಮಾರ್ಪಡಿಸಿ ಕೊಂಡರೆಂಬುದಕ್ಕೆ ಸೂಚನೆಗಳಿಲ್ಲ. ಮತ್ತು ಬಹುತೇಕ ಇಂತಹ ಪ್ರಮುಖ ಹೇಳಿಕೆಗಳನ್ನು ಆಧಾರಗಳಿಂದ ಸಮರ್ಥಿಸುವುದಿಲ್ಲ. ವಿಜಯನಗರದ ಪತನಕ್ಕೂ ಪುರಂದರದಾಸರಿಗೂ ಸಂಬಂಧವಿತ್ತೆಂಬ ತಮ್ಮ ನಿಲುವನ್ನು ಕೊನೆಗೂ ಆಧಾರಗಳಿಂದ ಸಮರ್ಥಿಸದೆ ಹಾಗೇ ಉಳಿಸಿಬಿಟ್ಟರು. ಶಾಸ್ತ್ರಿಯವರು ಬಹು ದೊಡ್ಡ ವಿದ್ವಾಂಸರೆಂಬುದರಲ್ಲಿ ಅನುಮಾನವಿಲ್ಲ. ಆದರೆ ಶಾಸ್ತ್ರೀಯ ಸಂಶೋಧನೆ ಆ ವಿದ್ವತ್ತಿಗೆ 'ಸರಿ ಸಮನಾಗಿ' ಅವರಿಗೆ ಒಲಿದಿತ್ತೇ ಎಂಬುದು ಸಂದೇಹಾಸ್ಪದವಾಗುತ್ತದೆ ('ಸರಿಸಮನಾಗಿ' ಎಂಬ ಮಾತು ಮುಖ್ಯ). ಕರ್ನಾಟಕ ಇತಿಹಾಸ, ಸಂಸ್ಕೃತಿಗಳಲ್ಲಿ ಆಸಕ್ತರಾಗಿರುವವರು ಅತ್ಯವಶ್ಯ ಓದಬೇಕಾದ ಗ್ರಂಥವೊಂದನ್ನು ಹೊರತಂದ ಸಂಪಾದಕರು ನಿಜವಾಗಿಯೂ ಅಭಿನಂದನಾರ್ಹರಾಗಿದ್ದಾರೆ.

**ಯುಗಯಾತ್ರೀ ಭಾರತೀಯ ಸಂಸ್ಕೃತಿ** ಗ್ರಂಥದ ಮೂರನೆಯ ಸಂಪುಟವು ಹಿಂದಿನ ಎರಡು ಸಂಪುಟಗಳಂತೆಯೇ ಅತ್ಯಂತ ಆಕರ್ಷಕವಾಗಿ ಹೊರಬಂದಿದೆ. ಕಲ್ಕತ್ತದ ರಾಮಕೃಷ್ಣ ಮಿಷನ್ ಪ್ರಕಟಿಸಿದ The Cultural Heritage of India ಗ್ರಂಥದ ಅನುವಾದ ಇದು ಎಂಬುದನ್ನು ಎಲ್ಲರೂ ಬಲ್ಲರು. ಈ ಸಂಪುಟದಲ್ಲಿ ಮುಖ್ಯವಾಗಿ ಭಾರತೀಯ ತತ್ತ್ವಶಾಸ್ತ್ರಕ್ಕೆ ಸಂಬಂಧಿಸಿದ ಮೂವತ್ತೊಂಬತ್ತು ಲೇಖನಗಳಿವೆ. ದರ್ಶನಗಳು, ವೇದಾಂತ, ಧಾರ್ಮಿಕ ದರ್ಶನಗಳು, ದಾರ್ಶನಿಕ ವಿಜ್ಞಾನಗಳು ಎಂಬ ನಾಲ್ಕು ವರ್ಗಗಳ ಕೆಳಗೆ ಲೇಖನಗಳನ್ನು

ಅಳವಡಿಸಲಾಗಿದೆ. ಮೂಲ ಲೇಖನಗಳನ್ನು ಬರೆದ ವಿದ್ವಾಂಸರು ಗಣ್ಯರು ಮತ್ತು ತಮ್ಮ ತಮ್ಮ ಕ್ಷೇತ್ರಗಳಲ್ಲಿ ಪರಿಣತರು. ಮೂಲ ಗ್ರಂಥದ ಬಗ್ಗೆ ವಿಶ್ವದ ಪಂಡಿತವರ್ಗ ಮುಕ್ತಕಂಠದಿಂದ ಪ್ರಶಂಸೆ ಮಾಡಿದೆ. ಅಂತಹ ಗ್ರಂಥವೊಂದನ್ನು ಕನ್ನಡಕ್ಕೆ ತಂದು ಮೈಸೂರು ವಿಶ್ವವಿದ್ಯಾನಿಲಯ ಮತ್ತು ಅನುವಾದ ಮಾಡಿಸಿ ಪ್ರಕಟಿಸಿರುವ ಪ್ರಸಾರಾಂಗದ ನಿರ್ದೇಶಕ ಡಾ. ಪ್ರಭುಶಂಕರರು ಕನ್ನಡದ ಶಾಸ್ತ್ರ ವಾಙ್ಮಯದ ಶ್ರೀಮಂತಿಕೆಯನ್ನು ಹೆಚ್ಚಿಸಿದ್ದಾರೆ.

ಮೂಲ ಲೇಖನಗಳ ಭಾಷೆ ಸುಲಭವಾಗಿದ್ದರೂ ವಿಷಯದ ಗಹನತೆಯಿಂದ ಅವನ್ನು ಓದಿ ಅರ್ಥೈಸಿಕೊಳ್ಳುವುದು ಸುಲಭವೇನೂ ಅಲ್ಲ. ಅವುಗಳನ್ನು ಕನ್ನಡಕ್ಕೆ ಅನುವಾದಿಸುವ ಕಠಿಣ ಕಾರ್ಯವನ್ನು ಎಲ್ಲ ಅನುವಾದಕರೂ ಯಶಸ್ವಿಯಾಗಿ ಪೂರ್ಣ ಜವಾಬ್ದಾರಿಯಿಂದ ನಿರ್ವಹಿಸಿದ್ದಾರೆ. ಎಲ್ಲ ವಿಷಯದಲ್ಲೂ ಮೂಲಕ್ಕೆ ಯಾವುದೇ ಚ್ಯುತಿ ಬಂದಿಲ್ಲ. ಇಷ್ಟು ತೃಪ್ತಿಕರವಾದ ಪುಸ್ತಕದ ಕೊನೆಯಲ್ಲಿ ಶಬ್ದಸೂಚಿ ಇದ್ದಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು! ಓದುಗರಿಗೆ ಶಬ್ದ ಸೂಚಿಗಳು ಎಷ್ಟು ಅಗತ್ಯವೆಂಬುದನ್ನು ನಾವಿನ್ನೂ ಮನಗಾಣಬೇಕಾಗಿದೆ.

**ಸಂಸ್ಕೃತ ಸಾಹಿತ್ಯಕ್ಕೆ ಕಾಶ್ಮೀರದ ಕೊಡುಗೆ** ಎಂಬ ಡಾ. ಕೆ.ಎಸ್. ನಾಗರಾಜನ್ ಅವರ ಪುಸ್ತಕ ಸ್ವಾಗತಾರ್ಹವಾಗಿದೆ. ಕಾಶ್ಮೀರದ ಹೊರಚೆಲುವಿನಂತೆಯೇ ಅದರ ಸಾಂಸ್ಕೃತಿಕ ಕೊಡುಗೆಯೂ ದೊಡ್ಡದು. ಭಾರತದ ರಾಜಕೀಯ ಇತಿಹಾಸದಲ್ಲಿ ಹೇಗೋ ಅದರ ಸಾಂಸ್ಕೃತಿಕ ಇತಿಹಾಸದಲ್ಲಿಯೂ ಕಾಶ್ಮೀರದ ಸ್ಥಾನ ಮಹತ್ವದ್ದು. ಸಂಸ್ಕೃತ ಸಾಹಿತ್ಯಕ್ಕೆ ಕಾಶ್ಮೀರದ ಕಾಣಿಕೆ ಗಾತ್ರದಲ್ಲಿ ಮತ್ತು ಯೋಗ್ಯತೆಯಲ್ಲಿ ಅದ್ವಿತೀಯವಾದುದು. ಅದನ್ನೇ ತಮ್ಮ ಸಂಶೋಧನೆಯ ವಸ್ತುವಾಗಿ ಮಾಡಿಕೊಂಡು ಪಿಎಚ್.ಡಿ. ಪ್ರಶಸ್ತಿಯನ್ನು ಪಡೆದ ಲೇಖಕರು ತಮ್ಮ ಮೂಲ ಇಂಗ್ಲೀಷ್ ನಿಬಂಧದ ಸಾರವನ್ನು ಈ ಪುಸ್ತಕದಲ್ಲಿ ಕೊಟ್ಟಿದ್ದಾರೆ. ಇದರಿಂದ ಆ ವಿಷಯದ ಬಗ್ಗೆ ಇದೊಂದು ಅಧಿಕೃತ ಬರಹ ಎಂದು ನಾವು ತಿಳಿಯಬೇಕಾಗುತ್ತದೆ.

ಕಾಶ್ಮೀರದ ಇತಿಹಾಸ, ಅಲ್ಲಿಯ ಸಂಸ್ಕೃತ ಸಾಹಿತ್ಯ ಮತ್ತು ಶಾಸ್ತ್ರಕ್ಕೆ ಕಾಶ್ಮೀರದ ವಿದ್ವಾಂಸರ ಕೊಡುಗೆ ಇವುಗಳ ಸಮೀಕ್ಷೆ ಇಲ್ಲಿ ಬಂದಿದೆ. ಕಾಲದಿಂದ ಕಾಲಕ್ಕೆ ಕಾಶ್ಮೀರದಲ್ಲಿ ನಡೆದ ರಾಜಕೀಯ ಘಟನೆಗಳು ಮತ್ತು ಮತಾಂತರಗಳು ಆ ದೇಶದ ಸಾಂಸ್ಕೃತಿಕ ಜೀವನವನ್ನು ಹೇಗೆ ರೂಪಿಸಿವೆ ಮಾರ್ಪಡಿಸಿವೆ ಎಂಬುದನ್ನು ಸಾಧಾರವಾಗಿ ಪ್ರತಿಪಾದಿಸಿದ್ದಾರೆ. ಸಂಸ್ಕೃತದ ಐತಿಹಾಸಿಕ ಸಾಹಿತ್ಯಕ್ಕೆ ಕಾಶ್ಮೀರದ ಕೊಡುಗೆ ಗಮನಾರ್ಹ. ಬೇರೆ ಬೇರೆ ಕಾಲಗಳಲ್ಲಿ ರಾಜತರಂಗಿಣಿಗಳನ್ನು ಬರೆದ ಕಲ್ಹಣ, ಜೋನರಾಜ, ಶ್ರೀಧರ, ಪ್ರಾಜ್ಯಭಟ್ಟ (ಮತ್ತು ಅವನ ಶಿಷ್ಯ ಶುಕ) ಇವರು ಬರೆದಿರುವ ಕೃತಿಗಳ ಸಹಾಯದಿಂದ ಕಾಶ್ಮೀರದ ಇತಿಹಾಸವನ್ನು ಸಮರ್ಪಕವಾಗಿ ಬರೆಯಲು ಸಾಧ್ಯವಾಗಿದೆ. ಕರ್ನಾಟಕದ ಸಂಸ್ಕೃತ ಕವಿ ಬಿಲ್ಹಣ ಮೂಲತಃ ಕಾಶ್ಮೀರದವನು (ಇವನು ಇದ್ದುದು ಪು. 49ರಲ್ಲಿ ಹೇಳಿರುವಂತೆ ಏಳನೆಯ ವಿಕ್ರಮಾದಿತ್ಯನ ಕಾಲದಲ್ಲಲ್ಲ, ಆರನೆಯ ವಿಕ್ರಮಾದಿತ್ಯನ ಕಾಲದಲ್ಲಿ). ಆಲಂಕಾರಿಕರಲ್ಲಂತೂ ಮುಖ್ಯರಾದವರು ಬಹುತೇಕ ಕಾಶ್ಮೀರದವರೇ. ಕಾಶ್ಮೀರದ ಶೈವ ಸಿದ್ಧಾಂತದ ಬಗ್ಗೆ ಇರುವ ಅಧ್ಯಾಯ ಬಹು

ಉಪಯುಕ್ತವಾಗಿದೆ. ಡಾ. ನಾಗರಾಜನ್ ಅವರು ಸರಳವಾಗಿ ನಿರರ್ಗಳವಾಗಿ ಬರೆಯಬಲ್ಲರು. ಶಾಸ್ತ್ರೀಯ ವಿಷಯಗಳನ್ನು ಕರಾರುವಾಕ್ಕಾಗಿ ನಿರೂಪಿಸುವ ನೈಪುಣ್ಯ ಅವರಿಗಿದೆ.

ಬೆಂಗಳೂರಿನಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ನಡೆಸಿದ. ಶಾಸನ ಡಿಪ್ಲೊಮಾ ತರಗತಿಯ ವಿದ್ಯಾರ್ಥಿಗಳ ಉಪಯೋಗಕ್ಕಾಗಿ ಸಿದ್ಧವಾದ ಶಾಸನಗಳ ಸಂಕಲನವೇ **ಶಾಸನ ಸಂಗ್ರಹ** (ಸಂ. ಎ.ಎಂ. ಅಣ್ಣೀಗೇರಿ ಮತ್ತು ಆರ್. ಶೇಷಶಾಸ್ತ್ರಿ). ಇದರಲ್ಲಿ ಇಪ್ಪತ್ತು ಶಾಸನಗಳಿವೆ. ಪ್ರಾಚೀನವಾದ ಹಮ್ಮಿಡಿ ಶಾಸನದಿಂದ ಹದಿನೈದನೆಯ ಶತಮಾನದ ಲಕ್ಷ್ಮೀಧರಾಮಾತ್ಯನ ಶಾಸನದವರೆಗೆ ಇವುಗಳ ಕಾಲ ಹಬ್ಬಿದೆ. ಇದರಲ್ಲಿ ದಾನಶಾಸನ, ವೀರಗಲ್ಲು, ಮಾಸ್ತಿಗಲ್ಲುಗಳೂ ಇರುವುದರಿಂದ ವೈವಿಧ್ಯವೂ ಈ ಆಯ್ಕೆಯಲ್ಲಿದೆ. ಜೊತೆಗೆ ಮಂಗಲೇಶ, ಮೂರನೆಯ ಕೃಷ್ಣರ ಶಾಸನಗಳೂ, ಜಿನವಲ್ಲಭನ ಬುಕ್ಕರಾಯನ ಶಾಸನಗಳೂ ಇಲ್ಲಿರುವುದರಿಂದ ಇದೊಂದು ಗಮನಾರ್ಹವೆನಿಸುವ ಶಾಸನಗಳ ಸಂಕಲನವಾಗಿದೆ.

ಶಾಸನ ಅಚ್ಚು ಮಾಡಿರುವಲ್ಲಿ ಕೆಲವೆಡೆ ದೋಷಗಳು ಉಳಿದಿವೆ. ಉದಾ. ಹಮ್ಮಿಡಿ ಶಾಸನದಲ್ಲಿ 'ಅಳು ಕದಮ್ಬನ್' (ಅಳಕದಮ್ಬನ್). ಗೊಮ್ಮಟ ಸ್ತುತಿ ಶಾಸನದಲ್ಲೂ ಇಂತಹ ಒಂದೆರಡು ದೋಷಗಳು ಉಳಿದಿವೆ. ಆದರೆ ಒಟ್ಟಿನಲ್ಲಿ ಶಾಸನಗಳನ್ನು ಎಚ್ಚರಿಕೆಯಿಂದ ಅಚ್ಚುಮಾಡಿಸಿದ್ದಾರೆ.

ಪ್ರಾರಂಭದಲ್ಲಿ 34 ಪುಟಗಳ ಒಂದು ಪ್ರಸ್ತಾವನೆಯಿದೆ. ಶಾಸನಗಳ ಪರಿಚಯ ಮಾಡಿಕೊಳ್ಳಬಯಸುವವರಿಗೆ ಇದು ಕೆಲವು ಉಪಯುಕ್ತ ಸಂಗತಿಗಳನ್ನು ತಿಳಿಸುತ್ತದೆ. ಶಾಸನಗಳ ವರ್ಗೀಕರಣ, ಕೃತಕ ತಾಮ್ರಪಟಗಳು, ಕಾಲಗಣನೆ, ಲಿಪಿಯ ಬೆಳವಣಿಗೆ, ಶಾಸನಗಳ ರಾಜಕೀಯ ಸಾಂಸ್ಕೃತಿಕ ಮಹತ್ವ ಇತ್ಯಾದಿ ಸಂಗತಿಗಳನ್ನು ಉಚಿತ ಉದಾಹರಣೆ ಸಮೇತ ಸಂಕ್ಷಿಪ್ತವಾಗಿ ಚರ್ಚಿಸಿದ್ದಾರೆ. ಈಚಿನ ದಿನಗಳಲ್ಲಿ ಇತಿಹಾಸ, ಶಾಸನಗಳಲ್ಲಿ ಜನರ ಆಸಕ್ತಿ ಬೆಳೆಯುತ್ತಿದೆಯೆಂಬುದು ಸಮಾಧಾನದ ಸಂಗತಿ. ಶಾಸನಗಳ ಮೂಲ ಪಾಠವನ್ನು ನೋಡಬಯಸುವವರು ಎಪಿಗ್ರಾಫಿಯ ಕರ್ನಾಟಿಕ ಇತ್ಯಾದಿ ಸಂಪುಟಗಳಿಗೆ ಹೋಗಬೇಕು. ಆದರೆ ಅವು ದೊರಕುವುದು ದುರ್ಲಭ. ಆ ದೃಷ್ಟಿಯಿಂದ ಈ ಪುಸ್ತಕ ಶಾಸನಾಸಕ್ತಿಯನ್ನು ಬೆಳೆಸಿಕೊಂಡವರ ಕುತೂಹಲವನ್ನು ಕೆರಳಿಸುತ್ತದೆ. ಮತ್ತು ಅವರು ಕೆಲವು ಶಾಸನಗಳ ಮೂಲ ಪಾಠವನ್ನು ಅನಾಯಾಸವಾಗಿ ಪಡೆಯಬಲ್ಲರು.

ಎಂ.ಎಂ. ಕಲಬುರ್ಗಿಯವರು ಆಗಾಗ ಬೇರೆ ಬೇರೆ ಪತ್ರಿಕೆಗಳಲ್ಲಿ ಬರೆದ ಚಿಕ್ಕ ಟಿಪ್ಪಣಿಗಳ, ಲೇಖನಗಳ ಸಂಕಲನ **ಶಾಸನ ವ್ಯಾಸಂಗ.** ಇವೆಲ್ಲವೂ ಒಂದಲ್ಲ ಒಂದು ರೀತಿಯಲ್ಲಿ ಶಾಸನಗಳಿಗೆ ಸಂಬಂಧಿಸಿವೆಯಾದ್ದರಿಂದ ಪುಸ್ತಕಕ್ಕೆ ಆ ಹೆಸರು ಕೊಟ್ಟಿದೆ. ಇಲ್ಲಿ ಚರ್ಚಿತವಾಗಿರುವ ಸಂಗತಿಗಳಲ್ಲಿ ವೈವಿಧ್ಯವಿದೆ. ಶಬ್ದಗಳ ನಿಷ್ಪತ್ತಿ, ಶಾಸನಗಳಲ್ಲಿ ಕವಿಗಳ ಪದ್ಯಗಳು, ಶಾಸನಗಳಲ್ಲಿ ಛಂದೋ ಪ್ರಯೋಗ, ಸುಪ್ರಸಿದ್ಧ ವ್ಯಕ್ತಿಗಳ ಉಲ್ಲೇಖ ಇತ್ಯಾದಿ. ಒಂದೊಂದು ಸಣ್ಣ ಸಮಸ್ಯೆಯನ್ನು ತಗೆದುಕೊಂಡು ಅದನ್ನು ವಿಶ್ಲೇಷಿಸುವ, ಬಿಡಿಸುವ ಯತ್ನ ಒಂದೊಂದು ಲೇಖನದಲ್ಲೂ ಉಂಟು. ಹಿಂದೆ ನಡೆದಿರುವ ಚರ್ಚೆಗಿಂತ ಮುಂದೆ

ಹೋಗುವ ಯತ್ನವನ್ನು ಮಾಡಿದೆ. ಅನೇಕ ಹೊಸ ಸಂಗತಿಗಳನ್ನು ಮೊತ್ತಮೊದಲ ಬಾರಿಗೆ ಎತ್ತಿ ತೋರಿದೆ. ಹೀಗಾಗಿ ಸಂಶೋಧನೆಯಲ್ಲಿ ಆಸಕ್ತರಾಗಿರುವವರಿಗೆ ಇದೊಂದು ಸಂದರ್ಭ ಗ್ರಂಥವಾಗಿ ಪರಿಣಮಿಸಿದೆ.

'ಕಪ್ಪೆ ಅರಭಟ್ಟನ್' ಎಂಬ ಮೊದಲ ಲೇಖನದಲ್ಲಿ ಆ ಹೆಸರಿನ ನಿಷ್ಪತ್ತಿ ಬಗ್ಗೆ ಚರ್ಚಿಸಿದ್ದಾರೆ. 'ಕಪ್ಪೆ' ಮತ್ತು 'ಕಪ್ಪಡಿ'ಗಳನ್ನು ಸಮಾನಾರ್ಥಕಗಳೆಂದು ಭಾವಿಸುವುದು ಅನುಚಿತವಾಗಿದೆ. 'ಕಪ್ಪಡಿ' ಎಂಬುದು ಸಂಸ್ಕೃತ 'ಕಾರ್ಪಟಿ'ಯ ತದ್ಭವ. 'ಕಾರ್ಪಟಿ' ಎಂದರೆ ಯಾತ್ರಾರ್ಥಿ ಎಂದರ್ಥ ("ಸ್ವಾಮಿ ಯಾತ್ರೆಗೆ ಬಂದ ಕಪ್ಪಡಿಗಳ" ಎಂಬ ಶಾಸನೋಲ್ಲೇಖ ಗಮನಿಸಿ. 'ಕಪ್ಪಡಿ ಸಂಗಮ' ಎಂಬಲ್ಲಿಯೂ ಅಂತಹ ಯಾತ್ರಾರ್ಥಿಗಳು ಬರುತ್ತಿದ್ದ ನದಿಯ ಸಂಗಮ ಎಂಬರ್ಥವಿದೆ). 'ಕಪ್ಪೆ'ಗೆ ಏನರ್ಥವೋ ತಿಳಿಯದು. ಒಂದು ವೇಳೆ ಅವೆರಡೂ ಒಂದೇ ಎಂದು ತೀರ್ಮಾನವಾದರೂ 'ಕಪ್ಪೆ ಅರಭಟ್ಟ' ಎನ್ನುವಲ್ಲಿನ 'ಅರ' ಎಂಬುದು 'ಅರಸು' ಪದದ ಸವೆದ ರೂಪ ಎಂಬ ನನ್ನ ಅಭಿಪ್ರಾಯಕ್ಕೆ ಚ್ಯುತಿ ಬರುವುದಿಲ್ಲ. ಶಾಸನಗಳಲ್ಲಿ ಆದಿಗುಣವರ್ಮ, ಪಂಪ, ಮಲ್ಲಿಕಾರ್ಜುನ, ಚಂದ್ರರಾಜನ ಪದ್ಯಗಳನ್ನು ಗುರುತಿಸಿದ್ದಾರೆ. ಅಲ್ಲಲ್ಲಿ ಸಣ್ಣ ಸಂಗತಿಗಳನ್ನು ದೊಡ್ಡದಾಗಿ ಹೇಳಿಕೊಳ್ಳುವುದು ಸ್ವಲ್ಪ ವಿಲಕ್ಷಣವಾಗಿ ತೋರುತ್ತದೆ. ಪಂಪನ ಆದಿಪುರಾಣದ ಪದ್ಯ ಬೇಲೂರು ಶಾಸನದಲ್ಲಿ ದೊರಕುತ್ತದೆ. ಹೀಗೆ ಕವಿಗಳ ಪದ್ಯಗಳು ದೊರಕುವುದು ಸಾಮಾನ್ಯ. ಆದರೆ ಆ ಆದಿಪುರಾಣದ ಒಂದು ಪದ್ಯದ ಉಲ್ಲೇಖದಿಂದ ನಾಲ್ಕು (ಅಷ್ಟು ಮುಖ್ಯವಲ್ಲದ) ತೀರ್ಮಾನಗಳಿಗೆ ಬರುವುದನ್ನು ಗಂಭೀರವಾಗಿ ತೆಗೆದುಕೊಳ್ಳುವುದು ಕಷ್ಟವಾಗುತ್ತದೆ. 'ಮದನ ತಿಲಕ'ದ ಪದ್ಯದ ಬಗೆಗೂ ಇದೇ ಮಾತು ಹೇಳಬಹುದು. ಒಂದು ಸಂಗತಿಯನ್ನು ಗಮನಿಸಿ, ಅದಕ್ಕೆ ಎಷ್ಟು ಮಹತ್ವವೋ ಅಷ್ಟು ಕೊಟ್ಟರೆ ಸಾಕು. ಆದಿಗುಣವರ್ಮನ ಪದ್ಯಗಳನ್ನು ಪಂಪನ ಪದ್ಯಗಳನ್ನು ಬೇರೆ ಬೇರೆ ಶಾಸನಗಳಲ್ಲಿ ಗುರುತಿಸುವುದು ಒಳ್ಳೆಯ ಸಂಗತಿ. ಅದನ್ನು ನಾವು ಮೆಚ್ಚುತ್ತೇವೆ. 'ಅಬ್ಬಣಬ್ಬೆ' ಪಂಪನ ತಾಯಿಯ ಹೆಸರು ಎಂಬುದನ್ನು ಮೊದಲು ಸೂಚಿಸಿದ ಪ್ರಾಶಸ್ತ್ಯ ಕಲಬುರ್ಗಿಯವರಿಗೆ ಸಲ್ಲುತ್ತದೆ. ಪಂಪನ ಇನ್ನೊಂದು 'ಶಾಸನ'ವಿರಬೇಕು, ಜಿನವಲ್ಲಭನ ಶಾಸನ ಪಂಪ ಗತಿಸಿದ ನಂತರ ಹುಟ್ಟಿತು ಎಂಬ ಅಭಿಪ್ರಾಯಗಳ ಬಗ್ಗೆ ನನ್ನ ತೀವ್ರ ಸಂದೇಹಗಳಿವೆ. (ಇದನ್ನು ಕುರಿತು ಸದ್ಯದಲ್ಲಿಯೇ ನನ್ನದೊಂದು ಲೇಖನ ಪ್ರಕಟವಾಗಲಿದೆ). ಕೊಂಡಗುಳಿ ಕೇಶಿರಾಜನನ್ನು ಶಾಸನದಲ್ಲಿ ಮೊದಲು ಗುರುತಿಸಿದ ವಿ. ಶಿವಾನಂದರ ಹೆಸರನ್ನು ಉಲ್ಲೇಖಿಸಬೇಕಿತ್ತು. 'ಉಳಿಯುಮೇಶ್ವರ ಚಿಕ್ಕಯ್ಯ' ಎಂಬುದರ ಪೂರ್ವಾರ್ಧ 'ಹುಳಿಯುಮೇಶ್ವರ' ಎಂಬುದೇ ಆಗಿದೆ ಎಂಬ ಅವರ ಸೂಚನೆ ಸರಿಯಾಗಿದೆ. 'ಸೂರಿ' ಎಂಬ ಕವಿಯು ಕವಡೆಯ ಬೊಪ್ಪನ ಹೆಸರು ಬರುವ ಚಂಪೂಕಾವ್ಯವೊಂದನ್ನು ಬರೆದಿರುವ ಸಾಧ್ಯತೆಯಿದೆ ಎಂಬ ಅವರ ಊಹೆ ಮನನೀಯವಾಗಿದೆ. 'ಶಾಸನದಲ್ಲಿ ಭಾಮಿನಿ' ಎಂಬ ಲೇಖನ ಎಷ್ಟು ಕುತೂಹಲವನ್ನು ಕೆರಳಿಸುತ್ತದೆಯೋ ಅಷ್ಟೇ ನಿರಾಸೆ ಉಂಟುಮಾಡುವಂತಿದೆ. 'ಭಾಮಿನಿ'ಯನ್ನು ಕಾಣಲು ಕಲಬುರ್ಗಿಯವರು ಮಾಡಿರುವ ಪ್ರಯತ್ನ ಗ್ರಂಥ ಸಂಪಾದನಾ ಶಾಸ್ತ್ರದ ತತ್ವಗಳಿಗೆ ಅನುಗುಣವಾಗಿಲ್ಲ. ಪಾಠವನ್ನು ಸಾಕಷ್ಟು ತಿರುಚಿದ್ದಾರೆ ಎನ್ನಿಸುತ್ತದೆ.

"ಸೊಲಪಿ...ರ (ಪಾಲಿಸಿರ ಭೂ)" ಇದರಲ್ಲಿ ಚುಕ್ಕಿಗಳಿರುವ ಭಾಗ ಹಾಳಾಗಿ ಹೋಗಿದೆ ; ( ) ದಲ್ಲಿರುವ ಭಾಗ ಶಾಸನ ಸಂಪಾದಕರ ಊಹೆಯ ಪಾಠ. ಇಷ್ಟನ್ನೂ "ಶೂಲವಿಧಿಯ ಕಪಾಲ ಸಿರ ಭೂ" ಎಂದು ತಿದ್ದುವ ಬಗೆಯಾದರೂ ಹೇಗೆ ?

ಕಲಬುರ್ಗಿಯವರ ನಿರಂತರ ಅಭ್ಯಾಸ, ಸಂಶೋಧನಾಸಕ್ತಿಗಳ ಕುರುಹಾಗಿರುವ 'ಶಾಸನ ವ್ಯಾಸಂಗ' ಶಾಸನ ವಿದ್ಯಾರ್ಥಿಗಳು ಸ್ವಾಗತಿಸಬೇಕಾದ ಒಂದು ಗ್ರಂಥ.

**ಧಾರವಾಡ ಜಿಲ್ಲೆಯ ಶಾಸನಸೂಚಿ** ಎಂ.ಎಂ. ಕಲಬುರ್ಗಿಯವರ ಇನ್ನೊಂದು ಉಪಯುಕ್ತ ಕೃತಿ. ಹಳೆಯ ಮೈಸೂರಿನ ಶಾಸನಗಳು ಬೇರೆ ಬೇರೆ ಜಿಲ್ಲೆಯ ಸಂಪುಟಗಳಲ್ಲಿ ಒಟ್ಟಿಗೆ ದೊರಕುತ್ತವೆ. ಹೊಸದಾಗಿ ಸಿಕ್ಕ ಶಾಸನಗಳು ಮುಂದಿನ ಸಪ್ಲಿಮೆಂಟರಿಗಳಲ್ಲಿ ಮತ್ತು ರಿಪೋರ್ಟುಗಳಲ್ಲಿ ಪ್ರಕಟವಾಗಿವೆ. ಆದರೆ ಉತ್ತರ ಕರ್ನಾಟಕದ ಶಾಸನಗಳು ಹಾಗೆ ದೊರಕುವುದಿಲ್ಲ. ಅವು ಬೇರೆ ಬೇರೆ ಪತ್ರಿಕೆಗಳಲ್ಲಿ ಚದುರಿಹೋಗಿವೆ. ಕೆಲವೊಮ್ಮೆ ಒಂದೇ ಸಂಪುಟದಲ್ಲಿ ಬೇರೆ ಬೇರೆ ಜಿಲ್ಲೆಯ ಶಾಸನಗಳು ಸಮಾವೇಶವಾಗಿರುವುದುಂಟು. ಅವು ಆಯಾ ಜಿಲ್ಲೆಯ ಹೆಸರಲ್ಲಿ ಒಂದೊಂದು ಸಂಪುಟವಾಗಿ ಹೊರಬರುವ ಅಗತ್ಯವಿದೆ. ಉತ್ತರ ಕರ್ನಾಟಕದ ಪ್ರಕಟಿತ ಮತ್ತು ಅಪ್ರಕಟಿತ ಶಾಸನಗಳ ಜಿಲ್ಲಾವಾರು ಸಂಪುಟಗಳ ಪ್ರಕಟಣೆಗೆ ಈ ಶಾಸನಸೂಚಿಯು ಮುನ್ಸೂಚನೆಯಂತಿದೆ.

ಈ ಶಾಸನಸೂಚಿಯ ಕೆಲಸ ಸಹಜವಾಗಿಯೇ ಶ್ರಮದಾಯಕವಾದುದು. "ಕರ್ನಾಟಕದ ಒಟ್ಟು ಶಾಸನಗಳ ಹತ್ತರಲ್ಲಿ ಒಂದು ಪಾಲು ಶಾಸನಗಳು ಧಾರವಾಡ ಜಿಲ್ಲೆಯಲ್ಲಿವೆ." ಇಷ್ಟು ಶಾಸನಶ್ರೀಮಂತ ಜಿಲ್ಲೆಯ ಶಾಸನಗಳ ಸೂಚಿ ತಯಾರಿಕೆಗೆ ಬೇರೆ ಬೇರೆ ಮೂಲಗಳಿಗೆ ಅಲೆದು, ವಿಷಯವನ್ನು ಸಂಗ್ರಹಿಸಿದ್ದಾರೆ. ಇಲ್ಲಿ ಯಾವುದೇ ಶಾಸನದ ಮೂಲಪಾಠವಾಗಲಿ, ಕೊನೆಗೆ ಅದರ ಸಾರಾಂಶವಾಗಲಿ ದೊರಕುವುದಿಲ್ಲ. ಆದರೆ ಶಾಸನದ ಮುಖ್ಯ ಉದ್ದೇಶವೇನೆಂಬುದನ್ನು ಒಂದೆರಡು ವಾಕ್ಯಗಳಲ್ಲಿ ಹೇಳಲಾಗಿರುತ್ತದೆ. ಒಂದೊಂದು ಶಾಸನಕ್ಕೂ ಇಷ್ಟು ವಿವರಗಳಿರುತ್ತವೆ : ಶಾಸನ ದೊರಕಿದ ಗ್ರಾಮ ಮತ್ತು ಗ್ರಾಮದಲ್ಲಿ ಯಾವ ಜಾಗ, ಎಲ್ಲಿ ಪ್ರಕಟಿತ, ಅದರ ಕಾಲ ಮತ್ತು ಯಾವ ರಾಜನ ಆಳಿಕೆಯಲ್ಲಿ, ಅದರಲ್ಲಿ ಬಂದಿರುವ ವಿಷಯ. ಎಂದರೆ ಹೆಚ್ಚಿನ ಸಂಶೋಧನೆ ನಡೆಸುವವರಿಗೆ ಇದೊಂದು ದಿಕ್ಸೂಚಿಯಾಗುತ್ತದೆ. ಧಾರವಾಡ ಜಿಲ್ಲೆಯ ಒಂದು ನಿರ್ದಿಷ್ಟ ಅವಧಿಯ ಶಾಸನಗಳು ಬೇಕೆಂದರೆ, ಒಂದು ರಾಜವಂಶದ ಶಾಸನಗಳು ಬೇಕೆಂದರೆ, ಒಂದು ನಿರ್ದಿಷ್ಟ ವರ್ಗದ ಶಾಸನಗಳು ಬೇಕೆಂದರೆ ಅವುಗಳನ್ನೇ ಆರಿಸಿಕೊಂಡು ಮೂಲಗಳಿಗೆ ಹೋಗಿ ಅಭ್ಯಾಸಮಾಡಬಹುದು. ಇಷ್ಟು ಅನುಕೂಲತೆಗಳನ್ನು ಶಾಸನ ಸಂಶೋಧಕರಿಗೆ ಒದಗಿಸಿ ಕೊಟ್ಟ ಕಲಬುರ್ಗಿಯವರು ಅಭಿನಂದನಾರ್ಹರು. ಕೃತಿಯನ್ನು ಎಚ್ಚರಿಕೆಯಿಂದ ಸಿದ್ಧಪಡಿಸಲಾಗಿದೆ. ಮುದ್ರಣ ಬಹು ಆಕರ್ಷಕವಾಗಿದೆ.

ಕರ್ನಾಟಕ ವಿಶ್ವವಿದ್ಯಾಲಯ ಪ್ರಕಟಿಸಿರುವ ಮೂರು ಪಿಎಚ್.ಡಿ. ನಿಬಂಧಗಳು ಇಲ್ಲಿವೆ. ಅವುಗಳಲ್ಲಿ ರಾ.ಯ ಧಾರವಾಡಕರ ಅವರ **ಹೊಸಗನ್ನಡ ಸಾಹಿತ್ಯದ ಉದಯಕಾಲ**

ಗಮನಾರ್ಹವಾದುದು. ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧ ಮತ್ತು ಇಪ್ಪತ್ತನೆಯ ಶತಮಾನದ ಆರಂಭ ಈ ಕಾಲದ, ಮುಖ್ಯವಾಗಿ ಉತ್ತರ ಕರ್ನಾಟಕ ಪ್ರಾಂತದ ಭಾಷಿಕ ಅಥವಾ ಸಾಹಿತ್ಯಕ ಚಟುವಟಿಕೆಗಳ ಒಂದು ಒಳ್ಳೆಯ ಸಮೀಕ್ಷೆ ಇಲ್ಲಿದೆ. ಈ ಸಮೀಕ್ಷೆಗಾಗಿ ಧಾರವಾಡಕರರು ಸಾಕಷ್ಟು ಶ್ರಮಿಸಿದ್ದಾರೆ. ತಮಗೆ ಗೊತ್ತಿರುವ ಆಕರಗಳನ್ನೆಲ್ಲ ಬಳಸಿಕೊಂಡಿದ್ದಾರೆ. ಉತ್ತರ ಕರ್ನಾಟಕದ ಅಂದಿನ ಹೀನ ಸ್ಥಿತಿಯನ್ನು ಮಾರ್ಮಿಕವಾಗಿ ಚಿತ್ರಿಸಿದ್ದಾರೆ. ಅಚ್ಚಗನ್ನಡ ಪ್ರದೇಶವಾದ ಅಲ್ಲಿ ಮಾನ್ಯತೆ ಇದ್ದುದು ಮರಾಠಿಗೆ. ಮರಾಠಿ ಶಾಲೆಗಳ ಉಪಾಧ್ಯಾಯರಿಗೆ ಗೌರವವೂ ಹೆಚ್ಚು, ಸಂಬಳವೂ ಹೆಚ್ಚು. ಭಾಷೆಯೆಂದರೆ ಮರಾಠಿ ; ಕನ್ನಡವನ್ನು ಕೇಳುವವರು ದಿಕ್ಕಿಲ್ಲ. ಇಂತಹ ಸಂದರ್ಭದಲ್ಲಿ ದೇಶೀಯ ಭಾಷೆಗೆ ಅನ್ಯಾಯವಾಗುತ್ತಿದ್ದ ಸಂದರ್ಭದಲ್ಲಿ ರಸೆಲ್ ಸಾಹೇಬರು ಕೈಗೊಂಡ ನಿರ್ಣಯ ಅಲ್ಲಿ ಒಂದು ಹೊಸ ತಿರುವನ್ನೇ ಹೇಗೆ ಕೊಟ್ಟಿತೆಂಬುದನ್ನು ಲೇಖಕರು ವಿಸ್ತಾರವಾಗಿ ಚರ್ಚಿಸಿದ್ದಾರೆ. ಕನ್ನಡತ್ವ, ಭಾರತೀಯತ್ವಗಳು ಜನರ ಮನಸ್ಸಿನಲ್ಲಿ ಮೂಡಿದುದನ್ನು ಆಧಾರ ಸಹಿತ ತೋರಿಸಿದ್ದಾರೆ. ಹುಯಿಲಗೋಳ ಭುಜಂಗರಾವ್, ಡೆಪ್ಯುಟಿ ಚನ್ನಬಸವಪ್ಪ, ರೊದ್ದ ಶ್ರೀನಿವಾಸರಾವ್ ಮೊದಲಾದ ಅಧಿಕಾರಿಗಳ ಸೇವೆ ಅನುಪಮವಾದುದು. ಜೊತೆಗೆ ಅನೇಕ ಅನುಭಾವಿಗಳ, ಸಾಹಿತಿಗಳ, ವಿದೇಶೀಯ ವಿದ್ವಾಂಸರ ಕಾಣಿಕೆಗಳೇನೆಂಬುದನ್ನು ವಿಸ್ತಾರವಾಗಿ ವಿವೇಚಿಸಿದ್ದಾರೆ. ಬಿ.ಎಂ.ಶ್ರೀ.ಯವರಿಗೆ ಮುನ್ನವೇ ಕನ್ನಡದಲ್ಲಿ ಬಂದಿದ್ದ ಸತ್ವಪೂರ್ಣ ಬರಹಗಳನ್ನು ಕಂಡಾಗ ಆಶ್ಚರ್ಯವೆನ್ನಿಸುತ್ತದೆ. ವೃತ್ತ ಕಂದಗಳಲ್ಲಿಯೇ ತಮ್ಮ ಸಾಮಾಜಿಕ ಸಮಸ್ಯೆಗಳನ್ನು ಸುತ್ತಮುತ್ತಣ ಲೋಪದೋಷಗಳನ್ನು ಆ ಕಾಲದ ಕವಿಗಳು ವಿವೇಚಿಸಿದ್ದಾರೆ. ಮೋಸದ ಜಂಗಮರು, ತೋರಿಕೆಯ ಉಪಾಧ್ಯಾಯರು, ಜಿಪುಣ ವ್ಯಾಪಾರಿಗಳು ಇವರ ವಿಡಂಬನೆಗಳು ಬಂದಿವೆ. ಸಂಬಳ ಸಾಲದೆ ಜೀವನ ಸಾಗಿಸುವುದೇ ಕಷ್ಟವಾಗಿರುವ ಶಾಲೆಯ ಉಪಾಧ್ಯಾಯರ ಬಡತನದ ಗೋಳು, ಹೆಂಡತಿಯ ವಿಯೋಗ ಇಂತಹ ಅನುಭವಗಳು ಪದ್ಯರೂಪದಲ್ಲಿ ಬಂದಿವೆ. ಧಾರವಾಡಕರರ ಭಾಷೆ ಅಲ್ಲಲ್ಲಿ ಆಲಂಕಾರಿಕವಾಗುವುದು ಇಂತಹ ಗಂಭೀರ ಕೃತಿಗಳಿಗೆ ಒಗ್ಗದ ಶೈಲಿಯಾಗುತ್ತದೆ. ಆದರೂ ಕೃತಿಕಾರರು ಅಪಾರ ಶ್ರಮದಿಂದ ವಿಷಯ ಸಂಗ್ರಹಿಸಿದ್ದಾರೆ, ಎಚ್ಚರಿಕೆಯಿಂದ ತಾವು ಸಂಗ್ರಹಿಸಿದ ವಿಷಯಗಳನ್ನು ವಿಶ್ಲೇಷಿಸಿ ವಸ್ತುನಿಷ್ಠ ದೃಷ್ಟಿಯಿಂದ ಪರಿಶೀಲಿಸಿದ್ದಾರೆ. ಇಂದು ಅಲಭ್ಯವಾಗಿರುವ ಅನೇಕ ಕೃತಿಗಳಿಂದ ಉದಾಹರಣೆಗಳನ್ನು ಎತ್ತಿ ಕೊಟ್ಟಿದ್ದಾರೆ. ಶ್ರೀನಿವಾಸ ಹಾವನೂರ, ಧಾರವಾಡಕರರ ಗ್ರಂಥಗಳು ನಮಗೆ ನವೋದಯದ ಹಿಂದಿನ ಸಾಂಸ್ಕೃತಿಕ ಮತ್ತು ಸಾಹಿತ್ಯಕ ಸ್ಥಿತಿಯನ್ನರಿಯಲು ಅಧಿಕೃತ ಆಕರಗಳಾಗಿವೆ. ದಕ್ಷಿಣ ಕರ್ನಾಟಕ ಅಥವಾ ಹಳೆಯ ಮೈಸೂರು (ಮಂಗಳೂರು ಭಾಗ ಸೇರಿದಂತೆ) ಪ್ರಾಂತಕ್ಕೆ ಸಂಬಂಧಿಸಿದಂತೆ ಇಂತಹ ಸಂಶೋಧನೆಯನ್ನು ಯಾರಾದರೂ ಎತ್ತಿಕೊಂಡು ಮುಗಿಸಿಯಾರೇ ಎಂಬ ಆಸೆಯನ್ನು ಈ ಕೃತಿ ಹುಟ್ಟಿಸುತ್ತದೆ. ಅನೇಕ ಚಿತ್ರಗಳಿರುವ ಈ ಗ್ರಂಥದ ಮುದ್ರಣವಿನ್ಯಾಸ ಸಮರ್ಪಕವಾಗಿದೆ.

ಎಂ.ಬಿ. ಕೊಟ್ರಶೆಟ್ಟಿ ಅವರ **ಸಿದ್ಧರಾಮ ಶಿವಯೋಗಿ** ಅವರು ಪಿಎಚ್.ಡಿ. ಪದವಿಗಾಗಿ ಅರ್ಪಿಸಿದ ನಿಬಂಧ. ಸಿದ್ಧರಾಮನ ಜೀವನ ಚರಿತ್ರೆಗೆ ಸಂಬಂಧಿಸಿದಂತೆ ಮೊದಲ ನಾಲ್ಕು

ಅಧ್ಯಾಯಗಳು ಮೀಸಲಾಗಿವೆ. ಎರಡನೆಯ ಅಧ್ಯಾಯ ಅವನ ಸಾಹಿತ್ಯಕ್ಕೂ ನಾಲ್ಕನೆಯದು ತತ್ವ ವಿವೇಚನೆಗೂ ಐದನೆಯದು ಶಿವಯೋಗ ಸಮೀಕ್ಷೆಗೂ ಮೀಸಲು. ಕೊನೆಯಲ್ಲಿ ಅವನ ವ್ಯಕ್ತಿತ್ವ ಪ್ರಭಾವಮುದ್ರೆಗಳ ವಿವೇಚನೆ ಇದೆ.

ಯಾವುದೇ ವಿಷಯವನ್ನು ಪಿಎಚ್.ಡಿ. ಗೆ ಆರಿಸಿಕೊಳ್ಳುವಾಗ ಆ ವಿಷಯದ ಬಗ್ಗೆ ಎಷ್ಟು ಕೆಲಸ ನಡೆದಿದೆಯೆಂಬುದನ್ನು ತಿಳಿಯಬೇಕಾಗಿರುವಂತೆಯೇ ಏನು ಆಗಬೇಕಾಗಿದೆ ಎಂಬುದನ್ನೂ ತಿಳಿದಿರುವುದು ಇನ್ನೂ ಹೆಚ್ಚು ಅಗತ್ಯ. (ಏನೂ ಕೆಲಸ ನಡೆದಿರದಿದ್ದರೆ ಆಗ ಆ ಸಂಶೋಧನೆಯಲ್ಲಿ ಮೇಲಿನ ಪ್ರಶ್ನೆಯೇ ಬರುವುದಿಲ್ಲ.) ಸಿದ್ಧರಾಮನ ಬಗ್ಗೆ ಈಗಾಗಲೇ ಸಾಕಷ್ಟು ಕೆಲಸ ನಡೆದಿದೆ. ಅವನ ಬಗ್ಗೆ ಲೇಖನಗಳೂ ಗ್ರಂಥಗಳೂ ಪ್ರಕಟವಾಗಿವೆ; ಕೆಲವು ತೀರ್ಮಾನಗಳು ಬಂದಿವೆ, ಸಾಕಷ್ಟು ವಾದವಿವಾದಗಳೂ ಎದ್ದಿವೆ. ಇವನ್ನೆಲ್ಲ ತಿಳಿದುಕೊಂಡ ಬಳಿಕ - ಸಂಶೋಧಕನ ಕೆಲಸ, ಇಲ್ಲಿಯವರೆಗೆ ನಡೆದಿರುವ ವಿವೇಚನೆಯ ಕೊರತೆಗಳೇನು? ವಿದ್ವಾಂಸರ ಯಾವ ನಿಲುವು ಪ್ರಶ್ನಾರ್ಹ ? ವಿದ್ವಾಂಸರು ಚರ್ಚಿಸದೇ ಅಥವಾ ಗಮನಿಸದೇ ಬಿಟ್ಟಿರುವ ಭಾಗಗಳು ಯಾವುವು? ತಾನು ಹೊಸದಾಗಿ ಕೆಲಸ ಮಾಡಬೇಕಾದ ಕ್ಷೇತ್ರಗಳು ಯಾವುವು? ಇವನ್ನು ಸ್ಪಷ್ಟಗೊಳಿಸಿಕೊಳ್ಳುವುದು. ಇಲ್ಲದಿದ್ದರೆ, ಕೊಟ್ರಶೆಟ್ಟಿಯವರಂತೆ, ಈಗಾಗಲೇ ನಮಗೆ ಗೊತ್ತಿರುವ ಸಂಗತಿಗಳನ್ನೆಲ್ಲ ಇನ್ನೊಂದು ರೀತಿಯಲ್ಲಿ ಹೇಳಿ ದೊಡ್ಡ ಪುಸ್ತಕವನ್ನು ಬರೆದಂತಾಗುತ್ತದೆ. ಇಡೀ ಪುಸ್ತಕವನ್ನು ಓದಿದರೆ ಸಿದ್ಧರಾಮನ ಬಗೆಗೆ ಯಾವುದೇ ಹೊಸ ಅಂಶವೂ ತಿಳಿಯುವುದಿಲ್ಲ ; ಹೊಸ ನಿಲುವು, ಧೋರಣೆ ವ್ಯಕ್ತವಾಗುವುದಿಲ್ಲ. 'ಸಿದ್ಧರಾಮನ ಸಾಂಗತ್ಯ' ಕೃತಿಯ ಮೈಸೂರು ಓರಿಯಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟಿನ ಹಸ್ತಪ್ರತಿ ನೋಡಲು ದೊರೆಯದೆ ಇದ್ದುದರಿಂದ ಆ ಬಗ್ಗೆ ಬಂದಿರುವ ಬೇರೊಂದು ಲೇಖನವನ್ನೇ ಅವಲಂಬಿಸಬೇಕಾಗಿದೆ ಎಂಬ ಮಾತು ಸಂಶೋಧಕರು ಶ್ರಮಕ್ಕೆ ಸಿದ್ಧರಾಗದೆ ಹೇಗೆ ಸುಲಭ ಮಾರ್ಗವನ್ನು ಹಿಡಿಯುತ್ತಾರೆಂಬುದಕ್ಕೆ ಸಾಕ್ಷಿಯಾಗಿದೆ. 'ಸಿದ್ಧರಾಮನ ವೀರಶೈವತ್ವ'ದ ಬಗ್ಗೆ ಒಂದು ಅಧ್ಯಾಯವನ್ನು ವ್ಯರ್ಥಮಾಡಿದ್ದಾರೆ. ಪರ ವಿರೋಧ ಅಭಿಪ್ರಾಯಗಳನ್ನು ಸಂಗ್ರಹಿಸಿ ಅವುಗಳಲ್ಲೇ ಒಂದು ಅಭಿಪ್ರಾಯವನ್ನು ಒಪ್ಪುವುದಕ್ಕೆ ಅಷ್ಟು ಪುಟ ಬರೆಯಬೇಕೆ ?

ಸಿದ್ಧರಾಮನ ಬಗ್ಗೆ ಇನ್ನೂ ಇರುವ ಸಮಸ್ಯೆಗಳಲ್ಲಿ ಕೆಲವನ್ನು ಇಲ್ಲಿ ಸೂಚಿಸಬಹುದು:

1. 'ರೇವಣಸಿದ್ಧ' ಯಾರು?

2. ಸೊನ್ನಲಿಗೆಯ ರಾಣಿ ಚಾಮಲದೇವಿಯ ಐತಿಹಾಸಿಕತೆಯ ಸಮಸ್ಯೆ ಎಂತು?

3. ಸಿದ್ಧರಾಮನ ಕಾಲದಲ್ಲಿ ಸೊನ್ನಲಿಗೆ ಪ್ರಾಂತವನ್ನು ಆಳುತ್ತಿದ್ದ ರಾಜವಂಶ ಯಾವುದು?

4. 'ಧೂಳಿ ಮಾಕಾಳ' ಎಂಬ ಹೆಸರಿನ ದೈವ ಈಗಲೂ ಇದೆಯೇ? ('ಧೂಳಯ್ಯ' ಎಂಬ ದೈವವನ್ನು ಬಸವಣ್ಣ ಉಲ್ಲೇಖಿಸುತ್ತಾನೆ). 'ಮೊರಡಿ ಮುದ್ದಗೌಡ'

ಎಂಬಲ್ಲಿನ 'ಮೊರಡಿ'ಯನ್ನು ಗುರುತಿಸಲು ಸಾಧ್ಯವೇ ? ಆ ದೈವಕ್ಕೂ 'ಮೊರಡಿ'ಗೂ ಸಂಬಂಧವಿದೆಯೆ ?

5. ಸಿದ್ಧರಾಮನ ಬಾಳಿನಲ್ಲಿ ಬರುವ ವ್ಯಕ್ತಿಗಳ ಐತಿಹಾಸಿಕತೆಗೆ ಇನ್ನೇನಾದರೂ ಆಧಾರಗಳು ಇವೆಯೇ ?

6. ಸಿದ್ಧರಾಮ ವೀರಶೈವರಿಗೆಂತೋ ಕುರುಬರಿಗೂ ಆರಾಧ್ಯನಾದ ದೈವ. ಕುರುಬರ ಪುರಾಣಕತೆಗಳಲ್ಲಿ (myths) ಹಾಡುಗಳಲ್ಲಿ ಸಿದ್ಧರಾಮನ ವಿಷಯ ಸಾಕಷ್ಟು ಬರುತ್ತದೆ. ವೀರಶೈವರಲ್ಲೇ ನೊಣಬರಿಗೆ ಅವನು ಬಹುಪೂಜ್ಯ ವ್ಯಕ್ತಿ. ಅದಕ್ಕೆ ಕಾರಣಗಳೇನು ? ಹೋಗಲಿ, ಸೊಲ್ಲಾಪುರದ ಪ್ರಾಂತದಲ್ಲೇ ಇರಬಹುದಾದ ಸಿದ್ಧರಾಮನನ್ನು ವಿಷಯವಾಗುಳ್ಳ ಜಾನಪದ ಸಾಕಷ್ಟು ಸಿಗಬಹುದು; ಸಿದ್ಧರಾಮನ ದೇವಾಲಯಗಳು ಅನೇಕವುಂಟು. ಅವುಗಳ ಸಮೀಕ್ಷೆ ಮಾಡಬಹುದಿತ್ತು. ಕೊನೆಗೆ, ಸೊಲ್ಲಾಪುರದ ಸಿದ್ಧರಾಮೇಶ್ವರ ದೇವಾಲಯದ ಆರಾಧನೆಗಳನ್ನು (rituals) (ಉದಾ : ಹಬ್ಬ, ಉತ್ಸವ) ಅಲ್ಲಿ ರೂಢ ಮೂಲವಾಗಿರುವ ನಂಬಿಕೆಗಳನ್ನು ಸಂಗ್ರಹಿಸಿದ್ದರೆ, ಸಿದ್ಧರಾಮನನ್ನು ಇಂದು ಜನ ಕಾಣುತ್ತಿರುವ ಬಗೆಯ ಪರಿಚಯವಾಗುತ್ತಿತ್ತು. ಹೀಗೆ ಕ್ಷೇತ್ರ ಸಮೀಕ್ಷೆ (field survey) ಮಾಡಿದ್ದರೆ ನಮಗೆ ಗೊತ್ತಿಲ್ಲದ ನೂರು ಸಂಗತಿಗಳನ್ನು ತಿಳಿಸಬಹುದಿತ್ತು.

7. ಹರಿಹರ ರಾಘವಾಂಕರು ತಮ್ಮ ಕೃತಿಯ ನಾಯಕರ 'ವಚನ'ಗಳನ್ನು ಉಲ್ಲೇಖಿಸುತ್ತಾರೆ. ಹರಿಹರನಂತೆಯೇ ರಾಘವಾಂಕನೂ ತನ್ನ ಕೃತಿಯಲ್ಲಿ ಸಿದ್ಧರಾಮನ ವಚನಗಳನ್ನು ಹೆಣೆದಿರಬೇಕು. ಅಂತಹ ಎರಡು ವಚನಗಳನ್ನು ನಾನು ನನ್ನ 'ವಚನ ಸಾಹಿತ್ಯ' ಪುಸ್ತಕದಲ್ಲಿ ಗುರುತಿಸಿದ್ದೇನೆ. ಸಿದ್ಧರಾಮನ ಬಗ್ಗೆ ಇರುವ ನಿಬಂಧದಲ್ಲಿ ಅಂತಹ ವಚನಗಳನ್ನು ಗುರುತಿಸುವ ಪ್ರಯತ್ನವೇ ಇಲ್ಲ ಎಂಬುದು ಆಶ್ಚರ್ಯದ ಸಂಗತಿ.

8. ಸಿದ್ಧರಾಮನಿಗೂ ನಾಥಪಂಥಕ್ಕೂ ಇದ್ದಿರಬಹುದಾದ ಸಂಬಂಧದ ಬಗ್ಗೆ ಹೆಚ್ಚಿನ ವಿವೇಚನೆಗೆ ಅವಕಾಶವಿದೆ.

ಅನೇಕ ಶಾಸನಗಳಲ್ಲಿ ಸಿದ್ಧರಾಮನ 'ವಚನ'ಗಳ ಉಲ್ಲೇಖವಿದೆ. "ಎಂದುದು ಸಿದ್ಧರಾಮನಾಥ ದೇವರ ವಚನ", "ಶ್ರೀ ಸಿದ್ಧರಾಮನಾಥ ದೇವರು ಪುಣ್ಯಪಾಪಕ್ಕೆ ನಿಯಾಮಿಸಿ ಕೊಟ್ಟ ವಚನ" ಇತ್ಯಾದಿ ಮಾತುಗಳು ಅಲ್ಲಿ ಬರುತ್ತವೆ. ಶಾಸನಗಳಲ್ಲಿ ಬರುವ ವಚನವು ಸಿದ್ಧರಾಮನ ವಚನಗಳಲ್ಲಿ ಈಗ ದೊರೆಯುವುದಿಲ್ಲವೆಂದೂ 'ಬೇರೆ ಆಕರಗಳಲ್ಲಿ ಸಿಕ್ಕುವ ಸಾಧ್ಯತೆಯಿದೆ'ಯೆಂದೂ ಕೊಟ್ರ ಶೆಟ್ಟಿಯವರು ಹೇಳುತ್ತಾರೆ. ವಾಸ್ತವವಾಗಿ ಶಾಸನಸ್ಥ 'ವಚನ'ವು ಸಿದ್ಧರಾಮನ 'ವಚನ'ಗಳಂತಹ ರಚನೆ ಅಲ್ಲವೇ ಅಲ್ಲ. ಅದು ಸಿದ್ಧರಾಮನೆ ಬರೆದದ್ದು ಎಂದು ಹೇಳಲು ಆಧಾರವಿಲ್ಲ. ಶಾಸನಗಳಲ್ಲಿ ದಾನಗಳನ್ನು ಪಾಲಿಸಿದವರಿಗೆ ಅಥವಾ

ಮೀರಿದವರಿಗೆ ಯಾವ ಪುಣ್ಯ ಪಾಪಗಳು ಬರುತ್ತವೆಯೆಂದು ಹೇಳುವಾಗ ಮನು, ವ್ಯಾಸರ 'ಉಕ್ತಿ'ಗಳು ಬರುತ್ತವೆ. ಆ ಉಕ್ತಿಗಳಲ್ಲಿ ಯಾವುದೂ ಮನುಸ್ಮೃತಿಯಲ್ಲಾಗಲಿ ವ್ಯಾಸ ಭಾರತದಲ್ಲಾಗಲಿ ಬರುವುದಿಲ್ಲ. ಸುಪ್ರಸಿದ್ಧ ವ್ಯಕ್ತಿಗಳ ಹೆಸರಲ್ಲಿ ಮುಂದಿನವರು ಕಲ್ಪಿಸಿದ ಆ 'ಉಕ್ತಿ'ಗಳು ಅವರ ಹೆಸರಲ್ಲಿ ಪ್ರಚುರವಾದುವು. ಹಾಗೆಯೇ ಸೊನ್ನಲಿಗೆಯ ಕಪಿಲಸಿದ್ಧ ಮಲ್ಲಿಕಾರ್ಜುನ ದೇವಾಲಯಕ್ಕೆ ಕೊಟ್ಟ ದತ್ತಿಗಳ ಊರ್ಜಿತಕ್ಕಾಗಿ ಮುಂದಿನವರು ಸಿದ್ಧರಾಮನ ಹೆಸರನ್ನು ಬಳಸಿಕೊಂಡಿದ್ದಾರೆ. ದತ್ತಿಯನ್ನು ಪಾಲಿಸಲು ಕೇಳಿಕೊಳ್ಳುವಾಗ ಅನ್ಯರು ಅವನ ಹೆಸರಲ್ಲಿ ಬರೆದ 'ವಚನ'ವನ್ನೂ ಹೆಸರನ್ನೂ ಬಳಸಿಕೊಂಡಿರಲು ಕಾರಣ, ಜನ ಆ ಕಡೆ ಲಕ್ಷ್ಯವನ್ನು ಕೊಡುತ್ತಾರೆ ಎಂಬುದೇ ಆಗಿದೆ. ಸುಮಾರು ಇಪ್ಪತ್ತಮೂರು ಶಾಸನಗಳಲ್ಲಿ ಬರುವ ಸಿದ್ಧರಾಮನ ನೇರ ಅಥವಾ ಪರೋಕ್ಷ ಉಲ್ಲೇಖ ಎರಡು ಸಂಗತಿಗಳನ್ನು ಶ್ರುತಪಡಿಸುತ್ತದೆ: ಮಲ್ಲಿಕಾರ್ಜುನ ದೇವರಿಗೂ ಸಿದ್ಧರಾಮನಿಗೂ ಇದ್ದ ನಿಕಟ ಸಂಬಂಧ ಮತ್ತು ಸಿದ್ಧರಾಮನ ಬಗ್ಗೆ ಜನರಿಗಿದ್ದ ಪೂಜ್ಯಭಾವನೆ. ಶಾಸನದ 'ವಚನ'ವನ್ನು ಸಿದ್ಧರಾಮನೇ ಬರೆದ 'ವಚನ'ಗಳಂತಹ ಒಂದು ಕೃತಿಯೆಂದು ಭಾವಿಸುವ ತಪ್ಪು ಕಲ್ಪನೆ ನಮ್ಮಲ್ಲಿ ಹೋಗಬೇಕಾಗಿದೆ.

ವಚನಕಾರರ ಹಾಡುಗಳ ಕರ್ತೃತ್ವದ ಬಗ್ಗೆ ನನ್ನ ಸಂಶಯಗಳು ಹಿಂದಿನಂತೆಯೇ ಇವೆ, ಮತ್ತು ಆ ಬಗ್ಗೆ ನನ್ನ ನಿಲುವನ್ನು 'ವಚನ ಸಾಹಿತ್ಯ' ಪುಸ್ತಕದಲ್ಲಿ ಸೂಕ್ಷ್ಮವಾಗಿ ವಿವರಿಸಿದ್ದೇನೆ. ಸಿದ್ಧರಾಮನ ವಚನವನ್ನೇ ಈಚಿನವರು ಹೇಗೆ ಹಾಡಿಗೆ ತಿರುಗಿಸಿದ್ದಾರೆಂದು ಉದಾಹರಣೆ ಕೊಟ್ಟಿದ್ದೇನೆ. ಶಿವಶರಣರ ಹೆಸರಲ್ಲಿ ಸಿಗುವ ಹಾಡುಗಳನ್ನು ಕುರಿತಂತೆ ಹೆಚ್ಚಿನ ವಿವೇಚನೆಗೆ ಅವಕಾಶವಿದೆ. ಸಿದ್ಧರಾಮನ ಕೃತಿಗಳ ಸಾಹಿತ್ಯಕ ಅಥವಾ ಅನುಭಾವಿಕ ಮೌಲ್ಯ ವಿವೇಚನೆಯಲ್ಲೂ ಡಾ. ಕೊಟ್ರಶೆಟ್ಟಿಯವರು ಯಾವ ಪ್ರೌಢಿಮೆಯನ್ನೂ ತೋರಿಲ್ಲ.

ಹೀಗೆಯೇ ಅಥವಾ ಇನ್ನೂ ಹೆಚ್ಚು ನಿರಾಸೆ ಉಂಟುಮಾಡುವ ನಿಬಂಧ ಎಂ.ಎಸ್. ಲಕ್ಷ್ಮೆಯವರ **ಮಹಾದೇವಿಯಕ್ಕ ಮತ್ತು ಕಾರಿಕಾಲಮ್ಮೆ**. ಇಲ್ಲಂತೂ ಸಂಶೋಧಕರ ಕೆಲಸ ತೀರ ಸುಲಭ. ಮಹಾದೇವಿಯಕ್ಕನ ಬಗ್ಗೆ ಒಂದಷ್ಟು, ಕಾರಿಕಾಲಮ್ಮೆಯ ಬಗ್ಗೆ ಒಂದಷ್ಟು ಬರೆದು, ಕೊನೆಯಲ್ಲಿ ಇಬ್ಬರನ್ನೂ ಕುರಿತು ಒಟ್ಟಿಗೆ ಇನ್ನೊಂದಷ್ಟು ಬರೆದರೆ ಅಲ್ಲಿಗೆ ಮುಗಿಯಿತು. ಕನ್ನಡ ಸಾಹಿತ್ಯ ಓದಿದವರು ಇದು ಕಾರಿಕಾಲಮ್ಮೆಯ ಬಗ್ಗೆ ಸ್ವತಂತ್ರ ಸಂಶೋಧನೆಯಿರಬಹುದೆಂದೂ, ತಮಿಳು ಸಾಹಿತ್ಯ ಓದಿದವರು ಮಹಾದೇವಿಯಕ್ಕನ ಬಗ್ಗೆ ಸ್ವತಂತ್ರ ಸಂಶೋಧನೆಯಿರಬಹುದೆಂದೂ ತೃಪ್ತಿಪಟ್ಟುಕೊಳ್ಳಬಹುದು. ಹೋಗಲಿ, ಆ ಇಬ್ಬರು ಶಿವಭಕ್ತೆಯರಿಗಾದರೂ ಹೋಲಿಸುವಂತಹುದು ಏನಿದೆ ? ಹಾಗೆ ನೋಡಿದರೆ ಯಾರನ್ನು ಯಾರ ಜೊತೆ ಬೇಕಾದರೂ ಹೋಲಿಸಬಹುದು. ಪಂಪ - ಮಿಲ್ಟನ್, ಕಾಳಿದಾಸ - ಷೇಕ್ಸ್‌ಪಿಯರ್ ಇವರ ಬಗ್ಗೆ, ಪರಸ್ಪರ ಸಾಮ್ಯಗಳ ಬಗ್ಗೆ ಒಂದು ಪ್ರಬಂಧ ಬರೆಯಬಹುದು; ನಿಬಂಧ ಬರೆಯಲು ಸಾಧ್ಯವೇ ? ಬರೆಯುವುದು ಸಾಧುವೇ ? ಇಂತಹ ಕೃತಿಗಳಲ್ಲಿ ನಮಗೆ ತಿಳಿಯದ ಕವಿ ಅಥವಾ ಕವಯಿತ್ರಿಯ ಬಗ್ಗೆ ಮಾಹಿತಿಯ ಸಂಗ್ರಹವಿರುತ್ತದೆ; 'ಸಂಶೋಧನೆ' ಎಂಬುದು ಮಾತ್ರ ಅಲ್ಲಿರುವುದಿಲ್ಲ. ನನಗೆ ಕಾರಿಕಾಲಮ್ಮೆಯ ವಿಷಯ

ಅಷ್ಟು ತಿಳಿಯದು. ಆದರೆ, ಮಹಾದೇವಿಯಕ್ಕನ ಬಗೆಗೆ ಲಕ್ಕೆಯವರ ಬರಹವನ್ನು ಓದಿದಾಗ ಅವರು ವಿಚಾರಗಳನ್ನು ಮುಂದುವರಿಸಿಲ್ಲ, 'ಹಿಂದುವರಿಸಿ'ದ್ದಾರೆ ಎನ್ನಿಸುತ್ತದೆ. "ಅವಳೇ ಹೇಳಿದ ವಚನಗಳಲ್ಲಿನ ಧ್ವನ್ಯಾರ್ಥವನ್ನು ಅವಲೋಕಿಸಿ ಮಹದೇವಿಯಕ್ಕನ ಲಗ್ನ ಆಗಿಲ್ಲವೆಂದೆ ಅಭಿಪ್ರಾಯ ತಾಳುವುದು ಹೆಚ್ಚು ಸಾಧುವಾದ ಮಾರ್ಗ"ವೆನ್ನುವ ಲೇಖಕರಿಂದ ಏನು ಹೊಸತನ್ನು ನಿರೀಕ್ಷಿಸಬಹುದು ?

ಬೇರೆ ಬೇರೆ ಲೇಖಕರ ತೀರ ಸಾಮಾನ್ಯ ಉಕ್ತಿಗಳನ್ನು ಬೆಲೆಬಾಳುವ ಉಲ್ಲೇಖಗಳೆಂದು ಬಳಸಿಕೊಳ್ಳುವುದನ್ನು ನೋಡಿದಾಗ ನಗುಬರುತ್ತದೆ. ಇಂಗ್ಲೀಷ್ ವಾಕ್ಯಗಳಂತೂ ತಪ್ಪು ತಪ್ಪಾಗಿ ಉದ್ಧೃತವಾಗಿವೆ. ಎಲ್ಲಿ ಸಣ್ಣಕ್ಷರ, ಎಲ್ಲಿ ದೊಡ್ಡಕ್ಷರ (capital) ಬಳಸಬೇಕೆಂಬುದು, ವಿರಾಮ ಚಿಹ್ನೆಗಳನ್ನು ಹೇಗೆ ಬಳಸಬೇಕೆಂಬುದು ಲೇಖಕರಿಗೆ ತಿಳಿದಿರುವಂತೆ ಕಾಣುವುದಿಲ್ಲ. whose ಎಂಬುದನ್ನು who's ಎಂದು ಅಚ್ಚುಮಾಡಿಸಿದ್ದಾರೆ. ಪುಸ್ತಕದ ಬಹುಭಾಗವನ್ನು ಹಿಂದಿನ ಗ್ರಂಥಕರ್ತರ ಬರಹಗಳಿಂದ ತುಂಬಿ ತುಳುಕಿಸಿದ್ದಾರೆ.

ಮೇಲಿನ ಎರಡೂ ನಿಬಂಧಗಳು ಮತ್ತು ಅಂತಹ ಅನೇಕ ನಿಬಂಧಗಳು ಪಿಎಚ್.ಡಿ. ಪಡೆಯುತ್ತಿರುವವರ ಬಗ್ಗೆ, ನಿಬಂಧಗಳ ಗುಣಮಟ್ಟದ ಬಗ್ಗೆ ಮತ್ತೆ ಮತ್ತೆ ಯೋಚನೆ ಮಾಡುವಂತೆ ಮಾಡಿವೆ. ಈ ಮಾತುಗಳು ಕಠಿಣವೆಂದು ತೋರಬಹುದು. ಆದರೆ ಗುಣಮಟ್ಟದ ಬಗ್ಗೆ ಆಸಕ್ತರಾಗಿರುವವರು ಇವನ್ನು ಲಘುವಾಗಿ ಭಾವಿಸಬಾರದು. ಮುಂದಿನ ಜನಾಂಗ ಈಗ ಬರುತ್ತಿರುವ ಕೆಲವು ಸಂಶೋಧನ ನಿಬಂಧಗಳ ಬಗ್ಗೆ ಏನಂದುಕೊಳ್ಳಬಹುದೋ ಎಂದು ಒಮ್ಮೊಮ್ಮೆ ಯೋಚಿಸುತ್ತೇನೆ (ಅಥವಾ ಅವೇ ಮಾದರಿಯಾಗಬಹುದು!)

ಭಾಷೆಗೆ ಸಂಬಂಧಿಸಿದಂತೆ ನಮ್ಮ ಮುಂದೆ ಮೂರು ಪುಸ್ತಕಗಳಿವೆ. ಸೇಡಿಯಾಪು ಕೃಷ್ಣ ಭಟ್ಟರ **ಕೆಲವು ದೇಶನಾಮಗಳು** ಓದುಗರಿಗೆ ಬಹಳ ಸಂತೋಷ ಕೊಡುವ ಪುಸ್ತಕ. ಕೃಷ್ಣಭಟ್ಟರು ಹಾಸಿಗೆ ಹಿಡಿದು ಅನಾರೋಗ್ಯದಿಂದ ಬಳಲುತ್ತಿದ್ದರೂ ಈ ಪುಸ್ತಕವನ್ನು ಬರೆದಿರುವುದನ್ನು ನೋಡಿದರೆ ಅವರ ಮನಸ್ಸು ತನ್ನ ಆರೋಗ್ಯವನ್ನು ಖಂಡಿತ ಉಳಿಸಿಕೊಂಡಿದೆ ಎಂದು ಅನ್ನಿಸುತ್ತದೆ. ವಿಸ್ತಾರವಾದ ವ್ಯಾಸಂಗ, ಸ್ಪಷ್ಟವಾದ ಆಲೋಚನೆ, ತಿಳಿಯಾದ ಬರವಣಿಗೆ ಈ ಚಿಕ್ಕ ಪುಸ್ತಕದ ಲಕ್ಷಣಗಳು.

ಇದರಲ್ಲಿ ತುಳು, ಚೇರ, ಕೊಂಕಣ, ಪಾಂಡ್ಯ ಎಂಬ ದೇಶ ನಾಮಗಳ ನಿಷ್ಪತ್ತಿಯನ್ನು ಕುರಿತ ವಿವೇಚನೆಯಿದೆ. 'ತುಳು' ಎಂಬ ಶಬ್ದವು ಮೂಲತಃ ಕುಳಸಮೇತವಾದುದೆಂದೂ ಅದರ ಅರ್ಥ 'ಜಲಾಧಿಕ್ಯವುಳ್ಳ ದೇಶ'ವೆಂದೂ ಅವರು ಸಾಧಿಸಿದ್ದಾರೆ. 'ಚೇರ-ಕೇರಲ' ಶಬ್ದಗಳೆರಡೂ ಒಂದು ಇನ್ನೊಂದರ ರೂಪಾಂತರವೆಂಬ ಅವರ ತೀರ್ಮಾನಕ್ಕೆ ಭಾಷಾವಿಜ್ಞಾನಿಗಳ ಸಮ್ಮತಿಯಿದೆ. ಇವು ಗುಡ್ಡ ಎಂಬರ್ಥದ ಪದದಿಂದ (ನೋಡಿ : ತುಳು. ಕೇರ್ = ಮೇಲೇರು) ಬಂದಿದೆಯೆಂದು ಅವರ ನಂಬಿಕೆ. ಕೊಂಕ - ಕೋಂಕ (=ಏರಿಳಿತವುಳ್ಳದ್ದು) ಶಬ್ದದಿಂದ 'ಕೊಂಕಣ' ಬಂತೆಂದು ಅವರ ವಾದ. 'ಪಾಂಡಿ' ಎಂದರೆ ಸಾಮಾನು ಸಾಗಿಸುವ ಹಡಗು ಎಂಬರ್ಥ ದಕ್ಷಿಣ ಕನ್ನಡ ಜಿಲ್ಲೆಯಲ್ಲಿದೆ. ಈ ಪದ

ತಮಿಳಳಲ್ಲಿಯೂ ಇತ್ತೆಂದು ತೋರಿಸಿಕೊಡುತ್ತಾರೆ. 'ಪಾಂಡ್ಯನ್' ಎಂಬುದು ಹಡಗಿನಲ್ಲಿ ಸಾಮಾನು ಸಾಗಿಸುವ ವ್ಯಕ್ತಿಯಾಗುತ್ತಾನೆ. 'ಪಾಂಡಿ' ಶಬ್ದದ ಮೂಲ, ಶ್ರೀ ಕೃಷ್ಣ ಭಟ್ಟರ ಪ್ರಕಾರ, ಸಂಸ್ಕೃತ ಭಾಂಡ (= ಸಾಮಾನು ಸರಂಜಾಮು); 'ಭಾಂಡ' ಎಂಬುದೇ ತಮಿಳರ ಬಾಯಲ್ಲಿ 'ಪಾಂಡಿ' ಎಂದಾಗಿ ಸಾಮಾನು ಸಾಗಿಸುವ ಸಾಧನ, ಹಡಗು ಎಂದಾಗಿದೆಯೆಂದು ಅವರ ವಾದ. ಈ ಎಲ್ಲ ಊಹೆಗಳಲ್ಲಿ ಯಾವುದು ನಿಲ್ಲುತ್ತದೋ ಹೇಳುವುದು ಕಷ್ಟ. ಕೆಲವು ಕಡೆ ಊಹೆಯ ಕುದುರೆ ಸ್ವಲ್ಪ ಹೆಚ್ಚಾಗಿಯೇ ಓಡಿದಂತೆ ಅನ್ನಿಸುತ್ತದೆ. ಆದರೆ ಕೃಷ್ಣಭಟ್ಟರ ಬರವಣಿಗೆಯ ರೀತಿ ಮೆಚ್ಚುಗೆಯಾಗುತ್ತದೆ. ಬೆದಕಿ ವಸ್ತು ಸ್ಥಿತಿಯನ್ನು ತಿಳಿಯುವ ಹಂಬಲವಂತೂ ಪುಸ್ತಕದುದ್ದಕ್ಕೂ ಎದ್ದು ನಿಲ್ಲುತ್ತದೆ.

ಜೆ.ಎಸ್. ಕುಳ್ಳಿ ಮತ್ತು ಜಿ.ಪಿ. ಮುರಡಿ ಅವರ **ಅನುವಾದ ಕಲೆ** ಬಹಳ ನಿರೀಕ್ಷೆ ಹುಟ್ಟಿಸುವ ಪುಸ್ತಕ. ಈ ಹಿಂದೆ ಕಾಲೇಜುಗಳಲ್ಲಿ ಅನುವಾದ ಮಾಡುವುದನ್ನು ತರಗತಿಗಳಲ್ಲಿ ಕಲಿಸುತ್ತಿದ್ದರು ಮತ್ತು ಪರೀಕ್ಷೆಗಳಲ್ಲಿ ಅಂತಹ ಪ್ರಶ್ನೆಯಿರುತ್ತಿತ್ತು. ಕಾಲೇಜು ವಿದ್ಯಾರ್ಥಿಗಳ ಅನುಕೂಲಕ್ಕಾಗಿ ಸಿ. ಮಹಾದೇವಪ್ಪನವರೂ ಜಿ. ವೆಂಕಟಸುಬ್ಬಯ್ಯನವರೂ ಅನುವಾದದ ತಂತ್ರವನ್ನು ತಿಳಿಯಲು ಸಹಾಯಕ ಪುಸ್ತಕಗಳನ್ನು ಬರೆದಿದ್ದರು (ಅವುಗಳನ್ನು ಪ್ರಸ್ತುತ ಲೇಖಕರು ಗಮನಿಸಿಲ್ಲ). ಆ ಗ್ರಂಥಗಳ ಉದ್ದೇಶ ನೇರವಾಗಿ ಅನುವಾದದ ತಂತ್ರವನ್ನು ವಿದ್ಯಾರ್ಥಿಗಳಿಗೆ ಉದಾಹರಣೆ ಸಮೇತ ತಿಳಿಸುವುದು. ಇಲ್ಲಿ ಲೇಖಕರು ಅನುವಾದದ ಬಗ್ಗೆ ತಾತ್ವಿಕ ವಿವೇಚನೆಯೊಂದಿಗೆ ಆರಂಭಿಸಿ, ಅನುವಾದ ಕೈಗೊಳ್ಳುವವರ ಸಮಸ್ಯೆಗಳು, ಅನುವಾದದ ಪ್ರಭೇದಗಳು, ಅನುವಾದದ ಇತಿಹಾಸ ಇತ್ಯಾದಿ ಸಮಸ್ಯೆಗಳನ್ನು ವಿವೇಚಿಸುತ್ತಾರೆ. ಭಾಷಾವಿಜ್ಞಾನದ ಹಿನ್ನೆಲೆಯಲ್ಲಿ ಈ ವಿವೇಚನೆ ನಡೆಯುತ್ತದೆ ಎಂಬ ಭಾವನೆ ಅಲ್ಲಲ್ಲಿ ಹುಟ್ಟುತ್ತದೆ.

ವಾಸ್ತವ ಸಂಗತಿಯೆಂದರೆ ಇಡೀ ಕೃತಿ ವಿಫಲವಾಗಿದೆ. ಇದಕ್ಕೆ ಕಾರಣಗಳು ಹಲವಾರು. ಒಂದು, ಲೇಖಕರಿಗೆ ಅಭಿವ್ಯಕ್ತಿಗೆ ಸರಿಯಾದ ಭಾಷೆ ಇನ್ನೂ ಸಿದ್ಧಿಸದಿರುವುದು; ತಾವು ಹೇಳುವುದು ಓದುಗರಿಗೆ ಅರ್ಥವಾಗುತ್ತದೆಯೋ ಇಲ್ಲವೇ ಎಂಬುದರ ಕಡೆ ಲಕ್ಷ್ಯ ಕೊಡದಿರುವುದು; ಇಂಗ್ಲೀಷ್ ವಾಕ್ಯಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಅವನ್ನು ಹಾಗೆ ಹಾಗೆ ಕನ್ನಡಕ್ಕೆ ತಂದಿರುವುದು; ತಮ್ಮ ನಿರೂಪಣೆಗೆ ಕೆಟ್ಟ ಉದಾಹರಣೆಗಳನ್ನು ಆರಿಸಿಕೊಂಡು ಅವನ್ನೇ ಮತ್ತೆ ಮತ್ತೆ ಬಳಸುವುದು. ಮೂಲ ಇಂಗ್ಲೀಷ್ ಪದಗಳನ್ನು ಕನ್ನಡಕ್ಕೆ ಅನುವಾದಿಸುವಾಗಲೂ ಅದೇ ಮಕ್ಕೀ ಕ ಮಕ್ಕೀ ವಿಧಾನ ಅನುಸರಿಸಿದೆ. "Translation of Scientific literature" ಎಂಬುದನ್ನು "ವೈಜ್ಞಾನಿಕ ಸಾಹಿತ್ಯಾನುವಾದ" ಎಂದು ಅನುವಾದಿಸಿದರೆ ಹೇಗೆ ? 'ವೈಜ್ಞಾನಿಕ' ಎಂಬುದು 'ಸಾಹಿತ್ಯಾನುವಾದ'ದ ವಿಶೇಷಣವಾಗಿ ಬಿಡುವ ಸಂಭವವಿದೆ. 'ವಿಜ್ಞಾನ ಸಾಹಿತ್ಯದ ಅನುವಾದ' ಅಥವಾ ಬೇಕಾದರೆ 'ವೈಜ್ಞಾನಿಕ ಸಾಹಿತ್ಯದ ಅನುವಾದ' ಎಂಬ ಸ್ಪಷ್ಟ ಅನುವಾದ ಯಾವುದೇ ತಪ್ಪು ಕಲ್ಪನೆಗೂ ಅವಕಾಶಕೊಡದು. ಉಪವರ್ಗ ಸೂಚಕಗಳಾಗಿ ಬಳಸಿದ ಅ, ಬ, ಕ, ಡ, ಇ ಎಂಬುವು

a, b, c, d, e ಯ ಕೆಟ್ಟ ಅನುವಾದಗಳು. ಸಹಜವಾಗಿ ಅ, ಆ, ಇ, ಈ, ಉ ಏಕೆ ಬಳಸಬಾರದು? 'ವೈಜ್ಞಾನಿಕ ಸಾಹಿತ್ಯಾನುವಾದ'ದ ಚರ್ಚೆಯಲ್ಲಿ 'V.P.P. = ಬೆಲೆಯಂಚೆ' ಎಂಬ ಉದಾಹರಣೆ ಹೇಗೆ ಉಚಿತವೋ ತಿಳಿಯದು. "ಈ ಪಾರಿಭಾಷಿಕ ಪದಗಳು ಅದೇ ಅರ್ಥಕೊಡುವ ಸಾಮಾನ್ಯ ಪದಗಳಿಂದ ಚ್ಯುತಿ ಹೊಂದುವುದಿಲ್ಲ" - ಇಂಥ (ಸುಲಭವಾಗಿ?) ಅರ್ಥವಾಗದ ವಾಕ್ಯಗಳು ಈ ಪುಸ್ತಕದ ತುಂಬ ಇವೆ. "ನಮಿಸಿ ನಾರಾಯಣನ" ಎಂಬ ವ್ಯಾಸಭಾರತದ ಶ್ಲೋಕಾನುವಾದ ಕುಮಾರವ್ಯಾಸನದಲ್ಲ, ಎ.ಆರ್. ಕೃಷ್ಣಶಾಸ್ತ್ರಿಯವರದು. 'untranslatability' 'ಭಾಷಾಂತರ ರಾಹಿತ್ಯ'ವಲ್ಲ, ಭಾಷಾಂತರಾಸಾಧ್ಯತೆ. ಹಿಂದೂಗಳಲ್ಲಿ 'ಸ್ವರ್ಗವಾಸಿಗಳಾದರು' ಇದ್ದಂತೆ ಮುಸಲ್ಮಾನರಲ್ಲಿ 'ಪೈಗಂಬರವಾಸಿಗಳಾದರು' ಎಂಬ ಮಾತು ಇರುವುದು ಸಂದೇಹಾಸ್ಪದ. ಶಿವಕೋಟ್ಯಾಚಾರ್ಯನ ವಡ್ಡಾರಾಧನೆಗೆ ಮೂಲ ಹರಿಷೇಣನ 'ಕಥಾಕೋಶ' ಅಲ್ಲ, ಶಿವಕೋಟಿಯ 'ಬೃಹತ್ ಕಥಾಕೋಶ'. ಅಲ್ಲಿರುವುವು ತೀರ್ಥಂಕರರ ಕತೆಗಳಲ್ಲ. 'ಬೃಹದಾರಾಧನಾ' ಎಂಬ ಕೃತಿಯಿಲ್ಲ, ಇರುವುದು 'ಭಗವತೀ ಆರಾಧನಾ'. ಕೃತಿ ರಚನೆಯನ್ನು ಗಂಭೀರವಾದ ಕಾರ್ಯವೆಂದು ಭಾವಿಸಿದ್ದಿದ್ದರೆ ಬಹುಶಃ ಹೀಗಾಗುತ್ತಿರಲಿಲ್ಲ. ಓದುಗರಿಗೆ ಅನುವಾದದ ಬಗ್ಗೆ ಯಾವುದೇ ಬೆಳಕೂ ಈ ಕೃತಿಯಿಂದ ದೊರಕುವಂತೆ ಕಾಣುವುದಿಲ್ಲ.

**ಕನ್ನಡ ಭಾಷೆಯ ರೂಪರೇಷೆಗಳು** ಎಂಬ ವಿಲ್ಯಂ ಮಾಡ್ತ ಅವರ ಕೃತಿ ಸ್ವಾಗತಾರ್ಹವಾದುದು. ಭಾಷಾವಿಜ್ಞಾನ ಕ್ಷೇತ್ರದಲ್ಲಿ ಕರ್ನಾಟಕ ಬಹಳ ಹಿಂದುಳಿದಿದೆ. ತಮಿಳು, ಮಲಯಾಳ, ತೆಲುಗು ಭಾಷೆಗಳನ್ನು ಕುರಿತಂತೆ ನಡೆದಿರುವ ಕೆಲಸಕ್ಕೆ ಹೋಲಿಸಿದಾಗ ನಮ್ಮಲ್ಲಿ ಆಗಿರುವ ಕೆಲಸ ಕಡಮೆಯೆಂದೇ ಹೇಳಬೇಕು. ಭಾಷಾವಿಜ್ಞಾನವನ್ನೇ ಮುಖ್ಯ ವಿಷಯವಾಗಿ ಮಾಡಿಕೊಂಡು ಸಂಶೋಧನೆ ಮಾಡುತ್ತಿರುವವರ ಸಂಖ್ಯೆ ನಮ್ಮಲ್ಲಿ ದೊಡ್ಡದೇನೂ ಅಲ್ಲ. ವಿಲ್ಯಂ ಮಾಡ್ತ ಆ ದೃಷ್ಟಿಯಿಂದ ನಮ್ಮಲ್ಲಿ ಭರವಸೆ ಹುಟ್ಟಿಸುವ ತರುಣ ಭಾಷಾವಿಜ್ಞಾನಿಯಾಗಿದ್ದಾರೆ.

ಅವರ ಆ ಕೃತಿ ಕನ್ನಡ ಭಾಷೆಯ ರಚನೆಯನ್ನು ಕುರಿತುದಾಗಿದೆ. ವಿವರಣಾತ್ಮಕ ಭಾಷಾವಿಜ್ಞಾನದ ಕ್ರಮವನ್ನನುಸರಿಸಿ ಇಲ್ಲಿಯೂ ಕನ್ನಡ ಭಾಷೆಯ ರಚನೆಯನ್ನು ಧ್ವನಿಮ, ಸಂಧಿ, ಆಕೃತಿಮ, ವಾಕ್ಯ ಈ ಸ್ತರಗಳಲ್ಲಿ ವಿವರಿಸಲಾಗಿದೆ. ಇದು ಕನ್ನಡ ಭಾಷೆಯ ರಚನೆಯ ಬಗ್ಗೆ ನಮಗೆ ಈಗಾಗಲೇ ತಿಳಿದಿರುವ ಸಂಗತಿಗಳ ಮೊತ್ತವಲ್ಲ. ವಿಶ್ಲೇಷಣೆಯ ಮೂಲಕ ಅನೇಕ ಹೊಸ ಅಂಶಗಳನ್ನು ಗುರುತಿಸಿದ್ದಾರೆ. ಈ ದೃಷ್ಟಿಯಿಂದ ಕನ್ನಡ ಅಕ್ಷರಗಳ ರಚನೆಯ ಬಗ್ಗೆ (syllabic structure), ಕನ್ನಡ ಸಂಧಿಯ ಬಗ್ಗೆ (morpho - phonemics) ಬರೆದಿರುವ ಭಾಗಗಳನ್ನು ನೋಡಬೇಕು. ಶಾಸ್ತ್ರೀಯ ಬರವಣಿಗೆಯಲ್ಲಿ ಮಿತವ್ಯಯ ಗುಣವನ್ನು ಸಾಧಿಸುವುದು ಒಂದು ಅಪೇಕ್ಷಣೀಯ ಗುಣ. ಆದರೆ ಅದನ್ನೇ ಒಂದು ತುತ್ತತುದಿಗೆ ಒಯ್ದರೆ ಆಗ ಕೃತಿ ಸ್ವಲ್ಪ ದುರವಗ್ರಾಹ್ಯವಾಗುವ ಸಾಧ್ಯತೆ ಉಂಟು. ಮಾಡ್ತ ಅವರು ಚಿಹ್ನೆಗಳ ಮೂಲಕವೇ ಎಲ್ಲವನ್ನೂ ಸೂಚಿಸಲು ಹೋಗಿ ಓದುಗರು ಮತ್ತೆ

ಮತ್ತೆ ಸಂಕೇತ ವಿವರಗಳನ್ನು ಓದಿ ಸ್ಪಷ್ಟಮಾಡಿಕೊಳ್ಳುವಂತೆ ಮಾಡುತ್ತಾರೆ. ಓದುಗರ ಬಗ್ಗೆ ಸ್ವಲ್ಪ ರಿಯಾಯ್ತಿ ತೋರಿಸಿ, ನಾಲ್ಕು ಮಾತು ಹೆಚ್ಚಾದರೂ ವಿವರಗಳನ್ನು ಕೊಡಬಹುದಿತ್ತು. ಆದರೂ ವಿಲ್ಯಂ ಮಾಡ್ತ ಕನ್ನಡ ಭಾಷಾವಿಜ್ಞಾನಕ್ಕೆ ಒಂದು ಒಳ್ಳೆಯ ಗ್ರಂಥವನ್ನು ಕೊಟ್ಟಿದ್ದಾರೆಂಬಲ್ಲಿ ಅನುಮಾನವಿಲ್ಲ.

Retroflex ಎಂಬುವನ್ನು ಪ್ರತಿವೇಷ್ಟಿತ ಎಂದು ಕರೆಯುವುದರ ಬದಲು ಪರಿವೇಷ್ಟಿತ ಎಂದು ಕರೆದಿರುವುದು ಅನುಚಿತ. 'ಜ್ವರ' ಮತ್ತು 'ಜ್ಞಾನಿ' ಪದಗಳ ಮೊದಲ ವ್ಯಂಜನಸ್ಥಾನ ಒಂದೇ ಅಲ್ಲ, ಬೇರೆ ಬೇರೆ. ಇದನ್ನು ಅವರು ಗಮನಿಸಿದಂತೆ ತೋರದು. phoneme ಧ್ವನಿಮಾ ಆದರೆ, allophone ಉಪಧ್ವನಿಮಾ ಅಲ್ಲ, ಉಪಧ್ವನಿ. 'ಆಂ' 'ಊಂ' ಎಂದು ಅನುನಾಸಿಕೀಕೃತ ಸ್ವರಗಳನ್ನು ಕನ್ನಡದಲ್ಲಿ ಬರೆದರೆ ತಪ್ಪಾಗುತ್ತದೆ. ಇಲ್ಲಿ ಬಿಂದುವು 'ಮ್' ಅನುನಾಸಿಕವನ್ನು ಆಮ್, ಊಮ್ ಎಂಬಂತೆ ಸೂಚಿಸಬಹುದು. 'ಆ' 'ಊ'ಗಳ ಮೇಲೆ ಅನುನಾಸಿಕೀಕರಣ ಚಿಹ್ನೆಯನ್ನು ಬಳಸಬೇಕು, ಅನುನಾಸಿಕೀಕೃತ ಸ್ವರಗಳ ಬಗ್ಗೆ ಸೂಚಿಸುವುದಾದರೆ. ಕೆಡ್, ಬಿಡ್‌ಗಳು ಕೇಡು, ಬೀಡುಗಳಾಗಿ ನಾಮಪದಗಳಾಗಿ ರೂಪಾಂತರವಾಗುತ್ತವೆಯೆಂದು ಮಾಡ್ತ ಎಲ್ಲರಂತೆ ವಾದಿಸುತ್ತಾರೆ. ಸ್ವರಾದಿ ಪ್ರಕೃತಿ ಸಾಧಕ ಪ್ರತ್ಯಯ ಬಂದುದರಿಂದ ಕೇಡು, ಬೀಡುಗಳೇ ತಮ್ಮ ದೀರ್ಘಸ್ವರವನ್ನು ಹ್ರಸ್ವಗೊಳಿಸಿಕೊಳ್ಳುತ್ತವೆಂದು ಡಿ.ಎನ್. ಶಂಕರಭಟ್ಟರು ವಾದಿಸುವುದನ್ನು ಗಮನಿಸಬಹುದಿತ್ತು. ಒಂದೊಂದು ಅಧ್ಯಾಯವೂ ತೀರಾ ಚಿಕ್ಕುವಾದುವು; ವಿಷಯಗಳೂ ಹೆಚ್ಚು ಚರ್ಚಿತವಾದುವು ಎಂದು ಅನ್ನಿಸುವುದಿಲ್ಲ. ತಮ್ಮ ಕೃತಿ 'ರೂಪರೇಷೆಗಳು' ಮಾತ್ರ ಎಂದು ಕೃತಿಕಾರರು ಸಮರ್ಥಿಸಿಕೊಳ್ಳಬಹುದು.

ಇಷ್ಟು ಒಳ್ಳೆಯ ಪುಸ್ತಕದಲ್ಲಿ ಮುದ್ರಣ ದೋಷಗಳು ತುಂಬಿದ್ದು ಓದುಗರನ್ನು ಗಾಬರಿಗೊಳಿಸುತ್ತವೆ. ಕೊನೆಯಲ್ಲಿ ಅರ್ಧಪುಟದ ಒಪ್ಪೋಲೆ ಇದೆ. ಸರಿಯಾಗಿ ಪಟ್ಟಿಮಾಡಿದರೆ ಎರಡು ಮೂರು ಪುಟಗಳಾದರೂ ಆಗಬಹುದು.

# ಸಂಶೋಧನ ಸಮೀಕ್ಷೆ : 1976

ಈ ಸಮೀಕ್ಷೆಗೆ ಬಂದಿರುವ ಹದಿನಾರು ಕೃತಿಗಳಲ್ಲಿ ಐದು ನಿಬಂಧಗಳಿವೆ, ಕರ್ನಾಟಕ ಶಾಸನ, ಇತಿಹಾಸ, ಸಂಸ್ಕೃತಿಗಳಿಗೆ ಸಂಬಂಧಿಸಿದಂತೆ ಐದು ಗ್ರಂಥಗಳಿವೆ, ಒಂದು ಲಖನೌವಿಗೆ ಸಂಬಂಧಿಸಿದ್ದು, ಮೂರು ಜೈನಧರ್ಮಕ್ಕೆ ಸಂಬಂಧಿಸಿವೆ, ಒಂದು ಅನುವಾದ, ಇನ್ನೊಂದು ಪಪ್ರೋಶ (concordance) ಈ ಹದಿನಾರು ಗ್ರಂಥಗಳ ಗುಣಮಟ್ಟ ಒಟ್ಟಾರೆ ಹೆಚ್ಚಿನದು. ನಿಬಂಧಗಳು ಒಟ್ಟಾರೆ ತೃಪ್ತಿ ಕೊಡುತ್ತವೆ. ಮತ್ತು ಅವುಗಳನ್ನು ಅಚ್ಚುಮಾಡಿರುವ ರೀತಿ ಮೇಲ್ಮಟ್ಟದ್ದು. ಅಚ್ಚಿನ ತಪ್ಪುಗಳ ಕಡೆ, ಉಲ್ಲೇಖಗಳನ್ನು ಕೊಡುವ ಕಡೆ ಇನ್ನೂ ಹೆಚ್ಚಿನ ಗಮನ ಕೊಡುವುದು ಅಗತ್ಯ. ನಿಬಂಧಗಳಲ್ಲದೆ ಉಳಿದ ಕೃತಿಗಳೂ ಒಂದೆರಡನ್ನು ಬಿಟ್ಟರೆ ಒಟ್ಟಾರೆ ಗುಣದ ಕಡೆ ಲಕ್ಷ್ಯವನ್ನಿಟ್ಟಿವೆ. ಇದು ಸಂತೋಷ ತರುವ ಸಂಗತಿ. ಮುಂದೆ ಆಯಾ ಕೃತಿಯ ಪರಿಚಯವನ್ನು ಮಾಡಿಕೊಟ್ಟು ಸ್ವಲ್ಪಮಟ್ಟಿಗೆ ಅವುಗಳ ಸ್ಥೂಲ ವಿಮರ್ಶೆಯನ್ನೂ ಮಾಡಿದೆ.

**ನಾಗವರ್ಮನ ಕರ್ಣಾಟಕ ಕಾದಂಬರಿಯು** ಸಿ.ಪಿ. ಕೃಷ್ಣಕುಮಾರರ ಪಿ.ಎಚ್.ಡಿ. ನಿಬಂಧ ರೂಪವಾದ ಕೃತಿ. ಅದನ್ನು 'ಇದು ತೌಲನಿಕ ಮತ್ತು ವಿಮರ್ಶಾತ್ಮಕ ಅಧ್ಯಯನ' ಎಂದು ಅವರೇ ಕರೆದಿದ್ದಾರೆ. ಅವರ ನಿಬಂಧದಲ್ಲಿ ಅದರ ಉದ್ದೇಶ ಬಹು ಸಮರ್ಥವಾಗಿ ಮೂಡಿಬಂದಿದೆ. ನಾಗವರ್ಮನ ಕರ್ಣಾಟಕ ಕಾದಂಬರಿಯನ್ನು ಬಾಣನ (ಸಂಸ್ಕೃತ) ಕಾದಂಬರಿಯ ಜೊತೆ ಹೋಲಿಸಿರುವುದಲ್ಲದೆ ನಾಗವರ್ಮನ ಕೃತಿಯನ್ನೇ ಪ್ರತ್ಯೇಕವಾಗಿ ವಿಮರ್ಶಿಸಿದ್ದಾರೆ. ನಾಗವರ್ಮನಂತಹ ಶ್ರೇಷ್ಠಕವಿಯ ಬಗ್ಗೆ ಇಂತಹ ಅಧ್ಯಯನವೊಂದು ನಡೆಯುವ ಅಗತ್ಯವಿದ್ದು ಆ ಕೊರತೆಯನ್ನು ಸಿ.ಪಿ.ಕೆ. ಅವರು ಹೋಗಲಾಡಿಸಿದ್ದಾರೆ.

ಇದರ ಒಟ್ಟು ಐದು ಭಾಗಗಳಲ್ಲಿ ಬಂದಿರುವ ಸಂಗತಿಗಳು ಹೀಗಿವೆ : ಸಂಸ್ಕೃತ ಗದ್ಯ ಕಾವ್ಯದ ಪರಿಚಯ ಮತ್ತು ಆ ಸಾಹಿತ್ಯದಲ್ಲಿ ಬಾಣನ ಸ್ಥಾನ ; ಎರಡನೆಯ ಭಾಗ ಬಾಣನ ಮತ್ತು ಅವನ ಕೃತಿಯ ಪರಿಚಯಕ್ಕೆ ಮೀಸಲಾಗಿದೆ ; ಮೂರನೆಯ ಭಾಗದಲ್ಲಿ ನಾಗವರ್ಮನ ವಿಷಯವಿದೆ; ನಾಲ್ಕನೆಯ ಭಾಗ ಬಾಣ ಮತ್ತು ನಾಗವರ್ಮರ ತೌಲನಿಕ ಅಧ್ಯಯನಕ್ಕೆ ಮೀಸಲಾಗಿದೆ; ಐದನೆಯ ಭಾಗದಲ್ಲಿ ಕರ್ಣಾಟಕ ಕಾದಂಬರಿಯ ವಿವಿಧ ಮುಖಗಳ ದರ್ಶನವನ್ನು ಮಾಡಿಸಿದ್ದಾರೆ; ಕೊನೆಯಲ್ಲಿ "ಅನುಬಂಧ" ರೂಪವಾಗಿ 'ಕಥಾ ಸರಿತ್ಸಾಗರದ ಸುಮನರಾಜನ ಕತೆ'ಯನ್ನು ಕೊಟ್ಟಿದೆ. ಎಂದರೆ, ನಿಬಂಧಕಾರರ ವಿಷಯ ವಿಶ್ಲೇಷಣೆ ಸಾಕಷ್ಟು ಸಮಗ್ರವಾಗಿದೆ.

ನಾಗವರ್ಮನ ಕೃತಿಯನ್ನು ಲಕ್ಷ್ಯವಾಗಿಟ್ಟುಕೊಂಡಿರುವ ಅಧ್ಯಯನವು ಬಾಣ ಭಟ್ಟನಿಂದ ಆರಂಭವಾಗುವುದು ಅಷ್ಟು ಉಚಿತವಾಗಿ ತೋರದಿದ್ದರೂ, ಬಾಣ ಭಟ್ಟನಿಗೆ ಸಂಬಂಧಿಸಿದಂತೆ (ಸ್ವಲ್ಪ ಹೆಚ್ಚೇ ಎಂದು ಹೇಳಬಹುದಾದಷ್ಟು) ವಿವರಗಳನ್ನು ಕೊಟ್ಟಿದ್ದಾರೆ. ಬಾಣನ ಕಾದಂಬರಿಯನ್ನು ಮೂಲದಲ್ಲೇ ಸಾಕಷ್ಟು ವಿವರವಾಗಿ ಅಧ್ಯಯನ ಮಾಡಿರುವುದಕ್ಕೆ ಗ್ರಂಥದುದ್ದಕ್ಕೂ ಆಧಾರಗಳಿವೆ. ಸಂಸ್ಕೃತ ಗದ್ಯವಿಕಾಸ, ಸಂಸ್ಕೃತ ಗದ್ಯಕಾವ್ಯದ ಉದಯ ಇತ್ಯಾದಿ ಅಧ್ಯಾಯಗಳು ಸಾಕಷ್ಟು ಪ್ರೌಢವಾಗಿವೆ. ಬಾಣನ ಕಾಲ, ಜೀವನ, ಕೃತಿಗಳನ್ನು ಒಂದು ಚಿಕ್ಕ ಅಧ್ಯಾಯದಲ್ಲಿ ಪರಿಚಯಮಾಡಿಕೊಡಲಾಗಿದೆ. 'ಕಾದಂಬರಿ' ಕತೆಯ ಆಕರವನ್ನು ವಿವರವಾಗಿ ಚರ್ಚಿಸಲಾಗಿದೆ. "ಬಾಣ ಕಥಾವಸ್ತುವಿನ ಮಟ್ಟಿಗೆ 'ಬೃಹತ್ಕಥೆ'ಗೆ ಋಣಿಯಾಗಿದ್ದರೂ, ಅವನ ಪ್ರಖರವಾದ ಸ್ವೋಪಜ್ಞತೆ 'ಕಾದಂಬರಿ'ಯಲ್ಲಿ ಹೆಜ್ಜೆ ಹೆಜ್ಜೆಗೂ ಕಂಡುಬರುತ್ತದೆ. ಕಾವ್ಯದ ಒಂದೊಂದು ವಿವರವೂ ಅದಕ್ಕೆ ಹಿಡಿದ ರನ್ನಗನ್ನಡಿ. ಸ್ವಾತಿಯ ಹನಿ ಕಪ್ಪೆಚಿಪ್ಪಿನಲ್ಲಿ ಬಿದ್ದು ಮುತ್ತಾಗುವಂತೆ, ಸಾಧಾರಣವಾದ ಮೂಲಕಥೆ ಕವಿಪ್ರತಿಭೆಯಲ್ಲಿ 'ಅತಿದ್ವಯೀಕಥೆ'ಯಾಗಿ ಪರಿಣಮಿಸಿದೆ" (ಪು. 63) - ಇದು ಅವರ ತೀರ್ಮಾನ. ಬಾಣನ ಕಲೆಯ ಗುಣದೋಷಗಳ ವಿಮರ್ಶೆಯೂ ಇಲ್ಲುಂಟು.

ಈ ನಿಬಂಧದ 108ನೆಯ ಪುಟದಲ್ಲಿ ಕನ್ನಡ ನಾಗವರ್ಮನ ಪ್ರವೇಶವಾಗುತ್ತದೆ. ನಾಗವರ್ಮನ ಕಾಲ ಸು. 990 ಎಂದು ಒಪ್ಪಿಕೊಂಡು ನಾಗವರ್ಮನ ಹಿನ್ನೆಲೆಯನ್ನು ಪುನಾರಚಿಸಲು ಪ್ರಯತ್ನಿಸಿದ್ದಾರೆ. ನಾಲ್ಕನೆಯ ಭಾಗ ಒಂದು ದೃಷ್ಟಿಯಿಂದ ಈ ಕೃತಿಯ ಅತಿ ಮುಖ್ಯಭಾಗ. ಆರಂಭದಲ್ಲಿ 'ಕನ್ನಡ ಭಾಷಾಂತರ ಪರಂಪರೆ' ಎಂಬ ಅಧ್ಯಾಯದ ಆರಂಭದಲ್ಲಿ ಭಾಷಾಂತರ ಕಲೆಯ ಬಗೆಗಿನ ಚರ್ಚೆ ಸಂಪೂರ್ಣ ಅನಗತ್ಯ. 'ಕನ್ನಡ ಭಾಷಾಂತರ ಪರಂಪರೆ' ಅಧ್ಯಾಯ ಭಾಷಾಂತರಕಾರನಾಗಿ ನಾಗವರ್ಮನನ್ನು ಅರ್ಥಮಾಡಿಕೊಳ್ಳಲು ಸಹಾಯಕ. 'ನಾಗವರ್ಮ ಮತ್ತು ಬಾಣ' ಎನ್ನುವ ಅಧ್ಯಾಯದಲ್ಲಿ ಇಬ್ಬರು ಕವಿಗಳ ಹೋಲಿಕೆಯಿದೆ ಮತ್ತು ವಸ್ತುನಿಷ್ಠ ವಿಮರ್ಶೆಯಿದೆ. ಗದ್ಯ ಕೃತಿಯನ್ನು ಪದ್ಯರೂಪಕ್ಕೆ ನಾಗವರ್ಮ ತಿರುಗಿಸಿದ್ದಾನೆ. ಅದರಿಂದ ಸಹಜವಾಗಿಯೇ ಕೆಲವು ಅನುಕೂಲಗಳೂ ಮಿತಿಗಳೂ ಪ್ರಾಪ್ತವಾಗಿರುವುದನ್ನು ಸಿ.ಪಿ.ಕೆ. ಅವರು ಸರಿಯಾಗಿ ಗುರುತಿಸಿದ್ದಾರೆ. (ಈ ಸಂದರ್ಭದಲ್ಲಿ ಛಂದಸ್ಸಿನಿಂದ ಪ್ರಯೋಜನವೇನು ಎಂಬ ವಿಷಯದ ಸಾಮಾನ್ಯ ಚರ್ಚೆ ಅಪ್ರಸ್ತುತವಾಗಿತ್ತು.) ಮೂಲವನ್ನು ಯಥಾವತ್ತಾಗಿ ಸಂಗ್ರಹವಾಗಿ ಮಾರ್ಪಡಿಸಿರುವುದಕ್ಕೆ, ಮೂಲದ ಸೊಗಸು ಕನ್ನಡದಲ್ಲಿ ಮರೆಯಾಗಿರುವುದಕ್ಕೆ, ಮೂಲದ ಸೊಗಸು ಹೆಚ್ಚಿರುವುದಕ್ಕೆ ಅನೇಕ ಉದಾಹರಣೆಗಳು ಇಲ್ಲಿವೆ. ಈ ಅಧ್ಯಾಯದ ಹಿಂದೆ ಬಹುವಾದ ಪರಿಶ್ರಮ, ವ್ಯವಸ್ಥಿತ ಆಲೋಚನೆಗಳಿವೆಯೆಂಬುದು ಸ್ಪಷ್ಟ ಮತ್ತು ಈ ಅಧ್ಯಾಯ ಇಡೀ ಕೃತಿಯಲ್ಲಿ ಅಮೂಲ್ಯವಾದುದು. ನಾಗವರ್ಮನ ಶೈಲಿ, ವರ್ಣನೆಗಳು, ಪಾತ್ರಚಿತ್ರಣ ಇವೂ ಅಭ್ಯಾಸಯೋಗ್ಯವಾಗಿವೆ. (ಲೇಖಕರ 'ಅರಿಕೆ' ಭಾಗದಲ್ಲಿ ಕೆಲವು ಮಾತುಗಳನ್ನು ತೆಗೆದುಹಾಕಿದ್ದರೂ ಚೆನ್ನಾಗಿರುತ್ತಿತ್ತು)

ಕನ್ನಡದಲ್ಲಿ ತೌಲನಿಕ ಅಭ್ಯಾಸ ಇನ್ನೂ ಹೆಚ್ಚು ಹೆಚ್ಚಾಗಿ ನಡೆಯಬೇಕಾಗಿದೆ. ಆಗ ಮಾತ್ರ ನಮ್ಮ ಕವಿಗಳ ಪಾಲೆಷ್ಟು ಅನ್ಯರಿಂದ ತೆಗೆದುಕೊಂಡದ್ದು ಎಷ್ಟು ಎಂಬುದು

ಗೊತ್ತಾದೀತು. ಅಂತಹ ತೌಲನಿಕ ಅಭ್ಯಾಸಕ್ಕೆ ಒಂದು ಅಮೂಲ್ಯ ಕಾಣಿಕೆಯಂತಿರುವ ಕೃತಿಯನ್ನು ನೀಡಿದ್ದಕ್ಕೆ ಸಿ.ಪಿ.ಕೆ. ಅವರು ಅಭಿನಂದನೀಯರಾಗಿದ್ದಾರೆ.

**ಕುಮಾರವಾಲ್ಮೀಕಿ - ಒಂದು ಅಧ್ಯಯನ** ಎಚ್. ಸೀತಾರಾಮ ಆಚಾರ್ ಅವರಿಗೆ ಪಿಎಚ್.ಡಿ. ಪದವಿಯನ್ನು ದೊರಕಿಸಿಕೊಟ್ಟ ನಿಬಂಧ. ತೊರವೆ ರಾಮಾಯಣವನ್ನು ಬೇರೆ ಬೇರೆ ದೃಷ್ಟಿಗಳಿಂದ ಅಧ್ಯಯನ ನಡೆಸುವುದು ಈ ಕೃತಿಯ ಉದ್ದೇಶ. ಕೃತಿಯ ವಸ್ತು, ಕವಿಯ ಕಾಲ, ಪರಿಸರ, ಮೂಲ ರಾಮಾಯಣದೊಂದಿಗೆ ತೌಲನಿಕ ಅಧ್ಯಯನ, ಕೃತಿಯ ಸಾಹಿತ್ಯಾಂಶ ಕೃತಿಯಲ್ಲಿ ಕಂಡುಬರುವ ಸಮಕಾಲೀನ ಅಂಶಗಳು - ಇವನ್ನು ಸೀತಾರಾಮ ಆಚಾರ್ಯರು ಸಾಕಷ್ಟು ಸುದೀರ್ಘವಾಗಿಯೇ ಪ್ರಸ್ತಾಪಿಸಿದ್ದಾರೆ. ಆರಂಭದಲ್ಲಿ ಮೂಲರಾಮಾಯಣದ ಕಾಲ, ಅದರ ಭಿನ್ನ ಪ್ರಭೇದಗಳನ್ನು (ಜೈನರಲ್ಲಿ ಬೌದ್ಧರಲ್ಲಿ) ಪಾಠಭೇದಗಳನ್ನು ಚರ್ಚಿಸಿದ್ದಾರೆ. ಹಾಗೆಯೇ ತೊರವೆರಾಮಾಯಣದ ಸ್ಥೂಲ ಪರಿಚಯವೂ ಬಂದಿದೆ. ಎರಡನೆಯ ಅಧ್ಯಾಯದಲ್ಲಿ ಕೃತಿಯ ಕಾಲ ಪರಿಸರವನ್ನೂ, ಕನ್ನಡದ ರಾಮಾಯಣ ಕಾವ್ಯಗಳನ್ನೂ, ರಾಮಾಯಣದ ಉಲ್ಲೇಖಗಳನ್ನೂ ಪರಿಚಯ ಮಾಡಿಕೊಟ್ಟಿದ್ದಾರೆ. ತೊರವೆ ರಾಮಾಯಣದ ಕಾಲವನ್ನು ಹದಿನಾಲ್ಕನೇ ಶತಮಾನಕ್ಕೆ ಕೊಂಡೊಯ್ದಿರುವುದು ಗಮನಿಸಬೇಕಾದ ಸಂಗತಿ (ಕುಮಾರವ್ಯಾಸನ ಕಾಲ ಆಗ ತನ್ನಷ್ಟಕ್ಕೆ ಹಿಂದೆ ಹೋಗುತ್ತದೆ). ಮುಂದಿನ ಅಧ್ಯಾಯದಲ್ಲಿ ಸಾಕಷ್ಟು ವಿಸ್ತಾರವಾಗಿಯೇ ವಾಲ್ಮೀಕಿ ರಾಮಾಯಣದ ಜೊತೆ ನರಹರಿಯ ಕೃತಿಯನ್ನು ಹೋಲಿಸಿದ್ದಾರೆ. 'ಸಾಮಾಜಿಕ ಮತ್ತು ರಾಜಕೀಯ ಅಧ್ಯಯನ' ಎಂಬ ನಾಲ್ಕನೆಯ ಅಧ್ಯಾಯವು ಸ್ವಾರಸ್ಯವೂ ಉಪಯುಕ್ತವೂ ಆಗಿದೆ.

ಶ್ರೀ ಸೀತಾರಾಮ ಆಚಾರ್ ಅವರು ಈ ನಿಬಂಧ ರಚನೆಗೆ ಬಹು ಕಷ್ಟಪಟ್ಟಿದ್ದಾರೆ, ಸಾಕಷ್ಟು ಓದಿದ್ದಾರೆ, ವಿಚಾರ ಮಾಡಿದ್ದಾರೆ ಎಂಬುದಂತೂ ಸ್ಪಷ್ಟ. ಆದರೆ, ಅಧ್ಯಾಯಗಳನ್ನು ಉಪವರ್ಗಗಳಾಗಿ ವಿಂಗಡಿಸಿಕೊಳ್ಳುವಲ್ಲಿ ಅವರು ಇನ್ನೂ ಸ್ವಲ್ಪ ಎಚ್ಚರಿಕೆ ವಹಿಸಬಹುದಿತ್ತು. ಭಾಷೆಯಲ್ಲಿ ಇನ್ನೂ ಸಂಯಮವನ್ನು ತೋರಬಹುದಿತ್ತು. ಸಂಗತಿಗಳನ್ನು ಪಟ್ಟಿ ಹಾಕಿ ಕೊಡುವುದು ಇನ್ನೂ ಹೆಚ್ಚಿನ ಸಂಶೋಧನೆಗೆ ಅವಕಾಶ ಕೊಡುತ್ತದೆಯಾದರೂ, ಶ್ರೀ ಆಚಾರ್ಯರು ಆ ಬಗ್ಗೆ ಹೆಚ್ಚಿನ ವ್ಯಾಖ್ಯಾನಕ್ಕೆ ಕೆಲವೊಮ್ಮೆ ಗಮನ ಕೊಡುವುದಿಲ್ಲ. ಪು. 56-63ರ ಪಟ್ಟಿಗಳನ್ನು ನೋಡಬಹುದು. ಪು. 278-82 ಇಲ್ಲಿಯ ಪಟ್ಟಿಗಳನ್ನು ಕ್ರಮಬದ್ಧವಾಗಿ ವಿಂಗಡಿಸುವ, ವಿವರಿಸುವ ಅಗತ್ಯವಿದೆ. ವ್ಯಾಪಾರದ ಮಾನಗಳಲ್ಲಿ ಗಾವುದ, ಯೋಜನ ಸೇರಿಸಿದರೆ ಹೇಗೆ ? (ಪು. 281). 'ಕರ್ಪೋತ ವಣಿಜರು' ಎಂದು ಕೊಟ್ಟು ಇದು ನೌಕಾವ್ಯಾಪಾರವನ್ನು ಸೂಚಿಸುತ್ತದೆಯೇ ? ಎಂದು ಸಂದೇಹಿಸಿದ್ದಾರೆ. ಮೂಲದಲ್ಲಿಯೇ 'ಸಾಗರದ ಪೋತವಣಿಜರು' ಎಂದು ಸ್ಪಷ್ಟವಾಗಿದೆ. ಎಂದರೆ, ಬರವಣಿಗೆಯಲ್ಲಿ ವ್ಯವಸ್ಥೆ, ವಿಷಯ ವಿಶ್ಲೇಷಣೆ ಇವುಗಳಲ್ಲಿ ಕೊರತೆ ಎಂದು ಸೂಚಿಸಲು ಈ ಉದಾಹರಣೆಗಳು. ಅಚ್ಚಿಗೆ ಮುನ್ನ ಇಡೀ ನಿಬಂಧವನ್ನು ಇನ್ನೂ ಅಚ್ಚುಕಟ್ಟುಗೊಳಿಸಿ, ಕೆತ್ತಿ ತಿದ್ದಿದ್ದರೆ ಇನ್ನೂ ಒಳ್ಳೆಯ ಕೃತಿಯಾಗುತ್ತಿತ್ತು. ಈಗ ಇರುವಂತೆ, ಕುಮಾರ ವಾಲ್ಮೀಕಿಗೆ ಸಂಬಂಧಿಸಿದಂತಹ ಈ ನಿಬಂಧ ಸ್ವಾಗತಾರ್ಹವಾಗಿದೆ. ಬಹುಪಾಲು ನಿಬಂಧಕಾರರು ಉಪೇಕ್ಷಿಸುವ ಪದ ಸೂಚಿಯನ್ನು ಶ್ರೀ ಆಚಾರ್ಯರು ಕೊಟ್ಟಿರುವುದು ಮೆಚ್ಚಬೇಕಾದ್ದು.

**ದುರ್ಗಸಿಂಹನ ಪಂಚತಂತ್ರ ಸಮೀಕ್ಷೆ** ವರದರಾಜ ಹುಯಿಲುಗೋಳರ ಪಿಎಚ್.ಡಿ. ನಿಬಂಧ. ದುರ್ಗಸಿಂಹನ ಕೃತಿಗೆ ಅಖಿಲ ಭಾರತ ಮಹತ್ವವಿದೆ, ಮತ್ತು ಇದನ್ನು ಗುರುತಿಸಿದವರು ಡಾ. ಎ. ವೆಂಕಟಸುಬ್ಬಯ್ಯನವರು. ಒಟ್ಟು ಪಂಚತಂತ್ರ ಕೃತಿಗೆ ಸಂಬಂಧಿಸಿದಂತೆ ಈಗಾಗಲೇ ಸಾಕಷ್ಟು ಅಧ್ಯಯನ ನಡೆದಿದೆ. ಆ ಅಧ್ಯಯನಗಳ ಉಪಯೋಗವನ್ನು ಹುಯಿಲುಗೋಳರು ಮಾಡಿಕೊಂಡಿದ್ದಾರೆ. ಸಂಸ್ಕೃತದ ಅನುಪಲಬ್ಧ ಕೃತಿ ವಸುಭಾಗನ ಪಂಚತಂತ್ರ ; ಮತ್ತು ದುರ್ಗಸಿಂಹನಿಗೆ ಇದೇ ಮೂಲಕೃತಿ. ತಮ್ಮ ಅನೇಕ ವಿಚಾರಗಳು ವಸುಭಾಗನ ವಿಷಯಕ್ಕೆ ಹೊಸ ಅಂಶಗಳನ್ನು ಸೇರಿಸುತ್ತವೆಯೆಂದು ಲೇಖಕರು ಪ್ರಸ್ತಾವನೆಯಲ್ಲಿ ಹೇಳಿಕೊಂಡಿದ್ದಾರೆ. ಇದು ನಿಜವಾಗಿದ್ದರೆ ಲೇಖಕರು ಅಭಿನಂದನೀಯರೇ ಸರಿ.

ಮೊದಲ ವಿಭಾಗದಲ್ಲಿ ಪಂಚತಂತ್ರದ ಸಂಪ್ರದಾಯಗಳನ್ನು, ಅದರಲ್ಲೂ ವಸುಭಾಗಭಟ್ಟನ ಸಂಪ್ರದಾಯವನ್ನು ಪರಿಚಯ ಮಾಡಿಕೊಟ್ಟಿದ್ದಾರೆ. ಇಲ್ಲೆಲ್ಲ ತಮಗಿಂತ ಹಿಂದಿನ ವಿದ್ವಾಂಸರ ಬರಹಗಳನ್ನು ಚೆನ್ನಾಗಿಯೇ ಬಳಸಿಕೊಂಡಿದ್ದಾರೆ. ಈ ಭಾಗದಲ್ಲಿ ಕೆಲವೊಮ್ಮೆ ಸಾಮಾನ್ಯ ಸಂಗತಿಗಳಿಗೂ ಅಡಿಟಿಪ್ಪಣಿ ಸಮೇತ ಉಲ್ಲೇಖಗಳನ್ನು ಕೊಡುವುದು ಅಷ್ಟು ಉಚಿತವಾಗಿ ತೋರುವುದಿಲ್ಲ. ಪು. 38ರಲ್ಲಿ Text ಎಂಬುದನ್ನು 'ಪಠ್ಯ ಪುಸ್ತಕ' ಎಂದು ಅನುವಾದಿಸಿರುವುದು ಸರಿಯಲ್ಲ. ಅದು 'ಗ್ರಂಥ'ವನ್ನು ಸೂಚಿಸುತ್ತದೆ. ಸಂಸ್ಕೃತ ಮತ್ತು ಇತರ ಭಾಷೆಗಳಲ್ಲಿನ ಪಂಚತಂತ್ರದ ಪರಂಪರೆಯ ಪರಿಚಯವನ್ನು ಲೇಖಕರು ಸಮರ್ಥವಾಗಿ ಮಾಡಿಕೊಟ್ಟಿದ್ದಾರೆ.

ಎರಡನೆಯ ವಿಭಾಗದಲ್ಲಿ ದುರ್ಗಸಿಂಹನ ಕೃತಿಯನ್ನು ಇತರ ಅಂತಹ ಕೃತಿಗಳ ಜೊತೆ ಹೋಲಿಸಿ ಸಮೀಕ್ಷಿಸಲಾಗಿದೆ. ಇದು ವಿಸ್ತಾರವಾಗಿಯೂ ಸಮಗ್ರವಾಗಿಯೂ ಇದೆ. ಮೂರನೆಯ ಭಾಗದಲ್ಲಿ ದುರ್ಗಸಿಂಹನ ಜೀವನ ಮತ್ತು ಅವನ ಕೃತಿಯ ವಿವೇಚನೆ ಇದೆ (ನ್ಯಾಯವಾಗಿ ಇದು ಮೊದಲ ಭಾಗವಾಗಿ ಬರಬೇಕು). ದುರ್ಗಸಿಂಹನ ಪಂಚತಂತ್ರದ ಅರಾ ಹಸ್ತಪ್ರತಿ ದೊರೆತು ಅವನ ಕಾಲ ಖಚಿತವಾಗಿರುವಾಗ ಆ ಮೊದಲು ನಡೆದ ಚರ್ಚೆಗಳನ್ನೆಲ್ಲ ಸಂಗ್ರಹಿಸಿ ಕೊಡುವುದು ಅನಗತ್ಯವೆನಿಸುತ್ತದೆ. ದುರ್ಗಸಿಂಹನ ಊರು, ಮನೆತನಗಳ ಬಗ್ಗೆಯೂ ವಿಸ್ತಾರವಾದ ಚರ್ಚೆ ಇದೆ. ಪಂಚತಂತ್ರದಲ್ಲಿ ಕಂಡುಬರುವ ಸಮಾಜ ಜೀವನ ಒಂದು ಅಧ್ಯಾಯದ ವಸ್ತುವಾಗಿದೆ. ಪಂಚತಂತ್ರದ ಉದ್ದೇಶವೇ ವಿಡಂಬನೆಯಾಗಿರುವುದರಿಂದ ಆ ಕೃತಿಯಲ್ಲಿ ಸಾಮಾಜಿಕ ಸಾಮಗ್ರಿ ವಿಪುಲವಾಗಿಯೇ ದೊರಕುತ್ತದೆ. ಪಂಚತಂತ್ರದಲ್ಲಿ ಬರುವ 'ಒನಕೆವಾಡಿ'ನ ಸಂಗತಿಯನ್ನು ಲೇಖಕರು ಗಮನಿಸಿದಂತಿಲ್ಲ.

ಕೆಲವು ಕಡೆ ಮೂಲ ಲೇಖನವನ್ನು ನೋಡದೆ, ಬೇರೊಬ್ಬರ ಬರಹದಿಂದ ಹಾಗೆಯೇ ಆಕರಗಳನ್ನು ಕೊಟ್ಟಿರುವಂತಿದೆ. ಅಂತಹ ಕಡೆ ಮೂಲಲೇಖಕನ ಬರಹವನ್ನು ಸೂಚಿಸಿ, ಇಂತಹ ಇನ್ನೊಂದು ಬರಹದಿಂದ ಉದ್ಧೃತ ಎಂದು ಸೂಚಿಸಬೇಕು. ಕೊನೆಯಲ್ಲಿ ಕೊಟ್ಟಿರುವ ಪದಸೂಚಿ ಸಮಗ್ರವಾಗಿಲ್ಲ.

ವರದರಾಜ ಹುಯಿಲಗೋಳರ ಕೃತಿ ಕನ್ನಡ ಪಂಚತಂತ್ರದ ಅಧ್ಯಯನಕ್ಕೆ ಒಂದು ಒಳ್ಳೆಯ ಕೊಡುಗೆಯಾಗಿದೆ. ಹಲವು ದೃಷ್ಟಿಗಳಿಂದ ಕನ್ನಡದ ಗಮನಾರ್ಹ ಕವಿಯಾಗಿರುವ ದುರ್ಗಸಿಂಹನ ಬಗ್ಗೆ ನಮಗಿರುವ ಅರಿವು ಈ ಕೃತಿಯಿಂದ ಆಳಗೊಂಡಿದೆ ಮತ್ತು ವಿಸ್ತಾರಗೊಂಡಿದೆ.

ಮೇಲಿನ ಮೂರು ನಿಬಂಧಗಳು ಕನ್ನಡದ ಮೂರು ಕೃತಿಗಳಿಗೆ ಸಂಬಂಧಿಸಿದ್ದರೆ, ಬಿ.ವ್ಹಿ. ಶಿರೂರ ಅವರ **ಶ್ರವಣಬೆಳ್ಗೊಳ (ರಾಜಕೀಯ, ಸಾಹಿತ್ಯಿಕ, ಸಾಂಸ್ಕೃತಿಕ ಮಹತ್ವ)** ಎನ್ನುವ ಪಿಎಚ್.ಡಿ. ನಿಬಂಧ ಕರ್ನಾಟಕದ ಒಂದು ಸುಪ್ರಸಿದ್ಧ ಸಾಂಸ್ಕೃತಿಕ ಕೇಂದ್ರಕ್ಕೆ ಸಂಬಂಧಿಸಿದೆ. ಹೀಗೆ ಒಂದು ಸಾಂಸ್ಕೃತಿಕ ಕೇಂದ್ರವನ್ನು ಮೂಲ ವಸ್ತುವಾಗಿಟ್ಟುಕೊಂಡು ಆಗಿರುವ ಕೆಲಸಗಳಲ್ಲಿ ಇದೇ ಮೊದಲನೆಯದು ಮತ್ತು ಇದೊಂದು ಯಶಸ್ವೀ ಪ್ರಯತ್ನವೂ ಆಗಿದೆ.

ಆರಂಭದಲ್ಲಿ ತಮ್ಮ ಅಧ್ಯಯನದ ಉದ್ದೇಶವನ್ನು ಸ್ಪಷ್ಟಪಡಿಸಿದ್ದಾರೆ. ತಮ್ಮ ಅಧ್ಯಯನಕ್ಕೆ ಆರಿಸಿಕೊಂಡ ಆಕರಗಳನ್ನು ಸೂಚಿಸಿದ್ದಾರೆ (ಶಾಸನ, ಗ್ರಂಥ, ಐತಿಹ್ಯ). ಶ್ರವಣಬೆಳ್ಗೊಳ ಹೆಸರಿನ ಬಗ್ಗೆ ವಿವೇಚನೆ ನಡೆಸಿದ್ದಾರೆ. ಅದರಲ್ಲೂ 'ಕಟ್ವಿಪ್ಪು' ಎಂಬ ಹೆಸರು ಹಿಂದಿನವರಂತೆಯೇ ಇವರ ಗಮನವನ್ನೂ ಸೆಳೆದಿದೆ. 'ಕಟವಪ್ರ'ವೇ 'ಕಟ್ವಿಪ್ಪು' ಆಯಿತೆಂದು ಶಿರೂರ ಅವರ ಮತ. ಆದರೆ 'ಕಟ್ವಿಪ್ಪು' ಎಂಬುದರ ಸಂಸ್ಕೃತೀಕರಣವೇ 'ಕಟವಪ್ರ' ಇರಬಹುದೆಂದು ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟಿನಲ್ಲಿ ಊಹಿಸಿರುವುದೇ ಸಾಧುವಾಗಿ ತೋರುತ್ತದೆ.

ಎರಡನೆಯ ಅಧ್ಯಾಯದಲ್ಲಿ ಶ್ರವಣಬೆಳ್ಗೊಳದ ರಾಜಕೀಯ ಮಹತ್ವವನ್ನು ಚರ್ಚಿಸಿದೆ. ಮೌರ್ಯರಿಂದ ಹಿಡಿದು ಗಂಗ, ರಾಷ್ಟ್ರಕೂಟ ಇತ್ಯಾದಿ ರಾಜವಂಶಗಳಿಗೂ ಈ ಜಾಗಕ್ಕೂ ಇದ್ದ ಸಂಬಂಧವನ್ನು ತೋರಿಸಿದೆ. ಮೂರನೆಯ ಅಧ್ಯಾಯದಲ್ಲಿ ಆ ಸ್ಥಳದ ಸಾಹಿತ್ಯಕ ಮಹತ್ವವನ್ನು ಎತ್ತಿ ತೋರಿಸಿದೆ. ಅಲ್ಲಿ ಕೃತಿ ರಚನೆ ಮಾಡಿದ ಕವಿಗಳನ್ನು ಅಥವಾ ಆ ಕ್ಷೇತ್ರಕ್ಕೆ ಸಂಬಂಧಿಸಿದ ಕವಿಗಳನ್ನು ಪರಿಚಯಮಾಡಿಕೊಡಲಾಗಿದೆ. ರನ್ನ, ಚಾವುಂಡರಾಯರೇನೋ ಶ್ರವಣಬೆಳ್ಗೊಳಕ್ಕೆ ಸಂಬಂಧಿಸಿದವರು. ಆದರೆ ಒಂದನೆಯ ನಾಗವರ್ಮನನ್ನೂ ಆ ಪಟ್ಟಿಗೆ ಎಳೆ ತಂದಿರುವುದು ಉಚಿತವಾಗಿಲ್ಲ (ಅಂತೆಯೇ ಇನ್ನೂ ಕೆಲವು ಕವಿಗಳನ್ನು). ಶಾಸನಸಾಹಿತ್ಯದ ಬಗ್ಗೆ ಬಂದಿರುವ ಚರ್ಚೆ ವಿಸ್ತಾರವಾಗಿದೆ. ಅಲ್ಲಿನ ಶಾಸನೋಕ್ತ ಗ್ರಂಥಕಾರರ ಸುದೀರ್ಘ ಪರಿಚಯವು ವಿಷಯ ಸಮೃದ್ಧಿಯಿಂದ ಕೂಡಿದೆ. ನಾಲ್ಕನೆಯ ಅಧ್ಯಾಯ ಸಾಂಸ್ಕೃತಿಕ ಮಹತ್ವದ ಚರ್ಚೆಗೆ ಮೀಸಲಾಗಿದೆ. ಶ್ರವಣಬೆಳ್ಗೊಳವಲ್ಲಿನ ಶಾಸನಗಳಿಂದ ತಿಳಿದು ಬರುವ ಸಾಂಸ್ಕೃತಿಕ ಜೀವನಕ್ಕೆ ಸಂಬಂಧಿಸಿದ ಸಂಗತಿಗಳನ್ನು ಇಲ್ಲಿ ಜೋಡಿಸಿ ಕೊಟ್ಟಿದೆ. ಸಮಾಜದಲ್ಲಿ ಸ್ತ್ರೀಯರ ಸ್ಥಾನಮಾನ, ವ್ಯಾಪಾರ, ಸಲ್ಲೇಖನ ಸಂಪ್ರದಾಯ, ವೀರಜೀವನ ಇತ್ಯಾದಿ ಅಂಶಗಳು ಅಲ್ಲಿ ಬಂದಿವೆ. ಶ್ರವಣಬೆಳ್ಗೊಳದ ಬೇರೆ ಬೇರೆ ಕಟ್ಟಡಗಳನ್ನೂ ಇಲ್ಲಿ ಪರಿಚಯ ಮಾಡಿಕೊಟ್ಟಿದ್ದಾರೆ. ಪು. 360ರಲ್ಲಿ ನನ್ನ ಅಭಿಪ್ರಾಯವನ್ನು ವಿರೋಧಿಸಿದ್ದರೂ, ನನ್ನ ಅಭಿಪ್ರಾಯವನ್ನು ಅವರು ಸರಿಯಾಗಿ ಗ್ರಹಿಸಿಲ್ಲವೆಂದು ಮತ್ತು ನನ್ನ ಅಭಿಪ್ರಾಯಕ್ಕೆ ಆಧಾರಗಳಿವೆಯೆಂದೂ ಸಂಶೋಧನ ತರಂಗ, ಪು. 75ರಲ್ಲಿ ಬಂದಿರುವ ಮಾತುಗಳನ್ನು ನೋಡಿದರೆ ಸ್ಪಷ್ಟವಾಗುತ್ತದೆ.

ಅಡಿಟಿಪ್ಪಣಿ ಕೊಡುವಾಗ ಕೃತಿಗಳ ಸಂಕ್ಷಿಪ್ತ ನಾಮಗಳನ್ನು ಕೊಡುತ್ತಾರೆ ; ಆ ಸಂಕ್ಷೇಪಗಳಿಗೆ ವಿಸ್ತರಣೆ ಕೊಟ್ಟಿಲ್ಲ. ಎಷ್ಟೋ ಕಡೆ ಪುಟ ಸಂಖ್ಯೆಯನ್ನೇ ಕೊಡುವುದಿಲ್ಲ. ಇದು ಶ್ರದ್ಧೆಯ ಅಭಾವವನ್ನು ಹೇಳುತ್ತದೆ. ಇವು ಸಣ್ಣ ಕೊರತೆಗಳು ಮತ್ತು ಅವನ್ನು ಸುಲಭವಾಗಿ ನಿವಾರಿಸಬಹುದಿತ್ತು. ಆದರೆ ಶ್ರವಣಬೆಳ್ಗೊಳದ ಮಹತ್ವವನ್ನು ಬೇರೆ ಬೇರೆ ದೃಷ್ಟಿಕೋನಗಳಿಂದ ನೋಡಿ ಹಿಡಿದಿಟ್ಟಿರುವ ಈ ಕೃತಿ ಅಂತಹ ಅಧ್ಯಯನಗಳಿಗೆ ಮಾರ್ಗದರ್ಶನವನ್ನು ಮಾಡಲು ಸಮರ್ಥವಾಗಿದೆಯೆಂಬಲ್ಲಿ ಸಂದೇಹವಿಲ್ಲ.

**ಮಧುರ ಚೆನ್ನ (ಜೀವನ ಹಾಗೂ ಕೃತಿಗಳ ಸಮೀಕ್ಷೆ)** ಜಿ.ಎಸ್. ಕಾಪಸೆ ಅವರ ನಿಬಂಧ. ನವೋದಯ ಯುಗದ ಮಹತ್ವದ ಕವಿಯೊಬ್ಬನನ್ನು ಆರಿಸಿಕೊಂಡ ಕಾಪಸೆ ಆ ಕವಿಯ ಬಗ್ಗೆ ಸಾಧ್ಯವಾದಷ್ಟು ಎಲ್ಲ ಮಾಹಿತಿಯನ್ನು ಸಂಗ್ರಹಿಸಿ, ವಿಶ್ಲೇಷಿಸಿ ಒಟ್ಟು ಆ ಕವಿಯ ಜೀವನ ಕೃತಿಗಳ ಬಗ್ಗೆ ಒಂದು ಹೊಸ ಬೆಳಕನ್ನು ಚೆಲ್ಲಿದ್ದಾರೆ; ಆ ಕವಿಯ ವಿಶಿಷ್ಟತೆಯನ್ನು ಗುರುತಿಸಲು ಯತ್ನಿಸಿದ್ದಾರೆ.

ಭಾಗ ಒಂದರಲ್ಲಿ ದೊರಕುವ ಎಲ್ಲ ಆಕರಗಳನ್ನು ಬಳಸಿಕೊಂಡು ಮಧುರ ಚೆನ್ನರ ಜೀವನವನ್ನು ಪುನಾರಚಿಸಲು ಯತ್ನಿಸಿದ್ದಾರೆ. ಅವರ ಪರಿಸರ, ಸಂಸ್ಕಾರ, ಜೀವನಾನುಭವಗಳು, ಅವರನ್ನು ಅಂತರ್ಮುಖಿಯಾಗಿ ಮಾಡಿದ ಬಗೆಯನ್ನು ವಿವರಿಸಿ ಅವರು ಕನ್ನಡದ 'ಅನುಭಾವ' ಕವಿಯಾಗಿ ರೂಪಿತವಾದದ್ದನ್ನು ಸುಂದರವಾಗಿ ವಿವರಿಸಿದ್ದಾರೆ. ಅವರನ್ನು ಕಂಡವರು, ಅವರ ಜೊತೆ ಪತ್ರ ವ್ಯವಹಾರ ಮಾಡಿದವರು ಇನ್ನೂ ಸಾಕಷ್ಟು ಇರುವಾಗ, ಸ್ವತಃ ನಿಬಂಧಕಾರರೇ ಅವರನ್ನು ವೈಯಕ್ತಿಕವಾಗಿ ಬಲ್ಲವರಿರುವಾಗ ಸಾಮಗ್ರಿಗೆ ಕೊರತೆ ಇರಲು ಸಾಧ್ಯವಿಲ್ಲ. ಕವಿಯ ಜೀವನ ಮತ್ತು ಕಾವ್ಯಗಳು ಒಂದನ್ನೊಂದು ಹೆಣೆದುಕೊಂಡಿರುವಾಗ ಒಂದನ್ನು ಅರ್ಥೈಸಲು ಇನ್ನೊಂದರ ಅವಲಂಬನ ಅಗತ್ಯವಾಗುತ್ತದೆ (ಇವುಗಳ ಸಂಬಂಧದ ಬಗ್ಗೆ ಕಾಪಸೆ ಅವರು ಆರಂಭದಲ್ಲಿ ಆರು ಪುಟಗಳನ್ನು ಬರೆದಿರುವುದು ಪೂರ್ತಿ ಅಪ್ರಸ್ತುತ.) ಸಾಹಿತ್ಯ, ಅಧ್ಯಾತ್ಮ, ಶಾಸನ ಶಾಸ್ತ್ರ, ಭಾಷಾಶಾಸ್ತ್ರ, ರಾಷ್ಟ್ರೀಯತೆಗಳಲ್ಲಿ ಕವಿಗೆ ಆಸಕ್ತಿ ಬೆಳೆದು ಬಂದದ್ದನ್ನು ಸಾಕಷ್ಟು ಸಾಮಗ್ರಿ ಸಮೇತ ವಿವೇಚಿಸಿದ್ದಾರೆ. ಜೊತೆಗೆ, ಅವರಿಗೆ ಸಾಹಿತ್ಯ ಮತ್ತು ಜೀವನ ಕ್ಷೇತ್ರಗಳೆರಡರಲ್ಲೂ ಗೆಳೆಯರಾಗಿ ನಿಂತ ಮಿತ್ರವರ್ಗವನ್ನೂ ವಿಸ್ತಾರವಾಗಿ ಪರಿಚಯ ಮಾಡಿಕೊಟ್ಟಿರುವುದು ಮೆಚ್ಚಬೇಕಾದ ಸಂಗತಿ.

ಭಾಗ ಎರಡರಲ್ಲಿ ಮಧುರ ಚೆನ್ನರ ಕೃತಿಗಳ ವಿವೇಚನೆ ದೊರಕುತ್ತದೆ. ಅವರ ಕಾವ್ಯ ಸೃಷ್ಟಿಯನ್ನು ಮೂರು ಘಟ್ಟಗಳಾಗಿ ವಿಂಗಡಿಸಿಕೊಂಡು ಒಂದೊಂದೇ ಕೃತಿಯನ್ನು ಈ ಅನುಕ್ರಮದಲ್ಲಿ ವಿವೇಚಿಸಿದ್ದಾರೆ. ಮಧುರಚೆನ್ನರು ಬೇಂದ್ರೆಯವರಂತಹ ದೊಡ್ಡ ಕವಿಗಳ ಸ್ನೇಹಿತರಾಗಿದ್ದೂ ಅವರ ಪ್ರಭಾವ ವಲಯಕ್ಕೆ ಒಳಗಾಗಿದ್ದೂ ತಮ್ಮ ವ್ಯಕ್ತಿತ್ವವನ್ನು ಕಾಪಾಡಿಕೊಂಡವರು. ಅವರ ಕವಿತೆಗಳಲ್ಲಿ ಒಂದು ಅಕೃತಕ ಆದ ದೇಸಿ, ನಯ ಮತ್ತು ನರುಗಂಪುಗಳು ಉಂಟು. ಎರಡನೆಯ ಘಟ್ಟಕ್ಕೆ ಸೇರುತ್ತದೆ ಎಂದು ಕಾಪಸೆ ಭಾವಿಸುವ 'ಧ್ರುವ' ಪದ್ಯದ ಸಾಲುಗಳೇ ಇದಕ್ಕೆ ಉದಾಹರಣೆ. ಅವರ ಅನುಭಾವ ಗೀತಗಳಲ್ಲಿ "ನನ್ನ ನಲ್ಲ"ಕ್ಕೆ ಮಹತ್ವದ ಸ್ಥಾನವುಂಟು. ಮಧುರ ಚೆನ್ನರು 'ತಮ್ಮನ್ನು ತಾವು ಹೊರಳಿ ನೋಡುವ' ಸ್ಥಿತಿಯಲ್ಲಿ ಬರೆದ ಆ ಆತ್ಮಕಥನ ಕಾವ್ಯಕ್ಕೆ ಆಧುನಿಕ ಕನ್ನಡ ಸಾಹಿತ್ಯದಲ್ಲಿ ಮಹತ್ವದ

ಸ್ಥಾನವುಂಟು. ಅವರ ಪದ್ಯ ಕೃತಿಗಳನ್ನಾಗಲಿ ಗದ್ಯ ಕೃತಿಗಳನ್ನಾಗಲಿ ವಿವೇಚಿಸುವಾಗ ಕಾಪಸೆ ತಮ್ಮ ಪ್ರಿಯಕವಿಯ ಬಗ್ಗೆ ಅವಾಸ್ತವ ಪ್ರಶಂಸೆಗೆ ತೊಡಗದೆ ಉದ್ದಕ್ಕೂ ವಸ್ತುನಿಷ್ಠ ದೃಷ್ಟಿಯಿಂದ ಅಭ್ಯಸಿಸಿರುವುದು ಎದ್ದು ಕಾಣುವ ಸಂಗತಿ. ಸಂಶೋಧಕರಾಗಿ, ಶಾಸನ ಶಾಸ್ತ್ರವನ್ನು ಸಾಕಷ್ಟು ಚೆನ್ನಾಗಿ ಬಲ್ಲವರೆಂಬ ಬಹಳ ಜನಕ್ಕೆ ಗೊತ್ತಿರದ ಸಂಗತಿಯನ್ನು ಕಾಪಸೆ ಎತ್ತಿ ತೋರಿದ್ದಾರೆ. ಅವರ 'ಕನ್ನಡ ಪ್ರಾಚೀನ ಲಿಪಿ ಬೋಧಿನಿ'ಯನ್ನು ಅನುಬಂಧವಾಗಿ ಕೊಟ್ಟು ಉಪಕಾರಮಾಡಿದ್ದಾರೆ.

ಕಾಪಸೆಯವರಿಗೆ ಒಳ್ಳೆಯ ವಿಮರ್ಶೆಯ ಭಾಷೆಯಿದೆ. ರಸಜ್ಞತೆಯ ಜೊತೆಗೆ ಸಂಶೋಧನ ದೃಷ್ಟಿಯೂ ಸೇರಿರುವ ಅವರು ನವೋದಯ ಸಾಹಿತ್ಯದ ಅಧ್ಯಯನ ಮಾಡುವ ವಿದ್ಯಾರ್ಥಿಗಳು ಅತ್ಯಗತ್ಯವಾಗಿ ಓದಬೇಕಾದ ಮೇಲ್ಮಟ್ಟದ ನಿಬಂಧವನ್ನು ರಚಿಸಿದ್ದಾರೆ. ಬಹು ಸಂದರವಾಗಿ ಅಚ್ಚಾಗಿರುವ ಈ ಪುಸ್ತಕದಲ್ಲಿ ಮುದ್ರಣ ದೋಷಗಳು ಹೆಚ್ಚು ಸಂಖ್ಯೆಯಲ್ಲಿರುವುದನ್ನು ತಪ್ಪಿಸಬಹುದಾಗಿತ್ತು.

**ಕರ್ನಾಟಕದ ಸಾಂಸ್ಕೃತಿಕ ಪರಂಪರೆ** ರಂ. ಶ್ರೀ ಮುಗಳಿ ಅವರ The Heritage of Karnataka (1946) ಪುಸ್ತಕದ ಅನುವಾದ (ಅನುವಾದಕರು : ಕೆ.ಜಿ. ಶಾಸ್ತ್ರಿ ಮತ್ತು ಎಸ್.ಪಿ. ಪಾಟೀಲ). ಮುಗಳಿಯವರ ಮೂಲಗ್ರಂಥ ಪ್ರಕಟವಾಗಿ ಮೂರು ದಶಕಗಳ ಮೇಲಾದರೂ ಇಂದಿಗೂ ಓದಬಹುದಾದ ಮತ್ತು ಪರಾಮರ್ಶೆಗೆ ಒಳಗಾಗುತ್ತಿರುವ ಗ್ರಂಥ. ಈಚಿನ ಶೋಧಗಳನ್ನೂ ಸೇರಿಸಿ ಮೂಲ ಲೇಖಕರು ಅಲ್ಲಲ್ಲಿ ಪರಿಷ್ಕರಿಸಿರುವುದು ಸಂತೋಷದ ಸಂಗತಿ. ಆದಿಯಿಂದ ಹೊಸ ಕಾಲದವರೆಗೆ ಕರ್ನಾಟಕದ ಸಂಸ್ಕೃತಿ ಬೆಳೆದು ಬಂದ ಘಟ್ಟಗಳನ್ನೂ ಅದರ ವಿವಿಧ ಮುಖಗಳನ್ನೂ ಅದು ಸರಳವಾಗಿ ಕಟ್ಟಿಕೊಡುತ್ತದೆ. ರಾಜಕೀಯ ಇತಿಹಾಸ, ಸೈನಿಕ ಜೀವನ, ಧಾರ್ಮಿಕ ಇತಿಹಾಸ, ಕಲೆ ಸಾಹಿತ್ಯ ಇವು ಅಲ್ಲಿ ಸಮಾವೇಶವಾಗಿರುವ ಕೆಲವು ವಿಷಯಗಳು. ತಮಗಿಂತ ಹಿಂದಿನವರ ಅಭಿಪ್ರಾಯಗಳನ್ನು ತೆಗೆದುಕೊಂಡು ಅವುಗಳಿಗೆ ತಮ್ಮದೇ ಹೊಸ ಸಂಗತಿಗಳನ್ನು ವ್ಯಾಖ್ಯಾನಗಳನ್ನು ಕೊಡುವುದರಿಂದ ಈ ಗ್ರಂಥಕ್ಕೆ ಪಠ್ಯಪುಸ್ತಕಕ್ಕಿಂತ ಹೆಚ್ಚಿನ ಮೌಲ್ಯವಿದೆ. ಇದನ್ನು ಅನುವಾದಕರು ಅಚ್ಚುಕಟ್ಟಾಗಿ ಕನ್ನಡಕ್ಕೆ ತಂದಿದ್ದಾರೆ. Diacritical marks ವಿಷಯದಲ್ಲಿ ಅಷ್ಟು ಎಚ್ಚರ ವಹಿಸಿಲ್ಲವೆಂಬುದಕ್ಕೆ ಪು.118ರ ಅಡಿ ಟಿಪ್ಪಣಿ ಒಂದು ಸಾಕ್ಷಿ ಸಾಕು. ಅದೇ ಟಿಪ್ಪಣಿಯಲ್ಲಿ ಎರಡು ಬಾರಿ ಬಂದಿರುವ ಕೃತಿಯ ಹೆಸರು ಒಂದೇ ಬಗೆಯಾಗಿಲ್ಲ. ಪು. 72ರಲ್ಲಿ 'ಬಾಚ್ಗಟ್ಟು' ಇದೆ, ಅದು ನ್ಯಾಯವಾಗಿ 'ಬಾಳ್ಗಚ್ಚು'. ನಾಡುಗಳ ಮುಂದಿನ ಸಂಖ್ಯೆ ಹಳ್ಳಿಗಳನ್ನು ಸೂಚಿಸುತ್ತದೆ ಎಂಬುದು ಈಗ ಬಹುಮಟ್ಟಿಗೆ ತೀರ್ಮಾನವಾದ ಸಂಗತಿ ಎಂಬುದನ್ನು ಮೂಲ ಲೇಖಕರು ಗಮನಿಸಿಲ್ಲ. ಪು. 99ರಲ್ಲಿ 'ಜನಪದ' ಎಂಬುದು ನ್ಯಾಯವಾಗಿ 'ಜಾನಪದ' ಎಂದಿರಬೇಕು. ಪು. 11ರಲ್ಲಿ 'ಗಣಪಥ' ಬದಲು 'ಗಣಪಾಠ' ಇರಬೇಕು. ಇಷ್ಟು ಒಳ್ಳೆಯ ಪುಸ್ತಕದಲ್ಲಿ ಇಂತಹ ತಪ್ಪುಗಳಿರಬಾರದು. ಒಳ್ಳೆಯ ಕೆಲಸಮಾಡಿರುವ ಅನುವಾದಕರು ಸ್ವಲ್ಪ ಎಚ್ಚರ ವಹಿಸಿದ್ದರೆ ಇಂಥ ದೊಷಗಳಿಂದಲೂ ಪುಸ್ತಕವನ್ನು ಮುಕ್ತವಾಗಿಸಬಹುದಿತ್ತು.

ರಾ. ಶ್ರೀ. ಸುಂಕದ ಅವರ **ಕನ್ನಡ ಸಾಹಿತ್ಯ ಸಂಸ್ಕೃತಿ ದರ್ಶನಕ್ಕೆ** ಕೇವಲ ಪಠ್ಯಪುಸ್ತಕದ ಮೌಲ್ಯವಿದೆ. ಅನೇಕ ಗ್ರಂಥಗಳನ್ನು ಓದಿ ಅವುಗಳ ಸಾರಾಂಶವನ್ನು ಕೊಡುವುದು

ಇದರ ಉದ್ದೇಶ. ಐತಿಹಾಸಿಕ ಪರಂಪರೆ, ಶಾಸನ ಪರಂಪರೆ, ಶಿಲ್ಪ ಕಲಾಪರಂಪರೆ, ಧಾರ್ಮಿಕ ವಿಕಾಸ, ಕನ್ನಡ ಸಾಹಿತ್ಯ, ಕನ್ನಡ ಭಾಷೆಯ ಚರಿತ್ರೆ ಇವು ಇಲ್ಲಿಯ ಚರ್ಚಿತ ವಿಷಯಗಳು. ಲೇಖಕರು ತಮ್ಮ ಮಿತಿಯಲ್ಲಿ ಕರ್ನಾಟಕದ ಸಾಂಸ್ಕೃತಿಕ ಪರಂಪರೆಯನ್ನು ಕಟ್ಟಿಕೊಡಲು ಯತ್ನಿಸಿದ್ದಾರೆ. ಅವರ ಪ್ರಯತ್ನ ಅಷ್ಟು ಯಶಸ್ವಿಯಾಗಿಲ್ಲ. ಇವರ ಬರವಣಿಗೆಯಲ್ಲಿ ಪಕ್ವತೆ ಸಾಲದು, ಜೊತೆಗೆ ಖಚಿತವಾಗಿ ಹೇಳಬೇಕೆಂಬ ಪ್ರವೃತ್ತಿಯೂ ಇದ್ದಂತಿಲ್ಲ. ಅನೇಕ ಹೇಳಿಕೆಗಳಲ್ಲಿ ತಪ್ಪುಗಳಿವೆ, ಉತ್ಪ್ರೇಕ್ಷೆಗಳಿವೆ. ಉದಾಹರಣೆಗೆ, 'ನಿಷಧಿಕಲ್ಲು : ಇದು ಒಡೆಯನಿಗಾಗಿ ಆತನ ಸೇವಕರು ಪ್ರಾಣಾರ್ಪಣೆ ಮಾಡಿದ ಇತಿಹಾಸವನ್ನು ಹೇಳುತ್ತದೆ'; (ಪು. 56). 'ಧರ್ಮವೆನ್ನುವುದು ದೈವದ ಮೂರ್ತಸ್ವರೂಪ' (ಪು. 104) ಎಂದರೆ ಏನು ? ಲೇಖಕರ ಉತ್ಸಾಹ ಮೆಚ್ಚಬೇಕದ್ದಾದರೂ ಗಂಭೀರ ಗ್ರಂಥರಚನೆಗೆ ಬೇಕಾದ ತಾಳ್ಮೆ, ಶ್ರಮ, ವಿವೇಚನಗಳು ಅವರಲ್ಲಿ ಅಷ್ಟಾಗಿ ಕಾಣಿಸುವುದಿಲ್ಲ.

**ಕಿತ್ತೂರು ನಾಡಿನ ಇತಿಹಾಸ ಮತ್ತು ಸಂಸ್ಕೃತಿ** ಕರ್ನಾಟಕ ವಿಶ್ವವಿದ್ಯಾಲಯವು ಕಿತ್ತೂರಿನಲ್ಲಿ ಏರ್ಪಡಿಸಿದ್ದ ವಿಶೇಷೋಪನ್ಯಾಸಗಳ ಸಂಕಲನ. ಪ್ರಾಚೀನ ಕಿತ್ತೂರ ನಾಡಿನ ಬಗ್ಗೆ ಎಸ್.ಎಲ್. ಶಾಂತಕುಮಾರಿ, ಕರ್ನಾಟಕದಲ್ಲಿ ಬ್ರಿಟಿಷರ ಆಳಿಕೆಯ ಆರಂಭದ ಬಗ್ಗೆ ಎ.ಎಂ.ರಾಜಶೇಖರಯ್ಯ, ಸ್ವಾತಂತ್ರ್ಯ ಸಂಗ್ರಾಮದ ಆರಂಭದ ಬಗ್ಗೆ ಸೂರ್ಯನಾಥ ಕಾಮತ್, ಕಿತ್ತೂರು ನಾಡಿನ ವೀರರ ಬಗ್ಗೆ ಸಿ.ವ್ಹಿ. ಮಠದ ಅವರು, ಕಿತ್ತೂರು ಸಂಸ್ಥಾನದ ಇತಿಹಾಸದ ಬಗ್ಗೆ ಎಸ್. ಶೆಟ್ಟರ ಅವರು, ಕಿತ್ತೂರನ್ನು ಕುರಿತ ಲಾವಣಿಗಳು ಹಾಗೂ ಇತರ ಸಾಹಿತ್ಯ ಕುರಿತು ಸೋಮಶೇಖರ ಇಮ್ರಾಪುರ ಅವರು, ವಿಶ್ವದ ಆಡಳಿತಗಾರ್ತಿಯರಲ್ಲಿ ಕಿತ್ತೂರು ರಾಣಿ ಚನ್ನಮ್ಮನ ಸ್ಥಾನ ಕುರಿತು ಸರೋಜಿನಿ ಶಿಂತ್ರಿಯವರು ಬರೆದ ಲೇಖನಗಳು ಇಲ್ಲಿವೆ. ಇಲ್ಲಿನ ಬಹುಪಾಲು ಲೇಖನಗಳ ವಸ್ತು ಚನ್ನಮ್ಮರಾಣಿ ಮತ್ತು ಕಿತ್ತೂರಿನ ಬಂಡಾಯ. ಆದರೂ ಮೊದಲ ಪ್ರಬಂಧ ಕಿತ್ತೂರಿನ ಐತಿಹಾಸಿಕ ಹಿನ್ನೆಲೆಯನ್ನು ಕೊಡಲು ಯತ್ನಿಸಿದೆ. ('ಕಿತ್ತೂರು' ನಿಷ್ಪತ್ತಿ ಬಗ್ಗೆ ಪು. 3ರಲ್ಲಿ ಸಂದೇಹ ಸೂಚಿಸಿದೆ. ಆ ಪದವನ್ನು ಕಿಱು + ಊರು → ಕಿತ್ತೂರು ಎಂದು ವಿವರಿಸಬಹುದೆಂದು ತೋರುತ್ತದೆ). ಕಿತ್ತೂರಿನ ಮತ್ತು ಕಿತ್ತೂರು ಪರಿಸರದ ಶಾಸನಗಳ, ದೇವಾಲಯಗಳ ಪರಿಚಯವನ್ನೂ ಮಾಡಲಾಗಿದೆ. ಮತ್ತು ಈ ಪ್ರಬಂಧ ಸಾಕಷ್ಟು ವಿಷಯ ಪುಷ್ಟವಾಗಿದೆ. ಕರ್ನಾಟಕದಲ್ಲಿ ಬ್ರಿಟಿಷರ ಆಳಿಕೆಯ ಆರಂಭವನ್ನು ರಾಜಶೇಖರಯ್ಯನವರ ಪ್ರಬಂಧ ಚೆನ್ನಾಗಿ ಚಿತ್ರಿಸುತ್ತದೆ. ಕರ್ನಾಟಕದಲ್ಲಿ ಸ್ವಾತಂತ್ರ್ಯ ಸಂಗ್ರಾಮದ ಆರಂಭವನ್ನು ಸೂರ್ಯನಾಥ ಕಾಮತ್ ಅವರ ಪ್ರಬಂಧ ಬಹು ಸಮರ್ಥವಾಗಿ ಕೊಟ್ಟಿದೆ. ಕಾಮತ್ ಅವರ ವಿಷಯ ಸಂಗ್ರಹ, ಜೋಡಣೆ ವ್ಯಾಖ್ಯಾನಗಳು ಮೇಲ್ಮಟ್ಟದವು. ಕಿತ್ತೂರು ನಾಡಿನ ವೀರರ ಸಂಕ್ಷಿಪ್ತ ಪರಿಚಯವನ್ನು ಸಿ.ವ್ಹಿ. ಮಠದ ಅವರು ಕೊಟ್ಟಿದ್ದಾರೆ. ಕಿತ್ತೂರು ಸಂಸ್ಥಾನದ ಇತಿಹಾಸವನ್ನು ಕೊಟ್ಟಿರುವ ಎಸ್. ಶೆಟ್ಟರ್ ಅವರ ಪ್ರಬಂಧವು ವಸ್ತುನಿಷ್ಠ ದೃಷ್ಟಿಯಿಂದ ಕೂಡಿದ್ದು, ಕಿತ್ತೂರಿನ ಇತಿಹಾಸವನ್ನು ವೈಭವೀಕರಿಸಿ ನೋಡುವವರಿಗೆ ಕೆಲವೊಮ್ಮೆ ಪಥ್ಯವಾಗದಿರಬಹುದು. ಪು. 126ರ ಈ ವಾಕ್ಯವನ್ನು ನೋಡಿ - 'ಯಾವುದನ್ನು ರಾಜ್ಯ ಕೌಶಲ್ಯದಿಂದ ಉಳಿಸಿಕೊಳ್ಳಬಹುದಾಗಿತ್ತೋ ಅದನ್ನು ಕಿತ್ತೂರಿನ ಕಾರಭಾರಿಗಳು ತಮ್ಮ ಭಾವುಕಕ್ರಿಯೆಯಿಂದ ಕಳೆದುಕೊಂಡರು.' ಈ ಪ್ರಬಂಧದಲ್ಲಿ ಅನೇಕ ಮೂಲಭೂತ

ಸಮಸ್ಯೆಗಳನ್ನು ಎತ್ತಿದ್ದಾರೆ ಮತ್ತು ಈ ಪ್ರಬಂಧರಚನೆಗಾಗಿ ಒಂದು ಗ್ರಂಥರಚನೆಗೆ ತೆಗೆದುಕೊಳ್ಳಬಹುದಾದಷ್ಟು ಶ್ರಮವನ್ನು ತೆಗೆದುಕೊಂಡಿದ್ದಾರೆ. ಕಿತ್ತೂರು ಬಂಡಾಯದಂತಹ ರೋಮಾಂಚಕಾರೀ ಘಟನೆಯನ್ನು ಎಷ್ಟು ಬಗೆಯಾಗಿ ಎಷ್ಟು ಕಡೆಗಳಿಂದ ನೋಡಲು ಸಾಧ್ಯವೆಂಬುದನ್ನು ತೋರಿಸಿಕೊಟ್ಟಿದ್ದಾರೆ. ಸೋಮಶೇಖರ ಇಮ್ರಾಪುರ ಅವರ ಪ್ರಬಂಧವು ಸ್ವಾರಸ್ಯವಾಗಿದ್ದು ಜನತೆಯ ನಾಲಗೆಯ ಮೇಲೆ ಹಾಡು ಕತೆಗಳಲ್ಲಿ ಉಳಿದು ಬಂದ ಚನ್ನಮ್ಮ ಮತ್ತು ಆಕೆಯ ಬೆಂಬಲಿಗರ ಚಿತ್ರವಿದೆ. ಸರೋಜಿನಿ ಶಿಂತ್ರಿಯವರ ಪ್ರಬಂಧ ಬಹು ಭಾವುಕವಾಗಿದ್ದು, ಕಾಮತ್ ಮತ್ತು ಶೆಟ್ಟರ ಪ್ರಬಂಧಗಳಿಗೆ ಭಿನ್ನರೀತಿಯದಾಗುತ್ತದೆ. ಒಟ್ಟಿನಲ್ಲಿ ಇಡೀ ಸಂಕಲನ ಓದುಗರ ಮೆಚ್ಚುಗೆ ಗಳಿಸುತ್ತದೆ. ಮತ್ತು ಕರ್ನಾಟಕದ ಇತಿಹಾಸದ ಒಂದು ಪ್ರಮುಖ ಘಟ್ಟವನ್ನು ವಾಸ್ತವರೀತಿಯಲ್ಲಿ ಪರಿಚಯ ಮಾಡಿಕೊಡುತ್ತದೆ.

**ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು** (ಸಂಪಾದಕರು: ಲಕ್ಷ್ಮಣ ತೆಲಗಾವಿ ಮತ್ತು ಎಂ.ವಿ. ಶ್ರೀನಿವಾಸ್) ಚಿತ್ರದುರ್ಗದ ಸಂಶೋಧಕ ಹುಲ್ಲೂರು ಶ್ರೀನಿವಾಸ ಜೋಯಿಸರ ನಲವತ್ತೇಳು ಲೇಖನಗಳ ಸಂಕಲನ. ದಿವಂಗತರು ಸಂಶೋಧನೆಯನ್ನು ಒಂದು ವ್ಯಾಮೋಹವಾಗಿ ಬೆಳೆಸಿಕೊಂಡಿದ್ದ ಒಬ್ಬ ವಕೀಲರು. ಅವರಿಗೆ ಕರ್ನಾಟಕದ ಇತಿಹಾಸದಲ್ಲಿ ಅದರಲ್ಲೂ ಚಿತ್ರದುರ್ಗದ ಇತಿಹಾಸದಲ್ಲಿ ಅಪಾರ ಅಭಿಮಾನ ಮತ್ತು ಕುತೂಹಲ. ಈ ಸಂಕಲನ ಬಂದು ಬೇರೆ ಬೇರೆ ಕಡೆ ಚದುರಿಹೋಗಿದ್ದ ಅವರ ಲೇಖನಗಳು ಒಂದು ಕಡೆ ಸಿಗುವಂತಾದುವು. ಇದಕ್ಕೆ ಸಂಪಾದಕರನ್ನು ಹೃತ್ಪೂರ್ವಕವಾಗಿ ಅಭಿನಂದಿಸಬೇಕು.

ಈ ಸಂಕಲನದಲ್ಲಿ ಹದಿನೈದು ಸಂಪ್ರಬಂಧಗಳು ಚಿತ್ರದುರ್ಗದ ಇತಿಹಾಸಕ್ಕೆ ಸಂಬಂಧಿಸಿವೆ; ಉಳಿದುವು ಕರ್ನಾಟಕ ಇತಿಹಾಸಕ್ಕೆ ಸಂಬಂಧಿಸಿವೆ. ಈ ಲೇಖನಗಳ ವೈವಿಧ್ಯ ಎಂಥವರನ್ನೂ ಬೆರಗುಗೊಳಿಸುತ್ತದೆ. ಚಿತ್ರದುರ್ಗದ ನಾಯಕವಂಶದ ಸ್ಥಾಪನೆ, ದೊರೆಗಳು, ಅವರ ಪತನ, ಚಿತ್ರದುರ್ಗ ದೊರೆಗಳ ಜಾನಪದ ಗೀತೆಗಳು ಸರಿಯೇ, ಜೊತೆಗೆ ಚಿತ್ರದುರ್ಗ ಜಿಲ್ಲೆಯಲ್ಲಿ ಬೌದ್ಧ ಧರ್ಮದ ಕುರುಹುಗಳು ಎನ್ನುವ ಸಂಪ್ರಬಂಧವೂ ಇಲ್ಲುಂಟು. ಚಿತ್ರದುರ್ಗದ ಏಕನಾಥೇಶ್ವರಿ ದೇವಾಲಯವು ಅವರ ಪ್ರಕಾರ ಮೂಲತಃ ಒಂದು ಬೌದ್ಧ ಮಂದಿರ. 'ಅಂಕಲಿ ಮಠ'ವೂ ಅಷ್ಟೇ (ಅವರ ಇತರ ಸಮೀಕರಣಗಳು ಎಷ್ಟರಮಟ್ಟಿಗೆ ನಿಜವೋ ಸಂದೇಹ). ಚಿತ್ರದುರ್ಗದ ಇತಿಹಾಸಕ್ಕೆ ಸಂಬಂಧಿಸಿದ ಅನೇಕ ಕೃತಿಗಳನ್ನು ಅವರು ಪ್ರಪ್ರಥಮವಾಗಿ ಹೊರತಂದಿದ್ದಾರೆ. ಜೊತೆಗೆ ಅವರು ಅನೇಕ ಶಾಸನ, ತಾಮ್ರಪಟಗಳನ್ನು ಪತ್ತೆಹಚ್ಚಿದ್ದಲ್ಲದೆ ಆ ದಿಸೆಯಲ್ಲಿ ಇತರರಿಗೂ ಸಹಾಯ ಮಾಡಿದ್ದಾರೆ. ಅವರ ಆಸಕ್ತಿ ಊರಿನ ಹೆಸರುಗಳ ಕಡೆಗೂ ಹರಿದಿರುವುದು ಗಮನಾರ್ಹ. ಊರಿನ ಹೆಸರುಗಳ ಬಗ್ಗೆ ಇಲ್ಲಿ ಎರಡು ಮೂರು ಬರಹಗಳಿವೆ. ಸಳನ ಸಮಸ್ಯೆ, ಶ್ರವಣಬೆಳಗೊಳಕ್ಕೆ ಜೈನ ಧರ್ಮದ ಆಗಮನ, ಬಿಜ್ಜಳನ ಕೊಲೆ ಮೊದಲಾದ ಇತಿಹಾಸದ ಕೆಲವು ಪ್ರಮುಖ ಸಮಸ್ಯೆಗಳನ್ನು ಅವರು ಬಿಡಿಸಲು ಯತ್ನಿಸಿದ್ದಾರೆ.

ಇಲ್ಲೆಲ್ಲ ಅವರ ಪ್ರಯತ್ನಗಳು ಸಫಲವೆಂದು ಹೇಳುವಂತಿಲ್ಲ. ಜೊತೆಗೆ ಇಲ್ಲಿಯ ಎಲ್ಲವೂ ಸಂಪ್ರಬಂಧಗಳಲ್ಲ (papers). ಇಲ್ಲಿ ದಿನಪತ್ರಿಕೆ, ವಾರಪತ್ರಿಕೆಗಳಿಗೆ ಬರೆದ

'ಜನಪ್ರಿಯ' ಲೇಖನಗಳೂ ಉಂಟು. ಮುಖ್ಯವಾಗಿ ಜೋಯಿಸರದು ಸಂಶೋಧನ ದೃಷ್ಟಿ; ಅವರ ಲೇಖನಗಳು ಹೆಚ್ಚಿನ ಸಂಶೋಧನೆಗೆ ಸಾಮಗ್ರಿಯನ್ನು ಒದಗಿಸುವಷ್ಟು ಶ್ರೀಮಂತವಾಗಿವೆ. ಅವರ ಲೇಖನಗಳನ್ನು ಸಂಪಾದಿಸುವಲ್ಲಿ ಲಕ್ಷ್ಮಣ ತೆಲಗಾವಿ ಮತ್ತು ಎಂ.ವಿ. ಶ್ರೀನಿವಾಸ್ ತೋರಿರುವ ಶ್ರದ್ಧೆ ಮೆಚ್ಚಬೇಕಾದ್ದು. ಅವರ ಉಳಿದ ಲೇಖನಗಳೂ ಹೀಗೆಯೇ ಸಂಪುಟಗೊಂಡು ಹೊರಬರಲೆಂದು ಆಶಿಸಬಹುದು.

**ವಿಜಾಪುರ ಜಿಲ್ಲೆಯ ಶಾಸನಸೂಚಿಯು** ಎಂ.ಎಂ. ಕಲಬುರ್ಗಿಯವರು ಸಿದ್ಧಪಡಿಸಿರುವ ಒಂದು ಸೂಚಿ. ಇದರಲ್ಲಿ ಒಟ್ಟು 1061 ಶಾಸನಗಳು ಪಟ್ಟಿಯಾಗಿವೆ. 1975ರ ಸಾಹಿತ್ಯ ವಾರ್ಷಿಕದಲ್ಲಿ (ಹಿಂದೆ ನೋಡಿ) 'ಧಾರವಾಡ ಜಿಲ್ಲೆಯ ಶಾಸನ ಸೂಚಿ' ಕೃತಿಯ ಬಗ್ಗೆ ಹೇಳಿದ ಮಾತುಗಳನ್ನೇ ಈ ಪುಸ್ತಕಕ್ಕೂ ಹೇಳಬಹುದು. ಇಂತಹ ಸೂಚಿಗಳು ಉತ್ತರ ಕರ್ನಾಟಕದ ಎಲ್ಲ ಜಿಲ್ಲೆಗಳಿಗೂ ಆದಷ್ಟು ಬೇಗ ಬರಲಿ ಎಂದು ಮತ್ತೊಮ್ಮೆ ಹಾರೈಸುತ್ತೇವೆ.

**ಎರಡು ಮಹಾಕಾವ್ಯಗಳು** ಪಿ.ವಿ. ಕಾಣೆಯವರ ಸುದೀರ್ಘ ಲೇಖನವೊಂದರ ಅನುವಾದ (ಅನುವಾದಕ : ಎಚ್.ಎಸ್. ಹರಿಶಂಕರ್). ಕಾಣೆಯವರು ಅತಿಶ್ರೇಷ್ಠ ವಿದ್ವಾಂಸರಾಗಿದ್ದು ಅವರ ಬರಹಗಳಿಗೆ ಭಾರತೀಯ ಶಾಸ್ತ್ರ (Indology) ಕ್ಷೇತ್ರದಲ್ಲಿ ಪ್ರಮುಖ ಸ್ಥಾನವಿದೆ. ಅವರ ನಿಶಿತಮತಿ, ಅಪಾರವ್ಯಾಸಂಗಗಳಿಗೆ ಪ್ರತೀಕ ಈ ಲೇಖನ. ಇದರಲ್ಲಿ ಪ್ರತಿಪಾದಿತವಾಗಿರುವ ವಿಷಯ ಮಹಾಭಾರತ ಮತ್ತು ರಾಮಾಯಣಗಳಿಗೆ ಸಂಬಂಧಿಸಿದ್ದು. ಆರಂಭದಲ್ಲಿ ಮಹಾಭಾರತ ರಾಮಾಯಣಗಳ ಕತೆಯ ವಿಕಾಸವನ್ನು ಪ್ರೌಢವಾಗಿ ನಿರೂಪಿಸಿದ್ದಾರೆ. ಮಹಾಭಾರತದ ಮುಖ್ಯ ಕಥೆ ರಾಮಾಯಣ ಕಥೆಗಿಂತ 'ಶತಮಾನಗಳಷ್ಟು ಹಳೆಯ'ದೆಂದು ಕಾಣೆಯವರ ಅಭಿಪ್ರಾಯ. ಕ್ರಿ.ಪೂ. 500ನ್ನು ಮಹಾಭಾರತದ 'ತಿರುಳಿನ ಕಾಲ'ವೆಂಬುದೂ ಅವರ ಅಭಿಪ್ರಾಯ (ಕತೆ ಇನ್ನೂ ಹಳೆಯದು). ಮಹಾಭಾರತದ ಪಾಠ, ಅದರ ಗಾತ್ರ ಬೆಳೆದು ಬಂದ ಪರಿಯನ್ನು ಕಾಣೆ ಚರ್ಚಿಸಿದ್ದಾರೆ. ಲೇಖನದ ಉತ್ತರಾರ್ಧವು ರಾಮಾಯಣದ ಪಾಠ ಭೇದ, ಕಥೆಯ ಮೂಲ (ಬೌದ್ಧರ ದಶರಥ ಜಾತಕವು ರಾಮಕಥೆಯ ಪಳೆಯರೂಪವೆಂಬ ವಿದ್ವಾಂಸರ ಅಭಿಪ್ರಾಯವನ್ನು ಕಾಣೆ ತಿರಸ್ಕರಿಸುತ್ತಾರೆ), ಕಾಲ (ಕಥೆಯ ತಿರುಳು ಕೇವಲ ಕ್ರಿ.ಪೂ. 300-250 ರಷ್ಟು ಹಳೆಯದೆಂದು ಕಾಣೆ ಅಭಿಪ್ರಾಯ), ಆ ಕಥೆಯ ವ್ಯಾಪ್ತಿ (ಜಾವಾದ ಅಂಗ್ ಕೋರ್ ಮತ್ತು ಬೋರೊ ಬುದುರ್ ವ್ಯಕ್ತಿಗಳೆಂದು ಹರಿಶಂಕರ್ ಭಾವಿಸಿದ್ದಾರೆ, ಆದರೆ ಅವು ಸ್ಥಳಗಳು. ನೋಡಿ, ಪು. 66) ವ್ಯಾಖ್ಯಾನಗಳು ಹೀಗೆ ಅನೇಕ ವಿಷಯಗಳಿಗೆ ಮೀಸಲು. ಹರಿಶಂಕರ್ ಕಾಣೆಯವರನ್ನು ಎಚ್ಚರಿಕೆಯಿಂದ ಅನುವಾದಿಸಿದ್ದಾರೆ. ಅವರು ಕಾಣೆಯವರ ಇನ್ನೂ ಇಂತಹ ಬರಹಗಳನ್ನು ಕನ್ನಡಕ್ಕೆ ತಂದರೆ ದೊಡ್ಡ ಉಪಕಾರವನ್ನು ಮಾಡಿದಂತಾಗುತ್ತದೆ.

ಜೈನಧರ್ಮಕ್ಕೆ ಸಂಬಂಧಿಸಿದ ಮೂರು ಪುಸ್ತಿಕೆಗಳು ಪ್ರಕಟವಾಗಿವೆ. ಹಂಪ. ನಾಗರಾಜಯ್ಯನವರ **ಯಕ್ಷ ಯಕ್ಷಿಯರು** ಪುಸ್ತಕವು ಭಾರತೀಯ ಯಕ್ಷ - ಯಕ್ಷಿ ಹಿನ್ನೆಲೆಯಲ್ಲಿ ಜೈನಪುರಾಣ, ಶಿಲ್ಪಗಳ ಯಕ್ಷ ಯಕ್ಷಿಯರ ಕಲ್ಪನೆಯನ್ನು ವಿವೇಚಿಸುವ ಉದ್ದೇಶವನ್ನು ಒಳಗೊಂಡಿದೆ. ಇದು ತನ್ನ ಉದ್ದೇಶವನ್ನು ಸಾರ್ಥಕಪಡಿಸಿಕೊಂಡಿದೆಯೆಂಬುದರ ಬಗ್ಗೆ ತೀರ ಸಂದೇಹಗಳಿವೆ. ಇವಕ್ಕೆ ಕಾರಣ : ಈ ಪುಸ್ತಕ ರಚನೆಯ ಹಿನ್ನೆಲೆಯಲ್ಲಿ

ವ್ಯವಸ್ಥಿತ ಅಧ್ಯಯನ, ಆಲೋಚನೆಗಳಿರುವಂತೆ ತೋರುವುದಿಲ್ಲ. ಮೊದಲ ಅಧ್ಯಾಯದಿಂದಲೇ ಈ ಕೆಲವು ಉದಾಹರಣೆಗಳನ್ನು ನೋಡಬಹುದು. 'ಎಕ್ಕಲಗಾನ' (=ಒಬ್ಬನೇ ಹಾಡುವುದು), 'ಎಕ್ಕಡಿಗ' (=ಆಪ್ತ, ಸೇವಕ, ಗೂಢಚಾರಿ) ಈ ಪದಗಳ ಅರ್ಥ ಖಚಿತವಾಗಿರುವಾಗ (ಕನ್ನಡ ನಿಘಂಟು, ನೋಡಿ) ಅವುಗಳ ಜೊತೆ "ಯಕ್ಷ" ಪದವನ್ನು ಸಮೀಕರಿಸುವ ಪ್ರಯತ್ನ ತೀರ ನಿಷ್ಫಲವಾಗುತ್ತದೆ. ಯಕ್ಷರು ರಾತ್ರಿ ಸಂಚರಿಸುತ್ತಿದ್ದವರೆಂಬ ಕಲ್ಪನೆಯ ಮೇಲೆ ಅವರಿಗೂ ದ್ರಾವಿಡ 'ಇರುಳ'ರಿಗೂ ಹೇಗೆ ಸಂಬಂಧಕಲ್ಪನೆ ಮಾಡುವುದು ? ಯಕ್ಷರು ದ್ರಾವಿಡರಿರಬಹುದೆಂಬುದಕ್ಕೆ ಯಾವುದೇ ಗಟ್ಟಿ ಆಧಾರವನ್ನೂ ಕೊಟ್ಟಿಲ್ಲ. 'ಎಕ್ಕಡ' (=ಪಾದರಕ್ಷೆ) ಶಬ್ದದಲ್ಲಿ 'ಯಕ್ಷ' ಶಬ್ದವನ್ನು ನೋಡಲು ಹೇಗೆ ಸಾಧ್ಯ ? ತಾವು ಓದಿದ ಸಂಗತಿಗಳ ಜೊತೆ ಮನಸ್ಸಿಗೆ ಹೊಳೆದ ಆಲೋಚನೆಗಳನ್ನು ವಿಶ್ಲೇಷಿಸಿ ವಿಚಾರಿಸದೆ ಸುಮ್ಮನೆ ಮಿಶ್ರಮಾಡಿಕೊಡುವುದರಿಂದ ಯಾವುದೇ ತಾರ್ಕಿಕ ಬೆಳವಣಿಗೆಯೂ ಬರಹದಲ್ಲಿ ಮೂಡುವುದಿಲ್ಲ. ಪು. 41ರಲ್ಲಿ 'ಸಂಧ್ಯಾಭಾಷಾ' ಎಂಬುದು ಒಂದು ಗ್ರಂಥವೆಂದಿದೆ. ವಾಸ್ತವವಾಗಿ ಅದು ತಾಂತ್ರಿಕ ಗ್ರಂಥಗಳಲ್ಲಿ ಬಳಕೆಯಾಗಿರುವ ಎರಡು ಅರ್ಥ ಕೊಡುವ ಭಾಷೆಯ ಹೆಸರು (ಮತ್ತು ಸರಿಯಾದ ರೂಪ 'ಸಂಧಾ ಭಾಷಾ'). ಪು. 40-2 ಈ ಪುಟಗಳಲ್ಲಿ ಬಂದಿರುವ ಬಹುತೇಕ ವಿಷಯಗಳು ನನ್ನ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ'ದಿಂದ ತೆಗೆದುಕೊಂಡುವು; ಆ ಪುಸ್ತಕದ ಹೆಸರು ಗ್ರಂಥಪಟ್ಟಿಯಲ್ಲಿಲ್ಲ. ಪು. 55ರಿಂದ ಮುಂದಿನ ಬಹುಮಟ್ಟಿನ ಸಂಗತಿಗಳು, ಚಿತ್ರಗಳು ಹಿಂದಿಯ ಪುಸ್ತಕವೊಂದರಿಂದ ಬಂದಿವೆಯೆಂದು ಹೇಳಿದ್ದಾರೆ. ಈ ಗ್ರಂಥದಲ್ಲಿ ಲೇಖಕರ ಸಂಶೋಧನೆ ಏನು, ಜ್ಞಾನಕ್ಕೆ ಅವರ ಕಾಣಿಕೆಯೇನು ಎಂಬುದು ತೀರ ಸಂದೇಹಾಸ್ಪದವಾಗುತ್ತದೆ. ಸಂಬಂಧವಿಲ್ಲದ ಸಂಗತಿಗಳನ್ನು ಸೇರಿಸುವುದು, ಒಂದು ಸಂಗತಿಯಿಂದ ಇನ್ನೊಂದಕ್ಕೆ ಹಾರುವುದು, ಆಧಾರವಿಲ್ಲದ ಊಹೆಗಳನ್ನು ಮಾಡುವುದು ಇವು ಈ ಪುಸ್ತಕದಲ್ಲಿ ಅವರದು ಎಂದು ಹೇಳಬಹುದಾದ ಬರಹದ ಲಕ್ಷಣಗಳಾಗಿವೆ. ಹೀಗಾಗಿ ಇಡೀ ಪುಸ್ತಕ ತೀವ್ರ ಅತೃಪ್ತಿಯುಂಟುಮಾಡುತ್ತದೆ.

**ಜೈನ ಸಾಹಿತ್ಯ ಮತ್ತು ಸಂಸ್ಕೃತಿ (ಕೆಲವು ಅಧ್ಯಯನಗಳು)** ಶುಭಚಂದ್ರರ ಹತ್ತು ಪ್ರಬಂಧಗಳ ಸಂಕಲನ. ಎಲ್ಲ ಪ್ರಬಂಧಗಳೂ ಒಂದಲ್ಲ ಒಂದು ರೀತಿ ಜೈನ ಧರ್ಮಕ್ಕೆ ಸಂಬಂಧಿಸಿವೆ. ಜೈನಕವಿಗಳು ಕವಿ ಕಾವ್ಯ ಕಾವ್ಯೋದ್ದೇಶಗಳ ಬಗ್ಗೆ ಹೊಂದಿದ್ದ ದೃಷ್ಟಿ ಧೋರಣೆ ಮೊದಲ ಪ್ರಬಂಧ 'ಜೈನಕಾವ್ಯದೃಷ್ಟಿ - ಇತಿ ಮಿತಿ'ಯ ವಸ್ತು. ಕಾವ್ಯದ ಬಗ್ಗೆ ಜೈನಕವಿಗಳಿಗೆ ತಮ್ಮದೇ ಆದ ವಿಶಿಷ್ಟ ಧೋರಣೆಯಿದೆ ಎಂದು ಆ ಪ್ರಬಂಧ ಓದಿದ ಮೇಲೂ ಅನ್ನಿಸುವುದಿಲ್ಲ. ಪ್ರಬಂಧದ ಕೊನೆಯ ವಾಕ್ಯಗಳು ಹೀಗಿವೆ: "ಕೇವಲಜ್ಞಾನ ಸಂಪಾದನೆಯೇ ಆ ಮೌಲ್ಯ, ಮೋಕ್ಷವೇ ಆ ಬೆಲೆ. ಇದು ಜೈನದೃಷ್ಟಿ, ಭಾರತೀಯ ದೃಷ್ಟಿ". 'ಅನುಪ್ರೇಕ್ಷೆ ಮತ್ತು ಬಂಧುವರ್ಮನ ಜೀವಸಂಬೋಧನೆ' 'ಅಪಭ್ರಂಶ ಕವಿ ಪುಷ್ಪದಂತ' 'ಕರಂಡುವಿನ ಕತೆ ಮತ್ತು ಅದರ ಜನಪ್ರಿಯತೆ' ಈ ಸಂಕಲನದ ಒಳ್ಳೆಯ ಪ್ರಬಂಧಗಳು. ಉಳಿದ ಪ್ರಬಂಧಗಳೂ ಆಸಕ್ತರು ಗಮನಿಸತಕ್ಕಂಥವು. ಶುಭಚಂದ್ರರಿಗೆ ಸಂಶೋಧನ ದೃಷ್ಟಿಯಿದೆ, ಒಳ್ಳೆಯ ಭಾಷೆಯಿದೆ. ಅತಿ ಊಹೆಗೆ ಹೋಗದೆ, ಅತಿರಂಜನೆಗೂ ಹೋಗದೆ

ಸಂಯಮದಿಂದ ವಿಷಯ ಪ್ರತಿಪಾದನೆ ಮಾಡುವ ಶಕ್ತಿಯಿದೆ. ಈ ಲೇಖನ ಸಂಕಲನವು ಜೈನ ಸಾಹಿತ್ಯ ಸಂಸ್ಕೃತಿಯಲ್ಲಿ ಆಸಕ್ತಿಯುಳ್ಳವರು ಸ್ವಾಗತಿಸಬೇಕಾದ ಗ್ರಂಥ.

ಮೈಸೂರು ವಿಶ್ವವಿದ್ಯಾಲಯ 1975ರಲ್ಲಿ ಏರ್ಪಡಿಸಿದ 'ಕರ್ನಾಟಕದಲ್ಲಿ ಜೈನಧರ್ಮ' ಎಂಬ ವಿಚಾರಗೋಷ್ಠಿಯ ಪ್ರಬಂಧಗಳ ಸಂಕಲನವೇ **'ಕರ್ನಾಟಕದಲ್ಲಿ ಜೈನಧರ್ಮ: ಒಂದು ಅಧ್ಯಯನ'** (ಸಂ : ಟಿ.ಜಿ. ಕಲಘಟಗಿ). ಇದರಲ್ಲಿ ಒಟ್ಟು ಹತ್ತು ಸಂಪ್ರಬಂಧಗಳಿವೆ. ಟಿ.ಕೆ. ತುಕೋಳ್ ಕರ್ನಾಟಕದಲ್ಲಿನ ಜೈನಪರಂಪರೆಯ ಸ್ಥೂಲ ಚಿತ್ರವನ್ನು ಕೊಟ್ಟಿದ್ದಾರೆ. ಟಿ.ಜಿ. ಕಲಘಟಗಿಯವರು ಜೈನದರ್ಶನವನ್ನು ಕುರಿತು ವಿಚಾರ ಮಾಡುತ್ತ, ಅದು ನಿರಾಶಾವಾದಿಯಲ್ಲ, 'ನಿವೃತ್ತಿ'ಯಷ್ಟೇ 'ಪ್ರವೃತ್ತಿ'ಗೂ ಅಲ್ಲಿ ಬೆಲೆಯಿದೆ ಎಂದು ಹೇಳುತ್ತಾರೆ. ಅವರ ಹೇಳಿಕೆಯ ಉತ್ತರಾರ್ಧ ವಿಚಾರಣೀಯವಾದುದು. ಕರ್ನಾಟಕದ ಜೈನ ಸಮಾಜದ ರಚನೆಯ ಬಗ್ಗೆ ಮಿರ್ಜಿ ಅಣ್ಣಾರಾಯರ ಪ್ರಬಂಧ ಸುಂದರವಾಗಿದೆ. ಬಾ.ರಾ. ಗೋಪಾಲ್ ಕರ್ನಾಟಕದ ಕೆಲವು ಪ್ರಮುಖ ಜೈನ ಸಾಂಸ್ಕೃತಿಕ ಕೇಂದ್ರಗಳನ್ನು ಸಮರ್ಥವಾಗಿ ಸಮೀಕ್ಷಿಸಿದ್ದಾರೆ. ಅವುಗಳಲ್ಲಿ ಬನವಾಸಿಯೂ ಸೇರಿರುವುದು ಲಕ್ಷಿಸಬೇಕಾದ್ದು. ಎ.ವಿ. ನರಸಿಂಹಮೂರ್ತಿಯವರು ಕರ್ನಾಟಕದ ಕೆಲವು ಮುಖ್ಯ ಬಸದಿಗಳನ್ನು ಕಾಲಾನುಕ್ರಮವಾಗಿ ಪರಿಶೀಲಿಸುತ್ತ ಬಸದಿಗಳ ವಾಸ್ತುಶೈಲಿಯನ್ನು ಶಾಸ್ತ್ರೀಯವಾಗಿ ವಿಚಾರ ಮಾಡಿದ್ದಾರೆ. ಆಯಾ ಬಸದಿಯ ವೈಶಿಷ್ಟ್ಯವನ್ನು ಎತ್ತಿ ತೋರಿದ್ದಾರೆ. ಜೈನಧರ್ಮವು ಕನ್ನಡ ಸಾಹಿತ್ಯಕ್ಕೆ ಸಲ್ಲಿಸಿರುವ ಸೇವೆಯನ್ನು ಚಿಕ್ಕ ಪ್ರಬಂಧದಲ್ಲಿ ಪರಿಚಯ ಮಾಡಿಕೊಡಲು ಯತ್ನಿಸಿದ್ದಾರೆ ಟಿ.ವಿ. ವೆಂಕಟಾಚಲಶಾಸ್ತ್ರಿ. ಕನ್ನಡದಲ್ಲಿನ ವರ್ಧಮಾನ ಪುರಾಣಗಳ ಸಮೀಕ್ಷೆಯನ್ನು ಬಿ.ಎಸ್. ಸಣ್ಣಯ್ಯನವರು ಮಾಡಿದ್ದಾರೆ. ಕನ್ನಡದ ಮೇಲೆ ಪ್ರಾಕೃತ ಭಾಷೆಗಳ ಪ್ರಭಾವವನ್ನು ವಿವೇಚಿಸಿದ್ದಾರೆ ಷಿ.ಚಿ. ಬಡಿಗೇರ ಅವರು. ಈ ಲೇಖನದ ಕೆಲವು ವಾದಗಳು ವಿಚಿತ್ರವಾಗಿವೆ. ಒಂದು ಉದಾಹರಣೆ: ಅಪಭ್ರಂಶದ ಪ / ಪ್ಪ ಪ್ರತ್ಯಯ ಭಾವನಾಮಸೂಚಕವಾಗಿದ್ದರೆ, ಅದೇ ಪ್ರತ್ಯಯ ಕನ್ನಡದ ಕಲ್ಲಪ್ಪ, ರಾಮಪ್ಪ ಎಂಬ ಹೆಸರುಗಳ ಕೊನೆಯಲ್ಲಿದೆ ಎಂದು ಹೇಳುವುದು ಅತಾರ್ಕಿಕ ; - ಅಮ್ಮ, - ಅಪ್ಪ, - ಅಣ್ಣಗಳಂತೆ - ಅಪ್ಪ ಎಂಬುದೂ ಸಂಬಂಧ ಸೂಚಿಪದ. ಎಂ.ಡಿ. ವಸಂತರಾಜ್ ಅವರು ಕರ್ನಾಟಕದ ಪ್ರಮುಖ ಜೈನ ಸಂಸ್ಕೃತ ಕವಿಗಳ ಪರಿಚಯ ಮಾಡಿಕೊಟ್ಟಿದ್ದಾರೆ. ಪುಷ್ಪದಂತ ಎಂಬ ಅಪಭ್ರಂಶ ಕವಿಯಲ್ಲಿ ಕನ್ನಡ ಶಬ್ದಗಳನ್ನು ಶ್ರೀಮತಿ ರತ್ನಾ ಶ್ರೇಯಸ್ ಗುರುತಿಸಿದ್ದಾರೆ. ಒಟ್ಟಿನಲ್ಲಿ ಈ ಲೇಖನಗಳಲ್ಲಿ ಎಲ್ಲೋ ಕೆಲವನ್ನು ಬಿಟ್ಟರೆ ಉಳಿದುವು ಬಹುಮಟ್ಟಿಗೆ ಸಮೀಕ್ಷಾತ್ಮಕವಾದುವು. ಆದರೂ ಎಲ್ಲ ಲೇಖಕರು ('ಲೇಖನದಾರ' ಎಂದು ಸಂಪಾದಕರು ಬಳಸಿರುವುದು ಒಪ್ಪಿತವಾಗುವುದಿಲ್ಲ) ತಮ್ಮ ಕೆಲಸವನ್ನು ಶ್ರದ್ಧೆಯಿಂದ ಮಾಡಿದ್ದಾರೆ. ಸಮೀಕ್ಷಾತ್ಮಕ ಲೇಖನಗಳಲ್ಲೂ ಅಲ್ಲಲ್ಲಿ ಹೊಸ ಅಂಶಗಳು ಮಿನುಗುವುದನ್ನು ಗುರುತಿಸಬಹುದು.

ಶ್ರೀ **ತೋಂಟದ ಸಿದ್ಧಲಿಂಗ ಶಿವಯೋಗಿಗಳ ವಚನ ಪದಪ್ರಯೋಗ ಕೋಶವನ್ನು** ಟಿ.ಎಲ್. ಬ್ಯಾಡಗಿ ಮತ್ತು ಎಸ್.ಆರ್. ಗುಂಜಾಳರು ಬಹು ಶ್ರಮ ವಹಿಸಿ ಶ್ರದ್ಧೆಯಿಂದ ಶಾಸ್ತ್ರೀಯವಾಗಿ ಸಿದ್ಧಪಡಿಸಿದ್ದಾರೆ. ಬಸವಣ್ಣನ ವಚನಗಳಿಗೆ ಪದ್ರೋಶವೊಂದು

(Concordance)* ಈಗಾಗಲೇ ಪ್ರಕಟವಾಗಿದ್ದು ಅದರ ಕರ್ತೃವೂ ಎಸ್.ಆರ್. ಗುಂಜಾಳರೇ ಆಗಿದ್ದಾರೆ. ಅದರ ಉಪಯೋಗವನ್ನು ಆಸಕ್ತರು ಆಗಲೇ ಮಾಡಿಕೊಳ್ಳುತ್ತಿದ್ದಾರೆ. ವಚನಗಳ ಇತಿಹಾಸದಲ್ಲಿ ಎರಡನೆಯ ಯುಗದ ಅಲ್ಲಮನೆಂದು ಪ್ರಖ್ಯಾತನಾದ ತೋಂಟದ ಸಿದ್ಧಲಿಂಗ ಶಿವಯೋಗಿಗಳ ವಚನಗಳಿಗೆ ಪಪ್ರೋಶವೊಂದು ಈಗ ಬಂದಿರುವುದು ಸ್ವಾಗತಾರ್ಹ.

ಪಪ್ರೋಶಗಳ ಉಪಯೋಗ ಅವರ್ಣನೀಯ - ಸಂಶೋಧಕರಿಗೆ ಮತ್ತು ವಿಮರ್ಶಕರಿಗೆ ಇಬ್ಬರಿಗೂ. ಅವರ ಹುಡುಕಾಟದ ಶ್ರಮವನ್ನು ತಪ್ಪಿಸುವುದಲ್ಲದೆ, ಒಂದು ವಿಷಯಕ್ಕೆ ಸಂಬಂಧಿಸಿದ ಸಾಮಗ್ರಿಯಲ್ಲಿ ಯಾವುದೂ ತಪ್ಪಿಹೋಗದಂತೆ ಎಲ್ಲವನ್ನೂ ಅವರಿಗೆ ಒದಗಿಸಿಕೊಡುತ್ತದೆ. ಸಿದ್ಧಲಿಂಗಯತಿಗಳು "ಶೂನ್ಯ" ಪದವನ್ನು ಯಾವ ಅರ್ಥದಲ್ಲಿ (ಅಥವಾ ಅರ್ಥಗಳಲ್ಲಿ) ಬಳಸಿದ್ದಾರೆ ಎನ್ನುವುದಕ್ಕೆ ಆ ಪದದ ಕೆಳಗಿನ ಉಲ್ಲೇಖಗಳನ್ನು ತೆಗೆದು ನೋಡಿದರೆ ಸಾಕು. ಅಥವಾ ಒಂದು ವಚನದ ಯಾವುದೇ ಪದ ನೆನಪಿದ್ದರೂ ಆ ವಚನವನ್ನು ಪಪ್ರೋಶದ ಸಹಾಯದಿಂದ ಕ್ಷಣಾರ್ಧದಲ್ಲಿ ಪತ್ತೆಹಚ್ಚಬಹುದು. ಪಪ್ರೋಶಗಳ ಉಪಯೋಗವನ್ನು ಕನ್ನಡಿಗರು ಇನ್ನೂ ಕಂಡುಕೊಳ್ಳಬೇಕಾಗಿದೆ. ಅದಕ್ಕಿಂತ ಇಂತಹ ಪಪ್ರೋಶಗಳು ಕನ್ನಡದ ಪ್ರಮುಖ ಕೃತಿಗಳಿಗಾದರೂ ದೊರಕುವ ಕಾಲ ಬೇಗ ಬರಬೇಕು. ಎಚ್ಚರಿಕೆಯಿಂದ ಸಿದ್ಧವಾದ ಕೃತಿಯಾದರೂ, 'ಉಳ್ಳಿ ನುಗ್ಗಿ' ಎಂಬಲ್ಲಿ ಉಳ್ಳಿ, ನುಗ್ಗಿ ಎಂಬ ಎರಡು ಪ್ರತ್ಯೇಕ ಉಲ್ಲೇಖಗಳನ್ನು ಕೊಡದಿರುವುದು, ಕೆಲವೊಮ್ಮೆ ಅಕಾರಾದಿ ಯಾದಿ ಜೋಡಿಸುವಲ್ಲಿ ಮಾಡಿರುವ ಅಚಾತುರ್ಯ (ಉದಾ ಪು. 13. 'ಅರ್ಥ' 'ಅರ್ಥಿ' ಪದಗಳು ಮುಂದೆ ಹೋಗಬೇಕು. ಇದು 'ಆರಗ' ಪದಕ್ಕೆ ಮೊದಲು ಬರಬೇಕು) ಇಂತಹ ಕೆಲವು ಸಣ್ಣ ಕೊರತೆಗಳನ್ನು ಬಿಟ್ಟರೆ ಇದೊಂದು ಸರ್ವದೃಷ್ಟಿಯಿಂದಲೂ ಸ್ವಾಗತಿಸಬೇಕಾದ ಗ್ರಂಥವೆಂದು ಹೇಳಬಹುದು.

**ಪುರಾತನ ಲಖನೌ** (ಲೇ : ಅಬ್ದುಲ್ ಹಲೀಮ್ 'ಶರರ್'. ಅನುವಾದಕ. ಪಂಚಾಕ್ಷರಿ ಹಿರೇಮಠ) ಈಚೆಗೆ ಕನ್ನಡಕ್ಕೆ ಬಂದಿರುವ ಅಪರೂಪದ ಪುಸ್ತಕಗಳಲ್ಲೊಂದು. ಇದು ಪ್ರಸಿದ್ಧ ಉರ್ದುಕೃತಿ 'ಗುಜಸ್ತಾ ಲಕನೌ'ವಿನ ಕನ್ನಡ ಅನುವಾದ. 'ಶರರ್' ತಾವು ಕಂಡ, ಕೇಳಿದ ಪ್ರಾಚೀನ ಲಖನೌ ನಗರದ ಪರಿಚಯ ಮಾಡಿ ಕೊಡುತ್ತ ಆ ಪ್ರದೇಶದ ಇಡೀ ಮುಸ್ಲಿಂ ಸಂಸ್ಕೃತಿಯ ಚಿತ್ರವನ್ನೇ ತೆರೆದಿಡುತ್ತಾರೆ. ಲಖನೌ ನಗರದ ಸಭ್ಯತೆಯ ಮಾತನ್ನಂತೂ ಲೇಖಕರು ಮತ್ತೆ ಮತ್ತೆ ಒತ್ತಿ ಹೇಳುತ್ತಾರೆ. ಆ ನಗರದ ಇತಿಹಾಸ, ಅಲ್ಲಿಯ ಜನತೆಯ ಅಭಿರುಚಿ, ಊಟ ಉಡುಗೆ ತೊಡುಗೆ ವಿನೋದ, ಆಚಾರ ವ್ಯವಹಾರಗಳು, ಮಂದಿರಗಳು ಇವನ್ನೆಲ್ಲ ಅಧಿಕಾರ ವಾಣಿಯಿಂದ ಚಿತ್ರಿಸಿದ್ದಾರೆ. ಅನುವಾದ ಎಷ್ಟು ಸುಲಲಿತವಾಗಿದೆಯೆಂದರೆ ಇದೊಂದು ಸ್ವತಂತ್ರ ಕೃತಿಯೇ ಎನ್ನುವಷ್ಟು ಇಡೀ ಗ್ರಂಥ ಆಹ್ಲಾದಕರವಾಗುತ್ತದೆ. ಅಚ್ಚಾಗಿರುವ ರೀತಿ, ಮುದ್ರಣ ಶುದ್ಧತೆ ಎಲ್ಲವೂ ತೃಪ್ತಿಕರವಾಗಿದೆ.

---

*Concordance ಎಂಬರ್ಥವಲ್ಲಿ 'ಪದಪ್ರಯೋಗಕೋಶ' ಎನ್ನುವ ವಿವರಣಾತ್ಮಕ ಪದವು ಬಳಕೆ ದೃಷ್ಟಿಯಿಂದ ದೀರ್ಘವಾಗಿರುವುದರಿಂದ ಅದನ್ನೇ ಕುಗ್ಗಿಸಿ 'ಪಪ್ರೋಶ' ಎಂದು ನಾನು ಒಂದೆರಡು ಕಡೆ ಆಗಲೇ ಬಳಸಿದ್ದೇನೆ.

# ಸಂಶೋಧನ ಸಮೀಕ್ಷೆ : 1977

ಈ ವಿಭಾಗದಲ್ಲಿ ಸಮೀಕ್ಷೆಗೆ ಒಳಗಾಗಿರುವ ಕೃತಿಗಳ ಸಂಖ್ಯೆ ಬಹು ಕಡಿಮೆ. ಇವುಗಳಲ್ಲಿ ಒಂದು ಪಿಎಚ್.ಡಿ. ನಿಬಂಧ, ಕರ್ನಾಟಕದ ಶಾಸನಗಳಿಗೆ ಸಂಬಂಧಿಸಿದುವು ಎರಡು, ಗ್ರಂಥಸಂಪಾದನೆಗೆ ಸಂಬಂಧಿಸಿದ್ದು ಒಂದು. ವೈದಿಕ ವಾಙ್ಮಯ ಪರಿಚಯದ ಒಂದು ಪುಸ್ತಕವೂ ಇದೆ. 'ಎಪಿಗ್ರಾಫಿಯ ಕರ್ನಾಟಿಕ'ದ ಆರನೆಯ ಸಂಪುಟದ ಸಮೀಕ್ಷೆ ಇಲ್ಲಿದೆ. ಹಿಂದಿನ ಐದು ಸಂಪುಟಗಳ ಸಮೀಕ್ಷೆ ಆಯಾ ವರ್ಷದ ಸಾಹಿತ್ಯ ವಾರ್ಷಿಕಗಳಲ್ಲಿ ಬರಬೇಕಾಗಿದ್ದು, ಆಕಸ್ಮಿಕವಾಗಿ ಅವು ಬಿಟ್ಟು ಹೋಗಿದ್ದವು. ಅನುಬಂಧದಲ್ಲಿ ಒಟ್ಟಾರೆ ಅವುಗಳ ಸಮೀಕ್ಷೆ ಮಾಡಿದೆ.

ಡಾ. ಬುದ್ದಣ್ಣ ಹಿಂಗಮಿರೆ ಅವರ **ಕನ್ನಡದಲ್ಲಿ ಶೋಕಕಾವ್ಯ** ಎಂಬುದು ಅವರಿಗೆ ಪಿಎಚ್.ಡಿ. ಪದವಿಯನ್ನು ತಂದುಕೊಟ್ಟ ನಿಬಂಧ. ಕನ್ನಡದಲ್ಲಿ ಬಹು ಹಿಂದಿನಿಂದ ಆಧುನಿಕ ಕಾಲದವರೆಗೆ ಶೋಕಕಾವ್ಯ (elegiac poetry) ಬೆಳೆದು ಬಂದಿರುವುದು ಈ ನಿಬಂಧದ ವಸ್ತುವಾಗಿದೆ. ಇದರಲ್ಲಿ ಒಟ್ಟು ಏಳು ಅಧ್ಯಾಯಗಳಿವೆ: ಶೋಕಕಾವ್ಯದ ಮೂಲೇತಿಹಾಸ ಮತ್ತು ಲಕ್ಷಣ, ಇಂಗ್ಲೀಷ್ ಶೋಕಕಾವ್ಯದ ಹುಟ್ಟು ಹಾಗೂ ಬೆಳವಣಿಗೆ, ಶಾಸನ ಪದ್ಯಗಳು ಹಾಗೂ ಶೋಕಕಾವ್ಯದಲ್ಲಿ ಅಭಿವ್ಯಕ್ತವಾದ ಸಂಸ್ಕೃತಿ, ಹಳೆಯ ಕಾವ್ಯದಲ್ಲಿ ಶೋಕಕಾವ್ಯ, ಜಾನಪದ ಶೋಕಕಾವ್ಯ, ಹೊಸಗನ್ನಡ ಶೋಕಕಾವ್ಯ, ಕರುಣರಸಮೀಮಾಂಸೆ, ಸಮಾರೋಪ. ಮೊದಲ ಎರಡು ಅಧ್ಯಾಯಗಳಲ್ಲಿ ಭಾರತದ ವೈದಿಕ ಮತ್ತು ಇತರ ಸಾಹಿತ್ಯಗಳಲ್ಲಿ, ಯುರೋಪಿನ ಗ್ರೀಕ್ ಮತ್ತು ಇಂಗ್ಲೀಷ್ ಕಾವ್ಯದಲ್ಲಿ 'ಶೋಕಕಾವ್ಯ' ಮೂಡಿ ಬಂದ ಬಗೆಯನ್ನು ಚರ್ಚಿಸಿದ್ದಾರೆ. ಕಾಳಿದಾಸನಲ್ಲಿ ಬರುವ ಅಜವಿಲಾಪವಾಗಲಿ, ರನ್ನನಲ್ಲಿ ಬರುವ ದುರ್ಯೋಧನ ವಿಲಾಪವಾಗಲಿ ಶೋಕಕಾವ್ಯ ಭಾಗಗಳೇ. ಶೋಕಕಾವ್ಯದ ಮೂರು ಅಂಗಗಳು, ಡಾ. ಹಿಂಗಮಿರೆಯವರ ಪ್ರಕಾರ ಶೋಕ ಸನ್ನಿವೇಶ ನಿರ್ಮಾಣ, ಶೋಕ ಸನ್ನಿವೇಶ ಮತ್ತು ಕವಿಯ ದರ್ಶನಾನುಭವ. ಶೋಕಕಾವ್ಯ, ರುದ್ರಸನ್ನಿವೇಶಗಳಿಗಿರುವ ಸಂಬಂಧ ವ್ಯತ್ಯಾಸಗಳನ್ನೂ ಗುರುತಿಸಲು ಪ್ರಯತ್ನಿಸಿದ್ದಾರೆ. ಕನ್ನಡ ಶಾಸನ ಪದ್ಯಗಳಲ್ಲಿ ಕಂಡುಬರುವ ಶೋಕಕಾವ್ಯವನ್ನು ಗುರುತಿಸುವ ಪ್ರಯತ್ನ ಅಷ್ಟು ಸಾರ್ಥಕವಾಗಿದೆಯೆಂದು ಅನ್ನಿಸುವುದಿಲ್ಲ. ಇಲ್ಲಿ ಬಂದಿರುವ ಉದಾಹರಣೆಗಳು ಕಡಮೆಯೇ. ಕೇವಲ ಶಾಸನಪದ್ಯಮಂಜರಿಯಲ್ಲಿ ಬಂದಿರುವ ಪದ್ಯಗಳನ್ನು ಆಧರಿಸಿರುವುದು ತೀರಾ ಅಸಮರ್ಥನೀಯ. ಏಕೆಂದರೆ, ನರಸಿಂಹಾಚಾರ್ಯರು ಶಾಸನಗಳಿಂದ ತಮಗೆ ಆಕರ್ಷಕವೆಂದು ತೋರಿಬಂದ ಪದ್ಯಗಳನ್ನು ಆರಿಸಿಕೊಡುತ್ತಾರೆ; ಯಾವುದೇ

ಶಾಸನವನ್ನು ಇಡಿಯಾಗಿ ಕೊಡುವುದಿಲ್ಲ. ಉದಾಹರಣೆಗೆ ಶಂಭುವಿನ ವೇಳೆವಾಳಿತನವನ್ನು ಒಟ್ಟು ಶಾಸನದ, ಅಂದಿನ ಪರಿಸರದ ಹಿನ್ನೆಲೆಯಲ್ಲಿ ವಿಶ್ಲೇಷಿಸಿ ನೋಡಬಹುದಿತ್ತು. ಹಾಗೆ ನೋಡಿದರೆ, ಕಾವ್ಯಗಳಲ್ಲಿ ಶೋಕಕಾವ್ಯದ ಲಕ್ಷಣಗಳುಳ್ಳ ಭಾಗಗಳು ದೊರೆಯುತ್ತದೆ, ಮತ್ತು ಅಲ್ಲೂ ಅವು ಪೌರಾಣಿಕ ಘಟನೆಗಳಿಗೆ ಸಂಬಂಧಿಸಿದವಾಗಿರುತ್ತವೆ. ಆದರೆ ಸಮಕಾಲೀನ ಸಾವು ನೋವುಗಳಿಗೆ ಪ್ರತಿಸ್ಪಂದಿಸಿರುವ ಶಾಸನಗಳಲ್ಲಿ ಶೋಕಕಾವ್ಯ ಇಡಿಯಾಗಿ ದೊರಕುತ್ತದೆ. ಆ ಕಾರಣ, ಶಾಸನಗಳ ಬಗ್ಗೆ ಇನ್ನೂ ಹೆಚ್ಚು ಆಳವಾದ ಅಭ್ಯಾಸ ಸಾಧ್ಯವಿತ್ತು ಎಂದು ಅನ್ನಿಸುತ್ತದೆ. 'ಹಳೆಯ ಕಾವ್ಯದಲ್ಲಿ ಶೋಕ ಕಾವ್ಯ' ಭಾಗದಲ್ಲಿ ಹಿಂದಿನ ಸಾಹಿತ್ಯದಲ್ಲಿ ಬರುವ ಶೋಕ ಭಾಗಗಳನ್ನು ಎತ್ತಿ ತೋರಿದ್ದಾರೆ. ಇದೊಂದು ಕೇವಲ ಸಮೀಕ್ಷೆಯಾಗಿ ಉಳಿದಿದೆ. ಇಲ್ಲಿ ಬಿಟ್ಟುಹೋಗಿರುವ ಭಾಗವೆಂದರೆ ಬಸವಣ್ಣನ ಪತ್ನಿ ನೀಲಲೋಚನೆಯ ವಚನಗಳು. ಬಸವನ ಸಾವಿನ ನಂತರ ಬರೆದಿರುವ ಅವಳ ವಚನಗಳು ಆ ಸಾವು ಅವಳ ಮನಸ್ಸಿನಲ್ಲಿ ಏಳಿಸಿದ ಭಾವನಾ ತರಂಗಗಳನ್ನು ಅದ್ಭುತವಾದ ರೀತಿಯಲ್ಲಿ ಹಿಡಿದಿಟ್ಟಿವೆ. ಶ್ರೀ ಕೆ.ಬಿ. ಪ್ರಭುಪ್ರಸಾದ್ ಅವರು ಅವನ್ನು "ಕನ್ನಡ ಸಾಹಿತ್ಯದಲ್ಲಿ ಇದುವರೆಗೆ ದೊರೆತಿರುವ ಕಾವ್ಯಗಳಲ್ಲಿ ಮೊಟ್ಟ ಮೊದಲ ಶೋಕ ಗೀತೆ" ಎಂದು ಕರೆದಿದ್ದಾರೆ. "ಹೊಸಗನ್ನಡ ಶೋಕಕಾವ್ಯ" ಅಧ್ಯಾಯದಲ್ಲಿ ಹೊಸಗನ್ನಡ ಕವಿತೆಯಲ್ಲಿ ಎಲ್ಲೆಲ್ಲಿ ಶೋಕ ವ್ಯಕ್ತವಾಗಿದೆಯೆಂಬುದರ ಒಂದು ಸಮೀಕ್ಷೆಯಿದೆ. "ಕರುಣರಸ ಮೀಮಾಂಸೆ - ಸಮಾರೋಪ"ವು ಹೆಚ್ಚಿನ ವಿಚಾರಗಳೇನೂ ಇಲ್ಲದೆ ಕೊರಗಿದೆ.

ಕೃತಿಯಲ್ಲಿ ಹೆಚ್ಚಿನ ಹೊಸ ಸಂಗತಿಗಳೂ ಇಲ್ಲದೆ ಸಾಹಿತ್ಯಾಭಿರುಚಿಯನ್ನು ಹೆಚ್ಚಿಸಬಲ್ಲ ಆಳ ವಿಮರ್ಶೆಯೂ ಇಲ್ಲದೆ ಒಂದು ಅವಲೋಕನ ಕೃತಿಯಾಗಿ ಉಳಿದ ಈ ನಿಬಂಧ ಅತೃಪ್ತಿ ಹುಟ್ಟಿಸುತ್ತದೆ.

ಶೇಷ ನವರತ್ನ ಅವರ **ಋಗ್ವೇದ (ಒಂದು ಅಧ್ಯಯನ)** ಎಂಬುದು "ಋಗ್ವೇದದ ವಸ್ತುನಿಷ್ಠ ಅಧ್ಯಯನ" ವೆಂದೂ, ಅದರ "ಪರಂಪರೆ ಮತ್ತು ಆಧುನಿಕ ದೃಷ್ಟಿ ಕೋನಗಳ"ನ್ನು ಪರಿಚಯ ಮಾಡಿಕೊಡುವುದು ಅದರ ಉದ್ದೇಶವೆಂದೂ ಲೇಖಕರೇ ಪುಸ್ತಕದ ಮೇಲೆಯೇ ಸೂಚಿಸಿದ್ದಾರೆ. ವೇದಗಳ, ಮುಖ್ಯವಾಗಿ ಋಗ್ವೇದದ ಸಮಗ್ರ ಪರಿಚಯವನ್ನು ಈ ಪುಸ್ತಕದಲ್ಲಿ ಮಾಡಿಕೊಡುವುದು ಅವರ ಉದ್ದೇಶವಾದರೂ, ಋಗ್ವೇದದ ಬಗ್ಗೆ ಲೇಖಕರಿಗಿರುವ ಶ್ರದ್ಧೆ, ಭಕ್ತಿ, ಅಭಿಮಾನಗಳೂ ಈ ಕೃತಿರಚನೆಗೆ ಕಾರಣಗಳು. 'ವೇದಗಳ ಸ್ವರೂಪ'ವೆನ್ನುವ ಅಧ್ಯಾಯವನ್ನು ಬಿಟ್ಟರೆ ಉಳಿದ ಕಡೆಗಳಲ್ಲೆಲ್ಲ ಋಗ್ವೇದದ ಪರಿಚಯವೇ ಪ್ರಧಾನವಾಗುತ್ತದೆ. ಋಗ್ವೇದದ ಕಾಲನಿರ್ಣಯ, ಭಾಷೆ, ಸ್ವರ ವಿಧಾನ, ಛಂದಸ್ಸು, ಆ ಕಾಲದ ಸಮಾಜ, ಋಗ್ವೇದದ ಕಾವ್ಯತ್ವ ಇವೇ ಮೊದಲಾದ ಅಂಶಗಳನ್ನು ಉದಾಹರಣೆಗಳ ಮೂಲಕ ಪ್ರತಿಪಾದಿಸಿದ್ದಾರೆ. ಲೇಖಕರು ವೇದಗಳು 'ಅಪೌರುಷೇಯ'ವೆನ್ನುವ ಸಾಂಪ್ರದಾಯಕ ಭಕ್ತಿ ದೃಷ್ಟಿಯನ್ನೂ ಒಪ್ಪಿ, ಆಧುನಿಕ ವಿದ್ವಾಂಸರ ವೈಚಾರಿಕ ನಿಲುವುಗಳನ್ನೂ ತಿಳಿದುಕೊಂಡಿದ್ದಾರೆ ಮತ್ತು ಅವುಗಳ ಒಂದು ಹದವಾದ ಬರವಣಿಗೆ ಇಲ್ಲಿ ನಮಗೆ ದೊರಕುತ್ತದೆ.

"ಈ ವೇದಮಂತ್ರಗಳನ್ನು ಯಾರೊಬ್ಬರೂ ನಿರ್ಮಿಸಲಿಲ್ಲ. ಸೃಷ್ಟಿಪೂರ್ವದಲ್ಲಿಯೂ ಸಹ ಅವು ಪುರುಷನ ವಿರಾಟ್ ಗರ್ಭದಲ್ಲಿ ಸ್ತಬ್ಧವಾಗಿದ್ದುವು" ಎಂಬಂತಹ ಹಿಂದಿನವರ ಅಭಿಪ್ರಾಯಗಳನ್ನು ಒಪ್ಪಬೇಕಾಗಿಲ್ಲವೆಂದು ಲೇಖಕರು ಹೇಳಿದರೂ ವೇದಗಳಲ್ಲಿ ವಿಮಾನ, ಮೋಟಾರ್ ಮೊದಲಾದ ಈಗಿನ ವಾಹನಗಳ ಉಲ್ಲೇಖವಿದೆಯೆಂದು ಹೇಳುವ ವಿದ್ವಾಂಸರ ಅಭಿಪ್ರಾಯಗಳನ್ನು ಒಪ್ಪಿಕೊಂಡು ಉದ್ಧರಿಸುವುದು ಆಶ್ಚರ್ಯವನ್ನುಂಟುಮಾಡುತ್ತದೆ. ಇಂಥ ಕೆಲವು ಪ್ರಸಂಗಗಳನ್ನು ಬಿಟ್ಟರೆ, ಇಡೀ ಪುಸ್ತಕ ಎಷ್ಟು ಉಪಯುಕ್ತ ಸಾಮಗ್ರಿಗಳನ್ನೊದಗಿಸುತ್ತದೆ! ಋಗ್ವೇದದ ವಿವಿಧ ಭಾಷ್ಯ ಪದ್ಧತಿಗಳ ವಿಷಯವೇ ಆಗಲಿ, ಛಂದಸ್ಸಿನ ವಿಷಯವೇ ಆಗಲಿ, ದೇವತೆಗಳ ವಿಷಯವೇ ಆಗಲಿ ವಿಚಾರಪೂರ್ಣವಾಗಿವೆ. ವೈದಿಕ ಸಾಹಿತ್ಯದ ಪರಿಚಯ ಮಾಡಿಕೊಳ್ಳುವವರಿಗೆ ಈ ಪುಸ್ತಕವನ್ನು ಮನಃಪೂರ್ವಕವಾಗಿ ಶಿಫಾರಸು ಮಾಡಬಹುದು. ಋಗ್ವೇದದ ಪದ್ಯಗಳನ್ನು ಉದ್ಧರಿಸಿ ಅವುಗಳ ಸಾರಾಂಶವನ್ನು ತಪ್ಪದೆ ಕೊಟ್ಟಿರುವುದು ಪ್ರಶಂಸನೀಯವಾಗಿದೆ. ಲೇಖಕರ ಭಾಷೆ ಸಂಯಮದಿಂದ ಕೂಡಿದ್ದು ಗಹನ ಸಂಗತಿಗಳನ್ನೂ ತಿಳಿಯಾಗಿ ಹೇಳುವ ಚಾತುರ್ಯ ಇಲ್ಲಿದೆ.

**ಕನ್ನಡ ಹಸ್ತಪ್ರತಿಗಳ ಇತಿಹಾಸವೆಂಬ** ಎಚ್. ದೇವೀರಪ್ಪನವರ ಚಿಕ್ಕ ಪುಸ್ತಕ ಕನ್ನಡ ಗ್ರಂಥ ಸಂಪಾದನೆಯ ಕ್ಷೇತ್ರಕ್ಕೆ ಈಚಿನ ಒಳ್ಳೆಯ ಕೊಡುಗೆ. ಹಸ್ತಪ್ರತಿಗಳ ಕ್ಷೇತ್ರದಲ್ಲಿ ಪಳಗಿದವರೂ ತಾವೇ ಒಳ್ಳೆಯ ಗ್ರಂಥ ಸಂಪಾದಕರೂ ಆಗಿರುವ ಶ್ರೀಯುತರು ತಮ್ಮ ಅನೇಕ ವರ್ಷಗಳ ತಿಳಿವಳಿಕೆ, ಅನುಭವಗಳನ್ನು ಈ ಕೃತಿಯಲ್ಲಿ ಹಿಡಿದಿಟ್ಟಿದ್ದಾರೆ. ಈ ಕೃತಿಯಲ್ಲಿ ಸಂಪಾದನಾ ಶಾಸ್ತ್ರಕ್ಕಿಂತ ಹಸ್ತಪ್ರತಿಗಳ ಪರಿಚಯಕ್ಕೆ ಹೆಚ್ಚು ಗಮನವನ್ನು ಕೊಟ್ಟಿದೆ. 'ಆದುದರಿಂದ ಈ ಬಗೆಯ ಪುಸ್ತಕ ಕನ್ನಡದಲ್ಲಿ ಇದೊಂದೇ ಎಂದು ಸವ್ಯಕ್ಕೆ ಹೇಳಬಹುದು' ಎಂಬ ಮಾತು ನಿಜ.

ಇದರ ಹನ್ನೊಂದು ಅಧ್ಯಾಯಗಳಲ್ಲಿ ಹಸ್ತಪ್ರತಿಗಳನ್ನು ಬರೆಯಲು ಬಳಸಲಾಗುವ ಲೇಖನ ಸಾಮಗ್ರಿಗಳು, ಹಸ್ತಪ್ರತಿಗಳ ಲಿಪಿವೈವಿಧ್ಯ ಮತ್ತು ಕಲೆಗಾರಿಕೆ, ಪ್ರತಿಕಾರರು, ಹಸ್ತಪ್ರತಿಗಳನ್ನು ಪ್ರತಿಮಾಡುವುದು, ಕರ್ನಲ್ ಮೆಕಂಜಿಯಿಂದ ಹಸ್ತಪ್ರತಿಗಳ ಉಳಿವಿಗೆ ಆಗಿರುವ ಸಹಾಯ, ಇನ್ನು ಮುಂದೆ ಆಗಬೇಕಾಗಿರುವ ಕಾರ್ಯ ಇವು ಇಲ್ಲಿ ಪ್ರಸ್ತಾಪಿತವಾಗಿರುವ ಸಂಗತಿಗಳು. ಇಲ್ಲೆಲ್ಲ ದೇವೀರಪ್ಪನವರು ನಮಗೆ ಗೊತ್ತಿರುವ ಸಂಗತಿಗಳಿಗೆ ಹೊಸ ಅಂಶಗಳನ್ನು ಸೇರಿಸುತ್ತಾ ಹೋಗುತ್ತಾರೆ. ಉದಾಹರಣೆಗೆ, ಹಿಂದೆ ಕನ್ನಡ ವಿದ್ವಾಂಸನಿಗೆ ಊರಿನ ಜನ ಮಾಡುತ್ತಿದ್ದ 'ಹಲಗೆ ಪೂಜೆ' ಎಂಬ ಗೌರವ, ಹಸ್ತಪ್ರತಿಯ ಬಿಡಿ ಹಾಳೆಗಳು ಜಾಸ್ತಿಯಿದ್ದಾಗ ಸರಿಯಾಗಿ ಕುಳಿತುಕೊಳ್ಳಲು ಅವುಗಳ ರಂಧ್ರಕ್ಕೆ 'ಕಂಬಿ' ಹೆಸರಿನ ಕಡ್ಡಿಯನ್ನು ಸಿಕ್ಕಿಸುತ್ತಿದ್ದುದು, ಹಸ್ತಪ್ರತಿಗಳನ್ನಿಡುತ್ತಿದ್ದ ಪೆಟ್ಟಿಗೆಗೆ 'ಅರಪೆಟ್ಟಿಗೆ' ಎಂಬ ಹೆಸರಿದ್ದುದು ಇತ್ಯಾದಿ.

ಮೊದಲ ಎರಡು ಅಧ್ಯಾಯಗಳಲ್ಲಿ ಲೇಖನ ಸಾಮಗ್ರಿಗಳ ಸಾರವತ್ತಾದ ಪರಿಚಯವಿದೆ. ಇಲ್ಲಿರುವ ಒಂದೆರಡು ಅಂಶಗಳ ಬಗ್ಗೆ ಭಿನ್ನಾಭಿಪ್ರಾಯ ಸಾಧ್ಯ. ಹರಿಹರನ 'ಕರುಣದ ಸುತ್ತಿನಂತೆ' ಎಂಬ ಮಾತಿನ ಆಧಾರದ ಮೇಲೆ ಕರ್ನಾಟಕದಲ್ಲಿ ಭೂರ್ಜ ಪತ್ರಗಳನ್ನು

ಬಳಸುತ್ತಿದ್ದಿರಬಹುದು ಎಂದು ಊಹೆ ಅನಗತ್ಯ. ಓಲೆಗರಿಗಳನ್ನು (ಹಸಿಯಿದ್ದಾಗ) ಸುತ್ತಲು ಸಾಧ್ಯ; ಅವನ್ನು ಸುತ್ತಿ ಬಳೆಗಳಿಗೆ ತೊಡಿಸಿ ಶುಭ ಪ್ರಸಂಗಗಳಲ್ಲಿ ದಾನಮಾಡುವ ಪದ್ಧತಿಯನ್ನು ನೆನೆಯಬಹುದು. ಪಂಪನ 'ಅಳಕ' ಶಬ್ದಕ್ಕೆ 'ಬರವಣಿಗೆ ಆಗದಿರುವ ತಾಳೆಯೋಲೆಯ ಗರಿ' ಎಂದರ್ಥವಲ್ಲ. 'ಅಲೇಖ' ಅಥವಾ ಬರವಣಿಗೆ ಮಾಡದಿರುವ ಯಾವುದೇ ಬರಹದ ಸಾಮಗ್ರಿ ಎಂದರ್ಥ. 'ಕಂಠ'ದ ಸರಿಯಾದ ರೂಪ 'ಕಂಟ' (ಮುಳ್ಳು).

ಹಸ್ತಪ್ರತಿಗಳಲ್ಲಿನ ವಿಷಯ (content) ವೈವಿಧ್ಯ ಲಿಪಿ ಭಾಷೆಗಳ ಸೊಗಸು, ರೇಖಾ ಮತ್ತು ವರ್ಣಚಿತ್ರಗಳ ಸೊಗಸು ಇವನ್ನು ಕುರಿತಾದ ಪ್ರತಿಪಾದನೆ ಮೌಲಿಕವಾಗಿದೆ. 'ಹಸ್ತಪ್ರತಿ ವರ್ಗೀಕರಣ'ದ ಅಧ್ಯಾಯ ಸಾಮಾನ್ಯವಾಗಿದೆ. ಲಿಪಿಕಾರನ ಹೆಸರು, ಲಿಪಿಸಿದ ಸ್ಥಳ, ಕಾಲ ಇವುಗಳಲ್ಲಿ ಮೂರೂ ಇರುವ ಪ್ರತಿ ಪ್ರಥಮ ದರ್ಜೆ, ಎರಡು ಇರುವ ಪ್ರತಿ ದ್ವಿತೀಯ ದರ್ಜೆ, ಒಂದೇ ಅಂಶವಿದ್ದರೆ ತೃತೀಯ ದರ್ಜೆ, ಏನೂ ಇಲ್ಲದವು ನಾಲ್ಕನೆಯ ದರ್ಜೆಯವು; "ಬೇರೆ ಮಾರ್ಗವೇ ಇಲ್ಲದಿದ್ದಾಗ ನಾಲ್ಕನೇ ವರ್ಗದ ಹಸ್ತಪ್ರತಿಗಳೇ ಗತಿ" ಎಂಬ ತೀರ್ಮಾನ ಒಪ್ಪುವುದು ಕಷ್ಟ. ಒಂದು ಪ್ರತಿಯ ಮೌಲ್ಯ ಅದರ ಪ್ರಾಮಾಣಿಕತೆಯನ್ನವಲಂಬಿಸಿದೆ. ಮೇಲಿನ ಎಲ್ಲ ವಿವರ ದೊರಕಿಯೂ ಒಂದು ಪ್ರತಿ ಅ-ಯೋಗ್ಯವಾಗಿರಲು ಸಾಧ್ಯ. 'ಪ್ರತಿಕಾರರ' ಪರಿಚಯದ ಭಾಗ ಸಮಗ್ರವಾಗಿದೆ. 'ಹಸ್ತಪ್ರತಿಗಳ ಅಳಿವು' ಭಾಗವನ್ನು ಓದಿದಾಗ, ನಮ್ಮ ನಾಡಿನ ಅಮೂಲ್ಯ ಸಂಪತ್ತಿಗೊದಗಿರುವ ಕಣ್ಣೀರಿನ ಹೃದಯವಿದ್ರಾವಕ ಕತೆಯ ಪರಿಚಯವಾಗುತ್ತದೆ. ಕರ್ನಲ್ ಮೆಕೆಂಜಿಯ ಬಗ್ಗೆ ಕೊಟ್ಟಿರುವ ವಿವರಗಳು ಬಹು ಉಪಯುಕ್ತವಾಗಿವೆ. ಹಸ್ತಪ್ರತಿಗಳ ಸಂಗ್ರಹದ ಬಗ್ಗೆ ಆಡಿರುವ ಕಳಕಳಿಯ ಮಾತುಗಳು ಮನನೀಯವಾಗಿವೆ.

ಒಟ್ಟಾರೆ ಇದೊಂದು ಎಚ್ಚರಿಕೆಯಿಂದ, ತುಂಬು ಭಾವನೆಯಿಂದ ಬರೆದ ಸರ್ವದೃಷ್ಟಿಗಳಿಂದಲೂ ಒಂದು ಉತ್ತಮವೆನ್ನಿಸಿಕೊಳ್ಳುವ ಗ್ರಂಥ. ಗ್ರಂಥ ಸಂಪಾದನೆಯನ್ನು ಕುರಿತಂತೆ ಕನ್ನಡದಲ್ಲಿ ಬಂದಿರುವ ಕೃತಿಗಳಲ್ಲಿ ಇದಕ್ಕೊಂದು ವಿಶೇಷ ಸ್ಥಾನವಿದೆ.

ಹೆಚ್.ಆರ್. ರಘುನಾಥ ಭಟ್ ಅವರ **ಕರ್ನಾಟಕ ಶಾಸನ ಕಲೆ,** ಹೆಸರೇ ಹೇಳುವಂತೆ ಕರ್ನಾಟಕದ ಶಾಸನಗಳಿಗೆ, ಕಲೆಗಳಿಗೆ ಸಂಬಂಧಿಸಿದ ಬೇರೆ ಬೇರೆ ಅಧ್ಯಯನಗಳನ್ನು ಒಳಗೊಂಡಿದೆ. ಒಟ್ಟು ಇಪ್ಪತ್ತೈದು ಸಂಪ್ರಬಂಧಗಳಿರುವ (Research papers) ಈ ಪುಸ್ತಕದಲ್ಲಿ ಎರಡು ಭಾಗಗಳಿವೆ: ಶಾಸನ (11 ಸಂಪ್ರಬಂಧಗಳು), ಕಲೆ (14 ಸಂಪ್ರಬಂಧಗಳು). ಶಾಸನ ವಿಭಾಗದಲ್ಲಿ ಶಾಸನ ಪರಿಚಯದಿಂದ ಹಿಡಿದು ಶಾಸನಗಳಲ್ಲಿ ಕಂಡುಬರುವ ಸ್ಥಳನಾಮಗಳ ಚರ್ಚೆ, ಶಾಸನಗಳಲ್ಲಿ ಚಿತ್ರಿತವಾಗಿರುವ ಬನವಾಸಿ ಇವೇ ಮೊದಲಾದ ಸಂಗತಿಗಳಿವೆ. "ಬನವಾಸಿಯ ಒಂದು ಅಪೂರ್ವ ಶಿಲ್ಪ-ಶಾಸನ"ದಂತಹ ವಿಶೇಷ ಗಮನಾರ್ಹ ಲೇಖನವು ಈ ಭಾಗದಲ್ಲಿದೆ. ಒಂದು ಕಂಬಕ್ಕೆ ಕಟ್ಟಿ ಹಾಕಿರುವ ಸಾಮಂತನೊಬ್ಬನ ಶಿಲ್ಪ ನಿಜವಾಗಿಯೂ ವಿಶಿಷ್ಟವಾದುದು. ಬನವಾಸಿಯ ಬಗ್ಗೆ ವಿಶೇಷ ಅಧ್ಯಯನ ನಡೆಸಿರುವ ಭಟ್ಟರು ಆ ಸಾಂಸ್ಕೃತಿಕ ಕೇಂದ್ರದ ವಿಷಯದಲ್ಲಿ ಅನೇಕ ಹೊಸ

ಸಂಗತಿಗಳನ್ನು ಕಂಡು ಹಿಡಿದು ನಮ್ಮ ಜ್ಞಾನವನ್ನು ಹೆಚ್ಚಿಸಿದ್ದಾರೆ. "ಕಲೆ" ವಿಭಾಗದಲ್ಲಿ ಶಾತವಾಹನರ, ಕಲ್ಯಾಣ ಚಾಲುಕ್ಯರ, ಹೊಯ್ಸಳರ ಕಲೆಯ ಬಗ್ಗೆ, ಕೆಲವು ಬಿಡಿ ದೇವಾಲಯ ಶಿಲ್ಪಗಳ ಬಗ್ಗೆ ಧವಳ ಗ್ರಂಥಗಳಲ್ಲಿನ ಚಿತ್ರಗಳ ಬಗ್ಗೆ ಬರಹಗಳಿವೆ. 'ಬಳ್ಳಿಗಾವೆ - ಒಂದು ಸಾಂಸ್ಕೃತಿಕ ಅಧ್ಯಯನ' ಎಂಬ ಒಂದು ಅತ್ಯಂತ ಉಪಯುಕ್ತ ಸಂಪ್ರಬಂಧವೂ ಇಲ್ಲಿದೆ. ಉತ್ತರ ಕನ್ನಡ ಜಿಲ್ಲೆಯಲ್ಲಿ ದೊರಕುವ ಮಣ್ಣಿನ ವಿಗ್ರಹಗಳ ಬಗ್ಗೆ ಬರೆದು ಅವುಗಳನ್ನು ಕುರಿತಂತೆ ಹೆಚ್ಚಿನ ಅಭ್ಯಾಸ ನಡೆಯಲು ಪ್ರಚೋದನೆ ನೀಡಿದ್ದಾರೆ. ತಮ್ಮ ಭೂಶೋಧನೆಯ ಫಲವಾಗಿ ದೊರೆತ ಅನೇಕ ಅವಶೇಷಗಳ ಪರಿಚಯ ಮಾಡಿಕೊಟ್ಟಿದ್ದಾರೆ. ನಲವತ್ತಕ್ಕೆ ಮೇಲ್ಪಟ್ಟಿರುವ ಚಿತ್ರಗಳು ರೇಖಾಚಿತ್ರಗಳು ಪುಸ್ತಕಕ್ಕೆ ಒಂದು ಶೋಭೆಯನ್ನೂ ಬೆಲೆಯನ್ನೂ ತಂದುಕೊಟ್ಟಿವೆ.

ಇಲ್ಲಿನ ಬರಹಗಳಲ್ಲಿ ಒಂದೊಂದರಲ್ಲೂ ಒಬ್ಬ ನಿಷ್ಠಾವಂತ ಸಂಶೋಧಕನ ಪರಿಚಯವಾಗುತ್ತದೆ. ಪ್ರತಿಯೊಂದು ಬಾರಿಯೂ, ಆಯಾ ವಿಷಯಕ್ಕೆ ಸಂಬಂಧಿಸಿದಂತೆ ನಡೆದಿರುವ ಪೂರ್ವವಿದ್ವಾಂಸರ ಕಾರ್ಯವನ್ನು ಸ್ಮರಿಸಿ ಅಲ್ಲಿಂದ ಮುಂದೆ ಹೊರಡುತ್ತಾರೆ. ಮತ್ತು ಆ ಕ್ಷೇತ್ರಕ್ಕೆ ತಮ್ಮ ಕೊಡುಗೆಯೇನೆಂಬುದು ಓದುಗರಿಗೆ ಶ್ರುತಪಡುವಂತೆ ಸೂಚಿಸುತ್ತಾರೆ. ಅಡಿಟಿಪ್ಪಣೆಗಳನ್ನು ಕೊಡುವ ರೀತಿ, ಉಲ್ಲೇಖಗಳನ್ನು ಬಳಸಿಕೊಂಡಿರುವ ವಿಧಾನ, ನಿರೂಪಣೆಯಲ್ಲಿ ಬಳಸಿರುವ ಭಾಷೆ, ಕೊನೆಗೆ ಅಚ್ಚಿನ ತಪ್ಪುಗಳಿಲ್ಲದಂತೆ ಪುಸ್ತಕವನ್ನು ಪ್ರಕಟಪಡಿಸಿರುವುದು ಇದನ್ನೊಂದು ಮೌಲಿಕ ಪ್ರಕಟಣೆಯಾಗಿಸಿವೆ. ನಾಡಿನ ಶಾಸನ, ಕಲೆಗಳಲ್ಲಿ ಆಸಕ್ತರಾಗಿರುವವರೆಲ್ಲರೂ ಆದರದಿಂದ ಸ್ವಾಗತಿಸಬೇಕಾದ ಗ್ರಂಥ ಇದು.

**ಎಪಿಗ್ರಾಫಿಯ ಕರ್ನಾಟಿಕ : (ಸಂಪುಟ ಆರು)** ಆ ಹೆಸರಿನ ಬೇರೆ ಬೇರೆ ಸಂಪುಟಗಳ ಪರಿಷ್ಕರಣ, ಪುನರ್ ಮುದ್ರಣ ಕಾರ್ಯಕ್ರಮದ ಅಂಗವಾಗಿ ಬಂದಿರುವ ಆರನೆಯ ಸಂಪುಟ. ಈ ಸಂಪುಟದ ಒಟ್ಟು ಯೋಜನೆ ಹಿಂದಿನ ಎಲ್ಲ ಸಂಪುಟಗಳಂತೆಯೇ ಇದೆ (ವಿವರಗಳಿಗೆ ಅನುಬಂಧವನ್ನು ನೋಡಿ). ಮಂಡ್ಯಜಿಲ್ಲೆಯ ಶಾಸನಗಳನ್ನೊಳಗೊಂಡ ಎರಡು ಸಂಪುಟಗಳಲ್ಲಿ ಇದು ಮೊದಲನೆಯದು (ಎಂದರೆ, ಏಳನೆಯ ಸಂಪುಟದಲ್ಲೂ ಮಂಡ್ಯಜಿಲ್ಲೆಯ ಶಾಸನಗಳೇ ಇರುತ್ತವೆ). ಈ ಆರನೆಯ ಸಂಪುಟದಲ್ಲಿ ಕೃಷ್ಣರಾಜಪೇಟೆ, ಪಾಂಡವಪುರ, ಶ್ರೀರಂಗಪಟ್ಟಣ ತಾಲೂಕಿನ ಒಟ್ಟು 499 ಶಾಸನಗಳಿವೆ. ಇವುಗಳಲ್ಲಿ ಹಿಂದೆ ಪ್ರಕಟವಾಗದಿದ್ದ 68 ಶಾಸನಗಳು ಸಮಾವೇಶಗೊಂಡಿವೆ.

ಪೀಠಿಕೆಯಲ್ಲಿ ಇಲ್ಲಿ ಬಂದಿರುವ ಶಾಸನಗಳಲ್ಲಿ ಉಕ್ತವಾಗಿರುವ ರಾಜವಂಶಗಳ ಚರ್ಚೆಯಿದೆ. ಮತ್ತು ಅಲ್ಲೇ ಪ್ರಮುಖ ಶಾಸನಗಳ ತೇದಿ, ರಾಜಕೀಯ ಮತ್ತು ಇತರೆ ಮಹತ್ವವನ್ನೂ ಪ್ರಸ್ತಾಪಿಸಲಾಗಿದೆ. "ಸಾಮಾಜಿಕ - ಆರ್ಥಿಕ" ಮಹತ್ವವನ್ನು ಕುರಿತಂತೆ ತಕ್ಕಮಟ್ಟಿನ ವಿವರಗಳೂ ಇಲ್ಲಿವೆ. ರೈಸ್ ಅವರು ಬರೆದ ಪೀಠಿಕೆಗಳಲ್ಲಿ ರಾಜಕೀಯ ಅಂಶಗಳಿಗೆ ಮಹತ್ವವಿರುತ್ತಿತ್ತು. (ಎಪಿಗ್ರಾಫಿಯ ಕರ್ನಾಟಿಕ - ಎಕ. - ಸಂಪುಟಗಳಿಗೆ ರೈಸ್ ಅವರು ಬರೆದ ಪೀಠಿಕೆಗಳನ್ನು ಸದ್ಯಕ್ಕೆ ಕೈ ಬಿಟ್ಟಿದ್ದರೂ ಮುಂದೆ ಅವನ್ನು ಪ್ರತ್ಯೇಕ ಸಂಪುಟವಾಗಿ

ಹೊರತರುವ ಯೋಜನೆ ಇಟ್ಟುಕೊಂಡಿದ್ದಾರೆ). ಪರಿಷ್ಕೃತ ಎಕ. ಸಂಪುಟಗಳು ರಾಜಕೀಯೇತರ ಸಂಗತಿಗಳಿಗೂ ಮಹತ್ವ ಕೊಟ್ಟಿರುವುದು, ಒಂದು ನಾಡಿನ ಇತಿಹಾಸವೆಂದರೆ ನಿಜವಾಗಿ ಅದರ ಜನತೆಯ ಇತಿಹಾಸವೇ ಹೊರತು ಕೇವಲ ಅದನ್ನು ಆಳಿದ ದೊರೆಗಳ ಚರಿತ್ರೆ ಅಲ್ಲ ಎಂಬ ಸಂಗತಿಯನ್ನು ಮನಗಂಡಿರುವುದರ ಶುಭಸೂಚಕ. 'ಛಂದಸ್ಸು' ಭಾಗದಲ್ಲಿ ಈ ಸಂಪುಟದಲ್ಲಿ ಸಮಾವೇಶಗೊಂಡಿರುವ ಪ್ರಮುಖ ವೃತ್ತಗಳ ಉಲ್ಲೇಖವಿದೆ (ಪದ್ಯಜಾತಿಯನ್ನು ಶಾಸನ ಪಾಠದ ಕೆಳಗೆ ಉಲ್ಲೇಖಿಸಲಾಗಿರುತ್ತದೆ). ರಾಜಕೀಯ, ಸಾಂಸ್ಕೃತಿಕ, ಛಂದಸ್ಸಿನ ಚರಿತ್ರೆ ಬರೆಯುವವರು ಪೀಠಿಕೆಯ ಭಾಗವನ್ನು ಉಪಯೋಗಿಸಿಕೊಂಡು ಎಷ್ಟೋ ಹೊಸ ಸಂಗತಿಗಳನ್ನೂ ಹೊಸ ಉದಾಹರಣೆಗಳನ್ನೂ ಕಂಡುಕೊಳ್ಳಬಹುದು.

ಇಲ್ಲಿ ಬಂದಿರುವ ಶಾಸನಗಳ ಮಹತ್ವವನ್ನು ಕುರಿತು ಚರ್ಚಿಸಬೇಕಿಲ್ಲ. ಆದರೆ ಈ ಮತ್ತು ಇತರ ಸಂಪುಟಗಳ ಮಹತ್ವವನ್ನು ಕುರಿತು ಹೇಳಲೇಬೇಕು. ಪೀಠಿಕೆ, ಶಾಸನಗಳ ಪಾಠ, ಅನುವಾದ, ಪದಸೂಚಿ ಇವೆಲ್ಲವನ್ನೂ ಸಿದ್ಧಪಡಿಸಲು ತೆಗೆದುಕೊಂಡಿರುವ ಎಚ್ಚರ ನಮ್ಮ ಅಪಾರ ಮೆಚ್ಚುಗೆಯನ್ನು ಗಳಿಸುತ್ತದೆ. ಎಲ್ಲ ಸಂಪುಟಗಳನ್ನೂ ಕನ್ನಡ ಬಾರದ, ಆದರೆ ಕರ್ನಾಟಕದ ಇತಿಹಾಸದಲ್ಲಿ ಆಸಕ್ತರಾಗಿರುವ ಇತರರನ್ನೂ ಗಮನದಲ್ಲಿಟ್ಟುಕೊಂಡು ಸಿದ್ಧಪಡಿಸಲಾಗಿದೆ. ಉದಾಹರಣೆಗೆ ಪೀಠಿಕೆಯು ಇಂಗ್ಲೀಷ್ ಕನ್ನಡಗಳೆರಡರಲ್ಲೂ ಇದೆ. ಎಲ್ಲ ಶಾಸನಗಳಿಗೂ ಇಂಗ್ಲಿಷ್ ಅನುವಾದವಿದೆ. ಕನ್ನಡೇತರ ಶಾಸನಗಳಿಗೆ ರೋಮನ್ ಲಿಪ್ಯಂತರವಿದೆ (ಕನ್ನಡ ಬಲ್ಲವರಿಗೆ ಕನ್ನಡ ಲಿಪಿಯೂ ಗೊತ್ತಿರುತ್ತದೆಯಾದ್ದರಿಂದ ಕನ್ನಡ ಶಾಸನಗಳಿಗೆ ರೋಮನ್ ಲಿಪ್ಯಂತರವಿಲ್ಲ). ಕರ್ನಾಟಕದಲ್ಲಿರುವ ಸಂಸ್ಕೃತ, ತಮಿಳು, ಅರೇಬಿಕ್ ಮುಂತಾದ ಭಾಷೆಗಳ ಶಾಸನಗಳನ್ನು ಆಯಾ ಜನ ಈ ಲಿಪ್ಯಂತರದ ಸಹಾಯದಿಂದ ಓದಿಕೊಳ್ಳಬಹುದು. ಪದಸೂಚಿಯು ಕನ್ನಡ, ಇಂಗ್ಲೀಷ್ ಎರಡರಲ್ಲೂ ಇದೆ. ಹೀಗಾಗಿ ಈ ಸಂಪುಟಗಳು ಅಂತಾರರಾಷ್ಟ್ರೀಯ ಮಟ್ಟದಲ್ಲೂ ಉಪಯುಕ್ತವಾಗುತ್ತವೆ ಮತ್ತು ಕರ್ನಾಟಕದ ಹೊರಗಿನ ಪುಸ್ತಕಭಂಡಾರಗಳಲ್ಲೂ ಇಡಲು ಯೋಗ್ಯವಾಗುತ್ತವೆ. ಈ ಸಂಪುಟಗಳು ಹೊರಬರಲು ಧನಸಹಾಯ ಮಾಡಿದ ಕರ್ನಾಟಕ ಸರ್ಕಾರ, ಈ ಕೆಲಸವನ್ನು ಕೈಗೆತ್ತಿಕೊಂಡ ಮೈಸೂರು ವಿಶ್ವವಿದ್ಯಾಲಯ ಎರಡೂ ಒಂದು ಶಾಶ್ವತವಾಗಿ ನಿಲ್ಲುವ ಕಾರ್ಯವನ್ನು ಮಾಡಿ ಕೃತಕೃತ್ಯವಾಗಿವೆ. ಈ ಬಗ್ಗೆ, ಸಲಹಾಸಮಿತಿಯ ಅಧ್ಯಕ್ಷರಾದ ಡಾ. ಹಾ.ಮಾ. ನಾಯಕ ಮತ್ತು ಸಂಪಾದಕ ವರ್ಗದ ಶಾಸನತಜ್ಞ ಡಾ. ಬಾ.ರಾ. ಗೋಪಾಲ ಅವರ ಸೇವೆಯನ್ನು ವಿಶೇಷವಾಗಿ ಸ್ಮರಿಸಬೇಕಾಗುತ್ತದೆ.

**ಅನುಬಂಧ 1**

**ಗ್ರಾಮೀಣ** ಎಂಬುದು ಡಾ. ಎಂ. ಚಿದಾನಂದಮೂರ್ತಿಯವರ ಹತ್ತೊಂಬತ್ತು ಸಂಪ್ರಬಂಧಗಳ ಸಂಕಲನ. ಇವುಗಳಲ್ಲಿ ಮೂರು ಸಂಪ್ರಬಂಧಗಳು ಹಿಂದಿನ 'ಸಂಶೋಧನ ತರಂಗ' ಸಂಕಲನಗಳಲ್ಲಿ ಪ್ರಕಟವಾಗಿದ್ದುವು. ಒಂಬತ್ತು ಸಂಪ್ರಬಂಧಗಳು ಬೇರೆ ಬೇರೆ ಪ್ರೌಢ ಮತ್ತು ಜನಪ್ರಿಯ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದುವು. ಏಳು ಸಂಪ್ರಬಂಧಗಳು ಇದೇ ಮೊದಲು ಪ್ರಕಟವಾಗುತ್ತಿವೆ. ಇದು ಇನ್ನು ಮೇಲೆ ತಮ್ಮ ಸಂಪ್ರಬಂಧಗಳನ್ನು

ವಿಷಯಾನುಗುಣವಾಗಿ ಬೇರೆ ಬೇರೆ ಸಂಕಲನಗಳಲ್ಲಿ ತರುವ ಅವರ ಯೋಜನೆಯ ಮೊದಲ ಹೆಜ್ಜೆ. ಇಲ್ಲಿಯ ಸಂಪ್ರಬಂಧಗಳೆಲ್ಲವೂ ಒಂದಲ್ಲ ಒಂದು ರೀತಿಯಲ್ಲಿ ಗ್ರಾಮ ಜೀವನಕ್ಕೆ ಸಂಬಂಧಿಸಿರುವುದರಿಂದ ಈ ಸಂಕಲನಕ್ಕೆ "ಗ್ರಾಮೀಣ" ಎಂದು ನಾಮಕರಣ ಮಾಡಿದ್ದಾರೆ.

ಇದರಲ್ಲಿ 'ಪಗರಣ' ಅಥವಾ 'ಹಗರಣ' ಎಂಬ ಜಾನಪದದ ಕಲೆಯ ಇತಿಹಾಸ ಮತ್ತು ಇಂದಿನ ಚಿತ್ರಣವಿರುವ ಒಂದು ಸಂಪ್ರಬಂಧವಿದೆ. ಗಮಕದ ಇತಿಹಾಸದ ಬಗ್ಗೆ ಒಂದು ಸಂಪ್ರಬಂಧವಿದೆ. 'ಐಸೋರು ಮತ್ತು ಕಾಲಿಲ್ಲದ ಐಸೋರು' ಎಂಬಲ್ಲಿ ಕುರುಬ ಜನಾಂಗದಲ್ಲಿ ಹೇಗೆ ಪಾವಿತ್ರ್ಯವನ್ನು ವ್ಯಕ್ತಿ ತನ್ನಿಂದ ಅಚೇತನ ವಸ್ತುವಿಗೆ ಹರಿಯಿಸಿ ತನಗೆ ಇರುವ ಧಾರ್ಮಿಕ ಸ್ಥಾನಮಾನಗಳು ಆ ವಸ್ತುವಿಗೂ ಪ್ರಾಪ್ತವಾಗುವಂತೆ ಮಾಡಬಲ್ಲನೆಂಬ ವಿಲಕ್ಷಣ ಸಂಗತಿಯಿದೆ. 'ಶೂಲದ ಹಬ್ಬ' ದಲ್ಲಿ ಆ ಹೆಸರಿನ ಹಬ್ಬದ ಒಂದು ವರದಿ ಮಾತ್ರವಲ್ಲದೆ, ರಾಮನಾಥ ಚರಿತೆಯಲ್ಲಿ ಬರುವ ಅದೇ ಹೆಸರಿನ ಹಬ್ಬವನ್ನು ಅರ್ಥಮಾಡಿಕೊಳ್ಳಲು ಅದು ಸಹಾಯಕವಾಗಿರುವುದನ್ನು ವಿವರಿಸಿದೆ. 'ದೇವದಾಸಿ' ಮತ್ತು 'ಬಸವಿ' ಪದ್ಧತಿಗಳಿಗಿರುವ ವ್ಯತ್ಯಾಸ ಇಲ್ಲಿನ ಎರಡು ಸಂಪ್ರಬಂಧಗಳಿಂದ ಸ್ಪಷ್ಟವಾಗುತ್ತದೆ. ಇಂದಿನ ಹಳ್ಳಿಗಳಲ್ಲಿ ನಡೆದಿರುವ ಆಧುನೀಕರಣ ಒಂದು ಸಂಪ್ರಬಂಧದ ವಸ್ತು. ಮಾಸ್ತಿ ಗುಡಿಗಳಿಗೆ ಸಂಬಂಧಿಸಿದ ಜಾನಪದ ಸಾಮಗ್ರಿಯಲ್ಲಿ ಹಿಂದಿನ ಇತಿಹಾಸ ಸುರಕ್ಷಿತವಾಗಿ ಉಳಿದುಬಂದಿರುವ ಅಂಶ ಒಂದು ಸಂಪ್ರಬಂಧದಲ್ಲಿ ಮೂಡಿ ಬಂದಿದೆ. ಬಳೆ, ಕುಂಕುಮ, ಓಲೆ, ತಾಳಿ ಮುಂತಾದ ಸೌಭಾಗ್ಯದ ಸಂಕೇತಗಳ ಇತಿಹಾಸ ಮತ್ತು ಹರಹು ಒಂದು ಬರಹದಲ್ಲಿದೆ. ಗಾದೆಗಳ ರಾಚನಿಕ ವಿಶ್ಲೇಷಣೆ ಮಾಡುತ್ತ ಅವುಗಳ ಸ್ವಾರಸ್ಯವಿರುವುದು ಅವುಗಳ ಬಂಧವಲ್ಲಿ ಎಂಬುದನ್ನು ಒಂದು ಸಂಪ್ರಬಂಧದಲ್ಲಿ ಸ್ಪಷ್ಟಗೊಳಿಸಿದ್ದಾರೆ. 'ಕರಪಲ್ಲ' ಎಂಬ ಒಂದು ಚಮತ್ಕಾರದ ವಿದ್ಯೆಯ ಪರಿಚಯ ಒಂದು ಕಡೆ ಬಂದಿದೆ. ಜನಪದ ಕತೆ, ಐತಿಹ್ಯ ಮತ್ತು ಪುರಾಣಗಳಿಗಿರುವ ಮೂಲಭೂತ ವ್ಯತ್ಯಾಸಗಳನ್ನು ಒಂದು ಸಂಪ್ರಬಂಧ ಸ್ಪಷ್ಟಪಡಿಸುತ್ತದೆ. ಇಲ್ಲಿರುವ ಹತ್ತೊಂಬತ್ತು ಸಂಪ್ರಬಂಧಗಳು ಅನೇಕ ಸಂಗತಿಗಳ ಮೇಲೆ ಬೆಳಕು ಚೆಲ್ಲುವುದಲ್ಲದೆ, ಹೆಚ್ಚಿನ ಸಂಶೋಧನೆಗೆ ಸಾಮಗ್ರಿಯನ್ನೂ ಒಳಗೊಂಡಿವೆ.

**ಅನುಬಂಧ 2**

ಹಿಂದಿನ ಬೇರೆ ಬೇರೆ ಸಾಹಿತ್ಯ ವಾರ್ಷಿಕಗಳಲ್ಲಿ **ಎಪಿಗ್ರಾಫಿಯ ಕರ್ನಾಟಿಕ**ದ ಬೇರೆ ಬೇರೆ ಸಂಪುಟಗಳ ಪರಿಶೀಲನೆ ನಡೆಯಬೇಕಾಗಿದ್ದು, ಕಾರಣಾಂತರಗಳಿಂದ ತಪ್ಪಿಹೋಗಿತ್ತು ಎಂಬುದನ್ನು ವಿಷಾದದಿಂದ ಹೇಳಬೇಕಾಗಿದೆ. ಕರ್ನಾಟಕ ಇತಿಹಾಸ, ಕನ್ನಡ ಭಾಷೆಗಳಿಗೆ ಸಂಬಂಧಿಸಿದ ಮಹತ್ವದ ಪ್ರಕಟಣೆಗಳಾದ ಈ ಹಿಂದಿನ ಐದು ಸಂಪುಟಗಳನ್ನು ಒಟ್ಟಾರೆ ಇಲ್ಲಿ ಪರಿಶೀಲಿಸಲಾಗಿದೆ.

ಎಪಿಗ್ರಾಫಿಯ ಕರ್ನಾಟಿಕ ಸಂಪುಟಗಳಿಗೆ ಒಂದು ಐತಿಹಾಸಿಕ ಮಹತ್ವವಿದೆ. ಪ್ರಸ್ತುತ ಸಂಪುಟಗಳ ಸಲಹಾಸಮಿತಿಯ ಅಧ್ಯಕ್ಷರಾದ ಡಾ. ಹಾ.ಮಾ. ನಾಯಕರ ಮಾತಿನಲ್ಲಿ ಹೇಳಬೇಕಾದರೆ - " (ರೈಸ್ ಅವರು) 1884ರಲ್ಲಿ ಮೈಸೂರಿನಲ್ಲಿ ಪುರಾತತ್ವ ಇಲಾಖೆ

ಸ್ಥಾಪಿತವಾದಾಗ ಅದರ ಒಪ್ಪೊತ್ತಿನ ನಿರ್ದೇಶಕರಾಗಿ ಮೈಸೂರು ರಾಜ್ಯದ ಎಂಟು ಜಿಲ್ಲೆಗಳಲ್ಲಿ ಮತ್ತು ಆಗ ಪ್ರತ್ಯೇಕ ರಾಜ್ಯವಾಗಿದ್ದ ಕೊಡಗಿನಲ್ಲಿ 8869 ಶಾಸನಗಳನ್ನು ಸಂಗ್ರಹಿಸಿದರು. ಈ ಶಾಸನಗಳನ್ನೆಲ್ಲ ಲಿಪ್ಯಂತರ ಭಾಷಾಂತರಗಳೊಡನೆ 'ಎಪಿಗ್ರಾಫಿಯ ಕರ್ನಾಟಿಕ' ಮಾಲೆಯಲ್ಲಿ ಪ್ರಕಟಿಸಿದರು. ಹನ್ನೆರಡು ಸಂಪುಟಗಳ ಈ ಮಾಲೆಯ ಯೋಜನೆಯಂತೆ ಸಾಮಾನ್ಯವಾಗಿ ಒಂದು ಜಿಲ್ಲೆಯ ಶಾಸನಗಳು ಒಂದು ಸಂಪುಟದಲ್ಲಿ ಸೇರಿದ್ದವು. ಶ್ರವಣಬೆಳಗೊಳದ ಶಾಸನಗಳಿಗಾಗಿಯೇ ಒಂದು ಸಂಪುಟ (2) ಮೀಸಲಾಯಿತು. ಇಂದಿನ ಮಂಡ್ಯ ಜಿಲ್ಲೆಯನ್ನೊಳಗೊಂಡ ಇಂದಿನ ಮೈಸೂರು ಹಾಗೂ ಶಿವಮೊಗ್ಗ ಜಿಲ್ಲೆಯ ಶಾಸನಗಳು ಎರಡೆರಡು ಸಂಪುಟಗಳಲ್ಲಿ (3-4 ಮತ್ತು 7-8) ಪ್ರಕಟವಾದವು. ರೈಸರ ನಂತರ ಅಧಿಕಾರಕ್ಕೆ ಬಂದ ಆರ್. ನರಸಿಂಹಾಚಾರ್ಯರು ತಮ್ಮ 16 ವರ್ಷಗಳ ಅಧಿಕಾರಾವಧಿಯಲ್ಲಿ ಸುಮಾರು 5000 ಶಾಸನಗಳನ್ನು ಕಂಡುಹಿಡಿದರು. ಇವುಗಳಲ್ಲಿ ಮುಖ್ಯವಾದವನ್ನೆಲ್ಲ ತಮ್ಮ ವಾರ್ಷಿಕ ವರದಿಗಳಲ್ಲಿ ಪ್ರಕಟಿಸುತ್ತಾ ಬಂದರು. 'ಎಫಿಗ್ರಾಫಿಯ ಕರ್ನಾಟಿಕ' ಮಾಲೆಯ ಎರಡನೆಯ ಸಂಪುಟವನ್ನು (ಶ್ರವಣಬೆಳಗೊಳ) ಅವರು ಆಮೂಲಾಗ್ರವಾಗಿ ಪರಿಷ್ಕರಿಸಿ 1923ರಲ್ಲಿ ಹೊಸ ಆವೃತ್ತಿಯನ್ನು ಪ್ರಕಟಿಸಿದರು". ಆ ಹನ್ನೆರಡು ಸಂಪುಟಗಳು ಕರ್ನಾಟಕ ಇತಿಹಾಸ, ಭಾಷಾಚರಿತ್ರೆ, ಸಾಂಸ್ಕೃತಿಕ ಚರಿತ್ರೆಗಳನ್ನು ಕುರಿತು ವಿಚಾರಮಾಡುವವರಿಗೆ ಅತ್ಯಮೂಲ್ಯ ಆಕರಗಳಾಗಿವೆ. ಅವುಗಳನ್ನೂ ರೈಸರ ಬಳಿಕ ಬಂದ ಅದೇ ಮಾಲೆಯ ಇತರ ಸಂಪುಟಗಳನ್ನೂ ಇನ್ನು ಬೇರೆಡೆ ಪ್ರಕಟವಾಗಿರುವ ಶಾಸನಗಳನ್ನೂ ಆಧರಿಸಿ ಬಂದಿರುವ ಲೇಖನಗಳ, ಪುಸ್ತಕಗಳ ಗ್ರಂಥಗಳ ಸಂಖ್ಯೆ ಸಾಕಷ್ಟು ದೊಡ್ಡದು. ಕರ್ನಾಟಕದ ಶಾಸನ ಶಾಸ್ತ್ರದ ಇತಿಹಾಸದಲ್ಲಿ ರೈಸರಿಗೆ ಒಂದು ಚಿರಂತನಸ್ಥಾನವನ್ನು ದೊರಕಿಸಿಕೊಟ್ಟ ಮೇಲಿನ ಸಂಪುಟಗಳು ಕಳೆದ ಎಷ್ಟೋ ವರ್ಷಗಳಲ್ಲಿ ಓದುಗರಿಗೆ ಅಲಭ್ಯವಾಗಿದ್ದು, ಪುಸ್ತಕ ಭಂಡಾರಗಳಲ್ಲಿ ಬಳಸಿ ಬಳಸಿ ಜೀರ್ಣವಾಗಿ ಹೋಗಿದ್ದ ಆ ಹಳೆಯ ಸಂಪುಟಗಳನ್ನೇ ಅವರು ಅವಲಂಬಿಸಬೇಕಾಗಿತ್ತು. ಅವುಗಳನ್ನು ಸಾಧ್ಯವಾದೆಡೆ ಪರಿಷ್ಕರಿಸಿ ಪುನರ್ಮುದ್ರಿಸುವ ಒಂದು ಯೋಜನೆಯನ್ನು ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯು 1970ರಲ್ಲಿ ಹಾಕಿಕೊಂಡು, ಅದರ ಪ್ರಕಾರ ಇಲ್ಲಿಯವರೆಗೆ ಒಟ್ಟು ಆರು ಸಂಪುಟಗಳನ್ನು ಹೊರತಂದಿದೆ. ಮೊದಲನೆಯ ಸಂಪುಟದಲ್ಲಿ ಕೊಡಗು ಜಿಲ್ಲೆಯ ಶಾಸನಗಳು (1972), ಎರಡನೆಯ ಸಂಪುಟದಲ್ಲಿ ಶ್ರವಣಬೆಳ್ಗೊಳದ ಶಾಸನಗಳು (1973), ಮೂರು ನಾಲ್ಕು ಐದನೆಯ ಸಂಪುಟಗಳಲ್ಲಿ ಮೈಸೂರು ಜಿಲ್ಲೆಯ ಶಾಸನಗಳು (1974, 1975, 1976) ಪ್ರಕಟವಾಗಿವೆ (ಆಯಾ ಸಂಪುಟದ ಹೊರಕವಚದ ಮೇಲೆ, ಬೆನ್ನಿನ ಮೇಲೆ ಆಯಾ ಜಿಲ್ಲೆಯ ಹೆಸರಿದ್ದಿದ್ದರೆ ಓದುಗರ ದೃಷ್ಟಿಯಿಂದ ಅನುಕೂಲವಾಗುತ್ತಿತ್ತೆಂದು ಕಾಣುತ್ತದೆ). ಪರಿಷ್ಕೃತ ಮುದ್ರಣದಂತಹ ಜವಾಬ್ದಾರಿಯ ಕಾರ್ಯವನ್ನು ಇಷ್ಟು ಕ್ಷಿಪ್ರಗತಿಯಲ್ಲಿ ಸಮರ್ಪಕವಾಗಿ ಸಾಗಿಸುತ್ತಿರುವುದು ಅಭಿನಂದನೀಯ.

ಪುನರ್ಮುದ್ರಣ ಕಾರ್ಯವನ್ನು ಕೈಗೊಳ್ಳುವ ಮುನ್ನ ಸಲಹಾ ಸಮಿತಿ ಕೈಗೊಂಡ ನಿರ್ಧಾರಗಳಿವು. ಕನ್ನಡ ಶಾಸನಗಳ ಮೂಲ ಪಾಠವನ್ನು ಬಳಸಿಕೊಳ್ಳುವವರಿಗೆ ಕನ್ನಡ ಲಿಪಿ

ಸಹಜವಾಗಿ ಗೊತ್ತಿರುತ್ತದೆಯಾದ್ದರಿಂದ ಆ ಶಾಸನಗಳ ರೋಮನ್ ಲಿಪ್ಯಂತರವನ್ನು ಕೊಡುವುದು ಅನಗತ್ಯ. ಆದರೆ, ಕನ್ನಡೇತರರು ಕನ್ನಡ ಶಾಸನಗಳ ಇಂಗ್ಲೀಷ್ ಅನುವಾದವನ್ನು ಖಂಡಿತ ಬಳಸಿಕೊಳ್ಳುತ್ತಾರಾದ್ದರಿಂದ ಆ ಶಾಸನಗಳಿಗೆ ಇಂಗ್ಲೀಷ್ ಅನುವಾದವಿದ್ದರೆ ಸಾಕು. ಕನ್ನಡೇತರ ಶಾಸನಗಳನ್ನು - ಉದಾಹರಣೆಗೆ ತಮಿಳು, ಸಂಸ್ಕೃತ ಇತ್ಯಾದಿ - ಕನ್ನಡ ಲಿಪಿಯಲ್ಲಿಯೂ ಕೊಡಬೇಕು, ರೋಮನ್ ಲಿಪಿಯಲ್ಲಿಯೂ ಕೊಡಬೇಕು. ಎಲ್ಲ ಶಾಸನಗಳಿಗೂ ಆರಂಭದಲ್ಲಿ ಇಂಗ್ಲೀಷಿನಲ್ಲಿ ಒಂದು ಚಿಕ್ಕ ಪೀಠಿಕೆ (ತೇದಿ, ರಾಜನ ಹೆಸರು, ಶಾಸನ ಪ್ರಭೇದ, ಇನ್ನೇನಾದರೂ ವಿಶೇಷಾಂಶ) ಇರಬೇಕು. ಉಪಯುಕ್ತ ಪದಸೂಚಿಗಳು ಅನುಬಂಧವಾಗಿ ಕೊನೆಯಲ್ಲಿ ಬರತಕ್ಕದ್ದು. ರೈಸ್ ಅವರು ಆಯಾ ಸಂಪುಟಕ್ಕೆ ಬರೆದ ಮುನ್ನುಡಿಗಳ ಭಾಗಗಳು ಉಪಯುಕ್ತವಾಗಿದ್ದರೂ ಇಂದಿನ ಕಾಲಕ್ಕೆ ಅಲ್ಲಿನ ಕೆಲವು ಚರ್ಚೆಗಳು ಅಸಮರ್ಪಕವಾಗಿಬಿಡುವ ಸಾಧ್ಯತೆಗಳಿರುವುದರಿಂದ ಅವನ್ನು ಸದ್ಯಕ್ಕೆ ಕೈ ಬಿಟ್ಟು ಸಂಪಾದಕರು ಹೊಸದಾಗಿ ಬರೆದ ಪೀಠಿಕೆಯನ್ನು ಆರಂಭದಲ್ಲಿ ಸೇರಿಸಬೇಕು. (ರೈಸರು ಬರೆದ ಪೀಠಿಕೆಗಳೇ ಮುಂದೆ ಒಂದು ಪ್ರತ್ಯೇಕ ಪುಸ್ತಕವಾಗಿ ಬರಬಹುದು). ಆಯಾ ಜಿಲ್ಲೆಯ ಶಾಸನಗಳು ಬೇರೆ ಬೇರೆ ವರದಿಗಳಲ್ಲಿ ಪತ್ರಿಕೆಗಳಲ್ಲಿ ಬಂದಿದ್ದರೆ ಅವನ್ನೂ ತಂದು ರೈಸರ ಸಂಪುಟಗಳಿಗೆ ಸೇರಿಸಬೇಕು.

ಇದರಿಂದಾಗಿ ಎಪಿಗ್ರಾಫಿಯ ಕರ್ನಾಟಿಕದ ಸಂಪುಟಗಳು ಕನ್ನಡಿಗರಂತೆ ಕನ್ನಡೇತರರಿಗೂ, ಕನ್ನಡದಂತೆಯೇ ಇತರ ಭಾಷೆಗಳ ಶಾಸನಾಭ್ಯಾಸಿಗಳಿಗೂ ಉಪಯುಕ್ತವಾಗಿವೆ. ಪೀಠಿಕೆ, ಶಬ್ದ ಸೂಚಿ ಇತರ ಅನುಬಂಧಗಳೆಲ್ಲವೂ ಕನ್ನಡದಲ್ಲೂ ಇವೆ, ಇಂಗ್ಲೀಷಿನಲ್ಲೂ ಇವೆ. ಹೀಗೆ ಎರಡು ಭಾಷೆ, ಎರಡು ಲಿಪಿಗಳಲ್ಲಿ ಕೊಡುವುದು ಶ್ರಮದ ಕೆಲಸ, ನಿಜ. ಆದರೆ ಆ ಶ್ರಮ ನಿಜವಾಗಿಯೂ ಸಾರ್ಥಕ.

ರೈಸ್ ಅವರು ಹಳೆಯ ಮೈಸೂರು ಮತ್ತು ಕೊಡಗು ಜಿಲ್ಲೆಗಳ ಪರಿವೀಕ್ಷಣ ಕಾರ್ಯವನ್ನು ಸಮರ್ಪಕವಾಗಿ ಮಾಡಿದ್ದರೂ ಎಷ್ಟೋ ಶಾಸನಗಳು ಅವರ ಕಣ್ಣು ತಪ್ಪ ಉಳಿದು ಮುಂದೆ ದೊರಕಿ ಪ್ರಕಟವಾಗಿವೆ (ಅವು ಈ ಸಂಪುಟಗಳಲ್ಲಿ ಸೇರ್ಪಡೆಯಾಗಿವೆ). ಆದರೆ ಇನ್ನೂ ಕೆಲವು ಶಾಸನಗಳು ಅಲ್ಲಲ್ಲಿ ಅಪ್ರಕಟತವಾಗದೆ ಉಳಿದಿರಬಹುದು. ಅವನ್ನೆಲ್ಲ ಹುಡುಕಿ ಪ್ರಕಟಿಸುವುದು ಉಚಿತವಾದರೂ, ಸದ್ಯದ ಯೋಜನೆಗೆ ಅದು ಅಸಾಧ್ಯವೆನ್ನಿಸಿ ಆ ಕಾರ್ಯವನ್ನು ಕೈಬಿಡಲಾಗಿದೆ. ಆದರೆ ಸಂಪಾದಕರ ಗಮನಕ್ಕೆ ಬಂದು ಮೊತ್ತ ಮೊದಲು ಪ್ರಕಟವಾಗಿರುವ ಶಾಸನಗಳು ಇಲ್ಲಿ ಎಷ್ಟೋ ಇವೆ. ರೈಸರ ಶಾಸನಗಳ ಪಾಠ ಅವರ ಕನ್ನಡ ಮತ್ತು ರೋಮನ್ ಪಾಠಗಳಲ್ಲೇ ಎಷ್ಟೋ ಬಾರಿ ಭಿನ್ನವಾಗುವುದುಂಟು. ಮತ್ತು ಅವರು ಪ್ರಕಟಿಸಿದ ಶಾಸನಗಳ ಪಾಠವನ್ನು ಒಮ್ಮೆ ಶಾಸನದ ನಕಲನ್ನೇ (estampage) ನೋಡಿ ಪರಿಶೀಲಿಸಿ ಪ್ರಕಟಿಸುವುದು ಒಂದು ಆದರ್ಶ ಕಾರ್ಯವಾದರೂ ಅದೂ ಕೂಡ ಸದ್ಯಕ್ಕೆ ವ್ಯಾವಹಾರಿಕವಲ್ಲವೆಂದು ಕೈಬಿಡಲಾಗಿದೆ. ಆದರೂ ಸಂಪಾದಕ ವರ್ಗದವರು ಸಾಧ್ಯವಾದೆಡೆಗಳಲ್ಲಿ ಪ್ರಮುಖ ಶಾಸನಗಳ ಬಗ್ಗೆಯಾದರೂ ಪಾಠ ಸಂದೇಹವಿದ್ದಲ್ಲಿ

ಪರಿವೀಕ್ಷಣೆಗಳನ್ನು ಕೈಗೊಂಡು ಸಂದಿಗ್ಧ ಪಾಠವನ್ನು ಉತ್ತಮಪಡಿಸಲು ಯತ್ನಿಸಿದ್ದಾರೆ. ಈ ವಿಷಯದಲ್ಲಿ ಡಾ. ಬಾ.ರಾ. ಗೋಪಾಲರ ನೇತೃತ್ವದಲ್ಲಿರುವ ಸಂಪಾದಕ ವರ್ಗ ಅಭಿನಂದನೀಯ ಕಾರ್ಯವನ್ನು ಮಾಡಿದೆ.

ಕೊಡಗು ಜಿಲ್ಲೆಯ ಸಂಪುಟದಲ್ಲಿ (ಸಂಪುಟ 1) 32, ಶ್ರವಣಬೆಳಗೊಳದ ಸಂಪುಟದಲ್ಲಿ (ಸಂಪುಟ 2) 67, ಮೈಸೂರು ಜಿಲ್ಲೆಯ 3, 4, 5ನೇ ಸಂಪುಟಗಳಲ್ಲಿ 68, 184, 40- ಇಷ್ಟು ಪ್ರಪ್ರಥಮವಾಗಿ ಪ್ರಕಟವಾದ ಶಾಸನಗಳ ಸಂಖ್ಯೆ

ಪ್ರತಿ ಸಂಪುಟದ ಆರಂಭದಲ್ಲಿ ಶಾಸನಗಳು ದೊರೆತಿರುವ ಊರುಗಳ ಅಕಾರಾದಿ, ವಂಶಾನುಕ್ರಮದಲ್ಲಿ ಶಾಸನಗಳ ಸೂಚಿ, ಈಗಿನ ಆವೃತ್ತಿಗಿಂತ ಹಿಂದಿನ ಆವೃತ್ತಿಗಳ ಶಾಸನ ಸಂಖ್ಯೆಗಳ ಸಮೀಕರಣ ಕೊಡಲಾಗಿದೆ. ಪ್ರತಿ ಸಂಪುಟದ ಕೊನೆಯಲ್ಲಿ ಸಾಕಷ್ಟು ಸಮಗ್ರವಾದ ಪದಸೂಚಿ ಉಂಟು, ಮತ್ತು ಅದರ ಬಳಿಕ ಶಾಸನಗಳ ನಕಲುಗಳ ಚಿತ್ರಗಳನ್ನು ಕೊಟ್ಟಿದೆ. ಇಷ್ಟು ಎಲ್ಲ ಸಂಪುಟಗಳ ಒಟ್ಟು ರಚನೆಯನ್ನು ತಿಳಿಸುವಂತಹ ಸಮೀಕ್ಷೆ.

ಈ ಸಂಪುಟಗಳ ಪೀಠಿಕೆ ಮತ್ತು ಶಾಸನ ಪಾಠಗಳನ್ನು ಈಗ ಪರಿಶೀಲಿಸಬಹುದು. ಪೀಠಿಕೆಗಳಲ್ಲಿ ಆಯಾ ರಾಜವಂಶದ ಶಾಸನಗಳ ಮೌಲ್ಯ ವಿವೇಚನೆ ಬರುತ್ತದೆ, ಮತ್ತು ಪ್ರತಿ ಪೀಠಿಕೆಯ ಕೊನೆಯಲ್ಲಿ ಜನಜೀವನಕ್ಕೆ ಸಂಬಂಧಿಸಿದ ಸಾಮಗ್ರಿಯ ಮಹತ್ವದ ಕಡೆ ಗಮನವನ್ನು ಸೆಳೆಯಲಾಗಿದೆ. ಸಂಪುಟ 2ರಲ್ಲಿನ ಪೀಠಿಕೆಯಲ್ಲಿ ಮಾಡಿರುವ 'ಕಟ್ವಿಪ್ಪು' ಚರ್ಚೆಯು ವಿಚಾರವನ್ನು ಮುಂದುವರಿಸಿಲ್ಲವೆನ್ನಿಸುತ್ತದೆ. (ಅದೇ ಪುಟದಲ್ಲಿ ಹನ್ನಿಮಿಡಿ ಶಾಸನದಲ್ಲಿ ಉಕ್ತವಾದ ಕಳಭೋರ ಎಂಬುದು ಕಲಭ್ರ ಎಂಬ ಜನಾಂಗದ ಹೆಸರು ಎಂಬ ಹೇಳಿಕೆ 'ಆಧಾರರಹಿತವಾಗಿದೆ' ಎಂಬ ಹೇಳಿಕೆಯೂ ಆಧಾರರಹಿತವೆನ್ನಿಸುತ್ತದೆ). 'ಗೊಮ್ಮಟ' ಶಬ್ದದ ನಿಷ್ಪತ್ತಿಯ ಚರ್ಚೆಯೂ ವ್ಯರ್ಥವೆನ್ನಿಸುತ್ತದೆ. 'ಕೀಳ್ವಾಗು ನೋಂಪಿ'ಯು ಪಂಚ ನಮಸ್ಕಾರದ ಕನ್ನಡ ರೂಪಾಂತರವೆಂಬ ಊಹೆಯು ವಿಚಾರಕ್ಕೆ ಯೋಗ್ಯವಾದುದು. ('ಕೀಳ್ವಾಗು' - ಬಹುವಾಗಿ ಬಾಗು. 'ಪಂಚ' ಮಾತಿಗೆ 'ದೊಡ್ಡ' ಎಂಬರ್ಥವೂ ಇದೆ). ಈ ಸಂಪುಟದ ಪೀಠಿಕೆ ಪ್ರೌಢವಾಗಿದ್ದರೂ, ಗೊಮ್ಮಟ ವಿಗ್ರಹದ ಬಗ್ಗೆ ಯಾವುದೇ ವಿವರಗಳೂ (ಸ್ಥಾಪನೆಯ ವರ್ಷ, ಎತ್ತರ, ಪ್ರಶಸ್ತಿ ಇತ್ಯಾದಿ) ಇಲ್ಲದೆ, ನಮಗೆ ಆರ್. ನರಸಿಂಹಾಚಾರ್ಯರು ಹಿಂದೆ ಬರೆದಿದ್ದ ಪೀಠಿಕೆಯನ್ನು ಸ್ಮರಿಸಿಕೊಳ್ಳುವಂತೆ ಮಾಡುತ್ತದೆ. ಈ ಸಂಪುಟದ ಕೊನೆಯಲ್ಲಿ ಗೊಮ್ಮಟನ ವಿಗ್ರಹದ ಚಿತ್ರವನ್ನು ಕೊಡದಿರುವುದು ಏಕೆ ಎಂಬುದು ಅರ್ಥವಾಗುವುದಿಲ್ಲ.

ಮೂರು, ನಾಲ್ಕು, ಐದನೆಯ ಸಂಪುಟಗಳ ಪೀಠಿಕೆಗಳೂ ಪ್ರೌಢವಾಗಿವೆ. ಸಂಪುಟ 3ರ ಪು. 66ರಲ್ಲಿ ಹೆ. ಕೋ. 90ನೆಯ ಶಾಸನ ಅಚ್ಚಿನಲ್ಲಿ 91 ಎಂದಾಗಿದೆ. ಪು. 75ರಲ್ಲಿ ದೇಕಬ್ಬೆಯ ಮರಣವನ್ನು 'ಆತ್ಮಬಲಿ' ಎಂದು ಕಿಟಲ್‌ರವರು ವರ್ಣಿಸಿರುವುದನ್ನು ಉಲ್ಲೇಖಿಸಿರುತ್ತಾರೆ. ಆದರೆ, ಅದು ಸಹಗಮನವೇ ಆದರೂ ವಾಸ್ತವವಾಗಿ ಅದು 'ಅನುಗಮನ'ಕ್ಕೆ ಉದಾಹರಣೆ ಎಂಬ ನನ್ನ ಅಭಿಪ್ರಾಯವನ್ನೂ ಗಮನಿಸಬಹುದಿತ್ತು. ಪು. 89ರಲ್ಲಿನ 'ಕೋಜುಗಳ ತೆಜಿಗೆ' ಬಹುಶಃ 'ವೋಜುಗಳ ತೆಜಿಗೆ' ಎಂದಿರಬೇಕು.

ಪು.91ರಲ್ಲಿ ಹೆಗ್ಗಲಗುಪ್ಪೆ ಶಾಸನದ ಒಂದು ವಾಕ್ಯವನ್ನು ಉಲ್ಲೇಖಿಸಿದ್ದಾರೆ. ತಪ್ಪಾಗಿರುವ ಈ ವಾಕ್ಯದ ಪಾಠ ಹೀಗಿರಬಹುದೆಂದು ನಾನು ಪ್ರಕಟವಾಗಲಿರುವ ಲೇಖನವೊಂದರಲ್ಲಿ ಊಹಿಸಿದ್ದೇನೆ ("ಅತನ ಎಳತಿ ತಪರಿಯಕ್ಕನುರಿವಾಯ್ದು ಸತ್ತಡೆ"). ಪೀಠಿಕೆಯ ಕೊನೆಯ ಭಾಗವಾಗಿ 'ಛಂದಸ್ಸು' ಹೆಸರಿನ ಕೆಳಗೆ ಆಯಾ ಸಂಪುಟದಲ್ಲಿ ಬರುವ ಶಾಸನಗಳಲ್ಲಿ ಬರುವ ಪದ್ಯ ಜಾತಿಗಳ ಹೆಸರನ್ನು ಕೊಟ್ಟಿದೆ ಮತ್ತು ಶಾಸನಪಾಠದಲ್ಲಿಯೂ ಪದ್ಯ ಜಾತಿಯನ್ನು ಹೆಸರಿಸಿರುವುದು ಛಂದಸ್ಸಿನ ಇತಿಹಾಸಕ್ಕೆ ಉಪಯುಕ್ತವಾಗಿದೆ. ಆದರೆ 'ಕಂದ'ವನ್ನು ಮಾತ್ರಾವೃತ್ತವೆಂದು ಕರೆಯುವುದರ ಬದಲು 'ಕನ್ನಡ ಛಂದಸ್ಸು' ಎಂದು ಭಾವಿಸಿರುವುದರ ಔಚಿತ್ಯ ಹೇಗೆ ಅರ್ಥವಾಗದು; ಸಂಪುಟ 4ರಲ್ಲಿ ಈ ತಪ್ಪನ್ನು ಸರಿಪಡಿಸಿಕೊಳ್ಳಲಾಗಿದೆ. ಸಂಪುಟ 5ರಲ್ಲಿ ಮತ್ತೆ ಗೊಂದಲ ತಲೆದೋರಿದೆ. 'ಕನ್ನಡ ಪದ್ಯಜಾತಿ' ಎಂಬುದನ್ನು ಕರ್ಣಾಟ ವಿಷಯಜಾತಿ ಎಂಬರ್ಥದಲ್ಲಿ ಮಾತ್ರ ಬಳಸುವುದು ಯಾವುದೇ ಗೊಂದಲಕ್ಕೂ ಈಡು ಮಾಡುವುದಿಲ್ಲ.

ಎಲ್ಲ ಪೀಠಿಕೆಗಳೂ ಕರ್ನಾಟಕದ ರಾಜಕೀಯ ಇತಿಹಾಸವನ್ನು ಬರೆಯುವವರಿಗೆ ಅನಿವಾರ್ಯ ಪ್ರಮುಖ ಆಕರಗಳಾಗಿವೆ. ಅನೇಕ ಹೊಸ ಅಂಶಗಳನ್ನು ಚರ್ಚಿಸಿರುವರಲ್ಲದೆ, ಅನೇಕ ಹಳೆಯ ಸಮಸ್ಯೆಗಳನ್ನು ಹೊಸ ಬೆಳಕಿನಲ್ಲಿ ಪರಿಶೀಲಿಸುವ ಪ್ರಯತ್ನಗಳನ್ನು ಮಾಡಿದ್ದಾರೆ. 'ಎಪ್ಪಿಗ್ರಾಫಿಯ ಕರ್ನಾಟಿಕ'ದ ಕೆಲಸವು ಕೆಲಸವನ್ನು ಬಲ್ಲ ತಜ್ಞರ ಕೈಯಲ್ಲಿದೆ ಎಂಬುದನ್ನು ಪೀಠಿಕೆಗಳು ದೃಢಪಡಿಸುತ್ತದೆ.

ರೋಮನ್ ಲಿಪ್ಯಂತರದಲ್ಲಿ ಕೆಲವು ತಪ್ಪುಗಳಾಗಿವೆ. ಎರಡನೆಯ ಸಂಪುಟದ 72ನೇ ಶಾಸನದ ಲಿಪ್ಯಂತರವನ್ನೇ ಗಮನಿಸಬಹುದು. (ṃ) ಚಿಹ್ನೆಯನ್ನು ಅನುನಾಸಿಕಕ್ಕೆ ಸಂಕೇತವಾಗಿ ತೆಗೆದುಕೊಂಡಿರುವುದು ಎಂಥವರಿಗೂ ದಿಕ್ಕು ತಪ್ಪಿಸುತ್ತದೆ.

ಆದರೆ ಇವೆಲ್ಲ ತೀರ ಸಣ್ಣ, ಉಪೇಕ್ಷಿಸಬಹುದಾದ ದೋಷಗಳು. 'ಎಪಿಗ್ರಾಫಿಯ ಕರ್ನಾಟಿಕ' ಯಾವುದೇ ಸಂಸ್ಥೆ, ವಿಶ್ವವಿದ್ಯಾಲಯ ಹೆಮ್ಮೆಪಟ್ಟುಕೊಳ್ಳಬಹುದಾದ ಒಂದು ಪ್ರಕಟಣೆ. ದೊಡ್ಡ ಕೆಲಸಕ್ಕೆ ಕೈ ಹಾಕುವುದು ದೊಡ್ಡದಲ್ಲ, ಆದರೆ ಕೆಲಸಕ್ಕೆ ಅಪಚಾರವಾಗದಂತೆ ನಿರ್ವಹಿಸುವುದು ನಿಜವಾಗಿಯೂ ಮಹತ್ವದ್ದು. ಕರ್ನಾಟಕದ ಚಾರಿತ್ರಿಕ ಗ್ರಂಥಗಳ ಚರಿತ್ರೆಯಲ್ಲಿ ಈ ಪ್ರಕಟಣೆಗೆ ಒಂದು ಪ್ರತಿಷ್ಠಿತ ಸ್ಥಾನವುಂಟು ಎಂಬಲ್ಲಿ ಸಂದೇಹವಿಲ್ಲ. ಇಷ್ಟು ಒಳ್ಳೆಯ ಕಾರ್ಯಕ್ಕೆ ಧನಸಹಾಯವನ್ನು ನೀಡಿದ ಸರ್ಕಾರ, ಕೆಲಸವನ್ನು ಕೈಗೆತ್ತಿಕೊಂಡು ಸಮರ್ಥವಾಗಿ ನಿರ್ವಹಿಸುತ್ತಿರುವ ಮೈಸೂರು ವಿಶ್ವವಿದ್ಯಾಲಯಗಳೆರಡೂ ಅಭಿನಂದನಾರ್ಹವಾಗಿವೆ. ಉಳಿದ ಎಲ್ಲ ಸಂಪುಟಗಳೂ ಬೇಗ ಬರಲಿ ಎಂದು ಎಲ್ಲರೂ ಹಾರೈಸುವಂತಾಗಿದೆ. ಪುಸ್ತಕದ ಹೊರಮೈ, ಒಳಮೈ, ಕರಡು ತಿದ್ದುವಲ್ಲಿ ವಹಿಸಿರುವ ಎಚ್ಚರ ಎಲ್ಲವೂ ಪ್ರಥಮ ವರ್ಗದವಾಗಿವೆ.

# ಸಂಶೋಧನ ಸಮೀಕ್ಷೆ : 1978

ಇಲ್ಲಿ ಸಮೀಕ್ಷೆಗೆ ಒಳಪಟ್ಟಿರುವ ಗ್ರಂಥಗಳಲ್ಲಿ ಮೂರನ್ನು ಬಿಟ್ಟರೆ ಉಳಿದವು ಪಿಎಚ್.ಡಿ. ನಿಬಂಧಗಳು. 'ಹುಲಿಯೂರು ದುರ್ಗ'ವೆಂಬ ಲಘು ಪುಸ್ತಕವನ್ನು ಬಿಟ್ಟರೆ ಉಳಿದುವೆಲ್ಲ ಗಂಭೀರ ಗ್ರಂಥಗಳು. ಪ್ರಕಟಿತ ಪಿಎಚ್. ಡಿ. ನಿಬಂಧಗಳ ಸಂಖ್ಯೆ ಚಿಕ್ಕದೇನೂ ಅಲ್ಲ. ಆರು ನಿಬಂಧಗಳಲ್ಲಿ ಐದು ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಅರ್ಪಿಸಿದವು ಮತ್ತು ನಾಲ್ಕನ್ನು ಆ ವಿಶ್ವವಿದ್ಯಾಲಯವೇ ಪ್ರಕಟಿಸಿದೆ. ಆ ಎಲ್ಲ ಒಂಬತ್ತನ್ನೂ ಈಗ ಒಂದೊಂದಾಗಿ ಪರಿಶೀಲಿಸಬಹುದು.

**ತುಳುನಾಡಿನ ಶಾಸನಗಳು ಭಾಗ 1** (ಸಂ : ಕೆ.ವಿ. ರಮೇಶ ಮತ್ತು ಎಂ.ಜೆ. ಶರ್ಮ)

ಬೇರೆ ಬೇರೆ ಸಂಪುಟಗಳಲ್ಲಿ ಚದುರಿಹೋಗಿರುವ ದಕ್ಷಿಣ ಕನ್ನಡ ಜಿಲ್ಲೆಯ ಶಾಸನಗಳಲ್ಲಿ ಮುಖ್ಯವಾದ ತೊಂಬತ್ತಮೂರು ಶಾಸನಗಳನ್ನು ಆರಿಸಿ ಪುನಃ ಪ್ರಕಟಿಸಿರುವ ಶಾಸನಸಂಪುಟ ಇದು. ಸಂಪಾದಕರೇ ಹೇಳಿಕೊಂಡಿರುವಂತೆ, "ಹಿಂದೆ ಶಾಸನಪಾಠಗಳನ್ನು ಬರೆದವರಾಗಲೀ ಅವುಗಳನ್ನು ತಾಮ್ರಪಟ್ಟಿಗಳ ಅಥವಾ ಶಿಲಾಫಲಕಗಳ ಮೇಲೆ ಕೊರೆದವರಾಗಲೀ ಎಲ್ಲರೂ ವಿದ್ಯಾವಂತರಿರಲಿಲ್ಲ. ಅಲ್ಲದೆ ಬಳಕೆಯಲ್ಲಿದ್ದ ಆಡುಮಾತಿನಲ್ಲಿ ಪ್ರಾಂತೀಯ ವೈಶಿಷ್ಟ್ಯಗಳೂ ಇದ್ದುವು. ಹೀಗಾಗಿ ಶಾಸನಗಳಲ್ಲಿ ಹಲವು ರೀತಿಯ ತಪ್ಪುಗಳೂ ಅಸಹಜವಾದ ಅಥವಾ ವಿಶಿಷ್ಟ ವಾಕ್ಯ ಪದ ಪ್ರಯೋಗಗಳೂ ಹೇರಳವಾಗಿ ಕಂಡು ಬರುತ್ತವೆ. ಪ್ರಸ್ತುತ ಸಂಪುಟದಲ್ಲಿ ಸಾಮಾನ್ಯವಾಗಿ ಶಾಸನ ಪಾಠಗಳನ್ನು ಯಥಾವತ್ತಾಗಿ ಕೊಟ್ಟಿದ್ದು ಕೆಲವು ಕಡೆಗಳಲ್ಲಿ ಮಾತ್ರ ತಿದ್ದುಪಡಿಗಳನ್ನು ಸೂಚಿಸುವುದರ ಮೂಲಕ ತುಳುನಾಡಿನ ಶಾಸನ ಭಾಷೆಯ ವೈಶಿಷ್ಟ್ಯಗಳ ಕಡೆಗೆ ವಿದ್ವಾಂಸರುಗಳ ಗಮನವನ್ನು ಸೆಳೆಯುವ ಪ್ರಯತ್ನವನ್ನು ಮಾಡಲಾಗಿದೆ".

ಈ ಸಂಪುಟದಲ್ಲಿ ಶಾಸನಗಳನ್ನು ಮೂರು ವರ್ಗಗಳಾಗಿ ವಿಂಗಡಿಸಿ ಕೊಟ್ಟಿದೆ. ಕ್ರಿ.ಶ. ಏಳನೇ ಶತಮಾನದಿಂದ ಹತ್ತನೆಯ ಶತಮಾನದ ಮಧ್ಯದ ಭಾಗದವರೆಗಿನ ಶಾಸನಗಳು ತುಳುನಾಡಿನ ಪ್ರಾಚೀನ ಶಾಸನಗಳು (24 ಶಾಸನಗಳು); ಕ್ರಿ.ಶ. ಹತ್ತನೆಯ ಶತಮಾನದ ಮಧ್ಯಭಾಗದಿಂದ ಹದಿನಾಲ್ಕನೆಯ ಶತಮಾನದ ಮಧ್ಯಭಾಗದವರೆಗಿನ ಶಾಸನಗಳೇ ಮಧ್ಯಯುಗೀನ ಶಾಸನಗಳು (25 ಶಾಸನಗಳು); ಹದಿನಾಲ್ಕನೇ ಶತಮಾನದಿಂದ ಹತ್ತೊಂಬತ್ತನೇ ಶತಮಾನದ ಆದಿಯವರೆಗಿನ ಶಾಸನಗಳೇ ವಿಜಯನಗರ ಕಾಲದ ಶಾಸನಗಳು (44 ಶಾಸನಗಳು). ಮೊದಲ ಎರಡು ವರ್ಗಗಳ ಬಗ್ಗೆ ಆಕ್ಷೇಪಣೆ ಎತ್ತುವಂತಿಲ್ಲ, ಆದರೆ

ಮೂರನೆಯ ವರ್ಗದಲ್ಲಿ ಕ್ರಿ.ಶ. 1809ರ ಈಸ್ಟ್ ಇಂಡಿಯಾ ಕಂಪನಿಯವರ ಶಾಸನವಿರುವುದರಿಂದ "ವಿಜಯನಗರ ಕಾಲದ ಶಾಸನಗಳು" ಎಂಬ ಹೆಸರಿನ ಬದಲು ಬೇರೊಂದು ಹೆಸರು ಬಹುಶಃ ಹೆಚ್ಚು ಉಚಿತವಾಗುತ್ತಿತ್ತು. (ಅಥವಾ ಆ ಹೆಸರನ್ನು ಸ್ಥೂಲವಾಗಿ ಒಪ್ಪಿಕೊಂಡರೂ ತಪ್ಪಿಲ್ಲ.) ಈ ಮೂರು ವರ್ಗಗಳ ಶಾಸನಗಳ ಸಂಕ್ಷಿಪ್ತ ಪರಿಚಯವನ್ನು ಆರೂವರೆ ಪುಟಗಳ ಪೀಠಿಕೆಯಲ್ಲಿ ಮಾಡಿಕೊಟ್ಟಿದ್ದಾರೆ. ತುಳುನಾಡಿನ ಪ್ರಾಚೀನತಮ ಶಾಸನವಾದ ವಡ್ಡರ್ಸೆ ಶಾಸನದಲ್ಲಿ (ಸು. 7ನೇ ಶತಮಾನದ ಮಧ್ಯಭಾಗ) ಬರುವ 'ಕಂಚು' 'ಕೀಬ್ಗಿಂಚು' ಶಬ್ದಗಳು "ಪ್ರಾಚೀನ ಯುಗದ ತುಳುನಾಡಿನಲ್ಲಿ ಚಲಾವಣೆಯಲ್ಲಿದ್ದ ಶಾಸನಗಳಿಗೆ ಸಂಬಂಧಿಸಿರಬಹುದು" ಎಂದು ಸಂಪಾದಕರು ಊಹಿಸಿದ್ದಾರೆ. ಅದೇ ಶಾಸನದಲ್ಲಿ, 'ಪದಿನೇೞ್ಕಿಂಚು ಒಂದು ಸಟ್ಟುಗ' ಎಂಬಲ್ಲಿ 'ಸಟ್ಟುಗ'ವು ಸೌಟನ್ನು ಹೇಳುವುದಾದರೆ ಮುಂದೆ 'ಪದಿನೇೞ್ಬಿರುಣ್ಬಾರ್ ಪಾರ್ವರ್' ಎಂದು ಹೇಳುವಲ್ಲಿ ಹದಿನೇಳು ಬ್ರಾಹ್ಮಣರಿಗೆ ಊಟಕ್ಕೆ ಬಿಟ್ಟುಕೊಟ್ಟಿರುವ ದತ್ತಿ ಇದು ಎಂದು ಸ್ಪಷ್ಟವಾಗಿರುವುದರಿಂದ 'ಕಂಚು' ಎಂಬುದು ಊಟದ ತಟ್ಟೆ, ಬಹುಶಃ ಆಹಾರದಾನದ ಸಂಕೇತ. ('ಕಂಚು' ಎಂಬುದು ಊಟದ ತಟ್ಟೆ ಎಂಬರ್ಥದಲ್ಲಿ 'ಸೂಕ್ತಿ ಸುಧಾರ್ಣವ'ದಲ್ಲಿಯೂ ಬಳಕೆಯಾಗಿದೆ). ಈ ಬಗ್ಗೆ ಹೆಚ್ಚಿನ ವಿಚಾರಕ್ಕೆ ಅವಕಾಶವಿದೆ. ಕರ್ನಾಟಕದಲ್ಲಿಯೇ ಅತ್ಯಂತ ಪ್ರಾಚೀನ ಕನ್ನಡ ತಾಮ್ರಪಟವೆನ್ನಿಸಿಕೊಂಡಿರುವ ಬೆಳ್ಮಣ್ಣು ತಾಮ್ರಶಾಸನ (ಇದು ಪ್ರಾಚೀನ ತುಳುನಾಡಿನ ಏಕೈಕ ತಾಮ್ರಶಾಸನವೂ ಹೌದು) ಈ ಸಂಪುಟದಲ್ಲಿ ಸೇರಿದೆ. ಕದಿರೆಯ 'ವಿಹಾರ'ದಲ್ಲಿ ಸ್ಥಾಪಿತವಾದ ಲೋಕೇಶ್ವರನ ಪ್ರತಿಮೆಯ ಶಾಸನವೂ ಇಲ್ಲಿದೆ. ಹಾಗೆಯೇ 'ಉತ್ಸಾಹ' ವೃತ್ತವೂ, ಅಳಿಯ ಸಂತಾನದ ಉಲ್ಲೇಖವೂ ಇರುವ ತಳಂಗೆರೆಯ ಶಾಸನವೂ ಇಲ್ಲಿದೆ. ಎಂದರೆ ಇದೊಂದು ತುಳುನಾಡಿನ ಶಾಸನಗಳ ಪ್ರಾತಿನಿಧಿಕ ಸಂಕಲನವೆಂಬುದು ಸ್ಪಷ್ಟವಾಗಿದೆ.

ಪ್ರತಿಯೊಂದು ಶಾಸನದ ಸಿಕ್ಕ ಜಾಗ, ಪ್ರಕಟಣೆ, ತೇದಿಗಳನ್ನು ಆರಂಭದಲ್ಲಿ ಕೊಟ್ಟು ಶಾಸನ ಪಾಠದ ಬಳಿಕ ಆಯಾ ಶಾಸನದ ಸಾರಾಂಶವನ್ನು ಕೊಟ್ಟಿರುವುದು ಉದ್ದಕ್ಕೂ ಅನುಸರಿಸಿರುವ ಪದ್ಧತಿ. ಸಮರ್ಥರಾದ ಈ ಸಂಪಾದಕರು ಇಷ್ಟೊಂದು ಒಳ್ಳೆಯ ಸಂಕಲನವನ್ನು ಹೊರತರುವ ಉದ್ದೇಶ ವಿದ್ಯಾವಂತ ಯುವಜನಾಂಗದಲ್ಲಿ 'ಐತಿಹಾಸಿಕ ಪ್ರಜ್ಞೆ' ಯನ್ನು ಮೂಡಿಸುವುದು. ಈ ಹಿನ್ನೆಲೆಯಲ್ಲಿ ನೋಡಿದಾಗ, ಸಂಪಾದಕರು ಪ್ರತಿಯೊಂದು ಶಾಸನಕ್ಕೂ ಸ್ವಲ್ಪ ವಿಸ್ತಾರವಾದ ಟಿಪ್ಪಣಿಗಳನ್ನು ಕೊಡಬೇಕಿತ್ತು ಎನ್ನಿಸುತ್ತದೆ. ಉದಾಹರಣೆಗೆ, 'ನಾಟ್ಟುಮುದಿಮೆ' ಶಬ್ದದ ವಿವರಣೆ (ಈ ಪದದ ಬಗ್ಗೆ ಚರ್ಚೆ ಆಗಿದೆ). ಶಾಸನಗಳ ಭಾಷೆಯನ್ನು ಬಿಡಿಸಿಕೊಂಡು ಓದುವ ರೀತಿ, ಹಾಗೆಯೇ ಶಾಸನ ಭಾಷೆಗೂ ಕಾವ್ಯ ಭಾಷೆಗೂ ಇರುವ ವ್ಯತ್ಯಾಸ, ಶಾಸನಗಳ ವಿಧಾನ, ಸಾಂಸ್ಕೃತಿಕ ಮೌಲ್ಯ ಇತ್ಯಾದಿಗಳನ್ನು ಟಿಪ್ಪಣಿಗಳಲ್ಲಿ ಸೂಚಿಸಿದ್ದರೆ ಶಾಸನಗಳನ್ನು ಮೂಲದಲ್ಲೇ ಓದಿ ಅರ್ಥಮಾಡಿಕೊಳ್ಳಲು ಸಹಾಯಕವಾಗುತ್ತಿತ್ತು.

ಈಗಿರುವಂತೆ ಶಾಸನಗಳ ಸಂಪುಟ ವಿದ್ವಾಂಸರ ಹೆಚ್ಚಿನ ಅಧ್ಯಯನಕ್ಕೆ ಒಂದು ಆಕರ ಗ್ರಂಥವಾಗಿದೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕನ್ನಡ ಭಾಷೆ ಏಳನೆಯ ಶತಮಾನದಿಂದ

ಬೆಳೆದು ಬಂದ ಬಗೆಯನ್ನು ಇಲ್ಲಿಯ ಶಾಸನಗಳು ಕ್ರಮವಾಗಿ ತೋರಿಸುತ್ತವೆ. ಹೊರಗಿನವರಿಗೆ ತುಳುನಾಡಿನ ಶಾಸನ ಭಾಷೆಯಾದ ಕನ್ನಡವು ಕೆಲವೆಡೆ ವಿಲಕ್ಷಣವಾಗಿ ಕಂಡುಬಂದರೆ ಅಲ್ಲಿ ತುಳುವನ್ನೋ ತುಳು ಭಾಷೆಯ ಪ್ರಭಾವವನ್ನೋ ನಿರೀಕ್ಷಿಸಬಹುದು. ಅಚ್ಚಿನ ತಪ್ಪುಗಳಿಲ್ಲದೆ ಬಹು ಸುಂದರ ರೀತಿಯಲ್ಲಿ ಹೊರಬಂದಿರುವ ಈ ಗ್ರಂಥವನ್ನು ಆದರದಿಂದ ಸ್ವಾಗತಿಸಬೇಕು.

**ಶೋಧನ ಲೋಕ**ದಲ್ಲಿ ಎನ್. ಎಸ್. ತಾರಾನಾಥರು ಬೇರೆ ಬೇರೆ ಸಂದರ್ಭಗಳಲ್ಲಿ ಬರೆದ ಎಂಟು ಸಂಪ್ರಬಂಧಗಳಿವೆ (research papers). ಎಂಟನೆಯದು ಐದು ಟಿಪ್ಪಣಿಗಳನ್ನೊಳಗೊಂಡ ಒಂದು ಗುಚ್ಛ. ಈ ಗ್ರಂಥದಲ್ಲಿ ಮೂರು ಕನ್ನಡ ವ್ಯಾಕರಣಕ್ಕೆ, ಉಳಿದ ನಾಲ್ಕು ಜೈನ ವಾಙ್ಮಯಕ್ಕೆ ಸಂಬಂಧಿಸಿವೆ. 'ಐದು ಟಿಪ್ಪಣಿಗಳು' ಎಂಬಲ್ಲಿ ವ್ಯಾಕರಣ, ಸಾಹಿತ್ಯಗಳಿಗೆ ಸಂಬಂಧಿಸಿದ ಟಿಪ್ಪಣಿಗಳಿವೆ. ತಮ್ಮ ಸಂಕಲನವನ್ನು 'ಶೋಧನ ಲೋಕ' ಎಂದು ಕರೆದಿರುವುದು ಇಲ್ಲಿಯ ಸಂಪ್ರಬಂಧಗಳೆಲ್ಲವೂ ಸಂಶೋಧನೆಗೆ ಸಂಬಂಧಿಸಿದುವು ಎಂಬುದನ್ನು ಸೂಚಿಸುತ್ತದೆ. ಒಂದು ಸಂತೋಷದ ವಿಷಯವೆಂದರೆ ಅವೆಲ್ಲವೂ ಸಂಪ್ರಬಂಧಗಳಾಗಿರುವುದು.

'ಪ್ರಾಚೀನ ಕನ್ನಡ ವ್ಯಾಕರಣ ಸಾಹಿತ್ಯ' ಸಂಪ್ರಬಂಧದಲ್ಲಿ ಕವಿರಾಜ ಮಾರ್ಗದಿಂದ ಆರಂಭಿಸಿ ಈಚಿನವರೆಗೆ - ಹೊಸಗನ್ನಡ ವ್ಯಾಕರಣಗಳವರೆಗೆ ಬಂದಿರುವ ವ್ಯಾಕರಣ ವಾಙ್ಮಯವನ್ನು ಸಮೀಕ್ಷಿಸಿದ್ದಾರೆ. ನಾಗವರ್ಮ II, ಕೇಶಿರಾಜ, ಭಟ್ಟಾಕಳಂಕರ ಕೃತಿಗಳನ್ನು ಸ್ವಲ್ಪ ವಿಸ್ತಾರವಾಗಿಯೇ ತೌಲನಿಕವಾಗಿ ನೋಡಿದ್ದಾರೆ. ಒಬ್ಬ ಇನ್ನೊಬ್ಬನಿಂದ ಪ್ರಭಾವಿತನಾಗಿದ್ದೂ ಆತ ತೋರಿರುವ ವೈಶಿಷ್ಟ್ಯವನ್ನು ಗುರುತಿಸಿದ್ದಾರೆ. (ಮಧ್ಯೆ ಆಯಾ ಕವಿಯ ಚರಿತ್ರೆ ಬಗ್ಗೆ ಬರೆದಿರುವ ಚರ್ಚೆ ಅನಗತ್ಯವಾಗಿ ವಿಲಂಬಿಸುತ್ತದೆ). ಕನ್ನಡ ವೈಯಾಕರಣರು ಮತ್ತು ಕನ್ನಡ ವರ್ಣಮಾಲೆ, ಕನ್ನಡ ವ್ಯಾಕರಣಗಳ ಕನ್ನಡ ಸಂಧಿಗಳು, ಕೆಲವು ತೌಲನಿಕ ಟಿಪ್ಪಣಿಗಳು ಇವೂ ತೌಲನಿಕ ಅಧ್ಯಯನಗಳೇ (ದೇಶೀಯಾಕ್ಷರಗಳ ಪಟ್ಟಿಯಲ್ಲಿ 'ಏ, ಓ' ಎಂಬುವು ವಾಸ್ತವವಾಗಿ 'ಎ, ಒ' ಎಂದಿರಬೇಕು. ಪು. 51). ಇಲ್ಲೆಲ್ಲ ತಾರಾನಾಥರು ಮೂಲವಾಕ್ಯಗಳನ್ನು ಸಮುಚಿತವಾಗಿ ಉದ್ಧರಿಸಿ ಆಯಾ ವ್ಯಾಕರಣಕಾರನ ನಿಲುವನ್ನು ಸ್ಪಷ್ಟಪಡಿಸುತ್ತಾರೆ. 'ಚ, ಟ'ಗಳಿಗೆ ಸಂಧಿಯಲ್ಲಿ 'ಜ, ಡ'ಗಳು ಏಕೆ ಆದೇಶವಾಗುವುದಿಲ್ಲವೆಂಬುದಕ್ಕೆ ತೀ. ನಂ. ಶ್ರೀಕಂಠಯ್ಯನವರ ತರಗತಿಯ ಟಿಪ್ಪಣಿಗಳಿಂದ ವಿವರಣೆ ಕೊಡುತ್ತಾರೆ. ತಾರಾನಾಥ್ ಅವರು ಮುಖ್ಯವಾಗಿ ತಮಿಳು ಭಾಷೆಯ ಸಹಾಯದಿಂದ ಸ್ವತಂತ್ರವಾಗಿಯೇ ಆ ಸಮಸ್ಯೆಯನ್ನು ಎದುರಿಸಬಹುದಾಗಿತ್ತು. ದಿವಾಕರಣಂದಿಯ 'ತತ್ವಾರ್ಥಸೂತ್ರಾನುಗತ ಕರ್ನಾಟಕ ಲಘುವೃತ್ತಿ' ಎಂಬ ಅಪ್ರಕಟಿತ ಟೀಕೆಯ ಸ್ವರೂಪವನ್ನು ಒಂದು ಸಂಪ್ರಬಂಧದಲ್ಲಿ ಪರಿಚಯ ಮಾಡಿಕೊಟ್ಟಿದ್ದಾರೆ; ವ್ಯಾಖ್ಯಾನ ಕ್ರಮಕ್ಕೆ ಉದಾಹರಣೆಗಳನ್ನು ಕೊಟ್ಟಿದ್ದಾರೆ. ಕನ್ನಡ ಸಾಹಿತ್ಯದಲ್ಲಿ ಕುಂದಕುಂದಾಚಾರ್ಯರ ಉಲ್ಲೇಖಗಳು ಎಲ್ಲೆಲ್ಲಿ ಬಂದಿವೆ ಎಲ್ಲವನ್ನೂ ಸೇರಿಸಿ ಒಂದು ಸಂಪ್ರಬಂಧದಲ್ಲಿ ಕೊಟ್ಟಿದ್ದಾರೆ. ಕುಂದಕುಂದರು 'ಸುಲೋಚನಾ ಚರಿತೆ'ಯನ್ನು ಪೂರ್ವವಿದೇಹದಿಂದ ತಂದರು ಎಂಬ ಬ್ರಹ್ಮಶಿವನ ಹೇಳಿಕೆಯನ್ನು ಉಲ್ಲೇಖಿಸುವಾಗ, ಕನ್ನಡದಲ್ಲಿ ನಾಗದೇವನಿಂದ ರಚಿತವಾದ ಅನುಪಲಬ್ಧ 'ಸುಲೋಚನಾ ಚರಿತೆ'ಯನ್ನು ಹೆಸರಿಸುವುದನ್ನು ತಾರಾನಾಥ್ ಮರೆತಿರುವಂತಿದೆ.

ಕುಂದಕುಂದರ ಕೃತಿಗಳನ್ನು ಕುರಿತಂತೆ ಕನ್ನಡದಲ್ಲಿ ಬಂದಿರುವ ವ್ಯಾಖ್ಯಾನಗಳನ್ನು ಕೊಟ್ಟಿದ್ದಾರೆ. 'ಚಾಮುಂಡರಾಯ ಪುರಾಣದ ಅಜಿತನಾಥ ಚರಿತ್ರೆ' ಎಂಬ ಸಂಪ್ರಬಂಧದಲ್ಲಿ ಉತ್ತರಪುರಾಣ, ರನ್ನನ ಅಜಿತಪುರಾಣಗಳ ಹಿನ್ನೆಲೆಯಲ್ಲಿ ಚಾಮುಂಡರಾಯನ ಕೃತಿಯನ್ನು ಪರಿಶೀಲಿಸಿದ್ದಾರೆ. ಚಾಮುಂಡರಾಯ ಪುರಾಣಕ್ಕೂ ರನ್ನನ ಅಜಿತಪುರಾಣಕ್ಕೂ ದಟ್ಟ ಭಾಷಿಕ ಸಾಮ್ಯವಿರುವುದನ್ನು ಮನಸ್ಸಿನಲ್ಲಿಟ್ಟುಕೊಂಡು, ಚಾಮುಂಡರಾಯ ಮತ್ತು ರನ್ನರು ತಮ್ಮ 'ಕೃತಿಗಳ ರಚನೆಯಲ್ಲಿ ಪರಸ್ಪರ ಸಹಕರಿಸಿದ್ದಿರಬೇಕು' ಎಂಬ ನಿಲುವನ್ನು ತಾಳುತ್ತಾರೆ. 'ಪರಸ್ಪರ ಸಹಕರಿಸು' ಎನ್ನುವ ಮಾತಿಗೆ ಸಾಹಿತ್ಯ ರಚನೆಯ ಸಂದರ್ಭದಲ್ಲಿ ಸ್ಪಷ್ಟಾರ್ಥವನ್ನು ಹೇಳುವುದು ಕಷ್ಟವೆಂದು ತೋರುತ್ತದೆ. ಶಾಂತಿಕೀರ್ತಿಯ 'ಪಾರ್ಶ್ವನಾಥ ಚರಿತೆ' ಎನ್ನುವ ಸಾಂಗತ್ಯ ಕೃತಿಯ ವಸ್ತುನಿಷ್ಠ ಸಮೀಕ್ಷೆ ಒಂದು ಸಂಪ್ರಬಂಧದ ವಸ್ತು. ಎಲ್ಲ ಕಡೆ ಇರುವಂತೆ ಇಲ್ಲೂ ತೌಲನಿಕ ವಿವೇಚನೆ ಉಂಟು. ಐದು ಟಿಪ್ಪಣಿಗಳಲ್ಲಿ ಪಂಚಪಾದವೃತ್ತಕ್ಕೆ ಸಂಬಂಧಿಸಿದ ಟಿಪ್ಪಣಿ ಬಡಕಲಾಗಿದೆ; ಉಳಿದ ನಾಲ್ಕೂ ವಾಚನ ಯೋಗ್ಯವಾಗಿವೆ.

ತಾರಾನಾಥ್ ಅವರು ಶ್ರದ್ಧಾವಂತ ಸಂಶೋಧಕರೆಂಬಲ್ಲಿ ಅನುಮಾನವಿಲ್ಲ. ಯಾವುದೇ ವಿಷಯವನ್ನು ತೆಗೆದುಕೊಂಡರೂ ಅವರು ಉಲ್ಲೇಖಿಸುವ ಪ್ರಕಟಿತ, ಅಪ್ರಕಟಿತ ಗ್ರಂಥಗಳು ಅವರ ವಿಶಾಲವಾದ ವ್ಯಾಸಂಗದ ಕುರುಹುಗಳು. ಮಾಹಿತಿ ಸಂಗ್ರಹ ಅವರ ಶಕ್ತಿಗಳಲ್ಲೊಂದು. ಜೊತೆಗೆ ಸಮಸ್ಯೆಯನ್ನು ಬೆದಕಿ ನೋಡುತ್ತಾರೆ. ಆದರೆ ಒಮ್ಮೊಮ್ಮೆ ಸಮಸ್ಯೆಯ ದಡದಲ್ಲೇ ನಿಂತು ಬಿಡುತ್ತಾರೆ. ಉದಾಹರಣೆಗೆ, ರಳ ಕುಳ ಕ್ಷಳಗಳ ಬಗ್ಗೆ ಮಾಹಿತಿ ಸಂಗ್ರಹಿಸುತ್ತಾರಾದರೂ ರಳ-ಕುಳಗಳ ಸಂಬಂಧದ ಬಗ್ಗೆ ಹೆಚ್ಚಿನ ವಿಚಾರ ಮಾಡುವುದಿಲ್ಲ. ಇದೊಂದು ಚಿಕ್ಕ ದೌರ್ಬಲ್ಯವನ್ನು - ದೌರ್ಬಲ್ಯವೆಂದು ಕರೆಯುವುದಾದರೆ - ಬಿಟ್ಟರೆ, ಉಳಿದಂತೆ ಮಾಹಿತಿ ಸಂಗ್ರಹ, ಉಳಿದ ವಿದ್ವಾಂಸರು ನಡೆಸಿರುವ ಚರ್ಚೆಗಳ ಸಂಗ್ರಹ, ನಿರೂಪಣಾರೀತಿ, ಕೊನೆಗೆ ಅಡಿಟಿಪ್ಪಣಿ ಕೊಡುವ ವಿಧಾನ ಎಲ್ಲ ಕಡೆಗಳಲ್ಲೂ ಅಪೇಕ್ಷಣೀಯ ಗುಣವನ್ನು ತೋರುತ್ತಾರೆ. 'ಶೋಧನ ಲೋಕ'ವು ಸಂಶೋಧನೆಯಲ್ಲಿ ಆಸಕ್ತರಾಗಿರುವವರು ಸಂತೋಷದಿಂದ ಬರಮಾಡಿಕೊಳ್ಳಬೇಕಾದ ಗ್ರಂಥ.

**ಹುಲಿಯೂರು ದುರ್ಗ** : ಹು.ಪು. ಸದಾಶಿವಪ್ಪನವರು ಅದೇ ಹೆಸರಿನ ದುರ್ಗದ ಬಗ್ಗೆ ಸಂಗ್ರಹಿಸಿರುವ ಸಾಮಗ್ರಿಯ ಸಂಕಲನ. "ಈ ಕೃತಿರಚನೆಯಲ್ಲಿ ಇತಿಹಾಸಕ್ಕೆ ಪ್ರಾಮುಖ್ಯತೆಯನ್ನು ಕೊಟ್ಟಿದ್ದೇನೆ" ಎಂದು ಹೇಳಿಕೊಂಡಿದ್ದಾರೆ. ಕುಣಿಗಲ್ ತಾಲ್ಲೂಕಿನ ಈ ಜಾಗದ ಬಗ್ಗೆ ಲೇಖಕರಿಗೆ ಅಭಿಮಾನವಿದೆ. ಕ್ರಿ.ಶ. 1543ರವರೆಗೆ ಕೇವಲ 'ಹುಲಿಯೂರು' ಎಂಬ ಹೆಸರನ್ನು ಹೊಂದಿದ್ದು, ನಂತರ ಅಲ್ಲಿ ಬೆಂಗಳೂರು ಕೆಂಪೇಗೌಡ ಮತ್ತು ಅವನ ಮೊಮ್ಮಗ ಕಟ್ಟಿಸಿದ ಕೋಟೆಯಿಂದ ಅದು 'ಹುಲಿಯೂರು ದುರ್ಗ'ವೆಂಬ ಹೆಸರನ್ನು ಪಡೆಯಿತೆಂದು ಸರಿಯಾಗಿಯೇ ತರ್ಕಿಸಿದ್ದಾರೆ. ಅದರೂ ಇದನ್ನು ಆ ಪ್ರದೇಶದ ಒಂದು ಜಾನಪದೀಯ ಅಧ್ಯಯನವೆಂದು ಭಾವಿಸುವುದು ಹೆಚ್ಚು ಉಚಿತ. ಹುಲಿಯೂರು ದುರ್ಗದ ಸುತ್ತಮುತ್ತಣ ಪ್ರದೇಶಗಳು, ಅಲ್ಲಿ ನಡೆಯುವುದೆಂದು ಜನ ನಂಬಿರುವ ಅಮಾನುಷ ಘಟನೆಗಳು, ಮಠಗಳು ದೇವಾಲಯಗಳು ಇವುಗಳನ್ನು ಸಂಗ್ರಹಿಸಿ ಕೊಟ್ಟಿದ್ದಾರೆ. ಅಲ್ಲಿ

ನಡೆಯುವ ಉತ್ಸವಗಳ ಹೆಚ್ಚಿನ ವಿವರಗಳು ಸ್ವಾರಸ್ಯವಾಗಿರುತ್ತಿದ್ದುವು. ಈಗಿರುವಂತೆ ಈ ಪುಸ್ತಕ ಆ ಪ್ರದೇಶದ ಪರಿಚಯಕ್ಕೆ ಒಂದು ಕೈಪಿಡಿಯಂತಿದೆ. ಲೇಖಕರು ಅಲ್ಲಲ್ಲಿ ಭಾಷೆಯ ಕಡೆ ಗಮನ ಕೊಟ್ಟಿದ್ದರೆ ಚೆನ್ನಾಗಿರುತ್ತಿತ್ತು. ಇಂತಹ ಕೈಪಿಡಿಗಳು ಹೆಚ್ಚಿನ ಸಂಶೋಧನೆ ನಡೆಸುವವರಿಗೆ ಸೂಚನೆಗಳನ್ನು ಕೊಡುತ್ತವೆ. ಉದಾಹರಣೆಗೆ ಅಲ್ಲಿನ ಹೇಮಗಿರಿಯು ನಾಥಪಂಥದ ಅಥವಾ ಕಾಪಾಲಿಕರ ಕೇಂದ್ರವಾಗಿದ್ದಿರಬಹುದು. ಅದು ತೋಂಟದ ಸಿದ್ಧಲಿಂಗಯತಿಗಳ ಬಗ್ಗೆ ಕೆಲಸ ಮಾಡುವವರು ಗಮನಿಸಬೇಕಾದ ಸ್ಥಳವೂ ಹೌದು.

ಎಚ್.ಕೆ. ರಂಗನಾಥ ಅವರು ಹಿಂದೆ ಇಂಗ್ಲೀಷಿನಲ್ಲಿ ಬರೆದು ಪಿಎಚ್.ಡಿ. ಪಡೆದಿದ್ದ The Karnataka Theatre ಎಂಬ ಕೃತಿಯನ್ನು ಆಧರಿಸಿ ಅವರೇ ಬರೆದ **ಕರ್ನಾಟಕ ರಂಗಭೂಮಿ** ಗ್ರಂಥವು ಈಗ ಪ್ರಕಟವಾಗಿರುವುದು ಸ್ವಾಗತಾರ್ಹವಾಗಿದೆ. ಕನ್ನಡ ರಂಗಭೂಮಿಯಲ್ಲಿ ಆಸಕ್ತರಾಗಿರುವವರು ಈಗಾಗಲೇ ಅವರ ಇಂಗ್ಲೀಷ್ ಗ್ರಂಥದ ಉಪಯೋಗವನ್ನು ಪಡೆದಿದ್ದಾರೆ. ಈಗಿನ ಗ್ರಂಥವು ಕೇವಲ ಅನುವಾದವಾಗಿರದೆ ಅನೇಕ ಹೊಸ ವಿಷಯಗಳು ಅದರಲ್ಲಿ ಸೇರ್ಪಡೆಯಾಗಿರುವುದರಿಂದ ರಂಗಭೂಮಿಯ ಇತ್ತೀಚಿನ ಪ್ರವೃತ್ತಿಗಳನ್ನು ಪ್ರಸ್ತಾಪಮಾಡಿರುವುದರಿಂದ ಕರ್ನಾಟಕ ರಂಗಭೂಮಿಯ ಪ್ರಕಟಣೆಯ ಮೌಲ್ಯ ಇನ್ನೂ ಹೆಚ್ಚಿದೆ.

ಇದರಲ್ಲಿ ಒಟ್ಟು ಐದು ಅಧ್ಯಾಯಗಳಿವೆ. 'ನಾಟಕ ರಂಗಭೂಮಿ' ಎಂಬ ಚಿಕ್ಕ ಅಧ್ಯಾಯ ನಾಟಕ-ರಂಗಭೂಮಿಗಳಿಗೆ ಪ್ರವೇಶವನ್ನು ಒದಗಿಸುತ್ತದೆ. ಸಾಹಿತ್ಯ ನಾಟಕಗಳಿಗಿರುವ ಸಂಬಂಧವನ್ನೂ ಸಂಸ್ಕೃತದಲ್ಲಿ ರಂಗಭೂಮಿ ಬೆಳೆದುಬಂದ ಪರಿಯನ್ನೂ ಪರಿಚಯ ಮಾಡಿಕೊಡುತ್ತದೆ. 'ಕನ್ನಡ ರಂಗಭೂಮಿಯ ಪ್ರಾಚೀನತೆ' ಎಂಬ ಅಧ್ಯಾಯ ಕನ್ನಡ ರಂಗಭೂಮಿಗೆ ಐತಿಹಾಸಿಕ ಹಿನ್ನೆಲೆಯನ್ನು ಒದಗಿಸುತ್ತದೆ. ಸು. 1680ರಲ್ಲಿ ರಚಿತವಾದ 'ಮಿತ್ರವಿಂದಾ ಗೋವಿಂದ' ನಾಟಕಕ್ಕೆ ಮೊದಲು ಕನ್ನಡದಲ್ಲಿ ನಾಟಕಗಳಿರಲಿಲ್ಲವೇ ಎಂಬ ಪ್ರಶ್ನೆಯನ್ನು ಕುರಿತು ಚರ್ಚಿಸುತ್ತ, ಶಾಸನಗಳಲ್ಲಿ ಕಾವ್ಯಗಳಲ್ಲಿ ಬರುವ 'ನಾಟಕ' 'ನಾಟಕಶಾಲೆ' ಉಲ್ಲೇಖಗಳನ್ನು ಉಲ್ಲೇಖಿಸಿ ಹಿಂದಿನ ಕರ್ನಾಟಕದಲ್ಲಿ 'ನಾಟಕವು ಇಂದಿನ ಕಥಕ್ಕಳಿಯಂತೆ ಭಾವಾಭಿನಯ ಹಾಗೂ ಗೀತ ಪ್ರಧಾನವಾದ ಕಥಾನೃತ್ಯವಾಗಿರಬೇಕು' ಎಂದು ತೀರ್ಮಾನಿಸಿರುವುದು ಸರಿಯಾಗಿದೆ. ಹಿಂದೆ ಕನ್ನಡದಲ್ಲಿ ನಾಟಕಗಳಿದ್ದುವೇ ಎಂಬುದು ಇನ್ನೂ ಪ್ರಶ್ನೆಯಾಗಿಯೇ ಉಳಿದಿದೆ. 'ಏಕ್ಕಲಗಾಣ' ಶಬ್ದವು ಸಂಗೀತದಲ್ಲಿ ಒಬ್ಬನೇ ಗಾಯಕನಿರುವುದನ್ನು ಹೇಳುತ್ತದೆ ಎಂಬುದನ್ನು ರಂಗನಾಥ್ ಗಮನಿಸಬಹುದು ('ಏಕ್ಕಲ ಗಾನ'ವು ಯಕ್ಷಗಾನದ ತದ್ಭವ ಎಂಬುದನ್ನು ಈಗ ನಿರಾಕರಿಸಲಾಗಿದೆ). ಕನ್ನಡ ನಾಟಕಗಳ ಪರಂಪರೆಯ ಇತಿಹಾಸವೇ ಅಸ್ಪಷ್ಟವಿರುವಾಗ ಮತ್ತು ಕನ್ನಡದಲ್ಲಿ ಹಿಂದೆ ನಾಟಕಗಳು ಇದ್ದ ಬಗ್ಗೆ ಪ್ರಬಲ ಸಂದೇಹಗಳಿರುವಾಗ- "ಹೀಗೆ ಕನ್ನಡ 'ನಾಟಕ' ಪ್ರಾಚೀನ ಕಾಲದಲ್ಲಿ ನೆಲದ ಸಂಸ್ಕೃತಿಯಲ್ಲಿ ಆಳವಾದ ಬೇರು ಬಿಟ್ಟು ಪುಷ್ಟಿಗೊಂಡು ಎರಡು ಕವಲಾಗಿ ಬೆಳೆಯಿತೆನ್ನಬೇಕು" ಎಂಬ ರಂಗನಾಥರ ವಾಕ್ಯಕ್ಕೆ ಪುಷ್ಟಿ ದೊರಕುವುದಿಲ್ಲ.

'ಜಾನಪದ ರಂಗಭೂಮಿ' ಎಂಬ ಅಧ್ಯಾಯ ಅಮೂಲ್ಯವಾದುದು. ಜಾನಪದದಲ್ಲಿ ಕಂಡುಬರುವ ಭೂತಾರಾಧನೆಯಂತಹ ನೃತ್ಯ ಪ್ರಕಾರಗಳ ದರ್ಶನವನ್ನು ಮಾಡಿಸಿದ್ದಾರೆ. 'ಪುರವಂತರ ಕುಣಿತ' (ಇದರ ರೂಪ 'ಪರವಂತ' ಅಲ್ಲ), 'ದತ್ತೀ ಆಟ', 'ವೀರಮುಖಿ' ಮುಂತಾದ ಕುಣಿತಗಳಲ್ಲಿ ಮಾತು ಕತೆ ಹೆಣೆದುಕೊಂಡು ಬರುತ್ತವೆ. ಬಯಲಾಟ, ಗೊಂಬೆಯಾಟಗಳಂತೂ ನಾಟಕಗಳೇ. ಇವುಗಳನ್ನು ಕುರಿತ ಮಾಹಿತಿ ಸಂಗ್ರಹ ಸಮರ್ಪಕವಾಗಿದೆ. ಯಕ್ಷಗಾನ, ಅದರ ಪ್ರಭೇದಗಳಾದ ತೆಂಕುತಿಟ್ಟು - ಬಡಗು ತಿಟ್ಟು, ಮೂಡಲ ಪಾಯಗಳನ್ನು ಕುರಿತ ಬರಹವೂ ಇಲ್ಲಿದೆ. 'ಕೃಷ್ಣಪಾರಿಜಾತ'ದ ವಿಷಯವೂ ಇಲ್ಲಿದೆ. ಆಯಾ ಕಲಾಪ್ರಕಾರಗಳಲ್ಲಿ ನಿಷ್ಣಾತರಾದ ಅನೇಕ ಕಲಾವಿದರ ಸಾಧನೆ ಸಿದ್ಧಿಗಳನ್ನು ಉಲ್ಲೇಖಿಸಿದ್ದಾರೆ. ಶಿಷ್ಟ ರಂಗಭೂಮಿಗೆ ಉಗಮಸ್ಥಾನವಾದ ಜಾನಪದ ರಂಗಭೂಮಿಗೆ ಮಹತ್ವ ಸಂದಿರುವುದರಲ್ಲಿ ಆಶ್ಚರ್ಯವೇನೂ ಇಲ್ಲ. 'ಹಗರಣ'ದ ಬಗ್ಗೆ ನಮಗೆ ಹೆಚ್ಚಿನ ಮಾಹಿತಿ ಸಿಕ್ಕಿದೆ ಮತ್ತು ಅದನ್ನು ಬಿಟ್ಟರೆ ರಂಗನಾಥರ ವಿಷಯ ನಿರೂಪಣೆ ಅಚ್ಚುಕಟ್ಟಾಗಿದೆಯೆಂದೇ ಹೇಳಬೇಕು.

'ವೃತ್ತಿರಂಗಭೂಮಿ' ಅಧ್ಯಾಯ ವಿಪುಲ ವಿಷಯ ಸಂಗ್ರಹವನ್ನೊಳಗೊಂಡಿದೆ. ಅಖಿಲ ಭಾರತೀಯ ವೃತ್ತಿರಂಗಭೂಮಿಯ ಹಿನ್ನೆಲೆಯಲ್ಲಿ ಕರ್ನಾಟಕ ವೃತ್ತಿರಂಗಭೂಮಿಯ ಉದಯವನ್ನು ಅಧಿಕೃತವಾಗಿ ಆಧಾರಸಮೇತ ನಿರೂಪಿಸಿದ್ದಾರೆ. ಉತ್ತರ ಕರ್ನಾಟಕದಲ್ಲಿ ಮುಖ್ಯವಾಗಿ ಶಾಂತಕವಿಗಳು, ದಕ್ಷಿಣ ಕರ್ನಾಟಕದಲ್ಲಿ ಮೈಸೂರರಸರು ಇವರ ಪ್ರೋತ್ಸಾಹಗಳಿಂದಾಗಿ ನಾಟಕದ ಕಂಪನಿಗಳು ಹುಟ್ಟಿಕೊಂಡದ್ದನ್ನು ನಿರೂಪಿಸುತ್ತಾರೆ. ಈ ದಿನ ಜನರ ನೆನಪಿನಿಂದ ಪೂರ್ಣವಾಗಿ ಮರೆಯಾಗಿರುವ ಎಷ್ಟೋ ಕಂಪನಿಗಳು, ನಟರು ನಾಟಕ ಕಲೆಗಾಗಿ ದುಡಿದದ್ದನ್ನು ಎಲ್ಲ ವಿವರಗಳೊಂದಿಗೆ ಇಲ್ಲಿ ಹಿಡಿದಿಟ್ಟಿದ್ದಾರೆ. ಇಲ್ಲೆಲ್ಲ ನಿಷ್ಪಕ್ಷಪಾತ ವಿಮರ್ಶನ ದೃಷ್ಟಿಯಿದೆ. ಜಿ.ಎಚ್. ವೀರಣ್ಣನವರನ್ನು ಕುರಿತು "…. ಮೊದಲು 'ದೈಹಿಕ'ವಾಗಿದ್ದ ಹಾಸ್ಯಾಭಿನಯವನ್ನು ಸಭ್ಯವನ್ನಾಗಿಯೂ ಕಡೆಗೆ ರಮ್ಯವಾಗಿಯೂ ಮಾಡಿದ ಕೀರ್ತಿ ಅವರದು" ಎಂಬಂತಹ ಮಾತುಗಳು ರಂಗಭೂಮಿಯ ಬೆಳವಣಿಗೆಯ ಇತಿಹಾಸವನ್ನೂ ಸೂಚಿಸುತ್ತವೆ. ವೃತ್ತಿರಂಗದ ನಟರಲ್ಲದೆ ನಾಟಕಕಾರರನ್ನೂ ಇಲ್ಲಿ ಉಲ್ಲೇಖಿಸಿರುವುದು ಮೆಚ್ಚಬೇಕಾದ ಸಂಗತಿ. ವೃತ್ತಿರಂಗದ ಸ್ಥಿತಿಗತಿ ಎಂಬ ಉಪ ಅಧ್ಯಾಯದಲ್ಲಿ ರಂಗಮಂದಿರದ ಬೆಳವಣಿಗೆಯ ಸಮೀಕ್ಷೆ ಇದೆ. ಹಳ್ಳಿಗಳಲ್ಲಿ ಹಣದ ಬದಲು ಜೋಳ, ರಾಗಿ, ನೆಲಗಡಲೆ ಕೊಟ್ಟು ನಾಟಕ ನೋಡುವ ಕಾಲವೊಂದಿತ್ತು. ಸ್ತ್ರೀಯರು ನಾಟಕಗಳಲ್ಲಿ ಭಾಗವಹಿಸಬೇಕೆಂಬ ಸಲಹೆ ಬಂದಾಗ ಎದ್ದ ವಾದವಿವಾದಗಳು ಸ್ವಾರಸ್ಯವಾಗಿವೆ.

'ವಿಲಾಸಿ ರಂಗಭೂಮಿ' ಎಂಬ ಅಧ್ಯಾಯ ಹೊಸ ನಾಟಕಗಳ ಅಭಿನಯ ಕುರಿತದ್ದು. ನಾಟಕ ಜೀವನೋಪಾಯವಾಗದೆ ತಮ್ಮ ಬಿಡುವಿನ ಕೆಲಸವನ್ನಾಗಿ ಮಾಡಿಕೊಂಡವರಿಂದ ವಿಲಾಸಿ ರಂಗಭೂಮಿ ಬೆಳೆಯಿತು. 'ಇಗ್ಗಪ್ಪ ಹೆಗ್ಗಡೆಯ ವಿವಾಹ ಪ್ರಹಸನ' ನಮಗೆ ತಿಳಿದ ಮೊದಲ ವಿಲಾಸಿ ನಾಟಕ. ಉತ್ತರ ಕರ್ನಾಟಕ, ಹಳೆಯ ಮೈಸೂರುಗಳಲ್ಲಿ ವ್ಯಾಪಕವಾಗಿ

ಹರಡಿದ ವಿಲಾಸಿ ನಾಟಕಗಳನ್ನು ವಿಸ್ತಾರವಾಗಿ ಜಿಜ್ಞಾಸೆ ಮಾಡಿದ್ದಾರೆ. ವೃತ್ತಿ ರಂಗಭೂಮಿಯ ಅತಿರೇಕಗಳು ನಾಟಕವನ್ನು ಗಂಭೀರ ಕಲೆಯಾಗಿ ತೆಗೆದುಕೊಂಡವರನ್ನು ರೊಚ್ಚಿಗೇಳಿಸಿದ ಸಂಗತಿಯನ್ನೂ ಕೊಟ್ಟಿದ್ದಾರೆ. ಬೆಂಗಳೂರು ಮೈಸೂರುಗಳಂತಹ ನಗರಗಳಲ್ಲಲ್ಲದೆ, ಹೈಸ್ಕೂಲು ಕಾಲೇಜುಗಳಲ್ಲಿ ವಾರ್ಷಿಕೋತ್ಸವ ಸಂದರ್ಭಗಳಲ್ಲಿಯೂ ಪ್ರದರ್ಶಿತವಾದ ವಿಲಾಸಿ ನಾಟಕಗಳ ಗುಣ ದೋಷಗಳ ಪರೀಕ್ಷೆ ಇಲ್ಲಿದೆ. "ವಿಲಾಸೀರಂಗದಲ್ಲಿ ನಟ ನಿರ್ದೇಶಕರಿಗಿಂತ ಹೆಚ್ಚಾಗಿ ನಾಟಕಕಾರನಿಗೆ ಮಹತ್ವ ಬಂದದ್ದು ನಿಜ" ಎಂಬಂತಹ ಕಡೆಗಳಲ್ಲಿ ತೌಲನಿಕ ವಿವೇಚನೆ ಎದ್ದು ಕಾಣುತ್ತದೆ. ವಿಲಾಸಿ ನಾಟಕ 'ಬುದ್ಧಿಯ ನಾಟಕ' ಮತ್ತು ಅದರ ಪರಿಣಾಮವಾಗಿ ಅದರ ಪ್ರೇಕ್ಷಕ ವರ್ಗವೂ ಕಿರಿದಾಯಿತು. ಶ್ರೀರಂಗ, ಕೈಲಾಸಂ, ಕಾರಂತ, ಕಾರ್ನಾಡ್, ಲಂಕೇಶ್ ಮೊದಲಾದ ನಾಟಕಾರರ ಕೃತಿಗಳನ್ನು ವಿವೇಚಿಸಿದ್ದಾರೆ. ಪ್ರಸಾರ ನಾಟಕ, ಮಕ್ಕಳ ನಾಟಕಗಳ ಜಿಜ್ಞಾಸೆಯೂ ಇಲ್ಲುಂಟು. "ವಿಲಾಸಿ ರಂಗಭೂಮಿಯು 'ಬುದ್ಧಿವಂತರಿಗೆ ಮೀಸಲು' ಎಂಬ ಮಿತಿಯನ್ನು ದಾಟಿ 'ತಿಳಿಯದವರನ್ನು' ತಣಿಸುವ ದಾರಿ ಹುಡುಕಬೇಕಾಗಿದೆ" ಎಂಬ ರಂಗನಾಥರ ಮಾತು ನಮ್ಮನ್ನು ಚಿಂತನೆಗೆ ತೊಡಗಿಸುತ್ತದೆ.

ಹೀಗೆ ಈ ಪುಸ್ತಕದಲ್ಲಿ ಮುಖ್ಯವಾಗಿ ಮೂರು ರಂಗಭೂಮಿಗಳ ವಿವರಣಾತ್ಮಕ ತೌಲನಿಕ ವಿವೇಚನೆ ದೊರಕುತ್ತದೆ. ಇಲ್ಲಿ ಕೇವಲ ತುಂಡು ಸಂಗತಿಗಳನ್ನು ಕಲೆ ಹಾಕುವುದರತ್ತ ಮಾತ್ರ ಗಮನ ಹರಿಸದೆ, ಇಡೀ ಕನ್ನಡ ರಂಗಭೂಮಿಯ ಬೆಳವಣಿಗೆಯನ್ನು ದೃಷ್ಟಿಯಲ್ಲಿರಿಸಿಕೊಂಡು ವಿಚಾರ ಮಾಡಿದ್ದಾರೆ. ಲೇಖಕರ ಶ್ರದ್ಧೆ ಶ್ರಮಗಳು ಮೆಚ್ಚುಗೆ ಗಳಿಸುತ್ತವೆ. ಅಚ್ಚಿನ ದೋಷಗಳು ಕಿಕ್ಕಿರಿದು ತುಂಬಿರುವ ಈ ಗ್ರಂಥ ತನ್ನ ಎರಡನೆಯ ಮುದ್ರಣದಲ್ಲಿ ಅವನ್ನು ತಿದ್ದಿಕೊಂಡೀತೆಂದು ಆಶಿಸಬಹುದು. ಅಖಿಲ ಭಾರತೀಯ ಮಟ್ಟದಲ್ಲಿ ಕನ್ನಡ ರಂಗಭೂಮಿ ಇಂದು ಮುಂಚೂಣಿಯಲ್ಲಿದೆ. ಅದರ ಹುಟ್ಟು, ಪ್ರಗತಿ, ಏಳು-ಬೀಳುಗಳು, ಪ್ರಭೇದಗಳು, ಮುಂದಿನ ಭವಿಷ್ಯ ಇಂತಹ ಸಂಗತಿಗಳನ್ನು ಲಕ್ಷ್ಯದಲ್ಲಿರಿಸಿಕೊಂಡು ಪ್ರೌಢ ಗ್ರಂಥವೊಂದನ್ನು ಕೊಟ್ಟಿರುವ ಡಾ॥ ರಂಗನಾಥ್ ಅವರು ಅಭಿನಂದನೀಯರಾಗಿದ್ದಾರೆ. ಈ ಪುಸ್ತಕಕ್ಕೆ ಡಾ॥ ಹಾ.ಮಾ. ನಾಯಕರ ಒಳ್ಳೆಯ ಮುನ್ನುಡಿಯಿದೆ.

ಕನ್ನಡ ಸಾಹಿತ್ಯದಲ್ಲಿ ಪ್ರೌಢದೇವರಾಯ ಅಥವಾ ಇಮ್ಮಡಿ ದೇವರಾಯನ ಆಳಿಕೆಯ ಕಾಲಕ್ಕೆ ವಿಶಿಷ್ಟ ಸ್ಥಾನವಿದೆ. ವಚನಗಳ ಸಂಕಲನ, ವ್ಯಾಖ್ಯಾನಗಳು ನಡೆದದ್ದು ಆಗಲೇ ಮತ್ತು ವೀರಶೈವ ಕವಿಗಳು ಹೊಸ ಉತ್ಸಾಹದಿಂದ ಕೃತಿರಚನೆ ಆರಂಭಿಸಿದ್ದೂ ಆಗಲೇ. ಅವನದು ಧಾರ್ಮಿಕ ಇತಿಹಾಸದ ದೃಷ್ಟಿಯಿಂದಲೂ ಮುಖ್ಯವಾದ ಯುಗ. ಅಂತಹ ಕಾಲದಲ್ಲಿ (ಕ್ರಿ.ಶ. 1424-46) ರಚಿತವಾದ ಕನ್ನಡ ಸಾಹಿತ್ಯವನ್ನು ಕುರಿತ ವಿವೇಚನೆಯೇ ಡಾ॥ ವಿ. ಶಿವಾನಂದರ **ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ** ಎಂಬ ಪಿಎಚ್.ಡಿ. ನಿಬಂಧ. ದೇವರಾಯ ಮತ್ತು ಅವನ ಮಂತ್ರಿ ಲಕ್ಕಣ್ಣ ದಂಡೇಶರನ್ನು ಕುರಿತಂತೆ ಶಾಸನೋಕ್ತಿಗಳೂ ವಿದೇಶಿ ಪ್ರವಾಸಿಗರ ಹೇಳಿಕೆಗಳೂ ದೊರಕುತ್ತವೆ. ಈ ಒಂದು ಕಾಲದ ಸಾಹಿತ್ಯಕ ಇತಿಹಾಸವನ್ನು ಅಭ್ಯಸಿಸುವವರಿಗೆ ಸಾಮಗ್ರಿಯ ಕೊರತೆ ಇಲ್ಲ. ಈ ನಿಬಂಧವಲ್ಲಿ

ಮುಖ್ಯವಾಗಿ ಮೂರು ಭಾಗಗಳಿವೆ: ಚಾರಿತ್ರಿಕ ಹಿನ್ನೆಲೆ, ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ, ಮತ್ತು ಈ ಕಾಲದ ಸಾಹಿತ್ಯ ಸ್ವರೂಪ. ಚಾರಿತ್ರಿಕ ಹಿನ್ನೆಲೆಯಲ್ಲಿ ಆ ಕಾಲದ ಚರಿತ್ರೆ, ಪ್ರೌಢದೇವರಾಯನ ಮತ ವಿಚಾರ, ಆ ಕಾಲದ ಧಾರ್ಮಿಕ ಸಾಂಸ್ಕೃತಿಕ ಚಟುವಟಿಕೆಗಳು, ಶಾಸನ - ಕಾವ್ಯ - ಪ್ರವಾಸಿ ಬರಹಗಳಲ್ಲಿ ಪ್ರೌಢದೇವರಾಯ ಎಂಬ ಉಪ ಅಧ್ಯಾಯಗಳಿವೆ. ಎರಡನೆಯ ಅಧ್ಯಾಯದಲ್ಲಿ ಆ ಕಾಲದ ವೀರಶೈವ, ಜೈನ, ಬ್ರಾಹ್ಮಣ ಸಾಹಿತ್ಯಗಳನ್ನು ಚರ್ಚಿಸಿದ್ದಾರೆ. ಶಾಸನ ಸಾಹಿತ್ಯವನ್ನೂ ಪ್ರಾಸಂಗಿಕವಾಗಿ ಪ್ರಸ್ತಾಪಿಸಿದ್ದಾರೆ. ಕೊನೆಯ ಅಧ್ಯಾಯದಲ್ಲಿ ಆ ಕಾಲದ ಸಾಹಿತ್ಯದ ವೈಶಿಷ್ಟ್ಯಗಳ ವಿವೇಚನೆ ಮಾಡಿದ್ದಾರೆ.

ಆರಂಭದ 'ಪ್ರಸ್ತಾವನೆ' ಭಾಗದಲ್ಲಿ ತಮ್ಮ ನಿಬಂಧದ ವಸ್ತುವಿನ ರೂಪರೇಷೆಗಳನ್ನು ಕೊಟ್ಟಿದ್ದಾರೆ. ಚಾಮರಸನ ಸಮಕಾಲೀನನೆಂದು ನಂಬಲಾಗಿರುವ ಕುಮಾರವ್ಯಾಸನನ್ನು ಈ ಕಾಲದ ಸಾಹಿತ್ಯದ ಚರ್ಚೆಯಿಂದ ಹೊರಗಿಟ್ಟಿರುವುದರ ಬಗ್ಗೆ ಡಾ|| ಶಿವಾನಂದ ಕೊಟ್ಟಿರುವ ಕಾರಣಗಳು (ಪು.4) ಸಮರ್ಥನೀಯವೆನ್ನಿಸುವುದಿಲ್ಲ. ಮತ್ತು ಅವನನ್ನು ಪ್ರೌಢದೇವರಾಯನ ಕಾಲಕ್ಕೆ ಸೇರಿಸಿಕೊಂಡರೆ ತಾವು ತಮ್ಮ ಸಂಶೋಧನೆಯನ್ನು 'ಅವಸರ'ದಲ್ಲಿ ಮಾಡಲಾಗುತ್ತಿರಲಿಲ್ಲವೆಂಬರ್ಥದ ಮಾತುಗಳಂತೂ ತೀರ ಅಸಮರ್ಥನೀಯವಾಗಿವೆ. ಶಿವಾನಂದರ ಸಂಶೋಧನೆಯ ದೌರ್ಬಲ್ಯ ಆರಂಭದಲ್ಲಿಯೇ ಹೀಗೆ ವ್ಯಕ್ತವಾಗುತ್ತದೆ. ಮುಂದೆ, 'ಕುಮಾರವ್ಯಾಸನ ಕಾಲವಿಚಾರ' ಚರ್ಚೆ ಮಾಡುವಾಗ, ಭಾಸ್ಕರ ಕವಿಯ (ಕ್ರಿ.ಶ. 1424) ಜೀವಂಧರ ಚರಿತೆಯಲ್ಲಿ ಸ್ಪಷ್ಟವಾಗಿ ಕುಮಾರವ್ಯಾಸನ ಪ್ರಭಾವ ಕಾಣಿಸುವ ವಿಷಯವನ್ನು ಗಮನಿಸದಿರುವುದರಿಂದ ಕುಮಾರವ್ಯಾಸನ ಕಾಲ ಸು. 1500 ಎಂದು ಅವೈಜ್ಞಾನಿಕವಾಗಿ ತೀರ್ಮಾನಿಸುತ್ತಾರೆ.

ಈ ಅವಸರ ಮತ್ತು ಅಶಾಸ್ತ್ರೀಯವಾದ ದೃಷ್ಟಿ ಉದ್ದಕ್ಕೂ ಕಾಣಿಸುತ್ತದೆ. ದೊಡ್ಡ ವಿಷಯಗಳಿರಲಿ, ಸಣ್ಣ ಸಣ್ಣ ಸಂಗತಿಗಳಲ್ಲೂ ಇದು ಎದ್ದು ಕಾಣುತ್ತದೆ. ವಿಜಯನಗರದ ಅರಸರಿಗೆ 'ಮತವು ಐಚ್ಛಿಕ ವಿಷಯವಾಗಿತ್ತು' (ಪು. 22); "ವಾರಣಾಸಿಯ ತಡಿಯಲಿ ಕಪಿಲೆಯ ಕೊಂದ'...... ಎಂಬ ಪಾರಿಭಾಷಿಕ ಪದಗಳನ್ನು ಶಾಸನ ಕವಿಗಳು ಬಳಸಿಕೊಂಡಿದ್ದಾರೆ" (ಪು. 26); "ಆಂಗ್ಲ ಕವಿ ಸಾರ್ವಭೌಮನಾದ ಶ್ರೀನಾಥ" (ಪು. 6); "ಶಿವ, ಪಾರ್ವತಿ, ನಂದಿಮುದ್ರೆ, ಗಜ, ಸಾರ್ವಭೌಮನಾದ ಶ್ರೀನಾಥ" (ಪು. 6); "ಶಿವ, ಪಾರ್ವತಿ, ನಂದಿಮುದ್ರೆ, ಗಜ, ಗಂಡಭೇರುಂಡಗಳು ವೀರಶೈವ ಸಂಕೇತಗಳಾಗಿವೆ" - ಇಂಥ ಮಾತುಗಳನ್ನು ಹೇಗೆ ಗಂಭೀರವಾಗಿ ತೆಗೆದುಕೊಳ್ಳಬೇಕೋ ತಿಳಿಯದು. "ಪ್ರೌಢದೇವರಾಯನು ಯಾವ ಮತಾವಲಂಬಿಯಾಗಿದ್ದನು? ಎಂಬುದಕ್ಕಿಂತ ಅವನ ಧರ್ಮಧೋರಣೆ, ಪ್ರೌಢದೇವರಾಯನ ಧರ್ಮ ದೃಷ್ಟಿ ಎಂತಿದ್ದಿತು ಎಂದು ವಿಚಾರಿಸುವುದು ಮೇಲು" - ಈ (ಕೆಟ್ಟ ರಚನೆಯ) ವಾಕ್ಯದ ಜೊತೆ - "ಈ ಆಧಾರದಿಂದಲೂ ಪ್ರೌಢದೇವರಾಯನು ವೀರಶೈವನೆಂದು ನಿರ್ಧರಿಸಬಹುದು" ಈ ಎರಡು ವಾಕ್ಯಗಳನ್ನು

ಹೋಲಿಸಿ ನೋಡಿದರೆ ಎರಡಕ್ಕೂ ಇರುವ ವಿರೋಧ ಎದ್ದು ಕಾಣುತ್ತದೆ. 'ಸಕಲ ವರ್ಣಾಶ್ರಮ'ಗಳೆಂದರೆ 'ಅಷ್ಟಾದಶ ಜಾತಿ' ಎಂದು ತೀರ್ಮಾನಿಸಿರುವುದು (ಪು. 49) ತಪ್ಪು. ಪ್ರೌಢದೇವರಾಯನ ಕಾಲದಲ್ಲಿದ್ದ ನೂರೊಂದು ವಿರಕ್ತರ ಬಗ್ಗೆ ಸಂಗ್ರಹಿಸಿರುವ ಮಾಹಿತಿ ಇದ್ದುದರಲ್ಲಿ ಸಮಗ್ರವಾಗಿದೆ. ಸಾಹಿತ್ಯ ರಚನೆ ಮಾಡಿರುವ ವಿರಕ್ತರ ವಿಷಯ ಸರಿ, ಆದರೆ ಸಾಹಿತ್ಯಕ್ಕೆ ಸಂಬಂಧವಿಲ್ಲದ ಎಷ್ಟೋ ವಿರಕ್ತರ ಬಗ್ಗೆ ವಿವರಗಳು ಬಂದಿರುವುದು ನಿಬಂಧಕ್ಕೆ ಹೊರತಾಗಿ ನಿಲ್ಲುತ್ತದೆ. ಕರಸ್ಥಲದ ವೀರಣ್ಣೊಡೆಯನ 'ಲಿಂಗಸೂತ್ರದ ವಚನ' ಅಪ್ರಕಟಿತವಾಗಿರುವುದೇ ಅದನ್ನು ನಿಬಂಧಕಾರರು ಪರಿಚಯ ಮಾಡಿಕೊಡುವುದರ ಅಗತ್ಯವನ್ನು ಹೇಳುತ್ತದೆ. ವಚನ ಸಂಕಲನಕಾರರನ್ನು ಕುರಿತ ಬರಹ ಆ ಕಾಲದ ಸಾಹಿತ್ಯಕ ಚಟುವಟಿಕೆಗಳನ್ನು ಸಮರ್ಥವಾಗಿ ನಿರೂಪಿಸುವುದಿಲ್ಲ. ಈ ಕಾಲಕ್ಕೋ ಅಥವಾ ಸ್ವಲ್ಪ ಮುಂಚೆಯೋ ಇದ್ದಿರಬಹುದಾದ ಶಿವಗಣಪ್ರಸಾದಿ ಮಹಾದೇವಯ್ಯನ ಶೂನ್ಯ ಸಂಪಾದನೆಯ ವಿಷಯ ಇಲ್ಲದಿರುವುದು ದೊಡ್ಡ ಕೊರತೆ. ಶಿವಶರಣರ ಹಾಡುಗಳಿಗೆ ಅವರ ವಚನಗಳು ಮೂಲ ಎನ್ನುವ ಶಿವಾನಂದರ ವಾದಕ್ಕೆ ಸಮರ್ಥನೆಗಳಿವೆ. 'ಜಕ್ಕಣ್ಣ' ಪದದ ನಿಷ್ಪತ್ತಿ ಬಗೆಗೆ ವಿಚಾರ ಮಾಡ ಹೊರಟ ಅವರು (ಪು. 239) ಆ ಬಗ್ಗೆ ಮುಂದೆ ಸುಮ್ಮನಾಗುತ್ತಾರೆ. 'ಜಕ್ಕ' ಎಂಬುದು 'ಯಕ್ಷ'ದ ಪ್ರಾಕೃತ ರೂಪದಿಂದ ಬಂದಿದೆಯೆಂಬಲ್ಲಿ ಅನುಮಾನವಿಲ್ಲ. 'ವ್ಯಾಕರಣಾತ್ಮಕ ಪ್ರಯೋಗ'ಗಳೆಂದು ಪು. 347ರ ಕೆಳಗೆ ಕೊಟ್ಟಿರುವಲ್ಲಿ ತೀರ ಅಭಾಸಗಳಿವೆ. ಚಾಮರಸನ ಪ್ರಭುಲಿಂಗಲೀಲೆಯ ಶ್ರೇಷ್ಠತೆಯನ್ನು ಕುರಿತು ಮಾತನಾಡುವಾಗ "ಇದರಿಂದ ಈ ಕೃತಿ ಸಹೃದಯನನ್ನೂ ಸಹ ಪರಂಧಾಮಕ್ಕೆ ಎಳೆದೊಯ್ಯುವ ದೇವಯಾನವಾಗಿದೆ" ಎಂಬ ಮಾತು ಹಾಸ್ಯವನ್ನು ಉಕ್ಕಿಸುತ್ತದೆ.

ಈ ಕೃತಿಯಲ್ಲಿ ಇಂಗ್ಲೀಷಿನ ಕಗ್ಗೊಲೆ ನಡೆದಿದೆ. "A peak of highness in self realisation", "Eye of Angriness", "eye of grace ಎಂಬ ಸ್ವಂತ ಉಕ್ತಿಗಳ ಮಾತಿರಲಿ, ಬೇರೆ ಉಲ್ಲೇಖಗಳನ್ನು ಕೊಡುವಾಗ ಮಾಡಿರುವ ತಪ್ಪುಗಳನ್ನು ಪಟ್ಟಿ ಹಾಕುವುದೂ ಅಸಾಧ್ಯ. ಅಡಿಟಿಪ್ಪಣಿ ಕೊಡುವ ರೀತಿ ತೀರ ಅವ್ಯವಸ್ಥೆಯಿಂದ ಕೂಡಿದ್ದು, "ಪ. ವ. ಚೆ.ಖ. ಪು. ಶಿ. ತ. ಚಿಂ. ಇತ್ಯಾದಿ" ಇಲ್ಲಿ ಯಾವ ಪುಸ್ತಕಗಳು ಸೂಚಿತವಾಗಿವೆಯೆಂಬುದನ್ನು ನಾವೇ ಪತ್ತೆ ಮಾಡಿಕೊಳ್ಳಬೇಕು. ಶಾಸನಗಳ ಭಾಷೆ ಬಗ್ಗೆ ಬರೆದಿರುವ ನಾಲ್ಕು ಪುಟಗಳನ್ನು (449-52) ಪೂರ್ತಿ ಕಿತ್ತುಹಾಕಬೇಕಿತ್ತು. ಅಚ್ಚಿನ ಮೊಳೆಗಳನ್ನು ಜೋಡಿಸುವ ವ್ಯಕ್ತಿಗೆ ಸ್ವಾತಂತ್ರ್ಯಕೊಟ್ಟಿದ್ದರೆ ಅವನೇ ಎಷ್ಟೋ ತಪ್ಪುಗಳನ್ನು ಪರಿಹರಿಸುತ್ತಿದ್ದ. 522 ಪುಟಗಳ ಈ ನಿಬಂಧ ಎಷ್ಟು ಒಳ್ಳೆಯ ಕಾಗದದ ಮೇಲೆ ಅಚ್ಚಾಗಿದೆ! ಎಷ್ಟು ಹಣ ವ್ಯರ್ಥ ; ಹಾಗೆಯೇ ಡಿಗ್ರಿಯ ಅಪಮೌಲ್ಯವೆಷ್ಟು ! ನಮ್ಮ ನಿಬಂಧ ಪರೀಕ್ಷಕರು ಏಕೆ ಸ್ವಲ್ಪ ನಿಷ್ಠುರವಾಗಿರಬಾರದು? ಈ ಮಾತುಗಳು ಸ್ವಲ್ಪ ಒರಟಾಗಿ ಕಾಣಿಸಬಹುದು. ಆದರೆ ಏನು ಮಾಡುವುದು !

**ಗಳಗನಾಥರು ಮತ್ತು ಅವರ ಕಾದಂಬರಿಗಳು** ಡಾ. ಕೃಷ್ಣಮೂರ್ತಿ ಕಿತ್ತೂರ ಅವರ ಪಿಎಚ್.ಡಿ. ನಿಬಂಧ. 'ಕನ್ನಡ ಕಾದಂಬರಿ ಪಿತಾಮಹ' ಎಂದು ಪ್ರಖ್ಯಾತರಾದ

ಗಳಗನಾಥ ಅವರ ಕಾದಂಬರಿಗಳನ್ನು ಕುರಿತಂತೆ ನಡೆದಿರುವ ಕಿತ್ತೂರ ಅವರ ಸಂಶೋಧನೆಯ ಫಲವಾಗಿ ಆ ಲೇಖಕರನ್ನು ಕುರಿತಂತೆ ನಮಗಿರುವ ಅರಿವು ವೃದ್ಧಿಸಿದೆ. ಈ ನಿಬಂಧದಲ್ಲಿ ಒಟ್ಟು ಹನ್ನೊಂದು ಅಧ್ಯಾಯಗಳಿವೆ. 'ಅಧ್ಯಯನದ ಅಗತ್ಯ' ಎಂಬುದು ನಿಬಂಧದ ವಸ್ತುವಿನ ಸಮರ್ಥನೆಯಾಗಿದೆ. ಗಳಗನಾಥರ ಬಗ್ಗೆ ನಡೆದಿರುವ ಕಾರ್ಯವನ್ನು ಸಮೀಕ್ಷಿಸಿ, ಅವುಗಳ ಕೊರತೆಗಳನ್ನೂ ತೋರಿಸಿದ್ದಾರೆ. 'ಗಳಗನಾಥರ ಪರಿಸರ' ಎಂಬ ಅಧ್ಯಾಯದಲ್ಲಿ ಅವರ ಕಾಲದ ಸಾಹಿತ್ಯಕ ಪರಿಸರವನ್ನು ಕೊಟ್ಟಿದ್ದಾರೆ. ಯಾದವ ಕಬ್ಬಿಗನ 'ಕಲಾವತೀ ಪರಿಣಯ' (ಕ್ರಿ.ಶ. 1815) ಮುಂತಾದ ಹತ್ತೊಂಬತ್ತನೇ ಶತಮಾನದ ಆದಿಭಾಗಕ್ಕೆ ಸೇರುವ ಕೃತಿಗಳನ್ನು ಕಾದಂಬರಿಗಳೆಂದು ಕರೆಯಲಾಗದೆಂದು ಕಿತ್ತೂರ ಅವರು ವಾದಿಸಿರುವುದು ಸರಿಯಾಗಿದೆ. ಚೆನ್ನಬಸಪ್ಪ, ಗಂಗಾಧರ ಮಡಿವಾಳೇಶ್ವರ ತುರಮರಿ, ಶಾಂತವೀರ ರಾಜಿದೇವ ಕಿತ್ತೂರ, ಶಾಂತಕವಿ, ವೆಂಕಟರಂಗೋ ಕಟ್ಟಿಯವರಂತಹ ಕನ್ನಡ ಕೃತಿಕಾರರ ಪರಿಚಯ ಮಾಡಿಕೊಟ್ಟಿದ್ದಾರೆ. ಇಲ್ಲಿ ವಿಷಯ ಸಂಗ್ರಹ ಸಮರ್ಪಕವಾಗಿದೆ. 'ಗಳನಾಥರು' ಅಧ್ಯಾಯದಲ್ಲಿ ಅವರ ಜೀವನ ಚರಿತ್ರೆಯನ್ನು ಕೊಟ್ಟಿದ್ದಾರೆ. ಗಳಗನಾಥರು ಕೆಲಸ ಮಾಡಿದ ಶಾಲೆಯ 'ವ್ಹಿಜಿಟ್ ಬುಕ್'ನಲ್ಲಿ ನಮೂದಾದ ಅಧಿಕಾರಿಗಳ ಅಭಿಪ್ರಾಯಗಳು ಅವರ ನಿಷ್ಠೆ, ಹಿಡಿದ ಕೆಲಸ ಬಿಡದೆ ಸಾಧಿಸುವ ಜಿಗುಟು ಸ್ವಭಾವಗಳನ್ನು ತೋರಿಸುತ್ತವೆ. ಕಿತ್ತೂರರು ಅಲ್ಲಿಂದ ವಾಕ್ಯಗಳನ್ನು ಉದ್ಧರಿಸಿರುವುದು ಯೋಗ್ಯವಾಗಿದೆ. ಗಳಗನಾಥರು ಬದುಕಿನಲ್ಲಿ ಅನುಭವಿಸಿದ ಬೇಗೆ, ಮರಾಠಿ ಅನುವಾದದ ಕಡೆ ಗಮನ ಹೋದದ್ದು ಇವೇ ಮೊದಲಾದ ವಿಷಯಗಳ ಕಾಲಾನುಕ್ರಮ ವಿವರಣೆ ಇದೆ. 'ಗಳಗನಾಥರ ಕೃತಿ ಸಂಖ್ಯಾ ನಿರ್ಣಯ' ದಲ್ಲಿ ಕಿತ್ತೂರ ಅವರು ಗಳಗನಾಥರು ಬರೆದ ಕೃತಿಗಳು ವಾಸ್ತವವಾಗಿ ಎಷ್ಟು ಎಂಬುದರ ಚರ್ಚೆ ನಡೆಸಿದ್ದಾರೆ. ಅವರು ಬರೆಯದ ಕೆಲವು ಗ್ರಂಥಗಳು ಅವರೇ ಬರೆದುವೆಂದು ಪ್ರಚಾರವಾಗಿರುವ ಸಂಗತಿಯನ್ನು ತೋರಿಸಿದ್ದಾರೆ. (ಉದಾ : ವೆಂಕಟೇಶ ಮಾಹಾತ್ಮ್ಯ, ವಿಕಾರವಿನಾಶ). ಇತರರ ಅಭಿಪ್ರಾಯಗಳನ್ನು ಅನುಲಕ್ಷಿಸಿ, ಒಟ್ಟು ಅವರ ಕೃತಿಗಳು ಐವತ್ತು ಎಂದು ನಿರ್ಣಯಿಸಿದ್ದಾರೆ. ಈ ನಿರ್ಣಯಕ್ಕೆ ಬರುವಾಗ ತೋರಿರುವ ಪ್ರೌಢಿಮೆ ಮೆಚ್ಚಬೇಕಾದ್ದು.

ಮುಂದಿನ ಅಧ್ಯಾಯಗಳು ಗಳಗನಾಥರ ವಿಮರ್ಶೆಗೆ ಮೀಸಲಾಗಿದೆ. 'ಅನುವಾದಿತ ಕಾದಂಬರಿಗಳು' ಆರಂಭದಲ್ಲಿ ಭಾಷಾಂತರದ ಮಹತ್ವದ ಬಗ್ಗೆ ಬರೆದಿರುವ ಆರು ಪುಟಗಳು ಸಂಪೂರ್ಣ ಅನಗತ್ಯ. ಈ ಅಧ್ಯಾಯದಲ್ಲಿ ಗಳಗನಾಥರ ಕಾದಂಬರಿಗಳನ್ನು ಅವುಗಳ ಮೂಲಕ್ಕೆ ಹೋಲಿಸಿ ತೌಲನಿಕ ವಿವೇಚನೆ ಮಾಡಿದ್ದಾರೆ; ಆ ವಿವೇಚನೆ ಸಮರ್ಪಕವಾಗಿರುವಂತಿದೆ ಮತ್ತು ವಿಮರ್ಶಾತ್ಮಕವೂ ಆಗಿದೆ. ಗಳಗನಾಥರ ಬಗ್ಗೆ ಇರುವ ಪ್ರಶಂಸೆ ಎಲ್ಲೂ ಮುಕ್ತ ವಿಮರ್ಶೆಗೆ ಅಡ್ಡಿಯಾಗಿಲ್ಲ (ಉದಾ : ಪು. 177, 197). ಅವರ ಅನುವಾದಗಳ ಒಟ್ಟು ಧೋರಣೆಯನ್ನು ಸಂಕ್ಷಿಪ್ತವಾಗಿ ಹೇಳಿರುವುದು (ಪು. 185-6) ಮೆಚ್ಚಬೇಕಾದ್ದು. ಗಳಗನಾಥರ ಅನುವಾದಗಳನ್ನು 'ಸೃಜನಶೀಲ'ವೆಂದು ಕರೆದು ಸಮರ್ಥಿಸಿಕೊಂಡಿರುವ ರೀತಿಯೂ ಸರಿಯಾಗಿದೆ. ಗಳಗನಾಥರ ಆರು ಸ್ವತಂತ್ರ ಕಾದಂಬರಿಗಳಿಗೆ ಒಂದು ಅಧ್ಯಾಯ ಮೀಸಲಾಗಿದೆ. ಯಾವುದೇ ಕಾದಂಬರಿಯ ಕತೆಯನ್ನೂ

ಸಂಗ್ರಹಿಸುವ ದಡ್ಡಕಾರ್ಯಕ್ಕೆ ಹೋಗದೆ ನೇರವಾಗಿ ಅದರ ವಸ್ತುವನ್ನು ಪ್ರಸ್ತಾಪಿಸಿ ವಿಶ್ಲೇಷಣೆಗೆ ತೊಡಗುತ್ತಾರೆ. ಗಳಗನಾಥರ ಕಾದಂಬರಿಗಳು ಘಟನಾಪ್ರಧಾನವಾದ್ದರಿಂದ ಅವು ಹೆಚ್ಚಾಗಿ 'ಚಪ್ಪಟೆ' ಆಗಿವೆಯೇ ಹೊರತು 'ಮೈ ತುಂಬಿ'ಕೊಂಡಿಲ್ಲವೆಂದು ಹೇಳುವಾಗ ಫೋರ್‌ಸ್ಟರ್‌ನ ಮಾತುಗಳನ್ನು ಬಳಸಿಕೊಂಡಿರುವುದು ಗಮನಾರ್ಹ. ಸ್ವತಂತ್ರ ಕಾದಂಬರಿ ರಚನೆಗೆ ಗಳಗನಾಥರಿಗೆ ಕರ್ನಾಟಕದ ಇತಿಹಾಸ ಸಾಮಗ್ರಿಯ ಅಭಾವವಿದ್ದುದು ಹೇಗೆ ಮಿತಿಯನ್ನು ತಂದಿತು ಎಂಬುದನ್ನು ಸರಿಯಾಗಿ ತೋರಿಸಿಕೊಟ್ಟಿದ್ದಾರೆ.

ನಿಬಂಧದ ಹೆಸರು "ಗಳಗನಾಥರು ಮತ್ತು ಅವರ ಕಾದಂಬರಿಗಳು" ಎಂದಿದ್ದರೂ, ಕಾದಂಬರಿಗಳಲ್ಲದೆ (22) ಉಳಿದ 28 ಕೃತಿಗಳನ್ನೂ ಅವರು ಸಮೀಕ್ಷಿಸಿರುವುದು ಸರಿಯಾಗಿದೆ. 'ಇತರ ಕೃತಿಗಳ'ಲ್ಲಿ ಪೌರಾಣಿಕ ಗ್ರಂಥಗಳು, ಸತ್ಪುರುಷರ ಚರಿತ್ರೆಗಳು, ನಿಬಂಧ - ಪ್ರಬಂಧಗಳು, ಇತರ ಲೇಖನಗಳು ಸೇರ್ಪಡೆಯಾಗುತ್ತವೆ. ಗದ್ಯಶೈಲಿಗೇ ಒಂದು ಅಧ್ಯಾಯ ಮೀಸಲಾಗಿದೆ. (ಮತ್ತೆ ಇಲ್ಲಿ 'ಶೈಲಿ'ಯನ್ನು ಕುರಿತ ಮೂರು ಪುಟಗಳ ಬರಹ ಅನಗತ್ಯ). ಆ ಕಾಲದ ಅಶುದ್ಧ ಭಾಷೆಯ ಸಾಂಪ್ರದಾಯಿಕ ಶೈಲಿಯಿಂದ, ಕೊನೆಗೆ ಮರಾಠಿ ಭಾಷೆಯಿಂದ ಗಳಗನಾಥರು ತಮ್ಮನ್ನು ತಾವು ಬಿಡಿಸಿಕೊಂಡು ತಮ್ಮದೇ ಶೈಲಿಯನ್ನು ರೂಪಿಸಿಕೊಂಡ ಬಗೆಯನ್ನು ಕಿತ್ತೂರ ಅವರು ಸಪ್ರಮಾಣವಾಗಿ ತೋರಿಸಿಕೊಟ್ಟಿದ್ದಾರೆ (ಪು. 338). ವೆಂಕಟಾಚಾರ್ಯ ಮತ್ತು ಗಳಗನಾಥರನ್ನು ಪರಸ್ಪರ ಹೋಲಿಸಿ ಇಬ್ಬರಿಗೂ ಇರುವ ಸಾಮ್ಯ - ವೈಷಮ್ಯಗಳನ್ನು ಗುರುತಿಸುವ ವಿಮರ್ಶನ ಪ್ರಜ್ಞೆಯನ್ನು ಮೆರೆದಿದ್ದಾರೆ. ಇಬ್ಬರೂ ಕನ್ನಡಕ್ಕೆ ಬೇರೆ ಬೇರೆ ಮೂಲಗಳಿಂದ ಕಾದಂಬರಿಗಳನ್ನು ಒದಗಿಸಿ ಕನ್ನಡದ ಸಂಪತ್ತನ್ನು ಹೆಚ್ಚಿಸಿದವರು. ಆದರೆ ಇಬ್ಬರೂ ಅನುಸರಿಸಿದ ಭಿನ್ನಮೂಲಗಳು (ಮರಾಠಿ ಮತ್ತು ಬಂಗಾಳಿ) ಮತ್ತು ತಮ್ಮ ಭಿನ್ನ ಸಂಸ್ಕಾರ ಪರಿಸರಗಳಿಂದಾಗಿ ಇಬ್ಬರ ಕಾದಂಬರಿಗಳ ಭಾಷಾಶೈಲಿ ಭಿನ್ನವಾಗಿರುವುದನ್ನು ಗುರುತಿಸಿದ್ದಾರೆ. ಕೆಲವೊಮ್ಮೆ ಒಂದೇ ಕಾದಂಬರಿಯ ಅನುವಾದವನ್ನು ಇಬ್ಬರೂ ಮಾಡಿದ್ದಾರೆ - ಒಬ್ಬರು ನೇರವಾಗಿ ಬಂಗಾಲಿಯಿಂದ, ಇನ್ನೊಂದು ಅದೇ ಬಂಗಾಲಿ ಕಾದಂಬರಿಯ ಮರಾಠಿಯ ಅನುವಾದದಿಂದ. ಆ ಎರಡೂ ಅನುವಾದಗಳು ಹೇಗೆ ಭಿನ್ನವಾಗುತ್ತವೆಯೆಂಬ ಅಧ್ಯಯನವನ್ನು ಸೊಗಸಾಗಿ ಮಾಡಿದ್ದಾರೆ.

ಕಿತ್ತೂರ ಅವರು ಇಲ್ಲೆಲ್ಲ ತೋರಿಸುವ ಎಚ್ಚರ, ಸಂಯಮಗಳು ಮೆಚ್ಚತಕ್ಕದ್ದು. ಸಾಮಗ್ರಿ ಸಂಗ್ರಹಣ, ಸೂಕ್ಷ್ಮಗಳನ್ನು ಗಮನಿಸುವ ಹರಿತ ಬುದ್ಧಿ, ಪರಸ್ಪರ ತೂಗಿ ನೋಡುವಲ್ಲಿ ತೋರಿಸುವ ನಿಷ್ಪಕ್ಷಪಾತ ಮನೋಭಾವ, ನಿರೂಪಿಸುವಲ್ಲಿ ಬಳಸುವ ಹದವಾದ ಭಾಷೆ ಇವುಗಳಿಂದ ಅವರ ನಿಬಂಧ ಹೊಸಗನ್ನಡ ಸಾಹಿತ್ಯ ಚರಿತ್ರೆಗೆ ಅಮೂಲ್ಯ ಕಾಣಿಕೆಯಾಗುತ್ತದೆ. ಸಹಾಯಕ ಸಾಹಿತ್ಯವನ್ನು ಪಟ್ಟಿ ಮಾಡಿರುವ ರೀತಿ, ಅಚ್ಚಿನ ಬಗ್ಗೆ ತೋರಿರುವ ಶ್ರದ್ಧೆ ಇವೂ ಮೆಚ್ಚುಗೆ ಗಳಿಸುತ್ತವೆ. 'ಅಕಾರಾದಿ ಪದಸೂಚಿ' ಓದುಗರು ತಮಗೆ ಬೇಕಾದ ವಿಷಯಗಳನ್ನು ಆಯ್ಕೆ ಮಾಡಿಕೊಳ್ಳಲು ಸಹಾಯ ಮಾಡುತ್ತದೆ. ಬಹುಶಃ ಪದಸೂಚಿ ಇನ್ನೂ ಸಮಗ್ರವಾಗಿರಬಹುದಿತ್ತು.

ಶ್ರೀ ವಿಜಯದಾಸರು ಕ. ಗೋಕುಲನಾಥ್ ಅವರಿಗೆ ಪಿಎಚ್.ಡಿ. ಪದವಿಯನ್ನು ತಂದುಕೊಟ್ಟಿರುವ ನಿಬಂಧ. ಇದರಲ್ಲಿ ಹನ್ನೆರಡು ಅಧ್ಯಾಯಗಳಿದ್ದು ಅವು ವಿಜಯದಾಸರ ಹಿನ್ನೆಲೆ, ಜೀವನ ಪರಿಚಯ, ಅವರ ಕೃತಿಗಳ ತಾತ್ವಿಕ - ಸಾಹಿತ್ಯಕ ಮೌಲ್ಯ, ಇತರ ಕೃತಿಕಾರರೊಂದಿಗೆ ಹೋಲಿಕೆ, ಅವರಿಗೆ ಕನ್ನಡ ಸಾಹಿತ್ಯದಲ್ಲಿ ಸಂದಿರುವ ಅಥವಾ ಸಲ್ಲಬೇಕಾಗಿರುವ ಸ್ಥಾನ ಇವೇ ಮೊದಲಾದ ವಿಷಯಗಳನ್ನು ಒಳಗೊಂಡಿವೆ. ವಿಜಯದಾಸರಿಗೆ ಸಂಬಂಧಿಸಿದ ಆರು ಚಿತ್ರಗಳನ್ನೂ ಇಲ್ಲಿ ಕೊಡಲಾಗಿದೆ. 'ಹರಿದಾಸ ಪರಂಪರೆ' ಎಂದೊಡನೆ ಸಾಮಾನ್ಯ ಓದುಗರಿಗೆ ಸಾಮಾನ್ಯವಾಗಿ ಪುರಂದರದಾಸರೂ ಕನಕದಾಸರೂ, ಸ್ವಲ್ಪ ಮಟ್ಟಿಗೆ ಶ್ರೀಪಾದರಾಯರೂ ವ್ಯಾಸರಾಯರೂ ಜ್ಞಾಪಕಕ್ಕೆ ಬರುತ್ತಾರೆ. ಆ ಪರಂಪರೆಯಲ್ಲಿ ಇರುವ ಎಷ್ಟೋ ಮಹನೀಯರ ಹೆಸರುಗಳು ಹಿನ್ನೆಲೆಗೆ ಸರಿದಿವೆ. ಅವರ ಕಾಣಿಕೆ ಎಷ್ಟೋ ಸಾರಿ ಉಪೇಕ್ಷೆ ಮಾಡುವಂತಹುದಾಗಿರುವುದಿಲ್ಲ. ಪಿಎಚ್.ಡಿ.ಗೆ ವಿಷಯ ಆರಿಸಿಕೊಳ್ಳುವವರು ಅಂತಹ ಲೇಖಕರತ್ತ ದೃಷ್ಟಿ ಹಾಯಿಸಿ, ವಿಶೇಷ ಕೆಲಸ ಮಾಡಿ ಅವರಿಗೆ ಸಲ್ಲಬೇಕಾದ ಸ್ಥಾನವನ್ನು ದೊರಕಿಸಿಕೊಡುವಲ್ಲಿ ಸಹಾಯಕರಾಗುತ್ತಾರೆ. ಹರಿದಾಸ ಸಾಹಿತ್ಯದ ಎರಡನೇ ಹಂತದ ಪ್ರಮುಖ ವ್ಯಕ್ತಿಗಳಾಗಿರುವ ಶ್ರೀ ವಿಜಯದಾಸರ ಸಾಧನೆ ಸಿದ್ಧಿಗಳನ್ನು ಕುರಿತಂತಿರುವ ಡಾ. ಗೋಕುಲನಾಥ ಅವರ ಕೃತಿ ಆ ದೃಷ್ಟಿಯಿಂದ ಸ್ವಾಗತಾರ್ಹವಾದುದಾಗಿದೆ.

ಧಾರ್ಮಿಕ ವಸ್ತು, ವ್ಯಕ್ತಿಗಳನ್ನು ಸಂಶೋಧನೆಗೆ ಆರಿಸಿಕೊಳ್ಳುವವರು ಎದುರಿಸಬೇಕಾದ ಒಂದು ಸಮಸ್ಯೆಯನ್ನು ಡಾ. ಗೋಕುಲನಾಥ ಅವರು ಪರಿಹರಿಸಿಕೊಳ್ಳಬಹುದಾಗಿತ್ತು. ಧಾರ್ಮಿಕ ವ್ಯಕ್ತಿಗಳ ಬಗ್ಗೆ ಭಕ್ತಿಯಿರಬಹುದು. ಆದರೆ ಆ ಭಕ್ತಿ ನಮ್ಮ ವಿವೇಚನೆ ನಿರೂಪಣೆಗಳನ್ನು ಭಾವುಕ ಮಟ್ಟಕ್ಕೆ ಕೊಂಡೊಯ್ದಾಗ ಸಂಶೋಧನೆಯ ಗಾಂಭೀರ್ಯ ಕುಂಠಿತವಾಗುತ್ತದೆ. ಮಧ್ವಾಚಾರ್ಯರು, ವಿಜಯದಾಸರು ಇತ್ಯಾದಿ ಭಕ್ತರ ಹೆಸರುಗಳು ಬಂದಾಗಲೆಲ್ಲ ಈ ನಿಬಂಧದ ಉದ್ದಕ್ಕೂ ಸ್ತೋತ್ರಪರವಾದ ಮಾತುಗಳು ಉಕ್ಕಿ ಹರಿಯುತ್ತವೆ. ಮಧ್ವಾಚಾರ್ಯರು 1238-1317ರವರೆಗೆ ಬದುಕಿದ್ದರು ಎಂದು ಹೇಳಿದರೆ ಸಾಕು. ಆದರೆ "ಭೂಲೋಕದಲ್ಲಿ ದೃಶ್ಯರಾಗಿದ್ದರು" ಎಂದು ಪಿಎಚ್.ಡಿ. ನಿಬಂಧದಲ್ಲಿ ಹೇಳಬೇಕೆ ? ಜಗನ್ನಾಥದಾಸರ 'ಹರಿಕಥಾಮೃತಸಾರ'ದ ಮೇಲೆ ವಿಜಯದಾಸರ ಸುಳಾದಿಗಳ ಪ್ರಭಾವಗಳನ್ನು ಗುರುತಿಸುವುದಕ್ಕೆ ಅವರಿಗೆ ಯಾವುದೇ ಅಡ್ಡಿಯೂ ಇಲ್ಲ. ಆದರೆ, ವಚನಕಾರರ ವಚನಗಳಿಗೂ ಅನೇಕ ಉಗಾಭೋಗಗಳಿಗೂ ತೀರ ಸ್ಪಷ್ಟವಾದ ಹೋಲಿಕೆಗಳಿದ್ದರೂ ಆ ಪ್ರಭಾವವನ್ನು ಒಪ್ಪಲು ಗೋಕುಲನಾಥರು ಸಿದ್ಧವಿಲ್ಲ. ಜೊತೆಗೆ, ತಾವು ಒಪ್ಪಿಕೊಂಡ ಪರಂಪರೆ ಇನ್ನೊಂದಕ್ಕಿಂತ ಶ್ರೇಷ್ಠವೆಂದು ಸಾಧಿಸುವ ಅವರ ರೀತಿ ತರ್ಕಬದ್ಧವಾಗಿರುವುದಿಲ್ಲ. ಈ ವಾಕ್ಯಗಳನ್ನು ನೋಡಿ - "ವಚನ ಸಾಹಿತ್ಯದಲ್ಲಿಯೂ ಪ್ರತಿಯೊಂದು ವಚನದ ಕೊನೆಯಲ್ಲಿ ವಚನಕಾರರ ಅಂಕಿತವಿರುತ್ತದೆ. ಶಿವಶರಣರು ತಮ್ಮ ಆರಾಧ್ಯ ದೈವದ ಹೆಸರನ್ನು ಅಂಕಿತವನ್ನಾಗಿ ಅವರೇ ಸ್ವೀಕರಿಸಿ ಬಳಸುವ ಪದ್ಧತಿ ಕಂಡುಬರುತ್ತದೆ. ಆದರೆ ಹರಿದಾಸರ ಅಂಕಿತಕ್ಕೂ ವಚನಕಾರರ ಅಂಕಿತಕ್ಕೂ ಒಂದು ವ್ಯತ್ಯಾಸವಿದೆ. ಹರಿದಾಸರ ಅಂಕಿತ ಗುರುವಿನಿಂದ ಬರುವುದಾದರೆ ವಚನಕಾರರು ತಮಗೆ ಬೇಕಾದ ಅಂಕಿತವನ್ನು ಅವರು ಸ್ವೀಕರಿಸುತ್ತಾರೆ.

ಹರಿದಾಸ ಪರಂಪರೆಯಲ್ಲಿ ಗುರುವಿನ ಸ್ಥಾನ ಈ ದೃಷ್ಟಿಯಿಂದ ಹೆಚ್ಚು ಗೌರವಯುತವೂ ಜವಾಬ್ದಾರಿಗಳಿಂದಲೂ ಕೂಡಿದೆ". ಗುರುವಿನ ಸ್ಥಾನ ಎಲ್ಲಾ ಸಂಪ್ರದಾಯಗಳಲ್ಲೂ ಒಂದೇ ಬಗೆಯಾದ ಮಹತ್ವದ್ದಾಗಿರುತ್ತದೆ. ವಚನಕಾರರು ತಮ್ಮ ಗುರುಗಳಿಂದ ಅಂಕಿತಗಳನ್ನು ಪಡೆಯುತ್ತಿದ್ದರೆಂಬುದಕ್ಕೆ ಸೂಚನೆಗಳಿವೆ (ಈ ಬಗ್ಗೆ ನಾನು ಪ್ರತ್ಯೇಕವಾಗಿ ಮುಂದೆ ಬರೆಯುತ್ತಿದ್ದೇನೆ). ಮತ್ತು ಅದು ನಿಜವಾದರೆ ಆಗ ಅಂಕಿತ ಪ್ರದಾನ ಪದ್ಧತಿಯನ್ನು ಹರಿದಾಸರು ವಚನಕಾರರಿಂದ ಸ್ವೀಕರಿಸಿದರು ಎಂದೋ ಅಥವಾ ಬಹು ಹಿಂದಿನಿಂದಲೂ ಬಂದ ಪದ್ಧತಿಯನ್ನು ಇಬ್ಬರೂ ಅನುಸರಿಸಿದರು ಎಂದೋ ಹೇಳಬೇಕಾಗುತ್ತದೆ.

ಆರಂಭದ ಅಧ್ಯಾಯವೊಂದರಲ್ಲಿ ಬರುವ ದಾಸಕೂಟ - ವ್ಯಾಸಕೂಟ ಪದಗಳ ಚರ್ಚೆಯಲ್ಲಿ ಹೊಸತನ್ನು ಏನೂ ಸಾಧಿಸಿಲ್ಲ. 'ಕೂಟ' ಎಂಬುದು 'ಸಮೂಹ' ಎಂಬರ್ಥದ ಶಬ್ದವಾದರೆ ಅದು ದೇಶ್ಯವೇ ಆಗಬೇಕು. ವಿಜಯದಾಸರ 'ಹರಿದಾಸ ಕೂಟ' ಎಂಬಲ್ಲಿಯಂತೂ 'ಕೂಟ'ವು 'ಕೂಡು' ಧಾತುವಿನ ಭಾವನಾಮವೆಂಬುದು ಸ್ಪಷ್ಟವಾಗಿದೆ. ಭಕ್ತಿಯ ಪ್ರಭೇದಗಳಾದ 'ಸಖ್ಯ' 'ವಿರಹ'ಗಳಿಗೆ ಅನುಕ್ರಮವಾಗಿ 'ಸಂಗಮವಾಗಲಿ ಸಾಧುಜನರ' 'ಆರು ಬದುಕಿದರಯ್ಯ ಹರಿ ನಿನ್ನ ನಂಬಿ, ತೋರು ಈ ಜಗದೊಳಗೆ ಒಬ್ಬರನು ಕಾಣೆ' ಎಂಬುದನ್ನು ಉದಾಹರಣೆಯಾಗಿ ಕೊಡುವುದು ಉಚಿತವಾಗಿಲ್ಲ.

'ಹರಿದಾಸ ಸಾಹಿತ್ಯ ವಿಭಾಗ ಕ್ರಮ'ವೆಂಬ ಅಧ್ಯಾಯದಲ್ಲಿ ಹರಿದಾಸ ವಾಙ್ಮಯದ ಬೇರೆ ಬೇರೆ ಹಂತಗಳನ್ನು ಸೂಚಿಸಿದ್ದಾರೆ.

'ವಿಜಯದಾಸಯುಗ'ದ ಹಿನ್ನೆಲೆ ಮತ್ತು ಕಾರ್ಯಕ್ಷೇತ್ರಗಳ ಬಗ್ಗೆ ಹೆಚ್ಚಿನ ಮಾಹಿತಿ ಕೊಡಬಹುದಿತ್ತು. 'ಶ್ರೀ ವಿಜಯದಾಸರ ಜೀವನ ಪರಿಚಯ' ಎಂಬ ಭಾಗದಲ್ಲಿ ಶ್ರಮ ವಹಿಸಿ ಆ ಹರಿದಾಸರನ್ನು ಕುರಿತಂತೆ ಚರಿತ್ರಾತ್ಮಕ ವಿವರಗಳನ್ನು ಸಂಗ್ರಹಿಸಿ ಕೊಟ್ಟಿದ್ದಾರೆ. ಇಲ್ಲೆಲ್ಲ ಇತಿಹಾಸದ ಜೊತೆ ಪವಾಡಗಳೂ ಸೇರಿಕೊಂಡು ಬಂದಿವೆ ಮತ್ತು ಲೇಖಕರಿಗೆ ಪವಾಡಗಳನ್ನು ಕುರಿತಂತೆ ಅಪನಂಬಿಕೆ ಇಲ್ಲವಾದ್ದರಿಂದ ಜೀವನ ಚರಿತ್ರೆಯಲ್ಲಿ ಹೆಚ್ಚಿನ ಸಮಸ್ಯೆಗಳು ಸುಳಿಯುವುದಿಲ್ಲ.

'ವಿಜಯದಾಸರ ಕೃತಿಗಳಲ್ಲಿ ಭಕ್ತಿಮೌಲ್ಯ' ಎನ್ನುವಲ್ಲಿ ಭಕ್ತರಾಗಿ ಅವರು ರಚಿಸಿದ ಕೃತಿಗಳ ಸಮೀಕ್ಷೆಯಿದೆ. ಇಲ್ಲಿ 'ಉಪವಾಸದ ತದ್ಭವ ರೂಪವೇ ಉಪಾಸನ' ಎಂಬ ಹೇಳಿಕೆ ಸ್ವಲ್ಪವೂ ಸರಿಯಲ್ಲ. 'ಕ್ಷೇತ್ರದರ್ಶನ' ಎಂಬ ಉಪವಿಭಾಗ ಸ್ವಾರಸ್ಯವಾಗಿದೆ. ವಿಜಯದಾಸರು ತಾವು ದರ್ಶಿಸಿ ವರ್ಣಿಸಿರುವ ಕ್ಷೇತ್ರಗಳನ್ನು ಇಲ್ಲಿ ಪರಿಚಯಿಸಲಾಗಿದೆ. ಕೆಲವು ಕ್ಷೇತ್ರಗಳು (ಉದಾ. ಕನಕಗಿರಿ, ಮಧ್ಯಾರ್ಜುನ) ಎಲ್ಲಿವೆ ಎಂಬುದನ್ನು ಹೇಳಿದ್ದರೆ ಓದುಗರಿಗೆ ಅನುಕೂಲವಾಗುತ್ತಿತ್ತು. ಈ ಒಟ್ಟು ಕೃತಿ ಸಮೂಹವನ್ನು 'ಪ್ರವಾಸ ಸಾಹಿತ್ಯ'ವೆಂದು ಲೇಖಕರು ಕರೆದಿರುವುದು ಉಚಿತವಾಗಿದೆ. 'ತತ್ವವಾದ'ವನ್ನು ಸಂಗ್ರಹಿಸಿಕೊಟ್ಟಿರುವ ಅಧ್ಯಾಯ ಪ್ರೌಢವಾಗಿದೆ. ಅವರ ಕೃತಿಗಳ 'ಕಾವ್ಯ ಮೌಲ್ಯ' ತೀರಾ ನಿರಾಸೆಯನ್ನು ಹುಟ್ಟಿಸುವ ಭಾಗ. ಇಲ್ಲಿ ವಿಜಯದಾಸರ ಭಾಷಾ ವಿಶ್ಲೇಷಣೆಯಾಗಲಿ ಪ್ರತಿಮೆಗಳ ವೈಶಿಷ್ಟ್ಯವನ್ನಾಗಿ ವಿಶ್ಲೇಷಿಸಿಲ್ಲ.

'ಸಿಂಹಪ್ರಾಸ' ಇತ್ಯಾದಿಗಳಿಗೆ ವಿಜಯದಾಸರಿಂದ ಉದಾಹರಣೆ ಕೊಟ್ಟಿರುವುದರಿಂದ ಏನೂ ಸಾಧಿಸಿದಂತಾಗುವುದಿಲ್ಲ. 'ಶ್ರೀ ವಿಜಯದಾಸರ ಕೃತಿಗಳು ಮತ್ತು ಹರಿಕಥಾಮೃತಸಾರ' ಎಂಬಲ್ಲಿನ ಅವೆರಡರ ತೌಲನಿಕ ಅಧ್ಯಯನ ಈ ನಿಬಂಧದ ಸ್ವಲ್ಪ ಗಟ್ಟಿ ಭಾಗ.

ಒಟ್ಟಿನಲ್ಲಿ ಇದೊಂದು ತೀರ ನಿರಾಸೆ ಹುಟ್ಟಿಸುವ ನಿಬಂಧ. ವೈಭವೀಕರಿಸುವ ಭಕ್ತ ಮನೋಭಾವ, ಹೇಳಿದ್ದನ್ನೇ ಹೇಳುವ ಪ್ರವೃತ್ತಿ, ಇಡೀ ಕೀರ್ತನೆಗಳನ್ನು ಔಚಿತ್ಯವಿಲ್ಲದೆ ಉದ್ಧರಿಸುವುದು, ವಿಶ್ಲೇಷಣೆಯ ಅಭಾವ, ಉಲ್ಲೇಖಗಳನ್ನು ಕೊಡುವಲ್ಲಿ ಅಲಕ್ಷ್ಯ, ಅಶಾಸ್ತ್ರೀಯ ಭಾಷೆ ಇತ್ಯಾದಿಗಳನ್ನು ನೋಡಿದರೆ ನಮ್ಮಲ್ಲಿ ಪಿಎಚ್.ಡಿ ಪ್ರಶಸ್ತಿಗಳ ಅಪಮೌಲ್ಯ ಎಷ್ಟು ತೀವ್ರವಾಗಿ ನಡೆಯುತ್ತಿದೆಯೆಂಬುದು ತಿಳಿಯುತ್ತದೆ. ಆ ಅಪಮೌಲ್ಯಕ್ಕೆ ನಿಬಂಧದ ಲೇಖಕರನ್ನು ಮಾತ್ರ ಗುರಿ ಮಾಡಿದರೆ ಸಾಲದೆಂದು ತೋರುತ್ತದೆ. ಮಾರ್ಗದರ್ಶಕರದೂ ಒಂದು ಕರ್ತವ್ಯ ಇದೆಯಲ್ಲವೇ?

**ಕುಮಾರವ್ಯಾಸನ ಪಾತ್ರ ಸೃಷ್ಟಿ** ಎಂಬುದು ಡಾ. ಎಲ್. ಆರ್. ಹೆಗಡೆ ಅವರ ಪಿಎಚ್.ಡಿ. ನಿಬಂಧ ಅಥವಾ ನಿಬಂಧದ ಒಂದು ಭಾಗ. ಒಂದು ಕೃತಿಯ ಅಥವಾ ಒಬ್ಬ ಕವಿಯ ಸಮಗ್ರ ಅಭ್ಯಾಸದ ಅಂಗವಾಗಿ ಪಾತ್ರ ವಿವೇಚನೆ ಬರುವುದು ರೂಢಿ. ಆದರೆ ಒಬ್ಬ ಕವಿಯ ಪಾತ್ರಗಳನ್ನೇ ತೆಗೆದುಕೊಂಡು ವಿಶೇಷ ಕೆಲಸ ಮಾಡಿ ಪಿಎಚ್.ಡಿ. ಪಡೆದುಕೊಂಡಿರುವುದು ಕನ್ನಡಕ್ಕಂತೂ ಹೊಸತು. ಪಾತ್ರ ವಿವೇಚನೆಯಲ್ಲಿ ತೌಲನಿಕ ಅಭ್ಯಾಸ ಮತ್ತು ಮನೋವೈಜ್ಞಾನಿಕ ದೃಷ್ಟಿಗಳನ್ನು ಅಳವಡಿಸಿಕೊಂಡಿರುವುದಾಗಿ ಪೀಠಿಕೆ ಭಾಗದಲ್ಲಿ ಹೆಗಡೆಯವರು ಸೂಚಿಸಿದ್ದಾರೆ. "ವ್ಯಕ್ತಿಗಳ (ಪಾತ್ರಗಳ) ಪರಿಸರ, ಪರಂಪರೆಗಳ ಅಭ್ಯಾಸ ಮಾಡಿ, ಅವರ ವರ್ತನೆಯ ಕಾರಣಗಳನ್ನು ವಿವೇಚಿಸುವುದಲ್ಲದೆ ಅವುಗಳ ತತ್ವಗಳನ್ನು ಶಾಸ್ತ್ರೀಯವಾದ ಪರಿಭಾಷೆಯಲ್ಲಿ ಮನೋವಿಜ್ಞಾನವು ನಿರೂಪಿಸಿ, ಅವುಗಳನ್ನು ವಿವರಿಸುತ್ತದೆ. ಆದ್ದರಿಂದ ಪಾತ್ರಗಳ ಅಭ್ಯಾಸದಲ್ಲಿ ಮನೋವಿಜ್ಞಾನದ ಮೂಲಕವಾದ ವಿವೇಚನೆ ಬಹಳ ಮಹತ್ವದ್ದಾಗುತ್ತದೆ. ಮನೋವಿಜ್ಞಾನವು ಹಲವು ಶಾಖೆಗಳಾಗಿ ಬೆಳೆಯುತ್ತಿರುವ ಮಹಾವೃಕ್ಷದಂತಿದೆ. ಹಲವು ಕ್ಷೇತ್ರಗಳಲ್ಲಿ ಅದರ ಬೇರೆ ಬೇರೆ ಭಾಗಗಳ ಉಪಯೋಗವಾಗುತ್ತದೆ. ಔಚಿತ್ಯವನ್ನರಿತು ಅದರ ಬೇರೆ ಬೇರೆ ಸಿದ್ಧಾಂತಗಳನ್ನು ಸಾಹಿತ್ಯ ವಿಮರ್ಶೆಯಲ್ಲಿ ಬಳಸಬೇಕಾಗುತ್ತದೆ" ಎಂದು ಹೇಳುತ್ತಾರೆ. ಇದನ್ನು ನಾವು ಅರ್ಥ ಮಾಡಿಕೊಳ್ಳಬಹುದು. ಈ ಮಾತುಗಳನ್ನು ಹೇಳಿದ ಬಳಿಕ ಮುಂದಿನ ಪ್ಯಾರಾದಲ್ಲಿ "ಇದರಲ್ಲಿ ಉಚ್ಚಾನುಸಂಧಾನ ಅಥವಾ ಗರಿಮಾಬ್ಧ್ಯ ಸಂಕೀರ್ಣ (superiority complex) ಮುಂತಾದ ವಾದಗ್ರಸ್ತ ವಿಷಯಗಳೂ ಇರುತ್ತವೆ" ಎನ್ನುವುದು ಮಾತ್ರ ಸ್ಪಷ್ಟವಾಗುವುದಿಲ್ಲ. ಮನೋವೈಜ್ಞಾನಿಕ ದೃಷ್ಟಿಯನ್ನು ಪಾತ್ರ ವಿವೇಚನೆಯಲ್ಲಿ ಇಷ್ಟು ಸ್ಪಷ್ಟವಾಗಿ ಹೇಳಿ ಬಳಸಿಕೊಂಡಿರುವುದು ನನಗೆ ತಿಳಿದಮಟ್ಟಿಗೆ ಇದು ಮೊತ್ತಮೊದಲು.

ಇಲ್ಲಿನ ಅಧ್ಯಾಯಗಳಲ್ಲಿ ಶ್ರೀಕೃಷ್ಣ, ಪ್ರಮುಖ ಪಾಂಡವರು, ಪ್ರಮುಖ ಕೌರವರು, ಕೌರವ ಸೇನಾಪತಿಗಳು, ಪ್ರಮುಖ ಸ್ತ್ರೀ ಪಾತ್ರಗಳು, ಇತರ ಕೆಲವು ಸ್ತ್ರೀ ಪುರುಷ ಪಾತ್ರಗಳ

ವಿವೇಚನೆಯಿದೆ. 'ಉಪಸಂಹಾರ' ಭಾಗದಲ್ಲಿ ಮಾನವ ಸ್ವಭಾವ ಇತ್ಯಾದಿ ಸಾಮಾನ್ಯ ಸಂಗತಿಗಳ ಪ್ರಸ್ತಾಪವಿದೆ. ಪ್ರತಿಯೊಂದು ಪಾತ್ರವೂ ಬೇರೆ ಬೇರೆ ಸನ್ನಿವೇಶಗಳಲ್ಲಿ ಕಾಣಿಸಿಕೊಳ್ಳುವುದನ್ನು ಲಕ್ಷಿಸಿ, ಅದರ ಸ್ವಭಾವ ಪ್ರತಿಕ್ರಿಯೆಗಳನ್ನು ಲಕ್ಷಿಸುತ್ತ ಹೋಗುತ್ತಾರೆ. ಅಲ್ಲಲ್ಲಿ ಮನಶ್ಶಾಸ್ತ್ರದ ತತ್ವಗಳನ್ನು ವಿವರಿಸುತ್ತ ಆಯಾ ಪಾತ್ರಕ್ಕೆ ಹೊಂದಿಸುತ್ತಹೋಗುತ್ತಾರೆ. ವಾಸ್ತವವಾಗಿ ಇಲ್ಲಿ ಏನಾಗಿದೆಯೆಂದರೆ ಪಾತ್ರ ವಿವೇಚನೆ, ಮನಶ್ಶಾಸ್ತ್ರ ಇವೆರಡೂ ಒಂದಕ್ಕೊಂದು ಮಿಳಿತವಾಗುವುದಿಲ್ಲ, ಎರಡೂ ಪ್ರತ್ಯೇಕವಾಗಿ ಉಳಿಯುತ್ತವೆ. ಯಾವುದೇ ಪಾತ್ರ ಚಿತ್ರಣ ಇವರ ನಿರೂಪಣೆಯಲ್ಲಿ ನಮ್ಮ ಮುಂದೆ ಅರಳಿ ನಿಲ್ಲುವುದಿಲ್ಲ. ಉದಾಹರಣೆಗೆ ಪು. 30ರಲ್ಲಿ ಜಿ.ವಿ. ಆಲ್ ಪೋರ್ಟರು ಪ್ರೌಢ ವ್ಯಕ್ತಿತ್ವದ ಮೂರು ಲಕ್ಷಣಗಳನ್ನು ಕೊಡುತ್ತಾರೆಂದು ಅವನ್ನು ಕೊಟ್ಟು, "ಈ ಪ್ರೌಢ ವ್ಯಕ್ತಿತ್ವದ ಅನೇಕ ಲಕ್ಷಣಗಳನ್ನು ಶ್ರೀ ಕೃಷ್ಣನಲ್ಲಿ ಕಾಣುತ್ತೇವೆ" ಎನ್ನುತ್ತಾರೆ. ನಮಗೆ ಆ ಪಾತ್ರವನ್ನು ನಿರೂಪಿಸುವಾಗಲೇ ಆ ಪಾತ್ರದ ಗುಣಗಳು, ಅದರ ಪ್ರೌಢ ವ್ಯಕ್ತಿತ್ವ ಅರಿವಾಗುವಂತಿರಬೇಕು.

ಇದೇ ಬಗೆಯಾದ ಕೊರತೆ ಉಳಿದ ಪಾತ್ರ ವಿವೇಚನೆಯಲ್ಲೂ ಕಾಣುತ್ತದೆ. ಕೆಲವೊಮ್ಮೆ ಪಾತ್ರ ವಿವೇಚನೆ ಗುಣಗಳ ಪಟ್ಟಿಯಾಗುತ್ತದೆ. ಅರ್ಜುನನ ಬಗ್ಗೆ ಬರೆಯುತ್ತ ಆದರ್ಶ ವಿದ್ಯಾರ್ಥಿ, ಅರ್ಜುನನ ವಿವಾಹಗಳು, ಅರ್ಜುನ - ಊರ್ವಶೀ ಪ್ರಸಂಗ, ಅರ್ಜುನನ ವಿವೇಕ ಪರಾಯಣತೆ, ಅರ್ಜುನನ ಪರಾಕ್ರಮ, ಕುರುಕ್ಷೇತ್ರ ಯುದ್ಧದಲ್ಲಿ ಅರ್ಜುನ ಇತ್ಯಾದಿ ಉಪಶೀರ್ಷಿಕೆಗಳನ್ನು ತಂದಿರುವುದನ್ನು ಗಮನಿಸಿ : ಅವು ಪರಸ್ಪರ ಸಂಬಂಧವಿಲ್ಲದವೆಂಬುದು ಸ್ಪಷ್ಟವಾಗುತ್ತದೆ. ಮಹಾಭಾರತದ ಎಲ್ಲ ವೀರಪಾತ್ರಗಳೂ ಆತ್ಮಶ್ಲಾಘನೆ ಮಾಡಿಕೊಳ್ಳುತ್ತವೆ ಮತ್ತು ಅರ್ಜುನನಂತಹ ನಿಜವಾದ ವೀರರಲ್ಲಿ ಅದು ಚೆನ್ನಾಗಿಯೇ ಕಾಣಿಸಬಹುದು. ಹಾಗೆಂದು ಆ ಗುಣವನ್ನು 'ನಾರ್ಸಿಸಂ' ಎಂದು ನಿರ್ದೇಶಿಸುವುದು ಅನುಚಿತವಾಗಬಹುದು. ಈ ಕೃತಿಯಲ್ಲಿ ಉದ್ದಕ್ಕೂ ಮನಶ್ಶಾಸ್ತ್ರದ ಪರಿಭಾಷೆಯ ಪದಗಳು ತೇಲುತ್ತಿರುವುದು ಹಿತವಾದ ಅನುಭವವೇನಲ್ಲ. ಕೆಲವು ವಾಕ್ಯಗಳ ಅರ್ಥವೇ ಸ್ಪಷ್ಟವಾಗುವುದಿಲ್ಲ. ಉದಾಹರಣೆಗೆ, "ಇಬ್ಬರೂ (ದುರ್ಯೋಧನ, ರಾವಣ) ದುಷ್ಟರಾದರೂ ಅವರ ದುಷ್ಟತನದಲ್ಲಿ ಸಾಮ್ಯ ಕಡಿಮೆ. ಕೆಲವು ಕಥೆಗಳ ಪ್ರಕಾರ ಸೀತೆ ರಾವಣನ ಮಗಳಾಗಿದ್ದಳು. ಆ ಪ್ರತೀತಿಯಂತೆ ಕುಮಾರವ್ಯಾಸನ ದುರ್ಯೋಧನನಿಗೂ ದುರ್ಯೋಧನ ಮನೋವೃತ್ತಿ (Oedipus complex) ಪ್ರಕಾರ ಹೋಲಿಕೆಯನ್ನು ಕಾಣಬಹುದು" (ಪು. 128). ಹೆಗಡೆಯವರಿಗೆ ವಿಮರ್ಶೆಯ ಭಾಷೆ ಒಗ್ಗಿಲ್ಲವೆಂದು ಅನ್ನಿಸುತ್ತದೆ. ಮತ್ತು ಹೇಳುವುದನ್ನು ನಿಕರವಾಗಿ ಹೇಳುವುದೂ ಸಿದ್ಧಿಸಿಲ್ಲವೆನಿಸುತ್ತದೆ. ಎಷ್ಟೋ ಸಾರಿ, ಚಿಕ್ಕ ಚಿಕ್ಕ ಪ್ಯಾರಾಗಳಲ್ಲಿ ಅಸಂಬದ್ಧ ಸಂಗತಿಗಳನ್ನು ನೆನಪಿಗೆ ಬಂದಂತೆ ತುಂಬುತ್ತಾರೆ.

ಮಹಾಭಾರತದ ಪಾತ್ರ ನಿರೂಪಣೆಗೆ ಡಾ. ಇರಾವತಿ ಕರ್ವೆ ಅವರ "ಯುಗಾಂತ" ಒಳ್ಳೆಯ ಮಾದರಿ ಗ್ರಂಥವಾಗಬಲ್ಲುದು.

'ಕುಮಾರವ್ಯಾಸನ ಪಾತ್ರ ಸೃಷ್ಟಿ' ನಮಗೆ ಬಹಳ ನಿರಾಸೆ ಉಂಟು ಮಾಡುವ ಕೃತಿ. ಇಡೀ ಪುಸ್ತಕವನ್ನು ಓದಿ ಮುಗಿಸುವುದು ಪ್ರಯಾಸವೆನ್ನುವಷ್ಟರ ಮಟ್ಟಿಗೆ ಬೇಸರ ಹುಟ್ಟಿಸುತ್ತದೆ. ಇದರ ಜೊತೆ ಕೆಟ್ಟ ರೀತಿಯಲ್ಲಿ ಗ್ರಂಥ ಸೂಚಿ ಕೊಟ್ಟಿರುವುದು (ನನ್ನ ಹೆಸರಿನಲ್ಲಿ ನಾನು ಬರೆಯದ ಲೇಖನವೊಂದು ಪಟ್ಟಿಯಲ್ಲಿದೆ. ಪು.318). ಅಸಾಧ್ಯ ಅಚ್ಚಿನ ದೋಷಗಳು ಗ್ರಂಥದ ಮೌಲ್ಯವನ್ನು ಇನ್ನೂ ತಗ್ಗಿಸಿವೆ.

**ನಯಸೇನ ಮತ್ತು ಅವನ ಕೃತಿಗಳು** ಡಾ. ಬಿ.ವ್ಹಿ ಮಲ್ಲಾಪುರ ಅವರಿಗೆ ಪಿಎಚ್.ಡಿ. ತಂದುಕೊಟ್ಟ ನಿಬಂಧ. ಇದರಲ್ಲಿ ಅಧ್ಯಯನದ ಅವಶ್ಯಕತೆ ಎಂಬ ಅಧ್ಯಾಯವನ್ನು ಬಿಟ್ಟರೆ 'ಯುಗಧರ್ಮ', 'ಕವಿಪರಿಚಯ', 'ಕಥಾಸಾಹಿತ್ಯ', 'ಮೂಲ ಮತ್ತು ಮಾರ್ಪಾಟು', 'ಜೈನದರ್ಶನ', 'ಸಮಾಜ ದರ್ಶನ', 'ಕಾವ್ಯ ವಿಮರ್ಶೆ', 'ಕೊಳು-ಕೊಡೆ', 'ನಯಸೇನನ ಸ್ಥಾನ' ಎಂಬ ಒಂಬತ್ತು ಅಧ್ಯಾಯಗಳಿವೆ. ಕೊನೆಯಲ್ಲಿ ಧರ್ಮಾಮೃತ ಕಾವ್ಯದಲ್ಲಿ ಬರುವ ನಾಣ್ಣುಡಿ, ಸೂಕ್ತಿ, ಉಪಮೆಗಳನ್ನು ಆರಿಸಿ ಕೆಲವನ್ನು ಕೊಟ್ಟಿದೆ. 'ಅಧ್ಯಯನದ ಅವಶ್ಯಕತೆ' ಎಂಬ ಮೊದಲ ಅಧ್ಯಾಯದಲ್ಲಿ ನಯಸೇನನ ವೈಶಿಷ್ಟ್ಯವೇನೆಂಬುದನ್ನು ಗುರುತಿಸಿ, ಅವನ ಬಗ್ಗೆ ನಡೆದಿರುವ ಕೆಲಸ ತೀರ ಸ್ವಲ್ಪವೆಂಬುದನ್ನು ಸ್ಪಷ್ಟಪಡಿಸಿ ತಮ್ಮ ಸಂಶೋಧನೆಯನ್ನು ಸಮರ್ಥಿಸಿಕೊಂಡಿದ್ದಾರೆ. ನಯಸೇನನ ಕೃತಿಗಳ ಮೂಲಗಳು ಯಾವುವು, ಆ ಮೂಲಗಳನ್ನು ಅವನು ಬಳಸಿಕೊಂಡಿರುವ ಬಗೆ ಇತ್ಯಾದಿಗಳನ್ನು ಕುರಿತಂತೆ 'ಸಂಶೋಧನೆ, ವಿವೇಚನೆ ಮತ್ತು ಪರಿಶೀಲನೆಗಳು ಸಾದ್ಯಂತವಾಗಿ ಇನ್ನೂ ಬಂದಿಲ್ಲ'ವೆಂದು ಮಲ್ಲಾಪುರ ಅವರು ಹೇಳಿರುವುದು ನಿಜವಾದರೂ, ನಯಸೇನನು 'ಒಂದು ಯುಗದ ನಿಜವಾದ ಪ್ರತಿನಿಧಿ' ಎಂದು ಕರೆದಿರುವುದನ್ನು ಒಪ್ಪುವುದು ಕಷ್ಟವಾಗುತ್ತದೆ. ಅವನು ಪ್ರತಿನಿಧಿಸುವ ಯುಗ ಯಾವುದು? ಅದನ್ನು ಹೇಗೆ ಪ್ರತಿನಿಧಿಸುತ್ತಾನೆ? ಎಂಬ ಬಗ್ಗೆ ಉತ್ತರಿಸುವುದು ಕಷ್ಟ. 'ಯುಗಧರ್ಮ' ಎಂಬ ಅಧ್ಯಾಯದಲ್ಲಿ ಅವನ ಕಾಲದ ಚರಿತ್ರೆಯ ಸಂಕ್ಷಿಪ್ತ ಪರಿಚಯ ಮಾಡಿಕೊಟ್ಟಿದ್ದಾರೆ. (ಈ ಅಧ್ಯಾಯದಲ್ಲಿ ಚಂದ್ರ, ಪಂಡಿತ ಎಂಬ ಕವಿರಾಜ ಮಾರ್ಗದಲ್ಲಿ ಉಲ್ಲೇಖಗೊಂಡ ಕವಿಗಳು ಭಾಗವತ ಬ್ರಾಹ್ಮಣ ಮತ್ತು ವೀರಶೈವರಾಗಿರಬೇಕೆಂಬ ಚೇಂದ್ರ, ಜ.ಚ.ನಿ ಅವರ ಅಭಿಪ್ರಾಯಗಳು ಉದ್ಧರಿಸಲು ಯೋಗ್ಯವಲ್ಲದುವು). ಜೈನಧರ್ಮ ನಯಸೇನನ ಕಾಲದಲ್ಲಿ ಅವನತಿಯನ್ನು ಪಡೆದಿದ್ದು ಅದನ್ನು ಉಳಿಸುವ, ಬೆಳೆಸುವ ಕಾರ್ಯವನ್ನು ನಯಸೇನ ಕೈಗೆತ್ತಿಕೊಳ್ಳಬೇಕಾಯಿತೆಂಬುದನ್ನು ಎತ್ತಿಹಿಡಿದಿದ್ದಾರೆ. 'ಕವಿ ಪರಿಚಯ' ಭಾಗದಲ್ಲಿ ನಯಸೇನ ಹೆಸರಿನ ಬೇರೆ ಬೇರೆ ಕವಿಗಳ ಹೆಸರು ಹೇಳಿ ಅವರ ವಿಷಯ ಚರ್ಚಿಸಿದ್ದಾರೆ. ವ್ಯಾಕರಣದ ನಯಸೇನನು ಧರ್ಮಾಮೃತದ ಕರ್ತೃವಾಗಿರದೆ 'ಶಬ್ದಶಾಸ್ತ್ರ ಪಾರಾವಾರಪಾರಗ'ನೆಂದು ಕೀರ್ತಿತನಾದ ಕ್ರಿ.ಶ. 1053ರ ನಯಸೇನನ ಜೊತೆ ಸಮೀಕರಿಸಿರುವುದು ಸರಿಯಾಗಿದೆ. ನಯಸೇನ 'ಸಂಸಾರದಿಂದ ವಿರಕ್ತನಾಗಿ ಮುನಿ'ಯಾಗಿರಬೇಕೆಂಬ ಆಧಾರವಿಲ್ಲದ ಊಹೆಗಿಂತ ಸುಮ್ಮನಿರುವುದು ಮೇಲು. ಅವನ ಕಾಲವನ್ನು ಒಂದು ಸಮಸ್ಯೆ ಎಂಬಂತೆ ಆರಂಭಿಸಿ ಕೊನೆಯಲ್ಲಿ ಎಲ್ಲರೂ ಒಪ್ಪಿರುವ ಕ್ರಿ.ಶ. 1112 ಎಂಬುದನ್ನು ತಾವೂ ಒಪ್ಪಿಕೊಂಡಿರುವುದು ಇಡೀ ಚರ್ಚೆಯೇ ಅನಗತ್ಯವೆಂಬಂತೆ ತೋರುತ್ತದೆ. "ನಯಸೇನನ ಕೃತಿಗಳು" ಎಂಬ

ಅಲ್ಲಮನ ಬಗ್ಗೆ ಬೇರೆ ಬೇರೆ ಕಡೆಗಳಲ್ಲಿ ಏನೇನು ಬಂದಿದೆಯೆಂಬುದನ್ನು ಬೇರೆ ಬೇರೆ ಅಧ್ಯಾಯಗಳಲ್ಲಿ ವಿಚಾರಮಾಡುವ ಬದಲು, ಆ ಎಲ್ಲ ಆಕರಗಳು ಎಷ್ಟರಮಟ್ಟಿಗೆ ವಿಶ್ವಸನೀಯ, ಅವನ್ನು ಹೇಗೆ ಬಳಸಿಕೊಳ್ಳಬಹುದು ಎಂಬುದನ್ನು ಒಂದು ಬಾರಿ ಚರ್ಚಿಸಿ ಬಳಿಕ ವ್ಯಕ್ತಿಯಾಗಿ, ಕೃತಿಕಾರನಾಗಿ, ಸಾಧಕನಾಗಿ ಅಲ್ಲಮನ ಮೇಲೆ ಗಮನವನ್ನು ಕೇಂದ್ರೀಕರಿಸಿದ್ದಿದ್ದರೆ ನಿಬಂಧಕ್ಕೆ ಒಂದು ಏಕಮುಖತೆ ಬರುತ್ತಿತ್ತು. ಅಲ್ಲಮನಿಗೆ ಹಿನ್ನೆಲೆಯಾದ ಸಾಂಸ್ಕೃತಿಕ - ರಾಜಕೀಯ ಜೀವನ, ಅವನ ಬದುಕಿನ ಬೇರೆ ಬೇರೆ ಹಂತಗಳು, ಅವನು ಮಾಡಿದ ಸಾಧನೆಯ ಬಗೆಗಳು, ವೀರಶೈವ ಆಂದೋಲನದಲ್ಲಿ ಅವನು ಭಾಗಿಯಾದ ರೀತಿ, ವಚನಗಳ ವೈಶಿಷ್ಟ್ಯ ಇವು ಮುಖ್ಯವಾಗುತ್ತಿದ್ದುವು. ಈ ಸಂಗತಿಗಳು ಈ ನಿಬಂಧದಲ್ಲಿ ಅಲ್ಲಲ್ಲಿ ಪ್ರಸ್ತಾಪಿತವಾಗಿದ್ದರೂ ಅಲ್ಲಮನ ಒಟ್ಟು ಬದುಕು ಕಾಣಿಕೆ ಮೂಡಿಬಂದಿಲ್ಲ. ಸಂಶೋಧನ ವಸ್ತುವನ್ನು ಆರಂಭ ಕಾಲದಲ್ಲೇ ಸರಿಯಾಗಿ ನಿರ್ವಹಿಸಿಕೊಳ್ಳದುದರ ಫಲ ಇದು.

'ಅಲ್ಲಮ' ಹೆಸರಿನ ಪೂರ್ವಾರ್ಧ 'ಅಲ್ಲ' ಎಂಬ ಶಬ್ದ ದ್ರಾವಿಡ ಮೂಲದ್ದು (ಪು. 18) ಎಂಬುದು ಅನಿರ್ದಿಷ್ಟ. ನಾನು ಅನ್ಯತ್ರ ಚರ್ಚಿಸಿರುವಂತೆ ಅದರ ಉತ್ತರಾರ್ಧ 'ಮ' ಎಂಬುದು 'ಅಮ್ಮನ್' (= ತಂದೆ, ಅಪ್ಪ) ಎಂಬ ಶಬ್ದದ ಸವೆದರೂಪ ಎಂಬುದಷ್ಟೇ ಸದ್ಯಕ್ಕೆ ಗಟ್ಟಿ. ಹರಿಹರನ 'ಪ್ರಭುದೇವರ ರಗಳೆ'ಯಲ್ಲಿ ಬರುವ 'ನಾಗವಾಸ' ಎಂಬ ಶಬ್ದ ಅಲ್ಲಮನ ವಂಶದ ಮೇಲೆ ಬೆಳಕು ಬೀರುವುದನ್ನು ಕುರಿತು ನಾನು ಅನ್ಯತ್ರ ವಿಸ್ತಾರವಾಗಿ ಚರ್ಚಿಸಿದ್ದೇನೆ. ಅದನ್ನು ಡಾ. ಸ್ವಾಮಿಯವರು ಲಕ್ಷಿಸಬಹುದಿತ್ತು. ಹರಿಹರನು ಅಲ್ಲಮನ ಸಾಧನ ಜೀವನದ ಭಾಗವನ್ನು ಅಲಕ್ಷಿಸಿದ್ದಾನೆ ಎಂಬುದಕ್ಕೆ ಡಾ. ಸ್ವಾಮಿ ಸರಿಯಾಗಿ ಉತ್ತರಕೊಟ್ಟಿದ್ದಾರೆ. (ಪು. 86) ಪ್ರಭುಲಿಂಗಲೀಲೆ ಮತ್ತು ಶೂನ್ಯ ಸಂಪಾದನೆಗಳಲ್ಲಿ ಮೂಡಿಬಂದಿರುವ ಅಲ್ಲಮನ ಚಿತ್ರವನ್ನು ಕೊಡುವಲ್ಲಿ ಯಶಸ್ವಿಯಾಗಿದ್ದಾರೆ. ಶೂನ್ಯಸಂಪಾದನೆಯ(ಗಳ) ಬಗ್ಗೆ ಎದ್ದ ವಾದ ವಿವಾದಗಳನ್ನು ಎತ್ತಿ ತೂಗಿರುವುದರಲ್ಲಿ ಅವರು ತೋರಿರುವ ನಿಷ್ಪಕ್ಷಪಾತ ದೃಷ್ಟಿ ನಿಜವಾಗಿಯೂ ಅನುಕರಣೀಯ.

ಅಲ್ಲಮನ ಬಗ್ಗೆ ಅತಿಭಾವುಕತೆಯನ್ನು ತೋರುವುದನ್ನು ಸ್ವಲ್ಪಮಟ್ಟಿಗೆ ಅರ್ಥಮಾಡಿಕೊಳ್ಳಬಹುದಾದರೂ ಉದ್ದಕ್ಕೂ ತೀರ ರಂಜನೀಯ ಆಡಂಬರದ ಶೈಲಿಯ ಸುಳಿಗೆ ಸಿಕ್ಕ ಡಾ. ಸ್ವಾಮಿಯವರ ಭಾಷೆ ಸಂಶೋಧನ ನಿಬಂಧಕ್ಕೆ ಸ್ವಲ್ಪವೂ ತಕ್ಕುದಲ್ಲ. 'ಶೂನ್ಯಾದ್ವೈತ ದಾರ್ಶನಿಕ ವ್ಯಕ್ತಿತ್ವ ಮಹಾ', 'ದಿವ್ಯ ಭವ್ಯ ಕಾವ್ಯ ಕಲಾಕಾರ', 'ವಸ್ತು ಪ್ರತಿರೂಪ ನಿರ್ಮಾಣ ಸ್ವೋಪಜ್ಞ ಪ್ರತಿಭೆ' ಎಂಬಂತಹ ಉಪಶೀರ್ಷಿಕೆಗಳನ್ನು ನಾವು ಗಂಭೀರವಾಗಿ ತೆಗೆದುಕೊಳ್ಳುವುದು ಕಷ್ಟವಾಗುತ್ತದೆ. "ಒಡೆಯಲೂ ಬಾರದೆಂಬ, ಒಡೆಯಲಾರದೆಂಬ 'ಪರಮಾಣು'ವನ್ನೂ ಭೇದಿಸಿ ಪ್ರಚಂಡಶಕ್ತಿ ಸ್ಫೋಟವಾಗುವಂತೆ ಮಾಡಿದ ಅಣುವಿಜ್ಞಾನಿಯಂತೆ, ಮಾನವನನ್ನು ಒಡೆದು ಮಾನವನಲ್ಲಿರುವ ಅನಂತಶಕ್ತಿ ಸ್ಫೋಟದ

ವೈಜ್ಞಾನಿಕಾಶ್ಚರ್ಯವನ್ನು ಜಗತ್ತಿಗೆ ನೀಡಿದ ಆತ್ಮವಿಜ್ಞಾನಿ ಪ್ರಭುದೇವ" - ಈ ಮಾತುಗಳು ವಾಸ್ತವವಾಗಿ ನಿಜವಾಗಿದ್ದು, ಓದುಗರಿಗೆ ಅರ್ಥವಾಗಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು !

. ಉದ್ದಕ್ಕೂ ಅಲ್ಲಲ್ಲಿ ಇಂತಹ ಬರಹಕ್ಕೆ ಎದುರಾಗುತ್ತೇವೆ. ಹೊಸ ಹೊಸ ಸಮಸ್ಯೆಗಳನ್ನು ರೂಪಿಸಿಕೊಂಡು ಎದುರಿಸಿ ಬಿಡಿಸುವ ಪ್ರಯತ್ನ ಮಾತ್ರ ಅಷ್ಟಾಗಿ ಕಾಣದು. ಅಲ್ಲಮನನ್ನು ಕುರಿತಂತೆ ಇನ್ನೂ ವ್ಯಾಪಕವೂ ಆಳವೂ ಆದ ಸಂಶೋಧನೆಯನ್ನು ನಡೆಸಲು ಅವಕಾಶವಿದೆ.*

---

* ಈ ಕೊನೆಯ ಎರಡು ಪುಸ್ತಕಗಳು ಕಳೆದ ವರ್ಷದ ಸಮೀಕ್ಷೆಯಲ್ಲಿ ಬರಬೇಕಾಗಿದ್ದು, ನಮಗೆ ದೊರೆಯದ ಕಾರಣ ಇವು ಕೈಬಿಟ್ಟು ಹೋಗಬಾರದೆಂಬ ಉದ್ದೇಶದಿಂದ ಈ ಸಮೀಕ್ಷೆಯನ್ನು ಇಲ್ಲಿ ಸೇರಿಸಿಕೊಳ್ಳಲಾಗಿದೆ (ಸಂ.)

# ಸಂಶೋಧನ ಸಮೀಕ್ಷೆ : 1980

ಕೆಲವು ಸಂಶೋಧನ ಕೃತಿಗಳ ಸಮೀಕ್ಷೆಯ ಈ ವಿಭಾಗದಲ್ಲಿ ಬಂದಿರುವ ಎರಡು ಪಿಎಚ್.ಡಿ ನಿಬಂಧಗಳೂ ತೃಪ್ತಿಯನ್ನುಂಟುಮಾಡುವುದಿಲ್ಲ. ಆದರೆ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆ ಪ್ರಕಟಿಸಿರುವ ಕನ್ನಡ ಛಂದಸ್ಸಿನ ಚರಿತ್ರೆಯ ಎರಡು ಸಂಪುಟಗಳು ಮನಸ್ಸಿಗೆ ಹರ್ಷವನ್ನುಂಟುಮಾಡುವ ಕೃತಿಗಳು. ಅದೇ ಸಂಸ್ಥೆ ಹೊರತರಬೇಕೆಂದಿರುವ ಕನ್ನಡ ಭಾಷೆಯ ಚರಿತ್ರೆಯ ಸಂಪುಟಗಳೂ ಇದೇ ಮಟ್ಟವನ್ನು ಕಾಪಾಡಿಕೊಂಡರೂ ತೃಪ್ತಿಯೇ. ಇನ್ನೂ ಉತ್ತಮವಾಗಿದ್ದರೆ ಅದು ಕನ್ನಡದ ಸೌಭಾಗ್ಯವೆಂದೇ ಭಾವಿಸಬೇಕು. ಎಸ್.ಕೆ. ರಾಮಚಂದ್ರ ರಾಯರ 'ತಿರುಪತಿ ತಿಮ್ಮಪ್ಪ' ಎನ್ನುವುದು ತನ್ನ ಶ್ರೇಷ್ಠತೆಯಿಂದ ಎದ್ದು ಕಾಣುವ ಈ ವರ್ಷದ ಕೃತಿ. 'ಸಾಹಿತ್ಯ ವಾರ್ಷಿಕ'ದ ಬೇರೆ ವಿಭಾಗಗಳಲ್ಲಿ ಸಂಶೋಧನಾತ್ಮಕ ಕೃತಿಗಳ ಸಮೀಕ್ಷೆ ಇರುವ ಸಾಧ್ಯತೆಗಳಿರುವುದರಿಂದ ಈ ವಿಭಾಗದಲ್ಲಿ ಬಂದಿರುವಷ್ಟೇ ಕೃತಿಗಳು ಈ ವರ್ಷದ ಸಂಶೋಧನೆಯ ಬೆಳೆಯೆಂದು ಭಾವಿಸಬಾರದು.

**ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಛಂದಸ್ಸಿನ ಚರಿತ್ರೆ (ಸಂಪುಟ ಒಂದು ಮತ್ತು ಎರಡು)** ಇವು ಬೇರೆ ಬೇರೆ ಲೇಖಕರು ಕನ್ನಡ ಛಂದಸ್ಸಿನ ಬಗ್ಗೆ ಬರೆದಿರುವ ಲೇಖನಗಳ ಸಂಪುಟಗಳು. ಮೊದಲ ಸಂಪುಟವನ್ನು ಪ್ರೊ. ಹರಿ ದಾಮೋದರ ವೇಲಣಕರ್ ಅವರಿಗೂ ಎರಡನೆಯ ಸಂಪುಟವನ್ನು ಪ್ರೊ. ತೀ.ನಂ. ಶ್ರೀಕಂಠಯ್ಯನವರಿಗೂ ಅರ್ಪಿಸಿರುವುದು ಮೆಚ್ಚಬೇಕಾದ ಸಂಗತಿ. ಆಯಾ ಕ್ಷೇತ್ರದಲ್ಲಿ ದುಡಿದ ಮಹನೀಯರಿಗೆ ಆಯಾ ಕ್ಷೇತ್ರದಲ್ಲಿ ನಿಮ್ಮ ಕೆಲಸವನ್ನು ಮುಂದುವರಿಸಿದ್ದೇವೆ ಎಂದು ಹೇಳುವುದು ಅವರಿಗೆ ತೋರುವ ದೊಡ್ಡ ಗೌರವ.

ಇವು ಬೇರೆ ಬೇರೆ ಲೇಖಕರ ಲೇಖನಗಳಾದರೂ ಶೀರ್ಷಿಕೆಗಳು ಪೂರ್ವ ನಿಯೋಜಿತವಾದುದರಿಂದ ಅವುಗಳ ಜೋಡಣೆ ಛಂದಸ್ಸಿನ ಬೆಳವಣಿಗೆಯನ್ನು ಎತ್ತಿ ತೋರಿಸುವಂತಾಗಿದೆ. ಮೊದಲ ಸಂಪುಟದಲ್ಲಿ ಛಂದಸ್ಸಿಗೆ ಸಂಬಂಧಿಸಿದ ಸೈದ್ಧಾಂತಿಕ ವಿಷಯಗಳ ಪರಿಚಯವಿದೆ. ಉದಾ. ಛಂದಸ್ಸಿನ ಉಗಮ, ಅದರ ಸಾಮಾನ್ಯ ಸ್ವರೂಪ ಮತ್ತು ಪ್ರಯೋಜನಗಳು, ಸಂಸ್ಕೃತ ಪ್ರಾಕೃತ ಕನ್ನಡವೂ ಸೇರಿದಂತೆ ಎಲ್ಲ ಶಿಷ್ಟ ದ್ರಾವಿಡ ಛಂದೋಗ್ರಂಥಗಳ ಪರಿಚಯ ಇಲ್ಲುಂಟು, ಛಂದಶ್ಶಾಸ್ತ್ರದ ಮೂಲ ಪರಿಕಲ್ಪನೆಗಳಾದ ಲಯ, ಗಣ (ವರ್ಣ, ಮಾತ್ರಾ, ಅಂಶ), ಯತಿ, ಪ್ರಾಸ ಇವುಗಳ ಪರಿಚಯವೂ ಉಂಟು.

ಇವುಗಳ ಬಳಿಕ, ಕನ್ನಡ ಛಂದಸ್ಸಿಗೆ ಹಿನ್ನೆಲೆಯಾದ ಸಂಸ್ಕೃತ ಛಂದಸ್ಸು, ಅದರ ತಾಯಿಬೇರಾದ ವೈದಿಕ ಛಂದಸ್ಸಿನ ಬಗ್ಗೆ ಒಂದು ಲೇಖನವಿದೆ. ವೈದಿಕ ಲೌಕಿಕ ಛಂದಸ್ಸುಗಳಿಗೆ ಕೊಂಡಿಯಂತಿರುವ ಶ್ಲೋಕದ ವಿಷಯ ಬಂದಿದೆ. ಅಕ್ಷರ ವೃತ್ತಗಳ ತೌರಾದ ಲೌಕಿಕ ಛಂದಸ್ಸಿನ ಬಗ್ಗೆ ಒಂದು ಬರಹವಿದೆ. ಕನ್ನಡ ಸಾಹಿತ್ಯದ ಆರಂಭದ ವರ್ಣ ವೃತ್ತಗಳ ವೈವಿಧ್ಯವೇನು, ಅವುಗಳು ಕನ್ನಡಕ್ಕೆ ಒಗ್ಗಿ ಬಂದ ಬಗೆ ಯಾವುದು ಎಂಬುದರ ಚರ್ಚೆ ದೊರಕುತ್ತದೆ. ಇತರ ಮಾಲಾವೃತ್ತ, ಅರ್ಧಸಮ, ವಿಷಮ ವೃತ್ತಗಳ ಬಗ್ಗೆಯೂ ಬರಹವಿದೆ. ಹಾಗೆಯೇ ಮಾತ್ರಾ ಛಂದಸ್ಸು, ಅದರ ಕೊಡುಗೆಗಳಾದ ಕಂದ, ರಗಳೆಗಳ ಚರಿತ್ರೆಯೂ ದೊರಕುತ್ತದೆ. ಅದೇ ಮಾತ್ರಾವೃತ್ತಗಳ ಗುಂಪಿಗೆ ಸೇರುವ, ಅಷ್ಟೊಂದು ಪ್ರಚುರವಿರದ ಚೌಪದಿ, ಧವಲ ಇತ್ಯಾದಿಗಳ ವಿಷಯವಲ್ಲದೆ ಷಟ್ಪ್ರತ್ಯಯದ ಒಂದು ಕಿರುಪರಿಚಯವೂ ಇಲ್ಲಿ ಸೇರಿದೆ. ಇಷ್ಟು ಮೊದಲ ಸಂಪುಟ; ಎಂದರೆ, ಕನ್ನಡಕ್ಕೆ ಹೊರಗಿನಿಂದ ಬಂದಿರುವ ಪದ್ಯಜಾತಿಗಳ ಚರಿತ್ರೆಗೆ ಈ ಸಂಪುಟ ಬಂದು ನಿಲ್ಲುತ್ತದೆ.

ಎರಡನೆಯ ಸಂಪುಟ ಮುಖ್ಯವಾಗಿ ಕನ್ನಡಕ್ಕೆ ಸೇರಿದ ಛಂದೋ ಪ್ರಯೋಗಗಳಿಗೆ ಮೀಸಲು. ಕರ್ಣಾಟಕ ವಿಷಯ ಜಾತಿಗಳ ಉಗಮದ ಚರ್ಚೆಯಿಂದ ಈ ಸಂಪುಟ ಆರಂಭವಾಗುವುದು ಉಚಿತವೇ ಆಗಿದೆ. ಏಳೆ, ತ್ರಿಪದಿ, ಷಟ್ಪದಿ, ಅಕ್ಕರ, ಕೊನೆಯದಾಗಿ ಸಾಂಗತ್ಯ ಇವುಗಳ ಸಾಮಾನ್ಯ ಲಕ್ಷಣಗಳು, ಅವುಗಳ ಬೆಳವಣಿಗೆಯಲ್ಲಿ ಕಾಲಕಾಲಕ್ಕೆ ಕಂಡುಬರುವ ಮಾರ್ಪಾಟುಗಳು, ಇತಿಹಾಸ, ಕನ್ನಡ ಛಂದಸ್ಸಿಗೆ ಅವುಗಳ ಕೊಡುಗೆ ಇವುಗಳನ್ನು ಕುರಿತು ದೀರ್ಘವಾದ ವಿವೇಚನೆಯಿದೆ. ಕೀರ್ತನೆಗಳ 'ಛಂದಸ್ಸ'ನ್ನು ಕುರಿತು ಮಾತನಾಡುವುದು ಕಷ್ಟವಾದರೂ ಆ ಬಗ್ಗೆಯೂ ಒಂದು ಲೇಖನವಿದೆ. ಹೊಸಗನ್ನಡ ಛಂದಸ್ಸಿಗೆ ಪ್ರೇರಣೆ ಆಂಗ್ಲ ಸಾಹಿತ್ಯವಾದರೂ ಕನ್ನಡದಲ್ಲಿ ನಡೆದ ಪ್ರಯೋಗಗಳಿಗೆಲ್ಲ ಕನ್ನಡ ಕವಿಗಳೇ ಜವಾಬುದಾರರಾದ್ದರಿಂದ ಇಡೀ ಸಂಪುಟ ಅಚ್ಚಗನ್ನಡ ಛಂದಸ್ಸಿಗೇ ಮೀಸಲು ಎಂಬುದು ಸ್ಪಷ್ಟವಾಗುತ್ತದೆ. ಹೊಸಗನ್ನಡ ಛಂದಸ್ಸಿನ ಉದಯಕ್ಕೆ ಉಂಟಾದ ಪ್ರಚೋದನೆಗಳ ಹಿನ್ನೆಲೆಯಾಗಿ ಆಂಗ್ಲ ಛಂದಸ್ಸಿನ ಮೂಲ ತತ್ವಗಳನ್ನು ಪರಿಚಯ ಮಾಡಿಸಿರುವುದು ಬಹಳ ಉಪಯುಕ್ತವಾಗಿದೆ. ಮತ್ತು ಹಿಂದಿನಂತೆಯೇ ಇಲ್ಲೂ ಹೊಸಗನ್ನಡ ಛಂದಸ್ಸಿನ ಪರಿಭಾಷೆಯ ಪರಿಚಯ, ಪ್ರಯೋಗಗಳು, ವೈವಿಧ್ಯ, ಸಾನೆಟ್ ಪ್ರಗಾಥಗಳಂತಹ ಬಿಡಿ ವೃತ್ತಗಳ ಸ್ವರೂಪ ಇತಿಹಾಸ, ಸರಳ ರಗಳೆ, ಮಹಾಛಂದಸ್ಸು, ಮುಕ್ತ ಛಂದಸ್ಸುಗಳ ಸ್ವರೂಪಗಳನ್ನು ಇಲ್ಲಿ ವಿವೇಚಿಸಿದೆ. ಯಕ್ಷಗಾನ ಛಂದಸ್ಸಿನ ಬಗ್ಗೆ - ಇದರ ಬಗ್ಗೆ ಬರೆಯುವುದು ಕಷ್ಟವಾದರೂ - ಒಂದು ಲೇಖನ ಸೇರಿಸಿರುವುದು ಉಚಿತವಾಗಿದೆ. ಅಂತ್ಯದಲ್ಲಿ ಛಂದಸ್ಸಿನ ಅಧ್ಯಯನ ನಡೆದು ಬಂದಿರುವ ದಾರಿ, ಅದರಲ್ಲಿ ಕೆಲಸ ಮಾಡಿರುವ ವಿದ್ವಾಂಸರ ಸಾಧನೆಗಳು, ವೈಫಲ್ಯಗಳು, ಮುಂದೆ ಆಗಬೇಕಾದ ಕಾರ್ಯ ಇವುಗಳನ್ನು ಕುರಿತಂತೆ ಒಂದು ಸಮೀಕ್ಷೆ ನಡೆಸಿರುವುದೂ ನಮ್ಮ ಮೆಚ್ಚುಗೆಯನ್ನು ಗಳಿಸುತ್ತದೆ.

ಇದರಿಂದ ಈ ಒಟ್ಟು ಕೆಲಸದ ಹಿಂದೆ ವ್ಯವಸ್ಥಿತವಾದ ನಿರ್ದಿಷ್ಟ ಯೋಜನೆಯಿದೆಯೆಂಬುದು ಸ್ವಯಂವೇದ್ಯ. ಕನ್ನಡ ಛಂದಸ್ಸಿಗೆ ಸಂಬಂಧಿಸಿದ ಯಾವುದೇ

ವಿಷಯವೂ ಇಲ್ಲಿನ ಸಮೀಕ್ಷೆಯಿಂದ ತಪ್ಪಿಸಿಕೊಂಡಿಲ್ಲ. ವಚನಗಳ ಪ್ರಸ್ತಾಪ ಆಧುನಿಕ ಮುಕ್ತ ಛಂದಸ್ಸಿನ ಪೀಠಿಕೆಯಲ್ಲಿ ಬಂದಿದ್ದರೂ ಅವುಗಳ ಲಯದ ಬಗ್ಗೆ ಒಂದು ಲೇಖನವಿರುವುದು ಅಗತ್ಯವೆನ್ನಿಸುತ್ತದೆ. ಕೀರ್ತನೆಗಳ ಛಂದಸ್ಸಿನಲ್ಲಿ ಶಿವಶರಣರು 'ಬರೆದರೆಂದು ಹೇಳಲಾದ' ಕೀರ್ತನೆಗಳ ಉಲ್ಲೇಖವಿದ್ದರೂ ಅವುಗಳ ಛಂದಸ್ಸನ್ನು ಕೀರ್ತನೆಗಳ ಛಂದಸ್ಸಿನ ಚರ್ಚೆಯಲ್ಲಿ ಕೈಬಿಟ್ಟಿರುವುದು ಅಸಮರ್ಥನೀಯ.

ಈ ಸಂಪುಟಗಳಲ್ಲಿ ಬಂದಿರುವ ಎಲ್ಲ ಲೇಖನಗಳೂ ಒಂದೇ ಮಟ್ಟದವಾಗಿರಲು ಸಾಧ್ಯವಿಲ್ಲವಾದರೂ, ಬಹುಮಟ್ಟಿನವು ಉತ್ಕೃಷ್ಟತೆಯನ್ನು ಕಾಪಾಡಿಕೊಂಡಿವೆ. ಸಂಪಾದಕರು ಈ ಎಲ್ಲ ಲೇಖನಗಳನ್ನು ಎಚ್ಚರಿಕೆಯಿಂದ ಪರಿಶೀಲಿಸಿ ಇರಬಹುದಾದ ಅರೆಕೊರೆಗಳನ್ನು ತುಂಬಿರುವುದನ್ನು ಊಹಿಸಬಹುದು. ಎಲ್ಲ ಲೇಖನಗಳನ್ನೂ ಬಿಡಿಬಿಡಿಯಾಗಿ, ವಿವರವಾಗಿ ಚರ್ಚಿಸುವುದು ಅಸಾಧ್ಯ ಮತ್ತು ಅನಗತ್ಯ. ಒಂದು ಮಾತಂತೂ ನಿಜ: ಇಲ್ಲಿನ ಎಲ್ಲ ಲೇಖಕರು ಆಯಾ ಕ್ಷೇತ್ರದಲ್ಲಿ ಚೆನ್ನಾಗಿ ಪಳಗಿದವರೇ, ಮತ್ತು ಎಲ್ಲರೂ ಶ್ರದ್ಧೆಯಿಂದ ಬರೆದಿದ್ದಾರೆ. ಆದರೂ, ಒಂದೆರಡು ಅಂಶಗಳನ್ನು ಪ್ರಾಸಂಗಿಕವಾಗಿ ಗಮನಿಸಬಹುದು. ಕನ್ನಡ ಅಧ್ಯಯನ ಸಂಸ್ಥೆಯ ಪ್ರಕಟಣೆಗಳಲ್ಲಿ ಲೇಖಕ ಎಂಬರ್ಥದಲ್ಲಿ 'ಲೇಖನದಾರ' ಎಂಬ ಮಾತನ್ನು ಬಳಸಲಾರಂಭಿಸಿರುವುದು ತೀರಾ ಅಸಮರ್ಥನೀಯವಾಗಿದೆ. ಪು. 25ರಲ್ಲಿ ಶೀರ್ಷಿಕೆಯಲ್ಲಿ ಅಕ್ಷರಪಲ್ಲಟವಾಗಿರುವುದಕ್ಕೆ ಯಾರೂ ಜವಾಬ್ದಾರರಲ್ಲ (ಪುಸ್ತಕದ 'ಅಚ್ಚುದಾರ'ನೇ ಹೊಣೆ). ಪು. 154(1)ರಲ್ಲಿ ಹೇಳಿರುವಂತೆ 'ಯ್ಮು' ಕಂಪಿತಕ್ಕೆ ಉದಾಹರಣೆಯಾಗುವುದಿಲ್ಲ ; ಆಗುವುದಾದರೆ 'ಬಾಯ್' ಆಗಬೇಕು. ಆದರೆ ನಾವು ಕಂಪಿತವಾಗಿ ಮಾಡಿಕೊಳ್ಳಬಹುದು, ಅಥವಾ ಇನ್ನೂ ಹೆಚ್ಚಿನ ಕಾಲಕ್ಕೆ ಎಳೆಯಬಹುದು - ರಚನೆಯಲ್ಲಿ ಕಂಪಿತವಾಗುವುದಿಲ್ಲ (ಆದರೆ, 'ತಲ್' 'ಮೇ' ಎಂಬುವು ತೀ.ನಂ.ಶ್ರೀ. ಅವರ ಉದಾಹರಣೆಗಳಲ್ಲಿರುವಂತೆ ಸಹಜ ಕಂಪಿತಗಳು). "ಖ್ಯಾತ ಕರ್ಣಾಟಕ" (ಪು. 414, 1) ರೂಪಕ್ಕಿಂತ "ಖ್ಯಾತ ಕಾರ್ಣಾಟಕ" ಎಂಬ ವ್ಯಾಕರಣ ಶುದ್ಧ ರೂಪ ಸ್ವೀಕಾರಾರ್ಹ (ಕಾರ್ಣಾಟಕ - ಕರ್ಣಾಟಕಕ್ಕೆ ಸಂಬಂಧಿಸಿದ್ದು). ಮಾತ್ರಾಲಯವಿರುವ ಅಕ್ಷರವೃತ್ತಗಳ ಪಾದಗಳನ್ನು ಮೂರಕ್ಷರಗಳ ಗಣಗಳಿಂದ ಅಳೆಯುವುದು ಅಸ್ವಾಭಾವಿಕವೆಂಬ ಬಿ.ಎಂ.ಶ್ರೀ.ಯವರ ಅಭಿಪ್ರಾಯವನ್ನು ಪ್ರಶ್ನಿಸಿರುವುದು (ಪು. 1.416) ಸರಿಯಾಗಿದೆ. ಆಂಗ್ಲ ಛಂದಸ್ಸಿನ ಪರಿಚಯಾತ್ಮಕ ಲೇಖನದಲ್ಲಿ (ಪು.ii 360) ಇಂಗ್ಲೀಷ್ ಪದ್ಯಗಳನ್ನು ರೋಮನ್ ಲಿಪಿಯಲ್ಲಿಯೇ ಕೊಡಬೇಕಾಗಿತ್ತು; ಕನ್ನಡ ಲಿಪಿಯಲ್ಲಿ ಅವನ್ನು ಓದುವುದೇ ಕಷ್ಟವಾಗುತ್ತದೆ. 'ಫರ್‌ಸ್ಟ್' (first) ಎಂಬಲ್ಲಿನ 'ರ್' ಉಚ್ಚಾರಗೊಳ್ಳುವುದಿಲ್ಲ; 'ರಿವರ್' ಎಂಬಲ್ಲಿನ ಅಂತ್ಯ 'ರ್' ಕೂಡ ಅಷ್ಟೇ. ಕನ್ನಡ ಲಿಪಿಯಲ್ಲಿ ಬರೆದರೆ ಅವನ್ನು ಉಚ್ಚರಿಸಬೇಕೆನ್ನಿಸುತ್ತದೆ. ಮಹಾಛಂದಸ್ಸಿನ ಬಗ್ಗೆ ನನ್ನ ಅಭಿಪ್ರಾಯಗಳಿಗಿಂತ ಸ್ವಲ್ಪ ಭಿನ್ನವಾದ ಅಭಿಪ್ರಾಯಗಳು ವ್ಯಕ್ತವಾಗಿದ್ದರೂ (ii. ಪು. 568 ಇತ್ಯಾದಿ) ನನ್ನ ಅಭಿಪ್ರಾಯಗಳನ್ನು ಇನ್ನೂ ಸಾಧುವೆಂದೇ ನಂಬಿದ್ದೇನೆ. ಭಾಮಿನೀ ಷಟ್ಪದಿಯನ್ನು ಸಮರ್ಥವಾಗಿ ಬಳಸಿದ ಮಾತ್ರಕ್ಕೆ ಅದಕ್ಕೆ ನಾವು ಬೇರೊಂದು ಹೆಸರನ್ನು ಕೊಡುವ ಅಗತ್ಯ ಹೇಗಿಲ್ಲವೋ, ಸರಳ ರಗಳೆಗೂ ಅವರ ಅಪೂರ್ವ

ಪ್ರಯೋಗಕ್ಕಾಗಿ ಮಹಾಛಂದಸ್ಸು ಎಂಬ ಹೆಸರು ಕೊಡುವುದು ಅನಗತ್ಯವೆಂದೇ ನನ್ನ ದೃಢ ನಂಬಿಕೆ. ಇವೆಲ್ಲ ಸಣ್ಣ ವಿಷಯಗಳು.

ವಾಸ್ತವ ಸಂಗತಿಯೆಂದರೆ ಈ ಎರಡು ಸಂಪುಟಗಳ ವಿಸ್ತೃತ ವಿಮರ್ಶೆಯನ್ನು ಮಾಡುವವರು ಛಂದಸ್ಸಿನ ಬಗ್ಗೆ ಸಾಮಾನ್ಯ ಜ್ಞಾನವನ್ನು ಹೊಂದಿದ್ದರೆ ಸಾಲದು. ಏಕೆಂದರೆ ಒಬ್ಬೊಬ್ಬರೂ ಒಂದೊಂದು ವಿಷಯದಲ್ಲಿ ಆಳವಾಗಿ ಹೊಕ್ಕು ವಿವೇಚಿಸಿರುವಾಗ ವಿಮರ್ಶೆಯೆಂಬುದು ಅಷ್ಟು ಸುಲಭವಾಗುವುದಿಲ್ಲ. ಕನ್ನಡದಲ್ಲಿ ಒಂದು ವಿಷಯದ ಬಗ್ಗೆ ಇಷ್ಟೊಂದು ಲೇಖಕರು ತೀವ್ರ ಶ್ರದ್ಧೆಯಿಂದ, ಏಕಪ್ರಕಾರವಾದ ಮಟ್ಟವನ್ನು ಕಾಯ್ದುಕೊಂಡು ಲೇಖನಗಳನ್ನು ಬರೆದ ಮತ್ತೊಂದು ಉದಾಹರಣೆ ದೊರಕಲಾರದು. ಎಲ್ಲ ಲೇಖಕರೂ ನಿಜವಾಗಿಯೂ ಅಭಿನಂದನಾರ್ಹರು.

ಅದಕ್ಕಿಂತ, ಇಲ್ಲಿ ನಡೆದಿರುವ ಸಂಪಾದನ ಕೆಲಸವೂ ಅಷ್ಟೇ ಗೌರವಾರ್ಹವಾದುದು. ಬಂದ ಲೇಖನಗಳನ್ನು ಒಂದು ಕ್ರಮದಲ್ಲಿ ಜೋಡಿಸಿ ಅಚ್ಚಿಗೆ ಕಳಿಸುವುದೇ ಇಂದಿನ ಅನೇಕ 'ಸಂಪಾದಕರ' ಕೆಲಸವಾಗಿರುವಾಗ ಎಲ್ಲ ಲೇಖನಗಳನ್ನೂ ತಿದ್ದಿ, ಒಂದು ವ್ಯವಸ್ಥೆಗೆ ಪ್ರಮಾಣಕ್ಕೆ ತರುವಲ್ಲಿ ನಡೆದಿರುವ ಶ್ರಮವನ್ನು ಸುಲಭವಾಗಿ ಊಹಿಸಬಹುದಾಗಿದೆ. ಅಚ್ಚಿನ ತಪ್ಪುಗಳು ತೀರ ವಿರಳ. ಅಡಿಟಿಪ್ಪಣಿಗಳನ್ನು ಕೊಡುವಲ್ಲಿ ಬಹುಮಟ್ಟಿನ ಏಕರೂಪತೆ (ಇಲ್ಲೂ ಅರಿಯದೆ ಪ್ರಮಾದಗಳಾಗಿವೆ. ಉದಾ. ಪು. ii. 654. 'ಶ್ರೀಕಂಠತೀರ್ಥ' ಕೃತಿಗೆ ನಾನು ಲೇಖಕನಲ್ಲ, ಸಂಪಾದಕ. ಸಂಪಾದಕ ನಾನೊಬ್ಬನೇ ಅಲ್ಲ, ನಾನೂ ಸೇರಿದಂತೆ ಮೂವರು), ಕೊನೆಯಲ್ಲಿ ಕೊಟ್ಟಿರುವ ಅಭ್ಯಾಸ ಸೂಚಿ ಎಲ್ಲವೂ ಮೇಲ್ಮಟ್ಟದ ಸಂಪಾದನೆಯನ್ನು ಹೇಳುತ್ತವೆ. ಗಂಭೀರ ಸಂಶೋಧನೆಯಲ್ಲಿ ಆಸಕ್ತರಾಗಿರುವವರಿಗೆ ತುಂಬು ತೃಪ್ತಿಯನ್ನು ತರುವ ಈ ಕೃತಿಗಳ ಪ್ರಧಾನ ಸಂಪಾದಕರಾದ ಹಾ.ಮಾ. ನಾಯಕ, ಸಂಪಾದಕರಾದ ಸಿ.ಪಿ. ಕೃಷ್ಣಕುಮಾರ್ ಇಬ್ಬರೂ ಅಭಿನಂದನಾರ್ಹರು. ಈ ಸಂಪುಟಗಳ ಪ್ರಕಟಣೆಯಿಂದ ಕನ್ನಡ ಛಂದಸ್ಸಿನ ಅಧ್ಯಯನಕ್ಕೆ ಒಂದು ಹೊಸ ತಿರುವು ಪ್ರಾಪ್ತವಾಗಿದೆ.

**ಕೆಳದಿ ಅರಸರು ಮತ್ತು ಕನ್ನಡ ಸಾಹಿತ್ಯ"** ಸಾ.ಶಿ. ಮರುಳಯ್ಯನವರ ಪಿಎಚ್.ಡಿ ನಿಬಂಧ. ಆರಂಭದ ಕೃತಜ್ಞತೆ ಭಾಗದಲ್ಲಿ "ಅಧ್ಯಯನ ಅವಿಶ್ರಾಂತವಾಗಿ ಸಾಗಿತು. ಅಂತು ಸಾಗಿದ ಸುಮಾರು ಒಂಬತ್ತು ವರ್ಷಗಳ ಸುದೀರ್ಘ ತಪಸ್ಸಿನ ಫಲ ಈ ಕೃತಿ..... ನಲ್ಲಿಯಲ್ಲಿ ನೀರು ಬಂದರೆ ನಲ್ಲಿಯ ಹೊಟ್ಟೆಯಲ್ಲೇ ನೀರು ಹುಟ್ಟುವುದಿಲ್ಲ. ಹನಿ ನೀರಿನ ಸೃಷ್ಟಿಗೆ ಸಮಸ್ತ ಶಕ್ತಿಗಳೂ ಶ್ರಮಿಸಬೇಕಾಗುತ್ತದೆ. ಅಂತೆಯೇ ನನ್ನ ಲೇಖಣಿಯಿಂದ ಹೊರಬಂದ ಈ ಗ್ರಂಥದ ಹಿನ್ನೆಲೆಯಲ್ಲಿ ನೂರಾರು ವ್ಯಕ್ತಿ ಶಕ್ತಿಗಳ ಕೈವಾಡ ಇದೆ. ಆ ಎಲ್ಲ ಚೈತನ್ಯಗಳಿಗೂ ನನ್ನ ಭಕ್ತಿಪೂರ್ವಕ ನಮನಗಳು" - ಈ ಧಾಟಿಯ ಬರವಣಿಗೆಯನ್ನು ಭಾವುಕ ಲೇಖಕರಿಗೆ ಬಿಟ್ಟುಕೊಟ್ಟು ಸಂಶೋಧಕರು ನೇರವಾಗಿ ಇದ್ದುದನ್ನು ಇದ್ದಂತೆ ಹೇಳುವುದನ್ನು ಅಭ್ಯಾಸಮಾಡಿಕೊಳ್ಳುವುದು ಮರ್ಯಾದೆ; ಆಗ ಓದುಗರಿಗೂ ಅವರ ಬಗ್ಗೆ ನಂಬಿಕೆ ಹುಟ್ಟುತ್ತದೆ.

ಆದರೆ, ಈ ನಿಬಂಧ ರಚನೆಗೆ ಮರುಳಯ್ಯನವರು ನಿಜವಾಗಿಯೂ ಶ್ರಮಿಸಿದ್ದಾರೆ. ಕೆಳದಿಯ ಅರಸರ ಸಂಕ್ಷಿಪ್ತ ಇತಿಹಾಸ, ಅರಸರ ಸಾಹಿತ್ಯ ಸೇವೆ, ಕೆಳದಿಯ ಆಶ್ರಯದಲ್ಲಿ ಕೃತಿರಚನೆ ಮಾಡಿದ ಕನ್ನಡ ಕವಿಗಳು ಅವರ ಕೃತಿಗಳು, ಕೆಳದಿ ಸಾಹಿತ್ಯದ ಮೌಲ್ಯನಿರ್ಣಯ ಇವು ಇಲ್ಲಿಯ ಸ್ಥೂಲ ಹಂದರವನ್ನು ಹೇಳುತ್ತವೆ. (ವಿಷಯ ಸೂಚಿಯಲ್ಲಿ ಪುಟಗಳ ಸಂಖ್ಯೆ ಇಲ್ಲದಿರುವುದು, ಆಯಾ ಅಧ್ಯಾಯದ ಹೆಸರು ಪುಟದ ಮೇಲೆ ಬಾರದಿರುವುದು ಓದುಗನಿಗೆ ತೊಡಕನ್ನುಂಟುಮಾಡುತ್ತದೆ. ಯಾವ ವಿಷಯ ಯಾವ ಪುಟಗಳಲ್ಲಿ ದೊರಕುತ್ತದೆ ಎಂಬುದಕ್ಕೆ ಬಹಳ ತಡಕಾಡಬೇಕಾಗುತ್ತದೆ). ಪುಸ್ತಕದ ಅಂತ್ಯದಲ್ಲಿ ಉಪಯುಕ್ತ ಸನ್ನದು, ಶಾಸನಗಳು, ಕೆಳದಿ ಸಾಹಿತ್ಯದ ಪಟ್ಟಿ ಇವೆಲ್ಲ ಬಂದಿರುವುದು ಹೆಚ್ಚಿನ ಅಧ್ಯಯನಕ್ಕೆ ಸಹಾಯಕಾರಿ.

ಮೊದಲ ಅಧ್ಯಾಯದಲ್ಲಿ ತಮ್ಮ ನಿಬಂಧದ ವಸ್ತುವಿನ ವ್ಯಾಪ್ತಿಯನ್ನು ಕಂಡುಕೊಳ್ಳಲು ಯತ್ನಿಸಿದ್ದಾರೆ. ಕೆಳದಿ ಇತಿಹಾಸದ ಬಗ್ಗೆ ಬಂದಿರುವ ಗ್ರಂಥಗಳ ಸೂಕ್ಷ್ಮ ವಿವೇಚನೆ ಇಲ್ಲಿದೆ. 'ಕೆಳದಿಯ ಸಂಕ್ಷಿಪ್ತ ಇತಿಹಾಸ' ಅಧ್ಯಾಯದಲ್ಲಿ ರಾಜಕೀಯ ಚರಿತ್ರೆ ದೊರಕುತ್ತದೆ. 'ಕೆಳದಿ ಅರಸರ ಸಾಹಿತ್ಯ ಸೇವೆ' ಎಂಬುದು ಈ ನಿಬಂಧದ ಅತಿ ಮುಖ್ಯಭಾಗ. ಏಳು ದೊರೆಗಳು ಸುಮಾರು ಮೂವತ್ತು ಕವಿಗಳನ್ನು ಪೋಷಿಸಿದ್ದಾರೆ. ಆ ಕವಿಗಳ ಕೃತಿ ಸಂಖ್ಯೆ ಅರುವತ್ತಕ್ಕೂ ಮಿಕ್ಕಿದೆ (ಇವುಗಳಲ್ಲಿ ಸಂಸ್ಕೃತ ಕೃತಿಗಳೂ ಸೇರಿವೆ). ಒಬ್ಬೊಬ್ಬ ದೊರೆಯ ಆಶ್ರಿತರಾಗಿದ್ದ ಕವಿಗಳ, ಕೃತಿಗಳ ಪರಿಚಯ ಈ ಭಾಗದಲ್ಲಿದೆ. ಮುಂದಿನ ಭಾಗದಲ್ಲಿ ಕೆಲವು ಕೆಳದಿಯ ಕವಿಗಳ ವಿಚಾರ ಬಂದಿದೆ. ಗಂಗಾದೇವಿ ಎಂಬಾಕೆ 'ಕೆಳದಿ ರಾಜ್ಯಾಭ್ಯುದಯಂ' ಎಂಬ ಕೃತಿಯನ್ನು ಬರೆದಂತೆ ಒಂದು ಕಾಗದದ ಪ್ರತಿಯಿಂದ ತಿಳಿದುಬರುತ್ತದೆ. ಈ ಕವಯಿತ್ರಿಯ ಬಗ್ಗೆ ಕೃತಿಕಾರರು ತೀರ ಸಂದಿಗ್ಧ ಸ್ಥಿತಿಯಲ್ಲಿ ಚರ್ಚೆಯನ್ನು ಉಳಿಸಿರುವುದು, ಅವಳ ಕರ್ತೃತ್ವವೇ ಸಂದೇಹಾಸ್ಪದವಾಗಿರುವಾಗ ಆ ಬಗ್ಗೆ ಏನೂ ಸ್ಪಷ್ಟವಾಗಿ ಹೇಳದಿರುವುದು (ಪು. 134-5) ಶೋಚನೀಯ ಸಂಗತಿ. ಕವಿಗಳ ಕೃತಿಗಳ ವಿಶ್ಲೇಷಣೆ ಅಸಮರ್ಪಕವೆನ್ನುವುದಕ್ಕೆ 'ಕೆಳದಿ ನೃಪ ವಿಜಯ' ಬಗ್ಗೆ ಬಂದಿರುವ ಬರಹ ಒಳ್ಳೆಯ ಉದಾಹರಣೆ (ಪು. 209-15). ಕೆಲವೆಡೆ 'ಹರಿಹರನ ಪ್ರಭಾವ'ವಿದೆ ಎನ್ನುತ್ತಾರೆ (ಪು.217), ಎಲ್ಲಿ ಎನ್ನುವುದು ಸ್ಪಷ್ಟವಾಗುವುದಿಲ್ಲ. 'ಶಿವಕಲ್ಯಾಣ'ವೆಂಬ ಯಕ್ಷಗಾನ 'ಕಲಾತ್ಮಕ'ವಾಗಿದೆ ಎನ್ನುತ್ತಾರೆ (ಪು. 223); ಆದರೆ ಆ ಯಕ್ಷಗಾನದ ವಿಶ್ಲೇಷಣೆ, ಅದರ ಬಂಧ ಇವುಗಳ ಪರಿಚಯವಾಗುವುದಿಲ್ಲ. 'ಶಾಸನಸಾಹಿತ್ಯ' ಭಾಗವು (ಪು. 249-50) ಕೆಳದಿ ಅರಸರ ಶಾಸನಗಳ ವೈಶಿಷ್ಟ್ಯವನ್ನು ಪರಿಚಯ ಮಾಡಿಕೊಡುವಲ್ಲಿ ವಿಫಲವಾಗುತ್ತದೆ. ಕೆಳದಿ ಶಾಸನಗಳು ಗದ್ಯಾತ್ಮಕವಾಗಿ, ಅಲ್ಲಿ ಕೇವಲ ವಿಷಯ ನಿರೂಪಣೆಯೇ ಮುಖ್ಯ ಉದ್ದೇಶವಾಗಿರುವುದು ಆ ಕಾಲಕ್ಕೆ ತೀರ ನಿರೀಕ್ಷಿತವೆಂಬುದನ್ನು ಗುರುತಿಸಬೇಕೇ ಹೊರತು "ದೌರ್ಭಾಗ್ಯವಶಾತ್ ಕೆಳದಿಯ ಶಾಸನಗಳಲ್ಲಿ ಹೆಚ್ಚಿನ ಸಾಹಿತ್ಯಾಂಶಗಳು ಸಿಗುವುದಿಲ್ಲ" ಎಂದು ಹೇಳುವುದು ಸಮರ್ಥನೀಯವಾಗದು. ರಾಜಾಸ್ಥಾನಗಳ ವಿದ್ವದ್ಗೋಷ್ಠಿಗಳನ್ನು 'ಸಾಹಿತ್ಯ ಅಕಾಡೆಮಿ' ಎಂದು ಕರೆದು ಗೊಟ್ಟಿ, ಅನುಭವಗೋಷ್ಠಿ (?), ಪರಿಷತ್, ಸತ್ಸಭೆ, ವಿದ್ವತ್ಸಭೆ, ಸಂಗಂ ಇವು ಅಂದಿನ ಅಕಾಡೆಮಿಗೆ ಇದ್ದ ಪರ್ಯಾಯನಾಮಗಳೆಂದಿರುವುದು, ಇಕ್ಕೇರಿಯ 'ನಾಟಕಶಾಲೆ'

(ಇದು ವಾಸ್ತವವಾಗಿ ನರ್ತನಶಾಲೆ) ಸಾಹಿತ್ಯ ಅಕಾಡೆಮಿ ಸೇರುತ್ತಿದ್ದ ಭವನವೆಂದು ಊಹಿಸುವುದು ಹಾಸ್ಯಾಸ್ಪದ.

ಮರುಳಯ್ಯನವರು ಅನೇಕ ಹಸ್ತಪ್ರತಿಗಳನ್ನು ನೋಡಿದ್ದಾರೆ, ಶ್ರಮಿಸಿದ್ದಾರೆ ನಿಜ. ಆದರೆ ನಿರೂಪಣೆಯಲ್ಲಿ ಶಿಸ್ತು, ಆಲೋಚನೆಯಲ್ಲಿ ಒಂದು ಕ್ರಮ ಇದ್ದಿದ್ದರೆ ಎಷ್ಟೋ ಒಳ್ಳೆಯ ನಿಬಂಧವಾಗುತ್ತಿತ್ತು. ಎಷ್ಟೋ ಕಡೆ ವಾಕ್ಯ ರಚನೆಯೇ ಸುಸಂಬದ್ಧವಾಗಿರುವುದಿಲ್ಲ. Op. cit., ibid ಇತ್ಯಾದಿ ಚಿಹ್ನೆಗಳ ಸರಿಯಾದ ಬಳಕೆ ತಿಳಿಯದು. ಸಮಸ್ಯೆಗಳನ್ನು ಎತ್ತುವ ಎದುರಿಸುವ ಬಿಡಿಸುವ ಯತ್ನ ಅಷ್ಟಾಗಿ ಕಾಣದು. ಉಲ್ಲೇಖಗಳನ್ನೂ ಅಡಿಟಿಪ್ಪಣಿಗಳನ್ನೂ ಕೊಡುವಲ್ಲಿ ಅನವಧಾನತೆ ಎದ್ದು ಕಾಣುತ್ತದೆ. "ಆಧಾರ ಗ್ರಂಥಾವಲಿ" ಭಾಗವಂತೂ ಅವ್ಯವಸ್ಥೆಯ ಪರಮಾವಧಿ. ಲೇಖಕರ, ಪುಸ್ತಕಗಳ ಹೆಸರುಗಳು ಅನೇಕ ಕಡೆ ತಪ್ಪಾಗಿವೆ. ಅಚ್ಚಿನ ತಪ್ಪುಗಳಿಗೆ ಲೆಕ್ಕವಿಲ್ಲ. ಹೀಗಾಗಿ ಈ ನಿಬಂಧದ ಪ್ರಕಾಶಕರಾಗಲಿ, ಲೇಖಕರಿಗಾಗಲಿ ಇಂತಹ ಪ್ರಕಟಣೆಯಿಂದ ಗೌರವ ಬರುತ್ತದೆಯೆಂದು ನಾನು ಹೇಳಲಾರೆ. ನಿಬಂಧಕ್ಕೆ ಎಷ್ಟು ಒಳ್ಳೆಯ ವಿಷಯ! ಲೇಖಕರಿಗೆ ಎಷ್ಟು ಒಳ್ಳೆಯ ಸಾಮಗ್ರಿ ಲಭಿಸಿದೆ! ಆದರೆ ಫಲಿತಾಂಶವನ್ನು ನೋಡಿದರೆ ಏಕೆ ಹೀಗೆ ? ಎಂಬ ಪ್ರಶ್ನೆ ಮೂಡುತ್ತದೆ; ಉತ್ತರವೂ ತಾನಾಗಿಯೇ ಹೊಳೆಯುತ್ತದೆ.

**ದಕ್ಷಿಣ ಕರ್ನಾಟಕದ ಜನಪದ ರಂಗಭೂಮಿ** ಡಿ.ಕೆ. ರಾಜೇಂದ್ರರ ಪಿಎಚ್.ಡಿ. ನಿಬಂಧ. ಇದರಲ್ಲಿ ಐದು ಭಾಗಗಳಿವೆ : ಜನಪದ ನಾಟಕಗಳ ಮೂಲ, ಮೂಡಲಪಾಯ ಯಕ್ಷಗಾನ ಬಯಲಾಟ, ಗೊಂಬೆಯಾಟಗಳು, ಉಪಸಂಹಾರ ಮತ್ತು ಅನುಬಂಧಗಳು. ಮೊದಲ ಭಾಗದಲ್ಲಿ ಜನಪದ ನಾಟಕಗಳ ಮೂಲವನ್ನೂ ಕರ್ನಾಟಕದ ಜನಪದ ರಂಗಭೂಮಿಯನ್ನೂ ಕುರಿತು ವಿವೇಚಿಸಿದ್ದಾರೆ. ಈ ಭಾಗದ ಮೊದಲ ವಾಕ್ಯವೇ ಓದುಗ ಹುಬ್ಬೇರಿಸುವಂತೆ ಮಾಡುತ್ತದೆ - "ಭಾರತೀಯ ಸಂಪ್ರದಾಯದಲ್ಲಿ ಯಾವುದೊಂದರ ಅಥವಾ ಎಲ್ಲದರ ಮೂಲವನ್ನು, ಯಾವ ತೊಡಕೂ ಇಲ್ಲದೆ ಸುಲಭವಾಗಿ ಗುರುತಿಸಬಹುದು." ಅದರ ಮುಂದಿನ ವಾಕ್ಯ ಹೀಗಿದೆ - "ಅವುಗಳಿಗೆ ಕೊಡುವ ವಿವರಣೆಯೂ ಸಂಪ್ರದಾಯ ಮೂಲವಾದದ್ದರಿಂದ ಅದೂ ಅಷ್ಟೇ ಸುಲಭವಾಗಿರುತ್ತದೆ" - ಈ ಮಾತುಗಳು ಆದ್ಯ ರಂಗಾಚಾರ್ಯರು ಯಾವುದೋ ಒಂದು ಕಡೆ ಆಡಿದ ಮಾತನ್ನು ವಿಮರ್ಶಿಸದೆ ತೆಗೆದುಕೊಂಡವಾದ್ದರಿಂದ, ಲೇಖಕರು ಅವನ್ನು ಗಂಭೀರವಾಗಿ ಹೇಳಿದ್ದಾರೆಯೋ ವ್ಯಂಗ್ಯಕ್ಕೆ ಹೇಳಿದ್ದಾರೆಯೋ ತಿಳಿಯದು. ಒಂದು ನಿಬಂಧವನ್ನು ಆರಂಭಿಸುವ ಮಾತುಗಳಂತೂ ಹೀಗಿರಬಾರದು ತಾನೇ! ಜನಪದ ನಾಟಕಗಳಿಗೆ ಭೂತನೃತ್ಯ, ಗೊಂಬೆಯಾಟ ಮೂಲ ಮುಂತಾದ ಸಿದ್ಧಾಂತಗಳನ್ನು ಉಲ್ಲೇಖಿಸಿದ್ದಾರೆ. 21ನೇ ಪುಟದಲ್ಲಿ ಇಂತಹ ಸಮಸ್ಯೆಗಳನ್ನು ಬಿಡಿಸುವುದು ಕಷ್ಟ ಎಂಬ ತೀರ್ಮಾನಕ್ಕೆ ಬಂದಿದ್ದಾರೆ. ಪ್ರಸ್ತಾಪಿಸಬಹುದೇ ಹೊರತು ಜನಪದ ನಾಟಕಗಳ ಮೂಲದಂತಹ ಹಿಡಿತಕ್ಕೆ ಸಿಗದ ವಿಷಯಗಳ ಚರ್ಚೆಯೇ ಇಂತಹ ನಿಬಂಧಗಳ ವ್ಯಾಪ್ತಿಗೆ ಹೊರಗು. 'ಕರ್ನಾಟಕ ಜನಪದ ರಂಗಭೂಮಿ' ಭಾಗದಲ್ಲಿ ರಂಗಭೂಮಿಯ ವಿವಿಧ ಪ್ರಕಾರಗಳನ್ನು ವಿಶ್ಲೇಷಿಸಿದ್ದಾರೆ. ಯಕ್ಷಗಾನದ ಬೇರೆ ಬೇರೆ

ಶ್ರಮ ವಹಿಸಿ ಒಳ್ಳೆಯ ನಿಬಂಧವನ್ನು ಹೊರತಂದಿರುವ ಡಾ. ವಾಮನ ಬೇಂದ್ರೆಯವರಿಂದ ಲಕ್ಷ್ಮೀಶ ಕವಿಯ ಅಧ್ಯಯನಕ್ಕೆ ಒಳ್ಳೆಯ ಕಾಣಿಕೆ ಸಂದಿದೆ.

**ಕವಿಚಕ್ರವರ್ತಿ ಪೊನ್ನ ಮತ್ತು ಆತನ ಕೃತಿಗಳು** ಎಂ.ಆರ್. ಉಮಾದೇವಿಯವರ ಪಿಎಚ್.ಡಿ. ನಿಬಂಧ. ಇದರ ಒಂಬತ್ತು ಅಧ್ಯಾಯಗಳಲ್ಲಿ ಮೊದಲ 'ಅಧ್ಯಯನದ ಅಗತ್ಯ' ಎಂಬುದರಲ್ಲಿ ಪೊನ್ನ ಕವಿಯನ್ನು ಕುರಿತಾದ ಅಧ್ಯಯನ ಏಕೆ ಇನ್ನೂ ಹೆಚ್ಚು ಹೆಚ್ಚಾಗಿ ನಡೆಯಬೇಕೆಂಬುದರ ಸಮರ್ಥನೆಯಿದೆ. ಹಿಂದಿನ ಜೈನ ಕವಿಗಳಿಂದ ಏಕಪ್ರಕಾರವಾಗಿ ಹೊಗಳಿಸಿಕೊಂಡ ಪೊನ್ನ ಇಂದು ಸಾಹಿತ್ಯ ವಿದ್ಯಾರ್ಥಿಗಳ ದೃಷ್ಟಿಯಲ್ಲಿ ಹಿನ್ನೆಲೆಗೆ ಸರಿದಿದ್ದಾನೆ. ಈ "ದುರ್ದೈವಿ ಕವಿಯನ್ನು ಸಾಹಿತ್ಯ ಪ್ರಪಂಚಕ್ಕೆ ಪೂರ್ಣವಾಗಿ ಪರಿಚಯಿಸುವ, ಪರಾಮರ್ಶಿಸುವ ಅವಶ್ಯಕತೆ ಇದ್ದಿತು. ಈ ಅವಶ್ಯಕತೆಯನ್ನು ತುಂಬಿಕೊಡುವುದೇ ಈ ಪ್ರಬಂಧದ ಉದ್ದೇಶ" (ಪು. 8) 'ಪರಿಚಯಿಸುವ' ಉದ್ದೇಶ ಸರಿಯಾದುದೇ, ಆದರೆ ಸಂಶೋಧನಾತ್ಮಕ ನಿಬಂಧದಲ್ಲಿ ಹೊಸ ಅಂಶಗಳನ್ನು ತೋರಿಸುವ ಉದ್ದೇಶವೂ ಇರಬೇಕಾಗುತ್ತದೆ.

'ಪೊನ್ನಪೂರ್ವ ಯುಗ' ಅಧ್ಯಾಯದಲ್ಲಿ ಪೊನ್ನನಿಗಿಂತ ಹಿಂದಿನ ಶಾಸನ ವಾಙ್ಮಯ, ಸಾಹಿತ್ಯಗಳನ್ನು ವಿವೇಚಿಸಲಾಗಿದೆ. ಇನ್ನೊಂದು ಅಧ್ಯಾಯದಲ್ಲಿ ಪೊನ್ನನ ಕಾಲ, ದೇಶ ಗುರುಪರಂಪರೆಗಳನ್ನು ಚರ್ಚಿಸಿದೆ. ಅವನ ಅನುಪಲಬ್ಧ ಕೃತಿಗಳನ್ನು ಕುರಿತಂತೆಯೇ ಒಂದು ಅಧ್ಯಾಯ ಮೀಸಲಾಗಿದೆ. ಉಪಲಬ್ಧ ಕೃತಿಗಳಾದ ಜಿನಾಕ್ಷರಮಾಲೆ, ಶಾಂತಿಪುರಾಣಗಳ ಪರಿಚಯ ಒಂದು ಅಧ್ಯಾಯದಲ್ಲಿದೆ. ಪೊನ್ನಿಗಿಂತ ಹಿಂದಿನ ಅಸಗನ ಸಂಸ್ಕೃತ ಶಾಂತಿಪುರಾಣವನ್ನು ಪೊನ್ನನ ಶಾಂತಿಪುರಾಣಕ್ಕೆ ಹೋಲಿಸಿ ಒಂದು ಅಧ್ಯಾಯದಲ್ಲಿ ಚರ್ಚಿಸಿದೆ. ಪುರಾಣಕಾವ್ಯವಾಗಿ ಶಾಂತಿಪುರಾಣದ ವಿವೇಚನೆ, ಪೊನ್ನ ಕಾಳಿದಾಸರ ತೌಲನಿಕ ವಿವೇಚನೆ, ಪೊನ್ನ ಕವಿಯ ಸ್ಥಾನ ವಿವೇಚನೆ ಇವು ಕೊನೆಯ ಅಧ್ಯಾಯಗಳು.

ಉಮಾದೇವಿಯವರು ಮಾಡಿರುವ ಒಂದು ಒಳ್ಳೆಯ ಕೆಲಸವೆಂದರೆ, ಬೇರೆ ಬೇರೆ ಕಡೆಗಳಿಂದ ಸಾಮಗ್ರಿಯನ್ನು ಸಂಗ್ರಹಿಸಿರುವುದು. ಆದರೆ, ಅದನ್ನು ಉಪಯೋಗಿಸಿಕೊಂಡು ಪೊನ್ನನ ಬಗ್ಗೆ ಏನಾದರೂ ಹೆಚ್ಚಿನ ಸಂಗತಿಗಳನ್ನಾಗಲಿ ಒಳನೋಟಗಳನ್ನಾಗಲಿ ಮಿಂಚಿಸಿರುವಂತೆ ಕಾಣುವುದಿಲ್ಲ. 'ಪೊನ್ನಪೂರ್ವ ಯುಗ' ಎಂಬ ಅಧ್ಯಾಯ ಆ ದೃಷ್ಟಿಯಿಂದ ಬಡಕಲಾಗಿ ತೋರುತ್ತದೆ. ಆ ಅಧ್ಯಾಯದ 'ಸಮಕಾಲೀನ ಪರಿಸ್ಥಿತಿ' ಎಂಬುದೂ ತೀರ ನಿರಾಸೆ ಹುಟ್ಟಿಸುವ ಬರಹ. 'ಪೊನ್ನನ ಅನುಪಲಬ್ಧ ಕೃತಿಗಳು' ವಿಭಾಗದಲ್ಲಿ ಸರ್ವದೇವನೆಂಬ ತೆಲುಗು ಕವಿಯೂ ಪೊನ್ನನೂ ಅಭಿನ್ನರೆಂಬ ತೀರ್ಮಾನವನ್ನು ಉಮಾದೇವಿಯವರು ನಿರಾಕರಿಸಿರುವುದು ಸಕಾರಣವಾಗಿದೆಯಾದರೂ, ಆ ಬಗ್ಗೆ ತೆಲುಗು ಪದ್ಯಗಳನ್ನು ಉದಾಹರಿಸಿ ಸಮಗ್ರವಾಗಿ ಚರ್ಚಿಸಬಹುದಿತ್ತು. "ಪೊನ್ನ ತೆಲುಗು ಕೃತಿಗಳನ್ನು ರಚಿಸಿಲ್ಲವೆಂದು ಹೇಳುವ ಅಧಿಕಾರ ನಮಗಿಲ್ಲವಾದರೂ ಅದನ್ನು ನಂಬಲರ್ಹವಾದ ಆಧಾರಗಳು ದೊರೆತಿಲ್ಲ", "ಪೊನ್ನ ಸರ್ವದೇವನೆಂಬ ಹೆಸರಿನಿಂದ ತೆಲುಗಿನಲ್ಲಿ ಕೃತಿರಚನೆ ಮಾಡಿದುದು ನಿಜವೇ ಆದರೆ

ತೆಲುಗುಸಾಹಿತ್ಯ ರಚನೆ ಮಾಡಿದ ಕನ್ನಡ ಕವಿಗಳ ಸಾಲಲ್ಲಿ ಪೊನ್ನನೊಬ್ಬನೇ ಒಡೆದು ನಿಲ್ಲುತ್ತಾನೆ" ಎಂಬ ಮಾತುಗಳು ಓದುಗರಿಗೆ ಅತೃಪ್ತಿ ಹುಟ್ಟಿಸುತ್ತವೆ. ತೆಲುಗು ಉಲ್ಲೇಖಗಳನ್ನು ಎಚ್ಚರಿಕೆಯಿಂದ ಅಭ್ಯಸಿಸಿ ಒಂದು ಸ್ಪಷ್ಟ ನಿಲುವನ್ನು ತಾಳಬಹುದಿತ್ತು.

ಪು. 52ರಲ್ಲಿ ಪೊನ್ನನ 'ಗತಪ್ರತ್ಯಾಗತ'ದ ಬಗ್ಗೆ ಬರೆಯುತ್ತ ಕವಿರಾಜಮಾರ್ಗದಿಂದ ಉಲ್ಲೇಖ ಕೊಟ್ಟಿದ್ದಾರೆ. ಗತಪ್ರತ್ಯಾಗತ ಎಂದರೇನು ಎಂಬುದರ ವಿವರಣೆ ಮಾಡುವುದಿಲ್ಲ. ಅವನ ಇನ್ನೊಂದು ಅನುಪಲಬ್ಧ ಕೃತಿ 'ಭುವನೈಕ ರಾಮಾಭ್ಯುದಯ'ವನ್ನು ಕುರಿತ ಸಮಸ್ಯೆಯ ಆಳಕ್ಕೆ ಇಳಿಯಲು ಯತ್ನಿಸಿರುವುದು ಮೆಚ್ಚಬೇಕಾದ ಸಂಗತಿ. ಶಾಂತಿ ಪುರಾಣದಲ್ಲಿ ಆ ಲೌಕಿಕ ಕೃತಿಯ ಹೆಸರನ್ನು ಪೊನ್ನ ಹೇಳಿದ್ದಾನೆ. ಪಂಪ ರನ್ನರು ತಮ್ಮ ಪುರಾಣಗಳಲ್ಲಿ ತಮ್ಮ ಲೌಕಿಕ ಕೃತಿಗಳ ಹೆಸರನ್ನು ಹೇಳಿಕೊಳ್ಳಲಿಲ್ಲ (ಪು. 54) ಎಂಬ ಮಾತು ಅನುಚಿತ. ಆದಿಪುರಾಣ, ಅಜಿತಪುರಾಣಗಳ ಬಳಿಕ ವಿಕ್ರಮಾರ್ಜುನ ವಿಜಯ ಮತ್ತು ಗದಾಯುದ್ಧಗಳು ರಚಿತವಾಗಿವೆಯೆಂಬುದನ್ನು ಎಲ್ಲರೂ ಬಲ್ಲರು. ಕಾವ್ಯಾವಲೋಕನಾದಿಗ್ರಂಥಗಳಲ್ಲಿ ಖಚಿತ ಆಕರ ಗೊತ್ತಿಲ್ಲದ ರಾಮಾಯಣ ಪದ್ಯಗಳು ಪೊನ್ನನ ಕೃತಿಗೆ ಸೇರಿದಂಥವೆಂದು ಊಹಿಸಲು ತಪ್ಪೇನೂ ಕಾಣುವುದಿಲ್ಲ. ವಾಲ್ಮೀಕಿ ರಾಮಾಯಣದ ಜಾಡಿನಲ್ಲೇ ರಚತವಾದ ಕೃತಿ ಇದು ಎಂಬ ಉಮಾದೇವಿಯವರ ಊಹೆ ಸಾಧಾರವಾಗಿದೆ. ಆದರೆ ರಾಷ್ಟ್ರಕೂಟರ ಕಾಲದಲ್ಲಿ ಹುಟ್ಟಿದ ಈ ಕೃತಿಯನ್ನು ಮುಂದೆ ಅವನಿಗೆ ಆಶ್ರಯ ನೀಡಿದ ಚಾಲುಕ್ಯ ಅಧಿಕಾರಿಗಳು ಪ್ರಚಾರಕ್ಕೆ ತರಲು ಅಡ್ಡಿಯಾದರು ಎಂಬ ಅವರ ಊಹೆ ಮಾತ್ರ ಅನಗತ್ಯ. ಹತ್ತನೆಯ ಶತಮಾನದಲ್ಲೇ ಅವನ ಪುರಾಣ ಕೃತಿಯೇ ಜನಪ್ರಿಯವಾಗದೇ ಹೋಗಿರುವಾಗ ಅವನ ಲೌಕಿಕ ಕೃತಿಗೂ ಇದೇ ಅವಸ್ಥೆ ಬಂದಿರಬೇಕೆಂದು ಊಹಿಸಬಹುದಾದರೂ, ಅವನ ಪದ್ಯಗಳು ಹದಿಮೂರನೇ ಶತಮಾನದ ಮತ್ತು ಇನ್ನೂ ಈಚಿನ ಕಾವ್ಯಸಾರದಂತಹ ಕೃತಿಗಳಲ್ಲಿ ದೊರಕುವುದು ಅಂತಹ ಯಾವುದೇ ಊಹೆಗೆ ಎಡೆಮಾಡುವುದಿಲ್ಲ. ಭುವನೈಕ ರಾಮಾಭ್ಯುದಯವು ಚಂಪೂ ಅಲ್ಲ, ಕೇವಲ ಪದ್ಯಕಾವ್ಯ ಎಂಬ ಊಹೆಯು (ಪು. 65) ತೀರ ತೆಳುವಾದುದು.

ಪೊನ್ನನ ಶಾಂತಿ ಪುರಾಣವನ್ನು ಅಸಗನ ಸಂಸ್ಕೃತ ಶಾಂತಿ ಪುರಾಣದ ಜೊತೆ ಇಷ್ಟು ವಿಸ್ತಾರವಾಗಿ ಇಲ್ಲಿಯವರೆಗೆ ಯಾರೂ ಹೋಲಿಸಿ ವಿವೇಚನೆ ಮಾಡಿರಲಿಲ್ಲ. ಅಸಗನನ್ನು ಮೂಲವಾಗಿಟ್ಟುಕೊಂಡೂ ಅವನಲ್ಲಿನ ಅನೇಕ ಭಾಗಗಳನ್ನು ಉಚಿತವರಿತು ಪೊನ್ನ ಉತ್ತಮಪಡಿಸಿದ್ದಾನೆ ಎಂಬ ತೀರ್ಮಾನಕ್ಕೆ ಬಂದಿದ್ದಾರೆ. ಈ ನಿಬಂಧದ ಗಟ್ಟಿಭಾಗವೆಂದರೆ ಇದೇ. ಸಂಸ್ಕೃತದ ಕಾಳಿದಾಸನಿಗೆ ಹೇಗೋ ಪೊನ್ನನು ಕನ್ನಡದ ಪಂಪನಿಗೂ ಋಣಿಯಾಗಿರುವುದನ್ನು ಉಮಾದೇವಿ ಸರಿಯಾಗಿ ಗುರುತಿಸಿದ್ದಾರೆ. ಮುಂದಿನ ಕವಿಗಳ ಮೇಲೆ ಆಗಿರುವ ಪೊನ್ನನ ಪ್ರಭಾವವನ್ನೂ ಗುರುತಿಸಿದ್ದಾರೆ.

ಪ್ರಸ್ತುತ ನಿಬಂಧದಲ್ಲಿ ಮೆಚ್ಚಬೇಕಾದ ಕೆಲವು ಅಂಶಗಳಿದ್ದರೂ ಇಡೀ ಕೃತಿ ಸ್ವಲ್ಪ ಜಾಳು ಎನ್ನಿಸುತ್ತವೆ. ಪೊನ್ನನ ಬಗ್ಗೆ ಇರುವ ನಿಜವಾದ ಸಮಸ್ಯೆಗಳೇನು ಎಂಬುದನ್ನು

ಕಂಡುಕೊಂಡರೂ ಅವುಗಳನ್ನು ಕೇಂದ್ರೀಕರಿಸುವುದಿಲ್ಲ. ಅವುಗಳತ್ತ ತೀವ್ರ ಗಮನವನ್ನು ಕೊಡುವುದಿಲ್ಲ. ಇಡೀ ಧೋರಣೆ ಪೊನ್ನನ ಬಗ್ಗೆ ವಿಷಯ ಸಂಗ್ರಹದ ಕಡೆ ಮಾತ್ರ ಇರುವುದು ಇದಕ್ಕೆ ಕಾರಣ. ಇಂಥ ನಿಬಂಧಗಳು ಪಿಎಚ್.ಡಿ.ಗೆ ಅರ್ಹವಾಗಬಹುದು, ಆದರೆ ಪ್ರಕಟಣೆಗೆ ಮುನ್ನ ಇನ್ನಷ್ಟು ತಿದ್ದಿ ತೀಡಬಹುದಿತ್ತು. ಅನೇಕ ಕಡೆ ಸಂಗ್ರಹ ಮಾಡಬಹುದಿತ್ತು. ಇಷ್ಟಾದರೂ ಇಂದಿನ ಎಷ್ಟೋ ನಿಬಂಧಗಳಿಗೆ ಹೋಲಿಸಿದರೆ ಉಮಾದೇವಿಯವರ ಬರಹ ಅಷ್ಟೇನೂ ನಿರಾಸೆ ಹುಟ್ಟಿಸುವುದಿಲ್ಲ ಎಂಬುದೊಂದೇ ಸಮಾಧಾನದ ಸಂಗತಿ.

**ಗುಬ್ಬಿ ಕಂಪನಿ** ಡಾ. ಸಿಂಧುವಳ್ಳಿ ಅನಂತಮೂರ್ತಿಯವರಿಗೆ ಪಿಎಚ್.ಡಿ. ಪದವಿ ತಂದುಕೊಟ್ಟ ನಿಬಂಧ. ಗುಬ್ಬಿ ಕಂಪನಿ ಕನ್ನಡ ರಂಗಭೂಮಿ ಕ್ಷೇತ್ರದಲ್ಲಿ ಮರೆಯಲಾಗದ ಹೆಸರು ಮತ್ತು ಆ ಕಂಪನಿಯ ಹೆಸರಿನ ಜೊತೆ ಗುಬ್ಬಿ ವೀರಣ್ಣನವರ ಹೆಸರು ಶಾಶ್ವತವಾಗಿ ಸೇರಿ ಹೋಗಿದೆ. ಈ ಹಿಂದೆ "ಕಲೆಯೇ ಕಾಯಕ" ಎಂಬ ಕೃತಿಯಲ್ಲಿ ಗುಬ್ಬಿ ವೀರಣ್ಣನವರ ಆತ್ಮ ವೃತ್ತಾಂತವನ್ನು ಶ್ರೀ ಅನಂತಮೂರ್ತಿ ಪ್ರಕಟಿಸಿದ್ದರು (ಆ ಕೃತಿ ಒಂದು ರೀತಿಯಲ್ಲಿ ಗುಬ್ಬಿ ಕಂಪನಿಯ ಆತ್ಮ ವೃತ್ತಾಂತವೂ ಆಗಿದ್ದಿತು). ಈ ನಿಬಂಧದಲ್ಲಿ ಕರ್ನಾಟಕದ ಆ ಕಂಪನಿಯನ್ನು ಕುರಿತು ಸಂಶೋಧನೆ ನಡೆಸಿ ಅದರ ಇತಿಹಾಸ, ಏಳು-ಬೀಳು, ಕಲಾಕ್ಷೇತ್ರಕ್ಕೆ ಕೊಟ್ಟ ಕಾಣಿಕೆಗಳನ್ನು ಅನಂತಮೂರ್ತಿ ವಿಸ್ತಾರವಾಗಿ ವಿವೇಚಿಸಿದ್ದಾರೆ. ಕನ್ನಡದಲ್ಲಿ ಹೀಗೆ ಒಂದು ಕಂಪನಿಯನ್ನು ಆರಿಸಿಕೊಂಡು ಆಳವಾದ ಅಧ್ಯಯನದ ಮೂಲಕ ಅದರ ಬಗ್ಗೆ ಸರ್ವವಿವರಗಳನ್ನೂ ಸಂಗ್ರಹಿಸಲು ಮಾಡಿರುವ ಮೊದಲ ಪ್ರಯತ್ನ ಡಾ. ಅನಂತಮೂರ್ತಿಯವರದು. ಬಹುಶಃ ಇಂತಹ ಅಧ್ಯಯನಗಳನ್ನು ಬೇರೆ ಕಂಪನಿಗಳಿಗೂ ವಿಸ್ತರಿಸಬಹುದೆಂದು ತೋರುತ್ತದೆ.

ಇದರಲ್ಲಿ ಒಟ್ಟು ಹನ್ನೆರಡು ಅಧ್ಯಾಯಗಳಿವೆ. ಆಧುನಿಕ ಭಾರತೀಯ ರಂಗಭೂಮಿಯ ಹುಟ್ಟು, ಕರ್ನಾಟಕದಲ್ಲಿ ಆಧುನಿಕ ರಂಗಭೂಮಿಯ ಹುಟ್ಟು ಎಂಬ ಆರಂಭದ ಅಧ್ಯಾಯಗಳಲ್ಲಿ ತಮ್ಮ ನಿಬಂಧಕ್ಕೆ ಹಿನ್ನೆಲೆಯನ್ನು ಒದಗಿಸಿಕೊಂಡಿದ್ದಾರೆ. 'ಗುಬ್ಬಿ ಕಂಪನಿಯ ಇತಿಹಾಸ'ದಲ್ಲಿ ನೇರವಾಗಿ ವಿಷಯಕ್ಕೆ ಬರುತ್ತಾರೆ. ವೀರಣ್ಣನವರ ಪ್ರವೇಶದಿಂದ ಗುಬ್ಬಿ ಕಂಪನಿಗೆ ಹೊಸ ಜೀವಕಳೆ, ಒಂದು ಹೊಸ ತಿರುವು ಹೇಗೆ ಬಂತೆಂಬುದನ್ನು ಪ್ರಸ್ತಾಪಿಸುತ್ತಾರೆ. ಗುಬ್ಬಿ ಕಂಪೆನಿ ಆಡಿದ ನಾಟಕಗಳು, ನಾಟಕಗಳಲ್ಲಿ ಭಾಗವಹಿಸಿದ ನಟ ನಟಿಯರ ಪರಿಚಯ ಎರಡು ಅಧ್ಯಾಯಗಳಲ್ಲಿ ಮೂಡಿ ಬಂದಿದೆ (ಗುಬ್ಬಿ ಕಂಪನಿಯ ನಾಟಕಗಳ ಪಟ್ಟಿ 1930ರ ಸರಿಸುಮಾರಿನಲ್ಲಿ ಪ್ರಕಟವಾದ ಯಕ್ಷಗಾನ ಪುಸ್ತಕಗಳ ಮೇಲೆ ಜಾಹಿರಾತಾಗಿ ಅಚ್ಚಾಗಿರುವುದನ್ನು ಅನಂತಮೂರ್ತಿ ಗಮನಿಸಿದಂತಿಲ್ಲ). 'ಪ್ರಯೋಗಾಂಗಗಳು' ಎಂಬ ಅಧ್ಯಾಯ ಸ್ವಾರಸ್ಯವಾಗಿದೆ. ಗುಬ್ಬಿ ವೀರಣ್ಣನವರು ತೆಗೆದ ಚಲನ ಚಿತ್ರಗಳು ಒಂದು ಅಧ್ಯಾಯದ ವಿಷಯ. ಈಗಲೂ ಜೀವಂತವಾಗಿರುವ ಗುಬ್ಬಿ ಕಂಪನಿ ಮತ್ತು ಕನ್ನಡ ವೃತ್ತಿರಂಗದ ಭವಿಷ್ಯದ ಬಗ್ಗೆ ಒಂದು ಪೂರ್ಣ ಅಧ್ಯಾಯವಿದೆ.

ಈ ಅಧ್ಯಯನಕ್ಕೆ ಶ್ರೀ ಅನಂತಮೂರ್ತಿಯವರು ಬರಿಯ ಲಿಖಿತ ಸಾಮಗ್ರಿಯನ್ನು ಮಾತ್ರ ಅವಲಂಬಿಸುವಂತಿಲ್ಲ; ಏಕೆಂದರೆ ಅಂತಹ ಸಾಮಗ್ರಿ ದೊರಕುವುದೂ ತುಂಬ ಕಡಮೆಯೇ. ಅವರು ಅನೇಕರನ್ನು ಭೇಟಿ ಮಾಡಿ ಮಾಹಿತಿ ಸಂಗ್ರಹಿಸಿದ್ದಾರೆ ಎಂಬುದು ನಿಜವಾದರೂ, ಆ ವಿಷಯದಲ್ಲಿ ಸ್ವಲ್ಪ ಅತೃಪ್ತಿ ಉಳಿಯುತ್ತದೆ. ಅನಂತಮೂರ್ತಿ ಸಣ್ಣ ಸಣ್ಣ ವಿಷಯಕ್ಕೂ ಬೇರೆ ಬೇರೆಯವರ ಬರಹಗಳನ್ನು ಉದ್ಧರಿಸುತ್ತಾರೆ. ಇದು ಕೆಲವೆಡೆ ಅನಿವಾರ್ಯವಾಗಿದ್ದರೂ ಬಹುಕಡೆ ನಿವಾರ್ಯವೇ ಆಗಿದೆ. ಒಂದು ನಿಬಂಧ ರಚನೆಗೆ ತೆಗೆದುಕೊಳ್ಳಬೇಕಾದ ಶ್ರಮವನ್ನು ಶ್ರೀ ಅನಂತಮೂರ್ತಿಯವರು ತೆಗೆದುಕೊಂಡಿದ್ದಾರೆ ಎಂಬುದು ಸಮಾಧಾನದ ಸಂಗತಿ.

ಈ ನಿಬಂಧದಲ್ಲಿ 'ವೀರಣ್ಣನವರ ಪ್ರವೇಶ' ಎಂಬ ಅಧ್ಯಾಯ ತೀರ ಆತ್ಮೀಯವಾಗಿ ಮೂಡಿದೆ. ತಮ್ಮ ಕಂಪನಿಯನ್ನು ಕಟ್ಟಲು ವೀರಣ್ಣನವರು ಎದುರಿಸಿದ ಪ್ರತಿರೋಧ, ಅಡೆ ತಡೆಗಳನ್ನು ಚಿತ್ರಿಸುವುದರ ಮೂಲಕ ಆ ಮಹಾ ಕಲಾವಿದನ ಅಂತರಂಗವನ್ನು ಬಿಚ್ಚಿಡುತ್ತಾರೆ. ಇಲ್ಲಿ ಅವರ ವ್ಯಕ್ತಿತ್ವದ ದರ್ಶನವಾಗುತ್ತದೆ. 'ಪ್ರಯೋಗಾಂಗಗಳು' ಒಂದು ಪ್ರೌಢ ಅಧ್ಯಾಯ. ರಂಗಸಜ್ಜಿಕೆ, ವೇಷ ಭೂಷಣ, ಪ್ರಸಾಧನ ಇವುಗಳಲ್ಲಾದ ಬೆಳವಣಿಗೆ ವಿಸ್ಮಯಕಾರಿಯಾಗಿವೆ. ತೀರ ಸರಳ ಹಳ್ಳಿ ನಾಟಕಗಳನ್ನಾಡುತ್ತಿದ್ದ ಗುಬ್ಬಿ ಕಂಪನಿ ಆಧುನಿಕ ಪರಿಕರಗಳನ್ನೆಲ್ಲ ಬಳಸಿಕೊಳ್ಳುವ ಸಾಮರ್ಥ್ಯವನ್ನು ಪಡೆಯುವ ಚಿತ್ರ ಇಲ್ಲಿ ಮೂಡಿ ಬಂದಿದೆ.

ಅನಂತಮೂರ್ತಿಯವರ ಭಾಷೆ ನಿಬಂಧಕ್ಕೆ ಯೋಗ್ಯವಾಗಿದೆ. ಸ್ವತಃ ನಟರೂ ಆಗಿರುವ ಅವರು ಕನ್ನಡಕ್ಕೆ ಶ್ರೇಷ್ಠ ನಿಬಂಧವೊಂದನ್ನು ಕೊಟ್ಟು ಕನ್ನಡ ರಂಗಭೂಮಿಯ ಅರಿವನ್ನು ಹೆಚ್ಚಿಸಿದ್ದಾರೆ. ವೀರಣ್ಣ ಇತ್ಯಾದಿ ಕಲಾವಿದರ ಭಾವಚಿತ್ರಗಳಷ್ಟೇ ಆ ಕಾಲದ ರಂಗಭೂಮಿ, ವೇಷಭೂಷಣಗಳ ರೇಖಾಚಿತ್ರಗಳೂ ಉದ್ಬೋಧಕವಾಗಿವೆ. ಈ ಮಾದರಿಯಲ್ಲಿ ಇನ್ನೂ ಹೆಚ್ಚು ಸಂಶೋಧನೆಗಳು ನಡೆಯುವುದು ಅಗತ್ಯವಾಗಿದೆ. ಕೃತಿ ಸುಂದರವಾಗಿ ಹೆಚ್ಚು ತಪ್ಪುಗಳಿಲ್ಲದೆ ಅಚ್ಚಾಗಿದೆ.

**ಜೈನ ಸಾಹಿತ್ಯ ಸಂಸ್ಕೃತಿ - ತರಂಗ 1** (ಎಸ್ ಪಿ. ಪಾಟೀಲ) ಪುಸ್ತಕದಲ್ಲಿ ಜೈನ ಧರ್ಮ ಸಾಹಿತ್ಯಗಳನ್ನು ಕುರಿತಂತಹ ಎಂಟು ಪ್ರಬಂಧಗಳಿವೆ. ಜಂಬೂ ಸ್ವಾಮಿಯ ಕಥಾ ಸಾಹಿತ್ಯ, ಹಸ್ತಿಮಲ್ಲನ ಆದಿಪುರಾಣ, ಅನಂತರಾಜನ ಮರಾಠಿ ಪಾರ್ಶ್ವಪುರಾಣ ಇವು ಸಾಹಿತ್ಯಕ್ಕೆ ಸಂಬಂಧಿಸಿದ್ದರೆ, ಸಮಂತಭದ್ರಾಚಾರ್ಯರನ್ನು ಕುರಿತ ಪ್ರಬಂಧದಲ್ಲಿ ಆ ಕವಿಯನ್ನು ಕುರಿತಂತಹ ಸಾಮಗ್ರಿ ಸಂಗ್ರಹವಿದೆ. ಕನ್ನಡ ಅಲಂಕಾರ ಶಾಸ್ತ್ರಕ್ಕೆ ಜೈನರ ಕೊಡುಗೆ ಏನು ಎಂಬುದು ಒಂದು ಪ್ರಬಂಧದ ವಿಷಯವಾದರೆ, ಕರ್ನಾಟಕದ ಜೈನಮಂತ್ರಿ ಮತ್ತು ಸೇನಾಪತಿಗಳ ಪರಿಚಯ ಇನ್ನೊಂದು ಪ್ರಬಂಧದ ವಿಷಯ. ಜೈನಕೇಂದ್ರಗಳಾಗಿ ಕೊಪ್ಪಳ, ಪುಲಿಗೆರೆಗಳನ್ನು ಎರಡು ಪ್ರಬಂಧಗಳಲ್ಲಿ ಪರಿಚಯ ಮಾಡಿಕೊಟ್ಟಿದ್ದಾರೆ.

ಇವುಗಳಲ್ಲಿ ಸಂಶೋಧನೆ ಎಂದು ಕರೆಯಬಹುದಾದುದು ಕಡಮೆಯೆಂದೇ ಹೇಳಬೇಕಾಗಿದ್ದರೂ ಅದು ಪುಸ್ತಕದ ಮೌಲ್ಯವನ್ನು ಕಡಮೆ ಮಾಡುವ ಮಾತಾಗಬೇಕಾಗಿಲ್ಲ.

ಹತ್ತು ಕಡೆಯಿಂದ ವಿಷಯವನ್ನು ಸಂಗ್ರಹಿಸಿ ಒಂದು ಕಡೆ ಕೊಡುವ ಕೆಲಸಕ್ಕೆ ಅದರದೇ ಆದ ಮಹತ್ವವಿದೆ. ಸಾಮಾನ್ಯ ಓದುಗರಿಗೆ ಈ ಕಾರ್ಯದಿಂದ ಆಗುವ ಸಹಾಯ ಸಣ್ಣದಲ್ಲ. ಇದಕ್ಕೆ ಉದಾಹರಣೆಯಾಗಿ 'ಜಂಬೂಸ್ವಾಮಿ ಕಥಾ ಸಾಹಿತ್ಯ' ಎಂಬ ಮೊದಲ ಪ್ರಬಂಧವನ್ನೇ ಹೆಸರಿಸಬಹುದು. ಇದರಲ್ಲಿ ಜಂಬೂ ಸ್ವಾಮಿಯ ಪರಿಚಯ ಮಾತ್ರವಲ್ಲದೆ ಕನ್ನಡ ಮತ್ತು ಇತರ ಭಾಷೆಗಳಲ್ಲಿ ಜಂಬೂ ಸ್ವಾಮಿಯ ಕಥೆಯ ವೈವಿಧ್ಯವನ್ನು ಸಂಕ್ಷಿಪ್ತವಾಗಿ ಸಂಗ್ರಹಿಸಲಾಗಿದೆ. ಸಮಂತ ಭದ್ರಾಚಾರ್ಯರು ಎಂಬ ಪ್ರಬಂಧವೂ ಒಳ್ಳೆಯ ವಿಷಯ ಸಂಗ್ರಹವನ್ನೊಳಗೊಂಡಿದೆ. "ಕರ್ನಾಟಕದ ಜೈನ ಮಂತ್ರಿಗಳು ಮತ್ತು ಸೇನಾಪತಿಗಳು" ಎಂಬುದನ್ನು ಜೈನಧರ್ಮದಲ್ಲಿ ಅಹಿಂಸೆ, ಯುದ್ಧಗಳಿಗಿರುವ ಸ್ಥಾನದ ತಾತ್ವಿಕ ಹಿನ್ನೆಲೆಯಲ್ಲಿ ಚರ್ಚಿಸಿದ್ದರೆ ಇನ್ನೂ ಹೆಚ್ಚು ಸಾರ್ಥಕವಾಗುತ್ತಿತ್ತು; ಮತ್ತು ಅವರೆಲ್ಲರೂ ಎಲ್ಲ ದೃಷ್ಟಿಗಳಿಂದ ಆದರ್ಶಪ್ರಾಯರು, ಅನುಕರಣೀಯರು ಎಂಬ ಒಟ್ಟಾರೆ ಹೇಳಿಕೆಗೆ ಒಪ್ಪಿಗೆ ನೀಡುವುದು ಕಷ್ಟವಾಗುತ್ತದೆ. 'ಜೈನ ಕೇಂದ್ರ ಕೊಪ್ಪಳ', ಪ್ರಬಂಧದಲ್ಲಿ 'ನಿಶಿಧಿ' ಮಾತಿಗೆ ಕೊಟ್ಟಿರುವ ವಿವರಣೆ (ಪು. 67) ಸರಿಯಲ್ಲ. ನಿಸಿದಿಯು ಜೈನಮುನಿಗಳು ಮೃತಪಟ್ಟ ಅಥವಾ ಅವರನ್ನು ದಹಿಸಿದ ಜಾಗದ ಮೇಲೆ ಕಟ್ಟಿದ 'ವಿಶಿಷ್ಟ ಆಕಾರದ ಕಟ್ಟಡ' ಅಲ್ಲ ; ಮತ್ತು ಈ ಬಗ್ಗೆ ನಡೆದಿರುವ ಚರ್ಚೆಗಳು ಅದನ್ನು ಸ್ಪಷ್ಟಪಡಿಸಿವೆ. ಕೊಪ್ಪಳದಲ್ಲಿ ಜೈನಧರ್ಮದ ಬೇರೆ ಬೇರೆ ಕುರುಹುಗಳನ್ನು ಶ್ರೀ ಪಾಟೀಲರು ಎತ್ತಿ ತೋರಿದ್ದಾರೆ. ಆದರೆ ಕನ್ನಡ ಕಾವ್ಯ ಶಾಸನಗಳಲ್ಲಿ ಬರುವ 'ಕೊಪಣಾಚಲ' ಯಾವುದು ಎಂಬುದನ್ನು ಗುರುತಿಸುವ ಕಡೆಗೂ ಲಕ್ಷ್ಯ ಕೊಡಬಹುದಿತ್ತು. ಕೊಪ್ಪಳ ಊರಿನ ಪಕ್ಕದಲ್ಲೇ ಇರುವ ಗವಿಮಠದ ಬಂಡೆಗಲ್ಲು ಗುಡ್ಡವೇ ಜೈನರಿಗೆ ಪವಿತ್ರವಾಗಿದ್ದ 'ಕೊಪಣಾಚಟಲ'; ಈ ದಿನ ವೀರಶೈವ ಮಠವಿರುವ ಆ ಜಾಗ ಒಂದು ಕಾಲಕ್ಕೆ ಜೈನರ ಕೇಂದ್ರವಾಗಿತ್ತೆಂಬಲ್ಲಿ ಅನುಮಾನವಿಲ್ಲ (ನೋಡಿ, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ. 1979ರ ಆವೃತ್ತಿ, ಪು. 79ರಲ್ಲಿ 57ನೇ ಟಿಪ್ಪಣಿ). ಪುಲಿಗೆರೆ ಅಥವಾ ಲಕ್ಷ್ಮೇಶ್ವರದ ಶಂಖ ಜಿನಾಲಯದಲ್ಲಿ ಇದ್ದ ಮೂಲಮೂರ್ತಿ ಚಂದ್ರನಾಥನದು ಎಂದು ಸರಿಯಾಗಿ ತೋರಿಸಿಕೊಟ್ಟಿರುವುದು (ಪು. 79) ಹೊಸ ಸಂಗತಿಯಾಗಿದೆ.

ಆಯಾ ವಿಷಯದ ಮೇಲೆ ಅಭ್ಯಾಸ ಮಾಡಿ ಮಾಹಿತಿಯನ್ನು ಸಂಗ್ರಹಿಸಿ ಜೋಡಿಸಿ ಕೊಟ್ಟಿರುವ ರೀತಿಯನ್ನು ಮೆಚ್ಚಬೇಕು. ಶ್ರೀ ಪಾಟೀಲರಿಗೆ ಒಳ್ಳೆಯ ಭಾಷೆಯಿದೆ, ಉತ್ಸಾಹವಿದೆ. 'ಜೈನ ಸಾಹಿತ್ಯ - ಸಂಸ್ಕೃತಿ'ಯ ಇನ್ನೂ ಹೆಚ್ಚಿನ ತರಂಗಗಳು ಮೂಡಿ ಬರಲಿ ಎಂದು ಹಾರೈಸುವ ಮನಸ್ಸಾಗುತ್ತದೆ ಅವರ ಪ್ರಬಂಧಗಳನ್ನು ಓದಿದರೆ.

ಡಾ. ಆರ್. ಎನ್. ಗುರವ ಅವರ **ತರ್ದವಾಡಿ ನಾಡು** ಕರ್ನಾಟಕ ವಿಶ್ವವಿದ್ಯಾಲಯ ಉಪನ್ಯಾಸ ಗ್ರಂಥಮಾಲೆಯಲ್ಲಿ ಬಂದ ಪುಟ್ಟ ಪುಸ್ತಕವಾದರೂ ಅದು ಕೇವಲ ಜನಪ್ರಿಯ ಗ್ರಂಥವೆಂದು ಭಾವಿಸಿದರೆ ತಪ್ಪಾಗುತ್ತದೆ. ವಾಸ್ತವಿಕವಾಗಿ ಅದು ಒಂದು ಉತ್ತಮ ಸಂಶೋಧನ ಕೃತಿ. ತರ್ದವಾಡಿನಾಡು ಪ್ರಾಚೀನ ಕರ್ನಾಟಕದ ಒಂದು ಆಡಳಿತ ಘಟಕವಾಗಿದ್ದು ಇಂದಿನ ಬಿಜಾಪುರ ಜಿಲ್ಲೆಯನ್ನೂ ಒಳಗೊಂಡಂತೆ ವ್ಯಾಪಿಸಿತ್ತು. ಈ ಪುಸ್ತಿಕೆಯಲ್ಲಿ ತರ್ದವಾಡಿ

ನಾಡಿನ ಭೌಗೋಲಿಕ ವಿವೇಚನೆ, ಅಲ್ಲಿ ಆಳಿದ ರಾಜವಂಶಗಳು (ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಪಶ್ಚಿಮ ಚಾಲುಕ್ಯರು, ಕಲಚುರಿಗಳು, ಯಾದವರು), ಅಲ್ಲಿನ ಮಹಾರಾಣಿಯರು ರಾಜಕುಮಾರರು ಸೇನಾಪತಿಗಳು, ಅಲ್ಲಿ ದೊರಕುವ ಶಾಸನಗಳಿಂದ ವಿದಿತವಾಗುವ ಸಾಂಸ್ಕೃತಿಕ ಪ್ರಾಮುಖ್ಯವುಳ್ಳ ಸಂಗತಿಗಳು, ಶಾಸನಕವಿಗಳು, ಲಿಪಿಕಾರರು ಮತ್ತು ಶಿಲ್ಪಿಗಳು ಇವುಗಳನ್ನು ಪ್ರೌಢವಾಗಿ ವಿವೇಚಿಸಿದ್ದಾರೆ. ಇಂಡಿ ತಾಲೂಕಿನ ತರ್ದವಾಡಿ ಗ್ರಾಮವು ತರ್ದವಾಡಿ ಸಾವಿರ ಎಂಬ ನಾಡಿನ ಕೇಂದ್ರಸ್ಥಾನ. ತರ್ದವಾಡಿ ನಾಡಿನ ಪ್ರದೇಶದಲ್ಲಿ ಮತ್ತೆ ಒಳಭಾಗಗಳಿದ್ದುವು. ಉದಾ : ಅಱುನೂಱುಂ ಬಾಡ, ಖೇಡ ಮೂವತ್ತಾರು ಇತ್ಯಾದಿ. ಈ ವಿಭಾಗದ ಚರ್ಚೆಯ ಸಂದರ್ಭದಲ್ಲಿ ಡಾ. ಗುರವ ಶಾಸನೋಕ್ತವಾದ ಕೆಲವು ಸ್ವಾರಸ್ಯ ಗ್ರಾಮನಾಮಗಳನ್ನು ಕೊಟ್ಟಿರುವುದು ನನ್ನ ಕೆಲವು ಚರ್ಚೆಗಳಿಗೆ ಪುಷ್ಟಿಕೊಡುತ್ತದೆ. ಉದಾಹರಣೆಗೆ, -ವಾರ ಎಂಬುದು -ಪುರದಿಂದ ಬಂದಿದೆಯೆಂಬ ನನ್ನ ವಾದಕ್ಕೆ, "ತರ್ದವಾಡಿ ನಾಡೊಳಗಣ ಕೆಂಪನಕುಳಿಯಾಱುಂ ಬಾಡದ ಬಳಿಯ ದಿಂಡಾವುರ" ಎಂಬ ಈಗಿನ ದಿಂಡವಾರ ಗ್ರಾಮದ ಕ್ರಿ.ಶ.1112ರ ಶಾಸನವನ್ನೇ ನೋಡಬಹುದು (ಪು. 14) 'ದಿಂಡಾವುರ' ಎಂಬ ಊರ ಹೆಸರಿನ ಅಂತ್ಯಭಾಗ ಮೂಲತಃ -ಪುರ ಎಂಬುದು ಸ್ಪಷ್ಟ ಮತ್ತು 'ದಿಂಡಾಪುರ'ವೇ ದಿಂಡವಾರ ಆಗಿದೆ ಎಂಬುದೂ ಅಷ್ಟೇ ಸ್ಪಷ್ಟ. ಏಳಾಪುರ → ಯಾಳವಾರ (ಪು. 75) ಆಗಿರುವುದನ್ನೂ ಗಮನಿಸಬೇಕು. ಹಾಗೆಯೇ ಈ ದಿನ ಊರು ಎಂದು ಕೊನೆಯಾಗುವ ಕೆಲವಾದರೂ ಹೆಸರುಗಳ ಅಂತ್ಯದಲ್ಲಿ ಹಿಂದೆ 'ಪುರ' ಇತ್ತು ಎಂದು ತೋರಿಸಿದ್ದೇನೆ. ಡಾ. ಗುರವ ಅವರ ಪುಸ್ತಕದಲ್ಲಿ ಕರ್ಣಪುರಿ → ಕಣ್ಣವುರಿ → ಕಣ್ಣೂರು, ದೇವಾಪುರ → ದೇವೂರು ಆಗಿರುವುದಕ್ಕೆ ನಿದರ್ಶನವುಂಟು (ಪು. 6-7, ಪು. 48). ಹಾಗೆಯೇ, ನಾಗಪುರ → ನಾಗೂರು ಎಂಬುದೂ ಗಮನಾರ್ಹ (ಪು. 13). ಡಾ. ಗುರವ ಅವರು ಊರ ಹೆಸರುಗಳನ್ನು ಕುರಿತು ಚರ್ಚಿಸದಿದ್ದರೂ ಅವರ ಪುಟ್ಟ ಪುಸ್ತಕ ಹೆಚ್ಚಿನ ಸಂಶೋಧನೆಗೆ ಹೇಗೆ ಉಪಯುಕ್ತ ಮಾಹಿತಿಯನ್ನೊದಗಿಸುತ್ತದೆ ಎಂಬುದಕ್ಕೆ ಮೇಲಿನ ಉದಾಹರಣೆಗಳನ್ನು ಕೊಟ್ಟಿದೆ. ಶಾಸನಗಳಲ್ಲಿ ಬರುವ "ಆಂಧ್ರಮಂಡ ಪರ್ಷೆ' (ಪು. 67), 'ಹೊಲ ಬನ್ನಿ' (ಪು. 68) ಎಂಬಂತಹ ಮಾತುಗಳನ್ನು ಚರ್ಚಿಸಿ, ಕೊನೆಯ ಪಕ್ಷ ಚರ್ಚೆಯನ್ನಾದರೂ ಆರಂಭಿಸಬಹುದಿತ್ತು. ಹಿರೇಬೇವಿನೂರಿನ ಶಾಸನದಲ್ಲಿ ಸಿರಿದೇವಿಯಕ್ಕನು ಮರಗಳನ್ನು ನಡಿಸುವುದನ್ನು ಒಂದು 'ವ್ರತ'ವಾಗಿ ಭಾವಿಸಿ ತೋಪನ್ನು ಮಾಡಿಸಿದ ವಿಷಯವನ್ನು ವಿಸ್ತಾರವಾಗಿ ಪ್ರತಿಪಾದಿಸಿದ್ದಾರೆ. ಪು. 99ರಲ್ಲಿ 'ಎಂಟು ಪಿಟ್ಟು' ಎಂದರೆ "ಗೌಡ, ಕುಲಕರ್ಣಿ, ತಲವಾರ ಈ ಮೂವರು ಗ್ರಾಮಾಧಿಕಾರಿಗಳು ಮತ್ತು ಬಡಗಿ, ಕಮ್ಮಾರ, ಅಗಸ, ಕುಂಬಾರ ಮತ್ತು ಅಕ್ಕಸಾಲೆ ಈ ಐವರು ಪಂಚಕಾರಕರು ಹೀಗೆ ಎಂಟು ಜನರ ಸಮಿತಿ" ಎಂದು ತೀರ್ಮಾನಿಸಿರುವುದಕ್ಕೆ (ಪು. 99) ಆಧಾರಗಳನ್ನು ಕೊಟ್ಟಿಲ್ಲ. ವಾಸ್ತವವಾಗಿ, 'ಎಂಟು ಪಿಟ್ಟು' ಎಂಬುದು ಇನ್ನೂ ಸಮಸ್ಯೆಯೇ ಆಗಿ ಉಳಿದಿದೆ. ತರ್ದವಾಡಿ ನಾಡಿನ ರಾಜಕೀಯ ಇತಿಹಾಸಕ್ಕೆ ದೊರಕುವ ಪ್ರಾಮುಖ್ಯ ಅಲ್ಲಿನ ಸಾಮಾಜಿಕ ಇತಿಹಾಸಕ್ಕೆ ದೊರಕಿಲ್ಲವೆಂದು

ಅನ್ನಿಸುತ್ತದೆಯಾದರೂ ಮುಖ್ಯವಾಗಿ ಶಾಸನಗಳನ್ನಾಧರಿಸಿ ಆ ಅತ್ಯಂತ ಮಹತ್ವದ ನಾಡನ್ನು ಪರಿಚಯ ಮಾಡಿಕೊಡುವಲ್ಲಿ ತೋರಿಸಿರುವ ಶ್ರದ್ಧೆ, ಶ್ರಮಗಳು ಮೆಚ್ಚುಗೆ ಗಳಿಸುತ್ತವೆ.

**ಶೋಧನ** : ಡಾ. ಸಿ.ಪಿ. ಕೃಷ್ಣಕುಮಾರ್ ಆಗಾಗ್ಗೆ ಬರೆದ ಇಪ್ಪತ್ತು ಸಂಶೋಧನಾತ್ಮಕ ಟಿಪ್ಪಣಿಗಳ ಸಂಕಲನ. ಒಂದೊಂದು ಚಿಕ್ಕ ಸಮಸ್ಯೆಯನ್ನು ಆರಿಸಿಕೊಂಡು ಆ ಸಮಸ್ಯೆಯ ಬಗ್ಗೆ ಪ್ರತಿಕ್ರಿಯಿಸುವುದು ಇಲ್ಲಿನ ಟಿಪ್ಪಣಿಗಳ ಮಾರ್ಗ. ಪಂಪನ ಪದ್ಯವೊಂದರಲ್ಲಿ ಬರುವ 'ಉಚ್ಚಸ್ತನಿ' ಕುಂತಿಯೇ, ಗಂಗೆಯೇ?, ರನ್ನನ ದುರ್ಯೋಧನ ಬೆವರಿದ್ದು ಬಿಸಿನೀರಿನಲ್ಲೇ ತಣ್ಣೀರಿನಲ್ಲೇ ?, ಜನ್ನನಲ್ಲಿ 'ತಪಕೆ ಕೋಡೆರಡೊಳವೇ?' ಎಂಬ ಮಾತಿನ ನಿಜವಾದ ಅರ್ಥವೇನು ?, ಊರ ಸೀರೆ ಮತ್ತು ಅಸಗ, ಗದುಗಿನ ಭಾರತದ ಒಂದು ಪಾಠಸಮಸ್ಯೆ- ಇವು ಕೆಲವು ಟಿಪ್ಪಣಿಗಳ ಮಾದರಿಗಳು. ಅವರ ಕೆಲವು ತೀರ್ಮಾನಗಳು ನಿಲ್ಲತಕ್ಕುವೆಂದು ತೋರುತ್ತದೆ. ಮಹಾದೇವಿಯಕ್ಕನ "ಊರ ಸೀರೆಗೆ ಅಸಗ ತಡಬಡಗೊಂಬಂತೆ" ಎಂಬಲ್ಲಿನ ನಿಜವಾದ ಪಾಠ "ಊರ ಸೀರೆಗೆ ಅಸಗ ತದೆವಡೆದಂತೆ" (ಅಥವಾ "ತದೆಗೊಂಬಂತೆ") ಎಂದು ತೀರ್ಮಾನಿಸಿರುವುದು ಸೂಕ್ತ. ಇದಕ್ಕೆ ಅವರಿಗೆ ಆಧಾರ ನೇಮಿಚಂದ್ರ, ರುದ್ರಭಟ್ಟರ ಮಾತುಗಳು. 'ತದೆವಡೆ' ಮಾತಿಗೆ ಸಿ.ಪಿ.ಕೆ. ಅವರು ಕೊಟ್ಟ ಅರ್ಥ ಸಕಾರಣವಾಗಿದೆ. ಮಹಾದೇವಿಯಕ್ಕನ ವಚನ ಬಸವಣ್ಣನ ಅಂಕಿತದಲ್ಲೂ ದೊರಕುತ್ತದೆ. ಅಲ್ಲಿ 'ಬಡಿವಡೆದಂತೆ' ಎಂದಿದೆ. ಸಿ.ಪಿ.ಕೆ.ಯವರ ಪಾಠವನ್ನೇ ಸ್ವಲ್ಪ ಪರಿಷ್ಕರಿಸುವುದಾದರೆ "ತಡಬಡಗೊಂಬಂತೆ" ಎಂಬುದು "ತದೆಬಡಿಗೊಂಬಂತೆ" ಎಂದೂ ಇದ್ದಿರಬಹುದು ('ತದೆ' ಮತ್ತು 'ಬಡಿ' ಎರಡಕ್ಕೂ ಹೊಡೆತ ಎಂಬುದೇ ಅರ್ಥ). ಗದುಗಿನ ಭಾರತದ 'ಪರವ್ಯಾಪಾರ' ಎಂಬ ಪಾಠವನ್ನು 'ಪರವ್ಯಾಪಾದ' ಎಂದು ತಿದ್ದಿರುವುದು ಸಮರ್ಥನೀಯವಾಗಿದೆ. "ಉಚ್ಚಸ್ತನಿ' ಎಂಬುದು ಕುಂತಿಗೇ ಹೊರತು ಗಂಗೆಗೆ ಅನ್ವಯಿಸುವುದಿಲ್ಲವೆಂಬ ಅವರ ತೀರ್ಮಾನವೂ ಅಷ್ಟೇ. 'ಬಿಮ್ಮನಸೆ' (=ಗರ್ಭಿಣಿ) ಶಬ್ದದ ನಿಷ್ಪತ್ತಿ (← ಬಿಣ್) ಬಹುಶಃ ಸರಿ.

'ತಪಸ್ಸಿನ ಎರಡು ಕೋಡುಗಳು' ಎಂಬ ಟಿಪ್ಪಣಿಯಲ್ಲಿ ನಾನು ಜನ್ನನ ಪದ್ಯವೊಂದಕ್ಕೆ ಮಾಡಿದ ವ್ಯಾಖ್ಯಾನವನ್ನು ಒಪ್ಪದೆ, ಎಲ್ಲರೂ ಹೇಳುವ ಅರ್ಥವನ್ನೇ ಎತ್ತಿ ಹಿಡಿದಿದ್ದಾರೆ. 'ಮುಟ್ಟಿದೆಡೆಗೆ ಸೈರಿಸುವುದೆ' ಎಂಬಲ್ಲಿನ 'ಸೈರಿಸುವುದು' ಎಂಬ ರೂಪ ಕ್ರಿಯಾಪದವೇ ನಾಮಪದವೇ ಎಂಬುದನ್ನು ನಿರ್ಧರಿಸದ ಹೊರತು ಅರ್ಥ ಸ್ಪಷ್ಟವಾಗುವುದಿಲ್ಲ. ಅದರ ಮೇಲೆ ಬಂದಿರುವ 'ಎ' ಎಂಬ ಅವಧಾರಣೆಯನ್ನು ಗಮನಿಸಿದರೆ 'ಸೈರಿಸುವುದು' ಎಂಬುದು ನಾಮವಾಚಕವಾಗುತ್ತದೆ. (ಕ್ರಿಯಾರೂಪದ ಮೇಲೆ 'ಎ' ಹತ್ತಿದರೆ ಅದು ಪ್ರಶ್ನೆಯನ್ನು ಸೂಚಿಸುತ್ತದೆ. ಉದಾ : ಬರುವನ್ - ಬರುವನೆ). ಆದ್ದರಿಂದ 'ಸೈರಿಸುವುದೆ' ಎಂದರೆ 'ಸೈರಿಸತಕ್ಕದ್ದೆ' ಎಂದಾಗುತ್ತದೆ. ಆಗ, "ಮುಟ್ಟಿದೆಡೆಗೆ ಸೈರಿಸುವುದೆ" ಎಂಬುದು ಅಪೂರ್ಣ ವಾಕ್ಯವಾಗುತ್ತದೆ. "ಮುಟ್ಟಿದೆಡೆಗೆ ಸೈರಿಸುವುದೆ, ಪೆತ್ತ ಪರೀಷಹ ಜಯಮೆ ತಪಂ" ಎಂದು ಅನ್ವಯಿಸಿಕೊಳ್ಳುವುದೊಂದೇ ಮಾರ್ಗ.

ಸೈರಿಸುವುದು (ನಾಮಪದ) + ಎ
ಜಯಮ್ (ನಾಮಪದ) + ಎ

ಮೇಲಿನ ಎರಡು ರೂಪಗಳೂ ಒಂದೇ ರಚನೆಯುಳ್ಳವು. ಮುಟ್ಟಿದೆಡೆಗೆ ಸೈರಿಸುವುದು, ಬಂದ ಪರೀಷಹಗಳನ್ನು ಜಯಿಸುವುದು ಇವೇ ತಪಸ್ಸು ಎನ್ನುವ ನನ್ನ ವ್ಯಾಖ್ಯಾನ ಸರಿಯೆಂದು ಕಾಣುತ್ತದೆ. (ನನಗಿಂತ ಮುಂಚೆ ಅಂತಹ ಅರ್ಥವನ್ನು ಮಾಡಿದ್ದ ಶ್ರೀ ಎಚ್.ಎಂ. ಶಂಕರನಾರಾಯಣರಾಯರ ಹೆಸರನ್ನು ಸಿ.ಪಿ.ಕೆ. ಸ್ಮರಿಸಿರುವುದು ಸರಿಯಾಗಿದೆ). 'ಕೊಟ್ಟಣ' ಶಬ್ದಕ್ಕೆ ನಾನು ಮಾಡಿದ ವ್ಯಾಖ್ಯಾನವನ್ನೂ ಅವರು ಒಪ್ಪಿಲ್ಲ. ಆದರೆ ನನ್ನ ಅರ್ಥವನ್ನು ಸಮರ್ಥಿಸಿಕೊಂಡ ಟಿಪ್ಪಣಿ ಈಗಾಗಲೇ ಪ್ರಕಟವಾಗಿರುವುದರಿಂದ ಅದರ ಬಗ್ಗೆ ಇಲ್ಲಿ ಬರೆಯುವ ಅಗತ್ಯವಿಲ್ಲ.

'ಶೋಧನ' ನಿಜವಾಗಿಯೂ ಒಳ್ಳೆಯ ಪುಸ್ತಕ. ಏಕೆಂದರೆ, ಅಲ್ಲಿಯ ಟಿಪ್ಪಣಿಗಳ ಹಿಂದೆ ಒಬ್ಬ ಸಂಶೋಧಕನ ಮನಸ್ಸು ಕೆಲಸ ಮಾಡಿರುವುದು ಗೋಚರವಾಗುತ್ತದೆ. ಭಿನ್ನಾಭಿಪ್ರಾಯಗಳನ್ನು ನೋಡುವ ರೀತಿ, ವಿಮರ್ಶಿಸುವ ರೀತಿ ಎಲ್ಲವೂ ಅನುಕರಣೀಯವಾಗಿವೆ.

ಧ್ರುವನಾರಾಯಣರ **ನಾರಾಯಣದೇವರ ಕೆರೆ** ಈಚೆಗೆ ನಾನು ಓದಿದ ಮನ ಮಿಡಿಯುವ ಪುಸ್ತಕಗಳಲ್ಲಿ ಒಂದು. ನಾರಾಯಣದೇವರ ಕೆರೆ ಎನ್ನುವುದು ಬಳ್ಳಾರಿ ಜಿಲ್ಲೆಯ ಒಂದು ಊರು. ತುಂಗಭದ್ರಾ ಜಲಾಶಯದ ನೀರು ಆವೃತವಾಗಿ ಇಡೀ ಊರು, ಜೊತೆಗೆ ಅದರ ಇತಿಹಾಸ, ಸಂಪತ್ತು ಎಲ್ಲವೂ 1953ರಲ್ಲಿ ಮುಳುಗಿಹೋಗಿ ಈ ದಿನ ಅದು, ಅಲ್ಲಿ ವಾಸಿಸುತ್ತಿದ್ದು ಈಗ ಬೇರೆ ಬೇರೆ ಕಡೆ ಚದರಿಹೋಗಿರುವ ಜನರ ಒಂದು ಮಾಸದ ನೆನಪಾಗಿ ಉಳಿದಿದೆ. ಆ ಜನ ಹೋದಮೇಲೆ ಆ ಊರು ಇತ್ತು ಎಂಬುದು ಸರ್ಕಾರಿ ದಾಖಲೆಗಳನ್ನು ಬಿಟ್ಟರೆ ಬೇರೆಲ್ಲೂ ಉಳಿಯದಂತಹ ಪರಿಸ್ಥಿತಿ ಇರುವಲ್ಲಿ ಶ್ರೀ ಧ್ರುವ ನಾರಾಯಣರು ಆ ಊರಿನ ಹಿಂದಿನ ಬದುಕನ್ನು ಬಹುಸಮರ್ಥವಾಗಿ ಕಟ್ಟಿಕೊಟ್ಟಿದ್ದಾರೆ. ಅದಕ್ಕಾಗಿ ಅವರು ಅನೇಕರನ್ನು ಸಂದರ್ಶಿಸಿದ್ದಾರೆ, ಹಿಂದಿನ ದಾಖಲೆಗಳನ್ನು ತಿರುವಿಹಾಕಿದ್ದಾರೆ, ಅದೇ ಊರಿನವರಾದ ಅವರು ತಮ್ಮ ಅನುಭವಗಳನ್ನು ಯಥೇಷ್ಟವಾಗಿ ಬಳಸಿಕೊಂಡಿದ್ದಾರೆ. ನೀರಲ್ಲಿ ಮುಳುಗಿಹೋದ ಒಂದು ದೊಡ್ಡ ಗ್ರಾಮ ತನ್ನೆಲ್ಲ ಚೈತನ್ಯದೊಡನೆ ನಮ್ಮ ಮುಂದೆ ಅರಳಿ ನಿಲ್ಲುವಂತೆ ಮಾಡುವ ಈ ಕೃತಿ ಕನ್ನಡದಲ್ಲಿ ಅನನ್ಯವಾದುದೆಂದೇ ಹೇಳಬೇಕು. ಈ ಪುಸ್ತಕವನ್ನು ಬರೆದ ಮೇಲೆ ಅಚ್ಚಿಗೆ ಮೊದಲು ಆ ಗ್ರಾಮದ ಹಿಂದಿನ ನಿವಾಸಿಗಳ ಮುಂದೆ ಓದಿ ಅವರ ಒಪ್ಪಿಗೆ ಪಡೆದಿರುವುದರಿಂದ ಆ ಗ್ರಾಮದ ಒಂದು ಅಧಿಕೃತ ಐತಿಹಾಸಿಕ ದಾಖಲೆಯೂ ಆಗುತ್ತದೆ.

'ಇತಿಹಾಸದ ಪುಟಗಳಿಂದ' ಎಂಬ ಅಧ್ಯಾಯ ಆ ಊರಿನ ಇತಿಹಾಸವನ್ನು ಚಿತ್ರಿಸುತ್ತದೆ. ಆ ಊರಿನ ಎಲ್ಲ ದೇವಾಲಯಗಳ ಪರಿಚಯ ಮಾಡುವ ಉತ್ಸಾಹದಲ್ಲಿ ಆ ಊರಿನ ಬಾವಿಗಳ ಪರಿಚಯ ಮಾಡುವುದನ್ನೂ ಲೇಖಕರು ಮರೆಯುವುದಿಲ್ಲ. ಗ್ರಾಮದ ಹಬ್ಬ

ಹುಣ್ಣಿಮೆಗಳು, ಕಲಾವಿದರು ಇವರ ಪರಿಚಯ ಜಾನಪದ ಶಾಸ್ತ್ರಜ್ಞರು ಗಮನಿಸಬೇಕಾದುವು. ಆ ಗ್ರಾಮದ ಸ್ವಾತಂತ್ರ್ಯ ಹೋರಾಟಗಾರರ ಮಾಹಿತಿ ಒಂದು ಅಧ್ಯಾಯದಲ್ಲಿದೆ. ವ್ಯಕ್ತಿ ಚಿತ್ರಗಳಂತೂ ಸೊಗಸಾಗಿ ಮೂಡಿವೆ. ಎಲ್ಲಿಯೂ ಆಡಂಬರವಿಲ್ಲ, ಊರನ್ನು ವೈಭವೀಕರಿಸುವ ಉದ್ದೇಶವಿಲ್ಲ. ಆದರೂ, ತಮ್ಮ ಕಳೆದುಹೋದ ಗ್ರಾಮದ ಬಗ್ಗೆ ಆತ್ಮೀಯತೆಯಿಂದ ಮೂಡಿಬಂದಿರುವ ಈ ಗ್ರಂಥ ಯಾರಿಗೂ ಪ್ರಿಯವಾಗುತ್ತದೆ. ಗ್ರಂಥವನ್ನು ಓದಿ ಮುಗಿಸಿದಾಗ, ಇಡೀ ಗ್ರಾಮ ಒಂದು ಕೃತಿಯ ನಾಯಕನಾಗಿ ನಿಲ್ಲುವುದಲ್ಲದೆ ರುದ್ರನಾಯಕನಾಗಿಯೂ ಪರಿಣಮಿಸುತ್ತದೆ. ಪುಸ್ತಕದಲ್ಲಿ ಬಂದಿರುವ ಚಿತ್ರಗಳು ವಿಶೇಷ ಕಳೆಯನ್ನು ತಂದಿವೆ. ಶ್ರಮ, ಶ್ರದ್ಧೆಗಳಿಂದ ಮೂಡಿಬಂದಿರುವ ಈ ಕೃತಿಯ ಲೇಖಕರು ನಿಜವಾಗಿಯೂ ಅಭಿನಂದನಾರ್ಹರು. ನಮ್ಮ ರಾಷ್ಟ್ರದಲ್ಲಿ ಜಲಾಶಯಗಳು ಕಾರ್ಯರೂಪಕ್ಕೆ ಬಂದಾಗಲೆಲ್ಲ ಹತ್ತಾರು ಹಳ್ಳಿಗಳು ಮುಳುಗಡೆಯಾಗುತ್ತವೆ. ಅಂತಹ ಹಳ್ಳಿಗಳ ಪ್ರತಿನಿಧಿಯಾಗಿ ನಾರಾಯಣದೇವರ ಕೆರೆ ನಿಲ್ಲುವಂತೆ ಮಾಡಿದ್ದಾರೆ ಶ್ರೀ ಧ್ರುವನಾರಾಯಣ ಅವರು.

**ನರಬಲಿ - ಒಂದು ಸಾಂಸ್ಕೃತಿಕ ಅಧ್ಯಯನ** ಕೃತಿ (ಟಿ.ಎಸ್. ಸತ್ಯನಾಥ್) ನರಬಲಿಯನ್ನು ಮನುಷ್ಯನ ಸಂಸ್ಕೃತಿಯ ಒಟ್ಟು ಬೆಳವಣಿಗೆಯ ಹಿನ್ನೆಲೆಯಲ್ಲಿಟ್ಟು ವಿಚಾರ ಮಾಡುತ್ತದೆ. ನರಬಲಿ ಈ ದಿನ ಹೆಚ್ಚು ಕಡಮೆ ಮರೆಯಾಗಿ ಹೋಗಿರುವ ಒಂದು ಕ್ರೂರ ಪದ್ಧತಿ; ಆದರೆ ಇದು ಮೂಲತಃ ಮನುಷ್ಯನ ಕೆಲವು ಆರ್ಥಿಕ ಅಗತ್ಯಗಳಿಂದಾಗಿ ಆರಂಭವಾಯಿತೆಂದು ಸತ್ಯನಾಥ್ ಪ್ರತಿಪಾದಿಸುತ್ತಾರೆ. ನರಬಲಿಯ ಉಗಮ ಮತ್ತು ಬೆಳವಣಿಗೆಯನ್ನು ಒಂದು ಅಧ್ಯಾಯದಲ್ಲಿ ಚರ್ಚಿಸುತ್ತಾರೆ. ನರಭಕ್ಷಣೆ ಮನುಷ್ಯ ತೀರ ಹಿಂದೆ ಬೆಳೆಸಿಕೊಂಡಿದ್ದ ಅಭ್ಯಾಸಗಳಲ್ಲಿ ಒಂದು, ಮತ್ತು ನರಬಲಿ ಬಹುತೇಕ ಎಲ್ಲ ಸಂಸ್ಕೃತಿಗಳಲ್ಲೂ ಇದ್ದುದನ್ನು ಗುರುತಿಸಿದ್ದಾರೆ. ನರಬಲಿ ಆಹಾರಾಭಾವದ ಕೊರತೆಯನ್ನು ನಿವಾರಿಸುವಂತಹ ಉದ್ದೇಶದಿಂದಲೂ ಆರಂಭವಾಗಿರಬಹುದು ಎಂದು 'ಆರ್ಥಿಕ ಸಮತೋಲನ' ಎಂಬ ವಿಭಾಗದಲ್ಲಿ ಸೂಚಿಸುತ್ತಾರೆ. ಆರ್ಥಿಕ ಕಾರಣಗಳಿಂದ ಉಗಮಗೊಂಡ ನರಬಲಿ ಮುಂದೆ ಧಾರ್ಮಿಕ ಸಂಬಂಧಗಳನ್ನು ಪಡೆಯಿತು ಎಂಬ ವಾದ ತಾರ್ಕಿಕವಾಗಿದೆ. ನರಬಲಿಯನ್ನು ನಿರ್ವಚಿಸುತ್ತ, ಅದನ್ನು ಗುರುತಿಸಲು ಐದು ಲಕ್ಷಣಗಳನ್ನು ಕೊಡುವುದರ ಮೂಲಕ ನರಬಲಿ ಎಂದರೇನೆಂಬುದನ್ನು ವ್ಯಾಖ್ಯಾನಿಸಲು ಮಾಡಿರುವ ಪ್ರಯತ್ನ ಯಶಸ್ವಿಯಾಗಿದೆ. 'ವರ್ಗೀಕರಣ'ದಲ್ಲಿ ಆತ್ಮಬಲಿಗಳನ್ನು (Immolations) ನರಬಲಿಗಳ ಅಂಗವಾಗಿ ಭಾವಿಸಿರುವ ಬಗ್ಗೆ ಭಿನ್ನಾಭಿಪ್ರಾಯಗಳಿಗೆ ಅವಕಾಶವುಂಟು. ನರಬಲಿಗಳಲ್ಲಿ ವೈಯಕ್ತಿಕ ಮತ್ತು ಸಾಮುದಾಯಿಕ ಎಂಬುದಾಗಿ ವರ್ಗೀಕರಿಸಿರುವಲ್ಲಿ ಔಚಿತ್ಯವಿದೆ. 'ಬದಲಿಗಳು' ವಿಭಾಗದಲ್ಲಿ ನರಬಲಿಯ ಜಾಗದಲ್ಲಿ ಅದೇ ಫಲವನ್ನು ಕೊಡುವ ಯಾವ ಬೇರೆ ಬೇರೆ ಬದಲಿಗಳನ್ನು (alternatives) ಮನುಷ್ಯಸಮಾಜ ನಿರ್ಮಿಸಿ ಕೊಂಡಿದೆಯೆಂಬುದನ್ನು ವಿವೇಚಿಸಿದ್ದಾರೆ. ಸಾಂಕೇತಿಕವಾಗಿ ರಕ್ತದ ಒಂದೆರಡು ಹನಿಗಳನ್ನು ಸುರಿಸುವುದು, ನರಬಲಿಯನ್ನು ಅಭಿನಯಿಸುವುದು, ಪ್ರಾಣಿಗಳನ್ನು ಬಲಿಕೊಡುವುದು, ಹಣ್ಣು ಕಾಯಿ ಅರ್ಪಿಸುವುದು ಇವು 'ಬದಲಿಗಳು'. ಮಕ್ಕಳಿಗೆ ಕಿವಿ ಚುಚ್ಚುವುದನ್ನು 'ಶಿಶುಹತ್ಯೆ'ಯ

ಅವಶೇಷವಾಗಿ ತೆಗೆದುಕೊಳ್ಳುವುದಕ್ಕಿಂತ, ದೇಹವನ್ನು ವಿರೂಪಗೊಳಿಸಿ ಅಮಂಗಳ ಶಕ್ತಿಗಳನ್ನು ದೂರವಿಡುವ ವಿಧಾನಗಳ ಒಂದು ಅವಶೇಷ ಅದು ಎಂದು ಹೇಳುವುದೇ ಉಚಿತ. ಗರುಡ ಪದ್ಧತಿಯಾಗಲಿ ಸಹಗಮನವಾಗಲಿ ನರಬಲಿಗಳಲ್ಲ. ನರಬಲಿಯನ್ನು ಗುರುತಿಸುವಾಗ "ನರಬಲಿಯು ಯಾವಾಗಲೂ ಧಾರ್ಮಿಕ ಆಚರಣೆಯ ಒಂದು ಭಾಗವಾಗಿಯೇ ಆಚರಿಸಲ್ಪಡುತ್ತದೆ" ಎನ್ನುತ್ತಾರೆ. ಗರುಡಪದ್ಧತಿಯ ಅಥವಾ ಸಹಗಮನದ ಅಂಗವಾಗಿ ಧಾರ್ಮಿಕ ಆಚರಣೆಗಳಿರಬಹುದು, ಆದರೆ ಆ ಪದ್ಧತಿಗಳು ಧಾರ್ಮಿಕ ಆಚರಣೆಯ ಅಂಗವಾಗಿ ಬರುವುದಿಲ್ಲ ತಾನೇ ? ಅವುಗಳ ಮೂಲ ಏನೇ ಇರಲಿ, ಗರುಡಪದ್ಧತಿಯಲ್ಲಾಗಲಿ ಸಹಗಮನದಲ್ಲಾಗಲೀ ಯಾವುದೇ 'ನಿರ್ದಿಷ್ಟ ಉದ್ದೇಶ'ಗಳಿಲ್ಲ. ಧಾರ್ಮಿಕ ನರಬಲಿ, ಕೋಟೆ ಕೆರೆಗಳಿಗೆ ನರಬಲಿ ಇಲ್ಲೆಲ್ಲ ವೈಯಕ್ತಿಕ ಅಥವಾ ಸಾಮಾಜಿಕ ಸ್ಪಷ್ಟ ಉದ್ದೇಶಗಳುಂಟು. ಆದ್ದರಿಂದ ಗರುಡ ಪದ್ಧತಿಯ ಚರ್ಚೆ ಈ ಪುಸ್ತಕದ ವ್ಯಾಪ್ತಿಯಿಂದ ಹೊರಗಿರಬೇಕಾಗುತ್ತದೆ.

ವಿಶ್ವದ ಬೇರೆ ಬೇರೆ ಭಾಗಗಳ ಉದಾಹರಣೆಗಳನ್ನು ತೆಗೆದುಕೊಂಡು, ನರಬಲಿಯ ಬಗ್ಗೆ ಮಾನವಶಾಸ್ತ್ರೀಯ ದೃಷ್ಟಿಕೋನದೊಡನೆ ವಿವೇಚಿಸಿರುವ ಈ ಕೃತಿ ಜಾನಪದಶಾಸ್ತ್ರ ಅಧ್ಯಯನಕ್ಕೆ ಒಂದು ಒಳ್ಳೆಯ ಕೊಡುಗೆ. ಹೊಸ ಹೊಸ ಸಂಬಂಧಗಳನ್ನು ಕಾಣುವ ಬಯಕೆಯನ್ನು ಉದ್ದಕ್ಕೂ ಸತ್ಯನಾಥ್ ವ್ಯಕ್ತಪಡಿಸುತ್ತಾರೆ. ಬರಹವನ್ನು ಇನ್ನೊಮ್ಮೆ ತಿದ್ದಿದ್ದರೆ, ಕೆಲವು ಕಡೆ ವಿಸ್ತರಿಸಿದ್ದರೆ, ತಾಳ್ಮೆಯಿಂದ ಪ್ರೂಫ್ ನೋಡಿದ್ದರೆ ಇನ್ನೂ ಎಷ್ಟು ಒಳ್ಳೆಯ ಪುಸ್ತಕವಾಗುತ್ತಿತ್ತು ಎಂದು ಯೋಚಿಸುತ್ತಿದ್ದೇನೆ.

ಡಾ. ಟಿ.ವಿ. ವೆಂಕಟಾಚಲ ಶಾಸ್ತ್ರಿಯವರ **ಶಬ್ದಾರ್ಥ ವಿಹಾರವು** "ವಿಚಾರಾರ್ಹವಾಗಿ ತೋರಿದ ಕೆಲವು ಶಾಸನಗಳ ಹಾಗೂ ಸಾಹಿತ್ಯಗ್ರಂಥ ಭಾಗಗಳ ಶಬ್ದಾರ್ಥಗಳನ್ನು ಚರ್ಚಿಸಿ... ಬರೆದ ಕೆಲವು ಲೇಖನಗಳ ಸಂಗ್ರಹ". ಇಲ್ಲಿಯ ಹದಿನಾಲ್ಕು ಲೇಖನಗಳೂ ಮುಖ್ಯವಾಗಿ ಗ್ರಂಥಸಂಪಾದನೆಯ ಕ್ಷೇತ್ರಕ್ಕೆ ಸೇರಿವೆ. ಆರಂಭದಲ್ಲಿ ಹನ್ಮಿಡಿ, ಬಾದಾಮಿ, ಕುರಿಕ್ಯಾಲ ಶಾಸನಗಳ ಪಾಠವನ್ನು ಕೊಟ್ಟು ಅವುಗಳ ಅರ್ಥವನ್ನು ನಿರ್ಣಯಿಸುವ ಯತ್ನವನ್ನು ಮಾಡಿದೆ. ಹನ್ಮಿಡಿ ಶಾಸನದ ಅನ್ವಯವನ್ನು ನಿರ್ಧರಿಸಿದ್ದಾರೆ. 'ಪಶುಪತಿ ನಾಮಧೇಯನಾ ಸರಕ್ಕೆ' ಎಂದು ಬಿಡಿಸಿ, 'ಸರ' ಎಂದರೆ ಸ್ವರ, ಕರೆ (call) ಎಂಬರ್ಥವನ್ನು ಹಿಂದೆ ಹೇಳಿದ್ದುಂಟು. ಡಾ. ಶಾಸ್ತ್ರಿ 'ಆಸರ' ಎಂದು ಬಿಡಿಸಿ ಅದಕ್ಕೆ ದಾಳಿ, ಮುತ್ತಿಗೆ ಎಂಬರ್ಥವನ್ನು ಹೇಳಲು ಯತ್ನಿಸಿದ್ದಾರೆ. ಶಾಸನದ ಕೊನೆಯಲ್ಲಿ ಬರುವ 'ಒಡ್ಡು' ಎಂಬುದಕ್ಕೆ 'ಒಟ್ಟಿನಲ್ಲಿ, ಉತ್ಸನ್ನದಲ್ಲಿ' ಎಂಬರ್ಥವನ್ನು ಸಂದೇಹಿಸಿದ್ದಾರೆ. ಬಾದಾಮಿ ಕಪ್ಪೆ ಅರಭಟ್ಟನ ಶಾಸನದ 'ಮಾಧೂರ್ಯ್ಯನ್' ಎಂಬುದನ್ನು ಮಹಾಧುರ್ಯ್ಯನ್ (=ದೊಡ್ಡನಾಯಕ) ಎಂದು ಬಿಡಿಸಿರುವುದು ಸರಿಯಾಗಿದೆ. ಜಿನವಲ್ಲಭನ ಕುರಿಕ್ಯಾಲ ಶಾಸನದ ಅನೇಕ ಸಮಸ್ಯೆಗಳನ್ನು ಬಿಡಿಸಲು ಯತ್ನಿಸಿದ್ದಾರೆ. ಈ ಶಾಸನ ಪಂಪನ ಸಾವಿನ ನಂತರ ಹುಟ್ಟಿದ್ದು ಎಂಬ ಶಾಸ್ತ್ರಿಯವರ ಅಭಿಪ್ರಾಯ ನನಗೆ ಸಮ್ಮತವಿಲ್ಲ. "ಕುವಲ ಯಾಮಲ ಖಡ್ಗ ನೀಲಂ" ಎಂಬ ಮಧ್ಯಮವ್ಯಾಯೋಗದ ನಾಂದೀ ಪದ್ಯದ ಪಾಠವನ್ನು ಪಂಪನ ಸಹಾಯದಿಂದ ಸಮರ್ಥಿಸಿರುವುದು ಸರಿಯಾಗಿದೆ. ಪದ್ಮಾರಾಧನೆ,

ಪಂಪಭಾರತ, ಗದಾಯುದ್ಧ, ಅರ್ಧನೇಮಿಪುರಾಣದ ಕೆಲವು ಪಾಠಗಳನ್ನು ಹಲವು ಸಂಪ್ರಬಂಧಗಳಲ್ಲಿ ಚರ್ಚಿಸಿದ್ದಾರೆ. ಕಿಟ್ಟೆಲ್ ಮತ್ತು ರೈಸ್ ಅವರ ಗ್ರಂಥ ಸಂಪಾದನಾ ವಿಧಾನಗಳನ್ನು ಒಂದು ಸಂಪ್ರಬಂಧದಲ್ಲಿ ವಿವೇಚಿಸಿದ್ದಾರೆ. 'ತೆ' ಎಂಬ ಅವ್ಯಯದ ಉಲ್ಲೇಖಗಳನ್ನು ಒಂದು ಕಡೆ ಸಂಗ್ರಹಿಸಿದ್ದಾರೆ.

ಡಾ. ಶಾಸ್ತ್ರಿ ಯಾವುದೇ ವಿಷಯವನ್ನು ತೆಗೆದುಕೊಂಡರೂ ಸಮಸ್ಯೆಯನ್ನು ಮೊದಲು ಕೇಂದ್ರೀಕರಿಸಿ, ಉಪಲಬ್ಧ ಸಾಮಗ್ರಿಗಳೆಲ್ಲವನ್ನೂ ಓದುಗರ ಮುಂದಿಟ್ಟು ಆ ಹಿಂದೆ ನಡೆದಿರುವ ಚರ್ಚೆಗಳ ಹಿನ್ನೆಲೆಯಲ್ಲಿ ತಮ್ಮ ವಾದಗಳನ್ನು ಮಂಡಿಸುತ್ತಾರೆ. ಹೀಗಾಗಿ, ಇಲ್ಲಿನ ಬರಹಗಳೂ ಪ್ರೌಢವಾಗಿದ್ದು ತರುಣ ಸಂಶೋಧಕರು ಅವನ್ನು ಎಚ್ಚರಿಕೆಯಿಂದ ಅಭ್ಯಾಸಮಾಡಿ ಸಂಶೋಧನಮಾರ್ಗದ ಪರಿಚಯ ಮಾಡಿಕೊಳ್ಳಬಹುದು. ಬರಹದ ಭಾಷೆಯೂ ಶಾಸ್ತ್ರೀಯವಾಗಿದ್ದು ಓದಲು ಹಿತವೆನ್ನಿಸುತ್ತದೆ. ಇಲ್ಲಿ ಅನೇಕ ಸಮಸ್ಯೆಗಳನ್ನು ಬಿಡಿಸಿದ್ದಾರೆ, ಪಾಠ ಕ್ಲೇಶಗಳನ್ನು ಪರಿಹರಿಸಿದ್ದಾರೆ. ಈ ಕೃತಿ ಕನ್ನಡ ನಿರುಕ್ತಿ ಮತ್ತು ಗ್ರಂಥ ಸಂಪಾದನಾ ಕ್ಷೇತ್ರಗಳಿಗೆ ಒಂದು ಅತ್ಯಮೂಲ್ಯ ಕೊಡುಗೆಯೆಂಬಲ್ಲಿ ಉತ್ಪ್ರೇಕ್ಷೆ ಕಾಣದು.

**ಸಾಹಿತ್ಯ ಸಂಪಾದನೆ** ಡಾ. ಎಂ. ಎಂ. ಕಲಬುರ್ಗಿಯವರು ಮದ್ರಾಸ್ ವಿಶ್ವವಿದ್ಯಾಲಯದಲ್ಲಿ ಕೊಟ್ಟ ಮೂರು ಉಪನ್ಯಾಸಗಳ ಸಂಕಲನ. (ಗ್ರಂಥಸಾಹಿತ್ಯ ಸಂಪಾದನೆ, ಶಾಸನಸಾಹಿತ್ಯ ಸಂಪಾದನೆ, ಜಾನಪದಸಾಹಿತ್ಯ ಸಂಪಾದನೆ). ಇವು ಮೂರು ನೇರವಾಗಿ ಗ್ರಂಥ ಸಂಪಾದನೆಗೆ ಸಂಬಂಧಿಸಿವೆ. ನಮ್ಮಲ್ಲಿ ಗ್ರಂಥ ಸಂಪಾದನೆಗೆ ನೂರು ವರ್ಷಗಳಿಗೆ ಮೇಲ್ಪಟ್ಟು ಇತಿಹಾಸವಿದ್ದರೂ, ಸಮರ್ಥ ಸಂಪಾದಕರು ಗ್ರಂಥಗಳನ್ನು ಸಂಪಾದಿಸಿ ಮೇಲ್ಪಂಕ್ತಿ ಹಾಕಿ ಕೊಟ್ಟಿದ್ದರೂ, ತಾತ್ವಿಕವಾಗಿ ಆ ಶಾಸ್ತ್ರದಲ್ಲಿ ನಡೆದಿರುವ ಚಿಂತನೆ ತೀರ ಕಡಿಮೆ. ಡಿ.ಎಲ್.ಎನ್., ಕಲಬುರ್ಗಿ, ಸೀತಾರಾಮ ಜಾಗೀರದಾರ್ ಅವರ ಕೃತಿಗಳನ್ನು ಬಿಟ್ಟರೆ ಏನೂ ಇಲ್ಲವೆಂಬಷ್ಟು ಕಡಮೆ ಗ್ರಂಥಗಳು ಬಂದಿವೆ. ಗಹನ ಚರ್ಚೆಗಳುಳ್ಳ ಲೇಖನ ಬಂದಿರುವುದು ತೀರ ಕಡಮೆ. ಆ ದೃಷ್ಟಿಯಿಂದ 'ಸಾಹಿತ್ಯ ಸಂಪಾದನೆ' ಒಂದು ಸ್ವಾಗತಾರ್ಹ ಕೃತಿ. ಜೊತೆಗೆ, ಇದರಲ್ಲಿ ಶಾಸನಸಾಹಿತ್ಯ ಸಂಪಾದನೆ, ಜಾನಪದಸಾಹಿತ್ಯ ಸಂಪಾದನೆಗಳೆಂಬ ಹೊಸ ವಿಷಯಗಳು ಸಮಾವೇಶಗೊಂಡಿರುವುದು ಈ ಪುಟ್ಟ ಕೃತಿಯ ವೈಶಿಷ್ಟ್ಯ.

'ಗ್ರಂಥ ಸಾಹಿತ್ಯ ಸಂಪಾದನೆ' ಭಾಗದಲ್ಲಿ ಹಸ್ತಪ್ರತಿಗಳ ಸ್ಖಾಲಿತ್ಯಗಳು, ವಂಶನಿರ್ಣಯ, ಪಾಠಸಂಕಲನ, ಪಾಠ ಪರಿಷ್ಕರಣಗಳನ್ನು ಉದಾಹರಣೆಗಳೊಡನೆ ವಿವರಿಸಿದೆ. ಹೊಸಸಂಗತಿಗಳ ದಾಖಲೆಗಳು ಉಂಟು. ಆದರೆ ಗ್ರಂಥ ಭಂಡಾರಗಳ ಸಂರಕ್ಷಣಾರ್ಥ ದತ್ತಿಗಳನ್ನು ನೀಡಿದ ಉಲ್ಲೇಖ 'ಕೆಲವು ಶಾಸನಗಳಲ್ಲಿ' ಇದೆ ಎಂಬಂತಹ ಹೇಳಿಕೆಗಳಿಗೆ ಆಧಾರಗಳಿಲ್ಲ. ನಾಗಾವಿ ಶಾಸನದಲ್ಲಿ 'ಸರಸ್ವತೀ ಭಂಡಾರಿ' (Librarian) ಉಲ್ಲೇಖ ಬಿಟ್ಟರೆ ಉಳಿದಂತೆ ಯಾವ ಶಾಸನದಲ್ಲೂ ಅಂತಹ ಮಾತು ಬಂದಿಲ್ಲ. ಹರಿಶ್ಚಂದ್ರ ಕಾವ್ಯದ ಪದ್ಯಗಳನ್ನು ಸೋಮನಾಥ ಚಾರಿತ್ರಕ್ಕೆ ಸೇರಿಸಿದನೆಂಬ ಈಚಿನ ಸಿದ್ಧ ನಂಜೇಶನ ಹೇಳಿಕೆ 'ಕವಿಯೇ ಗ್ರಂಥ ಗಾತ್ರವನ್ನು, ಗ್ರಂಥ ಪಾಠಗಳನ್ನು ವ್ಯತ್ಯಾಸಮಾಡಿದುದಕ್ಕೆ ಉದಾಹರಣೆ'

ಆಗುವುದಿಲ್ಲ. ಎರಡು ಕಾವ್ಯಗಳಲ್ಲೂ ಸಮಾನ ಪದ್ಯಗಳಿವೆಯೆಂಬುದನ್ನು ಸಿದ್ಧನಂಜೇಶ ಕವಿ ಗಮನಿಸಿದ್ದಾನೆ ಎಂಬುದನ್ನು ಮಾತ್ರ ನಾವು ಗ್ರಹಿಸಬೇಕು. ಕೃತಿರಚನೆಯ ಕಾಲದಲ್ಲೇ ಒಂದು ಕಾವ್ಯದ ಪದ್ಯಗಳು ಇನ್ನೊಂದು ಕಾವ್ಯಕ್ಕೆ ಸೇರಿವೆ ಎಂದೇ ಹೇಳಬೇಕು. ಹಸ್ತಪ್ರತಿಗಳಲ್ಲಿನ ಬೇರೆ ಬೇರೆ ಅಕ್ಷರಗಳ ಸಾದೃಶ್ಯಕ್ಕೆ ಆಧುನಿಕ ಅಚ್ಚಿನ ಅಕ್ಷರಗಳನ್ನು ಉದಾಹರಣೆ ಕೊಡುವುದಕ್ಕಿಂತ ಮೂಲ ಅಕ್ಷರಗಳನ್ನೇ ಉದಾಹರಣೆ ಕೊಡುವುದು ಉಚಿತ. ಪಾಠಪರಿಷ್ಕರಣದಲ್ಲಿ 'ನಾಗವಾಸ' ಪದವನ್ನು ಊಹಿಸಿರುವುದು ಸರಿಯಾಗಿದೆ (ಅದು ಯಾವ ಕಾವ್ಯದ ಪದ್ಯಭಾಗವೆಂಬುದನ್ನು ಸೂಚಿಸಿಲ್ಲ).

ಶಾಸನಸಾಹಿತ್ಯ ಸಂಪಾದನೆಯ ತತ್ವಗಳು ಗ್ರಂಥಸಾಹಿತ್ಯ ಸಂಪಾದನೆಗಿಂತ ಸಹಜವಾಗಿಯೇ ಬೇರೆ; ಆ ತತ್ವಗಳ ಸೂಚನೆ ಈ ಗ್ರಂಥದಲ್ಲಿ ಉಂಟು: ಹೆಚ್ಚಿನ ಅಭ್ಯಾಸದಿಂದ ಮುಂದಿನವರು ಅವನ್ನು ಪರಿಷ್ಕರಿಸಬಹುದು. ಶ್ರವಣಬೆಳಗೊಳದ ಸಾವಿಯಬ್ಬೆಯ ವೀರ ಮರಣದ ಶಾಸನದ ಪದ್ಯವೊಂದನ್ನು ಪುನಾರಚಿಸಿರುವ ರೀತಿ ಸಂತೋಷವುಂಟುಮಾಡುತ್ತದೆ. 'ಜಾನಪದ ಸಾಹಿತ್ಯ ಸಂಪಾದನೆ'ಯ ಭಾಗ ನಿರಾಸೆಯುಂಟುಮಾಡುತ್ತದೆ. ಜಾನಪದ ವಾಙ್ಮಯದಲ್ಲಿ 'ಅಶುದ್ಧ' ಪಾಠ ಯಾವುದು ಎಂಬುದರ ನಿರ್ಣಯ ಅಷ್ಟು ಸುಲಭವಲ್ಲ. ಜಾನಪದ ಶಾಸ್ತ್ರದಲ್ಲಿ ಅಪೂರ್ಣ ಪಾಠಗಳು ಖಂಡಿತ ಉಂಟು, ಅಶುದ್ಧ ಪಾಠಗಳು ತೀರ ಕಡಮೆ. 'ಊಡಿಗಿ ದ್ಯಾವಮ್ಮ ನಾಡಿಗಿ ದೊಡ್ಡಾಕಿ', 'ನಾಗಾಯಿ ಯಲ್ಲಮ್ಮ ನಡುವಿರಲಿ ದೊಡ್ಡಾಕೆ' ಎಂದು ಆರಂಭವಾಗುವ ತ್ರಿಪದಿಗಳ ಮುಂದಿನ ಭಾಗ ಎಷ್ಟೇ ಸದೃಶವಾಗಿದ್ದರೂ ಅವೆರಡೂ ಸ್ವತಂತ್ರ ರಚನಗಳೆಂದೇ ತೆಗೆದುಕೊಳ್ಳಬೇಕು. 'ಅರ್ಥಶುದ್ಧ' ಪಾಠವೇ ಮಾನ್ಯವೆಂದು ಡಾ॥ ಕಲಬುರ್ಗಿ ಹೇಳುವುದು ಸರಿ ಮತ್ತು ತಮ್ಮ ಅಭಿಪ್ರಾಯವನ್ನು ಉದಾಹರಣೆಗಳೊಂದಿಗೆ ಸಮರ್ಥಿಸಿಕೊಂಡಿದ್ದಾರೆ.

ಜಾನಪದ ವಾಙ್ಮಯವನ್ನು ಯಾವ ಭಾಷೆಯಲ್ಲಿ ಹಿಡಿದಿಡಬೇಕೆಂಬುದು ಮಹತ್ವದ ಪ್ರಶ್ನೆ. 'ಸೂಕ್ಷ್ಮಧ್ವನ್ಯಾಲೇಖ'ದಲ್ಲಿ ಗದ್ಯವನ್ನೇ ಆಗಲಿ ಪದ್ಯವನ್ನೇ ಆಗಲಿ ಹಿಡಿದಿಡಲು ಎಲ್ಲೋ ಕೆಲ ಶಿಕ್ಷಿತ ಭಾಷಾ ವಿಜ್ಞಾನಿಗಳಿಗೆ ಮಾತ್ರ ಸಾಧ್ಯ ಮತ್ತು ಅದರಿಂದ ಜಾನಪದ ಶಾಸ್ತ್ರಕ್ಕೆ ಏನೂ ಉಪಯೋಗವಿಲ್ಲ. ಅದನ್ನು 'ಧ್ವನಿ ಮುದ್ರಿಕೆ'ಯ ಮೂಲಕ ಪ್ರಕಟಿಸಬೇಕು ಎಂಬ ಡಾ. ಕಲಬುರ್ಗಿಯವರ ಮಾತಿಗೆ ಏನು ಅರ್ಥವೋ ತಿಳಿಯದು.

ಈ ಪುಸ್ತಕದ ಕೊನೆಯ ಎರಡು ಸಂಪ್ರಬಂಧಗಳಲ್ಲಿ ಹೊಸ ಕ್ಷೇತ್ರಗಳಿಗೆ ಕೈ ಹಾಕಿದ್ದಾರೆ, ಮತ್ತು ಕೆಲವು ಮೂಲಭೂತ ಪ್ರಶ್ನೆಗಳನ್ನು ಎತ್ತಿದ್ದಾರೆ. ಈ ಕೃತಿ ಚಿಕ್ಕದಾದರೂ ಮಹತ್ವದ್ದೆನ್ನಿಸುವುದು ಆ ಕಾರಣದಿಂದ. ಅಚ್ಚಿನ ತಪ್ಪುಗಳು ಹೇರಳವಾಗಿವೆ ಎಂಬುದು ವಿಷಾದದ ಸಂಗತಿ.

**ಎಪಿಗ್ರಾಫಿಯ ಕರ್ನಾಟಕ (ಸಂಪುಟ 7)** : ಬಿ.ಎಲ್. ರೈಸ್ ಸಂಪಾದಿತ ಮಾಲೆಯ ವಿಸ್ತೃತ ಪುನರ್ಮುದ್ರಣಗಳಲ್ಲಿ ಇದು ಏಳನೆಯದು. ಆರನೆಯ ಮತ್ತು ಈ ಏಳನೆಯ ಸಂಪುಟಗಳು ಮಂಡ್ಯ ಜಿಲ್ಲೆಯ ಶಾಸನಗಳನ್ನೊಳಗೊಂಡಿವೆ. ಇವರಲ್ಲಿ

ನಾಗಮಂಗಲ, ಮಂಡ್ಯ, ಮದ್ದೂರು, ಮಳವಳ್ಳಿ ತಾಲ್ಲೂಕುಗಳ 566 ಶಾಸನಗಳಿವೆ. "ಈ ತಾಲ್ಲೂಕುಗಳ 342 ಶಾಸನಗಳನ್ನು ರೈಸ್ ಅವರು ಪ್ರಕಟಿಸಿದ್ದರು. ಆರ್. ನರಸಿಂಹಾಚಾರ್ಯರು ಸಂಗ್ರಹಿಸಿದ್ದು, ಅನಂತರ 14ನೆಯ ಸಂಪುಟದಲ್ಲಿ ಪ್ರಕಟಿಸಲಾದ 102 ಶಾಸನಗಳೂ ವಾರ್ಷಿಕ ವರದಿಗಳಲ್ಲಿ ಪ್ರಕಟವಾಗಿದ್ದ 44 ಶಾಸನಗಳೂ ಇದರಲ್ಲಿವೆ. ಇವುಗಳಲ್ಲಿ ಅನೇಕವನ್ನು ಪರಿಷ್ಕರಿಸಲಾಗಿದೆ. ಮೂಲ ಶಾಸನಗಳು ದೊರೆತಲ್ಲಿ ಅಸಂಪೂರ್ಣವಾಗಿದ್ದ ಶಾಸನಗಳನ್ನು ಪೂರ್ಣಗೊಳಿಸಲಾಗಿದೆ. ಉಳಿದ 78 ಶಾಸನಗಳು ಪರಿಷ್ಕರಣೆಗಾಗಿ ಕೈಗೊಂಡ ಪರಿವೀಕ್ಷಣಾ ಪ್ರವಾಸ ಕಾಲದಲ್ಲಿ ಹೊಸದಾಗಿ ಕಂಡುಹಿಡಿದವು. ಇಲ್ಲಿ ಮೊದಲ ಬಾರಿಗೆ ಪ್ರಕಟಣೆಗೊಳ್ಳುತ್ತಿವೆ" (ಹಾ.ಮಾ.ನಾಯಕ, ಮೊದಲ ಮಾತಿನಲ್ಲಿ) ಮಂಡ್ಯ ಜಿಲ್ಲೆಯ ಒಟ್ಟು ಶಾಸನಗಳ ಸಂಖ್ಯೆ 1065.

'ಸಾಹಿತ್ಯ ವಾರ್ಷಿಕ'ದ ಹಿಂದಿನ ಸಂಪುಟದಲ್ಲಿ 'ಎಪಿಗ್ರಾಫಿಯ ಕರ್ನಾಟಿಕ' ಸಂಪುಟಗಳ ಬಂಧವನ್ನು ಪರಿಚಯ ಮಾಡಿಕೊಟ್ಟಿರುವುದರಿಂದ ಅದನ್ನು ಇಲ್ಲಿ ಪುನರುಚ್ಚರಿಸುವ ಗೋಜಿಗೆ ಹೋಗದೆ, ಈ ಸಂಪುಟದ ಪೀಠಿಕೆ ಮತ್ತು ಶಾಸನ ಭಾಗಗಳನ್ನು ಕುರಿತಂತೆ ಕೆಲವು ಮಾತುಗಳನ್ನು ಮಾತ್ರ ಇಲ್ಲಿ ಹೇಳಿದೆ. 'ಪೀಠಿಕೆ'ಯಲ್ಲಿ ಈ ಸಂಪುಟದಲ್ಲಿನ ಶಾಸನಗಳಿಂದ ವಿದಿತವಾಗುವ ರಾಜಕೀಯ, ಸಾಂಸ್ಕೃತಿಕ ಅಂಶಗಳನ್ನು ಸಂಗ್ರಹಿಸಿ ಕೊಟ್ಟಿದೆ. ಆತಕೂರು ಶಾಸನದಲ್ಲಿ ನಾಯಿಯನ್ನು ಮಣಲೇರನಿಗೆ ಕೊಟ್ಟವನು ಮುಮ್ಮಡಿ ಕೃಷ್ಣನೇ ಹೊರತು, ಇಲ್ಲಿಯವರೆಗೆ ತಿಳಿದಂತೆ ಬೂತುಗ ಅಲ್ಲ ಎಂದು ಸೀತಾರಾಮ ಜಾಗೀರದಾರರ ಲೇಖವೊಂದರ ಆಧಾರದ ಮೇಲೆ ತೀರ್ಮಾನಿಸಿರುವುದು ಸರಿಯಾಗಿದೆ. ಈ ಪೀಠಿಕೆ ತಮ್ಮ ಸಂಪುಟಕ್ಕೆ ರೈಸರು ಬರೆದ ಮುನ್ನುಡಿಯ ಪುನರ್ಮುದ್ರಣವಲ್ಲ, ಸ್ವತಂತ್ರವಾಗಿ ಬರೆದದ್ದು. ಆ ಕಾರಣ ರೈಸರ ಕಾಲದಿಂದ ಇಲ್ಲಿಯವರೆಗೆ ನಡೆದಿರುವ ಚರ್ಚೆ, ಆಗಿರುವ ಶೋಧಗಳ ಹಿನ್ನೆಲೆಯಲ್ಲಿ ಪೀಠಿಕೆ ಮೂಡಿ ಬಂದಿದೆ. ಮಣಲೆಯಾರ ಎಂಬ ಜೈನ ವ್ಯಕ್ತಿಯ ಹೆಸರಿನ ರೂಪ ವಾಸ್ತವವಾಗಿ 'ಮಣಲೆಯರ' ಎಂದಿರಬಹುದು ಎಂಬ ಊಹೆ ಸರಿಯಾಗಿದೆ. ಆಗ, ಆತಕೂರು ಶಾಸನದ ಇನ್ನೊಬ್ಬ 'ಮಣಲೇರ'ನ ಹೆಸರಿನ ಹಿಂದಿನ ರೂಪವೂ 'ಮಣಲೆಯರ' ಎಂದಾಗಿದ್ದಿರಬಹುದು. (ಅಂತ್ಯದ ಅರ ಅಥವಾ ರ ಎಂಬುದು 'ಅರಸ' ಎಂಬುದರ ಸವೆದ ರೂಪ). ಪೀಠಿಕೆಯ ಭಾಗ ಪ್ರೌಢವಾಗಿದೆ ಎಂದು ಹೇಳಿದರೆ ಅದು ಕೇವಲ ಔಪಚಾರಿಕ.

ಶಾಸನಗಳನ್ನು ಪುನರ್ಮುದ್ರಿಸುವುದು ಈ ಮಾಲೆಯ ಉದ್ದೇಶವಾದರೂ, ಅನೇಕ ಹೊಸ ಶಾಸನಗಳು ಇಲ್ಲಿ ಸೇರ್ಪಡೆಯಾಗಿವೆ. ಕೆಲವು ಶಾಸನಗಳ ಪಾಠವೂ ಉತ್ತಮಗೊಂಡಿದೆ. ಉದಾಹರಣೆಗೆ, ಆತಕೂರು ಶಾಸನದ ಪಾಠ 'ಬಾಳ್ಗೆ ಮೆಚ್ಚುಗೊಟ್ಟಂ' ಎಂಬುದೇ ಇಲ್ಲಿಯವರೆಗೆ ಪ್ರಚಲಿತವಿದ್ದು, ಈ ಸಂಪುಟದಲ್ಲಿ ಮೂಲಶಾಸನ ಶಿಲೆಯನ್ನು ನೋಡಿ 'ಬಾಳ್ಗಚ್ಚುಗೊಟ್ಟಂ' ಎಂದು ಸರಿಯಾದ ಪಾಠ ಕೊಟ್ಟಿರುವುದು ಒಂದು ಹೊಸ ಅಂಶ. ಶಾಸನಗಳನ್ನು ತಪ್ಪಿಲ್ಲದೆ ಅಚ್ಚು ಮಾಡಿರುವುದು, ಸಂಸ್ಕೃತ ಶಾಸನಗಳ ರೋಮನ್ ಲಿಪ್ಯಂತರವನ್ನು ಕೊಟ್ಟಿರುವ ರೀತಿ ಎಲ್ಲವೂ ತೃಪ್ತಿಕರವಾಗಿದೆ. ಬಿ.ಆರ್. ಗೋಪಾಲ್

ಅವರು ನಿರ್ವಾಹಕ ಸಂಪಾದಕರಾಗಿ ತಮ್ಮ ಕೆಲಸವನ್ನು ಅಭಿನಂದನೀಯ ರೀತಿಯಲ್ಲಿ ನಿರ್ವಹಿಸಿದ್ದಾರೆ.

ಶಾಸನಗಳಲ್ಲಿ ಬರುವ ಸಾಂಸ್ಕೃತಿಕ ವಿವರಗಳನ್ನು ಇನ್ನೂ ಹೆಚ್ಚು ಪ್ರಮಾಣದಲ್ಲಿ ಪೀಠಿಕೆಯಲ್ಲಿ ಕೊಡಲು ಅವಕಾಶವಿದೆ. ಉದಾಹರಣೆಗೆ, ಅರಳಿಯ ಮರಗಳಿಗೆ ಮುಂಜಿ ಮಾಡಿಸಿದ ವಿಷಯ (ಮದ್ದೂರು 93), ಶ್ರೀಶೈಲದ 'ಪರುಷೆ ಕಂಬಿ' ವಿಷಯ ಮತ್ತು 'ದೇವರ ಗುಡ್ಡದ' ಉಲ್ಲೇಖ (ಮಳವಳ್ಳಿ 124). ಊರುಗಳ ಹೆಸರಿನ ಅಧ್ಯಯನಕ್ಕೆ ದೊರಕುವ ಸಾಮಗ್ರಿ ವಿಪುಲ. ನಾಗಮಂಗಲ ತಾಲೂಕಿನ ಇಂದಿನ ಬೇಗಮಂಗಲದ ಹಿಂದಿನ ಹೆಸರುಗಳಲ್ಲಿ ಪ್ರಾಚೀನವಾಗಿ 'ಬೆಗಿವಂದ' ದೊರಕುತ್ತದೆ (11-12ನೇ ಶ.); ಸುಮಾರು ಅದೇ ಕಾಲದ, ಅಥವಾ ಸ್ವಲ್ಪ ಈಚೆಗಿನ ಶಾಸನದಲ್ಲಿ 'ಬೆಗೆವಡ' ದೊರಕುತ್ತದೆ (ನಾಗಮಂಗಲ, 136-37). ಈ ಹೆಸರುಗಳ ಅಧ್ಯಯನ ಆ ಗ್ರಾಮದ ಇತಿಹಾಸವನ್ನು ಸೂಚಿಸುತ್ತದೆ. ಮಂಡ್ಯ ತಾಲ್ಲೂಕಿನ ಪುರ ಗ್ರಾಮದ ಶಾಸನದಲ್ಲಿ (ಮಂಡ್ಯ 73) ಬಸವಭಕ್ತ ಸತ್ತಾಗ 'ಆತನ ಪಂಡತಿಯರು ಮೂವರು ತೋಳುಕಯಿ ಕೊಟ ಕಂಬ' ಎಂಬ ಹೇಳಿಕೆ ಎತ್ತಿದ ಕೈ ಇರುವ ಮಾಸ್ತಿಕಲ್ಲುಗಳ ಮೇಲೆ ಬೆಳಕು ಚೆಲ್ಲುತ್ತದೆ. 'ಅಶೋಕ ತಂಮ' ಎಂಬ ಹೆಸರು, 'ಅಶೋಕ' ಎನ್ನುವ ಹೆಸರು ಕರ್ನಾಟಕದಲ್ಲಿ (13ನೇ ಶ.) ರೂಢಿಯಲ್ಲಿತ್ತೆಂಬುದನ್ನು ಹೇಳುತ್ತದೆ.

'ಎಪಿಗ್ರಫಿಯ ಕರ್ನಾಟಿಕ' ಯಾವುದೇ ಸಂಸ್ಥೆ ಹೆಮ್ಮೆಪಡಬಹುದಾದ ಮಾಲೆ. ಆ ಮಾಲೆಯಲ್ಲಿ ಸಮರ್ಥರೀತಿಯಲ್ಲಿ ಕಡಮೆ ಕಾಲದಲ್ಲಿ ಕೃತಿಗಳನ್ನು ಹೊರತರುತ್ತಿರುವ ಸಂಪಾದಕರನ್ನು ಹೃತ್ಪೂರ್ವಕವಾಗಿ ಅಭಿನಂದಿಸಬೇಕು.

**ಶ್ರೀ ಕಾವೇರಿ ವೈಭವ** (ಪ್ರಕಟಣ ವರ್ಷ 1978) ಕನ್ನಡ ಪ್ರವಾಸ ಸಾಹಿತ್ಯಕ್ಕಾಗಲಿ ಸಂಶೋಧನ ಕ್ಷೇತ್ರಕ್ಕಾಗಲಿ ಸಾಂಸ್ಕೃತಿಕ ರಂಗಕ್ಕಾಗಲಿ ಒಂದು ಅಪೂರ್ವ ಕೊಡುಗೆ (ಕೃತಿಕಾರ : ಎದುರ್ಕಳ ಕೆ. ಶಂಕರನಾರಾಯಣ ಭಟ್). ಕಾವೇರಿ ನದಿ ದಕ್ಷಿಣ ಭಾರತದ ಪ್ರಮುಖನದಿ; ಕರ್ನಾಟಕ ತಮಿಳುನಾಡುಗಳಿಗೆ ಆ ನದಿ ಒಂದು ವರವಿದ್ದಂತೆ. ಅದರ ತೀರದಲ್ಲಿ ಹುಟ್ಟಿ ಬೆಳೆದ ರಾಜವಂಶಗಳಿಗೆ, ಮತಗಳಿಗೆ, ಎದ್ದು ನಿಂತ ಗುಡಿ ಗೋಪುರಗಳಿಗೆ ಮಿತಿ ಇಲ್ಲ. ಕಾವೇರಿ ಬರಿಯ ನದಿಯಲ್ಲ, ಸಂಸ್ಕೃತಿಗಳ ಕೇಂದ್ರವಾಗಿ ಸಾಹಿತ್ಯದ ಜೀವಮುಸಿರಾಗಿ ಪ್ರೇರಣೆಯಾಗಿ ನೂರಾರು ವರ್ಷಗಳಿಂದ ಹರಿದು ಬರುತ್ತಿರುವ ಒಂದು ಚೈತನ್ಯವಾಗಿದೆ. ಕಾವೇರಿ ತನ್ನ ಹುಟ್ಟು ಜಾಗದಿಂದ ಸಮುದ್ರವನ್ನು ಸೇರುವವರೆಗೆ, ಕೊಡಗಿನ ತಲಕಾವೇರಿಯಿಂದ ಹಿಡಿದು ತಮಿಳುನಾಡಿನ ಪೂಂಪುಹಾರ್‌ವರೆಗೆ ಅದರ ತಡಿಯಲ್ಲಿ ಇರುವ ಎಲ್ಲ ಕ್ಷೇತ್ರಗಳನ್ನೂ ದೇವಾಲಯಗಳನ್ನೂ ಪ್ರಮುಖ ಪಟ್ಟಣಗಳನ್ನೂ ಭಟ್ ಅವರು ಸಂದರ್ಶಿಸಿ ಅವುಗಳ ಸಮಗ್ರ ಮಾಹಿತಿಯನ್ನು ಕೊಟ್ಟಿದ್ದಾರೆ. ಆಯಾ ಜಾಗದ ಪುರಾಣ, ಹಾಡು, ಜಾನಪದ ಸಾಹಿತ್ಯಗಳನ್ನು ಸಂಗ್ರಹಿಸಿದ್ದಾರೆ. ಕೊಡಗರ ಸಾಮಾಜಿಕ, ಧಾರ್ಮಿಕ ಜೀವನ ಕಾವೇರಿ ನದಿಯೊಡನೆ ಹೇಗೆ ಮಿಳಿತವಾಗಿದೆಯೆಂಬುವನ್ನು ಹೃದಯಂಗಮವಾಗಿ ಚಿತ್ರಿಸಿದ್ದಾರೆ. ಆಧುನಿಕ ಕಾಲದಲ್ಲಿ ನಿರ್ಮಾಣವಾಗಿರುವ ಎಲ್ಲ ಅಣೆಕಟ್ಟುಗಳನ್ನು ಪರಿಚಯ

ಮಾಡಿಕೊಟ್ಟಿದೆ. ಕರ್ನಾಟಕ ಮತ್ತು ತಮಿಳುನಾಡುಗಳಲ್ಲಿ ಕಾವೇರಿ ತೀರದಲ್ಲಿ ನಡೆಯುವ ಹಬ್ಬ ಉತ್ಸವಗಳ ಮಾಹಿತಿ ಉಂಟು. ಬರೀ ಇಷ್ಟು ಹೇಳಿದರೆ ಸಾಲದು. ಏಕೆಂದರೆ ಈ ಪುಸ್ತಕ ಬರಿಯ ಮಾಹಿತಿ ಕೊಡುವ ಗ್ರಂಥವಾಗಿರದೆ ಲೇಖಕನ ಅನೇಕ ಅನುಭವಗಳಿಂದ ಸಿಂಚಿತವಾಗಿದೆ. ಶಾಸನಗಳಲ್ಲಿ ಕಾವೇರಿಯ ವರ್ಣನೆ ಬಂದಿರುವುದನ್ನು, ಕವಿಗಳು ಮಾಡಿರುವ ಕಾವೇರಿ ವರ್ಣನೆಗಳನ್ನು ಬಳಸಿಕೊಂಡಿರುವುದು ಉಚಿತವಾಗಿದೆ. ಅಂತ್ಯದಲ್ಲಿ 'ಸ್ಕಾಂದಪುರಾಣಾಂತರ್ಗತ ಶ್ರೀ ಕಾವೇರಿ ಮಹಾತ್ಮ್ಯೆ' ಎಂಬ ಸಂಸ್ಕೃತ ಗ್ರಂಥವನ್ನು ಕನ್ನಡ ಅನುವಾದ ಸಮೇತ ಕೊಟ್ಟಿದ್ದಾರೆ.

ಕಾವೇರಿ ಇತಿಹಾಸದುದ್ದಕ್ಕೂ ಮತ್ತು ಸಮಕಾಲೀನದಲ್ಲೂ ಸಂಸ್ಕೃತಿ ಸಂವರ್ಧನೆಗೆ ಸಹಾಯಕವಾಗಿರುವುದನ್ನು ಅತ್ಯಂತ ಶ್ರದ್ಧೆಯಿಂದ ಆದರೆ ಅಷ್ಟೇ ಶಾಸ್ತ್ರೀಯವಾಗಿ ಮೂಡಿಸಿರುವ ಈ ಗ್ರಂಥದ ಜೊತೆ ಹೋಲಿಸಲು ಕನ್ನಡದಲ್ಲಿ ಬಹುಶಃ ಮತ್ತೊಂದಿಲ್ಲ. ಇದರಲ್ಲಿ ಬಂದಿರುವ ಬಹುಸಂಖ್ಯೆಯ ಚಿತ್ರಗಳನ್ನು ನೋಡುವುದೇ ಒಂದು ಅನುಭವ. ಪುಸ್ತಕದ ಹೊರಮೈ ಒಳತಿರುಳಿನಷ್ಟೇ ಮೋಹಕ.

**ಕನ್ನಡ ಸಾಹಿತ್ಯದಲ್ಲಿ ಅಲ್ಲಮ ಪ್ರಭುದೇವ** (1978) ಡಾ. ಎಸ್. ಎಂ. ವೃಷಭೇಂದ್ರಸ್ವಾಮಿಯವರ ಪಿಎಚ್.ಡಿ. ನಿಬಂಧ. ಒಟ್ಟು ಎಂಟು ಅಧ್ಯಾಯಗಳಲ್ಲಿ ಪೀಠಿಕೆಯನ್ನು ಬಿಟ್ಟರೆ, ಉಳಿದ ಅಧ್ಯಾಯಗಳಲ್ಲಿ 'ಸಂಸ್ಕೃತಿಯಲ್ಲಿ ಅಲ್ಲಮಪ್ರಭು ದೇವರ ಕುರುಹುಗಳು' ಎಂಬಲ್ಲಿ 'ಅಲ್ಲಮ' ಎಂಬ ಪದದ ಮೂಲವನ್ನು ಚರ್ಚಿಸಿದೆ, ಬೇರೆ ಬೇರೆ ಊರುಗಳಲ್ಲಿರುವ ಅಲ್ಲಮನ ಹೆಸರನ್ನು ಸ್ಮರಿಸುವ ದೇವಾಲಯಗಳ ಗದ್ದುಗೆಗಳ ಸ್ಮಾರಕಗಳ ಪರಿಚಯವಿದೆ. 'ಕನ್ನಡ ಸಾಹಿತ್ಯದಲ್ಲಿ ಅಲ್ಲಮ ಪ್ರಭುದೇವ' ಎಂಬ ಅಧ್ಯಾಯದಲ್ಲಿ ಸಮಕಾಲೀನ ಶಿವಶರಣರು ಶರಣೆಯರು ತಮ್ಮ ವಚನಗಳಲ್ಲಿ ಅಲ್ಲಮನನ್ನು ಮೂಡಿಸಿರುವ ಬಗೆಯನ್ನು ಕೊಡಲಾಗಿದೆ. ಇನ್ನೊಂದು ಅಧ್ಯಾಯ ಹರಿಹರ, ರಾಘವಾಂಕರು ಅಲ್ಲಮನನ್ನು ಚಿತ್ರಿಸಿರುವುದನ್ನು ಕೊಟ್ಟಿದೆ. ಮುಂದೆ ಬಸವ ಪುರಾಣ, ಶಿವತತ್ವ ಚಿಂತಾಮಣಿ ಇತ್ಯಾದಿ ವೀರಶೈವ ಪುರಾಣಗಳು ಕಟ್ಟಿಕೊಟ್ಟಿರುವ ಅಲ್ಲಮನ ಚಿತ್ರಣವಿದೆ. ಅಲ್ಲಮನನ್ನೇ ಮುಖ್ಯವಾಗಿ ವಸ್ತುವಾಗಿ ಉಳ್ಳ ಚಾಮರಸನ ಪ್ರಭುಲಿಂಗಲೀಲೆ ಮತ್ತು ಎಳಂದೂರು ಹರೀಶ್ವರನ ಪ್ರಭುದೇವರ ಪುರಾಣಗಳಿಗೆ ಒಂದು ಪ್ರತ್ಯೇಕ ಅಧ್ಯಾಯ ಮೀಸಲಾಗಿದೆ. ಶೂನ್ಯ ಸಂಪಾದನೆಗಳಿಗೇ ಒಂದು ಅಧ್ಯಾಯ ಮೀಸಲಾಗಿರುವುದು ಸಹಜವೇ. ಏಕೆಂದರೆ ಅಲ್ಲಿಯ ನಾಯಕ ಪಾತ್ರ ಅಲ್ಲಮಪ್ರಭುವೇ. ತನ್ನ ವಚನಗಳಲ್ಲೇ ಮೂಡಿ ನಿಂತಿರುವ ಅಲ್ಲಮನ ಚಿತ್ರ ಒಂದು ಅಧ್ಯಾಯದಲ್ಲಿ ಮೂಡಿ ಬಂದಿದೆ. ಅಂತ್ಯದಲ್ಲಿ ಬಂದಿರುವ ಎರಡು ಕಿರು ಅನುಬಂಧಗಳಲ್ಲಿ ಅಲ್ಲಮನ ಕಿರು ಕೃತಿ ಮತ್ತು ಪದಗಳ ಬಗ್ಗೆ, ಭಾರತೀಯ ಭಾಷಾ ಸಾಹಿತ್ಯದಲ್ಲಿ ಅಲ್ಲಮ ಮೂಡಿ ಬಂದಿರುವ ಬಗ್ಗೆ ಪ್ರಸ್ತಾಪಿಸಲಾಗಿದೆ.

ಶಿವಶರಣರಲ್ಲೆಲ್ಲ ಉತ್ತುಂಗ ಪ್ರಾಯನಾಗಿರುವ ಅಲ್ಲಮಪ್ರಭು ಸಂಶೋಧನೆಗೆ ಬಹು ಒಳ್ಳೆಯ ವಸ್ತುವೆಂಬಲ್ಲಿ ಅನುಮಾನವಿಲ್ಲ. ಅವನನ್ನು ಕುರಿತಾಗಿ ಈಗಾಗಲೇ ಕೆಲವು ಬರಹಗಳು ಬಂದಿವೆ, ಅವನ ಬಾಹ್ಯ ಜೀವನದ ರೂಪು ರೇಷೆಗಳು ಕೆಲಮಟ್ಟಿಗೆ ಸ್ಪಷ್ಟವಾಗಿವೆ (ಅವನ್ನೆಲ್ಲ ಡಾ. ಸ್ವಾಮಿಯವರು ಬಳಸಿಕೊಂಡಿಲ್ಲ). ಆದರೆ, ಅವನು ಸಾಹಿತಿಯಾಗಿದ್ದಂತೆ ತಾಂತ್ರಿಕ ಮತ ಸಾಧನೆಗಳ ಪರಿಚಯವಿದ್ದ ಒಬ್ಬ ಅನುಭಾವಿಯೂ ಆಗಿದ್ದ. ಆ ಕ್ಷೇತ್ರದಲ್ಲಿ ಇನ್ನೂ ಕೆಲಸ ಆಗಿಲ್ಲ ಮತ್ತು ಅಲ್ಲಮನ ಬಗ್ಗೆ ಸಂಶೋಧನೆ ಮಾಡಬಯಸುವವರು ಆ ಅಜ್ಞಾತ ಕ್ಷೇತ್ರದತ್ತ ಕಣ್ಣು ಹಾಯಿಸಿ, ಅಲ್ಲಮನನ್ನು ಅರ್ಥೈಸಿಕೊಳ್ಳುವ ಯತ್ನ ಮಾಡಬೇಕು. ಅಂತಹ ಯತ್ನ ಈ ನಿಬಂಧದಲ್ಲಿ ನಡೆಯದಿರುವುದು ಎದ್ದು ಕಾಣುವ ಸಂಗತಿ.

ನಿಬಂಧದ ಕೊನೆಯಲ್ಲಿ ಬಂದಿರುವ ಅನುಬಂಧಗಳಲ್ಲಿ ಎರಡು ವಾಕ್ಯಗಳಿವೆ : "......ಹೀಗೆ ಅಲ್ಲಮಪ್ರಭುದೇವನ ಕಿರು ಕೃತಿಗಳ ಶಾಸ್ತ್ರೀಯ ಅಧ್ಯಯನ ಹಾಗೂ ನಿಷ್ಪಕ್ಷಪಾತ ಸಂಶೋಧನೆ ಆಗಬೇಕಾಗಿದೆ", "ಭಾರತೀಯ ಭಾಷಾ ಸಾಹಿತ್ಯಗಳಲ್ಲಿ ಕಾಣುವ ಪ್ರಭುದೇವನ ಚಿತ್ರಣ ಇನ್ನೊಂದು ಪಿಎಚ್.ಡಿ. ಪ್ರಬಂಧದ ವಸ್ತುವಾಗುವಷ್ಟು ವಿಸ್ತಾರವಾಗಿದೆ" - ನಮ್ಮ ಪ್ರಶ್ನೆಯೆಂದರೆ, ಈ ವಿಷಯಗಳನ್ನು ಕುರಿತಂತೆ ಗಂಭೀರ ಸಂಶೋಧನೆಯನ್ನು ಅಲ್ಲಮಪ್ರಭುವನ್ನು ಕುರಿತ ಪಿಎಚ್.ಡಿ. ನಿಬಂಧದಲ್ಲಲ್ಲದೆ ಬೇರೆ ಯಾವ ಕಡೆ ನಿರೀಕ್ಷಿಸಬಹುದು ? 'ಭಾರತೀಯ ಭಾಷಾ ಸಾಹಿತ್ಯದಲ್ಲಿ ಅಲ್ಲಮ' ಎನ್ನುವಾಗ ಅಲ್ಲಮನ ವಚನಗಳು ಹಿಂದಿಗೆ ಮರಾಠಿಗೆ ಅನುವಾದವಾಗಿರುವುದನ್ನು, ಶೂನ್ಯಸಂಪಾದನೆ ಇಂಗ್ಲೀಷಿಗೆ ಅನುವಾದವಾಗಿರುವುದನ್ನು ಗಮನಿಸಿದ್ದಾರೆ. (ರಾಮಾನುಜನ್ ಅವರ ಪುಸ್ತಕ "Shiva Speaks" ಅಲ್ಲ, "Speaking of Shiva") ಆದರೆ ಈ ಅಧ್ಯಾಯದಲ್ಲಿ ಅಥವಾ ಅನುಬಂಧದಲ್ಲಿ ಸಂಸ್ಕೃತ, ಮರಾಠಿ, ತೆಲುಗು, ತಮಿಳು ಕವಿಗಳು ಪ್ರಾಚೀನ ಕಾಲದಲ್ಲಿ ಅಲ್ಲಮನ ಉಲ್ಲೇಖ ಮಾಡಿದ್ದರೆ, ಅವನಿಂದ ಪ್ರಭಾವಿತರಾಗಿದ್ದರೆ ಅದು ಮಾತ್ರ ಮುಖ್ಯವಾಗುತ್ತದೆ, ಸಂಶೋಧನೆಯ ದೃಷ್ಟಿಯಿಂದ. ಹದಿನೈದನೆಯ ಶತಮಾನದ ಮಗ್ಗೆಯ ಮಾಯಿದೇವ ಅಲ್ಲಮನ ಕೆಲವು ವಚನಗಳನ್ನು ಸಂಸ್ಕೃತಕ್ಕೆ ಅನುವಾದಿಸಿದ್ದಾನೆ. 'ಪ್ರಭುಗೀತಾ' ತಮ್ಮ ಕೈಗೆ ದೊರೆಯದೆ ಹೋದದ್ದರಿಂದ ಅದರ ಬಗ್ಗೆ ಏನೂ ಬರೆಯಲು ಅಸಮರ್ಥನಾಗಿದ್ದೇನೆಂದು ಹೇಳಿಕೊಂಡಿದ್ದಾರೆ. ಅದು ಪ್ರಯತ್ನಪಡದೆ ಹೇಗೆ ದೊರೆತೀತು?

ಕನ್ನಡದಲ್ಲಿಯೇ, ಅಲ್ಲಮನಿಗೆ ಸಂಬಂಧಿಸಿದಂತೆ 'ಪ್ರಭುಚರಿತ್ರೆ' ಎಂಬ ಯಕ್ಷಗಾನ, 'ಪ್ರಭುಚರಿತ್ರೆ' ಎಂಬ ಇನ್ನೊಂದು ಯಕ್ಷಗಾನ (ನಂಜುಂಡಾರಾಧ್ಯ ಕೃತ), ಅಲ್ಲಮನದೇ ಎಂದು ಹೇಳಲಾದ 'ಪ್ರಭುದೇವರ ಲಿಂಗಸೂತ್ರ', ಮರಿರಾಚವಟ್ಟಿದೇವನ 'ಪ್ರಭುನಟನ ತಾರಾವಳಿ', ಪರ್ವತೇಶನ 'ಪ್ರಭುವಿನ ಸಾಂಗತ್ಯ' (ನೋಡಿ : ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಸೂಚಿ, ಸಂಪುಟ2) ಮೊದಲಾದ ಕೃತಿಗಳನ್ನು ಪರಿಶೀಲಿಸಿ ಮಾಹಿತಿ ಕೊಡಬಹುದಿತ್ತು.

ಬೆಡಗಿನ ವಚನಗಳ ಬಗ್ಗೆ "ವಿಶೇಷ ಅಧ್ಯಯನವೇ ಆಗಬೇಕು" ಎನ್ನುತ್ತಾರೆ. (ಪು. 330) ಅಂತಹ ಅಧ್ಯಯನಕ್ಕೆ ಈ ನಿಬಂಧ ಒಳ್ಳೆಯ ಜಾಗ ಅಲ್ಲವೇ?.

ಉಪ ಶೀರ್ಷಿಕೆಯಲ್ಲಿ ಎಂಟು ಸಾಲಿನ ಒಂದು ಚಿಕ್ಕ ಪ್ಯಾರಾ ಬರೆದು 'ನಯಸೇನ ಬರೆದ ಕೃತಿ' ಒಂದೇ ಒಂದು, ಅದೇ ಧರ್ಮಾಮೃತ ಎಂದಿದ್ದಾರೆ. ವಸ್ತು ಸ್ಥಿತಿ ಹೀಗಿರುವಾಗ ಇಡೀ ನಿಬಂಧಕ್ಕೆ ನಯಸೇನ ಮತ್ತು ಅವನ ಕೃತಿಗಳು ಎಂಬ ಶೀರ್ಷಿಕೆ ಸಂಪೂರ್ಣವಾಗಿ ಅನುಚಿತವಾಗುತ್ತದೆ. ಶೀರ್ಷಿಕೆಯನ್ನು ಓದಿದವರಿಗೆ ನಯಸೇನ ಒಂದಕ್ಕಿಂತ ಹೆಚ್ಚು ಕೃತಿಗಳನ್ನು ಬರೆದಿದ್ದಾನೆ ಎಂಬುದು ಬೋಧವಾಗುತ್ತದೆ: ಈ ದೃಷ್ಟಿಯಿಂದ ನಿಬಂಧದ ಹೆಸರು ತಪ್ಪು ಕಲ್ಪನೆಗೆ ಎಡೆಮಾಡುತ್ತದೆ.

'ಕಥಾ ಸಾಹಿತ್ಯ' ಅಧ್ಯಾಯದಲ್ಲಿ ಭಾರತೀಯ ಕಥಾ ಸಾಹಿತ್ಯದ ಹಿನ್ನೆಲೆಯಲ್ಲಿ ಸಂಸ್ಕೃತ, ಪ್ರಾಕೃತ, ಕನ್ನಡ ಜೈನ ಕಥಾಕೋಶಗಳ ಪರಿಚಯ ಮಾಡಿಕೊಟ್ಟಿದ್ದಾರೆ. 'ಮೂಲ ಮತ್ತು ಮಾರ್ಪಾಟು' ಎಂಬ ಬಹು ಮುಖ್ಯ ಅಧ್ಯಾಯದಲ್ಲಿ ನಯಸೇನನ ಧರ್ಮಾಮೃತದ ಕತೆಗಳಿಗೆ ಮೂಲವನ್ನು ಕಂಡುಹಿಡಿಯುವ ಪ್ರಯತ್ನವನ್ನು ಮಾಡಿದ್ದಾರೆ. ಒಂದೊಂದೂ ಕತೆಯೂ ನಯಸೇನನಲ್ಲಿ ಮಾರ್ಪಾಟಾಗಿರುವ ರೀತಿ ಅವನ ಕತೆಗಾರಿಕೆಯನ್ನು ಎತ್ತಿ ತೋರಿಸುತ್ತದೆ. ಇತರ ಸಂಕಲನಗಳಿಗಿಂತ, ಕರ್ನಾಟಕದಲ್ಲೇ ರಚಿತವಾದ ಯಶಸ್ತಿಲಕ ಚಂಪುವಿಗೆ ನಯಸೇನ ಹೆಚ್ಚಾಗಿ ಋಣಿಯಾಗಿರುವುದನ್ನು ಗುರುತಿಸಿದ್ದಾರೆ. ಅಧ್ಯಾಯದ ಕೊನೆಯಲ್ಲಿ ಕೋಷ್ಟಕವನ್ನು ಕೊಟ್ಟು ಒಂದೊಂದು ಕತೆಯೂ ಬರುವ ಎಲ್ಲ ಆಕರಗಳನ್ನು ಪಟ್ಟಿ ಮಾಡಿದ್ದಾರೆ. ಈ ಅಧ್ಯಾಯ ಮಲ್ಲಾಪುರ ಅವರ ಗಟ್ಟಿ ಕೊಡುಗೆ.

'ಧರ್ಮಾಮೃತ' ಜೈನ ತತ್ವಗಳನ್ನು ಪ್ರತಿಪಾದಿಸುವ ಧಾರ್ಮಿಕ ಗ್ರಂಥವೆಂಬುದನ್ನು 'ಜೈನ ದರ್ಶನ' ಎಂಬ ಅಧ್ಯಾಯದಲ್ಲಿ ವಿವರವಾಗಿ ತೋರಿಸಿದೆ.

'ಧರ್ಮಾಮೃತ'ದ ವೈಶಿಷ್ಟ್ಯವಿರುವುದು ಅದರಲ್ಲಿ ಬರುವ ಸಾಮಾಜಿಕ ವಿವರಗಳಿಂದ. ಆ ಕೃತಿಯ ವಿಶ್ಲೇಷಣೆ ಸಮಕಾಲೀನ ಸಮಾಜದ ಎಷ್ಟೋ ವಿವರಗಳನ್ನು ನಮಗೆ ನೀಡುತ್ತದೆ. ಅಂತಹ ವಿಶ್ಲೇಷಣೆಯನ್ನು 'ಸಮಾಜ ದರ್ಶನ' ಅಧ್ಯಾಯದಲ್ಲಿ ಮಾಡಿದ್ದಾರೆ. ಸಾಂಸಾರಿಕ ಚಿತ್ರಣ, ಮದುವೆ, ಅರಸು, ಆಡಳಿತಾಧಿಕಾರಿಗಳು ಇವು ಕೆಲವು ಉಪ ಶೀರ್ಷಿಕೆಗಳು. ಮಲ್ಲಾಪುರ ಅವರು ಸಂಗತಿಗಳನ್ನು ಹಾಗೆ ಹಾಗೆಯೇ ಕೆಲವೆಡೆ ಹೆಚ್ಚು ಕಡಮೆ ಮೂಲದ ಭಾಷೆಯಲ್ಲಿಯೇ ಕೊಡುತ್ತಾರೆ (ಉದಾ. 'ಕೊಡಗೂಸುಗಳು ಹಲ್ಲು ಸುಲಿಯುತ್ತಿರಲಿಲ್ಲ'. 'ಕೊಡಗೂಸು' 'ಸುಲಿ' ಎಂಬ ಶಬ್ದಗಳು ಹೊಸಗನ್ನಡದಲ್ಲಿಲ್ಲ). ಆದರೆ ಹೆಚ್ಚಿನ ವಿಚಾರ ಮಾಡಲು ತೊಡಗುವುದಿಲ್ಲ. "ಗಾವುಂಡಂಗೆ ಆರದ ಬಾರಿಕಂಗೆ" ಮುನಿಯುತ್ತಿದ್ದರು ಎಂಬಂತಹ ವಾಕ್ಯ ಯಾರಿಗೂ ಏನೂ ಅರ್ಥವಾಗುವುದಿಲ್ಲ. ಇದರ ವಿವರಣೆ ಕೊಡಬಹುದಿತ್ತು. ಮತ್ತು 'ಬಾರಿಕ' ಎಂಬುದು ಈ ದಿನ ಉತ್ತರ ಕರ್ನಾಟಕದಲ್ಲಿರುವ 'ಬಾರಿಕೇರರು' ಎಂಬ ಜಾತಿಯನ್ನು ಸೂಚಿಸುತ್ತದೆಯೆಂಬುದನ್ನು ಗಮನಿಸಬಹುದಿತ್ತು. "ದೇಶಮೆಲ್ಲಂ ಅಕ್ಕರಮನಜಿಯದನಿತಜಿಂ ಅಕ್ಕರಂ ಇಲ್ಲೆನಲ್‌ಬಾರದು, ಸೇನಬೋವರುಂ ಅಕ್ಕರಿಗರುಂ ಅಜಿವೊಡೆ ಸಾಲ್ಗುಂ" ಎಂಬ ವಾಕ್ಯ ಅವನ ಕಾಲದಲ್ಲಿ ದೇಶ ಬಹುಮಟ್ಟಿಗೆ ಅನಕ್ಷರಸ್ಥವಾಗಿತ್ತೆಂದೂ ಎಲ್ಲೋ ಕೆಲವು ವಿದ್ಯಾವಂತರೂ ಸೇನಬೋವರೂ (-ಶಾನುಬೋಗರು)

ಅಕ್ಷರಸ್ಥರಾಗಿದ್ದರೆ ಸಾಕು ಎಂಬ ಭಾವನೆ ಪ್ರಚಲಿತವಾಗಿತ್ತೆಂದೂ ತಿಳಿದುಬರುತ್ತದೆ. ಈ ಸಂಗತಿ ಇವನ ಬಳಿಕ ಬಂದ ವಚನಕಾರರ ಸಾಮಾಜಿಕ ಕಾರ್ಯಗಳನ್ನು ವ್ಯಾಖ್ಯಾನಿಸಲು ಸಹಾಯ ಮಾಡುತ್ತದೆ. 'ಪಗರಣ' 'ಕುಪ್ಪೆಕುಜಿ' ಎಂಬ ವಿನೋದ ಆಟಗಳ ಬಗ್ಗೆ ಈ ದಿನ ಹೆಚ್ಚು ಖಚಿತವಾಗಿ ಮಾತನಾಡಲು ಸಾಧ್ಯವಿದೆ. 'ಚೇಳಂಬನ ಪರ್ವ'ವೆಂಬುದು ಒಂದು ಸಮಸ್ಯೆಯಾಗಿ ಉಳಿಯುತ್ತದೆ. ಮಲ್ಲಾಪುರ ಅವರು ಇಲ್ಲಿ ಆರಿಸಿ ಕೊಟ್ಟಿರುವ ಸಾಮಗ್ರಿ ಅಸಮಗ್ರವಾಗಿದೆ, ನಿಜ. ಆದರೆ ನಿಜವಾಗಿ ಬೇಸರ ತರಿಸುವಂಥದೆಂದರೆ ಅವರು ಬಹುತೇಕ ಕಡೆ ಅರ್ಥವನ್ನು ವಿಶದ ಮಾಡುವುದರ ಕಡೆ ಗಮನ ಕೊಡದಿರುವುದು.

ಕೊನೆಯ ಅಧ್ಯಾಯಗಳಲ್ಲೊಂದಾದ 'ಕಾವ್ಯ ವಿಮರ್ಶೆ'ಯಲ್ಲಿ ಧರ್ಮಾಮೃತ ಕೃತಿಯ ಸಾಹಿತ್ಯಕ ಮೌಲ್ಯದ ಚರ್ಚೆಯಿದೆ. ಅವನ ಕೃತಿಯೊಂದು 'ಬೃಹತ್ ಉಪಮಾಕೋಶ' ಎಂದು ಗುರುತಿಸಿರುವುದು ಸರಿಯಾಗಿದೆ. 'ಕೊಳು - ಕೊಡೆ' ಎಂಬ ಭಾಗದಲ್ಲಿ ಅವನು ತನ್ನ ಹಿಂದಿನ ಕವಿಗಳಿಗೆ ಉಪಕೃತನಾಗಿರುವುದನ್ನು ಸಾಕಷ್ಟು ವಿವರಗಳೊಂದಿಗೆ ಎತ್ತಿ ತೋರಿಸಿದೆ. ನಯಸೇನನ ಪ್ರಭಾವ ಬಸವಣ್ಣನ ಮೇಲೆ ಆಗಿರುವುದರ ಬಗ್ಗೆ ಡಾ. ಮಲ್ಲಾಪುರರು ಸಂದೇಹ ವ್ಯಕ್ತಪಡಿಸಿದ್ದಾರೆ. ನಾನೇನೋ ಪ್ರಭಾವ ಆಗಿರಬಹುದು ಎಂಬುದನ್ನು ಹಿಂದೆಯೇ ಸೂಚಿಸಿದ್ದೇನೆ ಮತ್ತು ಡಾ. ಮಲ್ಲಾಪುರರು ಕೊಟ್ಟಿರುವ ಸಾದೃಶ್ಯಗಳಂತೂ ನನ್ನ ಸೂಚನೆಯನ್ನು ದೃಢಪಡಿಸಿವೆ.

ಡಾ. ಮಲ್ಲಾಪುರ ಅವರಿಗೆ ಒಳ್ಳೆಯ ಭಾಷೆ ಇದೆ, ಸಂಶೋಧನೆಗೆ ಬೇಕಾದ ಮನೋಧರ್ಮವಿದೆ. ಆದರೆ ಇನ್ನೂ ಆಳಕ್ಕೆ ಇಳಿಯುವಲ್ಲಿ ತೋರುವ ಆಲಸ್ಯ ಇವರ ಕೃತಿಯ ಮೌಲ್ಯವನ್ನು ಕೆಳಗೆಳೆಯುತ್ತದೆ. ಅಡಿ ಟಿಪ್ಪಣಿ ಕೊಡುವಲ್ಲಿಯೂ ಅದೇ ಉಪೇಕ್ಷೆ ಕೆಲಸ ಮಾಡುತ್ತದೆ. ಕರಡು ತಿದ್ದುವುದರಲ್ಲಿಯೂ ಅದು ಸಾಕಷ್ಟು ಹಾವಳಿ ಮಾಡಿದೆ. ಇಷ್ಟಾದರೂ "ನಯಸೇನ ಮತ್ತು ಅವನ ಕೃತಿಗಳು" ನಿಜವಾಗಿಯೂ ಒಂದು ಒಳ್ಳೆಯ ಪಿಎಚ್.ಡಿ. ನಿಬಂಧ. ಈ ಕೃತಿ ಕನ್ನಡ ಸಾಹಿತ್ಯ ಚರಿತ್ರೆಯ ಸಂಧಿ ಕಾಲದಲ್ಲಿ ಕಾಣಿಸಿಕೊಂಡ ಪ್ರಮುಖ ಕವಿಯೊಬ್ಬನನ್ನು ಕುರಿತಂತೆ ನಮ್ಮ ಅರಿವನ್ನು ಆಳಗೊಳಿಸಿದೆಯೆಂದು ನಿಸ್ಸಂಶಯವಾಗಿ ಹೇಳಬಹುದು.

# ಸಂಶೋಧನ ಸಮೀಕ್ಷೆ : 1979

ಸಂಶೋಧನೆಗೆ ಈಚಿನ ವರ್ಷಗಳಲ್ಲಿ ಬಹುಬಗೆಯ ಪ್ರೋತ್ಸಾಹ ದೊರಕುತ್ತಿದೆ. ಇಂಗ್ಲೀಷಿನಲ್ಲಿ ಮನೋವಿಜ್ಞಾನ, ಶಿಕ್ಷಣವಿಜ್ಞಾನ, ಸಮಾಜವಿಜ್ಞಾನ, ಸಾಹಿತ್ಯ ಇವೇ ಮೊದಲಾದುವನ್ನು ಲಕ್ಷ್ಯದಲ್ಲಿರಿಸಿಕೊಂಡು ಸಂಶೋಧನ ವಿಧಿವಿಧಾನಗಳನ್ನು ವಿವರಿಸುವ ಹಲವು ಗ್ರಂಥಗಳಿವೆ. ಒಂದು ಸಂಪ್ರಬಂಧವನ್ನೋ (paper) ನಿಬಂಧವನ್ನೋ (dissertation) ಸಿದ್ಧಪಡಿಸುವ ರೀತಿಯನ್ನು ಕುರಿತೇ ಬರಹಗಳಿವೆ. ಕನ್ನಡದಲ್ಲಿ ಕಳೆದ ಹಲವು ದಶಕಗಳಿಂದ ಸಂಶೋಧನೆಗಳು ನಡೆಯುತ್ತಿದ್ದರೂ, ಆ ಕ್ಷೇತ್ರದ ಪರಿಚಯಮಾಡಿ ಕೊಡುವ ಗ್ರಂಥಗಳು ಇಲ್ಲವೇ ಇಲ್ಲ. ನನ್ನ 'ಸಂಶೋಧನೆ' ಎಂಬ ಕೃತಿ ಬಹುಶಃ ಆ ದಿಸೆಯಲ್ಲಿ ಮೊದಲ ಮತ್ತು ತೀವ್ರ ಮಿತಿಗಳುಳ್ಳ ಒಂದು ಪುಟ್ಟ ಪುಸ್ತಕ. ಅದು ಬಿಟ್ಟರೆ ಹೊಸ್ಕೆರೆ ಶಿವಸ್ವಾಮಿಯವರ **ಸಂಶೋಧನ ಶಾಸ್ತ್ರ** ಎರಡನೆಯ ಇನ್ನೂ ಪುಟ್ಟ ಪುಸ್ತಕ. ಇದರಲ್ಲಿ 'ಸಂಶೋಧನೆ ಮತ್ತು ಸಂಶೋಧನಶಾಸ್ತ್ರ', 'ಸಂಶೋಧಕ', 'ಸಂಶೋಧನೆಯ ಮುಖ್ಯ ಘಟಕಗಳು', 'ಊಹನೆಯ ಪ್ರಾಮುಖ್ಯ', 'ನಿಬಂಧದ ರೂಪುರೇಷೆ', 'ಅಡಿಟಿಪ್ಪಣಿ ಮತ್ತು ಅನುಬಂಧ ವಿವೇಚನೆ', 'ಸಂಶೋಧನೆಯಲ್ಲಿ ಸಾಮಾನ್ಯ ತಪ್ಪುಗಳು', 'ಉತ್ತಮ ಸಂಶೋಧನೆ' ಎಂಬ ತೀರ ಚಿಕ್ಕ ಚಿಕ್ಕ ಅಧ್ಯಾಯಗಳಿವೆ (ಕೆಲವು ಒಂದೂವರೆ ಪುಟದಷ್ಟು ಚಿಕ್ಕವು). "ಸಂಶೋಧನೆಯನ್ನು ಕುರಿತ, ಅದರ ವಿಧಿ ವಿಧಾನಗಳನ್ನು ಕುರಿತ ಕ್ರಮವಾದ ಅಧ್ಯಯನವೇ ಸಂಶೋಧನಶಾಸ್ತ್ರ" ಎಂದು ಸಂಶೋಧನಶಾಸ್ತ್ರ ಎಂಬ ಮಾತನ್ನು ವಿವರಿಸಿದ್ದಾರೆ. ಅಂತಹ ಹೊಸ ಮಾತಿನ ಅಗತ್ಯ ಇದೆಯೇ, ಅಥವಾ ಸಂಶೋಧನೆಯೇ ಆ ಅರ್ಥವನ್ನು ಒಳಗೊಳ್ಳುವುದೇ ವಿಚಾರಮಾಡಬೇಕು. Hypothesis ಮಾತನ್ನು 'ಊಹನೆ' ಎಂದು ಅನುವಾದಿಸಿರುವುದು ಸರಿಯಾಗಲಾರದು; ಮತ್ತು `hypothesis' ತತ್ವವನ್ನು ಸರಿಯಾಗಿ ಗ್ರಹಿಸಿದಂತೆ ಕಾಣುವುದಿಲ್ಲ. ಅಡಿಟಿಪ್ಪಣಿ ಕೊಡುವ ವಿಧಾನವನ್ನು ಪು. 29ರಲ್ಲಿ ಹೇಳಿ, ಪು. 23ರಲ್ಲಿ ಅದರಂತೆ ಅಡಿಟಿಪ್ಪಣಿ ಕೊಡದಿರುವುದು ಎದ್ದುಕಾಣುತ್ತದೆ. ಇಂತಹ ಕೆಲವು ಅಸಂಗತಿಗಳನ್ನು ಬಿಟ್ಟರೆ, ಸಮಸ್ಯೆಯನ್ನು ಆಯ್ಕೆ ಮಾಡುವಲ್ಲಿ ಸಂಶೋಧಕ ವಹಿಸಬೇಕಾದ ಎಚ್ಚರ, ಟಿಪ್ಪಣಿ ತೆಗೆದುಕೊಳ್ಳುವ ವಿಧಾನ, ಗ್ರಂಥ ಸೂಚಿಯನ್ನು ಬೆಳೆಸಿಕೊಳ್ಳುವ ರೀತಿ ಇವುಗಳನ್ನು ಕುರಿತ ಬರಹ ಚೊಕ್ಕವಾಗಿದೆ. ಎಂ.ಫಿಲ್. ವಿದ್ಯಾರ್ಥಿಯಾಗಿ ಸಿದ್ಧಪಡಿಸಿದ ಈ ಬರಹ ಸಂಶೋಧನ ವಿದ್ಯಾರ್ಥಿಗಳು ಒಮ್ಮೆ ಪರಿಶೀಲಿಸಬಹುದಾದ ಕೃತಿ ; ಮತ್ತು ಅಲ್ಲಲ್ಲಿ ಬಂದಿರುವ ಸೂಚನೆಗಳು ಸಂಶೋಧಕರಿಗೆ ಎಚ್ಚರವನ್ನೂ ಕೊಡುತ್ತವೆ.

**ದಕ್ಷಿಣ ಕರ್ನಾಟಕ ಜಾನಪದ ಕಾವ್ಯಪ್ರಕಾರಗಳು** ಡಾ. ಜೀ. ಶಂ. ಪರಮಶಿವಯ್ಯನವರ ಬೃಹತ್ ಪಿಎಚ್.ಡಿ. ನಿಬಂಧ. ದಕ್ಷಿಣ ಕರ್ನಾಟಕ ಅಥವಾ ಹಳೆಯ ಮೈಸೂರಿನ ಜನಪದ ಕಾವ್ಯ ಪ್ರಕಾರಗಳನ್ನು ವಸ್ತುವನ್ನಾಗಿ ಆಯ್ಕೆಮಾಡಿಕೊಂಡು ವಿಪುಲ ಕ್ಷೇತ್ರಕಾರ್ಯ, ಸೂಕ್ಷ್ಮ ವಿಶ್ಲೇಷಣೆ, ವಿಸ್ತಾರವಾದ ವ್ಯಾಸಂಗಗಳನ್ನೊಳಗೊಂಡ ಈ ಕೃತಿ ಈಚೆಗೆ ಬಂದಿರುವ ನಿಬಂಧಗಳಲ್ಲಿ ಮಕುಟಪ್ರಾಯವಾಗಿ ನಿಲ್ಲುತ್ತದೆ. ಇದರಲ್ಲಿ ಹದಿನಾಲ್ಕು ಭಾಗಗಳಿವೆ. ಭಾಗ ಒಂದರಲ್ಲಿ ಜಾನಪದ, ಅದರ ಸ್ವರೂಪವನ್ನು ಕುರಿತು ವಿವೇಚನೆಯಿದೆ. ಒಂದು ರೀತಿಯಲ್ಲಿ ಇಡೀ ಜಾನಪದ ಶಾಸ್ತ್ರಕ್ಕೆ (Folklore) ಸಂಬಂಧಿಸಿದ ಒಂದು ಸಾಮಾನ್ಯ ವಿವೇಚನೆಯಿದೆ. ಜಾನಪದ ಶಾಸ್ತ್ರವನ್ನು ಕುರಿತ ವ್ಯಾಖ್ಯಾನಗಳು, 'ಜಾನಪದ' ಎನ್ನುವ ಮಾತನ್ನು Folklore ಎಂಬರ್ಥದಲ್ಲಿ ಬಳಸುತ್ತಿರುವುದರ ಔಚಿತ್ಯ, ಕರ್ನಾಟಕದಲ್ಲಿ ಜಾನಪದದ ಶಾಸ್ತ್ರೀಯ ಅಧ್ಯಯನದ ಇತಿಹಾಸ (1871 ರಿಂದ ಆರಂಭ) ಇತ್ಯಾದಿಗಳ ವಿವೇಚನೆಯೊಂದಿಗೆ ತಮ್ಮ ಪ್ರಕೃತ ನಿಬಂಧದ ವಸ್ತುವನ್ನು ನಿರ್ವಚಿಸಿಕೊಂಡಿದ್ದಾರೆ. 'ಲಾವಣಿ' ವಿವರಗಳಿಗೆ ಒಂದು ಭಾಗ ಮೀಸಲಾಗಿದೆ. 'ಲಾವಣಿ' ಪದವನ್ನು ballad ಪದಕ್ಕೆ ಸಮಾನವಾಗಿ ಸ್ವೀಕರಿಸಿದ್ದರೂ, ಆ ಪದದ ಬಳಕೆಯ ಬಗ್ಗೆ ಈಚೆಗೆ ಸಾಕಷ್ಟು ಚರ್ಚೆಗಳಾಗಿ, ಲಾವಣಿ ಎನ್ನುವುದು ballad ಎಂಬುದರ ಒಂದು ಪ್ರಕಾರವಾಗಿರಬಹುದೇ ಹೊರತು ಅವೆರಡೂ ಸಮಾನವಾಗಲಾರವು ಎಂಬ ಸರಿಯಾದ ಅಭಿಪ್ರಾಯ ವ್ಯಕ್ತವಾಗಿದೆ. ಕರ್ನಾಟಕವನ್ನು ಅಧ್ಯಯನದ ಅನುಕೂಲಕ್ಕೆ ಐದು ಪ್ರದೇಶಗಳನ್ನಾಗಿ ವಿಭಾಗಿಸಬಹುದೆಂದು ಲೇಖಕರು ಸಮರ್ಥಿಸಿಕೊಂಡಿದ್ದಾರೆ: ಉತ್ತರ ಕರ್ನಾಟಕ, ದಕ್ಷಿಣ ಕರ್ನಾಟಕ, ಉತ್ತರ ಕನ್ನಡ ಜಿಲ್ಲೆ, ದಕ್ಷಿಣ ಕನ್ನಡ ಜಿಲ್ಲೆ ಮತ್ತು ಕೊಡಗು. ಇಂತಹ ವಿಭಜನೆಯ ಇತಿಮಿತಿಗಳು ಲೇಖಕರಿಗೆ ಚೆನ್ನಾಗಿಯೇ ಗೊತ್ತಿರುವುದಾದರೂ, ಕೇವಲ ಅನುಕೂಲಕ್ಕಾಗಿ ಮಾಡಿಕೊಂಡಿರುವ ವಿಭಜನೆಯಲ್ಲಿಯೂ ಏನಾದರೂ ಗಟ್ಟಿ ಕಾರಣವಿರಬೇಕಲ್ಲವೇ? ಜಾನಪದ ಅಂಶ ಯಾವುದೋ ಸಮಾನವಾಗಿದೆಯೆಂದು ಎರಡು ಅಥವಾ ಹೆಚ್ಚು ಜಿಲ್ಲೆಗಳನ್ನು ಒಂದು ವರ್ಗವಾಗಿ ಸೇರಿಸುವುದರಲ್ಲಿ ಔಚಿತ್ಯವಿಲ್ಲ. ಈ ವಿಭಜನೆ ಕೇವಲ ಯಾದೃಚ್ಛಿಕ (arbitrary) ಎಂದು ಹೇಳಿದ್ದರೆ ಆಗ ಪ್ರತಿವಾದವೇ ಇರುತ್ತಿರಲಿಲ್ಲ. ಹಳೆಯ ಮೈಸೂರಿನ ಜಿಲ್ಲೆಗಳನ್ನು ಒಂದು ವರ್ಗವಾಗಿ ಸೇರಿಸಲು ಅವು ಒಂದು ಕಾಲಕ್ಕೆ ಒಂದು ರಾಜಕೀಯ ಘಟಕವಾಗಿದ್ದುವೆಂಬ ಕಾರಣವೇ ಹೊರತು ಬೇರೇನೂ ಅಲ್ಲ. ಆದ್ದರಿಂದ ಐದು ಪ್ರದೇಶಗಳಾಗಿ ವಿಭಾಗಿಸುವುದು ಅಧ್ಯಯನ ಸೌಕರ್ಯಕ್ಕಾಗಿ ಮತ್ತು ವಿಷಯವನ್ನು ಮಿತಿಗೊಳಿಸಿಕೊಳ್ಳುವುದಕ್ಕಾಗಿ ಮಾತ್ರ ಎಂದು ಭಾವಿಸಬೇಕು.

ಜಾನಪದ ಕಾವ್ಯ ಪರಂಪರೆಗಳನ್ನು ಉಳಿಸಿಕೊಂಡು ಬಂದಿರುವವರು ವೃತ್ತಿಗಾಯಕರು; ಹಾಡುವುದನ್ನು ತಮ್ಮ ಉದ್ಯೋಗವಾಗಿ ಮಾಡಿಕೊಂಡಿರುವ ಜನ ಇವರು. ಇವರಲ್ಲಿ 'ಧಾರ್ಮಿಕ' ಮತ್ತು 'ಲೌಕಿಕ' ಎಂದು ಎರಡು ಬಗೆ. ಧಾರ್ಮಿಕ ವೃತ್ತಿಗಾಯಕರಲ್ಲಿ ದೇವರ ಗುಡ್ಡರು, ನೀಲಗಾರರು, ಚೌಡಿಕೆಯವರು, ಕಾಡುಗೊಲ್ಲರು, ಗೊರವರು ಮುಖ್ಯರು. ಒಂದೊಂದು ಸಂಪ್ರದಾಯದ ಬಗ್ಗೆಯೂ ಜೀ.ಶಂ.ಪ. ಅವರು ವಿಪುಲ ಸಾಮಗ್ರಿಯನ್ನು

ಒದಗಿಸುತ್ತಾರೆ. ಆಯಾ ದೈವದ ಕತೆ, ವ್ಯಾಪ್ತಿ, ಸಾಧ್ಯವಾದರೆ ಇತಿಹಾಸ ಎಲ್ಲವನ್ನೂ ಒದಗಿಸುತ್ತಾರೆ. ಆಯಾ ಕ್ಷೇತ್ರಗಳ (ಮಲೆಯ ಮಾದೇಶ್ವರ, ಮಂಟೇಸ್ವಾಮಿ, ಸೌದತ್ತಿ ಎಲ್ಲಮ್ಮ, ಜುಂಜಪ್ಪ ಮತ್ತು ಮೈಲಾರ) ಆಯಾ ದೈವಕ್ಕೆ ಸಂಬಂಧಿಸಿದ ಪುರಾಣ, ಹಾಡುಗಳನ್ನು ಅವುಗಳ ಪ್ರಾದೇಶಿಕ ವೈಲಕ್ಷಣ್ಯ ಸಮೇತ ಕೊಡುತ್ತಾರೆ. ಲೌಕಿಕ ಸಂಪ್ರದಾಯಗಳಲ್ಲಿ ಅಂಟಿಗೆ - ಪಂಟಿಗೆ, ಭಾಗವತ ಮೇಳ, ದೊಂಬಿದಾಸರು, ಕಿನ್ನರಿ ಜೋಗಿಗಳು, ಹೆಳವರು, ಕರಪಾಲದವರು ಪ್ರಮುಖರು - ಇವರ ವಿವರಗಳನ್ನೂ ಕೊಡುತ್ತಾರೆ.

'ಲೌಕಿಕ ಕಾವ್ಯ'ಗಳಲ್ಲಿ ರಾಮಾಯಣ, ಭಾರತಕ್ಕೆ ಸಂಬಂಧಿಸಿದ ಹಾಡು, ಅರ್ಜುನ ಜೋಗಿ ಹಾಡು, ಮದಕರಿ ನಾಯಕನ ಕತೆಯಂತಹ ಐತಿಹಾಸಿಕ ಕಾವ್ಯಗಳು, ಬಾಲನಾಗಮ್ಮನ ಕತೆಯಂತಹ 'ಜನಪದ ರಮ್ಯ ಕಾವ್ಯಗಳು' 'ಆತ್ಮಾರ್ಪಣೆ'ಯ ಕಾವ್ಯಗಳು ಸೇರಿವೆ. ಇವುಗಳಲ್ಲಿ ಸಹಗಮನ ಮಾಡಿ ಸತಿಯಾದವರ ಕಥನ ಗೀತಗಳು ಮತ್ತು ಕೆರೆಗೆ ಬಲಿಯಾದ ಸ್ತ್ರೀಯರ ಕಥನ ಗೀತಗಳು ಸೇರಿವೆ.

ಜಾನಪದ ಕಾವ್ಯಗಳ ಮಟ್ಟುಗಳಿಗೇ ಒಂದು ಚಿಕ್ಕ ಭಾಗ ಮೀಸಲಾಗಿದೆ. ಇದು ಎಷ್ಟು ಚಿಕ್ಕದೆಂದರೆ, ಬೇರೊಂದು ನಿಬಂಧಕ್ಕೆ ವಸ್ತುವಾಗಬಲ್ಲ ಈ ವಿಷಯವನ್ನು ಕೈಬಿಟ್ಟಿದ್ದರೂ ನಡೆಯುತ್ತಿತ್ತು 'ಉಪಸಂಹಾರ' ಭಾಗದಲ್ಲಿ ತಮ್ಮ ನಿಬಂಧದ ಮುಖ್ಯ ಕಾಣಿಕೆಗಳೇನು ಎಂಬುದನ್ನು ಸೂಕ್ಷ್ಮವಾಗಿ ಹೇಳಿದ್ದಾರೆ. ಅವರ ಮಾತಿನಲ್ಲೇ ಹೇಳುವುದಾದರೆ, ಆ ಕಾಣಿಕೆಗಳು ಹೀಗಿವೆ :

1. ಕನ್ನಡದಲ್ಲಿ ಜಾನಪದ ಶಾಸ್ತ್ರದ ಕಲ್ಪನೆ ಬೆಳೆದು ಬಂದ ಬಗೆ, ಜಾನಪದ ಸಾಹಿತ್ಯ ಸಂಗ್ರಹದಲ್ಲಿ ಕಾಣಬರುವ ಗುಣಾವಗುಣಗಳು.
2. ದಕ್ಷಿಣ ಕರ್ನಾಟಕದ ಜಾನಪದ ಕಾವ್ಯ ಸಂಪ್ರದಾಯಗಳು, ವೃತ್ತಿ ಗಾಯಕರ ಪರಂಪರೆ, ಧಾರ್ಮಿಕ ಹಾಗೂ ಲೌಕಿಕ ಗಾಯಕರ ಬಗೆಗಳು, ಸಾಮಾನ್ಯ ಗಾಯಕರ ಪರಂಪರೆ.
3. ದಕ್ಷಿಣ ಕರ್ನಾಟಕದ ಜಾನಪದ ಕಾವ್ಯಗಳು, ಅವುಗಳ ವೈವಿಧ್ಯ, ಅವುಗಳ ಸ್ವರೂಪ.
4. ದಕ್ಷಿಣ ಕರ್ನಾಟಕದ ಜಾನಪದ ಕಾವ್ಯಗಳ ಪ್ರಕಾರಗಳು, ಮೂಲಕಥೆಯ ಪುನಾರಚನೆ, ಕಲಾತ್ಮಕ ಮೌಲ್ಯವಿವೇಚನೆ, ವಿವಿಧ ಮಟ್ಟುಗಳ ಪರಿಶೀಲನೆ.
5. ದಕ್ಷಿಣ ಕರ್ನಾಟಕದ ಜಾನಪದ ಕಾವ್ಯಗಳ ಉಗಮ, ವಿಕಾಸ, ಪ್ರಸರಣ ಇತ್ಯಾದಿ.

ಜಾನಪದ ಕಾವ್ಯಗಳ ಮೂಲಕಥೆಗಳ ಪುನಾರಚನೆಗೆ ಒಳ್ಳೆಯ ಉದಾಹರಣೆಯಾಗಿ ಮಂಟೇಸ್ವಾಮಿಯ ಕತೆಯನ್ನು ನೋಡಬಹುದು. ಪ್ರಕೃತ ನಿಬಂಧಕ್ಕೆ ಸ್ಪಷ್ಟ ಉದ್ದೇಶಗಳಿವೆ ಮತ್ತು ಅವೆಲ್ಲವೂ ಬಹುಮಟ್ಟಿಗೆ ಈಡೇರಿವೆ.

ಇನ್ನು ಈ ಕೃತಿಯ ಕೆಲವು ವಿವರಗಳನ್ನು ನೋಡಬಹುದು. ಮೊದಲನೆಯದಾಗಿ, ನಿಬಂಧದ ಹೆಸರಿನ ಭಾಗವಾದ 'ಕಾವ್ಯ ಪ್ರಕಾರ' ಎಂಬುದು form ಎಂಬುದನ್ನು ಹೇಳುತ್ತದೆ, ಮತ್ತು form ಎಂಬುದು ಒಂದು ಕೃತಿಯ ಛಂದಸ್ಸಿನಂತಹ ಬಾಹ್ಯರೂಪವನ್ನು ಮುಖ್ಯವಾಗಿ ಅವಲಂಬಿಸಿರುತ್ತದೆ. ಜೀ. ಶಂ.ಪ. ತಮ್ಮ ನಿಬಂಧದಲ್ಲಿ ಬೇರೆ ಬೇರೆ ಕಥನ ಗೀತಗಳನ್ನು ಪ್ರಸ್ತಾಪಿಸಿದ್ದಾರೆ, ಅವುಗಳ 'ಪ್ರಕಾರ' ಗಳನ್ನು (forms) ಅಲ್ಲ. ಜಾನಪದ ಕಾವ್ಯಗಳನ್ನು 'ಕಲಾತ್ಮಕ'ವಾಗಿ ನೋಡುವ ದೃಷ್ಟಿಯನ್ನು ಮಿತಿಗೊಳಿಸಿಕೊಳ್ಳದಿರುವುದರಿಂದ ಕಡಜವನ್ನು ಕುರಿತಂತಹ ಒಗಟಿನ ಬಗ್ಗೆಯೂ ತೀರ ಭಾವುಕವಾಗಿ ಬರೆಯುತ್ತಾರೆ (ಪು. 36). ಪು. 261ರಲ್ಲಿ 'ದೊಂಬಿದಾಸ' ಎಂಬ ಪದದ 'ದೊಂಬಿ'ಯನ್ನು 'ದೊಂಗ'ದಿಂದ (=ತೆಲುಗು. ಕಳ್ಳ) ನಿಷ್ಪತ್ತಿ ಮಾಡಿರುವುದು ಅಸಹಜವಾಗಿದೆ. ಪು. 28ರಲ್ಲಿ 'lore' ಎಂಬರ್ಥದಲ್ಲಿ 'ಸಾಹಿತ್ಯ' ಶಬ್ದವನ್ನು ಬಳಸಲಾಗಿದೆ (Plant lore = ಸಸ್ಯ ಸಾಹಿತ್ಯ, Animal lore = ಪ್ರಾಣಿ ಸಾಹಿತ್ಯ); 'ಸಾಹಿತ್ಯ' ಬದಲು 'ಶಾಸ್ತ್ರ' ಶಬ್ದ ಹೆಚ್ಚು ಉಚಿತವೆಂದು ನಾನು ಬೇರೆ ಕಡೆ ಪ್ರತಿಪಾದನೆ ಮಾಡಿದ್ದೇನೆ (Botany = ಸಸ್ಯ ವಿಜ್ಞಾನ, Plant lore = ಸಸ್ಯ ಶಾಸ್ತ್ರ). 'ಕರಪಲ್ಲ' ಎಂಬುದು 'ಕರಪಲ್ಲವ'ದಿಂದ ಬಂದಿದೆಯೆಂಬ ನನ್ನ ವಾದವನ್ನು ಒಪ್ಪಿಕೊಂಡಿದ್ದಾರೆ (ಪು. 274). ಮತ್ತು ಆ ವಾದವನ್ನು ಸಮರ್ಥಿಸುವ ಹೆಚ್ಚಿನ ಸಾಮಗ್ರಿ ನನಗೆ ಈಚೆಗೆ ದೊರಕಿದೆ. 'ಕರಪಾಲ'ದ ಬಗ್ಗೆ ಮೊತ್ತ ಮೊದಲು ಬರೆದು ಆ ಕಡೆ ಜಾನಪದ ಶಾಸ್ತ್ರಜ್ಞರ ಗಮನ ಸೆಳೆದವರೂ ಅವರೇ. ಪು. 280ರಲ್ಲಿ 'ಜಂಗಮ' ಅಥವಾ ತೆಲುಗು ಜಂಗಮರ ಬಗ್ಗೆ ಪ್ರಸ್ತಾಪಿಸಿದ್ದಾರೆ. ಜೀ. ಶಂ.ಪ. ಅವರ ನಿಬಂಧ ಹೆಚ್ಚಿನ ಅಧ್ಯಯನಗಳಿಗೆ ಹೇಗೆ ಪ್ರಚೋದನೆ ನೀಡುತ್ತದೆ ಎಂಬುದಕ್ಕೆ ಇದೊಂದು ನಿದರ್ಶನ. 'ಪುರಾಣ'ಗಳ ಬಗ್ಗೆ, ಧಾರ್ಮಿಕ ವಿಷಯ, ಇತಿಹಾಸ, ವಲಸೆ, ರಾಜಕೀಯ ಇತಿಹಾಸಗಳನ್ನು ಕುರಿತಂತೆ ಕೆಲಸ ಮಾಡುವವರೂ ಈ ನಿಬಂಧದಿಂದ ಅಲ್ಲಲ್ಲಿ ಮೌಲಿಕ ಸೂಚನೆಗಳನ್ನು ಪಡೆಯಬಹುದು.

ಇಡೀ ನಿಬಂಧ ತನ್ನ ಗಾತ್ರ ಮತ್ತು ಯೋಗ್ಯತೆಗಳಿಂದಾಗಿ ಜಾನಪದ ಶಾಸ್ತ್ರ ಸಂಶೋಧನೆಯಲ್ಲಿ ಒಂದು ಮೈಲುಗಲ್ಲಾಗಿ, ಮುಂದಿನ ಸಂಶೋಧಕರಿಗೆ ದಾರಿ ದೀಪವಾಗಿ ನಿಲ್ಲುತ್ತದೆ. ಅಮಿತ ಶ್ರದ್ಧೆ, ಉತ್ಸಾಹ, ಶ್ರಮ, ಚಿಂತನೆಗಳಿಂದ ಮೂಡಿ ಬಂದಿರುವ ಈ ಕೃತಿ ಈಚಿನ ಪಿಎಚ್.ಡಿ. ನಿಬಂಧಗಳಲ್ಲಿ ಅತ್ಯಂತ ಗಮನಾರ್ಹವಾದುದು. ಪುಸ್ತಕದಲ್ಲಿ ಕೊಟ್ಟಿರುವ ಚಿತ್ರಗಳು ಶೋಭೆಯನ್ನು ಹೆಚ್ಚಿಸಿವೆ ಮತ್ತು ಕೃತಿಯನ್ನು ಹೆಚ್ಚು ಅರ್ಥಪೂರ್ಣವಾಗಿಸಿವೆ.

**ಲಕ್ಷ್ಮೀಶನ ಜೈಮಿನಿ ಭಾರತ** ಡಾ॥ ವಾಮನ ಬೇಂದ್ರೆ ಅವರ ಪಿಎಚ್.ಡಿ. ನಿಬಂಧ. ಆರಂಭದಲ್ಲಿ ಇದನ್ನು "ಗ್ರಂಥ ಸಂಪಾದನೆ ಮತ್ತು ತುಲನಾತ್ಮಕ ದೃಷ್ಟಿಯಿಂದ ಸಂಸ್ಕೃತ, ಮರಾಠಿ ಮತ್ತು ಕನ್ನಡ ಜೈಮಿನಿ ಭಾರತಗಳನ್ನು (ಅಶ್ವಮೇಧಿಕ ಪರ್ವ) ಅನುಲಕ್ಷಿಸಿ ಸಿದ್ಧಗೊಳಿಸಿರುವ ಒಂದು ಸಂಶೋಧನಾತ್ಮಕ ಪ್ರಬಂಧ" ಎಂದು ಲೇಖಕರು ಕರೆದಿದ್ದಾರೆ.

ಇದರಲ್ಲಿ ಎರಡು ಭಾಗಗಳಿವೆ: ಭಾಗ ಒಂದರಲ್ಲಿ ಕವಿ ಮತ್ತು ಕಾವ್ಯ, ಕಾವ್ಯ ವಸ್ತು, ಪಾತ್ರ, ಕಾವ್ಯ ಸಮೀಕ್ಷೆ, ಕನ್ನಡ ಕಾವ್ಯಲೋಕದಲ್ಲಿ ಕವಿ ಲಕ್ಷ್ಮೀಶನ ಸ್ಥಾನ ಎಂಬ ಉಪ ಅಧ್ಯಾಯಗಳಿವೆ. ಭಾಗ ಎರಡರಲ್ಲಿ ತುಲನಾತ್ಮಕ ಅಭ್ಯಾಸ ಹಸ್ತಪ್ರತಿಗಳ ವಿಚಾರ ಎಂಬ ಉಪ ಅಧ್ಯಾಯಗಳ ಜೊತೆ ಅನುಬಂಧಗಳಿವೆ. ಮೊದಲ ಭಾಗ ಕವಿ ಕೃತಿಯ ಸಾಹಿತ್ಯಾಭ್ಯಾಸವನ್ನು ಕುರಿತದ್ದಾದರೆ, ಎರಡನೆಯದು ಕೃತಿಯ ತೌಲನಿಕ ಅಭ್ಯಾಸ, ಗ್ರಂಥ ಸಂಪಾದನೆ ಕುರಿತದ್ದಾಗಿದೆ.

ಲಕ್ಷ್ಮೀಶ ಕವಿಯ ಕಾಲ, ದೇಶಗಳೆರಡೂ ವಿವಾದಗ್ರಸ್ತ ಸಂಗತಿಗಳು. ಕೃತಿಕಾರರು ಅವನ ದೇಶದ ಬಗ್ಗೆ ಸಾಕಷ್ಟು ವಿಚಾರಮಾಡಿ, ಸ್ಥಳಗಳಿಗೆ ಪ್ರತ್ಯಕ್ಷ ಭೇಟಿಕೊಟ್ಟು ಚಿಕ್ಕಮಗಳೂರು ಜಿಲ್ಲೆಯ ದೇವನೂರೇ ಕವಿಯ ಸ್ಥಳವೆಂದು ತೀರ್ಮಾನಿಸಿದ್ದಾರೆ. ಕಾಲವನ್ನು ಕುರಿತಂತೆ, ಅವನು ಕ್ರಿ.ಶ. 1510-15ರ ಹೊತ್ತಿನಲ್ಲಿದ್ದ ಎಂಬ ತೀರ್ಮಾನಕ್ಕೆ ಬಂದಿದ್ದಾರೆ. (ಲಕ್ಷ್ಮೀಶನ ಕಾಲ, ದೇಶಗಳಿಗೆ ಸಂಬಂಧಿಸಿದಂತೆ ಸಿ.ಕೆ. ನಾಗರಾಜರಾಯರು ಪ್ರಕಟಿಸಿರುವ ಪುಸ್ತಕವನ್ನು ವಾಮನ ಬೇಂದ್ರೆಯವರು ನೋಡಿದಂತೆ ಕಾಣುವುದಿಲ್ಲ) ವಿರೂಪಾಕ್ಷ ಪಂಡಿತನ (ಕ್ರಿ.ಶ. 1584) ಕೃತಿಗೂ ಜೈಮಿನಿ ಭಾರತಕ್ಕೂ ದಟ್ಟ ಹೋಲಿಕೆಗಳಿದ್ದು, ಅವರಲ್ಲಿ ಯಾರು ಯಾರಿಂದ ಪ್ರಭಾವಿತರಾದರು ಎಂಬುದರ ಚರ್ಚೆ (ಪು. 64-6) ಸಾಲದು.

ಜೈಮಿನಿ ಭಾರತದ ಕಥಾವಸ್ತುವಿನ ವಿಶ್ಲೇಷಣೆಯಲ್ಲಿ ಲೇಖಕರು ಸಾಂಪ್ರದಾಯಕ ಅಲಂಕಾರಶಾಸ್ತ್ರ ವಿಧಾನವನ್ನು ಅನುಸರಿಸಿರುವುದು ಒಂದು ವಿಶೇಷ ಸಂಗತಿ. ನಮ್ಮ ಪ್ರಾಚೀನರ ಕಾವ್ಯ ವಿವೇಚನಾ ಪದ್ಧತಿ ಇಂದಿನ ವಿಮರ್ಶೆಯ ವ್ಯಾಪ್ತಿಯಿಂದ ಹೊರಗಾಗಿ ಬಿಟ್ಟಿದೆ. ಡಾ. ವಾಮನ ಬೇಂದ್ರೆ ತಮಗೆ ಆಧುನಿಕ ವಿಮರ್ಶೆಯ ರೀತಿ ನೀತಿಗಳು ಗೊತ್ತಿದ್ದರೂ, ಅದನ್ನೂ ಅಳವಡಿಸಿಕೊಂಡು ಭಾರತೀಯವಾದ ರೀತಿಯಲ್ಲಿ ಕೃತಿ ವಿವೇಚನೆ ಮಾಡಿರುವುದು ಒಂದು ಹೊಸ ಪ್ರಯೋಗವೆಂದೇ ಹೇಳಬೇಕು. ಆದರೆ ಈ ಪ್ರಯೋಗವನ್ನು ಸಹ್ಯವಲ್ಲದ ತುದಿಗೆ ಕೊಂಡೊಯ್ದಿರುವುದನ್ನು ಮೆಚ್ಚುವುದು ಸ್ವಲ್ಪ ಕಷ್ಟವಾಗುತ್ತದೆ. ಉದಾಹರಣೆಗೆ, ವೃಷಭಪ್ರಾಸ ಇತ್ಯಾದಿ ಪ್ರಾಸಗಳಿಗೆ ಉದಾಹರಣೆಗಳನ್ನು ಕೊಡುವುದು, ಎಲ್ಲ ಅಲಂಕಾರಗಳನ್ನು ಪಟ್ಟಿ ಮಾಡುವುದು ಇವನ್ನು ಸ್ವಲ್ಪ ಮಿತಿಯಲ್ಲಿಡಬಹುದಿತ್ತು. ಪ 344-45ರ ಮಧ್ಯೆ ಕೊಟ್ಟಿರುವ ಚಿತ್ರಗಳು ಕಾವ್ಯ ವಸ್ತುವಿನ ಸಾಂಪ್ರದಾಯಕ ವಿಶ್ಲೇಷಣೆಯನ್ನು ತೋರುತ್ತವೆ. ಇವು ನಮ್ಮ ಇಂದಿನ ಅಭಿರುಚಿಗೆ ಹೊಂದುವುದಿಲ್ಲವೆಂಬ ಕಾರಣಕ್ಕಾಗಿ ಅಂತಹ ವಿಶ್ಲೇಷಣೆಯನ್ನು ಕೈಬಿಡಬೇಕಾಗಿಲ್ಲವಾದರೂ, ಆಧುನಿಕ ವಿಮರ್ಶೆ ಮತ್ತು ಪ್ರಾಚೀನ ಭಾರತೀಯ ಕಾವ್ಯ ಮೀಮಾಂಸೆಯ ರೀತಿಗಳೆರಡನ್ನೂ ಸಮನ್ವಯಗೊಳಿಸಬಲ್ಲ ಒಂದು ಹೊಸ ವಿಧಾನ ನಮ್ಮಲ್ಲಿ ಇನ್ನೂ ರೂಪುಗೊಳ್ಳಬೇಕಾಗಿದೆ. 'ಕನ್ನಡ ಕಾವ್ಯ ಲೋಕದಲ್ಲಿ ಲಕ್ಷ್ಮೀಶನ ಸ್ಥಾನ' ಎಂಬ ಅಧ್ಯಾಯದ ಕೊನೆಯ ವಾಕ್ಯಗಳು ಹೀಗಿವೆ - "ಕವಿ ಲಕ್ಷ್ಮೀಶನು ಪಂಪನ ಎತ್ತರಕ್ಕೆ ಏರುವುದಿಲ್ಲ, ಆದರೆ ಕುಮಾರವ್ಯಾಸನ ಸರಿ ಜೋಡಿಯಾಗಿ ನಿಲ್ಲಬಲ್ಲ ಮಹಾಕವಿ. ಜೈಮಿನಿ ಭಾರತವು ವಿದಗ್ಧ ಮಹಾಕಾವ್ಯವಲ್ಲ, ಪಂಡಿತ - ಪಾಮರ ರಂಜಕ ಮಹಾಕಾವ್ಯಗಳಲ್ಲಿ ಒಂದು ಶ್ರೇಷ್ಠಕೃತಿ. ಯಕ್ಷಗಾನ ಸಾಹಿತ್ಯಕ್ಕೆ ಗುರುಸ್ಥಾನವಲ್ಲಿದ್ದ

ಮಹಾಕೃತಿಯಾಗಿದೆ". ಕುಮಾರವ್ಯಾಸನು ಪಂಪನಿಗಿಂತ ಕೆಳಗಿನ ಕವಿ ಎಂಬ ಧ್ವನಿ ಲೇಖಕರಿಗೆ ಅರಿವಿಲ್ಲದೆಯೇ ಹೊರಟಿದೆ. 'ಪಂಡಿತ'ರಿಗೂ ರಂಜಕವಾಗಿರುವ ಮಹಾಕಾವ್ಯ 'ವಿದಗ್ಧ' ಏಕೆ ಅಲ್ಲ ? ಲಕ್ಷ್ಮೀಶನ ಸ್ಥಾನ ಕನ್ನಡ ಕಾವ್ಯಲೋಕದಲ್ಲಿ ಯಾವುದು ಎಂಬುದರ ನಿರ್ಣಯದಲ್ಲಿ ವಾಮನ ಬೇಂದ್ರೆಯವರು ಯಶಸ್ವಿಯಾಗಿದ್ದಾರೆಂದು ಅನ್ನಿಸುವುದಿಲ್ಲ.

'ತುಲನಾತ್ಮಕ ಅಭ್ಯಾಸ' ಎಂಬುದು ಪ್ರೌಢವಾಗಿದೆ. ಕನ್ನಡ ಜೈಮಿನಿ ಭಾರತವನ್ನು ಮೂಲ ಸಂಸ್ಕೃತ ಜೈಮಿನಿ ಭಾರತದ ಜೊತೆ ವಿವರವಾಗಿಯೇ ಹೋಲಿಸಿ ನೋಡಿದ್ದಾರೆ. ಜೊತೆಗೆ ತಿಮ್ಮಣ್ಣ ಕವಿಯ ಕನ್ನಡ ಭಾರತ, ತೆಲುಗು ಮರಾಠಿ ಜೈಮಿನಿ ಕಾವ್ಯಗಳನ್ನು ಕನ್ನಡ ಕೃತಿಯೊಂದಿಗೆ ಹೋಲಿಸಿದ್ದಾರೆ. "ಈ ತುಲನಾತ್ಮಕ ಅಭ್ಯಾಸದಿಂದ ಪ್ರತಿಯೊಂದು ಕಾವ್ಯದ ಗುಣವು ನಮಗೆ ಗೊತ್ತಾಗುತ್ತದೆ. ಎಲ್ಲ ಕವಿಗಳು ಸ್ವತಂತ್ರ ಪ್ರತಿಭೆಯುಳ್ಳವರಾಗಿದ್ದಾರೆ. ಪಿಲ್ಲಲಮರ್ರಿ ಪಿನವೀರಭದ್ರನ ಉಪಮೆ, ತಿಮ್ಮಣ್ಣ ಕವಿಯ ಸ್ವಭಾವೋಕ್ತಿ, ಶ್ರೀಧರನ ರೂಪಕ, ಕವಿ ಲಕ್ಷ್ಮೀಶನ ಕಾರಣೋತ್ಪ್ರೇಕ್ಷೆಗಳಿಗೆ ಆ ಸಾಹಿತ್ಯದಲ್ಲಿ ಮಹತ್ವದ ಸ್ಥಾನವಿದೆ" - ಇದು ಲೇಖಕರ ತೀರ್ಮಾನ.

ಲಕ್ಷ್ಮೀಶನ ಕೃತಿಯ ಹಸ್ತಪ್ರತಿಗಳು ಬಹುಸಂಖ್ಯೆಯಲ್ಲಿ ದೊರಕುತ್ತವೆ ಎನ್ನುವುದು ಅದರ ಜನಪ್ರಿಯತೆಗೆ ಸಾಕ್ಷಿ ಮತ್ತು ಅದರಲ್ಲಿ ಪಾಠಾಂತರಗಳ ಗೊಂದಲವೂ ಉಂಟು. ಈ ಹೊತ್ತಿಗೂ ಜೈಮಿನಿ ಭಾರತದ ಒಂದು ಅಧಿಕೃತ ಆವೃತ್ತಿ ಹೊರಬರದಿರುವುದು ಆಶ್ಚರ್ಯದ ಸಂಗತಿಯೇ ಸರಿ. ಡಾ॥ ವಾಮನ ಬೇಂದ್ರೆಯವರು ಜೈಮಿನಿ ಭಾರತದ ಐವತ್ತಕ್ಕೆ ಮೇಲ್ಪಟ್ಟು ಹಸ್ತಪ್ರತಿಗಳನ್ನು ಪರಿಶೀಲಿಸಿ ಆ ಕೃತಿಯ ಸಂಪಾದನೆಯ ಸಮಸ್ಯೆಗಳನ್ನು ಎತ್ತಿಹಿಡಿದಿದ್ದಾರೆ. ಅವುಗಳಲ್ಲಿ ಹನ್ನೊಂದು ಪ್ರತಿಗಳ ವಿವರಗಳನ್ನು ಕೊಟ್ಟಿದ್ದಾರೆ. ಕೆಲವು ಪದ್ಯಗಳ ಪಾಠಾಂತರಗಳನ್ನು ಚರ್ಚಿಸಿ ಮೂಲ ಪಾಠನಿರ್ಣಯ ಮಾಡಲು ಯತ್ನಿಸಿದ್ದಾರೆ. ಕೆಲವು ಕಡೆ ಸರಿಯಾದ ಪಾಠವನ್ನು ನಿರ್ಣಯಿಸಿದ್ದಾರೆ (ಉದಾ 'ಅಭಿಜ್ಞೆ'. ಪು. 519). ಆದರೆ ಇನ್ನು ಕೆಲವು ಕಡೆ ಸಮಸ್ಯೆಯನ್ನು ಸರಳಗೊಳಿಸಿಕೊಳ್ಳುವುದರಿಂದ ಓದುಗರನ್ನು ದಾರಿತಪ್ಪಿಸುತ್ತಾರೆ (ಉದಾ : 'ತಾಂ ಡಾವರದ ಕೋಪದಿಂ..." ಪು. 521). ಅವರು ಒಪ್ಪಿಕೊಳ್ಳುವ 'ತಾಂ ಡಾವರದ ಕೋಪದಿಂದ ಮೂಡಿಗೆಯೊಳಾಗ್ನೇಯ ಮಾರ್ಗಣವನುಗಿದು' ಎಂಬ ಪಾಠ ವಾರ್ಧಕ ಷಟ್ಪದಿಯೊಂದರ ಮೂರನೆಯ ಸಾಲು. ಆದರೆ ಅದು ಬರಿಯ ಸುಲಭ ಪಾಠ. ಕೆಲವು ಕಡೆ ಸಂಸ್ಕೃತ ಜೈಮಿನಿ ಭಾರತದ ಪಾಠವನ್ನು ಕನ್ನಡ ಪಾಠ ನಿರ್ಣಯಕ್ಕೆ ಬಳಸಿರುವುದು ಯೋಗ್ಯವಾಗಿದೆ. ಜೈಮಿನಿಭಾರತದ ಮೊದಲ ಮತ್ತು ಕೊನೆಯ ಸಂಧಿಗಳನ್ನು ಮಾದರಿಗಾಗಿ ಸಂಪಾದಿಸಿ ಕೊಟ್ಟಿದ್ದಾರೆ. ಆದರೆ ಅಲ್ಲೆಲ್ಲ 'ಎಸವ' (=ಎಸೆವ), 'ಕಡಮು' (=ಕಡೆಮು), 'ಕಜಿದ' (=ಕಜೆದ) 'ತೊಜಿಮು' (=ತೊಜೆಮು) ಎಂಬಂತಹ ರೂಪಗಳು ತೀರ ಅಸಮರ್ಥನೀಯವಾಗುತ್ತವೆ. ಜೈಮಿನಿಭಾರತದ ಬಗ್ಗೆ ಪೂರ್ಣ ಅಧ್ಯಯನ ಮಾಡಿ ನಿಷ್ಣಾತರಾಗಿರುವ ವಾಮನ ಬೇಂದ್ರೆಯವರು ಆ ಕೃತಿಯ ಶಾಸ್ತ್ರೀಯ ಸಂಪಾದನೆಯನ್ನು ಮಾಡಿ ಪರಿಷ್ಕೃತ ಪಾಠವನ್ನು ಹೊರತರಬೇಕೆಂಬ ಆಸೆಯನ್ನು ಇಟ್ಟುಕೊಂಡಿದ್ದೇವೆ.

'ಪಾಯ'ಗಳ (=ಪದ್ಧತಿ?) 'ತಿಟ್ಟು'ಗಳ ವ್ಯತ್ಯಾಸವನ್ನು ತೋರಿದ್ದಾರೆ. ದಕ್ಷಿಣ ಭಾರತದ ಎಲ್ಲ ಜನಪದ ರಂಗಭೂಮಿಗಳೂ 'ದ್ರಾವಿಡ ಮೂಲ'ದವು ಎಂಬ ನಿರ್ಧಾರಕ್ಕೆ ಬಂದಿದ್ದಾರೆ.

ಮೂಡಲಪಾಯ, ಯಕ್ಷಗಾನ, ಬಯಲಾಟ ದಕ್ಷಿಣ ಕರ್ನಾಟಕದಲ್ಲಿ ಪ್ರಚಲಿತವಾಗಿರುವ ಜನಪದ ನಾಟಕ ಪ್ರಭೇದ; ಇದೇ ಈ ನಿಬಂಧದ ಬಹು ಮುಖ್ಯ ಭಾಗ ಮತ್ತು ಈ ಬಗ್ಗೆ ಲೇಖಕರು ವ್ಯಾಪಕವಾಗಿ ಕ್ಷೇತ್ರಕಾರ್ಯವನ್ನು ಮಾಡಿದ್ದಾರೆ. ವಸ್ತು, ರಂಗಸ್ಥಳ, ವಾದ್ಯ, ವೇಷಭೂಷಣ, ಆಟ ಕಲಿಸುವ ವಿಧಾನಗಳ ಬಗ್ಗೆ ಸಾಕಷ್ಟು ಮಾಹಿತಿ ಸಂಗ್ರಹಿಸಿದ್ದಾರೆ. ಉದ್ದಕ್ಕೂ ಉಳಿದ ಯಕ್ಷಗಾನ ಬಯಲಾಟಗಳಿಗೂ ಮೂಡಲಪಾಯಕ್ಕೂ ಇರುವ ಭೇದವನ್ನು ಗಮನಿಸಿದ್ದಾರೆ. ಉಚಿತವಾದ ಚಿತ್ರಗಳನ್ನು ಕೊಟ್ಟಿದ್ದಾರೆ. ಸೂತ್ರದ ಗೊಂಬೆಯಾಟದ ತೊಗಲು ಬೊಂಬೆಯಾಟದ ಬಗ್ಗೆಯೂ ಇದೇ ಮಾತನ್ನು ಹೇಳಬಹುದು. ಇಂತಹ ನಿಬಂಧಗಳಲ್ಲಿ "ಆದಿಮಾನವ ತನ್ನ ಬದುಕನ್ನು ಚೌಕಟ್ಟಿಗೆ ಒಳಪಡಿಸಿಕೊಳ್ಳುವ ಪ್ರಾರಂಭದ ದಿನಗಳಲ್ಲಿ ಇದೂ (= ಸೂತ್ರದ ಬೊಂಬೆಯಾಟವೂ) ತನ್ನ ಹುಟ್ಟನ್ನು ಪಡೆದಂತೆ ತೋರುತ್ತದೆ" ಎಂಬಂತಹ ಮಾತುಗಳನ್ನು ಬಿಡುವುದು ಒಳ್ಳೆಯದು. ಖಚಿತವಾಗಿ ಗೊತ್ತಿಲ್ಲದಿರುವ ಸಂಗತಿಗಳ ಬಗ್ಗೆ ಏಕೆ ಇಂತಹ ವ್ಯರ್ಥ ಊಹೆಗಳು ! ಮೇಲಿನ ಮೂರು ಜನಪದ ರಂಗಭೂಮಿಗಳನ್ನು ಕುರಿತಂತೆ ಸಮಗ್ರವಾದ ಮಾಹಿತಿ ಇಲ್ಲಿ ದೊರಕುತ್ತದೆಯೆನ್ನುವುದು ಈ ಕೃತಿಯ ಮಹತ್ವದಾಗಿದೆ.

ಉಪಸಂಹಾರ ಭಾಗದಲ್ಲಿ, ಲೇಖಕರು ಈ ನಿಬಂಧದಲ್ಲಿ ನಾಲ್ಕು ನಿರ್ಣಯಗಳಿಗೆ ಬರಲಾಗಿದೆ ಎಂದಿದ್ದಾರೆ (ಪು. 169). ದುರದೃಷ್ಟದ ಸಂಗತಿಯೆಂದರೆ, ಆ ನಾಲ್ಕೂ ನಿರ್ಣಯಗಳು ಅವರವಲ್ಲ. ಅವರೇ ತಮ್ಮ ನಿಬಂಧದಲ್ಲಿ ಅಲ್ಲಲ್ಲಿ ಕೊಟ್ಟಿರುವ ಇಂಗ್ಲೀಷ್ ಉಲ್ಲೇಖಗಳು ಆ ಮಾತುಗಳನ್ನು ಹಿಂದಿನವರು ಆಡಿ ಬಿಟ್ಟಿದ್ದಾರೆ ಎಂಬುದನ್ನು ಹೇಳುತ್ತವೆ. ಉದಾಹರಣೆಗೆ, "ಜನಪದ ನಾಟಕಗಳಿಗೆ ಜನಪದ ನೃತ್ಯವೇ ಮೂಲ" ಎಂಬ ನಿರ್ಣಯಕ್ಕೆ ಪು. 14ರಲ್ಲಿನ Encyclopaedia of the Social Sceinces ಎಂಬ ವಿಶ್ವಕೋಶದ ಲೇಖನವನ್ನೂ, ಮೂರನೆಯ "ಮಾನವ ರಂಗಭೂಮಿಗೆ ಸೂತ್ರದ ಬೊಂಬೆಯಾಟವೇ ಮೂಲ" ಎಂಬ ನಿರ್ಣಯಕ್ಕೆ ಪು. 18ರ ಪಿಷಲ್ ಅವರ ಮಾತನ್ನೂ, "ಮೂಡಲಪಾಯ ಯಕ್ಷಗಾನ ಬಯಲಾಟದಲ್ಲಿ ಬಯಲಾಟದ ಪ್ರಾಚೀನ ರೂಪವನ್ನೂ ಕಾಣಬಹುದು" ಎಂಬ 'ನಿರ್ಣಯಕ್ಕೆ' ಪು. 27ರ ಎಚ್.ಕೆ. ರಂಗನಾಥ್ ಅವರ ಮಾತನ್ನೂ ಗಮನಿಸಬಹುದು. ದಕ್ಷಿಣ ಭಾರತದ ಜನಪದ ರಂಗಭೂಮಿ ಮುಖ್ಯವಾಗಿ ದ್ರಾವಿಡ ಮೂಲದ್ದು ಎಂಬ ಮಾತನ್ನು ಆಗಲೇ ಯಾರೋ ಹೇಳಿದ್ದರಲ್ಲಿ ಆಶ್ಚರ್ಯವಿಲ್ಲ. ಎಂದರೆ, ನಿಬಂಧಕಾರರು ತಮ್ಮ ನಿಬಂಧದ ಹೊಸ ಅಂಶಗಳನ್ನು ತಮ್ಮ ನಿರ್ಣಯದಲ್ಲಿ ಎತ್ತಿ ತೋರಿಸಿಲ್ಲವೆಂಬುದು ಸ್ವಯಂವೇದ್ಯವಾಗುತ್ತದೆ.

ಲೇಖಕರು ತಮ್ಮ ನಿಬಂಧವನ್ನು ಬೇರೆಯವರ ಮಾತುಗಳಿಂದ ತುಂಬಿಸಿದ್ದಾರೆ. ಅಸಗತ್ಯವಾದ ಕಡೆ ಉಲ್ಲೇಖಗಳನ್ನು ಕೊಡುತ್ತಾರೆ. ಇಂಗ್ಲೀಷ್ ಭಾಗಗಳಲ್ಲಂತೂ ತಪ್ಪುಗಳು ಹೇರಳವಾಗಿವೆ. ಅಚ್ಚಿನ ತಪ್ಪುಗಳೂ ಸಾಕಷ್ಟಿವೆ. ನಮ್ಮಲ್ಲಿ ಪಿಎಚ್.ಡಿ ನಿಬಂಧಗಳನ್ನು

ಬರೆಯುವವರು ತಮ್ಮ ಕಾರ್ಯವನ್ನು ಶ್ರದ್ಧೆಯಿಂದ ಒಂದು ಶಿಸ್ತಿಗೆ ಒಳಪಟ್ಟು ಸಿದ್ಧಪಡಿಸದಿದ್ದರೆ ಇಂತಹ ದೋಷಗಳು ಘಟಿಸುತ್ತವೆ. ಮುಖ್ಯವಾಗಿ ಮೂಡಲಪಾಯ ಯಕ್ಷಗಾನದ ಬಗ್ಗೆ ಮಾಹಿತಿ ಸಂಗ್ರಹವಾಗಿದೆಯೆಂಬುದು ಈ ನಿಬಂಧದ ಪರವಾಗಿ ಹೇಳಬಹುದಾದ ಒಂದು ಮಾತು.

**ಕಮ್ಮಟದ ಕಿಡಿಗಳು** ಎಂಬ ಹಂಪ. ನಾಗರಾಜಯ್ಯನವರ ಪುಸ್ತಕದಲ್ಲಿ 'ಸಂಶೋಧನಾತ್ಮಕ ಲೇಖನಗಳು' (ಒಟ್ಟು ನಲವತ್ತೈದು) ಇವೆಯೆಂದು ಅವು "ಮುಖ್ಯವಾಗಿ ಶಬ್ದಕೋಶ ಸಿದ್ಧತೆಯಲ್ಲಿ ಕೆಲಸ ಮಾಡುವವರಿಗೆ.... ಸಾಕಷ್ಟು ಮಾಹಿತಿ ಒದಗಿಸುತ್ತವೆ"ಯೆಂದು ಮುನ್ನುಡಿಯಲ್ಲಿ ಹೇಳಿಕೊಳ್ಳಲಾಗಿದೆ. ಪುಸ್ತಕದ ಹೆಸರು ವಾಸ್ತವವಾಗಿ ಪ್ರಬುದ್ಧ ಕರ್ಣಾಟಕ ಪತ್ರಿಕೆಯ ಒಂದು ಸ್ಥಿರ ಶೀರ್ಷಿಕೆಯದೇ ಆಗಿದ್ದು ಅದನ್ನು ಅಲ್ಲಿಂದ ಎತ್ತಿಕೊಂಡು ಹಾಗೆ ಎತ್ತಿಕೊಂಡದ್ದನ್ನು ಎಲ್ಲೂ ಸ್ಮರಿಸದೆ ಈ ಪುಸ್ತಕಕ್ಕೆ ಬಳಸಿಕೊಂಡಿರುವುದರ ಔಚಿತ್ಯವನ್ನು ಪ್ರಶ್ನಿಸಬೇಕೆನ್ನಿಸುತ್ತದೆ.

ಇಲ್ಲಿಯ ಲೇಖನಗಳಲ್ಲಿ ಇಪ್ಪತ್ತೊಂದು ಲೇಖನಗಳು ಶಬ್ದಾರ್ಥಕ್ಕೆ ಸಂಬಂಧ ಪಟ್ಟುವಾಗಿವೆ, ಮೂರು ಕವಿ ಕಾಲ ವಿಚಾರಕ್ಕೆ, ಇನ್ನು ಕೆಲವು ಶಬ್ದಕೋಶಕ್ಕೆ ಕವಿಗಳ ಕಾಣಿಕೆಗೆ ಸಂಬಂಧಿಸಿವೆ. ಕವಿಚರಿತೆಗೆ ತಿದ್ದುಪಡಿ ಎಂಬ ಎರಡು ಲೇಖನಗಳು ಇವೆ. ಹೀಗೆಯೇ ಪಾಠಾಂತರ ಸಮಸ್ಯೆ, ಕವಿಗಳಿಗೆ ಸಂಬಂಧಿಸಿದ ಸಾಮಾನ್ಯ ವಿಚಾರ, ತೌಲನಿಕ ಅಧ್ಯಯನ ಹೀಗೆ ಬೇರೆ ಬೇರೆ ವಿಷಯಗಳಿಗೆ ಸಂಬಂಧಿಸಿದ ಲೇಖನಗಳಿವೆ. "ತೀ. ನಂ. ಶ್ರೀ. ಯವರ ಅಪ್ರಕಟಿತ ಕವನ"ವೆನ್ನುವುದೂ ಇಲ್ಲಿ 'ಸಂಶೋಧನ ಲೇಖನ'ವಾಗಿ ಸೇರಿದೆ. ತೀ.ನಂ.ಶ್ರೀ.ಯವರು ತಿರುವನಂತಪುರದಲ್ಲಿ ಕೆ.ಎಸ್. ನರಸಿಂಹಸ್ವಾಮಿಯವರ ಪದ್ಯವೊಂದನ್ನು ಇಂಗ್ಲೀಷಿಗೆ ಅನುವಾದಿಸಿದ ವಿಷಯವನ್ನು ಹೇಳಿ, "ತೀ.ನಂ. ಶ್ರೀ.ಯವರು ಮಾಡಿದ ಇಂಗ್ಲೀಷ್ ಅನುವಾದವನ್ನು ಕನ್ನಡದ ಮೂಲ ಪದ್ಯದೊಡನೆ ಇಲ್ಲಿ ಕೊಟ್ಟಿದೆ" ಎಂದು ಸೂಚಿಸಿದ್ದರೂ ಇಂಗ್ಲೀಷ್ ಅನುವಾದವೂ ಇಲ್ಲ, ಕನ್ನಡದ ಮೂಲವೂ ಇಲ್ಲಿಲ್ಲ. "ಕಮ್ಮಟದ ಕಿಡಿಗಳು" ಪುಸ್ತಕದ ಹಿಂದೆ ಕೆಲಸ ಮಾಡಿರುವ ಎಚ್ಚರಗೇಡಿತನಕ್ಕೆ ಇದೊಂದೇ ಉದಾಹರಣೆ ಸಾಕು.

ವಾಸ್ತವ ಸಂಗತಿಯೆಂದರೆ ಈ ಪುಸ್ತಕದಲ್ಲಿ ಯಾವುದೂ ನಿಜವಾದ ಸಂಶೋಧನಾತ್ಮಕ ಲೇಖನವಿಲ್ಲ. ಇದಕ್ಕೆ ಕಾರಣ, ಲೇಖಕರಿಗೆ ಇರುವ ವೈಜ್ಞಾನಿಕ ದೃಷ್ಟಿಯ ಅಭಾವ. ಮೊದಲ ಲೇಖನ 'ಅತ್ತಪರ: ಶಬ್ದಾರ್ಥ ಜಿಜ್ಞಾಸೆ' ಎಂಬುದನ್ನೇ ನೋಡಿ. 'ಅತ್ತಪರ' ಎಂದರೆ ಗುರಾಣಿ ಎಂದರ್ಥ. ಕೇಶಿರಾಜನೇ 'ಕಾಳೆಗವಲಗೆ' ಎಂಬ ಅರ್ಥವನ್ನು ಸೂಚಿಸಿಬಿಟ್ಟಿದ್ದಾನೆ. ಕನ್ನಡ ನಿಘಂಟಿನಲ್ಲಿ ಅದರ ನಿಷ್ಪತ್ತಿಗೆ ಪ್ರಶ್ನಾರ್ಥಕ ಚಿಹ್ನೆ ಹಾಕಿರುವುದನ್ನು ನಾಗರಾಜಯ್ಯನವರು ಪ್ರಶ್ನಿಸಿ, ಅದನ್ನು 'ಹಸ್ತಫಲಕ'ದಿಂದ ನಿಷ್ಪನ್ನ ಮಾಡಬಹುದೆನ್ನುತ್ತಾರೆ. ನಿಷ್ಪತ್ತಿ ಅಷ್ಟು ಸುಲಭವಾಗಿದ್ದರೆ ನಿಘಂಟಿನವರೇ ಅದನ್ನು ಸೂಚಿಸುತ್ತಿದ್ದರು. ಸಂಸ್ಕೃತ. ಹಸ್ತಫಲಕ, ಪ್ರಾ. ಹತ್ಥಫಲಅ, ಕ. ಅತ್ತಪರ : ಇದು ಅವರು ಸೂಚಿಸುವ ನಿಷ್ಪತ್ತಿ.

'ಪಾಇಅಸದ್ದ ಮಹಣ್ಣವೊ' ತೆಗೆದು ನೋಡಿದರೆ ಅಲ್ಲಿ ಸುಲಭವಾಗಿ 'ಫರಅ' ಶಬ್ದವು ಕಾಣುತ್ತದೆ. 'ಫರಅ'ದ ಮೂಲ 'ಸ್ಫರಕ' (= Shield). 'ಅತ್ತಪರ'ದ ಉತ್ತರಾರ್ಧ 'ಫರಅ' ಎಂಬಲ್ಲಿ ಅನುಮಾನವಿಲ್ಲ. ಪೂರ್ವಾರ್ಧವು 'ಹಸ್ತ'ದ ಪ್ರಾಕೃತ ರೂಪ 'ಹತ್ತ'ವಿರಬಹುದು ಅಥವಾ 'ಅಸ್ತ್ರ'ದ ಪ್ರಾಕೃತರೂಪ 'ಅತ್ಥ'ವಿರಬಹುದು. ಕನ್ನಡ ನಿಘಂಟಿನ ಮೊದಲ ಸಂಪಾದಕರು ಅವಸರದಿಂದ ಏನೋ ತಪ್ಪು ನಿಷ್ಪತ್ತಿ ಹೇಳುವ ಬದಲು ಪ್ರಶ್ನಾರ್ಥಕ ಚಿಹ್ನೆ ಹಾಕಿದ್ದರೆ, ಅದನ್ನು ತಿದ್ದಲು ಹೊರಟಾಗ ನಾವೂ 'ಹಸ್ತಫಲಕ'ದಿಂದ ಅದನ್ನು ಹೊರಡಿಸುವಂತಹ ಸಾಮಾನ್ಯ ತಪ್ಪು ಮಾಡಬೇಕೆ? 'ಫರಅ' (ಸ್ಫರಕ)ವು 'ಪಾಇಅಸದ್ದ ಮಹಣ್ಣವೊ'ದಲ್ಲಿಯೇ ದೊರಕುವಾಗ ಅದನ್ನು ನೋಡಬೇಡವೇ?

ಪದಾದಿಯ 'ಹ್' - ಲೋಪವಾಗುವುದಕ್ಕೆ ಅನಗತ್ಯವಾಗಿ ಉದಾಹರಣೆ ಕೊಡುವುದು, ಅಗತ್ಯವಿಲ್ಲದಿದ್ದರೂ ತಮ್ಮ ಲೇಖನವನ್ನು ಉಲ್ಲೇಖಿಸಿಕೊಳ್ಳುವುದು (ಪು. 2) ತೀರ ಅನುಚಿತವಾಗಿರುತ್ತದೆ. ಸಮಯ ಸಿಕ್ಕಾಗಲೆಲ್ಲ ಹಂಪನಾ ಅವರು ತಮ್ಮ ಲೇಖನಗಳನ್ನೇ ಉಲ್ಲೇಖಿಸಿಕೊಂಡು ತೃಪ್ತಿಪಡುತ್ತಾರೆ.

'ಎದೆ' ಶಬ್ದದ ಬಗ್ಗೆ ಬರೆದಿರುವ ಟಿಪ್ಪಣಿಯಲ್ಲಿ ಏನು ಹೊಸತು ಹೇಳುತ್ತಾರೆ? 'ಎದೆ', ಅದರ ಮೂಲ 'ಎರ್ದೆ' : ಇವು ಕನ್ನಡ ಶಬ್ದಗಳಲ್ಲವೆಂದು ಸಾಧಿಸ ಹೊರಡುವುದೇ ತಮಾಷೆಯಾಗಿ ತೋರುತ್ತದೆ. ಅವು ಸಂಸ್ಕೃತದ 'ಹೃದಯ'ದ ತದ್ಭವವೆಂದು ಕೇಶಿರಾಜನೇ ಹೇಳಿದ್ದಾನೆ, ಎಲ್ಲರಿಗೂ ಅದು ಗೊತ್ತಿದೆ. "ಇದು ಕನ್ನಡದ ಮಾತಿನಂತೆ ತೋರುತ್ತದೆ. ಆದರೂ ಈ ಶಬ್ದ ಕನ್ನಡೇತರವಿರಬೇಕೆಂದು ಸಂದೇಹಿಸಲವಕಾಶವಿದೆ. ಹಾಗೆಂದು ಹೇಳಲು ಎದೆಗಾರಿಕೆಯೇ ಬೇಕಾಗಬಹುದು" - ಸಂಶೋಧನ ಲೇಖನಗಳಲ್ಲಿ ಇಂತಹ ಹಾಸ್ಯವು ವಿಕಟವಾಗಿ ಪರಿಣಮಿಸುತ್ತದೆ.

'ಎಕ್ಕಡ'ದ ಮೂಲ 'ಏಕಪತ್ರ'ವೇ, 'ಏಕಪಟ'ವೇ (ಪು. 187) ಲೇಖಕರಿಗೇ ಸ್ಪಷ್ಟವಿಲ್ಲ. ಎರಡೂ ಆಧಾರವಿಲ್ಲದ ಊಹೆಗಳು. 'ಕಳಿಜಿನ್' ಎಂಬ ವ್ಯಕ್ತಿ ವಾಚಿಯನ್ನು ಕನ್ನಡದಲ್ಲಿಲ್ಲದ 'ಕಳಿಜು್' ಶಬ್ದದಿಂದ ನಿಷ್ಪನ್ನ ಮಾಡುವುದೂ ವ್ಯರ್ಥ (ಪು. 246-7). "ಶಿಶುಮಾಯಣನ ಕೌಲ"ದ ಚರ್ಚೆಯಲ್ಲಿ ಹಿಂದಿನ ವಿದ್ವಾಂಸರ ಉಲ್ಲೇಖವಿಲ್ಲ.

ಅಚ್ಚಿನ ತಪ್ಪುಗಳಿಂದ ಕಿಕ್ಕಿರಿದು ತುಂಬಿರುವ ಇಂತಹ್ನ ಕೃತಿಯಿಂದ ಕನ್ನಡ ಸಂಶೋಧನ ಕ್ಷೇತ್ರಕ್ಕೆ ಎಷ್ಟೋ ಸಾರಿ ಉಪಯೋಗಕ್ಕಿಂತ ಅನಾಹುತವಾಗುವ ಸಂಭವ ಹೆಚ್ಚು. ಇಂತಹ ಬರಹವನ್ನು ಗಂಭೀರ ಸಂಶೋಧನೆಯೆಂದು ಯಾರಾದರೂ ಭ್ರಮಿಸಿದರೆ ಗತಿಯೇನು?.

ಎಸ್. ಶಂಕರನಾರಾಯಣಭಟ್ಟ ಅವರ **ಗೋವಿಂದಪೈ ಅವರ ಛಂದೋಗತಿ - ಒಂದು ಅಧ್ಯಯನ** ಎನ್ನುವ ಕೃತಿ ನಮ್ಮಲ್ಲಿ ಕೆಲವು ನಿರೀಕ್ಷೆಗಳನ್ನು ಹುಟ್ಟಿಸುವ ಕೃತಿ. ಕನ್ನಡದಲ್ಲಿ ಇಲ್ಲಿಯವರೆಗೆ ಬಂದಿರುವ ಒಬ್ಬ ಕವಿಯ ಛಂದೋ ಪ್ರಯೋಗಗಳನ್ನು ಕುರಿತಾದ ಮೀಮಾಂಸೆಯಲ್ಲಿ ಇದು ಮೊದಲನೆಯ ಗ್ರಂಥವೆಂಬ ಸ್ಥಾನವನ್ನು ಪಡೆದಿದೆ. "ಈ ಕೃತಿಯಲ್ಲಿ

ಪೈಯವರು ತೋರಿದ ಛಂದೋಗತಿಯನ್ನು ನನಗೆ ತಿಳಿದಷ್ಟರಮಟ್ಟಿಗೆ ಸಾದರಪಡಿಸಿರುತ್ತೇನೆ. ಈ ನನ್ನ ಸಂಶೋಧನೆ ಪೈಯವರ ಛಂದೋಗತಿಯ ಒಂದು ಮುಖ ಮಾತ್ರ. ಇನ್ನೊಂದು ಮುಖ ಬೇರೆಯೇ ಇದೆ. ಬಹುಭಾಷಾ ತಜ್ಞರಾದ ಅವರು ಪ್ರಪಂಚದ ನಾನಾ ಭಾಷೆಗಳಲ್ಲಿರುವ ಕವನಗಳ ಛಂದಸ್ಸನ್ನು ಕನ್ನಡ ನುಡಿಯ ಪದ್ಯಕ್ಕೆ ಅಳವಡಿಸಿಕೊಂಡಿದ್ದಾರೆ. ಆದುದರಿಂದ ಅವರು ಪ್ರಯೋಗಿಸಿದ ಛಂದಸ್ಸಿನ ಗತಿಯಾಗಲೀ ಹರಹಾಗಲೀ ತಾಳಲಯ ಪ್ರಾಸಗಳಾಗಲೀ ಯಾವ ಯಾವ ಭಾಷಾ ಮೂಲಗಳಿಂದ ಉದ್ಧೃತವಾಗಿವೆಯೆಂದು ನೋಡಬೇಕಾಗಿದೆ". ಇಲ್ಲಿ ಏಳುವ ಪ್ರಶ್ನೆಯೆಂದರೆ ಪೈ ಅವರ ಛಂದಸ್ಸಿನ ಬಗ್ಗೆ ಬರೆದ ಲೇಖನವೊಂದರ ಕರ್ತೃ ಈ ಮಾತು ಹೇಳಿದರೆ ಅರ್ಥವಾದೀತು! ಆದರೆ ಪುಸ್ತಕವನ್ನೇ ಬರೆಯಹೊರಟವರು ಇನ್ನೂ "ನೋಡಬೇಕಾಗಿದೆ" ಎಂದರೆ "ನೋಡಬೇಕಾದವರು" ಯಾರು? ವಾಸ್ತವ ಸಂಗತಿಯೆಂದರೆ ಪೈ ಅವರ ಛಂದಸ್ಸಿನ ವೈವಿಧ್ಯವನ್ನು ಕುರಿತು ವಿಚಾರ ಮಾಡುವವರು ಸಂಸ್ಕೃತ, ಹಿಂದಿನ ಕನ್ನಡ, ಇಂಗ್ಲೀಷ್ ಛಂದಸ್ಸನ್ನು ಗಮನಿಸಿ, ಮುಖ್ಯವಾಗಿ ಪೈ ಅವರ ಕೃತಿಗಳನ್ನೇ ಸರಿಯಾಗಿ ವಿಶ್ಲೇಷಿಸಿದರೆ ಸಾಕು.

ಹೊಸ ಮಟ್ಟುಗಳ ಬಂಧಪ್ರಕಾರ, ಹಳೆಮಟ್ಟುಗಳ ಬಂಧ ಪ್ರಕಾರ, ಸಾನೆಟ್ಟುಗಳ ಬಂಧ ಪ್ರಕಾರ, ಪ್ರಾಸವಿಲಾಸ ಇವು ಈ ಕೃತಿಯ ನಾಲ್ಕು ಅಧ್ಯಾಯಗಳು.

ಹೊಸಮಟ್ಟುಗಳ ಬಗ್ಗೆ ಮಾತನಾಡುವಾಗ ಕನ್ನಡ ನವೋದಯದ ಸಂದರ್ಭದಲ್ಲಿ ನಡೆದ ಛಂದೋಪ್ರಯೋಗಗಳ ಹಿನ್ನೆಲೆಯನ್ನು ಗಮನಿಸದೇ ಹೋಗುವುದರಿಂದ ಚರ್ಚೆ ಬಹಳ ನಿಷ್ಫಲವಾಗುತ್ತದೆ. ಮೂರು ನಾಲ್ಕು ಐದು ಮಾತ್ರೆಗಳ ಗಣಗಳ ಲೆಕ್ಕಾಚಾರದಲ್ಲಿ ಪದ್ಯಗಳನ್ನು ಅಳೆಯುವುದರಲ್ಲಿ ಇಲ್ಲಿನ ಕೆಲಸ ಪರ್ಯವಸಾನವಾಗಿದೆ. ತೀ.ನಂ. ಶ್ರೀಕಂಠಯ್ಯನವರು "ಸಮಾಲೋಕನ" ಗ್ರಂಥದಲ್ಲಿ ಎಷ್ಟು ಪರಿಕಲ್ಪನೆಗಳನ್ನು ಸೂಚಿಸಿದರು, ಎಷ್ಟು ಹೊಸ ಪದಗಳನ್ನು ಸೃಷ್ಟಿಸಿದರು! ಅವುಗಳ ಸಹಾಯವಿಲ್ಲದೆ ಹೊಸಗನ್ನಡ ಕವಿತೆಯ ಛಂದಸ್ಸಿನ ಬಗ್ಗೆ ವಿಚಾರ ಮಾಡುವುದನ್ನು ಕಲ್ಪಿಸಿಕೊಳ್ಳಲೂ ಸಾಧ್ಯವಿಲ್ಲ. ಆದರೆ ಇಲ್ಲಿ ಎಲ್ಲೂ ತೀ.ನಂ.ಶ್ರೀ.ಯವರ ಉಲ್ಲೇಖವೂ ಇಲ್ಲ, ಅವರ ಸೂಚನೆಗಳ ಉಲ್ಲೇಖವೂ ಇಲ್ಲ. ಹಳೆಯ ಮಟ್ಟುಗಳ ಬಂಧಪ್ರಕಾರ ವಿಚಾರವಾಗಲಿ ಸಾನೆಟ್ ವಿಚಾರವಾಗಲಿ ಹೇಳಿಕೊಳ್ಳುವಂತಹ ಏನನ್ನೂ ಒಳಗೊಂಡಿಲ್ಲವೆಂಬುದನ್ನು ಹೇಳಬೇಕಾಗಿದೆ. ಇದೇ ಮಾತನ್ನು ಪ್ರಾಸವಿಚಾರಕ್ಕೂ ಹೇಳಬೇಕಾಗಿದೆ. ಕನ್ನಡದಲ್ಲಿ ಛಂದಸ್ಸಿನ ಬಗೆಗೆ ಹೊಸ ವಿಚಾರಗಳ ಚರ್ಚೆ ನಡೆದಿರುವುದನ್ನು ಗುರುತಿಸಿಯೇ ಇಲ್ಲ. ಕೊನೆಗೆ, ನಾಗವರ್ಮನ ಛಂದೋಂಬುಧಿಯ ಪಾಠದ ಬಗ್ಗೆಯೂ ಈಚಿನ ಶೋಧಗಳನ್ನು ಗಮನಿಸಿಲ್ಲ. "ಮಂದರ ಧರಗಣ...." ಎನ್ನುವ ಪದ್ಯವನ್ನು ಅದರ ಹಳೆಯ ರೂಪದಲ್ಲೇ ಇಟ್ಟಿರುವುದನ್ನು (ಪು. 80) ಇಲ್ಲಿ ನೋಡಬೇಕು. ಅದರ ಪಾಠದ ಬಗ್ಗೆ ವಿದ್ವಾಂಸರ ಚರ್ಚೆ ಭಟ್ಟರ ಗಮನಕ್ಕೆ ಬಂದಿಲ್ಲವೆಂಬುದು ಸ್ಪಷ್ಟವಾಗಿದೆ.

ಗೋವಿಂದಪೈ ಅವರ ಛಂದೋಗತಿಯ ಬಗ್ಗೆ ಬಂದಿರುವ ಈ ಕೃತಿಯಿಂದ ಆ ಕವಿಯ ಛಂದಸ್ಸಿನ ಅಧ್ಯಯನಕ್ಕೆ ಆಗಿರುವ ಉಪಕಾರ ಅತ್ಯಲ್ಪವೆಂದೇ ಹೇಳಬೇಕಾಗಿದೆ. ಪೈಯವರ 'ಸರಳ ರಗಳೆ'ಯ ಪ್ರಯೋಗದ ಸೂಚನೆಯೂ ಈ ಕೃತಿಯಲ್ಲಿ ಕಾಣದಿರುವುದು ವಿಷಾದದ ಸಂಗತಿ.

**ತಿರುಪತಿ ತಿಮ್ಮಪ್ಪ** ಎಸ್.ಕೆ. ರಾಮಚಂದ್ರರಾಯರು ಬರೆದಿರುವ ಒಂದು ಅಪೂರ್ವ ಸಂಶೋಧನ ಕೃತಿ. ತಿರುಪತಿಯ ದೇವಾಲಯ ದಕ್ಷಿಣ ಭಾರತದ ಅತಿ ಪ್ರಸಿದ್ಧ ಯಾತ್ರಾಸ್ಥಳ ಮತ್ತು ಇಡೀ ಭಾರತದ ಅತ್ಯಂತ ಶ್ರೀಮಂತ ದೇವಾಲಯ. ಆ ದೇವಾಲಯವನ್ನು ಕುರಿತಂತೆ ಈ ಪುಸ್ತಕ ಕನ್ನಡದಲ್ಲಿದೆ ಎಂಬ ಒಂದೇ ಕಾರಣಕ್ಕೆ ಅದು ಕೇವಲ ಪರಿಚಯಾತ್ಮಕವೆಂದು ಯಾರಾದರೂ ಭಾವಿಸಿದರೆ ತಪ್ಪಾಗುತ್ತದೆ. ದೇವಾಲಯದ ಸಾಕ್ಷಾತ್ತಾದ ಪರಿಚಯ, ದೈವದ ಬಗ್ಗೆ ಆತ್ಮೀಯವಾದ ಭಕ್ತಿ, ಶಾಸ್ತ್ರೀಯ ದೃಷ್ಟಿ, ಮೂಲ ಆಕರಗಳ ಪರಿಶೀಲನೆ ಇವುಗಳಿಂದಾಗಿ ಈ ಕೃತಿ ಮೌಲಿಕ ಗ್ರಂಥವೆನ್ನಿಸಿಕೊಳ್ಳಲು ಯೋಗ್ಯವಾಗಿದೆ, ಸಂಶೋಧನ ಬರಹಗಳಲ್ಲಿ ಉಲ್ಲೇಖಾರ್ಹವಾಗಿದೆ.

ಬೆಟ್ಟದ ದೈವವಾದ 'ವೇಂಗಡ'ನಾಥನ ಪರಿಚಯ ಆರಂಭದಲ್ಲಿದೆ. ಬೆಟ್ಟದ ಮೂಲ ಹೆಸರು 'ವೇಂಗಡ', 'ವೆಂಕಟಾದ್ರಿ' ಎಂಬುದು ಅದರ ಸಂಸ್ಕೃತ ಛಾಯೆಯೆಂದು ರಾಯರ ಅಭಿಪ್ರಾಯ. ವೇಂಗಡದ ಪ್ರಾಚೀನತೆ, ಸಾಮಾನ್ಯ ದೈವವಾಗಿದ್ದ ವೆಂಕಟ ಪತಿ ಕ್ರಮೇಣ ಜನಪ್ರಿಯವಾದುದು, ಭಕ್ತರನ್ನೂ ಜನರನ್ನೂ ಆಕರ್ಷಿಸುತ್ತಾ ಬಂದಿದ್ದು ಈ ಎಲ್ಲ ಸ್ವಾರಸ್ಯದ ಇತಿಹಾಸ ಚಿತ್ರ ದೊರಕುತ್ತದೆ. ದೇವಾಲಯಕ್ಕೆ ದತ್ತಿಗಳು ಬಂದುವು, ಗುಡಿಯೂ ಬೆಳೆಯಿತು. ರಾಮಾನುಜರ ಕಾಲದಲ್ಲಿ ಗುಡಿಯ ಬಗ್ಗೆ ಸಾಕಷ್ಟು ವ್ಯವಸ್ಥೆಗಳಾದುವು. ಬಂಗಾರದ ವಿಮಾನ ಸೇರಿತು. ವಿಜಯನಗರದ ದೊರೆಗಳ ಕಾಲದಲ್ಲಿ ಗುಡಿಗೆ ಹಿಂದೆ ಇಲ್ಲದಷ್ಟು ಪ್ರಾಶಸ್ತ್ಯ ಒದಗಿ ..ತು. ಅದರಲ್ಲೂ ಕೃಷ್ಣದೇವರಾಯನಿಂದ ಆದ ಸೇವೆ ಬಹು ದೊಡ್ಡದು. ಎಂದರೆ, ದೇವಾಲಯದ ಅನೇಕ ನೂರು ವರುಷಗಳ ಸ್ವಾರಸ್ಯದ ಇತಿಹಾಸ ಈ ಪುಸ್ತಕದ ಮೊದಲ ಪುಟಗಳಲ್ಲಿ ನಮ್ಮ ಮುಂದೆ ತೆರೆಯುತ್ತದೆ. ಜೊತೆಗೆ, ಕಾಲದಿಂದ ಕಾಲಕ್ಕೆ ದೇವಾಲಯದ ಆಡಳಿತದಲ್ಲಿ ಕಂಡುಬಂದ ಮಾರ್ಪಾಟುಗಳ ನಿರೂಪಣೆಯೂ ಉಂಟು. ಈಗ ಇರುವ ದೇವಾಲಯದ ಎಲ್ಲ ದೈವಗಳ ಪೂಜೆ ಕೈಂಕರ್ಯಗಳ ಮಾಹಿತಿಯನ್ನು ಕೊಟ್ಟಿದ್ದಾರೆ. ತಿಮ್ಮಪ್ಪನ ವಿಗ್ರಹ ಮೂಲತಃ ವಿಷ್ಣುವೋ ಶಿವನೋ ಹರಿಹರನೋ ಸುಬ್ರಹ್ಮಣ್ಯನೋ ದುರ್ಗೆಯೋ ವೀರಭದ್ರನೋ "ಎನ್ನುವ ವಿಚಾರವಾಗಿ ಬಗೆಹರಿಯದ ಗೊಂದಲ ಹಿಂದಿನಿಂದಲೂ ಇದೆ" (ಪು. 250). ಮೂರ್ತಿ ಕಪ್ಪು ಶಿಲೆಯದಾದರೂ "ಮರದಿಂದ ಮಾಡಿದ್ದೋ ಎನ್ನುವ ಸಂಶಯವೂ" ಇದೆ (ಪು. 251).

ಎಂದರೆ, ಬರಿಯ ಭಕ್ತಿಯಿಂದ ಪ್ರಚೋದಿತವಾದ ಕೃತಿ ಇದು ಅಲ್ಲವೆನ್ನುವುದಕ್ಕೆ ಇದೊಂದು ಉದಾಹರಣೆ ಸಾಕು. ಸೊಗಸಾದ ನಿರೂಪಣೆಯಿಂದಲೂ ಸಮೃದ್ಧವಾದ

ಮಾಹಿತಿಯಿಂದಲೂ ಉಚಿತ ಚಿತ್ರಗಳಿಂದಲೂ ಶೋಭಿತವಾದ ಈ ಪುಸ್ತಕ ಕನ್ನಡದ ಶ್ರೀಮಂತಿಕೆಯನ್ನು ಹೆಚ್ಚಿಸಿದೆ.

ತಿರುಪತಿಯಲ್ಲಿ ಪೂರ್ವಕ್ಕೆ ಗುಡ್ಡವೊಂದರ ಮೇಲೆ ಇರುವ ಗಂಗಮ್ಮನ - ಈಕೆ ವೆಂಕಟೇಶ್ವರನ ಸೋದರಿಯಂತೆ - ಜಾತ್ರೆಯ ಉಲ್ಲೇಖ ಸ್ವಾರಸ್ಯವಾಗಿದೆ. ವರ್ಷಕ್ಕೊಮ್ಮೆ ಒಣ ಹುಲ್ಲನ್ನು ತುಂಬಿ ಮೂರ್ತಿಯನ್ನು ಸಿದ್ಧಪಡಿಸಿ, ಜಾತ್ರೆ ಮುಗಿದ ಮೇಲೆ ಸಂಭ್ರಮದಿಂದ ಅದನ್ನು ಸುಡುತ್ತಾರೆ. ತಿರುಪತಿಯ ಇತಿಹಾಸವನ್ನು ಬರೆಯುವವರು ಇದನ್ನು ಲಕ್ಷಿಸಬೇಕೆಂದು ರಾಯರು ಹೇಳಿರುವುದು ಗಮನಿಸತಕ್ಕದ್ದು.

ಎಸ್.ಕೆ. ರಾಮಚಂದ್ರರಾಯರ **ಭಾರತದ ದೇವಾಲಯ (ನೆಲೆ : ಹಿನ್ನೆಲೆ)** ಒಂದು ಚಿಕ್ಕ, ಸ್ವಾರಸ್ಯವಾದ ಕೃತಿ. ಅನೇಕರು "ಭಾರತೀಯ ದೇವಾಲಯಗಳ ತಾತ್ಪರ್ಯವನ್ನು ಬಹುಮಟ್ಟಿಗೆ ಅರಿಯರು". ದೇವಾಲಯದ ಶಿಲ್ಪ, ಇತಿಹಾಸಗಳನ್ನು ಕುರಿತು ವಿದ್ವಾಂಸರು ಸಾಕಷ್ಟು ಬರೆದಿದ್ದರೂ, "ದೇವಾಲಯವು ಸ್ಥಪತಿಯ, ಅರ್ಚಕರ ಅನುಭವದ ಆಳದಿಂದ ಎದ್ದದ್ದು, ಅದಕ್ಕೊಂದು ಆಗಮದ ಚೌಕಟ್ಟಿದೆ ಎಂಬುದನ್ನು ಸಾಮಾನ್ಯವಾಗಿ ಜನ ಮರೆಯುತ್ತಾರೆ. ದೇವಾಲಯದ ನಿರ್ಮಾಣ, ಅಲ್ಲಿ ನಡೆಯುವ ಆರಾಧನೆ ಇವುಗಳನ್ನು ಕುರಿತು ನಮ್ಮಲ್ಲಿ ದೊಡ್ಡದೊಂದು ಶಾಸ್ತ್ರವೇ ಇದೆ. ಈ ಶಾಸ್ತ್ರವನ್ನು ನೋಡದೆ ದೇವಾಲಯ ತಾತ್ಪರ್ಯ ಅರ್ಥವಾಗುವುದಿಲ್ಲ". ದೇವಾಲಯದ ತಾತ್ವಿಕ ಸಾಂಕೇತಿಕ ಸ್ವರೂಪವನ್ನು ವಿವರಿಸುವುದು ಈ ಪುಸ್ತಕದ ಉದ್ದೇಶ.

'ಹಳೆಯ ಕಾಲದಲ್ಲಿ ದೇಗುಲ', 'ದೇಗುಲ ಬೆಳೆಯಿತು', 'ಆಲಯದ ಕಟ್ಟಡ', 'ಸಂಕೇತದ ಬಲೆ', 'ಸಾಂಪ್ರದಾಯಿಕವಾದ ಚೌಕಟ್ಟು', 'ಗುಡಿಯೊಂದು ಮಂಡಲ' ಇವು ಇಲ್ಲಿಯ ಅಧ್ಯಾಯಗಳು. ಪ್ರಾಕ್ತನ ಮಾನವನ ಭೀತಿಯ ವಸ್ತು, ಸಮಾಧಿ ಮಾಡಿದ ಜಾಗ, ಅಲ್ಲಿನ ಕಲ್ಲು, ಹಿರಿಯರ ಚೇತನವನ್ನು ಪ್ರತಿನಿಧಿಸುತ್ತಿದ್ದ ಮರ ಇವು ನಮ್ಮ ದೇವಾಲಯಗಳ ಮೂಲ. ಒಂದು ಜಾಗ, ಕಲ್ಲು, ಕಲ್ಲಿನ ರಾಶಿ ಬೆಳೆದು ಬಂದು ದೇವಾಲಯವಾಗಿ ರೂಪುಗೊಂಡ ಕತೆ ಸ್ವಾರಸ್ಯವಾದುದು. ದೇವಾಲಯದ ಭಾಗಗಳಾದ ಗರ್ಭಗುಡಿ, ವಿಮಾನ, ಗೋಪುರ, ಬಲಿಪೀಠ ಇತ್ಯಾದಿಗಳಿಗೆಲ್ಲ ಅರ್ಥವಿದೆ. ರಾಮಚಂದ್ರರಾಯರು ಅವುಗಳನ್ನು ಭಾರತೀಯ ಶಾಸ್ತ್ರಾನುಸಾರವಾಗಿ ವಿವರಿಸಿದ್ದಾರೆ. ಇಡೀ ದೇವಾಲಯ ರಚನೆ ಮನುಷ್ಯನ ದೇಹರಚನೆಯೊಂದಿಗೆ ಸಮೀಕರಣಗೊಳ್ಳುವುದನ್ನು ತೋರಿಸಿದ್ದಾರೆ. ಗುಡಿಗೂ 'ಮಂಡಲಕ್ಕೂ' ಇರುವ ಸಾಮ್ಯವನ್ನು ಕೊನೆಯ ಅಧ್ಯಾಯದಲ್ಲಿ ಎತ್ತಿ ತೋರಿಸಿದ್ದಾರೆ. ಭಾರತೀಯ ದೇವಾಲಯಗಳನ್ನು ಭಾರತೀಯ ಹಿನ್ನೆಲೆಯಲ್ಲಿ ತಿಳಿಸಬಯಸುವ ಈ ಕೃತಿ ರಾಯರ ಹಿರಿಯ ಕಾಣಿಕೆಗಳಲ್ಲೊಂದು.

**ಸಮಾಧಿ - ಬಲಿದಾನ - ವೀರಮರಣ ಸ್ಮಾರಕಗಳು** ಡಾ. ಎಂ. ಎಂ. ಕಲಬುರ್ಗಿಯವರು ಬರೆದ ಒಂದು ಚಿಕ್ಕ ಶ್ರೇಷ್ಠ ಕೃತಿ. ಜೈನ ಸನ್ಯಾಸಿಗಳು ಸಲ್ಲೇಖನ ವಿಧಿಯಿಂದ ಸಮಾಧಿ

ಮರಣವನ್ನು ಪಡೆದುದು, ವೀರರು ಯಾವುದೋ ಆದರ್ಶಕ್ಕೆ ತಮ್ಮನ್ನು ತಾವು ಆತ್ಮಬಲಿ ಮಾಡಿಕೊಂಡುದು, ಯುದ್ಧದಲ್ಲಿ ಭಾಗಿಗಳಾಗಿ ಹೋರಾಡಿ ಸತ್ತುದು ಇವು ಇಲ್ಲಿಯ ಸಂಶೋಧಿತ ವಿಷಯಗಳು. ನೂರಾರು ಶಾಸನಗಳನ್ನೂ ಹಲವು ಬಗೆಯ ಆಕರಗಳನ್ನೂ ಬಳಸಿಕೊಂಡು ಬರೆದಿರುವ ಈ ಕೃತಿ ಕರ್ನಾಟಕದ ಸಂಸ್ಕೃತಿಯಲ್ಲಿ ಆಸಕ್ತರಾಗಿರುವವರು ಅತ್ಯವಶ್ಯವಾಗಿ ಪರಾಮರ್ಶಿಸಬೇಕಾದ ಗ್ರಂಥವಾಗಿದೆ. ಕೆಲವು ಅಪೂರ್ವ ಚಿತ್ರಗಳು ಈ ಕೃತಿಯ ಮಹತ್ವವನ್ನು ಹೆಚ್ಚಿಸುತ್ತವೆ.

## ಸಂಶೋಧನ ಸಮೀಕ್ಷೆ : 1982

**ಕರ್ನಾಟಕದ ವೀರಗಲ್ಲುಗಳು** ಆರ್. ಶೇಷಶಾಸ್ತ್ರಿಯವರ ಪಿಎಚ್.ಡಿ ನಿಬಂಧ. ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ, ಸ್ಮಾರಕಗಳು, ವೀರಗಲ್ಲುಗಳನ್ನು ಹಾಕಿಸುತ್ತಿದ್ದ ಉದ್ದೇಶ, ವೀರಗಲ್ಲುಗಳ ವಿಂಗಡಣೆ, ಯುದ್ಧದಲ್ಲಿ ಮಡಿದ ವೀರರ ವೀರಗಲ್ಲುಗಳು, ವೀರಗಲ್ಲುಗಳ ಪಾಠ, ವೀರಗಲ್ಲುಗಳ ಶಿಲ್ಪ, ಸಮಾರೋಪ - ಈ ಅಧ್ಯಾಯಗಳನ್ನು ಈ ನಿಬಂಧದಲ್ಲಿ ಕಾಣುತ್ತೇವೆ. ವೀರಗಲ್ಲುಗಳ ಪ್ರಕಟಿತ ಪಾಠಗಳನ್ನು ಮಾತ್ರವಲ್ಲದೆ, ಕ್ಷೇತ್ರಕಾರ್ಯವನ್ನೂ ಕೈಗೊಂಡು ಪಾಠವಿಲ್ಲದ, ಕೇವಲ ಶಿಲ್ಪವಿರುವ ವೀರಗಲ್ಲುಗಳನ್ನು ಗಮನಿಸಿರುವುದನ್ನೂ ಆರಂಭದಲ್ಲೇ ಸ್ಪಷ್ಟಪಡಿಸಿದ್ದಾರೆ. 'ಸ್ಮಾರಕ' ಎಂದರೇನು ? ಎಂಬುದರ ಹಿನ್ನೆಲೆಯಲ್ಲಿ ವೀರರ ಸ್ಮಾರಕಗಳಾದ ವೀರಗಲ್ಲುಗಳ ಪರಿಚಯ ಮಾಡಕೊಟ್ಟಿದ್ದಾರೆ. ಇಲ್ಲಿ ಶಾಸನಗಳನ್ನೂ ಪ್ರಾಸಂಗಿಕವಾಗಿ ಕೋಡೀರ್ಲಪ್ಪನಂತಹ ಜಾನಪದ ದೈವವನ್ನೂ ಆಧಾರವಾಗಿಟ್ಟುಕೊಂಡು ವೀರತನ, ವೀರರ ಬಗ್ಗೆ ಸಮಾಜದ ಗೌರವ, ವೀರರ ಆರಾಧನೆ, ಸತ್ತ ವೀರರ ದೈವತ್ವವನ್ನು (ಉದಾ : ಕುಮಾರ ರಾಮನ 'ಲಿಂಗ') ವಿವೇಚಿಸಿದ್ದಾರೆ. ವೀರಗಲ್ಲುಗಳನ್ನು ನೆಡುತ್ತಿದ್ದ ಉದ್ದೇಶ, ರಿಚುಯಲ್, 'ಬೀರಗೂಳ್', ವೀರಗಲ್ಲುಗಳನ್ನು ನಿಲ್ಲಿಸುವಲ್ಲಿನ ಕ್ರಮ, ಶಾಸನಗಳನ್ನು ಕೆತ್ತಿಸುತ್ತಿದ್ದುದು ಇವನ್ನು ಪ್ರಸ್ತಾಪಿಸಿದ್ದಾರೆ. ವೀರಗಲ್ಲುಗಳ ಬಗೆಬಗೆಯ ವಿಂಗಡಣೆ ಒಂದು ಅಧ್ಯಾಯವಾಗಿ ಮಾಡಿಬಂದಿದೆ. ವೀರಗಲ್ಲುಗಳ ಶಿಲ್ಪ, ಪಾಠಗಳು ಪ್ರತ್ಯೇಕವಾಗಿ ಚರ್ಚಿಗೊಂಡಿವೆ. ಹಲವು ಉಪಯುಕ್ತ ಅನುಬಂಧಗಳೂ ಇಲ್ಲಿ ಸೇರಿವೆ.

ಈ ಹಿಂದೆ ವೀರಗಲ್ಲುಗಳನ್ನು ಕುರಿತಂತೆ ಹಲವಾರು ಲೇಖನಗಳೂ ಚಿಕ್ಕ ಪುಸ್ತಕಗಳೂ ಬಂದಿದ್ದರೂ ಸಾವಿರಾರು ಸಂಖ್ಯೆಯಲ್ಲಿ ದೊರಕುವ ವೀರಗಲ್ಲುಗಳನ್ನು ಅತ್ಯಂತ ಶಾಸ್ತ್ರೀಯವಾಗಿ ಅಭ್ಯಸಿಸಿರುವ ಇಂತಹ ಪ್ರಯತ್ನ, ಈ ಪ್ರಮಾಣದ ಪ್ರಯತ್ನ ಕರ್ನಾಟಕದಲ್ಲಂತೂ ನಡೆದಿರಲಿಲ್ಲ; ಭಾರತದಲ್ಲೂ ಬಹುಶಃ ನಡೆದಿಲ್ಲ. ಶೇಷಶಾಸ್ತ್ರಿ ಕರ್ನಾಟಕದ ಮೂಲೆ ಮೂಲೆಗಳಿಗೆ ಹೋಗಿ ಇಲ್ಲಿಯವರೆಗೆ ಇತಿಹಾಸಜ್ಞರಿಂದ ಅಲಕ್ಷ್ಯಕ್ಕೆ ಒಳಗಾಗಿದ್ದ ಶಾಸನವಿಲ್ಲದ, ಕೇವಲ ಶಿಲ್ಪವಿರುವ ವೀರಗಲ್ಲುಗಳೂ ಸೇರಿದಂತೆ ಸಾವಿರಾರು ವೀರಗಲ್ಲುಗಳನ್ನು ಪರಾಮರ್ಶಿಸಿ, ಪ್ರಕಟವಾಗಿರುವ ಸಾವಿರಾರು ಶಾಸನಗಳ ಪಾಠಗಳನ್ನು ಎಚ್ಚರಿಕೆಯಿಂದ ಓದಿ, ಕರ್ನಾಟಕ ಸಂಸ್ಕೃತಿಯ ಮುಖ್ಯಭಾಗವಾದ ವೀರಜೀವನದ ಅಧ್ಯಯನಕ್ಕೆ ಒಂದು ಶ್ರೇಷ್ಠ ಕೊಡುಗೆಯನ್ನು ಸಲ್ಲಿಸಿದ್ದಾರೆ. ಬೀರಗೂಳ್, ರಣವೀಳ್ಯ, ವೀರಗಲ್ಲಿನ ಶಿಲ್ಪವಲ್ಲಿ ಇಬ್ಬರು ಮುಖಾಮುಖಿಯಾಗಿ

ಹೋರಾಡುತ್ತಿದ್ದರೆ ಅವರಲ್ಲಿ ವೀರನನ್ನು ಗುರುತಿಸುವ ಬಗೆ ಹೀಗೆ ಎಷ್ಟೋ ಹೊಸ ವಿಷಯಗಳು ಇಲ್ಲಿವೆ. ವೀರಗಲ್ಲಿನ ಶಿಲ್ಪಗಳ ವಿಶ್ಲೇಷಣೆಯಂತೂ ಅತ್ಯಂತ ಮೌಲಿಕವಾದುದು. ಬೇರೆ ಬೇರೆ ಕಾಲದ ವೀರಗಲ್ಲುಗಳ ವೈಶಿಷ್ಟ್ಯಗಳನ್ನು ಗುರುತಿಸಿರುವುದೂ ಅಷ್ಟೇ ಮುಖ್ಯವಾದುದು. ಪುಸ್ತಕದ ಕೊನೆಯಲ್ಲಿರುವ ಮುನ್ನೂರು ಚಿತ್ರಗಳು - ಕೆಲವು ಭಾವಚಿತ್ರಗಳು, ಇನ್ನು ಕೆಲವು ರೇಖಾಚಿತ್ರಗಳು - ವೀರಗಲ್ಲುಗಳ ಬಗೆಬಗೆಯ ಮಾದರಿಗಳು, ಯುದ್ಧದ ಪ್ರಭೇದಗಳು, ಆಯುಧಗಳು, ಬತ್ತಳಿಕೆಗಳು, ಗುರಾಣಿಗಳು, ಯುದ್ಧವಾದ್ಯಗಳು, ವೀರರ ಮುಡಿಗಳು, ವೀರನನ್ನು ಸ್ವರ್ಗಕ್ಕೆ ಕರೆದೊಯ್ಯುವ ಪುಷ್ಪಕಗಳ ಮಾದರಿಗಳು, ರಾಜಛತ್ರಿಗಳು ಇವುಗಳನ್ನು ಒಳಗೊಂಡಿದ್ದು ಪ್ರಾಚೀನ ಕರ್ನಾಟಕದ ಬೇರೆ ಬೇರೆ ಅಧ್ಯಯನಗಳಿಗೆ ಎಡೆಮಾಡಿಕೊಡುವಂತಿವೆ. ಈ ಕೆಲಸದ ಹಿಂದೆ ಅಪಾರವಾದ ಶ್ರಮವಿದೆ.

ಇದು ನಿಶ್ಚಿತವಾಗಿಯೂ ಕನ್ನಡದಲ್ಲಿ ಇಲ್ಲಿಯವರೆಗೆ ಪ್ರಕಟವಾಗಿರುವ ಶ್ರೇಷ್ಠ ನಿಬಂಧಗಳಲ್ಲಿ ಒಂದು. ಇಲ್ಲಿಯ ಕೆಲವು ಕೊರತೆಗಳನ್ನು ಎತ್ತಿ ತೋರಿಸಬೇಕಾಗಿದೆ. ಒಂದು - ಕರಡನ್ನು ತಿದ್ದುವುದರಲ್ಲಿ ಹೆಚ್ಚಿನ ಎಚ್ಚರ ಬೇಕಿತ್ತು. ಪು. 24ರ ಅಡಿ ಟಿಪ್ಪಣಿಯಲ್ಲಿ ಬರುವ ರನ್ನನ ಎರಡು ಪದ್ಯಗಳಲ್ಲಿ ಐದು ಅಚ್ಚಿನ ತಪ್ಪುಗಳಿವೆ, ಪದಗಳನ್ನು ಬಿಡಿಸುವಲ್ಲಿ ಸೇರಿಸುವಲ್ಲಿ ಆಗಿರುವ ತಪ್ಪುಗಳು ಹತ್ತು. ಚಿತ್ರಗಳಿಗೆ ಹೆಸರು ಕೊಡುವಾಗ, ಕೆಲವೊಮ್ಮೆ ಕಾವ್ಯಮಯವಾಗಿ ಕೊಡುವ ಪ್ರಯತ್ನದಲ್ಲಿ ಕೆಲವು ಗಂಭೀರ ಅಚಾತುರ್ಯಗಳಾಗಿವೆ. ಚಿತ್ರ 37, 38ಕ್ಕೆ 'ನೀರ ವೀರರು' ಎಂಬ ಹೆಸರುಗಳಿವೆ. ಮೇಲ್ನೋಟಕ್ಕೆ 'ಮನೋಹರ ವೀರರು' ಎಂದರ್ಥವಾದರೂ ಅವು ಅಂಬಿಗ ವೀರರನ್ನು ಹೇಳುತ್ತವೆ. ಹುಲಿಯನ್ನು ವೀರ ಕೊಲ್ಲುವ ವೀರಗಲ್ಲಿಗೆ "ಸವಿದು ಮೆದ್ದರು ಯಾರು ಪೂರ್ವದಿ ಹುಲಿಯ ಹಾಲಿನ ಮೇವನು" ಎಂಬ ಶೀರ್ಷಿಕೆ ಸುತರಾಂ ಹೊಂದದು.

ಇವು ಆ ನಿಬಂಧದ ಕೆಲವು ಕೊರತೆಗಳೇ ಹೊರತು ಬಹು ದೊಡ್ಡ ದೋಷಗಳೆಂದು ಹೇಳಲಾಗುವುದಿಲ್ಲ. ಕರ್ನಾಟಕ ಸಂಸ್ಕೃತಿ, ಯುದ್ಧದ ಚರಿತ್ರೆ, ಪ್ರಾಚೀನ ಕರ್ನಾಟಕದ ವಸ್ತ್ರ ಒಡವೆ ಆಯುಧಗಳು ಇತ್ಯಾದಿಗಳನ್ನರಿಯುವವರಿಗೆ ಕನ್ನಡ ಸಾಹಿತ್ಯದ ಕ್ಷಾತ್ರದ ಹಿನ್ನೆಲೆಯನ್ನು ತಿಳಿಯಬಯಸುವವರಿಗೆ ಇದೊಂದು ಅವಶ್ಯ ಪರಾಮರ್ಶನ ಗ್ರಂಥವಾಗಿದೆ.

**ಕನ್ನಡ ಜನಪದ ಗೀತೆಗಳ ಸಾಂಸ್ಕೃತಿಕ ಅಧ್ಯಯನವು** ನಂ. ತಪಸ್ವೀ ಕುಮಾರ್ ಅವರಿಗೆ ಪಿಎಚ್.ಡಿ ಪ್ರಶಸ್ತಿಯನ್ನು ತಂದುಕೊಟ್ಟ ನಿಬಂಧ. ಒಂದು ನಾಡಿನ ಕೆಳವರ್ಗದ ಅಥವಾ ಅವಿದ್ಯಾವಂತರ, ಅನಕ್ಷರಸ್ಥರ ಬದುಕು ಅವರ ಜಾನಪದ ಸಾಮಗ್ರಿಯಲ್ಲಿ ಸ್ಪಷ್ಟವಾಗಿ ದಟ್ಟವಾಗಿ ರೂಪಿತವಾಗಿರುತ್ತದೆ. ಅವರ ಒಟ್ಟು ಸಾಮೂಹಿಕ ಮೌಲ್ಯ ಪ್ರಜ್ಞೆಯನ್ನು ತಿಳಿಯುವುದಕ್ಕೂ ಆ ಸಾಮಗ್ರಿ ಅಮೂಲ್ಯವಾದ ಆಕರ. ಆ ಸಾಮಗ್ರಿಯು ಅವರ ಬದುಕಿನ ಅವಿಭಾಜ್ಯ ಅಂಗವಾಗಿರುವುದರಿಂದ ಅದರಲ್ಲಿನ ಮೌಲ್ಯ ವ್ಯವಸ್ಥೆ ಅವರ ಬದುಕನ್ನು ರೂಪಿಸುವುದಕ್ಕೆ ನೇರವಾಗಿ ಕಾರಣವಾಗಿರುತ್ತದೆ. ಈ ದೃಷ್ಟಿಯಿಂದ ಜಾನಪದ ಸಾಹಿತ್ಯವನ್ನು

ಆಳವಾಗಿ ಅಭ್ಯಸಿಸುವ ಅಗತ್ಯವಿದೆ. ತಪಸ್ವೀಕುಮಾರರ ಅಧ್ಯಯನ ಅಂತಹ ದೃಷ್ಟಿಯನ್ನಿಟ್ಟುಕೊಂಡಿದೆಯೆಂಬುದನ್ನು ಅವರ ಕೆಳಗಿನ ಮಾತುಗಳು ಧ್ವನಿಸುತ್ತವೆ:

"ನಮ್ಮ ಈ ಅಧ್ಯಯನದಲ್ಲಿ ಇಂಥ ಅನೇಕ ಇತಿಮಿತಿಗಳನ್ನು ಒಪ್ಪಿಕೊಂಡು, ಇದೇನಿದ್ದರೂ ಕನ್ನಡಿಗರ ಅಪಾರ ಜನಪದ ಸಂಸ್ಕೃತಿ ಕ್ಷೇತ್ರದತ್ತ ನೀಡಿದ ತೋರ್ಬೆರಳು ಮಾತ್ರ ಎಂಬುದನ್ನು ನಮ್ರತೆಯಿಂದ ಸೂಚಿಸಲಿಚ್ಛಿಸುತ್ತೇನೆ. ವಾಸ್ತವವಾಗಿ ಇಲ್ಲಿ ಪ್ರಸ್ತಾಪಿಸಲಾಗಿರುವ ಒಂದೊಂದು ಮುಖ್ಯ ವಿಷಯವನ್ನು - ಉದಾಹರಣೆಗೆ ಜಾನಪದರ ಉಡುಗೆ ತೊಡುಗೆ, ಆಟ ಪಾಟ, ಕೌಟುಂಬಿಕ ಜೀವನ ಚಿತ್ರಣ, ವೀರಜೀವನ, ದೈನಂದಿನ ಜೀವನ ಕ್ರಮ, ಹಬ್ಬ ಹರಿದಿನಗಳ ಮಹತ್ವ, ಇತ್ಯಾದಿ - ಎತ್ತಿಕೊಂಡು, ತಲಸ್ಪರ್ಶಿಯಾದ ಅಧ್ಯಯನಕ್ಕೆ ಒಳಪಡಿಸಿದಾಗ ಹತ್ತಾರು ಉತ್ಕೃಷ್ಟ ನಿಬಂಧಗಳಿಗಾಗುವಷ್ಟು ಗಹನ ಸಂಗತಿಗಳಿರುವುದು ಸ್ಪಷ್ಟವಾಗುತ್ತದೆ..."

ಈ ಅಧ್ಯಯನಕ್ಕೆ ನನ್ನ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ'ವು ಮೂಲ ಪ್ರೇರಣೆ ಒದಗಿಸಿದೆಯೆಂದು ಹೇಳಿಕೊಂಡಿದ್ದಾರೆ.

ಪ್ರಸ್ತಾವನೆಯಲ್ಲಿ ಜಾನಪದವೆಂದರೇನು, ಅದರ ಅಧ್ಯಯನದ ಇತಿಹಾಸ, ತಮ್ಮ ನಿಬಂಧದ ಉದ್ದೇಶ, ಜನಪದ ಗೀತೆಯ ಕಲಿಕೆ, ಹಾಡುಗಾರಿಕೆ, ಸಂಗೀತ ಇವುಗಳನ್ನು ಪ್ರಸ್ತಾಪಿಸಿದ್ದಾರೆ. ಮುಂದಿನ ಅಧ್ಯಾಯಗಳಲ್ಲಿ ಜನಪದ ಸಾಹಿತ್ಯ ಸ್ವರೂಪ, ಜನಪದ ನಿತ್ಯಜೀವನ ಕ್ರಮ, ಜಾನಪದರ ಕುಟುಂಬ ಜೀವನ, ಜಾನಪದರ ರಸಿಕತೆ, ಜಾನಪದರ ವೀರಜೀವನ, ಹಬ್ಬ ಹರಿದಿನಗಳು, ಜನಪದ ಸಂಸ್ಕೃತಿಯ ಗೊತ್ತು ಗುರಿಗಳು, ಕನ್ನಡ ಜನಪದ ಕಲೆಗಳು ಈ ಶೀರ್ಷಿಕೆಗಳಲ್ಲಿ ಮಾಹಿತಿಯನ್ನು ಸಂಗ್ರಹಿಸಿ ಕೊಡಲಾಗಿದೆ.

ಶೀರ್ಷಿಕೆಯನ್ನು ನೋಡಿದರೆ, ಸಾಂಸ್ಕೃತಿಕ ಅಧ್ಯಯನಕ್ಕೆ ಮೂಲ ಆಕರಗಳಾಗಬೇಕಾಗಿರುವುದು ಜಾನಪದ ಗೀತೆಗಳು. ವಚನಗಳನ್ನು ಆಕರವಾಗಿಟ್ಟುಕೊಂಡು ಪಿ.ವಿ. ನಾರಾಯಣ, ಶಾಸನಗಳನ್ನು (ಕ್ರಿ.ಶ. 450-1150) ಆಕರವಾಗಿಟ್ಟುಕೊಂಡು ನಾನು ಅಧ್ಯಯನ ನಡೆಸಿದ್ದೇವೆ. ಆಯಾ ಆಕರಗಳಲ್ಲಿ ಒಂದು ನಿರ್ದಿಷ್ಟ ಕಾಲದ ಬದುಕು ಹೇಗೆ ಚಿತ್ರಿತವಾಗಿದೆಯೆಂಬುದನ್ನು ಹೆಕ್ಕಿ ತೆಗೆದು ಪುನಾರಚಿಸಿ ವ್ಯಾಖ್ಯಾನಿಸುವುದು ಸಾಂಸ್ಕೃತಿಕ ಅಧ್ಯಯನಗಳ ಉದ್ದೇಶ. ಪ್ರಾಸಂಗಿಕವಾಗಿ ಬೇರೆ ಆಕರಗಳನ್ನೂ ಬಳಸಿಕೊಳ್ಳಬಹುದು. ತಪಸ್ವೀಕುಮಾರ್ ಕೂಡ ಅದೇ ಮಾರ್ಗವನ್ನು ಅನುಸರಿಸಿದ್ದರೆ ಚೆನ್ನಾಗಿತ್ತು. ಅದು ಬಿಟ್ಟು, ಅವರು ತಮಗೆ ತಿಳಿದಿರುವ ಹಳ್ಳಿಗರ ಬದುಕಿನ ವಿವರಗಳನ್ನು ಕೊಡುತ್ತ ಅಲ್ಲಲ್ಲಿ ಅಡಿಟಿಪ್ಪಣಿಯಲ್ಲಿ ಮತ್ತು ಬರಹದ ಮಧ್ಯೆ ಜಾನಪದ ಗೀತಗಳ ತುಣುಕುಗಳನ್ನು ಉದಾಹರಿಸುತ್ತಾರೆ. ವಾಸ್ತವವಾಗಿ ಅವರ ಬರವಣಿಗೆಯ ಬಹು ಭಾಗಕ್ಕೆ ಜಾನಪದ ಗೀತಗಳೇ ಆಧಾರವಾಗಬೇಕಾಗಿತ್ತು. ಆದರೆ, ಹಾಗೆ ಆಧಾರವಾಗಿ ಬಳಸಿಕೊಂಡಿಲ್ಲ. ಹಳ್ಳಿಗರ ಬದುಕನ್ನು ಸಾರಾಸಗಟಾಗಿ ಚಿತ್ರಿಸುವುದರ ಬದಲು, ಜಾನಪದ ಗೀತಗಳಲ್ಲಿ ಕಂಡುಬರುವ ಹಳ್ಳಿಗರ ವೇಷಭೂಷಣ, ವಾಸ, ತಿಂಡಿ ತೀರ್ಥಗಳು, ಹಬ್ಬಗಳು, ಆಯುಧಗಳು, ಬಾಂಧವ್ಯ

ಸೂಚಕಗಳು, ಕಲೆಗಳು, ಜಾತಿಗಳು, ನಂಬಿಕೆಗಳು, ಆಚರಣೆಗಳು, ಬೇಟೆ, ವೃತ್ತಿಗಳು ಇವೇ ಮೊದಲಾದ ವಿಷಯಗಳನ್ನು ಆಕರ ಸಮೇತ ಉಲ್ಲೇಖಿಸಿ ವ್ಯಾಖ್ಯಾನಿಸಬೇಕಿತ್ತು. ಜಾನಪದ ಗೀತಗಳು ತಾವು ತಿಳಿಸಿಕೊಡುವ ಬದುಕಿನ ವಿವರಗಳು ನಮಗೆ ದೊರಕುವಂತೆ ಮಾಡಬೇಕಾದ್ದು ತಪಸ್ವೀಕುಮಾರರ ಕಾರ್ಯವಾಗಿತ್ತು. ಸಂಶೋಧನ ಕಾರ್ಯವನ್ನು ಒಂದು ಶಿಸ್ತಿಗೆ ಒಳಪಡಿಸದೆ ಇದ್ದರೆ, ತಮ್ಮ ಸಂಶೋಧನೆಯ ಉದ್ದೇಶವನ್ನು ಸ್ಪಷ್ಟಪಡಿಸಿಕೊಳ್ಳದಿದ್ದರೆ ಏನು ಅನಾಹುತವಾಗಬಹುದೆಂಬುದಕ್ಕೆ ಈ ನಿಬಂಧ ಒಳ್ಳೆಯ ಉದಾಹರಣೆ. ಇಂದಿನ ಜನಪದ ಸಾಹಿತ್ಯವು ಬಳಕೆಯ ದೃಷ್ಟಿಯಿಂದ ಸಮಕಾಲೀನವಾದುದಾದರೂ, ಅದು ಹಿಂದಿನಿಂದ ಪರಂಪರಾಗತವಾಗಿ ಹರಿದು ಬಂದಿರುವುದಾಗಿರುವುದರಿಂದ ಗತಕಾಲದ ಬದುಕಿನ ಎಷ್ಟೋ ಮುಖಗಳು ಅಲ್ಲಿ ಹುದುಗಿರುತ್ತವೆ. ಈ ದೃಷ್ಟಿಯಿಂದ ಜಾನಪದ ಗೀತಗಳನ್ನು ನೋಡದೇ ಇರುವುದರಿಂದ ತಪಸ್ವಿಕುಮಾರ್ ತಮಗೆ ತಾವು ಬಹಳ ನಷ್ಟವನ್ನು ಮಾಡಿಕೊಂಡಿದ್ದಾರೆಂದು ಅನ್ನಿಸುತ್ತದೆ. ಇದಕ್ಕೆ ಮಾದರಿಯಾಗಿ ಒಂದು ಪ್ಯಾರಾ ಕೊಡುತ್ತೇನೆ-

"ಪ್ರಾಕೃತ ಜನಪದ ಗರತಿಯರು ಸೀರೆ ಉಡುವ ರೀತಿಯ ಬಗೆಗೆ ಕೊಂಚ ವಿವೇಚಿಸುವ ಅಗತ್ಯವಿದೆ. ನಾನು ಬಲ್ಲಂತೆ, ಉತ್ತರ ಕರ್ಣಾಟಕದ ವಯಸ್ಕ ಜನಪದ ಸ್ತ್ರೀಯರು ಇವೊತ್ತಿಗೂ ಕಚ್ಚೆ ಹಾಕಿ ಸೀರೆ ಉಡುತ್ತಾರೆ. ಮಣ್ಣು ಕಲ್ಲು ಸಿಮೆಂಟು ಇತ್ಯಾದಿಗಳನ್ನು ಹೊರುವ ಹೆಂಗಸರಂತೂ ಕಚ್ಚೆ ಹಾಕಿಯೇ ಸೀರೆ ಉಡುವುದು. ತರುಣಿಯರು ಕಚ್ಚೆ ಹಾಕದೆ ಕಾಗಿನ ಸೀರೆ, ಇಳಕಲ್ ಸೀರೆ, ಗುಳೇದಗುಡ್ಡದ ಕುಪ್ಪಸಗಳನ್ನು ಬಳಸುತ್ತಾರೆ. ಜಾನಪದರೇ ಅಲ್ಲದೆ ಅನೇಕ ಕನ್ನಡಿಗ ನಾಗರಿಕರಲ್ಲಿಯೂ ಮರಾಠಿ ಬ್ರಾಹ್ಮಣೆಯರಲ್ಲಿಯೂ ಕಚ್ಚೆ ಹಾಕಿಯೇ ಸೀರೆ ಉಡುವ ಸಂಪ್ರದಾಯವಿದೆ. ಹೀಗೆ ಉಡುವ ರೀತಿಗೆ ಪ್ರಾಚೀನವಾದ ಒಂದು ಇತಿಹಾಸ, ಸಾಂಸ್ಕೃತಿಕ ಪರಂಪರೆ ಇದೆ. ಈ ಸಂಪ್ರದಾಯ ದಕ್ಷಿಣ ಭಾರತದ ಅನೇಕ ಮಹಿಳೆಯರಲ್ಲಿ ರೂಢಿಯಲ್ಲಿದ್ದು ಉತ್ತರ ಪ್ರದೇಶದ ಬಂಗಾಳ, ಗುಜರಾತು ಇತ್ಯಾದಿ ಪ್ರಾಂತಗಳಲ್ಲಿ ಇದು ರೂಢಿಯಲ್ಲಿಲ್ಲ ಎಂಬುದಾಗಿ ಶ್ರೀ ಅಳ್ತೇಕರ್ ಹೇಳಿದ್ದಾರೆ."

ಬಹುಪಾಲು ಬರವಣಿಗೆ ಹೀಗಿದೆ. ಕನ್ನಡ ಜಾನಪದ ಗೀತಗಳ ಸಾಂಸ್ಕೃತಿಕ ಅಧ್ಯಯನ ಮಾತ್ರ ಈ ನಿಬಂಧದಲ್ಲಿ ನಡೆದಿಲ್ಲವೆಂದು ಅನಿವಾರ್ಯವಾಗಿ ಹೇಳಬೇಕಾಗಿದೆ.

ಕೆ.ಆರ್. ಸಂಧ್ಯಾ ರೆಡ್ಡಿ ಅವರ ಪಿಎಚ್.ಡಿ. ನಿಬಂಧವಾದ **ಕನ್ನಡ ಜನಪದ ಕಥೆಗಳು** ಕನ್ನಡ ಜಾನಪದ ಶಾಸ್ತ್ರೀಯ ಅಧ್ಯಯನಗಳಿಗೆ ಒಂದು ಬೆಲೆಯುಳ್ಳ ಕಾಣಿಕೆ. 'ಧವಳಶ್ರೀ' ಅವರ 'ಜಾನಪದ ಕಥಾಮೃತ' (ಸಂಪುಟ 1, 1967) ಪ್ರಕಟವಾದಂದಿನಿಂದ ಜಾನಪದ ಶಾಸ್ತ್ರದ ದೊಡ್ಡ ಮತ್ತು ಮುಖ್ಯ ಭಾಗವಾದ ಜಾನಪದ ಕಥೆಗಳನ್ನು ಕುರಿತಂತೆ ಸಂಗ್ರಹಗಳೂ ವ್ಯಾಖ್ಯಾನಗಳೂ ಕನ್ನಡದಲ್ಲಿ ಬರುತ್ತಿವೆ. ಇದೊಂದು ಹೆಮ್ಮೆಯ ಸಂಗತಿ. ಜನಪದ ಕಥೆಗಳ ಅಧ್ಯಯನದಲ್ಲಿ ಸಂಧ್ಯಾ ರೆಡ್ಡಿಯವರ ಕೃತಿ ಒಂದು ಖಚಿತ ಮೈಲಿಗಲ್ಲು.

ಈ ನಿಬಂಧದಲ್ಲಿ ಒಂಬತ್ತು ಅಧ್ಯಾಯಗಳೂ ಕೆಲವು ಅನುಬಂಧಗಳೂ ಇವೆ. ನಿಬಂಧದ ಉದ್ದೇಶ ಮತ್ತು ವ್ಯಾಪ್ತಿಗಳಿಗೆ ಮೊದಲ ಅಧ್ಯಾಯ ಮೀಸಲು. ಎರಡನೆಯ ಅಧ್ಯಾಯದಲ್ಲಿ ಜನಪದ ಕಥೆಯ ಸ್ವರೂಪವನ್ನೂ, ಉಳಿದ ಅಧ್ಯಾಯಗಳಲ್ಲಿ ಕನ್ನಡ ಜನಪದ ಕಥೆಗಳ ಭೌಗೋಳಿಕ ಮತ್ತು ಸಾಂಸ್ಕೃತಿಕ ವ್ಯಾಪ್ತಿ, ಕನ್ನಡ ಜನಪದ ಕಥೆಗಳ ಪರಿಚಯ, ಅವುಗಳ ಪಾಠಾಂತರ ಪರಿಷ್ಕರಣ, ಸಾಹಿತ್ಯಕ ಅಧ್ಯಯನ, ಸಾಂಸ್ಕೃತಿಕ ಅಧ್ಯಯನ, ಅಧ್ಯಯನದ ಇತಿಹಾಸ ಈ ಅಂಶಗಳು ಚರ್ಚಿತವಾಗಿವೆ. ಅನುಬಂಧಗಳಲ್ಲಿ ಜನಪದ ಕತೆಗಳ ಹೆಚ್ಚಿನ ಅಧ್ಯಯನಗಳನ್ನು ಕೈಗೊಳ್ಳುವವರಿಗಾಗಿ ಜನಪದ ಕಥೆಗಳ ವರ್ಗಸೂಚಿ, ಆಶಯಸೂಚಿಗಳನ್ನು ಕೊಟ್ಟಿದೆ.

ಜನಪದ ಕಥೆಯ ಸಾಮಾನ್ಯಸ್ವರೂಪವನ್ನು ಕುರಿತು ವಿವರಿಸುವಾಗ ಅವುಗಳ ಲಕ್ಷಣವನ್ನೂ ಅವುಗಳ ಭಿನ್ನ ಪ್ರಕಾರಗಳನ್ನೂ ವಿವರಿಸಿರುವುದಲ್ಲದೆ, ಅಸಂಖ್ಯಾತವಾದ ಜನಪದ ಕಥೆಗಳನ್ನು ವರ್ಗೀಕರಿಸಲು ಬಳಕೆಯಾಗುವ ಆಶಯ ಮತ್ತು ವರ್ಗ ಪರಿಕಲ್ಪನೆಗಳನ್ನು ಪರಿಚಯಿಸಿದ್ದಾರೆ. ಜನಪದ ಕಥೆಗಳ ಹುಟ್ಟನ್ನು ಕುರಿತಾದ ಭಿನ್ನ ಭಿನ್ನ ಸಿದ್ಧಾಂತಗಳ ಸಾರಾಂಶವನ್ನು ಕೊಟ್ಟಿದ್ದಾರೆ.

"ಕನ್ನಡ ಜನಪದ ಕಥೆಗಳ ಭೌಗೋಳಿಕ ಮತ್ತು ಸಾಂಸ್ಕೃತಿಕ ವ್ಯಾಪ್ತಿ" ಎಂಬ ಅಧ್ಯಾಯದ ಔಚಿತ್ಯ ನನಗಿನ್ನೂ ಅರ್ಥವಾಗಿಲ್ಲ. ಕರ್ನಾಟಕಕ್ಕೆ ಖಚಿತವಾದ ರಾಜಕೀಯ ಭೌಗೋಳಿಕ ವ್ಯಾಪ್ತಿಯಿದೆ; ಕನ್ನಡಕ್ಕೂ ಒಂದು ಸ್ಥೂಲವಾದ ವ್ಯಾಪ್ತಿಯುಂಟು. ಇವುಗಳನ್ನನುಸರಿಸಿ ಕನ್ನಡ ಜನಪದ ಕಥೆಗಳ ವ್ಯಾಪ್ತಿಯೂ ಇರುತ್ತದೆ. ಒಂದೇ ಕತೆ ಆಯಾ ಉಪಭಾಷೆಯಲ್ಲಿ ಕಾಣಿಸಿಕೊಂಡು ಮೇಲ್ಮೈ ಪದರದಲ್ಲಿ ಅಭಿವ್ಯಕ್ತಿಯಲ್ಲಿ ಸ್ವಲ್ಪ ಭಿನ್ನವಾಗಬಹುದೇ ಹೊರತು, ತನ್ನ ಮೂಲ ಸ್ವರೂಪದಲ್ಲಿ ಅಲ್ಲ.

ಕನ್ನಡ ಜನಪದ ಕತೆಗಳನ್ನು ಥಾಂಸನ್ ಮೊದಲಾದವರನ್ನನುಸರಿಸಿ ಸ್ಥೂಲವಾಗಿ ಎರಡು ಭಾಗಗಳನ್ನಾಗಿ ಮಾಡಿದ್ದಾರೆ : ಸಂಕೀರ್ಣ ಕಥೆಗಳು ಮತ್ತು ಸರಳ ಕಥೆಗಳು. ಇವುಗಳಲ್ಲಿ ಮತ್ತೆ ಒಳಭೇದಗಳುಂಟು. ಯಾವುದೇ ಜ್ಞಾನ ಸಾಮಗ್ರಿಯನ್ನೂ ಗೆರೆ ಎಳೆದು ಪ್ರತ್ಯೇಕಿಸಿ ನೋಡಲು ಸಾಧ್ಯವಿಲ್ಲವೆಂಬ ಅರಿವು ಸಂಧ್ಯಾ ಅವರಿಗೆ ಉಂಟು. ಸಂಕೀರ್ಣ ಕತೆಗಳಲ್ಲಿ ವಾಸ್ತವತೆ ಅಂತಹ ವಿಶಿಷ್ಟಾಂಶವಾಗಿರುತ್ತದೆ ಎಂಬ ವಿವರಣೆ ಸರಿಯಾಗಿದೆ. ಅಲ್ಲೆಲ್ಲ ಕನ್ನಡದಲ್ಲಿ ಪ್ರಕಟವಾಗಿರುವ ಜನಪದ ಕತೆಗಳನ್ನು ಎಚ್ಚರಿಕೆಯಿಂದ ವಿಶ್ಲೇಷಿಸಿದ್ದಾರೆ.

ಪಾಠಾಂತರ ಪರಿಷ್ಕರಣವು ಈ ಕೃತಿಯ ಅಮೂಲ್ಯ ಭಾಗಗಳಲ್ಲಿ ಒಂದು. ಒಂದು ಕತೆ ಎಲ್ಲೋ ಯಾವಾಗಲೋ ಯಾರ ಬಾಯಲ್ಲೋ ಹುಟ್ಟಿ ಬಾಯಿಂದ ಬಾಯಿಗೆ, ಊರಿನಿಂದ ಊರಿಗೆ, ಭಾಷೆಯಿಂದ ಭಾಷೆಗೆ ಹಬ್ಬುತ್ತ ಹೋಗುವಾಗ ಸಹಜವಾಗಿಯೇ ಹಲವಾರು ಪಾಠಗಳನ್ನು ಪಡೆಯುತ್ತದೆ. ಬೇರೆಯವರ ಬಾಯಿಂದ ಇರಲಿ, ಒಬ್ಬನ ಬಾಯಿಂದಲೇ ಒಂದು ಕತೆಯನ್ನು ಒಂದೇ ರೀತಿಯಾಗಿ ಎರಡು ಬಾರಿ ಪಡೆಯುವುದು ಕಷ್ಟ. ಒಂದು ಕತೆಯ ಭಿನ್ನ ಪಾಠಗಳನ್ನು ಸಂಗ್ರಹಿಸಿ "ಅವುಗಳ ಮೂಲರೂಪ

ಉಪವರ್ಗಗಳನ್ನು ರಚಿಸುವುದೇ ಅಲ್ಲದೆ ಈ ಕತೆ ಉಗಮಿಸಿರಬಹುದಾದ ಪ್ರಾದೇಶಿಕ ನೆಲೆಯನ್ನೂ ಗುರುತಿಸುವುದು ಕಷ್ಟದ ಕಾರ್ಯ". ಈ ಕಾರ್ಯಕ್ಕೆ ಮೂಲ ಪ್ರಚೋದನೆ ಗ್ರಂಥಸಂಪಾದನೆಯ ಮೂಲ ತತ್ವಗಳು ಮತ್ತು ತೌಲನಿಕ ಭಾಷಾವಿಜ್ಞಾನ (ಸಂಧ್ಯಾ ರೆಡ್ಡಿಯವರು ಡಿ.ಎಲ್. ನರಸಿಂಹಾಚಾರ್ಯರ "ಕನ್ನಡ ಗ್ರಂಥ ಸಂಪಾದನೆ"ಯನ್ನು ಬಳಸಿಕೊಂಡಿರಬಹುದು; ಆ ಕೃತಿ ಗ್ರಂಥಸೂಚಿಯಲ್ಲಿ ಸೇರ್ಪಡೆಯಾಗುವುದು ಅಗತ್ಯ). ಈ ಕೆಲಸಕ್ಕೆ ಕೆಲವು ಮಾದರಿ ಕತೆಗಳನ್ನು ಆರಿಸಿಕೊಂಡು ಪಾಠ ಪರಿಷ್ಕರಣವನ್ನು ಅತ್ಯಂತ ಸಮರ್ಪಕವಾಗಿ ನೆರವೇರಿಸಿದ್ದಾರೆ.

ಜನಪದ ಕತೆಗಳ 'ಸಾಂಸ್ಕೃತಿಕ ಅಧ್ಯಯನ'ವನ್ನು ಎಚ್ಚರಿಕೆಯಿಂದ ಕೈಗೊಂಡರೆ "ಆದಿಮಾನವನ ಸಮಾಜದ ಎಷ್ಟೋ ವಿಷಯಗಳು ಕಾಣುತ್ತವೆ". ಆತ್ಮದಲ್ಲಿನ ನಂಬಿಕೆ, ಹೆಸರಿನಲ್ಲಿ ಆತ್ಮವಿದೆ ಎಂಬ ನಂಬಿಕೆ, ಅಷ್ಟೇ ಅಲ್ಲ ವ್ಯಕ್ತಿಯ ಬೆವರು, ಉಗುರು, ಕೂದಲು ಇವು ಕೂಡ ಆತ್ಮವನ್ನು ಹೊಂದಿರುವುದರಿಂದ ಇವು ಇನ್ನೊಬ್ಬರ ಕೈಗೆ ಸಿಗದಂತೆ ಎಚ್ಚರ ವಹಿಸುತ್ತಿದ್ದ ಆದಿಮಾನವನ ಪದ್ಧತಿಗಳಿಗೆ ಜಾನಪದ ಕತೆಗಳು ಒಳ್ಳೆಯ ಆಗರವೆಂಬುದನ್ನು ತೋರಿಸಿದ್ದಾರೆ.

ಸಂಧ್ಯಾ ಅನುಬಂಧಗಳಲ್ಲಿ ಕನ್ನಡ ಜನಪದ ಕತೆಗಳನ್ನು ವರ್ಗ ಆಶಯಗಳಡಿ ಹೇಗೆ ವಿಂಗಡಿಸಬಹುದೆಂಬುದಕ್ಕೆ ಉದಾಹರಣೆಗಳನ್ನು ಕೊಟ್ಟಿದ್ದಾರೆ.

ಈ ನಿಬಂಧದ ರಚನೆಯಲ್ಲಿ ಸಂಧ್ಯಾ ಅಪಾರ ಶ್ರಮವಹಿಸಿ ಮಾಹಿತಿ ಸಂಗ್ರಹ ವಿಶ್ಲೇಷಣೆಗಳನ್ನು ಕೈಗೊಂಡಿದ್ದಾರೆ ಎಂಬಲ್ಲಿ ಅನುಮಾನವಿಲ್ಲ. ತಮ್ಮ ಉದ್ದೇಶದ ಅರಿವು ಅವರಿಗೆ ಸ್ಪಷ್ಟವಾಗಿರುವುದರಿಂದ ಎಲ್ಲೂ ಹೆಜ್ಜೆ ತಪ್ಪುವುದಿಲ್ಲ. ಇಂಗ್ಲಿಷಿನಲ್ಲಿರುವ ಹಲವಾರು ಗ್ರಂಥಗಳನ್ನು ಓದಿ ಅರಗಿಸಿಕೊಂಡು ಅಲ್ಲಿಯ ಚೌಕಟ್ಟನ್ನು ಅರ್ಥಮಾಡಿಕೊಂಡು ಅದನ್ನು ಕನ್ನಡ ಜನಪದ ಕತೆಗಳಿಗೆ ಅನ್ವಯಿಸಿ ನೋಡಿದ್ದಾರೆ. ಇಂತಹ ಅಧ್ಯಯನಗಳು ಜನಪದ ಶಾಸ್ತ್ರವನ್ನು ಒಂದು ಶಿಸ್ತಿನ ಮಟ್ಟಕ್ಕೆ ಏರಿಸುವಲ್ಲಿ ಮತ್ತು ಪಿಎಚ್.ಡಿ. ಪದವಿಯ ಮೌಲ್ಯವನ್ನು ಉಳಿಸುವಲ್ಲಿ ಸಹಾಯಕವಾಗಿರುತ್ತವೆ. ಕರಡುಗಳನ್ನು ತಿದ್ದುವಲ್ಲಿ ಕಾಣಿಸುವ ಎಚ್ಚರ, ಶಬ್ದಸೂಚಿ ಗ್ರಂಥಸೂಚಿಗಳಲ್ಲೂ ಕಾಣಿಸಿದೆ. ಈ ಅಮೂಲ್ಯ ನಿಬಂಧಕ್ಕಾಗಿ ಸಂಧ್ಯಾ ರೆಡ್ಡಿ ಅವರು ಅಭಿನಂದನಾರ್ಹರು. ಅವರು ಈ ನಿಬಂಧವನ್ನು ಬರೆದ ಮೇಲೆ ಹೆಚ್ಚು ಬರೆದು ಪ್ರಕಟಿಸಿದಂತೆ ನನಗೆ ತೋರುವುದಿಲ್ಲ. ಅದು ನಿಜವಾಗಿದ್ದರೆ ಅದೊಂದು ದುರದೃಷ್ಟವೇ ಸರಿ.

ರುಕ್ಮಿಣಿ ಪಾರ್ವತಿಯವರ **ಅಂಬಿಕಾತನಯದತ್ತರ ಭಾವಗೀತೆಗಳು** ಅವರು ಪಿಎಚ್.ಡಿ. ಪದವಿಗಾಗಿ ಸಾದರಪಡಿಸಿದ ನಿಬಂಧ. ಬೇಂದ್ರೆಯವರ ಭಾವಗೀತೆಗಳಿಗೆ ಮನಸೋತ ಅವರು ಅದನ್ನೇ ತಮ್ಮ ಸಂಶೋಧನೆಯ ವಸ್ತುವಾಗಿ ಆರಿಸಿಕೊಂಡುದಾಗಿ ಪ್ರಸ್ತಾವನೆಯಲ್ಲಿ ಹೇಳಿಕೊಂಡಿದ್ದಾರೆ. ಪ್ರಸ್ತಾವನೆ, ಅಂಬಿಕಾತನಯದತ್ತರ ಜೀವನ ಮತ್ತು ವ್ಯಕ್ತಿತ್ವ, ಅಂಬಿಕಾತನಯದತ್ತರ ಕಾವ್ಯ ಸೌಂದರ್ಯ, ಅಂಬಿಕಾತನಯದತ್ತರ ಭಾವಗೀತೆಗಳಲ್ಲಿ ವಿಷಯ ವೈವಿಧ್ಯ ಮತ್ತು ವೈಶಿಷ್ಟ್ಯ, ಅಂಬಿಕಾತನಯದತ್ತರ ಕೆಲವು ಭಾವಗೀತೆಗಳ ರಸಗ್ರಹಣ, ಅಂಬಿಕಾತನಯದತ್ತರ ಚಿಂತನ ಮಂಥನ, ಸಮಾರೋಪ ಈ ಹೆಸರಿನ ಶೀರ್ಷಿಕೆಗಳಲ್ಲಿ

ತಮ್ಮ ವಿಚಾರಗಳನ್ನು ರುಕ್ಮಿಣಿಯವರು ಮಂಡಿಸಿದ್ದಾರೆ. ಬೇಂದ್ರೆಯವರ ಜೊತೆ ಸಂಪರ್ಕವಿಟ್ಟುಕೊಂಡು, ಅವರಿಂದ ಹಲವು ಕವನಗಳ ಅರ್ಥವನ್ನು ಗ್ರಹಿಸಿ ಅವರ ಅಭಿಮಾನಿಯಾಗಿ ಈ ನಿಬಂಧವನ್ನು ರಚಿಸಿರುವ ರುಕ್ಮಿಣಿ ಅವರ ಕವನಗಳ ಮೆಚ್ಚುಗೆಗೆ ಹೆಚ್ಚಿಂವರೆ ಒಂದು ಪ್ರವೇಶವನ್ನು ಒದಗಿಸಿದ್ದಾರೆ. "ಅಂಬಿಕಾತನಯದತ್ತರ ಜೀವನ ಮತ್ತು ವ್ಯಕ್ತಿತ್ವ" ಎಂಬಲ್ಲಿ ಕೆಲವು ಹೊಸ ಸಂಗತಿಗಳು ಹೊರಬಂದಿರಬಹುದು. ಉಳಿದಂತೆ ಎಲ್ಲ ಕಡೆಗೂ ಇದೊಂದು ಮುಖ್ಯವಾಗಿ ಪ್ರಶಂಸಾತ್ಮಕವಾದ ಕೃತಿಯಾಗಿ ಉಳಿದಿದೆ. ಅವರ ಭಾವಗೀತೆಗಳ ವಿವರಣೆಯನ್ನು, ಸ್ವಲ್ಪಮಟ್ಟಿಗೆ ಅಷ್ಟೊಂದು ಆಳವಲ್ಲದ ವಿಶ್ಲೇಷಣೆಯನ್ನು ಉದ್ದಕ್ಕೂ ಕಾಣಬಹುದೇ ಹೊರತು, ಬೇಂದ್ರೆಯವರ ಭಾಷೆಯನ್ನಾಗಲಿ ಪ್ರತಿಮೆಗಳನ್ನಾಗಲಿ ಛಂದೋ ವೈವಿಧ್ಯವನ್ನಾಗಲಿ ಅವರು ಜಾನಪದದಿಂದ ಮತ್ತು ಇತರೆಡೆಗಳಿಂದ ಪಡೆದ ಪ್ರೇರಣೆಗಳನ್ನಾಗಲಿ ಆಳವಾಗಿ ವಿಚಾರ ಮಾಡುವ ಗೋಜಿಗೆ ಹೋಗಿಲ್ಲ. ಬೇಂದ್ರೆಯವರಂತಹ ಮಹತ್ವದ ಮತ್ತು ಸಾಕಷ್ಟು ಚರ್ಚಿತವಾಗಿರುವ ಕವಿಗಳ ಬಗ್ಗೆ ಬರೆಯುವುದು ಹೆಚ್ಚಿನ ಜವಾಬ್ದಾರಿಯನ್ನು ಹೊತ್ತಂತೆಯೇ. ಇದರ ಜೊತೆಗೆ ಅಲ್ಲಲ್ಲಿ ಇಂಗ್ಲೀಷಿನ ತಪ್ಪು ತಪ್ಪು ಬಳಕೆ ("ಈ ಸತ್ಯದ ಅರಿವೇ ಆನಂದ. ಅಂತೆ - Truth, Beauty and Joy forever ಎನ್ನುವ ಮಾತನ್ನು ಕೀಟ್ಸ ಎಂಬ ಆಂಗ್ಲ ಕವಿ ಹೇಳಿದ್ದು ಯಥಾರ್ಥವಾಗಿದೆ" ಎಂಬಂತಹ ವಾಕ್ಯಗಳನ್ನು ಗಮನಿಸಿ), ಅಸಂಗತವಾದ ಮಾತುಗಳು, ಉದ್ದಕ್ಕೂ ಪ್ರಶಂಸೆಗಳ ಸರಮಾಲೆ ಇವುಗಳಿಂದಾಗಿ ಈ ನಿಬಂಧ ನಮ್ಮನ್ನು ಬಹಳ ನಿರಾಸೆಗೊಳಿಸುತ್ತದೆ. ಯಾವ ಇಂಗ್ಲೀಷ್ ಉದ್ಧರಣೆಯೂ (quotation) ಸರಿಯಾಗಿಲ್ಲ. ಬೇಂದ್ರೆಯವರ ಭಾಷೆಯ ಹಿಂದಿನ ಸೂಕ್ಷ್ಮ ಧ್ವನಿಗಳನ್ನು ಗ್ರಹಿಸಿರುವುದು ಎಲ್ಲೂ ಕಂಡುಬಂದಿಲ್ಲ. ಉದಾಹರಣೆಗೆ, ಅವರ 'ಭಾವಗೀತ' ಕವನವು ಭಾವಗೀತೆ (lyric) ಎಂಬುದರ ಅತ್ಯಂತ ಸುಂದರವಾದ ಕಾವ್ಯಾತ್ಮಕ ಭಾಷ್ಯವಾಗಿದೆಯೆಂಬುದನ್ನು ಗಮನಿಸದೆ ಹೋಗಿದ್ದಾರೆ. ಈ ನಿಬಂಧದಲ್ಲಿ ಒಂದು ಬಗೆಯ ಮೇಲ್ಪದರದ ಮಾತುಗಳೇ ಉದ್ದಕ್ಕೂ ತುಂಬಿವೆ.

ಎಚ್.ಎಂ. ಶಂಕರನಾರಾಯಣರಾಯರ **ಶ್ರೀ ಹರಿಹರ ದೇವಾಲಯ** ಎಂಬ ದೊಡ್ಡ ಕೃತಿಯು ಹರಿಹರದ ಸುಪ್ರಸಿದ್ಧ ದೇವಾಲಯದ ಸಮಗ್ರ ಇತಿಹಾಸವನ್ನು ಹಿಡಿದಿಡಲು ಮಾಡಿರುವ ಒಂದು ಒಳ್ಳೆಯ ಪ್ರಶಂಸನೀಯ ಯತ್ನ. ಆ ದೇವಾಲಯದ ಚರಿತ್ರೆ, ಸ್ಥಳ ಪುರಾಣ, ಸಂಸ್ಕೃತಿಯ ಕೇಂದ್ರವಾಗಿ ಆ ದೇವಾಲಯ, ಅಲ್ಲಿ ನಡೆಯುವ ಉತ್ಸವಗಳು, ಶಿಲ್ಪಕಲೆ ಇವುಗಳ ನೂರೈವತ್ತು ಪುಟಗಳ ನಿರೂಪಣೆಯಲ್ಲದೆ, ಸುಮಾರು ಮುನ್ನೂರು ಪುಟಗಳ ಅನುಬಂಧಗಳೂ ಇಲ್ಲಿವೆ. ಅನುಬಂಧಗಳಲ್ಲಿ ಹರಿಹರದ ಎಲ್ಲ ಶಾಸನಗಳನ್ನೂ ಕೊಟ್ಟಿದೆಯಲ್ಲದೆ ಇನ್ನೂ ಹಲವಾರು ಉಪಯುಕ್ತ ವಿಷಯಗಳು ಸೇರ್ಪಡೆಯಾಗಿವೆ.

'ಪ್ರವೇಶ' ಭಾಗದಲ್ಲಿ ಈ ಕೃತಿಯ ಉದ್ದೇಶವನ್ನು ಹೀಗೆ ಹೇಳಿದೆ -

"ಇಲ್ಲಿ ಹೇಳಿರುವ ವಿಷಯ ಈ ಗ್ರಂಥದಲ್ಲಿ ಪ್ರತಿಪಾದಿತವಾದ ವಿಷಯಕ್ಕೆ ಪ್ರವೇಶವಲ್ಲ. ಯಾತ್ರಾರ್ಥಿಯಾದವರು ಹರಿಹರ ಕ್ಷೇತ್ರಕ್ಕೆ ಬಂದಿಳಿದಾಗ ದೇವಾಲಯಕ್ಕೆ ಹೋಗುವ ಮಾರ್ಗ, ಅಲ್ಲಿ ತಿಳಿಯಬೇಕಾಗಿರುವ ವಿಷಯಗಳಿಗೆ ದಿಕ್ಸೂಚಿ ಮಾತ್ರ".

ಈ ಪುಸ್ತಕ ಯಾತ್ರಾರ್ಥಿಗಳಿಗೆ ಸಹಾಯಕವಾಗಕೂಡದು ಎಂದು ಯಾರೂ ಹೇಳುವುದಿಲ್ಲ. ಆದರೆ ಹರಿಹರ ಕ್ಷೇತ್ರದ ವಿಷಯದಲ್ಲಿ ಲೇಖಕರಿಗಿರುವ ಭಕ್ತಿಭಾವನೆ ಅವರಲ್ಲಿರಬೇಕಾದ ವಾಸ್ತವ ಪ್ರಜ್ಞೆಯನ್ನು ಸ್ವಲ್ಪ ಮಸುಳಿಸಿಬಿಟ್ಟು ಬರಹವನ್ನು ಅದು ಮಾರ್ಪಡಿಸಿದೆ. ತುಂಗಭದ್ರೆಯ ನೀರು ವಿಶ್ವದಲ್ಲೇ ರುಚಿಯಾದ್ದೆಂದು ಹೇಳಿದರೂ ತಡೆದೀತು. "ಬೇಸಿಗೆಯಲ್ಲಿ ನದಿಯಿಂದ ತಂದಿಡುತ್ತಿದ್ದ ನೀರಿಗೆ ಇರುವೆ ಮುತ್ತುತ್ತಿದ್ದುದನ್ನು ನೋಡಿದ್ದೇನೆ" ಎಂದು ಹೇಳಿದರೆ ಅದನ್ನು ಗಂಭೀರವಾಗಿ ತೆಗೆದುಕೊಳ್ಳುವುದು ಕಷ್ಟವಾಗುತ್ತದೆ.

'ಹರಿಹರ ದೇವಾಲಯದ ಚರಿತ್ರೆ'ಯನ್ನು ಶಾಸನ ಮತ್ತು ಇತರ ಆಧಾರಗಳಿಂದ ಸಮರ್ಪಕವಾಗಿ ರಚಿಸಿದ್ದಾರೆ. ಹರಿಹರ ಊರು ಮತ್ತು ಅಲ್ಲಿನ ದೇವಾಲಯ ಬೇರೆ ಬೇರೆ ಶತಮಾನಗಳಲ್ಲಿ ಪ್ರಾಮುಖ್ಯವನ್ನು ಪಡೆಯುತ್ತ ಬಂದುದರ ವಿವರಣೆ ಸರಿಯಾಗಿದೆ. ಈ ಸಂದರ್ಭದಲ್ಲಿ ಬ್ರಹ್ಮಶಿವನ ಸಮಯ ಪರೀಕ್ಷೆಯಲ್ಲಿ ಕೂಡಲೂರಿನ (ಈಗಿನ ಹರಿಹರದ) ಹರಿಹರದೇವರಿಗೆ ಕಾಲುಗಳು ಇಲ್ಲ ಎಂಬ ಉಲ್ಲೇಖವಿರುವುದನ್ನು ಶ್ರೀ ರಾಯರು ಗಮನಿಸಬಹುದಿತ್ತು. ಹರಿಹರ ದೇವಾಲಯವು 1180ರ ಸುಮಾರಿನಲ್ಲಿ ಹಾಳಾಗಿ 1224ರಲ್ಲಿ ಪೋಲಾಳ್ವ ದಂಡನಾಥನಿಂದ ಹೊಸದಾಗಿ, ಹಿಂದಿಗಿಂತ ಸುಂದರವಾಗಿ ಪುನರ್ನಿರ್ಮಾಣಗೊಂಡಿತು ಎಂದು ನಾನು ಶಾಸನಗಳ ಮತ್ತು ರಾಘವಾಂಕ ಚಾರಿತ್ರ್ಯದಲ್ಲಿ ಬರುವ ದಂತಕತೆಯೊಂದರ ಆಧಾರದ ಮೇಲೆ ಪ್ರತಿಪಾದಿಸಿರುವುದನ್ನು ಶ್ರೀ ರಾಯರು ಒಪ್ಪಿಕೊಂಡಿಲ್ಲ. ಹರಿಹರ ಕ್ಷೇತ್ರದ ಶಾಸನಗಳ ಕಾಲಾನುಕ್ರಮವನ್ನು ಗಮನಿಸಬೇಕು. ಕ್ರಿ.ಶ. 1140 ; 1143 ; 1148 ; 1160 ; 1162 ; 1164 ; 1168 ; 1171; 1173 ; 1180 ; 1180 ; 1224 ; 1254 ; 1255 ; 1259 ; 1262 ; 1263; 1267 ; 1268 ; 1272 ; 1277 ; 1277 ; 1280 ; 1298 ; 1300 ; 1300; 1356 ; 1379 ; 1382 ; 1382 ; 1410 ; 1424 ; 1479 ; 1530 ; 1531; 1533 ; 1538 ; 1539 ; 1554 ; 1561 ; 1562 ; 1562 ; 1978.

ಕೊನೆಯ ಶಾಸನ ಶ್ರೀ ಶಂಕರನಾರಾಯಣರಾಯರು ಹರಿಹರ ದೇವಾಲಯಕ್ಕೆ ಒಪ್ಪಿಸಿದ ಕಂಚಿನ ಗಂಟೆಯ ಮೇಲಿದೆ. ಇದನ್ನು ಬಿಟ್ಟರೆ ಉಳಿದ ತೇದಿಗಳನ್ನು ಗಮನಿಸಬೇಕು. ಪ್ರತಿ ಶಾಸನದ ಮಧ್ಯದ ಕಾಲದ ಅಂತರವನ್ನು ಗಮನಿಸಿದರೆ, ಅತಿ ಹೆಚ್ಚಿನ ಅಂತರವಿರುವುದು 1180 ಮತ್ತು 1224, 1300 ಮತ್ತು 1356, 1479 ಮತ್ತು 1530, 1562 ಮತ್ತು 1978 ಇವುಗಳಲ್ಲಿ ಕಂಡುಬರುತ್ತದೆ. 1300-56 ಈ ಅವಧಿಯಲ್ಲಿ ಮುಸ್ಲಿಮರ ಧಾಳಿಯಿಂದಾಗಿ ದೇವಾಲಯದ ಧಾರ್ಮಿಕ ಚಟುವಟಿಕೆಗಳು ಸ್ತಬ್ಧಗೊಂಡಿದ್ದಂತೆ ಕಾಣುತ್ತದೆ. 1562 ರಿಂದ ಮುಂದೆ ಅದೇ ರೀತಿ ಸ್ತಬ್ಧಗೊಳ್ಳಲು ಕಾರಣ ವಿಜಯನಗರ ಸಾಮ್ರಾಜ್ಯವು ನಾಶಗೊಂಡುದು ಕಾರಣವಾಗಿರಬೇಕು. 1479 - 1530 ಇಲ್ಲೂ ಯಾವುದೋ ಕಾರಣದಿಂದ ಧಾರ್ಮಿಕ ಚಟುವಟಿಕೆಗಳು ನಿಲ್ಲಲು ಕಾರಣವಿರಬೇಕು. 1180ರಲ್ಲಿ ಪತ್ರಿಗಳು ದಾಖಲಾಗುವುದು ನಿಂತುಹೋಗಿ, 1224ರಲ್ಲಿ ಹಾಳಾಗಿದ್ದ ದೇವಾಲಯವನ್ನು ಪೋಲಾಳ್ವನು ನಿರ್ಮಿಸಿದನೆಂದು ಹೇಳಿರುವುದು ಆ ಅವಧಿಯಲ್ಲಿ ದೇವಾಲಯ ಬಿದ್ದುಹೋಗಿತ್ತೆಂದೂ,

ಹರಿಹರ ಕವಿ ಆ ಅವಧಿಯಲ್ಲಿ ಹರಿಹರ ಕ್ಷೇತ್ರಕ್ಕೆ ಭೇಟಿ ಕೊಟ್ಟಿದ್ದನೆಂಬ ದಂತಕತೆಯೊಂದರ ಸಹಾಯದಿಂದ ನಾನು ಅನುಮಾನಿಸಿರುವುದು ಸರಿಯಾಗಿದೆ.

ಹರಿಹರದ ಸ್ಥಳಪುರಾಣವನ್ನು ಸಂಗ್ರಹಿಸಿ ಕೊಟ್ಟಿರುವುದು ಜಾನಪದ ಶಾಸ್ತ್ರದ ವಿದ್ಯಾರ್ಥಿಗಳಿಗೆ ಉಪಯೋಗವಾಗುತ್ತದೆ.

'ಸಂಸ್ಕೃತಿಯ ಕೇಂದ್ರ' ಎಂಬ ಅಧ್ಯಾಯದಲ್ಲಿ ಅಲ್ಲಿ ನಡೆಯುತ್ತಿದ್ದ ವಿದ್ಯಾಭ್ಯಾಸದ ಸ್ವರೂಪ, ಸಮಾರಾಧನೆ, ವಿವಾಹಕಾರ್ಯ, ಜಾನಪದ, ಕಲಾಪ್ರದರ್ಶನಗಳು ಇವುಗಳ ಪರಿಚಯವಿದೆ.

ದೇವಾಲಯದಲ್ಲಿ ನಡೆಯುವ ಉತ್ಸವಗಳನ್ನೇ ಕುರಿತಾಗಿ ಒಂದು ಪ್ರತ್ಯೇಕ ಅಧ್ಯಾಯವಿದೆ. ಒಂದು ಅಧ್ಯಾಯದಲ್ಲಿ ಶಿಲ್ಪಕಲೆಯ ಪರಿಚಯವಿದೆ. ಹರಿಹರದಲ್ಲಿ ದೊರಕುವ ಎಲ್ಲ ಶಾಸನಗಳನ್ನು ಇಲ್ಲಿ ಕಾಲಾನುಕ್ರಮವಾಗಿ ಅನುಬಂಧದಲ್ಲಿ ಕೊಟ್ಟು ಅವುಗಳಿಗೆ ಟಿಪ್ಪಣಿ ಬರೆದಿದೆ. ಮೂರನೆಯ ಅನುಬಂಧದಲ್ಲಿ ಹರಿಹರ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಸ್ವಲ್ಪ ಉಪಯುಕ್ತ ಮಾಹಿತಿಯಿದೆ.

ಒಂದು ಸುಪ್ರಸಿದ್ಧ ದೇವಾಲಯವನ್ನು ಕುರಿತಂತೆ ಅದರ ಐತಿಹಾಸಿಕ, ಸಮಕಾಲೀನ, ಸಾಮಾಜಿಕ ಅಧ್ಯಯನವನ್ನು ನಡೆಸಿರುವುದು ಕನ್ನಡದಲ್ಲಿ ಇದು ಮೊತ್ತ ಮೊದಲು. ಈ ತೆರನಾದ ಕೆಲಸಗಳು ಆಗಬೇಕಾದ್ದು ಸಾಕಷ್ಟಿದೆ. ಶ್ರೀ ಶಂಕರನಾರಾಯಣರಾಯರು ಈ ಕೃತಿಯ ರಚನೆಗೆ ಸಾಕಷ್ಟು ಶ್ರಮ ವಹಿಸಿದ್ದಾರೆ. ಸುಂದರವಾಗಿ, ಅಚ್ಚಿನ ತಪ್ಪುಗಳಿಲ್ಲದಂತೆ ಅಚ್ಚಾಗಿರುವುದು, ಒಳ್ಳೆಯ ಚಿತ್ರಗಳನ್ನು ಪ್ರಕಟಿಸಿರುವುದು ಪುಸ್ತಕವನ್ನು ಹೆಚ್ಚು ಆಕರ್ಷಕವಾಗಿ ಮಾಡಿವೆ.

ಎಸ್.ಆರ್. ಗುಂಜಾಳರ **ಉತ್ತಂಗಿ ಚನ್ನಪ್ಪನವರು** ಅವರಿಗೆ ಪಿಎಚ್.ಡಿ. ಪದವಿ ದೊರಕಿಸಿಕೊಟ್ಟ ನಿಬಂಧ. ಮತದಿಂದ ಕ್ರೈಸ್ತರಾಗಿದ್ದರೂ ಕನ್ನಡವನ್ನೂ ಕನ್ನಡ ಸಾಹಿತ್ಯವನ್ನೂ ವಿಶೇಷವಾಗಿ ಸರ್ವಜ್ಞನನ್ನೂ ಆಳವಾಗಿ ಅಧ್ಯಯನ ಮಾಡಿ ತಮ್ಮ ಸಂಶೋಧನೆಗಳಿಂದ ಅವರು ನಮ್ಮ ಸಾಹಿತ್ಯಕ ಜ್ಞಾನವನ್ನು ಶ್ರೀಮಂತಗೊಳಿಸಿದವರು. ಅವರ "ಪಕ್ವ ಜೀವನದ ಕೊನೆಯ ಹನ್ನೆರಡು ವರುಷ ಅತ್ಯಂತ ನಿಕಟ ಒಡನಾಟದಲ್ಲಿದ್ದು ಅವರ ವೈವಿಧ್ಯಮಯವಾದ ಅನೇಕ ಮುಖಗಳನ್ನು ಕಂಡ" ಗುಂಜಾಳರು ಚನ್ನಪ್ಪನವರ ಜೀವನ ಮತ್ತು ಕೃತಿಗಳನ್ನು ಅಧ್ಯಯನಕ್ಕೆ ಆರಿಸಿಕೊಂಡು ಹಲವಾರು ಹೊಸ ಸಂಗತಿಗಳನ್ನು ಸಂಶೋಧಿಸಿ ಕೊಟ್ಟಿದ್ದಾರೆ.

ಭಾಗ 1 ಅವರ ಜೀವನ ಚರಿತ್ರೆಗೆ ಮೀಸಲಾಗಿದೆ. ಭಾಗ 2 ಅವರ ಕೃತಿಗಳ ಸಮೀಕ್ಷೆಗೆ ಮೀಸಲಾಗಿದ್ದರೆ ಭಾಗ 3 ಅವರ ವ್ಯಕ್ತಿತ್ವ ದರ್ಶನವನ್ನು ಒಳಗೊಂಡಿದೆ. ಅನುಬಂಧವಾಗಿ ಬಂದಿರುವ ಭಾಗ 4ರಲ್ಲಿ ಅವರ ಜನ್ಮ ಕುಂಡಲಿಯನ್ನೂ ವಂಶಾವಳಿಯನ್ನೂ ಕೊಟ್ಟಿದ್ದರೆ ಭಾಗ 5ರಲ್ಲಿ ಉತ್ತಂಗಿಯವರ ಕೃತಿಗಳು ಮತ್ತು ಅವರನ್ನು ಕುರಿತಂತೆ ಬಂದಿರುವ ಬರಹಗಳನ್ನು ಕೊಟ್ಟಿದೆ. ಗುಂಜಾಳರಿಗೆ ಉತ್ತಂಗಿಯವರು ಮಹಾರಾಷ್ಟ್ರದ ನಾರಾಯಣ

ವಾಮನ ತಿಲಕರಂತೆ ಪಂಜಾಬದ ಸಾಧು ಸುಂದರಸಿಂಗರಂತೆ ಕಂಡಿದ್ದಾರೆ; ಇದು ಅವರು ಈ ನಿಬಂಧರಚನೆಯನ್ನು ಅತ್ಯಂತ ಶ್ರದ್ಧೆಯಿಂದ ಕೈಗೊಳ್ಳಲು ಪ್ರಚೋದನೆಯನ್ನು ನೀಡಿದೆ.

ಉತ್ತಂಗಿಯವರ ಜೀವನ ಚರಿತ್ರೆಯನ್ನು ಸಂಕ್ಷಿಪ್ತವಾಗಿ ಈ ಹಿಂದೆ ಬರೆದಿದ್ದರೂ ಇದೇ ಮೊತ್ತಮೊದಲು ಗುಂಜಾಳರು ಅದನ್ನು ಅಧಿಕೃತ ಆಸ್ತಿಭಾರದ ಮೇಲೆ ನಿಲ್ಲಿಸಲು ಸಮರ್ಥರಾಗಿರುವುದು. ಅವರ ಬದುಕು ವಿಕಾಸವಾಗುತ್ತ ಬಂದುದನ್ನು, ಕ್ರಿಸ್ತನ ಅಧ್ಯಯನ ಮತ್ತು ವಚನಗಳ ಅಧ್ಯಯನ ಪರಸ್ಪರ ವರ್ಧಿಸುವ ರೀತಿಯಲ್ಲಿ ಸಾಗಿದುದನ್ನು ಗುಂಜಾಳರು ಸರಿಯಾಗಿ ಗುರುತಿಸಿದ್ದಾರೆ.

ಅವರ ಕೃತಿಗಳ ಸಮೀಕ್ಷೆಯಲ್ಲಿ ಸರ್ವಜ್ಞನನ್ನು ಕುರಿತಾದ ಅವರ ಕಾರ್ಯಕ್ಕೆ ಎರಡು ಅಧ್ಯಾಯಗಳು ಮೀಸಲಾಗಿವೆ. ಸರ್ವಜ್ಞನ ವಚನಗಳ ಉತ್ತಂಗಿಯವರ ಅಧಿಕೃತ ಆವೃತ್ತಿಯನ್ನು ಈಚೆಗೆ ಪ್ರಕಟವಾಗಿರುವ ಎಲ್. ಬಸವರಾಜು ಅವರ 'ಪರಮಾರ್ಥ'ದೊಂದಿಗೆ ಹೋಲಿಸಿ ಉತ್ತಂಗಿಯವರ ಗ್ರಂಥ ಸಂಪಾದನೆಯ ಬಗ್ಗೆ ಹೆಚ್ಚಿನ ಚರ್ಚೆ ನಡೆಸಿದ್ದರೆ ಉಚಿತವಾಗಿರುತ್ತಿತ್ತು. ಉತ್ತಂಗಿಯವರು ವಚನಕಾರರ ಕಾಲದ ಅನುಭವ ಮಂಟಪವನ್ನು ಕುರಿತಂತೆ ಶೋಧವನ್ನು ನಡೆಸಿ ಇಂಗ್ಲಿಷಿನಲ್ಲಿ ಕೃತಿಯನ್ನು ರಚಿಸಿದರು. ಅನುಭವಮಂಟಪದ ಐತಿಹಾಸಿಕತೆಯ ಬಗ್ಗೆ ಸಂದೇಹಗಳು ವ್ಯಕ್ತವಾದಾಗ "ಅನುಭವ ಮಂಟಪದ ಐತಿಹಾಸಿಕತೆ" ಎಂಬ ಕೃತಿಯನ್ನು ಕನ್ನಡದಲ್ಲಿ ರಚಿಸಿದರು. ಈ ವಿಷಯಕವಾಗಿ ಇಲ್ಲಿಯವರೆಗೆ ನಡೆದಿರುವ ಎಲ್ಲ ಚರ್ಚೆಗಳನ್ನೂ ಗುಂಜಾಳರು ಗಮನಿಸಿದ್ದಾರೆ ಎಂದು ಹೇಳಲು ಬರುವಂತಿಲ್ಲ. ಸಿದ್ಧರಾಮನ ಲಿಂಗಧಾರಣೆಯ ವಿಷಯಕ ಚರ್ಚೆ, ಮೋಳಿಗೆ ಮಾರಯ್ಯ ಮತ್ತು ರಾಣಿ ಮಹಾದೇವಿಯವರ ವಚನಗಳನ್ನು ಸಂಪಾದಿಸಲು ಉತ್ತಂಗಿಯವರಿಗೆ ಒದಗಿ ಬಂದ ಸಂದರ್ಭ, ಇವುಗಳ ಜೊತೆಗೆ ಉತ್ತಂಗಿಯವರ ಇತರ ಕೃತಿಗಳ ಸಮಗ್ರ ಸಮೀಕ್ಷೆಯನ್ನು ಮಾಡಿದ್ದಾರೆ.

ವ್ಯಕ್ತಿತ್ವ ದರ್ಶನದಲ್ಲಿ ಕನ್ನಡನಾಡಿನ ಹಲವರು ವಿದ್ವಾಂಸರು ಉತ್ತಂಗಿಯವರನ್ನು ಕಂಡಿರುವ ರೀತಿಯನ್ನು ವಿಶ್ಲೇಷಿಸಿದ್ದಾರೆ. ಉತ್ತಂಗಿಯವರು ತಮ್ಮ ವಿದ್ವತ್ತಿನಂತೆಯೇ ಸಜ್ಜನಿಕೆಯಿಂದಲೂ ಪ್ರಖ್ಯಾತರಾದವರಾದ ಕಾರಣ ಅವರ ವ್ಯಕ್ತಿತ್ವವನ್ನು ಸಮುಚಿತವಾದ ರೀತಿಯಲ್ಲಿ ಚಿತ್ರಿಸಬೇಕಾದುದು ಸಾಧುವಾದುದಾಗಿದೆ.

ವ್ಯಾಪಕವಾಗಿ ಅಧ್ಯಯನ ಮಾಡಿ, ಎಚ್ಚರದಿಂದ ವಿವರಗಳನ್ನು ಕಲೆಹಾಕಿ, ಶಾಸ್ತ್ರೀಯವಾಗಿ ವಿಶ್ಲೇಷಣೆಯನ್ನು ನಡೆಸಿ ಉತ್ತಂಗಿ ಚನ್ನಪ್ಪನವರ ಬದುಕು ಬರಹಗಳನ್ನು ದಾಖಲುಗೊಳಿಸಿರುವ ಈ ಕೃತಿ ಕನ್ನಡಕ್ಕೆ ಒಂದು ಬೆಲೆಯುಳ್ಳ ಕಾಣಿಕೆಯಾಗಿದೆ.

**ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು** ಶ್ರೀ ನಂ. ಶಂಕರನಾರಾಯಣರಿಗೆ ಪಿಎಚ್.ಡಿ ಪ್ರಶಸ್ತಿಯನ್ನು ದೊರಕಿಸಿಕೊಟ್ಟ ನಿಬಂಧ. ಕನ್ನಡದಲ್ಲಿ ಜಾನಪದ ಶಾಸ್ತ್ರೀಯ ಅಧ್ಯಯನಗಳು ಹೆಚ್ಚು ಹೆಚ್ಚು ಖಚಿತವಾಗುತ್ತಿವೆ. ತರುಣರು ಆ ಕ್ಷೇತ್ರದಲ್ಲಿ ಕೆಲಸ ಮಾಡುತ್ತ ವಿದ್ವಾಂಸರಾಗಿ ವಿಕಾಸ ಹೊಂದುತ್ತಿದ್ದಾರೆಂಬುದಕ್ಕೆ ಈ ನಿಬಂಧ ಒಳ್ಳೆಯ ಸಾಕ್ಷಿಯಾಗಿದೆ.

ಜಾನಪದ ಶಾಸ್ತ್ರವು ಸಮಾಜಶಾಸ್ತ್ರ, ಮಾನವಶಾಸ್ತ್ರ, ಭಾಷಾ ವಿಜ್ಞಾನ, ಪುರಾಣ ಶಾಸ್ತ್ರಗಳೊಡನೆ ತೀರ ನಿಕಟ ಸಂಪರ್ಕವನ್ನು ಪಡೆದಿರುವ ಒಂದು ಶೈಕ್ಷಣಿಕ ಶಿಸ್ತು. ಕಾಡು ಗೊಲ್ಲರಂತಹ ತೀರ ಹಿಂದುಳಿದ ಜನಾಂಗದ ಬದುಕಿನ ಇತಿಹಾಸ, ಸಮಾಜ ರಚನೆ, ನಂಬಿಕೆಗಳು, ಆಧುನಿಕತೆ ಅವರ ಮೇಲೆ ಮಾಡಿರುವ ಪರಿಣಾಮ, ಇತರ ಜನಾಂಗಗಳ ಜೊತೆ ಅದು ಏರ್ಪಡಿಸಿಕೊಂಡಿರುವ ಸಂಬಂಧ ಇವೇ ಮೊದಲಾದವು ಇಲ್ಲಿಯ ವಸ್ತು. ಪೀಠಿಕೆ ಭಾಗದಲ್ಲಿ ಗೊಲ್ಲ ಬುಡಕಟ್ಟಿನ ಲಕ್ಷಣ, ಸ್ವರೂಪಗಳನ್ನು ಕೊಟ್ಟು ಭಾರತದಲ್ಲಿ ಬುಡಕಟ್ಟುಗಳ ಅಧ್ಯಯನದ ಹಿನ್ನೆಲೆಯಲ್ಲಿ ತಮ್ಮ ಅಧ್ಯಯನದ ಕ್ರಮವನ್ನು ಶಂಕರನಾರಾಯಣ ಖಚಿತಪಡಿಸಿಕೊಂಡು ತಮ್ಮ ಅಧ್ಯಯನದ ಉದ್ದೇಶ, ವಿಧಾನಗಳನ್ನು ಸ್ಪಷ್ಟಪಡಿಸಿದ್ದಾರೆ. 'ಬುಡಕಟ್ಟು' (Tribe) ಎಂದರೇನೆಂಬುದನ್ನು ವಿವರಿಸಿ ಆ ಹಿನ್ನೆಲೆಯಲ್ಲಿ ಕಾಡುಗೊಲ್ಲರು ಜಾತಿಗಿಂತ ಒಂದು ಬುಡಕಟ್ಟು ಎಂಬ ನಿರ್ಣಯಕ್ಕೆ ಬಂದಿದ್ದಾರೆ. ಆ ಬುಡಕಟ್ಟಿನ ಅಧ್ಯಯನಕ್ಕೆ ತಾವು ನಡೆಸಿದ ಕ್ಷೇತ್ರ ಕಾರ್ಯದ ವಿಧಾನವನ್ನು ವರ್ಣಿಸಿದ್ದಾರೆ.

ಎರಡನೆಯ ಅಧ್ಯಾಯದಲ್ಲಿ ಕಾಡುಗೊಲ್ಲ ಪದದ ನಿಷ್ಪತ್ತಿ, ಅವರು ಇತರ ಗೊಲ್ಲರೊಡನೆ ಇತರ ಜಾತಿಯ ಜನಗಳೊಡನೆ ಪಡೆದಿರುವ ಸಂಬಂಧ, ಅವರ ಸಮಾಜದ ಒಳವಿಭಾಗಗಳು, ಅವರ ಧಾರ್ಮಿಕ ಕೇಂದ್ರಗಳು, ಉದ್ಯೋಗ, ಅವರ ವೇಷಭೂಷಣಗಳು, ಹೆಸರುಗಳು, ಸಾಹಿತ್ಯ, ವೈದ್ಯ, ಕಲೆ ಇವುಗಳ ಸಮೀಕ್ಷೆಯಿದೆ. 'ಗೊಲ್ಲ' ಪದವನ್ನು ಸಂಸ್ಕೃತದ 'ಗೋವಲ'ದಿಂದ ನಿಷ್ಪನ್ನ ಮಾಡಬಹುದು - ಅದನ್ನು ಶಂಕರನಾರಾಯಣ ಗಮನಿಸಬೇಕು. ಅವರನ್ನು 'ಕಲ್ಲಿ ಗೊಲ್ಲ'ರೆಂದು ಕರೆಯಲು ಅವರು ಹಿಡಿಯುವ ಕಲ್ಲಿ ಚೀಲ ಕಾರಣವಲ್ಲ, ಅವರ ಹಟ್ಟಿಯ ಸುತ್ತ ಹಾಕುವ ಕಳ್ಳಿ ಬೇಲಿಯೇ ಕಾರಣ ಎಂಬ ವಿವರಣೆ ಸರಿಯಾಗಿರುವಂತಿದೆ. ಗೊಲ್ಲರ ಬೇರೆ ಬೇರೆ 'ಕುಲ'ಗಳ ಪಟ್ಟಿ ಗಮನಾರ್ಹವಾಗಿದೆ.

ಕಾಡುಗೊಲ್ಲರ ಪುರಾಣಗಳನ್ನೂ ಐತಿಹ್ಯಗಳನ್ನೂ ಎಲ್ಲ ವಿವರಗಳೊಂದಿಗೆ ಸಂಗ್ರಹಿಸಿಕೊಟ್ಟಿರುವುದು ಮೆಚ್ಚಬೇಕಾದ ಸಂಗತಿ. ಇವುಗಳಲ್ಲಿ ಜುಂಜಪ್ಪ, ಎತ್ತಯ್ಯ, ಚಿತ್ರದೇವರು, ಕಾಟಮ ದೇವರು, ಪಾತೇ ದೇವರು, ಕೇತೇ ದೇವರ ಕತೆಗಳು ಮುಖ್ಯವಾದುವು. ಪುರಾಣಗಳ ವಿಶ್ಲೇಷಣೆಯಿಂದ ಆಯಾ ಜನಾಂಗದ ಅಥವಾ ಬುಡಕಟ್ಟಿನ ಪ್ರಾಚೀನ ಇತಿಹಾಸವನ್ನು ಪುನಾರಚಿಸಲು ಸಾಧ್ಯವೆಂಬ ಸಂಗತಿ ಶಂಕರನಾರಾಯಣ ಅವರಿಗೆ ತಿಳಿದಿದೆ. ಆ ವಿಶ್ಲೇಷಣೆಯ ಕಾರ್ಯವನ್ನು ಈ ಮೇಲಿನ ಕತೆಗಳಿಗೆ ಅನ್ವಯಿಸಿ ಉಪಸಂಹಾರ ಭಾಗದಲ್ಲಿ ತೋರಿಸಿದ್ದಾರೆ.

ಸಂಪ್ರದಾಯಗಳು ಮತ್ತು ನಂಬಿಕೆಗಳನ್ನು ಎರಡು ಅಧ್ಯಾಯಗಳಲ್ಲಿ ಸಂಗ್ರಹಿಸಿಕೊಡಲಾಗಿದೆ. ಹಬ್ಬಗಳು, ಜಾತ್ರೆಗಳು, ಬಲಿ, ಹರಕೆಗಳು, ವ್ರತಗಳು, ಜೆನ್ನಿಗೆ ಕುರಿ, ಪಟ್ಟದ ಬಸವ ಇವುಗಳನ್ನು ಕುರಿತಂತೆ ಒಳ್ಳೆಯ ಮಾಹಿತಿಯನ್ನು ಸಂಗ್ರಹಿಸಿದ್ದಾರೆ. ಹಾಗೆಯೇ ಜನನ, ಋತು ಶಾಂತಿ, ಮದುವೆ, ಸಾವು ಇವೇ ಮೊದಲಾದ ಸಂಸ್ಕಾರಗಳನ್ನು

ಸಂಗ್ರಹಿಸಿದ್ದಾರೆ. ಕಾಡುಗೊಲ್ಲರಲ್ಲಿನ ಗಡ್ಡ ಮಂಡೆಯ ಶಾಸ್ತ್ರವನ್ನು ಸಕಲೇಶಪುರ ತಾಲೂಕಿನಲ್ಲಿರುವ ಹರಿಜನರ ಅದೇ ಹೆಸರಿನ ಶಾಸ್ತ್ರದ ಜೊತೆಗೆ ಹೋಲಿಸಿ ನೋಡಬಹುದು.

ಉಪಸಂಹಾರ ಭಾಗ ಈ ನಿಬಂಧದಲ್ಲಿ ಅತ್ಯಂತ ಮಹತ್ವದ್ದು. ಕಾಡುಗೊಲ್ಲರು ಅಚ್ಚ ಕನ್ನಡಿಗರಾಗಿದ್ದು ಯಾವುದೋ ಘಟ್ಟದಲ್ಲಿ - ಬಹುಶಃ ಮುಸಲ್ಮಾನರ ಕಾಟವನ್ನು ತಡೆಯಲಾರದೆ ವಿಜಯನಗರ ಕಾಲದಲ್ಲಿ ತುಂಗಭದ್ರೆಯನ್ನು ದಾಟಿ ದಕ್ಷಿಣಕ್ಕೆ ಬಂದಿರಬಹುದೆಂದು ಶಂಕರನಾರಾಯಣ ಊಹಿಸಿದ್ದಾರೆ. ಇಂತಹ ಕತೆಗಳನ್ನು ಹಲವು ಜಾತಿ ಅಥವಾ ಬುಡಕಟ್ಟುಗಳಿಗೂ ಹೇಳುತ್ತಾರೆಂಬುದನ್ನು ಈ ಸಂದರ್ಭದಲ್ಲಿ ನೆನೆಯಬೇಕು. "ತಾಳಿ ಕಟ್ಟುವ ಪದ್ಧತಿ ಮೊದಲಿಗೆ ಕಾಡುಗೊಲ್ಲರಲ್ಲಿ ಇಲ್ಲದೆ ಇತರ ಜಾತಿಗಳ ಸಂಪರ್ಕದಿಂದ ಆ ಪದ್ಧತಿ ಬಳಕೆಗೆ ಬಂದಿರುವ ಸಾಧ್ಯತೆ ಉಂಟೆಂಬುದು ಹೆಚ್ಚು ಸಮಂಜಸ" ಎಂಬ ಮಾತು ಬಹು ಗಮನಾರ್ಹ. ತಾಳಿ ಕಟ್ಟುವ ಪದ್ಧತಿಯನ್ನೇ ಗಮಸದಲ್ಲಿಟ್ಟುಕೊಂಡು ಯಾರಾದರೂ ಪಿಎಚ್.ಡಿ. ಪದವಿಗೆ ಸಂಶೋಧನೆಗಳನ್ನು ಕೈಗೊಳ್ಳಬಹುದು. ಕಾಡುಗೊಲ್ಲರು ಮೂಲತಃ ಶೈವರೆಂದೂ ಊರು ಗೊಲ್ಲರು ಮೂಲತಃ ವೈಷ್ಣವರೆಂದೂ ಇನ್ನೊಂದು ತೀರ್ಮಾನಕ್ಕೆ ಬಂದಿದ್ದಾರೆ. ಆ ಬುಡಕಟ್ಟಿನ ಪುರಾಣಗಳಲ್ಲೆಲ್ಲ ವಿಸ್ತಾರವಾದುದು ಮತ್ತು ಬಹು ಗಮನಾರ್ಹವಾದುದು ಜುಂಜಪ್ಪನದೆಂದು ಗುರುತಿಸಿರುವುದು ಸರಿಯಾಗಿದೆ. ಜುಂಜಪ್ಪ ಕಾಡುಗೊಲ್ಲರ ಸಾಂಸ್ಕೃತಿಕ ವೀರ ಮತ್ತು ಅವನ ಪುರಾಣದಲ್ಲಿ "ಕಾಡುಗೊಲ್ಲರ ಮೂಲ ಸಂಸ್ಕೃತಿಯ ಸಮಗ್ರ ನೋಟ ಸಿಗುತ್ತದೆ". ಎತ್ತಪ್ಪನೂ (ಹೆಸರು ಗಮನಾರ್ಹ - ಗೋವಲರಾದ ಜನಕ್ಕೆ ಎತ್ತು ಆರಾಧ್ಯ ದೈವ) ಇನ್ನೊಬ್ಬ ಅಂತಹ ಸಾಂಸ್ಕೃತಿಕ ವೀರ. ಹುರುಳಿ, ನವಣೆ 'ವ್ರತ'ಗಳಿಗೆ ಕಾರಣವನ್ನು ಇನ್ನೂ ಕಂಡುಕೊಳ್ಳಬೇಕಾಗಿದೆ. ಕಾಡು ಗೊಲ್ಲರಲ್ಲಿ ವಿಶೇಷವಾಗಿ ಸಾಹಿತ್ಯ ಲಭ್ಯವಾಗಿದ್ದು ಕಲೆಗಳು ಲಭ್ಯವಾಗದಿರಲು ಕಾರಣ ಅವರ ಅಲೆಮಾರಿತನವೆಂಬ ಊಹೆ ಸರಿಯಾಗಿದೆ.

ಅಪಾರವಾದ ಶ್ರಮ ಶ್ರದ್ಧೆಗಳಿಂದ ಆ ಜನಾಂಗವನ್ನು ಅಭ್ಯಸಿಸಿ ನಿಬಂಧವನ್ನು ಸಿದ್ಧಪಡಿಸಿರುವ ಶಂಕರನಾರಾಯಣರು ಅಭಿನಂದನಾರ್ಹರಾಗಿದ್ದಾರೆ. ಸಾಮಗ್ರಿಯನ್ನು ಎಲ್ಲಿಯೂ ಭಾವೋದ್ರೇಕಕ್ಕೆ ಒಳಗಾಗದೆ ಸತ್ಯನಿಷ್ಠ ಸಂಶೋಧಕನ ದೃಷ್ಟಿಯಿಂದ ಕಂಡು ವಿಶ್ಲೇಷಿಸಿದ್ದಾರೆ. ಪುಸ್ತಕದ ಕೊನೆಯಲ್ಲಿ ಕೊಟ್ಟಿರುವ ಚಿತ್ರಗಳಾಗಲಿ ಶಬ್ದಸೂಚಿಯಾಗಲಿ ಕೃತಿಯ ಉಪಯುಕ್ತತೆಯನ್ನು ಹೆಚ್ಚಿಸಿವೆ.

**ಕನ್ನಡ ಸಾಂಗತ್ಯ – ಪ್ರಕಾರ – ಒಂದು ಸಂಕ್ಷಿಪ್ತ ಸಮೀಕ್ಷೆ** ಆ ಕೃತಿ ಡಾ. ಆರ್. ಎಸ್. ವಿಜಯಲಕ್ಷ್ಮಿಯವರ ಪಿಎಚ್.ಡಿ ನಿಬಂಧ. ಮೊದಲು ಪದವಿಗಾಗಿ ಒಪ್ಪಿಸಿದ್ದ ನಿಬಂಧವು ಸಂಗ್ರಹಗೊಂಡಿರುವುದರಿಂದ ಅದರ ಸಾರಾಂಶವು ಮಾತ್ರ ಇಲ್ಲಿ ದೊರಕುತ್ತದೆ. 1975ರವರೆಗೆ ಸಾಂಗತ್ಯ ಪ್ರಕಾರವನ್ನು ಕುರಿತಂತೆ ನಡೆದಿರುವ ಚರ್ಚೆ ಮತ್ತು ಅಲ್ಲಿಯವರೆಗೆ ಪ್ರಕಟವಾಗಿರುವ ಸಾಂಗತ್ಯ ಕೃತಿಗಳನ್ನು ಮಾತ್ರ ಗಮನಿಸಿರುವುದಾಗಿ ಲೇಖಕಿ ತಮ್ಮ ಪ್ರಸ್ತಾವನೆಯಲ್ಲಿ ಸ್ಪಷ್ಟಪಡಿಸಿದ್ದಾರೆ. ಪೀಠಿಕೆಯಲ್ಲಿ ತಮ್ಮ ಅಧ್ಯಯನ ಕ್ರಮವನ್ನೂ ಸಾಂಗತ್ಯ ಕವಿಗಳ ಸಾಹಿತ್ಯದ

ಪರಿಚಯವನ್ನೂ ಸಂಕ್ಷಿಪ್ತವಾಗಿ ಮಾಡಿಕೊಟ್ಟಿದ್ದಾರೆ. ಸಾಂಗತ್ಯದ ಪ್ರಾಚೀನತೆ, ಹೆಸರು ಲಕ್ಷಣಗಳನ್ನು ಕುರಿತಾಗಿ ಬರೆಯುವಾಗ ಈಗಾಗಲೇ ನಡೆದಿರುವ ಚರ್ಚೆಗಳ ಸಾರಾಂಶವನ್ನು ಅಚ್ಚುಕಟ್ಟಾಗಿ ಸಂಗ್ರಹಿಸಿ ಕೊಟ್ಟಿದ್ದಾರೆ. ಇದರಲ್ಲಿ ಹೊಸದೇನನ್ನೂ ವಿಜಯಲಕ್ಷ್ಮಿ ಹೇಳಲಾಗಿಲ್ಲ. ಸಾಂಗತ್ಯ ಕವಿಗಳ ಪ್ರಾದೇಶಿಕ ನೆಲೆಗಳ ಚರ್ಚೆ ಸ್ವಾರಸ್ಯವಾಗಿವೆ. 'ಸಾಂಗತ್ಯ ಸಾಹಿತ್ಯ ಪ್ರವೇಶ'ವು ನಿಬಂಧದ ಬಹುಮುಖ್ಯಭಾಗ. ಬೇರೆ ಬೇರೆ ಮತದ ಕವಿಗಳ ಸಾಂಗತ್ಯ ಪ್ರಕಾರದ ಕೃಷಿ, ಅವರ ಧೋರಣೆಗಳು, ಸಾಹಿತ್ಯಕ ಸಿದ್ಧಿಯನ್ನು ವಿವರಿಸಿದ್ದಾರೆ. ಕೆಲವು ಪ್ರಮುಖ ಸಾಂಗತ್ಯ ಕೃತಿಗಳ ವಸ್ತು ವಿಶ್ಲೇಷಣೆ ಒಂದು ಅಧ್ಯಾಯದಲ್ಲಿ ಬಂದಿದೆ. ಈ ಸಂದರ್ಭದಲ್ಲಿ ಎಲ್ಲ ಪ್ರಕಟಿತ ಸಾಂಗತ್ಯ ಕೃತಿಗಳನ್ನಲ್ಲದೆ ಹಸ್ತಪ್ರತಿಗಳಲ್ಲಿನ ಹಲವಾರು ಸಾಂಗತ್ಯ ಕೃತಿಗಳನ್ನೂ ಅವರು ನೋಡಿದ್ದಾರೆ. ಕನ್ನಡ ಸಾಹಿತ್ಯಕ್ಕೆ ಸಾಂಗತ್ಯ ಪ್ರಕಾರದ ಕೊಡುಗೆಯ ಸ್ವರೂಪವೇನು ಎಂಬುದನ್ನು ತಿಳಿಯಲು ಇದೊಂದು ಸಂಕ್ಷಿಪ್ತ ಮಾರ್ಗದರ್ಶಿ. ಈಗಿರುವಂತೆ ಪಿಎಚ್.ಡಿ. ನಿಬಂಧವಾಗಿ ಈ ಕೃತಿ ಓದುಗರನ್ನು ಅಷ್ಟಾಗಿ ನಿರಾಶೆಗೊಳಿಸುವುದಿಲ್ಲವೆಂದು ಹೇಳಬಹುದೇ ಹೊರತು, ಅದಕ್ಕಿಂತ ಹೆಚ್ಚು ಏನನ್ನೂ ಹೇಳಲಾಗುವುದಿಲ್ಲ. ಅವರ ನಿಬಂಧವನ್ನು ನಾನು ಹಸ್ತಪ್ರತಿಯಲ್ಲಿ ನೋಡಿದ್ದಾಗ ಅದರಲ್ಲಿದ್ದ ಎಷ್ಟೋ ವಿವರಗಳು ನಿಬಂಧದ ಸಂಕ್ಷೇಪೀಕರಣದಲ್ಲಿ ಮರೆಯಾಗಿವೆಯೆಂದು ಇಲ್ಲಿ ಹೇಳಬೇಕಾಗಿದೆ.

**ವೀರಶೈವಪುರಾಣಗಳು - ಒಂದು ಅಧ್ಯಯನ** ಡಾ. ಎಸ್. ವಿದ್ಯಾಶಂಕರರ ಪಿಎಚ್.ಡಿ. ನಿಬಂಧ. ಕನ್ನಡದಲ್ಲಿ ಜೈನಪುರಾಣಗಳಿಗಿರುವಂತೆ ವೀರಶೈವ ಪುರಾಣಗಳಿಗೂ ಒಂದು ವಿಶಿಷ್ಟ ಸ್ಥಾನವಿದೆ. ಮತ್ತು ಪುರಾಣರಚನೆಯ ಪದ್ಧತಿಯು ಇಂದಿಗೂ ವೀರಶೈವರಲ್ಲಿ ಮುಂದುವರಿದಿರುವುದು ಗಮನಾರ್ಹ ಸಂಗತಿ. 'ಪುರಾಣ'ಗಳ ಅಧ್ಯಯನಕ್ಕೆ ಇಂದಿನ ಜಾನಪದ ಶಾಸ್ತ್ರದಲ್ಲಿ ಹೆಚ್ಚಿನ ಮಹತ್ವ ಸಲ್ಲುತ್ತದೆ, ಮತ್ತು ಪುರಾಣಗಳನ್ನು ನೋಡುವ ದೃಷ್ಟಿಯೂ ಬೇರೆಯಾಗುತ್ತಿದೆ. ಈ ಹಿನ್ನೆಲೆಯಲ್ಲಿ ಎಸ್. ವಿದ್ಯಾಶಂಕರರು ವೀರಶೈವ ಪುರಾಣಗಳನ್ನು ಅಧ್ಯಯನದ ವಸ್ತುವಾಗಿ ಆರಿಸಿಕೊಂಡಿರುವುದು ಪ್ರಶಂಸನೀಯವಾಗಿದೆ.

ಇದರಲ್ಲಿ ಎರಡು ಭಾಗಗಳಿವೆ. ಭಾಗ ಒಂದರಲ್ಲಿ ವೀರಶೈವ ಪುರಾಣಗಳ ಹಿನ್ನೆಲೆಯನ್ನು ಚಿತ್ರಿಸಲಾಗಿದೆ. ಅದರಲ್ಲಿ ವೈದಿಕಪುರಾಣಗಳು ಮತ್ತು ಜೈನಪುರಾಣಗಳು ಎಂಬ ಉಪವಿಭಾಗಗಳಲ್ಲದೆ, 'ಪೆರಿಯಪುರಾಣ'ಕ್ಕೆ ಸಾಕಷ್ಟು ಪುಟಗಳನ್ನು ಮೀಸಲಾಗಿಟ್ಟಿದೆ. ಎರಡನೆಯ ಭಾಗ ವೀರಶೈವ ಪುರಾಣಗಳ ಅಧ್ಯಯನಕ್ಕೆ ಮೀಸಲಾಗಿದೆ. ಇವರಲ್ಲಿ ಒಂಬತ್ತು ಉಪವಿಭಾಗಗಳಿವೆ. ಮೊದಲ ಉಪವಿಭಾಗದಲ್ಲಿ ವೀರಶೈವಪುರಾಣಗಳ ಅರ್ಥ, ಉದ್ದೇಶ, ಲಕ್ಷಣ, ಹುಟ್ಟು, ಬೆಳವಣಿಗೆ, ವರ್ಗೀಕರಣಗಳು ಬಂದಿವೆ. ಎರಡನೆಯ ಉಪವಿಭಾಗದಲ್ಲಿ ವೀರಶೈವ ಪುರಾಣಕಾರರ 'ಪ್ರತಿಜ್ಞೆ'ಯನ್ನು ಪ್ರಸ್ತಾಪಿಸಲಾಗಿದೆ. 'ಪ್ರತಿಜ್ಞೆ'ಯೆಂಬುದು ಅವರ ಸಂಕಲ್ಪ, ಉದ್ದೇಶಗಳಿಂದ ಭಿನ್ನವಾಗಿಲ್ಲವಾದ್ದರಿಂದ ಅದನ್ನು ಮೊದಲ ಉಪವಿಭಾಗದಲ್ಲೇ ಸಮಾವೇಶಗೊಳಿಸಬಹುದಿತ್ತು. ಅವುಗಳನ್ನು ಪ್ರಚಾರ ಮಾಡಿದ ರೀತಿಯನ್ನು ಕುರಿತೇ ಒಂದು ಉಪವಿಭಾಗವಿರುವುದು ಸರಿಯಾಗಿದೆ. ಇದರಲ್ಲಿ ಹಲವಾರು ಪ್ರಾಚೀನ ಪೌರಾಣಿಕರ

ಹೆಸರುಗಳು ಬಂದಿವೆ. ವಾಸ್ತವವಾಗಿ ವೀರಶೈವ ಮತದ ತತ್ವಗಳೂ ನೀತಿಯೂ ನಾಯಕರ ಜೀವನ ಚರಿತ್ರೆಗಳೂ ಜನಸಾಮಾನ್ಯರಿಗೆ ತಿಳಿದುದು ಪುರಾಣವಾಚನದ ಮೂಲಕವಾಗಿಯೇ. ಶ್ರಾವಣಮಾಸ, 'ಗಣಾರಾಧನೆ' ಹೀಗೆ ಬೇರೆ ಬೇರೆ ಉತ್ಸವಗಳ ಸಂದರ್ಭಗಳಲ್ಲಿ ಪುರಾಣವಾಚನ ಮಾಡಿಸುವುದು ರೂಢಿ. ಹಿಂದೆ ಇದ್ದ, ಈಗಲೂ ಜೀವಂತವಿರುವ ಈ ಪದ್ಧತಿಯನ್ನು ಇಲ್ಲಿ ಪರಿಚಯ ಮಾಡಿಕೊಟ್ಟಿದ್ದಾರೆ. ನಾಲ್ಕನೆಯ ಉಪ ಅಧ್ಯಾಯ ಪುರಾಣಗಳ ಕಾವ್ಯಸೌಂದರ್ಯಕ್ಕೆ ಮೀಸಲಾಗಿದೆ. ಈ ವಿಭಾಗದಲ್ಲಿ ವೀರಶೈವ ಪುರಾಣಗಳು ರಚನೆಗೊಂಡ ಛಂದಸ್ಸುಗಳ ಅಥವಾ ಪ್ರಕಾರಗಳ ನಿರೂಪಣೆಯಿದೆ. ಪುರಾಣಗಳ 'ಕಾವ್ಯ ಸೌಂದರ್ಯ'ವನ್ನು ವಿಶದಪಡಿಸಲು ಅಂತಹ ಗಂಭೀರ ಪ್ರಯತ್ನವನ್ನೇ ಇಲ್ಲಿ ಮಾಡಿದಂತೆ ಕಾಣುವುದಿಲ್ಲ. ಮುಂದಿನ 'ವರ್ಣನೆ' ಭಾಗದಲ್ಲಿ ವೀರಶೈವ ಪುರಾಣಗಳಲ್ಲಿ ಬರುವ ವೇಶ್ಯಾವಾಟಿ, ವನವಿಹಾರ, ಸಮುದ್ರ, ಸೂರ್ಯಾಸ್ತ ಇವೇ ಮೊದಲಾದ ವರ್ಣನೆಗಳ ನಿರೂಪಣೆಯಿದೆ. ವೀರಶೈವ ಪುರಾಣಗಳಲ್ಲಿ ಬಂದಿರುವ ಅಲಂಕಾರಗಳ ಪಟ್ಟಿ ಅನಗತ್ಯವಾಗಿದ್ದು ಈಗಿನ ಕಾಲದ ಬರವಣಿಗೆಗೆ ಹೊಂದದ ರೀತಿ ಅದು. ವೀರಶೈವಪುರಾಣಗಳಲ್ಲಿ ಬರುವ ಕಥನಕಲೆಯ ಭಾಗ ಅಮೂಲ್ಯವಾದುದು. ಅವುಗಳಲ್ಲಿ ಬೇರೆ ಬೇರೆ ಕತೆಗಳನ್ನು ತಂದು ಸೇರಿಸುವ ರೀತಿಯನ್ನು ಅದರ ತಂತ್ರವನ್ನು ಬಹು ಕ್ರಮಬದ್ಧವಾಗಿ ವಿದ್ಯಾಶಂಕರ್ ನಿರೂಪಿಸಿದ್ದಾರೆ. ಪುರಾಣಗಳಲ್ಲಿ ಬರುವ ಕತೆಗಳನ್ನು ಸಾದೃಶ್ಯಪರ ಕಥೆಗಳು, ದೃಷ್ಟಾಂತ ಕಥೆಗಳು, ತತ್ವಪ್ರಧಾನ ಕಥೆಗಳು, ಪವಾಡ ಕಥೆಗಳೆಂದು ವಿಂಗಡಿಸಿರುವುದು ಸರಿಯಾಗಿದೆ. ವಾಸ್ತವವಾಗಿ ಯಾವುದೇ ಪುರಾಣದಲ್ಲಿ ಕಥಾ ನಾಯಕನ ಜೀವನಚರಿತ್ರೆ ಒಂದು ನಿಮಿತ್ತ ಮಾತ್ರ, ಆ ನಿಮಿತ್ತದಲ್ಲಿ ಪ್ರಾಚೀನರ ಸಮಕಾಲೀನರ ದೇವಾನುದೇವತೆಗಳ ಕತೆಗಳನ್ನು ಹೇಳುವುದು, ತನ್ಮೂಲಕ ಪುರಾಣ ಕರ್ತೃವಿಗೆ ತಿಳಿದಿರುವ ಸಮಸ್ತ ಜ್ಞಾನವನ್ನೂ ನಿರೂಪಿಸುವುದು ಪುರಾಣಗಳ ಉದ್ದೇಶ. ಕೊನೆಯ ಉಪವಿಭಾಗದಲ್ಲಿ ವೀರಶೈವ ಪುರಾಣಗಳು ಪ್ರತಿಪಾದಿಸುವ ಧರ್ಮದ ಸ್ವರೂಪ, ನೀತಿಗಳ ನಿರೂಪಣೆಯಿದೆ.

ವಿದ್ಯಾಶಂಕರರ ಈ ಕೃತಿ ವೀರಶೈವ ಪುರಾಣಗಳ ಸ್ವರೂಪವನ್ನು ಕುರಿತು ಸಮಗ್ರವಾಗಿ ವಿವೇಚಿಸಿ ಅವುಗಳ ಬಗ್ಗೆ ನಮ್ಮ ಅರಿವನ್ನು ಹೆಚ್ಚಿಸಿದೆಯೆಂಬಲ್ಲಿ ಅನುಮಾನವಿಲ್ಲ. ಆದರೆ, ಬರವಣಿಗೆಯಲ್ಲಿ ಅಲ್ಲಲ್ಲಿ ಅನಗತ್ಯವಾಗಿ ಹಿನ್ನೆಲೆಯ ವಿಷಯಗಳನ್ನು ತಂದಿರುವುದು ಬರಹವನ್ನು ಜಾಳುಮಾಡುತ್ತದೆ. ಹಲವು ಗ್ರಂಥಗಳನ್ನು ಅಭ್ಯಾಸಮಾಡಿ, ವೀರಶೈವ ಪುರಾಣಗಳನ್ನು ಎಚ್ಚರಿಕೆಯಿಂದ ಓದಿ ಸಿದ್ಧಪಡಿಸಿರುವ ಈ ಕೃತಿ ವೀರಶೈವ ಸಾಹಿತ್ಯಾಸಕ್ತರಿಗೆ ಮಾತ್ರವಲ್ಲದೆ, ಜಾನಪದ ಶಾಸ್ತ್ರಜ್ಞರಿಗೂ ಒಂದು ಒಳ್ಳೆಯ ಪರಾಮರ್ಶನ ಗ್ರಂಥ. ಅಚ್ಚಿನ ತಪ್ಪುಗಳು ಕಿಕ್ಕಿರಿದು ತುಂಬಿರುವುದು ಈ ಕೃತಿಯ ಬೆಲೆಯನ್ನು ತಗ್ಗಿಸಿದೆಯೆಂದು ಹೇಳದೆ ವಿಧಿಯಿಲ್ಲ.

# ನನ್ನ ಸಂಶೋಧನೆಯ ಪರಿಕಲ್ಪನೆ

ಈ ಶೀರ್ಷಿಕೆಯೇ ಒಂದರ್ಥದಲ್ಲಿ ನನಗೆ ಅಸಂಬದ್ಧವಾಗಿ ಕಾಣಿಸಿದರೂ ಅದನ್ನೇ ಉಳಿಸಿಕೊಳ್ಳಲು ಬಯಸುತ್ತಿರಲು ಕಾರಣ : ಸಂಶೋಧನೆಯ ಕ್ರಿಯೆಯಲ್ಲಿ ತೊಡಗಿಸಿಕೊಂಡಿರುವ ನಾನು ಆ ಶಿಸ್ತಿನಲ್ಲಿ ಶಿಕ್ಷಣವನ್ನು ನನಗೆ ನೀಡಿದ ಹಿರಿಯ ಸಂಶೋಧಕರ ಒಡನಾಟದ, ಅವರ ಬರಹ ಚರ್ಚೆಗಳ ಹಿನ್ನೆಲೆಯಲ್ಲಿ ನಾನು ಆ ಕ್ರಿಯೆಯನ್ನು ಗ್ರಹಿಸಿರುವ ರೀತಿ, ಮಾಡಿದ ಕೆಲಸ, ಪಡೆದ ಅನುಭವ ಇವುಗಳನ್ನೇ ಇಲ್ಲಿ ಮೂಲ ಸಾಮಗ್ರಿಯನ್ನಾಗಿ ಭಾವಿಸಿರುವುದರಿಂದ. ಈ ಲೇಖನದ ಶೀರ್ಷಿಕೆಯಲ್ಲಿ 'ನನ್ನ' ಎಂಬ ಮಾತು ಇರುವುದು ಅನಗತ್ಯವಾಗಿದೆ. ಹಾಗೆ ನೋಡಿದರೆ ವಾಸ್ತವವಾಗಿ ಎಲ್ಲ ಶ್ರೇಷ್ಠ ಸಂಶೋಧಕರ ಗುರಿ ತಮ್ಮ ತಮ್ಮ ಕ್ಷೇತ್ರದ ಸತ್ಯವನ್ನು, ಇತರರು ಕಾಣದೆ ಇರುವ ಸಂಗತಿಯನ್ನು, ವ್ಯಕ್ತದ ಹಿಂದೆ ನಿಕ್ಷಿಪ್ತವಾಗಿರುವ ನಿಯಮವನ್ನು ಗುರುತಿಸುವುದೇ ಆಗಿರುವುದರಿಂದ 'ಅವರ' 'ಇವರ' 'ನನ್ನ' 'ಇತರರ' ಎಂಬ ಸಂಶೋಧನೆಯ ಪರಿಕಲ್ಪನೆ ಇರುವುದು ತಾತ್ವಿಕವಾಗಿ ಅಸಾಧ್ಯ. ಕ್ಷೇತ್ರಗಳು, ವಿಧಾನಗಳು, ವಸ್ತು ಬೇರೆ ಇರಬಹುದಾದರೂ ಎಲ್ಲ ಸಂಶೋಧನೆಗಳ ಗುರಿ ಒಂದೇ : ವಾಸ್ತವವನ್ನು ಕಾಣುವುದು. 'ತಮಸೋ ಮಾ ಜ್ಯೋತಿರ್ಗಮಯ' - ತಮಸ್ಸಿನಿಂದ ಜ್ಯೋತಿಯೆಡೆಗೆ ಸಾಗುವ ಉಪನಿಷತ್ತಿನ ದಾರ್ಶನಿಕರು ಒಂದು ರೀತಿಯ ಏಕೆ, ನಿಜವಾಗಿಯೂ ಬಹು ದೊಡ್ಡ ಸಂಶೋಧಕರು. ಸಂಶೋಧನೆ ಸತ್ಯವನ್ನು ಕಾಣುವ ಹಂಬಲದ ಒಂದು ಮಾರ್ಗ, ನಿರಂತರ ಪ್ರಯತ್ನದ ಶ್ರಮದ ಮಾರ್ಗ.

ಈಶಾವಾಸ್ಯೋಪನಿಷತ್ತಿನಲ್ಲಿ ಇಂತಹ ಒಂದು ಪ್ರಾರ್ಥನೆಯಿದೆ : 'ಚಿನ್ನದ ಪಾತ್ರೆಯಂತಿರುವ ಈ ಜಗತ್ತಿನ ಹಿಂದೆ ಹುದುಗಿರುವ ಸತ್ಯವನ್ನು ನೋಡಲು ಬಯಸಿದ್ದೇನೆ. ಆ ಪಾತ್ರೆಯನ್ನು ಅತ್ತ ಸರಿಸು ; ನನಗೆ ಬೇಕಾಗಿರುವುದು ಆ ಚಿನ್ನದ ಪಾತ್ರೆಯಲ್ಲ, ಸತ್ಯದ ದರ್ಶನ.' ಈ ಮಾತು ವಿಶ್ವದ ಹಿಂದಿನ ಸತ್ಯವನ್ನು ಕಾಣಲು ತವಕಿಸುತ್ತಿರುವ ಸತ್ಯಶೋಧಕ ಋಷಿಯೊಬ್ಬನ ಹಂಬಲ. ಪ್ರತಿಯೊಬ್ಬ ಸಂಶೋಧಕನಲ್ಲೂ ಸತ್ಯವನ್ನು ಕಾಣುವ ಆ ಋಷಿಯ ಹಂಬಲದ ಗುಣವಿರುತ್ತದೆ. ನಮ್ಮ ಕಣ್ಣಿಗೆ ಸಂಗತಿಗಳು ಕಾಣುತ್ತವೆ; ಆದರೆ ಆ ಸಂಗತಿಗಳ ಹಿಂದೆ ಅಡಗಿರುವ ವಾಸ್ತವವನ್ನು, ಪ್ರವಹಿಸುವ ಒಂದು ನಿಯಮವನ್ನು ಗುರುತಿಸಲು ಬಯಸುತ್ತಾನೆ ಸಂಶೋಧಕ. ತಾನೂ ಸೇರಿದಂತೆ ಯಾರಿಗೂ ಕಾಣಿಸಿಕೊಳ್ಳದೆ, ತಾನು ಅಡಗಿದ್ದೇನೆ ಎಂಬುದರ ಸುಳುಹನ್ನೂ ಕೊಡದೆ ಯಾವ ಸಂಗತಿ ಅಡಗಿತ್ತೋ ಅಂತಹುದರ

ಸುಳುಹನ್ನು ಪಡೆದುಕೊಂಡ ಸಂಶೋಧಕ ಅದನ್ನು ಕಾಣಲು ಒಂದು ವ್ಯವಸ್ಥಿತ ಶಿಸ್ತುಬದ್ಧ ವಸ್ತುನಿಷ್ಠ ಪ್ರಯತ್ನವನ್ನು ಕೈಗೊಳ್ಳುವ ಬೌದ್ಧಿಕ ಕ್ರಿಯೆಯೇ ಸಂಶೋಧನೆ.

ಒಂದು ಚಿಕ್ಕ ಉದಾಹರಣೆಯನ್ನು ನನ್ನ ಅನುಭವದಿಂದಲೇ ನೀಡಬಹುದು. ಕರ್ನಾಟಕದ ಹಲವು ಊರುಗಳ ಹೆಸರುಗಳು -ವರ ಅಥವಾ -ವಾರದಿಂದ ಕೊನೆಯಾಗುತ್ತವೆ. ಉದಾಹರಣೆಗೆ ಬಾಣಾವರ, ನಾಗವಾರ. ಅವುಗಳು ಏನನ್ನು ಸೂಚಿಸುತ್ತವೆ ಎಂಬುದು ಕೇವಲ ಊಹೆಯಾಗಿ ಬಿಡುತ್ತದೆ. ಅಂತಹ ಊರುಗಳ ಹೆಸರುಗಳು ಕಾಣಿಸಿಕೊಳ್ಳುವ ಮುನ್ನೂರು ನಾನೂರು ವರ್ಷಗಳ ಹಿಂದಿನ ದಾಖಲೆಗಳನ್ನು ಪರಿಶೀಲಿಸಿದರೆ ಅವುಗಳು ಏನನ್ನು ಸೂಚಿಸುತ್ತವೆ ಎಂಬುದರ ಮೇಲೆ ಥಟ್ಟನೆ ಬೆಳಕು ಬಿದ್ದಂತಾಗುತ್ತದೆ.

'ವರ', 'ವಾರ' ಜಾಗದಲ್ಲಿ ಹಿಂದೆ 'ಪುರ' ಎಂಬ ಪ್ರತ್ಯಯವಿದ್ದಿತು. ಮತ್ತು ಹೆಸರಿನ ಅರ್ಥ ಸ್ಪಷ್ಟವಾದರೂ ಹ್ರಸ್ವ ದೀರ್ಘಗಳಿರುವ 'ವರ' 'ವಾರ' ಎಂದಾದುದು ಏಕೆ ಎಂಬ ಪ್ರಶ್ನೆಗೆ ಯಾರೂ ಉತ್ತರ ಕೊಡಲಾರರು. 'ಏಕೆ?' ಎಂಬ ಪ್ರಶ್ನೆಗೆ ವಿಜ್ಞಾನ ಉತ್ತರ ಕೊಡಲಾರದು, 'ಹೇಗೆ ?' ಎಂಬ ಪ್ರಶ್ನೆಗೆ ಮಾತ್ರ ಉತ್ತರವನ್ನು ಕೊಡಬಲ್ಲದು. 'ಪುರ' ಪದವು ಹೆಸರುಗಳ ಕೊನೆಯಲ್ಲಿ - ವರ, -ವಾರ ಆಗುವಲ್ಲಿ ಒಂದು ಚಿಕ್ಕ ನಿಯಮವು ಕಾಣಸಿಕೊಳ್ಳುತ್ತದೆ. ಆ ಪ್ರತ್ಯಯಗಳ ಹಿಂದಿನ ಸ್ವರವು ದೀರ್ಘವಾಗಿದ್ದರೆ 'ವರ' ಎಂಬ ಹ್ರಸ್ವಾದಿ ಪ್ರತ್ಯಯವೂ, ಹ್ರಸ್ವವಾಗಿದ್ದರೆ 'ವಾರ' ಎಂಬ ದೀರ್ಘಾದಿ ಪ್ರತ್ಯಯವೂ ಕಾಣಿಸಿಕೊಳ್ಳುತ್ತದೆ. ಕಾರವಾರ, ಮಾಯಾವರ, ಧರ್ಮಾವರ, ಸಿರಿವಾರ ಇಂತಹ ಊರುಗಳ ಹೆಸರುಗಳನ್ನು ಗಮನಿಸಿ. ಆ ನಿಯಮವು ಯಾರೋ ಹಾಕಿ ಕೊಟ್ಟದ್ದಲ್ಲ, ಜನರ ಆಡು ಮಾತಿನಲ್ಲಿ ತನಗೆ ತಾನೇ ರೂಪುಗೊಂಡಂತಹುದು. ಅಂತುಹುದನ್ನು ಗುರುತಿಸುವ ಕ್ರಿಯೆ ಸಂಶೋಧನೆ. ಇದೊಂದು ಚಿಕ್ಕ ಉದಾಹರಣೆ ಮಾತ್ರ.

ಆಂಧ್ರದಲ್ಲಿ ವಾಸವಾಗಿದ್ದು ಅಲ್ಲೇ ಕೊನೆಯುಸಿರೆಳೆದ ಪಂಪ ತನ್ನದು ಧಾರವಾಡ ಜಿಲ್ಲೆಯ ಭಾಷೆ ಎಂದು ಹೇಳಿಕೊಳ್ಳಲು ಕಾರಣ ಏನು ? ಪ್ರಭುತ್ವವನ್ನು ಧಿಕ್ಕರಿಸಿ ನಿಂತ ಹರಹರನಿಗೆ ಮನುಷ್ಯರ ಮೇಲೆ ರಾಜರ ಮೇಲೆ ಕಾವ್ಯ ಬರೆಯಬಾರದು ಎಂದು ಘೋಷಿಸುವ ಧೈರ್ಯ ಎಲ್ಲಿಂದ ಬಂದಿತು ? ವಚನಕಾರರ ಅಂಕಿತಗಳು ವಾಸ್ತವವಾಗಿ ಏನನ್ನು ಸೂಚಿಸುತ್ತವೆ? ಇಂತಹ ಪ್ರಶ್ನೆಗಳಿಗೆ ಸಮರ್ಪಕ ಉತ್ತರ ಒಂದೇ ಸಾಲಿನದಾಗಿದ್ದರೂ ಒಂದು ದೀಪ ಇಡೀ ಪ್ರದೇಶವನ್ನು ಬೆಳಗುವಂತೆ ಶ್ರಮಪೂರ್ಣ ಪ್ರಯತ್ನದಿಂದ ಅರ್ಥಾತ್ ಸಂಶೋಧನೆಯಿಂದ ಸಿದ್ಧವಾದ ಅಂತಹ ಉತ್ತರಗಳು ಕವಿಗಳ ಕಾವ್ಯಗಳ ಮೇಲೆ, ವಚನ ವಾಙ್ಮಯದ ಮೇಲೆ ಅಪೂರ್ವ ಬೆಳಕನ್ನು ಬೀರಿ ಅವುಗಳನ್ನು ಹೆಚ್ಚು ಅರ್ಥಪೂರ್ಣವಾಗಿ ಗ್ರಹಿಸಲು ಸಹಾಯಕವಾಗುತ್ತವೆ.

ಯಾವುದೇ ಸಂಶೋಧನೆಯಲ್ಲಿ ಕಂಡುಕೊಂಡ ಉತ್ತರಕ್ಕಿಂತ ಆ ಉತ್ತರ ಹುಡುಕಲು ಪ್ರಚೋದನೆ ನೀಡಿದ ಪ್ರಶ್ನೆ ಮತ್ತು ಆ ಉತ್ತರವನ್ನು ಅರ್ಥಾತ್ ಸಮಸ್ಯೆಗೆ ಪರಿಹಾರವನ್ನು ಕಂಡುಹಿಡಿಯಲು ನಡೆಯಿಸುವ ಮಾರ್ಗ ಮುಖ್ಯ. ಕೆಲವರ ಪ್ರಕಾರ, ಸಂಶೋಧನೆಯಲ್ಲಿ

ಒಂದು ಸುಸಂಬದ್ಧ ಪ್ರಶ್ನೆಯನ್ನು ರೂಪಿಸಿಕೊಳ್ಳುವ ಹಂತವೇ ಅತ್ಯಂತ ಮುಖ್ಯವಾದುದು. ಪ್ರಶ್ನೆಯೇ ಹೊಳೆಯದಿದ್ದರೆ ಉತ್ತರ ಕಂಡುಕೊಳ್ಳುವ ಪ್ರಶ್ನೆಯಾದರೂ ಹೇಗೆ ಉದ್ಭವಿಸೀತು? ಯಾವನೇ ಸಂಶೋಧಕನನ್ನು ಗುರುತಿಸುವುದು ಅವನು ಸಮಸ್ಯೆಗಳಿಗೆ ಕಂಡು ಹಿಡಿದ ಪರಿಹಾರ ಅಥವಾ ಉತ್ತರಗಳಿಂದ ಅಲ್ಲ. ಅವನು ಕಂಡುಕೊಂಡ ಉತ್ತರವು ಅಸಮರ್ಪಕವಾಗಿದ್ದರೆ ಇನ್ನೊಬ್ಬ ಆ ಸಮಸ್ಯೆಯ ಬಗ್ಗೆ ಕೆಲಸ ಮಾಡಿ ಅದಕ್ಕೆ ಸರಿಯಾದ ಉತ್ತರವನ್ನು ಗುರುತಿಸಬಹುದು. ಮೊದಲನೆಯವನ ಅಂತಹ ಪ್ರಯತ್ನವೇ ಇಲ್ಲದಿದ್ದರೆ ಎರಡನೆಯವನಿಗೆ ಪ್ರಚೋದನೆ ದೊರಕುತ್ತಿರಲಿಲ್ಲ.

ಕನ್ನಡ ಸಂಶೋಧನೆಯ ಮೊದಲ ಹಂತವನ್ನೇ, ಮುಖ್ಯವಾಗಿ ಹತ್ತೊಂಬತ್ತನೇ ಶತಮಾನವನ್ನೇ ಗಮನಿಸಬಹುದು. ಪಾಶ್ಚಾತ್ಯ ವಿದ್ವಾಂಸರು ನಮ್ಮ ಇಂದಿನ ಬದುಕು, ಅದು ರೂಪುಗೊಳ್ಳಲು ಕಾರಣವಾದ ಹಿಂದಿನ ಪರಂಪರೆಗಳ ಬಗ್ಗೆ ವಿಶೇಷ ಕುತೂಹಲವನ್ನು ತೋರಿದರಲ್ಲದೆ ಆ ಬಗ್ಗೆ ವಿಶೇಷ ಕೆಲಸವನ್ನೂ ಮಾಡಿದರು. ಬುಕನನ್ ಎಂಬ ಅಧಿಕಾರಿ 1800ರ ಸುಮಾರಿನಲ್ಲಿ ಮೈಸೂರು ಕರ್ನಾಟಕದ ದಕ್ಷಿಣ ಭಾಗದಲ್ಲಿ ವಿಶೇಷವಾಗಿ ಸಂಚರಿಸಿ ಆ ಪ್ರದೇಶದ ಜನರ ನಂಬಿಕೆ, ಧಾರ್ಮಿಕ ವ್ಯವಸ್ಥೆ, ಕತೆಗಳು, ಆಚಾರ ವ್ಯವಹಾರಗಳೇ ಆದಿಯಾಗಿ ಹಲವು ವಿಷಯಗಳ ಬಗ್ಗೆ ಮಾಹಿತಿ ಸಂಗ್ರಹಿಸಿದುದಲ್ಲದೆ ಕಲ್ಲ ಮೇಲೆ ಕೆತ್ತಿದ್ದ ಶಾಸನಗಳನ್ನು ಓದಿಸಿದನು. ಆ ಶತಮಾನದಲ್ಲಿ (19ನೇ ಶ.) ಮತ್ತು ಇಪ್ಪತ್ತನೇ ಶತಮಾನದ ಪೂರ್ವಾರ್ಧದಲ್ಲಿ ಪ್ರಾಚೀನ ಕನ್ನಡ ವಾಙ್ಮಯ ಮತ್ತು ಶಾಸನಗಳ ಸಂಗ್ರಹ ಪ್ರಕಟಣೆಗಳ ಕ್ಷೇತ್ರದಲ್ಲಿ ಬಹು ಶ್ರೇಷ್ಠ ಸಂಶೋಧಕರು ಶ್ರಮಿಸಿದರು. ಫ್ಲೀಟ್, ರೈಸ್, ಕಿಟಲ್, ಆರ್. ನರಸಿಂಹಾಚಾರ್, ಅ. ವೆಂಕಟಸುಬ್ಬಯ್ಯ, ಗೋವಿಂದ ಪೈ, ಫ.ಗು. ಹಳಕಟ್ಟಿ, ಎಸ್.ಸಿ. ನಂದಿಮಠ, ಎಂ.ಎಚ್. ಕೃಷ್ಣ, ತೀ.ನಂ.ಶ್ರೀಕಂಠಯ್ಯ, ಡಿ.ಎಲ್. ನರಸಿಂಹಾಚಾರ್, ಆ.ನೇ. ಉಪಾಧ್ಯೆ, ಪಿ.ಬಿ. ದೇಸಾಯಿ ಇವರು ಆ ಅಗ್ರಗಣ್ಯರಲ್ಲಿ ಕೆಲವರು. ಅವರ ಸಂಶೋಧನ ವಿಧಾನ ಒಂದೇ : ಅದು ಸತ್ಯಶೋಧನ ವಿಧಾನ. ಶಾಸನಗಳೋ ಕಾವ್ಯಗಳೋ ಅವುಗಳ ಸಂಗ್ರಹ ಮೊದಲ ಹೆಜ್ಜೆ, ಅವುಗಳ ಪ್ರಕಟಣೆ ಎರಡನೆಯ ಹೆಜ್ಜೆ, ವ್ಯಾಖ್ಯಾನ ಆ ಬಳಿಕದ್ದು. ಆ ವಿಷಯವಾಗಿ ಅವರು ಪಟ್ಟಿರುವ ಶ್ರಮ ನಮ್ಮ ಎಣಿಕೆಗೆ ಮೀರಿದ್ದು.

ಶಾಸನಗಳ ಹಸ್ತಪ್ರತಿಗಳ ಸಂಗ್ರಹಕ್ಕಾಗಿ ನಾಡಿನ ಮೂಲೆ ಮೂಲೆಗಳಲ್ಲಿ ಸುತ್ತಿ ಅವುಗಳ ಪ್ರತಿ ಮಾಡಿ ಅಚ್ಚಿಗೆ ಸಿದ್ಧಪಡಿಸಿ ಹೊರತರುವಲ್ಲಿ ಅವರು ಪಟ್ಟ ಸಾಹಸ ಅನೂಹ್ಯ. ಅವರು ಹೊರ ತಂದ ಆ ಪ್ರಾಚೀನ ಕೃತಿಗಳ ನೈಜತೆ, ಪಾಠ ಶುದ್ಧಿ, ಕಾಲ, ಕೃತಿಕಾರರು, ಆ ಕೃತಿಗಳು ಒಳಗೊಂಡಿರುವ ಮಾಹಿತಿಯ (ಸಾಹಿತ್ಯಕ, ಐತಿಹಾಸಿಕ ಅಥವಾ ಸಾಂಸ್ಕೃತಿಕ) ಚರ್ಚೆ, ವ್ಯಾಖ್ಯಾನಗಳೂ ನಡೆದುವು. ಅಲ್ಲೆಲ್ಲ ಆ ವಿದ್ವಾಂಸರಲ್ಲಿ ಕಂಡುಬರುವ ಒಂದು ಸಮಾನ ಅಂಶ : ಸತ್ಯಶೋಧದ ಬಗ್ಗೆ ಅವರಿಗಿದ್ದ ತುಡಿತ. ಆ ತುಡಿತದಿಂದಾಗಿ ಅವರು ಒಂದು ತೀವ್ರ ತನ್ಮಯತೆಯಿಂದ - ಸಾರಸ್ವತ ತಪಸ್ಸು ಎಂದು ಕರೆಯಬಹುದಾದ ಏಕಾಗ್ರ ಚಿತ್ತತೆಯಿಂದ ತಮ್ಮ ತಮ್ಮ ಕಾಯಕವನ್ನು, 'ಸತ್ಯ ಶುದ್ಧ ಕಾಯಕ'ವನ್ನು ನಡೆಸಿದರು. ಅದು ಆಧುನಿಕ ಕಾಲದ ಸಂಶೋಧಕರಿಗೆ ಮಾರ್ಗದರ್ಶಿಯಾಗಬೇಕು.

ನಾವು ಗಮನಿಸಬೇಕಾದ ಸಂಗತಿ ಎಂದರೆ ಅವರಲ್ಲಿ ಬಹುತೇಕರಿಗೆ ಡಾಕ್ಟೊರೇಟ್ ಪದವಿ ಇರಲಿಲ್ಲ. ಪಿಎಚ್.ಡಿ. ಪಡೆದವರೂ ಕೂಡ ತಮ್ಮ ಪದವಿಯು ತಾವು ಸಂಶೋಧನೆ ಮಾಡಲು ಅರ್ಹತೆ ಪಡೆದಿರುವ ಶಿಫಾರಸು ಪತ್ರವೆಂದೇ ಭಾವಿಸಿ, ಆ ಪದವಿಯನ್ನು ಪಡೆದ ಮೇಲೆ ಅಲ್ಲಿಗೇ ನಿಲ್ಲದೆ ಕೊನೆ ಉಸಿರಿರುವವರೆಗೂ ತಮ್ಮ ಸಂಶೋಧನೆಗಳನ್ನು ಮುಂದುವರಿಸಿದರು. ಅವರನ್ನು ಈಗಿನ ವಿಶ್ವವಿದ್ಯಾಲಯಗಳ ಪ್ರಾಧ್ಯಾಪಕರ ಜೊತೆ ಹೋಲಿಸಿದರೆ ಅವರ ಮಹತ್ವ ಅರ್ಥವಾಗುತ್ತದೆ. ಈಗ ಅಚ್ಚಾಗಿರುವ ಕೆಲವು ಪಿಎಚ್.ಡಿ. ನಿಬಂಧಗಳನ್ನು ನೋಡಿ ನನಗೆ ನಿಜವಾಗಿಯೂ ಗಾಬರಿಯಾಗಿದೆ. ಅವುಗಳ ತೀರ ಕಳಪೆಯಾಗಿರುವ ಗುಣಮಟ್ಟಕ್ಕೆ ನಾನು ಪಿಎಚ್.ಡಿ. ಅಭ್ಯರ್ಥಿಗಳಿಗಿಂತ ಅವರ ಮಾರ್ಗದರ್ಶಕರನ್ನು (Guides) ಹೊಣೆ ಮಾಡಲು ಬಯಸುತ್ತೇನೆ ಅವರಲ್ಲಿ (ಮಾರ್ಗದರ್ಶಕರಲ್ಲಿ) ಬಹುಪಾಲು ಜನ ಅಂಥವೇ ನಿಬಂಧಗಳನ್ನು ಸಿದ್ಧಪಡಿಸಿ ಪದವಿ ಪಡೆದವರು ಮತ್ತು ಡಾಕ್ಟೊರೇಟ್ ಪದವಿ ಪಡೆದ ಮೇಲೆ ಸಂಶೋಧನೆಯಲ್ಲಿ ಗಂಭೀರವಾಗಿ ತೊಡಗಿಸಿಕೊಳ್ಳುವುದರಲ್ಲಿ ಸಂಪೂರ್ಣ ವಿಫಲರಾದವರು. ಗೊತ್ತಿರುವ ವಿಷಯವನ್ನೇ ಹೆಚ್ಚು ಆಕರ್ಷಕವಾಗಿ, ಈಚಿನ ಬಹು ಪ್ರಚಾರ ಪಡೆದಿರುವ ಪದಗಳನ್ನು ಪದಪುಂಜಗಳನ್ನು ಬಳಸಿ ಅದನ್ನೇ ಸುತ್ತಿ ಬಳಸಿ ಹೇಳುವುದು, ಜೊತೆಗೆ ರಂಜಕವಾಗಿ ಮಾಡಲು ಕೆಲವು ಕಲ್ಪನೆ ಬಳಸುವುದು ಹೆಚ್ಚಾಗಿ ಕಾಣಿಸುತ್ತಿದೆ. ಇದಕ್ಕೆ ವಿನಾಯ್ತಿಗಳಿದ್ದರೂ ಕಡಮೆ.

ಸಂಶೋಧನೆಯ ಆರಂಭದ ಯುಗದ ಒಂದು ಕೊರತೆಯನ್ನು ಕಳೆದ ನಲವತ್ತು ವರ್ಷಗಳ ಸಂಶೋಧನೆಯು ಸ್ವಲ್ಪ ಮಟ್ಟಿಗೆ ಸರಿಪಡಿಸಿಕೊಂಡಿದೆ. ಮೊದ ಮೊದಲು ಸಂಶೋಧನೆಯು ಗ್ರಂಥಸ್ಥ ದಾಖಲೆಗಳನ್ನು ಸಂಪೂರ್ಣ ಅವಲಂಬಿಸಿದ್ದಿತು. ಸಾಹಿತ್ಯ ಕೃತಿಗಳು, ಹಸ್ತಪ್ರತಿಗಳು, ಶಾಸನ ತಾಮ್ರಪಟಗಳು, ನಾಣ್ಯಗಳು, ಭೂಶೋಧದ ಅವಶೇಷಗಳು ಇವು ಆ ದಾಖಲೆಗಳಲ್ಲಿ ಕೆಲವು. ಮತ್ತು ಅದು ಒಂದು ರೀತಿಯಲ್ಲಿ ಅನಿವಾರ್ಯವೂ ಆಗಿತ್ತು, ಸಹಜವೂ ಆಗಿತ್ತು. ಕ್ಷೇತ್ರ ಕಾರ್ಯದ ಮೂಲಕ ಮಾಹಿತಿ ಸಂಗ್ರಹಿಸಿ ವಿಶ್ಲೇಷಿಸುವ ಕಾರ್ಯಕ್ಕೆ ಆ ಮೊದಲ ಘಟ್ಟದ ವಿದ್ವಾಂಸರು ಕೈಹಾಕಲಿಲ್ಲ. ಆಗ ಅವರಿಗೆ ಮುಖ್ಯವಾಗಿದ್ದುದು ಗತಕಾಲದ ಇತಿಹಾಸ, ಅದರ ಪುನಾರಚನೆ. ಜಾನಪದದ ಕಡೆ ಗಮನ ಹೋದುದು ಈಚಿನ ವರ್ಷಗಳಲ್ಲಿ. ಅದಕ್ಕಿಂತ ಭಾಷಾ ವಿಜ್ಞಾನದ ಉದಾಹರಣೆಯನ್ನೇ ನೋಡಬಹುದು. ಕನ್ನಡ ಭಾಷೆಯ ಚರಿತ್ರೆಯೇ ಮುಖ್ಯವಾಗಿದ್ದ ಆ ಕಾಲದಲ್ಲಿ ಸಹಜವಾಗಿಯೇ ಕಾವ್ಯ, ಶಾಸನಗಳು ಪ್ರಮುಖ ಆಕರಗಳಾದುದರಲ್ಲಿ ಆಶ್ಚರ್ಯವಿಲ್ಲ. ಭಾಷೆಗೆ ಒಂದು ಚರಿತ್ರೆ ಇರುವುದು ನಿಜವಾದರೂ ಅದು ಸಮಕಾಲೀನವೂ ಆಗಿರುವುದು ಮಾತ್ರವಲ್ಲ ಅದು ಮನುಷ್ಯನ ಒಂದು ಭಾಗವೇ ಆಗಿರುವುದು ಅದಕ್ಕಿಂತ ಮುಖ್ಯ.

ಹೀಗಾಗಿ, ಭಾಷೆಯ ಹಿಂದಿನ ಚರಿತ್ರೆಗಿಂತ ಸಮಕಾಲೀನ ಆಡು ಭಾಷೆಯ ಕ್ಷೇತ್ರ ಕಾರ್ಯದ ಮೂಲಕ ಅಧ್ಯಯನ, ವಿಶ್ಲೇಷಣೆ ಇವುಗಳತ್ತ ಕ್ರಮೇಣ ಭಾಷಾ ವಿಜ್ಞಾನಿಗಳ ಗಮನ ಹರಿದುದು ತೀರ ಸ್ವಾಭಾವಿಕ. ಕನ್ನಡದಲ್ಲಿ ಜಾನಪದ ಅಧ್ಯಯನದ ಚರಿತ್ರೆ ಬಹಳ ಹಿಂದಕ್ಕೆ ಹೋಗುವುದಿಲ್ಲ. ಈಗಿನ ಸಂಶೋಧನೆಯಲ್ಲಿ ಕ್ಷೇತ್ರ ಕಾರ್ಯ ಸಹಜವಾಗಿಯೇ

ಪ್ರಾಮುಖ್ಯವನ್ನು ಪಡೆದಿದೆ. ಕ್ಷೇತ್ರ ಕಾರ್ಯವು, ಅದು ಯಾವುದೇ ಸಂಶೋಧನೆಯಾಗಿರಲಿ ತಂದುಕೊಡುವ ಫಲಿತಾಂಶಗಳು ಕೆಲವೊಮ್ಮೆ ಅನಿರೀಕ್ಷಿತವೂ ಅಮೂಲ್ಯವೂ ಆಗಿರಬಲ್ಲವು.

ನವೋದಯ ಕಾಲದ ಕನ್ನಡ ಸಂಶೋಧನೆಯ ಮಾರ್ಗ ಎಂದೆಂದಿಗೂ ಪ್ರಸ್ತುತವೇ. ಏಕೆಂದರೆ ಹಿಂದೆ ಹೇಳಿದಂತೆ ಮಾರ್ಗ, ವಿಧಾನ ಎಲ್ಲ ಕಡೆಗೂ ಎಲ್ಲ ಕಾಲಕ್ಕೂ ಒಂದೇ. ಸಂಶೋಧಕ ಆರಿಸಿಕೊಳ್ಳುವ ಕ್ಷೇತ್ರಗಳು ಬೇರೆಯಾಗಬಹುದು. ಸಮಕಾಲಿನ ಸಂಶೋಧನ ಕ್ಷೇತ್ರದ ಸುಮಾರಾದ ಪರಿಚಯ ಮಾತ್ರ ನನ್ನದಾಗಿರುವುದರಿಂದ ಅದರ ಒಟ್ಟು ಸಮೀಕ್ಷೆ ಮಾಡುವುದು ನನ್ನಿಂದ ಆಗದ ಕೆಲಸ ಮತ್ತು ಈ ಲೇಖನದ ಉದ್ದೇಶವೂ ಅದಲ್ಲ. ಈಗ ಪಿಎಚ್.ಡಿ. ಪದವಿಯ ಆಕರ್ಷಣೆಯೇ ಮುಖ್ಯವಾಗಿರುವುದರಿಂದ ಕೆಲವು ತೀರ ಕಳಪೆ ನಿಬಂಧಗಳು ಹೊರಬಂದಿರುವುದನ್ನು ನಾನು ಬಲ್ಲೆ. ಒಂದು ಒಳ್ಳೆಯ ಲೇಖನ ಬರೆದು ಅಲ್ಲಿಗೆ ನಿಲ್ಲಿಸಬಹುದಾದಷ್ಟು ಸೀಮಿತ ವಿಸ್ತಾರದ ವಿಷಯವು ಪಿಎಚ್.ಡಿ. ಪದವಿಗೆ ವಸ್ತುವಾಗುತ್ತಿದೆ. ಆ ಪದವಿ ಪಡೆದ ಮೇಲೆ ತಮ್ಮನ್ನು ತಾವು ಸಂಶೋಧನೆಗೆ ಒಪ್ಪಿಸಿಕೊಂಡಿರುವರ ಸಂಖ್ಯೆ ಅಷ್ಟಾಗಿ ಕಾಣಿಸುತ್ತಿಲ್ಲ ಎಂಬುದನ್ನು ನಾನು ಹಲವರ ಜೊತೆ ಮಾತನಾಡಿ ಖಚಿತಪಡಿಸಿಕೊಂಡಿದ್ದೇನೆ. ಹಿಂದೆ ಪ್ರಬುದ್ಧ ಕರ್ಣಾಟಕ, ಸಾಧನೆ, ಕರ್ನಾಟಕ ಭಾರತಿ, ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆಗಳು ನಿಯತವಾಗಿ ಪ್ರಕಟಗೊಳ್ಳುತ್ತಿದ್ದುವು. ಮತ್ತು ಎಲ್ಲ ಬಗೆಯ ಶ್ರೇಷ್ಠ ಲೇಖನಗಳು, ಕಾವ್ಯ, ಕತೆ, ಸಣ್ಣಕತೆ, ಸಂಶೋಧನ ಪ್ರಬಂಧಗಳು ಅಲ್ಲಿ ಬೆಳಕು ಕಾಣುತ್ತಿದ್ದವು. ಇಂದು ಅವು ಹೇಗೋ ಏನೋ ಜೀವ ಹಿಡಿದು ಬದುಕಿವೆ. ಹಳಗನ್ನಡದ ಕಾವ್ಯಗಳ ಬಗ್ಗೆ ಸಂಶೋಧನೆ ಇರಲಿ ಅವುಗಳ ಪದಶಃ ಅರ್ಥವನ್ನು ಸರಿಯಾಗಿ ವಿವರಿಸುವವರೂ ಕಾಣೆಯಾಗುತ್ತಿದ್ದಾರೆ. ಪರಿಸ್ಥಿತಿ ನಿಜವಾಗಿಯೂ ನಿರಾಶಾದಾಯಕವೆಂದರೆ ಅದು ಸಿನಿಕತನದ ಮಾತಲ್ಲ. ಸ್ನಾತಕೋತ್ತರ ತರಗತಿಗಳಲ್ಲಿ ಉಪಾಧ್ಯಾಯರು ತರಗತಿಗಳನ್ನೇ ತೆಗೆದುಕೊಳ್ಳುತ್ತಿಲ್ಲವೆಂದೂ ಕೇಳಿದ್ದೇನೆ.

ಇದನ್ನೆಲ್ಲ ಸರಿಪಡಿಸುವವರು ಯಾರು ? ಭರವಸೆಯನ್ನು ಕೈ ಬಿಡಬಾರದೆಂಬ ಕಾರಣಕ್ಕಾಗಿ ಒಳ್ಳೆಯ ದಿನಗಳು ನಾಳೆ ಬಂದಾವು ಎಂಬ ನಿರೀಕ್ಷೆಯಲ್ಲಿ ನಾನಿದ್ದೇನೆ. ಸಾಹಿತ್ಯದಂತೆಯೇ ಸಾಹಿತ್ಯಕ ಸಂಶೋಧನ ಕ್ಷೇತ್ರದಲ್ಲೂ ಯಾವುದು ಶ್ರೇಷ್ಠವೋ ಅದು ಮಾತ್ರ ಉಳಿಯುತ್ತದೆ ; ಎಂದೆಂದಿಗೂ ಮಾನ್ಯವಾಗಿರುತ್ತದೆ.

# ಭಾಷೆ ಮತ್ತು ಜಾನಪದ : ಉತ್ಖನನ ನಿವೇಶನಗಳಾಗಿ

ಮನುಷ್ಯನ ಸಂವಹನ ಮಾಧ್ಯಮವಾಗಿ, ಸಂಪರ್ಕ ಸಾಧನವಾಗಿ ಭಾಷೆ ವಹಿಸಿರುವ ಮಹತ್ವದ ಸ್ಥಾನದ ಬಗ್ಗೆ ಹೆಚ್ಚು ಹೇಳುವ ಅಗತ್ಯವಿಲ್ಲ. ಏಳನೆಯ ಶತಮಾನದ ಪ್ರಸಿದ್ಧ ಕಾವ್ಯ ಮೀಮಾಂಸಕ ದಂಡಿಯು (ಕೃತಿ 'ಕಾವ್ಯಾದರ್ಶ') ಭಾಷೆಯು ಮೂರು ಲೋಕಗಳನ್ನೂ ಬೆಳಗಿಸುವ ಜ್ಯೋತಿಯೆಂದೂ ಅದಿಲ್ಲದಿದ್ದರೆ ಎಲ್ಲ ಕಡೆಯೂ ಕತ್ತಲೆ ತುಂಬಿರುತ್ತಿತ್ತೆಂದೂ ಉದ್ಗರಿಸಿರುವುದು ಅರ್ಥಪೂರ್ಣವಾಗಿದೆ.

ಇದಮಂಧಮ್ ತಮಃ ಕೃತ್ಸ್ನಂ ಜಾಯೇತ ಭುವನತ್ರಯಮ್
ಯದಿ ಶಬ್ದಾಹ್ವಯಂ ಜ್ಯೋತಿರಾಸಂಸಾರಾನ್ ನ ದೀಪ್ಯತೇ ॥

ಭಾಷಾವಿಜ್ಞಾನಿಗಳು "ಮನುಷ್ಯರು ಪರಸ್ಪರ ಸ್ಪಂದಿಸಲು ಬಳಸುವ ಯಾದೃಚ್ಛಿಕ ಸ್ವನಸಂಕೇತಗಳ ವ್ಯವಸ್ಥೆಯೇ ಭಾಷೆ"ಯೆಂದು ವಿವರಿಸಿದ್ದಾರೆ. (-ಸ್ಟುರ್ಟೆವಾಂಟ್). ಸಾಮಾನ್ಯ ದೈನಂದಿನ ವ್ಯವಹಾರದಿಂದ ಹಿಡಿದು ಅತ್ಯುನ್ನತ ಬೌದ್ಧಿಕ (ಆಧ್ಯಾತ್ಮಿಕ)ದವರೆಗೆ ಮನುಷ್ಯನ ಎಲ್ಲ ವ್ಯವಹಾರಗಳ ಮೂಲದಲ್ಲಿರುವುದು ಭಾಷೆಯೇ. ಪ್ರಾಣಿಯಿಂದ ಮನುಷ್ಯ ರೂಪುಗೊಳ್ಳಲು ಭಾಷೆಯೇ ಕಾರಣವೆಂದರೆ ಉತ್ಪ್ರೇಕ್ಷೆಯೇನೂ ಅಲ್ಲ.

ಭಾಷೆಯೆಂದರೆ ಮುಖ್ಯವಾಗಿ ಮನುಷ್ಯನ ಆಡುಭಾಷೆ, ಬರಹದ ಅಥವಾ ದಾಖಲಿತ ಭಾಷೆ ಅಲ್ಲವೆನ್ನುತ್ತದೆ ಭಾಷಾವಿಜ್ಞಾನ.

ಅನಗತ್ಯವಾಗಿದ್ದರೂ ಈ ಚಿಕ್ಕ ಪ್ರಸ್ತಾವನೆಯೊಡನೆ ಭಾಷೆಯ ಸಂಗೋಪನ ಅಥವಾ ಸಂರಕ್ಷಕ ಸಾಮರ್ಥ್ಯದ ಕಡೆ ಗಮನವನ್ನು ನೀಡೋಣ. ಮನುಷ್ಯ ತನ್ನನ್ನು ತಾನು ಭಾಷೆಯ ಜೊತೆ ಎಷ್ಟರಮಟ್ಟಿಗೆ ಗುರುತಿಸಿಕೊಂಡಿದ್ದಾನೆಂದರೆ ಎಷ್ಟೋ ಸಾರಿ ಅಭಿವ್ಯಕ್ತಿ ಸಾಧನವಾದ ಭಾಷೆಯನ್ನು ಮನುಷ್ಯ ನಿಯಂತ್ರಿಸುವುದರ ಬದಲು ಭಾಷೆಯೇ ಮನುಷ್ಯನನ್ನು ನಿಯಂತ್ರಿಸುವ ಸಂದರ್ಭಗಳೂ ಉಂಟು. ಪ್ರತಿಯೊಬ್ಬ ವ್ಯಕ್ತಿಯೂ ಬಾಲ್ಯದಲ್ಲಿ ತನ್ನ ಸುತ್ತಮುತ್ತ ಜನರು ಆಡುವ ಭಾಷೆಯ ಮೂಲಕ ಜಗತ್ತಿನ ವಸ್ತುಗಳನ್ನು, ಅಮೂರ್ತ ಪರಿಕಲ್ಪನೆಗಳನ್ನು ಅಂತರ್ಗತಗೊಳಿಸಿಕೊಳ್ಳುತ್ತಾನೆ. ಅದು ಮನುಷ್ಯ ಮನುಷ್ಯರ ಮಧ್ಯದ ಸಂಪರ್ಕ ಸೇತುವಲ್ಲದೆ, ಒಂದು ಕಾಲದವರೆಗೆ ಹರಿದು ಬಂದಿರುವ ಭೌತಿಕ ಅಥವಾ ತಾತ್ವಿಕ ಜ್ಞಾನದ ಭಂಡಾರವೂ ಹೌದು. ಅದು ಬಹು ಹಿಂದಿನಿಂದ ಬೆಳೆದು ಬಂದಿರುವ ಸಾಂಪ್ರದಾಯಕ ಜ್ಞಾನದ ನೆನಪಿನ ಗಣಿ. ಅದು ತನ್ನಲ್ಲಿ ಜನ ನೆನಪಿಟ್ಟುಕೊಂಡಿರುವ ಅಥವಾ ಮರೆತ ಭೌತಿಕ ವಸ್ತುಗಳು,

ಆಲೋಚನೆಗಳು, ಮೌಲ್ಯಗಳು, ಪರಿಕಲ್ಪನೆಗಳು ಇವನ್ನು ಸುರಕ್ಷಿತವಾಗಿಟ್ಟುಕೊಂಡಿರುತ್ತದೆ. ಈ ದೃಷ್ಟಿಯಿಂದ ಅದು ತನ್ನಲ್ಲಿ ಅನಾದಿ ಕಾಲದಿಂದ ಈಚಿನವರೆಗೆ ತನ್ನ ಒಳಪದರಗಳಲ್ಲಿ ಅಥವಾ ಹೊರ ಮೈಯಲ್ಲಿ ಸ್ಮಾರಕಗಳನ್ನೂ ದಾಖಲೆಗಳನ್ನೂ ಕಲ್ಲಿನ ಅಥವಾ ಮಣ್ಣಿನ ಲೋಹದ ವಸ್ತುಗಳನ್ನೂ ತನ್ನಲ್ಲಿ ಗರ್ಭೀಕರಿಸಿಕೊಂಡಿರುವ ಭೂಮಿಯನ್ನು ಹೋಲುತ್ತದೆ. ಪರಿಶೀಲಿಸಿ ನೋಡಿದರೆ ಎಷ್ಟೋ ಶತಮಾನಗಳ ಗತಕಾಲದ ಮಾಹಿತಿಯನ್ನು ಭಾಷೆ ತನ್ನಲ್ಲಿ ಅಪೂರ್ವ ರೀತಿಯಲ್ಲಿ ಎಷ್ಟರಮಟ್ಟಿಗೆ ಹುದುಗಿಸಿಕೊಂಡಿದೆಯೆಂದರೆ ಆ ಮಾಹಿತಿಯನ್ನು ಸೂಕ್ತ ರೀತಿಯಲ್ಲಿ ಹೆಕ್ಕಿ ತೆಗೆದಾಗ, ಆ ಭಾಷೆಯನ್ನು ಆಡುವವರೇ ಆ ಮಾಹಿತಿಯು ತಮ್ಮಲ್ಲಿ ಹುದುಗಿ ಉಳಿದುಕೊಂಡು ಬಂದಿರುವ ರೀತಿಯಿಂದಾಗಿ ಆಶ್ಚರ್ಯಪಡುವಂತಾಗುತ್ತದೆ. ಭಾಷೆಯಲ್ಲಿ ಎಷ್ಟೋ ಬಾರಿ ಇತಿಹಾಸಪೂರ್ವಯುಗದ ಸಾಂಸ್ಕೃತಿಕ ಅಂಶಗಳು ಪದಗಳ ರೂಪದಲ್ಲಿ ಹುದುಗಿರುವುದು ಆ ಕಾಲದ ಸಂಸ್ಕೃತಿಯ ಪುನಾರಚನೆಗೆ ಸಹಾಯಕವಾಗುವ ಮಾಹಿತಿಯಾಗಬಹುದು.

ಅದಕ್ಕೆ ಒಳ್ಳೆಯ ಉದಾಹರಣೆಯೆಂದರೆ ಕನ್ನಡದ "ಕಬ್ಬಿಣ" ಪದ. ಆ ಪದವನ್ನು "ಅಗೆದರೆ" ಅದರಲ್ಲಿ ಎರಡು ಭಾಗಗಳಿವೆ : ಕರ್ + ಪೊನ್ (= ಕರಿಯ ಲೋಹ ಅಥವಾ ಚಿನ್ನ). "ಪೊನ್" ಪದಕ್ಕೆ ದ್ರಾವಿಡ ಭಾಷೆಗಳಲ್ಲಿರುವ ಜ್ಞಾತಿಪದಗಳು ಹೀಗಿವೆ -

| | | |
|---|---|---|
| ತಮಿಳು | ಪೊನ್ | 'gold', 'metal', 'iron' |
| ಮಲಯಾಳಮ್ | ಪೊನ್ | 'gold' |
| ತೊದ | ಪೊನ್ | 'gold' |
| ಕನ್ನಡ | ಪೊನ್ | 'gold', 'metal' |
| ಕೊಡಗು | ಪೊನ್ನು | 'gold' |
| ತುಳು | ಪೊನ್ನು | 'gold' |
| ತೆಲುಗು | ಪೊನ್ನು | 'gold' |
| ಕುರುಖ್ | ಪನ್ನ | 'iron' |

"ಕಬ್ಬಿಣ" ಪದದ ಜ್ಞಾತಿಪದಗಳು (Cognates) ಹೀಗಿವೆ :

| | |
|---|---|
| ತಮಿಳು | ಕರುಮ್‌ಪೊನ್ (ಕರುಂಬೊನ್) |
| ಕನ್ನಡ | ಕಬ್ಬಿಣ |
| ತುಳು | ಕರ್ಬ |

ಅದೇ ಕಬ್ಬಿಣ ಅರ್ಥದ ಪದಗಳು ಹೀಗಿವೆ : "ಇರುಂಬು" (ತಮಿಳು), "ಇರುಂಬು" (ಮಲಯಾಳಂ), "ಇರುಂಬು" (ಕೊಡಗು), "ಇನುಮು / ಇನುಮ್" (ಕೊಲಾಮಿ), "ರುಂಬ" (ಕುಇ)

ಕರ್ + ಪೊನ್ black gold (metal) or iron > ಕರ್ಬೊನ್

ಇರು + ಪೊನ್ black gold (metal) or iron > ಇರುಂಬು
(ಇರ್ / ಇರು = black. ನೋಡಿ "ಇರುಳ್")

ಹಳಗನ್ನಡ. "ಕರ್ಬೊನ್" → ನಡುಗನ್ನಡ. "ಕಬ್ಬುನ" → ಹೊಸಗನ್ನಡ. "ಕಬ್ಬಿಣ"

ಮೇಲಿನ ಪದನಿಷ್ಪತ್ತಿಗಳಿಂದ ಹೊರಡುವ ತೀರ್ಮಾನ ಸ್ಪಷ್ಟ. "ಪೊನ್" ಅಥವಾ ಚಿನ್ನವೇ ಮೊದಲು ಮನುಷ್ಯನಿಂದ ಶೋಧಗೊಂಡ ಲೋಹವಾದ್ದರಿಂದ ಆ ಪದಕ್ಕೆ ("ಪೊನ್") ಸಹಜವಾಗಿಯೇ ಚಿನ್ನ ಮತ್ತು ಲೋಹ ಎಂಬರ್ಥಗಳು ಪ್ರಾಪ್ತವಾದುವು. "ಪೊನ್" ಎಂದರೆ ಚಿನ್ನವೂ ಆಗಬಹುದಿತ್ತು, ಲೋಹವೂ ಆಗಬಹುದಿತ್ತು. ಕಪ್ಪು ಬಣ್ಣದ ಕಬ್ಬಿಣದ ಶೋಧವಾದಾಗ, ಅದನ್ನು ಸಹಜವಾಗಿಯೇ ಕರ್ + ಪೊನ್ ಎಂದರೆ ಕರಿಯ ಚಿನ್ನ (ಅಥವಾ ಲೋಹ) ಎಂದು ಕರೆದುದು ತೀರ ಸ್ವಾಭಾವಿಕ.

ಲೋಹ ವಿಜ್ಞಾನದ ಇತಿಹಾಸವೂ ಅದನ್ನು ದೃಢಪಡಿಸುತ್ತದೆ: ಚಿನ್ನವು ಭೂಮಿಯ ಮೇಲ್ಪದರದಲ್ಲಿ ಶುದ್ಧ ರೂಪದಲ್ಲಿ ದೊರಕುವುದಲ್ಲದೆ ಇತರ ವಸ್ತುಗಳಿಂದ ಅದನ್ನು ಸುಲಭವಾಗಿ ಪ್ರತ್ಯೇಕಿಸಬಹುದು. ಆ ಕಾರಣವೇ ಮನುಷ್ಯ ಮೊದಲು ಬಳಸಿದ ಲೋಹವೆಂದರೆ ಅದೇ. ಆದರೆ ತಾಮ್ರವನ್ನು ಪಾತ್ರೆ, ಆಯುಧ ಇತ್ಯಾದಿಗಳನ್ನು ತಯಾರಿಸಲು ಬಳಸುವಂತೆ ಚಿನ್ನವನ್ನು ಬಳಸಲು ಕಷ್ಟ. ಸರಿಯಾಗಿ ಹೇಳುವುದಾದರೆ ಚಿನ್ನದ ಜೊತೆ ಜೊತೆಯಲ್ಲೇ ತಾಮ್ರದ ಉಪಯೋಗವನ್ನು ಮನುಷ್ಯನು ನವಶಿಲಾಯುಗದ ಅಂತ್ಯದಲ್ಲಿ ಕಂಡುಕೊಂಡನು (Cf. Ed. G. Kuppuram, K. Kumudamani : History of Science and Technology in India, VI. p. 105). ನವಶಿಲಾಯುಗದ ಮನುಷ್ಯನೇ ಕಲ್ಲಿನ ಜಾಗದಲ್ಲಿ ತಾಮ್ರವನ್ನು ಬಳಸಲಾರಂಭಿಸಿದ ಪ್ರಥಮ.

ಕನ್ನಡದ "ಚೆಂಬು" (copper) ಪದಕ್ಕೆ ದ್ರಾವಿಡ ಭಾಷೆಗಳಲ್ಲಿನ ಜ್ಞಾತಿ ಪದಗಳು ಇಂತಿವೆ:

| | | |
|---|---|---|
| ತಮಿಳು | ಚೆಂಬು | 'copper', 'gold' |
| ಮಲಯಾಳಂ | ಚೆಂಬು | 'copper' |
| ತೊದ | ತೆಬ್ | 'copper' |
| ಕೊಡಗು | ಚೆಂಬು | 'copper' |
| ತುಳು | ಚೆಂಬು | 'copper', 'brass' |
| ಕನ್ನಡ | ಚೆಂಬು | 'copper', 'copper vessel' |

The Dravidian Etymological Dictionary ಸಂಪಾದಕರಾದ ಟಿ. ಬರೊ, ಎಂ.ಬಿ. ಎಮೆನೋ ಅವರು ಮೇಲಿನ ಪದಗಳು ರೂಪುದಳೆವಲ್ಲಿ ಸಂಸ್ಕೃತದ 'ತಾಮ್ರ' (ಪ್ರಾ. ತಂಬ 'copper') ಪದದ ಪ್ರಭಾವಕ್ಕೊಳಗಾಗಿರಬಹುದು ಎನ್ನುತ್ತಾರೆ. ಆದರೆ, ಆ ಪದಗಳ ಸರಿಯಾದ ನಿಷ್ಪತ್ತಿ ಹೀಗೆ : ಕೆನ್ / ಚೆನ್ + ಪೊನ್ → *ಕೆಂಬೊನ್ / *ಚೆಂಬೊನ್

ಚೆಂಬು, 'red metal' (*ಈ ಚಿಹ್ನೆ ಹಿಂದೆ ಇದ್ದಿರಬಹುದಾದರೂ ದಾಖಲಾಗದ ರೂಪವೆಂಬುದನ್ನು ಸೂಚಿಸುತ್ತದೆ). ಕನ್ನಡದ ಚೆಂಬು, ತಂಬಿಗೆ ('Copper Vessel') ಎರಡಕ್ಕೂ ಒಂದೇ ಮೂಲ. ಪದಾದಿಯ ಚ್, ತ್ ಇವು ಪರಸ್ಪರ ಬದಲಾಗಬಹುದು, ದ್ರಾವಿಡ ಭಾಷೆಗಳಲ್ಲಿ. ಚೆಂಬೊನ್ (> ಚೊಂಬು) ಈ ರೂಪವು ಒಂದು ಅಂಶವನ್ನು ಸ್ಪಷ್ಟಪಡಿಸುತ್ತದೆ. ದಕ್ಷಿಣ ಭಾರತದಲ್ಲಿಯಂತೂ ಕಬ್ಬಿಣದಂತೆಯೇ ತಾಮ್ರವೂ ಕೂಡ ಚಿನ್ನದ ಬಳಕೆಯ ಬಳಿಕ ಬಳಕೆಯಾದ ಲೋಹ. 'ಪೊನ್'ನೇ (`gold'), ಬಳಿಕ 'ಚೆಂಬೊನ್' (`copper'), ಆ ಬಳಿಕ 'ಕರ್ಬೊನ್' (`iron'). ಚಿನ್ನ ಮತ್ತು ತಾಮ್ರಗಳ ಬಳಕೆಗಳ ಮಧ್ಯೆ ಹೆಚ್ಚು ಅಂತರವಿರಲಾರದು. ಕಬ್ಬಿಣದ ಬಳಕೆ ಸುಮಾರು ಕ್ರಿ.ಪೂ. 10ನೇ ಶತಮಾನದಿಂದ (ಮುಂದೆ ನೋಡಿ). 'ಚೆಂಬು' ಎಂದರೆ ಕನ್ನಡದಲ್ಲಿ ತಾಮ್ರ ಎಂಬ ಅರ್ಥವಿದ್ದು ಮುಂದೆ ಅದಕ್ಕೆ ಲೋಹದ ಪಾತ್ರೆ ಎಂಬರ್ಥ ಬಂದಿತು. ("ಪೊನ್" ಅಥವಾ ಹೊನ್ನು ಎಂದರೆ ಚಿನ್ನ ಎಂಬರ್ಥವಿದ್ದು ಮುಂದೆ ಆ ಲೋಹದಲ್ಲಿ ಮಾಡಿದ ನಾಣ್ಯ ಎಂಬರ್ಥ ಬಂದುದನ್ನು ನೆನಪಿಸಿಕೊಳ್ಳಬಹುದು.)

ಕಬ್ಬಿಣವು ಮನುಷ್ಯ ತೀರ ಈಚೆಗೆ ಉಪಯೋಗ ಕಂಡುಕೊಂಡ ಅತ್ಯಂತ ಉಪಯುಕ್ತ ಲೋಹ ಮಾತ್ರವಲ್ಲ, ಅದರ ಶೋಧವು ಜಾಗತಿಕ ಪ್ರಜಾಪ್ರಭುತ್ವಕ್ಕೆ ಕಾರಣವಾಯಿತು. ಚಿನ್ನವು ಶ್ರೀಮಂತರಿಗೆ, ಅಲಂಕಾರದ ಒಡವೆಗಳಿಗೆ; ಕಬ್ಬಿಣವಾದರೋ ಎಲ್ಲ ಲೋಹಗಳಿಗಿಂತ ಹೆಚ್ಚು ಸಮೃದ್ಧವಾಗಿ ಸಿಗುವ ಲೋಹವಲ್ಲದೆ ಅದನ್ನು ಉಪಕರಣಗಳಿಗೆ ಯಂತ್ರ ಸಾಧನಗಳಿಗೆ ಆಯುಧಗಳಿಗೆ ಬಳಸಬಹುದಿತ್ತು. ಚಿನ್ನ - ತಾಮ್ರ ಯುಗಗಳನ್ನು ಯುರೋಪಿನಲ್ಲಿ ಕ್ರಿ.ಪೂ. 5000 ಎಂದು, ಕಬ್ಬಿಣ ಯುಗವನ್ನು ಕ್ರಿ.ಪೂ. 1000 ಎಂದು ಗುರುತಿಸಲಾಗಿದೆ. ಭಾರತದಲ್ಲಿ ಅವನ್ನು ಕ್ರಿ.ಪೂ. 3000 ಮತ್ತು ಕ್ರಿ.ಪೂ. 1000 ಎಂದು ಗುರುತಿಸಲಾಗಿದೆ. ಹರಪ್ಪ ಮೊಹೆಂಜೋದಾರೊಗಳಲ್ಲಿ (ಕ್ರಿ.ಪೂ. 1500) ನಡೆದಿರುವ ಉತ್ಖನನಗಳಲ್ಲಿ ಕಬ್ಬಿಣ ದೊರಕಿಲ್ಲ, ಚಿನ್ನ ದೊರಕಿದೆ (ಆ ಚಿನ್ನವು ಕರ್ನಾಟಕದ ಕೆ.ಜಿ.ಎಫ್. ಪ್ರದೇಶದ್ದು ಎಂದು ಹೇಳಲಾಗಿದೆ). ಧಾರವಾಡ ಜಿಲ್ಲೆಯ ಹಳ್ಳೂರಲ್ಲಿ (ಕ್ರಿ.ಪೂ. 1000) ನಡೆದಿರುವ ಉತ್ಖನನಗಳಲ್ಲಿ ದೊರಕಿರುವ ಕಬ್ಬಿಣವೇ ಭಾರತದಲ್ಲಿ ಅತ್ಯಂತ ಪ್ರಾಚೀನ ಕಬ್ಬಿಣ. (ಮೆಸೊಪೊಟೇಮಿಯದ ಉರ್ ಉತ್ಖನನಗಳಲ್ಲಿ ಕ್ರಿ.ಪೂ. 3500ರಷ್ಟು ಹಿಂದೆ ಚಿನ್ನದ ಒಡವೆಗಳು ಲಭ್ಯವಾಗಿವೆ.)

ಸಂಸ್ಕೃತದಲ್ಲಿ "ಅಯಸ್" ಎಂಬುದು ಕಬ್ಬಿಣ ಅರ್ಥವನ್ನು ಹೊಂದಿದ್ದರೂ ಅದಕ್ಕೆ ಮೂಲಾರ್ಥ ಚಿನ್ನ ಅಥವಾ ಲೋಹ ಎಂದೇ. ಸಂಸ್ಕೃತದ "ಲೋಹ" (metal) ಪದವು (*ಲುಹ್ ಅಥವಾ ರುಧ್. red ನೋಡಿ. ರುಧಿರ = ರಕ್ತ) ಮತ್ತು ಇಂಗ್ಲೀಷಿನ "red" ಜ್ಞಾತಿಪದಗಳು. ಎಂದರೆ, "ಲೋಹ" ಪದವೂ ಮೂಲತಃ ಕೆಂಪು ಲೋಹ ಅಥವಾ ಚಿನ್ನವನ್ನೇ ಸೂಚಿಸುತ್ತಿದ್ದು ಅದಕ್ಕೆ metal ಎಂಬ ಅರ್ಥ ಮಾತ್ರ ಉಳಿದು ಬಂದಿತು. ಇದೂ ಅಷ್ಟೇ, ಚಿನ್ನವು ಕಬ್ಬಿಣಕ್ಕಿಂತ ಪ್ರಾಚೀನ ಲೋಹವೆಂಬುದಕ್ಕೆ ಇನ್ನೊಂದು ಭಾಷಿಕ ಆಧಾರ.

ವಿದ್ವಾಂಸರು ಗಮನಿಸಿರುವಂತೆ ಲೋಹಗಳ ಇತಿಹಾಸದಲ್ಲಿ ಚಿನ್ನಕ್ಕೆ ಪ್ರತಿಷ್ಠಿತ ಸ್ಥಾನವಿರುವುದಲ್ಲದೆ ಮನುಷ್ಯನ ಗಮನವನ್ನು ಸೆಳೆದ ಅತ್ಯಂತ ಪ್ರಾಚೀನ ಲೋಹವೂ ಹೌದು. ಮಾತ್ರವಲ್ಲದೆ ಅದಕ್ಕೆ ಅತಿಮಾನುಷ ಶಕ್ತಿಗಳೂ ಇವೆಯೆಂದೂ ನಂಬಲಾಗಿದೆ. (Ed. B.V. Subbarayappa : History of Science, Philosophy and Culture in Indian Civilization. Vol. IV Part. 1. P.24) ಎಂದರೆ ಮನುಷ್ಯನ ಗಮನಕ್ಕೆ ಬಂದ ಅತ್ಯಂತ ಪ್ರಾಚೀನ ಲೋಹ ಅಥವಾ ಲೋಹಗಳು ಪವಿತ್ರ ಮತ್ತು ಮಾಂತ್ರಿಕ ಶಕ್ತಿಯುಳ್ಳುವು ಎಂಬುದು ವಿಶ್ವಾದ್ಯಂತ ಇರುವ ನಂಬಿಕೆ.

ಕಬ್ಬಿಣದ ಬಗ್ಗೆ ಇರುವ ಜಾನಪದವು ವಿಶ್ವಾದ್ಯಂತ ಅಚ್ಚರಿ ಹುಟ್ಟಿಸುವಷ್ಟು ಬಹುತೇಕ ಒಂದೇ. ಎಲ್ಲ ಕಡೆ ಕಬ್ಬಿಣವು ಮೈಲಿಗೆಯ, ಅಪವಿತ್ರದ, ಅಮಂಗಳದ ಸಂಕೇತ; ಆ ಕಾರಣವೇ ಶಿಷ್ಟ ಅಥವಾ ದುಷ್ಟ ಶಕ್ತಿಗಳು ಅದರಿಂದ ದೂರ ಉಳಿಯಲು ಬಯಸುತ್ತವೆ. ಭಾರತದಲ್ಲಿ ದೇವರ ಪ್ರತಿಮೆಗಳನ್ನು ಕಬ್ಬಿಣದಲ್ಲಿ ಮಾಡಲೇಕೂಡದು. ಅವುಗಳನ್ನು ಚಿನ್ನ, ಬೆಳ್ಳಿ, ತಾಮ್ರಗಳಲ್ಲಿ ಮಾಡಬಹುದು; ಎಲ್ಲೆಲ್ಲೂ ಸಿಗುವ ಕಲ್ಲಿನಲ್ಲಿ ಮಾಡಬಹುದು - ಆದರೆ ಎಂದೂ ಕಬ್ಬಿಣದಲ್ಲಿ ಮಾಡಕೂಡದು. ಪ್ರಾಚೀನ ಹೀಬ್ರೂಗಳು ಕಲ್ಲಿನಲ್ಲಿ ದೇವರ ವಿಗ್ರಹ ಕಡೆಯಲು ಅಥವಾ ದೇವಸ್ಥಾನ ನಿರ್ಮಿಸಲು ಕಬ್ಬಿಣದ ಉಪಕರಣಗಳನ್ನು ಬಳಸುತ್ತಿರಲಿಲ್ಲ. ಗ್ರೀಸಿನಲ್ಲಿ ದೇವತೆಗಳಿಗೆ ಪಶುಬಲಿ ನೀಡುವಲ್ಲಿ ಕಬ್ಬಿಣದ ಬಳಕೆ ನಿಷಿದ್ಧವಾಗಿತ್ತು. ರೋಮನ್ ಪುರೋಹಿತರು ಮುಖ ಕ್ಷೌರಕ್ಕೆ ಕಬ್ಬಿಣವನ್ನು ಬಳಸುವಂತಿರಲಿಲ್ಲ. ದಕ್ಷಿಣ ಆಫ್ರಿಕಾದ ಹೊಟೆಂಟಾಟ್ ಅರ್ಚಕರು ಪ್ರಾಣಿಬಲಿಗೆ ಕಲ್ಲಿನ ಕತ್ತಿ ಬಳಸುವರೇ ಹೊರತು ಕಬ್ಬಿಣದ ಕತ್ತಿ ಅಲ್ಲ. ಗಂಡು ಮಗುವಿನ ಶಿಶ್ನಚ್ಛೇದಕ್ಕೆ ಕಬ್ಬಿಣ ಬಿಟ್ಟು ಯಾವುದೇ ಚಾಕು ಆಗಬಹುದು.

ರಾಕ್ಷಸ ಅಥವಾ ದುಷ್ಟ ಶಕ್ತಿಗಳನ್ನು ದೂರವಿಡಲು ವಿಶ್ವಾದ್ಯಂತ ಕಬ್ಬಿಣದ ವಸ್ತುಗಳನ್ನು ಬಳಸುತ್ತಾರೆ. ಅದರ ಹಿಂದಿನ ನಂಬಿಕೆ ಸ್ಪಷ್ಟ. ಕಬ್ಬಿಣ ಇದ್ದೆಡೆ ಮೈಲಿಗೆ ಭಯದಿಂದ ದುಷ್ಟ ಶಕ್ತಿಗಳು ಬರುವುದಿಲ್ಲ. ಪಂಜಾಬಿನಲ್ಲಿ ಗರ್ಭಿಣಿಯ ಮಂಚದ ಕೆಳಗೆ ಕಬ್ಬಿಣದ ಚಾಕು ಇಡುತ್ತಾರೆ; ಹೆರಿಗೆಗೆ ಅಡ್ಡಿಪಡಿಸಬಹುದಾದ ಯಾವ ಕೆಟ್ಟ ಶಕ್ತಿಯೂ ಅಲ್ಲಿಗೆ ಸುಳಿಯದು. ಸಿಡಿಲು ಬಡಿಯುವ ಭಯ ಇದ್ದರೆ ಕರ್ನಾಟಕದಲ್ಲಿ ಮನೆಯ ಹೊರಗೆ ಕಬ್ಬಿಣದ ಸಾಮಾನು ಇಡುತ್ತಾರೆ. ಕಬ್ಬಿಣದ ಬಳಿಗೆ ಸಿಡಿಲ ದೈವ ಬರುವುದಿಲ್ಲ. ಮರಗಳು ಹೂವು ಕಾಯಿ ಬಿಡದೆ ಗೊಡ್ಡಾಗಿರಲು ಕಾರಣ ಅವುಗಳನ್ನು ಹೊಕ್ಕಿರುವ ಪಿಶಾಚ ಶಕ್ತಿಗಳು; ಆ ಮರಗಳಿಗೆ ಕಬ್ಬಿಣದ ಮೊಳೆ ಹೊಡೆದರೆ, ಅದರಲ್ಲೂ ಗ್ರಹಣದ ದಿನ ಮೊಳೆ ಹೊಡೆದರೆ ಮೊಳೆ ಮುಟ್ಟಿದ ಪಿಶಾಚಗಳು ಓಡಿ ಹೋಗುತ್ತವೆ; ಆ ಬಳಿಕ ಮರವು ಪುಷ್ಪವತಿ ಫಲವತಿ ಆಗುತ್ತದೆ. ಸಿಲೋನಿನಲ್ಲಿ ಹೊರಗಡೆ ಆಹಾರ ಒಯ್ಯುವಾಗ, ಅದರಲ್ಲೂ ಮಾಂಸಾಹಾರ ಒಯ್ಯುವಾಗ ಜೊತೆಗೆ ಕಬ್ಬಿಣ ಒಯ್ಯುತ್ತಾರೆ. ಮಾಂಸಾಹಾರಪ್ರಿಯ ಕೆಟ್ಟ ಶಕ್ತಿಗಳು ಆ ಆಹಾರದ ತಂಟೆಗೆ ಬರವು. ಇಂತಹ ನೂರಾರು ಉದಾಹರಣೆಗಳನ್ನು ಕೊಡುತ್ತ ಹೋಗಬಹುದು.

ಕಾರಣಗಳು ಸ್ಪಷ್ಟ : ಯಾವುದೇ ಸಂಸ್ಕೃತಿಗೆ ಅಥವಾ ಜೀವನ ವಿಧಾನಕ್ಕೆ ಹೊಸದಾಗಿ ಪ್ರವೇಶಿಸುವುದನ್ನೆಲ್ಲ ಮನುಷ್ಯನು ಗುಮಾನಿಯಿಂದ ನೋಡುತ್ತಾನೆ, ಅಥವಾ ಅದನ್ನು ಅಪವಿತ್ರವೆಂದು ಮೈಲಿಗೆಯೆಂದು ಭಾವಿಸುತ್ತಾನೆ. ಅವನ ಜೀವನ ವಿಧಾನ ಆ ಹೊಸ ವಸ್ತುವನ್ನು ಕ್ರಮೇಣ ಒಟ್ಟಾರೆ ಸ್ವೀಕರಿಸಿದರೂ ಆ ವಸ್ತು ಪವಿತ್ರ ಅಥವಾ ಶಾಸ್ತ್ರಬದ್ಧ ಸಂದರ್ಭಗಳಿಗೆ ಬಹಿಷ್ಕೃತವಾಗುವಂತೆ ಮಾಡುತ್ತಾನೆ. ಕಬ್ಬಿಣದ ವಿಷಯದಲ್ಲಿ ಹೇಗೋ ಮೆಣಸಿನಕಾಯಿ, ಸೀಮೆ ಎಣ್ಣೆ ವಿಷಯದಲ್ಲೂ ಅದನ್ನೇ ಕಾಣುತ್ತೇವೆ. ಮೆಣಸು - ಮೆಣಸಿನ ಕಾಯಿ, ಎಣ್ಣೆ - ಸೀಮೆಎಣ್ಣೆ ಈ ಪದಗಳೇ ಹೇಳುತ್ತವೆ, ಮೆಣಸು ಮತ್ತು ಎಣ್ಣೆಗಳು (ಎಣ್ಣೆ - ಎಳ್ಳಿನಿಂದ ತೆಗೆದ ಎಣ್ಣೆ. ಎಳ್ + ನೆಯ್) ಸ್ಥಳೀಯ ವಸ್ತುಗಳು; ಮೆಣಸಿನಕಾಯಿ, ಸೀಮೆಎಣ್ಣೆಗಳು ಹೊರಗಿನಿಂದ ಬಂದುವು ಎಂಬುದು ಆ ಪದಗಳಿಂದಲೇ ಸೂಚಿತ. ಮೆಣಸಿನಕಾಯಿ ಭಾರತೀಯರ ಊಟದ ಅನಿವಾರ್ಯ ಭಾಗವಾಗಿದ್ದರೂ, ಅದು "ಶ್ರಾದ್ಧ" ದಂತಹ (ಸಂ.ಶ್ರದ್ಧಾ) ಶ್ರದ್ಧೆಯಿಂದ ಮಾಡಬೇಕಾದ ಸಮಾರಂಭಗಳಲ್ಲಿ ಸಂಪೂರ್ಣ ಬಹಿಷ್ಕೃತ: 'ಶ್ರಾದ್ಧ'ದ ದಿನಗಳಲ್ಲಿ ಮೆಣಸನ್ನು ಮಾತ್ರ ಬಳಸುತ್ತಾರೆ. ಸೀಮೆಎಣ್ಣೆ ಲಾಂದ್ರವು ದೇವತ ಮುಂದೆ ಉರಿಸಲು ಯೋಗ್ಯವಲ್ಲ; ಎಷ್ಟೇ ವಿದ್ಯುದ್ದೀಪಗಳ ಬೆಳಕಿದ್ದರೂ ದೇವರ ಮುಂದೆ ಎಣ್ಣೆ ದೀಪವಿರಲೇಬೇಕು. ವಿದ್ಯುದ್ದೀಪಗಳನ್ನು ತಿರುಪತಿಯಂತಹ ದೇವಸ್ಥಾನಗಳ ಗರ್ಭಗುಡಿಗಳ ಒಳಕ್ಕೆ ಬಿಟ್ಟುಕೊಂಡಿಲ್ಲ.* ಆ ದೀಪಗಳು ಗರ್ಭಗುಡಿ ಹೊರಗಿನ ಉಳಿದ ಭಾಗಗಳನ್ನು ಬೆಳಗಿಸಬಹುದು. ಕಾರಣ ಸ್ಪಷ್ಟ, ವಿದ್ಯುಚ್ಛಕ್ತಿಯು ಸಂಸ್ಕೃತಿಗೆ ಹೊಸದು. ಎಷ್ಟೋ ಕ್ರಿಶ್ಚಿಯನ್ ಹಬ್ಬಗಳು ಇಂದು ಮರೆತೇ ಹೋಗಿರುವ ಅನಾಗರಿಕ ಜನರ ಹಬ್ಬಗಳ ಜೊತೆ ಮಿಶ್ರಗೊಂಡಿವೆ. ಪಾಮರ್ ಮತ್ತು ಲಾಯಡ್ ಅವರು ಒಂದೆಡೆ (A year book of Festivals. London. 1972) ಹೀಗೆ ಸರಿಯಾಗಿಯೇ ಹೇಳುತ್ತಾರೆ "....ನಾಗರಿಕತೆಯನ್ನು ಸ್ವಲ್ಪ ಕೆರೆದು ತೆಗೆಯಿರಿ - ಅಲ್ಲೊಬ್ಬ ಪ್ರಾಕ್ತನ ಮಾನವನಿರುತ್ತಾನೆ" "(....If you scratch civilization you find a savage"). ಪಶ್ಚಿಮ ಪಾಕಿಸ್ತಾನದ ಸಿಂಧ್ ಪ್ರದೇಶದ ಮುಸ್ಲಿಮರು ಈಚಿನವರೆಗೆ ಶಿವಲಿಂಗಗಳು ಹಿಂದೂ ಧರ್ಮದ ಶಿವನ ಸಂಕೇತವೆಂದು ತಿಳಿಯದೆ ಅವನ್ನು ಪೂಜಿಸುತ್ತಿದ್ದರು. ಆ ಪ್ರದೇಶದಲ್ಲಿ ಇಸ್ಲಾಮ್ ಪ್ರವೇಶಿಸುವವರೆಗೆ ಹಿಂದೂಗಳಾಗಿದ್ದ ಅವರು ಮುಸ್ಲಿಮರಾದ ಮೇಲೂ ತಮ್ಮ ಹಿಂದಿನ ಪದ್ಧತಿಯನ್ನು ಮುಂದುವರಿಸಿದರು. ಕರ್ನಾಟಕದ ಲಂಬಾಣಿಗಳು (ಬಣಜಾರರು) ಮುಂಚೆ ಅಲೆಮಾರಿ ಜನಾಂಗದವರಾಗಿದ್ದು, ಈಗ ನೆಲೆ ನಿಂತಿದ್ದರೂ ಅವರ ಭಾಷೆಯಲ್ಲಿ ಅವರ ಅಲೆಮಾರಿ ಜೀವನದ ಕುರುಹುಗಳನ್ನು ಉಳಿಸಿಕೊಂಡಿದ್ದಾರೆ. ಉದಾಹರಣೆಗೆ, 'ಅಡಿಗೆಯಾಯ್ತೇ?' ಎಂಬರ್ಥದಲ್ಲಿ ಬಳಸುವ ಉಕ್ತಿ "ಚೂಲೋ ವೇಗೋ" ಅಥವಾ "ಚುಲೋ ಕರ್" (=ಒಲೆ ಸಿದ್ಧವಾಯ್ತೇ?). ಅಲೆಮಾರಿ ಜನಾಂಗದವರಿಗೆ ಮೂರು ಕಲ್ಲು ಗುಂಡು, ಸೌದೆ, ಬೆಂಕಿ ಇವು ಸಿದ್ಧವಾಗುವುದು ಅಡುಗೆ ಮಾಡುವ ಕ್ರಿಯೆಯ ಅತಿ ಮುಖ್ಯ ಭಾಗ ತಾನೇ? ಒಲೆ ಸಿದ್ಧವಾದರೆ ಅವರಿಗೆ ಅಡಿಗೆಯೇ ಸಿದ್ಧವಾದಂತೆ. ಇದು ಒಂದು ಜನಾಂಗದ "ಸಮೂಹ

* ನೇಪಾಲದಲ್ಲಿಯೂ ವಿದ್ಯುದ್ದೀಪಗಳು ಗರ್ಭಗುಡಿಗಳ ಹೊರಗೆ ಮಾತ್ರ.

ಪ್ರಜ್ಞೆ"ಯು (Collective Unconscious) ಆ ಜನಾಂಗದ ಮರೆತುಹೋದ ಚರಿತ್ರೆಯನ್ನು ಭಾಷೆ, ರಿಚುಯಲ್ಲುಗಳು, ಜಾನಪದ ನಂಬಿಕೆಗಳ ಮೂಲಕ ಉಳಿಸಿಕೊಳ್ಳುವ ರೀತಿ. ಇದಕ್ಕೆ ಒಂದು ಬಹು ಒಳ್ಳೆಯ ಉದಾಹರಣೆಯೆಂದರೆ ವಟುವಿಗೆ ಉಪನಯನ ಸಂದರ್ಭದಲ್ಲಿ ಸೊಂಟಕ್ಕೆ ದರ್ಭೆ ಜೊತೆ ಜಿಂಕೆ ಚರ್ಮ ಕಟ್ಟುವುದು. ಹಾಗೆಯೇ ಯಜ್ಞ ಸಂದರ್ಭದಲ್ಲಿ ಸಮಿತ್ತುಗಳಿಗೆ ಬೆಂಕಿ ಕಡ್ಡಿ ಬಳಸಿ ಬೆಂಕಿ ಹಚ್ಚಬಾರದು; ಮರಗಳ ಕೊರಡುಗಳನ್ನು ಉಜ್ಜಿ ತಯಾರಿಸಿದ ಬೆಂಕಿಯೇ ಆಗಬೇಕು. ಇದೆಲ್ಲವೂ ಗುಹಾವಾಸಿ ಮನುಷ್ಯನ ಜೀವನ ವಿಧಾನ ಸೂಚಕ. ಅನೇಕ ಕಡೆ, ಶುಭ ಸಂದರ್ಭಗಳಿಗೆ ನಲ್ಲಿ ನೀರು ನಿಷಿದ್ಧ.

ಮೆಣಸಿನ ಕಾಯಿಯಲ್ಲದೆ, ಹಲವಾರು ಕಾಯಿಪಲ್ಯಗಳು ಹಣ್ಣುಗಳು ಧಾನ್ಯಗಳು ದಕ್ಷಿಣ ಅಮೇರಿಕಾದಿಂದ ಭಾರತವನ್ನು ಪ್ರವೇಶಿಸಿದುವು. ಮತ್ತು ಅವೆಲ್ಲವೂ ಧಾರ್ಮಿಕ ಸಂದರ್ಭಗಳಿಂದ ಹೊರಗುಳಿದುವು. ಕ್ರಿ.ಶ. 1498-99ರಲ್ಲಿ ಪೋರ್ಚುಗಲ್ಲಿನ ವಾಸ್ಕೋಡಿಗಾಮನು ಯುರೋಪಿನಿಂದ ಇಂಡಿಯಾಕ್ಕೆ ಒಂದು ಹೊಸ ಸಮುದ್ರ ಮಾರ್ಗವನ್ನು ಕಂಡು ಹಿಡಿದನು. ಕ್ರಿ.ಶ. 1500ರಲ್ಲಿ ಕ್ರೊಬೆಲ್ ಎಂಬ ಇನ್ನೊಬ್ಬ ಪೋರ್ಚುಗೀಸ್ ಪ್ರವಾಸಿಯು ಆ ಹೊಸ ಮಾರ್ಗವನ್ನು ಕಳೆದುಕೊಂಡು, ದಾರಿ ತಪ್ಪಿ ಅಕಾಸ್ಮಾತ್ ಬ್ರೆಜಿಲ್ಲಿಗೆ ಹೋಗಿ ಅಲ್ಲಿಂದ ಹೇಗೋ ಕಷ್ಟಪಟ್ಟು ಭಾರತವನ್ನು ತಲುಪಿದನು. ಇದು ದಕ್ಷಿಣ ಅಮೇರಿಕದ ವೈವಿಧ್ಯಪೂರ್ಣ ಹಣ್ಣು, ಕಾಯಿಪಲ್ಯ, ತರಕಾರಿ ಧಾನ್ಯಗಳನ್ನು ಭಾರತಕ್ಕೆ ಪರಿಚಯ ಮಾಡಿಕೊಟ್ಟಿತು. ಅವೆಲ್ಲವೂ ಭಾರತೀಯರಿಗೆ ಸಂಪೂರ್ಣ ಅಪರಿಚಿತಗಳೇ. ಶ್ರೇಷ್ಠ ಸಸ್ಯವಿಜ್ಞಾನಿ ಡಾ. ಬಿ.ಜಿ.ಎಲ್. ಸ್ವಾಮಿಯವರು "ನಮ್ಮ ಹೊಟ್ಟೆಯಲ್ಲಿ ದಕ್ಷಿಣ ಅಮೆರಿಕ" ಎಂಬ ತಮ್ಮ ಕೃತಿಯಲ್ಲಿ ಹದಿನಾರು ಮತ್ತು ಹದಿನೇಳನೇ ಶತಮಾನದಲ್ಲಿ ಬಂದು ಭಾರತದ ಆಹಾರವ್ಯವಸ್ಥೆಯ ಭಾಗವಾದ ಅಂತಹ ಹಣ್ಣು ತರಕಾರಿ ಧಾನ್ಯಗಳ ಪಟ್ಟಿ ನೀಡಿದ್ದಾರೆ (ಪು. 4, 5, 6, 8, 13, 38, 45, 49, 62). ಅವುಗಳಲ್ಲಿ ಕೆಲವು ಇವು : ಪಪಾಯಿ (ಪರಂಗಿ ಹಣ್ಣು), ಟೊಮ್ಯಾಟೊ, ನೆಲಗಡಲೆ, ತೊಗರಿ, ತಿಂಗಳ ಹುರುಳಿ, ಮೆಣಸಿನಕಾಯಿಯಂತೂ ಸರಿಯೇ. ಅವುಗಳಲ್ಲಿ ಹಲವು ಅಥವಾ ಬಹುತೇಕ ಎಲ್ಲ ತರಕಾರಿ ಹಣ್ಣು ಧಾನ್ಯಗಳು ಶಾಸ್ತ್ರೀಯ ಅಥವಾ ಧಾರ್ಮಿಕ ಅಥವಾ ಔಪಚಾರಿಕ ಸಂದರ್ಭಗಳಲ್ಲಿ ನಿಷಿದ್ಧಗಳೇ. ಕಡಲೆಯು ಕುದುರೆ ಜೊತೆ ಕ್ರಿ.ಪೂ.ದಲ್ಲಿಯೇ ವಿದೇಶದಿಂದ ಆಮದಾಗಿದ್ದರೂ, ಅವೆರಡೂ ನಿಷಿದ್ಧವೆಂದು ಪರಿಗಣಿತವಾಗಿಲ್ಲ : ದೇವತೆಗಳಿಗೆ ಕಡಲೆಯಿಂದ ಮಾಡಿದ ಅಡುಗೆಯನ್ನು ಎಡೆಯಾಗಿ ನೀಡುತ್ತಾರೆ ; ದೇವಾಲಯಗಳಲ್ಲಿ ಕಡಲೆ ಕೋಸಂಬರಿಯನ್ನು ಹಂಚುತ್ತಾರೆ. ಕುದುರೆಯ ಮೇಲೆ ದೇವರ ಮೆರವಣಿಗೆ ನಡೆಯುವುದು ನಿಷಿದ್ಧವಲ್ಲ : ಎಂದರೆ ಅವು ಕ್ರಮೇಣ ಭಾರತದ ಸಂಸ್ಕೃತಿಯ ಭಾಗವಾದುವು.

ಮೆಣಸಿನ ಕಾಯಿ, ನೆಲಗಡಲೆ ಇವುಗಳ ಪದ ರಚನೆಯೇ ಕರ್ನಾಟಕಕ್ಕೆ ಅವು ಮೆಣಸು, ಕಡಲೆ ಅವುಗಳಿಗಿಂತ ಆಮೇಲಿನ ಸಸ್ಯಗಳೆಂಬುದನ್ನೂ ಸೂಚಿಸುತ್ತದೆ.

ನನಗೆ ಜಾನಪದ ಸಾಮಗ್ರಿಯ ಸಹಾಯದಿಂದ ಕರ್ನಾಟಕ ಆಂಧ್ರ ಪ್ರದೇಶಗಳಲ್ಲಿ ಹಲವು ಐತಿಹಾಸಿಕ ಮಹತ್ವದ ಜಾಗಗಳನ್ನು ಗುರುತಿಸಲು ಸಾಧ್ಯವಾಯ್ತು. ಹತ್ತನೆ ಶತಮಾನದ ಆಂಧ್ರಪ್ರದೇಶದ ಕರೀಂನಗರ ಜಿಲ್ಲೆಯ ಕುರಿಕ್ಯಾಲ ಗ್ರಾಮದ ಶಾಸನವೊಂದರಲ್ಲಿ ಪಂಪನಿಗೆ ಅರಿಕೇಸರಿ ದೊರೆ ನೀಡಿದ ಧರ್ಮಪುರ ಎಂಬ ಗ್ರಾಮದ ನಿವೇಶನವನ್ನು ಗುರುತಿಸಲು ಸಹಾಯ ಮಾಡಿದ್ದು ಆ ಊರಲ್ಲಿ ಪ್ರಚಲಿತವಿದ್ದ ಜಾನಪದ. ಅಲ್ಲಿನ ಬೆಟ್ಟದ ಬುಡದಲ್ಲಿ ಆ ಹೆಸರಿನ ಊರೊಂದು ಹಿಂದೆ ಇತ್ತು ಎಂದು ಅಲ್ಲಿನ ಹಾಡುಗಳಲ್ಲಿ ಉಲ್ಲೇಖಗೊಂಡಿದ್ದು ಆ ಜಾಗದಲ್ಲಿ ದೊರಕಿದ ಆ ಕಾಲದ ಇಟ್ಟಿಗೆಗಳು ಆ ಜಾನಪದ ಸಾಮಗ್ರಿಯ ಹೇಳಿಕೆಯನ್ನು ಪುಷ್ಟೀಕರಿಸಿದುವು. ಬೆಂಗಳೂರು ಜಿಲ್ಲೆ ಮಾಗಡಿ ತಾಲೂಕಿನ ಕಲ್ಯದಲ್ಲಿ ಕೇಳಿದ ಹಾಡಿನ ಸಹಾಯದಿಂದ ಆ ಊರು "ಬೌದ್ಧ ವಾಸಾ ಮಹಾಪುರಿ" ಎಂದು ತಾಮ್ರ ಪಟವೊಂದರಲ್ಲಿ ಉಲ್ಲೇಖಗೊಂಡ ಕಲಾವತಿಯೇ ಎಂಬುದು ಖಚಿತವಾಯ್ತು. ಕಲ್ಯವು ಬಹು ದೊಡ್ಡ ಬೌದ್ಧ ಧರ್ಮ ಕೇಂದ್ರವಾಗಿತ್ತು, ಹದಿನಾರನೇ ಶತಮಾನದಲ್ಲಿ.

ಸ್ಥಳನಾಮಗಳು ಭಾಷೆಯಲ್ಲಿ ಬಹುವಾಗಿ ಬಳಕೆಯಾಗುವ ಸಾಮಗ್ರಿಯಲ್ಲದೆ, ಹಿಂದಿನ ಹಲವು ಘಟನೆಗಳನ್ನು ಸಮರ್ಥವಾಗಿ ಹಿಡಿದಿಡುತ್ತವೆ. "ಇತಿಹಾಸ ಮೌನ ವಹಿಸಿದಾಗ ಸ್ಥಳನಾಮಗಳು ಮಾತನಾಡುತ್ತವೆ" ಎಂಬ ಒಂದು ಹೇಳಿಕೆಯೇ ಇದೆ ("Where history keeps mum, palce-names speak").

ಆಕ್ಸ್‌ಫರ್ಡ್, ಕೇಂಬ್ರಿಡ್ಜ್ ಹೆಸರುಗಳೇ ಸೂಚಿಸುತ್ತವೆ, ಅವುಗಳ ಪಕ್ಕದಲ್ಲಿ ನದಿಗಳಿರುವುದನ್ನು. ಒಂದು, ದನಗಳು ದಾಟಲು ಪ್ರಶಸ್ತವಾಗಿರುವ ಜಾಗ; ಇನ್ನೊಂದು, ಸೇತುವೆ ಹೊಂದಿರುವ ಜಾಗ. ಶ್ರವಣಬೆಳ್ಗೊಳದ ಸಮೀಪದಲ್ಲಿರುವ ಹಳೆಯ ಬೆಳ್ಗೊಳ ಎಂಬ ಊರಿನ ಹೆಸರು ಅದೇ ಮೂಲ ಬೆಳ್ಗೊಳವೆಂಬ, ಶ್ರವಣ ಬೆಳ್ಗೊಳ ಊರು ಆಮೇಲೆ ಅಸ್ತಿತ್ವಕ್ಕೆ ಬಂದುದೆಂಬ ಸುಳುಹು ಸಿಕ್ಕು, ಮುಂದುವರಿಸಿದ ಸಂಶೋಧನೆಗಳಿಂದಾಗಿ ಆ ಸುಳುಹು ನಿಜವಾಯ್ತು. ಏಳು ಎಂಟನೇ ಶತಮಾನಗಳ ಶಾಸನಗಳಲ್ಲಿ ಬರುವ ವೆಳ್ಗೊಳ (ಬೆಳ್ಗೊಳ)ವು ಈಗಿನ ಹಳೆಯ ಬೆಳ್ಗೊಳವೇ; ಈಗಿನ ಶ್ರವಣಬೆಳ್ಗೊಳ ಊರು ಹತ್ತನೇ ಶತಮಾನದಿಂದ ಈಚಿನದು; ದೊಡ್ಡ ಬೆಟ್ಟದ ಮೇಲೆ ಕೆತ್ತಲಾದ ಗೊಮ್ಮಟ ವಿಗ್ರಹ ಅಸ್ತಿತ್ವಕ್ಕೆ ಬಂದ ಮೇಲೆ ಹುಟ್ಟಿದ ಊರು. ಪ್ರಾಚೀನ ಕಾಲದಲ್ಲಿ ಮದುವೆಯಾಗದ ಹೆಣ್ಣಿನ ಕಡೆಯವರನ್ನು ಗೆದ್ದು ಅವಳನ್ನು ತೆಗೆದುಕೊಂಡು ಹೋಗಿ ವರನು ಅವಳನ್ನು ಮದುವೆಯಾಗಬೇಕಿತ್ತು. ಆ ಪದ್ಧತಿ ಎಂದೋ ನಿಂತು ಹೋಯಿತಾದರೂ, ಆ ಪದ್ಧತಿಯ ಅವಶೇಷವು ಈಗಲೂ ಮದುವೆ ಹಿಂದಿನ ದಿನ ಹುಡುಗಿಯ ಊರಲ್ಲಿ ಹುಡುಗಿ ಹುಡುಗರ (ವಧು-ವರರ) ಕಡೆಯ ಜನರು ಕೈಯಲ್ಲಿ ಜೋಳ ಹಿಡಿದು ಪರಸ್ಪರ ಹೊಡೆಯುವ ವಿನೋದದ ದೃಶ್ಯದಲ್ಲಿ ಉಳಿದುಕೊಂಡಿದೆ. "ವಿವಾಹ" ಪದದಲ್ಲೇ (ವಹ್ = ಹೊತ್ತುಕೊಂಡು ಹೋಗು. ನೋಡಿ - ವಾಹನ. 'vehicle' ಪದವೂ 'ವಾಹನ' ಜ್ಞಾತಿಪದ) ಆ ಪ್ರಾಚೀನ ಕಾಲದ ಪದ್ಧತಿಯ ಸೂಚನೆ ಇದೆ. ಈಗ 'ಕಾಶೀಯಾತ್ರೆ'ಯು ಬ್ರಾಹ್ಮಣರ ಮದುವೆಗಳಲ್ಲಿ

ನಡೆಯುವ ಒಂದು ಶಾಸ್ತ್ರ ಕರ್ಮ. ಆದರೆ, ಆ ಕರ್ಮವು ಪ್ರಾಚೀನ ಕಾಲದ ಬಹು ಅರ್ಥಪೂರ್ಣ ಅಂಶವನ್ನು, ಜ್ಞಾನಕ್ಕೆ ಪ್ರಾಚೀನ ಭಾರತ ನೀಡಿದ್ದ ಮಹತ್ವವನ್ನು ಧ್ವನಿಸುತ್ತದೆಯೆಂಬ ಅಂಶವನ್ನು ಬಹಳ ಜನ ತಿಳಿಯರು. ಪ್ರಾಚೀನ ಭಾರತದಲ್ಲಿ ಶಿಷ್ಯನು ತನ್ನ ಗುರುವಿನ ಮನೆಯಲ್ಲಿದ್ದು ಜ್ಞಾನವನ್ನು ಸಂಪಾದಿಸಿ, "ಸಮಾವರ್ತನ"ದಲ್ಲಿ (ಅದೇ ಈಗಿನ 'Convocation') ವಿದ್ವಾಂಸರಿಂದ ಪರೀಕ್ಷಿತನಾಗಿ ಅವನು ಗೃಹಸ್ಥನಾಗಲು ಅರ್ಹನೆಂದು ಪರಿಗಣಿತನಾಗುತ್ತಿದ್ದ. ಅವನ ಔಪಚಾರಿಕ ಶಿಕ್ಷಣದ ಅಂತ್ಯವೇ 'ಸಮಾವರ್ತನ'. ಅವನು ಗುರುವಿನ ಅಪ್ಪಣೆ ಪಡೆದು ತನ್ನ ಊರಿಗೆ ಹೊರಟವನು ದಾರಿಯಲ್ಲಿ ಜ್ಞಾನದ ತೀವ್ರ ಹಂಬಲ ಹೆಚ್ಚಾಗಿ ಗೃಹಸ್ಥನಾಗುವ ಉದ್ದೇಶವನ್ನು ಕೈ ಬಿಟ್ಟು ಉನ್ನತಜ್ಞಾನ ಸಂಪಾದನೆಗಾಗಿ ಕಾಶಿಗೆ ತೆರಳುತ್ತಿದ್ದನು. ದಾರಿಯಲ್ಲಿ ವಧುವಿನ ತಂದೆಯ ಭೇಟಿಯಾಗಿ ಅವನ ಕೋರಿಕೆಯಂತೆ ಅವನ ಮನೆಗೆ ತೆರಳಿ ವಧುವಿನ ಕೈಹಿಡಿದು ಗೃಹಸ್ಥನಾಗುತ್ತಿದ್ದನು. ಆ ಹಿಂದಿನ 'ಕಾಶೀಯಾತ್ರೆ'ಯು ಇಂದು ಕೇವಲ ಶಾಸ್ತ್ರ ವಿಧಿಯ ಅವಶೇಷ ರೂಪದಲ್ಲಿ ಉಳಿದಿದೆ.

ಇಂತಹ ಹತ್ತಾರು ಉದಾಹರಣೆಗಳನ್ನು ಬೆಳಸಬಹುದು. ನಾನು ಇಲ್ಲಿ ಒತ್ತಿ ಹೇಳಲು ಬಯಸುವುದಿಷ್ಟು: ಇತಿಹಾಸ ಸಂಶೋಧಕರು ಒಳ್ಳೆಯ ಭಾಷಾಜ್ಞಾನದ ಜೊತೆ ಭಾಷಾವಿಜ್ಞಾನದ ಮೂಲಭೂತ ಅರಿವನ್ನು, ಅಂತೆಯೇ ಜಾನಪದದ ಅರಿವನ್ನೂ ಹೊಂದಿರುವುದು ತೀರ ಅಗತ್ಯ. ಭಾಷಾವಿಜ್ಞಾನವು (Linguistics) ಒಂದು ಸ್ವತಂತ್ರ ಶಿಸ್ತಾಗಿ ರೂಪುಗೊಳ್ಳುವ ಮುನ್ನ ಮಾನವಶಾಸ್ತ್ರದ (Anthropology), ಅದರಲ್ಲೂ ಸಾಂಸ್ಕೃತಿಕ ಮಾನವಶಾಸ್ತ್ರದ (Cultural Anthropology) ಭಾಗವಾಗಿತ್ತು. ಆರಂಭದ ಸಪೀರ್‌ನಂತಹ ಭಾಷಾ ವಿಜ್ಞಾನಿಗಳು ಮಾನವಶಾಸ್ತ್ರಜ್ಞರೂ ಆಗಿದ್ದರು. ಭಾಷೆಯು ಅದನ್ನಾಡುವ ಜನರ ಬದುಕಿನಲ್ಲಿ ನಡೆದ ಐತಿಹಾಸಿಕ ಬದಲಾವಣೆಗಳನ್ನು ತನ್ನಲ್ಲಿ ಹುದುಗಿಸಿಕೊಂಡಿರುವುದನ್ನು, ಭಾಷೆಯ ಅಧ್ಯಯನವು ಪ್ರಾಚೀನ ಕಾಲದ ಸಂಸ್ಕೃತಿಯ ಪುನಾರಚನೆಯಲ್ಲಿ ಪ್ರಮುಖ ಆಕರವಾಗುವುದನ್ನು ಸಪೀರನು ಎತ್ತಿ ತೋರಿಸಿದ್ದಾನೆ. ಅಮೆರಿಕದ ಬುಡಕಟ್ಟು ಜನಾಂಗವಾದ ಅತಬಾಸ್ಕನ್ ಜನರ ಭಾಷೆಯ ಒಂದು ಪದವು ಅವರು ಉತ್ತರದಿಂದ ದಕ್ಷಿಣಕ್ಕೆ ವಲಸೆ ಬಂದುದರ ಸೂಚನೆಯೆಂದು ಅವನು ಹೇಳಿದ್ದಾನೆ. ಕರ್ನಾಟಕದ ಲಂಬಾಣಿ ಜನರ ಭಾಷೆ ಮತ್ತು ಜಾನಪದಗಳ ನನ್ನ ಅಧ್ಯಯನವು ಅವರು ಉತ್ತರ ಭಾರತದ ರಾಜಾಸ್ಥಾನದಿಂದ ದಕ್ಷಿಣ ಭಾರತಕ್ಕೆ 'ಮುಸ್ಲಿಮರ ಸೇನೆ' ಜೊತೆ ಧಾನ್ಯ ವ್ಯಾಪಾರಿಗಳಾಗಿ ಬಂದಿರುವುದನ್ನು ಸಮರ್ಥಿಸುತ್ತದೆ. ಅವರು ಇಂದಿಗೂ ಹಂದಿ ಮಾಂಸವನ್ನು ಮುಟ್ಟದಿರುವುದು, ಹಂದಿಗಳು ತಮ್ಮ 'ತಾಂಡ'ದೊಳಕ್ಕೆ ಬರದಂತೆ ನೋಡಿಕೊಳ್ಳುವುದು ಮೇಲಿನ ಅಂಶವನ್ನು ದೃಢೀಕರಿಸುತ್ತದೆ. ಅವರು (ಲಂಬಾಣಿಗಳು) ಆತ್ಮವಿಶ್ವಾಸದ ಜನಾಂಗವಾಗಿದ್ದಿರಬೇಕು. ಅವರು ತಮ್ಮ ಸಾಂಸ್ಕೃತಿಕ ಅಸ್ಮಿತೆಯನ್ನು ಉಳಿಸಿಕೊಳ್ಳಲು ಅವರು ಮುಸ್ಲಿಂ ಸೈನ್ಯದ ಜೊತೆ ಮಿಶ್ರವಾಗದೆ ಸೇನಾತಾಣೆ ಸಮೀಪದ ತಮ್ಮ ಸ್ವತಂತ್ರ ಬಿಡಾರಗಳಲ್ಲಿ ವಾಸಿಸುತ್ತಿದ್ದುದರ ಕುರುಹುಗಳೇ ಇಂದು ಅವರು ಬೇರೆ ಜಾತಿ ಜನ ಇರುವ ಹಳ್ಳಿಗಳ ಪಕ್ಕದಲ್ಲಿ ಪ್ರತ್ಯೇಕ 'ತಾಂಡ'ಗಳಲ್ಲಿ ವಾಸಿಸುತ್ತಿರುವುದು. ಅವರು ಇಂದಿಗೂ ಇತರ ಜನರ ಜೊತೆ ಬೆರೆತರೂ

ಪ್ರತ್ಯೇಕವಾದ ತಮ್ಮದೇ 'ತಾಂಡಾ'ಗಳಲ್ಲಿ ವಾಸಿಸಬಯಸುತ್ತಾರೆ; ಆ ಮೂಲಕ ತಮ್ಮ ಆರಾಧನಾ ವಿಧಾನ, ಜೀವನ ಶೈಲಿಗಳ ವೈಶಿಷ್ಟ್ಯಗಳನ್ನು ಉಳಿಸಿಕೊಂಡು ಬಂದಿದ್ದಾರೆ.

ಲಂಬಾಣಿಗಳು ಆತ್ಮವಿಶ್ವಾಸದ ಜನ ; ಈ ಹಿನ್ನೆಲೆಯಲ್ಲಿ ಅವರು ತಮ್ಮ ತಾಂಡಗಳಿಗೆ ಹೆಸರಿಡುವ ವಿಧಾನ ಗಮನಾರ್ಹ. ಅಮೆರಿಕದ ಉತ್ತರ ಕ್ಯಾಲಿಫೋರ್ನಿಯಾ ಪ್ರಾಂತದ ಯನ ಜನಾಂಗದ ಭಾಷೆಯಲ್ಲಿ ಎರಡು ಪ್ರಭೇದಗಳಿವೆ: ಒಂದು, ಗಂಡಸರು ತಾವೇ ಇದ್ದಾಗ ಅಥವಾ ಗಂಡಸರು ಹೆಂಗಸರು ಸೇರಿದಾಗ ಬಳಸುವ ಪ್ರಭೇದ; ಇನ್ನೊಂದು, ಹೆಂಗಸರು ತಾವೇ ಪ್ರತ್ಯೇಕವಾಗಿ ಪರಸ್ಪರ ಬಳಸುವ ಪ್ರಭೇದ. ಅದನ್ನು ಹೋಲುವಂತಹ ಊರುಗಳ ಹೆಸರುಗಳ ವ್ಯವಸ್ಥೆ ಲಂಬಾಣಿಗಳಲ್ಲಿದೆ. ಅವರ ತಾಂಡಗಳಿಗೆ ಎರಡೆರಡು ಹೆಸರುಗಳಿರುತ್ತವೆ: ಒಂದು, ಆ ತಾಂಡ ಸಮೀಪ ಇರುವ ಊರನ್ನು ಅವಲಂಬಿಸಿದ್ದು. ಈ ಹೆಸರನ್ನು ಊರಿನ ಜನ ತಾವೇ ಮಾತನಾಡುವಾಗ ಅಥವಾ ಲಂಬಾಣಿಗಳ ಜೊತೆ ಮಾತನಾಡುವಾಗ ಬಳಸುತ್ತಾರೆ. ಎರಡು, ತಾಂಡದ ಲಂಬಾಣಿಗಳು ತಮ್ಮಲ್ಲಿ ಮಾತ್ರ ವ್ಯವಹರಿಸುವಾಗ ಬಳಸತಕ್ಕದ್ದು. ಶಿರೂರು ಎಂಬ ಗ್ರಾಮದ ಪಕ್ಕದ ತಾಂಡಕ್ಕೆ "ಶಿರೂರು ತಾಂಡೆ" ಎಂಬ ಹೆಸರಿದ್ದು ಅದನ್ನು ಗ್ರಾಮದ ಜನ, ಅವರ ಜೊತೆ ಮಾತನಾಡುವಾಗ ಲಂಬಾಣಿ ಜನ ಬಳಸುತ್ತಾರೆ. ಅದೇ ತಾಂಡಕ್ಕೆ "ಮತರು ನಾಯಕೇರ ತಾಂಡೆ" ಎಂಬ ಇನ್ನೊಂದು ಹೆಸರಿದ್ದು ಅದನ್ನು ಲಂಬಾಣಿಗಳು ತಮ್ಮ ಪರಸ್ಪರ ವ್ಯವಹಾರಗಳಲ್ಲಿ ಮಾತ್ರ ಬಳಸುತ್ತಾರೆ (ಆ ಎರಡನೆಯ ಹೆಸರು ಆ ಜನರ ಯಾವುದೋ ಕಾಲದ - ಆ ತಾಂಡ ಆರಂಭವಾದ ದಿನಗಳ ಕಾಲದ "ಮತಕೇರ ನಾಯಕ" ಎಂಬ ಮುಖಂಡನ ಹೆಸರನ್ನು ಅವಲಂಬಿಸಿದ್ದು). ಮೊದಲ ವರ್ಗದ ಹೆಸರುಗಳಿಂದ ("ಶಿರೂರು ತಾಂಡೆ") ಅವರು ವ್ಯಕ್ತಿತ್ವವಿಲ್ಲದ ಜನರಂತೆ, ಇತರರನ್ನು ಅವಲಂಬಿಸಿರುವ ಉಪಜೀವಿಗಳಂತೆ ಹೊರಕ್ಕೆ ಕಾಣಿಸಿದರೂ, ಎರಡನೇ ವರ್ಗದ ಹೆಸರುಗಳಿಂದ ವಾಸ್ತವವಾಗಿ ಅವರು ತಮ್ಮದೇ ಅಸ್ಮಿತೆಯ (identity), ವ್ಯಕ್ತಿತ್ವದ (individuality) ಜನರಂತೆ ಗೋಚರಿಸುತ್ತಾರೆ. ಸ್ಥಳನಾಮಗಳ ಎಚ್ಚರಿಕೆಯ ಅಧ್ಯಯನವು ಹೊರಗಿನ ಐತಿಹಾಸಿಕ ಸಂಗತಿಗಳನ್ನು ತಿಳಿಸುವಂತೆ, ಒಮ್ಮೊಮ್ಮೆ ವ್ಯಕ್ತಿ ಅಥವಾ ಜನಾಂಗದ ಒಳ ಮನೋವಿಜ್ಞಾನವನ್ನೂ ಶ್ರುತಪಡಿಸಬಲ್ಲದು. ಲಂಬಾಣಿಗಳು ಆರು ಏಳು ನೂರು ವರ್ಷಗಳ ಹಿಂದಿನ ನೆನಪುಗಳನ್ನು ಉಳಿಸಿಕೊಂಡು ಬಂದಿದ್ದಾರೆ - "ಎಷ್ಟೇ ಒತ್ತಾಯ ಬಂದರೂ ನಾವು ಮುಸ್ಲಿಮರಾಗಲಿಲ್ಲ" - ಇದು ಅವರ ಬಾಯಿಂದ ಬರುವ ಮಾತು.

ಶುದ್ಧ ವಿಜ್ಞಾನ, ಅನ್ವಯಿಕ ವಿಜ್ಞಾನಗಳಲ್ಲಿ ಗಣಿತ ವಿಜ್ಞಾನದ ಅರಿವು ಹೇಗೆ ಮೂಲಭೂತ ಆವಶ್ಯಕವೋ ಭಾಷಾ ವಿಜ್ಞಾನದ ಜ್ಞಾನವು ಮಾನವಿಕಗಳ ಸಮಾಜವಿಜ್ಞಾನಗಳ ವಿದ್ವಾಂಸರಿಗೆ ತೀರ ಅಗತ್ಯ ; ಅದರಲ್ಲೂ ಸ್ವನವಿಜ್ಞಾನ (Phonetics), ಶಬ್ದಾರ್ಥ ವಿಜ್ಞಾನಗಳ (Semantics) ಅರಿವು ಅಗತ್ಯ. ಜೊತೆಗೆ ಭಾಷಾವಿಜ್ಞಾನದ ಶಾಖೆಗಳಾದ ನಾಮ ವಿಜ್ಞಾನದ, ಅದರಲ್ಲೂ ಸ್ಥಳನಾಮ ವಿಜ್ಞಾನದ (Toponymy) ಅರಿವು ಇದ್ದರೆ

ಇತಿಹಾಸಕಾರರು ಭಾಷೆಯನ್ನು ಉತ್ಖನನ ಮಾಡಿ ಅಲ್ಲಿಂದ ಅಮೂಲ್ಯ ಮಾಹಿತಿಯನ್ನು ಹೆಕ್ಕಿ ತೆಗೆದು ಇತರ ಮೂಲಗಳಿಂದ ದೊರಕುವ ಮಾಹಿತಿಗೆ ಪೋಷಕವಾಗಿ ಬಳಸಿಕೊಳ್ಳಬಹುದು. ಅಂತೆಯೇ ಒಂದು ಜನಾಂಗದ ಜಾನಪದವು ಆ ಜನಾಂಗದ ನಿಗೂಢ ಮನಸ್ಸನ್ನು ಅರ್ಥೈಸಲು ಸಹಾಯಕವೆಂಬುದನ್ನು ಮೇಲೆ ನೋಡಿದ್ದೇವೆ.

ಸಂಶೋಧನೆ ಕೇವಲ ಮಾಹಿತಿ ಸಂಗ್ರಹವಾಗಿರದೆ, ಅದು ಬಿಡಿಗಳನ್ನು ಸೇರಿಸಿದ ಇಡಿಯನ್ನು ವ್ಯಾಖ್ಯಾನಿಸುವ ಕಾರ್ಯವೂ ಆಗಿದೆ. ಮೇಲಿನ ಸಂಪ್ರಬಂಧವು ವ್ಯಾಖ್ಯಾನಾತ್ಮಕ ಸಂಶೋಧನೆಯ ಒಂದು ಸರಳ ಮಾದರಿ (sample) ಕೂಡ ಆಗಿರುವುದನ್ನು ಓದುಗರು ಗಮನಿಸಬಹುದು.

## ಗ್ರಂಥ ಸೂಚಿ


Sturtevant E.H.L. : An Introduction to Linguistic Science

Block B and Trager G.L. : Outline of Linguistic Analysis

Burrow T and Emeneau M.B. : A Dravidian Etymological Dictionary

Encyclopaedia Americana

Encyclopaedia of the Social Sciences

Encyclopaedia Britannica

Encyclopaedia of Religion and Ethics

Carlos S. : Folk Beliefs of the Tamils

Palmer & Llyod : A year of Festivals

Sohinder Singh Bedi : Folklore of Punjab

William Crooke : The popular Religion and Folkore of Northern India II

James George Frazer : The Golden Bough

Kroeber : Anthropology

Herskovitz : Cultural Anthropology

Rulph L. Beals, Harny Hajer and Alan R. Beals : An Introduction to Anthropology

Nagaraja Rao M.S. : 'Iron Age in South India' (Lecture delivered in Bangalore on 9-1-1982)

Thomas P : Hindu Customs and Manners

(Ed). Suryanatha Kamat : Ancient Indian attitude towards Nature and Environment

(Ed.) G. Karuppam, K. Kumudamani : History of Science and Technology VI

(Ed.) B.V. Subbarayappa : History of Science, Philosophy and Culture in Indian Civilization. IV - 1

Abbe Dubois : Hindu Manners, Customs and Ceremonies

Swapan Kumar Bhattacharya : Farmers' Rituals and Modernisation

(ಸಂ.) ರಾಗೌ, ವಸಂತಕುಮಾರ್ ಎಂ.ಸಿ. : ಜಾನಪದ ನಂಬಿಕೆಗಳು.

ಚಿದಾನಂದ ಮೂರ್ತಿ ಎಂ. : ಪೂರ್ಣಸೂರ್ಯಗ್ರಹಣ, ಒಂದು ಸಮಾಜೋ ಸಾಂಸ್ಕೃತಿಕ ಸಮೀಕ್ಷೆ

ಜನ : ಜನಪದ : ಜಾನಪದ

ಸುಂದರ ಎ. : ಇತಿಹಾಸಪೂರ್ವ ಕರ್ನಾಟಕ

ಅಥವಾ ಕರ್ನಾಟಕದ ಪ್ರಾಗಿತಿಹಾಸ

ಸ್ವಾಮಿ ಬಿ.ಜಿ.ಎಲ್ : ನಮ್ಮ ಹೊಟ್ಟೆಯಲ್ಲಿ ದಕ್ಷಿಣ ಅಮೆರಿಕ

# ಒಳ - ಹೊರಗನ್ನು ಬೆಳಗಿಸುವ ಶೋಧನ ದೀಪವಾಗಿ ಸಂಶೋಧನೆ*



## 1

"ಯೇನ ಅಶ್ರುತಂ ಶ್ರುತಂ ಭವತಿ, ಅಮತಂ ಮತಮ್, ಅವಿಜ್ಞಾತಂ ವಿಜ್ಞಾತಂ....."- ಯಾವುದರ ಅರಿವಿನಿಂದ ಕೇಳಿಸದ್ದು ಕೇಳಿಸುವುದೋ ಅಗ್ರಾಹ್ಯವು ಗ್ರಾಹ್ಯವಾಗುವುದೋ ತಿಳಿಯದ್ದು ತಿಳಿಯುವುದೋ ಅದನ್ನು ಗ್ರಹಿಸುವುದು ಬದುಕಿನ ಗುರಿ ಎಂದು ಉದ್ಘೋಷಿಸಿದ ಉಪನಿಷತ್ತಿನ ಋಷಿಗಳು ಒಂದರ್ಥದಲ್ಲಿ ಸಂಶೋಧಕರೇ. ಅವರ ಪ್ರಕಾರ, ಸತ್ಯವು ಹೊಳೆಯುವ ಚಿನ್ನದ ಪಾತ್ರೆಯಿಂದ ಮುಚ್ಚಲ್ಪಟ್ಟಿದೆ. ಆ ಪಾತ್ರೆಯನ್ನು ತೆರೆದು ಸತ್ಯದರ್ಶನವನ್ನು ಮಾಡುವ ಹಂಬಲ ಅವರದು ("ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಂ, ತತ್ತ್ವಂ ಪೂಷನ್ ಅಪಾವೃಣು ಸತ್ಯಧರ್ಮಾಯ ದೃಷ್ಟಯೇ"). ಹಾಗೆ ಸತ್ಯವನ್ನು ಮರೆಮಾಡಿರುವ ಅರ್ಥಾತ್ ದಾರಿ ತಪ್ಪಿಸಿರುವ ಅರ್ಥಾತ್ ಸತ್ಯದ ಜಾಗದಲ್ಲಿ ತಾನೇ ನಿಂತು ಮೆರೆದಿರುವ ಆಕರ್ಷಕ ಮುಸುಕನ್ನು ಕಳಚಿ ನಿತ್ಯಸತ್ಯದ ದರ್ಶನವನ್ನು ಮಾಡಿದ ಋಷಿಗಳ ಉದ್ಗಾರವಾಣಿಯೂ ಉಪನಿಷತ್ತಿನಲ್ಲಿ ಕೇಳಿಬರುತ್ತದೆ ("ಶೃಣ್ವಂತು ವಿಶ್ವೇ ಅಮೃತಸ್ಯ ಪುತ್ರಾಃ। ಆಯೇ ಧಾಮಾನಿ ದಿವ್ಯಾನಿ ತಸ್ಥುಃ । ವೇದಾಹಮೇತಂ ಪುರುಷಂ ಮಹಾಂತಂ ಆದಿತ್ಯವರ್ಣಂ ತಮಸಃ ಪರಸ್ತಾತ್"). ಕಣ್ಣಿಗೆ ಕಾಣುವ ಜಗತ್ತು ತನ್ನಲ್ಲಿ ಹುದುಗಿಸಿಕೊಂಡಿರುವ, ಸತ್ಯಸಾಕ್ಷಾತ್ಕಾರದ ತೀವ್ರ ಹಂಬಲದ ಸಾಧಕರಿಗೆ ಮಾತ್ರ ಗೋಚರಿಸುವ ಋತ ಅಥವಾ ವಿಶ್ವನಿಯಮವನ್ನು ಕಾಣುವುದು ನಿರಂತರ ಶ್ರಮಿಸಿದ, "ಧ್ಯಾನಾವಸ್ಥಿತ ತದ್ಗತೇನ ಮನಸಾ" - ದೈವವನ್ನು ಕಾಣಲು ಧ್ಯಾನಸ್ಥಿತ ಮನಸ್ಸಿನಿಂದ ಮಾತ್ರ ಸಾಧ್ಯವೆಂದು ಸಾರಿದ ಅವರು ಆಧ್ಯಾತ್ಮಿಕ ಲೋಕದ ಸಾಧಕರು, ಯೋಗಿಗಳು, ಸಂಶೋಧಕರು. ಹಾಗೆ ನೋಡಿದರೆ ನಿಜವಾದ ಸಂಶೋಧಕರೆಲ್ಲ ಸತ್ಯದ ಆರಾಧಕರು, ಸತ್ಯಾಕಾಂಕ್ಷಿಗಳು, ಸತ್ಯ ಸಾಕ್ಷಾತ್ಕಾರಕ್ಕೆ ಪರಿತಪಿಸುವ ಸಾಧಕರು. ಸಂಶೋಧನೆಯ ಗುರಿ ಸತ್ಯವನ್ನು ಕಾಣುವುದು, ದೃಶ್ಯದ ಹಿಂದಿನ

---

*ಧಾರವಾಡದ ಕರ್ನಾಟಕ ವಿಶ್ವವಿದ್ಯಾನಿಲಯದಲ್ಲಿ 29-11-2001ರಂದು ನೀಡಿದ ಪ್ರೊ. ಶಿ.ಶಿ. ಬಸವನಾಳ ಮೂಲತತ್ತ್ವ ವಿಚಾರೋಪನ್ಯಾಸ (ಅಧ್ಯಕ್ಷತೆ : ಡಾ. ಎ.ಎಂ. ಪಠಾಣ್, ಕುಲಪತಿಗಳು).

ಅದೃಶ್ಯವನ್ನು ಕಾಣುವುದು, ಕಾಣಿಸುವುದು; ತಮ್ಮ ಕಾಣ್ಕೆಯು ಲೋಕ ಹಿತವಾಗುವಂತೆ ಮಾಡುವುದು ; ಜಗತ್ತಿನ ಚೆಲುವನ್ನು, ಅದರ ಬಹುಮುಖ ವಿನ್ಯಾಸವನ್ನು ಗುರುತಿಸಿ ಬಹಿರಂಗಪಡಿಸುವುದು. ಭೌತವಿಜ್ಞಾನಿಯೊಬ್ಬರು Nature loves symmetry ಎಂಬುದನ್ನು ತನ್ನ ಪ್ರಯೋಗಗಳಿಂದ ಸಾಬೀತು ಮಾಡಿದ ನಿಬಂಧಕ್ಕೆ ಪಿಎಚ್.ಡಿ. ಪದವಿ ದೊರೆತುದು ಆ ಕ್ಷೇತ್ರದ ಮನೆಮಾತಾಗಿದೆ.

## 2

ಆ ದೃಷ್ಟಿಯಿಂದ ಪ್ರಾಚೀನಭಾರತದ ಖಗೋಳ ವಿಜ್ಞಾನಿ ಆರ್ಯಭಟ, ಗಣಿತಶಾಸ್ತ್ರದ ಭಾಸ್ಕರಾಚಾರ್ಯ, ನೌಕಾವಿಜ್ಞಾನಿ ಭೋಜರಾಜ, ಭಾಷಾವಿಜ್ಞಾನಿ ಪಾಣಿನಿ, ವೈದ್ಯಕೀಯ ವಿಜ್ಞಾನಿಗಳಾದ ಚರಕ ಶುಶ್ರುತ ಇವರೇ ಮೊದಲಾದವರು ಆರ್ಕಿಮಿಡೀಸ್, ನ್ಯೂಟನ್, ಲೂಯಿ ಪ್ಯಾಶ್ಚರ್, ಗೆಲಿಲಿಯೊ, ಡಾರ್ವಿನ್, ಮೈಕೇಲ್ ಫ್ಯಾರಡೆ, ಐನ್‌ಸ್ಟೀನ್, ಸಿವಿ. ರಾಮನ್, ಶ್ರೀನಿವಾಸ ರಾಮಾನುಜಂ, ಜಗದೀಶ ಚಂದ್ರಬೋಸ್ ಇವರೇ ಮೊದಲಾದ ಪಾಶ್ಚಿಮಾತ್ಯ ಪೌರ್ವಾತ್ಯ ಭೌತಿಕ, ಜೈವಿಕ, ವೈದ್ಯಕೀಯ ಇತ್ಯಾದಿ ಹಲವು ಕ್ಷೇತ್ರಗಳ ವಿಜ್ಞಾನಿಗಳು, ಸರ್ ಜಾನ್ ಮಾರ್ಷಲ್, ವಿಲಿಯಮ್ ಜೋನ್ಸ್, ಎಂ.ಎನ್. ಶ್ರೀನಿವಾಸ್, ಪಿ.ವಿ. ಕಾಣೆ, ಆರ್. ನರಸಿಂಹಾಚಾರ್, ಎಸ್. ಶ್ರೀಕಂಠಶಾಸ್ತ್ರಿ, ಆರ್. ಶಾಮಾಶಾಸ್ತ್ರಿ, ಗೋವಿಂದ ಪೈ, ಶಿ.ಶಿ. ಬಸವನಾಳ, ತೀ.ನಂ. ಶ್ರೀಕಂಠಯ್ಯ, ಡಿ.ಎಲ್. ನರಸಿಂಹಾಚಾರ್, ಎಸ್.ಸಿ. ನಂದಿಮಠ, ಫ.ಗು. ಹಳಕಟ್ಟಿ, ಜಿ.ಎಸ್. ದೀಕ್ಷಿತ್ ಇವರೇ ಮೊದಲಾದ ಇಂಡಾಲಜಿಸ್ಟರು ಸತ್ಯಶೋಧಕರು, ಒಂದರ್ಥದಲ್ಲಿ ಋಷಿಗಳು; ಲೌಕಿಕ ಸ್ತರದ ಋಷಿಗಳು. ವಿಜ್ಞಾನವೋ (ಶುದ್ಧ ಅಥವಾ ಆನ್ವಯಿಕ) ಸಮಾಜ ವಿಜ್ಞಾನವೋ ಸಾಹಿತ್ಯವೂ ಸೇರಿದಂತೆ ಮಾನವಿಕಗಳೋ - ಸಂಶೋಧನೆಯ ಗುರಿ, ವಿಧಾನ (approach), ಹಾದಿ ಒಂದೇ. ಸಂಶೋಧನೆಯಲ್ಲಿ ವಿಜ್ಞಾನಿಗಳು ತುಳಿದ ಪಥವನ್ನೇ ಸಮಾಜ ವಿಜ್ಞಾನಿಗಳು ಮಾನವಿಕ ಕ್ಷೇತ್ರಗಳ ಸಂಶೋಧಕರು ತಮ್ಮ ತಮ್ಮ ಕ್ಷೇತ್ರಗಳಿಗೆ ಅನ್ವಯಿಸಿಕೊಂಡಿದ್ದಾರೆ. ಮೂಲ ಗುರಿ, ಮೂಲ ಪಥ ಒಂದೇ.

## 3

(ದಿ) ಶಿ.ಶಿ. ಬಸವನಾಳರನ್ನು (1893-1951) ನಾನು ಕಂಡಿರದಿದ್ದರೂ ಅವರ ಬಹುತೇಕ ಕೃತಿಗಳನ್ನು ಓದಿದ್ದೇನೆ, ಅವುಗಳಿಂದ ಪ್ರಭಾವಿತನಾಗಿದ್ದೇನೆ, ಅದನ್ನು ನನ್ನ ಬರಹಗಳಲ್ಲಿ ಸೂಕ್ತ ಕಡೆಗಳಲ್ಲಿ ಸ್ಮರಿಸಿದ್ದೇನೆ. ಕರ್ನಾಟಕ ವಿಶ್ವವಿದ್ಯಾಲಯ ಸ್ಥಾಪನೆಯಲ್ಲಿ, ಅದನ್ನು ಕಟ್ಟಿ ಬೆಳೆಸುವುದರಲ್ಲಿ ಕ್ರಿಯಾಶೀಲರಾಗಿದ್ದ ಅವರು ವಿದ್ವಾಂಸರೂ ಶಿಕ್ಷಣ ತಜ್ಞರೂ ಇಂಗ್ಲೀಷ್, ಇತಿಹಾಸ ಕ್ಷೇತ್ರಗಳ ಪರಿಣತರೂ ಆಗಿದ್ದು ಅವರ ಹೆಸರು ಕನ್ನಡ ವಿದ್ವತ್ ಕ್ಷೇತ್ರವಲ್ಲಿ, ಅದರಲ್ಲೂ ಗ್ರಂಥ ಸಂಪಾದನ ಕ್ಷೇತ್ರದಲ್ಲಿ ಶಾಶ್ವತ ದಾಖಲುಗೊಂಡಿದೆ.

ನಾಗವರ್ಮನ "ಕಾವ್ಯಾವಲೋಕನ"ವೆಂಬ ವ್ಯಾಕರಣ ಗ್ರಂಥ, ನಿಜಗುಣ ಶಿವಯೋಗಿಗಳ ಗೇಯಕೃತಿ "ಕೈವಲ್ಯ ಪದ್ಧತಿ", ವಿರೂಪಾಕ್ಷ ಪಂಡಿತನ ಬೃಹತ್ ಕಾವ್ಯ "ಚನ್ನಬಸವಪುರಾಣ" ಇಂತಹ ಕೃತಿಗಳ ಜೊತೆ ವಿಶೇಷವಾಗಿ ಹೆಸರಿಸಬೇಕಾದ್ದು ಅವರು ಸಂಪಾದಿಸಿರುವ "ಬಸವಣ್ಣನವರ ಷಟ್ಸ್ಥಲ ವಚನಗಳ" ಸಂಪುಟವನ್ನು. ಅವರ ಆ ವಚನ ಸಂಪಾದನೆಯು ಆ ಕಾಲಕ್ಕೆ ವಿನೂತನವೂ ಕ್ರಮಬದ್ಧವೂ ಆಗಿದೆಯಲ್ಲದೆ ಆ ಕೃತಿಯ ಅವರ ಉಪೋದ್ಘಾತವೂ ಅಷ್ಟೇ ಉದ್ಬೋಧಕವಾಗಿದೆ. ವಚನಗಳನ್ನು ಅರ್ಥಾನುಸಾರಿಯಾಗಿ ಅಲ್ಲಲ್ಲಿ ಪೂರ್ಣ, ಅರ್ಧವಿರಾಮ ಇಂತಹ ಚಿಹ್ನೆಗಳ ಸಮೇತ ಸಾಲು ಸಾಲಾಗಿ ಪದ್ಯರೂಪದಲ್ಲಿ ಜೋಡಿಸಿ ಅಚ್ಚು ಮಾಡಿಸಿದ ಕ್ರಮವು ಮುಂದಿನವರಿಗೆ ದಾರಿದೀಪವಾಯಿತು.

## 4

ಅಂತಹ ಶ್ರೇಷ್ಠ ವಿದ್ವಾಂಸರ ಹೆಸರಲ್ಲಿ ನಡೆಯುತ್ತಿರುವ ಫೌಂಡೇಷನ್ ಉಪನ್ಯಾಸಕ್ಕೆ ನನ್ನನ್ನು ಆಹ್ವಾನಿಸಿರುವುದು ನನಗೆ ಅತ್ಯಂತ ಸಂತೋಷವನ್ನುಂಟುಮಾಡಿದೆ. ಬೇರೆ ಬೇರೆ ವಿಭಾಗಗಳ ಫೌಂಡೇಷನ್ ಉಪನ್ಯಾಸಗಳಿಗಾಗಿ ಇಲ್ಲಿಯವರೆಗೆ ಕರ್ನಾಟಕ ವಿಶ್ವವಿದ್ಯಾಲಯವು ಆಹ್ವಾನಿಸಿರುವ ಕೆಲವು ಗಣ್ಯರ ಹೆಸರುಗಳನ್ನು ಸನ್ಮಾನ್ಯ ಕುಲಪತಿಗಳಾದ ಡಾ. ಪಠಾಣ್ ತಮ್ಮ ಆತ್ಮೀಯ ಆಹ್ವಾನ ಪತ್ರದಲ್ಲಿ ತಿಳಿಸಿದಾಗ ಸಂತೋಷವೂ ಆಯಿತು, ನಿಜ ಹೇಳಬೇಕೆಂದರೆ ಸ್ವಲ್ಪ ಕಸಿವಿಸಿಯೂ ಆಯ್ತು. ಡಾ. ರಾಜಾ ರಾಮಣ್ಣ, ಡಾ. ವಿ.ಕೆ. ಆರ್.ವಿ. ರಾವ್, ಎನ್.ಎ. ಪಾಲಕೀವಾಲಾ, ವಿಲಿಯಂ ಗೋಲ್ಡಿಂಗ್, ಸ್ವಾಮಿ ರಂಗನಾಥಾನಂದಜಿ, ಡಾ. ಮಾಲ್ಕಂ ಆದಿಶೇಷಯ್ಯ ಇಂತಹ ಗಣ್ಯರ ಸಾಲಲ್ಲಿ ನನ್ನ ಹೆಸರೂ ಸೇರುತ್ತಿರುವುದನ್ನು ಕಂಡು ಹೋ, ಹೋ ಎಂದೆ ! "ವಿದ್ವಾಂಸೋಽಹಂ" ಎಂದು ನನ್ನ ಸಂಸ್ಕೃತದಲ್ಲೇ ಉಬ್ಬಿದೆ, (ಅದು 'ವಿದ್ವಾನಹಂ' ಆಗಬೇಕು). "ವಿ" ಕಾರ, "ಮ"ಕಾರಗಳು ಭಾರತೀಯ ನೀತಿಶಾಸ್ತ್ರದ ಪ್ರಕಾರ ಸರ್ವಥಾ ತ್ಯಾಜ್ಯವೆಂಬುದು ನೆನಪಾಗಿ ಅವನ್ನು "ವ್"ಅನ್ನು ಸ್ವಲ್ಪ ಕಷ್ಟಪಟ್ಟು ತೆಗೆದುಹಾಕಿದೆ; ವಚನ ವಾಙ್ಮಯದ "ದಾಸೋಽಹಂ" ಎಂಬುದು ಉಳಿಯಿತು. ಅದು ಮನಸ್ಸಿನೊಳಕ್ಕೆ ಇಳಿಯಿತು, ಇಳಿದು ಮೊದಲೇ ಇದ್ದ ಅದೇ ಭಾವವನ್ನು ಸ್ಥಿರಗೊಳಿಸಿತು. ಅದೀಗ ನಾನು, ಅಥವಾ ನಾನಾಗಬೇಕಾದ್ದು.

ಹದಿನಾರು ವರ್ಷಗಳಿಗೂ ಹಿಂದೆ (1985) ಇದೇ ವಿಶ್ವವಿದ್ಯಾಲಯವು ವ್ಯವಸ್ಥೆ ಮಾಡಿದ್ದ ನನ್ನ ಮೂರು ವಿಶೇಷ ಉಪನ್ಯಾಸಗಳನ್ನು "ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ" ಎಂಬ ಶೀರ್ಷಿಕೆಯಲ್ಲಿ ಪ್ರಕಟಮಾಡಿತು. ಮತ್ತೆ ಅಂತಹುದೇ ಉಪನ್ಯಾಸಕ್ಕೆ ನನ್ನನ್ನು ಆಹ್ವಾನಿಸಿರುವ ಕರ್ನಾಟಕ ವಿಶ್ವವಿದ್ಯಾಲಯಕ್ಕೆ, ಅದರ ಕುಲಪತಿಗಳು ಡಾ. ಪಠಾಣ್ ಅವರಿಗೆ, ಕುಲಸಚಿವರು ಶ್ರೀ ಎಸ್.ಸಿ. ಕಳಸದ ಅವರಿಗೆ ಈ ಉಪನ್ಯಾಸ ಮಾಲಿಕೆಯ ಸಂಚಾಲಕರು ಡಾ. ಎಸ್.ಆರ್. ತೋಂಟದಾರ್ಯರಿಗೆ, ಇತರ ಎಲ್ಲ ಪದಾಧಿಕಾರಿಗಳಿಗೆ ನಾನು ಋಣಿಯಾಗಿದ್ದೇನೆ.

## 5

ಸ್ಥೂಲವಾಗಿ ಹೇಳುವುದಾದರೆ "ಏನು, ಹೇಗೆ, ಎಲ್ಲಿ, ಯಾರು, ಎಂದು" ಎಂಬ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳುವುದೇ ಸಂಶೋಧನೆ. 'ಏಕೆ'? ಎಂಬ ಪ್ರಶ್ನೆಗೆ ಉತ್ತರ ಅಷ್ಟು ಸುಲಭವಲ್ಲ. ಸಂಶೋಧನೆಯಲ್ಲಿ ಆದ್ಯತೆ ಪ್ರಶ್ನೆಗೆ, ಸುಸಂಬದ್ಧ ಪ್ರಶ್ನೆಗೆ; ಆಮೇಲೆ ಉತ್ತರಕ್ಕೆ. ಪ್ರಶ್ನೆ ಹಾಕಿಕೊಂಡರೆ ತಾನೇ ಉತ್ತರ ದೊರಕುವ ಸಾಧ್ಯತೆ ಇರುವುದು ? ಹೀಗೆ ಪ್ರಶ್ನೆ ಹಾಕುವ, ಹಾಕಿಕೊಳ್ಳುವ ಪ್ರವೃತ್ತಿ ಮನುಷ್ಯನ ಸ್ವಭಾವಕ್ಕೇ ಅಂಟಿ ಬಂದ ಗುಣ. ತಿಳಿಯುವ ಕುತೂಹಲದಿಂದ ಪ್ರಚೋದಿತನಾದ ಮನುಷ್ಯ ಸಂಗತಿಗಳನ್ನು ವಿಶ್ಲೇಷಿಸುತ್ತಾನೆ, ವಿಶ್ಲೇಷಿಸಿದ್ದನ್ನು ಸಂಶ್ಲೇಷಿಸುತ್ತಾನೆ, ವಿಶಿಷ್ಟಗಳನ್ನು ವಿಶ್ಲೇಷಿಸಿ ಅವುಗಳ ಹಿಂದಿನ ಸಾಮಾನ್ಯ ತತ್ವವನ್ನು ಗುರುತಿಸಿ, ಆ ಸಾಮಾನ್ಯ ತತ್ವದ ಸಹಾಯದಿಂದ ಇತರ ವಿಶಿಷ್ಟಗಳನ್ನು ತಿಳಿಯಲು, ಗುರುತಿಸಲು ಬಯಸುತ್ತಾನೆ. ಪ್ರಾಣಿಗಳಿಂದ ಮನುಷ್ಯನನ್ನು ಬೇರ್ಪಡಿಸುವ ಮೌಲಿಕಾಂಶಗಳಲ್ಲಿ ಅತಿ ಮುಖ್ಯವೆನ್ನಿಸಿಕೊಂಡಿರುವ ಭಾಷೆಯೇ ಹಾಗೆ ನೋಡಿದರೆ ಮನುಷ್ಯನ ಅಪ್ರಜ್ಞಾಪೂರ್ವಕ ಆದಿಮ, 'ಸಾಮೂಹಿಕ' ಎನ್ನಬಹುದಾದ ಅಮೂಲ್ಯ ಶೋಧ. ಮನುಷ್ಯ ಮೊದಲು ತನ್ನ ಪರಿಸರದ ಆಲ, ಬೇವು, ಮಾವು, ಬೇಲ, ಅರಳಿ, ಹೊಂಗೆ ಇತ್ಯಾದಿಗಳನ್ನು ಗುರುತಿಸಲು ಒಂದೊಂದು ಹೆಸರನ್ನು ಕೊಟ್ಟನೆಂದಿಟ್ಟುಕೊಳ್ಳೋಣ. ಅವನು ಭಿನ್ನವಾದ ಪರಿಸರಕ್ಕೆ ಹೋದಾಗ ಅಲ್ಲಿ ತನಗೆ ಅಪರಿಚಿತವಾದ, ಆದರೆ ಆಲ, ಬೇವು, ಮಾವುಗಳನ್ನು ಹೋಲುವ, ಆದರೆ ಅವು ಅಲ್ಲದ ಸಸ್ಯಗಳನ್ನು ಏನೆಂದು ಕರೆಯಬೇಕು? "ಮರ"ದ ಪರಿಕಲ್ಪನೆ ಇಂತಹ ಅಗತ್ಯವೊಂದರ ಒತ್ತಡದಿಂದ ಮೂಡಿ ಬಂದಿರಬೇಕು. ಹಾಗೆ ನೋಡಿದರೆ "ಮರ"ವೆಂಬುದು ಪ್ರಪಂಚದಲ್ಲಿ ಇಲ್ಲವೇ ಇಲ್ಲ. ಇರುವುದೆಲ್ಲ ಆಲ ಬೇವು ಮಾವುಗಳೇ; ಆದರೆ ಆ ಎಲ್ಲ ವಸ್ತುಗಳ ಎಲ್ಲ ಸಾಮಾನ್ಯ ಲಕ್ಷಣಗಳನ್ನು ಹೊಂದಿರುವ ಪರಿಕಲ್ಪನೆಯೇ "ಮರ". ವಿಶ್ವದ ಕೆಲವು ಬುಡಕಟ್ಟು ಭಾಷೆಗಳಲ್ಲಿ ಬೇರೆ ಬೇರೆ ಮರಗಳಿಗೆ ಹೆಸರಿದ್ದರೂ "ಮರ" ಎಂಬರ್ಥದ ಪದವಿಲ್ಲ. ಹಾಗೆಯೇ ಕಠಿಣ, ಮೃದು, ಬಿಸಿ, ಉದ್ದ ಇವೇ ಮುಂತಾದ ಅಮೂರ್ತ ಗುಣ ಸೂಚಕ ಪದಗಳಿಲ್ಲ; ಇನ್ನು ಸತ್ಯ, ದಯೆ ಎಂಬಂತಹ ಪದಗಳ ಮಾತಿರಲಿ. ಚೆರೂಕಿ ಭಾಷೆಯಲ್ಲಿ "ನಾನು ತಲೆ ತೊಳೆದುಕೊಳ್ಳುತ್ತೇನೆ" "ಇನ್ನೊಬ್ಬನ ತಲೆ ತೊಳೆಯುತ್ತೇನೆ" "ನಾನು ನನ್ನ ಬಟ್ಟೆ ತೊಳೆದುಕೊಳ್ಳುತ್ತೇನೆ" ಇತ್ಯಾದಿಗಳಿಗೆ ಪ್ರತ್ಯೇಕ ಪದಗಳುಂಟು, "ತೊಳೆ" ಎಂಬ ಪದವಿಲ್ಲ. ಮನುಷ್ಯ ಭೌತಿಕ ಅಥವಾ ಇಂದ್ರಿಯ ಗ್ರಾಹ್ಯ ವಸ್ತುಗಳ (ಥಿಟ್ಟಿಓರಡುಟಿ) ಸಹಾಯದಿಂದ ಕ್ರಮೇಣ ಅವುಗಳ ಹಿಂದಿನ ಪರಿಕಲ್ಪನೆಗಳನ್ನು (ಛಿಈಖ್ಟಿಓರಡುಟಿ) ಕಂಡುಕೊಂಡನೆಂಬುದಕ್ಕೆ ಮೇಲಿನದು ಒಂದು ಉದಾಹರಣೆ ಮಾತ್ರ.

## 6

ಕುತೂಹಲ, ಸೌಂದರ್ಯದ ಆಸ್ವಾದನೆ, ಕಣ್ಣಿಗೆ ಕಾಣದುದರ ಹಿಂದಿನ ವಾಸ್ತವವನ್ನು ಗುರುತಿಸುವ ತೀವ್ರ ಹಂಬಲ ಇವು ಸಂಶೋಧಕನ ಪ್ರಚೋದನೆಗಳು. ಜೊತೆಗೆ, ತನಗೆ

ತಿಳಿದಿರುವ ಜ್ಞಾನವನ್ನು ವರ್ಧಿಸಬೇಕೆಂಬ ಬಯಕೆಯೂ ಬುದ್ಧಿಜೀವಿ ಮನುಷ್ಯನಲ್ಲಿದೆ. ಒಂದು ಸಾವಿರ ವರ್ಷಗಳ ಹಿಂದೆ ಕಾಗೆಗಳು ಗೂಡನ್ನು ಕಟ್ಟುತ್ತಿದ್ದುದು ಇಂದೂ ಮುಂದುವರಿದಿದೆ. ಆದರೆ ಮನುಷ್ಯ ಕಾಲದಿಂದ ಕಾಲಕ್ಕೆ, ಅಗತ್ಯಕ್ಕೆ ತಕ್ಕ ರೀತಿಯಲ್ಲಿ, ಸನ್ನಿವೇಶಗಳ ಮಾರ್ಪಾಟಿನಿಂದಾಗಿ ಹೊಸ ಹೊಸ ಆವಿಷ್ಕಾರಗಳನ್ನು ಮಾಡುತ್ತಾನೆ, ತನ್ನ ಅನುಕೂಲಕ್ಕೆ ಬಳಸಿಕೊಳ್ಳುತ್ತಾನೆ. ಆ ಆವಿಷ್ಕಾರಗಳು ಸಂಚಿತರೂಪದಲ್ಲಿ (cumulative) ಬೆಳೆಯುತ್ತ ಹೋಗುತ್ತವೆ. ಹಾಗೆ ನಿರಂತರ ವೃದ್ಧಿಗೊಳ್ಳುವ ಲೋಕವು ಭೌತಿಕ ಸ್ತರದ್ದಿರಬಹುದು, ಮಾನಸಿಕ ಸ್ತರದ್ದಿರಬಹುದು (ಧಾರ್ಮಿಕ ಅಥವಾ ಆಧ್ಯಾತ್ಮಿಕ ಸ್ತರದ್ದೂ ಆಗಿರಬಹುದು)

ಸಂಶೋಧಕ ಕತ್ತಲಲ್ಲಿ ಹುಡುಕಾಡಿ ತಡಕಾಡಿ ನಡೆಸಿದ ಸಂಶೋಧನೆಯು ಒಂದು ಶೋಧನ ದೀಪ (Search Light). ಅದು ಹಲವು ಸಾರಿ ಒಂದು ವಸ್ತು ಅಥವಾ ಸಂಗತಿಯ ಬಾಹ್ಯವನ್ನಷ್ಟೇ ಅಲ್ಲ, ಅದರ ಒಳಗನ್ನೂ ಬೆಳಗಿಸಿ ತೋರಿಸಬಲ್ಲುದು. ಕತ್ತಲಲ್ಲಿರುವ ವಸ್ತು ಅಥವಾ ಪ್ರಾಣಿಯ ಮೇಲೆ ಶೋಧನ ದೀಪವನ್ನು ಹಾಯಿಸಿದಾಗ ಆ ವಸ್ತು ಅಥವಾ ಪ್ರಾಣಿಯ ಹೊರ ಆಕಾರದ ಜೊತೆ ಅಕ್ಕಪಕ್ಕದಲ್ಲಿರುವುದೂ ಕಾಣಿಸುತ್ತದೆ. ಇನ್ನೊಂದು ಬಗೆಯ ಶೋಧನ ದೀಪವನ್ನು ಕಲ್ಪಿಸಿಕೊಳ್ಳೋಣ. ಆ ದೀಪವು ವಸ್ತು ಅಥವಾ ಪ್ರಾಣಿಯ ಬಾಹ್ಯವನ್ನು ಮಾತ್ರವೇ ಅಲ್ಲ, ಅವುಗಳ ಒಳಗಿನ ಸೂಕ್ಷ್ಮ ವಿವರಗಳನ್ನೂ ನರನಾಡಿಗಳನ್ನೂ ಮಿಡಿತವನ್ನೂ ತೋರಿಸಬಹುದು. ಎಷ್ಟೋ ಶೋಧಗಳು ಅಂತಹ ಶೋಧನ ದೀಪವಾಗಿಯೂ ಕೆಲಸ ಮಾಡುವುದನ್ನು ಎಲ್ಲ ಸಂಶೋಧಕರು ಬಲ್ಲರು. ಆದರೆ, ಯಾವುದೇ ಶೋಧನ ದೀಪವೂ - ಅಂತಹುದನ್ನು ಕಲ್ಪಿಸಿಕೊಳ್ಳಲು ಸಾಧ್ಯವಿಲ್ಲ - ಆ ಮರದ ಅಥವಾ ಪ್ರಾಣಿಯ (ಮನುಷ್ಯನ) ಮನಸ್ಸು ಭಾವನೆಗಳನ್ನು ತಿಳಿಸಲಾರದು. ಇಂತಹ ಮಿತಿ ಎಲ್ಲ ಬಗೆಯ ಸಂಶೋಧನೆಗೂ ಉಂಟು ಎಂಬುದನ್ನು ಹೇಳಬೇಕಾಗಿಲ್ಲ. ಇನ್ನೊಬ್ಬ ವ್ಯಕ್ತಿಯ ದೇಹದ ಒಳಭಾಗಗಳನ್ನು ನಮ್ಮ ಕಣ್ಣಿಗೆ ತೋರುವ ಯಂತ್ರಗಳು ಬಂದಿವೆಯಾದರೂ ಅವನ ಪ್ರೀತಿ, ಸ್ನೇಹ, ಕ್ರೌರ್ಯ, ದುಃಖ, ಸ್ವಭಾವಗಳನ್ನು ಯಾವ ಯಂತ್ರವೂ ತೋರಿಸಲಾರದು; ಅವುಗಳನ್ನು ನಾವು ಜೀವಂತವಾಗಿ ಗ್ರಹಿಸಬೇಕು, ಅಥವಾ ಗ್ರಹಿಸಲು ಯತ್ನಿಸಬೇಕು ಅಷ್ಟೇ.

ಸಂಶೋಧನೆಯು ಶೋಧನ ದೀಪವಾಗಿ ಕೆಲಸ ಮಾಡಿದುದಕ್ಕೆ ನನ್ನ ಪರಿಚಿತ ಕ್ಷೇತ್ರವಾದ ಭಾಷಾ ವಿಜ್ಞಾನದಿಂದಲೇ ಒಂದು ನಿದರ್ಶನವನ್ನು ನೀಡುತ್ತೇನೆ. ಹದಿನೆಂಟನೆಯ ಶತಮಾನದಲ್ಲಿ ಪಾಶ್ಚಾತ್ಯ ವಿದ್ವಾಂಸರಿಗಾದ ಸಂಸ್ಕೃತ ಭಾಷೆಯ ಪರಿಚಯವು ಅದನ್ನು ಯುರೋಪಿನ ಹಲವು ಭಾಷೆಗಳಿಗೆ ಹೋಲಿಸಲು ಅನುಕೂಲ ಮಾಡಿಕೊಟ್ಟಿತೆಂದು ಹೇಳಿದರೆ ಸಾಲದು, ಒಂದು ಕ್ರಾಂತಿಕಾರಿ ಬದಲಾವಣೆಯನ್ನೇ ತರಲು ನಿಮಿತ್ತವಾಯಿತು. ಕ್ರಿ.ಶ. 1767ರಲ್ಲಿ ಫ್ರೆಂಚ್ ಪಾದ್ರಿಯೊಬ್ಬ ಲ್ಯಾಟಿನ್ ಮತ್ತು ಸಂಸ್ಕೃತ ಪದಗಳಿಗಿರುವ ಹೋಲಿಕೆಗಳನ್ನು ಪಟ್ಟಿ ಮಾಡಿದನು. ಅದೇ ಶತಮಾನದ ಕೊನೆಯಲ್ಲಿ ಸರ್ ವಿಲಿಯಂ ಜೋನ್ಸನು ಸಂಸ್ಕೃತವನ್ನು ಶ್ರದ್ಧೆಯಿಂದ ಅಧ್ಯಯನ ಮಾಡಿ ಅದಕ್ಕೂ ಗ್ರೀಕ್ ಲ್ಯಾಟಿನ್‌ಗಳಿಗೂ ಬರಿಯ ಶಬ್ದ ಕೋಶದಲ್ಲಿ ಮಾತ್ರವಲ್ಲ, 'ವ್ಯಾಕರಣ'ದಲ್ಲೂ (ಭಾಷಾ ರಚನೆಯಲ್ಲೂ) ಸಾಮ್ಯವಿರುವುದನ್ನು ಗಮನಿಸಿ

ಆ ಮೂರು ಭಾಷೆಗಳೂ ಪರ್ಷಿಯನ್ ಮತ್ತು ಇತರ ಭಾಷೆಗಳೂ ಒಂದು ಸಮಾನ ಮೂಲದಿಂದ (Proto - Language) ಬಂದಿರಬಹುದೆಂದು ಪ್ರತಿಪಾದಿಸಿದನು. ಅವನ ಈ ಪ್ರತಿಪಾದನೆ ಐತಿಹಾಸಿಕ ಭಾಷಾವಿಜ್ಞಾನಕ್ಕೆ ತಳಹದಿಯಾಯಿತು; ಸಕಾರಣವಾಗಿಯೇ ಅವನನ್ನು "ಐತಿಹಾಸಿಕ ಭಾಷಾವಿಜ್ಞಾನ ಪಿತಾಮಹ" ಎಂದು ಕರೆಯಲಾಗಿದೆ.

ಅವನ ಪ್ರಮೇಯವು ಮುಂದಿನ ಶೋಧಗಳಿಂದ ಸಿದ್ಧಾಂತವಾಯಿತು. ವ್ಯಾಕರಣ ಸಾಮ್ಯ, ಜ್ಞಾತಿಪದಗಳಲ್ಲಿ (Cognates) ಸ್ವನ ಸಂವಾದ (Phonetic correspondence) ಇವೇ ಮೊದಲಾದುವು ಎರಡು ಅಥವಾ ಹಲವು ಭಾಷೆಗಳ ವಾಂಶಿಕ ಸಂಬಂಧವು (Genetic Relationship) ವಿಷಯದಲ್ಲಿ ನಿರ್ಣಾಯಕವಾಗುತ್ತವೆಯೇ ಹೊರತು ಭಾಷೆಯ ಹೊರಪದರದ ಪದಗಳ ಸಾಮ್ಯವಲ್ಲ. ಕನ್ನಡವು ಮೊದಲು ಸಂಸ್ಕೃತದಿಂದ, ಆಮೇಲೆ ಪರ್ಸೋ - ಅರೆಬಿಕ್‌ನಿಂದ, ಆಧುನಿಕ ಯುಗದಲ್ಲಿ ಇಂಗ್ಲೀಷಿನಿಂದ ಅಸಂಖ್ಯಾತ ಪದಗಳನ್ನು ಸ್ವೀಕರಿಸಿದ್ದರೂ ಅದಕ್ಕೂ ಸಂಸ್ಕೃತಕ್ಕೂ ವಾಂಶಿಕ ಸಂಬಂಧವಿಲ್ಲ. ಆದರೆ ಇಂಗ್ಲಿಷಿಗೂ ಸಂಸ್ಕೃತಕ್ಕೂ ವಾಂಶಿಕ ಸಂಬಂಧವಿದೆ. ಸರ್ಪ - serpent ಇಂತಹ ಹೋಲಿಕೆಗಳು ಮಾತ್ರವಲ್ಲ, ಸಂಸ್ಕೃತದ ಪದಾದಿಯ "ಪ್-" (p-) ಕಾರಕ್ಕೆ ಇಂಗ್ಲಿಷಿನಲ್ಲಿ "ಫ್-" (f) ಬಹುತೇಕ ನಿಯತವಾಗಿ ಕಾಣಿಸಿಕೊಳ್ಳುವುದು (ಉದಾ.ಗೆ ಸಂ.ಪಾದ, ಇಂ. foot; ಸಂ. ಪಿತೃ - ಇಂ. father; ಸಂ. ಪುರೋ - ಇಂ. fore). ಆ ಎರಡೂ ಭಾಷೆಗಳಿಗೆ ಇರುವುದು ರಕ್ತ ಸಂಬಂಧ ಎಂಬುದು ಗೊತ್ತಾಗುತ್ತದೆ. ಕನ್ನಡಕ್ಕೂ ಸಂಸ್ಕೃತಕ್ಕೂ ಇರುವ ಸಂಬಂಧವು ಸಾಂಸ್ಕೃತಿಕ ಸ್ತರದ್ದು. ಕನ್ನಡ, ತೆಲುಗು, ತಮಿಳು, ಮಲಯಾಳ, ತುಳು ಮಾತ್ರವಲ್ಲ ಈಗಿನ ಮಧ್ಯಭಾರತದ ಕೊಲಾಮಿ, ಪಶ್ಚಿಮ ಪಾಕಿಸ್ತಾನದ ಬ್ರಾಹೂಇ ಇತ್ಯಾದಿ ಇಪ್ಪತ್ತೈದಕ್ಕೂ ಮೇಲ್ಪಟ್ಟ ಭಾಷೆಗಳು ವಾಂಶಿಕವಾಗಿ ಪ್ರತ್ಯೇಕವಾದ ದ್ರಾವಿಡ ವರ್ಗಕ್ಕೆ ಸೇರಿದುವೆಂಬುದನ್ನು ಮುಂದಿನ ಸಂಶೋಧನೆಗಳು ಸಾಬೀತುಮಾಡಿವೆ. ಅಷ್ಟೇ ಅಲ್ಲ, ವಿಶ್ವದ ಮೂರು ಸಾವಿರಕ್ಕೆ ಮೇಲ್ಪಟ್ಟ, ಮೇಲು ನೋಟಕ್ಕೆ ಅಸ್ತವ್ಯಸ್ತವಾಗಿ ಕಾಣಿಸುವ ಭಾಷೆಗಳ ಬಿಡಿ ಅಧ್ಯಯನವು ಅವುಗಳನ್ನು ಬೇರೆ ಬೇರೆ ವರ್ಗಗಳಾಗಿ ವಿಂಗಡಿಸಿ, ಆಯಾ ವರ್ಗದ ಸಾಮಾನ್ಯ ಭಾಷಿಕ ಲಕ್ಷಣಗಳನ್ನು ರೂಪಿಸಿ, ಆ ಲಕ್ಷಣಗಳ ಹಿನ್ನೆಲೆಯಲ್ಲಿ ಒಂದೊಂದೂ ಭಾಷೆಯ ವೈಶಿಷ್ಟ್ಯ, ಚರಿತ್ರೆ, ಅವುಗಳ ಮೇಲಾಗಿರುವ ಪ್ರಭಾವದ ವೈಶಿಷ್ಟ್ಯ ಇತ್ಯಾದಿಗಳನ್ನು ವಿವರವಾಗಿ ಅಧ್ಯಯನ ಮಾಡಲು ಮುಂದೆ ಅವಕಾಶ ಮಾಡಿ ಕೊಟ್ಟಿತು, ಮೇಲೆ ಹೇಳಿದ ವಿಲಿಯಮ್ ಜೋನ್ಸನ ಶೋಧ. ಯಾವುದೇ ವರ್ಗಕ್ಕೂ ಸೇರದೆ ತಾನೇ ಒಂದು ವರ್ಗವೆಂಬಂತೆ ವಿವಿಕ್ತವಾಗಿ ನಿಂತಿರುವುದು ಜಪಾನಿಸ್ ಭಾಷೆಯ ವಿಶೇಷತೆ.

## 7

ದ್ರಾವಿಡ ಭಾಷೆಗಳ ತೌಲನಿಕ ಅಧ್ಯಯನದಿಂದಲೂ ಒಂದು ಭಾಷೆಯಲ್ಲಿ ಅಥವಾ ಭಾಷಾ ಕುಟುಂಬದಲ್ಲಿ ಸ್ವನವ್ಯತ್ಯಾಸಗಳು ಒಂದು ನಿಯಮವನ್ನನುಸರಿಸಿ ನಡೆಯುತ್ತವೆ, ಆ ನಿಯಮಗಳಿಗೆ ಯಾವುದಾದರೂ ಅಪವಾದವಿದ್ದರೆ ಅದಕ್ಕೆ ಇನ್ನಾವುದೋ ಕಾರಣವಿರುತ್ತದೆ ಎಂಬ ಸುಪ್ರಸಿದ್ಧ ಹೇಳಿಕೆಯು ಸಾಬೀತಾದುದಲ್ಲದೆ ಆ ಭಾಷೆಗಳ ವೈಶಿಷ್ಟ್ಯವೂ ಗೋಚರವಾಯಿತು. ಉದಾಹರಣೆಗೆ, ಶಿಷ್ಟ ದ್ರಾವಿಡ ಭಾಷೆಗಳಲ್ಲಿ ತಾಲವ್ಯೀಕರಣವು ನಡೆದಿರುವ ವಿಧಾನ[1]. ಕನ್ನಡವು ಅತಾಲವ್ಯೀಕರಣದ ಭಾಷೆ, ಎಂದರೆ ಅದರಲ್ಲಿ ತಾಲವ್ಯೀಕರಣ ನಡೆದಿಲ್ಲ. ಉಳಿದ ತೆಲುಗು, ತಮಿಳು, ಮಲೆಯಾಳಗಳಲ್ಲಿ ನಡೆದಿದ್ದರೂ ಅಲ್ಲಿ ಒಂದು ಕ್ರಮ, ಒಂದು ವ್ಯವಸ್ಥೆ ಇದೆ. ತೆಲುಗಲ್ಲಿ ಪೂರ್ವಸ್ವರಗಳಾದ ಇ, ಈ, ಎ, ಏ ಗಳ ಹಿಂದಿನ ಪದಾದಿಯ ಕಕಾರವು ಎಲ್ಲ ಕಡೆಗೂ ಚಕಾರವಾಗಿದೆ. ಆದರೆ ತಮಿಳಿನಲ್ಲಿ (ಅಂತೆಯೇ ಅದರಿಂದ ಜನ್ಯವಾಗಿ ಹತ್ತನೆಯ ಶತಮಾನದಿಂದೀಚೆಗೆ ಸ್ವತಂತ್ರ ಭಾಷೆಯೆನ್ನಿಸಿಕೊಂಡ ಮಲಯಾಳದಲ್ಲಿ) ತೆಲುಗಿನಂತೆಯೇ ತಾಲವ್ಯೀಕರಣ ನಡೆದಿದ್ದರೂ (ಉದಾ 1. ನೋಡಿ). ಪೂರ್ವ ಸ್ವರಗಳ ಮುಂದೆ ಮೂರ್ಧನ್ಯ ವ್ಯಂಜನಗಳು ಬಂದರೆ ಅಲ್ಲಿ ಮಾತ್ರ ತಾಲವ್ಯೀಕರಣವು ಪ್ರವರ್ತಿಸುವುದಿಲ್ಲ. (ಉದಾ 2. ನೋಡಿ)

ಉದಾ. ಗೆ

1. ಕನ್ನಡ. ಕೆಱೆ 'tank'
   ತಮಿಳು. ಮಲಯಾಳಂ. ಚೆಱೆ 'to collect', 'a tank'
   ತೆಲುಗು. ಚೆಱುವು 'tank'

2. ಕನ್ನಡ. ಗಿಳಿ 'a parrot', ತಮಿಳು, ಮಲಯಾಳಂ. ಕಿಳಿ 'a parrot', ತೆಲುಗು. ಚಿಲುಕ 'a parrot'. ಕನ್ನಡದಲ್ಲಿ 'ಕೆದಱು' 'ಚೆದಱು' ಎಂಬ ಎರಡು ಪದಗಳಲ್ಲಿ ಎರಡನೆಯದು ಮೇಲಿನ ಹೇಳಿಕೆಯನ್ನು, ಎಂದರೆ ಕನ್ನಡವು ಅತಾಲವ್ಯೀಕರಣದ ಭಾಷೆ ಎಂಬುದನ್ನು ವಿರೋಧಿಸುವುದಾಗಿದ್ದರೂ, 'ಚೆದರು' ಪದವು ತಾಲವ್ಯೀಕರಣದ ಭಾಷೆಯಾದ ತೆಲುಗಿನಿಂದ ಸ್ವೀಕೃತವಾದ ಪದವೆಂಬುದನ್ನು ಜ್ಞಾಪಿಸಿಕೊಂಡಾಗ, ಮೇಲಿನ ಭಾಷಾವಿಜ್ಞಾನದ ಹೇಳಿಕೆಯು ಉಳಿಯುತ್ತದೆ.

ಮೇಲಿನ ಹೇಳಿಕೆ ಒಟ್ಟಾರೆಯಾಗಿ ಕನ್ನಡಕ್ಕೆ ನಿಜವಾದರೂ, ಹಾಸನ ಜಿಲ್ಲೆಯ ಹೊಳೆನರಸೀಪುರ ತಾಲೂಕಿನ ಸುತ್ತ ಮುತ್ತಣ ಕನ್ನಡದ ಉಪಭಾಷೆಯಲ್ಲಿ ಅದರಲ್ಲೂ ಆ ಉಪಭಾಷಾ ಪ್ರದೇಶದ ಕೆಳವರ್ಗದವರ ಸಾಮಾಜಿಕ ಉಪಭಾಷೆಯಲ್ಲಿ ಪೂರ್ವಸ್ವರಗಳ ಹಿಂದಿನ ಪದಾದಿಯ ಕಾರವು ಚಕಾರ ವಾಗುವುದಲ್ಲದೆ, ಅದೇ ಪರಿಸರದಲ್ಲಿ ಚಕಾರವು

---

1. ತಾಲವ್ಯೇತರ ವ್ಯಂಜನವು (ಉದಾ. ಕ್) ತಾಲವ್ಯ ವ್ಯಂಜನವಾಗುವುದೇ (ಉದಾ. "ಚ್") ತಾಲವ್ಯೀಕರಣ

ಕಕಾರ ಆಗುವಂತಹ ಜಕಾರವು ಗಕಾರವೂ ಆಗುವಂತಹ ಅತ್ಯಂತ ವಿಸ್ಮಯಕಾರಕ ಭಾಷಿಕ ಕ್ರಿಯೆ ನಡೆದಿದೆ.

ಉದಾ.ಗೆ ಕಿಟಕಿ > ಚಿಟಕಿ, ತಂಗಿ > ತಂಜಿ
ಚೇಳು > ಕೇಣು, ಜಿರಲೆ > ಗಿರಲೆ

ಮೇಲಿನಂತಹ ಹಲವು ಉದಾಹರಣೆಗಳನ್ನು 1979ರಲ್ಲಿ ಅಮೆರಿಕದ ಸ್ಟಾನ್‌ಫರ್ಡ್ ವಿಶ್ವವಿದ್ಯಾಲಯದಲ್ಲಿ ನಡೆದ ನಾಲ್ಕನೆಯ ಅಂತಾರಾಷ್ಟ್ರೀಯ ಐತಿಹಾಸಿಕ ಭಾಷಾ ವಿಜ್ಞಾನ ಸಮ್ಮೇಳನದಲ್ಲಿ ಭಾಗವಹಿಸಿದ್ದ ಭಾಷಾವಿಜ್ಞಾನಿಗಳ ಮುಂದೆ ನಾನು ಪ್ರಸ್ತಾಪಿಸಿದಾಗ ಅವರು ಆ ಬಗ್ಗೆ ಅತ್ಯಂತ ವಿಸ್ಮಯಪಟ್ಟರು ಮಾತ್ರವಲ್ಲ, Reciprocality of Sound change ಎಂಬ ನನ್ನ ಪ್ರತಿಪಾದನೆಯು ಗಮನಾರ್ಹವಾದುದೆಂದರಲ್ಲದೆ ಭಾಷಾವಿಜ್ಞಾನದ ಒಂದು ಮೂಲಭೂತ ತತ್ವವನ್ನೇ ಸ್ವಲ್ಪ ಮಾರ್ಪಡಿಸುವಂತಹ ಶೋಧ ಎಂದೂ ಮೆಚ್ಚುಗೆ ವ್ಯಕ್ತಪಡಿಸಿದರು. ಆ ಪ್ರದೇಶದ ಸಮಗ್ರ ಉಪಭಾಷಾ ಪರಿವೀಕ್ಷಣೆ ಕೈಗೊಳ್ಳಲು ನನಗೆ ಸಲಹೆ ಮಾಡಿದರು.

X → Y ('X' ಸ್ವನವು ಒಂದು ನಿರ್ದಿಷ್ಟ ಪರಿಸರದಲ್ಲಿ 'Y' ಎಂಬ ಸ್ವನವಾಗುವುದು)

ಇದು ಪರಿಚಿತ ಸ್ವನವ್ಯತ್ಯಾಸದ ರೀತಿ.

ಆದರೆ ಅದೇ ಪರಿಸರದಲ್ಲಿ ಆ ಸ್ವನ ವ್ಯತ್ಯಾಸವು ಪ್ರತಿಕ್ರಿಯೆಯ ರೂಪದಲ್ಲಿ ಹಿಂದಕ್ಕೆ ಪ್ರವರ್ತಿಸುವುದು, ಎಂದರೆ Y → X ಎಂಬುದು ಭಾಷಾವಿಜ್ಞಾನದಲ್ಲಿ ಕಂಡರಿಯದ್ದು ಕೇಳರಿಯದ್ದು; ಆದರೆ ಅಂತಹುದು ಕೆಲವೊಮ್ಮೆ ಸಾಧ್ಯ ಎಂಬುದನ್ನು ಕನ್ನಡದ ಉಪಭಾಷೆಯೊಂದು ತೋರಿಸಿಕೊಟ್ಟಂತಾಯ್ತು. "ಸ್ವನ ವ್ಯತ್ಯಾಸಗಳು ಕೆಲವೊಮ್ಮೆ ಹಿಮ್ಮುಖವಾಗಿ ಪಾರಸ್ಪರಿಕವಾಗಿಯೂ ನಡೆಯಲು ಸಾಧ್ಯ" ಎಂಬ ಹೊಸ ಮಾತನ್ನು ಒಟ್ಟು ಭಾಷಾವಿಜ್ಞಾನದ ಸ್ವನ ವ್ಯತ್ಯಾಸಗಳ ಅಧ್ಯಾಯದಲ್ಲಿ ಸೇರ್ಪಡೆ ಮಾಡಬೇಕಾಗಿದೆ. ಆದರೆ, ಆ ಪ್ರದೇಶದ ನನ್ನ ನಿಯೋಜಿತ ಉಪಭಾಷಾ ಪರಿವೀಕ್ಷಣೆ ಅಲ್ಲಿಗೆ ನಿಂತುಬಿಟ್ಟಿದೆ. ಯಾರಾದರೂ ಉತ್ಸಾಹಿಗಳು ಅದನ್ನು ಕೈಗೆತ್ತಿಕೊಂಡಾರು ಎಂಬ ನಿರೀಕ್ಷೆಯಲ್ಲಿದ್ದೇನೆ.

ಕನ್ನಡ ಭಾಷೆಯ ದಾಖಲಿತ ಚರಿತ್ರೆಯು ಹಾಸನ ಜಿಲ್ಲೆಯ ಹನ್ಮಿಡಿ ಶಾಸನದಿಂದ (ಕ್ರಿ.ಶ. 5ನೇ ಶ.) ಆರಂಭವಾಗುವುದನ್ನು ಎಲ್ಲರೂ ಬಲ್ಲರು. ಕ್ರಿ.ಪೂ. ಮೂರನೆಯ ಶತಮಾನದ ಅಶೋಕನ ಬ್ರಹ್ಮಗಿರಿ ಶಾಸನದಲ್ಲಿ ಬರುವ 'ಇಸಿಲ' ಎಂಬುದು ಅಚ್ಚಗನ್ನಡ ಪದವೆಂದು ಪ್ರೊ. ಡಿ.ಎಲ್. ನರಸಿಂಹಾಚಾರ್ ಸಾಧಿಸಿ ತೋರಿಸಿದ ಸಂಶೋಧನೆ ಒಂದು ಪ್ರಖರ ಶೋಧನ ದೀಪವಾಗಿ ಅಪಾರ ಪ್ರಕಾಶವನ್ನು ಝಲ್ಲೆಂದು ಚೆಲ್ಲಿತು. ಆ ಶೋಧದಿಂದಾಗಿ ಕನ್ನಡ ಭಾಷೆಯ ಲಿಖಿತ ಚರಿತ್ರೆಯ ಆರಂಭ ಇದ್ದಕ್ಕಿದ್ದಂತೆ ಏಳು ಶತಮಾನಗಳಿಗೂ ಹಿಂದಕ್ಕೆ ಹೋದಂತಾಯಿತು. ದೀಪ ಚಿಕ್ಕದಿರಬಹುದು, ಬೀರಿದ ಬೆಳಕು ಮಾತ್ರ ವಿಸ್ತಾರವೂ ಆಳವೂ ಆಗಿದ್ದಿತು.

## 8

ಸಂಶೋಧನೆಯಲ್ಲಿ ಒಳ ಗೋಡೆಗಳೆಂಬುವಿಲ್ಲ, ಅಥವಾ ಗೋಡೆಗಳಿದ್ದರೂ ಅವುಗಳ ಮೂಲಕ ಹೋಗಲು ಹೋಗಿ ಬರಲು ಬಾಗಿಲುಗಳೂ ಕೈಚಾಚಿ ಕೊಡಲು ಸ್ವೀಕರಿಸಲು ಅನುಕೂಲವಾಗುವಂತೆ ಸದಾ ತೆರೆದ ಕಿಟಕಿಗಳೂ ಇರುತ್ತವೆ. ಭೌತವಿಜ್ಞಾನವು ಗಣಿತ ವಿಜ್ಞಾನದಿಂದ, ಜೀವವಿಜ್ಞಾನವು ಭೌತವಿಜ್ಞಾನದಿಂದ, ಕೃಷಿವಿಜ್ಞಾನವು ಜೀವವಿಜ್ಞಾನದಿಂದ, ಸಾಹಿತ್ಯದಿಂದ ಸಮಾಜವಿಜ್ಞಾನವು, ಸಮಾಜವಿಜ್ಞಾನ ಭಾಷಾವಿಜ್ಞಾನದಿಂದ ಕಲಿಯಬೇಕಾದ್ದು ಕಲಿಸಬೇಕಾದ್ದು, ಕೊಡಬಹುದಾದುದು ತೆಗೆದುಕೊಳ್ಳಬಹುದಾದುದು ಸಾಕಷ್ಟಿರುತ್ತದೆ. ಜಾಗತೀಕರಣದ ಮಾತಿರಲಿ, ಬದುಕೇ ಹಲವು ಹತ್ತು ಅಂಶಗಳ ಸಂಕೀರ್ಣ. ಅಲ್ಲಿ ಕಣ್ಣಿಗೆ ಕಾಣುವ ಕಲ್ಲುಂಟು, ಅಂತೆಯೇ ಕಾಣದ ಪ್ರಾಣ ಉಂಟು, ಅದಕ್ಕಿಂತ ಸೂಕ್ಷ್ಮವಾದ ಮನಸ್ಸುಂಟು, ಭಾವನೆಗಳುಂಟು; ಆತ್ಮದ ವಿಷಯವನ್ನಂತೂ ಸದ್ಯಕ್ಕೆ ಪಕ್ಕಕ್ಕೆ ಇಡೋಣ. ಬಂಡೆ ಗಿಡ ಮರ ಕೈ ಕಾಲುಗಳಂತೆಯೇ ಭಾವನೆಗಳೂ ಒಂದು ವಾಸ್ತವ, ಒಂದು ಸತ್ಯ. ಬೀದಿಯ ಕಲ್ಲು ಬರಿಯ ಕಲ್ಲು; ಅದನ್ನು ಮೂರ್ತಿಯಾಗಿ ಕಡೆದು ಗರ್ಭಗುಡಿಯಲ್ಲಿಟ್ಟು ಪ್ರಾಣ ಪ್ರತಿಷ್ಠೆ ಮಾಡಿದ ಕ್ಷಣದಿಂದ ಅದು ಬರೀ ಕಲ್ಲಲ್ಲ. ಹಾಗಾದರೆ ಏನು ? ಅದು ಮಾತನ್ನು ಮೀರಿದ್ದು. ತಾಯಿ ಹೆಂಗಸು ಹೌದು, ಬರೀ ಹೆಂಗಸೂ ಅಲ್ಲ. ಅವಳು ಹೆಂಗಸೂ ಹೌದು, ಹೆಂಗಸೂ ಅಲ್ಲ ಈ ಎರಡೂ ಸತ್ಯವಾದುವಾದರೂ, ಎರಡನೆಯದು ಖಂಡಿತವಾಗಿ ಹೆಚ್ಚು ಸತ್ಯ. 'ಸತ್ಯ'ದ ಬಗ್ಗೆ ಮಾತನಾಡುವಾಗ ಈ ಎಚ್ಚರವಿಲ್ಲದಿದ್ದರೆ ತಪ್ಪುಗಳನ್ನು ಮಾಡುವ ಸಾಧ್ಯತೆಯಿದೆ.

ಒಂದು ಇನ್ನೊಂದನ್ನು ಅರ್ಥಮಾಡಿಕೊಳ್ಳಲು ಸಹಾಯಕ; ಒಂದು ದೀಪ ಇನ್ನೊಂದನ್ನು ಹಚ್ಚಿ ತಾನೂ ದೀಪ್ತಗೊಳ್ಳುತ್ತದೆಯೆಂಬುದು ಎಲ್ಲ ಸಂಶೋಧಕರ ಅನುಭವ. ಭಾಷಾವಿಜ್ಞಾನ, ಪುರಾತತ್ವಶಾಸ್ತ್ರ, ಜಾನಪದ, ಸಮಷ್ಟಿ ಮನೋವಿಜ್ಞಾನ, ಲೋಹವಿದ್ಯೆ ಇತ್ಯಾದಿಗಳು ಮೇಳೈಸಿರುವುದಕ್ಕೆ ಈ ಮುಂದಿನ ಉದಾಹರಣೆ ನೋಡಬಹುದು. ಒಂದರ ಮೇಲಿನ ಬೆಳಕು ಹಲವು ಹತ್ತು ಅಂಶಗಳನ್ನು ವಿವರಿಸುತ್ತ ಅವುಗಳ ಅರ್ಥವ್ಯಾಪ್ತಿಯನ್ನು ಹಿಗ್ಗಿಸುತ್ತ ಹೋಗುವುದನ್ನು ಗುರುತಿಸಬಹುದು. 'ಕಬ್ಬಿಣ' ಎನ್ನುವ ಮೂರು ಅಕ್ಷರಗಳ ಸಾಮಾನ್ಯ ಪದವು (ವಸ್ತುವಲ್ಲ, 'ಪದ') ಮೂರು ನಾಲ್ಕು ಸಾವಿರ ವರ್ಷಗಳ ಲೋಹವಿಜ್ಞಾನದ ಚರಿತ್ರೆಯನ್ನು ತನ್ನಲ್ಲಿ ಹುದುಗಿಸಿಕೊಂಡಿದೆಯೆಂದರೆ ಯಾರೂ ಆಶ್ಚರ್ಯಪಡಬೇಕಾಗಿಲ್ಲ. ಕರ್ + ಪೊನ್ → ಕಬ್ಬುನ → ಕಬ್ಬಿಣ ಇದು ಆ ಪದದ ವಿಶ್ಲೇಷಣೆ. 'ಪೊನ್' ಎಂದರೆ ಕನ್ನಡವೂ ಸೇರಿದಂತೆ ಎಲ್ಲ ದ್ರಾವಿಡ ಭಾಷೆಗಳಲ್ಲಿ ಚಿನ್ನ ಎಂದೂ ಲೋಹ ಎಂದೂ ಅರ್ಥವಿರುವುದು ಒಂದು ಸಂಗತಿಯನ್ನು ಸೂಚಿಸುತ್ತದೆ : ಮನುಷ್ಯನು ಲೋಹಗಳಲ್ಲಿ ಮೊದಲು ಚಿನ್ನದ ಬಳಕೆಯನ್ನು ಮಾಡಿಕೊಂಡ ಎಂಬುದನ್ನು. ಇದನ್ನು ವಿಶ್ವದ ಎಲ್ಲೆಡೆಯ ಪುರಾತತ್ವ ಶಾಸ್ತ್ರ (Archaeology) ಮತ್ತು ಲೋಹ ವಿದ್ಯೆಗಳ (Metallurgy) ಚರಿತ್ರೆಯು ದೃಢೀಕರಿಸುತ್ತದೆ. ಚಿನ್ನ ಮತ್ತು ತಾಮ್ರಗಳ ಬಳಕೆಯು ಕ್ರಿ.ಪೂ. 5000-4000 ವರ್ಷಗಳಷ್ಟು

ಹಿಂದೆಯೇ ಮನುಷ್ಯನಿಗೆ ತಿಳಿದಿತ್ತೆಂಬುದು, ಕಬ್ಬಿಣದ ಬಳಕೆ ಕ್ರಿ.ಪೂ. 1000 ದಷ್ಟು ಈಚಿನದೆಂಬುದು ಪುರಾತತ್ವ ಶೋಧದಲ್ಲಿ ಪ್ರಸಿದ್ಧ ವಿಷಯ. ದ್ರಾವಿಡ ಭಾಷೆಗಳಲ್ಲಿ ತಾಮ್ರ ಎಂಬುದಕ್ಕೆ ಕೆಂಬೊನ್ (ಚೆಂಬೊನ್, ಚೆಂಬು) ಪದವಿರುವುದು ದಕ್ಷಿಣ ಭಾರತದ ಮಟ್ಟಿಗಾದರೂ ತಾಮ್ರದ ಬಳಕೆ ಚಿನ್ನಕ್ಕಿಂತ ಸ್ವಲ್ಪ ಈಚಿನದು. ನೋಡಿ : ಕೆನ್ + ಪೊನ್ (ಕೆಂಪು ಚಿನ್ನ, ತಾಮ್ರ). ಎಲ್ಲ ದ್ರಾವಿಡ ಭಾಷೆಗಳ ಪದಾದಿಯಲ್ಲಿ ಇಲ್ಲವೇ ಚ್-, ತ್- ಹೊಂದಿದ್ದರೂ ಕೊಲಾಮಿ, ತೊದಭಾಷೆಗಳಲ್ಲಿ ಮಾತ್ರ ಮೂಲಪದದ ಕ್- ಉಳಿದಿದೆ.

ಕಬ್ಬಿಣದ ಉಪಯೋಗವನ್ನು ಮನುಷ್ಯ ಕಂಡುಕೊಂಡ ಮೇಲೆ ಅವನ ಕೃಷಿ ಮತ್ತು ಇತರ ಔದ್ಯೋಗಿಕ ಉದ್ಯಮಗಳು ಅದ್ಭುತ ಪ್ರಗತಿ ಸಾಧಿಸಿದುವೆಂಬುದು ಗಮನಿಸಬೇಕಾದ್ದು. ಚಿನ್ನದಿಂದ ಆಭರಣಗಳನ್ನು ತಯಾರಿಸಬಹುದು. ಆದರೆ ವ್ಯವಸಾಯದ ಉಪಕರಣ, ಆಯುಧ, ಯಂತ್ರಗಳನ್ನು ಕಬ್ಬಿಣದಿಂದ ತಯಾರಿಸಲು ಬರುವಂತೆ ಉಳಿದ ಲೋಹಗಳಿಂದ ಆಗುವುದಿಲ್ಲ. ಜೊತೆಗೆ ಕಬ್ಬಿಣವು ಸಮೃದ್ಧವಾಗಿ ದೊರಕುವ ಲೋಹ. ಹೀಗೆ ಮನುಷ್ಯನ ನಾಗರಿಕತೆಯ ದಿಕ್ಕನ್ನೇ ಬದಲಾಯಿಸುವಲ್ಲಿ ಕಬ್ಬಿಣದ ಸ್ಥಾನ ಅತ್ಯಂತ ಪ್ರಮುಖವಾಗಿದ್ದರೂ, ವಿಶ್ವಾದ್ಯಂತ ಅದಕ್ಕೆ ಶುಭ ಸಂದರ್ಭಗಳಲ್ಲಿ ಅಮಂಗಳ, ಮೈಲಿಗೆ ಸ್ಥಾನಮಾತ್ರವಿರುವುದು ಗಮನಿಸಬೇಕಾದ್ದು. ಭಾರತದಲ್ಲಿ ಕಬ್ಬಿಣದಲ್ಲಿ ಎಲ್ಲೂ ದೇವತಾಮೂರ್ತಿಗಳನ್ನಾಗಲಿ ಅಥವಾ ಪೂಜಾಸಾಮಗ್ರಿಗಳನ್ನಾಗಲಿ ಮಾಡುವಂತಿಲ್ಲ. ಅದು ದಾನವಾಗಿ ಕೊಡುವ ವಸ್ತುವೂ ಅಲ್ಲ, ಸ್ವೀಕರಿಸುವ ವಸ್ತುವೂ ಅಲ್ಲ. ಅದು 'ವಿಶ್ವಾಮಿತ್ರ ಸೃಷ್ಟಿ', ಅದರ ಅಧಿದೈವ ಶನಿ. ಉತ್ತರ ಭಾರತದ ಅಗರಿ ಬುಡಕಟ್ಟಿನ ಜನರ ಪ್ರಕಾರ ಕಬ್ಬಿಣ ಒಂದು 'ಲೋಹಾಸುರ'. ಪ್ರಾಚೀನ ಹೀಬ್ರೂಗಳು ಶಿಶ್ನಚ್ಛೇದಕ್ಕೆ ಕಲ್ಲಿನ ಚಾಕುವನ್ನು ಬಳಸುತ್ತಿದ್ದರೇ ಹೊರತು ಕಬ್ಬಿಣವನ್ನಲ್ಲ (ದಕ್ಷಿಣ ಆಫ್ರಿಕಾದಲ್ಲೂ ಇದೇ ಪದ್ಧತಿ ಇದೆ). ದಕ್ಷಿಣ ಆಫ್ರಿಕದ ಹೊಟೆನ್‌ಟಾಟ್ ಪುರೋಹಿತರು ಪ್ರಾಣಿ ಬಲಿ ಸಂದರ್ಭದಲ್ಲಿ ಹರಿತವಾದ ಕಲ್ಲಿನ ಅಲಗನ್ನೇ ಬಳಸಬೇಕು.

ಆದರೆ ಅದೇ ಕಬ್ಬಿಣವು ಅಶುಭದ ನಿವಾರಣೆಗಾಗಿ ಬಳಕೆಯಾಗುತ್ತಿರುವುದು ವಿಚಿತ್ರವಾದರೂ ವಿಶ್ವದ ಎಲ್ಲೆಡೆಗಳಲ್ಲಿನ ನಂಬಿಕೆಗಳನ್ನು ಆಚರಣೆಗಳನ್ನು ಗಮನಿಸಿದಾಗ ಅದು ವಿವರಣೆಗೆ ಸಿಗುವ ವಿಚಾರವೇ ಆಗುತ್ತದೆ. ಫಲ ಬಿಡದ ಮರಗಳಿಗೆ ಕಬ್ಬಿಣದ ಮೊಳೆ ಹೊಡೆದರೆ, ಅದರಲ್ಲೂ ಗ್ರಹಣದ ದಿನ ಹೊಡೆದರೆ ಆ ಮರಗಳು ಫಲಭರಿತವಾಗುತ್ತವೆ ಎಂಬ ನಂಬಿಕೆಯಿದೆ. ಎತ್ತುಗಳಿಗೆ ಕಾಯಿಲೆ ಬರದಿರಲೆಂದು ಕಬ್ಬಿಣ ಕಾಯಿಸಿ ಬರೆ ಹಾಕುತ್ತಾರೆ. ವಧು ಮದುವೆಯಾಗಿ ಗಂಡನ ಮನೆಯನ್ನು ಪ್ರವೇಶಿಸುವ ಮೊದಲು ಅವಳ ಕಾಲನ್ನು ಹೊಸ್ತಿಲ ಮೇಲಿಟ್ಟು ಅವಳ ಬೆರಳ ಸಂದಿ ಮೂಲಕ ಮೊಳೆ ಹೊಡೆಯುತ್ತಾರೆ. ಉತ್ತರ ಭಾರತದ ಮಗಹಿದೊಂಬ ಜಾತಿಯ ಹೆಂಗಸರು ಕಬ್ಬಿಣ ಇರುವ ಮನೆಗೆ ಕಳ್ಳತನಕ್ಕೆ ಹೋಗಬಾರದೆಂದೂ ಹೋದರೂ ಕಬ್ಬಿಣ ಮಾತ್ರ ಕದಿಯಬಾರದೆಂದೂ ತಮ್ಮ ಗಂಡಂದಿರಿಗೆ ವಿಧಿಸುತ್ತಾರೆ.

ಇಂತಹ ನೂರಾರು ನಂಬಿಕೆ, ಆಚರಣೆಗಳನ್ನು ವಿಶ್ಲೇಷಿಸಿದ್ದಾದರೆ ಒಂದು ವಿಶ್ವ ಸಾಮಾನ್ಯ ನಂಬಿಕೆ ಧ್ವನಿತವಾಗುತ್ತದೆ. ಯಾವ ವಸ್ತು (ಅಥವಾ ಒಬ್ಬ ವ್ಯಕ್ತಿ) ನಾಗರಿಕತೆಗೆ

ಹೊಸದಾಗಿ ಪ್ರವೇಶಿಸುತ್ತದೋ ಅದನ್ನು ಅಥವಾ ಅವನನ್ನು ಆ ಜನ ಗುಮಾನಿಯಿಂದ ನೋಡುತ್ತಾರೆ. ಅವನು ಅಥವಾ ಅದು ನಿಷೇಧಾರ್ಹವೆಂದು ಅಪೂಜ್ಯವೆಂದು ಭಾವಿಸುತ್ತಾರೆ. ಕಬ್ಬಿಣದ ಬಗ್ಗೆಯೂ ಅದೇ ಕೆಲಸಮಾಡಿದೆ. ಆದರೆ ಅದನ್ನು ಭೂತ ಪ್ರೇತಗಳನ್ನೂ ಅಮಂಗಳ ಶಕ್ತಿಗಳನ್ನೂ ದೂರವಿಡಲು ಬಳಸುತ್ತಾರೆ. ಕಬ್ಬಿಣ ಮೈಲಿಗೆ ಆದುದರಿಂದ ಭೂತಪ್ರೇತಗಳು ಅದರಿಂದ ದೂರವಿರಲು ಬಯಸುತ್ತವೆ. ಗೊಡ್ಡು ಮರದಲ್ಲಿಯ ಯಾವುದೋ ಅಶುಭ ಶಕ್ತಿಯನ್ನು ಓಡಿಸಿ ಅದು ಫಲಭರಿತವಾಗಿ ಮಾಡಬೇಕಾದರೆ ಹಿಂದಿನವರಿಗೆ ಹೊಳೆದ ಸುಲಭ ಉಪಾಯ - ಮರದ ಒಳಭಾಗಕ್ಕೆ ಮೈಲಿಗೆ ವಸ್ತುವನ್ನು, ಕಬ್ಬಿಣವನ್ನು ಕಳುಹಿಸುವುದು. ಅಪರಿಚಿತ ಹೆಣ್ಣು ಮನೆಗೆ ಹೊಸದಾಗಿ ವಾಸಮಾಡಲು ಬರುತ್ತಿರುವಾಗ ಅವಳ ಜೊತೆ ಅದೇ ಮನೆಯಲ್ಲಿ ಬೀಡುಬಿಡಲು ಬರಬಹುದಾದ ಭೂತ ಪ್ರೇತ ದುಷ್ಟ ಶಕ್ತಿಗಳನ್ನು ದೂರವಿರಿಸಲು ಒಂದೇ ಮಾರ್ಗ, ಮನೆ ಬಾಗಿಲಿಗೆ ಅವಳ ಮುಂದೆಯೇ ಕಬ್ಬಿಣದ ಮೊಳೆ ಬಡಿಯುವುದು; ಆಗ ಅವಳ ಜೊತೆ ಬಂದಿರಬಹುದಾದ ದುಷ್ಟಶಕ್ತಿಗಳು ಹೊಸಮನೆಯನ್ನು ಪ್ರವೇಶಿಸಲು ಹೆದರಿ ಬಂದ ದಾರಿಗೆ ಸುಂಕವಿಲ್ಲ, ಹುಡುಗಿ ಜೊತೆ ಬಂದ ಮನೆಯಲ್ಲಿ ತಮಗೆ ಸುಖವಿಲ್ಲ ಎಂದು ಹಿಂದಿರುಗುತ್ತವೆ. ದಾರಿಯಲ್ಲಿ ಕುದುರೆ ಲಾಳ ಸಿಕ್ಕರೆ ಅಷ್ಟರಮಟ್ಟಿಗೆ ಒಳ್ಳೆಯದೆ, ಅದನ್ನು ಹೊರ ಬಾಗಿಲಿಗೆ ಬಡಿದು ಪ್ರೇತಗಳನ್ನು ದೂರವಿಡುವುದು ಸುಲಭ. (ದಾರಿಯಲ್ಲಿ ಕಬ್ಬಿಣ ಸಿಕ್ಕರೆ ಅದನ್ನು ಮನೆಯೊಳಗೆ ತರಬಾರದು, ಒಳಗಿನ ಸೌಮ್ಯಶಕ್ತಿಗಳು ಕಬ್ಬಿಣದ ಜೊತೆ ಇರಲು ಬಯಸುವುದಿಲ್ಲ);

ಇವು ನಂಬಿಕೆಗಳು, ಅಥವಾ ಮೂಢನಂಬಿಕೆಗಳು ಎನ್ನಿ. ಆದರೆ ಅವೂ ಒಂದು ನೆಲೆಯಲ್ಲಿ ವಾಸ್ತವವೇ. ಜನಗಳನ್ನು ಸಮಗ್ರವಾಗಿ ತಿಳಿಯಲು ಅವುಗಳನ್ನೂ ಅರ್ಥೈಸುವುದು ಅಗತ್ಯ, ಏಕೆಂದರೆ ಅವರ ಬದುಕಿನ ಅವಿಭಾಜ್ಯ ಅಂಗ ಅವು ಆ ನಂಬಿಕೆಗಳು, ಶ್ರದ್ಧೆಗಳು, ಮೌಲ್ಯಗಳು.

ಮೇಲಿನ ಒಂದು ಬಹು ಮುಖ್ಯವಾದ ತತ್ವವನ್ನು ನಾನು ಕಂಡುಕೊಂಡ ಹಿನ್ನೆಲೆಯೇ ಅತ್ಯಂತ ರೋಚಕ. 1980 ಫೆಬ್ರವರಿ 16ರಂದು ನಡೆದ ಪೂರ್ಣ ಸೂರ್ಯಗ್ರಹಣದ ದಿನ ಇಡೀ ಭಾರತ ಬಾಗಿಲು ಹಾಕಿಕೊಂಡು ಭಯದಿಂದ ಒಳಗೆ ಸೇರಿ ಹೋಗಿತ್ತು. ಆ ದಿನ ಹೇಗೋ ಕಳೆದು ಹೋದರೆ ಸಾಕೆಂದು ಜನ ಉಸಿರು ಹಿಡಿದು ಕಾದಿದ್ದರು. ನಾನು ಆ ದಿನ ನನ್ನ ವಿದ್ಯಾರ್ಥಿಗಳ ಜೊತೆ ಸಿರ್ಸಿಗೆ ಹೋಗಿ (ಸಿರ್ಸಿ - ಧಾರವಾಡ ಇವು ಪೂರ್ಣ ಗ್ರಹಣದ ಪಥದಲ್ಲಿದ್ದುವು) ಮಧ್ಯಾಹ್ನ 12ರ ಅವಧಿಯಲ್ಲಿ ಇಡೀ ಸೂರ್ಯ ಮರೆಯಾಗಿ, ಎಂಟು ಹತ್ತು ನಕ್ಷತ್ರಗಳನ್ನು ಕಂಡು ಹುಡುಗರ ಜೊತೆ ಅಕ್ಷರಶಃ ಕೂಗಿ ಕುಣಿದಾಡಿದ್ದು ಒಂದು ವಿಶೇಷ ಅನುಭವ. ಆ ಅಪೂರ್ವ ಸಂದರ್ಭದಲ್ಲಿ ವಿಜ್ಞಾನಿಗಳು ಬಾಹ್ಯಪ್ರಕೃತಿ ಬಿಟ್ಟುಕೊಡುವ ರಹಸ್ಯಗಳಿಗಾಗಿ ಹಲವು ಉಪಕರಣಗಳೊಂದಿಗೆ ವೀಕ್ಷಿಸಿ ಭೌತಿಕ ಪ್ರಪಂಚದ ಪ್ರಚಲಿತ ಅರಿವನ್ನು ಹೆಚ್ಚಿಸಿದರು. (ಅದು ಏನೆಂಬುದು ಸಹಜವಾಗಿಯೇ ನನಗೆ ತಿಳಿಯದು.) ಆದರೆ ಅಂದು ನನಗನ್ನಿಸಿತು : ಅಂತಹ ಸಂದರ್ಭದಲ್ಲಿ ಮನುಷ್ಯನ ಒಳಗಿನ ಪ್ರಪಂಚದಲ್ಲಿ

ನಡೆಯುವ ವ್ಯಾಪಾರಗಳನ್ನು ಹೊರಗೆಳೆದರೆ ಮನುಷ್ಯನನ್ನು, ಪರಂಪರಾಗತ ನಂಬಿಕೆ ಮತ್ತು ಆಧುನಿಕ ವಿಜ್ಞಾನಗಳ ಸಂಗಮದಲ್ಲಿರುವ ಭಾರತೀಯ ಮನಸ್ಸನ್ನು ತಿಳಿಯಬಹುದು ಎಂದು ಯೋಚಿಸಿ ಎಚ್ಚರಿಕೆಯಿಂದ ಪ್ರಶ್ನಾವಳಿ ರೂಪಿಸಿ ಮುಂದಿನ ಒಂದು ತಿಂಗಳಲ್ಲಿ ವ್ಯಾಪಕ ಕ್ಷೇತ್ರಕಾರ್ಯ ಮಾಡಿದಾಗ ಒಂದು ವಿಶೇಷ ಸಂಗತಿ ನನ್ನ ಗಮನಕ್ಕೆ ಬಂದಿತು. ಗ್ರಹಣದ ದಿನ ಗೊಡ್ಡು ಮರಗಳಿಗೆ ಅದರಲ್ಲೂ ತುಕ್ಕು ಹಿಡಿದ ಕಬ್ಬಿಣದ ಮೊಳೆ ಹೊಡೆಯುವ ವಿಷಯ ಗೊತ್ತಾದುದು ಆ ಸಂದರ್ಭದಲ್ಲೇ.

ಅದು ಮೂಡಿಸಿದ ಕುತೂಹಲದ ಫಲವಾಗಿ ನಡೆಸಿದ ವ್ಯಾಪಕ ಕ್ಷೇತ್ರಕಾರ್ಯ, ಚರ್ಚೆ (ಉದಾ.ಗೆ Indian Institute of Astrophysics ಸಂಸ್ಥೆಯ ಡಾ. ಭಟ್ಟಾಚಾರ್ಯ) ಅಧ್ಯಯನಗಳಿಂದಾಗಿ ಕಬ್ಬಿಣದ ಬಗ್ಗೆ ವೈವಿಧ್ಯಪೂರ್ಣ ನಂಬಿಕೆಗಳು ಭಾರತಾದ್ಯಂತ ವಿಶ್ವಾದ್ಯಂತ ಇರುವುದು ಗೋಚರವಾಗಿ ಮೇಲಿನಂತಹ ಚಿಂತನೆ ಸಾಧ್ಯವಾಯಿತು. ಅದರ ಜೊತೆ ಜೊತೆಗೇ "ಮನುಷ್ಯನಿಗೆ ಹಳೆಯದೆಲ್ಲ ಪವಿತ್ರ, ಅಮೂಲ್ಯ; ಹೊಸತೆಲ್ಲ ಮೈಲಿಗೆ ಅಥವಾ ಅಷ್ಟು ಪವಿತ್ರವಲ್ಲ" ಎಂಬ ಪ್ರಮೇಯವು (Hypothesis) ರೂಪುಗೊಂಡಿತು. ಈ ಪ್ರಮೇಯವನ್ನು ಒಂದು ಸಿದ್ಧಾಂತವೆಂದು ಕರೆದರೂ ತಪ್ಪಿಲ್ಲ. ಏಕೆಂದರೆ ಅದರ ಸಹಾಯದಿಂದ ಎಷ್ಟೋ ವಿಲಕ್ಷಣ ಸಂಗತಿಗಳನ್ನು ವಿವರಿಸಲು ಸಾಧ್ಯ. ಮೇಲ್ನೋಟಕ್ಕೆ ಅಸಂಗತಗಳೆಂದು ಕಾಣುವ ಸಂಗತಿಗಳ ಹಿಂದೆ ಒಂದು 'ಸಾಂಗತ್ಯ' ವಿರುವುದನ್ನು ಗುರುತಿಸಬಹುದು. ಸೀಮೆ ಎಣ್ಣೆ ದೀಪ, ವಿದ್ಯುಚ್ಛಕ್ತಿ ದೀಪಗಳು ಈಚಿನವು; ಅವು ಮೈಲಿಗೆ ; ಅಥವಾ ಪವಿತ್ರವಂತೂ ಅಲ್ಲ. ಹರಳೆಣ್ಣೆ ದೀಪ ಮಾತ್ರ ಪವಿತ್ರ. ದೇವರ ಮುಂದೆ ಹರಳೆಣ್ಣೆದೀಪ ಇರಲೇಬೇಕು. ಶ್ರದ್ಧೆಯಿಂದ ಮಾಡಬೇಕಾದ 'ಶ್ರಾದ್ಧ'ದ ದಿನ ಅಡುಗೆಯಲ್ಲಿ ಮೆಣಸಿನಕಾಯಿ ನಿಷಿದ್ಧ, ಮೆಣಸಿನಕಾಯಿ 13-14ನೇ ಶತಮಾನದಿಂದ ಈಚೆಗೆ ಬಂದಿತು. ಮೆಣಸು ದೇಶೀಯ ಬೆಳೆ, ಅದು 'ಶ್ರಾದ್ಧ'ದ ದಿನ ಸ್ವೀಕಾರಾರ್ಹ. ಡಾ. ಬಿ.ಜಿ.ಎಲ್. ಸ್ವಾಮಿಯವರು "ನಮ್ಮ ಹೊಟ್ಟೆಯಲ್ಲಿ ದಕ್ಷಿಣ ಅಮೆರಿಕ" ಎಂಬ ಕೃತಿಯಲ್ಲಿ ಹದಿನಾರನೇ ಮತ್ತು ಈಚಿನ ಶತಮಾನಗಳಲ್ಲಿ ದಕ್ಷಿಣ ಅಮೆರಿಕದಿಂದ ಬಂದು ನಮ್ಮ ಆಹಾರದ ಭಾಗವಾದ ಹಣ್ಣು, ತರಕಾರಿಗಳ ವಿವರಣೆ ನೀಡಿದ್ದಾರೆ. ಉದಾ : ಪಪಾಯಿ (ಪರಂಗಿ ಹಣ್ಣು), ಟೊಮೊಟೊ, ನೆಲಗಡಲೆ, ತಿಂಗಳ ಹುರುಳಿ, ಮೆಣಸಿನಕಾಯಿಯಂತೂ ಸರಿಯೇ- ಇವೆಲ್ಲವೂ ಔಪಚಾರಿಕ ಪವಿತ್ರ ಸಂದರ್ಭಗಳಿಗೆ ನಿಷಿದ್ಧಗಳೇ ಆಗಿರುವುದನ್ನು ಎಲ್ಲರೂ ಬಲ್ಲರು. ಯಜ್ಞಯಾಗಗಳ ಸಮಿತ್ತಿಗೆ ಹಚ್ಚಬೇಕಾದ ಬೆಂಕಿಯು ಕಲ್ಲು ಅಥವಾ ಮರದ ತುಂಡುಗಳ ಉಜ್ಜುವಿಕೆಯಿಂದ ಬಂದಿದ್ದರೆ ಅದೇ ಶ್ರೇಷ್ಠ. ಎಷ್ಟೇ ಆಗಲಿ, ಬೆಂಕಿ ಪೊಟ್ಟಣ ಈಚಿನದು. ಸನ್ಯಾಸಿಯೊಬ್ಬ ಭಂಗಿ ಸೇದಿದರೆ ಜನ ಸಹಿಸಿಯಾರು, ಆದರೆ ಅವನು ಹೊಗೆಸೊಪ್ಪಿನ ಬೀಡಿ ಸೇದಬಾರದು; ಟೊಬ್ಯಾಕೊ ಅಥವಾ 'ಹೊಗೆ ಸೊಪ್ಪು' ಈ ದೇಶಕ್ಕೆ ಈಚೆಗೆ ಬಂದುದು (ಮೆಕ್ಸಿಕನ್ ಭಾಷೆಯ Tapaco → ಇಂಗ್ಲಿಷ್. Tobacco → ತಂಬಾಕು). ಪಾಣಿಗ್ರಹಣದ ಸಂದರ್ಭದಲ್ಲಿ ವಧೂ ವರರು ಸೀರೆ, ಪಂಚೆ ಉಟ್ಟಿರಬೇಕು. ಸಂಜೆ ಆರತಕ್ಷತೆಗೆ ವಧು

ಬ್ಯೂಟಿ ಪಾರ್ಲರ್‌ನಿಂದ ಹಿಂದಿರುಗುತ್ತಾಳೆ. ವರ ಸೂಟು, ಬೂಟು ಬಟ್ಟೆ ಧರಿಸುತ್ತಾನೆ. ಇದಕ್ಕೆ ವಿವರಣೆ ಬೇಕಿಲ್ಲ. ಇಂತಹ ಉದಾಹರಣೆಗಳನ್ನು ಬೆಳಸುತ್ತ ಹೋಗಬಹುದು.

ಯಾರೂ ಹಾಕಿಕೊಡದ, ತಾನಾಗಿಯೇ ರೂಪುಗೊಂಡ ಒಂದು ಸಮಾನ ನಿಯಮ- ಆ ನಿಯಮವು ಒಂದು ದೀಪದಂತೆ ನೂರಾರು ಸಂಗತಿಗಳ ಮೇಲೆ ಬೆಳಕು ಬೀರುತ್ತ ಹೋಗುವುದನ್ನು ಸ್ಪಷ್ಟಪಡಿಸಲಿಕ್ಕಾಗಿ ಮೇಲಿನ ವಿವರಗಳನ್ನು ನೀಡಲಾಯ್ತು. ಈಚೆಗೆ ನೇಪಾಳದ ಹಬ್ಬಗಳ ಬಗ್ಗೆ ಓದುತ್ತಿರುವಾಗ ಅಲ್ಲಿ ರಾಕ್ಷಸನೆಂದು ಭಾವಿಸುವ ಘಂಟಾಕರ್ಣನನ್ನು ದೂರವಿಡಲು ಕಬ್ಬಿಣದ ಬಳೆ ಬಳಸುತ್ತಾರೆ ಎಂಬ ಸಂಗತಿ ತನಗೆ ತಾನೇ ಸ್ಪಷ್ಟವಾಗಿತ್ತು. ಗ್ರಹಣದ ದಿನ ಗೊಡ್ಡು ಮರಕ್ಕೆ ಕಬ್ಬಿಣದ ಮೊಳೆ ಹೊಡೆಯುವುದು, ಮದುವೆ ಆದ ಮೇಲೆ ಹೆಣ್ಣು 'ಮೊಳೆ ಹೊಡಿಸಿಕೊಂಡು' ಗಂಡನ ಮನೆ ಪ್ರವೇಶ ಮಾಡುವುದು ಎರಡಕ್ಕೂ ತೋರಿಕೆಗೆ ಸಂಬಂಧವಿಲ್ಲ; ಆದರೆ ಎರಡಕ್ಕೂ ಭೌತಾತೀತವಾದ ಸಂಬಂಧವಿದೆ. ಶ್ರಾದ್ಧದ ದಿನದ ಮೆಣಸಿನ ಬಳಕೆಗೂ ಮೇಲಿನ ವಿಷಯಕ್ಕೂ ಸಂಬಂಧವಿದೆ. ಮನುಷ್ಯನಿಗೆ ಯಾರು ಏನೇ ಹೇಳಲಿ ಪ್ರಸ್ತುತ ಕಾಲ ಮುಖ್ಯ ಸರಿಯೇ, ಆ ಬಗ್ಗೆ ಎರಡು ಮಾತಿಲ್ಲ. ಭವಿಷ್ಯತ್ಕಾಲಕ್ಕಿಂತ ಗತಕಾಲ ಮುಖ್ಯ, ಏಕೆಂದರೆ ನಿನ್ನೆ ಖಚಿತ, ಕಾರಣ ನಾನಿದ್ದೆ. ನಾಳೆ ಖಚಿತವಿಲ್ಲ, ನಾನುಇಲ್ಲದೆ ಇರಬಹುದು ('ಇದ್ದರೆ ಇದ್ದೆ, ಎದ್ದರೆ ಎದ್ದೆ') ಎಂಬಂತಹ ಭಾವನೆ ಸ್ವಾಭಾವಿಕ ತಾನೇ ! ಅಲ್ಲದೆ, ಮನುಷ್ಯ ಕೃತಜ್ಞನಾಗಿರಬೇಕಾಗಿರುವುದು ನಿನ್ನೆಗಳಿಗೆ ಮಾತ್ರ, ನಾಳೆಗಳಿಗೆ ಅಲ್ಲ. ಆ ಕಾರಣವೇ ಹಳೆಯದು ಪವಿತ್ರ. ಆ ಹೊಸತು ಅಥವಾ ಆ ಹಳೆಯದಕ್ಕಿಂತ ಈಚಿನದು ಅಪವಿತ್ರ ಅಥವಾ ಅಷ್ಟು ಪವಿತ್ರವಲ್ಲ. ಮುದುಕ, ಎಷ್ಟೇ ಸಾಮಾನ್ಯನಿರಲಿ - ಕಾಲು ಮುಟ್ಟಿ ನಮಸ್ಕಾರ ಮಾಡಿಸಿಕೊಳ್ಳಲು ಯೋಗ್ಯ ; ತನಗಿಂತ ಚಿಕ್ಕವನು, ಎಷ್ಟೇ ಸಭ್ಯನಿರಲಿ, ಅದಕ್ಕೆ ಅರ್ಹನಲ್ಲ.

ಅನಕ್ಷರಸ್ಥನಿರಲಿ, ವಿದ್ಯಾವಂತನಿರಲಿ ಪ್ರತಿಯೊಬ್ಬ ಮನುಷ್ಯನಿಗೂ ಅರಿತೋ ಅರಿಯದೆಯೋ ತಾನು ದೈಹಿಕವಾಗಿ ಮಾನಸಿಕವಾಗಿ ಬೌದ್ಧಿಕವಾಗಿ ಹಿಂದಿನ ಪರಂಪರೆಯನ್ನು ಮುಂದುವರಿಸುವ ವಾಹಕ ಎಂಬ ಅರಿವಿರುತ್ತದೆ. ಆ ಹಿಂದಿನ ಪರಂಪರೆ ತನ್ನ ಮೂಲಕ ಮುಂದುವರಿಯುವುದು ಅವನಿಗೆ ತಿಳಿದಿರುತ್ತದೆ. ಮತ್ತು ಆ ಪರಂಪರೆಯ ಕೊಂಡಿಯಾದ ಅವನಿಗೆ ಅದರ ಬೆಲೆ ತಿಳಿದಿರುತ್ತದೆ. ಆ ಕಾರಣವೇ ಅವನಿಗೆ ಆ ಪರಂಪರೆ ಬೆಲೆ ಬಾಳುವಂತಹುದು (ಅರ್ಥಾತ್ 'ಮಡಿ'ಯಾದ್ದು. ಪವಿತ್ರದ್ದು, ಅಥವಾ ಮುಖ್ಯವಾದ್ದು) ಎಂದು ಅನ್ನಿಸುವುದು. ಮಾಂಗಲ್ಯಧಾರಣೆಯ ಕಾಲವೇ ಅತ್ಯಂತ ಮುಖ್ಯ. ಆದರೆ ಆ ದಿನ ಸಂಜೆಯ ಆರತಕ್ಷತೆ ಐಚ್ಛಿಕ; ಅದು ವೈಭವಕ್ಕಾದ್ದರಿಂದ ಅದರಲ್ಲಿ ಸ್ವಲ್ಪ ಹೆಚ್ಚು ಕಡಮೆ ಆದರೂ ಕ್ಷಮ್ಯ. ಆದರೆ ನಿನ್ನೆಯ ಪ್ರತೀಕವಾದ ಧಾರಾಮುಹೂರ್ತದಲ್ಲಿ ಹೆಚ್ಚು ಕಡಮೆ ಆಗಕೂಡದು. ಅಲ್ಲಿನ ಶಾಸ್ತ್ರಾಚರಣೆಗಳು ನಿನ್ನೆಯ ಪ್ರತೀಕ, ಶ್ರದ್ಧೆಯ ಸಂಕೇತ. ಸಂಜೆಯ ವಸ್ತ್ರಾಡಂಬರಗಳು ಇಂದಿನ ಅಥವಾ ನಾಳೆಯ ಪ್ರತೀಕ; 'ಶ್ರದ್ಧೆ'ಗೆ ಕನಿಷ್ಠ ಸ್ಥಾನ, ಅಲ್ಲಿ. ಧಾರಾಮುಹೂರ್ತದಲ್ಲಿ ನಿನ್ನೆಯ ಬಗೆಗಿನ ಶ್ರದ್ಧೆಗೇ ಪರಮೋಚ್ಚ ಸ್ಥಾನ.

'ನಿನ್ನೆ' ಎಂಬುದರ ಬಗ್ಗೆ ಬಹು ಜನಕ್ಕೆ ಅಸಡ್ಡೆ. ಅದು ಮುಗಿದು ಹೋದ ವಿಷಯ, ನಮಗೆ ಇಂದು ಮುಖ್ಯ, ನಾಳೆ ಮುಖ್ಯ: ಇದು ಬಹಳ ಜನರ ಬಾಯಲ್ಲಿ ಬರುವ ಮಾತು - ಆಲೋಚಿಸದೆ ಆಡುವ ಬರಿಯ ಮಾತು. ನಾವೆಲ್ಲ ಎಲ್ಲ ನಿನ್ನೆಗಳ ಒಟ್ಟು ಮೊತ್ತ. ಒಬ್ಬ ವ್ಯಕ್ತಿ ಈಗ ಏನಾಗಿದ್ದಾನೆ ಅದು ಆ ಕ್ಷಣದವರೆಗಿನ ಅವನ ಅನುಭವಗಳ ಫಲ. ಒಬ್ಬ ವ್ಯಕ್ತಿಯಲ್ಲಿ ಇದ್ದಕ್ಕಿದ್ದಂತೆ ಅವನ ಆ ಕ್ಷಣದವರೆಗಿನ ನೆನಪುಗಳೆಲ್ಲ, ಅರಿವೆಲ್ಲ ಝಗ್ಗನೆ ವಿದ್ಯುದ್ದೀಪದಂತೆ ಆರಿ ಹೋದುವು ಎಂದು ಕಲ್ಪಿಸಿಕೊಳ್ಳಿ. ಅಲ್ಲಿಂದ ಅವನಿಗೂ ಮೃಗಕ್ಕೂ ಯಾವುದೇ ವ್ಯತ್ಯಾಸವೂ ಉಳಿಯುವುದಿಲ್ಲ. ಯೋಚಿಸುವವರಿಗೆ ಅದು ತಿಳಿಯುತ್ತದೆ. ಉಳಿದಂತೆ ಸಾಮಾನ್ಯ ಮಾತುಕತೆಯಲ್ಲಿ - 'ನಿನ್ನೆ' ಎಂಬುದು ಆಗಿಹೋಯ್ತು, ಅದನ್ನು 'ಕಟ್ಟಿಗೊಂಡು ನಮಗೇನು?' ಈಗ ಏನಾಗಿದ್ದೇವೆ, ನಾಳೆ ಏನಾಗುತ್ತೇವೆ ಎಂಬುದೇ ಮುಖ್ಯ

ವಾಸ್ತವವೆಂದರೆ, ನಿನ್ನೆಯೇ ವಾಸ್ತವ ; ಈ ಕ್ಷಣದಿಂದ ಹಿಂದಿನದೆಲ್ಲವೂ ವಾಸ್ತವ. 'ಈ ಕ್ಷಣ' ಎಂಬುದೊಂದಿಲ್ಲ ; ಅದು ಸದಾ ಚಲಿಸುವ ಬಿಂದು. 'ಈ ಕ್ಷಣ' ಎಂದು ಹೇಳುತ್ತಿದ್ದಂತೆ 'ಈ ಕ್ಷಣ'ವು ಭೂತಕಾಲಕ್ಕೆ ಸೇರಿ ಹೋಗಿರುತ್ತದೆ. ಇಷ್ಟು ಸೂಕ್ಷ್ಮ ವಿಚಾರವು ವ್ಯಾವಹಾರಿಕವಲ್ಲ. ಮನುಷ್ಯನಿಗೆ ಸಮಕಾಲೀನ ಎಂಬುದೊಂದು ಇರುವ ವಾಸ್ತವ. ಅದರ ಹಿಂದೆ ಅಪಾರವಾದ ಭೂತಕಾಲ, ಮುಂದೆ ಅಷ್ಟೇ ಅಪಾರವಾದ ಭವಿಷ್ಯ ಕಾಲವೂ ಇದೆ. ಅವನಿಗಿರುವ ಅಲ್ಪಸ್ವಲ್ಪ ಅರಿವು ಭೂತಕಾಲದ್ದೇ ಹೊರತು, 'ನಿನ್ನೆ'ಯದೇ ಹೊರತು 'ನಾಳೆ'ಯದ್ದು ಅಲ್ಲ.

ಹೀಗಿರುವಾಗ ಭೂತ ಭವಿಷ್ಯಗಳೆರಡೂ ಮುಖ್ಯವೇ ಆದರೂ, ಹೀಗೆ ಹೇಳಬಹುದೆಂದು ತೋರುತ್ತದೆ. ಬೌದ್ಧಿಕವಾಗಿ ಮನುಷ್ಯನಿಗೆ ನಾಳೆ ಮುಖ್ಯ, ಭಾವನಾತ್ಮಕವಾಗಿ ನಿನ್ನೆ ಮುಖ್ಯ. ನಾಳೆ ಎಂಬುದು ಅವನ ಐಹಿಕ / ಬೌದ್ಧಿಕ ಪ್ರಪಂಚದ್ದು; ನಿನ್ನೆ ಎಂಬುದು ಅವನ ಆಧ್ಯಾತ್ಮಿಕ / ಭಾವನಾತ್ಮಕ ಪ್ರಪಂಚದ್ದು. ನಿನ್ನೆಯ ಬಗ್ಗೆ ಅವನು ತೋರುವ ಪ್ರತಿಕ್ರಿಯೆ ಅದಕ್ಕೆ ಅವನು ಸಲ್ಲಿಸುವ ಕೃತಜ್ಞತೆಯ ಪ್ರತೀಕ. ನಿನ್ನೆ ಬದುಕಿದ್ದುದು ನಿಜ. ಅಷ್ಟರಮಟ್ಟಿಗೆ ಅದಕ್ಕೆ ಅವನು ಕೃತಜ್ಞ. ಅದನ್ನು ಒಂದು ವೇಳೆ ಮಾತಿನಲ್ಲಿ ಉದಾಸೀನ ಮಾಡಿದರೂ ನಷ್ಟವಿಲ್ಲ. ನಾಳೆ? ಬದುಕಿರಬಹುದು; ಅದಕ್ಕಾಗಿ ಅದನ್ನು ಆಶ್ರಯಿಸಬೇಕು, ವೈಭವೀಕರಿಸಬೇಕು, ಹೊಗಳಬೇಕು. ಒಂದು ಅವನನ್ನು ಸಾಕಿರುವ ಯಜಮಾನ, ಇನ್ನೊಂದು ಅವನನ್ನು ಸಾಕಲಿರುವ ಯಜಮಾನ.

ಮದುವೆಯ ದಿನದ ಬೆಳಗಿನ ಧಾರಾಮುಹೂರ್ತ, ಸಂಜೆಯ ಆರತಕ್ಷತೆಗಳು, ಸರಿಯಾಗಿ ವಿಶ್ಲೇಷಿಸಿದರೆ ಮನುಷ್ಯನ ಜೀವನ ದೃಷ್ಟಿ ಕೋನದ ಸಂಕೇತಗಳಾಗಿ ನಿಲ್ಲುತ್ತವೆ; ಒಂದು 'ನಿನ್ನೆ'ಯ ಸಂಕೇತ, ಇನ್ನೊಂದು 'ನಾಳೆ'ಯ ಸಂಕೇತ.

ಮೇಲೆ ಹೇಳಿದ ಪ್ರಮೇಯದ ಬೆಳಕಿನಲ್ಲಿ ಹಲವು ಸಂಗತಿಗಳು ಅರ್ಥವಂತಿಕೆಯನ್ನು ಪಡೆಯುತ್ತವೆ.

## 9

ಒಂದು ಶೋಧ ಅಥವಾ ಅಭಿಜ್ಞೆ (Identification) ಹೇಗೆ ಇಡೀ ಕೃತಿಯನ್ನು ದೀಪ್ತಗೊಳಿಸುತ್ತದೆ, ವ್ಯಕ್ತಿಯ ಬದುಕನ್ನು ಅದರ ಒಳವಿವರಗಳನ್ನು ಗ್ರಹಿಸಲು ಸಹಾಯ ಮಾಡುತ್ತದೆಯೆಂಬುದಕ್ಕೆ ಪಂಪ ಮತ್ತು ಅಲ್ಲಮರ ಬಗೆಗಿನ ಕೆಲವು ಅಂಶಗಳನ್ನು ನೋಡಬಹುದು. ಸಾಮಾನ್ಯ ಕವಿಯ ಕೃತಿ ಅವನ ಕೃತಿ ಮಾತ್ರ; ಆದರೆ ಮಹಾಕವಿಯ ಮಹಾಕಾವ್ಯವು ಆ ಕವಿಯ ಕೃತಿ ಮಾತ್ರವಲ್ಲದೆ, ಒಂದು ರೀತಿಯಲ್ಲಿ ಅವನ ಯುಗದ ಪರೋಕ್ಷ ಆತ್ಮಕಥೆಯಾಗಿ ಪರಿಣಮಿಸಿರಲೂ ಸಾಧ್ಯ. ಮಹಾಕವಿ ಪಂಪನ ಪಂಪಭಾರತದ ಅಧ್ಯಯನವು ಅವನ ಕೃತಿಗಷ್ಟೇ ಸೀಮಿತವಾಗಿದ್ದರೆ ಅದರ ಪ್ರಾಮುಖ್ಯ ಸರಿಯಾಗಿ ಗ್ರಹಿಕೆಯಾಗದಿರಬಹುದು. ಅವನ ಕಾಲದ, ಎಂದರೆ ಹತ್ತನೆಯ ಶತಮಾನದ ಮತ್ತು ಅದರ ಹಿಂದಿನ ಮುಂದಿನ ಶತಮಾನಗಳ ಬದುಕಿನ ನಿಜ ಘಟನೆಗಳನ್ನು ದಾಖಲಿಸುವ ಶಾಸನಗಳನ್ನು ಗಮನಿಸಿದರೆ ಒಂದು ಅಂಶ ಸ್ಪಷ್ಟವಾಗುತ್ತದೆ : ಅವನ ಕಾಲದ ಬಹುಮುಖ್ಯ ಸಾಮಾಜಿಕ ಮೌಲ್ಯಗಳು ಶೌರ್ಯ ಮತ್ತು ತ್ಯಾಗ ಅಥವಾ 'ಬೀರ' ಮತ್ತು 'ಚಾಗ'. ಈ ಎರಡು ಮೌಲ್ಯಗಳ ಪ್ರಸ್ತಾಪ ಅಂದಿನ ಶಾಸನ ಪಾಠಗಳಲ್ಲಿ ಮಾತ್ರವಲ್ಲ, ಅವುಗಳ ಮೇಲಿನ ಶಿಲ್ಪಗಳಿಂದಲೂ ಧ್ವನಿತವಾಗುತ್ತದೆ. ಪ್ರಾಣವನ್ನು ಲೆಕ್ಕಿಸದೆ ಹೋರಾಡಬೇಕು (ಇದೇ 'ವೀರ' ಅಥವಾ 'ಬೀರ'), ಗಳಿಸಿದ್ದರಲ್ಲಿ ಉದಾರವಾಗಿ ದಾನಮಾಡಬೇಕು ('ತ್ಯಾಗ' ಅಥವಾ 'ಚಾಗ') : ಈ ಮೌಲ್ಯಗಳು ಅಂದಿನ ಇಡೀ ಬದುಕನ್ನು ವ್ಯಾಪಿಸಿದ್ದು ಅವುಗಳನ್ನು ಬಿಟ್ಟು ಬದುಕಿದವರು ಸಾಮಾಜಿಕ ಅವಹೇಳನಕ್ಕೆ ಗುರಿಯಾಗುತ್ತಿದ್ದರು. ಈ ಮೌಲ್ಯಗಳು ಪಂಪನ ಕಾಲದ ಯುಗಧರ್ಮದ (Ethos) ಪ್ರಮುಖ ಲಕ್ಷಣವಾಗಿದ್ದು, ಪಂಪನ ಪಂಪಭಾರತವು ಪೌರಾಣಿಕ ಕತೆಯ ಮಾಧ್ಯಮದ ಮೂಲಕ ತನ್ನ ಕಾಲದ ಯುಗಧರ್ಮದ ಅಭಿವ್ಯಕ್ತಿಯಾಗಿರುವುದನ್ನು ಗಮನಿಸಬಹುದು. ಮಹಾಭಾರತದ ಪ್ರಮುಖ ಪಾತ್ರಗಳು ಒಂದೊಂದು ಮೌಲ್ಯದ ಸಂಕೇತವಾಗಿರುವುದನ್ನು ಪಂಪನು ತನ್ನ ಒಂದು ಪದ್ಯದಲ್ಲಿ ಸೂಚಿಸುವಾಗ, "ಚಲದೊಳ್ ದುರ್ಯೋಧನಂ ನನ್ನಿಯೊಳ್ ಇನತನಯಂ...." ಎಂದು ದುರ್ಯೋಧನ, ಕರ್ಣ - ಕಳಂಕ ಸಹಿತ ಪಾತ್ರಗಳೆಂದೇ ಒಟ್ಟಾರೆ ಭಾವಿಸಲಾಗಿರುವ ಆ ಎರಡು ಪಾತ್ರಗಳ ಹೆಸರುಗಳನ್ನು ಉಳಿದ ಪಾತ್ರಗಳಿಗಿಂತ ಮೇಲಿರಿಸುವುದಕ್ಕೆ ಅವನ ಕಾಲದ ಯುಗಧರ್ಮವೇ ಪ್ರಧಾನ ಕಾರಣ. ಒಬ್ಬನು ಶೌರ್ಯಕ್ಕೆ ("ಇಜಿಯಲ್") ಇನ್ನೊಬ್ಬನು 'ನನ್ನಿ' ಅಥವಾ ಸತ್ಯಕ್ಕೆ ಅರ್ಥಾತ್ ಸತ್ಯವಾಕ್ಯಕ್ಕೆ, ಅರ್ಥಾತ್ ತನ್ನನ್ನು ಸಾಕಿದ ತನ್ನ ಒಡೆಯನಿಗೆ ಕೊಟ್ಟ ಮಾತನ್ನು ಉಳಿಸಿಕೊಂಡು, ತನಗೆ ಕೃಷ್ಣನಿಂದ ರಾಜ್ಯದ ಚಕ್ರವರ್ತಿಯಾಗಲು ಆಹ್ವಾನ ಬಂದರೂ ಅದನ್ನು ತಿರಸ್ಕರಿಸಿ ಆ ಅಯಾಚಿತ ಸ್ಥಾನವನ್ನೂ ಕೊನೆಯಲ್ಲಿ ತನ್ನ ಬದುಕನ್ನೇ ಒಡೆಯನಿಗೆ ಅರ್ಪಿಸಿದ 'ಚಾಗ'ಕ್ಕೆ ("ಈಯಲ್") ಸಂಕೇತಗಳು. ದುರ್ಯೋಧನನು 'ಬೀರ'ಕ್ಕೆ, ಕರ್ಣನು 'ಚಾಗ'ಕ್ಕೆ ಸಂಕೇತಗಳು. ಅವರು 'ಪಂಪಭಾರತ'ವು ತನ್ನ ಕೈ ಚಾಚಿ ಎಲ್ಲ ಪಾತ್ರಗಳಿಗಿಂತ ಮೇಲೆತ್ತಿ ಹಿಡಿದು ತೋರಿಸುತ್ತಿರುವ ಪಾತ್ರಗಳಾಗಿದ್ದರೆ ಅದಕ್ಕೆ ಕಾರಣ

ಸ್ಪಷ್ಟವಾಗಿದೆ. ಅದರಲ್ಲೂ ಕರ್ಣ ಮುಖ್ಯನಾಗಿದ್ದಾನೆ. ಅವನು 'ಚಾಗ' 'ವೀರ' ಎರಡಕ್ಕೂ ಸಮಗ್ರ ಸಂಕೇತ. ("ಬೇಡಿಂ ಓಡಿಂ ಇದು ಚಾಗದ ಬೀರದ ಮಾತು ಕರ್ಣನಾ"; "ಭಾರತದೊಳ್.... ಒಂದೆ ಚಿತ್ತದಿಂ ನೆನೆವೊಡೆ ಕರ್ಣನಂ ನೆನೆಯ"). ಈ ಕೃತಿಯ ಇತರ ಪಾತ್ರಗಳನ್ನು ಅಮುಖ್ಯವೆಂದೇನೂ ಭಾವಿಸಬೇಕಾಗಿಲ್ಲ.

ಪಂಪನ ತಮ್ಮ ಜಿನವಲ್ಲಭನ ಕುರಿಕ್ಯಾಲ ಶಾಸನ ಶೋಧದಿಂದ ಪಂಪನ ತಾಯಿ ಧಾರವಾಡ ಜಿಲ್ಲೆಯ ಅಣ್ಣಿಗೆರೆಯವಳೆಂದಾಗಿ, ಅವನ ಜನನ ಅಣ್ಣಿಗೆರೆಯಲ್ಲಿ ಮತ್ತು ಬಾಲ್ಯ ಶಿಕ್ಷಣವು ಬಹುತೇಕ ಆ ಪ್ರದೇಶದಲ್ಲೇ ನಡೆದಿರಬೇಕೆಂಬುದು ಸಿದ್ಧವಾದಂತಾಯಿತು. ಇಲ್ಲದಿದ್ದರೆ ಅವನು 'ಸಾಜದ ಪುಲಿಗೆರೆಯ ತಿರುಳ ಕನ್ನಡ'ವು ತನ್ನ ಕಾವ್ಯಭಾಷೆ ಎಂದು ಹೇಳಿಕೊಳ್ಳುತ್ತಿರಲಿಲ್ಲ (ಪುಲಿಗೆರೆ = ಲಕ್ಷ್ಮೇಶ್ವರ). ಪಕ್ಕದ ನಾಡಾಗಿದ್ದ ಬನವಾಸಿಗೆ ಅವನು ಪ್ರವಾಸಿಯಾಗಿ ಹೋಗಿ ಅಲ್ಲಿನ ಚೆಲುವನ್ನು ಆಸ್ವಾದಿಸಿದವನೇ ಹೊರತು ಬನವಾಸಿ ಅವನ ಹುಟ್ಟೂರಲ್ಲ ಎಂಬುದು ಖಚಿತವಾಯಿತು. ಅವನ ಹೆಸರಿನ ಕೆರೆ ಕುರಿಕ್ಯಾಲ ಊರಿನ ಸಮೀಪ ಇರುವುದು ಅಭಿಮಾನದ ಸಂಗತಿ (ಕುರಿಕ್ಯಾಲವು ಆಂಧ್ರದ ಕರೀಂ ನಗರ ಜಿಲ್ಲೆಯಲ್ಲಿದೆ.)

ನಾಗವಾಸ ಪದದ ಅರ್ಥವು ಸ್ಪಷ್ಟವಾಗಿ ಆ ಚಿಕ್ಕ ಸಂಗತಿಯು ಅಲ್ಲಮನ ಬದುಕನ್ನು, ಅದರಲ್ಲೂ ಅವನ ಬದುಕಿನ ಪೂರ್ವಾರ್ಧವನ್ನು ಪುನಾರಚಿಸಲು ಸಹಾಯಮಾಡಿತು. ಅವನ ಬದುಕಿನ ಬಗ್ಗೆ ಅತ್ಯಂತ ಪ್ರಾಚೀನ ದಾಖಲೆ ಎನ್ನಬಹುದಾದ ಹರಿಹರನ ಪ್ರಭುದೇವರ ರಗಳೆಯ ನಿರೂಪಣೆಯಂತೆ ಅವನು ಮುರಜವಾದ್ಯವನ್ನು ನುಡಿಸುತ್ತಿದ್ದ ಗೊಗ್ಗೇಶ್ವರ ದೇವಾಲಯದಲ್ಲಿ ಭೇಟಿ ಮಾಡಿದ ಶ್ರೀಮಂತನಾದ ಧನದತ್ತನ ಮಗಳು ಕಾಮಲತೆಯಲ್ಲಿ ಅನುರಕ್ತನಾಗಿ, ಅವಳೊಡನೆ ಕೆಲಕಾಲ ಭೋಗಜೀವನ ನಡೆಯಿಸಿದನು. ಅವಳು ಅಕಾಲ ಮೃತ್ಯುವಶಳಾದುದೇ ಅವನ ವೈರಾಗ್ಯಕ್ಕೆ ಪ್ರಚೋದನೆಯಾಯಿತು. ಹರಿಹರನ ಪ್ರಕಾರ ಅಲ್ಲಮನ ತಂದೆ "ನಾಗವಾಸಾಧಿಪತಿ" : ಅವನ ಹೆಸರು, ಉಳಿದ ವಿವರಗಳು ಹರಿಹರನಿಂದ ಲಭ್ಯವಿಲ್ಲ.

"ನಾಗವಾಸ" ಎಂಬುದು ದೇವಾಲಯಗಳ ದೇವದಾಸಿಯರ ಸಮೂಹ ಮತ್ತು ಅವರ ವಾಸದ ಕೇರಿಯನ್ನು ಸೂಚಿಸುತ್ತದೆಯೆಂಬುದು ಅದರ ಹಲವು ಪ್ರಯೋಗಗಳಿಂದ ಸಿದ್ಧವಾಗುತ್ತದೆ. ಆ ಅರ್ಥವು ಅಲ್ಲಮನ ಬದುಕಿನ ಮಂದಿರದ ಒಂದು ಗಟ್ಟಿ ಇಟ್ಟಿಗೆಯನ್ನು ತೋರಿದ್ದರಿಂದ ಒಂದು ಇಟ್ಟಿಗೆ ಇನ್ನೊಂದನ್ನು ಆ ಇನ್ನೊಂದು ಮತ್ತೊಂದನ್ನು ಗುರುತಿಸಲು, ಅವುಗಳನ್ನು ಒಟ್ಟಂದವಾಗಿ ಸೇರಿಸಲು ನೆಪವಾಯಿತು.

ಅವು ಹೀಗಿವೆ :

1. ಬಳ್ಳಿಗಾವೆಯ ಹಲವು ದೇವಾಲಯಗಳ ಕಲಾವಿದೆಯರೂ ಆಗಿದ್ದ ದೇವದಾಸಿಯರ ಮೇಲ್ವಿಚಾರಣೆಯ 'ನಾಗವಾಸಾಧಿಪತಿ'ಯ (ಇವನನ್ನು ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ "ಗಣಿಕಾಧ್ಯಕ್ಷ"ನೆಂದು ಕರೆದಿದೆ) ಮಗನಾಗಿದ್ದ ಅಲ್ಲಮನಿಗೆ ಸಂಗೀತ ಕಲೆ

ರಕ್ತಗತವಾಗಿದ್ದಿತು. ಅವನು ದೇವಾಲಯದಲ್ಲಿ ಮೃದಂಗ ನುಡಿಸುತ್ತಿದ್ದುದಕ್ಕೆ ಅದು ವಿವರಣೆಯಾಗಿದೆ.

2. ಕಾಮಲತೆಯು ಧನದತ್ತನ ಮಗಳು. ಹೆಸರೇ ಹೇಳುವಂತೆ ಧನದತ್ತ ಒಬ್ಬ ಶ್ರೀಮಂತ; ಬಹುಶಃ ವರ್ತಕ. ಹರಿಹರ ವರ್ಣಿಸಿರುವುದನ್ನು ನೋಡಿದರೆ 'ಅರಮನೆ' ಮತ್ತು ಸೇವಕಿಯರನ್ನು ಹೊಂದಿದ್ದ ಒಬ್ಬ ದೊಡ್ಡ ಶ್ರೀಮಂತ. ಅಲ್ಲಮ ಸಾಮಾನ್ಯ ಕುಟುಂಬದವನು.

3. ದೇವದಾಸಿಯರು ಎಷ್ಟೇ ಆಗಲಿ ಸಾಮಾಜಿಕವಾಗಿ ಕೆಳವರ್ಗದವರು, ಅವರ ಮುಖ್ಯಸ್ಥನೂ ಬಹುಶಃ ಅದೇ ವರ್ಗದವನು. ಧನದತ್ತ, ಅವನ ಮಗಳು ಕಾಮಲತೆ ವೈಶ್ಯವರ್ಗದವರು - ಅದನ್ನು ಖಚಿತವಾಗಿ ಹೇಳಲಾಗದಿದ್ದರೂ ಅವರು ಅಲ್ಲಮನಿಗಿಂತ ಸಾಮಾಜಿಕವಾಗಿ ಆರ್ಥಿಕವಾಗಿ ಮೇಲ್ವರ್ಗದವರು.

4. 'ಗೊಗ್ಗೇಶ್ವರ' ದೇವಾಲಯದಲ್ಲಿ ದೇವದಾಸಿಯರ ನರ್ತನಕ್ಕೆ ಹಿನ್ನೆಲೆಯಾಗಿ ಮೃದಂಗ ನುಡಿಸುತ್ತಿದ್ದ ಯುವಕ ಅಲ್ಲಮನ ಕಣ್ಣಿಗೆ ದೇವರ ದರ್ಶನಕ್ಕೆ ಬಂದಿದ್ದ ಯುವತಿ ಕಾಮಲತೆ ಬಿದ್ದು, ಅವರಿಬ್ಬರೂ ಪ್ರೇಮಸಾಗರಕ್ಕೂ ಬಿದ್ದರು. ಅವರದು ಹಿರಿಯರು ಏರ್ಪಾಟು ಮಾಡಿದ ವ್ಯವಸ್ಥಿತ ವಿವಾಹವಲ್ಲ, ಪ್ರಣಯ ವಿವಾಹ ಅಥವಾ ಅನೌಪಚಾರಿಕ ಗೃಹಸ್ಥ ಜೀವನ (ಅವರ ಶಾಸ್ತ್ರೋಕ್ತ ವಿವಾಹವನ್ನು ಅಲ್ಲಮ ಉಲ್ಲೇಖಿಸದಿರುವುದು ಗಮನಾರ್ಹ).

5. ಗಮನಿಸಬೇಕು : ಅಲ್ಲಮ, ಕಾಮಲತೆಯರು ಒಂದು ಜಾತಿಯವರಲ್ಲ, ಆರ್ಥಿಕ ಸಮಾನರಲ್ಲ. ಆ ಎರಡೂ ದೃಷ್ಟಿಗಳಿಂದ ಅಲ್ಲಮ ಕೆಳಗಿನ ಸ್ತರದವನು, ಕಾಮಲತೆ ಮೇಲಿನ ಸ್ತರದವಳು. ಅವರ ಸಂಬಂಧ ಭಾರತೀಯ ಪರಂಪರೆಯ ಪರಿಭಾಷೆಯಲ್ಲಿ ಹೇಳುವುದಾದರೆ ನಿಷೇಧಿತ ಪ್ರತಿಲೋಮ ವಿವಾಹ (ಮೇಲು ಜಾತಿಯ ಗಂಡು ಅನಿವಾರ್ಯವಾದರೆ ಕೆಳಜಾತಿಯ ಹೆಣ್ಣನ್ನು ಕೈಹಿಡಿಯಬಹುದು. ಇದು 'ಅನುಲೋಮ ವಿವಾಹ')

6. ಒಟ್ಟಾರೆ ಅವರಿಬ್ಬರ ಗಾರ್ಹಸ್ಥ್ಯ ಜೀವನವು ಮೇಲುವರ್ಗದ ಜನರಿಂದ ಬಹಿಷ್ಕೃತವಾಗಿದ್ದಿತೆಂದು ಅನುಮಾನಿಸಲು ಎಲ್ಲ ಕಾರಣಗಳಿವೆ. ಇಬ್ಬರೂ ನೊಂದರು; ಆ ನೋವೇ ಅವರನ್ನು ಇನ್ನೂ ಪರಸ್ಪರ ಹತ್ತಿರಕ್ಕೆ ತಂದಿತು.

7. ದೇವದಾಸಿಯರ ಪ್ರಪಂಚಕ್ಕೆ, ಅದಕ್ಕೆ ಸಮೀಪದ ಬದುಕಿನ ವಲಯಕ್ಕೆ ಸೇರಿದ ಅಲ್ಲಮನಿಗಿಂತ ಸಾಮಾಜಿಕ ಕಟ್ಟುಪಾಡುಗಳಿಗೆ, ಸಾಂಪ್ರದಾಯಕ ಶ್ರೀಮಂತ ವಲಯಕ್ಕೆ ಸೇರಿ ಸಾಮಾನ್ಯರ ಬದುಕಿನಿಂದ ಒಟ್ಟಾರೆ ದೂರವಾಗಿದ್ದ, ಹನ್ನೆರಡನೆಯ ಶತಮಾನಕ್ಕೆ ಸೇರಿದ್ದ ಮುಗ್ಧ ಕಾಮಲತೆ ಆ ಬಹಿಷ್ಕಾರದಿಂದ ಹೆಚ್ಚು ಕಂಗಾಲಾಗಿರಬೇಕು,

ದಿಕ್ಕೆಟ್ಟಿರಬೇಕು. ಅವಳ ಅಕಾಲಿಕ ಸಾವಿನ ನಿಮಿತ್ತಗಳಲ್ಲಿ ಅದೂ ಒಂದು ಆಗಿದ್ದರೂ ಆಶ್ಚರ್ಯವಿಲ್ಲ.

8. ಯೌವನದಲ್ಲಿದ್ದ ಅಲ್ಲಮ ಇನ್ನೊಂದು ಮದುವೆ ಆಗಬಹುದಿತ್ತು. ಅಥವಾ ಇನ್ನೊಂದು ಹೆಣ್ಣಿನ ಜೊತೆ ಬಾಳು ಸಾಗಿಸಲು ಭಾರತೀಯ ಸಾಮಾಜಿಕ ಸನ್ನಿವೇಶ ಅಡ್ಡಿ ಬರುತ್ತಿರಲಿಲ್ಲ. ಆ ಬಗ್ಗೆ ಅವನು ಯೋಚನೆ ಮಾಡುವ ಸ್ಥಿತಿಯಲ್ಲಿರಲಿಲ್ಲ. ಪತ್ನಿಯ ಸಾವಿನ ದುಃಖದ ತೀವ್ರತೆಯಲ್ಲಿ ಬೇಯುತ್ತಿದ್ದ ಅವನಿಗೆ ಭೂಗತ ದೇವಾಲಯದಲ್ಲಿ ಅನಿಮಿಷನ ಕಂಕಾಲದಿಂದ (ಆ ದೇವಾಲಯವನ್ನು ನಾನು ಗುರುತಿಸಿದ್ದೇನೆ; ಅದು ಶಿಕಾರಿಪುರ ತಾಲೂಕಿನ ಬಳ್ಳಿಗಾವೆ ಪಕ್ಕದ ಮಾಳಗೊಂಡನ ಕೊಪ್ಪ ಊರಿನ ಬಳಿಯ 'ಅನಿಮಿಷಾರಣ್ಯ' ಎಂಬ ಬಿಲ್ವ ತೋಪಿನಲ್ಲಿದೆ) ಲಭ್ಯವಾದ ಇಷ್ಟಲಿಂಗವು ಕಾಮಲತೆಯ ವ್ಯಾಮೋಹವನ್ನು ಭಗವಂತನ ಮೇಲಿನ 'ಪರಮಪ್ರೇಮ ರೂಪಾ' ಆದ ಭಕ್ತಿಯಾಗಿ ರೂಪಾಂತರಗೊಳಿಸುವ ಸಾಧನೆಗೆ ನಿಮಿತ್ತವಾಯಿತು.

9. ಕೈಯಲ್ಲಿ ಇಷ್ಟಲಿಂಗವನ್ನು ಹಿಡಿದು 'ಜಂಗಮ'ನಾಗಿ ಭಾರತಾದ್ಯಂತ ಹುಚ್ಚನಂತೆ ತಿರುಗಿದ. ಅಲ್ಲಮನನ್ನು ಕಾಮಲತೆಯ ನೆನಪು ಚೆಲುವಾಗಿ, ಕಾಮವಾಗಿ ಕಾಡಿತು; ಅದು ಅವನ ಸಾಧನೆಯನ್ನು ತೀವ್ರಗೊಳಿಸಲು ಸಾಧನವೂ ಆಯಿತು (ಅವನ ವಚನಗಳಲ್ಲಿ ಅದಕ್ಕೆ ಸ್ಪಷ್ಟ ಸೂಚನೆಗಳಿವೆ). ಆ ಸಾಧನೆಯು ಅವನನ್ನು ಪಕ್ವಗೊಳಿಸಿತು. ಸುಖದುಃಖಗಳನ್ನು ಸಮಾನವಾಗಿ ಸ್ವೀಕರಿಸುವ ಸ್ಥಿತಪ್ರಜ್ಞನಾದ. ಮುಂದೆ ಆಧ್ಯಾತ್ಮಿಕವಾಗಿ ಬೆಳೆದು, ಚನ್ನಬಸವಣ್ಣನ ಮಾತಿನಲ್ಲಿ ಹೇಳುವುದಾದರೆ 'ಅರಿವಿನ ಪರಮ ಸೀಮೆ' ಯಾದ, ಎಂದರೆ ಆಧ್ಯಾತ್ಮಿಕ ಜ್ಞಾನದ ತುತ್ತ ತುದಿಗೇರಿ ಶಿವಾದ್ವೈತ ಸ್ಥಿತಿಯನ್ನು ತಲುಪಿ, ಹನ್ನೆರಡನೆಯ ಶತಮಾನದ ಭಾರತದ ಶ್ರೇಷ್ಠ ಸಂತರಲ್ಲಿ ಒಬ್ಬನೆನ್ನಿಸಿಕೊಂಡ.

ಸಂಶೋಧನೆಯನ್ನು ಮಾಹಿತ್ಯಾತ್ಮಕ, ವಿಶ್ಲೇಷಣಾತ್ಮಕ, ಸಂಶ್ಲೇಷಣಾತ್ಮಕ, ವಿಮರ್ಶಾತ್ಮಕ, ಸಂಖ್ಯಾಶಾಸ್ತ್ರಾತ್ಮಕ ಇತ್ಯಾದಿಯಾಗಿ ಗೆರೆ ಎಳೆದು ಬೇರ್ಪಡಿಸಲಾಗದ ಘಟಕಗಳಾಗಿ ವರ್ಗೀಕರಿಸುವುದಾದರೆ ಮೇಲಿನದು ವ್ಯಾಖ್ಯಾನಾತ್ಮಕ (Interpretative) ಎಂದು ಕರೆಯಿಸಿಕೊಳ್ಳುತ್ತದೆ. ಮೇಲಿನ ಒಂದೊಂದು ಹೇಳಿಕೆಗೂ ಖಚಿತ ಪ್ರತ್ಯೇಕ ಆಧಾರವಿಲ್ಲದಿದ್ದರೂ, ಒಂದು propositition, ಒಂದು ಪ್ರಮೇಯವು (hypothesis) ಇನ್ನೊಂದಕ್ಕೆ, ಅದು ಸಹಜವಾಗಿಯೇ ತನ್ನಿಂದ ಮೂಡಿ ಬರುವ ಇನ್ನೊಂದಕ್ಕೆ ಹಾಗೆಯೇ ಆ ಇನ್ನೊಂದು ಮತ್ತೊಂದಕ್ಕೆ ತಾರ್ಕಿಕವಾಗಿ ಜನ್ಮ ನೀಡುತ್ತ ಹೋಗುತ್ತದೆ. ಆ ಎಲ್ಲದರ ಒಟ್ಟು ಚಿತ್ರದಿಂದ ಸಿದ್ಧವಾಗುವ ಅಲ್ಲಮನ ಬದುಕಿನ ಪೂರ್ವಾರ್ಧದ ಮಂದಿರವು ನಿಂತಿರುವುದು "ನಾಗವಾಸ" ಪದದ ಅರ್ಥದ ಮೇಲಾದರೂ ಯಾವುದೂ ಕೇವಲ ಕಾಲ್ಪನಿಕ ಲೋಕದಿಂದ ಎಳೆ ತಂದುದಲ್ಲ. ಅಂತಹ ಊಹಾತ್ಮಕ ಬದುಕಿನ ಚಿತ್ರಣವು ಅವನ ವಚನಗಳ ಸೂಕ್ಷ್ಮ ಅಧ್ಯಯನದಿಂದ ಮೂಡುವ ಅಲ್ಲಮನ ಒಳ ಪ್ರಪಂಚದ ಚಿತ್ರಣದ

ಜೊತೆ ಒಂದು ಸಹಜ ತರ್ಕಬದ್ಧ ಸಂಬಂಧವನ್ನು ಪಡೆದಿದೆ. ಅವನು ಸಾಧಕನಾದ ಮೇಲೆ ಈ ಲೌಕಿಕ ಪ್ರಪಂಚವು ಅವನ ಒಳಕ್ಕೆ ಬಗೆಬಗೆಯಾಗಿ ನುಗ್ಗಲು ಯತ್ನಿಸಿದರೂ ಅದನ್ನು ದೂರ ತಳ್ಳುತ್ತಲೇ ಬೇರೊಂದು ಲೋಕಕ್ಕೆ, ಚಿಲ್ಲೋಕಕ್ಕೆ ತನ್ನ ಪಯಣವನ್ನು ಬೆಳಸುತ್ತಲೇ ನಡೆದನು. ಲೋಕದ ಮಧ್ಯೆ ಬದುಕಿದ್ದರೂ, ಲೋಕದಿಂದ ದೂರವಾದನು; ಆದರೆ "ಪದ್ಮಪತ್ರ-ಮಿವಾಂಭಸಿ" ಎನ್ನುವಂತೆ ಸಂಗಿಗಳ ಮಧ್ಯೆಯೇ ನಿಸ್ಸಂಗಿಯಾಗಿ ಬದುಕಿದನು.

ಇದು ಅವನ ನಡೆಯಿಂದಲೂ ಗೊತ್ತಾಗುತ್ತದೆ. ವ್ಯವಸಾಯ, ತಟಾಕ ನಿರ್ಮಾಣದಂತಹ ಲೌಕಿಕ ಕಾರ್ಯಗಳಲ್ಲಿ ನಿರತರಾಗಿದ್ದ ಗೊಗ್ಗಯ್ಯ, ಸಿದ್ಧರಾಮರನ್ನು ಅವುಗಳನ್ನು ತ್ಯಜಿಸಿ, ಅಥವಾ ಅಂತಹ ಕೆಲಸಗಳಲ್ಲಿ ನಿರತರಾಗಿರುವಂತೆಯೆ ಆಧ್ಯಾತ್ಮಿಕ ಸಾಧಕರಾಗಿ ಎಂದು ಎಚ್ಚರಿಸಿದುದು ಪ್ರಸಿದ್ಧ ವಿಷಯ. ಜಗತ್ತಿನ ನೋವಿನ ಬಗ್ಗೆ ತೀವ್ರವಾಗಿ ಸ್ಪಂದಿಸುತ್ತಿದ್ದ ಅವನು ಅಣ್ಣನನ್ನು ಕಳೆದುಕೊಂಡು ತೀವ್ರ ಶೋಕದಲ್ಲಿ ಮುಳುಗಿದ್ದ ಮುಕ್ತಾಯಕ್ಕನನ್ನು ಸಮಾಧಾನಪಡಿಸಲು ಗದಗ ಪ್ರದೇಶದ ಲಕ್ಕುಂಡಿಗೆ ಬಂದಾಗ ನಡೆದ ಚರ್ಚೆಯು, ಹನ್ನೆರಡನೆಯ ಶತಮಾನದ ಅತ್ಯಂತ ಬೌದ್ಧಿಕ ಹಾಗೂ ತೀವ್ರ ಚರ್ಚೆಯ ಚಕಮಕಿ ಸನ್ನಿವೇಶಗಳಲ್ಲಿ ಅಗ್ರಗಣ್ಯವಾದುದು. ಮುಕ್ತಾಯಕ್ಕನನ್ನು ಸಮಾಧಾನಪಡಿಸಲು ನಮಗೆ ತಿಳಿದಿರುವಂತೆ ಸತ್ಯಕ್ಕ, ಬಸವಣ್ಣ ಇಬ್ಬರೂ ಗದಗ ಪ್ರದೇಶಕ್ಕೆ (ಸಮೀಪದ) ಮಸಳೆಕಲ್ಲಿಗೆ (ಅಥವಾ ಲಕ್ಕುಂಡಿಗೆ?) ಬಂದರು. ಮುಕ್ತಾಯಕ್ಕನ ಈ ಮಾತುಗಳನ್ನು ಗಮನಿಸಿ

ಸುಮ್ಮನೇಕೆ ದಿನ ಕಳೆವಿರಿ,
ಸುಮ್ಮನೇಕೆ ಹೊತ್ತುಗಳೆವಿರಿ ಸ್ವಾಮಿಗಳಿರಾ?
ಮಾಡ ಬನ್ನಿ ದಿನ ಶಿವರಾತ್ರಿಯ, ಕೇಳ ಬನ್ನಿ ಶಿವಾನುಭವವ,
**ನೋಡ ಬನ್ನಿ ಅಜಗಣ್ಣನಿರವ ಬಸವಣ್ಣ ತಂದೆ**

(ಸರ್ಕಾರದ ಸಂಪುಟ 5. ಪು. 281)

ಇದನ್ನೂ ಗಮನಿಸಿ (5. ಪು. 274) "..........ಈ ಅಜಗಣ್ಣ ತಂದೆಯನಗಲಿ ನಾನೆಂತು ಸೈರಿಸುವೆನೆಲೆ ಸತ್ಯಕ್ಕ ತಾಯೆ ಅವ್ವಾ".

ಸತ್ಯಕ್ಕನೂ ಮುಕ್ತಾಯಕ್ಕನ ಜೊತೆ ಮಾತನಾಡಿದುದನ್ನು ತನ್ನ ಒಂದು ವಚನದಲ್ಲಿ ಪುಷ್ಟೀಕರಿಸುತ್ತಾಳೆ ("ಈ ಮುಕ್ತಾಯಕ್ಕಗಳ ಕಕ್ಕುಲತೆಯ ಶಂಭುಜಕ್ಕೇಶ್ವರನ ಶರಣ-ರೊಪ್ಪರಯ್ಯಾ")

ಮುಕ್ತಾಯಕ್ಕನು ತನ್ನನ್ನು ಸಮಾಧಾನಪಡಿಸಬಂದವರಲ್ಲಿ ಅಲ್ಲಮನ ಜೊತೆ ಚರ್ಚೆಗೆ, ಸಂವಾದಕ್ಕೆ, ವಾದಕ್ಕೆ ಇಳಿದಂತೆ ಉಳಿದವರ ಜೊತೆ ಇಳಿದಂತೆ ಕಾಣುವುದಿಲ್ಲ. ಅವರ ಜೊತೆ ಲೋಕಾಭಿರಾಮವಾಗಿ ಮಾತನಾಡಿ ಅವರ ಪ್ರೀತಿಪೂರ್ವಕ ಸಮಾಧಾನದ ಮಾತುಗಳನ್ನು ಗೌರವದಿಂದ ಆಲಿಸಿದಳು ಎಂಬ ಊಹೆ ಸ್ವಾಭಾವಿಕವಾದುದು. ಆದರೆ ಅಲ್ಲಮನ ಜೊತೆ ಬೌದ್ಧಿಕ ಚರ್ಚೆಗೆ ಇಳಿಯಲು ಅವನು ಅವಳ ಸಮಾನ ಮನೋಧರ್ಮದವನಾಗಿದ್ದುದು ಕಾರಣವೆಂಬಲ್ಲಿ ಅನುಮಾನಕ್ಕೆ ಆಸ್ಪದವಿಲ್ಲ. ಅದ್ವೈತದ

ಬಗ್ಗೆ ಕೇವಲ ದೊಡ್ಡ ಮಾತುಗಳಲ್ಲೇ ಕಾಲ ಕಳೆಯುತ್ತ 'ವಾಗದ್ವೈತಿ' ಯೆನಿಸದೆ ನಿಜವಾದ ಅದ್ವೈತಿಯೇ ಆಗಿದ್ದ, 'ಅರಿದು ಮರೆದ' ಅಜಗಣ್ಣನ ಸೋದರಿಯ ಜೊತೆ ಅದೇ ಮನೋಭಾವದ ಅಲ್ಲಮ ಹೃದಯಸಂವಾದವನ್ನು ಹೊಂದಿದ್ದು ತೀರ ಸ್ವಾಭಾವಿಕ. ಏಕೆಂದರೆ ಅವರಿಬ್ಬರೂ ವಿಹರಿಸುತ್ತಿದ್ದ ವಿಶ್ವ ಒಂದೇ ಆಗಿದ್ದಿತು. ಅದು ಒಳಗಿನ ನಿಗೂಢ ಅದ್ಭುತ ಪ್ರಪಂಚ, ಸತ್ ಚಿತ್ ಆನಂದಗಳ ಅದ್ವೈತ ಪ್ರಪಂಚ.

ಅಲ್ಲಮ ಬಸವರಿಬ್ಬರೂ ಮನೋಭೂಮಿಕೆಯಲ್ಲಿ ಒಂದೇ ಸ್ವರೂಪದ ಶ್ರೇಷ್ಠರಾಗಿದ್ದರೂ ಬಸವಣ್ಣನ ಬದುಕು ಹೆಚ್ಚು ಲೋಕಮುಖಿಯಾಗಿದ್ದಿತು. ಅದಕ್ಕೆ ಕಾರಣಗಳು ಸ್ಪಷ್ಟವಿವೆ. ಅವರು ಆಧ್ಯಾತ್ಮಿಕ ಸಾಧಕರೂ ಹೌದು ಎಂದು ಬೇರೆ ಹೇಳಬೇಕಾಗಿಲ್ಲ. ಅಲ್ಲಮನ ಬದುಕು ಹೆಚ್ಚು ಅಂತರಂಗದ ಅನುಭಾವದ ಆಧ್ಯಾತ್ಮಿಕದ (Spiritual) ನೆಲೆಯದು ಎಂಬುದನ್ನು ಮೇಲೆ ನೋಡಿದ್ದೇವೆ. ಆದರೆ ಆತ ಸಾಮಾನ್ಯ ಜನತೆಯ ದುಃಖದಲ್ಲಿ ಭಾಗಿಯಾಗದೇ ಇರಲಿಲ್ಲ. ಅವನು ಹಠಯೋಗ ಸಿದ್ಧನಾದ ಗೋರಕ್ಷನನ್ನು ಖಡ್ಗದಿಂದ ಹೊಡೆದಾಗ ಅದು ಬಂಡೆಗೆ ಬಡಿದಂತೆ ಹಿಂದಕ್ಕೆ ಸಿಡಿಯಿತು. ಅಲ್ಲಮನನ್ನು ಗೋರಕ್ಷನು ಅದೇ ಖಡ್ಗದಿಂದ ಹೊಡೆದಾಗ ಅದು ಗಾಳಿಯ ಮೂಲಕವೆಂಬಂತೆ ದೇಹದ ಮಧ್ಯೆ ಹಾದು ಹೋಯಿತು ಎಂಬ ಕತೆ ಬಹು ಸಾಂಕೇತಿಕವಾದುದು. ಅಲ್ಲಮ ಆಧ್ಯಾತ್ಮಿಕವಾಗಿ ದೇಹವುಳ್ಳ 'ನಿರ್ದೇಹಿ'ಯಾಗಿದ್ದವನು.

ಕೆಲವೊಮ್ಮೆ ಕೇವಲ ಯಾಂತ್ರಿಕವಾದ ಸಾಂಖ್ಯಿಕ ಪರಿಗಣನೆಯೂ (Lexical counting or Statistics) ಅನಿರೀಕ್ಷಿತ ಬೆಳಕನ್ನು ಬೀರಲು ಸಾಧ್ಯ. ಬಸವಣ್ಣನ 1426 ವಚನಗಳಲ್ಲಿ ಅಲ್ಲಮನ 1321 ವಚನಗಳಲ್ಲಿ ಬರುವ ಭೌತಿಕ ವಸ್ತು ಮತ್ತು ಅಮೂರ್ತ ಪರಿಕಲ್ಪನೆಗಳ (Physical entities and abstract concepts) ಸಂಖ್ಯೆಯನ್ನು ಗಮನಿಸಿದರೆ, ಬಸವಣ್ಣನಲ್ಲಿ ಭೌತಿಕ / ಲೌಕಿಕ / ಬಾಹ್ಯ ಸ್ತರದ ಪದಗಳ ಪ್ರಯೋಗಗಳು ಹೆಚ್ಚಾಗಿರುವುದು, ಅಲ್ಲಮನಲ್ಲಿ ಮಾನಸಿಕ / ಆಧ್ಯಾತ್ಮಿಕ / ಆಂತರಿಕ ಪರಿಕಲ್ಪನೆಗಳ ಪದಪ್ರಯೋಗಗಳು ಹೆಚ್ಚಾಗಿರುವುದು ಎದ್ದು ಕಾಣುತ್ತದೆ (ಎಸ್.ಆರ್. ಗುಂಜಾಳರ "ಬಸವಣ್ಣನವರ ವಚನ ಪದಪ್ರಯೋಗ ಕೋಶ", ಹ ನಂ. ವಿಜಯಕುಮಾರರ "ಅಲ್ಲಮನ ವಚನ ಪ್ರಕೋಶ" ಇವುಗಳ ಸಹಾಯ ಪಡೆಯಲಾಗಿದೆ). ನೋಡಿ -

| | ಬಸವ | ಅಲ್ಲಮ |
|---|---|---|
| 'ಬಯಲು' | 4 | 75 |
| 'ನಿರ್ವಯಲು' / 'ನಿರ್ವಾಣ' | 2 | 19 |
| 'ಆನು' / 'ನಾನು' * | 175 | 8 |
| 'ಒಳ' / 'ಒಳಗೆ' | 19 | 187 |

* 'ನೀನು' / 'ನೀವು' ಈ ಪದಗಳು ಬಸವಣ್ಣನಲ್ಲಿ ಬಂದಿರುವುದನ್ನು ಗುಂಜಾಳರ ಕೋಶದಲ್ಲಿ ಪಟ್ಟಿ ಮಾಡಿಲ್ಲವಾದ ಕಾರಣ, ಆ ಪದಗಳ ತೌಲನಿಕ ಸಂಖ್ಯೆಯನ್ನು ಇಲ್ಲಿ ಕೊಡಲು ಹೋಗಿಲ್ಲ.

| | | |
|---|---|---|
| 'ಹೊರ' / 'ಹೊರಗೆ' | 19 | 7 |
| 'ಭಕ್ತ' / 'ಭಕ್ತಿ' | 252 | 149 |
| 'ಭವಿ' | 12 | 16 |
| 'ಜ್ಞಾನ' / 'ಜ್ಞಾನಿ' | 18 | 42 |
| 'ಅದ್ವಯ' / 'ಅದ್ವೈತಿ' | 1 | 16 |
| 'ದ್ವೈತ' | 1 | 2 |
| 'ಜಂಗಮ' | 152 | 97 |
| 'ಬ್ರಾಹ್ಮಣ' / 'ಹಾರುವ' | 23 ('ಹಾರುವ'- ಕೆಲವೊಮ್ಮೆ ವ್ಯಂಗ್ಯ ಉಂಟು) | 1 (ವ್ಯಂಗ್ಯ ಇಲ್ಲ) |
| 'ಮಾದ' / 'ಮಾದಿಗ' | 18 | 0 |
| 'ಹೊಲೆಯ' | 12 | 0 |
| 'ದಾಸಿಮಯ್ಯ' / 'ಜೇಡ' | 17 | 0 |
| 'ಚೆನ್ನಯ್ಯ' (ಮಾದರ) | 32 | 0 |
| ಕರಿಕಾಲ / ಚೋಳ | 4 | 0 |

'ಒಳ' 'ಹೊರ' ಈ ಪದಗಳ ತೌಲನಿಕ ಸಂಖ್ಯಾ ನಿರ್ಣಯ ಗಮನಿಸಬೇಕಾದ್ದು. 'ಬ್ರಾಹ್ಮಣ' / 'ಹಾರುವ', 'ಮಾದಿಗ' / 'ಹೊಲೆಯ' ಇಂತಹ ಜಾತಿಗಳ ಉಲ್ಲೇಖ ಅಲ್ಲಮನಲ್ಲಿ ಇಲ್ಲವೇ ಎನ್ನಬಹುದು ('ಹಾರುವ' ಒಂದು ಪ್ರಯೋಗ ಮಾತ್ರ ಇದೆ), ಬಸವನಲ್ಲಿ ಸಾಕಷ್ಟು ಉಂಟು. 'ಜ್ಞಾನ' / 'ಅದ್ವೈತ', 'ಬಯಲು' ಈ ಪದಗಳ ಸಂಖ್ಯೆ ಬಸವನಿಗಿಂತ ಅಲ್ಲಮನಲ್ಲಿ ಸಾಕಷ್ಟು ಹೆಚ್ಚು.

ಮೇಲಿನ ಮಾಹಿತಿ ಕೆಲವು ಸಂಗತಿಗಳನ್ನು ಸೂಚಿಸುತ್ತದೆ. ಬಸವಣ್ಣನಲ್ಲಿ ಒಬ್ಬ ಸಾಮಾಜಿಕ ಜೀವಿ ಹೆಚ್ಚು ಪ್ರಬಲ ; ಅಲ್ಲಮ ಒಬ್ಬ ಪ್ರಮುಖವಾಗಿ ಸಾಧಕ. ಬಸವಣ್ಣನಿಗಿಂತ ಅಲ್ಲಮನದು ಹೆಚ್ಚು ಅಂತರ್ಮುಖಿ ಬದುಕು. ಸಮಕಾಲೀನ ವ್ಯಕ್ತಿಗಳ ಜೊತೆ ಅಲ್ಲಮನಿಗಿಂತ ಬಸವಣ್ಣನಿಗೆ ಹೆಚ್ಚು ಸಂಪರ್ಕ ಉಂಟು. ಆದರೆ ಬಸವಣ್ಣ ಆಧ್ಯಾತ್ಮಿಕ ಸಾಧಕ ಅಲ್ಲ ಎಂದಾಗಲಿ, ಅಲ್ಲಮನಲ್ಲಿ ಸಾಮಾಜಿಕ ಕಳಕಳಿ ಶೂನ್ಯವಾಗಿತ್ತೆಂದಾಗಲಿ ಅರ್ಥವಲ್ಲ.

ಮೇಲಿನ ಮಾಹಿತಿಯಿಂದಲೇ ಅಂತಹ ನಿರ್ಧಾರಕ್ಕೆ ಬಂದಿದ್ದರೆ ಅದು ಖಂಡಿತ ಪ್ರಶ್ನಾರ್ಹವಾಗುತ್ತಿತ್ತು. ಆದರೆ, ಬಸವಣ್ಣ ಮತ್ತು ಅಲ್ಲಮರ ಬಗ್ಗೆ ತಿಳಿದಿರುವ ಸಂಗತಿಗಳು, ಅವರಿಬ್ಬರ ಪ್ರಮುಖ ಕಾರ್ಯಕ್ಷೇತ್ರಗಳು ನಮಗೆ ಗೊತ್ತಿರುವುದರಿಂದ ಮೇಲಿನ ತೌಲನಿಕ ಶಾಬ್ದಿಕಸಂಖ್ಯಾ ಪರಿಗಣನೆಯು ಈಗಾಗಲೇ ನಮಗೆ ತಿಳಿದಿರುವ ಅಂಶವನ್ನು ಹೆಚ್ಚು ದೃಢಗೊಳಿಸುತ್ತದೆಯೆಂಬುವಷ್ಟರ ಮಟ್ಟಿಗೆ ಮಾತ್ರ ಅದಕ್ಕೆ ಬೆಲೆ. ವ್ಯಕ್ತಿಗಳು ತಮ್ಮ ಬಹುದೊಡ್ಡ ಶಬ್ದ ಭಂಡಾರದಿಂದ "ಆಯ್ದು" ಪದಗಳನ್ನು ಬಳಸದಿದ್ದರೂ ಅವರ ಒಳಪ್ರಜ್ಞೆಯು ಮಾತಿನಲ್ಲಿ ಬರಹದಲ್ಲಿ ಹೆಚ್ಚಾಗಿ ಬಳಸುವ ಪದಗಳ ಮೂಲಕ ವ್ಯಕ್ತ. ಅವು ಅವರ ಸ್ವಭಾವದ ಕನ್ನಡಿಯೂ ಆಗಬಹುದೋ ಏನೋ?..... ಏನೋ....?

ವಚನಕಾರರಲ್ಲಿ ಬಸವಣ್ಣ, ಸೊಡ್ಡಳ ಬಾಚರಸರಲ್ಲಿ ಉಳಿದವರಿಗಿಂತ ಹೆಚ್ಚಾಗಿ ಬ್ರಾಹ್ಮಣರನ್ನು ಕುರಿತಾದ ಟೀಕೆ ಹೆಚ್ಚು. ಇದಕ್ಕೆ ಕಾರಣ, ಅವರು ಹುಟ್ಟು ಬ್ರಾಹ್ಮಣರಾಗಿದ್ದು, ಆ ವರ್ಗವನ್ನು ವಿಮರ್ಶಿಸಲು ತಮಗೆ ಒಂದು ಬಗೆಯ ನೈತಿಕ ಅಧಿಕಾರವಿದೆಯೆಂಬ ಮನುಷ್ಯಸಹಜ ಪ್ರವೃತ್ತಿ ಕಾರಣವಿರಬಹುದು. ಅವರ ಬ್ರಾಹ್ಮಣ ಟೀಕೆಗೆ ಬೆಲೆಯಿರುತ್ತದೆ - ಶ್ರೀಮಂತನಾಗಿದ್ದೂ ಒಬ್ಬ ವ್ಯಕ್ತಿ ಪ್ರಾಮಾಣಿಕವಾಗಿ ಶ್ರೀಮಂತರನ್ನು ಟೀಕಿಸಿ, ಬಡವರ ಪರ ನಿಂತಾಗ ಅವನ ನಡವಳಿಕೆಯನ್ನು ಜನ ಗಂಭೀರವಾಗಿ ಪರಿಗಣಿಸುತ್ತಾರೆ. ಉಳಿದ ವಚನಕಾರರಲ್ಲಿ ಬ್ರಾಹ್ಮಣರ ಟೀಕೆ ಇದ್ದರೂ ಅಷ್ಟೇ ಪ್ರಮಾಣದಲ್ಲಿ ಗುರು, ಜಂಗಮ, ವಿರಕ್ತರ ಟೀಕೆ ಹೆಚ್ಚು ಕೇಳಿ ಅಂದರೆ ಅದೂ ಸಹಜವೇ.

## 10

ವಚನಕಾರರ ಕೂಡಲಸಂಗಮದೇವ, ಕಪಿಲಸಿದ್ಧ ಮಲ್ಲಿಕಾರ್ಜುನ, ಮಹಾಘನ ಸೋಮೇಶ್ವರ, ಚನ್ನಮಲ್ಲಿಕಾರ್ಜುನ, ಗೊಗೇಶ್ವರ (ಗುಹೇಶ್ವರ) ಇಂಥವು ನಮಗೆ ದೇವಾಲಯಗಳ ಶಿವಲಿಂಗಗಳಿಗಿರುವ ಹೆಸರುಗಳನ್ನು ಸೂಚಿಸುವಂತೆ ಭಾಸವಾಗುತ್ತದೆ. ದೇವಾಲಯಗಳ ಶಿವಲಿಂಗಪೂಜೆಗಿಂತ ಮೈಮೇಲಿನ ಇಷ್ಟಲಿಂಗ ನಿಷ್ಠೆಗೆ ಹೆಚ್ಚಿನ ಮಹತ್ವವನ್ನು ನೀಡಿದ, ಕೆಲವೊಮ್ಮೆ ದೇವಾಲಯಗಳಿಗೆ ಹೋಗಿ ಅಲ್ಲಿ ಆರಾಧಿಸುವುದನ್ನು ಸ್ಪಷ್ಟೋಕ್ತಿಗಳಲ್ಲಿ ವಿರೋಧಿಸಿದ ಶರಣರ ವಚನಗಳ ಅಂಕಿತಗಳಲ್ಲೇ ದೇವಾಲಯಗಳ ಶಿವಲಿಂಗಗಳ ಹೆಸರುಗಳಿರುವುದು ಬಿಡಿಸಲು ಸ್ವಲ್ಪ ತೊಡಕೆಂದೇ ಹೇಳಬಹುದಾದ ಸಮಸ್ಯೆಯನ್ನು ತಂದೊಡ್ಡಿದುದು ನಿಜ. ಕೆಲವು ಅತ್ಯುತ್ಸಾಹಿಗಳು ಒಂದು ಹೆಜ್ಜೆ ಮುಂದೆ ಹೋಗಿ, "ಸ್ಥಾವರ"ದ ವಿರೋಧಿಗಳು ಶರಣರು ಎಂಬ ಭಾವನೆಯಿಂದ ('ಸ್ಥಾವರ' ಪದವು ಕೆಲವೆಡೆ ಇಷ್ಟಲಿಂಗ ಸೂಚಕವೇ ಆಗಿದೆಯೆಂಬುದನ್ನು ಅವರು ಅರಿಯರು, ಅಥವಾ ಗುರುತಿಸಲು ಸಿದ್ಧರಿಲ್ಲ) ಬಸವಣ್ಣನವರ 'ಕೂಡಲ ಸಂಗಮದೇವ' ಎಂಬುದನ್ನು ಯಾವುದೇ ಆಧಾರವಿಲ್ಲದೆ 'ಲಿಂಗದೇವ' ಎಂದು ತಿದ್ದಿ ಸಹಜವಾಗಿಯೇ ಜನತೆಯ ವಿರೋಧವನ್ನು ಎದುರಿಸಬೇಕಾಯಿತೆಂಬುವನ್ನು ಎಲ್ಲರೂ ಬಲ್ಲರು (ಅದು ಅಷ್ಟು ಮುಖ್ಯವಲ್ಲ).

ಕೆಳಗಿನ ಸಿದ್ಧರಾಮನ ವಚನವನ್ನು ಗಮನಿಸಿ :

ಹೆಸರಿಡಬಾರದ ಲಿಂಗವ ಹೆಸರಿಟ್ಟು ಎನ್ನ ಕರಸ್ಥಲಕ್ಕೆ ತಂದು
ಕರತಳಾಮಳದಂತೆ ಮಾಡಿ ಎನ್ನ ಕರಸ್ಥಲಕ್ಕೆ ಕ್ರಿಯಾಲಿಂಗವ ಕೊಟ್ಟು
ಶ್ರೀ ಗುರು ಚೆನ್ನಬಸವಣ್ಣ ಹೆಸರಿಟ್ಟ ಲಿಂಗದ ಹೆಸರ ಹೇಳುವೆ ಕೇಳಯ್ಯಾ
......
ಆ ಬಸವಣ್ಣ ಮೊದಲಾದ ಪುರಾತರು
ಆ ಅಪ್ಪಯ ಅನುಮತದಿಂದ ಲಿಂಗಾರ್ಚನೆಯ ಮಾಡಿ
ನಿತ್ಯ ನಿಜನಿವಾಸಿಗಳಾದರು
ಆ ಶರಣರ ಅನುಮತದರಿವಿನ ಉಪದೇಶವ ಕೇಳಿ
ಎನಗಿನ್ನಾವುದು ಹದನವಯ್ಯಾ ಎಂಬ ಚಿಂತೆಯ ಬಿಟ್ಟು
ಕಪಿಲಸಿದ್ಧ ಮಲ್ಲಿನಾಥಯ್ಯನ ಕೈಯಲ್ಲಿ ಪಡೆದೆನು
(ವಚನ ಸಂಪುಟ. 4. ಪು. 274)

ಸಿದ್ಧರಾಮನು ತನಗೆ ಗುರುವು ಹೆಸರು ಸಮೇತ ಇಷ್ಟಲಿಂಗವನ್ನು ನೀಡಿದುದನ್ನು ಇನ್ನೂ ಹಲವೆಡೆ ಹೆಸರಿಸಿದ್ದಾನೆ (4. ಪು. 237, 275 ಇ.) ಬಸವಣ್ಣನ ಇಷ್ಟಲಿಂಗದ ಹೆಸರು "ಸಂಗಮನಾಥ"-

(1. ಪು. 299)

ಎನ್ನ ಬಂದ ಭವಂಗಳನು ಪರಿಹರಿಸಿ, ಎನಗೆ ಭಕ್ತಿ ಘನವನೆತ್ತಿ ತೋರಿ
ಎನ್ನ ಹೊಂದಿದ ಶೈವ ಮಾರ್ಗಂಗಳನತಿಗಳೆದು
ನಿಜ ವೀರಶೈವಾಚಾರವನರುಹಿ ತೋರಿ
ಎನ್ನ ಕರಸ್ಥಲದ ಸಂಗಮನಾಥನಲ್ಲಿ ಮಾಡುವ
ಜಪ ಧ್ಯಾನ ಉಪಚರಿಯ ಅರ್ಪಿತ ಪ್ರಸಾದ ಭೋಗಂಗಳಲ್ಲಿ ಸಂಧಿಸಿದ
ಶೈವಕರ್ಮವ ಕಳೆದು.......
ಕೂಡಲ ಸಂಗಮ ದೇವರಲ್ಲಿ ಚನ್ನಬಸವಣ್ಣ ಎನ್ನನಾಗುಮಾಡಿ....."

ಅಲ್ಲಮನ ಇಷ್ಟಲಿಂಗದ ಹೆಸರು 'ಗುಹೇಶ್ವರ' - "....ಅನುಪಮ ಲಿಂಗವು ಗುಹೇಶ್ವರನೆಂಬ ಹೆಸರನೊಳಕೊಂಡು ಎನ್ನ ಕರಸ್ಥಲಕ್ಕೆ ಸಾಧ್ಯವಾಯಿತ್ತು ಕಾಣಾ ಸಿದ್ಧರಾಮಯ್ಯ" (2. ಪು. 209). ಅಜಗಣ್ಣನ ಇಷ್ಟಲಿಂಗದ ಹೆಸರು 'ಸೋಮೇಶ್ವರ' (6. ಪು. 100). ಇದರಿಂದ ಒಂದು ಅಂಶ ಸ್ಪಷ್ಟವಾಗುತ್ತದೆ : ವಚನಕಾರರ ಅಂಕಿತಗಳು ಅವರ ಇಷ್ಟಲಿಂಗಗಳ ಹೆಸರುಗಳು. ಈ ಅಂಶವನ್ನು ಆಧುನಿಕ ಪೂರ್ವ ಕಾಲದ ವೀರಶೈವರು ಬಲ್ಲವರಾಗಿದ್ದರು. ಉದಾಹರಣೆಗೆ, "ಇಷ್ಟಲಿಂಗದ ನಾಮಸ್ತೋತ್ರ" (ಸಂ. ವೀರಣ್ಣ ರಾಜೂರ) ಎಂಬ ಹತ್ತು ವಾರ್ಧಕ ಷಟ್ಪದಿಗಳ ಕಿರುಕೃತಿಯಲ್ಲಿ ನೂರ ಹನ್ನೊಂದು ಶರಣರ 'ಇಷ್ಟಲಿಂಗ'ಗಳ ಹೆಸರುಗಳನ್ನು (ಉದಾ : ಕೂಡಲಸಂಗಮ, ಗೊಹೇಶ್ವರ, ಕಪಿಲಸಿದ್ಧಮಲ್ಲಿಕಾರ್ಜುನ ಇತ್ಯಾದಿ) ಜೋಡಿಸಿ ಒಬ್ಬ ಕೃತಿಕಾರನು ಷಟ್ಪದಿಗಳನ್ನು ಬರೆದಿದ್ದಾನೆ. ಅನೇಕರು ತಿಳಿದಿರುವಂತೆ ಅಂಕಿತಗಳು

ದೇವಾಲಯಗಳ ಶಿವಲಿಂಗಗಳ ಹೆಸರುಗಳಲ್ಲ, ಅವು ವಚನಕಾರರ ಇಷ್ಟಲಿಂಗಗಳ ಅರ್ಥಾತ್ ಆಯಾ ಭಕ್ತನ ಒಳಗಿನ ಚಿತ್ಕಳೆಯ ಬಹಿರಂಗ ಸಂಕೇತವಾಗಿರುವ ಇಷ್ಟಲಿಂಗಗಳ ಹೆಸರುಗಳೇ ಆಗಿವೆ. 'ಅಜಗಣ್ಣ ತಂದೆ', 'ಅಂಬಿಗರ ಚೌಡಯ್ಯ' ಇಂತಹ ಕೆಲವು ಅಪವಾದಗಳಿದ್ದರೂ, ಬಹುತೇಕ ಅಂಕಿತಗಳು ಶರಣರ ಇಷ್ಟಲಿಂಗಗಳ ಹೆಸರುಗಳು.

'ಇಷ್ಟಲಿಂಗ'ವು ಭಕ್ತನ ದೇಹದ ಮೇಲೆ ಸದಾ ಇರುವ ಸಂಕ್ಷಿಪ್ತ ಮೂರ್ತಿಯಾದರೂ, ಅದು ಆ ಭಕ್ತನ ಒಳಗಿನ ಚೈತನ್ಯದ ಸಂಕೇತವೇ ಆಗಿರುವುದರಿಂದ ಆ ಇಷ್ಟಲಿಂಗವು ಮೂಲದಲ್ಲಿ ನಿಜವಾಗಿ ಆ ಭಕ್ತನೇ ಆಗಿರುತ್ತದೆ; ಭಕ್ತನ ಸ್ಥೂಲ ದೇಹ ಅಲ್ಲ, ಭಕ್ತನ ಅಂತರಂಗದ ನಿತ್ಯಸತ್ಯ, ಚಿರಂತನ ಚೈತನ್ಯ; ಆ ಚೈತನ್ಯವು ವಿಶ್ವವ್ಯಾಪಿ ಚೈತನ್ಯ ಶಕ್ತಿಯೇ ಆಗಿರುತ್ತದೆ. ಆ ಇಷ್ಟಲಿಂಗಗಳನ್ನು ಆರಾಧಿಸುವ ಸಾಧಕ ಅಂತಿಮವಾಗಿ ಆ ಇಷ್ಟಲಿಂಗವೇ ಆಗುವ, ಎಂದರೆ ತಾನು ನಿಜವಾದ ತಾನಾಗುವ ಹಂಬಲದವನು.

ಮೇಲಿನ ಹೊಳಹು - ಅದು ನಾನು ಕಂಡುಕೊಂಡ ಹೊಳಹು ಎಂದು ವಿನಯದಿಂದ ಸೂಚಿಸಬಯಸುತ್ತೇನೆ - ವಚನಕಾರರ ವಚನಗಳ ಮೇಲೆ ಬೀರುವ ಪ್ರಕಾಶವನ್ನು ಗಮನಿಸಿ.

1. ವಚನಕಾರರು ತಮ್ಮ ಇಷ್ಟದೈವಗಳನ್ನು (ಕೂಡಲಸಂಗಮ, ಗುಹೇಶ್ವರ, ಕಪಿಲಸಿದ್ಧ ಮಲ್ಲಿಕಾರ್ಜುನ) ಕುರಿತು ಸಂಬೋಧಿಸಿರುವಾಗ ಆ ಸಂಬೋಧನೆ ಅವರಿಂದ ಭಿನ್ನವಾದ, ದೂರದಲ್ಲಿರುವ ಯಾವುದೋ ದೈವವನ್ನು ಕುರಿತಾದುದಲ್ಲ. ಅದು ಅವರ ಕೈಯ ಇಷ್ಟಲಿಂಗವನ್ನು ಕುರಿತು ಮಾಡಿದ ಸಂಬೋಧನೆ, ಅವರು ತಮ್ಮ ಒಳಗಿನ ಚಿಚ್ಛಕ್ತಿಯ ಜೊತೆ ನಡೆಸಿದ ಸಂವಾದ, ಅವರು ಈಗ ಏನಾಗಿದ್ದರೋ ಅಂತಹ ಅವರು ಮುಂದೆ ಏನಾಗಬೇಕಾಗಿದೆಯೋ ಅದರ ಜೊತೆ ನಡೆಸಿದ ಸಂವಾದ. ಅರ್ಥಾತ್ ಒಂದು ರೀತಿಯಲ್ಲಿ ವಚನಗಳು ವಚನಕಾರರು ತಮ್ಮಲ್ಲೇ, ತಮ್ಮೊಡನೆ ನಡೆಸಿದ ಸಂವಾದಗಳು; ಅವು ಸ್ವಗತಗಳು, ಗಟ್ಟಿಯಾದ ಸ್ವಗತಗಳು. ಭಾವಗೀತೆಗಳನ್ನು ಕವಿಯ `dramatic monologues overheard' ಎಂದು ಕರೆದರೆ, ವಚನಗಳು ಒಂದರ್ಥದಲ್ಲಿ ಭಾವಗೀತಗಳೇ, ಅಧ್ಯಾತ್ಮಿಕ ಭಾವಗೀತಗಳು. ಎಷ್ಟೋ ಬಾರಿ ವಚನಗಳು ಆತ್ಮದರ್ಶನಕ್ಕಾಗಿ ಸಾಧಕರು ನಡೆಸಿದ ಒಳ-ಹೊರ ಹೋರಾಟದ ಯಾತನೆಯ ಕೂಗುಗಳೂ ಹೌದು ; ಸತ್ಯದರ್ಶನವಾದಾಗ ಅವರ ಬಾಯಿಂದ ಹೊರಟ ಆನಂದದ ಉದ್ಗಾರಗಳೂ ಹೌದು. ಕಲ್ಲಮಠದ ಪ್ರಭುದೇವ (ಕ್ರಿ.ಶ. 1430) ಎಂಬೊಬ್ಬ ವಚನ ವ್ಯಾಖ್ಯಾನಕಾರ ತನ್ನ "ಲಿಂಗಲೀಲಾವಿಲಾಸ ಚಾರಿತ್ರ" ಕೃತಿಯಲ್ಲಿ ವಚನಗಳ ಬಗ್ಗೆ ಹೀಗೆ ಹೇಳುತ್ತಾನೆ - "ವೀರಶೈವ ಷಟ್ಸ್ಥಲ ಜ್ಞಾನಾಚಾರ್ಯರಪ್ಪ ಪ್ರಭುದೇವರು ಬಸವಣ್ಣ ಚನ್ನಬಸವಣ್ಣ ಮಹಾದೇವಿಯಕ್ಕಗಳು ಮುಖ್ಯವಾದ ಶಿವಾನುಭಾವಿಗಳು ಶಿವಸುಖವನನುಭವಿಸಿ ತೃಪ್ತಿವಡೆದು ಸಂತುಷ್ಟಿ ನಿಮಿರ್ದು ವಾಙ್ಮನದಿಂದುಕ್ಕಿ ನುಡಿದ ನುಡಿಯೇ ಗುರುವಚನ.....". ಇದು ಭಾವಗೀತೆ ಕುರಿತಾದ "spontaneous overflow of powerful feelings recollected in tranquility" ಎಂಬ ಪ್ರಸಿದ್ಧೋಕ್ತಿಯನ್ನು ನೆನಪಿಗೆ ತರುತ್ತದೆ.

2. ಇಡೀ ಭಾರತೀಯ ಸಾಹಿತ್ಯದಲ್ಲಿ ವಚನಕಾರರೇ ತಮ್ಮ ಕೃತಿಗಳಲ್ಲಿ ಅಂಕಿತಗಳನ್ನು ಬಳಸಿರುವುದರಲ್ಲಿ ಪ್ರಪ್ರಥಮರು. ಗುರುವು ಶಿಷ್ಯನಿಗೆ ಬೋಧನೆ ಮೂಲಕ ಇಷ್ಟಲಿಂಗವನ್ನು ಆ ಇಷ್ಟಲಿಂಗಕ್ಕೆ ಒಂದು ಹೆಸರು ನೀಡಿ ದತ್ತ ಮಾಡುತ್ತಿದ್ದನೆಂಬುದು ವಚನಗಳಲ್ಲೇ ಉಕ್ತವ್ವಾಗಿದೆ. ಆ ಹೆಸರನ್ನು ಆ ಶರಣನು ತನ್ನ ರಚನೆಗಳಲ್ಲಿ ಅಂಕಿತವಾಗಿ ಬಳಸಿಕೊಳ್ಳುತ್ತಿದ್ದನು. ಮುಂದೆ 14-15ನೇ ಶತಮಾನಗಳಲ್ಲಿ ಈ ಪರಂಪರೆಯನ್ನು ಹರಿದಾಸರು ಮುಂದುವರಿಸಿದರು. ದಾಸದೀಕ್ಷೆ ನೀಡುವಾಗಲೇ ಗುರುಗಳು ಶಿಷ್ಯನಿಗೆ ಅಂಕಿತ ಅಥವಾ ಮುದ್ರಿಕೆ ದಯಪಾಲಿಸುತ್ತಿದ್ದರು. ಆ ಪರಂಪರೆ ಇಂದಿಗೂ ಮುಂದುವರಿದಿದೆ, ಮತ್ತು ಆ ಪರಂಪರೆಯನ್ನು ಹುಟ್ಟು ಹಾಕಿದವರು ನಮಗೆ ತಿಳಿದಮಟ್ಟಿಗೆ ವೀರಶೈವರು, ಹನ್ನೊಂದು ಹನ್ನೆರಡನೇ ಶತಮಾನಗಳಲ್ಲಿ.

3. ಅಂಕಿತಗಳು ಇಷ್ಟಲಿಂಗಗಳ ಹೆಸರುಗಳೆನ್ನುವ ಒಂದು ಚಿಕ್ಕ ಅಂಶ ಚಿಕ್ಕ ಸ್ವಿಚ್ಚನ್ನು ಒತ್ತಿದಂತೆ, ಮೈಸೂರು ಅರಮನೆಯ ಸಾವಿರಾರು ದೀಪಗಳು ಝಗ್ಗನೆ ಹತ್ತಿದಂತೆ. ಆ ಸರಳ ಅಂಶದಿಂದ ವಚನಗಳು ದೀಪ್ತಗೊಳ್ಳುತ್ತವೆ; ಒಂದೆರಡು ಬೆಳಗದಿರಬಹುದು ಅಥವಾ ತಡವಾಗಿ ಬೆಳಗಬಹುದು. ಕೆಲವರ ಅಂಕಿತಗಳು ಅವರ ಇಷ್ಟಲಿಂಗಗಳ ಹೆಸರಲ್ಲದಿರಬಹುದು (ಉದಾ : ಅಂಬಿಗರ ಚೌಡಯ್ಯ). ಕೆಲವರು ತಮ್ಮ ಇಷ್ಟಲಿಂಗಗಳಿಗೆ ತಾವೇ ಹೆಸರು ಕೊಟ್ಟುಕೊಂಡಿರಬಹುದು: ಉದಾಹರಣೆಗೆ, ಅಲ್ಲಮನು ಇಷ್ಟಲಿಂಗವನ್ನು ಸ್ವೀಕರಿಸಿದ್ದು, ಹರಿಹರನ ಪ್ರಕಾರ ಎಲುಬಿನ ಪಂಜರವಾಗಿದ್ದ ಅನಿಮಿಷನ ಕೈಯಿಂದ. ಆ ಎಲುಬಿನ ಹಂದರದಲ್ಲಿದ್ದ ಲಿಂಗವನ್ನು ಅವನು ತೆಗೆದುಕೊಂಡ ಬಳಿಕ, ಅವನ ಆರಾಧ್ಯ ದೈವವಾಗಿದ್ದ ಗೊಗ್ಗೇಶ್ವರ ದೇವಾಲಯದ ಮೂರ್ತಿಯ ಹೆಸರನ್ನು ಆ ಲಿಂಗಕ್ಕೆ ತಾನೇ ನೀಡಿಕೊಂಡ.

ಒಟ್ಟಾರೆ, ಸಾಮಾನ್ಯ ನಿಯಮ ಸ್ಪಷ್ಟವಾಗಿದೆ.

ನಮ್ಮ ದೈನಂದಿನ ಒಂದು ಅನುಭವವನ್ನೇ ಗಮನಿಸಬಹುದು. ಊಟದ ಅಗತ್ಯ ಭಾಗವಾದ ಸಾರನ್ನು (ಸಾಂಬಾರು) ಅಡಿಗೆ ಮನೆಯಲ್ಲಿ ನೀರು, ಬೇಳೆ, ತರಕಾರಿ, ಸಾಂಬಾರ್ ಪುಡಿ, ಒಗ್ಗರಣೆ, ಮೆಣಸಿನಕಾಯಿ ಇವನ್ನು ಹದವಾಗಿ ಸೇರಿಸಿ ಒಲೆಯ ಮೇಲಿಟ್ಟು ಸಿದ್ಧಗೊಳಿಸಲಾಗಿದೆ. ಆದರೆ ರುಚಿಯಿಲ್ಲ, ನಾಲಗೆ ಗ್ರಹಿಸುತ್ತಿಲ್ಲ. ಆದರೆ ಅದಕ್ಕೆ ಒಂದು ಚಿಟಿಕೆ ಉಪ್ಪು ಬಿದ್ದೊಡನೆ ಇಡೀ ಸಾರಿನ ಚಹರೆ, 'ಚಪ್ಪರಣೆ'ಯೇ (< ಚಪ್ಪರಿಸು) ಬದಲಾವಣೆಯಾಗುತ್ತದೆ. ಒಂದು ಸಾಮಾನ್ಯ ಚಿಕ್ಕವಸ್ತು ಉಳಿದೆಲ್ಲ ವಸ್ತುಗಳಿಗೆ ತಂದುಕೊಡುವ ಅರ್ಥವಂತಿಕೆ ('ರುಚಿವಂತಿಕೆ' ಎಂದು ಬೇಕಾದರೂ ಕರೆಯಬಹುದು) ಎಲ್ಲರಿಗೂ ಅನುಭವವೇದ್ಯ. ಅಂತೆಯೇ ಒಂದು ಚಿಕ್ಕ ಶೋಧ ಉಳಿದಂತ ಬಿಡಿ ಬಿಡಿಯಾಗಿ ಕಾಣಿಸುವ ಸಂಗತಿಗಳನ್ನು ಒಂದು ಇಡಿಗೆ ತಂದು ಅವೆಲ್ಲವೂ ಸೇರಿ ಒಂದು ಅಖಂಡ ವಸ್ತುವಾಗಲು ನಿಮಿತ್ತವಾಗುತ್ತದೆ ('ಶೋಧ'ದಲ್ಲಿ ಚಿಕ್ಕದು ದೊಡ್ಡದು ಎಂಬುದಿಲ್ಲ, ಸಂಶೋಧಕನ ದೃಷ್ಟಿಯಲ್ಲಿ).

ಸಾರಿನ ವಿಷಯಕ್ಕೆ ಮತ್ತೆ ಹೊರಳೋಣ. ಸಾರು ಎಂಬ ವಸ್ತು ನೀರೇ ? ಬೇಳೆಯೇ? ಉಪ್ಪೇ ? ಒಗ್ಗರಣೆಯೇ ? ಅಲ್ಲ. ಬಿಸಿಯೇ ? ಸಿದ್ಧಪಡಿಸಿದ ವ್ಯಕ್ತಿಯ ಕೌಶಲವೇ ?

ಆ ಎಲ್ಲ ವಸ್ತುಗಳು ತಮ್ಮ ಸ್ವಂತತನವನ್ನು ವಿಸರ್ಜಿಸಿ ಅಥವಾ ಉಳಿಸಿಕೊಂಡು, ತಮ್ಮನ್ನು ತಾವು ಸಾರಾಗಲು ಒಪ್ಪಿಸಿಕೊಂಡಿವೆ. ಸಾರು ಆ ಎಲ್ಲ ವಸ್ತುಗಳ ಮಿಶ್ರಣದ ಫಲವೂ ಹೌದು, ಅಥವಾ ಬೇರೊಂದು ಬೇರೆಯೇ ಆದ ಸೃಷ್ಟಿಯೂ ಹೌದು. ಮೇಲೆ ಹೇಳಿದ ಶೋಧವು ವಚನಗಳ ನಿಜ ದರ್ಶನವನ್ನು ಮಾಡಿಸುತ್ತದೆ. ಆ ದರ್ಶನವು ಸತ್ಯದ ಕ್ಷೇತ್ರದ್ದೂ ಹೌದು, ಸೌಂದರ್ಯದ ಕ್ಷೇತ್ರದ್ದೂ ಹೌದು. ಸಂಶೋಧನೆಯಲ್ಲಿ ಸತ್ಯ, ಸೌಂದರ್ಯಗಳು ಒಂದೇ ನಾಣ್ಯದ ಎರಡು ಮುಖಗಳು. ಹೀಗೆ ಹೇಳಲೂ ಸಾಧ್ಯ : ಸೃಜನಶೀಲ ಸಾಹಿತಿ ಅಥವಾ ಕಲಾವಿದನಿಗೆ ಸೌಂದರ್ಯವೇ ಸತ್ಯ, ಸಂಶೋಧಕನಿಗೆ ಸತ್ಯವೇ ಸೌಂದರ್ಯ. ಯಾವುದೇ ಹೊಸ ಸಂಗತಿ, ಹೊಸ ಶೋಧ, ಒಂದು ಸಂಗತಿಯ ಹೊಸ ಆಯಾಮ ಸಂಶೋಧಕನಿಗೆ ಹೊಳೆದಾಗ ಅವನಿಗೆ ಆಗುವ ಅನುಭವವೂ ಒಂದು ರೀತಿಯ 'ರಸಾನುಭವ'ವೇ. ಡಿ.ಎಲ್. ನರಸಿಂಹಾಚಾರ್ಯರು 'ಪಾಂಡಿತ್ಯರಸ'ವೆಂದು ಅದನ್ನು ಕರೆದಿದ್ದಾರೆ ಎಂಬುದು ಹಲವರಿಗೆ ತಿಳಿದಿರುವ ಸಂಗತಿ*. ಋಷಿಗಳು "ರಸೋ ವೈ ಸಃ" ಎಂದು ಹೇಳಿದ ಮಾತಿನಲ್ಲಿ, ವಿಶ್ವದ ಹಿಂದಿನ ನಿತ್ಯಸತ್ಯದ ಅನುಭವ ಆದಾಗ ಅವರಿಗೆ ಅದು ತಂದ ಉನ್ನತ ಸ್ಥಿತಿಯ "ರಸ"ದ, ಆನಂದದ ಅನುಭವವೇ ಸೂಚಿತವಾಗಿದೆ.

## 11

ಸಂಶೋಧನೆ ಒಂದು ಶೈಕ್ಷಣಿಕ ಶಿಸ್ತು; ಸೈನಿಕನ ಮಿಲಿಟರಿ ಶಿಕ್ಷಣದ ರೀತಿಯ ಏಕರೂಪದ ಶಿಸ್ತು ಅಲ್ಲ. ಯಾವುದೇ ಕ್ಷೇತ್ರವಾಗಲಿ ವಿಜ್ಞಾನ, ತಂತ್ರಜ್ಞಾನ, ಸಾಹಿತ್ಯ, ಸಮಾಜವಿಜ್ಞಾನ, ಮನೋವಿಜ್ಞಾನ, ಅರ್ಥಶಾಸ್ತ್ರ, ಇತಿಹಾಸ ಯಾವುದೇ ಆಗಲಿ, ಎಲ್ಲ ಕಡೆಯಲ್ಲೂ ಸಂಶೋಧಕನ ದೃಷ್ಟಿ ಹೊಸತನ್ನು ಕಾಣುವುದರತ್ತ ಹಾಗೂ ಕಾಣಿಸುವುದರತ್ತ, ಜ್ಞಾನವನ್ನು ಬೆಳಸುವುದರತ್ತ ಕೇಂದ್ರಿಕೃತವಾಗಿರುತ್ತದೆ. ಒಮ್ಮೆ ಅಂತಹ ಹಂಬಲವನ್ನು ಬೆಳೆಸಿಕೊಂಡು ಅದು ತನ್ನ ಪ್ರವೃತ್ತಿಯಾಗುವಂತೆ ಮಾಡಿಕೊಂಡರೆ, ಕ್ರಮೇಣ ಮನಸ್ಸು ಅವನಿಗೇ ಗೊತ್ತಾಗದ ರೀತಿ ಹೊಸತನ್ನು ಗ್ರಹಿಸುವ ತನ್ನ ಶಕ್ತಿಯನ್ನು ಬೆಳಸಿಕೊಳ್ಳುತ್ತ ಹೋಗುತ್ತದೆ. ಯಾವುದೋ ಸೂಚನೆ ಇನ್ನೊಂದರತ್ತ, ಆ ಇನ್ನೊಂದು ಮತ್ತೊಂದರತ್ತ ಅವನನ್ನು ಕೊಂಡೊಯ್ಯುತ್ತದೆ. ಅವನಲ್ಲಿನ ಮಿಡುಕಾಟವು ನಿರಂತರ ಹುಡುಕಾಟಕ್ಕೆ ಹಚ್ಚುತ್ತದೆ. ಒಂದು ಸಂಗತಿ ಇನ್ನೊಂದರ ಕಡೆ, ಆ ಇನ್ನೊಂದು ಮತ್ತೊಂದರ ಕಡೆ, ಅದು ಮಗುದೊಂದರ ಕಡೆ ಕೊಂಡೊಯ್ಯುದಕ್ಕೆ ಹಂಪಿಯ ಬಗೆಗಿನ ಒಂದು ಶೋಧವನ್ನು ಉದಾಹರಿಸಬಹುದು. ಹಂಪಿಯಲ್ಲೇ ಹುಟ್ಟಿ, ಕೆಲ ಕಾಲ ದೋರಸಮುದ್ರದಲ್ಲಿ ಹೊಯ್ಸಳ ದೊರೆಗಳ ಬಳಿ ಉದ್ಯೋಗಿಯಾಗಿ ಕೆಲಸಮಾಡಿ ಅಂತಿಮ ವರ್ಷಗಳನ್ನು ಹಂಪಿಯಲ್ಲೇ ಕಳೆದ ಹರಿಹರ ಕವಿಯ (ಸು. ಕ್ರಿ.ಶ. 1220) ಸೋದರಳಿಯ ರಾಘವಾಂಕನ ಹರಿಶ್ಚಂದ್ರ ಕಾವ್ಯದಲ್ಲಿ ಒಂದು ಅಮೂಲ್ಯ ಮಾಹಿತಿಯಿದೆ. ಅವನ ಕಾಲದಲ್ಲಿ (13ನೇ ಶತಮಾನದ ಪೂರ್ವಾರ್ಧ)

* ನೋಡಿ, ಎಂ. ಚಿದಾನಂದಮೂರ್ತಿ : ಪಾಂಡಿತ್ಯರಸ (ಪ್ರ : ಕನ್ನಡ ವಿಶ್ವವಿದ್ಯಾಲಯ. ಹಂಪಿ)

ವಾರಣಾಸಿ, ಹಂಪಿಗಳು ಯಾವ ರಾಜನ ಆಡಳಿತಕ್ಕೂ ಸೇರದೆ ಅವು ಅಲ್ಲಿನ ವಿಶ್ವೇಶ್ವರ, ವಿರೂಪಾಕ್ಷ ದೈವಗಳ ನೇರ ಅಧೀನದಲ್ಲಿದ್ದುವು. ಆ ಪುಣ್ಯ ಕ್ಷೇತ್ರಗಳಿಗೆ ಆ ದೈವಗಳೇ ಚಕ್ರವರ್ತಿಗಳೆಂಬಂತೆ ಒಟ್ಟು ವ್ಯವಹಾರ ನಡೆಯುತ್ತಿತ್ತು. ಹಂಪಿಯವನೇ ಆದ ರಾಘವಾಂಕನ ಆ ಉಲ್ಲೇಖದ ಯಥಾರ್ಥತೆಯನ್ನು ಸಂದೇಹದಿಂದ ನೋಡುವ ಅಗತ್ಯವೇನೂ ಕಾಣದು. ಆಧುನಿಕಪೂರ್ವ ಕಾಲದವರೆಗೆ ಕಾಶಿಯ ಮಹಾರಾಜರು ಭಗವಾನ್ ವಿಶ್ವೇಶ್ವರನ ಪ್ರತಿನಿಧಿಯೆಂಬಂತೆ ಮಾತ್ರ ನಡೆದುಕೊಳ್ಳುತ್ತಿದ್ದರು; ಕಾಶಿ ನಗರದ ನಿಜವಾದ ದೊರೆ ವಿಶ್ವೇಶ್ವರನೆಂದೇ ಜನ ನಂಬಿದ್ದರು. ಹಂಪಿ ಕೂಡ ಹರಿಹರ ರಾಘವಾಂಕರ ಕಾಲದಲ್ಲಿ ವಿರೂಪಾಕ್ಷನೇ ಅದಕ್ಕೆ ದೊರೆ ಎಂಬಂತೆ ವ್ಯವಹೃತವಾಗುತ್ತಿತ್ತೆಂಬುದಕ್ಕೆ ಇತರ ಪ್ರಬಲ ಸಾಕ್ಷ್ಯಾಧಾರಗಳಿವೆ. ಹರಿಹರನು ತನ್ನ ಕೃತಿಗಳಲ್ಲಿ ಹಲವೆಡೆ "ಪಂಪಾಪುರದರಸ" "ಹಂಪೆಯಾಳ್ದ" ಎಂದೇ ವಿರೂಪಾಕ್ಷನನ್ನು ಸಂಬೋಧಿಸಿದ್ದಾನೆ. ವಿರೂಪಾಕ್ಷನ ರಾಜ್ಯವಾದ 'ಪಂಪಾಪುರ'ದ ನಾಲ್ಕು ಗಡಿಗಳನ್ನು ಹೇಳಿದ್ದಾನೆ: ಪೂರ್ವದಲ್ಲಿ ಕಿನ್ನರೇಶ್ವರ, ಪಶ್ಚಿಮದಲ್ಲಿ ಸೋಮೇಶ್ವರ, ದಕ್ಷಿಣದಲ್ಲಿ ಜಂಬುಕೇಶ್ವರ, ಉತ್ತರದಲ್ಲಿ ವಾಣಿಭದ್ರೇಶ್ವರ. ಅವು ಇಂದಿಗೂ ಇವೆಯಲ್ಲದೆ, ಅವುಗಳನ್ನು ಜನರು ಹಂಪಿಯ ಗಡಿಗಳೆಂದೇ ಭಾವಿಸುತ್ತಾರೆ. ಈಚಿನವರೆಗೆ ಶಿವರಾತ್ರಿಯ ದಿನ ವಿರೂಪಾಕ್ಷನ ದರ್ಶನ ಮಾಡಬಯಸುವವರು ವಿರೂಪಾಕ್ಷನ ಅಪ್ಪಣೆ ಪಡೆದು, ಅವನ ದೇವಾಲಯದಿಂದ ಮೊದಲು ಕಿನ್ನರೇಶ್ವರಕ್ಕೆ ಹೋಗಿ ಆ ದೇವರ ದರ್ಶನ ಮಾಡಿದ್ದನ್ನು ವಿರೂಪಾಕ್ಷನಿಗೆ ತಿಳಿಸಿ, ಬಳಿಕ ಜಂಬುಕೇಶ್ವರ ಇತ್ಯಾದಿ ದೇವರುಗಳ ದರ್ಶನ ಮಾಡಿದ್ದನ್ನು ಕ್ರಮವಾಗಿ ವಿರೂಪಾಕ್ಷನಿಗೆ ತಿಳಿಸುತ್ತ, ಶಿವರಾತ್ರಿಯ ಹಿಂದಿನ ದಿನ ವಾಣಿ ಭದ್ರೇಶ್ವರನ ದರ್ಶನ ಮಾಡಿ, ಅಂತಿಮವಾಗಿ ವಿರೂಪಾಕ್ಷನ ದರ್ಶನ ಮಾಡಿ ಪ್ರಸಾದವನ್ನು ಪಡೆಯುತ್ತಿದ್ದರು. ಹರಿಹರನ ಕಾಲದ (ಕ್ರಿ.ಶ. 1190) ಹಂಪಿಯ ಶಾಸನವು ಕುರುಗೋಡಿನ ದೊರೆಗಳು "ವಿರೂಪಾಕ್ಷ ತೀರ್ಥ ಸಂರಕ್ಷಣಾರ್ಥಮಾಗಿ" ಮತಂಗ ಪರ್ವತದ ಮೇಲೆ ಸೈನ್ಯವನ್ನಿಟ್ಟಿದ್ದರೆಂದು ಹೇಳುತ್ತದೆ. ಎಂದರೆ ಹಂಪಿಗೆ ವಿರೂಪಾಕ್ಷನೇ ಒಡೆಯನಾದರೂ ಆ ಪ್ರದೇಶದ ಆಡಳಿತ, ರಕ್ಷಣೆಗಳ ಜವಾಬ್ದಾರಿಯನ್ನು ಸಮೀಪದ ಕುರುಗೋಡಿನ ದೊರೆಗಳು ವಹಿಸಿಕೊಂಡಿದ್ದರು. ಆ ದೊರೆಗಳು ಹಂಪಿಗೆ ಒಡೆಯರಲ್ಲ, ಹಂಪಿಯ ಒಡೆಯನ ಪ್ರತಿನಿಧಿಗಳು.*

ಕ್ರಿ.ಶ. 12-14ನೇ ಶತಮಾನಗಳ ಹಂಪಿಯ ವ್ಯವಸ್ಥೆಯು ಈಗಿನ ವ್ಯಾಟಿಕನ್ ವ್ಯವಸ್ಥೆಯನ್ನು ಹೋಲುತ್ತದೆ. ಇಟಲಿಯ ರಾಜಧಾನಿ ರೋಮ್ ನಗರದ ಭಾಗವಾಗಿರುವ ವ್ಯಾಟಿಕನ್ ಇಟಲಿಯಂತೆಯೇ ಸರ್ವತಂತ್ರ ಸ್ವತಂತ್ರ ರಾಷ್ಟ್ರವೊಂದರ ಎಲ್ಲ ಮಾನ್ಯತೆಯನ್ನು ಪಡೆದಿದೆ. ಅದಕ್ಕೆ ಒಡೆಯ ಪೋಪ್; ಪೋಪ್ ಮೇಲೆ ಯಾವುದೇ ರಾಜ್ಯ, ಸರ್ಕಾರಕ್ಕೂ ಅಧಿಕಾರವಿಲ್ಲವೆಂಬುದು ಎಲ್ಲರಿಗೂ ತಿಳಿಯ ವಿಷಯ. ಹಂಪಿಯು ಮಧ್ಯಕಾಲೀನ ದಕ್ಷಿಣ ಭಾರತದ ವ್ಯಾಟಿಕನ್.

---

* ಸು. 1250-30 ರಲ್ಲಿದ್ದ ಕುಮಾರವ್ಯಾಸನು ಹಂಪಿ ಪ್ರದೇಶವನ್ನು 'ವಿರೂಪಾಕ್ಷ ಸೀಮೆ' ಎಂದು ಕರೆದಿರುವುದು ಅರ್ಥಪೂರ್ಣ.

ಮೇಲಿನ ಶೋಧವು ಹಲವು ಸಂಗತಿಗಳ ಮೇಲೆ ಸ್ವಾಗತಾರ್ಹ ಅರ್ಥಪೂರ್ಣ ಬೆಳಕನ್ನು ಚೆಲ್ಲುತ್ತದೆ.

1. ಯಾವುದೇ ರಾಜನ ಅಧೀನದಲ್ಲಿಲ್ಲದ ಪ್ರದೇಶದ ಮುಕ್ತ ದೈವಭಕ್ತಿಮಯ ವಾತಾವರಣದಲ್ಲಿ ಬೆಳೆದ ಹರಿಹರನು ಮನುಷ್ಯ ರಾಜನನ್ನು ಕಥಾನಾಯಕನನ್ನಾಗಿ ಮಾಡಿಕೊಳ್ಳಬಾರದೆಂದು ಸಂಕಲ್ಪಿಸಿ ಆ ಧೋರಣೆಯ ಕೃತಿಗಳನ್ನು ರಚಿಸುವ ಮನೋಧರ್ಮ ಬೆಳೆಸಿಕೊಂಡದ್ದಕ್ಕೆ ವಿವರಣೆಯು ದೊರಕುತ್ತವೆ. ಅವನು ಹೊಯ್ಸಳ ದೊರೆಗಳ ಬಳಿ ಉದ್ಯೋಗಿಯಾಗಿ ಮುಂದುವರಿಯುವುದು ಕಷ್ಟವಾಗಿ ಅದನ್ನು ಬಿಟ್ಟು ತನ್ನ ಸ್ವಸ್ಥಾನವಾದ ಹಂಪಿಗೆ ಮರಳಿದುದು ಏಕೆ ಎಂಬುದಕ್ಕೂ ವಿವರಣೆ ದೊರಕುತ್ತದೆ.

2. ಹದಿಮೂರನೇ ಶತಮಾನದ ಉತ್ತರಾರ್ಧದಲ್ಲಿ ಉತ್ತರ ಭಾರತದ ಮುಸ್ಲಿಮರ ಆಕ್ರಮಣಕ್ಕೆ ಸಿಲುಕಿ ಬಹುತೇಕ ದಕ್ಷಿಣ ಭಾರತದ ನೆಲದಿಂದಲೇ ಇಡೀ ಸನಾತನ ಸಂಸ್ಕೃತಿಯೇ ಮೂಲೋತ್ಪಾಟನೆಯಾಗಬಹುದಾದ ಭೀಕರ ಸನ್ನಿವೇಶ ಒದಗಿದಾಗ ಹಂಪಿಯಲ್ಲಿ 1336ರಲ್ಲಿ ಸ್ಥಾಪನೆಗೊಂಡ ವಿಜಯನಗರ ಸಾಮ್ರಾಜ್ಯ ಆ ದಾಳಿಯನ್ನು ಸಮರ್ಥವಾಗಿ ಎದುರಿಸಿ ಆ ಸಂಸ್ಕೃತಿಯ ರಕ್ಷಕ, ಪೋಷಕನಾಗಿ ನಿಂತಿತು. ಹಕ್ಕ, ಬುಕ್ಕರು ಅಂತಹ ಸಾಮ್ರಾಜ್ಯ ಸ್ಥಾಪನೆಗೆ ಹಂಪಿಯನ್ನೇ ಏಕೆ ಆರಿಸಿದರು ? 'ಏಕೆ' ಎನ್ನುವ ಪ್ರಶ್ನೆಗೆ ಸಂಶೋಧನೆ ಸಾಮಾನ್ಯವಾಗಿ ಉತ್ತರಿಸಲಾರದಾದರೂ, ಆ ಪ್ರಶ್ನೆಗೆ ಹೀಗೆ ಉತ್ತರ ಕಂಡುಕೊಳ್ಳಬಹುದೇನೊ!. ಅ) ಹಂಪಿಯಲ್ಲಿ ಯಾವ ರಾಜನೂ ಆಳುತ್ತಿರಲಿಲ್ಲವಾದ ಕಾರಣ ಆ ಪ್ರದೇಶದಿಂದ ಯಾರನ್ನೂ ಖಾಲಿ ಮಾಡಿಸಬೇಕಾಗಿರಲಿಲ್ಲ. ಆ) ವಿದೇಶಿ ಸಂಸ್ಕೃತಿಯ ಆಕ್ರಮಣದ ವಿರುದ್ಧ ನಿಲ್ಲುವ ಸಾಮ್ರಾಜ್ಯದ ಸ್ಥಾಪನೆ 'ವಿರೂಪಾಕ್ಷ ದೈವ'ಕ್ಕೆ ಅರ್ಥಾತ್ ಅಲ್ಲಿನ ಜನತೆಗೆ, ತೀರ್ಥಕ್ಷೇತ್ರದ ಸಂರಕ್ಷಣೆ ಮಾಡುತ್ತಿದ್ದವರಿಗೆ ಪ್ರಿಯವಾದುದೇ. ಆ ಆಕ್ರಮಣದ ಬಿಸಿ ಆ ಕ್ಷೇತ್ರಕ್ಕೂ ತಟ್ಟಿದ್ದಿತು. ಇ) ಹಂಪಿಯು ಆಯಕಟ್ಟಿನ ಪರಿಸರ, ಬೆಟ್ಟ ಗುಡ್ಡ ಕಾಡುಗಳಿಂದ ಆವೃತವಾದ, ಜಲ ಸಮೃದ್ಧಿಯ ಪ್ರದೇಶ ಅದಾಗಿತ್ತು. ಇದೆಲ್ಲವೂ ಊಹೆ ಎಂಬಲ್ಲಿ ಅನುಮಾನವಿಲ್ಲವಾದರೂ ಆ ಊಹೆ ನಿರಾಧಾರಿತವಾದುದಲ್ಲ.

ಇಷ್ಟಂತೂ ನಿಜ, ಯಾವುದೇ ರಾಜನ ಅಂಕೆಗೂ ಒಳಪಡದಿದ್ದ ಹಂಪಿಯನ್ನು ವಿಜಯನಗರ ಸ್ಥಾಪಕರು ರಾಜ್ಯದ ಕೇಂದ್ರವನ್ನಾಗಿ ಆಯ್ಕೆ ಮಾಡಿಕೊಂಡರು ಮತ್ತು ಆ ವಿಷಯದಲ್ಲಿ ಯಾವುದೇ ಪ್ರತಿರೋಧ ವ್ಯಕ್ತವಾಗಲಿಲ್ಲ. ಆ ಸಾಮ್ರಾಜ್ಯವು 1336ರಲ್ಲಿ ಆರಂಭವಾದ ಬಳಿಕ, ಅಲ್ಲಿಂದ ಆಳಿದ ದೊರೆಗಳು ಮೊದ ಮೊದಲು ತಮ್ಮ ರಾಜಶಾಸನಗಳನ್ನು ವಿರೂಪಾಕ್ಷನ ಹೆಸರಲ್ಲಿ ಹೊರಡಿಸಿದರೆಂಬುದಕ್ಕೆ ಅವರ ತಾಮ್ರ ಶಾಸನಗಳೇ ಸಾಕ್ಷಿ. ಆ ದೊರೆಗಳು ತಮ್ಮನ್ನು ರಾಜರೆಂದು ಭಾವಿಸಿದುದಕ್ಕಿಂತ ತಾವು ವಿರೂಪಾಕ್ಷ ದೈವದ ಪ್ರತಿನಿಧಿಗಳೆಂದೇ ಭಾವಿಸಿಕೊಂಡಿದ್ದರೆಂಬಲ್ಲಿ ಅನುಮಾನವಿಲ್ಲ.

## 12

ಯಾವನೇ ಸಂಶೋಧಕ ತಾನು ಕಂಡುಹಿಡಿದುದರ ಗುರುತಿಸಿದುದರ ಬಗ್ಗೆ, ತನಗೆ ಒಂದು ಸತ್ಯದ ದರ್ಶನವಾದುದರ ಬಗ್ಗೆ ಹೆಮ್ಮೆಯಿಂದ ಹೇಳಿಕೊಳ್ಳುವ ಹಕ್ಕು ಅವನಿಗಿದೆಯಾದರೂ ಅದರ ಜೊತೆ ಜೊತೆಗೇ ಒಂದು ಹೊಸ ಸಂಗತಿ / ಪರಿಕಲ್ಪನೆ / ಕೃತಿ / ಸತ್ಯ ಹೊರಬರಲು, ಜನತೆಗೆ ತಿಳಿಯಲು ತಾನು ಒಂದು ನಿಮಿತ್ತವಾದೆನೆಂಬ ಅರಿವೂ ಅವನಿಗಿರಬೇಕು. ನಿಜವಾದ ಸಂಶೋಧಕ ಒಂದು ಹೊಸ ಆವಿಷ್ಕಾರ ಹೊರಬರಲು ತಾನೊಂದು ಮಾಧ್ಯಮವಾದೆನೆಂದೇ ಭಾವಿಸುತ್ತಾನೆ. ಒಂದು ಸತ್ಯ ಹೊರಬರಲು ಅವನು ನಿಮಿತ್ತವಾದ ಕಾರಣ ಆ ಸತ್ಯ ಅವನಿಗೆ ಕೃತಜ್ಞವಾಗಿರಬೇಕು, ನಿಜ. ಆದರೆ ಅವನಲ್ಲದಿದ್ದರೆ ಮುಂದೆ ಎಂದೋ ಒಮ್ಮೆ ಯಾವನೋ ಒಬ್ಬನ ಮೂಲಕ ಅದು ಹೊರಬರುತ್ತಿತ್ತು, ಅನುಮಾನವಿಲ್ಲ. ಆ ಕಾರಣ, ಆ ಸತ್ಯ ತನ್ನನ್ನು ಆರಿಸಿಕೊಂಡಿತು, ತನ್ನನ್ನು ಧನ್ಯನಾಗಿಸಿತು ಎಂದೇ ಸಂಶೋಧಕ ಭಾವಿಸಬೇಕು. ಶಿವನ ಪತ್ನಿ ದಾಕ್ಷಾಯಿಣಿ ಅಗ್ನಿಪ್ರವೇಶ ಮಾಡಿ ಗಿರಿರಾಜ ಮೇನಕೆಯರಿಗೆ ಮಗಳಾಗಿ ಜನಿಸಿದಳು. ಆ ತಂದೆ ತಾಯಿಗಳು ಅವಳು ತಮ್ಮ ಮಗಳೆಂದು ಹೇಳಿಕೊಂಡರೂ, ಅವಳ ಜನನವು ಪೂರ್ವದಿಕ್ಕು ಸೂರ್ಯನಿಗೆ ಜನ್ಮವಿತ್ತಂತಿತ್ತು ಎಂದು ಹರಿಹರ ಕವಿ ಹೇಳುತ್ತಾನೆ. ಸೂರ್ಯನು ತನ್ನ ಪುತ್ರ ಎಂದು ಹೆಮ್ಮೆಪಡಲು ಪೂರ್ವದಿಕ್ಕಿಗೆ ಎಷ್ಟುಮಟ್ಟಿಗೆ ಹಕ್ಕಿದೆಯೋ ಅಷ್ಟೇ ಹಕ್ಕು ಗಿರಿರಾಜ ಮೇನಕೆಯರಿಗೆ ! ಸಂಶೋಧಕ ತನ್ನ ಸಂಶೋಧನೆಯು ತನ್ನದು ಎಂದು ಹೇಳಿಕೊಳ್ಳಲು ಹಕ್ಕಿದೆಯಾದರೂ ಆ ಹಕ್ಕಿಗೆ ಮಿತಿಗಳುಂಟು ಎಂಬುದು ಸ್ಪಷ್ಟ.

ತನ್ನ ಶೋಧದಿಂದ ಲೋಕಕ್ಕೆ ಏನು ಪ್ರಯೋಜನವೆನ್ನುವ ಪ್ರಶ್ನೆ ಸಂಶೋಧಕನನ್ನು ಬಾಧಿಸುವುದಿಲ್ಲ. ಆ ಶೋಧ ತನಗೆ ಕೀರ್ತಿಯನ್ನು ತರುತ್ತದೆ ಎಂಬ ಪರಿಗಣನೆ ಸಂಶೋಧಕನಿಗೆ ಇರದಿರಲು ಸಾಧ್ಯವಿಲ್ಲ (ಯುವಕರಾದರೆ 'ಬಡ್ತಿ'ಗಳ ಆಸೆ ಇಟ್ಟುಕೊಳ್ಳದಿರಲೂ ಸಾಧ್ಯವಿಲ್ಲ!). ಅದರ ಜೊತೆ, ಹೊಸದನ್ನು ಕಂಡುಹಿಡಿದಾಗ ಆಗುವ ಸಂತೋಷ, ಕೆಲವೊಮ್ಮೆ ಆನಂದಾತಿರೇಕವೂ ಒಂದು ಪ್ರತಿಫಲವೇ. ಅವನಿಗೆ ಉಂಟಾಗುವ ಆ ಆತ್ಮತೃಪ್ತಿ ಕಡಮೆ ಲಾಭದ್ದೇನೂ ಅಲ್ಲ. ಇಂದಲ್ಲ ನಾಳೆ ಅವನ ಯಾವುದೋ ಶೋಧ ಯಾವುದೋ ರೀತಿಯಲ್ಲಿ ಬಳಕೆಯಾಗಿಯೇ ಆಗುತ್ತದೆ. ಸಂಶೋಧನೆಯಲ್ಲಿ ಚಿಕ್ಕದು, ದೊಡ್ಡದು ಎಂಬುದಿಲ್ಲ. ಕಿರುಹಣತೆಗೆ, ಸೀಮೆಎಣ್ಣೆ ಲಾಟೀನಿಗೆ, ವಿದ್ಯುಚ್ಛಕ್ತಿ ದೀಪಕ್ಕೆ, ಮೈಲುಗಟ್ಟಲೆ ಬೆಳಕು ಚೆಲ್ಲುವ ಬೃಹತ್ ವಿದ್ಯುದ್ದೀಪಕ್ಕೆ ಅವುಗಳಿಗೆ ತಮ್ಮದೇ ಕಿರು, ಹಿರಿ ಉಪಯೋಗಗಳಿವೆ. ಯಂತ್ರವೊಂದರಲ್ಲಿ ಬೃಹತ್ ಎಂಜಿನ್ನಿನಷ್ಟೇ ಕಿರು ನಟ್ ಬೋಲ್ಟಿಗೂ ಸ್ಥಾನವಿದೆ. ಮುಖ್ಯ ಸಂಗತಿಯೆಂದರೆ ಜ್ಞಾತದಿಂದ ಅಜ್ಞಾತಕ್ಕೆ ಹೋಗಿ ಆ ಅಜ್ಞಾತವು ಜ್ಞಾತವಾಗುವಂತೆ ಮಾಡಿ ಅದನ್ನು ಜ್ಞಾನದ ಭಾಗವಾಗಿಸಿ ಒಟ್ಟು ಜ್ಞಾನವನ್ನು ಪ್ರಮಾಣಾತ್ಮಕವಾಗಿ ಗುಣಾತ್ಮಕವಾಗಿ ಬೆಳೆಸುವ, ಹೊಸದಾಗಿ ಬೆಳಕಿಗೆ ಬಂದ ಅಜ್ಞಾತದ ಸಹಾಯದಿಂದ ಜ್ಞಾತವನ್ನು ದೀಪ್ತಗೊಳಿಸುವ, ಬಿಡಿಗಳಿಂದ ಇಡಿಗೆ ಹೋಗಿ ಆ ಇಡಿಯ ಸಹಾಯದಿಂದ ಉಳಿದ

ಬಿಡಿಗಳನ್ನು ವಿವರಿಸುವ, ಅರ್ಥಪೂರ್ಣವಾಗಿ ವ್ಯಾಖ್ಯಾನಿಸುವ ಸತ್ಯಕ್ಷೇತ್ರದ ಶ್ರಮಜೀವಿ, ನೇಗಿಲ ಯೋಗಿ ಸಂಶೋಧಕ.

ಉಳಿದ ಕ್ಷೇತ್ರಗಳಲ್ಲಿ ಸಂಶೋಧಕನಿಗೇ ಅಗ್ರಸ್ಥಾನ. ಆದರೆ ಸಾಹಿತ್ಯವೂ ಸೇರಿದಂತೆ ಸೃಜನಶೀಲ ಕ್ಷೇತ್ರದಲ್ಲಿ ಅವನದು ಕೆಳಸ್ಥಾನ. ಸಾಹಿತ್ಯ ವಲಯಗಳಲ್ಲಿ ಕವಿ, ಕಾದಂಬರಿಕಾರ, ಸಣ್ಣಕತೆಗಾರ, ನಾಟಕಕಾರರದು ಮಾಲಿಕನ ಸ್ಥಾನ, ವಿಮರ್ಶಕರದ್ದು ಅಧಿಕಾರಿಗಳ ಸ್ಥಾನ; ಸಂಶೋಧಕರದ್ದು ಕಾರ್ಮಿಕರ ಸ್ಥಾನ ಎಂಬುದು ಸ್ವಲ್ಪ ನಿಜವಾದ ತೀರ ಸಾಮಾನ್ಯೀಕೃತ ಹೇಳಿಕೆ. ಒಂದು ಶ್ರೇಷ್ಠ ಸಾಹಿತ್ಯ ಕೃತಿ ಎಲ್ಲ ಕಾಲಕ್ಕೂ ತನ್ನ ಸ್ಥಾನವನ್ನು ಉಳಿಸಿಕೊಳ್ಳುವುದು ಕಷ್ಟವಾಗಬಹುದು. ಅಭಿರುಚಿ, ಶೈಲಿ ಬದಲಾವಣೆಯಾದಂತೆ ಒಂದು ಕೃತಿ ಹೆಚ್ಚು ಹೆಚ್ಚು ಓದುಗರನ್ನು ಗಳಿಸಿಕೊಳ್ಳಬಹುದು ಅಥವಾ ಕಳೆದುಕೊಳ್ಳಬಹುದು. ಆದರೆ ಒಂದು ಸಂಶೋಧನ ಕೃತಿ ಭಾಷಾವಲಂಬಿಯಾಗದೇ ಇರುವುದರಿಂದ, ಅದು ಸತ್ವಶಾಲಿಯಾಗಿದ್ದರೆ ಉದ್ದಕ್ಕೂ ತನ್ನ ಸ್ಥಾನವನ್ನು ಉಳಿಸಿಕೊಳ್ಳುತ್ತದೆ. ಒಂದಂಶ ಗಮನಾರ್ಹ: ಕಾವ್ಯವೋ ಕತೆಯೋ ಅದು ಅದರ ಲೇಖಕನ ಹೆಸರ ಜೊತೆಯಲ್ಲಿಯೇ ಉಳಿದು ಬಂದರೆ, ಒಂದು ಸಂಶೋಧನೆ ಕ್ರಮೇಣ ಸಂಶೋಧಕನ ಹೆಸರಿಂದ ಬೇರೆಗೊಂಡು ಒಟ್ಟು ಜ್ಞಾನದ ಭಾಗವಾಗುವ ಪ್ರಸಂಗಗಳೇ ಹೆಚ್ಚು. ಮತ್ತು ಯಾವುದೇ ಸಂಶೋಧನೆ ಉದ್ದಕ್ಕೂ ಉತ್ತಮಗೊಳ್ಳುತ್ತ ಮಾರ್ಪಾಟಾಗುತ್ತ ಹೋಗುವುದರಿಂದ, ಆ ಸಂಶೋಧನೆಯ 'ಇತಿಹಾಸೋಗ್ರಫಿ'ಯಲ್ಲಿ ಅರ್ಥಾತ್ ಆ ವಿಷಯಕವಾದ ಜ್ಞಾನ ಬೆಳೆದು ಬಂದಿರುವುದರ ಇತಿಹಾಸದಲ್ಲಿ ಸಂಶೋಧಕನ ಹೆಸರು ಇತರರ ಜೊತೆ ಉಲ್ಲೇಖವಾಗಬಹುದು ಅಥವಾ ಆಗದಿರಬಹುದು. ಸಂಶೋಧಕ ಸತ್ಯಶೋಧಕ್ಕಾಗಿ ತನ್ನ ಶ್ರಮ ಸಮಯಗಳನ್ನು ಮೀಸಲಿಟ್ಟು, ತನ್ನನ್ನೇ ಸಂಶೋಧನೆಗಾಗಿ ವ್ಯಯಿಸಿದ ನಿಷ್ಕಾಮ ಕರ್ಮಯೋಗಿ.

## 13

ಅಲ್ಲಮನ ಕೆಳಗಿನ ಒಂದು ವಚನ ಸಂಶೋಧನ ಸಿದ್ಧಾಂತಕ್ಕೆ ನೀಡಿರುವ ಒಂದು ಕೊಡುಗೆಯೆಂದೇ ಭಾವಿಸಿದ್ದೇನೆ.

ಕೃತಯುಗದಲ್ಲಿ ಶ್ರೀ ಗುರು ಶಿಷ್ಯಂಗೆ ಬಡಿದು ಬುದ್ಧಿಯ ಕಲಿಸಿದರೆ
ಆಗಲಿ ಮಹಾಪ್ರಸಾದವೆಂದೆನಯ್ಯ
ತ್ರೇತಾಯುಗದಲ್ಲಿ ಶ್ರೀ ಗುರು ಶಿಷ್ಯಂಗೆ ಬಯ್ದು ಬುದ್ಧಿಯ ಕಲಿಸಿದರೆ
ಆಗಲಿ ಮಹಾಪ್ರಸಾದವೆಂದೆನಯ್ಯ
ದ್ವಾಪರದಲ್ಲಿ ಶ್ರೀ ಗುರು ಶಿಷ್ಯಂಗೆ ಝುಂಕಿಸಿ ಬುದ್ಧಿಯ ಕಲಿಸಿದರೆ
ಆಗಲಿ ಮಹಾಪ್ರಸಾದವೆಂದೆನಯ್ಯ
ಕಲಿಯುಗದಲ್ಲಿ ಶ್ರೀ ಗುರು ಶಿಷ್ಯಂಗೆ ವಂದಿಸಿ ಬುದ್ಧಿಯ ಕಲಿಸಿದರೆ
ಆಗಲಿ ಮಹಾಪ್ರಸಾದವೆಂದೆನಯ್ಯ
ಗೊಗೇಶ್ವರಾ (ಗುಹೇಶ್ವರಾ) ನಿಮ್ಮ ಕಾಲದ ಕಟ್ಟಳೆಯ ಕಲಿತನಕ್ಕೆ
ನಾನು ಬೆರಗಾದೆನು

ಮೇಲಿನ ವಚನವನ್ನು ಆಧುನಿಕ ಕಾಲದ ಕಲುಷಿತ ಗುರು-ಶಿಷ್ಯ (ಉಪಾಧ್ಯಾಯ - ವಿದ್ಯಾರ್ಥಿ) ಸಂಬಂಧವನ್ನು ಸೂಚಿಸುತ್ತದೆಯೆಂದು ಈ ಕಾಲದ ವ್ಯಾಖ್ಯಾನಕಾರರು ಅರ್ಥೈಸುತ್ತಾರೆ. ಇಂದಿನ ವಾತಾವರಣದ ಹಿನ್ನೆಲೆಯಲ್ಲಿ ಆ ವಚನವನ್ನು ಹಾಗೆ ಅರ್ಥೈಸುವುದು ಸ್ವಾಭಾವಿಕವಾದರೂ ಅದು ತಪ್ಪು ವ್ಯಾಖ್ಯಾನ. ನಮಗೆ ಪ್ರಸ್ತುತವೆಂದರೆ, ಆ ವಚನದ ಮೂಲಕ ಅಲ್ಲಮ ವಾಸ್ತವವಾಗಿ ಏನನ್ನು ಹೇಳುತ್ತಿದ್ದಾನೆ ಎಂಬುದೇ ಹೊರತು, ನಮಗೆ ಏನನ್ನಿಸುತ್ತದೆ ಎಂಬುದಲ್ಲ.

ಇಲ್ಲಿ ಗುರು-ಶಿಷ್ಯ ಇವರು ಸ್ಥಾಯಿ, ಇವರ ವಯಸ್ಸಿನ ಅಂತರವೂ ಸ್ಥಾಯಿ. ಆದರೆ ಕಾಲ ಬದಲಾದಂತೆ ಗುರುವು ಶಿಷ್ಯನನ್ನು ನೋಡುವ ಪರಿಕ್ರಮದಲ್ಲಿ ಬದಲಾವಣೆಯಾಗುತ್ತದೆ. ಆ ಕಾಲ ಬದಲಾವಣೆ ವಾಸ್ತವವಾಗಿ ಶಿಷ್ಯನಲ್ಲಿ ಆದ ಬದಲಾವಣೆ. ನಾಲ್ಕು ಯುಗಗಳು ಪ್ರಾರಂಭದ ದೆಸೆಯಿಂದ ಪ್ರಬುದ್ಧಾವಸ್ಥೆಯವರೆಗಿನ ಶಿಷ್ಯನ ಬೇರೆ ಬೇರೆ ಹಂತಗಳ ಸಂಕೇತಗಳು. ಚಿಕ್ಕವಯಸ್ಸಿನ ಶಿಷ್ಯನನ್ನು ದಂಡಿಸಿ ಬೋಧನೆ ಮಾಡಿದ ಗುರುವಿಗೆ ಮುಂದಿನ ಎರಡು ಹಂತಗಳಲ್ಲಿ ದಂಡನೆಯ ಅಗತ್ಯ ಬರಲಿಲ್ಲ; ಬೈದರೆ ಸಾಕಿತ್ತು, ಝುಂಕಿಸಿದರೆ ಸಾಕಿತ್ತು. ತನ್ನ ಶಿಷ್ಯನಿಗೆ ತನ್ನೆಲ್ಲ ಜ್ಞಾನವನ್ನು ಮನಃಪೂರ್ವಕವಾಗಿ ಧಾರೆಯೆರೆದುದರಿಂದ, ಒಂದು ಹಂತದಲ್ಲಿ, ಜ್ಞಾನದಲ್ಲಿ (ಲೌಕಿಕ ಜ್ಞಾನದಲ್ಲಿ ಅಥವಾ ಆಧ್ಯಾತ್ಮಿಕ ಜ್ಞಾನದಲ್ಲಿ) ಶಿಷ್ಯನು ಗುರುವಿಗೆ ಸಮಾನನಾಗುತ್ತಾನೆ, ಗುರುವನ್ನು ಮೀರಿಸುತ್ತಾನೆ. ಆಗ, ಹಿಂದೆ ದಂಡಿಸಿದ್ದ ಗುರುವು ಶಿಷ್ಯನಿಗೆ ನಮಸ್ಕರಿಸಿ ಜ್ಞಾನ ಬೋಧೆ ಮಾಡುತ್ತಾನೆ; ಆದರೆ ಆ ನಮಸ್ಕಾರ ದೈಹಿಕವಾದುದಲ್ಲ, ಮಾನಸಿಕವಾದುದು, ಆಧ್ಯಾತ್ಮಿಕವಾದುದು ಮತ್ತು ಆ ನಮಸ್ಕಾರ ಶಿಷ್ಯನ ದೇಹಕ್ಕಲ್ಲ, ಶಿಷ್ಯನ ಒಳಗಿನ ಜ್ಞಾನಕ್ಕೆ. ಆ ಜ್ಞಾನಕ್ಕೆ ಮಾರುಹೋದ ಗುರುವು ಆಗ ಶಿಷ್ಯನಿಗೆ ಕಲಿಸಿದ್ದು ಇದು - "ನೀನಿನ್ನೂ ಕಲಿಯಬೇಕಾದ್ದು ಇದೆ, ಜ್ಞಾನ ಅನಂತವಾದುದು". ಕೊನೆಯ ಹಂತದ "ವಂದಿಸಿ ಬುದ್ಧಿಯ ಕಲಿಸು" ಎಂಬ ಮಾತಿಗೆ ವಾಚ್ಯಾರ್ಥವಿಲ್ಲ. ಅದು ಸಂಪೂರ್ಣವಾಗಿ ಆಧ್ಯಾತ್ಮಿಕ ಲೋಕ ಸಂಬಂಧಿಯಾದ್ದು. ಗಮನಿಸಬೇಕಾದ ಸಂಗತಿಯೆಂದರೆ ಪ್ರತಿಯೊಬ್ಬ ಗುರುವೂ ಆಳದಲ್ಲಿ ಶಿಷ್ಯನೇ ; ಪ್ರತಿಯೊಬ್ಬ ಬೋಧಕನೂ ಆಳದಲ್ಲಿ ಬೋಧಿತನೇ. ಆತ್ಮದ ಸಹಜಜ್ಞಾನ ಸ್ಥಿತಿಯಲ್ಲಿ ಗುರುವೂ ಶಿಷ್ಯನೂ ಒಂದೇ ಸಮರಸ ಭಾವದವರಾದರೂ, ಲೌಕಿಕವಾಗಿ ಎಂದೆಂದೂ ಗುರುವು ಗುರುವೇ, ಶಿಷ್ಯನು ಶಿಷ್ಯನೇ. (ನೋಡಿ - ಅಲ್ಲಮನ ಮೇಲ್ಕಂಡ ವಚನಕ್ಕೆ ಮಹಾಲಿಂಗದೇವನ ವ್ಯಾಖ್ಯಾನ - "ಚತುರ್ಥದಲ್ಲಿ ಗುರು ಶಿಷ್ಯ ಸಂಬಂಧವೆಂಬ ಭಿನ್ನ ಭಾವವಳಿದು ಸೋಹಂಭಾವ ಸ್ವರೂಪವಾಗಿ ಸೇವ್ಯ ಸ್ಥಲವನಿಂಬುಗೊಂಡಿದ್ದನೆಂಬುದೀ ಕಲಿಯುಗದಲ್ಲಿ ಶ್ರೀ ಗುರು ಶಿಷ್ಯಂಗೆ ವಂದಿಸಿ ಬುದ್ಧಿಯ ಕಲಿಸಿದರೆ ಆಗಲಿ ಮಹಾಪ್ರಸಾದವೆಂದೆನಯ್ಯ ಎಂಬ ಶಬ್ದಕ್ಕರ್ಥ").

ಪ್ರತಿಯೊಬ್ಬ ಗುರುವೂ ಶಿಷ್ಯನು ತನ್ನನ್ನು ಜ್ಞಾನದಲ್ಲಿ ಮೀರಿಸಿ ಬೆಳೆಯಬೇಕೆಂದು ಅಪೇಕ್ಷಿಸುತ್ತಾನೆ. ಶಿಷ್ಯ ತನಗಿಂತ ದೊಡ್ಡ ಜ್ಞಾನಿಯಾಗಬೇಕೆಂಬ ಬಯಕೆ ಅವನದು ("ಶಿಷ್ಯಾದಿಚ್ಛೇತ್ ಪರಾಜಯಂ"). ಮಾತ್ರವಲ್ಲ ಅವನು ಜ್ಞಾನವನ್ನು ಬೆಳೆಸಬೇಕು, ಅರಿವಿನ ದಿಗಂತವನ್ನು ವಿಸ್ತರಿಸಬೇಕು ಎಂಬ ಬಯಕೆಯೂ ಅವನದು. ಜ್ಞಾನ ಬೆಳಿಮುಕೊಂಡು

ಬಂದಿರುವ ರೀತಿಯೇ ಅದು. ವ್ಯಕ್ತಿ ಒಂದು ನಿರ್ದಿಷ್ಟ ಕಾಲದವರೆಗಿನ ಒಂದು ವಿಷಯಕವಾದ ಅರಿವನ್ನು ಅಂತರ್ಗತಗೊಳಿಸಿಕೊಂಡು ಬಳಿಕ ಅದನ್ನು ತನ್ನ ಶಕ್ತ್ಯಾನುಸಾರ ಬೆಳಸಬೇಕು. ಸಂಶೋಧನೆಯ ಕೆಲಸವೂ ಅದೇ ತಾನೇ ! ವಿಜ್ಞಾನಿಯೋ ಸಮಾಜಶಾಸ್ತ್ರಜ್ಞನೋ ವೈದ್ಯ, ಕೃಷಿ ವಿಜ್ಞಾನಿಗಳೋ ಎಲ್ಲ ಕ್ಷೇತ್ರಗಳ ಸಂಶೋಧಕರೂ ಹಿಂದಿನವರ ಶ್ರಮದ ಫಲವಾದ ಜ್ಞಾನವನ್ನು ಗರ್ಭೀಕರಿಸಿಕೊಂಡು ಅದನ್ನು ಬೆಳಸುತ್ತ ಹೋಗುತ್ತಾರೆ. ಅದರ ನಿರೂಪಣೆಯಲ್ಲಿ ಅವರು ತಮಗಿಂತ ಹಿಂದಿನವರ ಶ್ರಮ ಪ್ರಯತ್ನಗಳನ್ನು ಸೂಕ್ತ ರೀತಿಯಲ್ಲಿ ಸ್ಮರಿಸುತ್ತಾರೆ. ಒಬ್ಬ ಸಂಶೋಧಕನ ಶ್ರಮ ಸಾರ್ಥಕವಾಗುವುದು ತನ್ನ ಕೆಲಸವನ್ನು ಇತರರು ಮುಂದುವರಿಸಿ ಅದರ ಪರಿಧಿಯನ್ನು ವಿಸ್ತರಿಸಿದಾಗ, ತಾನು ಮಾಡಿರಬಹುದಾದ ತಪ್ಪುಗಳನ್ನು ತಿದ್ದಿದಾಗ. ಹಾಗೆ ತಿದ್ದಿ ಸರಿಯಾದುದನ್ನು ಗುರುತಿಸಲು ತನ್ನ 'ತಪ್ಪು' ಸಹಾಯಕವಾಯಿತು ಎಂದೇ ಅವನು ಭಾವಿಸುತ್ತಾನೆ. ತನ್ನ ಶೋಧಗಳಿಂದ ಸಾಮಾಜಿಕ ಒಳಿತು ಆದಾಗ ಅವನಿಗೆ ಸಂತೋಷವಾಗದಿರುತ್ತದೆಯೇ ? ಸಂಶೋಧಕನಿಗೆ ತನಗಿಂತ ಹಿಂದಿನ ತನ್ನ ಕಾಲದ ಎಲ್ಲ ಸಂಶೋಧಕರೂ, ಆ ಜ್ಞಾನಶಿಖರ ಪರ್ವತಾರೋಹಿಗಳೆಲ್ಲರೂ ಗುರುಗಳೇ ; ವಿದ್ಯಾರ್ಥಿಗಳೂ ಒಂದರ್ಥದಲ್ಲಿ ಗುರುಗಳೇ. 'ಗುರು'ವು ಶಿಷ್ಯನನ್ನು ಬೆಳಸುವ ಪ್ರಯತ್ನದಲ್ಲಿ ತಾನೂ ಬೆಳೆಯುತ್ತಾನೆ; ಲೌಕಿಕ ಸ್ತರದಲ್ಲಿಯೇ ನೋಡಿದಾಗ, ಉಪಾಧ್ಯಾಯರು ವಿದ್ಯಾರ್ಥಿಗಳಿಗೆ ಪಾಠ ಹೇಳುವ ಮುನ್ನ ಓದಿ ಸಿದ್ಧತೆ ಮಾಡಿಕೊಳ್ಳುವ ಸಂದರ್ಭದಲ್ಲಿ ತಾವೂ ಬೆಳೆದಿರುತ್ತಾರೆ; ಅಷ್ಟೇ ಅಲ್ಲ, ಪಾಠ ಹೇಳುವಾಗ ಅವರಿಗೆ ಅರ್ಥವಾಗದಿದ್ದ ಎಷ್ಟೋ ಸಂಗತಿಗಳು ಅರ್ಥವಾಗಿರುತ್ತವೆ ಮತ್ತು ಒಮ್ಮೊಮ್ಮೆ ಹೊಸ ಹೊಳಹುಗಳು ಮಿಂಚಿರುತ್ತವೆ.

ಜ್ಞಾನದ ನಿರಂತರ ಸಂಚಿತವರ್ಧನ ಗುಣದ ಕ್ರಿಯಾರೂಪವೆಂದು ಭಾವಿಸಬಹುದಾದ ಸಂಶೋಧನೆಯ ಲಕ್ಷಣವನ್ನು ಅಲ್ಲಮನ ಮೇಲಿನ ವಚನವು ಸೂಚಿಸುತ್ತದೆಯಲ್ಲವೇ ? ಅನುಭಾವಿ, ಋಷಿ, ಸಂತ ಇವರೂ ಕೂಡ ಸೋಲರಿಯದ, ಸೋಲಿಗೆ ಹೆದರದ, ಆಯಾಸವರಿಯದ ಹುಡುಕಾಟದವರೇ ಆಗಿದ್ದಾರೆ.

ನನಗೆ ಸಂಶೋಧನೆ ಬಗ್ಗೆ ಮಾತನಾಡುವುದಕ್ಕಿಂತ ಸಂಶೋಧನೆ ಮಾಡುವುದು ಹೆಚ್ಚು ಪ್ರಿಯವಾದುದು. ಸಾಹಿತ್ಯ - ಧಾರ್ಮಿಕ ಕ್ಷೇತ್ರಗಳಲ್ಲಿ ವಸ್ತುನಿಷ್ಠ ಸಂಶೋಧನೆಗಳಿಗೆ, ಸದುದ್ದೇಶದ ಎಲ್ಲ ಸಾಹಿತ್ಯ ಕೃತಿಗಳಿಗೆ ಎಲ್ಲ ಕಾಲದಲ್ಲೂ ಪ್ರಿಯ ಸ್ವಾಗತ ದೊರೆಯುತ್ತದೆ, ದೊರೆತಿದೆ ಎಂದು ಹೇಳಲು ಈಚಿನವರೆಗೆ ನಡೆದಿರುವ ಘಟನೆಗಳು ಅವಕಾಶ ಮಾಡಿಕೊಡುವುದಿಲ್ಲ.* ಆದರೆ ಸಂಶೋಧಕನೋ ಸಾಹಿತಿಯೋ ಸದುದ್ದೇಶದ ಮುಕ್ತ ಮನಸ್ಸಿನವನಾಗಿದ್ದರೆ, ಅಳುಕಬೇಕಾಗಿಲ್ಲ ಎಂಬ ನೀತಿಬೋಧನೆ ಅನಗತ್ಯ. ಯಾರೂ ಅಳುಕಿಲ್ಲ,

---

* 1. ಆರ್. ನರಸಿಂಹಾಚಾರ್ಯರು ತಮ್ಮ 'ಕರ್ಣಾಟಕ ಕವಿಚರಿತೆ'ಯಲ್ಲಿ ಬೇಕೆಂದೇ ವೀರಶೈವ ಕವಿಗಳನ್ನು, ವಚನಕಾರರನ್ನು ಉಪೇಕ್ಷಿಸಿದರೆಂಬ ತೀವ್ರ, ಆದರೆ ನಿರಾಧಾರ ಆಕ್ಷೇಪಗಳು ಬಂದುವು.

2. ಡಿ.ಎಲ್. ನರಸಿಂಹಾಚಾರ್ಯರು ಸಿದ್ಧರಾಮನಿಗೆ ಶಾಸ್ತ್ರೋಕ್ತ ಲಿಂಗದೀಕ್ಷೆಯಾಗಿದ್ದುದರ ಬಗ್ಗೆ ಸಂದೇಹ ವ್ಯಕ್ತಪಡಿಸಿದ್ದಕ್ಕೆ ತೀವ್ರ ಆಕ್ಷೇಪಗಳು ಬಂದುವು. ಡಿ.ಎಲ್.ಎನ್. ಅವರಿಗೆ ಆಧಾರ ದೊರೆತು ಆ ಸಂದೇಹವನ್ನು ಅವರೇ ಕೈಬಿಟ್ಟರು.

ಅಳುಕುವುದೂ ಇಲ್ಲ. ಆದರೆ ನನ್ನ ಮನಸ್ಸಿನ ತೀವ್ರ ಭಾವನೆಯೊಂದನ್ನು ಇಲ್ಲಿ ಹೇಳಿಕೊಳ್ಳಲೇಬೇಕು. ಅದು ವೈಯಕ್ತಿಕ ಬದುಕಿಗೂ ಸಾಹಿತ್ಯ ಸಂಶೋಧನೆಗಳಿಗೂ ನೇರವಾಗಿ ಸಂಬಂಧಿಸಿದ್ದು. ಒಟ್ಟು ಇರುವ ಸಾಮಾನ್ಯ ಭಾವನೆಯೆಂದರೆ. ಸಾಹಿತಿಯೋ ಸಂಶೋಧಕನೋ

---

3. ಮಾಸ್ತಿಯವರ ಚನ್ನಬಸವನಾಯಕ ಕಾದಂಬರಿಯಲ್ಲಿ ವೀರಶೈವ ಪಾತ್ರಗಳಿಗೆ ಅನ್ಯಾಯವಾಗಿದೆಯೆಂಬ ಆರೋಪಗಳು ಹಿಂದೊಮ್ಮೆ ತೀವ್ರವಾಗಿ ಕಾಣಿಸಿಕೊಂಡವು (ನಾವು ಕೆಲವರು ಮಾಸ್ತಿ ಬೆಂಬಲಕ್ಕೆ ನಿಂತೆವು).

4. ರಂ.ಶ್ರೀ. ಮುಗಳಿಯವರು ತಮ್ಮ 'ಕನ್ನಡ ಸಾಹಿತ್ಯ ಚರಿತ್ರೆ'ಯಲ್ಲಿ 'ಚಾಮರಸ ಯುಗ' ಎಂಬುದರ ಬದಲು 'ಕುಮಾರವ್ಯಾಸ ಯುಗ' ಎಂದು ಬಸವೋತ್ತರ ಕಾಲವನ್ನು ನಿರ್ದೇಶಿಸಿದರೆಂಬ ಕಾರಣದಿಂದ ಅವರ ಕೃತಿಯನ್ನು ಸುಡಲಾಯ್ತು.

5. ಕುವೆಂಪು ಅವರೇ ನನಗೆ ತಿಳಿಸಿದ್ದು - ಅವರ 'ವಚನಕಾರ ಬಸವೇಶ್ವರರು' ಎಂಬ ಪ್ರಬಂಧದ ಕೆಲ ವಾಕ್ಯಗಳ ಬಗ್ಗೆ ತೀವ್ರ ಆಕ್ಷೇಪಣಾ ಪತ್ರಗಳು ಬಂದುದರಿಂದ, ಬಸವಣ್ಣನವರ ಬಗ್ಗೆ ಬರೆಯಬೇಕೆಂದಿದ್ದ ನಾಟಕವನ್ನು ಕೈಬಿಟ್ಟರು.

6. ನನ್ನ "ಶೂನ್ಯ ಸಂಪಾದನೆಯನ್ನು ಕುರಿತು" ಕೃತಿ ಬಗ್ಗೆ ತೀವ್ರ ಆರೋಪಗಳು ವ್ಯಕ್ತವಾಗಿ, ವಿಶೇಷವಾಗಿ ಧಾರವಾಡದಲ್ಲಿ ಮೈಸೂರಲ್ಲಿ ಟೀಕೆಗಳು ಕೇಳಿ ಬಂದುವು. ಆ ಕಿರು ಕೃತಿಯನ್ನು "ಖಂಡಿಸಿ" ಎಚ್. ತಿಪ್ಪೇರುದ್ರಸ್ವಾಮಿಯವರು "ಶೂನ್ಯ ತತ್ವವಿಕಾಸ ಮತ್ತು ಶೂನ್ಯ ಸಂಪಾದನೆ" ಎಂಬ ದೊಡ್ಡ ಕೃತಿಯನ್ನೇ ಬರೆದರು.

7. "ಮುಕ್ತಿಕಂಠಾಭರಣ" ಕೃತಿಯನ್ನು ಸಂಪಾದಿಸಿ ಪ್ರಕಟಿಸಿದ ಆರ್.ಸಿ. ಹಿರೇಮಠರ ಬಗ್ಗೆ ತೀವ್ರ ಖಂಡನೆಗಳು ಬಂದುವು. ಅದು ಒಂದು ಆಧುನಿಕಪೂರ್ವ ಕೃತಿ. ಅದರಲ್ಲಿನ ವಿಚಾರಗಳೇನೇ ಇರಲಿ, ಅದನ್ನು ಹೊರತಂದಿರುವುದರ ಬಗ್ಗೆ ಆಕ್ಷೇಪ ಸರಿಯಲ್ಲವೆಂದು ನಾನು ಪತ್ರಿಕೆಗಳಿಗೆ ಬರೆದೆ. "ಒಬ್ಬ ಜಂಗಮ ಇನ್ನೊಬ್ಬ ಜಂಗಮನನ್ನು ಬೆಂಬಲಿಸಿದ್ದಾನೆ" ಎಂದು ಅದಕ್ಕೆ ಪ್ರತಿಕ್ರಿಯೆ ಬಂದಿತು.

8. ಅಲ್ಲಮನು ಕೆಳವರ್ಗದವನು, ಅವನು ಸಂಸಾರಿಯಾಗಿದ್ದನೆಂಬ ನನ್ನ ಪ್ರತಿಪಾದನೆಗೂ ವಿರೋಧ ವ್ಯಕ್ತವಾಯಿತು. ನನ್ನ ವಾದ ಇಂದು ಬಹುತೇಕ ಸ್ವೀಕೃತವಾಗಿದೆ.

9. ಚನ್ನಬಸವಣ್ಣನು ಡೋಹರ ಕಕ್ಕಯ್ಯನ ಮಗ ಎಂದು ಬರೆದುದಕ್ಕೆ ಎಂ.ಎಂ. ಕಲಬುರ್ಗಿ ಬಗ್ಗೆ ತೀವ್ರ ಆಕ್ರೋಶ ವ್ಯಕ್ತವಾಗಿ ಅವರಿಗೆ ಬೆದರಿಕೆ ಕೂಡ ಹಾಕಲಾಯ್ತು. ಅವರ ಅಭಿವ್ಯಕ್ತಿ ಸ್ವಾತಂತ್ರ್ಯ ಬಗ್ಗೆ ನಾವು ಬೆಂಗಳೂರಲ್ಲಿ ಬೆಂಬಲ ವ್ಯಕ್ತಪಡಿಸಿದೆವು. (ಆದರೆ ಕಲಬುರ್ಗಿ ತಮ್ಮ ಅಭಿಪ್ರಾಯಗಳನ್ನು ವಾಪಸ್ ಪಡೆದ ರೀತಿ ಸರಿಯಾಗಿರಲಿಲ್ಲ. ಅವರಿಗೆ ತಮ್ಮ ವಾದ ಸರಿಯಲ್ಲವೆಂದು ಮನವರಿಕೆಯಾಗಿ ವಾಪಸು ಪಡೆದಿದ್ದರೆ, ಅದು ಬೇರೆಯಾಗಿರುತ್ತಿತ್ತು).

10. ಪಿ.ವಿ. ನಾರಾಯಣರ 'ಧರ್ಮಕಾರಣ' ಕಾದಂಬರಿ ಬಗ್ಗೆ ಕೆಲವರ ಆಕ್ಷೇಪವು ಭುಗಿಲೆದ್ದು, ಅವರ ವಿರುದ್ಧ 'ಗಣಾಚಾರ' ಕೂಡ ಸಾರಲಾಯ್ತು.

11. ತಮಗೆ ಬಸವಣ್ಣನವರು ಕನಸಿನಲ್ಲಿ ಬಂದು ತಮ್ಮ ನಿಜವಾದ ಅಂಕಿತ "ಲಿಂಗದೇವ" ಎಂದು ತಿಳಿಸಿದ್ದರಿಂದ, ಕೂಡಲಸಂಗಮದೇವ ಅಂಕಿತವನ್ನು "ಲಿಂಗದೇವ" ಎಂದು ಮಾರ್ಪಡಿಸಿದುದಾಗಿ ಮಾತೆ ಮಹಾದೇವಿಯವರು ಸಮರ್ಥಿಸಿಕೊಂಡರು. ತಮ್ಮ ನಿಜವಾದ ಅಂಕಿತವನ್ನು ತಿಳಿಸಲು ಬಸವಣ್ಣನವರಿಗೆ ಈ ಎಂಟು ನೂರು ವರ್ಷಗಳಲ್ಲಿ ಬೇರೆ ಅರ್ಹರಾರೂ ದೊರಕಿರಲಿಲ್ಲವೇ ಎಂದು ನಾನು ಬಹಿರಂಗವಾಗಿ ಪ್ರಶ್ನಿಸಿದ್ದಕ್ಕೆ, ನನ್ನನ್ನು ಟೀಕಿಸಿ "ಕೈಗನ್ನಡಿ" ಎಂಬ ಪುಸ್ತಕವನ್ನೇ ಹೊರತಂದರು.

12. ವೀರಶೈವರು 'ಹಿಂದೂ'ಗಳಲ್ಲವೆಂಬ ಅಖಿಲ ಭಾರತ ವೀರಶೈವ ಮಹಾಸಭೆಯ ನಿಲುವನ್ನು ನಾನು ವಿರೋಧಿಸಿದ್ದಕ್ಕೆ ನನಗೆ ಬಂದ ಕಟು ಭಾಷೆಯ ಪತ್ರಗಳು ಹಲವಾರು. ಪತ್ರಿಕೆಗಳಲ್ಲಿ ಕೋಮುವಾದಿ ಎಂದು ನನ್ನನ್ನು ಹೆಸರಿಸಿ ಲೇಖನಗಳು ಬಂದುವು.

ಇವು ಕೆಲವು ಉದಾಹರಣೆಗಳು. ಸತ್ಯ, ನ್ಯಾಯಗಳಿಗೆ ಎಂದೂ ಗೆಲುವಿದೆ ಎಂಬ ತತ್ವದ ಬಗ್ಗೆ ನನಗೆ ಇಂದಿಗೂ ವಿಶ್ವಾಸವಿದೆ. ಆ ವಿಶ್ವಾಸ ಕ್ರಮೇಣ ದೃಢಗೊಳ್ಳುತ್ತಿದೆ.

ಅವನ ವೈಯಕ್ತಿಕ ಬದುಕು ಹೇಗಿದ್ದರೇನು, ಅವನ ಕೃತಿ ಉತ್ಕೃಷ್ಟವಾಗಿದ್ದರೆ ಸಾಕು. ಆಗ ಅವನಿಗೂ ಆಕರ್ಷಕ ಮಾತನ್ನಾಡುವ ರಾಜಕಾರಣಿಗೂ ವ್ಯತ್ಯಾಸವಿರುವುದಿಲ್ಲ. ತಮ್ಮ ಕೃತಿಗಳಲ್ಲಿ ಸಾಮಾಜಿಕ ಮೌಲ್ಯಗಳನ್ನು ಪ್ರತಿಪಾದಿಸುವ ಸಾಹಿತಿಗಳು ಆ ಮೌಲ್ಯಗಳಿಗೆ ಬದ್ಧರಾಗಿ ಬದುಕಬೇಕು. ಸತ್ಯವನ್ನು ಗುರುತಿಸುತ್ತೇನೆ, ಸತ್ಯವನ್ನೇ ಹೇಳುತ್ತೇನೆ ಎಂಬ ಆದರ್ಶವಿರುವ ಸಂಶೋಧಕರೂ ವೈಯಕ್ತಿಕ ಬದುಕಿನಲ್ಲೂ ಅಂತಹುದೇ ಧ್ಯೇಯವಿಟ್ಟುಕೊಂಡಿರಬೇಕು. ಇತರರನ್ನು ಟೀಕಿಸುವ ವ್ಯಕ್ತಿ ತನ್ನನ್ನು ಮೊದಲು ಮುಕ್ತವಾಗಿ ವಿಮರ್ಶಿಸಿಕೊಳ್ಳುವುದು ಮಾಡದಿದ್ದರೆ ಅದು ಕ್ಷಮಾರ್ಹವಲ್ಲ. ಈ ಮಾತುಗಳನ್ನು ಹಲವರು ಹಗುರವಾಗಿ ಖಂಡಿತ ತೆಗೆದುಕೊಳ್ಳುತ್ತಾರೆ; ಕಾರಣ, ಗಂಭೀರವಾಗಿ ತೆಗೆದುಕೊಂಡರೆ ಅವರಿಗೆ ತಮ್ಮನ್ನು ತಾವು ಎದುರಿಸುವುದು ಕಷ್ಟವಾಗುತ್ತದೆಯೆಂಬುದು ತಿಳಿದಿದೆ. ನನ್ನ ಮಟ್ಟಿಗೆ ಕನ್ನಡ ಚಳವಳಿ, ಸಂಶೋಧನೆ, ವೈಯಕ್ತಿಕ ಬದುಕು ಇವು ಬೇರೆ ಅಲ್ಲ, ಪ್ರಾಮಾಣಿಕತೆ ಮಾನವೀಯತೆ ನೀತಿ ಔದಾರ್ಯ ಇಂತಹ ಮೌಲ್ಯಗಳಾಗಲಿ ಬೇರೆ ಅಲ್ಲ. ಸುಂದರವಾಗಿ ಬದುಕುವುದು ಎಂದರೆ ನ್ಯಾಯಬದ್ಧವಾಗಿ ಬದುಕುವುದೆಂದೇ ಅರ್ಥ. ಈ ಸಂದರ್ಭದಲ್ಲಿ ನನ್ನ ಎಲ್ಲ ಕ್ಷೇತ್ರಗಳಲ್ಲಿಯೂ ದಾರಿ ದೀಪವಾಗಿದ್ದು, ಮನಸ್ಸು ಖಿನ್ನವಾದಾಗ ಉತ್ತೇಜನ ನೀಡಿರುವ ವಿ.ಸೀ. ಅವರ ಕವನದ ಒಂದು ಭಾಗ ಹೀಗಿದೆ -

> "ಮಣಿಯದಿಹ ಮನವೊಂದು, ಸಾಧಿಸುವ ಹಠವೊಂದು,
> ನಿಜದ ನೇರಕೆ ನಡೆವ ನಿಶ್ಚಲತೆಯೊಂದು -
> ಅನ್ಯಾಯಕೆಂದೆಂದು ಬಾಗದೆಚ್ಚರವೊಂದು,
> ಮರುಕಕ್ಕೆ ಪ್ರೇಮಕ್ಕೆ ಚಿರ ತೆರೆದ ಎದೆಯೊಂದು -
> ಅಭೀಃ! ಅಭೀಃ! ಅಭೀಃ! ಎಂಬ ತಾರಕವಾಕ್ಯ
> ನಾಡಿಯನು ನಡಸುತಿರೆ, ಬಾಳನ್ನು ತಿದ್ದುತಿರೆ
> ನಡೆ ಮುಂದಕೆನ್ನುತ್ತ ಕೂಗುತಿದೆ, ನುಗ್ಗಿಸುತಿದೆ"

# ಪಾಂಡಿತ್ಯ ರಸ

## 'ಪಾಂಡಿತ್ಯರಸ' ಎಂದರೇನು?

ಮೈಸೂರಿನ ಸರಸ್ವತಿಪುರದ ಆಯುಷ್ಕರ್ಮ ಶಾಲೆಯಲ್ಲಿ ನನ್ನ ಗುರುಗಳು ಕನ್ನಡಿಯ ಮುಂದೆ ತಮ್ಮ ತಲೆಯ ಮೇಲ್ಭಾಗವನ್ನು ರೋಮ ಶಿಲ್ಪಿಗೆ ಒಪ್ಪಿಸಿ ಕುರ್ಚಿಯಲ್ಲಿ ಮೌನವಾಗಿ ಕುಳಿತಿದ್ದಾರೆ. ರೋಮ ಶಿಲ್ಪಿಯ ಕೈಯ ಕತ್ತಿ, ಕತ್ತರಿ, ಹತಾರುಗಳು ತಮ್ಮ ತಮ್ಮ ಕೆಲಸವನ್ನು ಚಾಕಚಕ್ಯತೆಯಿಂದ ಮಾಡುತ್ತಿವೆ. ಕಣ್ಣು ಮುಚ್ಚಿ ನಿಸ್ಸಹಾಯಕರಂತೆ ಹೊರನೋಟಕ್ಕೆ ಕಾಣಿಸುತ್ತಿದ್ದರೂ ಗುರುಗಳು ತಮ್ಮ ವಶದಲ್ಲಿ ಇಟ್ಟುಕೊಂಡಿದ್ದ ಅವರ ತಲೆಯ ಒಳಗೆ ಬೇರೆ ಬೇರೆ ವಿಷಯಗಳು, ದೇಶವಿದೇಶಗಳ ವಿದ್ವಾಂಸರ ಚರ್ಚೆಗಳು ಸುಳಿದಾಡುತ್ತಿವೆ. ಜಡ ದೇಹದ ಮೇಲ್ಭಾಗದ ಸಶಬ್ದ ಚಟುವಟಿಕೆಗಳಷ್ಟೇ ಒಳಗೆ ನಿಶ್ಶಬ್ದ ಚಟುವಟಿಕೆಗಳು ನಡೆದಿವೆ. ಹಳಗನ್ನಡ ಸಾಹಿತ್ಯ, ವ್ಯಾಕರಣ, ಶಾಸನ ಸಾಹಿತ್ಯ ಏನೇನೋ ನೆನಪಿನ ಅಲೆಗಳು ತೆರೆಯ ಮೇಲೆ ಮೂಡುತ್ತಲೇ ಇದ್ದಕ್ಕಿದ್ದಂತೆ ಅಶೋಕನ ಪ್ರಾಕೃತ ಭಾಷೆಯ ಬ್ರಹ್ಮಗಿರಿ ಶಾಸನದ "ಇಸಿಲ" ಪದ, ಆ ಬಗ್ಗೆ ನಡೆದಿರುವ ವಿವಾದ ಜ್ಞಾಪಕಕ್ಕೆ ಬಂದು ಅದು ಅಚ್ಚಗನ್ನಡದ ಪದ ಆಗಿರಬಹುದೇ ಎಂಬ ಸಂದೇಹ ಸುಳಿದು, ಬಳಿಕ "ಅದು ಕನ್ನಡ ಪದವೇ ಹೌದು" ಎಂದು ಮನಸ್ಸು ಹೇಳುತ್ತಿದ್ದಂತೆ ನನ್ನ ಗುರುಗಳಿಗೆ ಅಲ್ಲೇ ಕುರ್ಚಿಯಿಂದ ಎದ್ದು ಕುಣಿದು ಬಿಡುವಷ್ಟು ಆನಂದವಾಯಿತು. ಎದ್ದು ಕುಣಿಯಲು ಇದ್ದುದು ಒಂದೇ ಒಂದು ಭಯಾನಕ ಅಡ್ಡಿ, ಒಂದು ಕಟು ವಾಸ್ತವ - ತಲೆಯ ಮೇಲೆ ಕ್ಷೌರಿಕನ ಕತ್ತರಿ, ಅದೇ ಮಸೆದಿದ್ದ ಕತ್ತಿ ತಮ್ಮ ಚಕಚಕ ಕೆಲಸ ಮಾಡುತ್ತಿವೆ. ಅವರು ಮನೆಗೆ ಬಂದು ಸ್ನಾನ ಮಾಡಿ ಹೃದಯದಲ್ಲಿ 'ಇಸಿಲ'ವನ್ನು ಧ್ಯಾನಿಸುತ್ತ ವಿಷ್ಣುಪೂಜೆ ಮುಗಿಸಿ ಅದೇ ಮಡಿ ಬಟ್ಟೆಯಲ್ಲಿ ತಮ್ಮ ಕೊಠಡಿಗೆ ಧಾವಿಸಿ ಬೇರೆ ಬೇರೆ ನಿಘಂಟುಗಳನ್ನು ತೆಗೆದು ನೋಡಿದರು. ಅಲ್ಲಿ 'ಇಸಿಲ' ಪದ ಇಲ್ಲದಿದ್ದರೂ ಅದು ಅಚ್ಚಗನ್ನಡ ಪದವೆಂಬುದಕ್ಕೆ ಬೇರೆ ಭಾಷಿಕ ಸಾಕ್ಷ್ಯಾಧಾರ ದೊರೆಯಿತು. ಅವರ ಆ ಶೋಧ, ಹೊಳಹು ಕನ್ನಡ ಭಾಷೆಯ ಲಿಖಿತ ಚರಿತ್ರೆಯನ್ನು ಕ್ರಿ.ಶ. ಐದನೇ ಶತಮಾನದಿಂದ ಕ್ರಿ.ಪೂ. ಮೂರನೇ ಶತಮಾನಕ್ಕೆ ಕೊಂಡೊಯ್ದಿತ್ತು. ಕಡಮೆ ಮಹತ್ವದ ಶೋಧವಾಗಿರಲಿಲ್ಲ ಅದು.

ತಮ್ಮ ಮೇಲಿನ ಅನುಭವವನ್ನು ಹೇಳಿಕೊಂಡ ನನ್ನ ಆತ್ಮೀಯ ಪೂಜ್ಯ ಗುರು (ದಿ) ಡಾ. ಡಿ.ಎಲ್. ನರಸಿಂಹಾಚಾರ್ಯರ ಮುಗ್ಧ ಮಾತುಗಳನ್ನು ಯುವಕರಾಗಿದ್ದ ನಾವು ಕೇಳಿ ಮಂತ್ರಮುಗ್ಧರಾದೆವು, ಪುಲಕಿತರಾದೆವು. ಇನ್ನೊಬ್ಬ ಆತ್ಮೀಯ ಪೂಜ್ಯ ಗುರು (ದಿ)

ಪ್ರೊ. ತೀ.ನಂ. ಶ್ರೀಕಂಠಯ್ಯನವರು ಅಧ್ಯಕ್ಷರಾಗಿ ನಾನು ಕಾರ್ಯದರ್ಶಿಯಾಗಿ ಕೆಲಸ ಮಾಡುತ್ತಿದ್ದ ಮೈಸೂರು ಮಹಾರಾಜಾ ಕಾಲೇಜಿನ "ಲಿಂಗ್ವಿಸ್ಟಿಕ್ ಸ್ಟಡಿ ಸರ್ಕಲ್" ಆಶ್ರಯದಲ್ಲಿ ಅವರು ಉಪನ್ಯಾಸವನ್ನೂ ಕೊಟ್ಟರು (ಆಗ ನಾನು ಪಕ್ಕದ ಯುವರಾಜಾ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕ). "The earliest datable Kannada word" ಎಂಬ ಅವರ ಉಪನ್ಯಾಸದ ಬಳಿಕ ಎಷ್ಟು ಚರ್ಚೆ ನಡೆಯಿತೆಂದರೆ ಪ್ರೊ. ನಂ. ಶಿವರಾಮಶಾಸ್ತ್ರಿಗಳು ಆ ಪದ ಬರೀ "datable" ಅಲ್ಲ, ಅದು "debatable" ಕೂಡ ಹೌದು ಎಂದು ನಗೆ ಚಟಾಕಿ ಹಾರಿಸಿದ್ದೂ ಉಂಟು. ಮುಂದೆ ಡಿ.ಎಲ್.ಎನ್. ಆ ವಿಷಯ ಕುರಿತಾದ ಲೇಖನ ಬರೆಯದೆ ಕಣ್ಮುಚ್ಚಿದರು. ನನ್ನ ಬಳಿ ಇದ್ದ ಅವರ ಇಂಗ್ಲಿಷ್, ಕನ್ನಡ ಉಪನ್ಯಾಸಗಳ ಟಿಪ್ಪಣಿಗಳ ಸಹಾಯದಿಂದ "ತೇದಿಯುಳ್ಳ ಪ್ರಾಚೀನತಮ ಕನ್ನಡ ಪದ" ಎಂಬ ಲೇಖನವನ್ನು ಪುನಾರಚಿಸಿ ಅವರ ಹೆಸರಿನಲ್ಲಿ ನಾನು ಅದನ್ನು "ಸಾಧನೆ" ಸಂಪತ್ರಿಕೆಯಲ್ಲಿ (Journal) ಪ್ರಕಟಿಸಿದೆ.

ಡಿ.ಎಲ್.ಎನ್. ತಮ್ಮ ಮೇಲ್ಕಂಡ ಅನುಭವವನ್ನು ಹೇಳಿಕೊಂಡಾದ ಮೇಲೆ ಅಂತಹ ಅನುಭವಗಳನ್ನೇ ಹಿನ್ನೆಲೆಯಲ್ಲಿಟ್ಟುಕೊಂಡು ಒಮ್ಮೆ ಒಂದು ಮಾತು ಹೇಳಿದ್ದರು. ಭಾರತೀಯ ಕಾವ್ಯ ಮೀಮಾಂಸೆಯು ಸಾಹಿತ್ಯ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಒಂಬತ್ತು "ರಸ"ಗಳನ್ನು ಗುರುತಿಸುತ್ತದೆ (ಶೃಂಗಾರ, ವೀರ, ಕರುಣ, ಹಾಸ್ಯ, ರೌದ್ರ, ಬೀಭತ್ಸ, ಅದ್ಭುತ, ಭಯಾನಕ, ಶಾಂತ). ಹತ್ತನೆಯ ಭಕ್ತಿರಸವನ್ನು ಆಮೇಲೆ ಸೇರಿಸಿದವರೂ ಉಂಟು. "ಆದರೆ ವಿದ್ವತ್ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಒಂದು ರಸ ಇದೆ ಕಣಯ್ಯಾ, ಅದು 'ಪಾಂಡಿತ್ಯ ರಸ" - ಈ ಮಾತನ್ನು ಅವರು ಅರೆ ವಿನೋದದ ಅರೆ ಗಾಂಭೀರ್ಯದ ಧ್ವನಿಯಲ್ಲಿ ಹೇಳಿದ್ದರು. ಒಬ್ಬ ಸಂಶೋಧಕ ಹೊಸದನ್ನು ಕಂಡಾಗ, ಒಂದು ಹೊಸ ಆಲೋಚನೆ ಮಿಂಚಿದಾಗ ಅವನಿಗೆ ಆಗುವ ಅನುಭವ, ಪಾಂಡಿತ್ಯರಸ. "ಯಾವುದೇ ರಸಕ್ಕಿಂತ ಕಡಮೆ ಅಲ್ಲ ಕಣಯ್ಯ!" ಎಂದು ತಮ್ಮದೇ ಧಾಟಿಯಲ್ಲಿ ಹೇಳಿದ್ದರು. ಅವರೂ ಇತರ ಗುರುಗಳೂ ನಮ್ಮನ್ನು ಏಕವಚನದಲ್ಲಿ ಮಾತನಾಡಿಸುತ್ತಿದ್ದುದೇ ನಮಗೆ ಆಪ್ಯಾಯಮಾನವಾಗಿತ್ತು. ಪಾಂಡಿತ್ಯ ರಸದ ಲಕ್ಷಣವೇನು, ಅದರ ಸ್ಥಾಯಿಭಾವವೆಂತಹುದು ಇತ್ಯಾದಿಗಳ ಚರ್ಚೆಗೆ ಅವರು ಹೋಗಲೂ ಇಲ್ಲ! ಅಂತಹ ಪ್ರಯತ್ನವೂ ಹಾಸ್ಯಾಸ್ಪದ. ಅಂತಹ ಒಂದು "ರಸ" ಇದೆಯೇ, ಅಂತಹುದೊಂದು ಇದ್ದರೂ ಅದು ರಸ ಎನ್ನಿಸಿಕೊಳ್ಳುವುದೇ ಎಂಬಂತಹ ಪ್ರಶ್ನೆಗಳು ಅಪ್ರಸ್ತುತವಷ್ಟೇ ಅಲ್ಲ, ವ್ಯರ್ಥವೂ ಹೌದು. ಅವರು ಆ ಪದಸೃಷ್ಟಿಯ ಮೂಲಕ ಹಲವು ಬಾರಿ ತಮಗಾದ, ವಿಜ್ಞಾನ ಸಮಾಜಶಾಸ್ತ್ರ ಇವೇ ಮೊದಲಾದ ಕ್ಷೇತ್ರಗಳ ಎಲ್ಲ ನಿಜವಾದ ಸಂಶೋಧಕರಿಗೂ ಆಗುವ ಅನುಭವವನ್ನು ನಮಗೆ ಪರಿಚಿತವಾದ ಎರಡು ಪದಗಳನ್ನು ಸಮಾಸರೂಪವಾಗಿ ಸೇರಿಸಿ ವ್ಯಕ್ತಪಡಿಸಿದರು ಎಂದು ಮಾತ್ರ ತೆಗೆದುಕೊಳ್ಳಬೇಕು. ಅವರು ಅಂದು ಟಂಕಿಸಿದ ಪದವೇ ಈ ಪುಸ್ತಕದ ಶೀರ್ಷಿಕೆ.

ಪ್ರೊ. ಡಿ.ಎಲ್.ಎನ್., ಪ್ರೊ. ತೀ.ನಂ.ಶ್ರೀ., ಡಾ.ಎಸ್. ಶ್ರೀಕಂಠ ಶಾಸ್ತ್ರೀ, ಡಾ. ಆ.ನೇ. ಉಪಾಧ್ಯೆ, ಡಾ. ಅ. ವೆಂಕಟಸುಬ್ಬಯ್ಯ, ಡಾ. ಎಂ.ಬಿ. ಎಮೆನೋ,

ಡಾ. ಸುನೀತಿ ಕುಮಾರ ಚಟರ್ಜಿ, ಡಾ. ಸುಕುಮಾರ ಸೇನ್, ಡಾ. ಗೆಲ್ಬ್, ಡಾ. ಎಲ್. ಬಸವರಾಜು ಅವರಂತಹ ಹಲವು ಹಿರಿಯರು ಇಲ್ಲವೇ ನನಗೆ ಉಪಾಧ್ಯಾಯರು ಅಥವಾ ನಾನು ಹತ್ತಿರದಿಂದ ಕಂಡ ಗುರು ಸಮಾನರು. ಅವರೆಲ್ಲರೂ ತಮ್ಮ ಸಂಶೋಧನ ಜೀವನದ ರಸಕ್ಷಣಗಳನ್ನು ತೀವ್ರವಾಗಿ ಅನುಭವಿಸಿದವರು. ಅವರೇ ಏಕೆ, ಜಗತ್ತಿನ ಎಲ್ಲ ಸತ್ಯಾನ್ವೇಷಿಗಳೂ ಸಂಶೋಧಕರೂ ಯಾವುದೋ ಕ್ಷಣದ ಪ್ರತಿಭೆಯ ಮಿಂಚಿನ ಬೆಳಕಿನಲ್ಲಿ ವ್ಯಕ್ತವಾದ ಸತ್ಯದ ದರ್ಶನದಿಂದ ಪುಲಕಿತರಾದವರು. ಆ ಎಲ್ಲ ತಮ್ಮ ಅನುಭವಗಳನ್ನು ಈ ರೀತಿ ಕೃತಿರೂಪವಾಗಿ ಎಲ್ಲಿಯಾದರೂ ಹಿಡಿದಿಟ್ಟಿರುವರೋ ಇಲ್ಲವೋ ನನಗೆ ತಿಳಿಯದು. ಅಂತಹ ಪ್ರಯತ್ನವನ್ನು ನಾನಿಲ್ಲಿ ಮಾಡಿದ್ದೇನೆ. ನನ್ನ ಸುಮಾರು ನಲವತ್ತು ವರ್ಷಗಳ (1960-2000) ಸಂಶೋಧನ ಜೀವನದಲ್ಲಿ ನನಗಾದ ಸಂತೋಷ, ಆನಂದ, ವಿನೋದ, ಹತಾಶೆ, ನಿರಾಸೆ, ಶ್ರಮ, ಹೊಳಹು ಉದ್ರೇಕಗಳ ಕಥನ ಈ "ಪಾಂಡಿತ್ಯ ರಸ"; ಅದನ್ನು ಬೇಕಾದರೆ ನೀರಸ ಕಥನವೆನ್ನಿ. ಏಕೆಂದರೆ ಇಲ್ಲಿ ಆಲಂಕಾರಿಕ ಭಾಷೆಯಿಲ್ಲ, ಅನುಭವವನ್ನು ಕಲಾತ್ಮಕವಾಗಿ ನಿರೂಪಿಸುವ ಪ್ರಯತ್ನವೂ ಇಲ್ಲ. ನನಗಾದ ಅನುಭವಗಳನ್ನು ಸರಳ ನೇರ ಭಾಷೆಯಲ್ಲಿ ಹಿಡಿದಿಟ್ಟಿದ್ದೇನೆ. ಭಾಷೆಯ ಬುಟ್ಟಿಯಲ್ಲಿಟ್ಟು ನಿಮ್ಮತ್ತ ಚಾಚಿದ್ದೇನೆ ; 'ರಸ'ವನ್ನು 'ಬುರುಡೆ'ಯಲ್ಲಿ ಸಂಗ್ರಹಿಸಿ ಒಪ್ಪಿಸಿದ್ದೇನೆ.

ಕಾವ್ಯಕ್ಕೂ ಸಂಶೋಧನೆಗೂ ಒಂದು ಸ್ಪಷ್ಟ ವ್ಯತ್ಯಾಸ ಕಾಣುತ್ತದೆ. ಕವಿ ತನಗಾದ ಅನುಭವವನ್ನು ಸಹೃದಯನಿಗೆ ನಿವೇದಿಸಲು ಬೇಕಾದ ಭಾಷಿಕ ಮಾಧ್ಯಮವನ್ನು ತನ್ನದೇ ವಿಶಿಷ್ಟರೂಪದಲ್ಲಿ ರೂಪಿಸಿಕೊಳ್ಳುತ್ತಾನೆ. ಆ ಭಾಷಿಕ ಮಾಧ್ಯಮ ಅಥವಾ ಕಾವ್ಯವು ಕವಿಗಾದ ಅನುಭವವನ್ನು ಸಹೃದಯಿ ಓದುಗನಿಗೆ ತಲುಪಿಸುತ್ತದೆ. ಸಂಶೋಧಕನ ಮುಖ್ಯ ಗುರಿ ತನ್ನ ಅನುಭವವನ್ನು ತಿಳಿಸುವುದಲ್ಲ; ಆ ಅನುಭವವನ್ನು ತಂದುಕೊಟ್ಟ ಸತ್ಯವನ್ನು ಮಾತ್ರ ಓದುಗರಿಗೆ ಮುಟ್ಟಿಸುವುದು. ಆ ಕ್ಷೇತ್ರದ ಪರಿಭಾಷೆಯಲ್ಲಿ, ನೇರವಾಗಿ ಮತ್ತು ಸರಳವಾಗಿ ಒಂದು ಸಂಪ್ರಬಂಧವನ್ನು (ಸಂಶೋಧನ ಪ್ರಬಂಧ) ಓದಿದವನಿಗೆ ಅಲ್ಲಿ ಪ್ರತಿಪಾದಿತವಾಗಿರುವ ಚಿಂತನೆ, ವಸ್ತು, ವಾಸ್ತವ, ಸಂಗತಿ ಮಾತ್ರ ತಲಪುತ್ತದೆ. ಆ ಹೊಸ ಸಂಗತಿ ಹೊಳೆದಾಗ ಆದ ಅನುಭವ ಸಂಶೋಧಕನಲ್ಲಿ ಉಳಿದಿರುತ್ತದೆ. ಕವಿ ತನ್ನ ಅನ್ನಿಸಿಕೆಗಳು ನಿಜವೇ ಅಲ್ಲವೇ ಎಂಬ ವಿಚಾರದಲ್ಲಿ ತೊಡಗುವುದಿಲ್ಲ. ಅವು ಅವನ ಅನುಭವಗಳೇ ಆದುದರಿಂದ ಅವು ಆ ನೆಲೆಯಲ್ಲಿ ಸತ್ಯವೇ. ಆದರೆ ಸಂಶೋಧಕ ತನಗೆ ಹೊಳೆದುದು ವಸ್ತುನಿಷ್ಠ ಸತ್ಯವನ್ನು ಹೇಳುತ್ತದೆಯೇ, ಯಾವುದೋ ಸಮಸ್ಯೆಗೆ ಅದು ಉತ್ತರವೇ, ಪರಿಹಾರವೇ, ಹೊಸ ಸಂಗತಿಯೇ ಎಂಬುದನ್ನು ಖಚಿತಪಡಿಸಿಕೊಳ್ಳದೆ ಬರಹಕ್ಕೆ ಕೈ ಹಾಕುವುದಿಲ್ಲ, ಕೈ ಹಾಕಬಾರದು. ಕವಿಗೆ ತನಗೆ ಹೊಳೆದುದನ್ನು ಪರಿಣಾಮಕಾರಿ ಭಾಷೆಯಲ್ಲಿ ಹೇಗೆ ಹೇಳಬೇಕೆಂಬುದೇ ಮುಖ್ಯವಾಗಿ ಆ ದಿಕ್ಕಿನಲ್ಲಿ ಅವನ ಕೆಲಸ ಆರಂಭವಾಗುತ್ತದೆ (ಆ ಕೆಲಸ ಹೊಳೆದ ತಕ್ಷಣವೇ ಆರಂಭವಾಗಬೇಕಾಗಿಲ್ಲ). ತನಗೆ ಹೊಳೆದ ವಿಷಯವು ಕೇವಲ ಕಲ್ಪನಾ ವಿಲಾಸವೋ ಅಥವಾ ವಸ್ತುನಿಷ್ಠ ಸತ್ಯವೋ ಎಂಬುದನ್ನು ಖಚಿತಪಡಿಸಿಕೊಳ್ಳುವುದು ಸಂಶೋಧಕನಿಗೆ ಮುಖ್ಯವಾಗುತ್ತದೆ. ಕವಿಯ, ಸಂಶೋಧಕನ ಎರಡೂ ಕೆಲಸಗಳು ಒಂದರ್ಥದಲ್ಲಿ

ಸೃಜನಶೀಲವೇ. ಎರಡರ ಹಿಂದೆಯೂ ಪ್ರತಿಭೆ ಕೆಲಸ ಮಾಡಿರುತ್ತದೆ. ಇಬ್ಬರೂ ಆಯಾ ಕ್ಷೇತ್ರದಲ್ಲಿ ಶ್ರಮಪೂರ್ಣ ಕೆಲಸ ಮಾಡಿ ಒಂದು ಶಿಸ್ತಿಗೆ ತಮ್ಮನ್ನು ತಾವು ಒಳಪಡಿಸಿಕೊಂಡಿರುತ್ತಾರೆ. ಆ ಶಿಸ್ತು ಬೇರೆ ಬೇರೆ ರೂಪದ್ದಿರಬಹುದಾದರೂ ಸ್ವರೂಪದಲ್ಲಿ ಒಂದೇ ಆಗಿರುತ್ತದೆ.

ಇದರ ವಿಸ್ತೃತ ಮೀಮಾಂಸೆಯ ಬಗ್ಗೆ ಚರ್ಚೆ ಅನಗತ್ಯ ಮತ್ತು ನನ್ನ ಕೃತಿಗಂತೂ ಸಂಪೂರ್ಣ ಹೊರತಾದುದಾದರೂ ಪ್ರವೇಶ ರೂಪದಲ್ಲಿ ಮಾತ್ರ ಮೇಲ್ಕಂಡ ಕೆಲವು ಮಾತುಗಳನ್ನು ಆಡುವುದು ಅಗತ್ಯವಾಯಿತು. ಕಾವ್ಯವೂ (ಸಾಹಿತ್ಯ) ಸೇರಿದಂತೆ ಲಲಿತ ಕಲೆಗಳ ಕ್ಷೇತ್ರದಲ್ಲಿ ಕವಿ ಅಥವಾ ಕಲಾವಿದನಿಗೇ ಪ್ರಾಮುಖ್ಯ. ಆ ಕ್ಷೇತ್ರಗಳಲ್ಲಿ ಸಂಶೋಧಕನಿಗೆ ಕೆಳಗಿನ ಸ್ಥಾನ. ಈ ಬಗ್ಗೆ ಸಂಶೋಧಕರು ದುಃಖಪಡುವ ಅಗತ್ಯವೇ ಇಲ್ಲ. ಕವಿ ಬರೆದುದು ಆಯಾ ಕಾಲದ ಅಭಿರುಚಿ ಮನೋಧರ್ಮಕ್ಕನುಗುಣವಾಗಿ ಹಳೆಯದು, ಅಪ್ರಸ್ತುತ ಎಂದು ಹಣೆ ಚೀಟಿ ಅಂಟಿಸಿಕೊಳ್ಳುವ ಅಪಾಯವಿದ್ದೇ ಇರುತ್ತದೆ. ಅವನು ಬರೆದುದು ಸದಾ ಅವನ ಹೆಸರಲ್ಲಿ ಪ್ರಚಾರವಾಗುತ್ತಿರುತ್ತದೆ. ಸಂಶೋಧಕ ಬರೆದುದು - ಅವನ ಪ್ರತಿಪಾದನೆ ವಸ್ತುನಿಷ್ಠ ಸತ್ಯವಾಗಿದ್ದಲ್ಲಿ ಅದು ಎಂದೂ ಹಳತಾಗಲು ಸಾಧ್ಯವಿಲ್ಲ. ಮತ್ತು ಅವನು ಕಂಡುಹಿಡಿದು ಹೊರಜಗತ್ತಿಗೆ ತೋರಿದ ಸತ್ಯದ ಜೊತೆ ಅವನ ಹೆಸರು ಪ್ರಚಾರವಾಗುವುದಿಲ್ಲ. ಸಂಶೋಧಕ ಮರೆತುಹೋಗಬಹುದು, ಆದರೆ ಅವನ ಶೋಧ ಬೆಳೆಯುತ್ತ ಫಲಗಳನ್ನು ನೀಡುತ್ತ ಹೋಗುತ್ತದೆ. ಒಂದರ್ಥದಲ್ಲಿ ಅವನನ್ನು ತ್ಯಾಗಜೀವಿ ಎನ್ನಬಹುದೇ ಎಂಬುದನ್ನು ಸ್ವಲ್ಪ ವಿನೋದದ ಧಾಟಿಯಲ್ಲೇ ನಾನು ಸೂಚಿಸಬಯಸುತ್ತೇನೆ. ಈ ಮಾತು ಸೂಕ್ಷ್ಮ ಗೇಲಿಗೆ ಅವಕಾಶ ಮಾಡಿಕೊಟ್ಟರೆ ನನಗೆ ಆಶ್ಚರ್ಯವಿಲ್ಲವಾದರೂ ಆ ಮಾತು ಸ್ವಲ್ಪ ಮಟ್ಟಿಗಾದರೂ ನಿಜವೆನ್ನಿಸಿದೆ. ನನ್ನ ಗೆಳೆಯರೊಬ್ಬರು ಗುಲ್ಬರ್ಗ ಜಿಲ್ಲೆಯ ಸೊನ್ನತಿಯು (ಬರಹಗಳಲ್ಲಿ ಕಾಣಿಸುವ "ಸನ್ನತಿ" ಎಂಬುದು ಆ ಊರಿನ ನಿಜವಾದ ಹೆಸರಲ್ಲ, ಜನಗಳ ನಾಲಗೆ ಮೇಲಿರುವ ಹೆಸರು 'ಸೊನ್ನತಿ' ಅಥವಾ 'ಸೊಂತಿ') ಒಂದು ಬೌದ್ಧ ಕೇಂದ್ರವೆಂಬುದನ್ನು ಗುರುತಿಸಿದರಾದರೂ ಅವರ ಮಾರ್ಗದರ್ಶಕರು ಆ ಮಹತ್ವದ ಶೋಧವನ್ನು ತಮ್ಮ ಹೆಸರಲ್ಲಿ ಪ್ರಕಟಿಸಿದರು. ಮೊದಲನೆಯವರ ಹೆಸರಂತೂ, ಎರಡನೆಯವರ ಹೆಸರೂ ಕೂಡ, ಕೆಲವರನ್ನು ಹೊರತುಪಡಿಸಿ ಬಹುತೇಕ ಜನರಿಗೆ ಮರೆತು ಹೋಗಿದೆ; ಸೊನ್ನತಿ ಬಗ್ಗೆ ಮಾತ್ರ ಶೋಧಗಳು ಮುಂದುವರಿದಿವೆ, ಹಲವು ಹೊಸ ಸಂಗತಿಗಳು ಹೊರಬಂದಿವೆ. ಕರ್ನಾಟಕದ ಬೌದ್ಧಧರ್ಮದ ಇತಿಹಾಸೋಗ್ರಫಿಯಲ್ಲಿ (ಇತಿಹಾಸದ ಇತಿಹಾಸವೇ ಇತಿಹಾಸೋಗ್ರಫಿ, Historiography) ಅಕಸ್ಮಾತ್ ಆ ಮೊದಲ ಶೋಧಕರ ಹೆಸರುಗಳು ಉಲ್ಲೇಖಗೊಳ್ಳಬಹುದು. ನಾನು ಹಿಂದೆ ಆಡಿದ್ದ ಮಾತೊಂದು ಇಲ್ಲಿ ಜ್ಞಾಪಕಕ್ಕೆ ಬರುತ್ತದೆ: "ಸೃಜನಶೀಲ ಕಲೆಗಳಲ್ಲಿ ಸೌಂದರ್ಯವೇ ಸತ್ಯ; ಸಂಶೋಧನೆಯಲ್ಲಿ ಸತ್ಯವೇ ಸೌಂದರ್ಯ". ಕೆಲವರು, ಸಂಶೋಧಕನು ವಕೀಲನಂತೆ ಮಾಹಿತಿ ಸಂಗ್ರಹಿಸಿ ನ್ಯಾಯಮೂರ್ತಿಯಂತೆ ಬರೆಯಬೇಕು ಎಂಬ ಮಾತುಗಳನ್ನಾಡಿದ್ದಾರೆ. ವಕೀಲನು ತನ್ನ ಕಕ್ಷಿದಾರನಿಂದ ಅವನ ಮೊಕದ್ದಮೆಗೆ ಸಂಬಂಧಪಟ್ಟ ಎಲ್ಲ ಮಾಹಿತಿಯನ್ನು ಸಂಗ್ರಹಿಸಿ, ಅದರಲ್ಲಿ ಅವನ

ಮೊಕದ್ದಮೆಯು ಗೆಲ್ಲಲು ಬೇಕಾದ ಮಾಹಿತಿಯನ್ನು ಮಾತ್ರ ಬಳಸಿಕೊಳ್ಳುತ್ತಾನೆ. ವಕೀಲನಿಗೆ ಮುಖ್ಯವಾದುದು ಸತ್ಯವನ್ನು ಗೆಲ್ಲಿಸುವುದಲ್ಲ, ತನ್ನ ಕಕ್ಷಿದಾರನನ್ನು ಗೆಲ್ಲಿಸುವುದು. ಇದು ಅವನ 'ವೃತ್ತಿ ಧರ್ಮ'. ಆದರೆ ನ್ಯಾಯಮೂರ್ತಿಯು ಪಕ್ಷ ಪ್ರತಿಪಕ್ಷ ಎರಡೂ ಕಡೆ ಸಾಕ್ಷ್ಯಾಧಾರ, ವಾದವಿವಾದಗಳನ್ನು ಪರಿಶೀಲಿಸಿ ತೀರ್ಪು ಕೊಡುತ್ತಾನೆ. ಅವನ ಉದ್ದೇಶ ವ್ಯಕ್ತಿಯನ್ನು ಗೆಲ್ಲಿಸುವುದಲ್ಲ, ಸತ್ಯವನ್ನು ಗೆಲ್ಲಿಸುವುದು. ಅದು ಅವನ ಆದರ್ಶ. ಆದರೆ ನ್ಯಾಯಮೂರ್ತಿಯು ತನಗೆ ಲಭ್ಯವಾದ ಎರಡೂ ಕಡೆಯವರು ನೀಡಿದ ಮಾಹಿತಿಯನ್ನು ಮಾತ್ರ ಅವಲಂಬಿಸುವನೇ ಹೊರತು ತಾನೇ ಪ್ರತ್ಯೇಕವಾಗಿ ಸಮಗ್ರ ಮಾಹಿತಿ ಸಂಗ್ರಹ ಮಾಡುವುದಿಲ್ಲವಾದ ಕಾರಣ ಎಷ್ಟೋ ಬಾರಿ ಅವನಿಗೆ ಸತ್ಯವನ್ನು ಗೆಲ್ಲಿಸುವುದು, ಅವನಿಗೆ ಸತ್ಯ ಗೊತ್ತಿದ್ದರೂ ದಾಖಲೆಗಳ ಅಭಾವದ ಕಾರಣ ಸಾಧ್ಯವಾಗದೇ ಇರುವ ಸಂದರ್ಭಗಳೂ ಉಂಟು. ಆ ಕಾರಣ, ನೇರವಾಗಿ ಮಾಹಿತಿ ಸಂಗ್ರಹಿಸುವ ಪಕ್ಷ ಪ್ರತಿಪಕ್ಷಗಳ ವಕೀಲರಂತೆಯೇ ತಾನೂ ಕೆಲಸ ಮಾಡಿ ತೀರ್ಪು ನೀಡುವ ನ್ಯಾಯಾಧೀಶನ ಕೆಲಸದಂತೆ ಸಂಶೋಧಕನ ಕೆಲಸ. ನ್ಯಾಯಾಧೀಶನ ತೀರ್ಪು ಅವನ ದೃಷ್ಟಿಯಿಂದ ಕೊನೆ. ಆದರೆ ಸಂಶೋಧಕನ 'ತೀರ್ಪು' ಪರಿಶೀಲನಾರ್ಹ. ಸಾರಾಂಶವೆಂದರೆ ಅವನ ಏಕೈಕ ಉದ್ದೇಶ ಸತ್ಯವನ್ನು ಗೆಲ್ಲಿಸುವುದು; ಅವನೊಬ್ಬ ಸತ್ಯಶೋಧಕ.

## ಪಂಪನ ಹಿನ್ನೆಲೆ ಬಗ್ಗೆ

ನಾನಾಗಲೇ ಒಂದು ಕಡೆ ದಾಖಲಿಸಿರುವಂತೆ ನನ್ನ ಮೊದಲ 'ಶೋಧ'(?) ಎರಡು ಪದಗಳಿಗೆ ಸಂಬಂಧಿಸಿದ್ದು. ಕನ್ನಡ ಆನರ್ಸ್ ವಿದ್ಯಾರ್ಥಿಯಾಗಿದ್ದ ನನಗೆ ಒಂದು ದಿನ "ಒ(ವ)ಂದಕ್ಕೆ" "ಎ(ಯೆ)ರಡಕ್ಕೆ" ಎಂಬ ಮಾತುಗಳ ವಾಚ್ಯಾರ್ಥ ಹೊಳೆದು ಸಂತೋಷವಾಯಿತು. ಬರೀ ಮೂತ್ರ ವಿಸರ್ಜನೆಯನ್ನು ಮೊದಲ ಪದ, ಮಲ ಮೂತ್ರಗಳೆರಡನ್ನೂ ವಿಸರ್ಜಿಸುವುದನ್ನು ಎರಡನೆಯದು ಸೂಚಿಸುತ್ತದೆಯೆಂಬುದು ಹೊಳೆದಾಗ ನನ್ನ ದಡ್ಡತನಕ್ಕೆ ನಾಚಿಕೆಯೂ ತಡವಾಗಿಯಾದರೂ ಹೊಳೆದುದಕ್ಕೆ ಹೆಚ್ಚಿನ ನಾಚಿಕೆಯೂ ಆಯಿತು. ಅದು ಕೇವಲ ತಮಾಷೆಯ ಮಾತಾಯಿತು. 1950 - 51ರಲ್ಲಿ ಪಂಪಭಾರತ ಪಾಠ ಮಾಡುತ್ತಿದ್ದ ಪೂಜ್ಯ ಗುರುಗಳಾದ ಕುವೆಂಪು ಅಲ್ಲಿ ವರ್ಣಿತವಾಗಿದ್ದ ಸುರಗಿ ಮರ ನೋಡಿದ್ದೀರಾ ಎಂದು ಪ್ರಶ್ನಿಸಿದಾಗ ನಾನು "ಅದರ ಸುವಾಸನೆಯ ಒಣಹೂವನ್ನು ಸಂತೆಯಲ್ಲಿ ಕೊಂಡು ತರುತ್ತಿದ್ದೆವು" ಎಂದೆ. ಅವರು "ಇಲ್ಲೇ ಕುಕ್ಕನಹಳ್ಳಿ ಕೆರೆ ಹತ್ತಿರ ಮರ ಇದೆ, ಹೋಗಿ ನೋಡಿ" ಎಂದರು. ಗುರುಗಳು ಹೇಳಿದ ಮಾತು "ಅನುಲ್ಲಂಘನೀಯಂ" : ಹೋಗಿ ಕೆರೆ ಸುತ್ತು ಹಾಕಿ ಅದನ್ನು ಕಂಡು ಹಿಗ್ಗಿದೆ. ಆಗ ಹೂ ಬಿಟ್ಟಿರಲಿಲ್ಲ. ಮುಂದೆ ಸಿದ್ಧಗಂಗೆಯಿಂದ ಹಂಪಿಗೆ ಕಾಲ್ನಡಿಗೆಯಲ್ಲಿ ಹೋದಾಗ "ಸುರಿವ ಸುರಯಿಯರಲ ಮುಗುಳ್ಗೆ ಮೊಗಸಿದಳಿಕುಳಂಗಳಿಂ" ತುಂಬಿದ್ದ ಸುರಗಿ ಮರಗಳನ್ನು ರಸ್ತೆಯ ಅಕ್ಕಪಕ್ಕದಲ್ಲಿ ಕಂಡೆ. ಅದೇ ಪಂಪನ ಬನವಾಸಿ ವರ್ಣನೆ ಓದಿ, ಅವನಿಗೆ ಚಿಗುರಿದ ಮಾವು ಬಿರಿದ ಮಲ್ಲಿಗೆ ಕಂಡ ತಕ್ಷಣ ನೆನಪಾಗುತ್ತಿದ್ದ ಬನವಾಸಿಗೆ 1952ರ ಬೇಸಗೆಯಲ್ಲಿ ಹೋದಾಗ ಅಲ್ಲಿ

ಮಾವಿನ ಮರವೇನೋ ಕಾಣಿಸಿತು. ಅರ್ಧ ಸಮಾಧಾನವಾಯ್ತು. ಅಲ್ಲಿನ ದೇವಾಲಯದ ಮುಂದೆ ಬಿಟ್ಟಿದ್ದ ನನ್ನ ಚಪ್ಪಲಿಗೆ ಮನಸೋತ ಯಾರೋ ಚೋರ ಅವನ್ನು ಕೊಂಡೊಯ್ದುದರಿಂದ ಬರಿಗಾಲಲ್ಲೇ ಸಮೀಪದ ಹಳ್ಳಿಗೆ (ತುಮ್ಮರಿಕೊಪ್ಪ?) ವರದಾ ನದಿ ನದಿ ದಾಟಿ ಸುಡುವ ನೆಲದ ಮೇಲೆ ಹಾರಿ ಹಾರಿ ಬರುತ್ತಿರುವಾಗ ಪಕ್ಕದ ಹಳ್ಳಿಯ ಹಿತ್ತಲೊಂದರಲ್ಲಿ ಮಲ್ಲಿಗ ಬಳ್ಳಿ ಕಂಡು ನನ್ನ ಸಮಾಧಾನದ ಬುರುಡೆ ತುಂಬಿತು. ವಿದ್ಯಾರ್ಥಿ ಜೀವನದ ಕನಸಿನ ಲೋಕ ಹಾಗಿತ್ತು. ಪಂಪ ಕಂಡದ್ದು ಅದೇ ಮರ ಬಳ್ಳಿ ಆಗಿರಬೇಕಿಲ್ಲ. ಅವನು ಅಲ್ಲಿ ಕಂಡದ್ದನ್ನು ನಾನೂ ಕಾಣಬೇಕು ಎಂಬ ಹುಚ್ಚು ಅದು. ಆ ಮರ ಬಳ್ಳಿ ಮೂಲಕ ಪಂಪ, ಅವನ ಬನವಾಸಿ ನನ್ನ ಹತ್ತಿರಕ್ಕೂ ಬಂದರು. ಮುಂದೆ 1956-7ರಲ್ಲಿ ಮೈಸೂರು ಮಹಾರಾಜಾ ಕಾಲೇಜಿನಲ್ಲಿ ನಾನು ಎಂ.ಎ. ವಿದ್ಯಾರ್ಥಿಯಾಗಿ ಸೇರಿಕೊಂಡಾಗ (ಆ ಮುಂಚೆ ಬಿ.ಎ. ಆನರ್ಸ್ ಪದವೀಧರನಾಗಿ ಎರಡು ವರ್ಷ ಮೂರು ಕಾಲೇಜುಗಳಲ್ಲಿ - ಬೆಂಗಳೂರು, ತುಮಕೂರು, ಕೋಲಾರಗಳಲ್ಲಿ ಅಧ್ಯಾಪಕನಾಗಿ ಕೆಲಸಮಾಡಿದ್ದೆ) ಪಂಪನನ್ನು ವಿಶೇಷ ಅಧ್ಯಯನದ ಕವಿಯನ್ನಾಗಿ ಪಠ್ಯಕ್ರಮದಲ್ಲಿ ಸೇರಿಸಲಾಗಿತ್ತು. ಅದನ್ನು ಬೋಧಿಸುತ್ತಿದ್ದ ಡಿ.ಎಲ್.ಎನ್. ಪಂಪನ ಹಿನ್ನೆಲೆಯನ್ನು ಪುನಾರಚಿಸಲು ಅವನ ಕಾಲದ ಶಾಸನಗಳ ಅಧ್ಯಯನವನ್ನು ಮಾಡಲು ನನಗೆ ಸೂಚಿಸಿದರು. ನಾನು ಶ್ರದ್ಧೆಯಿಂದ ಒಂಬತ್ತು ಹತ್ತು ಹನ್ನೊಂದನೇ ಶತಮಾನಗಳ ಶಾಸನಗಳನ್ನು ಎಚ್ಚರಿಕೆಯಿಂದ ಅಧ್ಯಯನ ಮಾಡಲು ತೊಡಗಿ ಆ ಶಾಸನಗಳಲ್ಲಿ ಹುದುಗಿದ್ದ ಸಂಸ್ಕೃತಿ ಸಂಬಂಧಿಯಾದ ಸಮೃದ್ಧ ಸಾಮಗ್ರಿಗೆ ಮಾರುಹೋದೆ. ಅದರಲ್ಲೂ "ಚಲದೊಳ್ ದುರ್ಯೋಧನನ್, ನನ್ನಿಯೊಳ್ ಇನತನಯನ್..." ಎಂದು ಆರಂಭವಾಗುವ ಪಂಪಭಾರತದ ಪದ್ಯದಲ್ಲಿ ಉಕ್ತವಾಗಿರುವ ಮೌಲ್ಯಗಳ ಉಲ್ಲೇಖ ಶಾಸನಗಳಲ್ಲಿ ಹಲವೆಡೆ ಮತ್ತೆ ಮತ್ತೆ ಪ್ರಸ್ತಾಪವಾಗುತ್ತಿರುವ ಅಂಶ ನನ್ನ ಗಮನವನ್ನು ಸೆಳೆಯಿತು. ಆ ಎಲ್ಲ ಸಾಮಗ್ರಿಯನ್ನು ಸೇರಿಸಿ "ಪಂಪಕವಿ ಮತ್ತು ಮೌಲ್ಯಪ್ರಸಾರ" ಎಂಬ ಲೇಖನವನ್ನು ಎಂ.ಎ. ವಿದ್ಯಾರ್ಥಿಗಳ ವಿಚಾರಗೋಷ್ಠಿಯಲ್ಲಿ ಓದಿದಾಗ ಪಂಪನನ್ನು ಪಾಠ ಹೇಳಿದ ಡಿ.ಎಲ್.ಎನ್. ಅವರಲ್ಲದೆ ವರ್ಷದ ಕೊನೆಯಲ್ಲಿ ಪ್ರಾಧ್ಯಾಪಕರಾಗಿ ಬಂದ ತೀ.ನಂ.ಶ್ರೀ.ಯವರು ಉಪಸ್ಥಿತರಿದ್ದು, ಪ್ರಬಂಧ ಮಂಡನೆಯಾದ ಮೇಲೆ ನನ್ನ ಬರಹದ ಬಗ್ಗೆ ಬಹು ಮೆಚ್ಚುಗೆ ವ್ಯಕ್ತಪಡಿಸಿದರು. ತೀರ ಅನಿರೀಕ್ಷಿತವಾಗಿದ್ದ ಆ ಮೆಚ್ಚುಗೆ ನನಗೆ ತಂದ ಹರ್ಷ ವರ್ಣನಾತೀತ. ಮುಂದೆ ಆ ಲೇಖನ 'ಪ್ರಬುದ್ಧ ಕರ್ಣಾಟಕ"ದಲ್ಲಿ ಪ್ರಕಟವಾದುದಲ್ಲದೆ ನನ್ನ ಮೊದಲ ಪ್ರಕಟಿತ ಸಂಪ್ರಬಂಧ (Paper, Research paper) ಎನ್ನಿಸಿಕೊಂಡಿತು. ಶಾಸನಗಳನ್ನು ಅಭ್ಯಾಸ ಮಾಡುವಾಗ ಅಲ್ಲಿ ಬರುವ ಬೀರ, ಚಾಗ, ಶೌಚ ಇವೇ ಮೊದಲಾದ ಉಲ್ಲೇಖಗಳು, ಪಂಪನ ಉಕ್ತಿಗಳ ಪುನರುಚ್ಚಾರ ಇವು ಒಂದೊಂದೂ ನನ್ನ ಉತ್ಸಾಹವನ್ನು ಹೆಚ್ಚಿಸಿದ್ದುವು. ಪಂಪ ತನ್ನ ಕಾಲದ ವೀರಜೀವನದ ಸತ್ವವನ್ನು ತನ್ನದಾಗಿಸಿಕೊಂಡು ತನ್ನ ಕಾಲದ ಮೌಲ್ಯಗಳನ್ನು ಕಥಾರೂಪದಲ್ಲಿ ವ್ಯಕ್ತಪಡಿಸಿ ಅವುಗಳಿಗೊಂದು ಮೂರ್ತ ಸ್ವರೂಪವನ್ನು ಭಾರತದ ಪಾತ್ರಗಳ ಮೂಲಕ ನೀಡಿದುದಲ್ಲದೆ ತನ್ನ ಕೃತಿಯ ಮೂಲಕ ಆ ಮೌಲ್ಯಗಳನ್ನು ಪ್ರಚುರಗೊಳಿಸಿದನೆಂದು ಆ ಲೇಖನದಲ್ಲಿ ಪ್ರತಿಪಾದಿಸಿದ್ದೇನೆ.

## "ಭಗವತಿ"

ಎಂ.ಎ. ಪದವೀಧರನಾದ ನನಗೆ ಮೈಸೂರಿಗೆ ವರ್ಗಾವಣೆಯಾದ ಕ್ಷಣ ಮಾಡಿದ ಮೊದಲ ಕೆಲಸವೆಂದರೆ ತೀ.ನಂ.ಶ್ರೀ.ಯವರನ್ನು ಪಿಎಚ್.ಡಿ. ಪದವಿಗಾಗಿ ನನಗೆ ಮಾರ್ಗದರ್ಶಕರಾಗಲು ಕೇಳಿಕೊಂಡದ್ದು. ಅವರು ಸಂತೋಷದಿಂದ ಒಪ್ಪಿಕೊಂಡದ್ದಲ್ಲದೆ ವಿಚಾರಗೋಷ್ಠಿಯ ನನ್ನ ಲೇಖನವನ್ನು ಮೆಚ್ಚಿಕೊಂಡಿದ್ದ ಅವರು ಶಾಸನಗಳ ಆ ಅಧ್ಯಯನವನ್ನೇ ಮುಂದುವರಿಸಲು ಸೂಚಿಸಿ ಕ್ರಿ.ಶ. 450 - 1150 ಈ ಅವಧಿಯ ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನವನ್ನು ಕೈಗೊಳ್ಳಲು ಸೂಚಿಸಿದರು. ಉತ್ಸಾಹ ಚಿಮ್ಮಿ ಪುಟಿಯುತ್ತಿದ್ದ ವಯಸ್ಸು ನನ್ನದು, ಆಗಿನ್ನೂ ಬ್ರಹ್ಮಚಾರಿ. ಮುಂದೆ ಹಲವು ವರ್ಷಗಳ ಮೇಲೆ ನಾನು ನನ್ನ ಹೆಂಡತಿ ವಿಶಾಲಾಕ್ಷಿ ಮತ್ತು ಇಬ್ಬರು ಮಕ್ಕಳ ಜೊತೆ ಜೋಗಕ್ಕೆ ಹೋಗಿದ್ದ ನೆನಪು ಬರುತ್ತದೆ. ಅಲ್ಲಿದ್ದ ಈಜುಕೊಳದ ನೀರಿನ ಅಂಚಿನಲ್ಲಿ ಮಕ್ಕಳು ಆಟವಾಡಬೇಕೆಂದು ನಾನು ಸೂಚಿಸುತ್ತಿದ್ದಂತೆಯೇ ಅಲ್ಲಿದ್ದ ಈಜು ಮಾರ್ಗದರ್ಶಿ ಆ ಇಬ್ಬರು ಮಕ್ಕಳನ್ನೂ ಎರಡು ಕೈಗಳಲ್ಲಿ ಎತ್ತಿಹಿಡಿದು ನೀರಿಗೆ ಬಿಸಾಡಿ ತಾನೂ ನೀರಿಗೆ ಇಳಿದ. ಅವು ಮುಳುಗಿ ನೀರು ಕುಡಿದು ಮೇಲಕ್ಕೆದ್ದ ಕೂಡಲೆ ಅವನ್ನು ತಂದು ದಡದ ಮೇಲೆ ನಿಲ್ಲಿಸಿದ. ಅವು ಒಂದು ಕ್ಷಣ ಹೆದರಿದಂತೆ ಕಂಡರೂ ಬಳಿಕ ನಗಲಾರಂಭಿಸಿದುವು. ಆಗ ಆ ಮಾರ್ಗದರ್ಶಿ ಹೇಳಿದ- "ನೋಡಿ ಸಾ. ಪೇಟೆ ಹುಡುಗರು ನೀರು ಕಂಡರೆ ಹೆದರುತ್ತಿರುತ್ತವೆ. ಅವನ್ನು ನೀರಿಗೆ ಒಮ್ಮೆ ಎಸೆದರೆ ಸಾಕು ತಾನಾಗಿಯೇ ಆ ಭಯ ಓಡಿ ಹೋಗಿರುತ್ತದೆ". ಮಕ್ಕಳು ಆ ಬಳಿಕ ನೀರ ಅಂಚಿನಲ್ಲಿ ಆಡಿದುವು, ಮುಳುಗಿದುವು, ಅವನ ಕೈ ಹಿಡಿದೇ ಕೈಕಾಲು ಬಡಿದುವು. ಈ ಸಂಶೋಧನ ಮಾರ್ಗದರ್ಶಿ ತೀ.ನಂ.ಶ್ರೀ. ನನ್ನನ್ನು ಆ ಈಜು ಮಾರ್ಗದರ್ಶಿಯಂತೆ ಮೈಸೂರಿನಿಂದ ಉತ್ತರ ಕರ್ನಾಟಕಕ್ಕೆ ಎಸೆದರೆಂದೇ ಹೇಳಬೇಕು. "ಹೋಗಿ ಉತ್ತರ ಕರ್ನಾಟಕದ ಬೇರೆ ಬೇರೆ ಭಾಗಗಳನ್ನು ನೋಡಿ ಬನ್ನಿ" ಎಂದು ಅವರು (1957-8) ಹೇಳಿದ್ದನ್ನು ನಾನು ಶಿರಸಾ ವಹಿಸಿ (ಅವರೊಬ್ಬರು ನಮ್ಮನ್ನು ಬಹುವಚನದಿಂದ ಕರೆಯುತ್ತಿದ್ದರು) ಆ ದಸರೆಯಲ್ಲಿ ಒಬ್ಬನೇ ಗದಗ, ಲಕ್ಕುಂಡಿ, ಬಾದಾಮಿ, ಶಿವಯೋಗಮಂದಿರ, ಬನಶಂಕರಿ, ಮಹಾಕೂಟ, ಐಹೊಳೆ, ಕೂಡಲಸಂಗಮ, ಬಿಜಾಪುರ, ಧಾರವಾಡ, ಗೋಕರ್ಣ, ಕಾರವಾರ ಇತ್ಯಾದಿ ಜಾಗಗಳನ್ನು ನೋಡಿ, ಅಲ್ಲಿನ ದೇವಾಲಯ ಶಿಲಾಶಾಸನಗಳನ್ನು ಎಚ್ಚರಿಕೆಯಿಂದ ಗಮನಿಸಿಕೊಂಡು ವಾಪಸಾದೆ. ಬಾಗಲಕೋಟೆಯಿಂದ ಕೂಡಲಸಂಗಮಕ್ಕೆ ಹೋಗುವ ದಾರಿಯಲ್ಲಿ ಬಸ್ ಹತ್ತು ನಿಮಿಷ ನಿಂತಿತು. ಆ ಊರಿನ ಹೆಸರು ಭಗವತಿ. ತಕ್ಷಣ ನನಗೆ "ಭಗವತಿಯೇರುವೇಳ್ವ ತೆರದಿಂ ಕತೆಯಾಯ್ತಿವರೇರು" ಎಂಬ ಪಂಪನ ಒಂದು ಉಕ್ತಿ ಜ್ಞಾಪಕಕ್ಕೆ ಬಂದು ಸಂಭ್ರಮಗೊಂಡೆ. ಅದು ಆ ಕ್ಷಣ ನನಗೆ ಹೊಸದನ್ನೇನೂ ಮಿಂಚಿಸಲಿಲ್ಲವಾದರೂ ಆ ದೇವತೆಯ ಹೆಸರಿನ ಒಂದು ಊರು ಇರುವುದೇ ನನಗೆ ಏನೋ ಹೊಸ ಅಂಶವೊಂದನ್ನು ತಿಳಿಸಿದಂತಾಯಿತು. ಮುಂದೆ "ಭಗವತಿಯೇರು" ಎಂಬ ಲೇಖನವನ್ನೂ ಬರೆದೆ. ಆ ಪ್ರವಾಸದ ಸಂದರ್ಭದಲ್ಲಿ ಬಿಜಾಪುರಕ್ಕೆ ಹೋಗಿ

ಡಾ. ಫ.ಗು. ಹಳಕಟ್ಟಿಯವರ ಜೊತೆ, ಧಾರವಾಡದಲ್ಲಿ ಪ್ರೊ.ಸ.ಸ ಮಾಳವಾಡರ ಜೊತೆ ಮಾತನಾಡಿ ಉತ್ತೇಜಿತನಾದೆ. ಸಂಶೋಧಕನಿಗೆ ಸಂಶೋಧನೆ ಎಂದರೇನೆಂಬುದನ್ನು ಕಲಿಸಿಕೊಡುವುದು ಆ ವಿಷಯಕವಾದ ಪುಸ್ತಕಗಳಿಗಿಂತ ಹೆಚ್ಚಾಗಿ ಆ ಕ್ಷೇತ್ರದಲ್ಲಿ ಕೆಲಸ ಮಾಡಿದವರು, ಅವರು ನಡೆದ ಮಾರ್ಗ, ಪಟ್ಟ ಶ್ರಮ, ಅವರು ಯುವ ಸಂಶೋಧಕನಲ್ಲಿ ಮೂಡಿಸುವ ಉತ್ಸಾಹ. ಆ ಪ್ರವಾಸವು ನಾನು ಪುಸ್ತಕಗಳಲ್ಲಿ ಓದಿದುದನ್ನು ಪ್ರತ್ಯಕ್ಷವಾಗಿ ಕಾಣುವ ಅವಕಾಶವನ್ನು ಕೊಟ್ಟಿತು. ಜನಗಳ ಜೊತೆ ನಡೆದುಕೊಳ್ಳುವ ರೀತಿಯನ್ನೂ ಕಲಿಸಿತು. ಕೂಡಲಸಂಗಮದ ಸಂಗಮ ಕ್ಷೇತ್ರದ ಎದುರಿನ ಗೋಡೆಯೊಂದರಲ್ಲಿ ಬೀಡಿ ಜಾಹಿರಾತಿನ ಭಿತ್ತಿ ಪತ್ರ ಅಂಟಿಸಿದ್ದು ಮನಸ್ಸಿಗೆ ನೋವುಂಟುಮಾಡಿದರೂ ಬಸವಣ್ಣ ಓಡಾಡಿದ ನೆಲದ ಮೇಲೆ ಅವನು ಇಟ್ಟ ಹೆಜ್ಜೆಗಳಲ್ಲಿ ನಾನೂ ಹೆಜ್ಜೆ ಇಡುತ್ತಿದ್ದೇನೆ ಎಂಬ ಒಂದು ಬಗೆಯ ಪುಲಕಾನುಭವವಾಯ್ತು. ಬಾದಾಮಿ ರೈಲ್ವೆ ನಿಲ್ದಾಣದಲ್ಲಿ ಅಲ್ಲಿನ ಜನ ತಾವೇ ಬಂದು ತಮ್ಮ ಭಾಷೆಯಲ್ಲಿ ಮಾತನಾಡಿಸಿದರು. ನಾನು ಮಾತನಾಡುತ್ತಿದ್ದರೆ ಹಲವರು ಹಳ್ಳಿಯ ಜನ ನಿಂತು ಆಸಕ್ತಿಯಿಂದ ಕೇಳಿ "ನಿಮ್ಮ ಕನ್ನಡ ಭಾಳ ಚಲೋ ಐತ್ರಿ, ಪಸಂದ್ ಐತ್ರಿ" ಎಂದರು. "ನಿಮ್ಮ ಕನ್ನಡ ನನ್ನದಕ್ಕಿಂತ ಚಲೋ" ಎಂದು ಹೇಳಿದರೆ ಅವರು ಸುತಾರಾಂ ಒಪ್ಪಲಿಲ್ಲ. ದಸರೆ ಉತ್ಸವ ನೋಡುವುದನ್ನು ಬಿಟ್ಟು ಇಲ್ಲಿಗೆ ಏಕೆ ಬಂದಿರಿ ಎಂಬ ಅವರ ಪ್ರಶ್ನೆಗೆ ನಾನೇನು ಉತ್ತರ ಹೇಳಲಿ! ಅವರಿಗೆ ಮೈಸೂರಿನ ಕನಸು, ನನಗೆ ಬಾದಾಮಿಯ ಹುಚ್ಚು! ಕನ್ನಡ ಭಾಷೆಯ ಪ್ರಾದೇಶಿಕ ವೈವಿಧ್ಯದ ಮೊದಲ ಪ್ರತ್ಯಕ್ಷಾನುಭವ ನನ್ನಲ್ಲಿನ ಭಾಷಾವಿಜ್ಞಾನದ ವಿದ್ಯಾರ್ಥಿಯನ್ನು ಎಚ್ಚರಿಸಿತ್ತು. ಗೋಕರ್ಣದ ಹವ್ಯಕರ ಮನೆಗಳಲ್ಲಿ ಏನೂ ತಿನ್ನಬಾರದು, ಅವರು ಊಟ ತಿಂಡಿಗೆ ಮದ್ದು ಹಾಕಿರುತ್ತಾರೆ ಎಂದು ಯಾರೋ ಧಾರವಾಡದಲ್ಲಿ ಹೆದರಿಸಿದ್ದರು. ನಾನು ಗೋಕರ್ಣೇಶ್ವರ ದೇವಾಲಯದಲ್ಲಿ ಅರ್ಚಕರು ಕೊಟ್ಟ ಪಾಯಸದ ತೀರ್ಥವನ್ನು ಬಾಯಿಗೆ ಹಾಕಿಕೊಂಡಂತೆ ಮಾಡಿ ಹಾಗೇ ಕೊರಳ ಹಿಂಭಾಗಕ್ಕೆ ಒರಸಿಕೊಂಡೆ. ಅಲ್ಲಿ ಒಂದು ಗಂಟೆ ಹೊತ್ತು ಜಿಡ್ಡು ಜಿಡ್ಡಿನ ಅನುಭವ. ಅಲ್ಲಿ ಹೋಟಲಲ್ಲಿ ತಿಂಡಿ ತಿನ್ನಲಿಲ್ಲ. ಗೋಕರ್ಣದ ಎತ್ತರದ ಗುಡ್ಡದಿಂದ ಕಾಣುತ್ತಿದ್ದ ಸಮುದ್ರದ ತಿಳಿ ನೀರಲ್ಲಿ ಈಜುತ್ತಿದ್ದ ಆಮೆಯ ದೃಶ್ಯ, ಆ ಊರಿನ ಹಾಲಕ್ಕಿ ಒಕ್ಕಲಿಗರ ಹೆಂಗಸರ ಕೊರಳ ಕರಿಮಣಿಸರಗಳ ಗೊಂಚಲು, ಗೋಕರ್ಣದಿಂದ ಕಾರವಾರಕ್ಕೆ ಬಸ್ಸಿನ ಹಿಂದಿನ ಸೀಟಿನಲ್ಲಿ ಕುಳಿತು ಹೋಗುವಾಗ ಒಬ್ಬ ಚಿಕ್ಕ ವಯಸ್ಸಿನ ಚೆಲುವೆ ಹೆಣ್ಣಿನ (ಅವಳು ಬಹುಶಃ 'ಹಾಲಕ್ಕಿ' ಅಲ್ಲ, ಆದರೆ ನಾನು 'ಹಾ Lukcy)' ಪಕ್ಕದಲ್ಲಿ ಕುಳಿತು ವೇಗವಾಗಿ ಹೋಗುತ್ತಿದ್ದ ಬಸ್ ಎತ್ತಿ ಹಾಕಿದರೆ ಅಥವಾ ಸ್ವಲ್ಪ ತಿರುಗಿದರೂ ಸಾಕು ನಾನೂ ಪಕ್ಕಕ್ಕೆ ವಾಲಿ ಅವಳನ್ನು ಮೃದುವಾಗಿ ಮುಟ್ಟಿಸಿಕೊಂಡು ಯೌವನರಸ ಅನುಭವಿಸಿದ್ದನ್ನು ಏಕೋ ಈ ಎಪ್ಪತ್ತನೆ ವಯಸ್ಸಿನಲ್ಲಿ ಮರೆಯುವುದು ಕಷ್ಟವಾಗಿದೆ. ನನಗೆ ನಾಡಿನ, ನುಡಿಯ, ಜನರ, ಶಾಸನ ಶಿಲ್ಪ ದೇವಾಲಯಗಳ, ಪ್ರಕೃತಿಯ ನೇರ ಅನುಭವವಾಯ್ತು. ಒಬ್ಬನೇ ಹನ್ನೆರಡು ದಿನ ನನ್ನ ಕನಸು ಆಲೋಚನೆಗಳಲ್ಲಿ ಮುಳುಗಿ ಎಲ್ಲವನ್ನೂ ತೆರೆದ ಕಣ್ಣು ಮನಸ್ಸಿಗಳಿಂದ ನೋಡಿ, ಆ ಆಲೋಚನೆಗಳನ್ನು ಒಂದು ನಿರ್ದಿಷ್ಟ ಕ್ರಮಕ್ಕೆ ತರುವ ಅಭ್ಯಾಸವೂ

ಆಯಿತು. ವಾಪಸ್ ಬಂದು ಮೈಸೂರಲ್ಲಿ ಮೈ ಚಳಿ ಬಿಟ್ಟು ಅಮಿತ ಉತ್ಸಾಹದಿಂದ ಅಧ್ಯಯನವನ್ನು ಮುಂದುವರಿಸಿದೆ. ಸ್ವಲ್ಪ ಹೆದರುತ್ತಿದ್ದ ನನ್ನ ಅಳುಕನ್ನು ನನ್ನಿಂದ ಓಡಿಸಿದ ತೀ.ನಂ.ಶ್ರೀ.ಯವರ ಕೆಲಸ ಮೇಲೆ ಹೇಳಿದ ಈಜುಗಾರ ಮಾಡಿದ್ದನ್ನು ಜ್ಞಾಪಿಸುತ್ತದೆ. ಅವರು ಇಪ್ಪತ್ತಾರು ವರ್ಷದ ಹುಡುಗನನ್ನು (ಅವರ ಮುಂದೆ ನಾನು ಈಗಲೂ ಹುಡುಗನೇ, ಅವರು ಕಣ್ಮುಂದೆ ಇಲ್ಲದಿದ್ದರೂ) ಉತ್ತರ ಕರ್ನಾಟಕದ ಸಮೃದ್ಧ ಸಾಂಸ್ಕೃತಿಕ ಸಾಗರಕ್ಕೆ ನಗುನಗುತ್ತ ನಿರ್ದಯವಾಗಿ ಎಸೆದಿದ್ದರು; ಹೋಗಿ ಬಿದ್ದದ್ದು ಕುಮಾರವ್ಯಾಸನ ಗದುಗಿನಲ್ಲಿ. ನಾನು ಆಗ ಗಾಳಿ ತುಂಬಿದ ಚೆಂಡಾಗಿದ್ದೆ ; ಅಲ್ಲಿಂದ ಪುಟ ನೆಗೆದು ಐಹೊಳೆ, ಬಾದಾಮಿ, ಕೂಡಲಸಂಗಮ, ಬಿಜಾಪುರ, ಕಾರವಾರಗಳಲ್ಲಿ ಬಿದ್ದು, ಹಾರಿ ಹೆಚ್ಚಿನ ಗಾಳಿ ತುಂಬಿದ ಚೆಂಡಾಗಿ ಮೈಸೂರಿಗೆ ವಾಪಸ್ ಬಂದು ಬಿದ್ದೆ.

## ಕಾಳಿದಾಸನ ತೇದಿ - ಉಬ್ಬಿದ್ದು, ಇಳಿದದ್ದು

ಮಹಾರಾಜಾ ಕಾಲೇಜು ಪಕ್ಕದಲ್ಲಿದ್ದ ವಿಶ್ವವಿದ್ಯಾಲಯ ಗ್ರಂಥಾಲಯದಲ್ಲಿ ಶಾಸನಗಳನ್ನು ಏಕಾಗ್ರ ಚಿತ್ತದಿಂದ ಓದುತ್ತ ಅಲ್ಲಿನ ಒಂದೊಂದೇ ವಿಷಯದ ಮಾಹಿತಿಯನ್ನು ಬಿಡಿ ಚೀಟಿಗಳ ಮೇಲೆ (5" x 4") ಗುರುತು ಹಾಕಿಕೊಳ್ಳುತ್ತಿದ್ದೇನೆ. ಮಂಗಳೇಶನ ಮಹಾಕೂಟ ಸ್ತಂಭ ಶಾಸನದ ಪಾಠವನ್ನು (ಆ ಶಾಸನದ ಕಲ್ಲನ್ನು ಬಿಜಾಪುರದ ಪ್ರಾಕ್ತನ ವಸ್ತು ಸಂಗ್ರಹಾಲಯದಲ್ಲಿ ನೋಡಿದ್ದೆ) ಓದುತ್ತಿದ್ದೇನೆ. ಅರೆ, ಏನಿದು ! ಆ ಕ್ರಿ.ಶ. 602ರ ಶಾಸನದಲ್ಲಿ ಕಾಲಿದಾಸನ ರಘುವಂಶದ ಶ್ಲೋಕಾರ್ಧವೊಂದು ಹಾಗೇ ಏನೂ ವ್ಯತ್ಯಾಸವಿಲ್ಲದೆ ಬಳಕೆಯಾಗಿದೆ. ಕಾಲಿದಾಸನ ಕಾಲವನ್ನು ಕುರಿತ ಚರ್ಚೆಗಳಲ್ಲಿ ಅಲ್ಲಿಯವರೆಗೆ ಐಹೊಳೆಯ ಪುಲಿಕೇಶಿಯ ಮೇಗೂಟಿ ಶಾಸನವನ್ನು (ಕ್ರಿ.ಶ. 634) ಉಲ್ಲೇಖ ಮಾಡಲಾಗುತ್ತಿತ್ತು. ಅದರಲ್ಲಿ ಕವಿಯು ಕಾಲಿದಾಸ ಭಾರವಿಯರ ಹೆಸರುಗಳನ್ನು ಹೇಳುವುದರಿಂದ ("ವಿಜಯತಾಂ ರವಿಕೀರ್ತಿಃ ಕವಿತಾಶ್ರಿತ ಕಾಲಿದಾಸ ಭಾರವಿ ಕೀರ್ತಿಃ") ಕಾಲಿದಾಸನು ಏನಿದ್ದರೂ ಕ್ರಿ.ಶ. 634ಕ್ಕೆ ಹಿಂದಿನವನು ಎಂಬುದು ಖಚಿತವಾಗಿತ್ತು. ಎಷ್ಟು ಹಿಂದೆ ಎಂಬುದಷ್ಟೇ ನಿರ್ಣೀತವಾಗಬೇಕಿತ್ತು. ಈಗ ಅದೇ ಕಾಲಿದಾಸನ ಕೃತಿಯ ಶ್ಲೋಕವು ಕ್ರಿ.ಶ. 602ರ ಶಾಸನದಲ್ಲಿ ಉದ್ಧೃತವಾಗಿರುವುದರಿಂದ ಅವನ ತೇದಿಯ ಸ್ಪಷ್ಟ ಮಿತಿಯನ್ನು ಇನ್ನೂ ಮೂವತ್ತೆರಡು ವರ್ಷಗಳಷ್ಟು ಹಿಂದಕ್ಕೆ ಕೊಂಡೊಯ್ಯಲು ಸಾಧ್ಯವಾಗುವಂತಿತ್ತಾದರೂ ಯಾರೂ ಮಂಗಲೇಶನ ಶಾಸನದ ಆ ಶ್ಲೋಕಾರ್ಧವನ್ನು ಗಮನಿಸಿರಲಿಲ್ಲ. ಸಂಶೋಧನೆಯಲ್ಲಿ ದೊಡ್ಡದು ಚಿಕ್ಕದು ಎಂಬುದಿಲ್ಲ. ಎಲ್ಲವೂ ಮುಖ್ಯ - ಸೈಕಲ್ಲಿಗೆ ಹ್ಯಾಂಡ್ಲಿನಂತೆಯೇ ನಟ್ಟು ಬೋಲ್ಟು ಕೂಡ ಮುಖ್ಯ. ನಾನು ಸ್ವಲ್ಪ ಹೆಚ್ಚಿನ ಉತ್ಸಾಹದಿಂದಲೇ ಅದೇ ದಿನವೋ ಮಾರನೆಯ ದಿನವೋ ಓಡಿ ಹೋಗಿ ತೀ.ನಂ.ಶ್ರೀ.ಯವರಿಗೆ ತಿಳಿಸಿದ ಕ್ಷಣ ಅವರು "It is a major discovery" ಎನ್ನಬೇಕೇ! ಯಾವುದೋ ಪ್ರಾಣಿಗೆ ಏನೋ ಕುಡಿಸಿದಂತಾಯಿತು. ಅವರ ಮಾತು ನನ್ನನ್ನು ಉಬ್ಬಿಸಿಬಿಟ್ಟಿತು. ಆ ಬಗ್ಗೆ ಲೇಖನ ಬರೆದು ಸಂಪತ್ರಿಕೆಯೊಂದಕ್ಕೆ ಕಳಿಸಲು ಸೂಚನೆ ಕೂಡ ಕೊಟ್ಟರು. ಮಾರನೆಯ ದಿನವೇ ಅದನ್ನು ಇಂಗ್ಲಿಷಿನಲ್ಲಿ ಬರೆದು, ಬೆರಳಚ್ಚು

ಮಾಡಿಸಿ ಅವರ ಕೈಗೆ ಕೊಟ್ಟಾಗ ಅವರು ಅದರ ಭಾಷೆಯನ್ನು ತಿದ್ದಿ ಯಾವುದೋ ಸಂಪತ್ರಿಕೆ ಹೆಸರನ್ನೂ ಹೇಳಿ ಅಲ್ಲಿಗೆ ಕಳುಹಿಸಲು ಸೂಚಿಸಿದರು. ಇನ್ನೇನು ಆ ತಿದ್ದಿದ ಲೇಖನವನ್ನು ಮತ್ತೆ ಬೆರಳಚ್ಚು ಮಾಡಿಸಬೇಕೆಂದಿರುವಷ್ಟರಲ್ಲಿ ಇಂಡಿಯನ್ ಆಂಟಿಕ್ವೆರಿ ಸಂಪತ್ರಿಕೆಯ ಸಂಚಿಕೆಯೊಂದರಲ್ಲಿ ಕಾಲಿದಾಸನ ಆ ಶ್ಲೋಕವನ್ನು ಒಬ್ಬ ವಿದ್ವಾಂಸರು ಗುರುತಿಸಿದ್ದನ್ನು ನೋಡಿ ಎದೆ ಧಸಕ್ಕೆಂದಿತು. ನನ್ನ ಉಬ್ಬು ಇಳಿದುಹೋಯಿತು. ಆ ಲೇಖನವನ್ನು ವಿದ್ವಾಂಸರಾರೂ ಗಮನಿಸಿರಲಿಲ್ಲವಾದ್ದರಿಂದ ಅವರ ಹೆಸರು ಹೇಳದೆ ನನ್ನ ಲೇಖನವನ್ನು ಕಳಿಸುವ ವಿಚಾರ ಬಂದು ಅದನ್ನು ಮನಸ್ಸಿನಿಂದ ತೊಡೆದುಹಾಕಿಬಿಟ್ಟೆ. ಬದುಕಿನಲ್ಲಿ ಹೇಗೋ ಸಂಶೋಧನೆಯಲ್ಲೂ ಅಪ್ಪಟ ಪ್ರಾಮಾಣಿಕತೆಯಿರಬೇಕು. ಒಮ್ಮೆ ಅಪ್ರಾಮಾಣಿಕನೆಂಬ ಅಪಖ್ಯಾತಿ ಬಂದರೆ ಅದರಿಂದ ಬಿಡುಗಡೆ ಇಲ್ಲ. ನಾನು ಗುರುತಿಸಿದ್ದರಲ್ಲಿ ಒಂದು ಹೊಸ ಅಂಶವೂ ಇತ್ತು. ಮಹಾಕೂಟ, ಐಹೊಳೆ ಶಾಸನಗಳನ್ನು ಬರೆದ ಕವಿ ಒಬ್ಬನೇ, ಅವನು ರವಿಕೀರ್ತಿಯೇ ಎಂಬುದು ಅಲ್ಲಿಯವರೆಗೆ ಯಾವ ವಿದ್ವಾಂಸರೂ ಗುರುತಿಸದ ಹೊಸ ಅಂಶವಾಗಿತ್ತು. ಅದನ್ನು ನನ್ನ ಪಿಎಚ್.ಡಿ. ನಿಬಂಧದ ಅಡಿಟಿಪ್ಪಣಿಯಲ್ಲಿ ನಮೂದಿಸಿದ್ದೇನೆ.

ಸಂಶೋಧನೆಗೆ ತೊಡಗಿದ ವಿದ್ಯಾರ್ಥಿಯಾಗಿದ್ದವನೊಬ್ಬನು ಎಂದು ಸಂಶೋಧಕನೆನ್ನಿಸಿಕೊಳ್ಳುತ್ತಾನೆ? ಅಥವಾ ತನ್ನನ್ನು ತಾನು ಸಂಶೋಧಕನೆಂದು ಕರೆದುಕೊಳ್ಳಬಹುದಾದ್ದು ಯಾವಾಗ ? ಏಕೆಂದರೆ ಅಲ್ಲಿಯವರೆಗೆ ಉಪಾಧ್ಯಾಯರ ಮಾರ್ಗದರ್ಶನದಲ್ಲಿ ಪುಸ್ತಕಗಳನ್ನು ಓದಿ ಜ್ಞಾನವನ್ನು ಗ್ರಹಿಸುತ್ತಿದ್ದವನು ಆ ಜ್ಞಾನವನ್ನು ಬೆಳೆಯಿಸುವ ಸಂಶೋಧನ ಕಾರ್ಯಕ್ಕೆ ಕೈಹಾಕಿದ್ದಾನೆ. ಅವನು ತನ್ನ ಕಾಲ ಮೇಲೆ ತಾನು ನಿಂತುಕೊಳ್ಳಲು ಯತ್ನಿಸುತ್ತಿದ್ದಾನೆ. ಹುಡುಗನೆನ್ನಿಸಿಕೊಳ್ಳುತ್ತಿದ್ದವನು ಎಂದೋ ಒಂದು ದಿನ ತರುಣನಾಗಿ ಬಿಡುವುದಿಲ್ಲವಾದರೂ ಹಾಗೆ ತರುಣನಾದೆನೆಂದು ಅವನೇ ಅಂದುಕೊಳ್ಳುವ ಒಂದು ನಿರ್ದಿಷ್ಟ ಕಾಲವನ್ನು ನಿರ್ದಿಷ್ಟ ಕ್ಷಣವನ್ನು ಅವನೇ ಗುರುತಿಸಿಕೊಳ್ಳಬಹುದೆಂದು ನನಗೆ ಅನ್ನಿಸಿದೆ. 10-15 ವರ್ಷದ ಹುಡುಗನಾಗಿದ್ದವನು ದೊಡ್ಡ ಹುಡುಗರು ಗಮನಿಸುತ್ತಿದ್ದಾರೆಂದು ಹುಡುಗಿಯರನ್ನು ಗಮನಿಸುತ್ತಿದ್ದವನು ಮುಂದೆ ಎಂದೋ ಒಂದು ದಿನ ಹುಡುಗಿಯೊಬ್ಬಳನ್ನು ಕಂಡಾಗ ಅವನಿಗೇ ಏನೋ ಅನ್ನಿಸುತ್ತದೆ. ಹಿಂದಕ್ಕೆ ತಿರುಗಿ ನೋಡುತ್ತಾನೆ. ಎದೆ ಹೊಡೆದುಕೊಳ್ಳುತ್ತದೆ. ನಡುಗುತ್ತಾನೆ. ಅವಳನ್ನು ದೂರದಿಂದ ನಖಶಿಖಾಂತ ನೋಡುತ್ತಾನೆ. ಕನ್ನಡಿಯಲ್ಲಿ ತನ್ನ ಮುಖ ನೋಡಿಕೊಂಡು ಚೆನ್ನಾಗಿ ತಲೆ ಬಾಚಿಕೊಳ್ಳುತ್ತಾನೆ. ಹುಡುಗನಾಗಿದ್ದವನು ಆ ದಿನ, ಆ ಕ್ಷಣ ತಾನು ತರುಣನಾದೆನೆಂದು ಅವನು ಅಂದುಕೊಳ್ಳಬಹುದು. ನಿರ್ಲಜ್ಜವಾಗಿ ಹೇಳಿಕೊಂಡೇ ಬಿಡುತ್ತೇನೆ. ಪುಸ್ತಕದ ಹೆಸರೇ "ಪಾಂಡಿತ್ಯ ರಸ". ನನ್ನ ಹಳ್ಳಿಯ ನನಗಿಂತ ದೊಡ್ಡ ಹುಡುಗರು ಹುಡುಗಿಯರ ಬಗ್ಗೆ ಮಾತನಾಡುವಾಗ ಅವರ ಮಾತು ಕೇಳಲು ಹಿತವಾಗಿರುತ್ತಿತ್ತು. ಅವರ ಜೊತೆ ನಾನೂ ನಗುತ್ತಿದ್ದೆ, ಮಾತುಕತೆಯಲ್ಲೂ ಭಾಗವಹಿಸುತ್ತಿದ್ದೆ. ಒಂದು ದಿನ ಮಧ್ಯಾಹ್ನ ನಾನು ಕೆರೆ ಏರಿಯ ಮೇಲೆ ಹೋಗುತ್ತಿದ್ದಾಗ, ಆಗ ನನಗೆ ಹದಿನೇಳೋ ಹದಿನೆಂಟೋ ವಯಸ್ಸು-

ಎದುರಿಗೆ ಹಳ್ಳಿಯ ಅವಿವಾಹಿತ ತರುಣಿಯೊಬ್ಬಳು ಗದ್ದೆಯಿಂದ ಹಿಂದಿರುಗುತ್ತಿದ್ದಳು. ಹಲವು ಬಾರಿ ಅವಳನ್ನು ಕಂಡಿದ್ದರೂ ಆ ದಿನ ಏನೋ ಅವಳಲ್ಲಿ ವಿಶೇಷ ಕಾಣಿಸಿತು. ಹಿಂದಿಲ್ಲದ ಚೆಲುವೂ ಕಾಣಿಸಿತು. ಅವಳ ಜೊತೆ ಮಾತನಾಡಬೇಕೆನ್ನಿಸಿತಾದರೂ ಅದು ಸಾಧ್ಯವೇ ಇರಲಿಲ್ಲ. ಪಾಪ, ಇದಾವುದರ ಅರಿವೂ ಇರದ ಆ ಮುಗ್ಧೆ ಹಿಂದೆ ಕೂಡ ನೋಡದೆ ಹೊರಟೇ ಹೋದಳು. ನಾನು ಮುಂದೆ ಹೋಗುತ್ತಿದ್ದವನು ಯಾರೂ ಅಲ್ಲಿಲ್ಲದಿರುವುದನ್ನು ಖಚಿತಪಡಿಸಿಕೊಂಡು ಎರಡು ಮೂರು ಬಾರಿ ತಿರುಗಿನೋಡಿದೆ - ಸದ್ಯ ಪಕ್ಕದ ಕೆರೆ ನೀರಿಗೋ ಕೆರೆ ಹಿಂಭಾಗದ ಇಳಿಜಾರಿಗೋ ಬೀಳಲಿಲ್ಲ. ಆ ದಿನ ನನಗೆ ಅನ್ನಿಸಲಿಲ್ಲ. ಮುಂದೆಯೂ ಅನ್ನಿಸಲಿಲ್ಲ. ಈ ಎಪ್ಪತ್ತನೆಯ ವಯಸ್ಸಿನಲ್ಲಿ ತೇದಿ, ವಾರ, ನಕ್ಷತ್ರ ನೆನಪಿಲ್ಲದ ಆ ದಿನವನ್ನು ಆ ಕ್ಷಣವನ್ನು ಹುಡುಗನಾಗಿದ್ದ ನಾನು ತರುಣನಾದ ಕ್ಷಣವೆಂದು ಭಾವಿಸುತ್ತೇನೆ. ಅವಳ ಕೈ ಹಿಡಿಯುವ ಆಲೋಚನೆ ಬರುವ ವಯಸ್ಸಂತೂ ಅದಾಗಿರಲಿಲ್ಲ.

ಅದೇ ಎಪ್ಪತ್ತರ ಈ ಏರು ವಯಸ್ಸಿನಲ್ಲಿ (ಏಕೆಂದರೆ ದಿನದಿಂದ ದಿನಕ್ಕೆ, ಒಂದೊಂದೇ ಮಹಡಿ ಮೆಟ್ಟಲು ಏರುತ್ತಿದ್ದೇನೆ) ಕಾಲಿದಾಸನ ತೇದಿಯ ಬಗ್ಗೆ ನನಗೆ ಏನೋ ಹೊಳೆದ ಆ ದಿನವನ್ನು ವಿದ್ಯಾರ್ಥಿಯಾಗಿದ್ದ ನಾನು ಸಂಶೋಧಕನಾಗಿ ಪರಿವರ್ತನೆ ಹೊಂದಿದ ದಿನವೆಂದು ಭಾವಿಸುತ್ತೇನೆ.

## ಪಿಎಚ್.ಡಿ. ಪದವಿ

ನನಗೆ ಪಿಎಚ್.ಡಿ. ಪದವಿ ಬಂದ ಬಳಿಕ ಒಂದು ದಿನ ತೀ.ನಂ.ಶ್ರೀ. "ನಾನು ಬಂಜೆಯಾಗಲಿಲ್ಲ" ಎಂದು ಅವರ ಮಗ ತೀ.ಶ್ರೀ. ನಾಗಭೂಷಣನ ಮುಂದೆ ಹೇಳಿಕೊಂಡದ್ದು ಆಮೇಲೆ ತಿಳಿಯಿತು. ಆ ಮುಂಚೆ ಅವರ ಮಾರ್ಗದರ್ಶನದಲ್ಲಿ ಕೆಲಸ ಮಾಡಿದ್ದ ನನ್ನ ಮಿತ್ರರೊಬ್ಬರ ಅರ್ಹ ನಿಬಂಧಕ್ಕೆ ಪಿಎಚ್.ಡಿ. ಪದವಿ ತಿರಸ್ಕೃತವಾಗಿತ್ತು. (ಅದೊಂದು ಪುಟ್ಟ ದುರದೃಷ್ಟಕರ ನೋವಿನ ಕತೆ). ಇನ್ನೂ ಚೆನ್ನಾಗಿ ಜ್ಞಾಪಕ ಇದೆ : ನನಗೆ ಪಿಎಚ್.ಡಿ. ಪದವಿ ದೊರಕಿದ ದಿನವೇ ಅವರ ಮನೆಗೆ ಹೋಗಿ, ಹೀಗೆ ಕೇಳಿಕೊಂಡೆ - "ಸರ್, ನನಗೆ ಪಿಎಚ್.ಡಿ. ಪದವಿ ಬಂದಿತು, ನಿಜ. ಆದರೆ ಮುಂದೆಯೂ ನನ್ನ ಸಂಶೋಧನೆಗಳಿಗೆ ನೀವೇ ಗೈಡಾಗಿರಬೇಕು". ಅವರಿಗೆ ಆ ಮಾತು ಸಂತೋಷ ತಂದಿರಬೇಕು. ನನಗೆ ಆ ವಯಸ್ಸಿನಲ್ಲಿ "ಡಾ॥" ಅನ್ನಿಸಿಕೊಳ್ಳಲು ಸಂತೋಷವಿತ್ತು. ಅಂತೆಯೇ ತೀ.ನಂ.ಶ್ರೀ, ಡಿ.ಎಲ್.ಎನ್. ಹಾಗೆ ಒಬ್ಬ ಶ್ರೇಷ್ಠ ಸಂಶೋಧಕನಾಗಿ ಬೆಳೆಯಬೇಕೆಂಬ ತೀವ್ರ ಹಂಬಲವೂ ಇತ್ತು. ಆ ಹಸಿವನ್ನು ಹುಟ್ಟಿಸಿ ಹಸಿವನ್ನೇ ಉಳಿಸಿ ಬೆಳೆಸಿದವರು ಆ ಮಹಾತ್ಮರು. ನನ್ನ ನಿಬಂಧ ಅಚ್ಚಾಗುವ ಹೊತ್ತಿಗೆ ತೀ.ನಂ.ಶ್ರೀ. ಕಣ್ಮುಚ್ಚಿದ್ದರು. ನನ್ನ ನಿಬಂಧವನ್ನು ಓದಿದ್ದ, ಪಿಎಚ್.ಡಿ.ಗೆ. ನನ್ನ ಅನಧಿಕೃತ ಮಾರ್ಗದರ್ಶಕ ಡಿ.ಎಲ್.ಎನ್. ಮನೆಗೆ ನಾನು ಹೋದಾಗ "ಪಿಎಚ್.ಡಿ. ನಿಬಂಧ ಇದ್ದರೆ ಹೀಗಿರಬೇಕು" ಎಂದು ನನ್ನನ್ನು ಅಕ್ಷರಶಃ ತಬ್ಬಿಕೊಂಡದ್ದು, ಇನ್ನೊಬ್ಬ ಪೂಜ್ಯ ಗುರುಗಳಾದ ಕುವೆಂಪು ತ.ರಾ. ಸುಬ್ಬರಾವ್ ಮುಂದೆ "ನಿಬಂಧವನ್ನು

ರಸವತ್ತಾದ ಕಾದಂಬರಿಯಂತೆ ಓದುತ್ತಿದ್ದೇನೆ" ಎಂದು ಹೇಳಿದ್ದು ತಂದ ಹರ್ಷ ಅಮಿತ. ಅವು ನನ್ನ ನೆನಪಿನ ಶಿಲೆಯ ಎಂದೂ ಅಳಿಸಲಾರದ ಚಿನ್ನದ ಅಕ್ಷರಗಳು.

## ತಾಲವ್ಯೀಕರಣದ ಉಪಭಾಷೆ

ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯು ವ್ಯವಸ್ಥೆ ಮಾಡಿದ ವಿಚಾರಗೋಷ್ಠಿಯೊಂದರಲ್ಲಿ ನಾನು "ಮೈಸೂರು ಕನ್ನಡ" ಎಂಬ ವಿಷಯವಾಗಿ ಪ್ರಬಂಧ ಮಂಡಿಸಬೇಕಿತ್ತು. ಪುಣೆ, ಕೊಯಮತ್ತೂರು, ಮೈಸೂರು ನಗರಗಳಲ್ಲಿ ನಡೆದ ಭಾಷಾವಿಜ್ಞಾನದ ಬೇಸಗೆ ಶಿಬಿರಗಳಲ್ಲಿ ಭಾಗವಹಿಸಿ ಶಿಕ್ಷಣ ಪಡೆದಿದ್ದ ನನಗೆ ಉಪಭಾಷಾ ಪರಿವೀಕ್ಷಣೆಯ ತತ್ವಗಳು ಸ್ವಲ್ಪ ತಿಳಿದಿದ್ದುದರಿಂದ ನ್ಯಾಯವಾಗಿ ನಾನು ಮೈಸೂರು ಪ್ರಾಂತದಲ್ಲಿ ಸುತ್ತಾಡಿ ಮಾಹಿತಿ ಸಂಗ್ರಹಿಸಬೇಕಿತ್ತು. ಅದಕ್ಕೆ ಸಾಕಷ್ಟು ಕಾಲ, ಹಣ ಬೇಕು; ಆ ಕಾರಣ ನಾನು ಮಾನಸಗಂಗೋತ್ರಿಯ ವಿದ್ಯಾರ್ಥಿನಿಲಯಕ್ಕೆ ಹೋಗಿ ಅಲ್ಲಿದ್ದ ಬೇರೆ ಬೇರೆ ಪ್ರದೇಶಗಳ ಹಳ್ಳಿ ವಿದ್ಯಾರ್ಥಿಗಳ ಜೊತೆ ಕುಳಿತು ಅವರ ಆಡುಭಾಷೆಯ ಮಾದರಿಗಳನ್ನು ಸಂಗ್ರಹಿಸುವಲ್ಲಿ ತೃಪ್ತಿಪಡಬೇಕಾಯಿತು. ಅವರು ಮಾತನಾಡುತ್ತಿದ್ದುದು ಶಿಷ್ಟ ('Standard') ಕನ್ನಡವಾದರೂ ಅವರಿಗೆ ತಮ್ಮ ಹಳ್ಳಿ ಭಾಷೆಯ ರೂಪಗಳು ಗೊತ್ತಿದ್ದುವು. ಹಾಸನ ಜಿಲ್ಲೆ ಅರಕಲಗೂಡು ತಾಲೂಕಿನ ಒಬ್ಬ ವಿದ್ಯಾರ್ಥಿಯ ಬಾಯಲ್ಲಿ ಚೆರೆ (=ಕೆರೆ), ಚಿವಿ (=ಕಿವಿ), ಚೇಳು (=ಕೇಳು), ಜೀತ (=ಗೀತ), ಜಿಳಿ (=ಗಿಳಿ) ಇತ್ಯಾದಿ ಪದಗಳನ್ನು ಕೇಳುತ್ತಿದ್ದಂತೆ ನನ್ನ ಕುತೂಹಲ ಹೆಚ್ಚಾಗಿ ಕ್-, ಗ್-ದಿಂದ ಆರಂಭವಾಗುವ ಪದಗಳ ಅವನ ಹಳ್ಳಿಯ ಜನರ ಉಚ್ಚಾರವನ್ನು ಅವನಿಂದ ವಿಶೇಷವಾಗಿ ಸಂಗ್ರಹಿಸಿದೆ. ನನ್ನ ಆನಂದಕ್ಕೆ ಪಾರವಿಲ್ಲವಾಯಿತು. ತಾಲವ್ಯೀಕರಣವಿಲ್ಲದ ಕನ್ನಡ ಭಾಷೆಯ ಒಂದು ಉಪಭಾಷೆಯಲ್ಲಿ ತಾಲವ್ಯೀಕರಣ ನಡೆದಿರುವುದು ತೀರ ಹೊಸ ವಿಷಯವಾಗಿತ್ತು. ಇ, ಈ, ಎ, ಏ, ಎಂಬ ಪೂರ್ವಸ್ವರಗಳ ಹಿಂದಿನ ಕ್-, ಗ್-ಗಳು ಚ್- ಜ್- ಆಗಿದ್ದುವು, ಆ ಉಪಭಾಷೆಯಲ್ಲಿ (ಚ್, ಜ್ ಗಳು ತಾಲವ್ಯ ವ್ಯಂಜನಗಳು Palatal Consonants. ತಾಲವ್ಯೇತರ ವ್ಯಂಜನಗಳು ತಾಲವ್ಯವಾಗುವುದೇ ತಾಲವ್ಯೀಕರಣ). ಆ ಉಪಭಾಷೆಯ ವೈಶಿಷ್ಟ್ಯವೂ ಸೇರಿದಂತೆ ನಾನು ಮುಂದೆ ಮಂಡಿಸಿದ ಪ್ರಬಂಧವು "ಸುವರ್ಣ ಸಂಚಯ" ಸಂಪುಟದಲ್ಲಿ ಪ್ರಕಟವಾಯಿತು.

ತೀ.ನಂ.ಶ್ರೀ.ಯವರು ಪದೇ ಪದೇ ಹೇಳುತ್ತಿದ್ದರು, ಇಂಗ್ಲಿಷಿನಲ್ಲಿ - "Go to the source". ಮುಂದೊಮ್ಮೆ ಹಾಸನ ಜಿಲ್ಲೆಗೇ ಹೋಗಿ ಹಳ್ಳಿಯ ಜನರ ಬಾಯಲ್ಲಿ ಅವರ ಭಾಷೆಯನ್ನು ಕೇಳಬೇಕೆಂದು ಹೊಳೆನರಸೀಪುರ ತಾಲೂಕಿನ ಹಳ್ಳಿಯೊಂದಕ್ಕೆ ಹೋದೆ. ಅಲ್ಲಿನ ಜನ, ಸ್ವಲ್ಪ ಮೇಲ್ಜಾತಿ ಜನ ಆ ರೀತಿಯ ಉಚ್ಚಾರ ನಮ್ಮಲ್ಲಿಲ್ಲ ಎಂದರು. ಆ ಊರ ಪಕ್ಕದ ತೋಟದ ಮನೆಯೊಂದರಲ್ಲಿ ಮಳೆಯಿಂದ ತಪ್ಪಿಸಿಕೊಳ್ಳಲು ನಿಂತಿರುವಾಗ, ನಾವು ಇರುವುದನ್ನು ಮರೆತು ಒಬ್ಬ "ನೋಡ್ಲಾ, ಆ ದಿನ ಒಂದು ಮಳೆಗೇ ಚೆರೆ ತುಂಬ್ಯೋತು" ಎಂದ. ಆ ಪದ ಹಿಡಿದು ಅವನನ್ನು ಮತ್ತೆ ಪ್ರಶ್ನಿಸಿದಾಗ ಆ ರೀತಿಯ

ಭಾಷೆ ಹಳ್ಳಿಯ ಕೆಳವರ್ಗದವರಲ್ಲಿದೆ ಎಂದುದು ನನ್ನ ಕುತೂಹಲ ಕೆರಳಿಸಿತು. ಆ ಊರ ಆ ವರ್ಗದ ಜನರ ವಿಶ್ವಾಸ ಗಳಿಸಿ ಮಾಹಿತಿ ಸಂಗ್ರಹಿಸಿದಾಗ ಮೇಲೆ ದೊರಕಿದ ವಿಷಯವು, ಎಂದರೆ ಪದಾದಿಯ ಕಕಾರ ಗಕಾರಗಳು ಚಕಾರ ಜಕಾರಗಳಾಗುವುದು ಖಚಿತವಾಯಿತಲ್ಲದೆ ಇನ್ನೂ ತೀರ ಕುತೂಹಲಕರ ಮಾಹಿತಿ ದೊರಕಿತು. ಪದಾದಿಯ ಕಕಾರ ಚಕಾರಗಳು ಗಕಾರ ಜಕಾರಗಳಾಗುವುದರ ಜೊತೆ ಪದಾದಿಯ ಗಕಾರ ಜಕಾರಗಳೂ ಕಕಾರ ಚಕಾರ ಆಗುವ ವಿಶೇಷತೆಯು ಆ ಉಪಭಾಷೆಯಲ್ಲಿತ್ತು. (ಕೆರೆ > ಚೆರೆ, ಗಿಣಿ > ಜಿಣಿ, ಚೆನ್ನಾಗಿ > ಕೆನ್ನಾಗಿ, ಜೇನ್ತುಪ್ಪ > ಗೇನ್ತುಪ್ಪ). ತೆಲುಗು ತಮಿಳುಗಳಲ್ಲಿ ತಾಲವ್ಯೀಕರಣ ಮಾತ್ರ ಕಾಣಿಸಿಕೊಂಡಿದ್ದರೆ ಕನ್ನಡದ ಒಂದು ಉಪಭಾಷೆಯಲ್ಲಿ ತಾಲವ್ಯೀಕರಣ, ಕಂಠ್ಯೀಕರಣಗಳೆರಡೂ (ಕ್, ಗ್ ಗಳು ಕಂಠ್ಯ ವ್ಯಂಜನಗಳು) ನಡೆದಿರುವುದು ದ್ರಾವಿಡಭಾಷೆಗಳಲ್ಲೇ ಕೇಳರಿಯದ ವಿಷಯ. ಮುಂದೆ ನಾನು ಆ ಬಗ್ಗೆ "A Palatalizing and Velarizing Dialect of Kannada" ಎಂಬ ಸಂಪ್ರಬಂಧವನ್ನು ತಿರುವಾಂಕೂರಿನಲ್ಲಿ ನಡೆದ ಅಖಿಲ ಭಾರತ ದ್ರಾವಿಡ ಭಾಷಾವಿಜ್ಞಾನ ಸಮ್ಮೇಳನದಲ್ಲಿ ಮಂಡಿಸಿದಾಗ ಅದು ಎಲ್ಲರ ಗಮನವನ್ನು ಸೆಳೆಯಿತು. ಅಭಿನಂದನೆಗಳೂ ಬಂದುವು. ಆ ಸಂಪ್ರಬಂಧವು International Journal of Dravidian Linguistics ಸಂಪತ್ರಿಕೆಯಲ್ಲಿ ಪ್ರಕಟವಾಯಿತು.

ಇನ್ನೊಮ್ಮೆ ವ್ಯಾಪಕ ಪರಿವೀಕ್ಷಣೆಗಾಗಿ ಸಕಲೇಶಪುರ ತಾಲೂಕಿನ ನಾರ್ವೆ ಗ್ರಾಮಕ್ಕೆ ಹೋಗಿ ಅಲ್ಲಿನ ದಲಿತರ ಆಡುಭಾಷೆಯನ್ನು ಪರಿಶೀಲಿಸಿದಾಗ ಅವರ ಕನ್ನಡದಲ್ಲಿ ಇನ್ನೂ ಹೆಚ್ಚಿನ ವೈಶಿಷ್ಟ್ಯಗಳು ಕಾಣಿಸಿದುವು. 1979ರಲ್ಲಿ ನಾನು ಅಮೆರಿಕದ ಸ್ಟಾನ್‌ಫರ್ಡ್ ವಿಶ್ವವಿದ್ಯಾಲಯದಲ್ಲಿ ನಡೆದ ನಾಲ್ಕನೆಯ ಅಂತಾರಾಷ್ಟ್ರೀಯ ಐತಿಹಾಸಿಕ ಭಾಷಾವಿಜ್ಞಾನ ಸಮ್ಮೇಳನದ ಒಂದು ಗೋಷ್ಠಿಯ ಅಧ್ಯಕ್ಷನಾಗಿ ಹೋದಾಗ ಮೇಲ್ಕಂಡ ಉಪಭಾಷೆಯಲ್ಲಿನ ಸ್ವನ ವ್ಯತ್ಯಾಸದ ಪಾರಸ್ಪರಿಕತೆ ಪ್ರಕ್ರಿಯೆ (Reciprocality of Sound Change) ವಿಷಯ ಅಲ್ಲಿನ ಭಾಷಾವಿಜ್ಞಾನಿಗಳಿಗೆ ತಿಳಿದು ವಿಸ್ಮಯವನ್ನುಂಟುಮಾಡಿತು. ಒಂದು ಭಾಷೆಯಲ್ಲಿ ಕ್- ಎಂಬಂತಹ ಸ್ವನವು ಗ್- ಎಂಬಂತಹ ಸ್ವನವಾಗಿ ಮಾರ್ಪಾಟಾಗುವುದು ಭಾಷಾ ವಿಜ್ಞಾನಗಳಿಗೆ ಗೊತ್ತೇ ಹೊರತು ಅದೇ ಭಾಷೆಯಲ್ಲಿ ಅದೇ ಕಾಲಕ್ಕೆ ಗ್- ಎಂಬಂತಹ ಸ್ವನವು ಕ್ - ಎಂಬಂತಹ ಸ್ವನವಾಗಿ ಮಾರ್ಪಾಟಾಗುವುದು ತಿಳಿದಿರಲಿಲ್ಲ. "ಇದೊಂದು ತೀರ ಹೊಸ ವಿಷಯ, ನೀವು ಈ ಬಗ್ಗೆ ಆ ಪ್ರದೇಶದಲ್ಲಿ ವ್ಯಾಪಕ ಕ್ಷೇತ್ರ ಕಾರ್ಯ ಮಾಡಿ ಬರೆಯಿರಿ" ಎಂದು ಸ್ಟಾನ್‌ಫರ್ಡಿನ ಭಾಷಾವಿಜ್ಞಾನಿಗಳು ಕೊಟ್ಟಂತಹ ಸಲಹೆಯನ್ನು ನಾನು ಮುಂದಿನ ಜನ್ಮದಲ್ಲಿ ಈಡೇರಿಸಲು ಸಾಧ್ಯವಾಗಬಹುದೋ ಏನೋ! ಅಥವಾ ಈ ಇಪ್ಪತ್ತೈದು ವರ್ಷಗಳಲ್ಲಿ ಆ ಪ್ರದೇಶದ ಕೆಳವರ್ಗದ ಜನ ತಮ್ಮ ಭಾಷಿಕ ವೈಶಿಷ್ಟ್ಯವನ್ನು ಕಳೆದುಕೊಂಡಿರಬಹುದು. ಹಾಸನ ಜಿಲ್ಲೆಯ ಹುಡುಗರು ಮಂಡ್ಯದಲ್ಲಿ 'ಕಿಟಕಿ' ಪದವನ್ನು 'ಚಿಟಕಿ' ಎಂದಾಗ ("ಚಿಟಕಿ ಮುಚ್ಲಾ") ಮಂಡ್ಯದ ಹುಡುಗರು ಅವರನ್ನು ಲೇವಡಿ ಮಾಡಿದ್ದುಂಟು.

ಏನೇ ಆಗಲಿ, ಭಾಷಾವಿಜ್ಞಾನ ಕ್ಷೇತ್ರದಲ್ಲಿ ನಾನು ತೀರ ಹೊಸ ಸಂಗತಿಯೊಂದನ್ನು ಕಂಡುಹಿಡಿದ ತೃಪ್ತಿಯಂತೂ ನನಗಿದೆ. ನಾರ್ವೆಯ ಹೇಮಾವತಿ ನದಿಯಲ್ಲಿ ಬೇಸಗೆ ಸ್ನಾನ, ಬುಟ್ಟಿಗಟ್ಟಲೆ ಕಿತ್ತಳೆ, ತಟ್ಟೆಗೆ ಸುರಿದ ಜೇನುತುಪ್ಪಗಳಂತೆಯೇ ಆ ಹೊಸ ಶೋಧ ನೆನಪಿನಲ್ಲುಳಿದಿದೆ. ಭಾಷಾವಿಜ್ಞಾನದ ಗೃಹೀತ ತತ್ತ್ವವನ್ನೇ ಅದು ಸ್ವಲ್ಪ ಮಾರ್ಪಡಿಸಬಹುದು. 'Phonetic laws have no exceptions" ಎಂಬುದು ಆ ಗೃಹೀತ ತತ್ತ್ವ. ಒಂದು ಭಾಷೆಯಲ್ಲಿ ನಡೆಯುವ ಸ್ವನವ್ಯತ್ಯಾಸಗಳು ಒಂದು ನಿರ್ದಿಷ್ಟ ನಿಯಮವನ್ನನುಸರಿಸಿ ನಡೆಯುತ್ತವೆ. ಆ ನಿಯಮಕ್ಕೆ ಅಪವಾದಗಳಿದ್ದರೂ ಆ ಅಪವಾದಗಳೂ ಇನ್ನಾವುದೋ ಕ್ರಮವನ್ನು ಅನುಸರಿಸಿಯೇ ಇರುತ್ತವೆ - ಇದು ಒಂದು ಒಪ್ಪಿತ ತತ್ತ್ವ. ಅದರ ಜೊತೆಗೆ, ಸ್ವನ ವ್ಯತ್ಯಾಸಗಳು ಅದೇ ಭಾಷೆಯಲ್ಲಿ ಪಾರಸ್ಪರಿಕವಾಗಿ ($x \rightarrow y$ ; $y \rightarrow x$) ನಡೆಯುವ ಸಾಧ್ಯತೆಗಳೂ ಉಂಟೆಂಬುದನ್ನು ಸೇರಿಸಬಹುದು.

## 'ನಾಗವಾಸ' ಮತ್ತು ಅಲ್ಲಮ

ಕ್ಯಾಲಿಫೋರ್ನಿಯ ವಿಶ್ವವಿದ್ಯಾಲಯದಲ್ಲಿ (ಬರ್ಕ್ಲಿ) ನಡೆಯಲಿದ್ದ ಅಮೆರಿಕನ್ ಓರಿಯಂಟಲ್ ಸೊಸೈಟಿ ಕಾನ್‌ಫೆರೆನ್ಸಿನಲ್ಲಿ ನಾನು "ಮಧ್ಯಕಾಲೀನ ಕರ್ನಾಟಕದ ತಾಂತ್ರಿಕ ಪಂಥಗಳು" ಪ್ರಬಂಧ ಮಂಡಿಸಲು ಸಿದ್ಧತೆ ನಡೆಸಿದ್ದೆ. ಅದಕ್ಕಾಗಿ 1967ರ ಒಂದು ಮಧ್ಯಾಹ್ನ ಚಿಕಾಗೋ ವಿಶ್ವವಿದ್ಯಾಲಯದ ಗ್ರಂಥಾಲಯದಲ್ಲಿ ಎಫಿಗ್ರಾಫಿಯ ಕರ್ನಾಟಿಕದ ಮೈಸೂರು ಜಿಲ್ಲೆ ಸಂಪುಟದ ಶಾಸನಗಳನ್ನು ತಿರುವಿ ಹಾಕುತ್ತಿದ್ದೆ. ಸೋಮನಾಥಪುರದ ಶಾಸನವೊಂದರಲ್ಲಿ "ನಾಗವಾಸ" ಪದವು ಕಣ್ಣಿಗೆ ಬೀಳುತ್ತಲೇ ಮನಸ್ಸಿನ ನೀರ ಹರಹಿನ ಮೇಲೆ ಏನೋ ಸರ್ರೆಂದು ತೇಲುತ್ತ ಓಡಿದಂತಾಯಿತು. ಅಲ್ಲಮನ ತಂದೆಯು ಬಳ್ಳಿಗಾವೆಯ ಒಂದು ನಾಗವಾಸಕ್ಕೆ ಒಡೆಯನಾಗಿದ್ದನೆಂಬ ಹರಿಹರನ ಹೇಳಿಕೆ ನೆನಪಿಗೆ ಬಂದು ಆ ಶಾಸನದಲ್ಲಿ ಆ ಪದ ಬಂದಿರುವ ಸಂದರ್ಭವನ್ನು ಗಮನಿಸಿದೆ. ಅದು ದೇವದಾಸಿಯರ ಕೇರಿಯನ್ನು, ವಾಸಸ್ಥಾನವನ್ನು ಸೂಚಿಸುವಂತಿತ್ತು. ಬಳ್ಳಿಗಾವೆಯ ಅಲ್ಲಮ ಅಲ್ಲಿದ್ದ ಗೊಗ್ಗೇಶ್ವರ ದೇವಾಲಯದಲ್ಲಿ ಮೃದಂಗವನ್ನು ನುಡಿಸುತ್ತಿರುವಾಗ ಅಲ್ಲಿಗೆ ಬಂದ ಕಾಮಲತೆಯೆಂಬ ಹೆಣ್ಣಿಗೆ ಮನಸೋತು ಪ್ರೀತಿಸಿ ಅವಳೊಡನೆ ಸಂಸಾರ ಮಾಡಿದನೆಂದು ಕತೆ. ಅವನೊಬ್ಬ ಕಲಾವಿದರ ಕುಟುಂಬಕ್ಕೆ ಸೇರಿದವನಾಗಿರಬಹುದು, ಅವನು ಸಂಗೀತ ಕಲೆಯ ಹಿನ್ನೆಲೆಯವನಿರಬಹುದೇ ಎಂಬ ಊಹೆಯೂ ಸುಳಿದು ಹೋಯಿತು.

ಭಾರತಕ್ಕೆ ಬಂದ ಬಳಿಕ ಮೇಲ್ಕಂಡ ಶಾಸನದ ಜೊತೆ 'ನಾಗವಾಸ' ಪದವು ಕಾಣಿಸಿಕೊಳ್ಳುವ ಇನ್ನೂ ಕೆಲವು ಆಕರಗಳನ್ನು ಪರಿಶೀಲಿಸಿದ ಮೇಲೆ ನಾನು ಅಂದುಕೊಂಡಿದ್ದ ಆ ಪದದ ಅರ್ಥವು ಖಚಿತವಾದುದಲ್ಲದೆ, ಚಾಮರಸನ ಪ್ರಭುಲಿಂಗಲೀಲೆಯಲ್ಲಿ ಬರುವ 'ಗಾನವಾಸ' ಪದದ ಮೂಲ ಪಾಠವು ಮೂಲತಃ 'ನಾಗವಾಸ'ವಾಗಿರಬೇಕೆಂದು ಊಹಿಸಲು ಸಾಧ್ಯವಾಯಿತಲ್ಲದೆ, ಅಲ್ಲಮನು ದೇವದಾಸಿ ವರ್ಗದ ಅಧಿಕಾರಿಯಾಗಿದ್ದವನ ಮಗ, ಬಹುಶಃ

ಅವನು ನಟುವ ಜಾತಿಯಲ್ಲಿ ಹುಟ್ಟಿ ದೇವಾಲಯದಲ್ಲಿ ವಾದ್ಯ ನುಡಿಸುವುದನ್ನು ತನ್ನ ಕುಲಕಸುಬಾಗಿ ಮಾಡಿಕೊಂಡಿದ್ದ ಕೆಳವರ್ಗದ ವ್ಯಕ್ತಿಯೆಂಬ ಸಕಾರಣ ಊಹೆಗೆ ನನ್ನನ್ನು ಒಯ್ದಿತು. ಕಾಮಲತೆಯ ತಂದೆ ಧನದತ್ತ ಬಹುಶಃ ವರ್ತಕ, ನಿಶ್ಚಿತವಾಗಿಯೂ ಮೇಲ್ಜಾತಿಯವನು. ಕೆಳವರ್ಗದ ಶೂದ್ರ ಜಾತಿಯ ಅಲ್ಲಮನಿಗೂ ವೈಶ್ಯಜಾತಿಯ ಕಾಮಲತೆಗೂ ವಿವಾಹವಾಗಿದ್ದರೆ ಅದು ಪ್ರತಿಲೋಮವೆನ್ನಿಸಿಕೊಂಡು ನಿಷಿದ್ಧವಾಗುತ್ತಿತ್ತು. ಆ ಕಾರಣ ಅವರು ವಿವಾಹವಿಲ್ಲದೆ ಸಂಸಾರ ಹೂಡಿ ಗಂಡ ಹೆಂಡಿರಂತೆ ಬದುಕಿರಬಹುದು ಎಂಬ ಮುಂದಿನ ಊಹೆಗೆ ನನ್ನನ್ನು ಕೊಂಡೊಯ್ದಿತು. ಹರಿಹರ ಕವಿ ಅವರಿಬ್ಬರು ಮದುವೆ ಮಾಡಿಕೊಂಡರು ಎಂದು ತನ್ನ ಕಾವ್ಯದಲ್ಲಿ ಸೂಚಿಸುವುದಿಲ್ಲ. ಅವರಿಬ್ಬರೂ ಒಂದು ರೀತಿಯಲ್ಲಿ ಶಿಷ್ಟ ಸಮಾಜದಿಂದ ಬಹಿಷ್ಕೃತವೆನ್ನಬಹುದಾದ ಜೀವನವನ್ನು ನಡೆಸಿದರು ಎಂಬ ಮುಂದಿನ ಯೋಚನೆ ನನ್ನದಾಯಿತು. ಆದ್ದರಿಂದಲೇ ತಾರುಣ್ಯದಲ್ಲಿ ಕಾಮಲತೆಯನ್ನು ಕಳೆದುಕೊಂಡ ಅಲ್ಲಮನಿಗೆ ಇಡೀ ಲೋಕವೇ ಕತ್ತಲಾಯಿತು. ಅಲ್ಲಮನಿಗೆ ಕಾಮಲತೆ, ಕಾಮಲತೆಗೆ ಅಲ್ಲಮನೇ ಪ್ರಪಂಚವೆನ್ನುವಂತೆ ಬದುಕಿದ್ದವರು ಅವರು. ಭೂಗತವಾಗಿದ್ದ ದೇವಾಲಯವೊಂದರ ಕಂಕಾಲದ ಕೈಯ ಲಿಂಗವು ದೊರಕಿ, ಅವನಲ್ಲಿ ಆಗಲೇ ಮೂಡಿದ್ದ ತೀವ್ರ ವೈರಾಗ್ಯ ಭಾವನೆಯು ತೀವ್ರಗೊಳ್ಳಲು ಅವಳ ಸಾವು ನಿಮಿತ್ತವಾಯಿತು. ಲೋಕದಲ್ಲಿ ಹುಚ್ಚನಂತೆ ಸಂಚರಿಸಿದ ಅವನು ಕ್ರಮೇಣ ಕಾಮಲತೆಯ ಮೇಲಿನ ಮೋಹವನ್ನು ದೈವದ ಮೇಲಿನ ಭಕ್ತಿಯನ್ನಾಗಿ ಪರಿವರ್ತಿಸಿ ಸಾಧಕನಾದ, ಅದ್ವೈತ ಸಿದ್ಧಿಗೂ ಏರಿದ. ಹೆಣ್ಣಿನ ಮೋಹವನ್ನು ಭಕ್ತಿಯನ್ನಾಗಿ ಪರಿವರ್ತಿಸಲು ಅವನು ಯಾತನೆ ಹಸಿವು ನೀರಡಿಕೆ ನಿದ್ದೆ ಎಲ್ಲವನ್ನೂ ಸಹಿಸಿದ. ಧ್ಯಾನದಲ್ಲಿ ಕುಳಿತಾಗ ಮತ್ತೆ ಮತ್ತೆ ಕಾಮಲತೆ ನೆನಪಿಗೆ ಬಂದು ಅವಳ ಜಾಗದಲ್ಲಿ ತನ್ನ ಆರಾಧ್ಯ ದೈವವನ್ನು ಸ್ಥಾಪಿಸಲು ಯತ್ನಿಸಿದ ಸಾಧಕನೊಬ್ಬನ ಒಳ ತೀವ್ರ ತುಮುಲಾಟ, ಮಾನಸಿಕ ಘರ್ಷಣೆಗಳನ್ನು ಅವನ ವಚನಗಳಲ್ಲಿ ನನಗೆ ಗುರುತಿಸುವುದು ಸುಲಭವಾಯಿತು. ಅಲ್ಲಮನ ಆರಂಭದ ಜೀವನ ವೃತ್ತಾಂತ, ಅವನ ಸಾಧಕ ಜೀವನ ಎರಡನ್ನೂ ಕುರಿತಂತೆ ಎರಡು ಸಂಪ್ರಬಂಧಗಳನ್ನು ಒಂದಾದರ ಮೇಲೆ ಒಂದರಂತೆ ಬರೆದೆ. ಅಲ್ಲಮನ ಬದುಕಿನ ಮೇಲೆ ನಿಜವಾಗಿಯೂ ಹೊಸ ಬೆಳಕನ್ನು ಬೀರಿದೆನೆಂಬ ತೃಪ್ತಿ ಉಂಟಾಯಿತು.

ಅಲ್ಲಮನು ತನ್ನ ಯೌವನದಲ್ಲಿ ಒಬ್ಬ ಹೆಣ್ಣಿನೊಡನೆ ಸಂಸಾರ ಮಾಡಿದನೆಂಬ ನನ್ನ ಪ್ರತಿಪಾದನೆ (ಇದಕ್ಕೆ ಮೊದಲ ಶೂನ್ಯಸಂಪಾದನೆಯ ಬೆಂಬಲವೂ ಇದೆ) ಸಾಂಪ್ರದಾಯಕ ವೀರಶೈವ ವಲಯಗಳಲ್ಲಿ ತೀವ್ರ ಅಸಮಾಧಾನವನ್ನುಂಟುಮಾಡಿ ಅದು ಕೃತಿ ರೂಪದಲ್ಲಿ ಲೇಖನಗಳ ರೂಪದಲ್ಲಿ ವ್ಯಕ್ತವೂ ಆಯಿತು. ಆದರೆ ಈಗ ನನ್ನ ಪ್ರಮೇಯವು ಬಹುತೇಕ ಚಿಂತಕರ ಒಪ್ಪಿಗೆಯನ್ನು ಪಡೆದಿದೆ. 1962ರಲ್ಲಿ ಪ್ರಕಟವಾಗಿದ್ದ ನನ್ನ "ಶೂನ್ಯ ಸಂಪಾದನೆಯನ್ನು ಕುರಿತು" ಪುಸ್ತಕವು ಅಂದು ವಿಶೇಷವಾಗಿ ಮೈಸೂರು ಧಾರವಾಡಗಳಲ್ಲಿ ಚಿಕ್ಕ ಕೋಲಾಹಲವನ್ನೇ ಏಳಿಸಿತ್ತು. ಅಲ್ಲಮ, ಅಕ್ಕಮಹಾದೇವಿಯರು ತಮ್ಮ ಯೌವನದಲ್ಲಿ ಸಾಂಸಾರಿಕ ಜೀವನವನ್ನು ನಡೆಯಿಸಿದರು ಎಂಬ ನನ್ನ ನಿರೂಪಣೆಯಿಂದ ಅಕ್ಷರಶಃ ಕ್ಷುದ್ಧರಾದ ನನ್ನ ಗೆಳೆಯರೊಬ್ಬರು ನನ್ನ ಕೃತಿಯ ಒಂದೂವರೆಯಷ್ಟು ಗಾತ್ರದ ಪುಸ್ತಕವನ್ನೇ ಬರೆದು ನನ್ನನ್ನಿರಲಿ, ನನ್ನ ಇಬ್ಬರು

ಗುರುಗಳನ್ನೂ ಗಂಭೀರವಲ್ಲದ ರೀತಿಯಲ್ಲಿ ಟೀಕಿಸಿದರು. ನನ್ನ ಒಬ್ಬ ಅಧ್ಯಾಪಕ ಎಂ.ಎ. ವಿದ್ಯಾರ್ಥಿ ನಾನಿಲ್ಲದಾಗ ಮನೆಗೆ ಬಂದು ಕೂಗಾಡಿ ಹೋದರು. ಆ ಎಲ್ಲ ಟೀಕೆಗಳು ನನ್ನನ್ನು ವಿಚಲಿತನನ್ನಾಗಿ ಮಾಡಲಿಲ್ಲ. ತರುಣನಾಗಿದ್ದ ನನ್ನನ್ನು ಬೆಳಸಿದವು, ಸತ್ಯದ ಪರವಾಗಿ ನಿಲ್ಲುವ ಧೈರ್ಯವನ್ನೂ ಉತ್ಸಾಹವನ್ನೂ ಛಲವನ್ನೂ ತಂದುಕೊಟ್ಟುವು.

1972-3ರ ಸುಮಾರಿನಲ್ಲಿ ನನ್ನ ವಿದ್ಯಾರ್ಥಿಗಳನ್ನು ಶಿಕಾರಿಪುರ ತಾಲೂಕಿನ ಅಲ್ಲಮನ ಊರು ಬಳ್ಳಿಗಾವೆಗೆ ಪ್ರವಾಸಕ್ಕೆ ಕರೆದೊಯ್ದೆ. ಅಲ್ಲಿ 'ಗೊಗ್ಗಯ್ಯನ ಹೊಲ'ವನ್ನು ಅಲ್ಲಿನ ಜನ ತೋರಿಸಿದಾಗ ಅಲ್ಲಿ ಬಿದ್ದಿದ್ದ ದೇವಾಲಯದ ಅವಶೇಷಗಳು ಅಲ್ಲಮನು ಮೃದಂಗ ನುಡಿಸಿದ, ಕಾಮಲತೆಯನ್ನು ಕಂಡ ಗೊಗ್ಗೇಶ್ವರ ದೇವಾಲಯ ಅದೇ ಎಂಬ ಊಹೆಯತ್ತ ನನ್ನ ಮನಸ್ಸು ಹೋಯಿತು. ಅಲ್ಲೇ ಸಮೀಪದ ಮಾಳಗೊಂಡನ ಕೊಪ್ಪ ಅಥವಾ ಅನಿಮಿಷಾರಣ್ಯ ಕ್ಷೇತ್ರಕ್ಕೆ ಹೋದೆವು. ಅಲ್ಲಮನಿಗೆ ಭೂಗತ ದೇವಾಲಯದಲ್ಲಿ ಕಾಣಿಸಿದ ಕಂಕಾಲವು (ಎಲುಬಿನ ಪಂಜರ) ಅನಿಮಿಷನೆಂಬ ಮುನಿಯದು ಎನ್ನುವ ನಿರೂಪಣೆ ಇದೆ. ಆ ಅನಿಮಿಷನಿಗೂ ಆ ಊರಿಗೂ ಏನೋ ಸಂಬಂಧವಿರಬಹುದೆಂಬುದು ನನ್ನ ಊಹೆ. ಆ ಊರ ಸುತ್ತಮುತ್ತ ದೊಡ್ಡ ಬಿಲ್ವ ವನ. ಅದರ ಸಮೀಪ ಇದ್ದ ಸಾದಾ ಕರಿ ಹೆಂಚಿನ ಒಂದು ಶಿವದೇವಾಲಯದ ಸುಂದರ ಬಾಗಿಲುವಾಡವು ಹತ್ತು ಹನ್ನೊಂದನೇ ಶತಮಾನದ ಕಲ್ಲಿನಲ್ಲಿ ಕೆತ್ತಿದ ಶಿಲ್ಪ ವಿನ್ಯಾಸಗಳನ್ನೊಳಗೊಂಡಿದ್ದು ನನಗೆ ತೀವ್ರ ಕುತೂಹಲ ಮೂಡಿಸಿತು. ಇಲ್ಲಿ ಏನೋ ವಿಶೇಷ ಇದೆ ಎಂದು ಒಳಗೆ ಹೋದಾಗ, ಅಲ್ಲಿ ಪೂಜೆಗೊಳ್ಳುತ್ತಿದ್ದ ಶಿವಲಿಂಗದ ವಿಶೇಷವನ್ನು ಅರ್ಚಕರು ಬಣ್ಣಿಸಿದರು. ಆ ಶಿವಲಿಂಗದ ಮೇಲೆ ನೂರಾರು ಕೊಡ ನೀರು ಸುರಿದರೂ ಅದು ಆ ಶಿವಲಿಂಗದ ಕೆಳಗಿದ್ದ ಕಲ್ಲು ಹಾಸಿನ ಒಂದು ಮೂಲೆಯ ರಂಧ್ರದ ಮೂಲಕ ಭೂಮಿಯ ಒಳಕ್ಕೆ ಹೋಗುತ್ತದೆಯೇ ಹೊರತು ಹೊರಕ್ಕೆ ಬರುವುದಿಲ್ಲ, ದೇವಾಲಯದ ಪಕ್ಕದಲ್ಲೇ ಇರುವ ದೊಡ್ಡ ಅಗುಳಿಗೂ ಹೋಗುವುದಿಲ್ಲವೆಂದರು. ಕತ್ತಲಲ್ಲಿ ಫಳಕ್ಕನೆ ಮಿಂಚು ಸುಳಿದಂತಾಯಿತು. ಅಲ್ಲಮನಿಗೆ ಅನಿಮಿಷನ ದರ್ಶನವಾದ ಭೂಗತ ದೇವಾಲಯದ ಮೇಲ ನಾನು ನಿಂತಿರಬಹುದೇ ಎಂಬ ಆಲೋಚನೆ ಬಂದಿತು. ಮೇಲೆ ಕಾಣಿಸುತ್ತಿದ್ದ ಶಿವಲಿಂಗ, ದೇವಾಲಯಗಳು ಬಹುಶಃ ಆಮೇಲಿನವು. ಅಲ್ಲಮನಿಗೆ ಭೂಗತ ದೇವಾಲಯದ ಕಳಶವು ಕಾಣಿಸಿ ಎಲ್ಲರೂ ಸೇರಿ ಅಗೆದರು ; ಒಳಗೆ ದೇವಾಲಯದ ಬಾಗಿಲು ಮುಚ್ಚಿತ್ತು. ಎಲ್ಲರಿಗೂ ಒಳಗೆ ಹೋಗಲು ಭಯ. ಕಾಮಲತೆ ಹೋದಮೇಲೆ ನಾನು ಬದುಕಿದ್ದರೆಷ್ಟು ಸತ್ತರೆಷ್ಟು ಎಂದು ಧೈರ್ಯ ಮಾಡಿ ಅಲ್ಲಮ ಒಳಗೆ ನುಗ್ಗಿದಾಗ ಕಂಕಾಳ ಕಾಣಿಸಿ ಅದರ ಕೈಯ ಶಿವಲಿಂಗವನ್ನು ತೆಗೆದುಕೊಂಡು ಹೊರಬಂದ. ಒಳಗೆ ಹೋದ ಜೋಲುಮುಖದ ಅಲ್ಲಮ ಉಜ್ವಲ ಮುಖಿಯಾಗಿ ಹೊರಬಂದುದನ್ನು ಕಂಡ ಜನ ಆಶ್ಚರ್ಯಪಟ್ಟರು. ಇದು ಹರಿಹರನ ನಿರೂಪಣೆ. ನೆಲದಲ್ಲಿ ಹೂತುಹೋಗಿದ್ದ ಆ ದೇವಾಲಯವು ಈಗಲೂ ಕೆಳಗೆ ಇದ್ದು, ಅಲ್ಲಿನ ಸಮಾಧಿ ಶಿವಲಿಂಗದ ಮೇಲೆ ಈಗ ಭೂಮಿಯ ಮೇಲೆ ಇರುವ ಶಿವಲಿಂಗಕ್ಕೆ ಎರೆಯುವ ನೀರು ಬೀಳುವಂತೆ ವ್ಯವಸ್ಥೆ ಮಾಡಿರಬೇಕು ಎಂಬುದು ನನ್ನ ತರ್ಕವಾಯಿತು. ಆ ಕಾರಣವೇ ನೀರು ಹೊರಬರುತ್ತಿಲ್ಲ. ಈಗಿನ ಶಿವಲಿಂಗವನ್ನು

ಭೂಗತ ಶಿವಾಲಯದ ಲಿಂಗಕ್ಕೆ ಸಂವಾದಿಯಾಗಿ ಮೇಲೆ ಸ್ಥಾಪಿಸುವ ಮುನ್ನ ಆ ಹಳೆಯ ದೇವಾಲಯವನ್ನು ಪೂರ್ತಿ ಮತ್ತೆ ಮಣ್ಣಿಂದ ಮುಚ್ಚಿರಬೇಕು. ಈಗಿನ ದೇವಾಲಯದ ಬಾಗಿಲುವಾಡವು ಭೂಗತ ದೇವಾಲಯದ ಅಲ್ಲಮ ಕಂಡ ಗೇವಾಲಯದ ಬಾಗಿಲುವಾಡವಾಗಿರಬೇಕು ಎಂದು ಸಕಾರಣವಾಗಿ ಊಹಿಸಿದೆ. ನನ್ನ ಊಹೆ ಕೇವಲ ಕಲ್ಪನಾಧಾರಿತವಾದುದಾಗಿರಲಿಲ್ಲ. ಆ ಶೋಧ ನನಗೆ ಸಹಜವಾಗಿಯೇ ಅಮಿತ ಆನಂದವನ್ನು ತಂದಿತು. ಮುಂದೆ ನನ್ನ ಶೋಧವನ್ನು ಸಂಪ್ರಬಂಧರೂಪವಾಗಿ ಪ್ರಕಟಿಸಿದೆ.

### ಕೌಶಿಕ – ಸಂಶೋಧನೆ – 'ಕಾಮನ್‌ಸೆನ್ಸು"

ಎಷ್ಟೋ ಶೋಧಗಳು ಓದುಗರಿಗೆ ಆಶ್ಚರ್ಯವುಂಟುಮಾಡಿದರೂ ಕೆಲವೊಮ್ಮೆ ಸಂಶೋಧಕನಿಗೆ ಅವು ಕಾಮನ್‌ಸೆನ್ಸಿನ ಫಲಗಳೆಂಬ ಅರಿವು ಇರುತ್ತದೆ. ಅದಕ್ಕೆ ಒಳ್ಳೆಯ ಉದಾಹರಣೆ ಅಕ್ಕಮಹಾದೇವಿಯ ಗಂಡ ಕೌಶಿಕನನ್ನು ಇತಿಹಾಸದಲ್ಲಿ ಗುರುತಿಸಿದ್ದು. ಅಕ್ಕಮಹಾದೇವಿಯು ಕೌಶಿಕನೆಂಬ ರಾಜನ ಬಲಾತ್ಕಾರಕ್ಕೊಳಗಾಗಿ ಮದುವೆ ಮಾಡಿಕೊಂಡು ಕೆಲಕಾಲದ ಬಳಿಕ ಅವನ ಅರಮನೆಯ ಭೋಗ ಜೀವನವನ್ನು ತಿರಸ್ಕರಿಸಿ ತನ್ನ ಆರಾಧ್ಯದೈವದ ಆವಾಸ ನಾದ ಶ್ರೀಶೈಲದತ್ತ ತೆರಳಿದಳೆಂಬುದು ಎಲ್ಲರಿಗೂ ತಿಳಿದ ವಿಷಯ. ಕೌಶಿಕ ಎಂಬ ರಾಜನ ಹೆಸರು ಇತಿಹಾಸದಲ್ಲೆಲ್ಲೂ ದಾಖಲಾಗಿಲ್ಲ ಮತ್ತು ಕೌಶಿಕನನ್ನು ಇತಿಹಾಸದಲ್ಲಿ ಗುರುತಿಸಲು ಸಾಧ್ಯವೇ ಎಂಬಂತಹ ಪ್ರಯತ್ನವೂ ನಡೆದಿರಲಿಲ್ಲ. ಒಂದು ದಿನ ಏನೋ ಯೋಚಿಸುತ್ತಿರುವಾಗ, ಅಥವಾ ಯಾವ ಯೋಚನೆಯೂ ಇರಲಿಲ್ಲವೋ ಏನೋ ಅದೂ ಮರೆತುಹೋಗಿದೆ - ಅಕ್ಕಮಹಾದೇವಿ ಇದ್ದುದು ಕ್ರಿ.ಶ. 1160ರಲ್ಲಿ ಎಂಬುದು ನಿಜವಾಗಿದ್ದರೆ, ಅವಳ ಹುಟ್ಟೂರಾದ ಉಡುತಡಿ ಎಂಬುದು ಇಂದಿನ ಶಿಕಾರಿಪುರ ತಾಲೂಕಿನ ಉಡುಗಣಿ ತಡುಗಣಿಯೇ ಆಗಿದ್ದರೆ, ಅವಳನ್ನು ಕೌಶಿಕ ಬಲಾತ್ಕರಿಸಿದನೋ ಇಲ್ಲವೋ ಅಂತೂ ಅವನ ಜೊತೆ ಅಕ್ಕಮಹಾದೇವಿ ಕೆಲವು ಕಾಲ ಸಂಸಾರ ಮಾಡಿದಳು ಎಂಬುದು ನಿಜವಾಗಿದ್ದರೆ, ಆಗ 1160ರಲ್ಲಿ ಉಡುಗಣಿ - ತಡುಗಣಿ ಪ್ರದೇಶವನ್ನು ಆಳಿದ ರಾಜನೇ ಕೌಶಿಕ ಆಗಿರಬೇಕಲ್ಲವೇ ಎಂದು ಅನ್ನಿಸಿತು. 1160ರಲ್ಲಿ ಉಡುಗಣಿಗೆ ಕೇವಲ ಮೂರು ನಾಲ್ಕು ಕಿಲೋಮೀಟರ್ ದೂರದ ಬಳ್ಳಿಗಾವೆಯನ್ನು ರಾಜಧಾನಿ ಮಾಡಿಕೊಂಡು ಆಳುತ್ತಿದ್ದವನು ಕಸಪಯ್ಯನೆಂಬ ವ್ಯಕ್ತಿ, ಚಕ್ರವರ್ತಿ ಬಿಜ್ಜಳನ ಪ್ರತಿನಿಧಿಯಾಗಿ. ಅಷ್ಟರಮಟ್ಟಿಗೆ ಅವನು ರಾಜನೂ ಹೌದು. ಈ ವಿಷಯವು ಶಾಸನ ವಿದ್ಯಾರ್ಥಿಗಳಿಗೆ ಚೆನ್ನಾಗಿ ಗೊತ್ತು. ಹಾಗಿದ್ದರೆ ಕಸಪಯ್ಯನೇ ಕೌಶಿಕ ಆಗಿರಬಹುದೇ ?

ಕಸಪಯ್ಯನ ಜೊತೆ ಇನ್ನಿಬ್ಬರು ದಂಡನಾಯಕರಿದ್ದರೂ ಅವರಲ್ಲೆಲ್ಲ ಕಸಪಯ್ಯನೇ ಅತ್ಯಂತ ಪ್ರಬಲನಾಗಿದ್ದು ಅವನೇ ಬಳ್ಳಿಗಾವೆಯಿಂದ ಆಳುತ್ತಿದ್ದವನು. ಉಳಿದ ದಂಡನಾಯಕರಿಗೆ ಮದುವೆ ಆಗಿದ್ದುದು ಶಾಸನೋಕ್ತವಾಗಿದ್ದು, ಅವನಿಗೆ ಮದುವೆಯಾಗಿತ್ತೆಂಬುದಕ್ಕೆ ಎಲ್ಲೂ ಸೂಚನೆಗಳಿಲ್ಲ. ಶಾಸನವೊಂದರಲ್ಲಿ ಅವನನ್ನು "ದುಷ್ಟ"ನೆಂದೂ ಕರೆಯಲಾಗಿದೆ. ಕಸಪಯ್ಯ

ನಾಯಕನನ್ನು ಕಸವ ನಾಯಕನೆಂದೂ ಕರೆದಿರುವುದುಂಟು. ಹೀಗಿರುವಾಗ "ಕಸವ ನಾಯಕ" ಎಂಬುದು ಮುಂದೆ ಸಂಸ್ಕೃತಗೊಂಡು ಕೌಶಿಕ ಎಂದಾಗಿರಬಹುದು. ಕೌಶಿಕ ಎಂದರೆ ಕಾಗೆ ಎಂಬರ್ಥವೂ ಇರುವುದರಿಂದ ಆ ಕೆಟ್ಟ ವ್ಯಕ್ತಿಗೆ ಆ ಕಾರಣದಿಂದಲೂ ಆ ಹೆಸರನ್ನು ಹರಿಹರನೇ ಇಟ್ಟಿರಬಹುದು.

ಮಹಾದೇವಿ 1160ರಲ್ಲಿರದೆ, ಅವಳ ಊರು ಈಗಿನ ಉಡುಗಣಿ ಆಗಿರದೆ, ಅವಳಿಗೆ ಮದುವೆಯೇ ಆಗಿರದಿದ್ದರೆ (ಅಥವಾ ಗಂಡಿನ ಬಲಾತ್ಕಾರದಂತಹ ಪ್ರಸಂಗವೇ ಇಲ್ಲದಿದ್ದರೆ) ಮೇಲಿನ ಊಹೆ ಸುಳ್ಳಾಗುತ್ತದೆ. ಆದರೆ ಆ ನನ್ನ ಊಹೆಯು ನಿಜವಾಗಿರುವ ಸಾಧ್ಯತೆಗಳೇ ಇರುವುದರಿಂದ ಕಸಪಯ್ಯನೇ ಕೌಶಿಕನೆಂಬುದು ಖಚಿತವಾಗುತ್ತದೆ. ಆ ಅಭಿಜ್ಞೆಗೆ ನಾನು ಏನೂ ಕಷ್ಟಪಡಲಿಲ್ಲ. - ಅದು ಕೇವಲ ಕಾಮನ್‌ಸೆನ್ಸು, ಆದರೂ ರಿಸರ್ಚು. ಅಕ್ಕನ ಗಂಡನ ಹೆಸರನ್ನು ಇತಿಹಾಸದಲ್ಲಿ ಗುರುತಿಸಿರುವುದು ಚಿಕ್ಕ ವಿಷಯವೇನಲ್ಲ.

## ಅಜಗಣ್ಣ

ಆಧುನಿಕರಿಗೆ ಅಲ್ಲಮಪ್ರಭು ಹನ್ನೆರಡನೆಯ ಶತಮಾನದ ಶರಣರಲ್ಲಿ ಮೇರು ಸದೃಶನಾಗಿ ಕಾಣಿಸುವುದು ಸಹಜವೇ. ಅವನ ಕಾಲದಲ್ಲೇ ಅಲ್ಲಮನನ್ನು 'ಅರಿವಿನ ವಿಶ್ರಾಮ' ಎಂದೇ ವರ್ಣಿಸಲಾಗಿತ್ತು. ಆದರೆ ಚನ್ನಬಸವಣ್ಣನ ಪ್ರಕಾರ ಅವನಿಗಿಂತ ಆಧ್ಯಾತ್ಮಿಕ ಸಿದ್ಧಿಯಲ್ಲಿ ಉನ್ನತ ಸ್ತರವನ್ನು ಮುಟ್ಟಿದವನು ಅಜಗಣ್ಣ. ಅಜಗಣ್ಣನು ವಚನಗಳನ್ನು ಬರೆದಿರುವ ವಿಷಯ ತಿಳಿದಿದ್ದರೂ ಅವನ ವಚನಗಳು ದೊರಕಿಲ್ಲವೆಂದೇ ಎಲ್ಲರೂ ಭಾವಿಸಿದ್ದರು. ಅದು ವಚನಾಭ್ಯಾಸಿಗಳು ಅವನ ಬಗ್ಗೆ ಇಟ್ಟಿದ್ದ ಕುತೂಹಲವನ್ನೂ ಹೆಚ್ಚಿಸಿತ್ತು. ಕಾರಣವೆಂದರೆ ಅವನ ಬದುಕಿನ ವಿವರಗಳೂ ಕೆಲವು ತಿಳಿದಿದ್ದವು. ಹೀಗಿರುವಾಗ ಅಚ್ಚಾದ ವಚನ ಸಂಕಲನವೊಂದರಲ್ಲಿ ಅದರ ಆರಂಭದಲ್ಲಿದ್ದ ಆ ಸಂಕಲನಕಾರಕೃತ ಪದ್ಯಗಳಲ್ಲಿ ಅಜಗಣ್ಣನ ಹೆಸರಿದ್ದುದನ್ನು ಎಸ್. ಶಿವಣ್ಣ ನನ್ನ ಗಮನಕ್ಕೆ ತಂದು ಕುತೂಹಲವನ್ನು ಕೆರಳಿಸಿದರು. ಆ ವಚನ ಸಂಕಲನದಲ್ಲಿ ಅಜ್ಞಾತ ವಚನಕಾರರ ವಚನಗಳನ್ನು ಬೇರ್ಪಡಿಸಿ, ಆ ವಚನಗಳಲ್ಲಿ ಅಜಗಣ್ಣನ ಮನೋಧರ್ಮಕ್ಕನುಗುಣವಾದ ವಚನಗಳನ್ನು ಗುರುತಿಸುವಷ್ಟರಲ್ಲಿ ಬೇರೊಂದು ಸಂಕಲನದಿಂದ ಆ ವಚನಗಳು ಅಜಗಣ್ಣನವೆಂಬುದಕ್ಕೆ ಹೆಚ್ಚಿನ ಸಾಕ್ಷ್ಯಾಧಾರ ದೊರಕಿತು. ಹೀಗೆ ಗುರುತಿಸುವ ಕಾರ್ಯವು ಶ್ರಮದಾಯಕವಾಗಿರದಿದ್ದರೂ ಸಾಕಷ್ಟು ವಿಚಾರ, ಚಿಂತನೆಯನ್ನು ಬಯಸಿತು. ನನಗೆ ಬೇರೆ ಬೇರೆ ಹಂತಗಳಲ್ಲಿ ನೆರವು ನೀಡಿದ ಶ್ರೀ ಎಸ್. ಶಿವಣ್ಣನವರ ಹೆಸರ ಜೊತೆ ನನ್ನ ಹೆಸರನ್ನು ಸೇರಿಸಿ ಆ ಅಭಿಜ್ಞೆಯ (Identification) ಫಲವನ್ನು ಪ್ರಕಟಿಸಿದೆ. ಅಜಗಣ್ಣನ ಒಂಬತ್ತು ವಚನಗಳೆಲ್ಲ ಪ್ರಕಟವಾಗಿದ್ದರೂ ಅವು ಆತನ ರಚನೆಗಳೆಂದು ಗುರುತಿಸಿದ್ದು ನಮ್ಮ ಸಾಧನೆಯಾಯಿತು. ಬಸವ, ಅಲ್ಲಮರಿಗಿಂತ ಶ್ರೇಷ್ಠ ಅನುಭಾವಿಯೆಂದು (ಬಸವ, ಅಲ್ಲಮ, ಅಜಗಣ್ಣ, ಅಕ್ಕಮಹಾದೇವಿ ಈ ಶ್ರೇಣಿಯಲ್ಲಿ ಚನ್ನಬಸವಣ್ಣ ಆ ನಾಲ್ವರು ಶ್ರೇಷ್ಠರನ್ನು ಗುರುತಿಸಿದ್ದಾನೆ) ಭಾವಿಸಲಾಗಿದ್ದ ಒಬ್ಬ ಶ್ರೇಷ್ಠ ಶಿವಾದ್ವೈತಿಯ, ಐಕ್ಯಸ್ಥಲಕ್ಕೆ

ಸಂಕೇತದಂತಿರುವ ಶರಣನೊಬ್ಬನ ವಚನಗಳನ್ನು ಗುರುತಿಸುವ ಭಾಗ್ಯ ನಮ್ಮದಾಯಿತು. ಹೆಚ್ಚು ವಚನಗಳನ್ನು, ಹೆಚ್ಚು ಆಕರ್ಷಕ ವಚನಗಳನ್ನು ಬರೆದವರು ಅಥವಾ ಹೆಚ್ಚು ಮಾತನಾಡುವವರು, ದೊಡ್ಡ ಸ್ಥಾನದಲ್ಲಿರುವವರು ಎಂಬ ಕಾರಣದಿಂದ ಹನ್ನೆರಡನೆಯ ಶತಮಾನದ ಶರಣರು ಶ್ರೇಷ್ಠತೆಯನ್ನು ಗುರುತಿಸುತ್ತಿರಲಿಲ್ಲ. ಅವರ ಜೊತೆ ಈಗಿನ ನಮ್ಮನ್ನು ಹೋಲಿಸಿಕೊಳ್ಳಬೇಕು.

## 'ಮಾದರಸ' ಹೆಸರಿನ ಮುಂದುವರಿಕೆ

ಇದೊಂದು ತೀರ ಆಕಸ್ಮಿಕ, ತೀರ ಅನಿರೀಕ್ಷಿತ ಸಂಗತಿ. 1978ರಲ್ಲಿ ನಾನು ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಸಂದರ್ಶನ ಪ್ರಾಧ್ಯಾಪಕನಾಗಿದ್ದಾಗ ಬೆಂಗಳೂರಿನಿಂದ ಬಂದ ನನ್ನ ಹೆಂಡತಿ ವಿಶಾಲಾಕ್ಷಿ ಮತ್ತು ಮಕ್ಕಳೊಡನೆ ವಾಹನ ಮಾಡಿಕೊಂಡು ಐಹೊಳೆ ಬಾದಾಮಿ ಪಟ್ಟದಕಲ್ಲು ಕೂಡಲಸಂಗಮ ಬಿಜಾಪುರಗಳನ್ನು ತೋರಿಸಿಕೊಂಡು ಬಂದೆ. ಬಸವನ ಬಾಗೆವಾಡಿಯಲ್ಲಿ ಬಸವಣ್ಣನವರ ತಂದೆಯ ಮನೆಯೆಂದು ಹೇಳಲಾದ ಮನೆಗೆ ಹೋದಾಗ ಹಿರಿಯರು ಯಾರೂ ಇರಲಿಲ್ಲ. ಬ್ರಾಹ್ಮಣರ ಆ ಮನೆಯ ಸುಮಾರು ಇಪ್ಪತ್ತೈದು ವರ್ಷದ ಹೆಣ್ಣುಮಗಳು ಸ್ವಲ್ಪ ಗುಮಾನಿಯಿಂದ ಅಥವಾ ಸ್ವಲ್ಪ ಭಯದಿಂದಲೇ ನಮ್ಮನ್ನು ಮಾತನಾಡಿಸಿದಳು. ಕಾರಣವೆಂದರೆ ಆ ಮನೆಯನ್ನು ಸರ್ಕಾರ ವಶಪಡಿಸಿಕೊಳ್ಳುವುದೆಂಬ ಆತಂಕ ಆ ಮನೆಯವರಿಗಿತ್ತು. ನಾನು ಒಬ್ಬ ಉಪಾಧ್ಯಾಯನೆಂದು ಹೇಳಿದ್ದರಿಂದ, ಅದಕ್ಕಿಂತ ಹೆಚ್ಚಾಗಿ ನನ್ನ ಹೆಂಡತಿ ಜೊತೆಯಲ್ಲಿ ಇದ್ದುದರಿಂದ ಆ ತರುಣಿಗೆ ಧೈರ್ಯ ಬಂದು ಆ ಬಳಿಕ ವಿಶ್ವಾಸದಿಂದ ಮಾತನಾಡಿಸಿದಳು. "ನಿಮ್ಮ ತಂದೆಗೆ ಎಷ್ಟು ಜನ ಮಕ್ಕಳು" ಎಂಬ ಪ್ರಶ್ನೆಗೆ ಆಕೆ ಉತ್ತರ ಕೊಡುತ್ತ ಅವಳ ಅಣ್ಣನ ಹೆಸರನ್ನು ನಾನು ಕೇಳದಿದ್ದರೂ ಆಕೆಯೇ ತನ್ನ ಮಾದರಸ ಎಂಬ ಹೆಸರಿನ ಅಣ್ಣ ಬೇರೆ ಊರಲ್ಲಿ ಉದ್ಯೋಗದಲ್ಲಿರುವುದಾಗಿ ಹೇಳಿದಳು. ಆ ಮನೆ ಬಸವಣ್ಣನ ತಂದೆ ವಾಸವಾಗಿದ್ದ ಎಂಟು ನೂರು ವರ್ಷಗಳ ಹಿಂದಿನ ಜಾಗದಲ್ಲೇ ಇದ್ದಿರಬಹುದಾಗಿದ್ದು ಈ ಎಂಟು ನೂರು ವರ್ಷಗಳಲ್ಲಿ ಅದು ಹಲವು ಆಕಾರಗಳನ್ನು ಪಡೆದಿರುವ ಸಾಧ್ಯತೆಗಳೇ ಹೆಚ್ಚು. ಆದರೆ ಬಸವಣ್ಣನ ತಂದೆಯ ಹೆಸರು ಈಗಲೂ ಆತನ ವಂಶದಲ್ಲಿ ಉಳಿದುಬಂದಿರುವುದು ಮಾತ್ರ ನನಗೆ ತೀರ ಆಶ್ಚರ್ಯವನ್ನು ತಂದಿತು. ತನ್ನ ತಾತನ ಹೆಸರೂ ಮಾದರಸ ಎಂದಾಗ, ಅಜ್ಜನಿಂದ ಮೊಮ್ಮಗನಿಗೆ ಈ ಎಂಟು ನೂರು ವರ್ಷಗಳಲ್ಲಿ ಆ ಹೆಸರು ಅಖಂಡವಾಗಿ ಮುಂದುವರಿದುಕೊಂಡು ಬಂದಿರುವ ಸಂಗತಿ ತೀರ ಅಪೂರ್ವವಾಗಿತ್ತು. ಆ ಮನೆ ಇದ್ದ ಜಾಗದಲ್ಲಿಯೇ ಹಿಂದೆ ಬಸವನ ತಂದೆಯ ಮನೆ ಇದ್ದಿರಬಹುದು ಅಥವಾ ಬದಲಾಗಿರಬಹುದು; ಆದರೆ ಆ ಕುಟುಂಬದವರಂತೂ ಬಸವಣ್ಣನ ವಂಶಸ್ಥರೆಂಬುದು ಖಚಿತವಾಗಿತ್ತು.

ಒಂದು ವಿಚಿತ್ರ, ಆದರೆ ಅರ್ಥಮಾಡಿಕೊಳ್ಳಬಹುದಾದ ಅಂಶವೆಂದರೆ ಆ ವಂಶದವರು ಬಸವನ ಹೆಸರನ್ನು ಮುಂದುವರಿಸದೆ ಆತನ ತಂದೆಯ ಹೆಸರನ್ನು ಮುಂದುವರಿಸಿಕೊಂಡು ಬಂದಿರುವುದು. ಬಸವ ಬ್ರಾಹ್ಮಣ್ಯವನ್ನು ಅಂತೆಯೇ ಆ ಮನೆಯನ್ನು ತ್ಯಜಿಸಿ ಹೊರಬಿದ್ದಿದ್ದರಿಂದ ಆತನ ವಂಶಸ್ಥರಿಗೆ ಆತನ ಮೇಲೆ ಅಸಮಾಧಾನವಿದ್ದುದು ಸಹಜವೇ. ಬಸವನ ತಂದೆ ಆತ ಎಂಬ ಕಾರಣಕ್ಕೆ ಮಾತ್ರ ಮುಖ್ಯವಾಗಿ ಮಾದರಸನ ಹೆಸರು ಇತಿಹಾಸದಲ್ಲಿ ಉಳಿದಿದೆ. ಆ ವಂಶದವರಿಗೆ ತಮ್ಮ ಕುಟುಂಬವನ್ನು ತ್ಯಜಿಸಿ ಹೋದ ಬಸವನ ಬಗ್ಗೆ ಇರುವ ಅಸಮಾಧಾನವನ್ನು, ಬ್ರಾಹ್ಮಣನಾಗಿದ್ದು ಉಪನಯನ ಸಂಸ್ಕಾರವನ್ನು ತಿರಸ್ಕರಿಸಿದ ಮಗನ ಕೃತ್ಯದಿಂದ ನೊಂದ ಮಾದರಸನ ವಿಷಯಕವಾದ ಸಹಾನುಭೂತಿಯನ್ನು ಹಾಗೆ ಮಾದರಸನ ಹೆಸರನ್ನು ಉಳಿಸಿಕೊಂಡು ಬರುವುದರ ಮೂಲಕ ವ್ಯಕ್ತಪಡಿಸಿರುವರೋ ಏನೋ ಎಂದು ಯೋಚಿಸಿದೆ. ಮುಂದೆ ಅದನ್ನು ಲೇಖನವೊಂದರಲ್ಲಿ ಪ್ರಸ್ತಾಪವನ್ನು ಮಾಡಿದೆ. ಅದು ಒಂದು ವೇಳೆ ನಿಜವಲ್ಲದಿದ್ದರೂ ಬಸವಣ್ಣ ತನ್ನ ಮಗನಿಗೆ (ಆ ಬಾಲಕ ಬಹಳ ಕಾಲ ಉಳಿಯಲಿಲ್ಲ) 'ಬಾಲ ಸಂಗಯ್ಯ' ಎಂದು ಹೆಸರಿಡುವಾಗ ಆ ಹೆಸರು ಕೂಡಲಸಂಗಮದ ದೇವರ ಸೂಚಕವಾಗಿತ್ತೇ ಅಥವಾ ಮಾದರಸನ ತಂದೆಯ ಹೆಸರಾಗಿತ್ತೋ ತಿಳಿಯದು. ತಂದೆ ಮಾದರಸನ ವಂಶದ ಸಂಪರ್ಕವನ್ನು ತೊರೆದ ಬಸವಣ್ಣ ಹುಡುಗನ ಅಜ್ಜನ ಹೆಸರನ್ನು ಮಗನಿಗೆ ಇಟ್ಟಿರಲಾರ. ಸಂತತಿ ಮುಂದುವರಿಯಲಿಲ್ಲವಾದ ಕಾರಣ ಆ ಸಂತತಿಯಲ್ಲಿ ಬಸವನಿಂದ ಅವನ ಮೊಮ್ಮಗನ ಮೂಲಕ ಬಸವ ಹೆಸರು ಮುಂದುವರಿದಿರುವ ಸಾಧ್ಯತೆ ಇಲ್ಲ. ಮಾದರಸನಿಗೆ ಬಸವನಲ್ಲದೆ ಬೇರೆ ಗಂಡುಮಕ್ಕಳೂ ಇದ್ದು (ಉದಾ : ದೇವರಾಜ) ಅವನ ಮೂಲಕವೋ ಮಾದರಸನ ಇತರ ಮಕ್ಕಳ ಮೂಲಕವೋ ಮಾದರಸನ ಹೆಸರು ಮುಂದುವರಿದಿರಬಹುದು. ಮಾದರಸನ ಅಜ್ಜನ ಹೆಸರೂ ಮಾದರಸ / ಮಾದಿರಾಜ ಆಗಿದ್ದಿರುವ ಸಾಧ್ಯತೆಯೂ ಇದೆ. (ಇಂತಹ ಉದಾಹರಣೆಗಳು ಈಗಲೂ ಇವೆ) ಏನೇ ಆಗಿರಲಿ, ಬಸವನ ಕಾಲದ ಅವನ ವಂಶದ ಹೆಸರೊಂದು ಕಳೆದ ಶತಮಾನದವರೆಗೆ ಮುಂದುವರಿದದ್ದು ಬಹು ಗಮನಾರ್ಹ ಸಂಗತಿ. ನನಗೆ ತಿಳಿದಮಟ್ಟಿಗೆ ಒಂದು ವ್ಯಕ್ತಿನಾಮ ಎಂಟುನೂರು ವರ್ಷಗಳಿಗೂ ಮೇಲ್ಪಟ್ಟು ಮುಂದುವರಿದಿರುವುದು ಇದೊಂದೇ. ನಾನು ಮಾತನಾಡಿಸಿದ ಆ ಹೆಣ್ಣು ಮಗಳ ಅಣ್ಣ ಮಾದರಸನಿಂದ ಮುಂದೆ ಮೊಮ್ಮಕ್ಕಳ ಮೂಲಕ ಆ ಹೆಸರು ಮುಂದುವರಿಯುವ ಸಾಧ್ಯತೆ ಇಲ್ಲ. ಚೇತನ್, ಸ್ವರೂಪ, ನವೀನ್ ಇಂತಹ ಆಧುನಿಕ ಹೆಸರುಗಳ ಮುಂದೆ ಹಿಂದಿನ ಹೆಸರುಗಳು ತತ್ತರಿಸಿ ಹೋಗಿವೆ, ಸೋತು ಮಲಗಿವೆ. ಹಾಗೆ ಮಲಗಿರುವ ಹೆಸರುಗಳೇ (ತಿಮ್ಮಪ್ಪ, ಕಲ್ಲಯ್ಯ, ಲಕ್ಕೇಗೌಡ, ಪಾರವ್ವ) ಮುಂದೆ ಆಧುನಿಕ ಎನ್ನಿಸಿಕೊಂಡು ಅವೇ ಪ್ಯಾಷನ್ / ಫ್ಯಾಷನ್ ಆದರೂ ಆಶ್ಚರ್ಯವಿಲ್ಲ.

### ಕೊಪಣಾಚಲ

ಸುಮಾರು 1969-70 ಇರಬೇಕು. ಒಮ್ಮೆ ಹೊಸಪೇಟೆಗೆ ಹೋಗಿದ್ದಾಗ ಅಲ್ಲಿನ ಪರಿಚಯಸ್ಥರ ಜೊತೆ ಸಮೀಪದ ಕೊಪ್ಪಳಕ್ಕೆ ಹೋದೆ. ಹಾಗೆ ಹೋಗುವಲ್ಲಿ ಎರಡು

ಉದ್ದೇಶಗಳಿದ್ದುವು. ಒಂದು, ಅಶೋಕನ ಶಾಸನಗಳನ್ನು ನೋಡುವುದು. ಮತ್ತೊಂದು, 'ಕೊಪಣಾಚಲ'ವನ್ನು ನೋಡುವುದು. ಅಲ್ಲಿನ ದೊಡ್ಡ ಬೆಟ್ಟವನ್ನು ಹತ್ತಿ ಅಲ್ಲಿ ಕೆತ್ತಿದ್ದ ಅಶೋಕನ ಶಾಸನವನ್ನು ನೋಡಿದ್ದಾಯಿತು. ಅಲ್ಲಿನ ಜನಕ್ಕೆ ಜೈನರ ಕೇಂದ್ರವಾಗಿದ್ದ 'ಕೊಪಣಾಚಲ', ಜೈನಧರ್ಮದಿಂದ ಪ್ರಸಿದ್ಧವಾದ ಕೊಪ್ಪಳದ ಬೆಟ್ಟ ಯಾವುದೋ ತಿಳಿದಿರಲಿಲ್ಲ. ಊರೊಳಗಿದ್ದ ಒಂದು ಪುಟ್ಟ ಸುಂದರ ಬಸದಿಯ ಜೈನ ಅರ್ಚಕರಿಗೂ ಅದು ಗೊತ್ತಿರಲಿಲ್ಲ. ನಾನು ಹತ್ತಿದ್ದ ಅಶೋಕನ ಶಾಸನವಿರುವ ಬೆಟ್ಟದ ಪಕ್ಕದ ಬೆಟ್ಟದ ಮೇಲಿದ್ದ ಕೋಟೆ ಕೆಳಗಿನಿಂದಲೇ ಕಾಣಿಸುತ್ತಿತ್ತು. ಆ ಕೋಟೆಯಲ್ಲಿ ಅದನ್ನು ಬಿಟ್ಟರೆ ಏನೂ ಇಲ್ಲವೆಂದು ಜನ ಖಚಿತವಾಗಿ ಹೇಳಿದರು. ಅದು 'ಕೊಪಣಾಚಲ' ವಲ್ಲವೆಂಬುದು ಮನವರಿಕೆಯಾಯ್ತು. ಊರ ಬಸದಿಯ ಅಂಗಳದಲ್ಲಿ ಬಿದ್ದಿದ್ದ ತೀರ್ಥಂಕರರ ಚಿಕ್ಕ ವಿಗ್ರಹಗಳಿದ್ದ ಶಿಲೆಯು ಅಮೂಲ್ಯವಾದದ್ದರಿಂದ ಅದನ್ನು ಒಳಗೆ ಇರಿಸಬೇಕೆಂದು ಅರ್ಚಕರಿಗೆ ಸೂಚಿಸಿದೆ. ಒಂದು ಕಾಲಕ್ಕೆ ಜೈನರೇ ವಿಶೇಷವಾಗಿದ್ದ ಕೊಪ್ಪಳದಲ್ಲಿ ಒಂದೆರಡು ಮಾತ್ರ ಜೈನರ ಕುಟುಂಬಗಳು ಇದ್ದುವು. ಅಲ್ಲಿನ ಜನರಲ್ಲಿ ಲಿಂಗಾಯತರೇ ಬಹುಸಂಖ್ಯಾತರು. ಊರ ಪಕ್ಕದ ಇನ್ನೊಂದು ಚಿಕ್ಕ ಬಂಡೆಗುಡ್ಡದ ಒಂದು ಪಾರ್ಶ್ವದಲ್ಲಿ ಅಶೋಕನ ಇನ್ನೊಂದು ಶಾಸನವಿತ್ತು. ಅದನ್ನೂ ಹತ್ತಿ ನೋಡಿದ್ದಾಯಿತು. ಆದರೆ 'ಕೊಪಣಾಚಲ' ಯಾವುದು ? ರನ್ನನು ತನ್ನ ಆಶ್ರಯದಾತೆ ಅತ್ತಿಮಬ್ಬೆಯ ಚರಿತವು ಬಿಳಿಯರಳೆಯಂತೆ, ಗಂಗಾಜಲದಂತೆ, 'ಕೊಪಣಾಚಲ'ದಂತೆ ಪವಿತ್ರವೆಂದು ಕೊಂಡಾಡಿದ್ದಾನೆ (ಆ ಊರು ಅವನ ಕಾಲದ ತಿರುಳ್ಗನ್ನಡ ನಾಡಿನ ಒಂದು ಗಡಿಯೂ ಆಗಿತ್ತು.) ಜೈನರಿಗೆ ಪವಿತ್ರವಾಗಿದ್ದ ಆ ಬೆಟ್ಟ ಯಾವುದು? ಈ ಯೋಚನೆಯಲ್ಲೇ ಬಂಡೆಗುಡ್ಡದ ಮೇಲಿದ್ದ ಗವಿಮಠಕ್ಕೆ ಹೋದಾಗ ಅಲ್ಲಿನ ಪೂಜ್ಯರು ಪೂಜಾಗೃಹದಲ್ಲಿರುವುದಾಗಿ ತಿಳಿಯಿತು. ಆ ಪ್ರದೇಶದ ವೀರಶೈವರು ಬಹುವಾಗಿ ಗೌರವಿಸುವ ಮಠ ಅದಾಗಿತ್ತು. ನಮಗೆ ಕುಡಿಯಲು ಮಜ್ಜಿಗೆ ತಂದುಕೊಟ್ಟರು. ಮಠದ ಒಳ ಅಂಗಳದಲ್ಲೇ ಕುಳಿತು ಕಾಲ ಕಳೆಯಲು ಅಲ್ಲೇ ಎದುರಿಗಿದ್ದ ಗೋಡೆಯ ತುದಿಯಲ್ಲಿದ್ದ ಖಾಲಿ ಗೂಡುಗಳನ್ನು - ಬಹುಶಃ ದೀಪ ಹಚ್ಚಿಡುತ್ತಿದ್ದ ಗೂಡುಗಳನ್ನು ಎಣಿಸುತ್ತ ಹೋದೆ. ಇಪ್ಪತ್ತನಾಲ್ಕು! ಒಂದು ಕ್ಷಣ ಚಮತ್ಕೃತನಾದೆ. ಎರಡನೇ ಸಾರಿ ಎಣಿಸಿದೆ. ಇಪ್ಪತ್ತೈದೋ ಇಪ್ಪತ್ತಾರೋ ಗೂಡುಗಳಿದ್ದುವು. ಮೂರನೇ ಬಾರಿ ತದೇಕಚಿತ್ತನಾಗಿ ಎಣಿಸಿದಾಗ ಇಪ್ಪತ್ತನಾಲ್ಕು ಇದ್ದುದು ಖಚಿತವಾಯಿತು. ಜೊತೆಯಲ್ಲಿದ್ದವರೂ ಎಣಿಸಿ ಅದನ್ನು ಖಚಿತಪಡಿಸಿದರು. ನನಗೆ ಒಂದು ಕ್ಷಣ ಕುಣಿಯುವಂತಾಯಿತು. ಯಾವ 'ಅಚಲ'ವನ್ನು ಕಾಣಲು ತವಕಿಸುತ್ತಿದ್ದೆನೋ ಆ 'ಅಚಲ'ದ ಮೇಲೆಯೇ ನಾನು ಕುಳಿತಿದ್ದೇನೆಯೇ ? ಇಪ್ಪತ್ತನಾಲ್ಕು ಸಂಖ್ಯೆ ಸಹಜವಾಗಿ ಇಪ್ಪತ್ತನಾಲ್ಕು ತೀರ್ಥಂಕರರನ್ನು ಜ್ಞಾಪಕಕ್ಕೆ ತಂದಿತ್ತು. ಅಲ್ಲೇ ಇದ್ದ ಮಠದ ಕಾರ್ಯಕರ್ತರನ್ನು ಇಲ್ಲಿ ಏನಾದರೂ ಬೇರೆ ಶಿಲ್ಪ ಇದೆಯೇ ಎಂದು ಕೇಳಿದ್ದಕ್ಕೆ ಬೇತಾಳಮ್ಮನ ಶಿಲ್ಪವನ್ನು ತೋರಿಸುವುದಾಗಿ ಒಬ್ಬರು ಕರೆದೊಯ್ದರು. ಎರಡು ಇಕ್ಕಟ್ಟಾದ ಬಂಡೆಗಳ ಮಧ್ಯೆ ಹೋದರೆ ಅಲ್ಲಿದೆ ಬಂಡೆ ಮೇಲೆ 'ಬೇತಾಳಮ್ಮ' - ಎರಡಡಿ ಎತ್ತರದ ನಗ್ನ ಬಾಹುಬಲಿ ವಿಗ್ರಹ. ಅದಕ್ಕೆ ಸೀರೆ ಉಡಿಸಿದ್ದರು ಮಾತ್ರವಲ್ಲದೆ ಅಲ್ಲೇ ಬಂಡೆಗಳ ಬಿರುಕುಗಳಿಗೆ ಬಳೆಗಳ ಗೊಂಚಲುಗಳನ್ನು

ಕಟ್ಟಿ ನೇತು ಹಾಕಿದ್ದರು. ಹೆಂಗಸರು ತಮಗೆ ಮಕ್ಕಳಾಗಲಿ ಎಂದು ಕಟ್ಟಿದ ಹರಕೆಗಳು ಅವು. ಕೆಲವು ಮಕ್ಕಳ ಆಟದ ಪುಟ್ಟ ತೊಟ್ಟಿಲುಗಳೂ ಅಲ್ಲಿದ್ದು ಹರಕೆ ಈಡೇರಿ ತಾಯಂದಿರಾದ ಹೆಂಗಸರ ಕಾಣಿಕೆಗಳು ಅವು. ನನಗಾದ ಆನಂದ ವಿಸ್ಮಯ ವರ್ಣನಾತೀತ. ನನ್ನ ಊಹೆ ಈಗ ಪೂರ್ಣ ನಿಜವಾಗಿತು: ಅದೇ ಕೊಪಣಾಚಲ. ಆ ಗವಿಮಠವು ಹಿಂದೊಮ್ಮೆ ಜಿನಮುನಿಗಳು ವಾಸಿಸುತ್ತಿದ್ದ ಗುಹೆಯಾಗಿದ್ದು ಅಥವಾ ಜೈನಮಠವಾಗಿದ್ದು ಕೊಪ್ಪಳದ ಜೈನರು ಯಾವುದೋ ಕಾಲದಲ್ಲಿ ವೀರಶೈವರಾದಾಗ ಆ ಮಠವೂ ವೀರಶೈವರ ಮಠವಾಯ್ತು ಎಂಬಲ್ಲಿ ಅನುಮಾನವೇ ಉಳಿಯಲಿಲ್ಲ. ಆ ಬೆಟ್ಟವು ಶ್ರವಣಬೆಳ್ಗೊಳದಲ್ಲಿ ಜಿನಮುನಿಗಳು ವಾಸವಾಗಿದ್ದ ಚಿಕ್ಕ ಬೆಟ್ಟದಂತೆ ಊರ ಪಕ್ಕದಲ್ಲೇ ಇದ್ದು ಹತ್ತಿ ಇಳಿಯಲು ಸುಲಭವೂ ಆಗಿತ್ತು. ಅಲ್ಲಿಂದ ಮಠಕ್ಕೆ ಹಿಂದಿರುಗಿ ಬರುವ ಹೊತ್ತಿಗೆ ಪೂಜಾಕಾರ್ಯ ಮುಗಿಸಿ ಬಂದಿದ್ದ ಸ್ವಾಮೀಜಿಯವರ ಆಶೀರ್ವಾದ ಪಡೆದಾದ ಮೇಲೆ ಅದೇ ಮಾರ್ಗದರ್ಶಿ ಬೆಟ್ಟದ ಇನ್ನೂ ಕೆಳಭಾಗಕ್ಕೆ ಕರೆದೊಯ್ದ : ಅಲ್ಲಿ ಒಂದು ನಿಸದಿಗಲ್ಲು ಇತ್ತು. ಜಿನಮುನಿಗಳು ಸಲ್ಲೇಖನ ವ್ರತದಿಂದ ಆಹಾರ ಪಾನೀಯಾದಿಗಳನ್ನು ಸಂಪೂರ್ಣ ವರ್ಜಿಸಿ ಪ್ರಾಣತ್ಯಾಗ ಮಾಡಿದ್ದುದರ ಗುರುತಾಗಿ ಕೆತ್ತಿದ ಶಿಲ್ಪವೇ ನಿಸದಿಗಲ್ಲು. ಆ ಶಿಲ್ಪದಲ್ಲಿ ಹಾಗೆ ಪ್ರಾಣತ್ಯಾಗ ಮಾಡಿದ ಜಿನಮುನಿಯ ಚಿತ್ರವಿತ್ತು. ಒಂದು ಬಗೆಯ ತೃಪ್ತಿಯಿಂದ ನಾನು ವಾಪಸಾದೆ. ಹೊಸಪೇಟೆಯಲ್ಲಿ ನಾನು ಮಾಡಿದ ಭಾಷಣ ಮರೆತುಹೋಗಿದೆ. ಅದನ್ನು ಕೇಳಿದವರು ಆ ಭಾಷಣದ ಭೀಷಣ ಅನುಭವವನ್ನು ಮರೆತಿರಲಾರರು ! ಆದರೆ ಕೊಪ್ಪಳದ ಭೇಟಿ ನನ್ನ ನೆನಪಿನ ಬಂಡೆ ಮೇಲೆ ಕಂಡರಿಸಿದ ಸುಂದರ ಉಬ್ಬುಶಿಲ್ಪಗಳಾಗಿ ಅಚ್ಚಳಿಯದೆ ಉಳಿದಿದೆ.

## ಹಂಪಿ – ಹರಿಹರನ ಮನೆ

1978ರಲ್ಲಿ ನಾಲ್ಕು ತಿಂಗಳು ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಸಂದರ್ಶನ ಪ್ರಾಧ್ಯಾಪಕನಾಗಿದ್ದ ಕಾಲ. ಹೊಸಪೇಟೆಯಲ್ಲಿ ಹರಿಹರನನ್ನು ಕುರಿತಾದ ವಿಚಾರಗೋಷ್ಠಿಯಲ್ಲಿ ಪ್ರಬಂಧ ಮಂಡಿಸಲು ಅವನ ಮತ್ತು ಅವನ ಕುರಿತಾದ ಹಿಂದಿನ ಸಾಹಿತ್ಯವನ್ನು ಮತ್ತೊಮ್ಮೆ ಅಧ್ಯಯನ ಮಾಡುತ್ತಿದ್ದೆ. ಅವನ ಸೋದರಳಿಯನಾದ ರಾಘವಾಂಕನನ್ನು ವಸ್ತುವಾಗುಳ್ಳ ರಾಘವಾಂಕ ಚರಿತೆಯನ್ನು (ಕೃತಿಕಾರ - ಚಿಕ್ಕನಂಜೇಶ ಅಥವಾ ಸಿದ್ಧನಂಜೇಶ) ಸ್ವಲ್ಪ ಎಚ್ಚರಿಕೆಯಿಂದಲೇ ಓದಿದೆ. ಅದರಲ್ಲಿ ಕವಿ ರಾಘವಾಂಕನ ಜೀವನದ ವಿವರಗಳನ್ನಲ್ಲದೆ ಅವನ ಕೃತಿಗಳ ಸಾರಾಂಶವನ್ನೂ ಕೊಡಲಾಗಿದೆ. ರಾಘವಾಂಕನೇ ಬರೆದ, ಆದರೆ ಇಂದು ಲಭ್ಯವಿಲ್ಲದ ಹರಿಹರ ಮಹತ್ವ ಎಂಬ ಕೃತಿಯ ಸಾರಾಂಶವನ್ನು ಚಿಕ್ಕನಂಜೇಶನು ನೀಡಿದ್ದು ಅದೇ ಇಂದಿಗೂ ನಮಗೆ ಹರಿಹರನ ಬದುಕಿನ ಕೆಲವು ವಿವರಗಳನ್ನಾದರೂ ತಿಳಿಸುವ ಪ್ರಮುಖ ಆಕರವಾಗಿದೆ. ದೋರಸಮುದ್ರದಲ್ಲಿ ಕರಣಿಕನಾಗಿದ್ದ ಹರಿಹರನು ಆ ಹುದ್ದೆಯನ್ನು ತ್ಯಜಿಸಿ ಹರಿಹರ ಊರಿಗೆ ಬರುತ್ತಾನೆ. ಅಲ್ಲಿದ್ದ ಹರಿಹರೇಶ್ವರ ದೇವಾಲಯದ ಭೂತವನ್ನು ಓಡಿಸಿದನೆಂಬ ಕತೆಯು ಒಂದು ಹೊಸ ಸಂಗತಿಯನ್ನು ತಿಳಿಸಿತ್ತು. ಆ ದೇವಾಲಯದಲ್ಲಿ ಯಾವುದೋ ಕಾರಣದಿಂದ ಪೂಜಾದಿಗಳು ನಿಂತು ಮೇಲಿನ ಕತೆ, ಅಲ್ಲೊಂದು ಭೂತ

ಇದೆಯೆಂಬ ಕತೆ ಹುಟ್ಟಿರಬೇಕಲ್ಲವೇ ? ಆ ದೇವಾಲಯದ ಶಾಸನಗಳಿಗೆ ಒಂದು ಸಾತತ್ಯವಿದ್ದು, 1180-1225ರ ಅವಧಿಯಲ್ಲಿ ಒಂದೂ ಶಾಸನ ಹುಟ್ಟಿರಲಿಲ್ಲವೆಂಬುದು ಗಮನಾರ್ಹವಾಗಿತ್ತು. ಆ ದೇವಾಲಯವು ಜೀರ್ಣವಾಗಿದ್ದು, 1225ರಲ್ಲಿ ಪುನರ್ನಿರ್ಮಾಣಗೊಂಡಿತು. ದೇವಾಲಯ ಹಾಳು ಬಿದ್ದಿದ್ದು ಆ ಅವಧಿಯಲ್ಲಿ. ಹರಿಹರ ಅಲ್ಲಿಗೆ ಹೋದುದು 1210 - 20ರ ಅವಧಿಯಲ್ಲಿ ಎಂಬುದು ಸೂಚಿತವಾಗಿ ಅದು ಅವನ ಕಾಲ ನಿರ್ಧಾರಕ್ಕೆ ಸಹಾಯಕವಾಗಿತ್ತು. ಈ ಶೋಧವೂ ಒಂದು ಕಾಮನ್‌ಸೆನ್ಸೇ. ಅಲ್ಲಿಂದ ತನ್ನ ಹುಟ್ಟೂರು ಹಂಪಿಗೆ ಬಂದಾಗ ವಿರೂಪಾಕ್ಷ ದೇವಾಲಯದ ಅರ್ಚಕರು ನಾಗನಾಥೇಶ್ವರ ದೇವಾಲಯದ ಮುಂದಿನ 'ವಾಹನಗೃಹ'ವನ್ನು ಖಾಲಿ ಮಾಡಿಸಿ ಅಲ್ಲಿ ಅವನಿಗೆ ವಸತಿ ವ್ಯವಸ್ಥೆ ಮಾಡಿದರು. ಹರಿಹರ ವಾಸವಾಗಿದ್ದ ಮನೆಯು ವಿರೂಪಾಕ್ಷ ದೇವಾಲಯದ ಸಮೀಪದಲ್ಲಿತ್ತು ಎಂಬುದಕ್ಕೆ ಆ ಕೃತಿಯಲ್ಲೇ ಒಂದೆರಡು ಸೂಚನೆಗಳಿವೆ. ಅದನ್ನು ಓದಿದ ತಕ್ಷಣ ನನಗೆ ಅನ್ನಿಸಿತು : ಈ ಏಳು ನೂರು ಐವತ್ತು ವರ್ಷಗಳಲ್ಲಿ ಹರಿಹರನಿದ್ದ ಮನೆ ಉಳಿದಿರುವುದು ಅಸಂಭವವಾದರೂ ನಾಗನಾಥ ದೇವಾಲಯವನ್ನು ಗುರುತಿಸಿದರೆ ಅದರ ಮುಂಭಾಗದಲ್ಲೇ ಇದ್ದ ಹರಿಹರನ ಮನೆಯಿದ್ದ ಜಾಗವನ್ನು ಗುರುತಿಸಬಹುದಲ್ಲವೇ ? ಇದು ಹೇಗಿತ್ತೆಂದರೆ, ಹುಂಬುಚದಲ್ಲಿ ಯಾವುದೋ ಬಾವಿ, ಆ ಬಾವಿ ಹತ್ತಿರ ಯಾವನೋ ಹುಚ್ಚನ ಮನೆ, ಆ ಹುಚ್ಚನನ್ನು ಕೇಳಿದರೆ ರನ್ನನ ಅಲಭ್ಯ ಕೃತಿ ಚಕ್ರೇಶ್ವರ ಚರಿತದ ಹಸ್ತಪ್ರತಿ ಯಾರ ಬಳಿ ಇದೆಯೆಂಬುದು ತಿಳಿಯುತ್ತದೆ ಎಂದು ಪರಿಚಿತರೊಬ್ಬರು ಹೇಳಿದ ಮಾತನ್ನು ನಂಬಿ, ತೀರ್ಥಹಳ್ಳಿ ತಾಲೂಕು ಕವಿಲೆ ದುರ್ಗಕ್ಕೆ ಹೋದ ನಾವು ವಾಪಸಾಗುವಾಗ ಹುಂಬುಚದಲ್ಲಿ ಒಂದು ಬಾವಿ, ಅಲ್ಲಿನ ಹುಚ್ಚನಿಗಾಗಿ ಯಾರು ಯಾರನ್ನೋ ಕೇಳಿ ಅವರಿಗೆ ನಗು ಬರುವಂತೆ ಮಾಡಿದ್ದೆ. ಕವಿಲೆ ದುರ್ಗದ ಮಠದಲ್ಲಿ ದೊರಕಿದ ತಾಮ್ರಪಟಗಳು, ಕಡತಗಳು, ಇನ್ನು ಕೆಲವು ಪ್ರಾಚೀನ ಅಮೂಲ್ಯ ವಸ್ತುಗಳನ್ನು ಸಂಗ್ರಹಿಸಿಕೊಂಡು ಬರಲು ಜೊತೆಗೆ ಬಂದಿದ್ದ ಡಾ. ಜಿ.ಎಸ್. ಶಿವರುದ್ರಪ್ಪನವರು ಆ ನನ್ನ ಪರದಾಟ ನೋಡಿ ತಮಾಷೆ ಮಾಡಿದ್ದೂ ಉಂಟು. ಅವರಿಗೇಕೆ, ನನಗೇ ನನ್ನದು ಹುಚ್ಚಾಟವಲ್ಲದೇ ಏನು ಎಂದು ನಗು ಬಂದಿತ್ತು. ರನ್ನನ ಅದೃಷ್ಟ ಖುಲಾಯಿಸಿ ಆ ಹುಚ್ಚನ ಮೂಲಕ ಆ ಹಸ್ತಪ್ರತಿ ದೊರಕಿದ್ದಿದ್ದರೆ ನನಗೆ ಖಂಡಿತ "ಆಚಂದ್ರಾರ್ಕತಾರಂಬರಂ" ಕೀರ್ತಿ ಅನಾಯಾಸವಾಗಿ ಏಕ್‌ದಂ ಲಭಿಸಿಬಿಡುತ್ತಿತ್ತು.

ಆ ಕೊಂಪೆಗಳ ಹಾಳು ಹಂಪೆಯಲ್ಲಿ ನಾನು ಹರಿಹರನ ಜಾಗ ಗುರುತಿಸುವ ಮೊದಲು ನಾಗನಾಥೇಶ್ವರ ಗುಡಿ ಗುರುತಿಸಬೇಕಾಗಿತ್ತು. ಹೊಸಪೇಟೆಯಿಂದ ಹಂಪಿಗೆ ಹೋಗಿ ವಿರೂಪಾಕ್ಷ ದೇವಾಲಯದ ಸುತ್ತ ಎರಡು ಮೂರು ಗಂಟೆ ಪರಿಶೀಲಿಸಿದೆ. ಅರ್ಚಕರನ್ನೂ ಇನ್ನೂ ಹಲವರನ್ನೂ ಕೇಳಿದೆ. ಅವರು ನಾಗನಾಥನ ಗುಡಿ ವಿಷಯ ಕಂಡರಿಯರು, ಕೇಳರಿಯರು. ಅಲ್ಲಿದ್ದ ಶ್ರೀ ಸದಾಶಿವಯೋಗಿಗಳು 'ಪವಾಡ' ಮಾಡಿ ಬೆರಗುಗೊಳಿಸಿ, ಆಮೇಲೆ ಅದು ಕೇವಲ ಕೈಚಳಕ ಎಂದು ತೋರಿಸಿ ನಿಬ್ಬೆರಗುಗೊಳಿಸಿದ್ದರು. ಆದಾದಮೇಲೆ ಎರಡನೆಯ ಬಾರಿ ಹಂಪಿಗೆ ಹೋಗಿ ಕಾಮಲಾಪುರದ ಪುರಾತತ್ವ ಇಲಾಖೆಯ ಅಧಿಕಾರಿಗಳನ್ನು ಭೇಟಿ ಮಾಡಿದೆ. ಅಲ್ಲಿನ ವಸ್ತುಸಂಗ್ರಹಾಲಯ ನೋಡಿದೆ. ಏನೂ ಸಹಾಯವಾಗಲಿಲ್ಲ. ಹಂಪಿ

ಊರಿನ ಪಕ್ಕದ, ಬಾಳೆ ತೋಟಗಳ ಮಧ್ಯದ ಮಂಟಪಗಳಿಗೆ ಹೋದೆ - ಅಲ್ಲಿ ನೋಡಿ ಎಂದು ಯಾರೋ ಹೇಳಿದ್ದಕ್ಕೆ. ಹೇಮಕೂಟ ಪರ್ವತ ಕೂಡ ಹತ್ತಿದೆ. ನನಗೆ ಬೇಕಾಗಿದ್ದುದು ವಿಜಯನಗರ ಪೂರ್ವ ಕಾಲದ, 1200ಕ್ಕಿಂತ ಹಿಂದಿನ ಕಟ್ಟಡ, ನಾಗನಾಥ ದೇವಾಲಯ. ಅಂತಹ ಹಳೆಯ ಮಂದಿರಗಳನ್ನು ಹಲವನ್ನು ಗುರುತಿಸಿದೆ, ಪುರಾತತ್ವ ವಿಭಾಗದ ತಜ್ಞರೂ ಆ ಬಗ್ಗೆ ಸಹಾಯ ಮಾಡಿದರು. ಹಿಂದಿನಂತೆ ಹಲವರನ್ನು ಕೇಳಿದೆ. ಅದು ಉರಿಬಿಸಿಲಿನ ಬೇಸಗೆ ಕಾಲ. ತೀವ್ರ ಆಯಾಸಪಡುತ್ತ ಅದರಲ್ಲೇ ನಾಲ್ಕಾರು ಗಂಟೆ ತಿರುಗಿದರೂ ಆ ನಿರ್ದಿಷ್ಟ ದೇವಾಲಯದ ಗುರುತು ಹತ್ತಲಿಲ್ಲ. ತೀರ ನಿರಾಸೆಯಿಂದಲೇ ವಾಪಸಾದೆನೆನ್ನಬೇಕು. ಹುಡುಕುವ ಆಸೆಯನ್ನು ಪೂರ್ತಿ ಕೈ ಬಿಟ್ಟೆ. ನನ್ನ ಹುಡುಕಾಟದ ವಿಷಯ ಬಲ್ಲ ಹಗರಿ ಬೊಮ್ಮನ ಹಳ್ಳಿಯ ವಿರೂಪಾಕ್ಷ ಗೌಡರಿಂದ ಕೆಲವು ತಿಂಗಳ ಬಳಿಕ ಬಂದ ಪತ್ರ ನನಗೆ ತಂದ ಸಂತಸ ಅಷ್ಟಿಷ್ಟಲ್ಲ. ಅವರು ನಾಗನಾಥ ದೇವಾಲಯ ಗುರುತಿಸಿರುವುದಾಗಿ ಬರೆದಿದ್ದರು. ನಾನು ಮತ್ತೆ ಹಂಪಿಗೆ ಬರುವ ವಿಷಯ ತಿಳಿದ ಹೊಸಪೇಟೆಯ ಕೊಟ್ಟೂರೇಶ್ವರ ಮಠದ ಶ್ರೀ ಸಂಗನ ಸ್ವಾಮಿಗಳು ಅಲ್ಲಿ ವಸತಿ ವ್ಯವಸ್ಥೆ ಮಾಡಿ ತಮ್ಮ ಕಾರನ್ನೂ ನಮ್ಮ ವಶಕ್ಕೆ ಕೊಟ್ಟರು. ಬೆಂಗಳೂರಿನ ಎಸ್. ಶಿವಣ್ಣ, ತಮ್ಮ ಊರಿಂದ ಬಂದಿದ್ದ ವಿರೂಪಾಕ್ಷಗೌಡರೊಡನೆ ಹೊಸಪೇಟೆಯಿಂದ ನೇರವಾಗಿ ಹಂಪಿಯ ವಿರೂಪಾಕ್ಷ ದೇವಾಲಯಕ್ಕೆ ಹೋದೆವು. ಅಲ್ಲಿ ಗೌಡರು ವಿರೂಪಾಕ್ಷ ದೇವಾಲಯ ಪಕ್ಕದ ಮನ್ಮಥ ತೀರ್ಥ ಹೊಂಡದ ಹಿಂಬದಿಯ ತಗ್ಗಿನಲ್ಲಿದ್ದ ದೇವಾಲಯಕ್ಕೆ ಕರೆದೊಯ್ದರು. ಆ ದೇವಾಲಯದ ಸಮೀಪ ದೊಡ್ಡ ನಾಗವಿಗ್ರಹವಿದ್ದುದು ನಿಜ. ಆದರೆ ದೇವಾಲಯವು ಸ್ಪಷ್ಟವಾಗಿ ವಿಜಯನಗರ ಕಾಲದ್ದಾಗಿತ್ತು. ದೇವಾಲಯದ ಹೆಸರು ಕೂಡ ನಗರೇಶ್ವರ ಎಂದಾಗಿತ್ತು. ನನ್ನ ಉತ್ಸಾಹ ಜರ್ರನೆ ಇಳಿದು ಹೋಯ್ತು. "ಕ್ಷುದ್ರಂ ಹೃದಯ ದೌರ್ಬಲ್ಯಂ, ತ್ಯಕ್ತ್ವೋತ್ತಿಷ್ಠ ಪರಂತಪ" - ವಿರೂಪಾಕ್ಷನೇ ಕೃಷ್ಣನಾಗಿ, ಕುಗ್ಗಿ ಹೋಗಿದ್ದ ನನಗೆ "ಏಳು ಖಿನ್ನನಾಗಬೇಡ. ಆಯುಧ ಹಿಡಿದು ವೀರನೇ ಯುದ್ಧಕ್ಕೆ ಹೊರಡು" ಎಂದು ಹೇಳಿದಂತೆ ಜ್ಞಾಪಕವಿಲ್ಲ. ಗೀತೆ ಜ್ಞಾಪಿಸಿಕೊಂಡು ಅದರಲ್ಲೇ ಕುಗ್ಗಿದ ಉತ್ಸಾಹವನ್ನು ಸ್ವಲ್ಪ ವರ್ಧಿಸಿಕೊಂಡು ಮತ್ತೆ ಒಂದನೇ ಚೌಕದಿಂದಲೇ ಹುಡುಕಾಟ ಆರಂಭಿಸಿದೆ. ಹೇಮಕೂಟ ಏರಿದೆ, ದೇವಾಲಯದ ವೃದ್ಧ ಅರ್ಚಕರನ್ನು ಹುಡುಕಿಕೊಂಡು ಹೋಗಿ ಕೇಳಿದೆ, ವಿರೂಪಾಕ್ಷ ದೇವಾಲಯದ ಹಿಂಭಾಗಕ್ಕೂ ಹೋದೆ. ಏನೂ ಎಲ್ಲೂ ನಾಗನಾಥನ ಸುಳಿವಿಲ್ಲ. ಆಗಲೇ ಮಧ್ಯಾಹ್ನ 1.00 ಗಂಟೆ. ಅಲ್ಲೇ ಸಮೀಪದ ಹಂಪಿ ಕೊಟ್ಟೂರೇಶ್ವರ ಮಠದಲ್ಲಿ ಬಿಸಿ ಬಿಸಿ ರೊಟ್ಟಿಗಳು ತಯಾರಾಗಿ ಊಟಕ್ಕೆ ಬರಲು ಕರೆಯೂ ಬಂದಾಗಿತ್ತು. ವಿರೂಪಾಕ್ಷ ದೇವಾಲಯದಿಂದ ನದಿಗೆ ಹೋಗುವ ದಾರಿಯ ಬಲ ಬದಿಯಲ್ಲಿ ಮನ್ಮಥಕುಂಡ ಎಂಬ ಕೊಳ, ಎಡಬದಿಯಲ್ಲಿ ಉದ್ದಕ್ಕೂ ವಿಜಯನಗರ ಕಾಲಕ್ಕಿಂತ ಹಿಂದಿನ ದೇವಾಲಯಗಳು. ಇನ್ನು ಈ ಶೋಧವನ್ನು ಮುಂದಿನ ಜನ್ಮದ ಮೊದಲ ಕಾರ್ಯಕ್ರಮವಾಗಿ ಇಟ್ಟುಕೊಂಡೇ ಕಣ್ಮುಚ್ಚಬೇಕು ಎಂದು ತಮಾಷೆ ಮಾಡುತ್ತ ನಾನು "ಆದದ್ದಾಗಲಿ" ಎಂದು ಮತ್ತೊಮ್ಮೆ ಆ ಪ್ರಾಚೀನ ದೇವಾಲಯಗಳನ್ನು ಸೂಕ್ಷ್ಮವಾಗಿ ಪರಿಶೀಲಿಸತೊಡಗಿದೆ. ಹಲವು ಬಾರಿ ಪರಿಶೀಲಿಸಿದ್ದ ನಾಗನಂದೇಶ್ವರ ದೇವಾಲಯವನ್ನು ಮತ್ತೆ ಪರಿಶೀಲಿಸುತ್ತಿದ್ದೆ.

ನನ್ನ ಜೊತೆ ಬಂದಿದ್ದ ಗೆಳೆಯರೆಲ್ಲರೂ ಆಗಲೇ ಮಠಾಭಿಮುಖವಾಗಿ ಗಮಿಸುತ್ತಿದ್ದರು. ಏಕಾಂಗಿಯಾಗಿ ಉಳಿದ ನಾನು ಆ ದೇವಾಲಯದ ಮುಂಭಾಗದ ಕಲ್ಲುಗಳ ಒಂದೊಂದು ಅಂಗುಲವನ್ನೂ ಹದ್ದುಗಣ್ಣಿನಿಂದ ನೋಡುತ್ತಿರುವಾಗ ಅಕ್ಷರಗಳು ಕಾಣಿಸಿದುವು - "ನಾಗನಾಥೇಶ್ವರ". ತಡೆಯಲಾಗದೆ ನಾನು ಅಕ್ಷರಶಃ ಕೂಗಿಕೊಂಡೆ - "ಶಿವಣ್ಣ ಸಿಗ್ತು, ಬನ್ನಿ ಬನ್ನಿ!" (ಅದು ನನ್ನ ಸಂಶೋಧನ ಜೀವನದ "ಯುರೇಕ"). ಆ ಶಾಸನದ ಭಾಗವನ್ನು ಮನ್ಮಥಕುಂಡದ ನೀರಿನಿಂದ ತೊಳೆದು ಒರಸಿ ನೋಡಿದಾಗ ಅಕ್ಷರಗಳು ಇನ್ನೂ ಸ್ಪಷ್ಟವಾಗಿ ಗೋಚರಿಸಿದುವು. ಎರಡನೆಯ "ನಾ" ಅಕ್ಷರದ ದೀರ್ಘ ಚಿಹ್ನೆಯ ಕೆಳಗಿನ ಸೊನ್ನೆಯನ್ನು ದಪ್ಪನಾಗಿ ಬರೆದುದರಿಂದ ಅದು ಬಿಂದುವಿನಂತೆ ಕಾಣಿಸುತ್ತಿತ್ತು. "ಥೇ" ಅಕ್ಷರದ ಹೊಕ್ಕುಳು ಸೀಳಿರಲಿಲ್ಲ. ಮತ್ತು ಅದರ ಒಳಗಿನ ಚುಕ್ಕೆಯನ್ನು ಗಮನಿಸದಿದ್ದವರಿಗೆ ಅದು "ದೇ" ಎಂದೇ ಕಾಣಿಸುತ್ತಿತ್ತು. ಆ ಹೆಸರನ್ನು ಹರಿಹರನಿಂದ ಈಚೆಗೆ ಸುಮಾರು ಹದಿನೈದು ಹದಿನಾರನೇ ಶತಮಾನದಲ್ಲಿ ಸರಿಯಾಗಿದೆಯೇ ಕೆತ್ತಿದ್ದರೂ ಅದನ್ನು ನಲವತ್ತು ಐವತ್ತು ವರ್ಷಗಳ ಹಿಂದೆ ತಪ್ಪಾಗಿ ಓದಿಕೊಂಡವರು ಅದನ್ನು ಕಲ್ಲಿನ ಗೋಡೆಯ ಮೇಲೆ ಹಾಗೇ ಮಸಿಯಿಂದ ಬರೆಯಿಸಿದ್ದರು. "ನಾಗನಾಥೇಶ್ವರ"ವು "ನಾಗನಂದೇಶ್ವರ"ವಾಗಲು ಕಾರಣ ಅದು. ನಾನು ಮೂರು ಬಾರಿಯೂ ದೇವಾಲಯದ ಗೋಡೆ ಮೇಲಿನ ಮಸಿಯ ಬರಹವನ್ನು ನೋಡಿ ಮುಂದೆ ಹೋಗಿದ್ದೆ.

ನನಗಂತೂ ತೀರ ಸಮಾಧಾನವಾಗಿತ್ತು. ಇಡೀ ಸ್ಥಳವನ್ನು ಪರಿಶೀಲಿಸಿದ ಮೇಲೆ ಆ ದೇವಾಲಯದ ಮುಂಭಾಗದ ಮನ್ಮಥಕುಂಡದ ಬಲಭಾಗದ ಮೂಲೆಯೇ ಹರಿಹರನ ವಾಸದ ಮನೆಯಿದ್ದ, ದೇವಾಲಯದ ವಾಹನಗೃಹವಾಗಿದ್ದುದನ್ನು ಖಾಲಿ ಮಾಡಿಸಿ ಕೊಟ್ಟ ಕಟ್ಟಡದ ನಿವೇಶನವೆಂದು ನಾನು ಖಚಿಪಡಿಸಿಕೊಂಡೆ. ಹಿಂದೆ ಆ ಮನೆಯಿಂದ ಪಂಪಾ ವಿರೂಪಾಕ್ಷನ ಉತ್ಸವಮೂರ್ತಿಯನ್ನು ಹೊರುತ್ತಿದ್ದ ಮರದ ಪಲ್ಲಕ್ಕಿ, ಲೋಹದ ನಂದಿ ವಿಗ್ರಹಗಳಂತಹ ವಸ್ತುಗಳನ್ನು ತೆಗೆದು ವಿರೂಪಾಕ್ಷನ ಮೂರ್ತಿಯನ್ನು ಸದಾ ಹೃದಯದಲ್ಲಿ ಧರಿಸಿದ್ದ ಹರಿಹರನಿಗೆ ವಾಸಕ್ಕೆ ಅನುಕೂಲ ಮಾಡಿಕೊಟ್ಟಿದ್ದರು, ಅಲ್ಲಿನ ದೇವಾಲಯದ ಅಧಿಕಾರಿಗಳು. ಆರ್ಕಿಮಿಡೀಸ್ ಎಂಬ ಗ್ರೀಕ್ ಗಣಿತಶಾಸ್ತ್ರಜ್ಞ (ಕ್ರಿ.ಪೂ. 3ನೇ ಶ.) ರಾಜನ ಚಿನ್ನದ ಕಿರೀಟವನ್ನು ಮಾಡುವಲ್ಲಿ ಅಕ್ಕಸಾಲಿಗನಿಂದ ವಂಚನೆ ನಡೆದಿದೆಯೇ ಇಲ್ಲವೇ ಎಂಬುದನ್ನು ಪರಿಶೀಲಿಸುತ್ತಿದ್ದ. ಆ ಬಗ್ಗೆ ಚಿಂತನೆ ನಡೆದಿದ್ದ ಸಂದರ್ಭದಲ್ಲಿ ಅವನು ಒಮ್ಮೆ ಸ್ನಾನ ಮಾಡುತ್ತಿದ್ದಾಗ, ಅಂತಹ ಸಮಸ್ಯೆಗೆ ಇರುವ ಪರಿಹಾರವು ಹೊಳೆದು ಅವನು ಆನಂದೋದ್ರೇಕದಿಂದ "Eureka" (I have found it) ಎಂದು ಕೂಗುತ್ತ ಬೆತ್ತಲೆಯಲ್ಲೇ ರಸ್ತೆಗೆ ಓಡಿದನೆಂಬುದು ಪ್ರಸಿದ್ಧ ವಿಷಯ.

ಒಂದೆರಡು ರೊಟ್ಟಿಗಳನ್ನು ಹೆಚ್ಚಾಗಿ ತಿಂದೆನೋ ಅಥವಾ ಅಪೂರ್ವ ಶೋಧವೊಂದರ ತೃಪ್ತಿಯಿಂದಾಗಿ ಏನೂ ತಿನ್ನಲಿಲ್ಲವೋ ನೆನಪಿಲ್ಲ. ಮೂರು ಸುತ್ತಾಟಗಳ ಶ್ರಮವು ಕೆಲವು ನಿಮಿಷಗಳಲ್ಲಿ ಪರಿಹಾರವಾಗಿತ್ತು. ಬೆಂಗಳೂರಿಗೆ ಬಂದು ಆ ಶೋಧವನ್ನು ಪತ್ರಿಕಾಗೋಷ್ಠಿಯಲ್ಲಿ

ಬಹಿರಂಗಪಡಿಸಿದ ಮೇಲೆ Illustrated weekly of India ಪತ್ರಿಕೆ "In Search of a Poet's Home" ಎಂಬ ಕಿರುಲೇಖನವನ್ನೇ ಪ್ರಕಟಿಸಿತು.

### ಹಂಪಿ : ಚಾಮರಸನ ಗುಹೆ

ಪ್ರವಾಸಕ್ಕಾಗಿ ನನ್ನ ಎಂ.ಎ. ವಿದ್ಯಾರ್ಥಿಗಳನ್ನು ಕರೆದೊಯ್ದಾಗ ಹಂಪಿಯ ಪುರಾತತ್ವ ವಿಭಾಗದ ಡಾ. ಸುಬ್ರಹ್ಮಣ್ಯಂ ಅವರು ಶಾಸನವೊಂದನ್ನು ತೋರಿಸಲು ಕರೆದೊಯ್ದರು. ಉದ್ದಾನ ವೀರಭದ್ರಸ್ವಾಮಿ ಗುಡಿಯಿಂದ ಕಾಮಲಾಪುರಕ್ಕೆ (ಇದೇ ಆ ಊರ ನಿಜವಾದ ಹೆಸರು) ಹೋಗುವ ರಸ್ತೆಯ ಎಡಕ್ಕೆ ಹಂಪಾದೇವಿಯ ದಿಡ್ಡಿ ಬಳಿ ಒಂದು ಗುಹೆ. ಆ ಗುಹೆಯ ಹಿಂಭಾಗದ ದೊಡ್ಡ ಬಂಡೆಯ ಮೇಲೆ ಕೆತ್ತಿರುವ ಹದಿನೈದನೇ ಶತಮಾನದ ಶಾಸನವನ್ನು ನಾನು ಓದುತ್ತಿದ್ದಂತೆ ಚಾಮರಸ ನನ್ನ ಮನಸ್ಸಿನ ಭಿತ್ತಿಯ ಮೇಲೆ ಮೂಡಿದ. ಆ ಇಡೀ ಶಾಸನದ ಪದ್ಯ ಹೀಗಿತ್ತು :

**"ಶ್ರೀ ಗುರುಗುಹೇಶ್ವರಾಶ್ರಮವೀ ಗುರುಗಿರಿಯಿದರೊಳಗಿಷ್ಟದೈವ**
**ಧ್ಯಾನೋದ್ಯೋಗದೊಳಿರ್ಪರ್ಗೆಯ್ದುವುವಾಗಳ್ ಧರ್ಮಾರ್ಥಕಾಮಮೋಕ್ಷಫಲಂಗಳ್"**

"ಗುರುಗುಹೇಶ್ವರ" ಎಂದ ಕ್ಷಣ ಜ್ಞಾಪಕವಾಗುವುದು ಚಾಮರಸ ಮತ್ತು ಅವನ ಕೃತಿ ಪ್ರಭುಲಿಂಗಲೀಲೆ. ಕವಿ ಆ ಕೃತಿಯಲ್ಲಿ ಅಲ್ಲಮಪ್ರಭುವನ್ನು ಗುರುಗುಹೇಶ್ವರನೆಂದೇ ಉದ್ದಕ್ಕೂ ಕರೆದಿದ್ದಾನೆ. ಹಂಪಿಯ ನಿವಾಸಿಯಾಗಿದ್ದ ಚಾಮರಸನು (ಕ್ರಿ.ಶ. 1430) ಆ ಗುಹೆಯಲ್ಲಿ ವಾಸವಾಗಿದ್ದನೆಂಬುದರಲ್ಲಿ ಯಾವುದೇ ಅನುಮಾನವಿಲ್ಲ. ಆ ಗುಹೆಯ ಮುಂಭಾಗದ ಬಯಲೇ 'ಗುರುಗುಹೇಶ್ವರಾಶ್ರಮ!'

ಆ ಗುಹೆಯ ಒಳಗೆ ಹಾಸು ಬಂಡೆಯ ಮೇಲೆ ಕುಳಿತು ಪೂಜೆ ಮಾಡಿಕೊಳ್ಳಲು ಒಂದು ಚೌಕಾಕಾರದ ರೇಖಾವಿನ್ಯಾಸವನ್ನೂ ಕೆತ್ತಿ ಅಲ್ಲಿ ಇಷ್ಟಲಿಂಗ ಪೂಜೆ ಮಾಡಿದ ನೀರು ಹರಿದುಹೋಗಲು ಬೆರಳಗಲದ ಚಿಕ್ಕ ಕಾಲುವೆ ಕೆತ್ತಿದ್ದಾರೆ. ಚಾಮರಸ ಅಲ್ಲಿ ಕುಳಿತು ಪೂಜಾಧ್ಯಾನಾದಿಗಳನ್ನು ಮುಗಿಸಿ ತನ್ನ ಕಾವ್ಯರಚನೆ ಕೂಡ ಮಾಡಿರಬಹುದು. ಬಂಡೆಯ ಗುಹೆಯ ಕೆಳಗೆ ನೆಲದ ಮೇಲೆ ಹೊಲದ ಅಂಚಿನಲ್ಲಿರುವ ಇನ್ನೊಂದು ಬಂಡೆ ಮೇಲೆ ಲಿಂಗ, ಬಸವಗಳನ್ನು ಕೆತ್ತಿದ್ದು "ಸಂಗನಬಸವ" ಎಂಬ ಶಾಸನವಿದೆ.

ಹಂಪಿಯಲ್ಲಿ ಇಬ್ಬರು ಕನ್ನಡ ಮಹಾಕವಿಗಳ ವಾಸಸ್ಥಾನಗಳನ್ನು ಗುರುತಿಸಿದ ಭಾಗ್ಯ ನನ್ನದಾಯಿತು. ಪಾಶ್ಚಿಮಾತ್ಯರು ತಮ್ಮ ಹಿಂದಿನ ಕವಿಗಳ ಎಲ್ಲ ಕುರುಹುಗಳನ್ನು ಹಾಗೇ ಸಂರಕ್ಷಿಸುತ್ತಾರೆ. ನಮ್ಮಲ್ಲಿ !

### ಹಂಪಿ, ವ್ಯಾಟಿಕನ್ : 'ಮನ್ಮುಖತೀರ್ಥ' ಇತ್ಯಾದಿ

ರಾಘವಾಂಕನ ಹರಿಶ್ಚಂದ್ರ ಕಾವ್ಯದ ಒಂದು ಪ್ರಸಂಗ. ವಿಶ್ವಾಮಿತ್ರನಿಗೆ ಹರಿಶ್ಚಂದ್ರ ಇಡೀ ಭೂಮಂಡಲವನ್ನು ಧಾರೆ ಎರೆದ ಮೇಲೆ, ಹಿಂದೆ ತಾನು ನ್ಯಾಸವಾಗಿ ಇಟ್ಟುಕೊಳ್ಳಲು

ನೀಡಿದ್ದ ಐಶ್ವರ್ಯವನ್ನು ತನಗೆ ಹಿಂದಿರುಗಿಸಲು ವಿಶ್ವಾಮಿತ್ರ ಒತ್ತಾಯಿಸುತ್ತಾನೆ. ನಿರ್ಗತಿಕನಾಗಿದ್ದ ಹರಿಶ್ಚಂದ್ರ ಇಲ್ಲವೇ ಐಶ್ವರ್ಯವನ್ನು ಹಿಂದಿರುಗಿಸಬೇಕು, ಅದು ತಪ್ಪಿದರೆ ವಿಶ್ವಾಮಿತ್ರನ ಹೊಲತಿ ಮಕ್ಕಳನ್ನು ಮದುವೆಯಾಗಬೇಕು. ಅವನು ದುಡಿದು ಆ ನ್ಯಾಸದ ಐಶ್ವರ್ಯವನ್ನು ಹಿಂದಿರುಗಿಸಲು ವಿಶ್ವಾಮಿತ್ರನ ಅನುಮತಿ ಇಲ್ಲ. ಏಕೆಂದರೆ ಈಗ ವಿಶ್ವಾಮಿತ್ರ ಇಡೀ ಭೂಮಂಡಲದ ಒಡೆಯ. ಆಗ ಹರಿಶ್ಚಂದ್ರ ಹೇಳುವ ಮಾತೊಂದು ನನ್ನ ವಿಶೇಷ ಗಮನ ಸೆಳೆದು ಏನೋ ವಿಶೇಷ ಅರ್ಥವನ್ನು ಪಡೆಯಿತು - "ನಿನ್ನ ವಶಕ್ಕೆ ಇಡೀ ಭೂಮಂಡಲ ಬಂದಿದ್ದರೂ, ಕಾಶಿ ಹಂಪಿಗಳಿಗೆ ಮಾತ್ರ ನೀನು ಒಡೆಯನಲ್ಲ. ಕಾಶಿಗೆ ವಿಶ್ವೇಶ್ವರ (ಪು.435 ನೋಡಿ) ಹಂಪಿಗೆ ವಿರೂಪಾಕ್ಷ ಇವರು ಒಡೆಯರು. ಅಲ್ಲಿ ನಾನು ದುಡಿಯಲು ನಿನ್ನ ಅನುಮತಿ ಬೇಕಿಲ್ಲ. ಹಂಪಿ ದೂರವಾದ್ದರಿಂದ ನಾನು ಕಾಶಿಗೆ ಹೋಗಿ ಅಲ್ಲಿ ದುಡಿದು ನಿನ್ನ ನ್ಯಾಸದ ಹಣ ತೀರಿಸುತ್ತೇನೆ". ಹರಿಹರನು ತನ್ನ ಪಂಪಾಕ್ಷೇತ್ರದ ರಗಳೆಯಲ್ಲಿ ಹಂಪಿಯ ನಾಲ್ಕು ಗಡಿಗಳ ಹೆಸರು ಹೇಳಿ, ಆ ವ್ಯಾಪ್ತಿಯ ಒಳಗಿನ ಪ್ರದೇಶಕ್ಕೆ ವಿರೂಪಾಕ್ಷನೇ ಒಡೆಯನೆನ್ನುವುದು, ಮತ್ತೆ ಮತ್ತೆ ತನ್ನ ಆರಾಧ್ಯ ದೈವವನ್ನು "ಪಂಪಾಪುರದ ಒಡೆಯ" ಎಂದೇ ವರ್ಣಿಸುವುದು, ಹರಿಹರನಾದ ಮೇಲೆ ಆ ಪ್ರದೇಶದಲ್ಲಿ ತಲೆಯೆತ್ತಿದ ವಿಜಯನಗರ ಸಾಮ್ರಾಜ್ಯದ ದೊರೆಗಳು ತಮ್ಮ ದಾನಪತ್ರಗಳ ಕೊನೆಯಲ್ಲಿ ತಮ್ಮ ಹೆಸರಿನ ಬದಲು ವಿರೂಪಾಕ್ಷನ ಹೆಸರನ್ನೇ ಹಾಕಿಸುತ್ತಿದ್ದುದು ಜ್ಞಾಪಕಕ್ಕೆ ಬಂದಿತು. ಪಂಪಾಕ್ಷೇತ್ರವು ಹರಿಹರನ ಕಾಲದಲ್ಲಿ ಯಾವುದೇ ಮನುಷ್ಯ ದೊರೆಯ ಅಧೀನದಲ್ಲೂ ಇರದೆ ಅದಕ್ಕೆ ತಾತ್ವಿಕವಾಗಿ ವಿರೂಪಾಕ್ಷನೇ ಒಡೆಯನಂತೆ ನಡೆದುಕೊಂಡು ಹೋಗುತ್ತಿದ್ದಿರಬಹುದೇ ಎಂಬ ಆಲೋಚನೆ ಹೊಳೆಯುತ್ತಿದ್ದಂತೆ 1968ರಲ್ಲಿ ನಾನು ಕಂಡ, ರೋಮ್ ಭಾಗವಾಗಿರುವ ವ್ಯಾಟಿಕನ್ ಆಲೋಚನೆಯ ಜೊತೆ ಸೇರಿತು. ವ್ಯಾಟಿಕನ್ ಇಂದಿಗೂ ಸರ್ವತಂತ್ರಸ್ವತಂತ್ರ ರಾಷ್ಟ್ರ. ಅದರ ವಿಸ್ತೀರ್ಣ ಹಂಪಿಯ ಕನ್ನಡ ವಿಶ್ವವಿದ್ಯಾಲಯ ಕ್ಯಾಂಪಸ್ಸಿಗಿಂತ ಚಿಕ್ಕದಿದ್ದರೂ ಆ ವ್ಯಾಟಿಕನ್ ರಾಷ್ಟ್ರಕ್ಕೆ ಪೋಪರೇ ಚಕ್ರವರ್ತಿ. ವ್ಯಾಟಿಕನ್ ಮೇಲೆ ಇಟಲಿಗೆ ಯಾವುದೇ ಅಧಿಕಾರವೂ ಇಲ್ಲ. ವ್ಯಾಟಿಕನ್ನಿಗೆ ಔಪಚಾರಿಕವಾಗಿ ತನ್ನದೇ ಅಂಚೆ ಚೀಟಿ, ಸೈನ್ಯ, ಧ್ವಜ, ನಾಣ್ಯ ಇತ್ಯಾದಿ ಉಂಟು. ಹನ್ನೆರಡನೇ ಹದಿಮೂರನೇ ಶತಮಾನಗಳಲ್ಲಿ ಕರ್ನಾಟಕದಲ್ಲೊಂದು ವ್ಯಾಟಿಕನ್ ಹೋಲುವ ಪ್ರದೇಶವಾಗಿತ್ತು ಹಂಪಿ.

ಅದನ್ನು ಖಚಿತಪಡಿಸುವ ಶಾಸನಾಧಾರವು ನಾಗನಾಥ ದೇವಾಲಯದ ಸಮೀಪದ 1199ರ ಶಾಸನದಲ್ಲಿ ದೊರಕಿತು. ವಿರೂಪಾಕ್ಷ ಎಷ್ಟೇ ಆಗಲಿ ಒಂದು ಮೂರ್ತಿ ತಾನೇ! ಆ ಕಾರಣ, ಹಂಪಿಯ ರಕ್ಷಣೆಗೆ ಇರಲಿ ಎಂದು ಕುರುಗೋಡಿನ ನಾಯಕರು "ವಿರೂಪಾಕ್ಷ ತೀರ್ಥ ಸಂರಕ್ಷಣಾರ್ಥ"ವಾಗಿ ಮತಂಗ ಪರ್ವತದ ಮೇಲೆ ಒಂದು ಸೈನ್ಯವನ್ನಿಟ್ಟಿದ್ದ ವಿಷಯ ಆ ಶಾಸನದಲ್ಲಿದ್ದು ಹೆಚ್ಚಿನ ಅರ್ಥ ಪಡೆಯಿತು. ಆ ಮಾಹಿತಿ ನನ್ನ ಪ್ರಮೇಯವನ್ನು ಬಹುವಾಗಿ ದೃಢೀಕರಿಸಿತು. ಹಂಪಿಯ ದೈನಂದಿನ ಸರಳ ಆಡಳಿತವನ್ನು ಅಲ್ಲಿಯ ಅರ್ಚಕರೂ ಬ್ರಾಹ್ಮಣವರ್ಗದವರೂ ನೋಡಿಕೊಳ್ಳುತ್ತಿದ್ದರು. 'ಆಡಳಿತ'ದ ಆಗತ್ಯವಾದರೂ ಅಲ್ಲಿ ಏನಿತ್ತು?- ಚಿಕ್ಕ ಪ್ರದೇಶ, ತೀರ್ಥಕ್ಷೇತ್ರ ಅದಾಗಿದ್ದುದರಿಂದ.

ಮೇಲಿನ ಸಂಗತಿಯು ಎರಡು ವಿಷಯಗಳ ಮೇಲೆ ಸ್ವಾಗತಾರ್ಹ ಬೆಳಕನ್ನು ಬೀರಿತು. ಮನುಷ್ಯರನ್ನು ಹೊಗಳಿ ಕಾವ್ಯ ಬರೆದು ಕೆಡಬೇಡಿರಿ, ಹೊಗಳುವುದಾದರೆ ವಿರೂಪಾಕ್ಷನನ್ನೇ ಹೊಗಳಿರೆಂದು ದಿಟ್ಟವಾಗಿ ಸಾರುವ ಧೈರ್ಯ ಹರಿಹರನಿಗೆ ಎಲ್ಲಿಂದ ಬಂತು ? ರಾಜಶಾಹಿಯ ಸೋಂಕೇ ಇಲ್ಲದ ಸ್ವತಂತ್ರ ವಾತಾವರಣದಲ್ಲಿ ಹುಟ್ಟಿ ಬೆಳೆದ ಅವನ ಪರಿಸರವೇ ಆ ಧೈರ್ಯವನ್ನು ತಂದುಕೊಟ್ಟಿತ್ತು. ಮುಂದೆ ಪರಕೀಯರ ಆಕ್ರಮಣದಿಂದ ಸನಾತನ ಸಂಸ್ಕೃತಿಯನ್ನು ರಕ್ಷಿಸಲು ಪಣತೊಟ್ಟು ಆರಂಭವಾದ ವಿಜಯನಗರ ಸಾಮ್ರಾಜ್ಯವು ಹಂಪಿಯನ್ನು ಕೇಂದ್ರ ಮಾಡಿಕೊಳ್ಳಲು ಅದೇ ವಾತಾವರಣ ಮತ್ತು ಅದರ ದುರ್ಗಮ ಆಯಕಟ್ಟು ಎರಡೂ ಕಾರಣವಾದವು. ಹಕ್ಕ ಬುಕ್ಕರಿಗೆ ನವರಾಜ್ಯ ನಿರ್ಮಾಣಕ್ಕಾಗಿ ಭುವನೇಶ್ವರಿ ದೇವಿಯು ಚಿನ್ನದ ಮಳೆ ಸುರಿಸಿದಳು ಎಂಬ ಕಥೆಯ ಹಿಂದೆ ಇರುವ ಐತಿಹಾಸಿಕ ವಾಸ್ತವವೂ ಸೂಚಿತವಾಗುತ್ತದೆ. ರಾಜ ರಾಣಿಯರ ಅಧಿಕಾರ ಭೋಗಕ್ಕೆ ಯುದ್ಧಕ್ಕೆ ವ್ಯರ್ಥವಾಗಿ ಆ ತೀರ್ಥಕ್ಷೇತ್ರದ ಹಣ ಖರ್ಚಾಗಿರಲಿಲ್ಲ. ಆ ಐಶ್ವರ್ಯವು ಉದಾತ್ತ ಉದ್ದೇಶಕ್ಕಾಗಿ ಹಕ್ಕ ಬುಕ್ಕರಿಗೆ ದೇವಾಲಯದಿಂದ ಲಭ್ಯವಾಯಿತು. ಮೊದ ಮೊದಲ ವಿಜಯನಗರ ದೊರೆಗಳು ವಿರೂಪಾಕ್ಷನೇ ರಾಜ, ತಾವು ಅವನ ಪ್ರತಿನಿಧಿಗಳೆಂದು ಭಾವಿಸಿ ರಾಜ್ಯವಾಳಿದರು. ತಮ್ಮ ದಾನಪತ್ರಗಳನ್ನು ರಾಜಾಜ್ಞೆಗಳನ್ನು ತಮ್ಮ ಹೆಸರುಗಳ ಬದಲು ವಿರೂಪಾಕ್ಷನ ಹೆಸರಲ್ಲಿ ಹೊರಡಿಸಲು ಕಾರಣ ಸ್ಪಷ್ಟವಾಗಿದೆ. ಸನ್ನ ಮನಸ್ಸಿಗೆ ಬಹು ಸಮಾಧಾನ ತಂದುಕೊಟ್ಟ ಶೋಧ ಅದು.

ಹಂಪಿಯ ನಾಲ್ಕೂ ಗಡಿಗಳನ್ನು ಬಸ್ಸಿನಲ್ಲಿ ವಿದ್ಯಾರ್ಥಿಗಳ ಜೊತೆ ಹೋಗಿ ನೋಡಿಕೊಂಡು ಬಂದೆ. ನಾಲ್ಕೂ ದೇವಾಲಯಗಳೇ. ಪೂರ್ವಕ್ಕೆ ಕಿನ್ನರೇಶ್ವರ, ದಕ್ಷಿಣಕ್ಕೆ ಜಂಬುಕೇಶ್ವರ, ಪಶ್ಚಿಮಕ್ಕೆ ಸೋಮೇಶ್ವರ, ಉತ್ತರಕ್ಕೆ ವಾಣಿಭದ್ರೇಶ್ವರ : ಈ ದೇವಾಲಯಗಳು ವಿರೂಪಾಕ್ಷ ದೇವಾಲಯದಿಂದ ಸುಮಾರು 10-12 ಕಿ.ಮೀ. ಧೂರದಲ್ಲಿವೆ. ಕಿನ್ನರೇಶ್ವರ ಹೊರತುಪಡಿಸಿ ಉಳಿದುವೆಲ್ಲ ಬೆಟ್ಟದ ಮೇಲಿವೆ (ಕಿನ್ನರೇಶ್ವರವೂ ಮೂಲತಃ ಸಮೀಪದ ಬೆಟ್ಟದ ಮೇಲಿತ್ತೆಂಬ ಮಾತು ಕೇಳಿಬಂದಿದೆ). ಇಳಿಜಾರಿನ ಸೋಮೇಶ್ವರ ಬೆಟ್ಟದ ಮೇಲೆ ಕತ್ತಲೆಯ ಗುಹೆಯ ಒಳಗೆ ಶಿವಲಿಂಗವಿದ್ದು ಹೊರಗೆ ಬಂಡೆ ಮೇಲೆ ಶಾಸನವಿದೆ. ಹಿಂದೆ ಶಿವರಾತ್ರಿಗೆ ಮುನ್ನ ಆ ನಾಲ್ಕೂ ದೇವಾಲಯಗಳ ದರ್ಶನ ಮಾಡಿ ಕೊನೆಯ ದಿನ ವಿರೂಪಾಕ್ಷನ ದರ್ಶನವನ್ನು ಜನ ಮಾಡುತ್ತಿದ್ದರು. ಆ ಕ್ರಮ ಹೀಗಿದೆ. ಮೊದಲು ವಿರೂಪಾಕ್ಷನ ದರ್ಶನ ಮಾಡಿ ಅವನ ಅಪ್ಪಣೆ ಪಡೆದು ನಡೆದೇ ಹೋಗಿ ಕಿನ್ನರೇಶ್ವರ ದೇವರನ್ನು ದರ್ಶನ ಮಾಡಿ ವಾಪಸ್ ಹಂಪಿಗೆ ಬಂದು ವಿರೂಪಾಕ್ಷನಿಗೆ ವರದಿ ಮಾಡಿ ಇನ್ನೊಂದು ದೇವರ ದರ್ಶನಕ್ಕೆ ಹೋಗಬೇಕು. ಹೀಗೆ ನಾಲ್ಕೂ ದೈವಗಳ ದರ್ಶನವಾದ ಮೇಲೆ ಅಂತಿಮವಾಗಿ ಶಿವರಾತ್ರಿಯ ದಿನ ವಿರೂಪಾಕ್ಷನ ದರ್ಶನ ಮಾಡಬೇಕು. (ಇದು ತಲಕಾಡಿನ ಪಂಚಲಿಂಗೇಶ್ವರ ದರ್ಶನವನ್ನು ಹೋಲುತ್ತದೆ) ಮೇಲ್ಕಂಡ ಪದ್ಧತಿಯು ಹಂಪಿಯು ವಿರೂಪಾಕ್ಷ ಕೇಂದ್ರಿತ ಪ್ರದೇಶವಾಗಿತ್ತೆಂಬುದಕ್ಕೆ ಒಂದು ಪೋಷಕಾಧಾರ. ಕುಮಾರವ್ಯಾಸನು ತನ್ನ ಕನ್ನಡ ಭಾರತದಲ್ಲಿ ರಾಜಸೂಯಯಾಗಕ್ಕೆ ಮೊದಲು ದಕ್ಷಿಣದ ರಾಜರನ್ನು ಪಾಂಡವ ಸೇನೆ ಗೆದ್ದುದನ್ನು ಹೇಳುವಾಗ

ಬೇರೆ ಬೇರೆ ರಾಜ್ಯಗಳ ಹೆಸರು ಹೇಳುತ್ತ ಆ ಸೇನೆಯು ತುಂಗಭದ್ರಾ ನದಿ ದಾಟಿ 'ವಿರೂಪಾಕ್ಷ ಸೀಮೆ'ಗೆ ಬಂದಿತೆನ್ನುತ್ತಾನೆ. ಅದನ್ನು ಗೆಲ್ಲುವ ಪ್ರಶ್ನೆಯೇ ಇಲ್ಲ ತಾನೇ! ಹರಿಹರನ ಬಳಿಕ ಕೆಲವು ಕವಿಗಳು ವಿರೂಪಾಕ್ಷನ 'ಆಸ್ಥಾನ'ದಲ್ಲಿ ನಡೆದ ಸಂಗೀತ ಗೋಷ್ಠಿಗಳನ್ನು ವರ್ಣಿಸಿದ್ದಾರೆ, ಅವನೊಬ್ಬ ಚಕ್ರವರ್ತಿ ಎಂಬಂತೆ ಕಲ್ಪಿಸಿ.

ಕಾಶಿಯಲ್ಲೂ ಅಂತಹುದೇ ವ್ಯವಸ್ಥೆ ಹಿಂದೆ ಇತ್ತೆಂದು ಸೂಚಿಸಿ ಅಲ್ಲಿನ ಈಗಿನ ರಾಜರ ಅರಮನೆಯಿಂದ ನನ್ನ ಪತ್ರಕ್ಕೆ ಉತ್ತರವು ಬಂದಿತಾದರೂ ಹೆಚ್ಚಿನ ವಿವರಗಳನ್ನು ಮತ್ತೆ ತಿಳಿಸುತ್ತೇವೆ ಎಂಬ ಅವರ ಮಾತು ಹಾಗೆಯೇ ಉಳಿದುಬಿಟ್ಟಿತು.* ತಿರುವನಂತಪುರದ ಅನಂತಪದ್ಮನಾಭದೇವರ ಹೆಸರಲ್ಲಿ ಅಲ್ಲಿನ ದೊರೆಗಳು ಹಿಂದೆ ರಾಜ್ಯಭಾರ ಮಾಡುತ್ತಿದ್ದರೆಂಬುದನ್ನು ನಾನು ಕೇಳಿದ್ದೇನೆ. ಹಂಪಿಯು 1199ರ ಶಾಸನದಲ್ಲಿ ದೊರವದಿ ನಾಡಲ್ಲಿದ್ದಿತೆಂದು ಹೇಳಲಾಗಿದೆ. ದೊರವದಿಯೇ ಈಗಿನ ದರೋಜಿ. ಅಲ್ಲಿಗೆ ನಾನು ಹೋದಾಗ ನನಗೆ ದೊರಕಿದ ಮಾಹಿತಿ: ಅದು ಹಿಂದೆ ಹಂಪಿ ಪ್ರದೇಶಕ್ಕೆ ಪ್ರವೇಶ ದ್ವಾರದಂತಿದ್ದಿತು. ಮತ್ತು ಅಲ್ಲಿಯ ಜನ ಈಗಲೂ ವಿರೂಪಾಕ್ಷನ ರಥದ ಮಿಣಿಯನ್ನು ಮೊದಲಲ್ಲಿ ಹಿಡಿದು ಎಳೆಯುವ ಹಕ್ಕನ್ನು ಹೊಂದಿದ್ದಾರೆ. ದರೋಜಿಯಿಂದ ಸಂಜೆ ಹೊರಟು ರಾತ್ರಿ ಬೆಳದಿಂಗಳಲ್ಲಿ ಯಾವುದೇ ಊರೂ ದಾರಿಯಲ್ಲಿಲ್ಲದ ಗುಡ್ಡಗಳ ಮಧ್ಯದ ಅಪ್ಪಟ ನಿರ್ಜನ ಪ್ರದೇಶದಲ್ಲಿ ವಾಹನದಲ್ಲಿ ಬರುವಾಗ ಸ್ವಲ್ಪ ಆತಂಕವನ್ನೂ ಅನುಭವಿಸಿ ಎಂಟು ಹತ್ತು ಕಿಲೋಮೀಟರ್ ಬಂದ ಮೇಲೆ ಆ ಹೊತ್ತಿಗೆ ಮಲಗಿದ್ದ ಹಳ್ಳಿಯನ್ನು ಕಂಡು ಸಮಾಧಾನದ ಉಸಿರೆಳೆದವು. ಪಾಪ, ಸಂಶೋಧಕನೂ ಎಷ್ಟೇ ಆಗಲಿ ಬದುಕಬೇಕು ತಾನೇ!

ಹಂಪಿಯಲ್ಲಿ ಸಿದ್ದಜ್ಜ ಎಂಬ ವಯಸ್ಕನು ಬಾಲ್ಯದಲ್ಲೇ ಅಲ್ಲಿಗೆ ಬಂದು ವಿರೂಪಾಕ್ಷ ದೇವಾಲಯದಲ್ಲಿ ಕೆಲಸಗಾರನಾಗಿ ಸೇರಿಕೊಂಡಿದ್ದವನು. ಆ ಕಾಲದಲ್ಲಿ ಸಂಜೆಯಾಗುತ್ತಲೇ ಅರ್ಚಕರು ಹೊರಗಿದ್ದವರನ್ನು ಕೂಗಿ ಒಳಗೆ ಸೇರಿಸಿ ಮುಂದಿನ ಬಾಗಿಲನ್ನು ಹಾಕುತ್ತಿದ್ದರು. ರಾತ್ರಿ ಹುಲಿ ಕರಡಿ ಚಿರತೆಗಳ ಕೂಗು ಕೇಳಿಸುತ್ತಿತ್ತು. ಅವನು ಒಮ್ಮೆ ಪ್ರಾಸಂಗಿಕವಾಗಿ ಮಾತನಾಡುತ್ತ "ಮನ್ಮಥ ಕುಂಡದ ನಿಜವಾದ ಹೆಸರು ಮನ್ಮುಕ ಕುಂಡ" ಎಂದಾಗ ನಾನು ಒಂದು ಕ್ಷಣ ಚಕಿತನಾದೆ. ಎಲ್ಲರೂ ಒಪ್ಪಿ ಬಳಸುತ್ತಿರುವ ಅರ್ಥಪೂರ್ಣ ಹೆಸರು ತಪ್ಪು ಎಂದು ಆತ ಹೇಳುವುದರಲ್ಲಿ ಏನೋ ಸತ್ಯವಿದೆ ಎನ್ನಿಸಿತು. ಮುಂದೆ ಮೇಲೆ ಹೇಳಿದ 1199ರ ಹಂಪಿಯ ಶಾಸನದಲ್ಲಿ "ಮನ್ಮುಖ ತೀರ್ಥ" ಎಂಬ ಹೆಸರನ್ನು ಕಂಡಾಗ "ಭೇಷ್ ಸಿದ್ಧಜ್ಜ" ಎಂದು ಬೆಂಗಳೂರಿನಿಂದಲೇ ಅವನ ಭುಜ ಚಪ್ಪರಿಸಿದೆ. ನಾಗರಿಕ ಸಮಾಜದ ಲಿಖಿತ ದಾಖಲೆಗಳು ಒಂದು ಉಕ್ತಿಯ ಅಥವಾ ಹೆಸರಿನ ಬದಲಾದ ರೂಪವನ್ನು ಹಿಡಿದಿಟ್ಟರೂ, ಜೀವಂತ ದಾಖಲೆಗಳಾದ ಅನಕ್ಷರಸ್ಥರ ನಾಲಗೆಗಳು ಮೂಲ ರೂಪವನ್ನು

---

* 435ನೇ ಪುಟ ನೋಡಿ.

ಉಳಿಸಿಕೊಂಡಿರುವುದು ಹಲವು ಬಾರಿ ನನ್ನ ಅನುಭವಕ್ಕೆ ಬಂದಿದೆ. ಶ್ರೀಮತ್ + ಮುಖತೀರ್ಥ → ಶ್ರೀಮನ್ಮುಖತೀರ್ಥ ಹೀಗೆ ಬಿಡಿಸದೆ, 'ಶ್ರೀ + ಮನ್ಮುಖತೀರ್ಥ' ಹೀಗೆ ಬಿಡಿಸಿದುದರಿಂದ ಉಂಟಾದ ಪರಿಣಾಮವೇ ಮನ್ಮುಖತೀರ್ಥ (ತೀರ್ಥ = ಕುಂಡ).

ಹಂಪಿಯ ವಿರೂಪಾಕ್ಷ ದೇವಾಲಯದ ಹಿಂಬದಿಯ ತೋಟಗಳ ಮಧ್ಯದ ದಾರಿಯಲ್ಲಿ ಒಂದು ದಿನ ಬೆಳಿಗ್ಗೆ ಪ್ರಕೃತಿ ಸೌಂದರ್ಯವನ್ನು ಆಸ್ವಾದಿಸುತ್ತ ಹೋಗುತ್ತಿರುವಾಗ ಒಂದು ಬಂಡೆಯ ಮೇಲೆ ಏನೋ ಗುರುತುಗಳು ಕಂಡು ಕುತೂಹಲದಿಂದ ಅವನ್ನು ಅಲ್ಲೇ ಇದ್ದ ನೀರಿನಿಂದ ತೊಳೆದು ನೋಡಿದಾಗ ಅವು ಇತಿಹಾಸಪೂರ್ವ ಕಾಲದ ಬಂಡೆ ಚಿತ್ರಗಳಾಗಿದ್ದುದನ್ನು ಕಂಡು ಆನಂದ ತುಂದಿಲನಾದೆ. ಅಲ್ಲಿಯವರೆಗೆ ಹಲವು ಬಂಡೆ ಚಿತ್ರಗಳನ್ನು ಪುಸ್ತಕಗಳಲ್ಲಿ ಕಂಡಿದ್ದವನಿಗೆ ಅವನ್ನು ಪ್ರತ್ಯಕ್ಷ ಕಂಡಾಗ, ನಾನೇ ಪ್ರಪ್ರಥಮವಾಗಿ ಗುರುತಿಸಿದಾಗ ಆದ ಅನುಭವವನ್ನು ಊಹಿಸಿಕೊಳ್ಳಬಹುದು. ಹಾಗೆಯೇ ಅಲ್ಲಿಗೆ ಸಮೀಪದ 'ಅರಸರ ಗವಿ'ಯಲ್ಲಿ ಗೋಡೆ ಕಟ್ಟಿ ಮಾಡಿದ ಒಂದು ವಾಸದ ಕೋಣೆಯಲ್ಲಿ ಸುಣ್ಣ ಬಳಿದ ಬಂಡೆಯ ಮೇಲೆ ವಿಜಯನಗರದ ಕಾಲದ ಭಿತ್ತಿ ಚಿತ್ರಗಳನ್ನು ಗುರುತಿಸಿ ಸಂತೋಷಪಟ್ಟಿದ್ದೆ. ಈ ಭಿತ್ತಿ ಚಿತ್ರಗಳ ಸೂಚನೆ ನೀಡಿದವರು ಹಂಪಿಯ ಶ್ರೀ ಸದಾಶಿವಯೋಗಿಗಳು.

### ತೆಲಂಗಾಣದಲ್ಲಿ ಪಂಪನ ಬಗ್ಗೆ

1966ರ ಸುಮಾರಿನಲ್ಲಿ ಮೈಸೂರು ಮಾನಸಗಂಗೋತ್ರಿಯ ಆವರಣದಲ್ಲಿ ಭಾರತೀಯ ಇತಿಹಾಸ ಸಮ್ಮೇಳನವು ನಡೆಯಿತು. ನಾನು ಎರಡನೆಯ ದಿನದ ಬೆಳಿಗ್ಗೆ ಮೊದಲ ವಿಚಾರಗೋಷ್ಠಿಗೆ ಹೋಗುತ್ತಿದ್ದಾಗ ಎದುರಿಗೆ ಸಿಕ್ಕಿ ಡಾ. ಷಡಕ್ಷರ ಶೆಟ್ಟರ್ ಒಂದು ವಿಷಯ ತಿಳಿಸಿದರು : "ನಿನ್ನೆ ಮಧ್ಯಾಹ್ನದ ಗೋಷ್ಠಿಯಲ್ಲಿ ಪ್ರಸಿದ್ಧ ಇತಿಹಾಸ ತಜ್ಞ ಡಾ. ಎನ್. ವೆಂಕಟರಮಣಯ್ಯನವರು ಪಂಪನ ತಮ್ಮನ ಶಾಸನದ ಬಗ್ಗೆ ಸಂಪ್ರಬಂಧ ಮಂಡಿಸಿಯಾದ ಮೇಲೆ ಯಾರೂ ಪ್ರತಿಕ್ರಿಯೆ ವ್ಯಕ್ತಪಡಿಸಲಿಲ್ಲವೆಂದು ನೊಂದುಕೊಂಡರು". ದೊಡ್ಡ ವಿದ್ವಾಂಸರು, ಜೊತೆಗೆ ಪಂಪನ ತಮ್ಮನ ಶಾಸನ ! ಕಿವಿ ನೇರ ನೆಟ್ಟಗಾದುವು. ಇಬ್ಬರೂ ಇತಿಹಾಸ ಗೋಷ್ಠಿ ಮರೆತು ಗಂಗೋತ್ರಿಯ ವಿದ್ಯಾರ್ಥಿನಿಲಯಕ್ಕೆ ಹೋದಾಗ ಅವರು ಕಚ್ಚೆ ಪಂಚೆ ಕೋಟು ಹಾಕಿಕೊಂಡು ತಲೆಯ ಮೇಲೆ ಟೋಪಿ ಇಟ್ಟುಕೊಳ್ಳುತ್ತಿದ್ದಂತೆ ನಾವು ಕೊಠಡಿಗೆ ಕಾಲಿರಿಸಿದೆವು. ಕೈಯಲ್ಲಿದ್ದ ಅದೇ ತಾನೇ ಪ್ರಕಟವಾಗಿದ್ದ ನನ್ನ ಶಾಸನಗಳ ನಿಬಂಧದ ಪ್ರತಿಯನ್ನು ಅವರಿಗೆ ಕೊಟ್ಟೆ. ಪಂಪನ ತಮ್ಮನ ಶಾಸನದ ವಿಷಯ ಕೇಳಲು ಬಂದಿರುವ ವಿಷಯ ತಿಳಿದ ತಕ್ಷಣ ಅವರು ಟೋಪಿಯನ್ನು ಮೇಜಿನ ಮೇಲಿಟ್ಟು ಉತ್ಸಾಹದಿಂದ ಇಂಗ್ಲಿಷಿನಲ್ಲಿದ್ದ ಇಡೀ ಸಂಪ್ರಬಂಧವನ್ನು ಆಮೂಲಾಗ್ರವಾಗಿ ಓದಿ, "ಇಲ್ಲಿಗೆ ನನಗೆ ಪೂರ್ತಿ ಸಮಾಧಾನವಾಯಿತು" ಎಂದರು. ಆ ಮೂವತ್ತು ನಿಮಿಷ, ಉತ್ಪ್ರೇಕ್ಷೆಯಿಲ್ಲದೆ ಹೇಳುತ್ತೇನೆ, ಇಡೀ ಪ್ರಪಂಚವೇ ನನಗೆ ಮರೆತು ಹೋಗಿತ್ತು. ಆ ಬಗೆಯ ತನ್ಮಯತೆಗೆ ನಾನೆಂದೂ ಹಿಂದೆ ಒಳಗಾಗಿರಲಿಲ್ಲ.

ಅವರೂ ಓದುವುದರಿಂದ ಹೊರಪ್ರಪಂಚಕ್ಕೆ ಬಂದು ನನ್ನ ಪಿಎಚ್.ಡಿ. ನಿಬಂಧದ ಹಾಳೆಗಳನ್ನು ತಿರುವಿ ಹಾಕಿ "ಇಂತಹ ನಿಬಂಧ ತೆಲುಗಿನಲ್ಲಿಯೂ ಬಂದಿಲ್ಲ"ವೆಂದರು. ಆ ಮಾತು ನನ್ನಲ್ಲಿ ಉಂಟುಮಾಡಿದ ಪರಿಣಾಮವನ್ನು ಹೇಳಬೇಕಿಲ್ಲ. ಅವರ ಸಂಪ್ರಬಂಧದ ಸಾರಾಂಶವನ್ನು ಬರೆದು "ಪ್ರಬುದ್ಧ ಕರ್ಣಾಟಕ"ದಲ್ಲಿ ಪ್ರಕಟಿಸಲು ಅವರ ಅನುಮತಿ ಕೋರಿದೆ. ಅನುಮತಿ ಸಿಕ್ಕಿತು. ಆ ಮುಂದಿನ ಒಂದೆರಡು ವಾರ ನನಗೆ ದೊರಕಿದ ಸ್ನೇಹಿತರೊಡನೆ, ಪರಿಚಿತರೊಡನೆ, ಗುರುಗಳೊಡನೆ (ತೀ.ನಂ.ಶ್ರೀ. ಆ ಹೊತ್ತಿಗೆ ಕಣ್ಮುಚ್ಚಿದ್ದರು) ಪಂಪನ ಶಾಸನದ ವಿಷಯ ಪ್ರಸ್ತಾಪಿಸಿಯೇ ಬೇರೆ ವಿಷಯಕ್ಕೆ ನಾನು ಹೋಗುತ್ತಿದ್ದುದು, ಮಾತನಾಡಲು ಬೇರೆಯವರಿಗೆ ಅವಕಾಶ ಕೊಡುತ್ತಿದ್ದುದು. ನನ್ನ ಆ ಹುಚ್ಚನ್ನು ಪ್ರೊ. ದೇ.ಜ.ಗೌ. ಅವರು ಸ್ನೇಹದಿಂದಲೇ ಹಾಸ್ಯ ಮಾಡಿದ್ದುಂಟು - "ಮೂರ್ತಿಯವರಿಗೆ ಪಂಪನ ಶಾಸನದ ಹುಚ್ಚು ಹತ್ತಿಬಿಟ್ಟಿದೆ". ನಾನು ಡಾ. ವೆಂಕಟರಮಣಯ್ಯನವರ ಸಂಪ್ರಬಂಧದ ಮುಖ್ಯಾಂಶಗಳ ಸಾರವನ್ನು ನೆನಪಿದ್ದಷ್ಟು ಒಂದೆರಡು ಪ್ಯಾರಾಗಳಾಗಿ ಬರೆದು ಕೊಟ್ಟದ್ದನ್ನು ಪ್ರಬುದ್ಧ ಕರ್ಣಾಟಕ ಪ್ರಕಟಿಸಿತು. ಆ ಬಳಿಕ ಮುಂದಿನ ಒಂದು ವರ್ಷ ಅಮೆರಿಕದಲ್ಲಿದ್ದು ನಾನು ಹಿಂದಕ್ಕೆ ಬರುವಷ್ಟರಲ್ಲಿ ಡಾ. ವೆಂಕಟರಮಣಯ್ಯನವರ ತೆಲುಗು ಲೇಖನ ಭಾರತಿಯಲ್ಲಿ, ಬಳಿಕ ಅದರ ಕನ್ನಡದ ಅನುವಾದ (ಅನು : ಸೀತಾರಾಮ ಜಾಗೀರದಾರ್) ಪ್ರಬುದ್ಧ ಕರ್ಣಾಟಕದಲ್ಲಿ ಪ್ರಕಟವಾಗಿದ್ದುವು. ನಾನು ಸಿದ್ಧಪಡಿಸಿದ್ದ ಚಿಕ್ಕ ಟಿಪ್ಪಣಿಯಲ್ಲಿ ಗಂಭೀರವಲ್ಲದ ಒಂದೆರಡು ಚಿಕ್ಕ ತಪ್ಪುಗಳಾಗಿದ್ದುವು. ಅದು ನೆನಪನ್ನವಲಂಬಿಸಿ ಬರೆದದ್ದು ತಾನೇ ! ಮುಂದೆ ಡಾ. ಜಿ.ಎಸ್. ಗಾಯಿಯವರು ಆ ಮೂಲ ಶಾಸನವನ್ನು ತಾವೇ ಪರಿಶೀಲಿಸಿ, ಅದರ ಪರಿಷ್ಕೃತ ಪಾಠವನ್ನು ಬಹು ಉಪಯುಕ್ತ ಚರ್ಚೆ ಸಮೇತ ಅದೇ ಪ್ರಬುದ್ಧ ಕರ್ಣಾಟಕದಲ್ಲಿ ಪ್ರಕಟಿಸಿದರು. ಆ ಪಾಠ ಅನೇಕ ಸಮಸ್ಯೆಗಳನ್ನು ಪರಿಹರಿಸಿದುದಲ್ಲದೆ "ಗಂಗಾಧರಂ ಶಾಸನ" ಎಂಬ ಹೆಸರಿದ್ದ ಶಾಸನವು "ಕುರಿಕ್ಯಾಲ ಶಾಸನ" ಎಂದು ನಾಮಕರಣಗೊಂಡಿತು. ಪಂಪನಿಗೆ ದತ್ತಿಯಾಗಿ ನೀಡಲಾದ ಧರ್ಮಪುರವನ್ನು ಡಾ. ವೆಂಕಟರಮಣಯ್ಯನವರು ಇನ್ನೂ ಗುರುತಿಸಬೇಕಾಗಿದೆ ಎಂದಿದ್ದ ಮಾತನ್ನು ಗಮನಿಸಿ, ಡಾ. ಗಾಯಿಯವರು ಈಗ ಬೊಮ್ಮಲಗುಟ್ಟದ ದಕ್ಷಿಣಕ್ಕಿರುವ ಕುರಿಕ್ಯಾಲ ಇತ್ಯಾದಿ ಮೂರು ಗ್ರಾಮಗಳ ಸಂಕೀರ್ಣವೇ ಪಂಪನ ಧರ್ಮಪುರಿಯಾಗಿರಬಹುದೆಂಬ ಒಂದು ಸಾಧಾರ ಊಹೆಯನ್ನೂ ಮಾಡಿದ್ದರು. ಮುಂದೆ 1970ರಲ್ಲಿ ಆ ಊರಿಗೆ ಭೇಟಿ ನೀಡಿದ ಡಾ ಎಂ.ಎಂ. ಕಲಬುರ್ಗಿಯವರು ಅದು ಕುರಿಕ್ಯಾಲ ಗ್ರಾಮವಿರಲಾರದು, ಬೊಮ್ಮಲಗುಟ್ಟದ ದಕ್ಷಿಣದಲ್ಲಿ, ಬೆಟ್ಟಕ್ಕೂ ಕುರಿಕ್ಯಾಲ ಗ್ರಾಮಕ್ಕೂ ಮಧ್ಯೆ ಹಳೆ ಊರೊಂದರ ಅವಶೇಷಗಳು ದೊರಕುವುವೆಂಬ ಅಲ್ಲಿನ ಜನರ ಮಾತನ್ನು ಅವಲಂಬಿಸಿ ಬೆಟ್ಟದ ಬುಡದ ಬಯಲೇ ಧರ್ಮಪುರ ಆಗಿತ್ತೆಂಬ ಊಹೆಯನ್ನು ಮಾಡಿ ಕರ್ಮವೀರಕ್ಕೆ ಪ್ರವಾಸ ಕಥನ ರೂಪದ ಲೇಖನ ಬರೆದರು. ಇದೆಲ್ಲವೂ ನನ್ನ ಕುತೂಹಲವನ್ನು ಬಹಳವಾಗಿ ಕೆರಳಿಸಿತ್ತು. ಪಂಪನ ಬದುಕಿಗೆ ಸಂಬಂಧಿಸಿದ ಹಲವು ವಿವರಗಳನ್ನೂ ಆ ಶಾಸನ ನೀಡಿತ್ತು. ಆ ಶಾಸನದಿಂದ ಅವನ ತಂದೆಯ ನಿಜವಾದ ಹೆಸರು (ಭೀಮಪಯ್ಯ) ತಿಳಿಯಿತು; ಹೊಸದಾಗಿ ತಾಯಿಯ

ಹೆಸರು (ಅಬ್ಬಣಬ್ಬೆ), ಅವನಿಗೆ ಒಬ್ಬ ತಮ್ಮನಿದ್ದ ವಿಷಯ (ಜಿನವಲ್ಲಭ - ಅವನೇ ಶಾಸನ ಹಾಕಿಸಿದ್ದು), ಅವನ ತಾಯಿಯ ತೌರುಮನೆ ಹೆಸರು (ಧಾರವಾಡ ಜಿಲ್ಲೆ ಅಣ್ಣಿಗೆರೆ) ಇತ್ಯಾದಿ ತಿಳಿದುವು. ಆ ಶಾಸನವನ್ನು ಕಲ್ಲ ಮೇಲೆ ನೋಡಬೇಕು, ಧರ್ಮಪುರ ಗ್ರಾಮವನ್ನು ಕರಾರುವಾಕಾಗಿ ಗುರುತಿಸಬೇಕು ಎಂಬ ಹುಚ್ಚು ತಲೆಗೆ ಹತ್ತಿತ್ತು. ವೆಂಕಟರಮಣಯ್ಯನವರ ಶಾಸನವು ಪ್ರಕಟವಾದಾಗಲೇ ಬೊಮ್ಮಲಗುಟ್ಟದ ದಕ್ಷಿಣಕ್ಕಿರುವ ಕುರಿಕ್ಯಾಲ ಗ್ರಾಮವೇ ಧರ್ಮಪುರ ಏಕಾಗಿರಬಾರದು ಎಂಬೊಂದು ಕಲ್ಪನೆಯೂ ಮೂಡಿತ್ತು. ಜೊತೆಗೆ ಆ ಪ್ರದೇಶದಲ್ಲಿ ಎರಡು ಕೆರೆಗಳಿರಬೇಕು. ಒಂದು, ಪಂಪನಿಗೆ ಧರ್ಮಪುರವು ದತ್ತಿಯಾಗಿ ದೊರಕುವ ಮುನ್ನವೇ ಇದ್ದುದು, ಇನ್ನೊಂದು ಅವನ ತಮ್ಮ ತನ್ನ ಅಣ್ಣನ ಹೆಸರಲ್ಲಿ ಹೊಸದಾಗಿ ಕಟ್ಟಿಸಿದ್ದು ('ಕವಿತಾ ಗುಣಾರ್ಣವ ತಟಾಕ') ಅವನ್ನೂ ಗುರುತಿಸಬೇಕಾಗಿತ್ತು. ಎಲ್ಲ ವಿದ್ವಾಂಸರೂ ಅಲ್ಲಿದ್ದ ಒಂದು ದೊಡ್ಡ ಕೆರೆಯನ್ನೇ 'ಕವಿತಾ ಗುಣಾರ್ಣವ ತಟಾಕ'ವೆಂದು ಗುರುತಿಸಿದ್ದರು.

ಈ ಹಿನ್ನೆಲೆಯಲ್ಲಿ ಹೈದರಾಬಾದಿನಲ್ಲಿ ನಡೆದ ಕೃಷ್ಣದೇವರಾಯ ವಿಶ್ವವಿದ್ಯಾಲಯದ (ಅನಂತಪುರ) ಒಂದು ಸಭೆಗಾಗಿ ಹೋಗಿದ್ದವನು ಅಲ್ಲಿಂದ ಸುಮಾರು ಆರೆಂಟು ಗಂಟೆ ಪ್ರಯಾಣದ ಕರೀಂನಗರಕ್ಕೆ ವಿದ್ಯಾರ್ಥಿ ಮಿತ್ರ ಡಾ. ಶೇಷಶಾಸ್ತ್ರಿ, ಪುರಾತತ್ವಜ್ಞ ಡಾ. ರಾಮಚಂದ್ರಮೂರ್ತಿಯವರ ಜೊತೆ ಹೋಗಿ ಆ ನಗರದಿಂದ ಸುಮಾರು ಹತ್ತು ಹದಿನೈದು ಮೈಲಿ ದೂರದ ಕುರಿಕ್ಯಾಲ ಗ್ರಾಮಕ್ಕೆ ಹೋದೆ. ತುಂಬಿದ್ದ ಬಸ್‌ನಲ್ಲಿ ಸುಮ್ಮನಿರಲಾರದೆ ಒಂದಿಬ್ಬರು ಹಳ್ಳಿಯವರನ್ನು ಅವರು ಹೋಗುತ್ತಿರುವ ಊರನ್ನು ವಿಚಾರಿಸಿದಾಗ ಅವರು "ಗಂಗ್‌ಧಾರಾ" ಎಂದು ಹೇಳಿದ್ದು ನನಗೆ ಚಿಕ್ಕ ಒಂದು ಹೊಸ ವಿಷಯ ತಿಳಿಸಿತು. ಶಾಸನಗಳಲ್ಲಿನ "ಗಂಗಾಧಾರಾ" ಎಂಬುದೇ ಜನರ ಬಾಯಲ್ಲಿ 'ಗಂಗ್‌ಧಾರಾ' ಆಗಿತ್ತು. ಆದರೆ ಆ ಊರನ್ನು ಡಾ. ವೆಂಕಟರಮಣಯ್ಯನವರು "ಗಂಗಾಧರಂ" ಎಂದು ಕರೆದಿದ್ದರು. ಅದಕ್ಕೆ ಕಾರಣ ಅದರ ಇಂಗ್ಲಿಷ್ ಲಿಪ್ಯಂತರವಿರಬಹುದು ("Gangadhara") ಅಥವಾ ವಿದ್ಯಾವಂತರು "ಗಂಗ್‌ಧಾರಾ"ವನ್ನು ಗಂಗಾಧರ ಎಂಬ ಪರಿಚಿತ ಶಿವನ ಹೆಸರಾಗಿ ಮಾರ್ಪಡಿಸಿರಬಹುದು. ಅನಕ್ಷರಸ್ಥರ ನಾಲಗೆ ಮೇಲೆ ಹಳೆಯ ಸರಿಯಾದ ಉಚ್ಚಾರಗಳು ಉಳಿದಿರುತ್ತವೆ ಎಂಬುದಕ್ಕೆ ಮೇಲಿನದು ಇನ್ನೊಂದು ನಿದರ್ಶನ, 'ಮನ್ಮುಖ ತೀರ್ಥ'ದಂತೆ.

ಕುರಿಕ್ಯಾಲ ಗ್ರಾಮದಲ್ಲಿ ಯಾವುದೇ ಹಿಂದಿನ ಕುರುಹುಗಳೂ ಇಲ್ಲವೆಂದು ಡಾ. ಕಲ್ಬುರ್ಗಿಯವರು ಸ್ಪಷ್ಟಪಡಿಸಿದ್ದರಿಂದ ನಾವು ಅಲ್ಲಿ ಇಳಿದು ಆ ಊರಿನ ಇಬ್ಬರು ಸ್ಥಳೀಯರನ್ನು ಕರೆದುಕೊಂಡು ಬೊಮ್ಮಲಗುಟ್ಟಕ್ಕೆ ನೇರವಾಗಿ ಹೊರಟೆವು. ಎರಡು ಕಿಲೋಮೀಟರ್ ದೂರದಲ್ಲಿದ್ದ ಆ ಬೆಟ್ಟದ ದಾರಿಯಲ್ಲೇ ಸಿಗುವ, ವಿದ್ವಾಂಸರು "ಕವಿತಾ ಗುಣಾರ್ಣವ ತಟಾಕ"ವೆಂದು ಗುರುತಿಸಿದ್ದ ದೊಡ್ಡ ಕೆರೆಯ ಏರಿಯ ಮೇಲೆಯೇ ನಡೆದು ಹೋಗಬೇಕಿತ್ತು. ನನಗೆ ತೆಲುಗು ತಿಳಿಯುತ್ತಿರಲಿಲ್ಲ.

ನಮ್ಮ ಜೊತೆಗೆ ಬಂದಿದ್ದ ಸ್ಥಳೀಯರ ಪರಸ್ಪರ ಸಂಭಾಷಣೆಯನ್ನೇ ಆಸ್ಥೆಯಿಂದ ಗಮನಿಸಲು ಶೇಷಶಾಸ್ತ್ರಿಯನ್ನು ಕೇಳಿಕೊಂಡಿದ್ದೆ. ನನ್ನ ಇಂದ್ರಿಯಗಳಲ್ಲಿ ನಾಲಗೆ, ಮೂಗು, ಚರ್ಮಗಳಿಗೆ ಅಷ್ಟು ಕೆಲಸ ಇರಲಿಲ್ಲ. ಉಳಿದ ಎರಡು ಬಹಳ ಚೂಟಿಯಾಗಿಬಿಟ್ಟಿದ್ದುವು. ಬೆಟ್ಟದ ಆಚೆ ಒಂದು ಕೆರೆಯಿದೆಯೆಂಬ ಸಂಗತಿ ಆಗಲೇ ಸ್ಥಳೀಯರಿಂದ ತಿಳಿದು ನಾನು ಸಂಭ್ರಮಪಟ್ಟಿದ್ದೆ. ದಾರಿಯಲ್ಲಿ ಸಿಕ್ಕ ದೊಡ್ಡ ಕೆರೆಯನ್ನು ಸ್ಥಳೀಯರು "ಪಾತ ಚೆರುವು" (ಹಳೆಯ ಕೆರೆ) ಎಂದು ಕರೆಯುತ್ತಾರೆಂಬ ವಿಷಯವು ಒಂದು ಸಂದೇಹವನ್ನು ಪರಿಹರಿಸಿತ್ತು. ಆ ದೊಡ್ಡ ಕೆರೆ, ಪಂಪನಿಗಿಂತ ಹಿಂದಿನ ಕೆರೆ, ಬಹುಶಃ ಯಾವನೋ ರಾಜ, ಶ್ರೀಮಂತ ಕಟ್ಟಿಸಿದ್ದು; ಬೆಟ್ಟದ ಆಚೆಯ ಪುಟ್ಟ ಕೆರೆ ('ವುಡನ್ ಚೆರುವು'=?) ಅಷ್ಟು ಶ್ರೀಮಂತನಲ್ಲದ ಜಿನವಲ್ಲಭ ಕಟ್ಟಿಸಿದ ಕೆರೆ, ಅದೇ 'ಕವಿತಾ ಗುಣಾರ್ಣವ ತಟಾಕ' ಎಂಬುದು ತಕ್ಕಮಟ್ಟಿಗೆ ಖಚಿತವಾಯಿತು. ಆ ಚಿಕ್ಕ ಕೆರೆಯನ್ನಿನ್ನೂ ನೋಡಿರಲಿಲ್ಲ. ಹಿಂದಿನ ವಿದ್ವಾಂಸರು ಗುರುತಿಸಿದ್ದ "ಕವಿತಾ ಗುಣಾರ್ಣವ ತಟಾಕ"ವು ಆ ದೊಡ್ಡ ಕೆರೆಯಂತೂ ಆಗಿರಲಿಲ್ಲ. ಕೆರೆ ದಾಟಿ ಬೆಟ್ಟದ ಬುಡ ಸಮೀಪಿಸುತ್ತಿದ್ದಂತೆ ನನ್ನ ಕಣ್ಣಿಗೇ ಹಳೆಯ ಇಟ್ಟಿಗೆ ಮಡಕೆ ಚೂರು ಕಾಣಿಸಿದುವೆಂದ ಮೇಲೆ ಭೂಶೋಧ ತಜ್ಞ ಡಾ. ರಾಮಚಂದ್ರ ಮೂರ್ತಿಯವರ ವಿಷಯ ಹೇಳಬೇಕೇ ! ಅವರು ಆ ವಸ್ತುಗಳು ಕನಿಷ್ಠ ಒಂದು ಸಾವಿರ ವರ್ಷದಷ್ಟು ಹಳೆಯವು ಎಂದರು. ಬಂಡೆಗಳ ಮಧ್ಯೆ ಹಾದು ಬೆಟ್ಟದ ಮಧ್ಯದ ಜಿನವಲ್ಲಭನ ಶಾಸನದ ದೊಡ್ಡ ಬಂಡೆಯ ಮುಂಭಾಗದಲ್ಲಿದ್ದ ಕೆಳ ಬಂಡೆಯ ಮೇಲೆ ನಿಂತೆವು. ಸ್ಪಷ್ಟವಾಗಿದ್ದ ಶಾಸನದ ಅಕ್ಷರಗಳನ್ನು ಗುರುತಿಸಿದೆವು. ಜಿನಮೂರ್ತಿಗಳ ಶಿಲ್ಪಗಳು ಸ್ಪಷ್ಟವಾಗಿದ್ದುವು. ಕೆಳಗೆ ನೆಲದ ಮೇಲೆ ಸ್ವಲ್ಪ ದೂರದಲ್ಲಿ ಕುರಿಕ್ಯಾಲ ಗ್ರಾಮ, ಬಲಕ್ಕೆ 'ಪಾತ ಚೆರುವು', ಹಸಿರು ತುಂಬಿದ್ದ ಗದ್ದೆಗಳು. ನಾನು ಆ ಸುಂದರ ದೃಶ್ಯವನ್ನು ಸವಿಯುತ್ತ ಕುಳಿತೆ; ಆದರೆ ಪ್ರಕೃತಿ ಸೌಂದರ್ಯದಲ್ಲಿ ಮೈಮರೆಯಲಿಲ್ಲ. ನನ್ನ ಜೊತೆ ಬಂದಿದ್ದ ಸ್ಥಳೀಯರು ಮತ್ತು ಬೆಟ್ಟದ ಬುಡದಲ್ಲಿ ಹೊಸದಾಗಿ ಸೇರಿಕೊಂಡ ಇನ್ನೂ ಮೂವರು ತೆಲುಗಲ್ಲಿ ಮಾತನಾಡಿಕೊಳ್ಳಲು ಆರಂಭಿಸಿದರು. ಶೇಷಶಾಸ್ತ್ರಿಯ ಮತ್ತು ನನ್ನ ಕಿವಿಗಳೆಲ್ಲ ಅವರ ಮಾತಿನ ಕಡೆಗೆ ಇದ್ದುವು. ಅವರಲ್ಲಿ ಒಬ್ಬ ಮಾತಿನಲ್ಲಿ "ಧರ್ಮಪುರಿ" ಎಂದದ್ದು ಕೇಳಿಸಿದಂತಾಯ್ತು. "ಆ ಸ್ವಲ್ಪ ನಿಲ್ಲಿ, ಏನಂದಿರಿ" ಎಂದು ನಾನು ಕೇಳಿದೆ. ಶೇಷಶಾಸ್ತ್ರಿಗೂ "ಧರ್ಮಪುರಿ" ಮಾತು ಕೇಳಿಸಿತ್ತು. ಅಲ್ಲೊಂದು ಹಿಂದೆ ಧರ್ಮಪುರಿ ಎಂಬ ಊರಿತ್ತೆಂದು ಹಳ್ಳಿಗಳಲ್ಲಿ ಪ್ರಚಲಿತವಿರುವ ವಿಷಯವನ್ನು, ಆ ಪ್ರದೇಶಕ್ಕೆ ವರ್ಷಕ್ಕೊಮ್ಮೆ ಬರುವ ಅಲೆಮಾರಿ ಗಾಯಕರು ಆ ಊರ ಬಗ್ಗೆ ಹಾಡುತ್ತಿದ್ದುದನ್ನು ಅವರು ಮಾತನಾಡಿಕೊಳ್ಳುತ್ತಿದ್ದರು. ಆ ಬಯಲಲ್ಲಿ ಹಿಂದೊಂದು ಧರ್ಮಪುರ ಎಂಬ ಊರಿದ್ದು ಅದು ಹಾಳಾಗಿ ಹೋದುದರ ವರ್ಣನೆ ಆ ಹಾಡುಗಳ ವಿಷಯವೆಂದು ತಿಳಿಯಿತು. ಆ ಸಂಗತಿ ಗೊತ್ತಾದ ತಕ್ಷಣ ನನಗೆ ನಿಜವಾಗಿಯೂ ಅತ್ಯಾನಂದವಾಯಿತು. ಆ ಊರ ಜನರನ್ನು ಎತ್ತಿಕೊಂಡು ಕುಣಿಯಬೇಕೆನ್ನಿಸಿತು. ನಾನು ಯಾವುದನ್ನು ಹುಡುಕಿಕೊಂಡು ಬಂದಿದ್ದೆನೋ ಅದು, ಅಲ್ಲೇ ಬೆಟ್ಟದ ಬುಡದಲ್ಲೇ ಸಾವಿರ ವರ್ಷಗಳ ಹಿಂದೆ ಇತ್ತು (ನಾನು 'ಶೋಧಿಸಿದ' ವಿಷಯ ಹಳ್ಳಿಯ ಸಾಮಾನ್ಯರಿಗೂ ಗೊತ್ತಿತ್ತು! ಆದರೂ ನನಗೆ 'ನಾನು ಶೋಧಿಸಿದೆ' ಎಂಬ ಮಹಾ ಝುಂಭ!). ನಾವಾಗಲೇ ಗುರುತಿಸಿದ್ದ ಇಟ್ಟಿಗೆ ಮಡಕೆ ಚೂರುಗಳು

ಧರ್ಮಪು(ವು)ರ ಊರಿನ ಅವಶೇಷಗಳು ಎಂಬ ಬಗ್ಗೆ ಅನುಮಾನಗಳೇ ಉಳಿಯಲಿಲ್ಲ. ಜಿನವಲ್ಲಭನ ಶಾಸನದ ಪ್ರಕಾರ ಧರ್ಮಪುರವು 'ವೃಷಭಾದ್ರಿ'ಯ ಎಂದರೆ ಈಗಿನ ಬೊಮ್ಮಲಮ್ಮಗುಟ್ಟದ (ಬೊಂಬೆಗಳ ಅಮ್ಮನ ಗುಡ್ಡ, ಚಕ್ರೇಶ್ವರಿ ವಿಗ್ರಹದ ಬೆಟ್ಟ) ದಕ್ಷಿಣಕ್ಕೆ ತೀರ ಸನಿಹದಲ್ಲಿ, ಆ ಊರಲ್ಲಿ ನಿಂತರೆ ಬೆಟ್ಟದ ಮೇಲಿನ ಜಿನಾಲಯದ ಪೂಜೆ, ಘಂಟಾನಾದ ಕೇಳಿಸುವಂತಹ ಜಾಗದಲ್ಲಿತ್ತು. ಆ ಶೋಧವು ನನ್ನ ಸಂಶೋಧನ ಜೀವನದ ಸಾರ್ಥಕ ಕ್ಷಣಗಳಲ್ಲೊಂದಾಗಿ ಪರಿಣಮಿಸಿತು. ಬೆಟ್ಟದಿಂದ ಇಳಿದು ಧರ್ಮಪುರಿ ನಿವೇಶನದಲ್ಲಿ ಅಡ್ಡಾಡಿದಾಗ ಕೆಲವು ಮಾಸ್ತಿಕಲ್ಲಿನಂತಹ ಹಳೆಯ ಶಿಲ್ಪಗಳೂ ಕಾಣಸಿದುವು. ಮತ್ತು ಕುರಿಕ್ಯಾಲ ಊರಿನ ಜನ ಆ ಇಡೀ ಪ್ರದೇಶವನ್ನು "ಪಾಟಿ ಗಡ್ಡ" (ಪಾತಿ ಗಡ್ಡ - ಹಳೆ ಮಣ್ಣಿನ ಜಾಗ) ಎಂದು ಕರೆಯುತ್ತಿರುವುದೂ ಅರ್ಥಸೂಚಕವಾಗಿತ್ತು.

ಮಾರನೆಯ ದಿನ ಕರೀಂನಗರದಿಂದ ಮತ್ತೆ ಕುರಿಕ್ಯಾಲಕ್ಕೆ ಬಂದು ಸ್ಥಳೀಯರನ್ನು ಕರೆದುಕೊಂಡು ಇಡೀ ಬೆಟ್ಟವನ್ನು ಪರಿಶೀಲಿಸಿದೆವು. ಈ ಬಾರಿ ಬೆಟ್ಟದ ಪಶ್ಚಿಮ ದಿಕ್ಕಿನಿಂದ ಹತ್ತಿದೆವು. ಎಲ್ಲರೂ ಏರುತ್ತಿದ್ದುದು ಆ ಜಾಗದಿಂದಲೇ. ಬೆಟ್ಟದ ಮೇಲೆ ಹತ್ತಾರು ಬಂಡೆಗಳಲ್ಲಿ ಒರಳುಗಳನ್ನು ತೋಡಲಾಗಿತ್ತು. ಬೆಟ್ಟದ ಮೇಲಿದ್ದ ಜಿನಾಲಯದ ಅವಶೇಷಗಳನ್ನು ಗುರುತಿಸಬೇಕಾಗಿತ್ತು. ಪಂಪಭಾರತವನ್ನು ಬರೆದ ಪಂಪನಿಗೆ ಅರಿಕೇಸರಿಯಿಂದ ದಾನವಾಗಿ ಧರ್ಮಪುರವು ದೊರೆತ ಮೇಲೆ ಅವನ ತಮ್ಮ ಜಿನವಲ್ಲಭನು ಬೆಟ್ಟದ ಮೇಲೆ ವೃಷಭ ಜಿನಾಲಯವನ್ನು ಕಟ್ಟಿಸಿದ್ದರಿಂದ ಆ ಬೆಟ್ಟಕ್ಕೆ ವೃಷಭಾದ್ರಿಯೆಂಬ ಹೆಸರು ಆಗ ಪ್ರಾಪ್ತವಾಗಿತ್ತು. ಧರ್ಮಪುರ ನಿವೇಶನಕ್ಕೆ ಎದುರಾಗಿ, ಅಲ್ಲಿಗೆ ಕಾಣಸುವಂತೆ ಇದ್ದ ಬೆಟ್ಟದ ಮೇಲಿನ ಒಂದು ಅಂಚಲ್ಲಿ, ಸಮತಲ ಜಾಗದಲ್ಲಿ ಆ ಜಿನಾಲಯವಿದ್ದಿರಬೇಕೆಂದು ಊಹಿಸಿದೆ. ಬೆಟ್ಟದ ಉತ್ತರ ಭಾಗದಲ್ಲಿ ಸ್ವಲ್ಪ ಕಡಿದಾದ ಜಾಗದಲ್ಲಿ ಇಳಿದಾಗ ದಾರಿಯಲ್ಲಿದ್ದ ಒಂದೆರಡು ಗುಹೆಗಳು ಅವು ಜನರು ವಾಸಿಸುತ್ತಿದ್ದ ಜಾಗಗಳೆಂಬುದರ ಕುರುಹುಗಳನ್ನು ಹೊಂದಿದ್ದುವು. ಅಲ್ಲಿಂದ ಬೆಟ್ಟ ಏರಲು ಎರಡು ಮೂರು ಕಡೆ ಬಂಡೆಗಳಲ್ಲಿ ಮೆಟ್ಟಿಲು ಕೆತ್ತಲಾಗಿತ್ತು. ಆ ಗುಹೆಗಳಲ್ಲಿ ಜಿನಮುನಿಗಳು ವಾಸವಾಗಿದ್ದರೆಂಬಲ್ಲಿ ಅನುಮಾನಗಳೇ ಇರಲಿಲ್ಲ. ಅಲ್ಲೆ ಬೆಟ್ಟದ ಕೆಳಗೆ, ಉತ್ತರ ಪಾರ್ಶ್ವದಲ್ಲಿದ್ದ ಚಿಕ್ಕ ಕೆರೆಯೇ (ಉಡನ್ ಚೆರುವು) "ಕವಿತಾ ಗುಣಾರ್ಣವ ತಟಾಕ"ವೆಂದು ಹೇಳುವಲ್ಲಿಯೂ ನನಗೆ ಅನುಮಾನ ಉಳಿಯಲಿಲ್ಲ. ಆ ಚಿಕ್ಕ ಕೆರೆ ಪಂಪನ ಕಾಲದಲ್ಲಿ ಜಿನಮುನಿಗಳ, ಅವರ ದರ್ಶನಕ್ಕೆ ಬರುತ್ತಿದ್ದ ಜನಗಳ ಅಗತ್ಯಗಳನ್ನು ಪೂರೈಸುತ್ತಿತ್ತೆಂದು ಹೇಳಬಹುದು. ಅದನ್ನು ನೋಡಿಕೊಂಡು ಗುಡ್ಡದ ಪೂರ್ವ ಭಾಗದಿಂದ ಹಾದು ಬರುವಾಗ ಅಲ್ಲೂ ಜನವಸತಿಯ ಗುಹೆಗಳನ್ನು ಗುರುತಿಸಿದೆವು. ಕುರಿಕ್ಯಾಲ ರಸ್ತೆ ಸಮೀಪಿಸುತ್ತಿದ್ದಂತೆ ದಾರಿಯಲ್ಲಿ ಒಬ್ಬ ಅಪ್ಪಟ ಹಳ್ಳಿ ಧಡೂತಿ ಚೆಲುವೆ ಕಚ್ಚೆ ಹಾಕಿ ಉಟ್ಟ ಸೀರೆ ನನಗೆ ಅರ್ಜುನನನ್ನು (ಅರಿಕೇಸರಿ) ಕಂಡು 'ಇರ್ಕಚ್ಚೆ' ಕಟ್ಟಿದ ಹೆಣ್ಣಿನ ಪಂಪನ ವರ್ಣನೆ ನೆನಪಿಗೆ ಬಂದಿತು. ರಸ್ತೆ ಬದಿಯ ಅಂಗಡಿಯಲ್ಲಿ ಟೀ ಕುಡಿದು ಅದರ ಮಣ್ಣ ಕಟ್ಟೆ ಮೇಲೆ ಕಾಲು ಚಾಚಿ ಮಲಗಿಬಿಟ್ಟೆ. ಆ ಉರಿಬಿಸಿಲಲ್ಲಿ ತೀವ್ರ ಆಯಾಸವಾಗಿತ್ತು. ಬಸ್ಸು ಬಂದಾಗ ನಾನು ಬೇರೆಯವರ ಸಹಾಯದಿಂದ ಮೆಟ್ಟಿಲ ಮೇಲೆ ಕಾಲಿಟ್ಟು ಹತ್ತಿ ಕುಳಿತುಕೊಂಡೆ. ಮುಂದೆ

ಒಂದು ಹೆಜ್ಜೆಯಿಡುವುದೂ ಕಷ್ಟವಾಗಿತ್ತು. ನನ್ನ ಇಡೀ ಜೀವನದಲ್ಲಿ ಎಂದೂ ಅಷ್ಟು ಶ್ರಮ ಆಗಿರಲಿಲ್ಲ. ನಾನಂತೂ ತುಂಬು ತೃಪ್ತಿಯಿಂದ ಬೆಂಗಳೂರಿಗೆ ಹಿಂದಿರುಗಿದೆ.

ಅದರೇನಂತೆ, ಮತ್ತೆ ಅಂತಹ ಶ್ರಮ ತೆಗೆದುಕೊಳ್ಳಲು ಸಿದ್ಧನಾಗಿದ್ದೆ. ಎಲ್ಲೋ ಓದಿದ್ದು ಜ್ಞಾಪಕ. ಹೊರಗೆ ಭೂಪತಿ ಗಂಡ ಕಾಯುತ್ತಿದ್ದಾನೆ. ತೀವ್ರ ಹೆರಿಗೆ ಬೇನೆ ತಿನ್ನುತ್ತ ಒಳಗೆ ಭೂದೇವಿಯಂತಹ ಹೆಂಡತಿ ಮಲಗಿದ್ದಾಳೆ. ಆಕೆ ಇನ್ನೊಮ್ಮೆ ಗಂಡ ಹತ್ತಿರ ಬರಲಿ, ಆಗ ಒದ್ದೋಡಿಸುತ್ತೇನೆ ಎಂದುಕೊಳ್ಳುತ್ತಿದ್ದಂತೆ ಹೆರಿಗೆಯಾಗಿ ಮಗು ಮುಖ ಕಾಣಿಸಿತು. ಆಗ ತಾಯಿ ಅಂದುಕೊಂಡಳು - "ಇಂತಹ ಮಗು ಬರುವುದಾದರೆ ಗಂಡ ನನ್ನ ಹತ್ತಿರ ಎಷ್ಟು ಸಾರಿ ಬೇಕಾದರೂ ಬರಲಿ!"

ಕನ್ನಡದ ಹೆಮ್ಮೆಯ ಕವಿ ಪಂಪನಿಗೆ ದತ್ತಿಯಾಗಿ ದೊರಕಿದ 'ಅಗ್ರಹಾರ' ಧರ್ಮಪುರ ನಿವೇಶನ ಪತ್ತೆಯಾದುದು, ಈಗಲೂ ಇರುವ ಅವನ ಹೆಸರಿನ ಕೆರೆಯನ್ನು ಗುರುತಿಸಿದುದು ಇತ್ಯಾದಿ ವಿಷಯಗಳನ್ನು ಬೆಂಗಳೂರಿಗೆ ಬಂದು ಪತ್ರಿಕೆಗಳಿಗೆ ತಿಳಿಸಿದಾಗ ಅದೊಂದು ದೊಡ್ಡ ಸುದ್ದಿಯಾಯ್ತು.

### ಮಾಸ್ತಿ ಶಿಲ್ಪ : 'ಬನಾಶಂಕರಿ ಪೆಟ್ಟಿಗೆ', 'ಹಗರಣ'

ಕನ್ನಡ ಕಾವ್ಯ ಶಾಸನಗಳಲ್ಲಿ ಹಗರಣ ಎಂಬ ಜಾನಪದ ವಿನೋದ ಪ್ರದರ್ಶನದ ಹಲವು ಉಲ್ಲೇಖಗಳು ಬರುತ್ತವೆ (ಅದೇ ಸಂಸ್ಕೃತ 'ಪ್ರಕರಣ' - ಲಘು ನಾಟಕ). ಆ ಎಲ್ಲ ಉಲ್ಲೇಖಗಳನ್ನಿಟ್ಟುಕೊಂಡು ಹಗರಣದ ಸ್ವರೂಪವೇನಿದ್ದಿರಬಹುದೆಂಬುದನ್ನು ಪುನಾರಚಿಸಿದ್ದೆ. ಕರಾವಳಿ ಪ್ರದೇಶದಲ್ಲಿ ಈಗಲೂ ಹಗರಣದ ಅಭಿನಯವು ಜೀವಂತವಾಗಿರುವ ವಿಷಯ ಯಾರಿಂದಲೋ ತಿಳಿದು ಆ ಬಗ್ಗೆ ಡಾ. ಶಿವರಾಮ ಕಾರಂತರನ್ನು ಕೇಳಿದಾಗ ಅವರು ನನಗೆ ಮಾಹಿತಿ ಕೊಟ್ಟ ರೀತಿ ಹೀಗಿತ್ತು : "ನೋಡಯ್ಯಾ, ನಾನೂ ಕೇಳಿದ್ದೇನೆ. ಉತ್ತರ ಕನ್ನಡ ಜಿಲ್ಲೆಯವರನ್ನು ವಿಚಾರಿಸು". ಹಿರಿಯರ ಅಂತಹ ಏಕವಚನ ನನಗೆ ಆಪ್ಯಾಯಮಾನ. ಅದನ್ನು ಕುಮಟಾ ತಾಲೂಕಿನ ಹಳದೀಪುರದ ಜಾತ್ರೆಯಲ್ಲಿ ಈಗಲೂ ನೋಡಬಹುದೆಂದು ವಿದ್ಯಾರ್ಥಿ ಮಿತ್ರ ಡಾ. ಕೆ.ಪಿ. ಭಟ್ ಅವರ ಮೂಲಕ ಗೊತ್ತಾದುದಲ್ಲದೆ ಆ ಜಾತ್ರೆಯ ದಿನವೂ ತಿಳಿಯಿತು.

ಜಾತ್ರೆಗೆ ನಾಲ್ಕು ದಿನ ಮುಂಚೆಯೇ ಡಾ. ಭಟ್, ಶೇಷಶಾಸ್ತ್ರಿ ಜೊತೆ ನಾನು ಚನ್ನಗಿರಿ ತಾಲ್ಲೂಕು ನನ್ನ ಹಳ್ಳಿ ದೊಡ್ಡ ಮಲ್ಲಾಪುರಕ್ಕೆ ಹೋಗಿ, ಬೊಮ್ಮೇನಹಳ್ಳಿಯಲ್ಲಿ ಮಾಸ್ತಿ ಕಲ್ಲುಗಳಿವೆಯೆಂಬ ವಿಷಯ ತಿಳಿದು ಅಲ್ಲಿಗೆ ಸಮೀಪದ ನೀತಿಗೆರೆಗೆ ಹೋದೆವು. ನೀತಿಗೆರೆ ನನಗೆ ವಿಶ್ವದಲ್ಲೇ ಅತ್ಯಂತ ಸುಂದರ ಹಳ್ಳಿ; ಕಾರಣ, ಅದು ನಾನು ಹುಟ್ಟಿದ ಹಳ್ಳಿ ಅಲ್ಲದಿದ್ದರೂ ನಾನು ಬೆಳೆದ ಹಳ್ಳಿ. ನನ್ನ ಬಾಲ್ಯದ ಮೊತ್ತಮೊದಲ ನೆನಪು ಆ ಹಳ್ಳಿಯದೇ (ಅದನ್ನೆಲ್ಲ ಬೇರೆಡೆ ದಾಖಲಿಸುತ್ತೇನೆ). ಆ ಊರಿನ ಹಿರಿಯರೂ ಗೆಳೆಯರೂ ಬಹು

ಆತ್ಮೀಯತೆಯಿಂದ ಕಂಡರು. ಅಲ್ಲಿನ ವೀರಭದ್ರ ದೇವಾಲಯಕ್ಕೆ ಹೋದಾಗ ಗರ್ಭಗುಡಿಯ ವೀರಭದ್ರನ ವಿಗ್ರಹದ ಹಿಂದಿನ ಗೂಡಿನಲ್ಲಿ ರಂಧ್ರಗಳಿದ್ದ ಒಂದು ಪುಟ್ಟ ಲೋಹದ ಪೆಟ್ಟಿಗೆ ಕಾಣಿಸಿತು. ಅದು 'ಬನಾಶಂಕರಿ ಪೆಟ್ಟಿಗೆ' ಎಂದಾಗ ನನ್ನ ಒಳಗಿನ ಕುತೂಹಲಿ ಹುಚ್ಚೆದ್ದು ಕುಣಿಯಲಾರಂಭಿಸಿದ. ಅದನ್ನು ತೆಗೆದು ಯಾರೂ ನೋಡುವಂತಿಲ್ಲ, ನೋಡಿದರೆ ಕಣ್ಣು ಹೋಗುತ್ತವೆ, ಇಡೀ ಊರಿಗೆ ಕೇಡು ಎಂದಾಗಲಂತೂ ನನ್ನ ಒಳ ಹುಚ್ಚನಿಗೆ ಹುಳಿ ಹೆಂಡ ಕುಡಿಸಿದಂತಾಯಿತು. ಊರಿನ ಹಿರಿಯರ ಜೊತೆ ನಾನು ಹೇಳಿದ್ದು ಇಷ್ಟು: "ಅದನ್ನು ತೋರಿಸಿ ಎಂದು ಒತ್ತಾಯಿಸಲಾರೆ. ಹೋದರೆ ನನ್ನ ಕಣ್ಣು ಹೋಗಲಿ. ವೀರಭದ್ರದೇವರ ಅಪ್ಪಣೆ ಪಡೆದು ತೆಗೆಯುತ್ತೇನೆ". ನಾನು ಆ ಊರ ಶಿಶು, ಅವರಲ್ಲಿ ಕೆಲವು ವೃದ್ಧರ ಮುಂದೆ ಬೆಳೆದ ಹುಡುಗ, ಹೊಂಡದಲ್ಲಿ ಈಜುತ್ತಿರುವಾಗ ನಮ್ಮನ್ನು ಅಟ್ಟಿಸಿಕೊಂಡು ಬಂದ 'ಹುಚ್ಚ' ಮುರುಗಜ್ಜನೂ ಇದ್ದ. ಆತ ಹುಚ್ಚನಲ್ಲ. ಆ ಮುಗ್ಧ ಮುಂಗೋಪಿಗೆ ನಾವು, ಆರೇಳು ವರ್ಷದ ಹುಡುಗರು ಇಟ್ಟಿದ್ದ ಹೆಸರು. ಅಲ್ಲದೆ ನಾನು ಅಯ್ನೋರು ಬೇರೆ, ಬೆಂಗಳೂರಿನಿಂದ ಬಂದವನು, ನೋಡಬೇಡಿ ಎಂದು ಅನ್ನುವಂತಿಲ್ಲ. ನಿಜ ಹೇಳಲೇ, ಅವರಿಗೂ ನೋಡುವ ಆಸೆ. ಈ ಒದ್ದಾಟದಲ್ಲಿ ಸಿಲುಕಿಕೊಂಡ ಅವರಲ್ಲಿ ಒಂದಿಬ್ಬರು 'ರಾತ್ರಿ ನೋಡಾನ' ಎಂದರು ('ನೋಡೋಣ' - ಜಾಣ್ಮೆಯ ಮುಗ್ಧ ಮಾತು).

ಅಲ್ಲಿಂದ ನಾವು ಬೊಮ್ಮೇನಹಳ್ಳಿಗೆ ಹೋದಾಗ ಸ್ತಂಭೀಭೂತನಾದೆ. ಅಲ್ಲಿ ನಮ್ಮ ನಿರೀಕ್ಷೆಗೆ ಮೀರಿದ ಸುಂದರ ಮಾಸ್ತಿಕಲ್ಲುಗಳಿದ್ದುವು. ಶಾಸ್ತ್ರಿ ಅವುಗಳ ಮುಂಭಾಗದ ಚಿತ್ರ ತೆಗೆಯುತ್ತಿರುವಾಗ ಪೊದೆಗಳನ್ನು ಸರಿಸಿ ಹಿಂದಕ್ಕೆ ಹೋಗಿ ನೋಡಿ ಕೂಗಿದೆ - "ಶಾಸ್ತ್ರೀ ಶಾಸ್ತ್ರೀ ಬನ್ನಿ ಬನ್ನಿ". ಹಾವೋ ಚೇಳೋ ಎಂದು ಹೆದರಿ ಶಾಸ್ತ್ರಿ ಭಟ್ ಊರ ಜನ ಓಡಿಬಂದರು. ಮಾಸ್ತಿಕಲ್ಲುಗಳ ಹಿಂಭಾಗದಲ್ಲಿ ಅವುಗಳಿಗೆ ಹೆರಳು ಹಾಕಿದ ಉದ್ದನೆಯ ಜಡೆಯನ್ನು ಹಾಗೇ ಬಿಡಿಸಿದ್ದರು. ಹೆಣ್ಣಿನ ಜಡೆಯನ್ನು ಅಥವಾ ತುರುಬನ್ನು ಸಾಮಾನ್ಯವಾಗಿ ಕಲ್ಲಿನ ಮುಂಭಾಗದಲ್ಲೇ ತಲೆಯ ಪಕ್ಕದಲ್ಲಿ ಬಿಡಿಸಿರುವುದುಂಟು. ಕಲ್ಲ ಮುಂಭಾಗದ ಮಾಸ್ತಿ ಶಿಲ್ಪಗಳ ಚೆಲುವಿಗೆ ಮಾರುಹೋಗಿದ್ದ ನಾನು ಅವುಗಳ ಬೆನ್ನ ಜಡೆಗಳನ್ನು ನೋಡಿ, ಆ ಶಿಲ್ಪಗಳು ಇಡೀ ಕರ್ನಾಟಕದಲ್ಲೇ ಮಾಸ್ತಿಯರ ಅತ್ಯಂತ ಸುಂದರ ಶಿಲ್ಪಗಳೆಂದು ಸಂತೋಷಿಸಿದೆ. ಆ ಊರಿನಲ್ಲಿದ್ದ ಒಂದು ವಾಮನ ಶಿಲೆಯು ಊರಲ್ಲಿ ಈಗ ಯಾವ ಬ್ರಾಹ್ಮಣರಿರದಿದ್ದರೂ ಆ ಊರು ಬ್ರಾಹ್ಮಣನೊಬ್ಬನ ದತ್ತಿ ಗ್ರಾಮವಾಗಿತ್ತೆಂಬುದರ ಕುರುಹಾಗಿತ್ತು. ಮತ್ತು ಬೊಮ್ಮೆ, ಬೊಮ್ಮ, ಹಾರುವ, ಹಾರೋ, ಹಾರನ ಹೀಗೆ ಆರಂಭವಾಗುವ ಊರ ಹೆಸರುಗಳು ಅಗ್ರಹಾರ ಸೂಚಕಗಳೆಂಬ ಸಂಗತಿ ಆ ಊರಲ್ಲಿ ಹೊಳೆದು ಮುಂದೆ ಅದು ಬೇರೆ ಉದಾಹರಣೆಗಳಿಂದ ಸಾಬೀತಾಯ್ತು. ಆಕಸ್ಮಿಕವಿರಬಹುದು, ಆ ಊರ ಇಬ್ಬರು ತರುಣಿಯರು (ಅವಳಲ್ಲಿ ಒಬ್ಬಳಿಗೆ ಮದುವೆಯಾಗಿತ್ತೆಂದು ಕಾಣುತ್ತದೆ) ಅಪೂರ್ವ ಸುಂದರಿಯರಾಗಿ ಕಾಣಿಸಿದರು, ಆಕಸ್ಮಿಕವೋ ಅಥವಾ ನನ್ನ ಕಣ್ಣಿನ ತಪ್ಪೋ!

ಪ್ರಾಚೀನ ಸ್ಥಾವರ ಚೆಲುವೆಯರು ಮತ್ತು ಅರ್ವಾಚೀನ ಜಂಗಮ ಸುಂದರಿಯರು ನೀತಿಗೆರೆಯ ಪೆಟ್ಟಿಗೆಯನ್ನು ಕೆಲವು ಕಾಲ ಮರೆಯಿಸಿದ್ದರೂ ಅದನ್ನು ಅಳಿಸಿಹಾಕಿರಲಿಲ್ಲ.

ನೀತಿಗೆರೆಯ ದೇವಾಲಯದಲ್ಲಿ ಸಂಜೆ ಬಹಳ ದಿನ ಸೇರಿಬಿಟ್ಟರು. ತಮ್ಮ ಊರಲ್ಲಿ ಏನೋ ಅಪೂರ್ವವಾದುದೊಂದು ಘಟಿಸಲಿರುವುದೆಂಬ ನಿರೀಕ್ಷೆ ಅವರದು. ಮಧ್ಯಾಹ್ನವೇ ಊರ ಹಿರಿಯರು ಪೆಟ್ಟಿಗೆ ತೆರೆಯಲು ಒಪ್ಪಿಗೆ ಕೊಡಲು ನಿರ್ಧರಿಸಿದ್ದರು. ನಾನು ಒಪ್ಪಿಗೆ ಕೇಳುತ್ತಲೇ ಅವರು ಆಗಲಿ ಎಂದರು. ಕೈಕಾಲು ತೊಳೆದು ಭಸ್ಮ ಧರಿಸಿದೆ. ವಿಗ್ರಹದ ಪೂಜೆ ನಡೆಯುತ್ತಿದ್ದಂತೆ ನಾನು ಗಟ್ಟಿಯಾಗಿ "ವೀರಭದ್ರ ದೇವರೇ, ನಿನ್ನ ಅಪ್ಪಣೆ ಪಡೆದು ಪೆಟ್ಟಿಗೆ ತೆರೆಯುತ್ತೇನೆ. ನನ್ನ ಕಣ್ಣು ಹೋದರೂ ಪರವಾ ಇಲ್ಲ, ನನ್ನ ಊರ ಜನಕ್ಕೆ ಏನೂ ಮಾಡಬೇಡ" ಎಂದು ಹೇಳಿ, ಅಕ್ಷರಶಃ ಒಳಗೇ ನಾನೂ ನಡುಗುತ್ತ ಹಿಂಬದಿಗೆ ಹೋಗಿ ಪೆಟ್ಟಿಗೆ ತಂದು ಎಲ್ಲರ ಮುಂದಿಟ್ಟೆ. ಹಿರಿಯರ, ಹುಡುಗರ ಎಲ್ಲರ ಕಣ್ಣಿನ ಕೇಂದ್ರವಾಗಿದ್ದ ನನ್ನನ್ನು ಮರೆಸಿ ಪೆಟ್ಟಿಗೆ ಮೆರೆಯಿತು. ಆ ಇಡೀ ಸಮೂಹ ಭಯ ಕಾತರ ನಿರೀಕ್ಷೆಗಳಿಂದ ನೋಡುತ್ತಿದ್ದಂತೆ, ನನ್ನ ಎದೆ ಡವಡವ ಹೊಡೆದುಕೊಳ್ಳುತ್ತಿದ್ದಂತೆ ಮತ್ತೊಮ್ಮೆ ದೇವರ ಆಶೀರ್ವಾದ ಊರ ಜನರ ಅಪ್ಪಣೆ ಬೇಡಿ ಪೆಟ್ಟಿಗೆ ತೆರೆದಾಗ ಅದರ ಮಣ್ಣಲ್ಲಿ ಹಿಂದಿನ ಕಾಲದ ದೇವರ ಉತ್ಸವಮೂರ್ತಿಯ ಪುಟ್ಟ ಲೋಹದ ಚತ್ರಿ, ನಾಗ ಇತ್ಯಾದಿ ಇದ್ದುವು. ಆ ಎಲ್ಲವನ್ನೂ ವಿಸ್ತಾರವಾಗಿ ವರ್ಣಿಸಿ ಬರೆದ 'ಬನಾಶಂಕರಿ ಪೆಟ್ಟಿಗೆ' ಎಂಬ ಲೇಖನವನ್ನು "ಕಸ್ತೂರಿ" ಪ್ರಕಟಿಸಿತು. ನಾನು ಕಂಡುಹಿಡಿದುದಕ್ಕಿಂತ ಪಡೆದ ಅನುಭವ ಅಕ್ಷರಶಃ ರೋಮಾಂಚಕಾರಿ. ಮುಂದೆ ಬನಶಂಕರಿಯ ಅಂತಹುದೇ ಪೆಟ್ಟಿಗೆಗಳನ್ನು ಬೇರೆ ಊರುಗಳಲ್ಲಿ ಕಂಡು (ಅವನ್ನು ತೆಗೆದು ನೋಡಲು ಅವಕಾಶ ಕೊಡಲಿಲ್ಲ) ಆ ಜಾನಪದ ದೈವದ ಬಗ್ಗೆ ಇರುವ ನಂಬಿಕೆ ಆಚರಣೆ ಕುರಿತು ಲೇಖನ ಪ್ರಕಟಿಸಿದೆ.

ನೀತಿಗೆರೆಯಿಂದ ಉತ್ತರ ಕನ್ನಡ ಜಿಲ್ಲೆಯ ಹಳದಿಪುರಕ್ಕೆ ಹೋದೆವು. ದೇವಿಕಾನ ಜಾತ್ರೆಗೆ ಮಧ್ಯಾಹ್ನದಿಂದಲೇ ಜನ ಸೇರಿದ್ದರು. ಸಂಜೆಗೆ ಮೊದಲು ಆ ದೇವತೆ, ಜಾತ್ರೆ ಇವುಗಳಿಗೆ ಸಂಬಂಧಿಸಿದ ಮಾಹಿತಿಯನ್ನು ಅಲ್ಲಿನ ಅರ್ಚಕರಿಂದ ಸಂಗ್ರಹಿಸಿ, ಸಂಜೆಯ ದೇವಿಕಾನ ಮೆರವಣಿಗೆಯಲ್ಲಿ ಭಾಗವಹಿಸಿದೆ. ಪಂಜಿನ ಬೆಳಕಲ್ಲಿ ಮೂವತ್ತು ನಲವತ್ತು ತಂಡಗಳು ಭಾಗವಹಿಸಿದ್ದುವು. ಅವು ಮರಗಾಲು, ಕರಡಿ ವೇಷ, ಪೌರಾಣಿಕ ದೃಶ್ಯಗಳ ವಿವಿಧ ವೇಷ ಹಾಕಿಕೊಂಡು ಸಂಭಾಷಣೆ ಮಾಡುತ್ತ ಅಭಿನಯಿಸುತ್ತ ಕುಣಿಯುತ್ತಿದ್ದುವು. ಅದೇ 'ಹಗರಣ' : ವಿನೋದವೇ ಪ್ರಧಾನವಾದ ಹಗರಣದಲ್ಲಿ ಸೀತೆ ಎಡಗೈಗೆ ಗಡಿಯಾರ ಧರಿಸಲು ಅವಕಾಶವಿತ್ತು. ರಾಮನ ಬಾಯಿಂದ ಇಂಗ್ಲಿಷ್ ಪದಗಳು ಬರಬಹುದು. ರಾಕ್ಷಸ ಬೀಡಿ ಸಿಗಾರ್ ಸೇದಬಹುದು. ಯಾವುದು ಯಕ್ಷಗಾನ ಬಯಲಾಟದಲ್ಲಿ ಸಾಧ್ಯವಿಲ್ಲವೋ ಅದು ಹಗರಣದಲ್ಲಿ ಸಾಧ್ಯ. ಯಾವುದು ಅಲ್ಲಿ ಅಬದ್ಧವೋ ಅಸಂಬದ್ಧವೋ ಅಪ್ರಸ್ತುತವೋ ಖಂಡನಾರ್ಹವೋ ಅವೆಲ್ಲ ಹಗರಣದಲ್ಲಿ ಸ್ವಾಗತಾರ್ಹ. ಅಲ್ಲಿ ದೊರಕಿದ ಹಗರಣದ ಚಿತ್ರಕ್ಕೂ ನಾನು ಶಾಸನ ಕಾವ್ಯಗಳಿಂದ ಹೆಕ್ಕಿ ತೆಗೆದು ಹೆಣೆದ ಹಗರಣದ ಚಿತ್ರಕ್ಕೂ ದಟ್ಟ ಹೋಲಿಕೆ ಇತ್ತು. ಕರ್ನಾಟಕದಲ್ಲೆಲ್ಲ ಪ್ರಚಲಿತವಿದ್ದ ಹಿಂದಿನ ಜಾನಪದ ಕಲೆಯೊಂದು ಇಂದಿಗೂ ಉತ್ತರ ಕನ್ನಡ ಜಿಲ್ಲೆಯ ಹಳ್ಳಿಗಳಲ್ಲಿ ಅವಶೇಷ ರೂಪದಲ್ಲಿರುವುದನ್ನು ನಾನು ಗುರುತಿಸಿದ್ದೆ.

ಮುಂದೆ ನಾನು ಆಕಾಶವಾಣಿಯಲ್ಲಿ ಅಂತಹ ಹಲವು ಶೋಧಗಳನ್ನು ಕುರಿತು ಮಾತನಾಡಿದುದನ್ನು ಕೇಳಿದ ಚಿಕ್ಕಮಗಳೂರಿನವರೊಬ್ಬರು ಆ ಕಲೆ ಚಿಕ್ಕಮಗಳೂರು ಜಿಲ್ಲೆಯ ಹಿರೇಗೌಜದಲ್ಲಿ ಇನ್ನೂ ಜೀವಂತವಾಗಿರುವುದನ್ನು ಪತ್ರ ಮುಖೇನ ತಿಳಿಸಿದರು. ಅದು ನನಗೆ ತೀರ ಅನಿರೀಕ್ಷಿತವಾಗಿತ್ತು. ಹೊಳೇನರಸೀಪುರ ತಾಲೂಕಿನಲ್ಲಿ ತಾಲವ್ಯೀಕರಣದ ಉಪಭಾಷೆಯ ಸಮೀಕ್ಷೆ ನಡೆಸಿದ್ದನ್ನು ಹಿಂದಾಗಲೇ ತಿಳಿಸಿದ್ದೇನೆ. ಅಂತಹುದೊಂದು ಉಪಭಾಷೆಯು ಸಕಲೇಶಪುರ ತಾಲೂಕಿನ ನಾರ್ವೆ ಗ್ರಾಮದ ಪರಿಸರದಲ್ಲಿರುವುದನ್ನು ತಿಳಿಸಿದ್ದ ಆ ಊರಿನ ರಾಜಶೇಖರ್ ನನ್ನನ್ನು ತಮ್ಮ ಊರಿಗೆ ಆಹ್ವಾನಿಸಿದ್ದರು. ನನ್ನ ಜೊತೆ ಬಂದಿದ್ದ ಭಾಷಾವಿಜ್ಞಾನದ ಐಚ್ಛಿಕ ವಿಷಯದ ವಿದ್ಯಾರ್ಥಿಗಳಿಗೆ ಹೇಮಾವತಿ ತೀರದ ಆ ಮಲೆನಾಡ ಹಳ್ಳಿಯ ಕಾಫಿ ಎಸ್ಟೇಟಿನಲ್ಲಿ ತಿಂದಷ್ಟು ಕಿತ್ತಳೆ, ತೇಗಿದಷ್ಟು ಕೆಂಡ ರೊಟ್ಟಿ (ಕೆಂಡದ ಮೇಲೆ ಸುಟ್ಟದ್ದು), ತೆಂಗಿನಕಾಯಿ ಚಟ್ನಿ, ಬೊಗಸೆಗಟ್ಟಲೆ ಜೇನುತುಪ್ಪ. ಆ ಪ್ರದೇಶದ ದಲಿತರ ಕನ್ನಡದಲ್ಲಿ ತಾಲವ್ಯೀಕರಣದ ಕಂಠ್ಯೀಕರಣದ ಇನ್ನೊಂದು ಪ್ರಭೇದ ದೊರಕಿತು. ನಾರ್ವೆಗೆ ಸಮೀಪದ ಟಿಪ್ಪುವಿನ ಮಂಜರಾಬಾದ್ ಕೋಟೆಯಲ್ಲದೆ, ರಾಜಶೇಖರ್ ಮನೆಯಲ್ಲಿದ್ದ ಕೊಡಗಿನ ಅರಸರ ಕಾಲದ ಅಧಿಕಾರಿಗಳ ಉಡುಪು, ಆಯುಧಗಳನ್ನು ನೋಡಿಕೊಂಡು ವಿದ್ಯಾರ್ಥಿಗಳು ಬೇಲೂರು ಮೂಲಕ ಬೆಂಗಳೂರಿಗೆ ಹಿಂದಿರುಗಿದರು. ನಾನು ಚಿಕ್ಕಮಗಳೂರಿನ ಹಗರಣದ ಮಾಹಿತಿದಾರರೊಂದಿಗೆ ಸಮೀಪದ ಹಿರೇಗೌಜಕ್ಕೆ ತೆರಳಿದೆ.

ಹಿರೇಗೌಜ ಸಾಕಷ್ಟು ಹಳೆಯ ಊರೆಂಬುದು ಅಲ್ಲಿನ ಹಲವು ಶಿಲ್ಪಗಳಿಂದ ಸೂಚಿತವಾಗುತ್ತಿತ್ತು. ಆ ಊರಿನ ಕೆಲವರನ್ನು ಸೇರಿಸಿ ನಾನು ಹಗರಣದ ಬಗ್ಗೆ ಕೇಳಿದಾಗ ಅವರು ಒಂದು ಕ್ಷಣ ಮೌನ ವಹಿಸಿ ಪರಸ್ಪರರ ಮುಖ ನೋಡಿಕೊಂಡು ಮುಸಿ ಮುಸಿ ನಗಲಾರಂಭಿಸಿದರು. ನಾನು ಏನೆಂದು ಕೇಳಿದಾಗ ಅವರಲ್ಲೊಬ್ಬ "ನಿಮ್ಮಂತಹ ಪಟ್ಟಣದವರಿಗೆ ಅದೆಲ್ಲ ಏಕೆ" ಎಂದರು. ನಾನು ಜಾನಪದದ ಬಗ್ಗೆ ಬರೆದಿದ್ದ ಲೇಖನಗಳಲ್ಲಿ ಉಲ್ಲೇಖಿಸಿದ್ದ ಹಳ್ಳಿಯ ಅಶ್ಲೀಲ ಹಾಡುಗಳನ್ನು ಹೇಳಿ, ಗಂಭೀರ ಸಂಶೋಧನೆಯಲ್ಲಿ ಶೀಲ ಅಶ್ಲೀಲವೆಂಬುದಿಲ್ಲವೆಂಬುದನ್ನು ಅವರಿಗೆ ಮನಮುಟ್ಟುವ ಹಾಗೆ ವಿವರಿಸಿ ಬೈಗುಳ ಅಥವಾ ಶೃಂಗಾರವು ಬದುಕಿನ ಭಾಗವೆಂಬುದನ್ನು ಸ್ಪಷ್ಟಪಡಿಸಿದೆ. ಆ ಕ್ಷಣ ಒಬ್ಬ, "ಹಾಗಿದ್ದರೆ ಬರ್ಕೊಳ್ಳಿ" ಎಂದು ಉತ್ಸಾಹ ಉಕ್ಕಿ, 'ಹಗಣ'ದ ಕೆಲವು ಹಾಡುಗಳನ್ನು ಹೇಳಿಬಿಟ್ಟ. ಅವು ಸಹಜವಾಗಿಯೇ ಅಶ್ಲೀಲವಾಗಿದ್ದುವು. ಆ ಊರಲ್ಲಿ ಹನ್ನೆರಡು ವರ್ಷಕ್ಕೊಮ್ಮೆ ನಡೆಯುವ ಬಳಲಿಕಮ್ಮದೇವತೆ ಜಾತ್ರೆಯಲ್ಲಿ ಜನರು ಹಳ್ಳಿ ವೇಷಭೂಷಣ ಹಾಕಿಕೊಂಡು ಜನರನ್ನು ನಗಿಸುತ್ತಾರೆ. ಆ ಹಗಣದಲ್ಲಿ ಪೌರಾಣಿಕ ವೇಷಗಳಿಗಿಂತ ನಿತ್ಯಜೀವನದ ದೃಶ್ಯಗಳೇ ಅಭಿನಯಗೊಳ್ಳುತ್ತಿದ್ದುವು. ಉದಾಹರಣೆಗೆ ಒಬ್ಬ ವ್ಯಕ್ತಿ ಗರ್ಭಿಣಿ ಹೆಣ್ಣಿನಂತೆ ವೇಷ ಧರಿಸಿ ಹೊಟ್ಟೆಗೆ ದಪ್ಪನಾಗಿ ಬಟ್ಟೆ ಕಟ್ಟಿಕೊಂಡು ಅಶ್ಲೀಲದ ಮಾತುಗಳನ್ನಾಡುತ್ತ ಹಾಡು ಹೇಳುತ್ತ ಬರುತ್ತಾನೆ. ಇದಕ್ಕೆ ಯಾರು ಕಾರಣರು ಎಂದು ಕೇಳಿದಾಗ ಅಲ್ಲಿರುವ ಯಾರನ್ನೋ ತೋರಿಸುತ್ತಾನೆ. ಜನ ಗೊಳ್ಳೆಂದು ನಗುತ್ತಾರೆ, ನಕ್ಕು ನಕ್ಕು ಬೀಳುತ್ತಾರೆ. ಇಂಥವೇ ದೃಶ್ಯಗಳು.

ಹಿರೇಗೌಜದ 'ಹಗಣ'ವು ಹಳದೀಪುರದ ಹಗರಣಕ್ಕಿಂತ ಹೆಚ್ಚು ಜಾನಪದೀಯ, ಹೆಚ್ಚು ಗ್ರಾಮ್ಯ, ಪ್ರಾಚೀನ ಕರ್ನಾಟಕದ ಹಗರಣಕ್ಕೆ ಹೆಚ್ಚು ಸಮೀಪ. ಉತ್ತರ ಕನ್ನಡ ಜಿಲ್ಲೆಯ ಹಗರಣವು ಅಲ್ಲಿಯ ಯಕ್ಷಗಾನದಿಂದಾಗಿ ಹೆಚ್ಚು ವರ್ಣರಂಜಿತ ಮತ್ತು ಹೆಚ್ಚು ಶಿಷ್ಟ. ಹಿರೇಗೌಜದ ಹಗಣವನ್ನು ನಾನು ಬರೀ ಅಲ್ಲಿನ ಜನರ ಬಾಯಿಂದ ಕೇಳಿ ಅದನ್ನು ಕಲ್ಪಿಸಿಕೊಂಡು ತೃಪ್ತಿಪಡಬೇಕಾಯಿತು. ಏಕೆಂದರೆ ಅದು ನಡೆಯುವುದು ಹನ್ನೆರಡು ವರ್ಷಗಳಿಗೊಮ್ಮೆ, ಅದೂ ಹಳ್ಳಿಯ ಒಳ ಜಗಳಗಳಿಂದ ದೂರವಿದ್ದರೆ. ಆ ಎಲ್ಲ ವಿಷಯಗಳೂ ನನ್ನ ಸಂಪ್ರಬಂಧಗಳಲ್ಲಿ ಬಂದಿವೆ, ಆಯಾ ಶೋಧದ ಹಿನ್ನೆಲೆಯ ಅನುಭವ ನಿರೂಪಣೆಯನ್ನು ಹೊರತುಪಡಿಸಿ.

## ಹಳೆಯಬೆಳ್ಗೊಳ, ಮೂಲ ಶ್ರವಣಬೆಳ್ಗೊಳ

ಒಂದು ವಿಚಾರಗೋಷ್ಠಿಯಲ್ಲಿ "ಶ್ರವಣಬೆಳ್ಗೊಳ, ಒಂದು ಸಾಂಸ್ಕೃತಿಕ ಕೇಂದ್ರವಾಗಿ" ಎಂಬ ಸಂಪ್ರಬಂಧವನ್ನು ಮಂಡಿಸಬೇಕಿತ್ತು. ಅದಕ್ಕಾಗಿ ಮತ್ತೆ ಎಪಿಗ್ರಾಫಿಯ ಕರ್ನಾಟಿಕದ ಎರಡನೆಯ ಸಂಪುಟ ಇತ್ಯಾದಿ ಶಾಸನ ಸಂಪುಟಗಳನ್ನು ಇನ್ನೂ ಹಲವು ಗ್ರಂಥಗಳನ್ನು ಅಭ್ಯಾಸ ಮಾಡಿದೆ. ವಿಚಾರಗೋಷ್ಠಿಯಲ್ಲಿ ನಾನು ಮಂಡಿಸುವ ಸಂಪ್ರಬಂಧದಲ್ಲಿ ಏನಾದರೂ ಹೊಸ ವಿಷಯ ಇರಬೇಕೆಂಬ ಸಂಕಲ್ಪ ನನ್ನದು. ಹಾಗೆ ಇದ್ದರೇ ಅದು ಸಂಪ್ರಬಂಧ (Research paper), ಇಲ್ಲದಿದ್ದರೆ ಎಷ್ಟೇ ಆಕರ್ಷಕ ಭಾಷೆಯಲ್ಲಿರಲಿ ಅದು ಬರೀ ಲೇಖನ (Article, Essay). ಆ ಕಾರಣ ಯಾವುದೇ ವಿಷಯ ಮಂಡನೆ ಮಾಡುವ ಮುನ್ನ ಸಾಕಷ್ಟು ಅಧ್ಯಯನ ಮಾಡಿ ಸಿದ್ಧತೆ ಮಾಡಿಕೊಳ್ಳುತ್ತಿದ್ದೆ. ಈ ಬಾರಿ ಶ್ರವಣ ಬೆಳ್ಗೊಳಕ್ಕೆ ಸಂಬಂಧಿಸಿದಂತೆ ಓದುತ್ತಿರುವಾಗ ಆರ್. ನರಸಿಂಹಾಚಾರ್ಯರು ಬರೆದ ಒಂದು ಚಿಕ್ಕ ಟಿಪ್ಪಣಿ ವಿಶೇಷ ಗಮನವನ್ನು ಸೆಳೆಯಿತು. ಶ್ರವಣಬೆಳ್ಗೊಳಕ್ಕೆ ಸಮೀಪದಲ್ಲಿರುವ ಹಳೆಯಬೆಳ್ಗೊಳದಲ್ಲಿ ಒಂದು ದೊಡ್ಡ ಕೊಳವಿದ್ದು ಅದರ ದಂಡೆ ಮೇಲೆ ಹಲವು ಭಗ್ನ ಜೈನ ವಿಗ್ರಹಗಳಿದ್ದುದನ್ನು ಅವರು ದಾಖಲಿಸಿದ್ದರು. ಅದನ್ನು ಓದುತ್ತಿದ್ದಂತೆ ನನ್ನ ಕುತೂಹಲದ ಬೀಜವು ಜೀವರಸ ತುಂಬಿಕೊಂಡು ಸ್ವಲ್ಪ ಹಿಗ್ಗಿತು; ಸ್ವಲ್ಪ ಮೊಳಕೆ ಒಡೆಯುವ ಸೂಚನೆಯೂ ಕಾಣಿಸಿತು. ನಾನು ಸ್ಥಳನಾಮ ವಿಜ್ಞಾನದ (Toponomy) ವಿದ್ಯಾರ್ಥಿಯಾಗಿ ಈ ಸಂಗತಿಯನ್ನು ಚೆನ್ನಾಗಿ ಬಲ್ಲವನಾಗಿದ್ದೆ - ಅನೇಕ ಊರ ಹೆಸರುಗಳು ತಮ್ಮಲ್ಲಿ ಚರಿತ್ರೆಯ ಯಾವುದೋ ಅಂಶವನ್ನು ಗರ್ಭೀಕರಿಸಿಕೊಂಡಿರುತ್ತವೆ ಮಾತ್ರವಲ್ಲ, "ಇತಿಹಾಸ ಮೌನವಹಿಸಿದಾಗ ಅವುಗಳು ಮಾತನಾಡುತ್ತವೆ" ಕೂಡ (Where history keeps mum, place names speak). Oxford ಹೆಸರೇ ಹೇಳುತ್ತದೆ, ಅದರ ಪಕ್ಕದ ನದಿಯಲ್ಲಿ ದನಗಳು ದಾಟಲು ಅನುಕೂಲವಾದ ಜಾಗ ಇತ್ತೆಂಬುದನ್ನು. ಬೆಂಗಳೂರಿನ ಭಾಗವಾಗಿರುವ ದೀಪಾಂಜಲಿ ನಗರದ ಮೊದಲ ಹೆಸರು ದೀವಟಿಗೆ ರಾಮನ ಹಳ್ಳಿ. ಆ ಹಳ್ಳಿಯ - ತಪ್ಪಾಯ್ತು, ಬಡಾವಣೆಯ - ಜನ ಹೇಳುತ್ತಿದ್ದಂತೆ ಮುಮ್ಮಡಿ ಕೃಷ್ಣರಾಜ ಒಡೆಯರ್ ಮೈಸೂರಿನಿಂದ ಬೆಂಗಳೂರಿಗೆ ಬರುವಾಗ ದಾರಿಯಲ್ಲಿ ಬೆಂಗಳೂರಿನ ಹೊರ ಅಂಚಿನಲ್ಲಿ ರಾಮ ಎಂಬಾತ ಕಾದಿದ್ದು ಆ ದೊರೆಗಳಿಗೆ

'ದೀವಟಿಗೆ ಸಲಾಮು' ಗೌರವವನ್ನು ಸಲ್ಲಿಸುತ್ತಿದ್ದ. ಅವನ ವಿನಯ ಶ್ರದ್ಧೆಗಳನ್ನು ಮೆಚ್ಚಿದ ರಾಜರು ಅವನಿಗೆ ಅಲ್ಲಿ ಉಂಬಳಿ ಜಮೀನು ನೀಡಿದರು. ಅವನು ಕಟ್ಟಿದ 'ಗುಡ್ಲು' ಸುತ್ತ ಚಿಕ್ಕ ಹಳ್ಳಿ ಬೆಳೆದು ದೀವಟಿಗೆರಾಮನಹಳ್ಳಿ ಆಯ್ತು. ಅದು ಮುಂದೆ ನಗರದ ಭಾಗವಾಗಿ ದೀಪಾಂಜಲಿ ನಗರ ಆಯ್ತು. (ದೀವಟಿಗೆಗೂ ದೀಪಕ್ಕೂ ಸಂಬಂಧವಿದ್ದೇ ಇದೆ). ಆ ಹಳ್ಳಿಗೆ ಆ ಹೆಸರು ಬರಲು ಕಾರಣ ಎಲ್ಲೂ ಇತಿಹಾಸದಲ್ಲಿ ದಾಖಲಾಗಿಲ್ಲವಾದರೂ ಆ ಕತೆ ಅನಕ್ಷರಸ್ಥ ಹಿರಿಯರ ಜೀವಂತ ದಾಖಲೆಯಾದ ನಾಲಗೆ ಮೇಲೆ ಇದೆ, ಇತ್ತು. ಆ ದಾಖಲೆ ನಾಶವಾದರೂ ಆ ಹೆಸರಲ್ಲಿ ತನ್ನದೇ ಆದ ರೀತಿಯಲ್ಲಿ ಆ ಇತಿಹಾಸ ತನ್ನನ್ನು ತಾನು ಹುದುಗಿಸಿಕೊಂಡಿರುತ್ತದೆ. ಅಮೆರಿಕದ ನ್ಯೂಯಾರ್ಕ್ ಹೆಸರೇ ಹೇಳುತ್ತದೆ - ಇನ್ನಾವುದೋ ಯಾರ್ಕ್ ಎಂಬ ಊರು ಇದೆ ಎಂಬುದನ್ನು; ಆ ಯಾರ್ಕ್ ನಗರ ಇಂಗ್ಲೆಂಡಿನಲ್ಲಿದೆ. ಹಾಗೆಯೇ ಹಳೆಯ ಬೆಳ್ಗೊಳ ಎಂಬ ಹೆಸರಿದ್ದರೆ ಇನ್ನೊಂದು ಬೆಳ್ಗೊಳ ಯಾವುದು ? ಶ್ರವಣ ಬೆಳ್ಗೊಳವೇ ? ಬಿಳಿಯ ಕೊಳ, ಎಂದರೆ ಶುಭ್ರ ಜಲದ ಕೊಳದಿಂದಾಗಿ ಆ ಹೆಸರು ಊರಿಗೆ ಬಂದಿರುತ್ತದೆ. ಶ್ರವಣ ಬೆಳ್ಗೊಳದಲ್ಲಿ ಒಂದು ದೊಡ್ಡ ಸುಂದರ ಕೊಳವಿದ್ದರೂ ಅದು ತೀರ ಈಚಿನದು, ಮೈಸೂರರಸರ ಕಾಲದ್ದೆಂದು ಅಲ್ಲಿನ ಶಾಸನವೇ ಹೇಳುತ್ತದೆ. ಹಾಗಾದರೆ....? ಆ ಬಿಳಿಯ ಕೊಳವು ಹಳೆಯ ಬೆಳ್ಗೊಳದ ಕೊಳವೇ? ಹಳೆಯ ಬೆಳ್ಗೊಳವೇ ಮೂಲ ಬೆಳ್ಗೊಳವೇ? ಶ್ರವಣ ಬೆಳ್ಗೊಳ ಊರು ಈಚಿನದೇ? ಈ ಸಂದೇಹ ಸುಳಿಯಲಾರಂಭಿಸಿತು. ಹಳೆಯ ಬೆಳ್ಗೊಳದಲ್ಲಿ ಗಂಗರ ಕಾಲದ ಬಸದಿಯೊಂದಿದ್ದು ಅಲ್ಲಿನ ಶಾಸನವೂ ಪ್ರಕಟವಾಗಿತ್ತು. ಇದು ನನ್ನ ಸಂದೇಹವನ್ನು ದೃಢಪಡಿಸಿತ್ತು.

ನಾವು ಹುಡುಗರಾಗಿದ್ದಾಗ ನನ್ನ ಹಳ್ಳಿಯ ಕಲ್ಲಿಹಾಳ ಬಸಪ್ಪ ಹುಡುಗರ ತಂಡದ ನಾಯಕತ್ವವನ್ನು ವಹಿಸುತ್ತಿದ್ದ, ಅದೂ "ಜೇನು ಮುರಿ"ಯಲು ಹೊರಟಾಗ. ಊರ ಹೊರಗೆ ಹಳ್ಳದ ದಡದಲ್ಲಿ ನೂರಾರು ಮರಗಳು, ಸಾವಿರಾರು ಪೊದೆಗಳು. ಅವುಗಳ ಮಧ್ಯೆ ನುಗ್ಗಿ ಜೇನುಗೂಡು ಹುಡುಕುವುದು ಅಸಾಧ್ಯವಾಗಿರದಿದ್ದರೂ ಬಹು ಕಷ್ಟದ ಕೆಲಸವಾಗಿತ್ತು. ನಮ್ಮ ನಾಯಕ ಬಸಪ್ಪ ಒಂದು ದಿಬ್ಬದ ಮೇಲೆ ನಿಂತು ಕೆರೆ ಅಥವಾ ಹಳ್ಳದ ನಿಂತ ನೀರ ಕಡೆಯಿಂದ ಜೇನು ಹುಳುಗಳು ಬಂದು ಹೋಗುವುದನ್ನು ಒಬ್ಬ ಖಗೋಳ ವಿಜ್ಞಾನಿಯಂತೆ ಏಕಾಗ್ರಚಿತ್ತತೆಯಿಂದ ಸುತ್ತಮುತ್ತ ವೀಕ್ಷಿಸುತ್ತಿದ್ದ. ಅವುಗಳ ಜಾಡನ್ನು ಗಮನಿಸಿ, ಈ ಕಡೆಯ ಪೊದೆಗಳ ಕಡೆ ನುಗ್ಗಿ ಎಂದು ಆಜ್ಞೆ ಮಾಡಿದೊಡನೆ ನಾವು ಕಾಲಿಗೆ ತಗಲುವ ಮೈಗೆ ಪರಚುವ ಕಡ್ಡಿ ಮುಳ್ಳುಗಳನ್ನು ಲೆಕ್ಕಿಸದೆ ನುಗ್ಗಿ ಇಣುಕಿ ಇಣುಕಿ ನೋಡಿ ಪತ್ತೆ ಹಚ್ಚುತ್ತಿದ್ದೆವು. ಅವನು ಬಂದು ಮುಖ ಮುಚ್ಚಿಕೊಂಡು ಜೇನು ಹುಳುಗಳನ್ನು ಓಡಿಸಿ ಕಚ್ಚಿಸಿಕೊಳ್ಳುತ್ತಿದ್ದ. ಹತ್ತಿರದ ನಮ್ಮನ್ನೂ ಕಚ್ಚುತ್ತಿದ್ದವು. ಅವನು ಮುರಿದ ಜೇನಿನ ಸವಿಯು ಹುಳುಗಳು ಕಡಿದ ಗಾಯಗಳ ಒಳ ಮುಲಾಮಾಗುತ್ತಿತ್ತು. ಹಲವು ಸಾರಿ ಜೇನುಗೂಡು ಸಿಗದೆ ನಿರಾಸೆ ಪಟ್ಟದ್ದೂ ಉಂಟು. ಜೇನುತುಪ್ಪದ ಬದಲು ಬೇರೆ ಕಾಡು ಹಣ್ಣುಗಳಾದರೂ ಸಿಗುತ್ತಿದ್ದವು. ನಮ್ಮ ಶೋಧ ಕಾರ್ಯ ಎಂದೂ ವ್ಯರ್ಥವಾಗುತ್ತಿರಲಿಲ್ಲ. ಕಾಡುಹಣ್ಣು ಹುಡುಕುತ್ತ

ಹೋದಾಗ ಜೇನುಗೂಡೇ ಕಣ್ಣಿಗೆ ಬಿದ್ದ ಸಂದರ್ಭಗಳೂ ಇಲ್ಲದಿಲ್ಲ. ಹುಡುಕುವುದೇ ಹುಡುಕಾಟದ ಲಾಭವೂ ಆಗಿರುತ್ತಿತ್ತು; ಹುಡುಗಾಟದ ಲಾಭವಂತೂ ಆಗಿರುತ್ತಿತ್ತು.

ಆ ಬಸಪ್ಪನಂತೆ ನನಗೂ ಶ್ರವಣ ಬೆಳ್ಗೊಳದಲ್ಲಿ ಜೇನ್ನುದ್ದಿಯ ಸೂಚನೆ ದೊರಕಿತ್ತು. ಇಬ್ಬರು ಗೆಳೆಯರೊಡನೆ ಶ್ರವಣ ಬೆಳ್ಗೊಳಕ್ಕೆ ಹೋಗಿ ಅಲ್ಲಿ ಚಿಕ್ಕ ಬೆಟ್ಟ ಇಳಿದು ಹಳೆಯ ಬೆಳ್ಗೊಳಕ್ಕೆ ಆರೆಂಟು ಕಿಲೋ ಮೀಟರ್ ನಡೆದುಹೋದೆವು. ನನ್ನ ನಿರೀಕ್ಷೆಯಂತೆ ಅಲ್ಲಿನ ಕೊಳ ಆ ಪುಟ್ಟ ಹಳ್ಳಿಯ ಅಗತ್ಯಕ್ಕಿಂತ ದೊಡ್ಡದಾಗಿತ್ತು. ಅದು ಬರೀ ಹೊಂಡವಾಗಿರಲಿಲ್ಲ. ಕಲ್ಲು ಕಟ್ಟಡದ ದೊಡ್ಡ ಕೊಳವಾಗಿದ್ದು ಅದರ ದಡದ ಮೇಲೆ ಭಗ್ನ ಜಿನ ವಿಗ್ರಹಗಳಿದ್ದವು. ಹಳ್ಳಿಯ ಬೀದಿಗಳು ಇಕ್ಕಟ್ಟಾಗಿದ್ದು ಅದೊಂದು ಹಳೆಯ ಊರು ಎಂಬುದರ ಸೂಚಕವಾಗಿದ್ದುವು. ಈಗಿನ ಶ್ರವಣ ಬೆಳ್ಗೊಳದ ಬೀದಿಗಳು ವಿಶಾಲವಾಗಿದ್ದು ಆಮೇಲೆ ವ್ಯವಸ್ಥಿತವಾಗಿ ಕಟ್ಟಿದ ಊರೆಂಬುದು ಸ್ಪಷ್ಟವಾಗಿತ್ತು. ಒಂದು ಊರು ಅಥವಾ ನಗರ ಪ್ರದೇಶವನ್ನು ನೋಡುತ್ತಿದ್ದಂತೆ ಅದರ ನಿರ್ಮಾಣ ತಂತ್ರವೇ Planning (ಅಂತಹ 'ತಂತ್ರ'ವಿದ್ದರೆ) - ಆ ಊರಿನ ಪ್ರಾಚೀನತ್ವ ಅಥವಾ ಅರ್ವಾಚೀನತ್ವವನ್ನು ಸೂಕ್ಷ್ಮವಾಗಿ ಸೂಚಿಸುವುದನ್ನು ಯಾರು ಬೇಕಾದರೂ ಗಮನಿಸಬಹುದು (ಬೆಂಗಳೂರಿನ ಜಯನಗರದ ಜೊತೆ ಅವಿನ್ಯೂ ರಸ್ತೆಯ ಅಕ್ಕಪಕ್ಕದ ಸಂದು ಬೀದಿಗಳನ್ನು ಹೋಲಿಸಿ). ಹಳೆಯ ಬೆಳ್ಗೊಳದ ಪಕ್ಕದಲ್ಲೇ ಇದ್ದ ಭಗ್ನ ಬಸದಿಯು ಗಂಗರ ಕಾಲದ ಎಲ್ಲ ವಾಸ್ತು ಶೈಲಿಯ ಲಕ್ಷಣಗಳನ್ನು ಹೊಂದಿದ್ದು ಶ್ರವಣ ಬೆಳ್ಗೊಳ ಪ್ರದೇಶದ ನೆಲದ ಮೇಲಿನ ಶಾಸನಗಳಲ್ಲೆಲ್ಲ ಬಹು ಹಿಂದಿನ ಶಾಸನವನ್ನು ಒಳಗೊಂಡಿತ್ತು (ಚಿಕ್ಕ ಬೆಟ್ಟದ ಮೇಲೆ ಇನ್ನೂ ಪ್ರಾಚೀನ ಶಾಸನಗಳಿವೆ). ಆ ಬಸದಿಯನ್ನು ನೋಡುತ್ತಿದ್ದಂತೆ ಈಗ ಜೈನರಾರೂ ಹಳೆಯ ಬೆಳ್ಗೊಳದಲ್ಲಿರದಿದ್ದರೂ ಹತ್ತು ಹನ್ನೊಂದನೇ ಶತಮಾನಕ್ಕೆ ಮೊದಲು ಅದು ಜೈನರ ಊರಾಗಿದ್ದು ಚಿಕ್ಕ ಬೆಟ್ಟದ ಗುಹೆಗಳಲ್ಲಿದ್ದ ಜಿನಮುನಿಗಳು ಭಿಕ್ಷೆಗಾಗಿ ಆ ಊರಿಗೆ ಬಂದು ಹೋಗುತ್ತಿದ್ದರೆಂದು ಸಕಾರಣವಾಗಿ ಊಹಿಸಿದೆ. ಆ ಊರ ಹೊಲಗಳಲ್ಲಿ ಈಗಲೂ ದೊರಕುವ ಹಳೆಯ ಇಟ್ಟಿಗೆ ಬೋಕಿ ಚೂರುಗಳು ಆ ಊರಿನ ಪ್ರಾಚೀನತ್ವದ ಕುರುಹುಗಳಾಗಿದ್ದುವು. ಬಸದಿ ಸಮೀಪ ಒಂದು ಕೆರೆ ಇದ್ದು ಅದರ ಕೋಡಿ ಕಟ್ಟಲು ಕೆಲವು ಭಗ್ನ ಅವಶೇಷಗಳನ್ನೇ ಬಳಸಲಾಗಿತ್ತು. ಅದರ ಸಮೀಪದಲ್ಲೇ ಇದ್ದ ಊರಿನ ಹೆಸರು ಕೋಡಿ ಬೆಳ್ಗೊಳ. ನನಗೆ ಝುಗ್ಗನೆ ಅನ್ನಿಸಿತು : (ಹಳೆಯ) ಬೆಳ್ಗೊಳದ ಜನ ಒಂದು ಕಡೆ ವಲಸೆ ಹೋಗಿ ಕಟ್ಟಿದ ಊರು ಶ್ರವಣ ಬೆಳ್ಗೊಳ ಆಯ್ತು; ಇನ್ನೊಂದು ಕಡೆ ಹೋಗಿ ಕಟ್ಟಿದ ಊರು ಕೋಡಿ ಬೆಳ್ಗೊಳ ಎಂದಾಯ್ತು. ಒಂದು, ಜೈನರ ಕೇಂದ್ರವಾಗಿದ್ದುದರಿಂದ ಇನ್ನೊಂದು, ಕೆರೆಯ ಕೋಡಿ ಬಳಿ ಇದ್ದುದರಿಂದ ಆ ಹೆಸರುಗಳು ಬಂದುವು. ಶ್ರವಣ ಬೆಳ್ಗೊಳ ಊರಿಗೆ ಮೂಲ ಹಳೆಯ ಬೆಳ್ಗೊಳವೇ ಎಂಬುದು ಖಚಿತವಾಗುತ್ತಾ ಬಂದಿತು. ನನ್ನ ಸಂತೋಷದ ಲೋಟ ತುಂಬುತ್ತ ಬರುತ್ತಿತ್ತು. ಕೋಡಿ ಬೆಳ್ಗೊಳದಿಂದ ಬರುತ್ತ ಹಳೆಯ ಬೆಳ್ಗೊಳದಲ್ಲಿ ಒಂದು ಅರೆ ಭಗ್ನ, ಆದರೆ ಉಪ್ಪುಮರೆಂಬ ಅರ್ಚಕರಿಂದ ಪೂಜೆ ನಡೆಯುತ್ತಿರುವ ವಿಷ್ಣು ದೇವಾಲಯ ಕಾಣಿಸಿ ನನ್ನನ್ನು ಬೆರಗುಗೊಳಿಸಿತು. ಒಂದು ಕಡೆ ಭಗ್ನ ಬಸದಿ, ಇನ್ನೊಂದೆಡೆ ಭಗ್ನ ವಿಷ್ಣು ದೇವಾಲಯ. ಹೋ ! ಕಲ್ಯ

ಪ್ರದೇಶದಲ್ಲಿ ನಡೆದಿರುವಂತೆ (ಮುಂದೆ ನೋಡಿ) ಇಲ್ಲಿಯೂ ಜೈನರ, ವೈಷ್ಣವರ ಮಧ್ಯೆ ತಿಕ್ಕಾಟಗಳಾಗಿ ಆ ಕಾರಣ ನಿಮಿತ್ತವಾಗಿ ಅಲ್ಲಿ ಉಳಿದಿದ್ದ ಜೈನರು ಹಳೆಯ ಬೆಳ್ಗೊಳ ತ್ಯಜಿಸಿರಬಹುದೇ ? ಸಾಧ್ಯ ಎನ್ನಿಸಿತು. ಅಲ್ಲಿನ ಒಂದು ಜಾನಪದ ಆಚರಣೆ ಮತ್ತು ಕತೆ ಹಿಂದೊಮ್ಮೆ ಅಲ್ಲಿ ಜೈನರಿದ್ದುದರ ಹೆಚ್ಚಿನ ಕುರುಹುಗಳಾಗಿದ್ದುವು. ಆ ಊರಲ್ಲಿನ ಹಲವು ಜನ ಮಾಂಸಾಹಾರಿಗಳಾಗಿದ್ದರೂ ಊರ ದೇವಿಗೆ ಊರೊಳಗೆ ಪ್ರಾಣಿ ಬಲಿ ಕೊಡದೆ ಊರ ಹೊರಗೆ ಅದನ್ನು ನೆರವೇರಿಸುತ್ತಿದ್ದುದು ಹಿಂದೆ ಆ ಊರಲ್ಲಿದ್ದ ಜೈನರ ಅಹಿಂಸಾ ತತ್ವಕ್ಕೆ ಜೈನೇತರರು ತೋರುತ್ತಿದ್ದ ಒಂದು ಬಗೆಯ ಗೌರವದ ಸಂಕೇತವಾಗಿತ್ತು. ಒಂದು ಕತೆಯ ಪ್ರಕಾರ ಹಳೆ ಬೆಳ್ಗೊಳದ ಬಸದಿಗಳನ್ನು ರಾತ್ರಿಯೆಲ್ಲ ಕೆಡವಿ ಶ್ರವಣ ಬೆಳ್ಗೊಳದಲ್ಲಿ ಭಂಡಾರ ಬಸದಿ ನಿರ್ಮಿಸಲಾಯ್ತು. ಬೆಳಗಿನ ಜಾವ ಕೋಳಿ ಕೂಗುವ ಹೊತ್ತಿಗೆ ಈಗಿನ ಬಸದಿಯನ್ನು ಕೆಡವಲಾಗದೆ ಹಾಗೇ ಬಿಟ್ಟು ಹೋದರು. ಆ ಎಲ್ಲ ಕತೆಗಳು ನನಗೆ ಅರ್ಥಪೂರ್ಣವಾಗಿದ್ದುವು. ನನ್ನ ಸಂತೋಷದ ಲೋಟ, ಅಲ್ಲ ಗುಡಾಣ ತುಂಬಿತು.

ಶ್ರವಣಬೆಳ್ಗೊಳದಲ್ಲೂ ದೊರಕಿದ ಅದೇ ಬಗೆಯ ಮಾಹಿತಿಯೊಡನೆ ವಾಪಸಾಗಿ, ಪ್ರಕಟಿತ ಶಾಸನಗಳನ್ನು ಮತ್ತೊಮ್ಮೆ ಪರಿಶೀಲಿಸಿ, ತಾಳ್ಮೆಯಿಂದ ಎಲ್ಲವನ್ನೂ ವಿಶ್ಲೇಷಿಸಿದಾಗ ಒಂದು ಸ್ಪಷ್ಟ ಚಿತ್ರ ಮೂಡಿತು. ಕ್ರಿ.ಶ. 1-2ನೇ ಶತಮಾನದಲ್ಲಿ ಅಥವಾ ಅದಕ್ಕೂ ಸ್ವಲ್ಪ ಪೂರ್ವದಲ್ಲಿ ಉತ್ತರದಿಂದ ಜಿನಮುನಿಗಳು ಬಂದು ಚಿಕ್ಕ ಬೆಟ್ಟದ ಗುಹೆಗಳಲ್ಲಿ ನೆಲಸಿದಾಗ ಅದರ ಸುತ್ತ ಮುತ್ತ ಸಣ್ಣ ಕಾಡು ಇತ್ತು (ಇದಕ್ಕೆ ಆರನೇ ಶತಮಾನದ ಶಾಸನಾಧಾರವಿದೆ). ಮತ್ತು ಸಮೀಪದಲ್ಲಿದ್ದ ಊರೆಂದರೆ ಬೆಳ್ಗೊಳ ಆಗಿತ್ತು - ಈಗಿನ ಹಳೆಯ ಬೆಳ್ಗೊಳ. ಆ ಊರ ಜನ ಶ್ರಾವಕರಾಗಿದ್ದು (ಜಿನಭಕ್ತರು) ಮುನಿಗಳು 'ಚರಿಗೆ'ಗೆ ಬಂದಾಗ ಭಿಕ್ಷೆ ನೀಡುತ್ತಿದ್ದರು. ಚಿಕ್ಕ ಬೆಟ್ಟಕ್ಕೆ ಬೆ(ವೆ)ಳ್ಗೊಳ ಅದ್ರಿ ಎಂದು ಹೆಸರು ಬರಲು ಕಾರಣ ಆ ಬೆಟ್ಟಕ್ಕೆ ಸಮೀಪವಾಗಿದ್ದ ಹಳ್ಳಿ ಅದೇ ಆಗಿದ್ದುದು. ಹತ್ತನೆ ಶತಮಾನದವರೆಗಿನ ಶ್ರವಣ ಬೆಳ್ಗೊಳ ಪ್ರದೇಶದ ಶಾಸನಗಳಲ್ಲಿ ಬರುವ "ಬೆಳ್ಗೊಳ" ಊರ ಹೆಸರು ಈಗಿನ ಹಳೆಯ ಬೆಳ್ಗೊಳವನ್ನು ಮಾತ್ರ ಸೂಚಿಸುತ್ತದೆ. ಅಲ್ಲಿಯವರೆಗೆ ಶ್ರವಣ ಬೆಳ್ಗೊಳ ಎಂಬ ಊರೇ ಇರಲಿಲ್ಲ. ದೊಡ್ಡ ಬೆಟ್ಟವು ಮುನಿಗಳೂ ಜನಗಳೂ ಹತ್ತಿ ಇಳಿಯುವುದಾಗಿತ್ತೇ ಹೊರತು ಹತ್ತನೇ ಶತಮಾನದವರೆಗೆ ಸಾಂಸ್ಕೃತಿಕವಾಗಿ ಅದೊಂದು ಸೊನ್ನೆ, ನೈಸರ್ಗಿಕ ಭಾರಿ ಎತ್ತರದ ಬಂಡೆ. ಆಗ ಸಾಂಸ್ಕೃತಿಕವಾಗಿ ಮತ್ತು ಧಾರ್ಮಿಕವಾಗಿ ಜೀವಂತವಾಗಿದ್ದುದೆಂದರೆ ಚಿಕ್ಕ ಬೆಟ್ಟವೇ. ಹತ್ತನೇ ಶತಮಾನದ ಉತ್ತರಾರ್ಧದಲ್ಲಿ ಗಂಗರ ದಂಡನಾಯಕ ಚಾವುಂಡರಾಯನು ದೊಡ್ಡ ಬೆಟ್ಟದ ಮೇಲೆ ಬಾಹುಬಲಿ ವಿಗ್ರಹ ಕೆತ್ತಿಸಲಾರಂಭಿಸಿದಾಗ ಅದರ ಬುಡದಲ್ಲಿ ಹಾಕಿರಬಹುದಾದ ತಾತ್ಕಾಲಿಕ ಡೇರೆ, ಚಪ್ಪರ, ಗುಡಿಸಲುಗಳು ಮುಂದೆ ಅಲ್ಲೊಂದು ಊರಾಗಲು ಬುನಾದಿಯಾದವು. ಆ ಶಿಲ್ಪಕಾರ್ಯ ನಡೆಯುವಾಗ ಚಾವುಂಡರಾಯನ ತಾತ್ಕಾಲಿಕ ಊಟ ವಸತಿ ಹಳೆಯ ಬೆಳ್ಗೊಳದಲ್ಲೇ. ಅಲ್ಲಿ ಅವನ ಮಗ ಬಸದಿ ಕಟ್ಟಿಸಲು ಅದೂ ಒಂದು ಕಾರಣ. ಬಾಹುಬಲಿ ಶಿಲ್ಪದಿಂದಾಗಿ ದೊಡ್ಡ ಬೆಟ್ಟವು ಸಾಂಸ್ಕೃತಿಕ ಚೈತನ್ಯವನ್ನು ಪಡೆದು ಜೈನರ ತೀರ್ಥಕ್ಷೇತ್ರ ಮಾತ್ರವಾಗಿದ್ದ ಆ ಪ್ರದೇಶ ಜೈನೇತರರಿಗೆ ಪ್ರೇಕ್ಷಣೀಯ ಸ್ಥಳವೂ ಆಯ್ತು. ದೂರದ

ಊರುಗಳಿಂದ ಜನ ಬಂದು ಅದನ್ನು ನೋಡಲಾರಂಭಿಸಿದಾಗ ದೊಡ್ಡ ಬೆಟ್ಟದ ಬುಡದಲ್ಲಿ ಅಂಗಡಿಗಳು (ಅವೂ ಜೈನರವೇ ಆಗಿರಬಹುದು) ಕಾಣಿಸಿಕೊಂಡವು. ಹಳೆಯ ಬೆಳ್ಗೊಳದ ಜೈನರಿಗೆ ತಮ್ಮ ಊರಲ್ಲಿರುವುದಕ್ಕಿಂತ ತಮ್ಮ ಪವಿತ್ರ ಕ್ಷೇತ್ರದಲ್ಲಿಯೇ ವಾಸಿಸಿದಂತಾಯ್ತು ಮತ್ತು ಅದರಿಂದ ಆರ್ಥಿಕ ಅನುಕೂಲಗಳೂ ಹೆಚ್ಚು ಎಂದು ಅನ್ನಿಸಿ ಕ್ರಮೇಣ ಅಲ್ಲಿಂದ ಈಗಿನ ಶ್ರವಣ ಬೆಳ್ಗೊಳ ಪ್ರದೇಶಕ್ಕೆ ವಲಸೆ ಬಂದರು. ಹೊಸ ಊರಿಗೆ ಅವರ ಹಿಂದಿನ ಊರ ಹೆಸರೇ ಪ್ರಾಪ್ತವಾಯಿತು. ಎರಡೂ ಬೆಳ್ಗೊಳಗಳೇ ಆದುದರಿಂದ ಗೊಂದಲ ನಿವಾರಣೆಗೆ ಹಳೆಯ ಬೆಳ್ಗೊಳ ಎಂಬುದಾಗಿ ಒಂದು, ಶ್ರವಣ ಬೆಳ್ಗೊಳ ಎಂಬುದಾಗಿ ಇನ್ನೊಂದು ಜನರಲ್ಲಿ ಬಳಕೆಗೆ ಬಂದುವು. (ನನ್ನ ಹುಟ್ಟೂರು ಕೋಗಲೂರಿನಿಂದ ಕೆರೆ ಆಚೆ ನಿರ್ಮಾಣವಾದ ಚನ್ನಗಿರಿ ತಾಲೂಕಲ್ಲೇ ದೊಡ್ಡದಾದ ಹನುಮಂತ ದೇವರ ಗುಡಿಯ ಸಮೀಪಕ್ಕೆ ಹೋಗಿ ಕೆಲವರು ಮನೆ ಕಟ್ಟಿಕೊಂಡರು - ಅದು ಆರ್ಥಿಕ ಕಾರಣಕ್ಕಾಗಿಯೇ. ಎರಡೂ ಕೋಗಲೂರುಗಳೇ - ಒಂದು ಹಿರೇಕೋಗಲೂರು ಎನ್ನಿಸಿಕೊಂಡಿತು, ಇನ್ನೊಂದು ಚಿಕ್ಕ ಕೋಗಲೂರು ಎನ್ನಿಸಿಕೊಂಡಿತು). ಹೊಸ ಊರಿಗೆ ನಡೆದ ಜೈನರ ವಲಸೆ ಅದು ದೊಡ್ಡ ಊರಾಗಿ, ದೊಡ್ಡ ಜೈನ ಕೇಂದ್ರವಾಗಿ ಕರ್ನಾಟಕದ ಪ್ರಮುಖ ಸಾಂಸ್ಕೃತಿಕ ಕೇಂದ್ರಗಳಲ್ಲೊಂದಾಗಿ ಬೆಳೆಯಲು ಮುಖ್ಯ ಕಾರಣವಾಯಿತು.

ಹಳೆಯ ಬೆಳ್ಗೊಳಕ್ಕೆ ಅಂಟಿಕೊಂಡಿದ್ದ ಅಲ್ಪ ಸಂಖ್ಯಾತರಾಗಿದ್ದ ಕೆಲವು ಜೈನರೂ ಆ ಊರನ್ನು ತ್ಯಜಿಸಿ ಶ್ರವಣ ಬೆಳ್ಗೊಳಕ್ಕೆ ವಲಸೆ ಬಂದುದು ಹದಿನಾಲ್ಕನೇ ಶತಮಾನದ ಆದಿಯಲ್ಲಿ ನಡೆದ ಜೈನ ವೈಷ್ಣವ ಘರ್ಷಣೆಗಳ ಪರಿಣಾಮವಾಗಿ. ಆ ಘರ್ಷಣೆಗಳಲ್ಲಿ ಕೆಲವು ಬಸದಿಗಳೂ ನಾಶವಾದುವು, ಕೆಲವು ವಿಷ್ಣು ದೇವಾಲಯಗಳೂ ನಾಶವಾದುವು. ಅದರ ಸ್ಪಷ್ಟ ಕುರುಹುಗಳನ್ನು ಆಗಲೇ ಸೂಚಿಸಿಯಾಗಿದೆ (ಕಲ್ಯದಲ್ಲೂ ಅಂತಹುದೇ ನಡೆಯಿತು - ಮುಂದೆ ನೋಡಿ).

ಈ ಚಿತ್ರ ಪೂರ್ಣಗೊಳ್ಳುತ್ತಲೇ ತುಂಬಿದ್ದ ನನ್ನ ಸಂತೋಷದ ಕುಂಭ ತುಳುಕಿತು, ಸಂಪ್ರಬಂಧವೊಂದರ ಆಕಾರವನ್ನೂ ತಾಳಿತು. ಮುಂದೆ ಶ್ರವಣ ಬೆಳ್ಗೊಳಕ್ಕೆ ಪ್ರವಾಸಕ್ಕಾಗಿ ಕರೆದೊಯ್ದು ವಿದ್ಯಾರ್ಥಿಗಳಿಗೆ ಹಳೆಯ ಬೆಳ್ಗೊಳವನ್ನೂ ತೋರಿಸಿ ನನ್ನ ಶೋಧನಕಾರ್ಯ ಹಂತಹಂತವಾಗಿ ಮುಂದುವರಿದುದನ್ನು ವಿವರಿಸಿದೆ. ಮೊದಲು ಹುಟ್ಟಿದ ಕಿವಿಗಿಂತ ಆಮೇಲೆ ಬಂದ ಕೋಡೇ ಮುಂದಾಯಿತೆಂಬಂತೆ ಶ್ರವಣ ಬೆಳ್ಗೊಳ ಇಂದು ರಾರಾಜಿಸುತ್ತಿದೆ; ನನ್ನಂತಹ ಒಂದಿಬ್ಬರು ಇಳಿವಯಸ್ಸಿನ ಬಡಪಾಯಿ ಸಂಶೋಧಕರ ಕಣ್ಣಿಗೆ ಹಳೆಯ ಬೆಳ್ಗೊಳ ಮಾತ್ರ ಸ್ಫುರದ್ರೂಪಿ ಅಜ್ಜಿಯಂತೆ ಕಾಣಿಸುತ್ತಿದೆ.

**ಕಲ್ಯ : ಪಾಲ್ಕುರಿಕೆ ಸೋಮನಾಥನ ಮನೆ, ಸಮಾಧಿ : ಬೌದ್ಧಧರ್ಮ ಇ.**

ಶ್ರವಣ ಬೆಳ್ಗೊಳದ ಬುಕ್ಕನ ಶಾಸನ ಒಂದು ರೀತಿಯಲ್ಲಿ ಕನ್ನಡದ ಅಶೋಕನ ಧರ್ಮಶಾಸನ. ಜೈನರಿಗೂ ಶ್ರೀ ವೈಷ್ಣವರಿಗೂ ಹದಿನಾಲ್ಕನೇ ಶತಮಾನದ ಆದಿಯಲ್ಲಿ

ಘರ್ಷಣೆಗಳಾದಾಗ ಬುಕ್ಕನು ಎರಡೂ ಧರ್ಮಗಳಿಗೂ ಭೇದವಿಲ್ಲವೆಂದು ಸಾರಿ ಒಬ್ಬರು ಇನ್ನೊಬ್ಬರ ಧರ್ಮವನ್ನು ರಕ್ಷಿಸಲು ಕಂಕಣಬದ್ಧರಾಗಬೇಕೆಂದು ಹೇಳಿ ಎರಡೂ ಪಂಗಡಗಳ ಜನರಿಗೆ ಸ್ನೇಹವನ್ನುಂಟುಮಾಡಿದನೆಂಬುದು ಪ್ರಸಿದ್ಧ ವಿಷಯ. ಆ ಶಾಸನದ ಮೂಲ ಮೊದಲ ಪಾಠ ಮಾಗಡಿ ತಾಲೂಕಿನ ಕಲ್ಯದಲ್ಲಿದೆಯೆಂಬುದು ಶಾಸನ ವಿದ್ಯಾರ್ಥಿಗಳಿಗೆ ತಿಳಿದ ವಿಷಯ. ಶ್ರವಣ ಬೆಳ್ಗೊಳದ ಶಾಸನವು ಲಿಖಿತವಾಗುವ ಕೆಲವು ತಿಂಗಳ ಹಿಂದೆ ಲಿಖಿತವಾದ ಕಲ್ಯ ಶಾಸನವು ಒಂದು ಕಹಿ ವಾಸ್ತವವನ್ನೂ ಹೇಳುತ್ತದೆ: ಶ್ರೀ ವೈಷ್ಣವರಿಂದ ಜೈನರಿಗೆ ಪ್ರಾಣ ಹಾನಿಯೂ ಆಯಿತು. ಆ ಸಂಗತಿಯನ್ನು ಶ್ರವಣ ಬೆಳ್ಗೊಳ ಪಾಠದಲ್ಲಿ ತೇಲಿಸಲಾಗಿದೆ. ಜೊತೆಗೆ ಕಲ್ಯದಲ್ಲಿ ತೆಲುಗು ಬಸವ ಪುರಾಣದ ಕರ್ತೃ ಸೋಮನಾಥನ (13ಶ.) ಸಮಾಧಿಯಿರುವ ವಿಷಯವೂ ನನಗೆ ತಿಳಿದಿತ್ತು. ಅವೆರಡನ್ನೂ ಪ್ರತ್ಯಕ್ಷವಾಗಿ ನೋಡುವ ಕುತೂಹಲದಿಂದ ಅಲ್ಲಿಗೆ ಹೋದೆ. ಮಾಗಡಿಯಿಂದ ಹೋಗುವ ರಸ್ತೆಯ ಎಡಬದಿಯಲ್ಲಿ ಸುಮಾರು ಅರ್ಧ ಕಿಲೋಮೀಟರ್ ದೂರದ ಕಲ್ಯ ಊರ ಬಾಗಿಲಲ್ಲೇ ಒಂದು ಭಗ್ನ ಜಿನ ಪ್ರತಿಮೆ ಕಾಣಿಸಿ ಅಲ್ಲಿ ಹದಿನಾಲ್ಕನೇ ಶತಮಾನದಲ್ಲಿ ನಡೆದ ಘರ್ಷಣೆಗಳಿಗೆ ಅದು ಮೂಕ ಸಾಕ್ಷಿಯಾಗಿತ್ತು. ಯಾರೋ ಹೇಳಿದ ಪ್ರಕಾರ ಊರ ಪಕ್ಕದ ಬೆಟ್ಟದ ಎಡಭಾಗದಲ್ಲಿದ್ದ ಸಮಾಧಿಯೇ ಪಾಲ್ಕುರಿಕೆ ಸೋಮನಾಥನದೆಂದು ನೋಡಿ, ಅದೇ ಬೆಟ್ಟದ ಇನ್ನೊಂದು ಪಾರ್ಶ್ವದಲ್ಲಿದ್ದ ಕಲ್ಲೇಶ್ವರ ದೇವಾಲಯವನ್ನೂ ನೋಡಿಕೊಂಡು ಕೆಳಗಿಳಿದು ಬುಕ್ಕನ ಶಾಸನ ಶಿಲೆಯಿರುವ ಜಾಗವನ್ನು ಕೇಳಿದೆವು. ಯಾರಿಗೂ ಗೊತ್ತಿರಲಿಲ್ಲ. ಯಾರದೋ ಹೊಲದ ಹೆಸರು ಕೇಳಿ ಅಲ್ಲಿಗೆ ಹೋದಾಗ ಅಲ್ಲಿ ಶಾಸನವೇನೂ ಕಾಣಿಸಲಿಲ್ಲ. ಆದರೆ ಅಲ್ಲೇ ನೀರು ಹರಿದು ಕೊರಕಲಾದ ಹಳ್ಳದ ದಡದಲ್ಲಿ ಹೂತುಹೋಗಿದ್ದ ಒಂದು ಸುಟ್ಟ ಮಣ್ಣಿನ ಗುಡಾಣದ ಕೆಳ ಭಾಗ ಕಾಣಿಸಿತು. ಕುತೂಹಲದಿಂದ ಆ ದೊಡ್ಡ ಉದ್ದನೆಯ ಮಣ್ಣಿ ಪಾತ್ರೆಯ ಭಾಗವನ್ನು ಒಡೆದಾಗ ಅದರಲ್ಲಿದ್ದ ನವಣೆ ಧಾನ್ಯ ಸುರಿಯಿತು. ಅಲ್ಲಿಂದ ಆ ಕಡೆ ಈ ಕಡೆ, ಆ ತೋಟ ಈ ತೋಟ ಎಂದು ಬಹಳ ಓಡಾಡಿದೆವು. ಒಂದೆಡೆ ಒಂದೊಂದರಲ್ಲೂ ಏಳು ಮಡಕೆಗಳನ್ನು ಸೇರಿಸಿದ್ದ ಏಳು ಸಾಲುಗಳ ಶಿಲ್ಪವಿದ್ದ ಒಂದು ಶಿಲಾಫಲಕವು ಹೊಲದ ಬದಿಯಲ್ಲಿ ಬಿದ್ದಿತ್ತು. ಸಂಜೆ ಐದರ ಹೊತ್ತಿಗೆ ಯಾರೋ ಅಕ್ಷರ ಕೆತ್ತಿರುವ ಶಾಸನಶಿಲೆ ಇರುವ ಖಚಿತ ಹೊಲವನ್ನು ಹೇಳಿದ್ದರ ಮೇರೆಗೆ ಅಲ್ಲಿಗೆ ಅಕ್ಷರಶಃ ಓಡಿ ಹೋಗಿ ನೋಡಿದೆವು. ನಮಗೆ ಬೇಕಾಗಿದ್ದ ಬುಕ್ಕನ ಶಾಸನ ಅದಾಗಿತ್ತು. ಅರ್ಧ ಹೂತು ಹೋಗಿದ್ದ ಆ ಶಾಸನ ಶಿಲೆಯ ಸಮೀಪವಿದ್ದ ಬಂಡೆಗೆ 'ಸೂಳೆ ಬಂಡೆ' ಎಂಬ ಹೆಸರಿದ್ದುದು ಕುತೂಹಲಕಾರಿಯಾಗಿತ್ತು.

ಏಕೋ ಕಲ್ಯ ನನ್ನ ಕುತೂಹಲವನ್ನು ಬಹಳ ಕೆರಳಿಸಿತ್ತು. ಅಲ್ಲಿದ್ದ ಬಹುಸಂಖ್ಯೆಯ ಜೈನ ಅವಶೇಷಗಳು (ಭಗ್ನ ಜಿನ ಶಿಲ್ಪ, ನಿಸಿದಿ ಕಲ್ಲು, ಮಾನಸ್ತಂಭ) ಇತ್ಯಾದಿಗಳೆಲ್ಲ ತೀರ ಅನಿರೀಕ್ಷಿತವಾಗಿದ್ದುವು. ಅಲ್ಲದೆ ಸೋಮನಾಥನ ಸಮಾಧಿಯೆಂದು ನಾವು ನೋಡಿದ ಜಾಗದಲ್ಲಿ ಎರಡು ಸಮಾಧಿಗಳಿದ್ದು, ಅಲ್ಲಿ ಸೋಮನಾಥನದೆಂದು ನಮಗೆ ತೋರಿಸಿದ ಸಮಾಧಿಯೇ ಆರ್. ನರಸಿಂಹಾಚಾರ್ ತಮ್ಮ ವರದಿಯಲ್ಲಿ ಹೇಳಿದುದಾಗಿದ್ದರೂ, ಅವರ ಅಭಿಜ್ಞೆಯ

(Identification) ಬಗ್ಗೆ ನನಗೆ ಸಂದೇಹ ಬರುವಂತಹ ಸಂಗತಿಯೊಂದು ಪಾಲ್ಕುರಿಕೆ ಸೋಮೇಶ್ವರ ಪುರಾಣ ಎಂಬ ಹಿಂದಿನ ಕೃತಿಯಲ್ಲಿ ಕಾಣಿಸಿತು. ಅದರ ಪ್ರಕಾರ ಅವನ ಸಮಾಧಿಯನ್ನು ಕಲ್ಯದಲ್ಲಿ ಕಲ್ಲೇಶ್ವರ ದೇವಾಲಯದ ಮುಂದೆ ಮಾಡಲಾಯ್ತು. ಆ ಸಂಗತಿಯ ಸತ್ಯಾಸತ್ಯತೆಯನ್ನು ನಿರ್ಣಯಿಸುವ ಕುತೂಹಲ ಮೂಡಿತು, ಬೆಳೆಯಿತು.

ಅದಕ್ಕೆ ಕಾರಣವೂ ಇತ್ತು. ಇಂದು ಕರ್ನಾಟಕದಲ್ಲಿ, ಅದರ ಅಕ್ಕಪಕ್ಕದ ರಾಜ್ಯಗಳಲ್ಲಿ ಕೂಡ ಬಸವಣ್ಣನ ಹೆಸರು ಮನೆ ಮಾತಾಗಿದ್ದರೆ ಅದರ ಮೂಲಕಾರಣ ಆ ತೆಲುಗು ಕವಿ ಸೋಮನಾಥ. ಆತನ ಕೃತಿ ಬಸವ ಪುರಾಣಮು. ಅರವತ್ತು ಎಪ್ಪತ್ತು ವರ್ಷಗಳ ಹಿಂದೆ ನನ್ನ ಅನಕ್ಷರಸ್ಥ ಹಳ್ಳಿಯ ಜನರ ಬಾಯಲ್ಲಿ ಬಸವಣ್ಣನ ಹೆಸರು ಸರ್ವೇಸಾಮಾನ್ಯವಾಗಿತ್ತು. ಏನಾದರೂ ಅಪಾಯ ಸಂಭವಿಸಿದರೆ ಆ ಜನ "ಬಸವ ಬಸವ" ಎಂದೇ ಉದ್ಗರಿಸುತ್ತಿದ್ದರು. ಆ ಸಮಯದಲ್ಲಿ ಅವರ ಬಾಯಿಂದ ಶಿವನ ಹೆಸರಿಗಿಂತ ಬಸವನ ಹೆಸರು ಸ್ವಾಭಾವಿಕವಾಗಿ ಹೊರಡುತ್ತಿತ್ತು. ಆದರೆ ಅವರಿಗೆ ಬಸವ ಯಾವ ಕಾಲದವನಿರಲಿ, ಅವನ ತಂದೆ ತಾಯಿ ಯಾರು ಎಂಬುದು ತಿಳಿದಿರಲಿಲ್ಲ. ಹಳ್ಳಿ ಹಳ್ಳಿಗಳಲ್ಲಿ ಕನ್ನಡ ಬಸವಪುರಾಣ ವಾಚನ ನಡೆಯುತ್ತಿತ್ತಾದರೂ ಒಟ್ಟಾರೆ 'ಬಸವ' ಅವರಿಗೆ ಅನಾಥರಕ್ಷಕ ಮಂತ್ರವಾಗಿತ್ತು. ಭೀಮಕವಿಯ ಕನ್ನಡ ಬಸವಪುರಾಣಕ್ಕೆ ಸೋಮನಾಥನ ತೆಲುಗು ಬಸವಪುರಾಣಮು ಮೂಲವೆಂಬುದು ಎಲ್ಲರಿಗೂ ತಿಳಿದಿದೆ. ಅಂತಹ ಸೋಮನಾಥನು ಬಸವನ ಪರಮಭಕ್ತನಾಗಿದ್ದು, ನಿಷ್ಠಾವಂತ 'ವೀರ'ಶೈವನಾಗಿ ಅರುವತ್ತು ನಾಲ್ಕು ಶೀಲಗಳನ್ನು ಕಟ್ಟುನಿಟ್ಟಾಗಿ ಆಚರಿಸುತ್ತಿದ್ದ. ಕರ್ನಾಟಕದಿಂದ ಆಂಧ್ರದ ಅವನ ಊರಿಗೆ ಹೋದ ವ್ಯಕ್ತಿಯೊಬ್ಬ ಅವನಂತೆಯೇ ಶೀಲಗಳನ್ನು ಆಚರಿಸುತ್ತಿರುವ 'ಸರ್ವಶೀಲಾಚರಣೆಯ' ಚನ್ನಮ್ಮ ಎಂಬ ವ್ಯಕ್ತಿ ಶಿವಗಂಗೆ ಸಮೀಪದ ಕಲ್ಯದಲ್ಲಿರುವ ವಿಷಯವನ್ನು ತಿಳಿಸಿದಾಗ ಕುತೂಹಲ ಹುಟ್ಟಿ ಆಕೆಯ ದರ್ಶನಕ್ಕಾಗಿ ಮೇಲ್ಭಾಗವನ್ನು ಪೂರ್ತಿ ಮುಚ್ಚಿದ್ದ ಎತ್ತಿನ ಬಂಡಿಯಲ್ಲಿ ಕಲ್ಯಕ್ಕೆ ಸೋಮನಾಥ ಬರುತ್ತಾನೆ. ದಾರಿಯಲ್ಲಿ ಭವಿಗಳ ಮುಖವನ್ನು ನೋಡಬಾರದು ಎಂಬ ಶೀಲಾಚರಣೆಗಾಗಿ ಬಂಡಿಯ ಅಕ್ಕಪಕ್ಕ ಮೇಲ್ಭಾಗವನ್ನು ಪೂರ್ತಿ ಮರೆಮಾಡಲಾಗಿತ್ತು. ಕಲ್ಯದಲ್ಲಿ ಚನ್ನಮ್ಮನ ಜೊತೆ ಕೆಲಕಾಲ ಕಳೆದು, ಚನ್ನಮ್ಮನ ಇಷ್ಟಕ್ಕೆ ವಿರುದ್ಧವಾಗಿ ತನ್ನ ಊರಿಗೆ ಹೊರಟಾಗ ಬಂಡಿಗೆ ಕಟ್ಟಿದ್ದ ಎತ್ತುಗಳು ಮುಂದೆ ಹೆಜ್ಜೆ ಇಡಲು ನಿರಾಕರಿಸಿದುವು. ಅವನು ಅಲ್ಲೇ ಉಳಿದು, ಕೆಲಕಾಲದಲ್ಲೇ ಅನಾರೋಗ್ಯ ಪೀಡಿತನಾಗಿ ಶಿವೈಕ್ಯನಾದಾಗ ಅವನನ್ನು ಕಲ್ಲೇಶ್ವರ ಗುಡಿಯ ಮುಂದೆ ಸಮಾಧಿ ಮಾಡಿ, ಅವನ ಮಗ ಚತುರ್ಮುಖ ಬಸವಿದೇವನಿಗೆ ಗುರುಪಟ್ಟ ಕಟ್ಟಿದರು. ಇದು ಪಾಲ್ಕುರಿಕೆ ಸೋಮೇಶ್ವರ ಪುರಾಣದ ಕಥಾ ಸಾರಾಂಶ.

ಮತ್ತೆ ಕಂಬಾಳು ಸಿದ್ಧಗಂಗಯ್ಯ ಮತ್ತು ಇತರ ಮಿತ್ರರ ಜೊತೆ ಕಲ್ಯಕ್ಕೆ ಬೆಳಗಿನ ಹೊತ್ತಿಗೇ ಹೋಗಿ ಮಾಡಿದ ಮೊದಲ ಕೆಲಸವೆಂದರೆ ಅಲ್ಲಿದ್ದ ವೀರಶೈವರ ಬಗ್ಗೆ ವಿಚಾರಿಸಿದ್ದು. ಅವರಿಂದ ಒಂದು ಅನಿರೀಕ್ಷಿತ ಸಂಗತಿ ತಿಳಿದು ಸಂಭ್ರಮಗೊಂಡೆ. ಸು. ಕ್ರಿ.ಶ. 1250ರ ಪಾಲ್ಕುರಿಕೆ ಸೋಮನಾಥನ ವಂಶಸ್ಥರು ಈಗಲೂ ಆ ಊರಲ್ಲಿದ್ದಾರೆ. ನೇರವಾಗಿ ಅವರ ಮನೆಗೆ ಹೋದಾಗ ಅವರೂ ಅಷ್ಟೇ ಸಂಭ್ರಮದಿಂದ ಬಂದು ಗುಡ್ಡದ ಮೇಲಿನ ಕಲ್ಲೇಶ್ವರ

ದೇವಾಲಯದ ಮುಂಭಾಗದ ಸಮಾಧಿ ಜಾಗ ತೋರಿಸಿದರು. ಅಲ್ಲಿ ಹಾಕಿದ್ದ ಚೌಕಾಕಾರದ ಕಲ್ಲು ಚಪ್ಪಡಿಯ ಸಮಾಧಿಯ ಪಕ್ಕದಲ್ಲಿ ಬಿಲ್ವಪತ್ರೆ ಮರಗಳಿದ್ದುವು. ನನಗೆ ತೃಪ್ತಿಯಾಯಿತು ಎಂದು ಹೇಳಬೇಕಾಗಿಲ್ಲ. ಅದೇ ಗುಡ್ಡದ ಇನ್ನೊಂದು ಪಾರ್ಶ್ವದ ಎರಡು ಸಮಾಧಿಗಳಲ್ಲಿ ಸೋಮನಾಥನದೆಂದು ಭಾವಿಸಿದ್ದ ಸಮಾಧಿಯು ಅವನ ಮಗ ಚತುರ್ಮುಖ ಬಸವಿದೇವನದು, ಇನ್ನೊಂದು ಚನ್ನಮ್ಮನ ಸಮಾಧಿ. ಈಗಲೂ ಆ ಇಬ್ಬರ ವಂಶಸ್ಥರು ಚನ್ನಮ್ಮ, ಸೋಮನಾಥ, ಬಸವದೇವ ಹೆಸರುಗಳನ್ನು ಮಕ್ಕಳಿಗೆ ಇಡುತ್ತಾರೆ (ಮುಂದೆ ಹೇಗೋ ತಿಳಿಯದು). ಆ ಎಲ್ಲವನ್ನೂ ಲೇಖನ ರೂಪದಲ್ಲಿ ಪ್ರಕಟಿಸಿದ್ದೇನೆ.

ಈ ಭಾಗವನ್ನು ಬರೆಯುತ್ತಿದ್ದಂತೆ ಒಂದು ಹೊಸ ಸಂಗತಿ ಈ ಕ್ಷಣ (7.10.2000) ಹೊಳೆದು ಆ ಸಂತೋಷವನ್ನು ತಡೆಯಲಾರದೆ ಗೆಳೆಯರೊಬ್ಬರಿಗೆ ದೂರವಾಣಿಯಲ್ಲಿ ತಿಳಿಸಿಯೇ ಬಿಟ್ಟೆ. ಚನ್ನಮ್ಮನ ಗದ್ದುಗೆ ಅಥವಾ "ಚನ್ನಮ್ಮನ ಗವಿ"ಯು ಒಂದು ರೀತಿಯಲ್ಲಿ ವಾಸದ ಮನೆಯೂ ಹೌದು. ಗವಿಯ ಮುಂದೆ ಕಲ್ಲು ಕಂಬ, ಹಾಸುಗಲ್ಲು ಚಾವಣಿಯ ಮನೆ ಇದೆ. ಅಲ್ಲಿಗೆ ಹೋಗಿ ಕೆಲವು ದಿನಗಳನ್ನು ಕಳೆದರೆ ಹೇಗಿರುತ್ತದೆ ಎಂದು ಎಷ್ಟೋ ಸಾರಿ ನಾನು ಕಲ್ಪಿಸಿಕೊಂಡದ್ದುಂಟು. ಆ ಮನೆ ಅಷ್ಟು ದೊಡ್ಡದಲ್ಲದ ಬೆಟ್ಟದ ಮಧ್ಯದಲ್ಲಿದೆ. ಅಲ್ಲಿಗೆ ಕೆಳಗಿನಿಂದ ಹೋಗಿ ಬರಲು ಅಷ್ಟು ಕಷ್ಟವೂ ಅಲ್ಲ, ಮೆಟ್ಟಿಲುಗಳೂ ಇವೆ. ಚನ್ನಮ್ಮ ತನ್ನ ಬದುಕನ್ನು ಅಲ್ಲೇ ಕಳೆದಿರಬೇಕು. ಎಲ್ಲ ಶೀಲಗಳನ್ನು ಶ್ರದ್ಧೆಯಿಂದ ಆಚರಿಸುವವರು ಅಂತಹ ಏಕಾಂತ ಪ್ರದೇಶದಲ್ಲಿರಬೇಕಾಗುತ್ತದೆ, ಅದರಲ್ಲೂ 'ಭವಿ'ಗಳು ಇರುವ ಊರಿನಲ್ಲಿ. ಅವಳಂತೆಯೇ ಬದುಕುತ್ತಿದ್ದ ಪಾಲ್ಕುರಿಕೆ ಸೋಮನಾಥನೂ ಆ ಮನೆಯಲ್ಲಿಯೇ ಕಲ್ಯದಲ್ಲಿದ್ದಷ್ಟು ಕಾಲವೂ ಇದ್ದಿರಬೇಕೆಂಬ ಬಗ್ಗೆ ಅನುಮಾನಗಳಿಲ್ಲ. ಅವನು ನಡೆದಾಡಿದ ಶಿವಗಂಗೆಯ ತಪ್ಪಲಿನ ಕೆಲವು ಊರುಗಳಲ್ಲಿ (ಉದಾ : ಅದರಂಗಿ) "ಪಾದದರೆ"ಗಳಿದ್ದು (ಅರೆ = ಕಲ್ಲು, ಬಂಡೆ) ಅವುಗಳ ಮೇಲೆ ಪಾದ, ಲಿಂಗ ಇರುತ್ತವೆ. ಅವನ್ನು "ಸೋಮನ ಪಾದ"ವೆಂದು ಕರೆಯುತ್ತಾರೆ. ಮುಖ ಮುಚ್ಚಿಕೊಂಡು ಸೋಮನಾಥ ಭವಿಗಳಿಂದ ಮುಟ್ಟಿಸಿಕೊಳ್ಳದೆ ನಮಸ್ಕಾರ ಸ್ವೀಕರಿಸುತ್ತಿದ್ದನೆಂದು ಕತೆಗಳಿವೆ. ಅವೇ "ಸೋಮನ ಪಾದಗಳು"*. ತೆಲುಗಿನಲ್ಲಿ ಭಾಷೆ, ಜಾತಿಶ್ರೇಣಿಯ ವಿರುದ್ಧ ಪ್ರತಿಭಟನೆ, ಛಂದಸ್ಸು, ವಿನೂತನ ವಸ್ತು ಇವುಗಳ ದೃಷ್ಟಿಯಿಂದ ಕ್ರಾಂತಿಕಾರಿ ಎನ್ನಿಸಿಕೊಂಡಿರುವ ಮಹಾಕವಿಯೊಬ್ಬನ ಸಮಾಧಿಯನ್ನು ನಾನು ಪ್ರಥಮವಾಗಿ ಗುರುತಿಸಿದ್ದೇನೆಂಬ ಒಂದು ಹೆಮ್ಮೆ ಇದ್ದಿತು. ಈಗ, ಕಲ್ಯದಲ್ಲಿರುವಷ್ಟು ಕಾಲ ಅವನು ವಾಸವಾಗಿದ್ದ ಮನೆಯನ್ನೂ ಗುರುತಿಸಿದಂತಾಯಿತು. ಏಳು ನೂರು ವರ್ಷಗಳ ಹಿಂದಿನ ಕವಿಯೊಬ್ಬನ ವಾಸದ ಮನೆ ಈಗಲೂ ಇರುವುದು ತೆಲುಗರಿಗೆ ಮತ್ತು ಕನ್ನಡಿಗರಿಗೆ ಹರ್ಷದ ಸಂಗತಿಯಲ್ಲವೇ ?

ಸಮಾಧಿಯನ್ನು ನಾನು ಗುರುತಿಸಿದೆ, ನಿಜ. ಆದರೆ ಅದರ ವಿಷಯ ಅಲ್ಲಿನ ಜನಕ್ಕೆ ತಿಳಿದಿತ್ತು. ಅವರ ಮೂಲಕ ನನಗೆ ತಿಳಿದು ನನ್ನ ಮೂಲಕ ಸಾರ್ವಜನಿಕರಿಗೆ ತಿಳಿಯಿತು.

---

* ಮಾಹಿತಿಯು ಕಂಬಾಳು ಶಿವಗಂಗಯ್ಯನವರಿಂದ. 'ಅದರಂಗೆ' ಎಂದರೆ ಅದರ ಹಾಗೆ, ಎಂದರೆ ಶಿವಗಂಗೆಯಂತೆ ಪವಿತ್ರ ಕ್ಷೇತ್ರ ಎಂಬರ್ಥದಲ್ಲಿ ಆ ಊರ ಹೆಸರು ಬಂದಿದೆಯೆಂಬ ಕತೆ ಇದೆ.

ಅಪ್ಪರಮಟ್ಟಿಗೆ ಅದು "ಶೋಧ". ಇದ್ದುದು, ಕೆಲವರಿಗೆ ಮಾತ್ರ ತಿಳಿದಿದ್ದುದು ಬಹಳ ಜನಕ್ಕೆ ತಿಳಿಯುವಂತಾಯಿತು.

ಗುಡ್ಡದಿಂದ ಇಳಿದು ನೋಡಿದ ಹಾಳಾದ ಜಿನವಿಗ್ರಹಗಳು, ಒಂದು ಮಾನಸ್ತಂಭ, ನಿಸದಿ ಕಲ್ಲು, 'ಬಸ್ತಿಗುಂಡಿ' (ಶಾಸನೋಕ್ತ ಪಂಚಬಸದಿಗಳು ಹಿಂದೆ ಅಲ್ಲಿದ್ದಿರಬಹುದು, ದೇವಿಶೆಟ್ಟಿ ಎಂಬ ಭಕ್ತನ ಶಾಸನ, ಮುಕ್ಕೊಡೆ ಶಿಲ್ಪಗಳು ಇವೆಲ್ಲ ಅದೊಂದು ಬಹುದೊಡ್ಡ ಜೈನ ಕೇಂದ್ರವಾಗಿದ್ದುದರ ಕುರುಹುಗಳು. ಆ ಊರಲ್ಲಿ ಈಗ ಜೈನರಿಲ್ಲ. ಅವರು ಘರ್ಷಣೆಗಳ ಬಳಿಕ ಸಮೀಪದ ಹಳ್ಳಿಗಳಿಗೆ ಹೋಗಿ ನೆಲಸಿದರು. ಆ ಜೈನರು ಈಗಲೂ ಅಲ್ಲಿ ಇದ್ದಾರೆ. ಕಲ್ಯದಲ್ಲಿ ಇತ್ತೆಂದು ಹೇಳಲಾದ ಚಕ್ರಾತ್ತಾಳ್ವಾರರ ಭಗ್ನ ವಿಗ್ರಹಕ್ಕಾಗಿ ಹುಡುಕಿದೆವು. ಕಾಣಿಸಲಿಲ್ಲ. ಆದರೆ ಆ ಊರಲ್ಲಿದ್ದ ವಿಷ್ಣು ದೇವಾಲಯದ ಕೆಲವು ಕುರುಹುಗಳು ಕಲ್ಲೇಶ್ವರ ದೇವಾಲಯದಲ್ಲಿವೆ. ಸಮೀಪದ ಮಾಗಡಿ ರಂಗನಾಥಸ್ವಾಮಿಯ ವಿಗ್ರಹವು ಮೂಲತಃ ಕಲ್ಯದ ವಿಷ್ಣುದೇವಾಲಯದ್ದೆಂಬ ಜನವದಂತಿಯಿದೆಯಲ್ಲದೆ, ಆ ಸ್ವಾಮಿಯ ರಥೋತ್ಸವದಲ್ಲಿ ಕಲ್ಯದವರು ಮುಂದೆ ನಿಂತು ರಥವನ್ನೆಳೆಯುವ ಹಕ್ಕು ಹೊಂದಿದ್ದಾರೆ. ಮಾಗಡಿ ನಗರದ ಪಶ್ಚಿಮದ ಅಂಚಿನಲ್ಲಿರುವ 'ಕಲ್ಯದ ಬಾಗಿಲು'ವರೆಗೆ ರಥ ಹೋಗಿ ಗುಡಿಗೆ ವಾಪಸಾಗುತ್ತದೆ. ಮಾಗಡಿಯ ರಂಗನಾಥ ಸ್ವಾಮಿಯ ದೇವಾಲಯವನ್ನು ಜೀರ್ಣೋದ್ಧಾರ ಮಾಡಿಸಿದ ಎರಡನೆಯ ಕೆಂಪೇಗೌಡ (17 ಶ.) ಆ ಊರ ಪಶ್ಚಿಮಕ್ಕೆ ರಂಗನಾಥ ದೇವಾಲಯಕ್ಕೆ ಕಾಣುವಂತೆ ಅದೇ ಎತ್ತರದಲ್ಲಿ ಸೋಮನಾಥ ದೇವಾಲಯ ಕಟ್ಟಿಸಲು ಆರಂಭಿಸಿದಾಗ, ಪ್ರತಿ ದಿನ ಕಟ್ಟಿದ ದೇವಾಲಯವನ್ನು ಆ ರಾತ್ರಿಯೇ ರಂಗನಾಥ ಬಂದು ಕೆಡುವುತ್ತಿದ್ದನೆಂದು, ಒಂದು ದಿನ ಅವನೇ ಪಾಳೇಗಾರನ ಕನಸಿನಲ್ಲಿ ಬಂದು ಎಚ್ಚರಿಸಿದ ಮೇಲೆ ಕಟ್ಟುತ್ತಿದ್ದ ಗೋಪುರವನ್ನು ಅರ್ಧಕ್ಕೆ ನಿಲ್ಲಿಸಲಾಯಿತು ಎಂಬ ಕತೆ ಇದೆ. ಶೈವ-ವೈಷ್ಣವರ ಜಗಳದ ಹಿಂದೆ ಶಿವ-ವಿಷ್ಣು ಇವರ ಪರಸ್ಪರ ಅಸೂಯೆ ಇದೆ!

ಈ ಎಲ್ಲ ಮಾಹಿತಿ ನನಗೆ ತೀರ ಮುಖ್ಯವಾಗಿತ್ತು. ಬುಕ್ಕನ ಕಾಲದ ಜೈನರಿಗೂ ವೈಷ್ಣವರಿಗೂ ಘರ್ಷಣೆಗಳಾದುದು ಅಲ್ಲಿನ ಶಾಸನದಿಂದ ಗೊತ್ತಾಗುವುದಲ್ಲದೆ ಸಂತೆಯಲ್ಲಿ ಮಾರುತ್ತಿದ್ದ ಕುಂಬಳ ಕಾಯೊಂದು ನಿಮಿತ್ತವಾಗಿ ಜೈನರಿಗೂ ಇತರರಿಗೂ ಹೊಡೆದಾಟಗಳಾಗಿ ಊರು ಹಾಳಾಯಿತೆಂಬ ದಂತಕತೆಯೂ ಅದನ್ನೇ ದೃಢಪಡಿಸುತ್ತದೆ ('ಕೂಷ್ಮಾಂಡಿನಿ' ಜೈನರ ಒಬ್ಬ ದೇವತೆ). ಹಾಗೆ ತೀವ್ರ ಘರ್ಷಣೆಗಳಾದಾಗ ಕಲ್ಯದಲ್ಲಿದ್ದ ಎರಡೂ ಧರ್ಮದವರ ದೇವಾಲಯಗಳು ನಾಶವಾದ ವಿಷಯವನ್ನು ಮೊದಲು ಗುರುತಿಸಿದ ಸಂತೋಷವೂ(!) ನನ್ನದಾಯಿತು. ಹಳೆ ಬೆಳ್ಗೊಳದಲ್ಲಿ ನಡೆದ ಅದೇ ಕಾಲದ ಅದೇ ಬಗೆಯ ಘರ್ಷಣೆಗಳ ಕುರುಹುಗಳನ್ನು ಮೊದಲು ಗುರುತಿಸಿದವನೂ ನಾನೇ.

ಈ ಎಲ್ಲ ಶೋಧಗಳೊಡನೆ ಬೆಂಗಳೂರಿಗೆ ವಾಪಸಾಗಿ ಪತ್ರಿಕಾಗೋಷ್ಠಿಯಲ್ಲಿ ಆ ಶೋಧಗಳನ್ನು ಪ್ರಕಟಿಸಿಯೂ ಆಯ್ತು. ಬೆಂಗಳೂರು ಆಕಾಶವಾಣಿಯಲ್ಲಿ ಕೆಲಸ ಮಾಡುತ್ತಿದ್ದ ನನ್ನ ವಿದ್ಯಾರ್ಥಿ ಮಿತ್ರರು ಆ ಬಗ್ಗೆ ಒಂದು ಉಪನ್ಯಾಸ ನೀಡಲು ಕೇಳಿದರು. ಅದಕ್ಕೆ

ಕಲ್ಯಕ್ಕೇ ಹೋಗಿ ಸೋಮನಾಥನ ವಂಶಸ್ಥರ ಧ್ವನಿಮುದ್ರಣವನ್ನೂ ಮಾಡಿಕೊಂಡು ಬಂದು ಅದರ ಸಮೇತ ನನ್ನ ಉಪನ್ಯಾಸ ನೀಡಿದರೆ ಉತ್ತಮವೆಂಬ ನನ್ನ ಸಲಹೆಯು ಒಪ್ಪಿತವಾಗಿ ಆಕಾಶವಾಣಿಯ ವಾಹನದಲ್ಲೇ ಮತ್ತೊಮ್ಮೆ ಎಂದರೆ ಮೂರನೆಯ ಬಾರಿ ಕಲ್ಯಕ್ಕೆ ಹೋದೆ. ಈ ಬಾರಿ ಹೋದಾಗ ಕಲ್ಯದ ಬಗ್ಗೆ ಆ ಊರಿನ ಕೆಳವರ್ಗದ ಜನ (ನಾಗರಿಕರು ಹಿಂದಿನದನ್ನು ಮರೆತರೆ, ಅನಕ್ಷರಸ್ಥ ಕೆಳವರ್ಗದ ಜನ ಅದನ್ನು ಬಾಯಿಮಾತಲ್ಲಿ ಜೀವಂತವಾಗಿಡುತ್ತಾರೆ) ಹಾಡುಗಳನ್ನು ಹೇಳುತ್ತಾರೆಂಬ ಹೊಸ ವಿಷಯ ತಿಳಿಯಿತು. ಅವರನ್ನೂ ಕರೆಯಿಸಿ ಅವರ ಹಾಡುಗಳನ್ನು ಧ್ವನಿಮುದ್ರಣ ಮಾಡಿಕೊಳ್ಳಲಾರಂಭಿಸಿದೆವು. ಆ ಹಾಡೊಂದರಲ್ಲಿ ಕಲ್ಯದ ವರ್ಣನೆ ಇತ್ತು - ಹಿಂದೆ ಕಲಾವತಿ ಎಂಬ ನಗರ (ಅದೇ ಕಲ್ಯ), ಅದಕ್ಕೆ ಚಿನ್ನದ ಕೋಟೆ, ರನ್ನದ ಬಾಗಿಲು, ಯಾರೋ ರಾಜ ರಾಣಿ: ಪೌರಾಣಿಕ ಕತೆ ಮುಂದುವರಿಯಿತು. "ಕಲಾವತಿ" ಹೆಸರು ಎಲ್ಲೋ ಕೇಳಿದ್ದೇನೆ, ಕೇಳಿದ್ದೇನೆ ಎಂದು ತಲೆ ಕೆರೆದುಕೊಂಡೆ. ಅದು ತಲೆಯಿಲ್ಲದ ನನಗೆ ನೆನಪಾಗುವುದು ಹೇಗೆ ? ನೆನಪಾಗಲೊಲ್ಲದು. ಆ ಹಾಡುಗಳ ಧ್ವನಿಮುದ್ರಣದ ಜೊತೆ ಸೋಮನಾಥನ ವಂಶಸ್ಥರ ಮಾತುಗಳ ಧ್ವನಿಮುದ್ರಣ ಕೂಡ ಮಾಡಿಕೊಂಡು ಬಂದುದಾಯಿತು. ಅವುಗಳನ್ನು ಮಧ್ಯೆ ಮಧ್ಯೆ ಬಳಸಿಕೊಂಡು ಸಿದ್ಧಪಡಿಸಿದ ಭಾಷಣವು ಆಕಾಶವಾಣಿಯಿಂದ ಪ್ರಸಾರವಾಯಿತು.

"ಕಲಾವತಿ!" ನನಗೇ ಮರೆತೇಹೋಗಿತ್ತು. - ತುರುವೇಕೆರೆ ತಾಲೂಕಿನ ಶಾಸನವೊಂದರಲ್ಲಿ ಬರುವ "ಬೌದ್ಧವಾಸಾ ಮಹಾಪುರೀ ಕಲವತೀತಿ ವಿಖ್ಯಾತಾ" ಎಂಬ ಮಾತನ್ನು ಬಿ.ಎಲ್. ರೈಸರು ಒಂದು ಕಡೆ ಉಲ್ಲೇಖಿಸಿ ಆ ಕಲಾವತಿ ಎಂಬ ಬೌದ್ಧ ಕೇಂದ್ರವು ಆಂಧ್ರದಲ್ಲಿರಬೇಕೆಂದು ಅನುಮಾನಿಸಿದ್ದನ್ನು ನಾನು ನನ್ನ ಅಚ್ಚಾಗಿದ್ದ ಪಿಎಚ್.ಡಿ ನಿಬಂಧದಲ್ಲಿ ಆಗಲೇ ಉದ್ಧರಿಸಿದ್ದೆ. ಅದು ನೆನಪಾಗಿ ಶಾಸನ ಸಂಪುಟವನ್ನೇ ತೆಗೆದುನೋಡಿದೆ. ಆ ಕಲಾವತಿಯು ಕಲ್ಯ ಆಗಿರುವುದು ನಿಜವಾದರೆ ಅದೊಂದು ರಾಷ್ಟ್ರಮಟ್ಟದ ಶೋಧವಾಗುತ್ತಿತ್ತು. ತೀವ್ರ ಉತ್ಕಂಠಿತನಾಗಿದ್ದೆ. ಆ ಶಾಸನದ (ತಾಮ್ರಪಟದ) ಪ್ರಕಾರ ನಳಿನಾವತಿ ಎಂಬ ಊರಿನ ಪೂರ್ವಕ್ಕೆ ಭೈರವಾದ್ರಿ, ಭೈರವಾದ್ರಿ ದಕ್ಷಿಣಕ್ಕೆ ಶ್ರೀನಿವಾಸಪುರಿ, ಶ್ರೀನಿವಾಸಪುರಿಯ ಪೂರ್ವಕ್ಕೆ ಹೂಜಿಗಲ್ಲು, ಆಗ್ನೇಯಕ್ಕೆ ಬೌದ್ಧರಿದ್ದ 'ಮಹಾಪುರಿ ಕಲಾವತಿ' ಇತ್ತು. ಆ ದಿನವೇ ಮಾಗಡಿ ತಾಲೂಕಿನ ಸ್ಥಳನಾಮಗಳನ್ನು List of Villages in Mysore State ಪುಸ್ತಕದಲ್ಲಿ ನೋಡಿ ಕಲ್ಯದ ಪಕ್ಕದಲ್ಲೇ ಹೂಜಿಗಲ್ಲು ಇದ್ದುದನ್ನು ಕಂಡು, ನಾನಿದ್ದುದು ಗ್ರಂಥಾಲಯದಲ್ಲಾದ್ದರಿಂದ ನನಗಾದ ತೀವ್ರ ಹರ್ಷವನ್ನು ಮನಸ್ಸಿನಲ್ಲೇ ಅನುಭವಿಸಿದೆ. ಕಲ್ಯವು ಜೈನ, ವೈಷ್ಣವ, (ವೀರ) ಶೈವ ಕೇಂದ್ರವಾಗಿದ್ದುದಲ್ಲದೆ ಬೌದ್ಧ ಕೇಂದ್ರವೂ ಆಗಿತ್ತು, ಅದೂ ಕ್ರಿ.ಶ. 1533ರಷ್ಟು ಈಚೆಗೆ.

ತಡಮಾಡದೆ ಆ ವಾರದ ಶನಿವಾರದ ರಜ ಬರುವುದನ್ನೇ ಕಾದು ಮತ್ತೆ ಮಾಗಡಿ ಗೆಳೆಯರನ್ನು ಕರೆದುಕೊಂಡು ಹೂಜಿಗಲ್ಲಿಗೆ ಹೋದೆ. ರಸ್ತೆಯ ಎಡಬದಿಗೇ ಕಲ್ಯ. ಬಲಬದಿಯಲ್ಲಿ ನಾಲ್ಕು ಕಿಲೋಮೀಟರ್ ದೂರಕ್ಕೆ ಹೂಜಿಗಲ್ಲು ಇದೆ. ತಾಮ್ರಪಟದಲ್ಲಿರುವಂತೆಯೇ ಶ್ರೀನಿವಾಸಪುರದ ಪೂರ್ವಕ್ಕೆ ಹೂಜಿಗಲ್ಲು ಇದೆ. ತಾವರೆಕೆರೆ

(ನಳಿನಾವತಿ) ಭೈರವದುರ್ಗ ಎಲ್ಲವೂ ಆ ಪ್ರದೇಶದಲ್ಲಿವೆ. ಬೌದ್ಧ ಮಹಾನಗರಿ ಕಲಾವತಿಯೇ ಕಲ್ಯ ಎಂಬಲ್ಲಿ ಯಾವುದೇ ಅನುಮಾನಗಳೂ ಉಳಿಯಲಿಲ್ಲ. ನನಗೆ ತೀರ ಅಚ್ಚರಿ ಹುಟ್ಟಿಸಿದ ಸಂಗತಿಯೆಂದರೆ ಹೂಜಿಗಲ್ಲು ಹಿಂದೆ ಬಹು ದೊಡ್ಡ ಜೈನ ಕೇಂದ್ರವಾಗಿದ್ದುದನ್ನು ಇಲ್ಲಿಯವರೆಗೆ ಯಾರೂ ಗುರುತಿಸದೇ ಇದ್ದದ್ದು. ಅಲ್ಲಿನ ಗುಡ್ಡದ ಕೆಳಗಿನ ಮೂರು ಬಂಡೆಗಳ ಮೇಲೆ ಇಪ್ಪತ್ತು ಜಿನವಿಗ್ರಹಗಳಲ್ಲದೆ ಸಲ್ಲೇಖನ ವ್ರತದ ವಿಷಯವಿರುವ ಶಾಸನಗಳಿವೆ (ಅವುಗಳ ಮೇಲೆ ಶಿಲ್ಪಗಳಿವೆ)

ಜಿನಮುನಿ ಶಿಲ್ಪಗಳ ವಿಷಯ ಎಲ್ಲೂ ಉಕ್ತವಾಗಿಲ್ಲ. ಅಲ್ಲಿಯ ನಿಸಿದಿ ಶಾಸನಗಳಲ್ಲಿ ಎರಡು ಮಾತ್ರ ಪ್ರಕಟವಾಗಿವೆ. ಅಲ್ಲೇ ಊರ ಹೊರಗಡೆ ಒಂದು ಮಣ್ಣಿನ ದಿಬ್ಬವಿದ್ದು ಅದರಲ್ಲಿ ಬಸದಿಯಂತಹ ಕಟ್ಟಡದ ಭಗ್ನ ಅವಶೇಷಗಳಿರಬಹುದು. ಹೂಜಿಗಲ್ಲಿನ ಹೊಲಗಳಲ್ಲಿ ಮತ್ತು ಬೆಟ್ಟದ ಮೇಲೆ ಶಿಲಾಯುಧಗಳೂ ಹಳೆಯ ಬೋಕಿ ಚೂರುಗಳೂ ದೊರಕಿರುವುದಲ್ಲದೆ ಬೆಟ್ಟದ ಕೆಳಗೆ ಹೊಲಗಳಲ್ಲಿ ನೂರಾರು ಪ್ರಾಚೀನ ಬೃಹತ್ ಶಿಲಾಸಮಾಧಿಗಳಿರುವುದನ್ನು ನನಗೆ ತಿಳಿದಂತೆ ಯಾರೂ ಗಮನಿಸಿರಲಿಲ್ಲ. ಆ ಬೆಟ್ಟದ ಮೇಲಿನ ಗುಹೆಗಳು ಜಿನಮುನಿಗಳ ವಾಸಸ್ಥಾನಗಳಾಗಿದ್ದಿರಬಹುದು. ಬೆಟ್ಟದ ಮೇಲಿನ ನಡುಭಾಗದಲ್ಲಿರುವ ಗುಡಿಯೊಂದು ವಿಶೇಷ. ಇಡೀ ಪ್ರದೇಶವು ಕಲ್ಯಕ್ಕಿಂತ ಹೆಚ್ಚಾಗಿ ಪುರಾತತ್ವ ಶಾಸ್ತ್ರಜ್ಞರು ಆಸಕ್ತಿ ತೋರಬೇಕಾದ ನಿವೇಶನವಾಗಿದೆ (ಕಲ್ಯದಲ್ಲೂ ಶಿಲಾಯುಗದ ಕೊಡಲಿ ಸಿಕ್ಕಿದೆ). ಅಲ್ಲಿನ ಬೆಟ್ಟದ ಶ್ರೇಣಿಯ ಹತ್ತಾರು ಬಂಡೆ ಕೋಡುಗಲ್ಲುಗಳಿಗೆ ಅಲ್ಲಿನ ಜನ ಒಂದೊಂದು ಹೆಸರಿಟ್ಟಿರುವುದು ವಿಶೇಷ ಅಧ್ಯಯನ ಯೋಗ್ಯ. ಇಪ್ಪತ್ತೈದು ಐವತ್ತು ವರ್ಷಗಳ ಹಿಂದೆ ಆ ಊರಿಗೆ ಸದಾ ಹುಲಿ, ಚಿರತೆ, ಕರಡಿಗಳ ಕಾಟವಿತ್ತು. ಅಷ್ಟು ಉದ್ದನೆಯ ಕಡಿದಾದ ಬೆಟ್ಟದ ಶ್ರೇಣಿ ಅಲ್ಲಿದೆ. ಅಲ್ಲಿ ದೊರಕುವ ನೀರು ಯಾವುದೋ ಅಂಶದ ಆಧಿಕ್ಯ ಅಥವಾ ಕೊರತೆಯಿಂದಾಗಿ ಜನರಿಗೆ ಹಲವು ಸಮಸ್ಯೆಯುಂಟುಮಾಡಿತ್ತು. ಅಲ್ಲಿಯ ಮಕ್ಕಳ ಹಲ್ಲುಗಳು ಚಿಕ್ಕ ವಯಸ್ಸಿನಲ್ಲೇ ಉದುರಿರುವುದು, ಬಹುತೇಕ ಎಲ್ಲ ಮಕ್ಕಳೂ ದೊಡ್ಡವರೂ ನಿಸ್ತೇಜವಾಗಿದ್ದುದು ಎದ್ದು ಕಾಣುತ್ತಿತ್ತು. ಆ ಕಾರಣವೇ ಆ ಊರಿಗೆ ಹೆಣ್ಣು ಕೊಡಲು ಬೇರೆ ಊರವರು ಅಳುಕುತ್ತಿದ್ದರೆಂದೂ ಕೇಳಿದೆ.

ಕಲಾವತಿಯೇ ಕಲ್ಯ ಎಂದಾದ ಮೇಲೆ, ಸುಮಾರು ನಾಲ್ಕು ನೂರು ವರ್ಷಗಳ ಹಿಂದೆ ಅದು ಬೌದ್ಧ ಕೇಂದ್ರವಾಗಿದ್ದುದು ಖಚಿತವಾದ ಬಳಿಕ ಆ ದೃಷ್ಟಿಯಿಂದ ಆ ಪ್ರದೇಶದಲ್ಲೆಲ್ಲ ಓಡಾಡಿದೆ. ಕಲ್ಯದ (ಕಲಾವತಿ) ಉತ್ತರದಲ್ಲಿ 'ಹರಿಣಾಟವಿ' ಇದ್ದಿತೆಂಬ ಶಾಸನದ ಮಾತು ಅರ್ಥಪೂರ್ಣವಾಗಿತ್ತು. ಭಾರತದ ಬೌದ್ಧ ಕೇಂದ್ರಗಳಲ್ಲಿ ಹಿಂದೆ "ಮೃಗದಾವ" ಇದ್ದು (Deer Park) ಹರಿಣಾಟವಿಯು ಅಂತಹ ಮೃಗದಾವವಾಗಿತ್ತೇ ಎಂಬ ಶಂಕೆ ಇತ್ತು. ಆ ದೃಷ್ಟಿಯಿಂದ ಕಲ್ಯದ ಉತ್ತರದಲ್ಲಿದ್ದ ಹುಲ್ಲೇನಹಳ್ಳಿಗೂ ಹೋದೆ. ಶಿವಮೊಗ್ಗ ಜಿಲ್ಲೆಯ ಬಳ್ಳಿಗಾವೆಯು ಕಲ್ಯದ ಹಾಗೆ ಚತುಸ್ಸಮಯಗಳ (ಶೈವ, ವೈಷ್ಣವ, ಜೈನ, ಬೌದ್ಧ) ನಗರವಾಗಿದ್ದು ಅಲ್ಲಿ ಒಂದು 'ಪುಲ್ಲೆಯ ಬಯಲ್' ಇದ್ದಿತು. (ಪುಲ್ಲೆ - ಹುಲ್ಲೆ = ಮೃಗ - ಜಿಂಕೆ). ಆ ಊರಿನ ವೃದ್ಧರು ಹೇಳಿದಂತೆ ಆ ಊರಿನ ಗಡಿಭಾಗದಲ್ಲಿ

ಆಗಾಗ್ಗೆ ಜಿಂಕೆಗಳು ಕಾಣಿಸಿಕೊಳ್ಳುತ್ತಿದ್ದುವು. ಕಲ್ಯದ ಪಕ್ಕದಲ್ಲಿ ಉತ್ತರಕ್ಕೆ ಇರುವ ಮೇಲೆ ಹೇಳಿದ ಗುಡ್ಡದಲ್ಲಿ, ಸೋಮನಾಥನ ಸಮಾಧಿ ಇರುವ ಗುಡ್ಡದಲ್ಲಿ "ಹುಲ್ಲೇ ಲಿಂಗನ ಅರೆ ಬಂಡೆ" ಎಂಬ ಹೆಸರ ಒಂದು ಬಂಡೆಯಿದೆ. ಬೌದ್ಧರ 'ಮೃಗದಾವ' ಅಥವಾ 'ಹರಿಣಾಟವಿ' ಇದ್ದರೆ ಅಲ್ಲಿದ್ದಿರಬೇಕು ಎನ್ನಿಸಿತು. ಕಲ್ಯ ಪರಿಸರದಲ್ಲಿ ಬೌದ್ಧಧರ್ಮದ ವಿಶೇಷಗಳಿಗಾಗಿ ಸಾಕಷ್ಟು ಸುತ್ತಾಡಿದರೂ ಖಚಿತ ಕುರುಹುಗಳೇನೂ ಸಿಗಲಿಲ್ಲ. ಕಲ್ಲೇಶ್ವರ ದೇವಾಲಯದಲ್ಲಿ ಒಂದು ವಿಗ್ರಹದ ಶಿರಸ್ಸು ಮಾತ್ರ ದೊರಕಿದ್ದು ಅದು ಬುದ್ಧನ ಅಥವಾ ಬೌದ್ಧ ಸಂಬಂಧಿ ವಿಗ್ರಹದ ತಲೆಯಿರಬಹುದೇ ಎಂಬ ಬಹು ದುರ್ಬಲ ಊಹೆಯನ್ನು ಮಾಡಲವಕಾಶವಿದೆ. ಬೌದ್ಧಧರ್ಮದ ಕುರುಹುಗಳು ದೊರಕದಿದ್ದುದು ನನಗೆ ನಿರಾಸೆ ಉಂಟುಮಾಡಿದರೂ ಕಲ್ಯವು ಒಂದು ಬೌದ್ಧ ಕೇಂದ್ರವಾಗಿತ್ತೆಂಬ ಹರ್ಷವನ್ನು ಅದು ಕುಂದಿಸಲಿಲ್ಲ.

ಕರ್ನಾಟಕದಲ್ಲಿ ಬೌದ್ಧ ಧರ್ಮದ ಕುರುಹುಗಳಲ್ಲೊಂದೆಂದು ಭಾವಿಸುವ ಅಶೋಕನ ಶಾಸನವಿರುವ ಬ್ರಹ್ಮಗಿರಿಗಿಂತ (ಚಿತ್ರದುರ್ಗ ಜಿಲ್ಲೆ) ದಕ್ಷಿಣಕ್ಕೆ ಹಳೇ ಮೈಸೂರಿನಲ್ಲಿ ಯಾವುದೇ ಕುರುಹೂ ಅಲ್ಲಿಯವರೆಗೆ (1975) ಲಭ್ಯವಿರಲಿಲ್ಲ. ಮಂಗಳೂರಿನಲ್ಲಿ ಬೌದ್ಧ ಧರ್ಮದ ಸ್ಪಷ್ಟ ಸಾಕ್ಷ್ಯಾಧಾರಗಳಿವೆ. ಕಲ್ಯವು ಮೈಸೂರು ಕರ್ನಾಟಕದ ದಕ್ಷಿಣಭಾಗದಲ್ಲಿ ದೊರಕಿರುವ ಬೌದ್ಧ ಧರ್ಮದ ಮೊದಲ ಕುರುಹಾಗಿದ್ದುದಲ್ಲದೆ ಇಡೀ ಭಾರತದಲ್ಲಿ ಬೌದ್ಧ ಧರ್ಮ ಜೀವಂತವಾಗಿದ್ದ ತೀರ ಈಚಿನ ಊರು ಆಗಿತ್ತೆಂಬುದು ಆ ಶೋಧದ ಮಹತ್ವವನ್ನು ಹೆಚ್ಚಿಸಿತ್ತು.

1985-6ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ವ್ಯವಸ್ಥೆ ಮಾಡಿದ ಸಂಶೋಧನ ಕಮ್ಮಟದ ಅಭ್ಯರ್ಥಿಗಳನ್ನು ಕಲ್ಯ ಹೂಜಿಗಲ್ಲುಗಳಿಗೆ ಕರೆದೊಯ್ದು ಅಲ್ಲಿ ಆರಂಭವಾದ ಶೋಧವು ಹಂತ ಹಂತವಾಗಿ ಬೆಳೆದು ಬಂದ ಪರಿಯನ್ನು ವಿವರಿಸಿದೆ. ಆ ಸಂದರ್ಭದಲ್ಲೇ ಕಲ್ಯದ ಬೆಟ್ಟದ ಮೇಲಿನ ಗುಹೆಯೊಂದರಲ್ಲಿ ಇತಿಹಾಸ ಪೂರ್ವ ವರ್ಣಚಿತ್ರಗಳಿದ್ದುದು ಹಿಂದೆಯೇ ಗೊತ್ತಾಗಿದ್ದರೂ ಬೆಟ್ಟ ಹತ್ತಿ ಆ ಗುಹೆಯ ಚಿತ್ರಗಳನ್ನೂ ಆ ದಿನ ನೋಡಿದ್ದಾಯಿತು. ಆ ತಾರಕಾಚಲ ಬೆಟ್ಟವು (ಕಲ್ಯ ಬೆಟ್ಟ) ಕರಡಿಗಳಿಗೆ ಆಶ್ರಯದಾಣವಾಗಿದ್ದು ನಮ್ಮ ಜೊತೆ ಬಂದಿದ್ದ ಮಾರ್ಗದರ್ಶಕರ ಸೂಚನೆ ಮೇರೆಗೆ ಗುಹೆಯ ಬಾಗಿಲಲ್ಲಿ ಬೆಂಕಿ ಹಚ್ಚಿ ಕೂಗಿ ಸದ್ದು ಮಾಡಿ ಒಳಕ್ಕೆ ಕಲ್ಲುಗಳನ್ನೂ ಎಸೆದು ಕರಡಿಗಳಿಲ್ಲವೆಂಬುದನ್ನು ಖಚಿತ ಮಾಡಿಕೊಂಡು ಹೋಗಿ ಚಿತ್ರಗಳನ್ನು ನೋಡಿದ್ದಾಯಿತು.

ಊರ ಹೊರಗೆ ಮಂಟಪಗಳು, ಚಿಕ್ಕ ಚಿಕ್ಕ ಕೊಳಗಳು, ವಾಸದ ಮನೆಗಳಿದ್ದ ಕುರುಹುಗಳಿವೆ. ಅವೆಲ್ಲ ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ (ಮತ್ತು ಅದಕ್ಕಿಂತ ಹಿಂದೆಯೂ) ಕಲ್ಯವು ಒಂದು ಬಹುದೊಡ್ಡ ಬಹುಮುಖ ಸಾಂಸ್ಕೃತಿಕ ಕೇಂದ್ರವಾಗಿದ್ದುದನ್ನು ಸಾರಿ ಹೇಳುತ್ತವೆ. ಕಲ್ಯ ಹೂಜಿಗಲ್ಲು ಸೇರಿದಂತೆ ಆ ಇಡೀ ಪ್ರದೇಶವ ಜೊತೆ ಹೋಲಿಸಲು ಕರ್ನಾಟಕದಲ್ಲಿ ಅಂತಹ ಜಾಗಗಳು ಬಹಳ ಇಲ್ಲವೆಂಬಲ್ಲಿ ಅನುಮಾನವಿಲ್ಲ. ಅಲ್ಲಿಗೆ ಕೊನೆಯ ಬಾರಿ ಹೋದಾಗ ನಾನು "ತೆಲುಗು ಬಸವ ಪುರಾಣ ಕರ್ತೃ ಪಾಲ್ಕುರಿಕೆ ಸೋಮನಾಥನ

ಸಮಾಧಿ ನೋಡಲು ಇಲ್ಲಿ ಇಳಿಯಿರಿ" ಎಂಬ ದೊಡ್ಡ ನಾಮಫಲಕವನ್ನು ಬರೆಯಿಸಿಕೊಂಡು ಹೋಗಿ ಕಲ್ಯದ ಪಕ್ಕದ ರಸ್ತೆಯ ಮರವೊಂದಕ್ಕೆ ಕಟ್ಟಿಸಿ ಬಂದೆ. ಆ ನಾಮಫಲಕ, ಅದರ ಮೇಲಿನ ಅಕ್ಷರಗಳು ಇನ್ನೂ ಉಳಿದಿದ್ದರೆ ನನ್ನ ಪುಣ್ಯ.

ಸೋಮನಾಥ ಕವಿ ತನ್ನ ಅಂತ್ಯದ ದಿನಗಳನ್ನು ಕಳೆದ ಬೆಟ್ಟದ ಮೇಲಿನ ಮನೆ ಇಡೀ ಭಾರತದಲ್ಲಿ ಯಾವುದೇ ಭಾಷೆಯ ಯಾವುದೇ ಕವಿ ವಾಸವಾಗಿದ್ದು ಉಳಿದು ಬಂದಿರುವ ಮನೆಗಳಲ್ಲಿ ಅತ್ಯಂತ ಹಿಂದಿನದು. ಕರ್ನಾಟಕ ಸರ್ಕಾರವು ಆ ಮನೆಯನ್ನು ಹಾಗೇ ಸಂರಕ್ಷಿಸಿ ಉಳಿಸಲು ಕ್ರಮ ಕೈಗೊಳ್ಳುವಂತೆ ಮಾಡಲು ಈಚೆಗೆ (ಮಾರ್ಚ್, 2002) ಯಶಸ್ವಿಯಾಗಿದ್ದೇವೆ.

## ವಚನಗಳ ಅಂಕಿತ ೩.

ಪರಿಸ್ಥಿತಿಯ ಒಂದು ಬಗೆಯ ಒತ್ತಡವೆನ್ನಿ ; ಸಂದರ್ಭದ ಅಗತ್ಯಗಳ ಒತ್ತಡವೆನ್ನಿ. ಅದರ ಪರಿಣಾಮವಾಗಿ ಒಂದೆರಡು ಮುಖ್ಯ ಸಂಗತಿಗಳು ನನ್ನ ಗಮನಕ್ಕೆ ಬಂದುದು ದಾಖಲಾರ್ಹ. ಡಾ ಪಿ.ವಿ. ನಾರಾಯಣ ಅವರ "ಧರ್ಮ ಕಾರಣ" ಕಾದಂಬರಿಯು ಅನಗತ್ಯ ವಿವಾದದ ವಸ್ತುವಾಗಿ ಲೇಖಕರು ತೀವ್ರ ಮಾನಸಿಕ ಯಾತನೆಗೆ ಒಳಗಾಗಬೇಕಾಯ್ತೆಂಬುದು ಎಲ್ಲರಿಗೂ ಗೊತ್ತಿರುವ ವಿಷಯ. ಅವರಂತೆ ನಾನೂ ಬಹುಕಾಲದವರೆಗೆ ಅಕ್ಕನಾಗಮ್ಮ ಅವಿವಾಹಿತಳಾಗಿಯೇ ಉಳಿದು ಚನ್ನಬಸವಣ್ಣನ ತಾಯಿಯಾದಳೆಂಬ ನಂಬಿಕೆಯಲ್ಲಿದ್ದೆ. ಅದಕ್ಕೆ ಕಾರಣ, ಒಂದನ್ನು ಹೊರತುಪಡಿಸಿ ಬಹುತೇಕ ಎಲ್ಲ ವೀರಶೈವ ಕೃತಿಗಳೂ ಪ್ರತಿಪಾದಿಸುವುದು ಅದನ್ನೇ. ಅದು ಐತಿಹಾಸಿಕವಾಗಿ ನಿಜವಾಗಿದ್ದರೆ ನನಗೆ ಖಂಡಿತ ಸಂತೋಷವಾಗುತ್ತಿತ್ತು. ಸರ್ವಜ್ಞ ಕವಿಯೂ ಹಾಗೆ ಜನಿಸಿದವನು ಮಾತ್ರವಲ್ಲ, ಹಾಗೆಂದು ನಿರ್ಭೀತವಾಗಿ ಹೇಳಿಕೊಂಡದ್ದು ಎಷ್ಟು ದೊಡ್ಡದೋ ಅವನ ಸಮಕಾಲೀನ ಸಮಾಜವು ಅವನ ಬಗ್ಗೆ ಉದಾರವಾಗಿ ನಡೆದುಕೊಂಡದ್ದೂ ಅಷ್ಟೇ ಮುಖ್ಯವಾದುದು. ನನ್ನ ಹಳ್ಳಿಯ ಅನಕ್ಷರಸ್ಥ ಆದರೆ ಪ್ರಬುದ್ಧ ಜನರು ನನ್ನ ಬಾಲ್ಯದ ಗೆಳೆಯನೊಬ್ಬನ ವಿಷಯದಲ್ಲಿ ಹಾಗೇ ನಡೆದುಕೊಂಡರು. ನನ್ನ ತಾಯಿ ಬಹು ಗೌರವಿಸುತ್ತಿದ್ದ ಬಡವಿ ಬಸಜ್ಜಿಯ ಮಗಳು ಸ್ವಲ್ಪ ಮಾನಸಿಕ ವೈಕಲ್ಯದವಳಾಗಿದ್ದು ಮದುವೆಯಾಗದೇ ಉಳಿದು ತಾಯಿಯಾಗಿ ಬಿಟ್ಟಳು. ಅವಳ ಹುಡುಗ ಬೆಳೆದು ದೊಡ್ಡವನಾಗಿ ನಮ್ಮೆಲ್ಲರ ಜೊತೆಯ ಆಟಗಾರನೂ ಆದ. ಇಡೀ ಊರಿನ ಜನ ಆ ತಾಯಿ ಮತ್ತು ಹುಡುಗನನ್ನು ಸ್ವಾಭಾವಿಕವಾಗಿ ಸ್ವೀಕರಿಸಿದ್ದರು.

ಡಾ. ನಾರಾಯಣ ಅವರ ಕಾದಂಬರಿಯಿಂದಾಗಿ ಚನ್ನಬಸವಣ್ಣನವರಿಗೆ ವೀರಶೈವ ಧರ್ಮಕ್ಕೆ ಅಪಚಾರವಾಯಿತೆಂದು ಹಲವರು ಹುಯಿಲೆಬ್ಬಿಸಿ, ಅವರ ವಿರುದ್ಧ 'ಗಣಾಚಾರ'ವನ್ನೂ ಸಾರಿ (ಶಿವದ್ರೋಹ ಮಾಡಿದವರನ್ನು ಸಾಧ್ಯವಾದರೆ ಪರಿಹರಿಸುವುದೇ ಗಣಾಚಾರ) ಗಣಾಚಾರ ಪಡೆಗೆ ಯುವಕರು ಸೇರಲು ಜಾಹಿರಾತು ಕೂಡ ನೀಡಲಾಯ್ತು. ಅವರ ಕೈಗಳನ್ನು ಕತ್ತರಿಸುವ ಮಾತುಗಳೂ ಸಮಾಜದ ಒಳವಲಯಗಳಲ್ಲಿ ಕೇಳಿ ಬಂದುವು.

(ಹಿಂದೆ ಡಾ. ಕಲಬುರ್ಗಿಯವರು ಡೋಹರ ಕಕ್ಕಯ್ಯನೇ ಚನ್ನಬಸವಣ್ಣನ ತಂದೆಯೆಂದು ಪ್ರತಿಪಾದಿಸಿ ಕೆಲವರ ಆಕ್ರೋಶಕ್ಕೆ ಒಳಗಾದಾಗ, ನಾವು ಬೆಂಗಳೂರಲ್ಲಿ ಪತ್ರಿಕಾಗೋಷ್ಠಿ ನಡೆಯಿಸಿ ಅವರ ಅಭಿಪ್ರಾಯವನ್ನು ನಾವು ಒಪ್ಪದಿದ್ದರೂ ಅವರನ್ನು ಪ್ರತಿಭಟಿಸುವ ರೀತಿ ಅದಲ್ಲವೆಂದು ಸ್ಪಷ್ಟಪಡಿಸಿದ್ದೆವು). ಸಿಂಗಿರಾಜಪುರಾಣದಲ್ಲಿ ಶಿವದೇವ ಮತ್ತು ಅಕ್ಕನಾಗಮ್ಮರ ಮಗನೇ ಚನ್ನಬಸವಣ್ಣನೆಂಬ ನಿರೂಪಣೆಯಿದ್ದರೂ ಅದು ಈಚಿನ ಕೃತಿಯಾದುದರಿಂದ, ಉಳಿದೆಲ್ಲ ವೀರಶೈವ ಕೃತಿಗಳೂ ಅಕ್ಕನಾಗಮ್ಮನು ಅವಿವಾಹಿತೆಯೆಂದೇ ಸಂಕೋಚವಿಲ್ಲದೆ ಹೇಳಿರುವುದರಿಂದ, ಅಕ್ಕನಾಗಮ್ಮನೇ ತನ್ನನ್ನು 'ಅಧವೆ'ಯೆಂದು ಕರೆದುಕೊಂಡಿರುವ ಕಾರಣ ಬಹಳ ಕಾಲ ನಾನು ಹಿಂದೆ ಹೇಳಿದ ಅಭಿಪ್ರಾಯವನ್ನೇ ಉಳಿಸಿಕೊಂಡಿದ್ದೆ. ಡಾ. ನಾರಾಯಣರೂ ಅದೇ ಚಿತ್ರವನ್ನು ಮೂಡಿಸಿಕೊಂಡದ್ದು ಸ್ವಾಭಾವಿಕವಾಗಿಯೇ ಇತ್ತು.

ಮೇಲೆ ಹೇಳಿದ ವಿವಾದದ ಹಿನ್ನೆಲೆಯಲ್ಲಿ ನಾನು ಮತ್ತೊಮ್ಮೆ ಚನ್ನಬಸವ, ಅಕ್ಕನಾಗಮ್ಮರ ವಚನಗಳನ್ನು ತೀರ ಎಚ್ಚರಿಕೆಯಿಂದ ಓದಿದೆ. ಒಬ್ಬ ವಚನಕಾರ ಕೆಲವು ಸಮಕಾಲೀನ ಶರಣರ ತಂದೆ ತಾಯಿಗಳ ಹೆಸರು ಹೇಳಿದವನು ಚನ್ನಬಸವನ ತಾಯಿಯ ಹೆಸರನ್ನು ಮಾತ್ರ ಹೇಳಿರುವುದು ನನ್ನ ಹಿಂದಿನ ಗ್ರಹಿಕೆಯನ್ನು ಪುಷ್ಟಿಗೊಳಿಸುವಂತಿದ್ದರೂ ನನಗೆ ಇಂದಿರಾಗಾಂಧಿಯವರ ವಿಷಯ ಜ್ಞಾಪಕಕ್ಕೆ ಬಂದು ಈ ಬಗ್ಗೆ ಮುಕ್ತ ಮನಸ್ಸಿನಿಂದ ಎಲ್ಲವನ್ನೂ ಪರಿಶೀಲಿಸಬೇಕೆನ್ನಿಸಿತು. ಇಂದಿರಾ ಗಾಂಧಿಯವರ ಗಂಡನ ಹೆಸರು (ಫಿರೋಜ್‌ಗಾಂಧಿ) ಬಹು ಜನಕ್ಕೆ ತಿಳಿಯದು. ಅಪ್ಪಿ ತಪ್ಪಿಯೂ ಯಾರೂ ಮಾಜಿ ಪ್ರಧಾನಿ ರಾಜೀವ್ ಗಾಂಧಿಯವರ ಬಗ್ಗೆ ಮಾತನಾಡುವಾಗ ಅವರ ತಂದೆಯ ಹೆಸರು ಹೇಳುತ್ತಿರಲಿಲ್ಲ. ವಚನಗಳನ್ನು ಎಚ್ಚರಿಕೆಯಿಂದ ಅಧ್ಯಯನ ಮಾಡಿದಾಗ ಚನ್ನಬಸವಣ್ಣನಲ್ಲೇ ವೇಶ್ಯಾಪುತ್ರರ ಬಗ್ಗೆ ವ್ಯಂಗ್ಯದ ನುಡಿಗಳಿದ್ದುದನ್ನು ಗಮನಿಸಿದೆ. 'ಅಧವೆ' ಮಾತಿಗೆ ವಿಧವೆ ಎಂಬರ್ಥವಲ್ಲದೆ 'ಗಂಡನಿಲ್ಲದವಳು, ಮದುವೆಯಾಗಿದ್ದರೂ ಗಂಡನಿಂದ ದೂರವಾದವಳು' ಎಂಬರ್ಥವಿರುವುದನ್ನು ಗಮನಿಸಿದೆ. ಅಧ್ಯಯನದ ಅಂತ್ಯದಲ್ಲಿ ನನಗೆ ದೊರಕಿದ ತಕ್ಕಮಟ್ಟಿನ ಸ್ಪಷ್ಟ ಚಿತ್ರ ಹೀಗಿತ್ತು. ಚನ್ನಬಸವಣ್ಣನವರ ತಾಯಿಗೆ ಮದುವೆಯಾಗಿತ್ತು, ಅವನ ತಂದೆ ಶಿವಸ್ವಾಮಿ. ಯಾವುದೋ ಕಾರಣದಿಂದ ಜೀವನದ ಮಧ್ಯದಲ್ಲಿ ನಾಗಲಾಂಬೆ ಗಂಡನಿಂದ ಬೇರೆಯಾಗಿ ಉಳಿಯಬೇಕಾಯ್ತು. ಡಾ. ನಾರಾಯಣರ ವಿರುದ್ಧ ಎತ್ತಿರುವ ಟೀಕೆಯ ವಿಧಾನ ಸರಿಯಲ್ಲವೆಂದು ಗೆಳೆಯರೊಡನೆ ಸೇರಿ (ಗೊ.ರು. ಚನ್ನಬಸಪ್ಪ, ಡಾ. ಎಚ್.ಎಂ. ಮರುಳಸಿದ್ಧಯ್ಯ) ಪತ್ರಿಕಾ ಹೇಳಿಕೆ ನೀಡಿದ್ದಲ್ಲದೆ, ನನ್ನ ಅಭಿಪ್ರಾಯಗಳನ್ನು ಸಾರ್ವಜನಿಕ ಉಪನ್ಯಾಸವೊಂದರಲ್ಲಿ ಸ್ಪಷ್ಟಪಡಿಸಿದೆ. ಡಾ. ನಾರಾಯಣರ ನಿಲುವು ಇತಿಹಾಸ ಸಮ್ಮತವಲ್ಲದಿದ್ದರೂ ಅವರಿಂದ ಚನ್ನಬಸವಣ್ಣನಿಗೆ ಅಪಚಾರ ಸಂದಿಲ್ಲವೆಂದು, ಅವರ ನಿರೂಪಣೆ ಚಾರಿತ್ರಿಕ ಸತ್ಯವಾಗಿದ್ದಿದ್ದರೆ ನಾನು ಸಂತೋಷಪಡುತ್ತಿದ್ದೆನೆಂದೂ ಸ್ಪಷ್ಟಪಡಿಸಿದೆ. ನನ್ನ ಉಪನ್ಯಾಸವಾದ ಎರಡನೆಯ ದಿನವೇ ಸಮಾಜದ ಮುಖಂಡರೊಬ್ಬರು ದೂರವಾಣಿಯಲ್ಲಿ ನನ್ನ ಜೊತೆ ಸ್ವಲ್ಪ ಒರಟಾಗಿ ಮಾತನಾಡಿ "ಹೀಗೇ ಮಾತನಾಡುತ್ತಿದ್ದರೆ ವೀರಶೈವ ಸಮಾಜ ನಿಮಗೆ ಏನು ಮಾಡುತ್ತದೆ, ನೋಡುತ್ತಿರಿ" ಎಂದಾಗ ನಾನು ಏರಿದ

ಧ್ವನಿಯಲ್ಲಿ, "ಹುಷಾರ್, ಹಿಂದೆ ನೀವು ಯಾವುದೋ ಮಂತ್ರಿಯಂತಹ ದೊಡ್ಡ ಸ್ಥಾನದಲ್ಲಿದ್ದಿರಬಹುದು. ಯಾರ ಜೊತೆ ಮಾತನಾಡುತ್ತಿರುವಿರಿ, ನೆನಪಿರಲಿ. ಆ ಸಮಾಜ ಏನು ಮಾಡಬೇಕೆಂದಿದೆ ಅದನ್ನು ನಾಳೆಯವರೆಗೆ ಮುಂದಕ್ಕೆ ಹಾಕುವುದು ಬೇಡ, ಇಂದೇ ಈಗಲೇ ಆಗಿಬಿಡಲಿ" ಎಂದು ಗಟ್ಟಿಯಾಗಿ ಕೂಗಿದಾಗ ಅಡುಗೆ ಮನೆಯಲ್ಲಿದ್ದ ಹೆಂಡತಿ ಹೌಹಾರಿ 'ಏನ್ರೀ ಅದು' ಎಂದಳು. ನಾನು ಅಕ್ಷರಶಃ ಕೋಪದಿಂದ ಕಂಪಿಸುತ್ತಿದ್ದೆ. "ನಾರಾಯಣರ ಕಾದಂಬರಿ ಪ್ರಕಾರ, ಅಕ್ರಮ ಸಂಬಂಧ ಪಡೆದಾಗ ಅಕ್ಕನಾಗಮ್ಮ ಒಬ್ಬ ಬ್ರಾಹ್ಮಣ ಕನ್ಯೆ, ಗರ್ಭಿಣಿಯಾದ ಆಕೆಯನ್ನು ಹೊರಹಾಕಿದ್ದು ಬ್ರಾಹ್ಮಣ ಸಮಾಜ. ಅವಳನ್ನು ಪ್ರೀತಿ ಕರುಣೆಗಳಿಂದ ಕೂಡಲಸಂಗಮದಲ್ಲಿ ಆದರಿಸಿದ್ದು ವೀರಶೈವ ಸಮಾಜ. ಕೋಪ ಬರಬೇಕಾದ್ದು ನ್ಯಾಯವಾಗಿ ಯಾವ ಸಮಾಜಕ್ಕೆ?" ಎಂಬರ್ಥದ ಪತ್ರವನ್ನು ಪತ್ರಿಕೆಗಳಿಗೂ ಬರೆದಿದ್ದೆ. ಆದರೆ ಕೋಪ ಯಾವ ಸಮಾಜಕ್ಕೂ ಬರಬೇಕಾಗಿರಲಿಲ್ಲವೆಂಬುದನ್ನು ಹೇಳಬೇಕಾಗಿಲ್ಲ.

ಅದೇ ಡಾ. ನಾರಾಯಣರ ತೆಲುಗು ಬಸವ ಪುರಾಣದ ಕನ್ನಡದ ಅನುವಾದವನ್ನು ಓದುತ್ತಿದ್ದಾಗ ಅಲ್ಲಿ ಬಸವಣ್ಣನ ಮನೆಯಲ್ಲಿದ್ದ ಶರಣ ಶರಣೆಯರ ಹೆಸರುಗಳಲ್ಲಿ ಶಿವದೇವನ ಹೆಸರಿದ್ದುದು ನನಗೆ ಆಶ್ಚರ್ಯವುಂಟುಮಾಡಿತು. ಕನ್ನಡ ಬಸವ ಪುರಾಣದಲ್ಲೂ ಆ ಹೆಸರಿದ್ದು ಅದನ್ನು ನಾನು ಗಮನಿಸಿರಲಿಲ್ಲವೆಂಬುದು ನನಗೇ ಬೇಸರವುಂಟುಮಾಡಿತು. ಬಸವನ ಬದುಕಿನ ಪುನಾರಚನೆಗೆ ಹರಿಹರನ ಕೃತಿ ಜೊತೆ ಬಸವಪುರಾಣವೂ ಒಂದು ಮುಖ್ಯ ಆಕರವಾಗಿರುವಾಗ ಅಲ್ಲಿ ಕಾಣಿಸಿದ ಶಿವದೇವನ ಹೆಸರನ್ನು ಉದಾಸೀನ ಮಾಡುವಂತಿರಲಿಲ್ಲ. ಇನ್ನೊಬ್ಬ ಶಿವದೇವ ಇರುವುದು ನಮಗೆ ತಿಳಿಯದ ಕಾರಣ ಅವನು ಅಕ್ಕನಾಗಮ್ಮನ ಗಂಡ ಶಿವದೇವನೇ ಎಂದು ಗುರುತಿಸದೆ ಬೇರೆ ಮಾರ್ಗವಿರಲಿಲ್ಲ. 'ಸಿಂಗಿರಾಜಪುರಾಣ'ದ ಕತೆಗೆ ಪ್ರಬಲವಾದ ಪೋಷಕ ಸಾಮಗ್ರಿ ದೊರಕಿತ್ತು. ಸಂಶೋಧಕ ತನ್ನ ಗ್ರಹಿಕೆಗೆ ವಿರೋಧವಾದ ಸ್ಪಷ್ಟ ಸಾಕ್ಷ್ಯಾಧಾರ(ಗಳು) ದೊರಕಿದಾಗ ತನ್ನ ಅಭಿಪ್ರಾಯವನ್ನು ಬದಲಾಯಿಸಿಕೊಳ್ಳುವುದೇ ಮುಕ್ತ ಮನಸ್ಸು; ಅದೇ ಸಂಶೋಧನೆಯ ಜೀವ ಜೀವಾಳ. ಪತ್ರಿಕೆಗಳಲ್ಲಿ ಪ್ರಚಾರ ಪಡೆದ ಇಡೀ ವಿವಾದದ ಹಿನ್ನೆಲೆ ಮಾತ್ರ ಕೆಟ್ಟ ಅಭಿರುಚಿಯದು.

ಮೇಲಿನ ಅಭಿಜ್ಞೆ ನನಗೆ ಬಹಳ ಸಮಾಧಾನವನ್ನು ತಂದಿತು. ಆದರೆ ಮುಂದಿನ ಶೋಧ ನನಗೆ ಇನ್ನೂ ಬಹು ಸಂತೋಷವನ್ನು ತಂದಿತು. ಸುಮಾರು ಅದೇ ಕಾಲ; ಬಸವಣ್ಣನವರ ಅಂಕಿತವು ಕೂಡಲ ಸಂಗಮದೇವ ಅಲ್ಲ, ಲಿಂಗದೇವ ಎಂದು ಬಹುವಾಗಿ ಪ್ರಚಾರ ಮಾಡಲಾಯ್ತು. ಅದಕ್ಕೆ ಕೊಟ್ಟ ಆಧಾರ, ಒಬ್ಬ ಗಣ್ಯರಿಗೆ ಕನಸಿನಲ್ಲಿ ಬಸವಣ್ಣನವರು ಬಂದು ಹಾಗೆ ಹೇಳಿದ್ದು. ಹಾಗೆ ಹೇಳಿದ್ದು ನಿಜವಿರಬಹುದು; ಆದರೆ ಬಸವಣ್ಣ ತಮ್ಮ ನಿಜವಾದ ಅಂಕಿತವನ್ನು ಕನಸಿನಲ್ಲಿ ತಿಳಿಸಲು ಈ ಎಂಟುನೂರು ವರ್ಷ ಕಾಯಬೇಕಾಯಿತೇ? ಆ ಅವಧಿಯಲ್ಲಿ ಆ ಗಣ್ಯರಿಗಿಂತ ಹೆಚ್ಚು ಅರ್ಹರು ಅವರಿಗೆ ದೊರಕಲಿಲ್ಲವೇ ಎಂಬ ನೇರ ಪ್ರಶ್ನೆಯನ್ನು ಪತ್ರಿಕೆಗಳ ಮೂಲಕ ಕೇಳಿದ್ದಕ್ಕೆ ಸರಿಯಾದ ಉತ್ತರವಿಲ್ಲ (ಮುಂದೆ ನನ್ನ ಬಗ್ಗೆ

ಅವಹೇಳನಕಾರಿ ಭಾಷೆಯಲ್ಲಿ ನೂರೈವತ್ತು ಪುಟಗಳ ಪುಸ್ತಕವನ್ನೇ ಆ ಗಣ್ಯರು ಬರೆದು ಪ್ರಕಟಿಸಿದರು).*

ಅವರ ನಿಲುವಿಗೆ ಕರ್ನಾಟಕಾದ್ಯಂತ ಶಾಂತಿಯುತ ಪ್ರತಿಭಟನೆಗಳು ನಡೆದರೂ ಅವರು ತಮ್ಮ ವಾದಕ್ಕೇ ಅಂಟಿಕೊಂಡರು, ಈಗಲೂ ಅದೇ ನಿಲುವನ್ನು ಉಳಿಸಿಕೊಂಡಿದ್ದಾರೆ. (ಆ ನಿಲುವನ್ನು ಹೊಂದಿರಲು ಅವರಿಗೆ ಹಕ್ಕಿದೆ).

ವಚನ ಸಂಪುಟಗಳನ್ನು ಸುಮ್ಮನೆ ತಿರುವಿ ಹಾಕುತ್ತಿದ್ದೆ. ಬಸವಣ್ಣನವರ ವಚನವೊಂದರಲ್ಲಿ "ಎನ್ನ ಕರಸ್ಥಲದ ಸಂಗಮನಾಥ" ಎಂಬ ಉಕ್ತಿ ನನ್ನ ವಿಶೇಷ ಗಮನವನ್ನು ಸೆಳೆಯಿತು. ಅವರಿಗೆ ದೀಕ್ಷೆ ಕೊಟ್ಟು ಆ ಲಿಂಗವನ್ನು ಅನುಗ್ರಹಿಸಿದ ಗುರುಗಳು ಕಪ್ಪಡಿ ಸಂಗಯ್ಯ ಎಂಬುವರೆಂದು ಮಾಚಿದೇವ, ಮಾರಯ್ಯರು ಹೇಳಿರುವುದು ನನ್ನ ಮನಸ್ಸಿನಲ್ಲಿ ಉಳಿಯಿತು. ಅದು ಹರಿಹರನಲ್ಲಿ ಕೂಡಲ ಸಂಗಮದೇವನೇ ಬಸವಣ್ಣನಿಗೆ ದೀಕ್ಷಾಗುರುವಾದನೆಂಬ ಮಾರ್ಪಾಟು ತಳೆಯಿತೆಂಬುದು ಸ್ಪಷ್ಟವಾಗಿತ್ತು. ಕೇವಲ ಹೆಸರಿನ ಸಾಮ್ಯದ ಮೇಲೆ ಅಂತಹ ಮಾರ್ಪಾಟಾಗಿತ್ತು. ಮುಂದೆ ಸಿದ್ಧರಾಮನು ತನ್ನ ಒಂದು ವಚನದಲ್ಲಿ ಹೆಸರಿಡಬಾರದ ಲಿಂಗಕ್ಕೆ ಹೆಸರಿಟ್ಟುದನ್ನು ಹೇಳುವೆನೆಂದು ಆರಂಭಿಸಿ ತನ್ನ ಗುರು ಚನ್ನಬಸವಣ್ಣನಿಂದ ಕಪಿಲಸಿದ್ಧ ಮಲ್ಲಿಕಾರ್ಜುನ ಎಂಬ ಇಷ್ಟಲಿಂಗವನ್ನು ತಾನು ಪಡೆದುದನ್ನು ಹೇಳಿಕೊಂಡಿದ್ದಾನೆ. ಅದನ್ನು ಓದಿದ ತಕ್ಷಣ ತನ್ನ ಕರಸ್ಥಲದ ಲಿಂಗದ ಹೆಸರು 'ಸಂಗಮನಾಥ' ಎಂಬ ಬಸವಣ್ಣನವರ ಮಾತು ನೆನಪಾಗಿ, ಯಾವುದೇ ಅಂಕಿತವು ದೇವಾಲಯದ ಲಿಂಗದ ಹೆಸರನ್ನು ಸೂಚಿಸದೆ ಸಾಧಕನ ಇಷ್ಟಲಿಂಗವನ್ನು ಸೂಚಿಸುತ್ತದೆಯೆಂಬ ಅಂಶ ಗೃಹೀತವಾಯಿತು. ಇದು ಆ ವಿಷಯದ ಬಗ್ಗೆ ನಿರ್ಣಾಯಕ ಸಾಕ್ಷ್ಯಾಧಾರವಾಯಿತು (clinching evidence). ಹಾಗೆಯೇ ಅಲ್ಲಮ, ಅಕ್ಕಮಹಾದೇವಿ ಇವರೇ ಮೊದಲಾದವರ ವಚನಗಳನ್ನೂ ಹದಿನಾರನೇ ಶತಮಾನದ ವಚನಕಾರರ ಕೃತಿಗಳನ್ನೂ ಅಭ್ಯಸಿಸಿದಾಗ ಅಲ್ಲಿನ ಹಲವು ಮಾತುಗಳು ಆ ಹೊಳಹನ್ನು ದೃಢೀಕರಿಸಿದುವು. ಹದಿನಾರನೇ ಶತಮಾನದ ಕೃತಿಯೊಂದರಲ್ಲಿ ಶರಣರ ಇಷ್ಟಲಿಂಗಗಳ ಹೆಸರುಗಳನ್ನು ಹೇಳುವುದಾಗಿ ತನ್ನ ಕೃತಿಯ ಉದ್ದೇಶವನ್ನು ಹೇಳಿಕೊಂಡ ಕವಿಯೊಬ್ಬ ಆ ಶರಣರ ಅಂಕಿತಗಳನ್ನು ಪದ್ಯರೂಪದಲ್ಲಿ ಹೆಣೆದಿದ್ದಾನೆ. ಇದೂ ಆ ಹೊಳಹು ಸತ್ಯವೆಂದು ದೃಢೀಕರಿಸಿತು. ಗುರುವು ಶಿಷ್ಯನಿಗೆ ಇಷ್ಟಲಿಂಗವನ್ನು ಕೊಡುವಾಗ ಆ ಲಿಂಗಕ್ಕೆ ತನ್ನ ಹೆಸರಿನ ಭಾಗ ಇರುವ ಹೆಸರನ್ನೋ ದೈವದ ಹೆಸರನ್ನೋ ಕೊಡಬಹುದು. ಮುಖ್ಯ ಸಂಗತಿಯೆಂದರೆ, ಇಷ್ಟಲಿಂಗವನ್ನು ದಯಪಾಲಿಸುವ ಗುರುವು ಅದಕ್ಕೊಂದು ಹೆಸರನ್ನು ನೀಡಿರುತ್ತಾನೆ ; ಆ ಹೆಸರೇ ಆ ಶರಣನ ಅಂಕಿತವಾಗುತ್ತದೆ. ಇಷ್ಟು ನನಗೆ ಖಚಿತವಾಯಿತು. ಅಲ್ಲದೆ ಹರಿದಾಸರಲ್ಲೂ ಗುರುವು ಶಿಷ್ಯನಿಗೆ ಹರಿದಾಸ ದೀಕ್ಷೆಯನ್ನು ನೀಡುವಾಗ 'ಮುದ್ರಿಕೆ'ಯನ್ನು (ಅಂಕಿತ) ನೀಡುತ್ತಾನೆ. ಆ ಹರಿದಾಸ ತನ್ನ ಕೀರ್ತನೆಗಳಲ್ಲಿ ಆ ಅಂಕಿತವನ್ನು ಬಳಸುತ್ತಾನೆ (ಹರಿದಾಸರ ಆ ಪರಂಪರೆ ಇಂದಿಗೂ ಮುಂದುವರಿದಿದೆ). ಹರಿದಾಸರು

---

* ನನ್ನ ಒಂದು ಕಾಲಂ ಪತ್ರಕ್ಕೆ ಪ್ರತಿಕ್ರಿಯೆಯಾಗಿ ಒಂದು ಕೃತಿ : ಕನ್ನಡದಲ್ಲಂತೂ ಒಂದು ದಾಖಲೆ!

ಬಳಸುವ ಅಂಕಿತಗಳಿಗೆ ಮಾತ್ರವಲ್ಲ, ಭಾರತೀಯ ಸಾಹಿತ್ಯದಲ್ಲಿ ಕವಿಗಳು ತಮ್ಮ ಕೃತಿಗಳಲ್ಲಿ ತಮ್ಮ ಅಂಕಿತಗಳನ್ನು ಬಳಸುವ ಪದ್ಧತಿಗೆ ಹನ್ನೆರಡನೆಯ ಶತಮಾನದ ಶರಣರ ಪದ್ಧತಿಯೇ ಮೂಲವೆಂದು ನಾನು ಖಚಿತಪಡಿಸಿಕೊಂಡಿದ್ದೇನೆ (ಅದು ಸರಿಯಲ್ಲವೆಂದು ತೋರಿಸಿದರೆ ಸಂತೋಷವೇ). ಆದರೆ ವಚನಕಾರರ ಅಂಕಿತಗಳು ಅವರ ಇಷ್ಟಲಿಂಗ ಸೂಚಕಗಳು ಎಂಬುದು ಮಾತ್ರ ವಿವಾದಾತೀತವಾದುದು. ಅಷ್ಟರಮಟ್ಟಿಗೆ ಅದಕ್ಕೆ ಪ್ರಬಲ ಆಧಾರಗಳಿವೆ.

ಮೇಲಿನ ಶೋಧವು 'ಲಿಂಗದೇವ' ಅಂಕಿತವನ್ನು ಪ್ರತಿಪಾದಿಸುವ ಗಣ್ಯರು ಎತ್ತಿದ್ದ ಪ್ರಶ್ನೆಗಳಿಗೆ ಸಮರ್ಥ ಉತ್ತರವಾಗಿತ್ತು. ಅದು ನನಗೆ ಮುಖ್ಯವಲ್ಲ. ಆದರೆ ಆ ಶೋಧ ಇಡೀ ವಚನ ವಾಙ್ಮಯವನ್ನು ನೋಡುವ ದೃಷ್ಟಿಕೋನವನ್ನೇ ಬದಲಾಯಿಸುತ್ತದೆ. 'ಕೂಡಲ ಸಂಗಮ', 'ಚೆನ್ನಮಲ್ಲಿಕಾರ್ಜುನ', 'ಗುಹೇಶ್ವರ' (ನ್ಯಾಯವಾಗಿ ಗೊಗ್ಗೇಶ್ವರ), 'ರಾಮನಾಥ' ಇವು ಆಯಾ ವಚನಕಾರ ತನ್ನ ದೇಹದ ಭಾಗವಾಗಿರುವ, ತನ್ನ ಚಿತ್ಕಳೆಯೇ ಆಗಿರುವ ಇಷ್ಟಲಿಂಗದ ಹೆಸರುಗಳಾದ್ದರಿಂದ ಆಯಾ ವಚನಕಾರ ಉದ್ದೇಶಿಸಿ ಮಾತನಾಡುವುದು, ತನ್ನ ನೋವು ಹಿಗ್ಗು ಅನುಭೂತಿ ಚಿಂತನೆಗಳನ್ನು ಹೇಳುವುದು ದೂರದಲ್ಲಿ ತನ್ನಿಂದ ಭಿನ್ನವಾಗಿರುವ ಯಾವುದೋ ದೈವಕ್ಕೆ ಅಲ್ಲವೆಂಬುದನ್ನು ಸ್ಪಷ್ಟಪಡಿಸುತ್ತದೆ. ಶರಣ ತನ್ನ ಇಷ್ಟಲಿಂಗಕ್ಕೆ, ತನಗೇ, ತನ್ನ ಒಳಗಿನ ಚೈತನ್ಯಕ್ಕೇ ಎಲ್ಲವನ್ನೂ ಹೇಳಿಕೊಳ್ಳುತ್ತಿರುವುದು. ಅವನು ಭಾಷೆಯಲ್ಲಿ ಹೇಳಿಕೊಳ್ಳುತ್ತಿರುವುದನ್ನು ಅವನಿಗೆ ಅರಿವಿಲ್ಲದಂತೆ ನಾವು ಕೇಳುತ್ತೇವೆ. ಪ್ರತಿಯೊಂದು ಭಾವಗೀತೆಯೂ ಒಂದು ನಾಟಕೀಯ ಸ್ವಗತ (dramatic monologue) ಎಂಬ ಮಾತು ನೆನಪಿಗೆ ಬರುತ್ತದೆ. ಕವಿಗಳಂತೆ ತಮ್ಮ ಕೃತಿಗಳೂ ಜನತೆಯನ್ನು ಅದರಲ್ಲೂ ಸಾಮಾನ್ಯ ಜನತೆಯನ್ನು ತಲುಪಬೇಕೆಂಬ ಉದ್ದೇಶ ಶರಣರಿಗಿತ್ತು ಎಂಬುದನ್ನು ಹೇಳುವ ಅಗತ್ಯವಿಲ್ಲವಷ್ಟೇ.

## 'ಪರಮ ರಹಸ್ಯ' : ಮಿಂಚಿನ ಸಂಚಾರ

ಈ ವರ್ಷ (ಕ್ರಿ.ಶ. 2000) ಯುಗಾದಿಯ ದಿನ ನನಗೆ ನಾನೇ ಮನಸ್ಸಿನ ಕಪಾಳಕ್ಕೆ ಹೊಡೆದುಕೊಳ್ಳಬೇಕೆಂಬ ಕೋಪ ಬಂದುಬಿಟ್ಟಿತ್ತು. ಬರೆಯುವುದನ್ನು ಹಾಗೇ ನಿಲ್ಲಿಸಿ ಸಂತೋಷವನ್ನು ತಡೆಯಲಾರದೆ ಮಹಡಿಯ ಬಿಸಿಲು ಮಚ್ಚಿನಲ್ಲಿಯೇ ಓಡಾಡಿದೆ. ಕೋಪವೇ, ಸಂತೋಷವೇ? ಯಾವುದು ನಿಜ? ಎರಡೂ ನಿಜವಾಗಿದ್ದುವು.

ಹಿನ್ನೆಲೆ ಹೀಗಿದೆ. ಹಿಂದೂ - ಲಿಂಗಾಯತ ಧರ್ಮಗಳ ಸಂಬಂಧ ಕುರಿತಾದ ಕೃತಿಯೊಂದನ್ನು ರಚಿಸಲು ಬಹುವಾದ ಮಾಹಿತಿ ಸಂಗ್ರಹಿಸಿ, ಬೆಂಗಳೂರಲ್ಲಿ ಅದನ್ನು ಪುಸ್ತಕ ರೂಪವಾಗಿ ಬರೆಯಲೂ ಉಪಕ್ರಮಿಸಿದೆ. ಸಹಜವಾಗಿಯೇ ಬೆಂಗಳೂರಲ್ಲಿ ಬಹಳ ಅಡ್ಡಿಗಳು, ಏನಿಲ್ಲವೆಂದರೂ ದೂರವಾಣಿ 'ಕೊರ್‌ಕೊರ್'ಗಳು'. ಹತ್ತು ದಿನ ಎಡೆಬಿಡದೆ ಕುಳಿತು ಬರೆಯಬಹುದೆಂದು ಚಿತ್ರದುರ್ಗ ಜಿಲ್ಲೆಯ ಹೊಸದುರ್ಗದ ನನ್ನ ಬಂಧುಗಳ ಮನೆಗೆ ಟಿಪ್ಪಣಿಗಳ ಪುಟ್ಟ ಮೂಟೆ ವಚನ ಸಂಪುಟಗಳ ಸಮೇತ ಹೋದೆ. ಅಲ್ಲಿ ಊರ ಅಂಚಿನಲ್ಲಿ ಮನೆ, ರಸ್ತೆಯ ಆಚೆ ಎದುರಿಗೇ ಚಿಕ್ಕ ಕೋಟೆಯಿರುವ ದೊಡ್ಡ ಬೆಟ್ಟ; ಕೇವಲ

ಇಪ್ಪತ್ತು ಮನೆ ದಾಟಿ ಹೋದರೆ ಬೆಟ್ಟದ ಬುಡ; ಮಹಡಿ ಕೊಠಡಿಯ ಕಿಟಕಿ ಮೂಲಕ ಪೂರ್ತಿ ಬೆಟ್ಟ ಕಾಣಿಸುತ್ತಿತ್ತು. ಮಲಗಿದರೆ ಅದರ ತುದಿ ಕಾಣಿಸುತ್ತಿತ್ತು. ಇಂಥ ಪರಿಸರದಲ್ಲಿ ಬೆಳಿಗ್ಗೆ ಎಂಟರಿಂದ ರಾತ್ರಿ ಹತ್ತರವರೆಗೆ ಸ್ನಾನ, ಊಟ, ತಿಂಡಿ ಮಧ್ಯೆ ಸ್ವಲ್ಪ ವಿಶ್ರಾಂತಿ, ಸಂಜೆ ಒಂದು ಗಂಟೆ ವಾಯು ವಿಹಾರದ ಭಾಗವಾಗಿ ಆ ಬೆಟ್ಟದ ಎದುರಿನ ಪುಟ್ಟ ಬೆಟ್ಟವನ್ನು ಅರ್ಧ ಹತ್ತಿ ಇಳಿಯುವುದು - ಇಷ್ಟು ಬಿಟ್ಟರೆ ಉಳಿದೆಲ್ಲ ಕಾಲ ಬರಹ, ಅಗತ್ಯ ಬಂದಾಗ ವಚನಸಂಪುಟಗಳ ಪರಾಮರ್ಶೆ.

ಆ ಯುಗಾದಿಯ ಬೆಳಿಗ್ಗೆ ಹನ್ನೊಂದರ ಹೊತ್ತಿನಲ್ಲಿ ಬರಹ ಸಾಗಿದೆ. ಅಕ್ಕಮಹಾದೇವಿಯ ಯಾವುದೋ ವಚನದ ಪೂರ್ಣ ಪಾಠ ಬೇಕಿತ್ತು. ಆ ಪುಸ್ತಕ ತೆಗೆಯುತ್ತಿದ್ದಂತೆ ಅವಳ ವಚನವೊಂದರಲ್ಲಿ "ಪರಮರಹಸ್ಯ" ಎಂಬ ಸಂಸ್ಕೃತ ಕೃತಿಯ ಹೆಸರನ್ನು ಅದರಿಂದ ಏಳು ಸಂಸ್ಕೃತ ಶ್ಲೋಕಗಳನ್ನು ಉದ್ಧರಿಸಿರುವುದು ಕಂಡು ಮಿಂಚೊಂದು ಹೊಳೆದ ಅನುಭವವಾಯಿತೆಂದರೆ ಏನೂ ಉತ್ಪ್ರೇಕ್ಷೆಯಲ್ಲ. ಆ ಸಂಸ್ಕೃತ ಶ್ಲೋಕಗಳಲ್ಲಿ ಪಂಚಾಚಾರಗಳ (ಶಿವಾಚಾರ, ಸದಾಚಾರ, ಭೃತ್ಯಾಚಾರ, ಲಿಂಗಾಚಾರ, ಗಣಾಚಾರ) ವಿವರಣೆ ನೀಡಲಾಗಿತ್ತು. "ಪರಮ ರಹಸ್ಯ"ವು ಅಕ್ಕಮಹಾದೇವಿಗಿಂತ ಹಿಂದಿನ ಸಂಸ್ಕೃತ ಕೃತಿಯಾಗಿದ್ದು ಅದರಿಂದ ಶ್ಲೋಕಗಳನ್ನು ಅದರಲ್ಲೂ ವೀರಶೈವ ಧರ್ಮದ ಪ್ರಮುಖ ಪರಿಕಲ್ಪನೆಯೊಂದರ ವಿವರಗಳಿರುವ ಶ್ಲೋಕಗಳನ್ನು ಉಲ್ಲೇಖಿಸಿರುವುದು ನನ್ನನ್ನು ಸ್ತಂಭೀಭೂತನನ್ನಾಗಿ ಮಾಡಿತು. ಬರೆಯುತ್ತಿದ್ದವನು ಎದ್ದು ನಿಂತೆ, ಹಿಂದಿದ್ದ ಬಿಸಿಲು ಮಚ್ಚಿನಲ್ಲಿ ಉತ್ಸಾಹದಿಂದ ಓಡಾಡಿದೆ. ಆ ವಚನ ಅಚ್ಚಾಗಿ ಎಷ್ಟೋ ವರ್ಷಗಳಾಗಿದ್ದರೂ "ಪರಮರಹಸ್ಯ"ದ ಉಲ್ಲೇಖ ಅಲ್ಲಿದ್ದುದನ್ನು ಗಮನಿಸದ ನನ್ನ ದಡ್ಡತನವನ್ನು ನಾನೇ ಶಪಿಸಿಕೊಂಡೆ. "ನಿನ್ನ ಕೆನ್ನೆಗೆ ಹೊಡೀಬೇಕು" ಎಂದು ನನ್ನ ಮನಸ್ಸನ್ನು ಬೈದೆ. ' ಹೇ ಚಿಮೂ, ಛೀ ಮೂದೇವಿ, ನೀನೊಂದು ಟ್ಯೂಬ್ ಲೈಟ್, ದಡ್ಡ ಶಿಖಾಮಣಿ. ಸದ್ಯ ದಡ್ಡತನದಲ್ಲಾದರೂ ಶಿಖಾಮಣಿ ಸ್ಥಾನಕ್ಕೇರಿದ್ದೀಯಲ್ಲ!" ಎಂದು ಗೇಲಿಮಾಡಿದೆ. ಬಸವಣ್ಣನಲ್ಲಿ "ಸಿದ್ಧಾಂತ ಶಿಖಾಮಣಿ"ಯಿಂದ ಶ್ಲೋಕವು ಉದ್ಧೃತವಾಗಿದ್ದ ವಿಷಯ ನನಗೆ ಗೊತ್ತಿತ್ತು. (ಆ ಶ್ಲೋಕದ ಮೂಲ ವಾತುಳಾಗಮವಾಗಿರುವ ಸಾಧ್ಯತೆ ಇದೆ). ಉಳಿದಂತೆ ಹಲವು ಪುರಾಣ, ಆಗಮಗಳಿಂದ ಹಲವು ಶ್ಲೋಕಗಳನ್ನು ಉದ್ಧೃತ ಮಾಡಿರುವುದು ಪ್ರಸಿದ್ಧವೇ. ಅಂತಹ ಒಂದು ಕೃತಿ, ವೀರಶೈವ ಸಿದ್ಧಾಂತಕ್ಕೆ ಮೀಸಲಾದ ಕೃತಿಯೊಂದರ ಹೆಸರು, ಅದರಿಂದ ಉದ್ಧೃತ ಶ್ಲೋಕಗಳು ಅಲ್ಲಿದ್ದುದು ನನ್ನ ಮಟ್ಟಿಗೆ ಬಹು ದೊಡ್ಡ ಸಂಗತಿಯಾಗಿತ್ತು. ಆ ದಿನ ಯುಗಾದಿ, ಮಧ್ಯಾಹ್ನ ಒಳ್ಳೆ ಹೋಳಿಗೆ ಊಟ ಆಯ್ತು. ಸಂಜೆ ಚಂದ್ರ ದರ್ಶನ ಆ ಊರಿನ ಜನಕ್ಕೆ ಆಗದೆ ಬಹಳ ನಿರಾಸೆ ಪಟ್ಟರು. ನನಗೇನೋ ಮಧ್ಯಾಹ್ನವೇ ಚಂದ್ರ ದರ್ಶನವೊಂದು ಆಗಿಬಿಟ್ಟಿತ್ತು. ಮಾರನೆಯ ದಿನ ಸಂಜೆ ಸೂರ್ಯ ಮುಳುಗುವ ಹೊತ್ತಿಗೆ ಸ್ಪಷ್ಟವಾಗಿ ಚಂದ್ರ ದರ್ಶನವಾಗಿ ಊರ ಜನ ಹಿರಿಯರಿಗೆ ನಮಸ್ಕರಿಸಿ ಆಶೀರ್ವಾದ ಪಡೆದರು. ನನಗೂ ಕೆಲವರು ನಮಸ್ಕರಿಸಿದರು. ನಾನಂತೂ ತುಂಬು ಮನಸ್ಸಿನಿಂದ ಆಶೀರ್ವದಿಸಿದೆ. ಹಿಂದಿನ ದಿನದ ಹಿಗ್ಗಂತೂ ಮರೆಯಾಗಿರಲಿಲ್ಲ.

'ಪರಮರಹಸ್ಯ' ಹೆಸರನ್ನು ಗಮನಿಸಿದ ದಿನವೇ ಹೊಸದುರ್ಗದಿಂದ ಬೆಂಗಳೂರಿನ ನನ್ನ ಸ್ನೇಹಿತರೊಬ್ಬರ ಜೊತೆ ಮಾತನಾಡಿ ನನ್ನ ಸಂತೋಷವನ್ನು ಹಂಚಿಕೊಂಡಿದ್ದೆ. ಆ ಸಂತೋಷವನ್ನು ಹಂಚಿಕೊಳ್ಳಲು ಹೊಸದುರ್ಗದಲ್ಲಿ ಯಾರೂ ಇರಲಿಲ್ಲ.

ಬೆಂಗಳೂರಿಗೆ ಹಿಂದಿರುಗುತ್ತಿದ್ದಂತೆ ಪರಮರಹಸ್ಯ ಹಸ್ತಪ್ರತಿಗಳು ಬೆಂಗಳೂರು, ಮೈಸೂರು, ಧಾರವಾಡಗಳಲ್ಲಿವೆಯೆಂಬ ಸುದ್ದಿ ತಿಳಿಯಿತು. ಈ ಮಧ್ಯೆ ಎಲ್ಲ ವಚನ ಸಂಪುಟಗಳ ಕೊನೆಯ ಪುಟಗಳಲ್ಲಿ ನಾನು ಮಾಡಿಕೊಂಡಿದ್ದ ಟಿಪ್ಪಣಿಗಳನ್ನು ಎಚ್ಚರಿಕೆಯಿಂದ ಪರಿಶೀಲಿಸುತ್ತಿದ್ದಂತೆ ನಾನು ಒಂದು ಮುಖ್ಯ ಸಂಗತಿಯನ್ನು ಗಮನಿಸದಿದ್ದುದು ಅರಿವಿಗೆ ಬಂದಿತು. ನನ್ನ ಟಿಪ್ಪಣಿಗಳು ಸಾರಿ ಹೇಳುತ್ತಿದ್ದುವು : ವಚನಗಳ ಮಧ್ಯೆ ಉದ್ಧೃತವಾಗಿರುವ ಸಂಸ್ಕೃತ ಶ್ಲೋಕಗಳಲ್ಲಿ ವೀರಶೈವ, ಷಟ್ಸ್ಥಲ, ಷಟ್ಸ್ಥಲ ಬ್ರಹ್ಮ, ಪಂಚಾಚಾರ, ವಿರಕ್ತ, ಇಷ್ಟಲಿಂಗ, ಸ್ಥಾವರ, ಜಂಗಮ ಹೀಗೆ ಬಹುತೇಕ ಎಲ್ಲ ಪ್ರಮುಖ ಧಾರ್ಮಿಕ ಪರಿಕಲ್ಪನೆಗಳ ಹೆಸರುಗಳು ಕೆಲವೆಡೆ ಅವುಗಳ ವಿವರಣೆ ಸಮೇತ ಕಾಣಿಸಿಕೊಂಡಿದ್ದುವು. ಹತ್ತನೆಯ ಶತಮಾನದ ಹೂಲಿ ಕನ್ನಡ ಶಾಸನದ ಗುರುವೊಬ್ಬನ ಪ್ರಶಂಸೆಯಲ್ಲಿ ಅಷ್ಟಾವರಣ ಪದ ಬಂದಿದೆ. ಕ್ರಿ.ಶ. 1100ರ ಕೊಂಡಗುಳಿ ಕೇಶಿರಾಜನ ಕನ್ನಡ ಕೃತಿಗಳಲ್ಲಿ ಲಿಂಗಾಯತ, ವೀರಶೈವ, ಕಾಯಕ ಮಾತು ಬಂದಿವೆ. ಒಂದು ವಿಷಯ ತೀರ ಸ್ಪಷ್ಟವಾಯಿತು; ಆ ಮುಂಚೆಯೂ ಅನುಮಾನವಿರಲಿಲ್ಲ. ಬಸವ, ಅಲ್ಲಮ, ಸಿದ್ಧರಾಮರ ಹೊತ್ತಿಗೆ ವೀರಶೈವವು ತನ್ನೆಲ್ಲ ಪ್ರಗತಿಪರ ಪರಿಕಲ್ಪನೆಗಳೊಂದಿಗೆ ಜನರಲ್ಲಿ ಪ್ರಚಲಿತವಾಗಿತ್ತು. ನಿಶ್ಚಿತವಾಗಿಯೂ ಬಸವಪೂರ್ವ ಯುಗದವರೆಂದು ಹೇಳಬಹುದಾದ ಕೆಲವರು ಶರಣರು ಶಿವಭಕ್ತಿಗಾಗಿ ಆಸ್ಥಾನದ ಹುದ್ದೆಗಳನ್ನು ತೊರೆದಿದ್ದರು, ದಲಿತರ ಜೊತೆ ಮಿಲಿತವಾಗಿದ್ದರು, ದಲಿತ ಶಿವಭಕ್ತರಿಗೂ ಇತರ ಶಿವಭಕ್ತರಿಗೂ ಭೇದವಿಲ್ಲವೆಂದು ಘೋಷಿಸಿದ್ದರು ಮತ್ತು ಅದನ್ನು ಬದುಕಿನಲ್ಲಿ ಆಚರಣೆಗೂ ತಂದಿದ್ದರು. ಶುದ್ಧಶೈವನಾಗಿದ್ದ ಬಸವಣ್ಣನವರಿಗೆ ಚನ್ನಬಸವಣ್ಣನ ಮೂಲಕ ವೀರಶೈವದ ಪರಿಚಯವಾಗಿ ಅದಕ್ಕೆ ಅವರು ಮಾರುಹೋಗಲು ಅದರ ತತ್ವ ಆಚರಣೆಗಳು ತಮ್ಮ ವಿಚಾರಧಾರೆಗೆ ಅನುಗುಣವಾಗಿದ್ದುದೇ ಕಾರಣವಾಗಿತ್ತು. ತಾವು ಚನ್ನಬಸವಣ್ಣನಿಂದಾಗಿ ವೀರಶೈವನಾದೆನೆಂದೇ ಸ್ಪಷ್ಟೋಕ್ತಿಯಲ್ಲಿ ಹೇಳಿಕೊಂಡಿರುವುದಲ್ಲದೆ ಅವರ ಆ ಮಾತನ್ನು ದೃಢಪಡಿಸುವ ಆಧಾರಗಳು ಇತರ ಶರಣರಲ್ಲೂ ಕಂಡುಬಂದಿವೆ.

ಬಸವಣ್ಣನವರು ಎಂಟುನೂರು ವರ್ಷಗಳ ಹಿಂದೆ ನಡೆಸಿದ ಸಾಮಾಜಿಕ ಆಂದೋಲನವನ್ನು ಆಧುನಿಕ ಪರಿಭಾಷೆಯಲ್ಲಿ ಹೀಗೆ ಹೇಳಬಹುದು. ಅವರಿಗಿಂತ ಹಿಂದೆ ವೀರಶೈವ ಧರ್ಮವು ಶುದ್ಧ ವಿಜ್ಞಾನದಂತೆ (Pure Science) ಇತ್ತು. ಅವರು ಒಬ್ಬ ಆನ್ವಯಿಕ ವಿಜ್ಞಾನಿಯಂತೆ (Applied Scientist) ವೀರಶೈವ ಧರ್ಮವನ್ನು ಜನತೆಯ ಇನ್ನೂ ಹೆಚ್ಚು ಹತ್ತಿರಕ್ಕೆ ತಂದರು, ಜನಪ್ರಿಯಗೊಳಿಸಿದರು, ಸಾಮಾನ್ಯ ಜನೋಪಯೋಗಿಯಾಗುವಂತೆ ಮಾಡಿದರು. ಅವರು ವೀರಶೈವ ಧರ್ಮದ ಒಬ್ಬ ಆನ್ವಯಿಕ ವಿಜ್ಞಾನಿ. ಅಂತಹ ಅವರ ಅನುಯಾಯಿಗಳು ಮಾತ್ರ ಲಿಂಗಾಯತರೆಂದೂ ಇತರರು ವೀರಶೈವರೆಂದೂ ಲಿಂಗಾಯತರು ಹಿಂದೂಗಳಲ್ಲ, ವೀರಶೈವರು ಮಾತ್ರ ಹಿಂದೂಗಳು

ಎಂದು ಈಚೆಗೆ ಎದ್ದಿರುವ ವಿವೇಕದೂರ ವಾದವು ಬಿದ್ದು ಹೋಗುತ್ತದೆ. ಬಸವಣ್ಣನವರ ವಚನವೊಂದರಲ್ಲಿ ಬರುವ ಸಂಸ್ಕೃತ ಶ್ಲೋಕದಲ್ಲಿ ವೀರಶೈವ ಪದ ಬಂದಿರುವುದಲ್ಲದೆ, ಅವರು ತಾವೇ ಹೊಸದಾಗಿ ವೀರಶೈವನಾದೆ ಎಂದು ಹೇಳಿಕೊಂಡಿರುವಾಗ ಅವರ ಅನುಯಾಯಿಗಳು ವೀರಶೈವರಲ್ಲವೆಂದು ಹೇಳುವುದರ ಅರ್ಥಹೀನತೆ ಎದ್ದು ಕಾಣುತ್ತದೆ.

ಈ ಮಧ್ಯೆ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದಲ್ಲಿದ್ದ ಪರಮರಹಸ್ಯ ಕೃತಿಯ ಹಸ್ತಪ್ರತಿಯನ್ನು ತರಿಸಿಕೊಂಡು ಒಮ್ಮೆ ಸ್ಥೂಲವಾಗಿ ಪರಿಶೀಲಿಸಿದಾಗ ಅಕ್ಕಮಹಾದೇವಿ ಉಲ್ಲೇಖಿಸಿರುವ ಏಳು ಶ್ಲೋಕಗಳು ಅಲ್ಲಿ ಕಾಣಿಸದಿದ್ದರೂ, ಶರಣರು ಬೇರೆ ಬೇರೆ ಕಡೆ ಆಕರವನ್ನು ಸೂಚಿಸದೆ ಉದ್ಧರಿಸಿರುವ ಕೆಲವು ಸಂಸ್ಕೃತ ಶ್ಲೋಕಗಳು ಅಲ್ಲಿ ಕಾಣಿಸಿದುವು. ಆ ಕೃತಿ ಇರುವ ಹಸ್ತಪ್ರತಿಯಲ್ಲಿಯೇ ಲಿಖಿತವಾಗಿರುವ ಇನ್ನೊಂದು ಸಂಸ್ಕೃತ ಕೃತಿಯಲ್ಲಿಯೂ ಅಂತಹ ಶ್ಲೋಕಗಳು ಲಭ್ಯವಾದುವು. ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯ, ಕರ್ನಾಟಕ ವಿಶ್ವವಿದ್ಯಾಲಯದ ಹಸ್ತಪ್ರತಿಗಳನ್ನು ಸ್ವಲ್ಪ ಪರಿಶೀಲಿಸಿದ್ದೇನೆ. ವಿಸ್ತೃತ ಪರಿಶೀಲನೆ ನನ್ನ ಮುಂದಿನ ಸಂಶೋಧನೆಯ ಯೋಜನೆಗಳಲ್ಲೊಂದು. ಪರಮರಹಸ್ಯ ಕೃತಿಯು ಐವತ್ತು ಅರವತ್ತು ವರ್ಷಗಳ ಹಿಂದೆ ಅಚ್ಚಾಗಿರುವ ವಿಷಯ ತಿಳಿದುಬಂದಿದ್ದರೂ ಆ ಅಚ್ಚಿನ ಪ್ರತಿ ಎಲ್ಲೂ ಸಿಗದೆ ಒದ್ದಾಡುತ್ತಿದ್ದೇನೆ. ಒಂದು ಶೋಧ ಇನ್ನೊಂದಕ್ಕೆ ಎಡೆಮಾಡಿಕೊಡುವ ವಿಧಾನ ಇದು.

ಅಷ್ಟೇ ಕುತೂಹಲದಿಂದ ಕೈಗೊಳ್ಳಬೇಕೆಂದು ಯೋಚಿಸಿರುವ ಯೋಜನೆ ಕರ್ನಾಟಕ ನೇಪಾಲಗಳಿಗಿರುವ ಸಾಂಸ್ಕೃತಿಕ ಸಂಬಂಧಗಳು. ಕರ್ನಾಟಕ ಮೂಲದ ದೊರೆಗಳು ಬಂಗಾಲ, ಮಿಥಿಲೆಗಳಲ್ಲಿ (ಉತ್ತರ ಬಿಹಾರ) ಆಳಿದರು. ಬಂಗಾಲದ ಸೇನರು ಮೂಲತಃ ತಾವು ಕರ್ನಾಟಕದವರೆಂದು ತಮ್ಮ ದಾಖಲೆಗಳಲ್ಲಿ ಹೇಳಿಕೊಂಡಿದ್ದಾರೆ. ('ಬಲ್ಲಾಳ' ಎಂಬ ಹೆಸರಿನ ರಾಜರೂ ಇದ್ದರು). ಅವರ ರಾಜಧಾನಿ ನವದ್ವೀಪ (ನಬೋದೀಪ್ : ಗಂಗೆ ಉಕ್ಕಿ ಹರಿದಾಗ ಆ ಪ್ರದೇಶದ ಸುತ್ತ ನೀರು ನಿಂತು ವರ್ಷಕ್ಕೊಮ್ಮೆ ಇಮ್ಮೆ ಕೆಲಕಾಲ ಹೊಸದಾಗಿ ಅದು ದ್ವೀಪದಂತಾಗುತ್ತದೆ. ಅದೇ ನವದ್ವೀಪ, ಗೌರಾಂಗ ಚೈತನ್ಯನ ಊರು). ಅಲ್ಲಿ ಈಗಲೂ "ಬಲ್ಲಾಳ್ ದಿಬ್ಬ" ಎಂಬ ಹೆಸರಿನ ದಿಣ್ಣೆ ಇದೆ. ಮಿಥಿಲಾದ ದೊರೆಗಳು ಕೆಲವು ಶತಮಾನ ನೇಪಾಳ ಆಳಿದರು. ರಾಜಧಾನಿ ಕಾಠಮಂಡುವಿಗೆ ಹದಿನೈದು ಕಿಲೋಮೀಟರ್ ದೂರದ ಭಕ್ತಾಪುರವು ಹೆಚ್ಚಾಗಿ ಹಳೆಯ ದೇವಾಲಯ, ಮಠಗಳು ಇರುವ ಒಂದು ಊರಾಗಿದ್ದು ಅದು ಒಂದು ರೀತಿಯಲ್ಲಿ ನೇಪಾಳದ ಸಾಂಸ್ಕೃತಿಕ ರಾಜಧಾನಿಯಿದ್ದಂತಿದೆ. ಆ ಊರಲ್ಲಿ ಕೆಲವು - 'ಜಂಗಂ' ಮಠಗಳಿದ್ದು ಅವುಗಳು ವೀರಶೈವ ಮಠಗಳೇ ಆಗಿವೆ. ಅದಕ್ಕೆ ಸಮೀಪದ ಪಣೂತಿ ಎಂಬ ಊರಲ್ಲಿ ಇನ್ನೂ ಮೂರು ಜಂಗಂ ಮಠಗಳಿವೆ. ಭಕ್ತಾಪುರದ ಪ್ರಸಿದ್ಧ ಜಂಗಂ ಮಠವು ಕಾಶಿಯ ಜಂಗಮವಾಡಿ ಮಠದ ಶಾಖಾಮಠ. ಆ ಜಂಗಂ ಮಠಗಳಿಗೆ ಸೇರಿದವರೆಲ್ಲ, ಹೆಣ್ಣಾಗಲಿ ಗಂಡಾಗಲಿ 'ಜಂಗಂ' ಎಂದು ಕೊನೆಗೊಳ್ಳುವ ಹೆಸರುಗಳನ್ನಿಟ್ಟುಕೊಳ್ಳುತ್ತಾರೆ (ರಾಮ ಜಂಗಂ, ಶಾಂತಾ ಜಂಗಂ). ಜೊತೆಗೆ ನೇಪಾಳದಲ್ಲಿ ಲಕ್ಷಾಂತರ ಹಸ್ತಪ್ರತಿಗಳಿದ್ದು ಅವುಗಳಲ್ಲಿ ಕೆಲವು ಕನ್ನಡ ಹಸ್ತಪ್ರತಿಗಳೂ ಇರಬಹುದು.

ಪಶುಪತಿ ದೇವಾಲಯದ ಪ್ರಧಾನ ಅರ್ಚಕ ದಕ್ಷಿಣ ಕನ್ನಡ ಜಿಲ್ಲೆಯ ಒಬ್ಬ ಬ್ರಾಹ್ಮಣ. ಜಂಗಂ ಮಠವೊಂದರದಲ್ಲಿರುವ ನೆವಾರಿ ಭಾಷೆಯ ಶಾಸನದ (ಸು. ಕ್ರಿ.ಶ. 1690) ಅಂತ್ಯದಲ್ಲಿ "ಮಟಪತ್ತಿ ಶ್ರೀ ಚನ್ನವೀರದೇವರಿಗೆ ಮಹಾಮಹತ್ತಿನ ಪಾದವೇ ಗತಿ ರುದ್ರಾಕ್ಷಿ 3000 ವಿಭೂತಿ 300" ಎಂಬ ಕನ್ನಡ ವಾಕ್ಯವಿದೆ. ನೇಪಾಳದಿಂದ ಬಂದಿದ್ದ ಯೋಗೇಶ್ ರಾಜ್ ಎಂಬ ಯುವಕ ತಂದಿದ್ದ ಶಾಸನದ ಎಸ್ಟಾಂಪೇಜ್‌ನಲ್ಲಿದ್ದ ಆ ಶಾಸನದ ಕನ್ನಡ ಭಾಗವನ್ನು ನಾನು ಓದಿ ಕೊಟ್ಟೆ. ನೇಪಾಳಕ್ಕೇ ಹೋಗಿ ಅಲ್ಲಿ ಒಂದೆರಡು ವಾರವಿದ್ದು ಮಠಗಳು, ಶಾಸನಗಳು, ಹಸ್ತಪ್ರತಿಗಳು ಇತರ ದಾಖಲೆಗಳು ಎಲ್ಲವನ್ನೂ ಪರಿಶೀಲಿಸಿದರೆ ಕರ್ನಾಟಕಕ್ಕೂ ನೇಪಾಳಕ್ಕೂ ಇದ್ದ ಸಾಂಸ್ಕೃತಿಕ ಸಂಬಂಧಗಳು ಇನ್ನೂ ಸ್ಪಷ್ಟಗೊಳ್ಳುವ ಸಾಧ್ಯತೆ ಇದೆ. ಸರ್ಕಾರದಿಂದ ಧನ ಸಹಾಯ ದೊರೆತಲ್ಲಿ ಒಬ್ಬ ಶಾಸನ ತಜ್ಞ, ಒಬ್ಬ ಹಸ್ತಪ್ರತಿ ತಜ್ಞರೊಡನೆ ಅಲ್ಲಿಗೆ ಹೋಗಿ ಬರುವ ಯೋಚನೆಯಿದೆ. (ನಾನೊಬ್ಬನೇ 15.9.2002ರಂದು ನೇಪಾಳಕ್ಕೆ ಹೋಗಿ ಅಲ್ಲಿ ಹದಿನೈದು ದಿನ ಇದ್ದು ಆ ಕೆಲಸ ಮುಗಿಸಿದ್ದೇನೆ.)

## ಹಿಂದೂ - ಲಿಂಗಾಯತ

ಸಾಹಿತ್ಯ ಕ್ಷೇತ್ರದ ವಿದ್ಯಾರ್ಥಿಯಾಗಿ ಅಗತ್ಯ ಬಂದಾಗ ನ್ಯಾಯದ ಪರ, ಅನ್ಯಾಯದ ವಿರುದ್ಧ ಹಲವು ಬಾರಿ ನಿಂತು ಎದುರಿಸಿದ್ದೇನೆ. ನಾನು ಮೈಸೂರಿನಲ್ಲಿ ಎಂ.ಎ. ಪದವಿಗಾಗಿ ಅಧ್ಯಯನ ನಡೆಸುತ್ತಿರುವಾಗ ಮಾಸ್ತಿಯವರ ಚೆನ್ನಬಸವ ನಾಯಕ ಕಾದಂಬರಿಯಲ್ಲಿ ವೀರಶೈವರಿಗೆ ಅಪಚಾರವಾಗಿದೆಯೆಂಬ ಕೂಗು ಎದ್ದಾಗ ಡಾ. ಪ್ರಭುಶಂಕರ್ ಮತ್ತು ಇತರರು ಸೇರಿ ಅಂತಹ ಅಪಚಾರವೇನೂ ಆಗಿಲ್ಲವೆಂದು ಡೆಕನ್ ಹೆರಾಲ್ಡ್ ಪತ್ರಿಕೆಗೆ ಪತ್ರ ಬರೆದೆವು. ಆ ಪತ್ರವನ್ನು ಮಾಸ್ತಿಯವರು ತಮ್ಮ 'ಭಾವ' ಸಂಪುಟವೊಂದರಲ್ಲಿ ಪ್ರಕಟಿಸಿದ್ದಾರೆ, ನಮ್ಮ ಹೆಸರುಗಳನ್ನು ತೆಗೆದುಹಾಕಿ. ಕೆಲವರಿಂದ ತೊಂದರೆಯಾಗಬಹುದೆಂದು ನಿಮ್ಮ ಹೆಸರು ಬಿಟ್ಟೆ ಎಂದು ಒಮ್ಮೆ ಮಾಸ್ತಿಯವರು ತಾವಾಗಿ ಹೇಳಿದರೂ, ಆ ಮಾತು ನನಗೆ ಏಕೋ ಸಮಾಧಾನ ತರಲಿಲ್ಲ. ನಮ್ಮ ಹೆಸರುಗಳನ್ನು ಪತ್ರದ ಕೆಳಗೆ ಮೂಲದಲ್ಲಿರುವಂತೆ ಪ್ರಕಟಿಸಬೇಕಿತ್ತು. ಸಿದ್ಧರಾಮನ ಲಿಂಗದೀಕ್ಷೆ ವಿಷಯದಲ್ಲಿ ಡಿ.ಎಲ್. ನರಸಿಂಹಾಚಾರ್ಯರು ತಾಳಿದ್ದ ನಿಲುವನ್ನು ಉತ್ತರ ಕರ್ನಾಟಕದ ಕೆಲವರು ವಿರೋಧಿಸಿ ಅವರ ಬಗ್ಗೆ ಅಪಚಾರದ ಮಾತುಗಳನ್ನಾಡಿದಾಗ ಅವರ ಅಭಿಪ್ರಾಯಗಳ ಪರವಾಗಿ ನಾನು ನಿಂತೆ (ಡಿ.ಎಲ್.ಎನ್. ಮುಂದೆ ತಮ್ಮ ವಾದಕ್ಕೆ ವಿರುದ್ಧವಾದ ಸಾಕ್ಷ್ಯಾಧಾರ ದೊರೆತು ತಮ್ಮ ನಿಲುವನ್ನು ಮಾರ್ಪಡಿಸಿಕೊಂಡರು). ಮುಕ್ತಿಕಂಠಾಭರಣದಲ್ಲಿ ಶರಣರ ಬಗ್ಗೆ ಅವಹೇಳನದ ಮಾತುಗಳಿವೆ ಎಂಬ ಕಾರಣವನ್ನಿಟ್ಟುಕೊಂಡು ಆ ಆಧುನಿಕಪೂರ್ವ ವಚನಸಂಕಲನದ ಸಂಪಾದಕ ಡಾ.ಆರ್.ಸಿ. ಹಿರೇಮಠರ ವಿರುದ್ಧ ಧ್ವನಿ ಎದ್ದಾಗ, ವಿರೋಧದ ಧ್ವನಿಯು ಕೃತಿಯ ಬಗ್ಗೆ ಎದ್ದರೆ ಆಕ್ಷೇಪಾರ್ಹವಲ್ಲ, ಅದನ್ನು ಹೊರತಂದ ಸಂಪಾದಕರನ್ನು ಖಂಡಿಸುವುದು ತಪ್ಪಾಗುತ್ತದೆ ಎಂದು ನಾನು ಬರೆದುದಕ್ಕೆ "ಒಬ್ಬ ಜಂಗಮ ಇನ್ನೊಬ್ಬ ಜಂಗಮನ ಪರ ನಿಂತಿದ್ದಾನೆ" ಎಂಬೊಂದು ಪ್ರತಿಕ್ರಿಯೆಯೂ ಬಂದಿತು.

ಸಲ್ಮಾನ್ ರಶ್ದಿ ವಿರುದ್ಧ ಮುಸ್ಲಿಮ್ ಜನಾಂಗ, ಡಾ. ನಾರಾಯಣ್, ಡಾ. ಕಲಬುರ್ಗಿ ವಿರುದ್ಧ ವೀರಶೈವ ಸಮಾಜ ಆಕ್ರೋಶ ವ್ಯಕ್ತಪಡಿಸಿದಾಗ ಲೇಖಕರಾದ ಅವರ ಹಕ್ಕನ್ನು ಪ್ರಶ್ನಿಸಲಾಗದೆಂದು ಇತರ ಲೇಖಕರ ಜೊತೆ ನನ್ನ ಪ್ರತಿಭಟನೆ ವ್ಯಕ್ತಪಡಿಸಿದೆ. ಅವರ ಕೃತಿಗಳ ವಿಮರ್ಶೆ ಮಾಡಲು ಎಲ್ಲರಿಗೂ ಹಕ್ಕಿದೆ, ಆದರೆ ಲೇಖಕರಿಗೆ ಬೆದರಿಕೆ ಒಡ್ಡುವುದು ಖಂಡನಾರ್ಹ ಎಂದು ಹೇಳಿದೆವು. ಇಲ್ಲೆಲ್ಲ ನನ್ನದು ಮುಖ್ಯ ಪಾತ್ರವಿದ್ದಿತೆಂದು ಹೇಳುವುದು ಅನಗತ್ಯವಲ್ಲವೆಂದು ಭಾವಿಸಿದ್ದೇನೆ. ಸಲ್ಮಾನ್ ರಶ್ದಿಯವರ ಪರ ಹೇಳಿಕೆಗೆ ಸಹಿ ಪಡೆಯಲು ಹೋದಾಗ ಕೆಲ ದಶಕಗಳ ಹಿಂದೆ ಇಸ್ಲಾಂಗೆ ಮತಾಂತರ ಹೊಂದಿದ್ದ ವ್ಯಕ್ತಿಯೊಬ್ಬರು, ತಾವು ಪ್ರಗತಿಪರರೆಂದು ಹೇಳಿಕೊಳ್ಳುತ್ತಿದ್ದವರೊಬ್ಬರು ನುಣುಚಿಕೊಂಡ ರೀತಿ ನನಗೆ ಏಕೋ ಆಶ್ಚರ್ಯವುಂಟುಮಾಡಲಿಲ್ಲ. (ಆ 'ಮತಾಂತರ' ವೊಂದು ಬೇರೆ ಕತೆ).

ಮೇಲಿನ ಮಾತುಗಳನ್ನು ಒಂದು ಹಿನ್ನೆಲೆಯಾಗಿ ಹೇಳಲು ಕಾರಣಗಳಿವೆ. ಹಿಂದೂ - ಲಿಂಗಾಯತ ಎಂಬ ಸಮಸ್ಯೆಯನ್ನು ಹುಟ್ಟಿಸಿದವರಿಗೆ ತಾವು ಏನು ತಪ್ಪು ಮಾಡುತ್ತಿದ್ದೇವೆ ಎಂಬುದರ ಅರಿವಿಲ್ಲ. ಅವರಿಗೆ ಚರಿತ್ರೆಯೂ ಗೊತ್ತಿಲ್ಲ, ಮುಂದೆ ಆಗಬಹುದಾದ ಅನಾಹುತಗಳ ಅರಿವೂ ಇಲ್ಲದಿರುವುದು ತೀವ್ರ ನೋವಿನ ಸಂಗತಿಯಾಗಿದೆ. ವೀರಶೈವರು ಹಿಂದೂಗಳಲ್ಲವೆಂದು ಕಾನೂನು ಒಪ್ಪಿ ಜನಗಣತಿಯಲ್ಲಿ ಹಿಂದೂಗಳಂತೆ, ಕ್ರಿಶ್ಚಿಯನ್ನರಂತೆ ಅವರಿಗೂ ಪ್ರತ್ಯೇಕ ಚಿಹ್ನೆ ನೀಡಿ V / L (ವೀರಶೈವ / ಲಿಂಗಾಯತ) ಹೆಸರಲ್ಲಿ ದಾಖಲೆ ಮಾಡಿಸಿಕೊಳ್ಳಲು ಅವಕಾಶ ದೊರೆತು, ಅವರು ಧಾರ್ಮಿಕ ಅಲ್ಪಸಂಖ್ಯಾತರೆಂದು ಪರಿಗಣಿತರಾದರೆ ಅವರಿಗೆ ಕೆಲವು ಸವಲತ್ತುಗಳು ದೊರಕುತ್ತವೆಯೆಂಬ ಭಾವನೆ ಕೆಲವರಿಗಿದೆ. ಅವೆಲ್ಲವನ್ನೂ ನಾನು ಸದ್ಯದಲ್ಲೇ ಹೊರಬರಲಿರುವ "ವೀರಶೈವಧರ್ಮ : ಭಾರತೀಯ ಸಂಸ್ಕೃತಿ" ಎಂಬ ಕೃತಿಯಲ್ಲಿ ವಿವರಿಸಿದ್ದೇನೆ. ಆ ಕೃತಿ ರಚನೆಗೆ ನಾನು ಒಂದು ಧ್ಯೇಯೋದ್ದೇಶದಿಂದ ಉತ್ತೇಜಿತನಾಗಿ ಕೈ ಹಾಕಿದ್ದೇನೆ ಮತ್ತು ಒಂದು ಸಮೂಹದ ಎದುರು ನಿಂತು ಅಲ್ಲಿ ಮಾತನಾಡಿದ್ದೇನೆ. ಭಯದ ಪ್ರಶ್ನೆ ಇಲ್ಲ. ಏಕೆಂದರೆ ನನ್ನ ಜೊತೆ ಸತ್ಯ ಇದೆ. ಹಾಗೆಯೇ ನನ್ನ ಮುಂದೆ ದೊಡ್ಡ ಆದರ್ಶ ಇದೆ. ಅದನ್ನೆಲ್ಲ ವಿವರಿಸಲು ಇದು ಸ್ಥಳವಲ್ಲವಾದರೂ ಅನಗತ್ಯವಾದರೂ ಧಾರ್ಮಿಕ ವಿಷಯಗಳ ಬಗ್ಗೆ ಸಂಶೋಧನೆಯನ್ನೂ ಚಿಂತನೆಯನ್ನೂ ಮಾಡುವವರು ದಿಟ್ಟತನದಿಂದ ನಿಲ್ಲಬೇಕಾದರೆ ತಾವು ನೈತಿಕವಾಗಿ ಮಾಹಿತಿ ಸಂಪನ್ನರಾಗಿ ಗಟ್ಟಿ ನೆಲದ ಮೇಲೆ ನಿಂತಿರುವೆವೇ ಇಲ್ಲವೇ ಎಂಬುದನ್ನು ಮೊದಲು ದೃಢಪಡಿಸಿಕೊಳ್ಳಬೇಕು. (ಆ ಕೃತಿ ಹೊರಬಂದಿದೆ)

ಮೇಲಿನ ವಿಷಯದ ಬಗ್ಗೆ ಕೆಲಸ ಆರಂಭಿಸಿ ನಾನು ಪಡೆದ ಅನುಭವ [illegible]ಮುಖವಾದುದು. ನನ್ನ ಪಿಎಚ್.ಡಿ ನಿಬಂಧ ಸಿದ್ಧಪಡಿಸಲು ಪಟ್ಟ ಶ್ರಮಕ್ಕೆ ಇದು [illegible]ಡನೆಯದು ಎಂದು ಹೇಳಿದರೂ ತಪ್ಪಿಲ್ಲ. ಅದನ್ನು ಒಂದು ಪದವಿಗಾಗಿ ಸಿದ್ಧಪಡಿಸಿದರೆ [illegible]ದನ್ನು ಬರೀ ಚರಿತ್ರೆಯನ್ನು ತಿಳಿಸುವುದಕ್ಕೆ ಅಲ್ಲ; ಸಮಕಾಲೀನ ಮತ್ತು ಭವಿಷ್ಯದ ಹಿತವನ್ನು ಗಮನದಲ್ಲಿಟ್ಟುಕೊಂಡು, ಆದರೆ ಎಲ್ಲೂ ವಸ್ತುನಿಷ್ಠ ದೃಷ್ಟಿಯನ್ನು ಬಿಟ್ಟುಕೊಡದೆ ಬರೆದಿದ್ದೇನೆ.

ನನಗಾದ ಒಂದು ಚಿಕ್ಕ, ಆದರೆ ಮುಖ್ಯ ಅನುಭವದ ಕಥನ ಹೀಗಿದೆ. ಯಾವುದೇ ಸಂಗತಿಯನ್ನು ಸಮಗ್ರವಾಗಿ ಪರಿಶೀಲಿಸದೆ ನಮಗೆ ಬೇಕಾದಷ್ಟನ್ನು ಮಾತ್ರ ಇಟ್ಟುಕೊಂಡು ಉಳಿದುದನ್ನು ಉದಾಸೀನ ಮಾಡಿದರೆ ವಾಸ್ತವಕ್ಕೆ ಬಹು ಅಪಚಾರ ಮಾಡಿದಂತಾಗುತ್ತದೆ. "ಬಸವನೆಂದರೆ ಪಾಪ ದೆಸೆಗೆಟ್ಟು ಹೋಗುವುದು" ಎಂಬ ವಾಕ್ಯದಲ್ಲಿ "ಪಾಪ" ಎಂಬಲ್ಲಿಗೆ ನಿಲ್ಲಿಸಿಬಿಟ್ಟರೆ ಆಗುವ ಅಪಾರ್ಥ ಎದ್ದು ಕಾಣುತ್ತದೆ. ವಚನಕಾರರು ವೇದಗಳನ್ನು ನಿರಾಕರಿಸಿದ್ದಾರೆ, ಬ್ರಾಹ್ಮಣರನ್ನು ನಿಂದಿಸಿದ್ದಾರೆ, ವೇದಗಳು ಬ್ರಾಹ್ಮಣರಿಗೆ ಮಾತ್ರ ಪ್ರಿಯ ಎಂಬ ಭ್ರಮೆ ಸಾಮಾನ್ಯ ಓದುಗರಲ್ಲಿ ಮಾತ್ರವಲ್ಲ, ತಿಳಿದವರಲ್ಲೂ ಪ್ರಚಲಿತವಾಗಿದೆ. ಅದಕ್ಕೆ ಕಾರಣ, "ವೇದಕ್ಕೆ ಒರೆಯ ಕಟ್ಟುವೆ...." ಎಂಬಂತಹ ಕೆಲವು ವಚನಗಳು. ಎಲ್ಲ ಶರಣರೂ ವೇದಗಳನ್ನು ಮನಃಪೂರ್ವಕವಾಗಿ ಒಪ್ಪಿಕೊಂಡು ನೂರಾರು ಕಡೆ ಉಲ್ಲೇಖಿಸಿದ್ದಾರೆ. ಹಾಗೆಯೇ, ಆಗುವುದಾದರೆ ಬ್ರಹ್ಮವನ್ನು ತಿಳಿದ ಬ್ರಾಹ್ಮಣನಾಗಬೇಕು ಎಂಬ ಮಾತೂ ಆಡಿದ್ದಾರೆ. ಅದೇ ಉಸಿರಿನಲ್ಲಿ ಗುರು, ಜಂಗಮ, ವಿರಕ್ತರ ಟೀಕೆಯೂ ಬಂದಿವೆ. ವಚನಗಳನ್ನು ಓದಿ ಪ್ರಯೋಜನವೇನು ಶುದ್ಧ ಆಚಾರವಿಲ್ಲದಿದ್ದರೆ ಎಂಬ ಮಾತುಗಳೂ ಬಂದಿವೆ ("ವಚಿಸಿ ಅನುಭಾವಿಯಾಗದವ ಪಿಶಾಚಿಯಯ್ಯಾ" - ನೋಡಿ). ಶರಣೋತ್ತರ ಯುಗದ ಎಲ್ಲ ವೀರಶೈವ ಕೃತಿಗಳಲ್ಲೂ ವೇದಗಳ ಬಗ್ಗೆ ತುಂಬು ಗೌರವದ ಮಾತುಗಳಿವೆ. ವೇದಗಳ ಅರ್ಥಹೀನ ಆಚರಣೆಗಳನ್ನು, ಅಂತಹ ಆಚರಣೆಗಳನ್ನು ಅನುಸರಿಸುತ್ತ ತಾವು ಶ್ರೇಷ್ಠರೆಂದು ಬೀಗುವ ಬ್ರಾಹ್ಮಣರನ್ನು ಟೀಕೆ ಮಾಡಿರುವವರಲ್ಲಿ ಶರಣರೇ ಮೊದಲಿಗರಲ್ಲ; ಅಂತಹ ಪ್ರತಿಭಟನೆ ಉಪನಿಷತ್ತು, ಮಹಾಭಾರತ, ವಿಷ್ಣುಪುರಾಣದಂತಹ ಕೃತಿಗಳಲ್ಲಿ ನೂರಾರು ಕಡೆ ಬಂದಿದೆ. ಆಂಶಿಕ ದೃಷ್ಟಿ ಸಂಶೋಧನೆಯಲ್ಲಿ ಅಥವಾ ಎಲ್ಲ ಕಡೆ ಅನಾಹುತಕಾರಿ. ಸಂಶೋಧಕನಾದವನು ಒಬ್ಬ ವಕೀಲನಂತೆ ತನ್ನ ಕಕ್ಷಿದಾರನನ್ನು, ಎಂದರೆ ತನ್ನ ಗೃಹೀತ ಸತ್ಯವನ್ನು ಮಾತ್ರ ಗೆಲ್ಲಿಸುವ ಉದ್ದೇಶವುಳ್ಳವನಾಗಿರಬಾರದು. ಅವನು ಗೆಲ್ಲಿಸಬೇಕಾದುದು ಸತ್ಯವನ್ನು ಮಾತ್ರ.

ಒಂದು ವಿಷಯದ ಬಗ್ಗೆ ಹೆಚ್ಚು ಹೆಚ್ಚು ಬರೆಯಬೇಕಾದರೆ ಮಾತನಾಡಬೇಕಾದರೆ, ಹೆಚ್ಚು ಹೆಚ್ಚು ಆಕರ್ಷಕವಾಗಿ ಬರೆಯಬೇಕಾದರೆ ಮಾತನಾಡಬೇಕಾದರೆ ಆ ವಿಷಯಕ್ಕೆ ಸಂಬಂಧಿಸಿದಂತೆ ಕಡಮೆ ತಿಳಿದುಕೊಳ್ಳುವುದು ಒಳ್ಳೆಯದು ಎಂಬುದು "ಹಿಂದೂ-ವೀರಶೈವ" ವಿಷಯಕ್ಕೆ ಸಂಬಂಧಿಸಿದಂತೆ ಬಂದ ಲೇಖನಗಳನ್ನು ಪತ್ರಗಳನ್ನು ಓದಿದ ಮೇಲೆ ಹೆಚ್ಚು ಸ್ಪಷ್ಟವಾಗಿ ವಿದಿತವಾಯ್ತು. ಇದು ಲೇವಡಿ ಮಾತಲ್ಲ, ಒಂದು ವಾಸ್ತವ.

ನನಗಾದ ಒಂದು ಅಪೂರ್ವ ಅನುಭವವೆಂದರೆ ಒಂದು ಸಮಸ್ಯೆಯನ್ನು ಮುಂದಿಟ್ಟುಕೊಂಡು ಹೊರಟ ನನಗೆ ವಿಸ್ತಾರವಾದ ಶ್ರಮಪೂರ್ಣ ಅಧ್ಯಯನದ ಮಧ್ಯೆ ಆ ಸಮಸ್ಯೆಗೆ ಪರಿಹಾರವಾಗಿ ಒಂದು ತಾತ್ಕಾಲಿಕ ಪರಿಹಾರ ಅಥವಾ ಪ್ರಮೇಯ ಹೊಳೆದದ್ದು, ಆ ಪ್ರಮೇಯವು ಇನ್ನೂ ಹೆಚ್ಚಿನ ಅಧ್ಯಯನದಿಂದ ಮತ್ತು ಬಹುಮುಖ ಪರಿಶೀಲನೆಯಿಂದ ಒಂದು ಸಿದ್ಧಾಂತವಾದ ರೀತಿ. ಅದು ಹೀಗಿದೆ.

1800ಕ್ಕಿಂತ ಹಿಂದಿನ ವೀರಶೈವರು ಎಲ್ಲೂ ತಾವು ಹಿಂದೂಗಳೆಂದು ಅಥವಾ ಹಿಂದೂಗಳಲ್ಲವೆಂದು ಹೇಳಿಕೊಳ್ಳುವ ಪ್ರಸಂಗಗಳೇ ಬಂದಿರಲಿಲ್ಲ. ಅವರಿಗೂ ಬ್ರಾಹ್ಮಣರಿಗೂ ಬ್ರಾಹ್ಮಣರು ಉಳಿದವರನ್ನು ಕಡೆಯಾಗಿ ಕಾಣುವ ವಿಷಯದಲ್ಲಿ ಆರು ಏಳು ನೂರು ವರ್ಷಗಳಿಂದ ಘರ್ಷಣೆಗಳಾದುದಕ್ಕೆ ಆಧಾರಗಳಿವೆ. ಆದರೆ ವೀರಶೈವರು ವೇದಗಳನ್ನು ಶ್ರದ್ಧೆಯಿಂದ ಅಧ್ಯಯನ ಮಾಡಲು, ಕೆಳವರ್ಗದ ವೀರಶೈವರಿಗೂ ಹೇಳಿಕೊಡಲು ಮುಂದಾದರು. ಹದಿನೈದನೆಯ ಗುಬ್ಬಿಯ ಮಲ್ಲಣಾರ್ಯ ಸ್ವತಃ ವೇದ ವಿದ್ವಾಂಸನಾಗಿದ್ದುದಲ್ಲದೆ ಪುಲ್ಕಸನಿಗೂ (ಅಸ್ಪೃಶ್ಯ ಜಾತಿಯಿಂದ ಬಂದ ವೀರಶೈವನಿಗೂ) ವೇದಗಳನ್ನು ಹೇಳಿಕೊಟ್ಟ. ಅದು ಬ್ರಾಹ್ಮಣರು ವಿಧಿಸಿದ್ದ ಕಟ್ಟುಪಾಡಿಗೆ ಆ ಸಮಾಜ ತೋರಿದ್ದ ವಿರೋಧದ ಸಂಕೇತ. ಸ್ತ್ರೀಯರಂತೂ ಉದ್ದಕ್ಕೂ ವೇದಾಧ್ಯಯನ ಮಾಡಿದರು. ವೀರಶೈವರು ವೇದಗಳಿಗೆ ಭಾಷ್ಯಗಳನ್ನು ಬರೆದರು. ವೇದಗಳಿಗೆ ಅವಿರುದ್ಧವೆಂದು ಭಾವಿಸಲಾದ ಶಿವಾಗಮಗಳನ್ನು ಅಧ್ಯಯನ ಮಾಡಿದರು. ಇಂತಹ ವೀರಶೈವರು ಆಧುನಿಕ ಕಾಲದಲ್ಲಿ ಸುಮಾರು ಎಂದಿನಿಂದ ಏಕೆ ತಾವು ಹಿಂದೂಗಳಲ್ಲವೆಂದು ಹೇಳಿಕೊಳ್ಳಲು ಆರಂಭಿಸಿದರು ? ಈ ಪ್ರಶ್ನೆಗೆ ನಾನು ಉತ್ತರ ಕಂಡುಕೊಳ್ಳುವುದು ಮೊದಲು ಮುಖ್ಯವಾಗಿತ್ತು. ರೋಗ ಚಿಕಿತ್ಸೆಗೆ ಮುನ್ನ ರೋಗನಿದಾನವನ್ನು (diagnosis) ಕೈಗೊಳ್ಳುವುದು ಅಪೇಕ್ಷಣೀಯ ಮಾತ್ರವಲ್ಲ, ಅದೇ ಮುಖ್ಯ.

ಅದಕ್ಕೆ ಮೊದಲು ಹಿಂದೂಧರ್ಮದ ಸ್ವರೂಪ, ಅದರ ಪ್ರಮುಖ ಲಕ್ಷಣಗಳನ್ನು ಕುರಿತು ನಡೆದಿರುವ ಚರ್ಚೆಗಳನ್ನು ಗ್ರಹಿಸಬೇಕಾಗಿತ್ತು. ಏಕೆಂದರೆ ಬಹುತೇಕ ಜನ, ತಿಳಿದವರೂ ಕೂಡ, ಅಪಾಯಕಾರಿಯಾದವರೆಂದರೆ ತಾವು ತಿಳಿದವರೆಂದು ತಿಳಿದುಕೊಂಡವರೂ ಕೂಡ ಹಿಂದೂ ಧರ್ಮದ ಬಗ್ಗೆ ಒಂದು ಬಗೆಯ ಸ್ಥೂಲ ಅರಿವಿನಿಂದ ಮಾತನಾಡುವುದೇ ಹೆಚ್ಚು. ಇಲ್ಲೂ ಹೆಚ್ಚು ಮಾತನಾಡಬೇಕಾದರೆ ಕಡಮೆ ತಿಳಿದಿರಬೇಕು ಎಂಬ ಸೂತ್ರ ಅನ್ವಯವಾಗುತ್ತಿರುವುದು ನನ್ನ ಅನುಭವಕ್ಕೆ ಬಂದಿತು ಅಥವಾ ನಾನು ಆಗಲೇ ಗ್ರಹಿಸಿದ್ದನ್ನು ದೃಢಪಡಿಸಿತು. ಹಿಂದೂ ಧರ್ಮವೆಂಬುದಿರುವುದು ಒಂದು ವಾಸ್ತವ. ರಾಜ್ಯಾಂಗವು ಒಪ್ಪಿದೆ, ಕಾನೂನು ಒಪ್ಪಿದೆ. ವಿಜಯನಗರ ಕಾಲದಲ್ಲಂತೂ ಭಾರತೀಯ ಸಂಸ್ಕೃತಿಯನ್ನು ಹಿಂದೂ ಧರ್ಮವೆಂದೇ ಗ್ರಹಿಸಿ ಹಲವು ದಾಖಲೆಗಳು ಹೊರಟಿರುವುದನ್ನು ಖಚಿತಪಡಿಸಿಕೊಂಡೆ. (ಹನ್ನೆರಡನೆಯ ಶತಮಾನದಲ್ಲೇ ಮಿಥಿಲೆ, ನೇಪಾಳದ ದೊರೆಗಳು ತಮ್ಮನ್ನು 'ಹಿಂದೂ'ಗಳೆಂದೇ ಗುರುತಿಸಿಕೊಂಡಿದ್ದರು) ಕಾಣೆ, ತಿಲಕ್, ಎಸ್. ರಾಧಾಕೃಷ್ಣನ್, ಜಿ.ಎಂ. ರಾಮ್, ಹರಬಂಶಸಿಂಗ್, ದಾಮೋದರ ಶರ್ಮ, ಗಾಂಧೀಜಿ, ಮೋನಿಯರ್ ವಿಲಿಯಂಸ್, ಸಾವರ್ಕರ್ ಇವರೇ ಮೊದಲಾದವರ ವಿಶ್ವಾಸಾರ್ಹ ಕೃತಿಗಳನ್ನು ಹಿಂದೂಧರ್ಮದ ಬಗ್ಗೆ ಕಲ್ಕತ್ತೆಯ ರಾಮಕೃಷ್ಣಾಶ್ರಮ ಮಠದ ಸಂಬಂಧವಾಗಿ ನೀಡಿದ ಸರ್ವೋನ್ನತ ನ್ಯಾಯಾಲಯದ ಸುದೀರ್ಘ ಹಾಗೆಯೇ ಅತ್ಯಂತ ಮಹತ್ವದ ತೀರ್ಪನ್ನು ಎಚ್ಚರಿಕೆಯಿಂದ ಅಧ್ಯಯನ ಮಾಡಿದೆ. Hindu Marriage Act, Hindu Succession Act ಅಭ್ಯಾಸ ಮಾಡಿದೆ. ಆ ಅಧ್ಯಯನವು ಹಿಂದೂಧರ್ಮದ ಒಟ್ಟು ಸ್ವರೂಪದ ಬಗ್ಗೆ ನಡೆದಿರುವ ಚರ್ಚೆಗಳು, ಒಪ್ಪಿತವಾದ ಸೂತ್ರವನ್ನು ತಿಳಿಸಿಕೊಟ್ಟವು. ಅದರಲ್ಲೂ ಬಹುತೇಕರು, ಸರ್ವೋನ್ನತ ನ್ಯಾಯಾಲಯವೂ ಒಪ್ಪಿ ಉಲ್ಲೇಖಿಸಿರುವ ತಿಲಕರ ಸೂತ್ರವು ಎಲ್ಲರಿಂದ ಮಾನ್ಯವಾಗಿರುವುದನ್ನು ಗ್ರಹಿಸಿದೆ. ಇದೆಲ್ಲವೂ

ದ್ವಿತೀಯ ಮೂಲಗಳಿಂದ (Secondary sources) ಸಂಗ್ರಹಿಸುವುದಾದ್ದರಿಂದ ಅಷ್ಟು ಕಷ್ಟವೆನ್ನಿಸಲಿಲ್ಲ. ಗ್ರಂಥಾಲಯದಲ್ಲಿ ಹಲವು ದಿನಗಳನ್ನು ಕಳೆಯಬೇಕಾಯಿತು. ನಾನು ಅಡಿಪಾಯವನ್ನು ಗಟ್ಟಿಮಾಡಿಕೊಂಡೆ. ಆದರೆ ಮೇಲಿನ ಮುಖ್ಯ ಪ್ರಶ್ನೆಗೆ (ಹಿಂದೂ, ವೀರಶೈವ) ಯಾವ ಪುಸ್ತಕದಲ್ಲಿ ಉತ್ತರ ದೊರಕೀತು? ಅಂತಹ ಪ್ರಶ್ನೆಯನ್ನು ಎತ್ತಿದವನು ನಾನೇ. ನಾನೇ ಉತ್ತರ ಕಂಡುಕೊಳ್ಳಬೇಕು. ಸರಿ, ಅಧ್ಯಯನ ಆರಂಭವಾಯಿತು.

ಹದಿನೆಂಟನೇ ಶತಮಾನದ ಉತ್ತರಾರ್ಧದಲ್ಲಿ ಹತ್ತೊಂಬತ್ತನೇ ಶತಮಾನದ ಪೂರ್ವಾರ್ಧದಲ್ಲಿ ಪ್ರಕಟವಾಗಿದ್ದ ಕೆಲವು ಪುಸ್ತಿಕೆಗಳು (ಆ ಪುಸ್ತಕಗಳು ಗ್ರಂಥಾಲಯಗಳಿಗಿಂತ ವೈಯಕ್ತಿಕ ಸಂಗ್ರಹಾಲಯಗಳಲ್ಲಿ ಮಿತ್ರರಿಂದ ದೊರೆತುವೇ ಹೆಚ್ಚು), ಪತ್ರಿಕೆಗಳು, ಕೆಲವು ದಾಖಲೆಗಳು ಆ ಕಾಲದ (1850 - 1920) ವೀರಶೈವರ ಬ್ರಾಹ್ಮಣರ ತಿಕ್ಕಾಟಗಳ ಚಿತ್ರಗಳನ್ನು ಕೊಟ್ಟುವು (ಅವು ಮೂಲ ಆಕರಗಳು, Primary sources). ಎಂದರೆ ಆಧುನಿಕ ಪೂರ್ವ ಕಾಲದ ವೀರಶೈವ - ಬ್ರಾಹ್ಮಣ ಘರ್ಷಣದ ಚರಿತ್ರೆ ಮುಂದುವರಿದಿತ್ತು. ಅದರಲ್ಲೂ 1900ಕ್ಕೆ ಸ್ವಲ್ಪ ಮುಂಚೆ ಮೈಸೂರಲ್ಲಿ ಬ್ರಾಹ್ಮಣ ವಿದ್ವಾಂಸರಿಗೂ ವೀರಶೈವ ವಿದ್ವಾಂಸರಿಗೂ ನಡೆದ "ಧರ್ಮಯುದ್ಧ"ವನ್ನು ಆ ಕಾಲದಲ್ಲಿಯೇ ರಂಜನೀಯವಾಗಿ ಬಣ್ಣಿಸಿದ್ದು ವಿನೋದಾತ್ಮಕವಾಗಿತ್ತು, ಅಂತೆಯೇ ಧ್ವನಿಪೂರ್ಣವೂ ಆಗಿತ್ತು. ಬ್ರಾಹ್ಮಣರೇ ಕೌರವರು, ವೀರಶೈವರೇ ಪಾಂಡವರು, ಕರಿಬಸವ ಶಾಸ್ತ್ರಿಗಳೇ ಅರ್ಜುನ, ಯಜಮಾನ್ ವೀರಸಂಗಪ್ಪನವರೇ ಗಾಂಡೀವಿ ಎಂದು ಬಣ್ಣಿಸಲಾಗಿತ್ತು. ಆಗಲೇ ನನಗೆ ಒಂದು ಸಂಗತಿ ಹೊಳೆದದ್ದು : ಭಾರತೀಯ ಇತಿಹಾಸದುದ್ದಕ್ಕೂ ತಮ್ಮನ್ನು ತಾವು ಮೇಲ್ಜಾತಿಯವರೆಂದು ಗುರುತಿಸಿಕೊಂಡಿದ್ದ ಬ್ರಾಹ್ಮಣರ ಮೇಲರಿಮೆಯನ್ನು ಪ್ರಶ್ನಿಸಿದ್ದು ಕರ್ನಾಟಕದ ಮಟ್ಟಿಗಾದರೂ, ಬ್ರಾಹ್ಮಣೇತರ ಸಮುದಾಯದಲ್ಲಿ ಮೊದಲು ವೀರಶೈವರೇ. ಹಾಗೆ ಪ್ರಶ್ನಿಸಲು ಪಾಂಡಿತ್ಯದಲ್ಲಿ ವೇದ ವಿದ್ಯೆಯಲ್ಲಿಯೂ ಬ್ರಾಹ್ಮಣರಿಗೆ ಸಾಟಿಯಾಗಿ ನಿಲ್ಲಬಲ್ಲ ಸಾಮರ್ಥ್ಯ ಆತ್ಮವಿಶ್ವಾಸವಿದ್ದುದು ವೀರಶೈವರಿಗೆ, ವೀರಶೈವರಿಗೆ ಮಾತ್ರ. ಅದಕ್ಕೆ ಕಾರಣ ಸ್ಪಷ್ಟ, ಅವರಿಗಿದ್ದ ಶರಣ ಚಳವಳಿಯ ಹಿನ್ನೆಲೆ. ಆ ಹಿನ್ನೆಲೆ ಉಳಿದ ವರ್ಗಗಳಿಗಿರಲಿಲ್ಲ. ವೀರಸಂಗಪ್ಪನವರು ಹೊರಡಿಸಿದ್ದ ಕೈಬರಹದ ಕರಪತ್ರದ ಪ್ರತಿಯೊಂದು (ಸು. 1885-90) ನನಗೆ ಕರ್ನಾಟಕ ಪತ್ರಾಗಾರದಲ್ಲಿ ದೊರೆತ ದಿನ ಸಂಭ್ರಮವೋ ಸಂಭ್ರಮ. ಅದರಲ್ಲಿ ಅವರು ಪ್ರಾಚೀನ ವೀರಶೈವ ಸಂಸ್ಕೃತ ಧಾರ್ಮಿಕ ಗ್ರಂಥಗಳ ಪ್ರಕಟಣೆಗೆ ಸಹಾಯಧನ ನೀಡಲು ಮನವಿಮಾಡಿಕೊಂಡಿದ್ದರು. ತಮಗೂ ಒಂದು ಪ್ರತ್ಯೇಕ ಸಂಸ್ಕೃತ ವಿದ್ವತ್ತಿನ ಪರಂಪರೆಯಿದೆಯೆಂಬುದನ್ನು ಸಾಬೀತು ಮಾಡಿ ತೋರುವುದು ಅಂದಿನ ವೀರಶೈವರಿಗೆ ಅಂತಹ ಗ್ರಂಥಗಳನ್ನು ಅಚ್ಚು ಮಾಡಿಸುವುದರ ಮೂಲಕ ಅಗತ್ಯವಾಗಿತ್ತು. ಈ ಬಗೆಯ ಘರ್ಷಣೆಗಳು ಕರ್ನಾಟಕಾದ್ಯಂತ ನಡೆದಿದ್ದುವಾದರೂ ಒಂದು ತಕ್ಕಮಟ್ಟಿನ ಸ್ಪಷ್ಟ ಚಿತ್ರ ದೊರೆತದ್ದು ಅದೇ ವೀರಸಂಗಪ್ಪನವರು ಹೊರಡಿಸುತ್ತಿದ್ದ "ಮೈಸೂರು ಸ್ಟಾರ್" ವಾರಪತ್ರಿಕೆಯ ಸಂಚಿಕೆಗಳಲ್ಲಿ. ಬ್ರಾಹ್ಮಣರು ವೀರಶೈವರನ್ನು ಶೂದ್ರರೆಂದು ಕರೆದು ಅವರಿಗೆ ಶಿವದೇವಾಲಯಗಳಲ್ಲಿ ಅರ್ಚನೆ, ರುದ್ರಾಭಿಷೇಕಗಳನ್ನು ಮಾಡುವ ಅಧಿಕಾರವಿಲ್ಲವೆಂದು ವಾದಿಸಿದರೆ, ಅದಕ್ಕೆ ಪ್ರತಿಯಾಗಿ ವೀರಶೈವರು ತಾವು ಶೂದ್ರರಲ್ಲ, ತಾವೇ ನಿಜವಾದ

ಬ್ರಾಹ್ಮಣರು ಅಥವಾ ಬ್ರಾಹ್ಮಣರಿಗಿಂತ ಶ್ರೇಷ್ಠರು ; ತಾವು ಲಿಂಗಿ ಬ್ರಾಹ್ಮಣರಾದರೆ ಬ್ರಾಹ್ಮಣರು ಅಲಿಂಗಿ ಬ್ರಾಹ್ಮಣರು ಎಂದು ನ್ಯಾಯಾಲಯಗಳ ಮುಂದೆ ವಾದಿಸಿದ್ದರು. ತಮಗೂ ವೇದಾಧಿಕಾರವಿದೆಯೆಂದು ವಾದಿಸಿ ಗೆದ್ದರು. ಆ ಎಲ್ಲ ವಿವರಗಳು "ವೇದಾಧಿಕಾರ ವಿಜಯಂ" ಎಂಬ ಕಿರುಕೃತಿಯಲ್ಲಿ ದೊರಕುತ್ತವೆ.

ಹೆಚ್ಚಿನ ವಿಸ್ತೃತ ಚಿತ್ರ ದೊರಕಿದ್ದು 1900 - 1930ರ "ಮೈಸೂರು ಸ್ಟಾರ್" ಪತ್ರಿಕೆಯ ಸಂಚಿಕೆಗಳಲ್ಲಿ. ವೀರಶೈವರ ಸ್ವಸಮರ್ಥನೆಗೆ (self - assertion) ದಕ್ಷಿಣ ಕರ್ನಾಟಕದ ಚಿತ್ರದುರ್ಗದ ಶ್ರೀ ಜಯದೇವ ಸ್ವಾಮಿಗಳು ಉತ್ತರ ಕರ್ನಾಟಕದ ಹಾನಗಲ್ ಶ್ರೀ ಕುಮಾರ ಸ್ವಾಮಿಗಳು ಸಂಕೇತವಾಗಿ, ಅದರ ನಾಯಕರಾಗಿ ನಿಂತರು. ಮಕ್ಕಳ ಆಧುನಿಕ ಶಿಕ್ಷಣದ ಕಡೆ ಹೆಚ್ಚು ಗಮನ ಮೊದಲು ಕೊಟ್ಟವರು, ಸುಸಂಘಟಿತರಾದವರು ಬ್ರಾಹ್ಮಣರ ಬಳಿಕ ವೀರಶೈವರೆಂದರೆ ಅದು ಸ್ವಯಂವೇದ್ಯ. 1901ರ ಜನಗಣತಿಯಲ್ಲಿ ತಮ್ಮನ್ನು ವರ್ಣಾತೀತ ಹಿಂದೂ ಸಮಾಜದವರೆಂದು ದಾಖಲಿಸಲು ಕಿತ್ತೂರು (ಮುಂಬೈ) ಕರ್ನಾಟಕದ ಲಿಂಗಾಯತ ನಾಯಕರು ಮನವಿ ಮಾಡಿಕೊಂಡರು. ಹೀಗಿದ್ದರೂ ಮುಂಬೈ ಸರ್ಕಾರದ ಅಧಿಕಾರಿಯಾಗಿದ್ದ ಎಂಥೊವೆನ್ ಎಂಬಾತ ವೀರಶೈವರು ತಾವು ಹಿಂದೂಗಳೆಂದು ಹೇಳಿಕೊಂಡರೂ ಅದನ್ನೂ ಉಲ್ಲೇಖಿಸಿ ಅವರು ಹಿಂದೂಗಳಲ್ಲವೆಂಬ ತನ್ನ ವರದಿ ಸಿದ್ಧಪಡಿಸಿದ. ಆ ವರದಿಯನ್ನು ಬಳ್ಳಾರಿಯ ಒಬ್ಬ ಬ್ರಾಹ್ಮಣ ವ್ಯಕ್ತಿ ಕನ್ನಡಕ್ಕೆ ಅನುವಾದಿಸಿ ಪುಸ್ತಕಗಳನ್ನು ಹಂಚಿದ. ಅದಕ್ಕೆ ಕಾರಣ ಸ್ಪಷ್ಟವಾಗಿದೆ. ವೀರಶೈವರು ತಾವು ಬ್ರಾಹ್ಮಣರೆಂದು ಹೇಳಿಕೊಳ್ಳುತ್ತಿರುವುದನ್ನು ಒಂದು ರೀತಿಯಲ್ಲಿ ಗೇಲಿ ಮಾಡಲು ಆ ವರದಿಯನ್ನು ಆ ವ್ಯಕ್ತಿ ಅನುವಾದಿಸಿದ್ದ. ಅವರು ಹಿಂದೂಗಳೇ ಅಲ್ಲದಿರುವಾಗ ಬ್ರಾಹ್ಮಣರಾಗಲು ಸಾಧ್ಯವಿಲ್ಲ ಎಂಬುದು ಮಾತ್ರ ಆ ವ್ಯಕ್ತಿಗೆ ಬೇಕಾಗಿತ್ತು, ಸತ್ಯವಲ್ಲ. ಬ್ರಾಹ್ಮಣರು ವೀರಶೈವರನ್ನು ಶೂದ್ರರೆಂದು ಗೇಲಿ ಮಾಡಿದರೆ ವೀರಶೈವರು ತಮ್ಮ ಮೆರವಣಿಗೆಗಳಲ್ಲಿ ವ್ಯಾಸನ ತೋಳನ್ನು ಮೆರೆಯಿಸಿ ಬ್ರಾಹ್ಮಣರನ್ನು ಗೇಲಿ ಮಾಡಿದರು. ವಿಷ್ಣುವೇ ಸರ್ವೋತ್ತಮನೆಂದು ಸಾರಿದ ವ್ಯಾಸನ ತೋಳನ್ನು ವೀರಭದ್ರನು ಸ್ತಂಭನಗೊಳಿಸಿದುದರ ಸಂಕೇತ ಆ ತೋಳು. ಒಂದು ಮರದ ತೋಳನ್ನು ವ್ಯಾಸನ ತೋಳೆಂದು ಹೆಸರಿಸಿ ನಂದಿಧ್ವಜಕ್ಕೆ ಕಟ್ಟಿ ಮೆರೆಸುತ್ತಿದ್ದುದನ್ನು ಬ್ರಾಹ್ಮಣರು ವಿರೋಧಿಸಿ ಮುಂಬೈ ಇಂಗ್ಲೀಷ್ ಸರ್ಕಾರದಿಂದ ಅದಕ್ಕೆ ನಿರ್ಬಂಧವನ್ನು ತಂದರು. ಈ ಬಗ್ಗೆ ಕೆಲವೆಡೆ ಹೊಡೆದಾಟಗಳೂ ಆದದ್ದುಂಟು. ಆ ಎಲ್ಲ ವಿವರಗಳು ಮೇಲೆ ಹೇಳಿದ ಪತ್ರಿಕೆಯಲ್ಲಿ ದೊರಕಿದುವು. ವ್ಯಾಸನ ತೋಳು ವೀರಶೈವರ ಸ್ವಾಭಿಮಾನದ, ಪರೋಕ್ಷವಾಗಿ ಬ್ರಾಹ್ಮಣ ಸಮುದಾಯದ ಬಗ್ಗೆ ಅವರಿಗಿದ್ದ ಅಸಮಾಧಾನದ ಚಿಹ್ನೆಯಾಗಿತ್ತು.

ಆದರೆ ಎಲ್ಲಿಯೂ ವೀರಶೈವರು ತಮ್ಮನ್ನು ಅಹಿಂದೂಗಳೆಂದು ಕರೆದುಕೊಳ್ಳಲಿಲ್ಲ. ಅಖಿಲ ವೀರಶೈವ ಮಹಾಸಭೆಯ 1904ರ ಮೊದಲ ಅಧಿವೇಶನದಲ್ಲಿ, ಮುಂದೆ 1908ರ ಅಧಿವೇಶನದಲ್ಲಿ ವೀರಶೈವರು ತಮ್ಮನ್ನು ಶೂದ್ರರಲ್ಲವೆಂದು, ಆದರೆ ಹಿಂದೂಗಳೆಂದು, ವರ್ಣಾತೀತ ಹಿಂದೂಗಳೆಂದೇ ಗೊತ್ತುವಳಿ ಪಾಸ್ ಮಾಡಿದರು. ಅನೇಕ ವೀರಶೈವರು ಕಲ್ಯಾಣ (ಹೈದರಾಬಾದ್) ಕರ್ನಾಟಕದಲ್ಲಿ ವೀರಶೈವರು ಇಸ್ಲಾಂಗೆ ಮತಾಂತರಗೊಳ್ಳುತ್ತಿರುವುದನ್ನು ವಿರೋಧಿಸಿ, ಹೀಗೆ ನಡೆದರೆ ಭಾರತದಲ್ಲಿ ಹಿಂದೂಗಳು

ನಿಶ್ಶೇಷವಾಗಿ ಹೋಗುವರೆಂದು ವಿಷಾದಿಸಿದರು. ಮೈಸೂರಿನ ಮಹಾರಾಜರ ಸಂಸ್ಕೃತ ಪಾಠಶಾಲೆಯಲ್ಲಿ ವೀರಶೈವರಿಗೆ ಪ್ರವೇಶ ಕೊಡುತ್ತಿಲ್ಲವೆಂದು ಪ್ರಜಾಪ್ರತಿನಿಧಿ ಸಭೆಯಲ್ಲಿ ಪ್ರಸ್ತಾಪಿಸಿದ್ದುಂಟು. ಬ್ರಾಹ್ಮಣರು ತಮ್ಮ ಸಂಸ್ಕೃತ ಪಾಠಶಾಲೆಗಳಲ್ಲಿ ವೇದ ಆಗಮಗಳನ್ನು ಅಧ್ಯಯನ ಮಾಡಲು ವೀರಶೈವರಿಗೆ ಅವಕಾಶ ನೀಡುತ್ತಿಲ್ಲವೆಂದು ಸಕ್ಕರಿ ಕರಡೆಪ್ಪನವರು, ವಾರದ ಮಲ್ಲಪ್ಪನವರು ಬಳ್ಳಾರಿ, ಸೊಲ್ಲಾಪುರಗಳಲ್ಲಿ ವೀರಶೈವರಿಗಾಗಿ ಸಂಸ್ಕೃತ ಶಾಲೆಗಳನ್ನು ತೆರೆದರು. ಸಿದ್ಧಗಂಗೆಯಲ್ಲಿ "ಶ್ರೀ ಸಿದ್ಧಲಿಂಗೇಶ್ವರ ವೇದ ಆಗಮ ಪಾಠಶಾಲೆ"ಯನ್ನು ತೆರೆದು, ಮುಂದೆ ವೀರಶೈವೇತರರಿಗೂ ಅಲ್ಲಿ ಪ್ರವೇಶ ನೀಡಲಾಯ್ತು. ಇಲ್ಲೆಲ್ಲ ಎಲ್ಲೂ ವೀರಶೈವರು ತಮ್ಮನ್ನು ಅಹಿಂದೂಗಳೆಂದು ಗುರುತಿಸಿಕೊಳ್ಳಲಿಲ್ಲ. ಅವರ ಅಸಮಾಧಾನವಿದ್ದುದು ಹಿಂದೂಗಳ ಒಂದು ವರ್ಗವಾದ ಬ್ರಾಹ್ಮಣ ಸಮುದಾಯದ ಬಗ್ಗೆ ಮಾತ್ರ. ಬರೀ ಬ್ರಾಹ್ಮಣರೇ ಹಿಂದುಗಳು ಅಲ್ಲ, ಬ್ರಾಹ್ಮಣರೂ ಹಿಂದುಗಳೇ ವೀರಶೈವರಂತೆ, ಉಳಿದ ಜನಾಂಗಗಳಂತೆ ಎಂಬ ಸ್ಪಷ್ಟ ಕಲ್ಪನೆ 1900-20ರ ವೀರಶೈವರಿಗಿತ್ತು. ಹರ್ಡೇಕರ್ ಮಂಜಪ್ಪನವರಂತಹ ಕೆಲವರನ್ನು ಬಿಟ್ಟರೆ, ಕಾಂಗ್ರೆಸ್ಸು ಬ್ರಾಹ್ಮಣರ ಪಕ್ಷವೆಂದೇ ಭಾವಿಸಿದ ಅನೇಕ ವೀರಶೈವ ಮುಖಂಡರು ಮೊದಮೊದಲು ಇಂಗ್ಲೀಷ್ ಆಳಿಕೆಯ ಪರವಾಗಿದ್ದುದೂ ಒಂದು ವಾಸ್ತವ. ವೀರಶೈವರಲ್ಲೂ ನಾಲ್ಕು ವರ್ಣಗಳಿವೆಯೆಂಬ ಮಾತುಗಳೂ ಆಗ ಕೇಳಿ ಬಂದಿದ್ದುವು. ವೀರಶೈವರಿಗೆ ತಾವು ಹಿಂದೂಗಳು ಹೌದೇ ಅಲ್ಲವೇ ಎಂಬ ಬಗ್ಗೆ ಸಂದೇಹ ಎಂದೂ ಬರಲಿಲ್ಲ. ಆದರೆ ಎಂಥೊವೆನ್ನನಂತಹ ಇಂಗ್ಲೀಷ್ ಅಧಿಕಾರಿಗಳು ಅಂತಹ ಸಂದೇಹವನ್ನು ಮೂಡಿಸಲು ಪರೋಕ್ಷವಾಗಿ ಪ್ರಯತ್ನಿಸಿರುವ ಸಾಧ್ಯತೆಗಳಿವೆ. ಇದರಿಂದ, ವೀರಶೈವರ ಬ್ರಾಹ್ಮಣರ ಮಧ್ಯದ ವಿರಸ ಹೆಚ್ಚಾದಷ್ಟು ಇಂಗ್ಲೀಷರ ಆಡಳಿತಕ್ಕೂ ಅನುಕೂಲ, ಕ್ರೈಸ್ತಧರ್ಮ ಪ್ರಚಾರಕ್ಕೂ ಅನುಕೂಲ. ಎಂಥೊವೆನ್ ತನ್ನ ವರದಿಯಲ್ಲಿ ವೀರಶೈವರ, ಕೆಥೊಲಿಕರ ತತ್ವಗಳಿಗೆ ಸಾಮ್ಯವನ್ನು ಗುರುತಿಸಿರುವುದರಲ್ಲಿ ಕೇವಲ ಶೈಕ್ಷಣಿಕಾಸಕ್ತಿಯೊಂದೇ ಇತ್ತೆಂಬ ತೀರ್ಮಾನಕ್ಕೆ ಧಿಡೀರನೆ ಬರುವುದು ಕಷ್ಟ. "ದೀನ್‌ದಾರ್ ಚನ್ನಬಸವೇಶ್ವರ ಸಿದ್ಧಿಕಿ" ತಾನು ಚನ್ನಬಸವಣ್ಣನ ಅವತಾರವೆಂದು ಹೇಳಿಕೊಂಡು ವೀರಶೈವ ಧರ್ಮಕ್ಕೂ ಇಸ್ಲಾಮಿಗೂ ಇರುವ ಹೋಲಿಕೆ ಎತ್ತಿ ಹಿಡಿದುದು ಏಕೆ ಎಂಬುದು ಈಗ ನಿಚ್ಚಳವಾಗಿದೆ. ಕೆ.ಎಂ. ಮುನ್ಷಿಯವರು 1947-8ರಲ್ಲಿ ಸ್ವತಂತ್ರವಾಗಬೇಕೆಂದಿದ್ದ ಹೈದರಾಬಾದ್ ನಿಜಾಮ್ ರಾಜ್ಯದಲ್ಲಿ ಭಾರತದ ಪ್ರತಿನಿಧಿಯಾಗಿ ಕೆಲಸ ಮಾಡಿ 1950ರಲ್ಲಿ ದಾಖಲಿಸಿರುವ The End of an Era ಪುಸ್ತಕದಲ್ಲಿ ದೀನ್‌ದಾರ್ ಚನ್ನಬಸವೇಶ್ವರನ ಉದ್ದೇಶ ಲಿಂಗಾಯತರನ್ನು ಇಸ್ಲಾಮಿಗೆ ಮತಾಂತರಗೊಳಿಸುವುದೇ ಆಗಿತ್ತೆಂದು ಸ್ಪಷ್ಟಪಡಿಸಿದ್ದಾರೆ.

ಕೊಡಗಿನಲ್ಲಿ 1834-35ರ ಸುಮಾರಿನಲ್ಲಿ ಫ್ರೇಸರ್ ಎಂಬ ಸೇನಾನಾಯಕನು ಬ್ರಿಟಿಷ್ ಸರ್ಕಾರಕ್ಕೆ, ಕೊಡವರಲ್ಲಿ ಹಿಂದುತ್ವ ಭಾವನೆ ಕನಿಷ್ಠ ಪ್ರಮಾಣದಲ್ಲಿರುವುದರಿಂದ ಕ್ರಿಶ್ಚಿಯನ್ ಧರ್ಮಪ್ರಚಾರಕ್ಕೆ ಕೊಡಗು ಪ್ರಶಸ್ತ ನಾಡು ಎಂಬ ವರದಿ ನೀಡಿದ. ಅದರಿಂದ ಪ್ರಚೋದಿತನಾದ ಮೋಗ್ಲಿಂಗ್ ಕೊಡವ ಜನರಲ್ಲಿ ಹಿಂದೂಧರ್ಮದ ಬಗ್ಗೆ ಜುಗುಪ್ಸೆ ಹುಟ್ಟಲು ಮಾಡಬೇಕಾದುದನ್ನು ಮಾಡಿ ಅಲ್ಲಿ ಕ್ರೈಸ್ತಧರ್ಮ ಪ್ರಚಾರದಲ್ಲಿ ತೊಡಗಿದುದನ್ನು ಚರಿತ್ರೆ ಹೇಳುತ್ತದೆ. ಎಂಥೊವೆನ್ನನ ಉದ್ದೇಶವೂ ಆಳದಲ್ಲಿ ಅಂತಹುದೇ ಆಗಿದ್ದರೆ ಆಶ್ಚರ್ಯವಿಲ್ಲ!

ಹಿಂದೂಗಳೇ ಆಗಿದ್ದ ಸಿಖ್ಖರಿಗೂ ಇತರ ಹಿಂದೂಗಳಿಗೂ ಭೇದ ಭಾವ ಹುಟ್ಟಿಸಿ ಸಿಖ್ಖರನ್ನು ಹಿಂದೂಗಳಿಂದ ಬೇರೆ ಮಾಡುವಲ್ಲಿ ಬ್ರಿಟಿಷರ ಪ್ರಯತ್ನವೂ ಇದ್ದಿತು.

ಈ ಮಧ್ಯೆ ದಕ್ಷಿಣ ಭಾರತದಲ್ಲಿ ನಡೆದ ಕೆಳವರ್ಗದವರ ಹೋರಾಟ ವೀರಶೈವರಿಗೆ ಹೆಚ್ಚಿನ ಹುಮ್ಮಸ್ಸನ್ನೂ ತಂದಿತ್ತು. ಇದೆಲ್ಲ ಸರಿಯೇ. ನನ್ನ ಮಾಹಿತಿ ಬೆಳೆಯುತ್ತಿತ್ತು, ಬರೀ ಪ್ರಮಾಣಾತ್ಮಕವಾಗಿಯಲ್ಲ, ಗುಣಾತ್ಮಕವಾಗಿಯೂ. ಒಂದೊಂದು ಮಾಹಿತಿಯೂ ನನಗೆ ವಿಸ್ಮಯಕಾರಿಯಾಗಿತ್ತು, ಉತ್ಸಾಹದಾಯಕವಾಗಿತ್ತು ಮತ್ತು ನಿಜ ಹೇಳಬೇಕೆಂದರೆ ನನ್ನ ಶ್ರಮವನ್ನು ಮರೆಯಿಸಿತ್ತಾದರೂ ಪ್ರಶ್ನೆಗೆ ಉತ್ತರ ಸಿಕ್ಕಿರಲಿಲ್ಲ. 1930-5ರವರೆಗೆ ವೀರಶೈವರಲ್ಲಿ ತಾವು ಹಿಂದೂಗಳಲ್ಲವೆಂಬ ಒಡಕಿನ ಧ್ವನಿಯೇ ಕೇಳಿಸಲಿಲ್ಲವಲ್ಲ - ಆ ಒಡಕಿನ ಧ್ವನಿ ಎಲ್ಲಿ ಯಾರಿಂದ ಯಾವಾಗ, ಮುಖ್ಯವಾಗಿ ಏಕೆ ಆರಂಭವಾಯಿತು ಬೆಳೆಯಿತು ಎಂಬ ಪ್ರಶ್ನೆಗೆ ಉತ್ತರ ಸಿಗದೆ ಪೇಚಾಡುತ್ತಿದ್ದೆ.

1935-6ರ ಹೊತ್ತಿನಲ್ಲಿ ಮೈಸೂರಿನ ಬಸವಲಿಂಗಯ್ಯ ಎಂಬುವರೊಬ್ಬರು ವೀರಶೈವರು ಹಿಂದೂಗಳಲ್ಲವೆಂಬ ಅಭಿಪ್ರಾಯವನ್ನು ತಮ್ಮೊಂದು ಲೇಖನದಲ್ಲಿ ಪ್ರಸ್ತಾಪಿಸಿದ್ದನ್ನು ಕಂಡು, ಕತ್ತಲಲ್ಲಿ ತಡಕಾಡುತ್ತಿದ್ದವನಿಗೆ ದೂರದಲ್ಲಿ ಏನೋ ಬೆಳಕು ಕಾಣಲಾರಂಭಿಸಿದ ಅನುಭವವಾಯಿತು. ಈಗಲೂ ಅನೇಕರು ಮಾತನಾಡುವ ಭರದಲ್ಲಿ ಹಿಂದೂಧರ್ಮ ಎಂದ ಕ್ಷಣ ಬ್ರಾಹ್ಮಣರನ್ನು ಕಲ್ಪಿಸಿಕೊಂಡು ಅವರ ಬಗ್ಗೆ ಮಾತನಾಡುತ್ತ ಹಿಂದೂಧರ್ಮವನ್ನು ಟೀಕಿಸುವುದು ಸಾಮಾನ್ಯ (ಎಂಥೊವೆನ್ ಕೂಡ ಮಾಡಿರುವುದು ಅದೇ ಕೆಲಸವನ್ನೇ). ಬ್ರಾಹ್ಮಣ ಎಂದರೆ ಹಿಂದೂ, ಹಿಂದೂ ಎಂದರೆ ಬ್ರಾಹ್ಮಣ ಎಂದು ಯೋಚನೆ ಮಾಡುವುದು ಸರಿಯಲ್ಲ ಎಂಬುದು ಎಲ್ಲರಿಗೂ ಹೊಳೆಯುವುದಾದರೂ ಅವರಿಬ್ಬರನ್ನೂ ಒಟ್ಟಿಗೆ ಸಮೀಕರಿಸುವುದೇ ಸರ್ವೇಸಾಮಾನ್ಯ. ಇಂತಹುದೊಂದು 1935ರ ಸುಮಾರಿನಲ್ಲಿ ಹೇಗೋ ಪೂರ್ತಿ ತಪ್ಪು ತಿಳುವಳಿಕೆಯಿಂದಾರಂಭವಾಗಿ ಅಥವಾ ಬ್ರಿಟಿಷರು ಬಿತ್ತಿದ ಭೇದಬೀಜ ಮೊಳೆತುದರ ಫಲವಾಗಿ ಬ್ರಾಹ್ಮಣರ ಮೇಲಿನ ಕೋಪವು ಹಿಂದೂಧರ್ಮದ ಮೇಲೆ ತಿರುಗಿತು. ವೀರಶೈವರು ಹಿಂದೂಗಳಲ್ಲವೆಂಬ ವಾದ ತಲೆಯೆತ್ತಲು ಕಾರಣ ಅದೇ. ಅದಕ್ಕೆ ಸರಿಯಾಗಿ 1940ರಲ್ಲಿ ಕುಂಭಕೋಣಂನಲ್ಲಿ ನಡೆದ ಅಖಿಲ ಭಾರತ ವೀರಶೈವ ಮಹಾಸಭೆಯ ಸಮ್ಮೇಳನದ ಅಧ್ಯಕ್ಷ ಭಾಷಣದಲ್ಲಿ ಬ್ಯಾರಿಸ್ಟರ್ ಸರ್ದಾರ ಸಂಗಮೇಶ ಅವರು ಅಧಿಕೃತ ವೇದಿಕೆಯಲ್ಲಿ ವೀರಶೈವರು ಹಿಂದೂಗಳಲ್ಲವೆಂಬುದನ್ನು ಪ್ರತಿಪಾದಿಸಿದರು. ಅಲ್ಲಿಯವರೆಗಿನ ಅದೇ ಮಹಾಸಭೆಯ ನಿಲವಿಗೆ ಅದು ತೀರ ವಿರುದ್ಧವಾಗಿತ್ತು. ನನ್ನ ಪ್ರಶ್ನೆಗೆ ತಕ್ಕಮಟ್ಟಿನ ಸೂಕ್ತ ಉತ್ತರ ದೊರಕಿತ್ತು. 1904ರ ವೀರಶೈವಕ್ಕೂ 1940ರ ವೀರಶೈವಕ್ಕೂ ಏನೂ ವ್ಯತ್ಯಾಸವಿರಲಿಲ್ಲ. ಆದರೆ 1940ರ ಹೊತ್ತಿಗೆ ಆಗಲೇ ಪದವೀಧರರು ಕಾಣಿಸಿಕೊಂಡಿದ್ದರು, ಹಲವರು ವಿದೇಶಕ್ಕೂ ಹೋಗಿ ಬಂದಿದ್ದರು. ವೀರಶೈವರ ಧಾರ್ಮಿಕ ಮುಗ್ಧ ಮನಸ್ಸಿಗೆ ಆ ಹೊತ್ತಿಗೆ ರಾಜಕೀಯದ ಸ್ಪರ್ಶವಾಗಿತ್ತು. ಕೆಲವು ವೀರಶೈವ ಮುಖಂಡರು ಕಾಂಗ್ರೆಸ್ಸು "ಬ್ರಾಹ್ಮಣರ ಪಕ್ಷ"ವೆಂದು ಅದರಿಂದ ದೂರವಿದ್ದುದು ಬ್ರಿಟಿಷರಿಗೆ ಪ್ರಿಯವಾಗಿತ್ತು. ಆ ಕಾಲದಲ್ಲಂತೂ ವಿದೇಶದಿಂದ ಹಿಂದಿರುಗಿದ ವ್ಯಕ್ತಿ ಸ್ವಲ್ಪ ಬೇರೆಯೇ ಆಗಿರುತ್ತಿದ್ದ ; ಅವನ ವೇಷಭೂಷಣ, ಧೋರಣೆ, ಜೀವನ ದೃಷ್ಟಿಕೋನ ಇವುಗಳ ಮಾರ್ಪಾಟಿನ ಭರದಲ್ಲಿ

ಅವನಲ್ಲಿನ ಭಾರತೀಯತ್ವಕ್ಕೆ ಕುಂದುಂಟಾಗುವ ಉದಾಹರಣೆಗಳೇ ಹೆಚ್ಚಿದ್ದುವು. ವಿದೇಶದಿಂದ ಹಿಂದಿರುಗಿದ್ದ ಸಂಗಮೇಶ ಸರ್ದಾರ್ ಅವರಿಗೆ ವೀರಶೈವದ ಸಂಪ್ರದಾಯ ಎಷ್ಟರಮಟ್ಟಿಗೆ ಅಂತರ್ಗತವಾಗಿತ್ತೆಂಬುದು ತಿಳಿಯದ ವಿಷಯ. ಅದೇನೇ ಇರಲಿ, 1935-40ರ ಅವಧಿಯಲ್ಲಿ ಕೆಲವರಾದರೂ ವೀರಶೈವರಿಗೆ ತಾವು ಹಿಂದೂಗಳಲ್ಲವೆಂದು ಅನ್ನಿಸಲಾರಂಭವಾಗಿ ಅದು 1940ರಲ್ಲಿ ಸಂಗಮೇಶ ಸರ್ದಾರರ ಮೂಲಕ ಸ್ಪಷ್ಟ ಆಕಾರವನ್ನು ಪಡೆಯಿತೆಂದು ಸದ್ಯಕ್ಕೆ ಹೇಳಬಹುದು. ಆ ಭಾವನೆ ಬರಲು ಕಾರಣ ಬ್ರಾಹ್ಮಣ, ಹಿಂದೂ ಎಂಬ ಪದಗಳು ಸಮಾನಾರ್ಥಕಗಳೆಂಬ ತಪ್ಪು ಗ್ರಹಿಕೆ. ಆ ಗ್ರಹಿಕೆಗೆ ಮೂಲ ಬ್ರಿಟಿಷರು ಆಗಲೇ ಸೂಕ್ಷ್ಮವಾಗಿ ಬಿತ್ತಿದ್ದ ಬೀಜ. ಆಮೇಲಿನ ನನ್ನ ಅಧ್ಯಯನವು ನಾನು ರೂಪಿಸಿಕೊಂಡ ಪ್ರಮೇಯವನ್ನು ದೃಢಗೊಳಿಸುತ್ತ ಬಂದಿತು. ಹಲವು ಪ್ರಾಜ್ಞರು ವೀರಶೈವರು ಹಿಂದೂಗಳಲ್ಲವೆಂಬುದನ್ನು ತೀವ್ರವಾಗಿ ವಿರೋಧಿಸಿದರು. ಉದಾಹರಣೆಗೆ ಹರ್ಡೇಕರ್ ಮಂಜಪ್ಪ, ಫ.ಗು. ಹಳಕಟ್ಟಿ, ಬಿ. ಶಿವಮೂರ್ತಿಶಾಸ್ತ್ರೀ, ಎಸ್.ಸಿ. ನಂದಿಮಠ, ಎಲ್. ಬಸವರಾಜು, ಆರ್.ಸಿ. ಹಿರೇಮಠ ಇವರೆಲ್ಲ ಆಳವಾಗಿ ವೀರಶೈವ ಸಾಹಿತ್ಯದ ಇತಿಹಾಸವನ್ನು ಅಧ್ಯಯನ ಮಾಡಿದ ವಿಚಾರಶೀಲರು. ವಿದ್ವಾಂಸರ ಮಾತುಗಳಿಗಿಂತ ರಾಜಕೀಯ ಧುರೀಣರ ಮಾತುಗಳಿಗೆ ಪ್ರಾಮುಖ್ಯವಿರುವ, ಧರ್ಮದ ಆಧ್ಯಾತ್ಮಿಕ ಮೌಲ್ಯಕ್ಕಿಂತ ಅದರ ಹೆಸರಿನಲ್ಲಿ ಒದಗುವ ಲೌಕಿಕ ಪ್ರಯೋಜನಗಳೇ ಮುಖ್ಯವಾಗಿರುವ ಕಾಲದಲ್ಲಿ 1940ರಿಂದ ಆರಂಭವಾದ ಆ ಒಡಕಿನ ಧ್ವನಿ ಕ್ರಮೇಣ ಬೆಳೆಯುತ್ತ ಕ್ರಿ.ಶ. 2000ದಲ್ಲಿ ಬೀದಿ ಚಳವಳಿಯಾಗಿ ಮಾರ್ಪಟ್ಟುದನ್ನು ಎಲ್ಲರೂ ಬಲ್ಲರು. ಅದರ ವಿಸ್ತೃತ ಚರಿತ್ರೆಯನ್ನು ನನ್ನ ಬರಲಿರುವ ಪುಸ್ತಕವೊಂದರಲ್ಲಿ ವಿವರಿಸಿದ್ದೇನೆ. ಸಮಸ್ಯೆಯೊಂದಕ್ಕೆ ಪರಿಹಾರ ಸಿಗದೆ ಬರೀ ಮಾಹಿತಿ ಸಂಗ್ರಹದಲ್ಲೇ ಅದರಲ್ಲೂ ಸಂತೋಷ ಪಡುತ್ತ ಕಾಲ ಕಳೆದು ಆ ಸಂತೋಷದ ಹಿನ್ನೆಲೆಯಾಗಿ ಚಡಪಡಿಕೆಮಿಶ್ರಿತ ಅತೃಪ್ತಿಯನ್ನೂ ಅನುಭವಿಸುತ್ತ ಕೊನೆಗೊಮ್ಮೆ ಬೆಳಕಿನ ಸೂಚನೆಯ ಬಳಿಕ ಕಿರಣ ಕಾಣಿಸಿ, ಎಂದೋ ಒಮ್ಮೆ ಉತ್ತರವು ಪ್ರಮೇಯದ ರೂಪದಲ್ಲಿ ಹೊಳೆದು ಪ್ರಮೇಯವು ದೃಢಗೊಳ್ಳುತ್ತ ಹೋಗಿ ಅದು ಉತ್ತರ ರೂಪವಾಗಿ ಪರಿಣಮಿಸಿ ಅತೃಪ್ತಿಯನ್ನು ನಿವಾರಿಸಿಕೊಂಡುದರ ಕತೆಯನ್ನು ಮೇಲೆ ಹೇಳಿದ್ದೇನೆ. ನನ್ನ ದೈಹಿಕ, ಬೌದ್ಧಿಕ ಶ್ರಮ ವ್ಯರ್ಥವಾಗಲಿಲ್ಲ ಅಥವಾ ಅದು ಎಂದೂ ವ್ಯರ್ಥವಾಗದು - ಎಲ್ಲ ಕಾಲದಲ್ಲಿ, ಎಲ್ಲ ದೇಶದಲ್ಲಿ. ಶುದ್ಧ ಧ್ಯೇಯ, ಶುದ್ಧ ಮಾರ್ಗ ಇವುಗಳ ಮುಂದೆ ಎಂತಹುದೇ ಶ್ರಮವು ತೀರ ಕ್ಷುಲ್ಲಕ.

## ಹುಡುಕಾಟ ವಜ್ರಕ್ಕೆ, ಸಿಕ್ಕಿದ್ದು ವೈಡೂರ್ಯ - ಸೊಲಗಿ

ಎರಡು ವರ್ಷಗಳ ಹಿಂದೆ ಶ್ರೀ ಬೆಲ್ದಾಳ ಸಿದ್ಧರಾಮ ಶರಣರು "ಕನ್ನಡಪ್ರಭ" ಪತ್ರಿಕೆಗೆ ಕೊಟ್ಟ ಒಂದು ಸುದ್ದಿ ರೋಚಕವಾಗಿತ್ತು. ಸಿದ್ಧರಾಮ ಹುಟ್ಟಿದ ಊರು ಈಗಿನ ಪ್ರಸಿದ್ಧ ಸೊಲ್ಲಾಪುರ (ಸೊನ್ನಲಾಪುರ, ಸೊನ್ನಲಿಗೆ) ಅಲ್ಲ, ಸಾಂಗ್ಲಿ ಜಿಲ್ಲೆ ಜತ್ ತಾಲೂಕಿನ ಸೊಲಗಿ (ಸೊನ್ನಗಿ, ಸೊನ್ನಲಿಗಿ) ; ಆ ಊರಲ್ಲಿ ಕುಡುವೊಕ್ಕಲಿಗರು ಈಗಲೂ ಮುದ್ದಗೌಡ, ಸುಗ್ಗವ್ವೆ (ಸಿದ್ಧರಾಮನ ತಾಯ್ತಂದೆಯರು) ಹೀಗೆ ಹೆಸರಿಟ್ಟುಕೊಳ್ಳುತ್ತಾರೆ; ಮುದ್ದಗೌಡನ ನವಣೆ ಹೊಲ, ರೇವಣಸಿದ್ಧ ಆ ಊರಿಗೆ ಬಂದು ಮೇನೆಯಿಂದ ಇಳಿದ ಜಾಗ, ಸಿದ್ಧರಾಮ

ಕಟ್ಟಿಸಿದ ಕೆರೆ ಇತ್ಯಾದಿ ಎಲ್ಲ ಇವೆ; ಊರಲ್ಲಿ ಸಿದ್ಧರಾಮೇಶ್ವರ ದೇವಾಲಯವೂ ಇದೆ; ಊರಿನ ಜನರಂತೂ ಸಿದ್ಧರಾಮ ಹುಟ್ಟಿ ಬೆಳೆದದ್ದು ಇಲ್ಲೇ, ಇಲ್ಲಿಂದ ಬಾಲ್ಯದಲ್ಲೇ ಶ್ರೀಶೈಲಕ್ಕೆ ಹೋಗಿ ಹಿಂದಿರುಗಿದವನು ಈಗಿನ ಸೊಲ್ಲಾಪುರದಲ್ಲಿ ನೆಲಸಿ ತನ್ನ ಬಾಳಿನ ಉಳಿದ ಕಾಲವನ್ನು ಅಲ್ಲಿ ಕಳೆದನೆಂದು ಸೊಲಗಿ ಜನ ಒತ್ತಿ ಹೇಳುತ್ತಾರೆ; ಸೊಲ್ಲಾಪುರವು ಕೇವಲ ಜನ ಪ್ರಚಾರದಿಂದ ಸೊಲಗಿಯನ್ನು ಮರೆಮಾಡಿದೆ ಎಂಬ ನೋವು ಅವರದು. ಇದೆಲ್ಲವನ್ನೂ ನೋಡಿದರೆ ಸೊಲಗಿ ಅವನ ಹುಟ್ಟೂರು; ಸೊಲ್ಲಾಪುರವು ಅವನ ಕಾರ್ಯಕ್ಷೇತ್ರದ ಊರು ಎಂಬುದು ಖಚಿತ - ಇದು ಆ ಸುದ್ದಿಯ ಸಾರಾಂಶ.

ಸೊಲ್ಲಾಪುರವೇ ಸಿದ್ಧರಾಮನ ಹುಟ್ಟೂರು ಮತ್ತು ಕಾರ್ಯಕ್ಷೇತ್ರವೆಂದು ಮೊದಲಿನಿಂದ ಎಲ್ಲರೂ ನಂಬಿಕೊಂಡು ಬಂದಿರುವಾಗ ಮೇಲಿನ ಸುದ್ದಿಯನ್ನು ಸಹಜವಾಗಿಯೇ ತಿರಸ್ಕರಿಸುವ ಮನಸ್ಸಾದರೂ ಏಕೋ ನನ್ನಲ್ಲಿನ ಸಂಶೋಧಕ ಒಪ್ಪಲಿಲ್ಲ "Go to the source"- ಗುರುವಾಣಿಯನ್ನು ಮರೆಯಲಾದೀತೇ ! ಬೆಂಗಳೂರಿನ ಎಲ್ಲರೂ, ಸೊಲ್ಲಾಪುರ ಪ್ರದೇಶವನ್ನು ಬಲ್ಲ ಅಲ್ಲಿಯ ಜನರೂ ಆ ಪತ್ರಿಕೆಯ ಸುದ್ದಿ ನಂಬಲನರ್ಹವೆಂದರೂ ಅಲ್ಲಿಗೇ ಹೋಗಿ ಪರಿಶೀಲಿಸಿ ಆಮೇಲೆ ಅದು ಸರಿಯಲ್ಲ ಎಂದು ಹೇಳಬೇಕೆನ್ನಿಸಿತು, ಸೊಲಗಿ ಜನ ಹೇಳುತ್ತಿರುವುದು ಇತಿಹಾಸವಲ್ಲದಿದ್ದರೆ.

ಅದಕ್ಕಾಗಿ ಮತ್ತೆ ರಾಘವಾಂಕನ ಸಿದ್ಧರಾಮಪುರಾಣ ಇತ್ಯಾದಿ ಓದಿದುಲ್ಲದೆ ಹಿಂದೆ ನಾನು ನೋಡಿದ್ದ ಸೊಲ್ಲಾಪುರದ ಕೆರೆ, ದೇವಾಲಯಗಳು ಇವುಗಳ ಬಗ್ಗೆ ಸ್ವಲ್ಪ ಮಾಹಿತಿ ಸಂಗ್ರಹಿಸಿದೆ. ಸೊಲಗಿಗೆ ಹೋದರೆ ಅಲ್ಲಿನ ಜನರಿಂದ ಎಂತಹ ಮಾಹಿತಿ ಪಡೆಯಬೇಕೆನ್ನುವ ಬಗ್ಗೆ ಒಂದು ಚಿಕ್ಕ ಪ್ರಶ್ನಾವಳಿಯನ್ನೂ ಸಿದ್ಧಪಡಿಸಿಕೊಂಡೆ. ನನ್ನನ್ನು ಬೆಳಗಾವಿಯಿಂದ ಸೊಲಗಿಗೆ ತಮ್ಮ ವಾಹನದಲ್ಲಿ ಕರೆದೊಯ್ದು ಎಲ್ಲವನ್ನೂ ತೋರಿಸಿಕೊಂಡು ಬರುವ ಭರವಸೆಯನ್ನು ಚಿಂಚಣಿಯ (ಚಿಕ್ಕೋಡಿ ತಾಲ್ಲೂಕು) ಸಿದ್ಧ ಸಂಸ್ಥಾನ ಮಠದ ಶ್ರೀ ಅಲ್ಲಮಪ್ರಭು ಸ್ವಾಮಿಗಳು ನೀಡಿದ್ದರು. ಒಂದು ವರ್ಷದ ಹಿಂದೆ ಬೆಳಗಾವಿಯ ಶರಣ ಸಾಹಿತ್ಯ ಸಮ್ಮೇಳನದ ಉದ್ಘಾಟನೆ ಕಾರ್ಯಕ್ರಮದಲ್ಲಿ ಭಾಗವಹಿಸಿ ಅಲ್ಲಿಗೆ ಬಂದ ಸ್ವಾಮಿಗಳ ಜೊತೆ ಸೊಲಗಿಗೆ ಹೋಗಿ ಅಲ್ಲಿ ಎರಡೂವರೆ ಗಂಟೆ ಇದ್ದು ಆ ಅಲ್ಪ ಸಮಯದಲ್ಲೇ ಒಂದು ನಿಮಿಷವನ್ನೂ ವ್ಯರ್ಥಮಾಡದೆ ನನ್ನ ಸಮೀಕ್ಷೆಯನ್ನು ನೆರವೇರಿಸಿದೆ.

ಅದಕ್ಕೆ ಎರಡು ತಿಂಗಳ ಹಿಂದೆ ಚಿಂಚಣಿಯಲ್ಲಿ ಎರಡು ದಿನ ಇದ್ದು ಚಿಂಚಣಿಯು ಧಾರ್ಮಿಕ ಇತಿಹಾಸದ ದೃಷ್ಟಿಯಿಂದ ಹೆಚ್ಚಿನ ಶೋಧ ನಡೆಯಬೇಕಾದ ಜಾಗವೆಂದು ಗುರುತಿಸಿದ್ದೆ. ಅಲ್ಲಿನ 'ಸಿದ್ಧ ಸಂಸ್ಥಾನ ಮಠ' ಹೆಸರನ್ನೂ ಅಲ್ಲಿಗೆ ಸಮೀಪದ ನಿಡಸೋಸಿಯ ವೀರಶೈವ ಮಠವು ಅದೇ ಹೆಸರಲ್ಲಿರುವುದನ್ನೂ ಗಮನಿಸಿದ್ದೆ. ಚಿಂಚಣಿಯ ಮಠದ ಒಳಗಿನ ಕೆಲವು ಕುರುಹುಗಳು (ನೆಲಮಾಳಿಗೆಯ ಪೂಜಾಮಂದಿರ, ದೇವತಾ ಮೂರ್ತಿಗಳು, ಊರೊಳಗೆ ದೇವಾಲಯಗಳು ಇ.) ಊರ ಪಕ್ಕದಲ್ಲೇ ಹರಿಯುವ ಹಳ್ಳ, ಸುತ್ತಮುತ್ತ ಸಣ್ಣ ಗುಡ್ಡಗಳು (ಒಂದು ಕಾಲದಲ್ಲಿ ಅಲ್ಲೆಲ್ಲ ಕಾಡಿತ್ತು ಎಂಬ ಬಗ್ಗೆ ಅನುಮಾನವಿಲ್ಲ) ಇವೆಲ್ಲ ಒಂದು ಕಾಲದಲ್ಲಿ ಅದು ನಾಥ ಸಿದ್ಧ ಸಂಪ್ರದಾಯದ ಪ್ರದೇಶವಾಗಿದ್ದಿರಬಹುದೆಂಬ ಭಾವನೆಯನ್ನು ಮೂಡಿಸುತ್ತದೆ. ಚಿಂಚಣಿ ಊರು ಶಾಸನ, ಶಿಲ್ಪಗಳನ್ನೊಳಗೊಂಡ ಒಂದು

ಪ್ರಾಚೀನ ಊರು ಎಂಬುದಂತೂ ಸ್ಪಷ್ಟ. ಆ ಊರಿನ ಸಮೀಪದಲ್ಲೇ ಹಲವು ಜೈನ ಕೇಂದ್ರಗಳಿದ್ದುವು.

ಚಿಕ್ಕೋಡಿ ಮೂಲಕ ಹೊರಟ ನಾವು ಅಥಣಿಯನ್ನೂ ಅಲ್ಲಿನ ವೀರಶೈವ ಮಠಗಳನ್ನೂ ನೋಡಿಕೊಂಡು ಮಹಾರಾಷ್ಟ್ರವನ್ನು ಪ್ರವೇಶಿಸಿದೆವು. ಹೆಸರಿಗೆ ಮಹಾರಾಷ್ಟ್ರ : ಅಲ್ಲಿ ಇದ್ದುವೆಲ್ಲ ಅಚ್ಚಗನ್ನಡದ ಹಳ್ಳಿಗಳು. ಎಲ್ಲೂ ಕನ್ನಡ ನಾಮಫಲಕಗಳಿಲ್ಲ. ದಾರಿಯ ಒಂದು ದೊಡ್ಡ ಊರಲ್ಲಿ ಆ ಪ್ರದೇಶದ ಪ್ರಸಿದ್ಧ ವೀರಶೈವ ಮಠಕ್ಕೆ ಹೋದಾಗ ಅಲ್ಲಿನ ಸ್ವಾಮಿಗಳು ಬಹು ಸಂತೋಷದಿಂದ ಆದರಿಸಿದರು. ಮಾತಿನಲ್ಲಿ ಬಹು ವಿನೋದಪ್ರಿಯರು. ಮುಂದೆ ದಾರಿಯಲ್ಲಿ ದೊರಕಿದ ಗುಡ್ಡಾಪುರ ಊರಿಗೆ (ಅದು ಶಿವಶರಣೆ ವರದಾನಿ ಗುಡ್ಡವ್ವೆಯ ಊರು) ಹೋಗುವ ದಾರಿಯ ಹೆಸರನ್ನು ಕನ್ನಡದಲ್ಲಿ ಬರೆದು ಒಂದು ಕಂಬಕ್ಕೆ ನೇತುಹಾಕಲಾಗಿತ್ತು. ತಾಲೂಕು ಕೇಂದ್ರವಾದ ಜತ್‌ನಲ್ಲಿ ಮಾತ್ರ ಮರಾಠಿಯ ಜೊತೆ ಕೆಲವು ಕನ್ನಡ ನಾಮಫಲಕಗಳೂ ಇದ್ದುವು. ಕರ್ನಾಟಕಕ್ಕೆ ಸೇರಬೇಕಾದ ಜತ್ ತಾಲೂಕು ಮಾತ್ರವಲ್ಲ, ಇಡೀ ಸಾಂಗ್ಲಿ ಜಿಲ್ಲೆಯು ಮಹಾರಾಷ್ಟ್ರಕ್ಕೆ ಸೇರಿದೆ. ನಾನು ತೀವ್ರ ನೋವನ್ನನುಭವಿಸಿದೆ ಉದ್ದಕ್ಕೂ.

ಮಹಾರಾಷ್ಟ್ರದ ಗಡಿಯಲ್ಲಿ ಬಿಜಾಪುರ ಜಿಲ್ಲೆಯ ಗಡಿಗೆ ಕೇವಲ ನಾಲ್ಕೈದು ಕಿಲೋಮೀಟರ್ ದೂರದಲ್ಲಿರುವ ಅಚ್ಚಗನ್ನಡದ ಊರು ಸೊಲ(ನ)ಗಿ. ನಾವು ನೇರವಾಗಿ ಅಲ್ಲಿ ಮರಾಠಿ ಶಾಲೆಯ ಪಕ್ಕದಲ್ಲೇ ಇದ್ದ ಕನ್ನಡ ಶಾಲೆಗೆ ಹೋಗಿ ಉಪಾಧ್ಯಾಯರ ಪರಿಚಯ ಮಾಡಿಕೊಂಡಾಗ ಅವರು ಊರ ಜನರನ್ನು ಕರೆಯಿಸಿದರು. ಅಲ್ಲೇ ಒಂದು ಶ್ರೀಶೈಲ ಶಾಖಾಪೀಠವಿತ್ತು. ಊರ ಜನರ ಜೊತೆ ಕುಳಿತು ಅವರ ವಿಶ್ವಾಸವನ್ನು ಪಡೆದು ಅವರಿಂದ ಮಾಹಿತಿ ಸಂಗ್ರಹಿಸಿದೆ. ಸಿದ್ಧರಾಮ ಶರಣರು ತಮ್ಮ ಸುದ್ದಿಯಲ್ಲಿ ನೀಡಿದ್ದ ಮಾಹಿತಿಯೆಲ್ಲ ಸರಿಯಾಗಿತ್ತು. ಆ ಹಳ್ಳಿಯವರಿಂದಲೇ ಅವರು ಮಾಹಿತಿ ಸಂಗ್ರಹಿಸಿದ್ದರಿಂದ ಅದು ಬೇರೆಯಾಗಿರಲು ಸಾಧ್ಯವಿರಲಿಲ್ಲ. ಆ ಊರಲ್ಲಿ ಸಿದ್ಧರಾಮನ ತಂದೆಯ ಮನೆದೈವವಾದ ಧೂಳಿಮಾಕಾಳನ ಗುಡಿ ಇರಲಿಲ್ಲವೆಂಬುದು ನನಗೆ ಮುಖ್ಯವಾಗಿತ್ತು. ಜನರ ಜೊತೆ ಒಂದು ಗಂಟೆ ಮಾತನಾಡಿ, ಬಳಿಕ ಬೇರೆ ಬೇರೆ ಜಾಗಗಳನ್ನು ನೋಡಲು ಹೊರಟೆವು. ಸಿದ್ಧರಾಮನ ಗುಡಿ ಇತ್ತು. ಪಕ್ಕದಲ್ಲೇ ನೆಲಮಾಳಿಗೆಯ 'ಗೊಪೆ' ಇತ್ತು. 'ನವಣೆ ಹೊಲ'ದ (ಈಗ ಅದು ಬತ್ತ ಬೆಳೆಯುವ ಗದ್ದೆ) ಬಳಿ ಬಾಲಕ ಸಿದ್ಧರಾಮನಿಗೆ ಮಲ್ಲಿಕಾರ್ಜುನನು ಮರೆವೇಷದಲ್ಲಿ ಕಾಣಿಸಿಕೊಂಡ ಜಾಗವೆಂಬುದನ್ನು ನೋಡಿದೆ. ಅಲ್ಲಿಗೆ ಒಂದು ಕಿಲೋಮೀಟರ್ ದೂರದಲ್ಲಿ ಸಿದ್ಧರಾಮ ಕಟ್ಟಿಸಿದನೆಂದು ಹೇಳಲಾದ 'ಕೆರೆ' ಇತ್ತು - ವಾಸ್ತವವಾಗಿ ಅದು ಒಂದು ಸಹಜ ಹೊಂಡವಾಗಿತ್ತು. "ಸಿದ್ಧರಾಮ ಕೆರೆ ಕಟ್ಟಿಸಿದ್ದು ಶ್ರೀಶೈಲದಿಂದ ಹಿಂದಿರುಗಿದ ಮೇಲೆ, ಅದು ಸೊಲ್ಲಾಪುರದಲ್ಲಿ ಎಂದು ನೀವೇ ಹೇಳುತ್ತೀರಿ - ಇದು ಸಿದ್ಧರಾಮ ಕಟ್ಟಿಸಿದ ಕೆರೆ ಹೇಗಾಗುತ್ತದೆ" ಎಂಬ ಪ್ರಶ್ನೆ ಅವರಿಗೆ ಸ್ವಲ್ಪ ಇರುಸು ಮುರುಸು ಮಾಡಿತಾದ್ದರಿಂದ ಅದನ್ನು ನಾನು ತೇಲಿಸಿದೆ. ರೇವಣಸಿದ್ಧ ಆ ಊರ ಗಡಿಗೆ ಬಂದು ಅಲ್ಲಿ ಲೋಕೋತ್ತರ ವ್ಯಕ್ತಿಯ ಜನನ ಅಗಲಿದೆಯೆಂದು ತಿಳಿದು ತನ್ನ ವಾಹನದಿಂದ ಕೆಳಗೆ ಇಳಿದು ಊರೊಳಕ್ಕೆ ನಡೆದುಬಂದರು. ಅವರು ನೆಲಕ್ಕೆ ಕಾಲಿಟ್ಟ ಜಾಗವೆಂದು ನಂಬಿರುವ ಪ್ರದೇಶ "ಗುರು ಭೇಟ್" ಬಳಿ

ಪಾದಗಟ್ಟೆ ಕಟ್ಟಿಸಿದ್ದಾರೆ. ಕಟ್ಟೆಯ ಮೇಲೆ ಪಾದಗಳ ಶಿಲ್ಪವಿದೆ. ಸಿದ್ಧರಾಮ ತಮ್ಮ ಊರಲ್ಲಿಯೇ ಹುಟ್ಟಿ ಬಾಲಕನಾಗಿದ್ದಾಗಲೇ ಶ್ರೀಶೈಲಕ್ಕೆ ಹೋಗಿ ವಾಪಸಾಗಿ ಈಗಿನ ಸೊಲ್ಲಾಪುರದಲ್ಲಿ ನೆಲಸಿದ, "ಅವನು ಹುಟ್ಟಿದ್ದು ಸೊಲಗಿಯಲ್ಲೇ" ಎಂದು ಆ ಊರ ಜನರ ಪ್ರಬಲ ವಾದ. ಆ ವಾದದ ಹಿಂದೆ ದೃಢವಿಶ್ವಾಸವಿತ್ತು. ಸಿದ್ಧರಾಮನ ಬಗ್ಗೆ ಅಚಲ ಭಕ್ತಿಯಿತ್ತು. ತಮ್ಮ ಊರನ್ನು ಇತಿಹಾಸಜ್ಞರು ಅಲಕ್ಷ್ಯ ಮಾಡಿದ್ದಾರೆಂಬ ನೋವೂ ಇತ್ತು.

ಆ ಊರಿನ ಜನ ಅರವತ್ತು ಕಿ.ಮೀ. ದೂರದ ಸೊಲ್ಲಾಪುರಕ್ಕೆ ಹೋಗಿ ಸಿದ್ಧರಾಮೇಶ್ವರ ದೇವರ ದರ್ಶನ ಮಾಡುವರಲ್ಲದೆ ಅಲ್ಲಿ ನಡೆಯುವ ಜಾತ್ರೆಗೂ ಹೋಗುತ್ತಾರೆ. ಹಿಂದೆ ಮತ್ತು ಈಗಲೂ ಶ್ರೀಶೈಲಕ್ಕೆ ವರ್ಷಕ್ಕೊಮ್ಮೆ 'ಕಂಬಿ ಜೋಡಿ ಹೊರು'ತ್ತಾರೆ. ಕಂಬಿ ಎನ್ನುವುದು ಒಂದು ಪುಟ್ಟ ಪಲ್ಲಕ್ಕಿ. ಅದರ ಮುಂಭಾಗದ ಗಳುವಿನ ತುದಿಯಲ್ಲಿ ನಾಗರ ಹೆಡೆ, ಹಿಂದೆ ಬಸವ ಮೂರ್ತಿಗಳಿರುತ್ತವೆ. ಮೇಲೆ ಕಮಾನಿಗೆ ನೀಲಿ ಕೆಂಪು ಬಟ್ಟೆ ('ಗಲೀಪು') ಹೊದಿಸಿರುತ್ತಾರೆ. ಮುಂದಿನ ಗಳುವಿಗೆ ನೀರಿನ ತಂಬಿಗೆ, ಹಿಂದಿನ ಗಳುವಿಗೆ ಬುತ್ತಿ ಚೀಲ ಕಟ್ಟಿ ಇಬ್ಬರು ಹೊರುತ್ತಾರೆ. ಪಲ್ಲಕ್ಕಿ ತುದಿಗೆ ಕಲಶವಿರುತ್ತದೆ. ಒಳಗೆ ನವಿಲುಗರಿಯ ಗೊಂಚಲು, ಗಂಟೆಗಳು. ಅದನ್ನು ಅಲ್ಲಿನ ಶ್ರೀಶೈಲ ಶಾಖಾಮಠದಲ್ಲಿಟ್ಟಿದ್ದು ವರ್ಷಕ್ಕೊಮ್ಮೆ ಅದನ್ನು ತೆಗೆದುಕೊಂಡು ಶ್ರೀಶೈಲಕ್ಕೆ ಜನ ನಡೆದೇ ಹೋಗುತ್ತಾರೆ. ಹೋಗುವಾಗ "ಮಲ್ಲಯ್ಯನ ಪದ"ಗಳನ್ನು ಹಾಡುತ್ತಾರೆ. ಕೆಳಗಿನ ಘೋಷಣೆಯೊಡನೆ-

"ಶಿವಶಿವಾ ಹಾಲಗಿರಿ ಮೇಲಗಿರಿ ಶ್ರೀಗಿರಿ ಸಿಂಹಾಸನಗಿರಿ
ಮಹಾಂತ ಮಲ್ಲಯ್ಯ ಉಘೇ ಉಘೇ".

ಒಬ್ಬ,

"ಗಂಡ ಹೆಂಡಾರ ಮನ ಒಂದಾದರೆ
ನಂದಾದೀಪವು ಮಲ್ಲಯ್ಯ"

ಎಂದರೆ ಇನ್ನೊಬ್ಬ,

"ಗಂಡ ಹೆಂಡಾರ ಮನವೆರಡಾದರೆ
ತಪ್ಪದು ತಲೆದಂಡ ಮಲ್ಲಯ್ಯ"

ಎಂದು ಹಾಡುತ್ತಾನೆ. ಒಂದೊಂದು ಊರಲ್ಲೂ ಪರಿಷೆಗೆ ಹೊರಟ ಜನಕ್ಕೆ ರಾತ್ರಿ ತಂಗಲು ಜಾಗ ಒದಗಿಸುವುದಲ್ಲದೆ ಸಕ್ಕರೆ ಬೆಲ್ಲ ಹಂಚಿ ಮಲ್ಲಿಕಾರ್ಜುನ ದೇವರಿಗೆ ಒಪ್ಪಿಸಲು ಕಾಣಿಕೆ ಕೊಡುತ್ತಾರೆ. ಶ್ರೀಶೈಲಕ್ಕೆ ನಡೆದುಹೋಗುವ ಜನರ ಒಂದೊಂದು ತಂಡದಲ್ಲಿ ನಾಲ್ಕು ನೂರು ಐನೂರು ಜನ ಇರುವುದುಂಟು. ಮೊದಲು 'ಧೂಳ ದರ್ಶನ', ಎಂದರೆ ಮಲ್ಲಯ್ಯನ ದರ್ಶನ ಹೊರಗಿನಿಂದ ಮಾಡಿ (ಪ್ರಯಾಣದ ಧೂಳು ತುಂಬಿದ ದೇಹ ಸಮೇತ ದರ್ಶನ), ಬಳಿಕ ಪಾತಾಳ ಗಂಗೆಯಲ್ಲಿ ಮಿಂದು ಶುಭ್ರರಾಗಿ ನಂತರ ಮಲ್ಲಯ್ಯನ ಒಳ ದರ್ಶನ ಮಾಡುತ್ತಾರೆ. ಬಳಿಕ "ಬ್ಯಾಳೀ ಬಸವಣ್ಣ"ನ, ಭ್ರಮರಾಂಬೆಯ ದರ್ಶನ ಮಾಡಿ ಶ್ರೀಶೈಲ ಜಗದ್ಗುರುಗಳ ದರ್ಶನ ಮಾಡಿದರೆ ಅಲ್ಲಿಗೆ ವಿಧ್ಯುಕ್ತ 'ಪರಿಷೆ' ಮುಗಿದಂತೆ. ಬಿಡುವು ಶಕ್ತಿಯಿದ್ದವರು ಇತರ ಜಾಗಗಳನ್ನು ನೋಡಬಹುದು. ಹೊಸದಾಗಿ ಹೋದವರು

ಪಾತಾಳ ಗಂಗೆಯಲ್ಲಿ ಮೊರದಲ್ಲಿ ದೀಪ ಹಚ್ಚಿಟ್ಟು ತೇಲಿ ಬಿಡುತ್ತಾರೆ. ಪರಿಷೆ ಮುಗಿಸಿಕೊಂಡು ಊರಿಗೆ ಹಿಂದಿರುಗುವ ಜನರನ್ನು ಅದೇ ದಾರಿಯ ಊರುಗಳ ಜನ ಶ್ರದ್ಧೆಯಿಂದ ಸ್ವಾಗತಿಸಿ ಅವರಿಂದ ಶ್ರೀ ಶೈಲ ಪ್ರಸಾದವನ್ನು ಸ್ವೀಕರಿಸುತ್ತಾರೆ. ಹೋಗುವಾಗ ಬೇರೆ ಬೇರೆ ಊರುಗಳಲ್ಲಿ ಸಂಗ್ರಹವಾದ ಹಣವನ್ನು ಶ್ರೀ ಶೈಲ ದೇವಾಲಯದ ಕಚೇರಿಗೆ ತಲುಪಿಸಿ 'ಪಾವತಿ' ರಸೀತಿ ತರುತ್ತಾರೆ, ಜನರಿಗೆ ತೋರಿಸಲು.

ಈ ವಿವರಗಳನ್ನು ನಾನು ಈಗಾಗಲೇ ಪ್ರಕಟಿಸಿರುವ ಲೇಖನದಲ್ಲಿ ನೀಡಿಲ್ಲವಾದ ಕಾರಣ ಇಲ್ಲಿ ಕೊಡುತ್ತಿದ್ದೇನೆ. ಪರಿಷೆ ಕಂಬಿಯನ್ನು ನೋಡಿದ್ದೆ. ಆದರೆ ಪರಿಷೆಗೆ ಹೋಗುವುದರ ವಿವರ ನನಗೆ ದೊರಕಿರಲಿಲ್ಲ. ನನಗೆ ಆಶ್ಚರ್ಯವನ್ನು ಹುಟ್ಟಿಸುವ ಸಂಗತಿಯೊಂದಿತ್ತು. ಆ ಊರಲ್ಲಿ (ಸೊಲಗಿಯಲ್ಲಿ) ಜನ ಹೇಳುವಂತೆ ಎಲ್ಲಿ ಅಗೆದರೂ, ಎಂದರೆ ಅನೇಕ ಕಡೆ ನೆಲದಲ್ಲಿ ಎಲುಬು ತುಂಡುಗಳು, 'ಚಿಲಿಮೆ'ಗಳು (ಗುಡುಗುಡಿ ಸೇದುವ ಮಣ್ಣ ಕೊಳವೆ), ಪುಟ್ಟ ಲಿಂಗಗಳು ದೊರಕುತ್ತವೆ. ಅಂತಹ ಒಂದು ಲಿಂಗವನ್ನು ತಂದಿಟ್ಟುಕೊಂಡಿದ್ದೇನೆ. ಆ ಊರು ಒಂದು ನಾಥಪಂಥದ ಕೇಂದ್ರವೂ ಆಗಿದ್ದಿರಬಹುದು. ಶ್ರೀಶೈಲ ಮಠದ ಸ್ವಾಮಿಗಳು ಒಂದು ಹಿಡಿಯಷ್ಟು ಪುಟ್ಟ ಲಿಂಗಗಳನ್ನು ತೋರಿಸಿದರು. ನಿಶ್ಚಿತವಾಗಿಯೂ ಸೊಲಿಗೆ ಪುರಾತತ್ವ ಶಾಸ್ತ್ರಜ್ಞರಿಗೆ ಆಸಕ್ತಿ ಹುಟ್ಟಿಸುವ ಸ್ಥಳ. ಆ ಊರಲ್ಲಿ ಹಳೆಯ ವೀರಗಲ್ಲುಗಳೂ ದೇವಾಲಯಗಳೂ ಇವೆ.

ನ್ಯಾಯವಾಗಿ ನನಗೆ ನಿರಾಸೆ ಆಗಬೇಕು. ಅದು ಸಿದ್ಧರಾಮ ಹುಟ್ಟಿದ ಊರು ಖಂಡಿತ ಅಲ್ಲ. ಸೊಲ್ಲಾಪುರದಲ್ಲೂ ನವಣೆ ಹೊಲದ ಜಾಗ, 'ಗುರುಭೇಟ್' ಜಾಗ, ಸಿದ್ಧರಾಮ ಕಟ್ಟಿಸಿದ ಮಲ್ಲಿಕಾರ್ಜುನ ದೇವಾಲಯ, ಅವನ 'ಗೊಪೆ'ಯ ಸಮಾಧಿ, ರೇವಣಸಿದ್ಧರ ಗುಡಿ, ಧೂಳಿ ಮಾಕಾಳನ ಗುಡಿ (ಇದು ಬಹಳ ಮುಖ್ಯ. ಇಂತಹುದು ಸೊಲಗಿಯಲ್ಲಿಲ್ಲ) ಎಲ್ಲ ಇವೆ. ಅಲ್ಲೂ ಕುಡುವೊಕ್ಕಲಿಗರಿದ್ದಾರೆ. ಆದರೆ ಸೊಲಿಗೆ ಊರಿನ ಜನ ಎಲ್ಲವನ್ನೂ ಕಲ್ಪಿಸಿಕೊಂಡು ಏಕೆ ತಪ್ಪು ಹೇಳುತ್ತಿದ್ದಾರೆ ? ನಮ್ಮ ಹಿಂದಿನ ಜನಕ್ಕೆ ಅರಿಯದೆ ತಪ್ಪು ಮಾಡುವುದು ಗೊತ್ತಿತ್ತು, ಸುಳ್ಳು ಹೇಳುವುದು ತಿಳಿದಿರಲಿಲ್ಲ. ಹಾಗಾದರೆ? ಏನೋ ಫಳಕ್ಕನೆ ಮಿಂಚಿದಂತಾಗಿ ವಾಪಸ್ ಬರುವಾಗ ಕುಳಿತಿದ್ದ ಕಾರಲ್ಲಿ ಹಾಗೇ ಆ ಕಡೆ ಈ ಕಡೆ ಸ್ವಲ್ಪ ಒದ್ದಾಡಿದೆ. ಸೊನ್ನಲಿಗೆಯ (ಸೊಲ್ಲಾಪುರದ) ಸಿದ್ಧರಾಮನ ಭಕ್ತರಾದ ಸೊಲಿಗೆ ಊರ ಜನ ಹಿಂದೆ ವಾಹನ ಸೌಕರ್ಯ ಇಲ್ಲದ ಕಾಲದಲ್ಲಿ ವರ್ಷಕ್ಕೊಮ್ಮೆ ಇಮ್ಮೆ ಸೊಲ್ಲಾಪುರಕ್ಕೆ ಹೋಗಿ ದರ್ಶನ ಮಾಡಬಹುದಿತ್ತೇ ಹೊರತು, ದಿನವೂ ಸಾಧ್ಯವಿರಲಿಲ್ಲ ತಾನೇ! ಆ ಕಾರಣ ತಮ್ಮ ಊರಲ್ಲೇ ಸಿದ್ಧರಾಮನ ಗುಡಿ ಕಟ್ಟಿಸಿ ಆ ಕೊರತೆ ನೀಗಿಸಿದರು. ಆ ದೇವಸ್ಥಾನದಿಂದಾಗಿ ತಮ್ಮ ಊರನ್ನೂ ಸೊನ್ನಲಿಗೆಯೆಂದೇ ಕರೆದುಕೊಂಡರೋ ಮೊದಲು ಅದೇ ಹೆಸರ ಊರಿದ್ದು ಅಲ್ಲಿ ಸಿದ್ಧರಾಮನ ಗುಡಿ ಆಮೇಲೆ ಕಟ್ಟಿಸಿದರೋ ಹೇಳುವುದು ಕಷ್ಟ. ಆ ಮಾತು ಹಾಗಿರಲಿ. ಒಂದು ಘಟ್ಟದಲ್ಲಿ ಸೊಲ್ಲಾಪುರದಲ್ಲಿ ಸಿದ್ಧರಾಮನ ನೆನಪು ತರುವ ಏನೇನು ಜಾಗಗಳಿವೆ ಅವೆಲ್ಲವೂ ತಮ್ಮಲ್ಲಿಯೇ ಇವೆಯೆಂದು ತೋರಿಸಿ ಸೊನ್ನಲಿಗೆ (ಸೊಲ್ಲಾಪುರ) ಯಂತೆಯೇ ತಮ್ಮದನ್ನೂ ಪುಣ್ಯಕ್ಷೇತ್ರವೆಂಬಂತೆ ಪರಿವರ್ತಿಸಲು ಅವರು

ಮನಸ್ಸು ಮಾಡಿದರೆಂದು ಕಾಣುತ್ತದೆ. ಮೊದಲು ಇದು ಸಿದ್ಧರಾಮ ಹುಟ್ಟಿದ ಜಾಗವೇ ಸರಿ ಎಂದು ಸಾಧಿಸಿ ತೋರುವುದು ಅವರ ಉದ್ದೇಶವಾಗಿರಲಿಲ್ಲ. ಸರಿ. ಒಂದಕ್ಕೆ ಮುದ್ದುಗೌಡನ ನವಣೆ ಹೊಲ ಎಂದು ಕರೆದರು, ರೇವಣಸಿದ್ಧ ಇಳಿದ ಜಾಗವನ್ನು ಗುರುತಿಸಿದರು, ಸಿದ್ಧರಾಮನ "ಗೊಪೆ" ನಿರ್ಮಿಸಿದರು. ಒಂದು ಪುಟ್ಟ ಹೊಂಡವನ್ನು ಸಿದ್ಧರಾಮನ ಕೆರೆ ಎಂದರು. ಸೊನ್ನಲಿಗೆಯನ್ನು ಸಿದ್ಧರಾಮ ಅಭಿನವ ಶ್ರೀಶೈಲವನ್ನಾಗಿ ಮಾಡಿದಂತೆ ಸೊಲಿಗೆ ಜನ ತಮ್ಮ ಊರನ್ನು ಅಭಿನವ ಸೊನ್ನಲಿಗೆಯನ್ನಾಗಿ ಪರಿವರ್ತಿಸಿದರು. ಸಿದ್ಧರಾಮ ಸೊನ್ನಲಿಗೆಯಲ್ಲಿ ಕೇವಲ ಮಲ್ಲಿಕಾರ್ಜುನ ದೇವಾಲಯವನ್ನು ಕಟ್ಟಿಸಿದ. ಅಷ್ಟರಮಟ್ಟಿಗೆ ಅದು ಅಭಿನವ ಶ್ರೀಶೈಲ. ಆದರೆ ಸೊನ್ನಲಿಗೆಯಲ್ಲಿದ್ದ ಎಲ್ಲ ಜಾಗಗಳಂತೆ ತಮ್ಮಲ್ಲೂ ಆ ಜಾಗಗಳನ್ನು ಸೊಲಿಗೆಯಲ್ಲಿ ಗುರುತಿಸಿದರು, ಕಟ್ಟಿದರು ; ತಮ್ಮದು ಸಿದ್ಧರಾಮನ ಊರಿನಂತೆ ಎಂದು ಹೇಳಿಕೊಳ್ಳುತ್ತಿದ್ದವರು ಕ್ರಮೇಣ ತಮ್ಮದೇ ಸಿದ್ಧರಾಮನ ಊರು ಎಂದು ಹೇಳಿಕೊಳ್ಳಲು ಆರಂಭಿಸಿದರು. ಇದರಲ್ಲಿ ಜಾಣತನವಿರಲಿಲ್ಲ; ಮುಗ್ಧತೆ ಮತ್ತು ನಿರ್ಭರ ಭಕ್ತಿಯಿತ್ತು ಎಂಬುದು ಸ್ವಯಂವೇದ್ಯ. ಸೊನ್ನಲಿಗೆಯಲ್ಲಿರುವ ಎಲ್ಲ ಜಾಗಗಳು - ಊರ ಹೆಸರೂ ಸೇರಿದಂತೆ ತಮ್ಮಲ್ಲಿವೆಯೆಂದು ಹೇಳಿಕೊಳ್ಳುವಾಗ ಅಲ್ಲಿರುವ ಕೆರೆಯೂ ಇಲ್ಲಿದೆ ಎಂದು ತೋರಿಸಿದರು. ಅದನ್ನು ತೋರಿಸುವುದು ಸರಿಯೇ. ಆದರೆ ಸಿದ್ಧರಾಮ ಕೆರೆ ಕಟ್ಟಿಸಿದ್ದು ಅಲ್ಲಿ ಎಂದು ಹೇಳಿ, ಇಲ್ಲಿಯ ಕೆರೆಯನ್ನು ಅವನೇ ಕಟ್ಟಿಸಿದ ಎಂದು ಹೇಳಿಕೊಳ್ಳುವುದರ ಔಚಿತ್ಯದ ಬಗ್ಗೆ ಅವರು ಯೋಚಿಸಲಿಲ್ಲ. ನಮಗೆ ಬೇಕಾದ್ದು ಅದೆಲ್ಲವೂ ಅವರ ಶ್ರದ್ಧೆಯ ಕುರುಹು ಎಂಬುದು ಮಾತ್ರ.

ಕರ್ನಾಟಕದಲ್ಲಿಯೂ ವಾರಣಾಸಿ, ಉಜ್ಜಯಿನಿ ಉಂಟು. ಬಳ್ಳಾರಿ ಜಿಲ್ಲೆಯ ಉಜ್ಜಯಿನಿಯು, ಅಲ್ಲಿನ ಭಕ್ತರು ಮಧ್ಯಪ್ರದೇಶಕ್ಕೆ ಹೋಗಿ ಅಲ್ಲಿ ಉಜ್ಜೈನ್ (ಉಜ್ಜಯಿನಿ) ನೋಡಿ ಅಲ್ಲಿನಂತೆಯೇ ಇಲ್ಲಿಯೂ ಸಿದ್ಧೇಶ್ವರ ದೇವಾಲಯ ಕಟ್ಟಿಸಿ ಅದೇ ಪುಣ್ಯಕ್ಷೇತ್ರದ ಹೆಸರನ್ನು ಇಲ್ಲಿಯ ಉಜ್ಜಯಿನಿಗೂ ಇಟ್ಟ ಫಲ. ಮಂತ್ರಾಲಯಕ್ಕೆ ಹೋಗಿ ಅಲ್ಲಿಂದ ಮೃತ್ತಿಕೆ ತಂದು ತಮ್ಮ ಊರಲ್ಲಿಯೇ ರಾಘವೇಂದ್ರ ಸ್ವಾಮಿಯ ಗುಡಿ ಕಟ್ಟಿಸಿ ದಿನವೂ ಆ ಪೂಜ್ಯರ ದರ್ಶನ ಸಿಗುವಂತೆ ಮಾಡಿಕೊಳ್ಳುವ ಪದ್ಧತಿ ಇಂದಿಗೂ ಮುಂದುವರಿದಿದೆ. ತರೀಕೆರೆ ತಾಲ್ಲೂಕು ಸೊಲ್ಲಾಪುರದಲ್ಲಿ ಸಿದ್ಧರಾಮೇಶ್ವರ ಗದ್ದುಗೆ ಗುಡಿ ಕೆರೆ ಇವೆಯೆಂಬುದು ಸ್ಮರಣಾರ್ಹ.

ಭಕ್ತನೊಬ್ಬ ದೂರದ ಪುಣ್ಯಕ್ಷೇತ್ರವೊಂದರ ತನ್ನ ಆರಾಧ್ಯದೈವದ ಪ್ರತಿರೂಪದ ಮೂರ್ತಿಯನ್ನು ತಂದು ತನ್ನ ಊರಲ್ಲಿ ಪ್ರತಿಷ್ಠಾಪಿಸುವುದು ಎಲ್ಲರಿಗೂ ಪರಿಚಿತ ಸಂಗತಿ. (ಬೆಂಗಳೂರಲ್ಲೇ ಕಾಶಿವಿಶ್ವೇಶ್ವರನ ಗುಡಿ ಇದೆ). ಆದರೆ ಮೇಲೆ ವಿವರಿಸಿದಂತೆ ಸೊಲಗಿ ಊರು ಆ ಪದ್ಧತಿಯ ಒಂದು ಪರಿಪೂರ್ಣರೂಪದ ಮಾದರಿ. ಈ ದೃಷ್ಟಿಯಿಂದ ಜಾನಪದ ವಿದ್ಯಾರ್ಥಿಗಳಿಗೆ ತೀರ ಒಂದು ಹೊಸಮಾದರಿಯನ್ನೂ ಒದಗಿಸಿದ ಪ್ರದೇಶವಾಗಿದೆ. ಕೊಲಂಬಸ್ ಭಾರತವನ್ನು ಹುಡುಕಲು ಹೊರಟು ಅಮೆರಿಕವನ್ನು ಕಂಡುಹಿಡಿದನಂತೆ. ನಾನು ಹೊರಟಿದ್ದು ವಜ್ರ ಹುಡುಕಲು, ದೊರಕಿದ್ದು ಅಷ್ಟೇ ಅಮೂಲ್ಯದ ವೈಡೂರ್ಯ.

ಎಪ್ಪತ್ತರ ದೇಹಕ್ಕೆ ದಣಿವಾಯಿತು. ದಣಿವಿಲ್ಲದಿದ್ದರೆ 'ಪಾಂಡಿತ್ಯ (ಸೋಮ) ರಸ'ವನ್ನು ತಣಿಯುವ ಅವಕಾಶವೆಲ್ಲಿರುತ್ತದೆ? ಹಕ್ಕು ಎಲ್ಲಿರುತ್ತದೆ? ದಣಿದವರಿಗೆ ತಾನೇ ರಸ!.

## "ನೆಯ್ಯೇರಿಸು" ಎಂದರೇನು?

ಈ ಅನುಭವ ಕಥನ ಒಂದು ಉಕ್ತಿಯ ಅಥವಾ ಮಾತಿನ ಬೆನ್ನಟ್ಟಿ ಹೊರಟುದನ್ನು ಕೇಂದ್ರವಾಗಿ ಹೊಂದಿದೆ. ಆರೆಂಟು ವರ್ಷಗಳ ಹಿಂದಿನ ಮಾತು. ಬೆಂಗಳೂರು ಕನ್ನಡ ಸಾಹಿತ್ಯ ಪರಿಷತ್ತು ಸಿದ್ಧಪಡಿಸುತ್ತಿರುವ ಕನ್ನಡ ನಿಘಂಟಿನ ಸಂಪಾದಕೀಯ ಸಮಿತಿಯ ಮುಂದೆ ಒಂದು ಶಬ್ದದ ಅರ್ಥವು ಚರ್ಚೆಗೆ ಬರುವುದರಲ್ಲಿತ್ತು. "ನೆಯ್ಯೇರಿಸು" (ನ್ಯಾಯವಾಗಿ ಇಲ್ಲಿ ರ್ ಬದಲು ಶಕಟರೇಫವಿರಬೇಕು) ಈ ಶಬ್ದಕ್ಕೆ ನಿಘಂಟು ಕಚೇರಿಯವರು ಬೇರೆ ಬೇರೆ ಕಾವ್ಯಗಳಲ್ಲಿ ದೊರಕುವ ಅನೇಕ ಪ್ರಯೋಗಗಳನ್ನು ಕೊಟ್ಟು "ಮದುವೆ ಮುಂತಾದ ಶುಭ ಸಂದರ್ಭಗಳಲ್ಲಿ ಹೂವಿನಿಂದ ಎಣ್ಣೆಯನ್ನು ಹಚ್ಚು, ತೈಲವನ್ನು ಲೇಪಿಸು" ಎಂಬ ಅರ್ಥವನ್ನು ಸೂಚಿಸಿದ್ದರು. "ನೆಯ್" ಎಂದರೆ ಜಿಡ್ಡು, ಎಣ್ಣೆ ('ತುಪ್ಪ' ಎಂದೂ ಆಗಬಹುದು); "ಏರಿಸು" ಎಂದರೆ ಮುಡಿಸು, ಲೇಪಿಸು ಎಂದಾಗಬಹುದು. "ನೆಯ್ಯೇರಿಸು" ಎಂಬುದಕ್ಕೆ ಪದಶಃ ಅರ್ಥ ಹೇಳಬೇಕಾದರೆ "ಎಣ್ಣೆಯನ್ನು ಹಚ್ಚು" ಎಂದೇ ಹೇಳಬೇಕು. ತುಪ್ಪವನ್ನು ಯಾರೂ ಲೇಪಿಸಿ ಸ್ನಾನ ಮಾಡುವುದಿಲ್ಲ ತಾನೇ? ಈಗಲೂ ಮದುವೆ ಸಂದರ್ಭದಲ್ಲಿ ಮದುಮಕ್ಕಳಿಗೆ ನೆರವೇರಿಸುವ "ಎಣ್ಣೆ ಶಾಸ್ತ್ರ"ದಲ್ಲಿ ಎಣ್ಣೆ ಹಚ್ಚಿ ಸ್ನಾನ ಮಾಡಿಸುವ ಮೊದಲು ಹೂವಿನಿಂದ ಎಣ್ಣೆಯನ್ನು ಒತ್ತುತ್ತಾರೆ. ಆ ಕಾರಣ, "ನೆಯ್ಯೇರಿಸು" ಶಬ್ದಕ್ಕೆ ನಿಘಂಟು ಕಚೇರಿಯವರು ಕೊಟ್ಟ ಅರ್ಥ ಮೇಲು ನೋಟಕ್ಕೆ ಸಾಧುವೂ ತರ್ಕಬದ್ಧವೂ ವಿವಾದಾತೀತವೂ ಆಗಿರುವಂತೆ ಕಾಣುತ್ತದೆ. ಈಗ ಇರುವ ಎಣ್ಣೆ ಶಾಸ್ತ್ರ ಪದ್ಧತಿಯಂತೂ ಆ ಪದಕ್ಕೆ ಬೇರೊಂದು ಅರ್ಥವಿರಬಹುದೇ ಎಂದು ವಿಚಾರ ಮಾಡಲಿಕ್ಕೂ ಅವಕಾಶ ಕೊಡದೆ ಮೇಲೆ ಹೇಳಿದ ಅರ್ಥವನ್ನೇ ಒಪ್ಪಿಕೊಂಡು ಬಿಡಲು ಒತ್ತಾಯಪಡಿಸುತ್ತದೆ. ಸಂಶೋಧಕನಾದವನು ಸ್ವಲ್ಪ ಎಚ್ಚರ ತಪ್ಪಿದರೆ ಏನು ಅನಾಹುತವಾಗಬಹುದೆಂಬುದಕ್ಕೆ ಇಲ್ಲಿ ಒಂದು ಒಳ್ಳೆಯ ಸಾಕ್ಷಿಯಿದೆ. ನೆಯ್ಯೇರಿಸು ಎಂಬುದಕ್ಕೆ ಮೇಲಿನ ಅರ್ಥವನ್ನು ಒಪ್ಪಿಕೊಳ್ಳಲು ಆ ಪದದ ಕಾವ್ಯ ಪ್ರಯೋಗಗಳು ಅಡ್ಡಿ ಉಂಟುಮಾಡುತ್ತವೆ. ಲೀಲಾವತಿ ಎನ್ನುವ ಕಾವ್ಯದಲ್ಲಿ "ಅಲರಂಬಿಂದ ಅಬ್ಜಮುಖಿಗೆ ನೆಯ್ಯೇರಿಸಿದರ್" ಎಂದೂ, ವರ್ಧಮಾನ ಪುರಾಣದಲ್ಲಿ "ಕುಮಾರಿಗೆ ಅರ್ಚಿಸಿದ ಶರದೆ ನೆಯ್ಯೇರಿಸಿದರ್" ಎಂದೂ, ನಂಬಿಯಣ್ಣನ ರಗಳೆ ಎಂಬ ಕಾವ್ಯದಲ್ಲಿ "ನನೆಯಂಬಿಂ ನೆಯ್ಯೇರಿಸುವ ರತಿಗೆ" ಎಂದೂ ಇದೆ. ಇನ್ನೂ ಹಲವು ಕಾವ್ಯಗಳಲ್ಲಿ ಇಂತಹುದೇ ವರ್ಣನೆಗಳಿವೆ. ಈಗಿನ ಎಣ್ಣೆ ಶಾಸ್ತ್ರ ಮಾಡುವ ಸಾಮಾನ್ಯ ಪದ್ಧತಿಯಲ್ಲಿ ಬಾಣವನ್ನು ಬಳಸುವ ರೂಢಿ ಇಲ್ಲ. ಮತ್ತು ಮೇಲಿನ ಪ್ರಯೋಗಗಳನ್ನು ನೋಡಿದರೆ ಬಾಣದಿಂದಲೋ ಅಥವಾ ಹೂವನ್ನು ತುದಿಗೆ ಚುಚ್ಚಿದ ಬಾಣದಿಂದಲೋ 'ನೆಯ್ಯ'ನ್ನು ಲೇಪಿಸುವುದು ನೆಯ್ಯೇರಿಸುವ ಕ್ರಿಯೆಯ ಭಾಗವಾಗಿರುವುದು ಸ್ಪಷ್ಟವಾಗುವುದರಿಂದಲೂ ಮತ್ತು ಚಂದ್ರಪ್ರಭ ಸಾಂಗತ್ಯದಂತಹ ಕೆಲವು ಕಾವ್ಯಗಳಲ್ಲಿ ನೆಯ್ಯೇರಿಸುವ ಮತ್ತು ಎಣ್ಣೆ ಶಾಸ್ತ್ರ ಮಾಡುವ

ಕ್ರಿಯೆಗಳು ಭಿನ್ನ ಭಿನ್ನವಾಗಿಯೇ ವರ್ಣಿತವಾಗಿರುವುದರಿಂದಲೂ "ನೆಯ್ಯೇರಿಸು" ಎಂಬುದಕ್ಕೆ ಎಣ್ಣೆ ಶಾಸ್ತ್ರದ ಅರ್ಥ ಹೇಳುವುದಾಗಲಿ, ಅದು ಎಣ್ಣೆ ಶಾಸ್ತ್ರದ ರಿಚುಯಲ್ಲೇ ಸರಿ ಎಂದು ವಾದಿಸುವುದಾಗಲಿ ಸರಿ ಹೋಗುವುದಿಲ್ಲ. ಅದು ಎಣ್ಣೆ ಶಾಸ್ತ್ರಕ್ಕಿಂತ ಭಿನ್ನವಾದ ರಿಚುಯಲ್ಲೇ ಇರಬೇಕೆಂಬ ಸಂದೇಹ ನನ್ನ ಮನಸ್ಸಿಗೆ ಬಂದಿತು.

**ಬೆಳಕಿನ ಕಿರಣ**

ಹಾಗಿದ್ದಲ್ಲಿ ಆ ರಿಚುಯಲ್ಲು ಯಾವುದು ? ಎಷ್ಟೋ ರಿಚುಯಲ್ಲುಗಳು ಕರ್ನಾಟಕದಲ್ಲಿ ಹಿಂದೊಮ್ಮೆ ಎಲ್ಲ ಕಡೆಯಲ್ಲಿಯೂ ಬಳಕೆಯಲ್ಲಿದ್ದು ಕ್ರಮೇಣ ಬಳಕೆಯಲ್ಲಿ ತಪ್ಪಿಹೋಗಿ ಆಕಸ್ಮಿಕವಾಗಿ ಕೆಲವು ಭಾಗಗಳಲ್ಲಿ ಮಾತ್ರ ಅವಶೇಷ ರೂಪವಾಗಿ ಉಳಿದುಬಂದಿರುವ ಸಾಧ್ಯತೆಗಳಿರುತ್ತವೆ. ನೆಯ್ಯೇರಿಸು ಅಂತಹ ರಿಚುಯಲ್ಲಿರಬಹುದೆಂಬ ಭೂತ ನನ್ನ ತಲೆಯನ್ನು ಹೊಕ್ಕಿತು. ಆ ಶಬ್ದದ ಅರ್ಥವನ್ನು ತಿಳಿಯಲು ಅಥವಾ ಅದು ನಿರ್ದಿಷ್ಟವಾಗಿ ಯಾವ ರಿಚುಯಲ್ಲನ್ನು ಸೂಚಿಸುತ್ತದೆ ಎಂಬುದನ್ನು ತಿಳಿಯಲು ಇರುವ ಒಂದೇ ಒಂದು ಮಾರ್ಗವೆಂದರೆ ಆ ಸಮಸ್ಯೆಯನ್ನು ಹಲವರ ಮುಂದೆ ಹೇಳುತ್ತಾ ಹೋಗುವುದು, ಸಾಧ್ಯವಾದ ಕಡೆಗಳಲ್ಲೆಲ್ಲ ವಿಚಾರಿಸುತ್ತಾ ಇರುವುದು. ಇಂತಹ ಕಡೆ, ಸಮಸ್ಯೆ ಪರಿಹಾರವಾದರೆ ಅದೊಂದು ಆಕಸ್ಮಿಕ ಅದೃಷ್ಟ ! ಬಾಣದಿಂದ ಎಣ್ಣೆ ಹಚ್ಚುವ ಪದ್ಧತಿಯೊಂದು ಇರಬಹುದೇ, ಹಾಗೆಂದರೇನು ಇತ್ಯಾದಿಯಾಗಿ ಬೆಂಗಳೂರಿನ ನನ್ನ ವಿದ್ಯಾರ್ಥಿ ಮಿತ್ರ ಎಸ್. ಶಿವಣ್ಣನವರ ಮುಂದೆ ಪ್ರಸ್ತಾಪಿಸಿದಾಗ ಅವರು "ಸಾರ್, ನನಗೆ ಸರಿಯಾಗಿ ಗೊತ್ತಿಲ್ಲ. ನನ್ನ ಮದುವೆಯಲ್ಲಿ ಬಾಣದಿಂದ ಏನೋ ಹಚ್ಚಿದ್ದು ಜ್ಞಾಪಕವಿದೆ. ನನ್ನ ಹೆಂಡತಿಯನ್ನು ಕೇಳಿ ನಾಳೆ ಹೇಳುತ್ತೇನೆ" ಎಂದರು. ಪೂರ್ಣವಾಗಿ ಕತ್ತಲಲ್ಲಿದ್ದವನಿಗೆ ಬೆಳಕಾಗುವ ಮೊದಲ ಸೂಚನೆ ಕಾಣಿಸಿತು. ಮಾರನೆಯ ದಿನ ಅವರು ಬಂದವರೇ, "ಹೌದು, ಬಾಣದಿಂದ ತುಪ್ಪವನ್ನು ಮುತ್ತೈದೆಯರು ವಧುವಿಗೆ ಮುಟ್ಟಿಸುತ್ತಾರೆ. ಆ ಬಾಣ ನನ್ನ ಬಂಧುಗಳ ಮನೆಯಲ್ಲಿದೆ" ಎಂದರು. ನನ್ನ ಆಸೆಗೆ ರೆಕ್ಕೆ ಪುಕ್ಕ ಬಲಿತುವು.

**ಬಾಣದ ದರ್ಶನ**

ಅವರ ಬಂಧು ಪ್ರೊ. ಸಿ. ಮಹಾದೇವ ಶಂಕರಪ್ಪ ನನಗೆ ಸ್ನೇಹಿತರು. ಅವರ ತಾಯಿಗೆ ಬಾಣದ ವಿಷಯ ಇತರ ಎಲ್ಲ ವಿವರಗಳು ಗೊತ್ತಿವೆಯೆಂಬ ಸಂಗತಿ ತಿಳಿದ ಎರಡು ಮೂರು ದಿನದಲ್ಲೇ ಅವರ ಮನೆಗೆ ಒಂದು ಸಂಜೆ ಹೋದೆವು. ಬೆಂಗಳೂರಿನ ಜನನಿಬಿಡ ರಸ್ತೆಯಾದ ಅರಳೇ ಪೇಟೆಯ ಸಾಂಪ್ರದಾಯಕ ವೀರಶೈವರ ಒಂದು ವಿಶಾಲವಾದ ಹಳೆಯ ಮನೆ. ಆ ಸಂಸಾರದಲ್ಲಿ ಎಲ್ಲರೂ ವಿದ್ಯಾವಂತರೇ ಆಗಿದ್ದರೂ ಅದೊಂದು ಹಿಂದಿನ ಎಲ್ಲ ಆಚಾರ ವಿಚಾರಗಳನ್ನು ಉಳಿಸಿಕೊಂಡು ಬಂದಿರುವ ಒಂದು ದೊಡ್ಡ ಶ್ರದ್ಧಾವಂತ ಸಂಸಾರ. ಒಂದು ವಿಶಾಲ ಆವರಣದಲ್ಲಿ ಬಂಧುವರ್ಗದವರೆಲ್ಲ ವಾಸವಾಗಿರುವುದು ಪಾರಂಪರಿಕ ಆಚಾರಗಳನ್ನು ಉಳಿಸಿಕೊಂಡು ಬರುವುದಕ್ಕೆ ಸಹಾಯಕವಾಗಿದೆ. ನನಗೆ ಅಜ್ಜಿ ಗೊತ್ತಿದ್ದರು. ಎಪ್ಪತ್ತು ವರ್ಷ ದಾಟಿದ್ದರೂ ಕಣ್ಣು ಕಿವಿ ಬುದ್ಧಿ ಎಲ್ಲ ಚುರುಕಾಗಿರುವ ಆ ಚೂಟಿ ಅಜ್ಜಿಗೆ ನಾವು ಹೋದ ಉದ್ದೇಶವನ್ನು ಕೇಳಿ ನಗು ಬಂದಿತು ಹಾಗೂ ಸಂತೋಷವೂ ಆಯಿತು. ಧಾರಾಮುಹೂರ್ತಕ್ಕೆ ಮುಂಚೆ, ಹಿಂದಿನ

ದಿನ ಅಥವಾ ಯಾವಾಗಲಾದರೂ ಸರಿಯೇ, ಹೆಣ್ಣಿನ ಮನೆಯಲ್ಲಿ ವಧುವನ್ನು ಕುಳ್ಳಿರಿಸಿ, ಮುತ್ತೈದೆಯರು 'ಅಂಬಿನ ಕೋಲ'ನ್ನು ಹಾಲು ತುಪ್ಪದಲ್ಲಿ ಅದ್ದಿ ದೇಹದ ಮೂರು ಭಾಗಗಳಿಗೆ (ಮೊಳಕಾಲು, ಭುಜ, ತಲೆ) ಮುಟ್ಟಿಸುವುದೇ ನೆಯ್ಯೇರಿಸುವುದು. ಅಜ್ಜಿಯ ಬಾಯಲ್ಲಿ 'ಅಂಬಿನ ಕೋಲು' 'ನೆಯ್ಯೇರಿಸು' ಎಂಬ ಪಾರಿಭಾಷಿಕ ಪದಗಳನ್ನು ಕೇಳಿ ನನಗೆ ರೋಮಾಂಚನವಾಯ್ತು ಎಂದರೆ ಓದುಗರು ನಗಬಹುದು (ಅವರು ನಗಬಹುದೆಂಬ ಕಲ್ಪನೆ ಆಗ ನನಗೆ ಬರಲಿಲ್ಲವಾದ್ದರಿಂದ ನಿಜವಾಗಿಯೂ ರೋಮಾಂಚನಗೊಂಡೆ). ಒಂದು ಬಿದರಿನ ಕೋಲು, ಅದರ ತುದಿಗೆ ಬಾಣದ ತಲೆಯನ್ನು ಸಿಕ್ಕಿಸಿರುತ್ತಾರೆ. ಬಾಣದ ತಲೆಗೆ ಹೂವನ್ನು ಚುಚ್ಚಿ ಅದರ ಬುಡಕ್ಕೆ ಪಂಚಧಾನ್ಯವನ್ನು ಹಾಕಿರುವ ಚಿಕ್ಕ ಚೀಲವನ್ನು ಕಟ್ಟಿರುತ್ತಾರೆ. ಇದೇ ನೆಯ್ಯೇರಿಸುವ ಈಗಿನ 'ಅಂಬಿನ ಕೋಲು' ; ಇದೇ ನಮ್ಮ ಹಿಂದಿನ ಕಾವ್ಯಗಳಲ್ಲಿ ವರ್ಣಿಸಿರುವ ಮದುವೆಗಳ 'ಅಲರಂಬು' ಅಥವಾ 'ನನೆಯಂಬು' ಅಥವಾ ಬರಿಯ 'ಶರ'. ಅಂಬಿನ ಕೋಲು ಎಲ್ಲಿಯೋ ಬಿದ್ದಿದೆ ಹುಡುಕಬೇಕು, ಇನ್ನೊಮ್ಮೆ ತೋರಿಸುತ್ತೇನೆ ಎಂದ ಅಜ್ಜಿ ಏನು ಉತ್ಸಾಹ ಬಂತೋ ದಡ ದಡನೆ ಎದ್ದು ಹೋಗಿ ಬಿದಿರಿನ ಕೋಲನ್ನೂ ಬಾಣದ ತಲೆಯನ್ನೂ ಹುಡುಕಿಕೊಂಡು ಬಂದು ನಮ್ಮ ಕೈಗೆ ಕೊಟ್ಟು "ಈಗ ಯಾರೂ ಇದನ್ನು ಬಳಸುವುದಿಲ್ಲ. ನಾಗರೀಕರಿಗೆ ಇದೆಲ್ಲ ಯಾಕೆ ಬೇಕು ? ನಾನಿರುವವರೆಗೆ ನಯ್ಯೇರಿಸುವುದು, ನಯ್ಯಿಳಿಸುವುದು ನಡೆಯುತ್ತದೆ, ಆಮೇಲೆ ಏನೋ ತಿಳಿಯದು" ಎಂದರು, ಸ್ವಾಭಾವಿಕವಾಗಿ. (ಈಗ ಈ ಶ್ರದ್ಧಾವಂತ 'ಶಿವಾಚಾರ'ದ ಅಜ್ಜಿ ಕೈಲಾಸವಾಸಿಯಾಗಿದ್ದಾರೆ).

ಒಂದು ಕ್ಷಣ ಅವಾಕ್ಕಾದೆ. ನೆಯ್ಯೇರಿಸು ಪದ ಮೊದಲೇ ಗೊತ್ತಿತ್ತು. ಅದರ ಅರ್ಥವನ್ನು ಅಜ್ಜಿಯಿಂದ ಇದೇ ತಾನೇ ತಿಳಿದಿದ್ದೆ. ಆದರೆ ನೆಯ್ಯಿಳುಹು ಪದವನ್ನೇ ನಾನು ಕೇಳಿರಲಿಲ್ಲ. ಮದುವೆ ಆದ ಮಾರನೆಯ ದಿನ ಹೆಣ್ಣನ್ನು ಕುಳ್ಳಿರಿಸಿ ಅದೇ ಅಂಬಿನ ಕೋಲಿನಿಂದ ವಿರುದ್ಧ ದಿಕ್ಕಿನಲ್ಲಿ, ಎಂದರೆ ಮೇಲಿನಿಂದ ಕೆಳಕ್ಕೆ ತಲೆ ಭುಜ ಮೊಳಕಾಲಿಗೆ ಹಾಲು ತುಪ್ಪ ಹಚ್ಚುವುದೇ 'ನಯ್ಯಳಿಸುವುದು'. "ಈ ಬಗ್ಗೆ ನನಗಿಂತ ತಿಳಿದವರು ಇನ್ನೊಬ್ಬರು ಇದ್ದಾರೆ. ಹಳ್ಳಿಯಿಂದ ಬಂದು ಈಗ ಅಳಿಯನ ಮನೆಯಲ್ಲೇ ಇದ್ದಾರೆ. ಹೋಗಿ ನೋಡಿ" ಎಂದು ಒತ್ತೊತ್ತಿ ಹೇಳಿ ಕುಡಿಯಲು ಹಾಲು ಕೊಟ್ಟು ಅಜ್ಜಿ ನಮ್ಮನ್ನು ಕಳುಹಿಸಿಕೊಟ್ಟರು. ನಮಗೇ ಏನೋ ವಿಷಯವನ್ನು ತಿಳಿಸಿ ಉಪಕಾರ ಮಾಡಿದೆ ಎಂಬ ಭಾವನೆಗಿಂತ ನಾವು ಕೇಳಿದ್ದೇ ಉಪಕಾರವಾಯ್ತು ಎಂಬಂತೆ ಅಜ್ಜಿ ನಡೆದುಕೊಂಡರು. ಆ ಸಂಜೆ ನಾವು ಬಹಳ ಸಂತೋಷದಿಂದ ಹಿಂದಿರುಗಿದೆವು.

**ಹೊಸ ಶಬ್ದ, ಹೊಸ ಅರ್ಥ**

'ನೆಯ್ಯಿಳುಹು' : ನಾನು ಆ ಶಬ್ದವನ್ನೇ ಕೇಳಿರಲಿಲ್ಲ. ಮನೆಗೆ ಬಂದವನೇ ನಿಘಂಟು ಕಚೇರಿಯವರು ಸಿದ್ಧಪಡಿಸಿಕೊಟ್ಟಿದ್ದ ಶಬ್ದಗಳ ಪಟ್ಟಿಯ ಕರಡನ್ನು ತಿರುವಿ ಹಾಕುತ್ತಿದ್ದೆ. ಅಗೋ, ಅಲ್ಲೇ ಕೂತಿದೆ ಆ ಶಬ್ದ. ದೊಡ್ಡಯ್ಯ ಎಂಬ ಕವಿಯ ಚಂದ್ರಪ್ರಭ ಸಾಂಗತ್ಯದ ವಾಕ್ಯಭಾಗ ಹೀಗಿದೆ : "ಮಂಗಲವಾಗು ನೀನು ಅಜಿತಸೇನಂಗೆ ಎನುತ ಅಂಗನೆಯರು ನೈಯನಿಳುಹಿ" - ಅದರಲ್ಲಿ ಬರುವ 'ನೈಯನೆ' ಎಂಬುದು ಶಬ್ದರೂಪವೆಂದೂ ಒಯ್ಯನೆ, ಮೆಲ್ಲನೆ ಎಂಬಂತಹ ಕ್ರಿಯಾ ವಿಶೇಷಣವಿರಬೇಕೆಂದೂ ಭಾವಿಸಿ ಅದರ ಮುಂದೆ ಪ್ರಶ್ನಾರ್ಥಕ

ಚಿಹ್ನೆ ಹಾಕಿ ಅರ್ಥಕ್ಕೂ ಪ್ರಶ್ನೆ ತೋರಿಸಿದ್ದರು. ಪದದ ರೂಪ, ಅರ್ಥಗಳೆರಡೂ ಸಂದಿಗ್ಧವೆಂಬುದು ಅಲ್ಲಿ ಸೂಚಿತವಾಗಿತ್ತು. ಅದು ನೆಯ್ಯನೆ + ಇಳುಹು ಅಲ್ಲವೆಂದೂ, "ನೈಯನು (ನೆಯ್ಯನು) + ಇಳುಹು" ಎಂದೂ ಆ ಕ್ಷಣಕ್ಕೆ ನನಗೆ ಸ್ಪಷ್ಟವಾಯಿತು. ನಯ್ಯಿಳುಹು ಎಂದು ಅಜ್ಜಿ ಬಳಸಿದ ಪದಕ್ಕೆ ಒಂದು ಪ್ರಾಚೀನ ಪ್ರಯೋಗ ದೊರಕಿದುದು ಮಾತ್ರವಲ್ಲದೆ ಅಜ್ಜಿ ಕನ್ನಡ ನಿಘಂಟಿಗೆ ಒಂದು ಮಹೋಪಕಾರವನ್ನೂ ಮಾಡಿದರು. "ನೈಯನೆ" ಎಂಬ ಪಿಶಾಚಿ ಪದ (ghost word) ನಿರ್ಮಾಣಗೊಂಡು ನಿಘಂಟಿನಲ್ಲಿ ಸ್ಥಾಪಿತವಾಗುವುದನ್ನು ತಪ್ಪಿಸಿದ್ದಲ್ಲದೆ, "ನೆಯ್ಯನಿಳುಹು" ಎಂಬ ಉಕ್ತಿಗೆ ಸರಿಯಾದ ಅರ್ಥವನ್ನೂ ಸೂಚಿಸಿದ್ದರು. ಅದಕ್ಕೆ ನಾನು ಮಾಧ್ಯಮವಾದೆ ಎಂಬ ತೃಪ್ತಿ ನನ್ನ ಪಾಲಿಗೆ ಬಂದಿತು.

**ಹೆಚ್ಚಿನ ಬೆಳಕು**

ತಮಗಿಂತ ಜಾಣರು ಇದ್ದಾರೆ, ಅವರ ಬಳಿ ಹೋಗಿ ಎಂದು ಅಜ್ಜಿ ಹೇಳಿದ್ದು ಅಂತಹ ಎಷ್ಟೋ ಜಾನಪದ ಕತೆಗಳನ್ನು ನೆನಪಿಗೆ ತಂದಿತು. ಆ "ಜಾಣ" ಮಹಿಳೆ ವಾಸ್ತವವಾಗಿ ನನ್ನ ಸ್ನೇಹಿತರ ಅತ್ತೆ. ಬೆಂಗಳೂರು ವಿಶ್ವವಿದ್ಯಾಲಯದ ಆವರಣದ ನನ್ನ ವಾಸದ ಮನೆಯ ಸಮೀಪದಲ್ಲೇ ಇದ್ದ ತಮ್ಮ ಅಳಿಯನ ಮನೆಗೆ ಬಂದಿದ್ದರು. ಎರಡು ಮೂರು ದಿನಗಳಲ್ಲೇ ಹೋಗಿ ಅವರನ್ನು ಭೇಟಿ ಮಾಡಿದೆ. ಬೆಂಗಳೂರು ಬಳಿಯ ತಮ್ಮ ಗ್ರಾಮದಲ್ಲಿ ಬಹಳ ಜನಕ್ಕೆ ಬೇಕಾಗಿರುವ ಅವರು ಅನೇಕ ಬಗೆಯ ರಿಚುಯಲ್ಲುಗಳ ಗಣಿ. ಅವರಿಂದ ನೆಯ್ಯೇರಿಸುವ, ನೆಯ್ಯಿಳಿಸುವ ರಿಚುಯಲ್ ಬಗ್ಗೆ ಇನ್ನೂ ಒಂದೆರಡು ವಿವರಗಳು ದೊರಕಿದುವು. ಹೆಣ್ಣಿಗೆ ಎಡಭಾಗದಲ್ಲಿ ನೆಯ್ಯೇರಿಸಿ ಬಲಭಾಗದಿಂದ ನೆಯ್ಯಿಳಿಸುವ ಸಂಗತಿ ತಿಳಿಯಿತು. ಆ ರಿಚುಯಲ್ಲುಗಳು ಎಣ್ಣೆ ಶಾಸ್ತ್ರದ ಭಾಗವಲ್ಲವೆಂಬುದೂ ಖಚಿತವಾಯ್ತು. ಆ ಮಹಿಳೆಯಿಂದ ಸಾಂಪ್ರದಾಯಕ ಮದುವೆಗಳ ಎಲ್ಲ ವಿವರಗಳನ್ನೂ ಮುಂದಿನ ಜಾನಪದಶಾಸ್ತ್ರ ವಿದ್ವಾಂಸರ ಉಪಯೋಗಕ್ಕಾಗಿ ದಾಖಲು ಮಾಡುವ ನನ್ನ ಬಯಕೆ ಇನ್ನೂ ಈಡೇರಿಲ್ಲ.

ಅದಾದ ಕೆಲವು ದಿನಗಳಲ್ಲೇ ನಿಘಂಟು ಸಭೆ ಸೇರಿತು. ಸಂಪಾದಕ ಮಂಡಲಿಯ ಸದಸ್ಯನಾದ ನಾನು 'ನೆಯ್ಯೇರಿಸು' 'ನೈಯನಿಳುಹು' ಶಬ್ದಗಳಿಗೆ ಸರಿಯಾದ ಅರ್ಥಗಳನ್ನು ದಾಖಲು ಮಾಡಿಸಿದೆ. ಪ್ರಾಚೀನ ಕಾಲದ ಎಷ್ಟೋ ನುಡಿಗಟ್ಟುಗಳಿಗೆ (Idioms) ಪದಶಃ ಅರ್ಥವನ್ನು ಊಹಿಸಿದರೆ ಸಾಲದು. ಅವು ಜೀವಂತ ಸಂದರ್ಭಗಳಲ್ಲಿ ಬಳಕೆಯಾಗುವುದನ್ನು ನೋಡಿ ಅವುಗಳನ್ನು ಅರ್ಥೈಸಬೇಕು ಎಂಬ ನನ್ನ ನಂಬಿಕೆ ದೃಢವಾಯಿತು. ಪದಪುಂಜವೊಂದಕ್ಕೆ ಅದರ ಪದಗಳ ಸಂಯೋಜಕಾರ್ಥಕ್ಕಿಂತ ಬೇರೊಂದು ರೂಢ್ಯರ್ಥವಿದ್ದರೆ ಅದು 'ನುಡಿಗಟ್ಟು' (Idiom) ಎನ್ನಿಸಿಕೊಳ್ಳುತ್ತದೆ.

ನಿಘಂಟು ಸಭೆ ಮುಗಿಯುತ್ತಿದ್ದಂತೆ ಅಲ್ಲಿನ ಉಪಸಂಪಾದಕಿಯೊಬ್ಬರು ಡಾ. ಬಿ.ಎಸ್. ಗದ್ದಗೀಮಠ ಅವರು "ನಯನೇರಿಸುವುದು" ಎಂಬ ಶೀರ್ಷಿಕೆಯ ಜಾನಪದ ಗೀತವೊಂದನ್ನು ಪ್ರಕಟಿಸಿರುವುದನ್ನು ನನ್ನ ಗಮನಕ್ಕೆ ತಂದರು.

ಎಣ್ಣೆಯ ಕೊಡಕ ಹನ್ನೆರಡು ಕೀಲಿ ಕುರುಪಿ
ಅಣ್ಣಯ್ಯ ಹಿಡಿವ ಸರಳಂಬ ತಕ್ಕೊಂಡು

ಶರಣ ಶರಣೇರು ನಯನೇರುವ ಬನ್ನಿರೇ ॥
ತುಪ್ಪದ ಕೊಡಕ ಇಪ್ಪತ್ತು ಕೀಲಿ ಕುರುಪಿ
ಅಪ್ಪಯ್ಯ ಹಿಡಿವ ಸರಳಂಬ ತಕ್ಕೊಂಡು
ಬಂಧು ಬಳಗವೆಲ್ಲ ನಯನೇರೂನ ಬನ್ನಿರೇ ॥

'ನಯನೇರಿಸು'ವುದೂ ನೆಯ್ಯೇರಿಸುವುದೂ ಒಂದೇ. ಉತ್ತರ ಕರ್ನಾಟಕದಲ್ಲಿ ಎಣ್ಣೆ ಅಥವಾ ತುಪ್ಪ ಎರಡನ್ನೂ ನೆಯ್ಯೇರಿಸುವ ಪದ್ಧತಿಯಿದೆಯೆಂಬುದು ಹಾಡುಗಳಿಂದ ಸೂಚಿತವಾಗುತ್ತದೆ. ಹಾಡುಗಳಲ್ಲಿ ಬರುವ 'ಸರಳಂಬು' ಎಂಬ ಮಾತು ಗಮನಾರ್ಹ. ಸರಳು, ಅಂಬುಗಳಿಗೆ ಬಾಣವೆಂದೇ ಅರ್ಥ. ಆದರೆ ಮುಂದೆ ನಾವು ನೋಡುವಂತೆ ಉತ್ತರ ಕರ್ನಾಟಕದ ಹಾಡುಗಳಲ್ಲಿ ಸರಳಂಬು ಎನ್ನುವ ಮಾತು ಬಂದರೂ ಅಲ್ಲೆಲ್ಲೂ ನೆಯ್ಯೇರಿಸುವಾಗ ಬಾಣವನ್ನು ಈಗ ಬಳಸುತ್ತಿಲ್ಲ. ಆದರೂ ಉತ್ತರ ಕರ್ನಾಟಕದಲ್ಲಿಯೂ ಒಂದು ಕಾಲಕ್ಕೆ ಬಾಣದಿಂದ ನೆಯ್ಯೇರಿಸುವ ಪದ್ಧತಿಯಿದ್ದು ಬಾಣಗಳು ನಮ್ಮ ಜೀವನದಿಂದ ಮರೆಯಾಗಿ ಹೋದ ಮೇಲೆ ಕೋಲಿನ ತುದಿಗೆ ವೀಳ್ಯದೆಲೆ ಕಟ್ಟಿ ಅದರಿಂದ ನೆಯ್ಯೇರಿಸುವ ಪದ್ಧತಿ ಬಂದಂತೆ ತೋರುತ್ತದೆ. ನೆಯ್ಯೇರಿಸುವಾಗ ಹಾಡುಗಳನ್ನು ಹೇಳುವ ಸಂಗತಿ, ಆ ರಿಚುಯಲ್ಲು ಉತ್ತರ ಕರ್ನಾಟಕದಲ್ಲಿ ಇನ್ನೂ ಇರುವುದು ತಿಳಿದು ಬಂದದ್ದು ಆ ಜಾನಪದ ಸಂಗ್ರಹದಿಂದಲೇ. ನೆಯ್ಯೇರಿಸುವ ಬಾಣವು ದಕ್ಷಿಣ ಕರ್ನಾಟಕದಲ್ಲಿ ಅದರಲ್ಲೂ ಬೆಂಗಳೂರು ಪ್ರದೇಶದಲ್ಲಿ ಉಳಿದುಕೊಂಡು ಬಂದಿರುವ ಸಂಗತಿ ನನ್ನ ಮಟ್ಟಿಗೆ ಒಂದು ವಿಸ್ಮಯವಾಗಿದೆ.

ಈ ಎಲ್ಲ ಅನುಭವಗಳನ್ನು ಅತ್ಯುತ್ಸಾಹದಿಂದಲೇ ನನ್ನ ವಿದ್ಯಾರ್ಥಿಗಳ ಮುಂದೆ ಹೇಳಿದೆ. ಮಧ್ಯ ಕರ್ನಾಟಕದ ಕಡೂರು ತಾಲೂಕಿಗೆ ಸೇರಿದ ನನ್ನ ವಿದ್ಯಾರ್ಥಿಯೊಬ್ಬರು ಅದನ್ನು ನೆನಪಿನಲ್ಲಿಟ್ಟುಕೊಂಡು ತಮ್ಮ ಊರಿಗೆ ರಜಾಕ್ಕೆ ಹೋದಾಗ, ವಿಚಾರಿಸಿ ಆ ಪದ್ಧತಿ ಅಲ್ಲಿನ ವಿಶ್ವಕರ್ಮರಲ್ಲಿರುವುದನ್ನು ನನಗೆ ತಿಳಿಸಿದಾಗ ಸಂತೋಷ ಉಕ್ಕಿ ಅವರ ಕೈ ಕುಲುಕಿದೆ (ಏನು ಮಾಡುವುದು, ನನ್ನ ದೌರ್ಬಲ್ಯ). ಮುಹೂರ್ತದ ಹಿಂದಿನ ದಿನ ರಾತ್ರಿ ಗಂಡು ಹೆಣ್ಣನ್ನು ಕೂರಿಸಿ ಒಂದು ಕೋಲಿಗೆ ವೀಳ್ಯದೆಲೆಯನ್ನು 'ಅಂಗ್‌ನೂಲಿ'ನಲ್ಲಿ ಕಟ್ಟಿ ಅದನ್ನು ಹಾಲು ತುಪ್ಪದಲ್ಲಿ ಅದ್ದಿ ಮುತ್ತೈದೆಯರೆಲ್ಲ ಸೇರಿ 'ನಯ್ಯಿರಿಸು'ವುದು ಹೆಣ್ಣಿನ ಎಡಭಾಗಕ್ಕೆ, ಗಂಡಿನ ಬಲಭಾಗಕ್ಕೆ. ಹೆಣ್ಣಿನ ಎಡಭಾಗಕ್ಕೆ ನೆಯ್ಯೇರಿಸುವ ಸಂಗತಿ ಗೊತ್ತಿತ್ತು. ಆದರೆ ಗಂಡಿಗೂ ನೆಯ್ಯೇರಿಸುವುದು, ಜೊತೆಗೆ ಗಂಡಿನ ಬಲಭಾಗಕ್ಕೆ ನೆಯ್ಯೇರಿಸುವ ಪದ್ಧತಿ ಆ ಪ್ರದೇಶದಲ್ಲಿರುವ ಸಂಗತಿ ತಿಳಿದದ್ದು ಆಗಲೇ.

'ಅಂಗ್‌ನೂಲು' ಎಂಬುದೂ ಕನ್ನಡ ನಿಘಂಟಿಗೆ ಒಂದು ಕಾಣಿಕೆ. ನಮ್ಮ ಹಿಂದಿನ ಕಾವ್ಯಗಳ ಮದುವೆ ವರ್ಣನೆಗಳಲ್ಲಿ ಬರುವ 'ಪೊಂಗುನೂಲು' ಎಂಬುದು ಇದೇ. ಪೊಂಗುನೂಲು ಎಂಬುದು ಹೊಂಗುನೂಲು ಎಂದಾಗಿ ಇದೇ ಹಂಗನೂಲು, ಅಂಗ್‌ನೂಲು ಆಗಿದೆ. ಅಂಗ್‌ನೂಲು ಎಂದರೆ ಅರಿಸಿಣದಲ್ಲಿ ಅದ್ದಿದ ದಾರ.

ಉತ್ತರ ಕರ್ನಾಟಕದ ನೆಯ್ಯೇರಿಸುವ ರಿಚುಯಲ್ಲನ್ನು ಡಾ. ಎಂ.ಎಂ. ಕಲಬುರ್ಗಿಯವರು ತಮ್ಮ "ಉತ್ತರ ಕರ್ನಾಟಕದ ಜನಪದ ಪದ್ಯ ಸಾಹಿತ್ಯ"ದಲ್ಲಿ ಪರಿಚಯಿಸಿರುವುದು ಆಮೇಲೆ ನನ್ನ ಗಮನಕ್ಕೆ ಬಂತು. ಇಲ್ಲಿ 'ನೈನ ಏರಿಸು'ವ ವಿವರಗಳು ಹೀಗಿವೆ. "ಹಸೆಯ ಮೇಲೆ

ಕುಳಿತ ಕೂಡಲೇ ವಧೂವರರಿಗೆ ನೈನ ಏರಿಸುವ ಕಾರ್ಯ. ಬಲ ಬಂದ ಮುತ್ತೈದೆಯರು, ಗಣಿಕೆಯ ತುದಿಗೆ ಕಟ್ಟಿದ ವೀಳ್ಯದೆಲೆಯನ್ನು ಅದ್ದಿ ವಧೂ-ವರರ ತಲೆಯ ಮೇಲೆ ಹನಿಸುತ್ತಾರೆ. ಹೀಗೆ ನೆಯ್ (ಎಣ್ಣೆ) ಹನಿಸುವಾಗ ಹೇಳುವವು - ನೈನ ಏರಿಸುವ ಹಾಡುಗಳು. ಇಲ್ಲಿಯೂ ಹಿಮ್ಮೇಳ ಮುಮ್ಮೇಳ ಅವಶ್ಯ". ನೆಯ್ಯೇರಿಸಿದ ಬಳಿಕ ವಧೂ-ವರರಿಗೆ ಎಣ್ಣೆ ಮಿಶ್ರಿತ ಅರಿಸಿಣವನ್ನು ಲೇಪಿಸುತ್ತಾರೆ (ಮುಂದೆ ಸ್ನಾನ ಇತ್ಯಾದಿ). ಉತ್ತರ ಕರ್ನಾಟಕದಲ್ಲಿ ನೆಯ್ಯೇರಿಸುವ ಪದ್ಧತಿ ಈಗಲೂ ಜೀವಂತವೆಂಬ ಸಂಗತಿ ಸ್ಪಷ್ಟವಾದ ಮೇಲೆ ದಕ್ಷಿಣ ಕರ್ನಾಟಕದ ಇನ್ನೂ ಹಲವೆಡೆ, ಮಧ್ಯ ಕರ್ನಾಟಕ (ಕಡೂರು) ಉತ್ತರ ಕರ್ನಾಟಕ (ಗುಲ್ಬರ್ಗ)ಗಳಲ್ಲಿ ಎಂದರೆ ಕರ್ನಾಟಕಾದ್ಯಂತ ಈ ಪದ್ಧತಿ ವ್ಯಾಪಕವಾಗಿರುವುದು ತಿಳಿಯಿತು. ಕರ್ನಾಟಕದ ಎಲ್ಲೆಡೆ ಇದೆ. ಬಹಳ ಜನ ಹಳ್ಳಿಯ ಹೆಂಗಸರಿಗೆ ಗೊತ್ತು. ನಿಘಂಟು ತಯಾರಿಸುವ ನನ್ನಂತಹವರಿಗೆ ಅದರ ಅರ್ಥ ತಿಳಿಯದೆ ಒದ್ದಾಡುತ್ತೇವೆ. ಕೇಶಿರಾಜ ಒಂದು ಕಡೆ ಹೇಳುತ್ತಾನೆ - "ಶಬ್ದಪಾರಂ ಅರ್ಗಂ ಅಶಕ್ಯಂ" - ಶಬ್ದಗಳೆಂಬ ಸಾಗರದ ಆಚೆಯ ದಡವನ್ನು ಕಂಡವರು ಯಾರೂ ಇಲ್ಲ. ಆ ಕಾರಣದಿಂದಲೇ ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು "ಶಬ್ದಪಾರಮಾರ್ಗಮಶಕ್ಯಂ" ಎಂಬ ಮಾತನ್ನು ಮಂತ್ರವೆಂಬಂತೆ ಭಾವಿಸಿ ತನ್ನ ಮೊದಲ ಪುಟದಲ್ಲೇ ಅಚ್ಚು ಮಾಡಿಸಿಕೊಂಡು ಭಾಷೆಯ ಅಗಾಧತೆಯನ್ನೂ ವಿದ್ವಾಂಸರೆಂದು ಹೇಳಿಕೊಳ್ಳುವವರ ಮಿತಿಗಳನ್ನೂ ಧ್ವನಿಸಿದೆ.

## ನನ್ನ ಹಳ್ಳಿಯಲ್ಲೇ

ಇದೆಲ್ಲದಕ್ಕೂ ಮಕುಟ ಪ್ರಾಯವಾದುದು ಕೊನೆಯ ನನ್ನ ಅನುಭವ. ಸಕುಟುಂಬ ಸಪರಿವಾರ ಸಮೇತನಾಗಿ ನನ್ನ ಹುಟ್ಟೂರು ಪಕ್ಕದ ಹಳ್ಳಿಗೆ (ಚನ್ನಗಿರಿ ತಾಲೂಕು) ಒಂದು ಮದುವೆಗೆ ಹೋಗಿದ್ದೆ. ಅದು ಆಗಿನ ಶಿವಮೊಗ್ಗ ಜಿಲ್ಲೆಯ, ದಾವಣಗೆರೆ ಸಮೀಪದ ಒಂದು ಹಳ್ಳಿ (ದೊಡ್ಡ ಮಲ್ಲಾಪುರ.) ನನ್ನ ಮೇಲಿನ ಅಭಿಮಾನದಿಂದ ಎರಡು ಬೇರೆ ಬೇರೆ ಮನೆಗಳ ಮದುವೆಗಳು ಒಂದೇ ದಿನ ಏರ್ಪಾಟಾಗಿದ್ದುವು. ಆ ಎರಡೂ ಮದುವೆಗಳಿಗೆ ನಾನು ಇರಬೇಕೆಂಬುದು ಅವರ ಬಯಕೆ. ಮದುವೆಗಳು ಚೆನ್ನಾಗಿ ನಡೆದುವು. ಹಗಲು ಮುಹೂರ್ತ ಮುಗಿದು, ರಾತ್ರಿ ಬ್ಯಾಂಡ್ ವಾದ್ಯದವರಿಗೆ ಚನ್ನಾಗಿ ಕುಡಿಸಿ ಅರ್ಧ ಕಿಲೋಮೀಟರ್ ಸುತ್ತಳತೆಯ ಆ ಪುಟ್ಟ ಹಳ್ಳಿಯಲ್ಲಿ ಐದು ಗಂಟೆಯ ಅದ್ದೂರಿ ಮೆರವಣಿಗೆ ನಡೆಯಿತು. ಮಾರನೆಯ ಬೆಳಿಗ್ಗೆ ಏಳು ಗಂಟೆಗೇ ಒಂದು ಮೈಲಿ ದೂರ ಹೋಗಿ ಬಸ್ ಹಿಡಿಯಬೇಕು. ಒಂದು ಮದುವೆ ಮನೆಯಲ್ಲಿ ಹೇಳಿ ಬಂದದ್ದಾಯಿತು. ಬಸ್ಸಿಗೆ ತಡವಾಗುತ್ತಿತ್ತು. ಬಂದವರಿಗೆ ಇನ್ನೂ ಉಪಚಾರ ಮಾಡುತ್ತಲೇ ಇರಬೇಕೆಂಬ ಹಳ್ಳಿಯ ಜನರ ವಿಶ್ವಾಸವನ್ನು ಕೇಳಬೇಕೇ! ಇನ್ನೊಂದು ಮದುವೆ ಮನೆಗೂ ಹೋಗಿ ಅಲ್ಲಿ 'ಚಾ' ಕುಡಿದು ಗಂಡು ಹೆಣ್ಣುಗಳಿಗೆ ಒಂದು ಮಾತು ಹೇಳಬೇಕೆಂದು ನಡುಮನೆಗೆ ಬಂದರೆ ಅಲ್ಲಿ ಎರಡು ಗಂಡು, ಎರಡು ಹೆಣ್ಣು ವಧೂವರರಾಗಿದ್ದವರು ಈ ದಿನ ದಂಪತಿಗಳಾಗಿ ಕುಳಿತಿದ್ದಾರೆ. ಆ ಎರಡು ಜೋಡಿಗಳ ಮುಂದೆ ಮೇಲಿನಿಂದ ದಾರದಲ್ಲಿ ಕಟ್ಟಿ ಇಳಿಯ ಬಿಟ್ಟ ಎರಡು ಕಲ್ಗುಂಡುಗಳು ನೇತಾಡುತ್ತಿರುವ ಹೊಸ ದೃಶ್ಯ ಕಾಣಿಸಿತು. ಆ ದಂಪತಿಗಳು ಬಹುಬೇಗ ಕಲ್ಗುಂಡಿನಂತಹ ಮಕ್ಕಳನ್ನು ಹೆತ್ತು ಹೀಗೆ ತೂಗುವಂತಾಗಲಿ ಎಂಬ ಹಿರಿಯರ ಹಾರೈಕೆ. ಅದೆಲ್ಲವನ್ನೂ

ವಿಚಾರಿಸಲು ಸಮಯವಿರಲಿಲ್ಲ. ಅಷ್ಟರಲ್ಲಿ ಒಬ್ಬ ಮುತ್ತೈದೆ ಆ ದಂಪತಿಗಳ ಪಕ್ಕದಲ್ಲಿ ಕೂತಿದ್ದವಳು ಎದ್ದು ವೀಳ್ಯದೆಲೆ ಕಟ್ಟಿದ ಕೋಲಿನಿಂದ ಹಾಲು ತುಪ್ಪವನ್ನು ಗಂಡ ಹೆಂಡಿರಿಗೆ ಮುಟ್ಟಿಸಿದಳು. ಆ ಅವಸರದಲ್ಲೂ ನನ್ನಲ್ಲಿದ್ದ ಸಂಶೋಧಕ ಎಚ್ಚರವಾಗಿದ್ದ. ಅಲ್ಲೇ ನಿಂತಿದ್ದ ಹಿರಿಯ ಮುತ್ತೈದೆಯಿಂದ ಒಂದು ನಿಮಿಷದಲ್ಲಿ ಸಂಗ್ರಹಿಸಿದ್ದು ಇಷ್ಟು : ಮದುವೆ ಆದ ಮೇಲೆ ಮಾಡುವುದೇ ನೆಯ್ಯಿಳಿಸುವುದು, ಮದುವೆಗೆ ಮುಂಚೆ ನೆಯ್ಯೇರಿಸುವುದು. ನೆಯ್ಯೇರಿಸುವ, ನೆಯ್ಯಿಳಿಸುವ ಮುತ್ತೈದೆಯನ್ನು ಮೊದಲು ಗಂಡು ಹೆಣ್ಣಿನ ಜೊತೆ ಕೂರಿಸಿ ಆಕೆಗೆ ಮೊದಲು ನೆಯ್ಯೇರಿಸಬೇಕು ಅಥವಾ ನೆಯ್ಯಿಳಿಸಬೇಕು. ಹಾಗೆ ನೆಯ್ಯೇರಿಸಿಕೊಂಡ ಅಥವಾ ನೆಯ್ಯಿಳಿಸಿಕೊಂಡ ಮುತ್ತೈದೆ ಎದ್ದು ತಾನು ವಧೂ-ವರರಿಗೆ ಅಥವಾ ಹೊಸ ಗಂಡ ಹೆಂಡಿರಿಗೆ ನೆಯ್ಯೇರಿಸಬೇಕು ಅಥವಾ ನೆಯ್ಯಿಳಿಸಬೇಕು. ಹೀಗೆ ಐವರು ಮುತ್ತೈದೆಯರಿಂದ ನಡೆಯುತ್ತದೆ. ಮದುವೆಗೆ ಮುಂಚೆ ಹೆಣ್ಣಿಗೆ ಎಡಕ್ಕೆ ಗಂಡಿಗೆ ಬಲಕ್ಕೆ ನೆಯ್ಯೇರಿಸಬೇಕು. ಮದುವೆ ಆದ ಮೇಲೆ ಹೆಣ್ಣಿಗೆ ಬಲಕ್ಕೆ, ಗಂಡಿಗೆ ಎಡಕ್ಕೆ ನೆಯ್ಯಿಳಿಸಬೇಕು. ಆಗಲೇ ಭರ್ರೆಂದು ಸ್ಟಾರ್ಟಾಗಿ ನಿಂತಿದ್ದ ಟ್ರಾಕ್ಟರಿನ ಸದ್ದು ಕೇಳುತ್ತಿದ್ದುದರಿಂದ ಗಂಡು ಹೆಣ್ಣುಗಳಿಗೆ ಹರಸಿ ಟ್ರಾಕ್ಟರ್ ಹತ್ತಿ ಹೊರಟೆ. ಬಸ್ ನಿಲ್ದಾಣಕ್ಕೆ ಬರುವ ಹೊತ್ತಿಗೆ ಬಸ್ ಬಂದಿತ್ತು. ಟ್ರಾಕ್ಟರಿನಲ್ಲಿ ಬಸ್ಸಿನಲ್ಲಿ ನನಗೆ ನೆಯ್ಯಿಯದೇ ಯೋಚನೆ. ನನ್ನ ಹಳ್ಳಿಯಲ್ಲೇ ಇರುವ ಪದ್ಧತಿಗಾಗಿ ಎಷ್ಟು ಹುಡುಕಾಡಿದೆ ! ನನಗೆ ನಾಚಿಕೆಯಾಯಿತು. ನೆಯ್ಯೇರಿಸುವುದನ್ನು ತಿಳಿಯಲು ಪಟ್ಟ ಪ್ರಯತ್ನ ಶ್ರಮಗಳು ಕೊನೆಗೂ ವಿಫಲವಾಗಲಿಲ್ಲ. ಹಳ್ಳಿಯ ಹೆಂಗಸರಿಗೂ (ಅಲ್ಲಿನ ಗಂಡಸರಿಗೆ ವಿವರ ತಿಳಿದಿರುವ ಸಾಧ್ಯತೆ ಕಡಮೆ) ಒಂದು ಶಬ್ದ ಗೊತ್ತಿರುತ್ತದೆ. ಭಾಷಾ ವಿದ್ವಾಂಸರು ಏನೋ ಅರ್ಥೈಸುತ್ತಾರೆ. ತನಗೆ ಇಲ್ಲದ ಅರ್ಥ ಹೇಳಿದ್ದನ್ನು ಕೇಳಿದ ಶಬ್ದ ಒಳಗೇ ಫಕಫಕ ನಗುತ್ತಿರುತ್ತದೆ. ಭಾಷಾ ಸಂಶೋಧನೆಯಲ್ಲಿ ಕ್ಷೇತ್ರ ಕಾರ್ಯದ (ಫೀಲ್ಡ್ ವರ್ಕ್) ಮಹತ್ವವನ್ನು ಇದು ಎತ್ತಿ ಹೇಳುತ್ತದೆ.

"ಕರೆ, ಓಗೊಡುತ್ತದೆ : ಹುಡುಕು, ಸಿಗುತ್ತದೆ ; ತಟ್ಟು, ಬಾಗಿಲು ತೆರೆಯುತ್ತದೆ" ಇದು ಸಂಶೋಧಕ ನಿತ್ಯ ಜಪಿಸಬೇಕಾದ ಮಂತ್ರ. ಸಂಶೋಧನೆ ಮಾಡುವಾತ ಆಲಸ್ಯ ವಹಿಸಿದರೆ ಸಂಶೋಧಕ ಈ ದಡದಲ್ಲಿ, ಸಮಸ್ಯೆ ಆ ದಡದಲ್ಲಿ - ಮಧ್ಯೆ ಅಪಾರವಾದ ಅಜ್ಞಾನದ ಕತ್ತಲೆಯ ಕಂದರ.

**ಹುಡುಕಿದೆ, ಸಿಕ್ಕಿತು**

ಇದು ನೆಯ್ಯೇರಿಕೆ ರಿಚುಯಲ್ಲಿನ ಚರ್ಚೆಯಲ್ಲ. ಆ ರಿಚುಯಲ್ಲಿನಲ್ಲಿ ತುಪ್ಪ ಎಣ್ಣೆಯನ್ನು ಏಕೆ ಬಳಸುತ್ತಾರೆ, ಮುಖ್ಯವಾಗಿ ಬಾಣದ ಅರ್ಥವೇನು, ಉದ್ದೇಶವೇನು, ಆ ರಿಚುಯಲ್ಲಿನ ಪ್ರಾದೇಶಿಕ ವೈವಿಧ್ಯ, ಎಡಕ್ಕೆ ಬಲಕ್ಕೆ ಇತ್ಯಾದಿ ಗಂಡು ಹೆಣ್ಣಿಗೆ ಏರಿಸುವ, ಇಳಿಸುವ ಸಾಂಕೇತಿಕ ಅರ್ಥಗಳೇನು ಇತ್ಯಾದಿಗಳ ಚರ್ಚೆ ಸ್ವಾರಸ್ಯವಾಗಿರಬಹುದಾದರೂ, ಈ ಪ್ರಬಂಧವನ್ನು ಒಂದು ಅನುಭವ ಕಥನವೆಂದು ಮಾತ್ರ ಬರೆದಿದ್ದೇನೆ. ಒಂದು ಉಕ್ತಿಯ ಅರ್ಥದ ಬೆನ್ನು ಹತ್ತಿ ಹೋಗಿ ಅನೇಕರನ್ನು ಕಂಡು ಕೇಳಿ, ಗೊತ್ತಿಲ್ಲ ಅನ್ನಿಸಿಕೊಂಡು, ವಿಚಾರಿಸುತ್ತೇನೆ ಎಂಬ ಭಾಷೆ ಪಡೆದು, ಅರ್ಥ ತಿಳಿಯುವ ಸೂಚನೆ ಕಂಡಾಗ ಅದನ್ನು

ಮುಂದುವರಿಸಿ, ಅಂತೂ ಕಣ ಕಣವಾಗಿ ಆ ಉಕ್ತಿಯ ಅರ್ಥ ಮೆಲ್ಲಗೆ ಬೆಳೆಯುತ್ತ ವಿಶದವಾಗುತ್ತ ಬಂದ ಕತೆಯನ್ನು ಇಲ್ಲಿ ಹೇಳಿದ್ದೇನೆ. ಇದೇನು ಭಾರಿ ಮಹತ್ವದ ಶೋಧವೆಂದು ನಾನು ಭಾವಿಸಿಲ್ಲ. ಅಥವಾ ಇದು ಮಹತ್ವದ ಶೋಧವೂ ಹೌದು; ಒಬ್ಬ ಸಂಶೋಧಕನಿಗೆ ಎಲ್ಲವೂ ಮಹತ್ವದ ಶೋಧಗಳೇ. ಗೊತ್ತಿಲ್ಲದ್ದನ್ನು ಗೊತ್ತುಪಡಿಸಿ ಜ್ಞಾನವನ್ನು ಹೆಚ್ಚಿಸುವ ಅಥವಾ ಅಜ್ಞಾನವನ್ನು ಕಡಮೆ ಮಾಡುವ ಎಲ್ಲ ಪ್ರಯತ್ನಗಳೂ ಸಮಾನ ಬೆಲೆಯುಳ್ಳವು. ನನಗೆ ಒಂದು ಸಮಸ್ಯೆ ಹೊಳೆದದ್ದು, ಅದರ ಹುಚ್ಚನ್ನು ತಲೆಗೆ ಹಚ್ಚಿಕೊಂಡು ಹುಡುಕಿದ ರೀತಿ, ಒಂದು ಸನ್ನಿವೇಶ ನನ್ನನ್ನು ಇನ್ನೊಂದಕ್ಕೆ ಒಯ್ದದ್ದು, ಅರ್ಥ ಕತ್ತಲಲ್ಲಿದ್ದುದು ಕ್ರಮೇಣ ನಿಧಾನವಾಗಿ ಬೆಳಕಿಗೆ ಬಂದದ್ದು, ಒಂದರಲ್ಲಿ ಪಡೆದ ಸಂತೋಷ ಹೆಚ್ಚಿನ ಪ್ರಯತ್ನಕ್ಕೆ ಪ್ರಚೋದನೆ ನೀಡಿದ್ದು, ಕೊನೆಗೆ ದೊರೆತ ಒಂದು ಕೃತಕೃತ್ಯ ಭಾವನೆ ಇವು ನನ್ನೊಬ್ಬನ ಅನುಭವ ಅಲ್ಲ, ಎಲ್ಲ ಸಂಶೋಧಕರ ಅನುಭವಗಳೂ ಆಗಿವೆ. ನಿರಂತರ ಯತ್ನ, ಸದಾ ಎಚ್ಚರದ ಮನಸ್ಸುಗಳಿದ್ದರೆ ಯಾವನೇ ವ್ಯಕ್ತಿ ಒಳ್ಳೆಯ ಸಂಶೋಧಕನಾಗಬಲ್ಲ ಎಂಬ ವಿಶ್ವಾಸ ಇನ್ನೂ ದೃಢವಾಗುತ್ತಲೇ ನಡೆದಿದೆ.

## ಪಾಂಡಿತ್ಯರಸದ ಕೆಲವು ಹನಿಗಳು

ತೊಗರಿಬೇಳೆ ಹೋಳಿಗೆಗೆ ರಸಪೂರಿ ಮಾವಿನಹಣ್ಣಿನ ಸೀಕರಣೆ, ಮೇಲೆ ತುಪ್ಪ ಸುರಿದು ಸವಿದ ಒಂದು ಅನುಭವ. ಸೊಲ್ಲಾಪುರ ಜಿಲ್ಲೆಯ ಶಾಸನಗಳನ್ನು ಓದುತ್ತಿರುವಾಗ ಸು. 1200ರ ಒಂದು ಶಾಸನದ ಕೊನೆಯಲ್ಲಿ ವಿವಾಹ ಪುರಾಣವೆಂಬ ಮಾತನ್ನು ಕಂಡು ಕುತೂಹಲ ಹುಟ್ಟಿತು. ಶಿವ ಗಿರಿಜೆಯರ ವಿವಾಹದ ಜಾನಪದ ಕತೆಯೊಂದು ಕುಂಬಾರರ ಕುಲೋತ್ಪತ್ತಿಗೆ ಸಂಬಂಧಪಟ್ಟುದಾಗಿದ್ದು ಅದು ಕನ್ನಡ ಜಾನಪದ ಕ್ಷೇತ್ರಕ್ಕೆ ಒಂದು ಮಹತ್ವದ ಕೊಡುಗೆ ಎನ್ನಿಸಿತು. ಬ್ರಾಹ್ಮಣರ ರಾಜರ ಅಧಿಕಾರಿಗಳ ಶ್ರೀಮಂತ ವರ್ತಕರ ಪ್ರಶಂಸೆಯ ವಿಷಯಗಳೇ ಶಾಸನಗಳಲ್ಲಿ ಬರುವುದಾಗಿದ್ದು ಕುಂಬಾರರಂತಹ ಸಾಮಾನ್ಯ ವರ್ಗದ ಕತೆ, ಅದರಲ್ಲೂ ಅವರ ಕುಲೋತ್ಪತ್ತಿಯ ಕತೆ ಅಲ್ಲಿದ್ದುದು ಅಪೂರ್ವವೆನ್ನಿಸಿತು. ಮತ್ತು ಅದು ಕನ್ನಡದ ಮೊತ್ತಮೊದಲ ಶಾಸನಸ್ಥ ಅಪೂರ್ವ ಜಾನಪದ ಕತೆಯೆಂಬ ಪ್ರಾಮುಖ್ಯವನ್ನು ಪಡೆದಿದೆಯೆಂಬುದೂ ಗಮನಾರ್ಹವಾಗಿತ್ತು. ಸಾಲುಸಾಲಾಗಿ ಶಿಲೆಯ ಮೇಲೆ ಲಿಖಿತವಾದ, ಅದರಂತೆಯೇ ಅಚ್ಚಾಗಿದ್ದ ಶಾಸನ ಪಾಠವನ್ನು ಗಟ್ಟಿಯಾಗಿ ಓದುತ್ತಿರುವಾಗ ಅದರಲ್ಲಿ ಪದ್ಯದ ಲಯವಿರುವ ಭಾವನೆ ಬಂದು ಏಕಾಗ್ರಚಿತ್ತನಾಗಿ ಪರಿಶೀಲಿಸುತ್ತಿರುವಂತೆ ಅದು 'ಷಟ್ಪದ' ಅಥವಾ ಅಂಶಷಟ್ಪದಿ ರೂಪವಾದ ಕೃತಿಯೆಂಬುದು ಲಕ್ಷ್ಯಕ್ಕೆ ಬಂದಾಗ ಆದ ಆನಂದ ಹೇಳತೀರದು. ಸಿಹಿ ಹೋಳಿಗೆಗೆ ತುಪ್ಪ ಸಮೇತ ಮಧುರ ಸೀಕರಣೆ ಹಾಗೂ ಜೇನು ಸುರಿದಂತಾಯ್ತು. ಅದು ಈಗಿನ ಕರ್ನಾಟಕದ ಹೊರಗೆ ದೊರೆತ ಎರಡನೆಯ 'ಷಟ್ಪದ'ದ ಉದಾಹರಣೆಯಾಗಿದ್ದು (ಮೊದಲನೆಯದು ಮೆಹಬೂಬ್ ನಗರ ಜಿಲ್ಲೆಯದು; ಇದು ಸೊಲ್ಲಾಪುರ ನಗರದ್ದು ಎರಡೂ ಹಿಂದೆ ಅಚ್ಚಗನ್ನಡ ಪ್ರದೇಶವಾಗಿದ್ದುವು) ಅದು ಮೊತ್ತಮೊದಲ ಪೂರ್ಣ ಪ್ರಮಾಣದ ಏಕೈಕ 'ಷಟ್ಪದ' ಕಾವ್ಯವಾಗಿತ್ತು. ಕನ್ನಡ ಜಾನಪದ

ಮತ್ತು ಛಂದಸ್ಸಿನ ಚರಿತ್ರೆಯಲ್ಲಿ ಅಗ್ರಸ್ಥಾನವನ್ನು ಪಡೆಯಲಿದ್ದ ಶಾಸನವನ್ನು, ಅರ್ಥಾತ್ ಅಚ್ಚಾಗಿದ್ದ ಶಾಸನಪಾಠದ ಮಹತ್ವವನ್ನು ನಾನು ಗುರುತಿಸಿದಂತಾಯಿತು. ಅಲ್ಲಿದ್ದ ಕೆಲವು ಕುಂಬಾರಿಕೆ ವೃತ್ತಿಯ ಪಾರಿಭಾಷಿಕ ಪದಗಳಿಗೆ ಅರ್ಥಗಳು ಹಂಪಿ ಪಕ್ಕದ ಕಾಮಲಾಪುರದ ಕುಂಬಾರರ ಒಂದು ಮನೆಯವರಿಂದ ದೊರಕಿದುವು.

1965-66ರ ಸುಮಾರಿನಲ್ಲಿ Illustrated Weekly of India ವಾರಪತ್ರಿಕೆ ಓದುತ್ತಿದ್ದೆ. ಅದರಲ್ಲಿ ಗೋವೆಯ ಪಣಜಿ ಸಮೀಪದ ಊರೊಂದರ (ಹೆಸರು ಮರೆತಿದೆ) ಒಂದು ದೇವಾಲಯದ - ಬಹುಶಃ ಮಂಗೇಶ್ ದೇವಾಲಯವಿರಬೇಕು - ವ್ಯಾಜ್ಯವು ನ್ಯಾಯಾಲಯದ ಕಟ್ಟೆ ಹತ್ತಿದುದರ ಬಗ್ಗೆ ಸಚಿತ್ರ ಲೇಖನವಿತ್ತು. ದೇವಾಲಯದ ಕಂಬವೊಂದಕ್ಕೆ ಒಬ್ಬ ಅರ್ಚಕ ಒರಗಿ ಕುಳಿತಿದ್ದ ಚಿತ್ರದ ಕೆಳಗೆ, ಇದು ಅರ್ಚಕನ ಚಿತ್ರವೆಂದು ಹೇಳಿ ಅರ್ಚಕರ ಬಗ್ಗೆ "....they call themselves Naklishas" ಎಂದು ಅಚ್ಚಾಗಿದ್ದುದನ್ನು ನೋಡುತ್ತಲೇ ನನ್ನ ಒಳಗಿದ್ದ ಸಂಶೋಧಕ ಒಂದು ಕ್ಷಣ ಎದ್ದು ಕೂತ. ಹನ್ನೊಂದು ಹನ್ನೆರಡನೆಯ ಶತಮಾನಗಳಲ್ಲಿ ಪ್ರಬಲವಾಗಿದ್ದ ಲಕುಲೀಶ (ನಕುಲೀಶ) ಶೈವಪಂಥ ಮುಂದೆ ಕಣ್ಮರೆಯಾಯ್ತು ಅಥವಾ ವೀರಶೈವದಲ್ಲಿ ವಿಲೀನವಾಯ್ತು. ಆದರೆ ಆ ಪರಂಪರೆಯ ಜನ ಈಗಲೂ ಇರುವುದು ವಿಸ್ಮಯದ ಸಂಗತಿಯಾಗಿದ್ದುದಲ್ಲದೆ ಅವರ ಅಧ್ಯಯನ ಹಿಂದಿನ ಶಾಸನಸ್ಥ ಪಂಥದ ಮೇಲೆ ಹೆಚ್ಚಿನ ಬೆಳಕನ್ನು ಬೀರಬಹುದೆನ್ನಿಸಿತು. ನಾನಿನ್ನೂ ಗೋವೆಯ ಕಡೆ ಹೋಗಲಾಗಿಲ್ಲ. ಆಗಲೇ ಹೋಗಿದ್ದರೆ ಪ್ರವಾಸವೂ ಆಗುತ್ತಿತ್ತು, ಪ್ರಯಾಸವೂ ಆಗುತ್ತಿರಲಿಲ್ಲ. ಈಗಲೂ ಅಲ್ಲಿಗೆ ಹೋಗಿ ಅವರನ್ನು - ಅವರ ಹೊಸ ಪೀಳಿಗೆಯ ವಂಶಸ್ಥರಿಗೆ ಪರಂಪರೆಯ ಬಗ್ಗೆ ಅರಿವಿದ್ದರೆ, ಅವರ ಬಳಿ ಏನಾದರೂ ಸಂರಕ್ಷಿತ ದಾಖಲೆಗಳಿದ್ದರೆ ಪರಿಶೀಲಿಸುವ ಉತ್ಸಾಹವೇನೂ ಕಡಮೆಯಾಗಿಲ್ಲ.

1980ರ ಫೆಬ್ರವರಿಯಲ್ಲಿ (16.2.1980) ನಡೆದ ಪೂರ್ಣ ಸೂರ್ಯ ಗ್ರಹಣವು ಎಷ್ಟರಮಟ್ಟಿನ ಸಮೂಹ ಮಾಧ್ಯಮಗಳ ಪ್ರಚಾರವನ್ನು ಪಡೆಯಿತೆಂದರೆ ಅದನ್ನು ಇಡೀ ಭಾರತ ಕಾತರದಿಂದ, ಅದಕ್ಕಿಂತ ಭೀತಿಯಿಂದ ಎದುರು ನೋಡುತ್ತ ಆ ಭಯಾನಕ ಗಳಿಗೆಯು ಕಳೆದುಹೋದರೆ ಸಾಕಪ್ಪ ಎಂಬ ಭಾವನೆಯನ್ನು ಎಲ್ಲೆಡೆ ಮೂಡಿಸಿತ್ತು. ಜಾನಪದ ಮತ್ತು ಸಮಕಾಲೀನ ಸಾಮಾಜಿಕ ಬದುಕಿನ ವಿದ್ಯಾರ್ಥಿಯಾದ ನನಗೆ ಆ ಘಟನೆ ಮೊದಲೇ ಮೂಡಿಸಿದ್ದ, ಗ್ರಹಣ ಸಮಯದಲ್ಲಿ ಮೂಡಿಸುವ, ಗ್ರಹಣವಾದ ಮೇಲೆ ಜನಗಳಲ್ಲಿ ಮೂಡುವ ಪ್ರತಿಕ್ರಿಯೆಗಳನ್ನು ಅಧ್ಯಯನ ಮಾಡಿ ಸಂಪ್ರದಾಯ ಮತ್ತು ಆಧುನಿಕತೆಗಳ ಮಿಶ್ರಕಾಲದಲ್ಲಿ ಬದುಕುತ್ತಿರುವ ಭಾರತೀಯ ಮನಸ್ಸನ್ನು ಹೆಚ್ಚು ಅರ್ಥಪೂರ್ಣವಾಗಿ ಗ್ರಹಿಸಬಹುದೆನ್ನಿಸಿತು. ಅದಕ್ಕಾಗಿ ಎಂ.ಎ. ವಿದ್ಯಾರ್ಥಿಗಳ ಪ್ರವಾಸವನ್ನು ಆ ಸಮಯಕ್ಕೆ ಹೊಂದಿಸಿಕೊಂಡು ಅವರೊಡನೆ ಬನವಾಸಿ ಪಕ್ಕದ ಸಿರ್ಸಿಗೆ ಹೋಗಿ ಅಲ್ಲಿ ಪ್ರತ್ಯಕ್ಷವಾಗಿ ಪೂರ್ಣಗ್ರಹಣವನ್ನು ಕಂಡೆ. ಮಧ್ಯಾಹ್ನ ಬರಿಗಣ್ಣಿಗೆ ಸೂರ್ಯ ಕೆಲಕಾಲ ಪೂರ್ಣ ಮರೆಯಾಗಿ ಮಬ್ಬುಗತ್ತಲೆ ಆವರಿಸಿ ನಕ್ಷತ್ರಗಳು ಕಾಣಿಸಿದಾಗ ಹುಡುಗ ಹುಡುಗಿಯರ ಜೊತೆ ನಾನೂ ಕೇಕೆ ಹಾಕಿದ್ದು ಒಂದು ವಿಶೇಷ ಘಟನೆ. ಆ ಎಲ್ಲವನ್ನು ನನ್ನ ಪುಸ್ತಕದಲ್ಲಿ ವರ್ಣಿಸಿದ್ದೇನೆ.

ಗ್ರಹಣ ಮುಗಿದು ಬೆಂಗಳೂರಿಗೆ ವಾಪಸಾದ ಮೇಲೆ ಪ್ರಶ್ನಾವಳಿ ಸಮೇತ ಹಲವರನ್ನು, ಖಗೋಳ ವಿಜ್ಞಾನಿಗಳಿಂದ ಹಿಡಿದು ಕೊಳೆಗೇರಿಯ ಹೆಂಗಸರವರೆಗೆ ಹಲವು ಬಗೆಯ ಜನರನ್ನು, ಮಾಟಮಂತ್ರ ಬಲ್ಲವರನ್ನು, ಉತ್ತರ ಕರ್ನಾಟಕದವರನ್ನು ಸಂದರ್ಶಿಸಿ ಮಾಹಿತಿ ಸಂಗ್ರಹಿಸಿದೆ. ಆ ಸಮಯದಲ್ಲೇ ನನಗೆ "ಕಬ್ಬಿಣ" ಪದವು ತನ್ನಲ್ಲಿ ಲೋಹವಿಜ್ಞಾನದ ಇತಿಹಾಸವನ್ನೇ ಗರ್ಭೀಕರಿಸಿಕೊಂಡಿರುವ ಸಂಗತಿ ಸೂಚಿತವಾಗಿ ಆ ಬಗ್ಗೆ ಲೇಖನವನ್ನೂ ಬರೆದೆ. ಅಂತರಶಿಸ್ತೀಯ ("ಅಂತರ್‌ಶಿಸ್ತೀಯ" ಅಲ್ಲ) ಅಧ್ಯಯನದ ಒಂದು ಮಾದರಿಯಾಗಿ ವಿದ್ವಾಂಸರು ಆ ಸಂಪ್ರಬಂಧವನ್ನು ಗಮನಿಸಬಹುದು.

ಹಿಂದೆ ಬೇರೆ ಬೇರೆ ಸಂದರ್ಭಗಳಲ್ಲಿ ನೇಪಾಳ, ಗೋವೆಗೆ ಹೋಗಿ ಬಂದರೆ ಹಲವು ಹೊಸ ವಿಷಯಗಳನ್ನು ಪತ್ತೆ ಮಾಡಲು ಸಾಧ್ಯವೆಂಬುದನ್ನು ಸೂಚನೆ ಮಾಡಿದ್ದೇನೆ. ಕರ್ನಾಟಕದಲ್ಲೇ ಅಂತಹ ಆಸೆ ಮೂಡಿಸಿರುವ ಕನಿಷ್ಠ ಎರಡು ಜಾಗಗಳಿವೆ : ಒಂದು ಹನ್ಮಿಡಿ (ತಪ್ಪಾಗಿ 'ಹಲ್ಮಿಡಿ' ಎನ್ನುತ್ತಾರೆ), ಇನ್ನೊಂದು ಬಸವಕಲ್ಯಾಣ.

ಶ್ರೀ ಎಂ.ಎಚ್. ಕೃಷ್ಣರವರು ಕಂಡುಹಿಡಿದ 'ಹಲ್ಮಿಡಿ' ಶಾಸನವು ಸಕಾರಣವಾಗಿಯೇ ಪ್ರಸಿದ್ಧವಾಗಿದೆ. ಆ ಊರನ್ನು ಅವರು 'ಹಲ್ಮಿಡಿ' ಎಂದು ಕರೆದುದರಿಂದ ಆ ಹೆಸರೇ ರೂಢಿಗೆ ಬಂದು ಬಿಟ್ಟಿದೆ. ಸುಮಾರು ಹತ್ತು ವರ್ಷಗಳ ಹಿಂದೆ ಆ ಪ್ರದೇಶದ ನನ್ನ ಗೆಳೆಯರೊಬ್ಬರು ಒಂದು ಸ್ವಾರಸ್ಯದ ಸಂಗತಿ ಹೇಳಿದರು. ಹನ್ಮಿಡಿ ಶಾಸನವು ಕನ್ನಡದ ಅತಿ ಪ್ರಾಚೀನ ಶಾಸನವೆಂದು (ಕ್ರಿ.ಶ. 450) ಪ್ರಸಿದ್ಧವಾಗಿರಬಹುದು. ಆದರೆ ಬೇಲೂರು ತಾಲೂಕಿನ ಪರಿಸರದಲ್ಲಿ ಅದು ಹೊಡೆದಾಟದ ಊರೆಂದು ಖ್ಯಾತವಾಗಿದೆ. ಅಲ್ಲಿಯ ವ್ಯಕ್ತಿಗಳು ಬಂದರೆಂದರೆ ಅಧಿಕಾರಿಗಳಿಗೆ ಕಂಪನ ಶುರುವಾಗುತ್ತದೆ - ಏನೋ ಅನಾಹುತವಾಗಿದೆಯೆಂದೇ ಅವರಿಗೆ ಗುಮಾನಿ ಬಂದಿರುತ್ತದೆ! ಈ ಸಂಗತಿ ಸ್ವಲ್ಪ ಉತ್ಪ್ರೇಕ್ಷಿತವಾಗಿದ್ದಿರಬಹುದು. ಅವರೇ ಹೇಳಿದ್ದು - ಆ ಊರಿನ ನಿಜವಾದ ಹೆಸರು ಹನ್ಮಿಡಿ (ಹನುಮಿಡಿ), ಹಲ್ಮಿಡಿ ಅಲ್ಲ; ಎಲ್ಲ ಜನರು ಉಚ್ಚರಿಸುವುದೂ ಹನ್ಮಿಡಿ ಎಂದೇ. ಒಂದು ಊರಿನ ನಿಜವಾದ ಹೆಸರೆಂದರೆ ಅದು ಕಾಗದದ ಮೇಲಿರುವುದಲ್ಲ, ಜನರ ನಾಲಗೆ ಮೇಲಿರುವುದು ತಾನೇ!

ಕೆಲವು ವರ್ಷಗಳ ಹಿಂದೆ ಚಿಕ್ಕಮಗಳೂರಿನಲ್ಲಿ ನಡೆದ ಅಖಿಲಭಾರತ ಶರಣ ಸಾಹಿತ್ಯ ಪರಿಷತ್ತಿನ ಸಮ್ಮೇಳನದಲ್ಲಿ ಭಾಗವಹಿಸಿದಾಗ ಹನುಮಿಡಿಯ ಒಬ್ಬ ಯುವಕ ನಾನು ಎಂದೂ ನೋಡದ ಮಾತ್ರವಲ್ಲ ಕೇಳರಿಯದ ಒಂದು ಅತ್ಯಪೂರ್ವ ಶಿವಲಿಂಗವನ್ನು ಎತ್ತಿಕೊಂಡು ಬಂದಿದ್ದ. ಸುಮಾರು ಒಂದು ಒಂದೂವರೆ ಅಡಿಯಷ್ಟು ಎತ್ತರದ ಶಿವಲಿಂಗ ಮೂರ್ತಿಯಲ್ಲಿ ಲಿಂಗದಷ್ಟೇ ಮುಂದಿನ ವೃಷಭನ ಮೂರ್ತಿಗೂ ಪ್ರಾಧಾನ್ಯವಿತ್ತು. ನನಗೆ ಅದನ್ನು ನೋಡಿದೊಡನೆ ಹೊಳೆದದ್ದು ಇದು : ದೇವಾಲಯದ ಕದಲಿಸಲಾಗದ ಭಾರದ ಶಿವಲಿಂಗವು ದೇಹದ ಮೇಲಿನ ಇಷ್ಟಲಿಂಗವಾಗಿ ಪರಿಣಮಿಸಿರುವ ಬೆಳವಣಿಗೆಯ ಮಧ್ಯದ ಮಜಲನ್ನು ಅದು ಸೂಚಿಸುತ್ತಿತ್ತು. ಭಕ್ತರು ದೇವಾಲಯದ ಶಿವಲಿಂಗದ ದರ್ಶನಕ್ಕೆ ದೇವಾಲಯಕ್ಕೇ ಹೋಗಬೇಕು. ದೂರದ ಊರಲ್ಲಿದ್ದವರಂತೂ ಪದೇ ಪದೇ ದರ್ಶನ

ಮಾಡಲಿಕ್ಕೂ ಸಾಧ್ಯವಿಲ್ಲ. ಹೀಗಿರುವಾಗ ಭಕ್ತರು ಅದನ್ನು ಸಂಕ್ಷಿಪ್ತರೂಪಕ್ಕಿಳಿಸಿ ಮನೆಗೆ ತಂದು ಇಟ್ಟು ಪೂಜಿಸುವಂತಹ ಒಂದು ಘಟ್ಟವನ್ನು ನಾವು ಕಲ್ಪಿಸಿಕೊಳ್ಳಬಹುದು. ಆ ಶಿವಲಿಂಗವನ್ನು ಮನೆಯಲ್ಲಿ ವೇದಿಕೆ ಮೇಲೆ ಇಟ್ಟು ಪೂಜಿಸಬಹುದು. ಬೇರೆ ಊರಿಗೆ ಹೋದಾಗ ಅದನ್ನು ಬುಟ್ಟಿ ಅಥವಾ ಪೆಟ್ಟಿಗೆಯಲ್ಲಿ ಕೊಂಡೊಯ್ದು ಪೂಜಿಸಬಹುದು. ಅಕ್ಕಮಹಾದೇವಿ ಅಂತಹ ಶಿವಲಿಂಗವನ್ನು ಪೂಜಿಸುತ್ತಿದ್ದಳು. ಅವಳು ಕೌಶಿಕನ ಅರಮನೆಯನ್ನು ತ್ಯಜಿಸಿ ಹೊರಟಾಗ ವೇದಿಕೆಯಲ್ಲಿ ಪೂಜೆಗೊಳ್ಳುತ್ತಿದ್ದ ಶಿವಲಿಂಗಮೂರ್ತಿಯನ್ನು ಕೊಂಡೊಯ್ದಳು ಎಂದಿದೆ. ಈ ಬಗ್ಗೆ ನಾನು ಹಿಂದೆಯೇ ಪ್ರಸ್ತಾಪಿಸಿದ್ದೇನೆ, ಮತ್ತು ಚಿಂಚಿಣಿಯಂತಹ ಹಲವು ಕಡೆ ಅಂಥ ಶಿವಲಿಂಗಗಳನ್ನು ನೋಡಿದ್ದೇನೆ. ಶ್ರೀಶೈಲ, ಕಾಶಿ, ಸೊಲ್ಲಾಪುರ, ಹಂಪಿಯಂತಹ ಪುಣ್ಯಕ್ಷೇತ್ರಗಳಲ್ಲಿ ಆ ಬಗೆಯ ಶಿವಲಿಂಗಗಳನ್ನು ಮಾಡಿ ಇಟ್ಟಿರುತ್ತಾರೆ. ಅವನ್ನು ಜನರು ತಮ್ಮ ಮನೆಗಳಿಗೆ ತಂದಿಟ್ಟು ಪೂಜಿಸುವ ಪದ್ಧತಿ ಈಗಲೂ ಉಂಟು. "ಸ್ಥಾವರ"ವು, ಎಂದರೆ ಒಂದೇ ಕಡೆ ಇದ್ದುದು "ಜಂಗಮ"ವಾಗಿ, ಒಂದೆಡೆಯಿಂದ ಇನ್ನೊಂದೆಡೆಗೆ ಚಲಿಸುವಂತಹುದಾಗಿ ಮಾರ್ಪಾಟು ಹೊಂದಿದ್ದು ಹೀಗೆ. ಇಂತಹ ಶಿವಲಿಂಗದ ಅಪೂರ್ವ ಮಾದರಿ ಹನ್ಮಿಡಿಯ ಶಿವಲಿಂಗವೆಂದು ನನಗೆ ಅನ್ನಿಸಿತು. ಅದನ್ನು ನೋಡಿದ ಮೇಲೆಯೇ ನನಗೆ ಸ್ಥಾವರಲಿಂಗವು ಜಂಗಮಲಿಂಗವಾಗಿ ಪರಿವರ್ತನೆಗೊಂಡುದರ ಹೊಳಹು ಬಂದದ್ದು. ಆ ಹೊಳಹು ಬಂದ ಮೇಲೆಯೇ ಅಂತಹ ಹಲವು ಶಿವಲಿಂಗಗಳನ್ನು ಗುರುತಿಸುವ ದೃಷ್ಟಿ ಬಂದುದು. ಮೇಲೆ ಹೇಳಿದ ಶಿವಲಿಂಗವಂತೂ ಹಲವು ದೃಷ್ಟಿಯಿಂದ ವಿಶಿಷ್ಟವಾದುದು. ಮುಂದೆ ಪ್ರಜಾವಾಣಿ ಪತ್ರಿಕೆಯಲ್ಲಿ ಅಂತಹುದೇ ಶಿವಲಿಂಗವು ಚಿತ್ರದುರ್ಗ ಜಿಲ್ಲೆಯ ಹಳ್ಳಿಯೊಂದರಲ್ಲಿರುವ ಬಗ್ಗೆ ಸಚಿತ್ರ ಲೇಖನ ಪ್ರಕಟವಾದುದನ್ನು ಓದಿ ಸಂತೋಷಿಸಿದೆ. ಅಂತಹ ಶಿವಲಿಂಗವನ್ನು ಎಲ್ಲ ಕಡೆ ಹೊತ್ತು ಒಯ್ಯುವುದು ಸ್ವಲ್ಪ ಶ್ರಮದಾಯಕವೇ. ಅದನ್ನು ತಲೆ ಅಥವಾ ಭುಜದ ಮೇಲೆ ಹೊರಬೇಕಾಗುತ್ತದೆ. ಅದನ್ನೇ ಅರ್ಧ ಅಂಗುಲಕ್ಕೆ ಒಂದಂಗುಲಕ್ಕೆ ಇಳಿಸಿದರೆ ಇಷ್ಟಲಿಂಗವಾಗುತ್ತದೆ. ಅದನ್ನು ಸದಾ ದೇಹದ ಮೇಲೆ ಧರಿಸಬಹುದು, ಧರಿಸಿಯೇ ಕೆಲಸಗಳನ್ನು ನಿರಾತಂಕವಾಗಿ ಮಾಡಬಹುದು. ತನ್ನ ಇಷ್ಟದೈವದ ನಿತ್ಯ ಸಾನ್ನಿಧ್ಯವೂ ಭಕ್ತನಿಗೆ ದೊರಕಿದಂತಾಗುತ್ತದೆ. (ವೀರಶೈವರು ಧರಿಸುವ ಇಷ್ಟಲಿಂಗದ ಮೇಲ್ಭಾಗದ ಕವಚದೊಳಗೆ ಮೇಲೆ ಹೇಳಿದ ಪುಟ್ಟ ಲಿಂಗವಿರುತ್ತದೆ, ಅದರ ಆಕಾರ ದೇವಾಲಯದ ಲಿಂಗದಂತೆಯೇ ಇರುತ್ತದೆ).

ಸಮ್ಮೇಳನ ಮುಗಿಸಿಕೊಂಡು ವಾಪಸಾಗುವಾಗ ಹೆದ್ದಾರಿಯಿಂದ ಸ್ವಲ್ಪ ದೂರವೇ ಇದ್ದ ಹನ್ಮಿಡಿ ಗ್ರಾಮಕ್ಕೆ ಹೋದೆ. ಅಲ್ಲಿ ಕಾಣಿಸಿದ ಮೂರು ನಾಲ್ಕು ನಾಮಫಲಕಗಳಲ್ಲಿ ಹನುಮಿಡಿ ಎಂದೇ ಇತ್ತು. ಮತ್ತು ಅಲ್ಲಿನ ಜನ ಸ್ವಾಭಾವಿಕವಾಗಿ ಮಾತನಾಡುತ್ತಿದ್ದಾಗಲೂ ಹಾಗೆಯೇ ಉಚ್ಚರಿಸುತ್ತಿದ್ದರು. ಅದೇ ಆ ಊರಿನ ನಿಜವಾದ ಹೆಸರೆಂಬುದು ಖಚಿತವಾಯಿತು. ನ್ಯಾಯವಾಗಿ ಎಲ್ಲ ಬರಹಗಳಲ್ಲಿ ಕಾಣಿಸಿಕೊಳ್ಳಬೇಕಾದುದು ಅದೇ ಹೆಸರು, ಹಲ್ಮಿಡಿ ಅಲ್ಲ ಎಂಬುದನ್ನು ಹೇಳಬೇಕಾಗಿಲ್ಲ.

ಐದನೇ ಶತಮಾನದಷ್ಟು ಹಿಂದಿನ ಶಾಸನವಿರುವ ಆ ಊರನ್ನು ಪ್ರವೇಶಿಸುತ್ತಿದ್ದಂತೆ ಅಂತಹ ಹಳೆಯ ಊರುಗಳ ಎಲ್ಲ ಲಕ್ಷಣಗಳನ್ನೂ ಹೊಂದಿತ್ತು. ಅಲ್ಲಿನ ಬೀದಿಗಳು, ಊರ ಹೊರಗಿನ ಹಳೆಯ ಕೋಟೆ ಗೋಡೆ, ಅಲ್ಲಿನ ಬೇರೆ ಬೇರೆ ಶಿಲ್ಪಗಳು, ಊರ ಹೊರಗಿನ ಗುಡಿಯ ಶಿಲ್ಪಗಳು, ಪ್ರಚಲಿತ ದಂತಕತೆಗಳು ಇವು ತಮ್ಮಲ್ಲಿ ಹುದುಗಿರುವ ಗತಕಾಲದ ಇತಿಹಾಸವನ್ನು ತೋರುತ್ತಿದ್ದುವು, ಸಾರಿ ಹೇಳುತ್ತಿದ್ದುವು, ಅರ್ಹತೆಯಿದ್ದ ವ್ಯಕ್ತಿಗಳಿಗೆ ಕಾಣುವಂತೆ, ಕೇಳುವಂತೆ. ನನ್ನ ದೂರದ ಬಂಧುಗಳು ಅಲ್ಲಿ ಕೆಲವರಿರುವರೆಂದು ಆಮೇಲೆ ತಿಳಿಯಿತು. ಆ ಊರಿಗೆ ಹೋಗಿ ಒಂದೆರಡು ದಿನ ಅಲ್ಲಿದ್ದು ಅಲ್ಲಿನ ಸುತ್ತಮುತ್ತಣ ಪರಿಸರವನ್ನು ತಲಾಷ್ ಮಾಡಿದರೆ ಸಾಂಸ್ಕೃತಿಕ ಮಾಹಿತಿ ರೂಪದ ಚಿನ್ನದ ಗಟ್ಟಿಗಳೇ ಸಿಗುವ ಸಾಧ್ಯತೆ ಉಂಟು ಮಾತ್ರವಲ್ಲ, ಖಂಡಿತ ಸಿಗುತ್ತವೆ. ಅಂತಹ ಶ್ರಮಪೂರ್ಣ ಕೆಲಸವನ್ನು ಕೈಗೊಳ್ಳುವ ಕನಸನ್ನು ನಾನಿನ್ನೂ ದೂರಕ್ಕೆ ಓಡಿಸಿಲ್ಲ, ಓಡಿಸಿದರೂ ಅದು ನನ್ನನ್ನು ಬಹುಶಃ ಬಿಡಲಾರದು.

ಅಂತಹುದೇ ಒಂದು ಅನುಭವ ಬಸವಕಲ್ಯಾಣದ್ದು. ಬಸವಕಲ್ಯಾಣವನ್ನು ಮೊದಲ ಬಾರಿಗೆ ನೋಡಿದುದರ ಹಿನ್ನೆಲೆಯಾಗಿ ಆದ ಮೊದಲ ಅನುಭವ ಬಹು ಅಪೂರ್ವವಾದುದು. ಬೆಂಗಳೂರಿನಿಂದ ಹೈದರಾಬಾದಿಗೆ ವಿಮಾನದಲ್ಲಿ ಹೋದ ನಮ್ಮನ್ನು ಬೀದರಿಗೆ ಸಂಜೆ ವಾಹನದಲ್ಲಿ ಕರೆದೊಯ್ಯುತ್ತಿದ್ದರು. ರಾತ್ರಿ ಸುಮಾರು ಏಳೂವರೆ ಗಂಟೆಗೆ ದಟ್ಟ ಕತ್ತಲಲ್ಲಿ ನಮ್ಮ ಕಾರಿನ ಎದುರೇ ರೈತನೊಬ್ಬನ ಒಂದು ದಷ್ಟಪುಷ್ಟ ಬಿಳಿ ಎತ್ತು - ವೃಷಭ ಎಂದು ಅದನ್ನು ಕರೆಯುವುದೇ ಸರಿ - ನಿಧಾನಕ್ಕೆ ಎಡಗಡೆಯಿಂದ ಬಲಕ್ಕೆ ಹೋಯ್ತು. ಚಾಲಕ ವಾಹನದ ವೇಗ ಕಡಮೆ ಮಾಡಿದ. ಆ ಕಡೆಯ ಕತ್ತಲೆಯಿಂದ ಬಂದು ಬೆಳಕಿನಲ್ಲಿ ಕಾಣಿಸಿ ಮತ್ತೆ ಈ ಕಡೆಯ ಕತ್ತಲಲ್ಲಿ ವೃಷಭ ಮಾಯವಾಯಿತು. ಏಕೋ ಬಸವಣ್ಣನವರ ಜ್ಞಾಪಕ ಬಂದು ಆ ದೃಶ್ಯ ಎಷ್ಟು ಅರ್ಥಪೂರ್ಣವೆನ್ನಿಸಿತು. ನಾನು ಬೀದರಿಗೆ ಉತ್ಸಾಹದಿಂದ ಒಪ್ಪಿಕೊಳ್ಳಲು ಆ ನೆಪದಲ್ಲಿ ಬಸವಕಲ್ಯಾಣವನ್ನು ನೋಡುವ ಅವಕಾಶ ದೊರಕಿದ್ದುದು ಮುಖ್ಯ ಕಾರಣವಾಗಿತ್ತು. ಮೂರನೆಯ ದಿನ ಬಸವಕಲ್ಯಾಣಕ್ಕೆ ಹೋದಾಗ ಶರಣರ ಹೆಸರಿನ ಗವಿಗಳು, ತ್ರಿಪುರಾಂತಕ ಕೆರೆ, ಬಿಲ್ವವನ - ಇವುಗಳನ್ನು ಕಂಡು ಆನಂದಿತನಾದೆ. ಶರಣರು ಇಟ್ಟ ಹೆಜ್ಜೆಯಲ್ಲಿ ನಾನು ಹೆಜ್ಜೆಯಿಟ್ಟು ನಡೆಯುತ್ತಿದ್ದೇನೆ ಎಂಬ ಸಂಭ್ರಮ ನನ್ನದಾಗಿತ್ತು.

ಎರಡನೆಯ ಬಾರಿ ಬಸವಕಲ್ಯಾಣಕ್ಕೆ ಹೋದಾಗ ಹಿಂದಿನ ಭಾವುಕತೆ ಕಡಮೆಯಾಗಿ ಸಂಶೋಧಕನ ದೃಷ್ಟಿಯಿಂದ ನೋಡಲು ಯತ್ನಿಸಿದೆ. ಜಂಬಿಟ್ಟಿಗೆಯ ಮಣ್ಣಿನ ದಿಬ್ಬಗಳಲ್ಲಿ ಕೊರೆದಿದ್ದ ಅಥವಾ ಮೊದಲೇ ಸಹಜವಾಗಿದ್ದ ಶರಣರ ಗವಿಗಳು ಹಿಂದೊಮ್ಮೆ ಆದಿಮಾನವನ ನೆಲೆಗಳಾಗಿದ್ದಿರಲೂಬಹುದು ಎಂದು ಕಲ್ಪಿಸಿಕೊಳ್ಳಲು ಯತ್ನಿಸಿದೆ. ಇನ್ನೊಮ್ಮೆ ಕನ್ನಡ ಕಾರ್ಯಕರ್ತರ ತಂಡದೊಡನೆ ಹೋದಾಗಲೂ ಒಬ್ಬ ಪ್ರವಾಸಿಯಂತೆ ಅವನ್ನು ಕಂಡು ಬಂದೆ. ಎರಡು ಬಾರಿಯೂ ಸಂತೋಷಪಟ್ಟೆನೆಂಬಲ್ಲಿ ಅನುಮಾನವಿಲ್ಲ.

ಈಗ ಸುಮಾರು ಆರೇಳು ವರ್ಷಗಳ ಹಿಂದೆ ನಡೆದ ಶರಣಸಂಗೀತ ಗೋಷ್ಠಿ ವಚನಗೋಷ್ಠಿಗಳಿಗೆ ಬಸವಕಲ್ಯಾಣಕ್ಕೆ ಹೋದವನು ಒಂದು ದಿನ ನಾನೊಬ್ಬನೇ ಭಾರಿ ಮಳೆ ನಿಂತ ಮೇಲೆ ಊರೊಳಗೆ ಸುತ್ತಾಡಿದೆ. ಎರಡನೆಯ ದಿನವೂ ಅಲೆದಾಡಿದೆ. ಎಲ್ಲಿ ನೋಡಿದರೂ ಸಂಶೋಧಕನ ದೃಷ್ಟಿಯಿಂದ ಹೇಳುವುದಾದರೆ ಚಿನ್ನ ಕಾಣಿಸುತ್ತಿತ್ತು. ಊರೊಳಗೆ ಅಲ್ಲಲ್ಲಿ ಹಾಗೇ ಇದ್ದ ಕರಿ ಬಂಡೆ ಕಲ್ಲುಗಳು ಮೂಲತಃ ಆ ಊರ ಹೆಸರು "ಕಲ್ಲಿನ ಪಾಳ್" ಎಂದಿದ್ದು (ಪಾಳ್ - ನಿರ್ಜನ ಪ್ರದೇಶ, ಬಯಲು) ಮುಂದೆ "ಕಲ್ಲಿ ಹಾಳ್" ಆಗಿ (ಶಿವಮೊಗ್ಗ ಜಿಲ್ಲೆಯಲ್ಲಿ ಕಲ್ಲಿಹಾಳು ಎಂಬ ಊರಿದೆ. - ಹಾಳ್, - ಆಳ್ ಎಂದು ಕೊನೆಯಾಗುವ ಹೆಸರ ಊರುಗಳು ಕರ್ನಾಟಕದಲ್ಲಿ ಹಲವಿವೆ) ಅದು ಮುಂದೆ ಚಾಳುಕ್ಯರ ರಾಜಧಾನಿಯಾದಾಗ "ಕಲ್ಯಾಣ" ಎಂದು ಸಂಸ್ಕೃತೀಕರಣಗೊಂಡಿರುವ ಸಾಧ್ಯತೆ ಇದೆ "ಕಲ್" ಎಂಬುದು ಊರ ಪಕ್ಕದ ಕಲ್ಲು ಗುಡ್ಡವನ್ನೂ ಹೇಳಬಹುದು. (ನೋಡಿ, ಕಲ್ಯ) ಹಳೆಯ ಬಸವಕಲ್ಯಾಣದಲ್ಲಿ ಈಗಲೂ ಒಂದೊಂದು ಜಾತಿಯ ಜನರು ಆಯಾ ಕೇರಿ ಅಥವಾ ಭಾಗದಲ್ಲಿ ಒಟ್ಟಾಗಿ ಬದುಕುತ್ತಿದ್ದಾರೆಂದು ತಿಳಿಯಿತು. ಆಧುನಿಕತೆಯಿಂದಾಗಿ ಮಿಶ್ರಜಾತಿಯ ಜನರಿದ್ದರೂ ಅಲ್ಲಿಯ ಬೀದಿಗಳ ಹೆಸರುಗಳು ಅಧ್ಯಯನ ಯೋಗ್ಯ. ಉದಾಹರಣೆಗೆ, ಹಾರೋಗೇರಿ ಎಂಬುದು ಬ್ರಾಹ್ಮಣರೇ ವಾಸಿಸುತ್ತಿದ್ದ, ಈಗಲೂ ಹೆಚ್ಚಾಗಿ ಬ್ರಾಹ್ಮಣರೇ ವಾಸವಾಗಿರುವ ಬೀದಿ. ಇಂತಹ ಅಧ್ಯಯನದಿಂದ ಎಂಟುನೂರು ವರ್ಷಗಳ ಹಿಂದಿನ ಕಲ್ಯಾಣ ಪಟ್ಟಣದ ಜನರು ಗುಂಪುಗಳಾಗಿ ವಾಸಿಸುತ್ತಿದ್ದ ಸ್ಥೂಲ ಚಿತ್ರ ದೊರಕಬಹುದು. ಊರಲ್ಲಿ ಅಡ್ಡಾಡಿ, ಬೆಟ್ಟವನ್ನು ಹತ್ತಿದೆ. ಊರ ಒಳಭಾಗ ಮತ್ತು ಬೆಟ್ಟವನ್ನು ಹತ್ತಿ ನೋಡಿದ್ದು ಅದೇ ಮೊದಲು.

ಬೆಟ್ಟದ ಮೇಲಿನ ಕೋಟೆಯ ಗೋಡೆಗಳ ಕೆಲವು ಭಾಗಗಳು ಈಚಿನವಾದರೂ ಹೆಚ್ಚು ಕಡಮೆ ರಚನೆ ಮಾತ್ರ ಬಸವ ಬಿಜ್ಜಳರ ಕಾಲದ್ದೇ ಎಂದು ಊಹಿಸಲವಕಾಶವಿದೆ. ಆಗಾಗ್ಗೆ ಬಿದ್ದು ಹೋದ ಗೋಡೆಗಳಿಗೆ ಭಗ್ನ ಅವಶೇಷಗಳ ಕಲ್ಲುಗಳನ್ನೇ, ಕೆಲವೊಮ್ಮೆ ಶಿಲ್ಪಗಳನ್ನೇ ಬಳಸಿದ್ದಾರೆ. ಮುಸಲ್ಮಾನ್ ದೊರೆಗಳ ವಶಕ್ಕೆ ಬಂದ ಮೇಲೆ ಆದ ಬದಲಾವಣೆಗಳು ಅವು. ಮೇಲೆ ಕೋಟೆಯೊಳಗಿದ್ದ ಅರಮನೆಯು ಆಗಾಗ್ಗೆ ಮಾರ್ಪಟು ಹೊಂದಿರಬಹುದಾಗಿದ್ದರೂ ಚಾಳುಕ್ಯರ ಅರಮನೆಯ ಜಾಗ ಅದೇ ಆಗಿತ್ತೆಂಬಲ್ಲಿ ಅನುಮಾನವಿಲ್ಲ. ಪೂಜೆ ನಿಂತು ಹೋದ ಚಾಲುಕ್ಯರ ಕಾಲದ ಸುಂದರ ಶಿವದೇವಾಲಯವು ಅದಕ್ಕೆ ಸಾಕ್ಷಿಯಾಗಿದೆ. ಬಿಜ್ಜಳನ ಆಸ್ಥಾನದ ಜಾಗವನ್ನೂ ಊಹಿಸಬಹುದು. ಕೋಟೆಯ ಒಳಗೆ ಕೆಳಭಾಗದಲ್ಲಿ, ಅಲ್ಲಿನ ವಸ್ತು ಸಂಗ್ರಹಾಲಯದಲ್ಲಿ ಇಟ್ಟಿರುವ ಸುಂದರ ಶಿಲ್ಪಗಳು ಚಾಲುಕ್ಯರ ಕಾಲದ ಕಲಾಕೌಶಲಕ್ಕೆ ಸಾಕ್ಷಿಯಾಗಿರುವುದಲ್ಲದೆ ಅವನ್ನೂ ಬಸವಕಲ್ಯಾಣದ ಸಮೀಪವಿರುವ ನಾರಾಯಣಪುರದಂತಹ ಊರುಗಳ ದೇವಾಲಯ ಶಿಲ್ಪಗಳನ್ನೂ ಸೂಕ್ಷ್ಮವಾಗಿ ಅಧ್ಯಯನ ಮಾಡಿದರೆ ಬಸವನ ಕಾಲದ ವೇಷಭೂಷಣ, ವಾದ್ಯಗಳು, ನೃತ್ಯ ಭಂಗಿಗಳು, ಆಯುಧಗಳು ಇಂಥವನ್ನೆಲ್ಲ ಗುರುತಿಸಲು ಸಾಧ್ಯ. ಕೋಟೆ ಹತ್ತಿ ಹೋಗುವಾಗ ಅಲ್ಲಿದ್ದ ಕೆತ್ತನೆ ಕೆಲಸದ ಚೌಕಾಕಾರದ ಕಲ್ಲನ್ನು ತೋರಿಸಿ, ಬಸವಣ್ಣನವರ ಕಸೂತಿ ಕೆಲಸದ ಕರವಸ್ತ್ರ

ಬಿದ್ದ ಗುರುತು ಅದು ಎಂಬ ಕತೆ ಹೇಳುತ್ತಾರೆ. ಊರೊಳಗಿನ 'ಪರುಸಗಟ್ಟೆ'ಯೂ ಅಧ್ಯಯನ ಮಾಡಬೇಕಾದ ಜಾಗ. ಅದರ ಸುತ್ತ ಈಗ ಮುಸಲ್ಮಾನರ ಮನೆಗಳು ಸುತ್ತುವರಿದಿವೆ.

ಬಸವ ಕಲ್ಯಾಣಕ್ಕೆ ಸುಮಾರು ಆರು ಕಿಲೋಮೀಟರ್ ದೂರವಿರುವ ಬಾಲಕಂದ್ ಬೇಟ್ ಎಂದು ನಾಮಫಲಕದಲ್ಲಿ ತೋರಿಸಿರುವ ಜಾಗವೊಂದಿದೆ. ಅದು ಈಗಲೂ ಸ್ಥಳೀಯರ ಬಾಯಲ್ಲಿ ಬಲ್ಲಕುಂದಬೆಟ್ಟ ಎಂದೇ ಕೇಳಿ ಬರುತ್ತದೆ, ಮತ್ತು ಆ ಅರ್ಥಪೂರ್ಣ ಸ್ಥಳೀಯ ಹೆಸರೇ ಅದರ ನಿಜವಾದ ಹೆಸರು. ಬಲ್ಲಕುಂದ ಎಂಬುದು ಅಲ್ಲಿಯ ಗುಡ್ಡದ ಹೆಸರು ಮತ್ತು ಪಕ್ಕದ ಊರಿನ ಹೆಸರೂ ಹೌದು. (ಬಲ್ಲಕುಂದ ಎಂಬುದು ಒಂದು ಸ್ಥಳನಾಮ; ಹಂಪಿ ಇದ್ದುದು ಬಲ್ಲಕುಂದ ನಾಡಿನ ಭಾಗವಾದ ದೊರವದಿ ನಾಡಲ್ಲಿ). ಕುಂದ, ಗುಂದ ಎಂದರೆ ಗುಡ್ಡ, ಬೆಟ್ಟ. 'ಕುಂದ' ಎನ್ನುವುದು ಅರ್ಥವಾಗದೆ ಮತ್ತೆ ಆ ಹೆಸರಿಗೆ ಬೆಟ್ಟ ಸೇರಿಸಿದ್ದಾರೆ (ಆ ಹೆಸರಲ್ಲಿ ಬಾಲ, ಕಂದ, ಬೇಟ್ ಯಾವುದೂ ಇಲ್ಲ. ತಮಾಷೆ ಎಂದರೆ ಈ ಮೂರು ಪದಗಳಿಗೂ ಒಂದೇ ಅರ್ಥ). ಬಲ್ಲಕುಂದಬೆಟ್ಟವು ಜಂಬಿಟ್ಟಿಗೆಯ ವಿಶಾಲವಾದ ಸಮತಟ್ಟಾದ ಒಂದು ಗುಡ್ಡ. ಗುಡ್ಡದ ಮೇಲ್ಭಾಗದಲ್ಲಿ ಅಲ್ಲಲ್ಲಿ ಕುಳಿಗಳನ್ನು ತೋಡಿದ್ದಾರೆ. ಅವು ತಾತ್ಕಾಲಿಕವಾಗಿ ಕಂಬಗಳನ್ನು ನಿಲ್ಲಿಸಿ ಮೇಲೆ ಚಪ್ಪರ ಕಟ್ಟಲು ಬಳಕೆಯಾಗುತ್ತಿದ್ದಿರಬಹುದು. ಆ ಗುಡ್ಡದ ಮೇಲ್ಭಾಗದಲ್ಲಿ ಬಸವಣ್ಣ 'ಲಕ್ಷದ ಮೇಲೆ ತೊಂಬತ್ತಾರು ಸಾವಿರ ಜಂಗಮರಿಗೆ' ದಾಸೋಹವನ್ನು ನಡೆಸುತ್ತಿದ್ದನೆಂದು ಕತೆಯಿದೆ. ಅಲ್ಲಿ ಏಳುನೂರು ಎಂಟುನೂರು ವರ್ಷಗಳ ಹಿಂದಿನ ಗುಡಿಯೊಂದಿದ್ದು ಅಲ್ಲಿಂದ ಬಸವಕಲ್ಯಾಣ, ಅದರ ಕೋಟೆಯ ದೃಶ್ಯ ನಯನ ಮನೋಹರವಾಗಿರುತ್ತದೆ. ಸಮೃದ್ಧ ಅಂತರ್ಜಲದ ಅನುಕೂಲವಿರುವ ಪ್ರದೇಶ ಅದು. ಐತಿಹಾಸಿಕ ಶೋಧಕ್ಕೆ ಒಳಗಾಗಬೇಕಾಗಿರುವ ಜಾಗಗಳಲ್ಲಿ ಅದೂ ಒಂದು. ಶರಣರ ಬದುಕಿಗೆ ಸಂಬಂಧಿಸಿರಬಹುದಾಗಿರುವ ಆ ಸ್ಥಳದ ಪ್ರಾಮುಖ್ಯವನ್ನು ನನಗೆ ತಿಳಿದಂತೆ ಯಾರೂ ಗುರುತಿಸಿಲ್ಲ.

ಈ ಬಾರಿಯ ಬಸವಕಲ್ಯಾಣದ ಭೇಟಿಯ ಸಂದರ್ಭದಲ್ಲಿ ನಾನು ಗಮನಿಸಿದ ಸಂಗತಿಯೆಂದರೆ ವಚನಗಳಲ್ಲಿ ಬರುವ ಎಷ್ಟೋ ನಮಗೆ ಅರ್ಥವಾಗದ ಪದಗಳು, ನಮ್ಮಲ್ಲಿ ಅರ್ಥ ಬದಲಾಗಿದ್ದರೂ ಮೂಲಾರ್ಥವನ್ನು ಉಳಿಸಿಕೊಂಡಿರುವ ಪದಗಳು ಅಲ್ಲಿಯ ಜನರ ಆಡುನುಡಿಯಲ್ಲಿವೆಯೆನ್ನಿಸಿತು. ಉದಾಹರಣೆಗೆ ಕೋಡಗ ಎಂದರೆ ಅಲ್ಲಿ ಬರೀ ಕೋತಿ ಅಲ್ಲ, ಕಪ್ಪು ಮೂತಿಯ ಮುಸಿಯ. "ಮಾಲಗಾರ" ಎಂದರೆ ಮಾಲೆಗಾರ ಅಥವಾ ಹೂವಾಡಿಗ ಅಲ್ಲ, ತರಕಾರಿ ಬೆಳೆಯುವ ತೋಟಿಗ ("ಮಾಲಗಾರನೇಸು ಭಕ್ತನಾದಡೆಯೂ ಬಾವಿಯ ಬೊಮ್ಮನ ಹಂಗ ಬಿಡ"). ಮುಖ್ಯವಾಗಿ ಆ ಪ್ರದೇಶದ ಉಪಭಾಷೆಯ ಅಧ್ಯಯನ ಇಂದಿನ ಕನ್ನಡದ ವೈವಿಧ್ಯವನ್ನು ತಿಳಿಯುವ ದೃಷ್ಟಿಯಿಂದ ಮಾತ್ರವಲ್ಲ, ವಚನಗಳ ವಾಚ್ಯಾರ್ಥವನ್ನು ಸರಿಯಾಗಿ ಗ್ರಹಿಸಲೂ ಸಹಾಯ ಮಾಡುತ್ತದೆ (ವಾಚ್ಯಾರ್ಥ ತಿಳಿದರೆ ತಾನೇ ಧ್ವನ್ಯರ್ಥಕ್ಕೆ ಹೋಗುವುದು).

ಹುಮ್ನಾಬಾದ್ ಬಸವಕಲ್ಯಾಣ ರಸ್ತೆಯ ಬಲಬದಿಯ ಮೋಳಕೇರ ಗ್ರಾಮದ ಹೊರವಲಯದಲ್ಲಿರುವ ಮೋಳಿಗೆ ಮಾರಯ್ಯನ ಗವಿ ಒಂದು ವಿಲಕ್ಷಣ ರಚನೆ. ಜಂಬಿಟ್ಟಿಗೆ

ಭೂಮಿಯನ್ನು ಕೊರೆದು ನೆಲದೊಳಗೆ ವಾಸದ ಮನೆ ಮಾಡಲಾಗಿದೆ. ಅಲ್ಲಿ ಮೋಳಿಗೆ ಮಾರಯ್ಯನಿದ್ದ ಎಂದು ಸ್ಥಳ ಐತಿಹ್ಯ ಹೇಳುತ್ತದೆ. ಆ ಇಡೀ ಪ್ರದೇಶದಲ್ಲಿ ಶರಣರ ಬಗ್ಗೆ ಅಂತಹ ಐತಿಹ್ಯಗಳಿರುವುದನ್ನು ಉಪೇಕ್ಷಿಸದೆ ಅವನ್ನೂ ಪರಿಶೀಲಿಸುವ ಅಗತ್ಯವಿದೆ.

ಭಾರತದ ಮತೀಯ ಪಂಥಗಳಲ್ಲಿ ಕಾಪಾಲಿಕದಷ್ಟು ವಿಶೇಷ ಗಮನ ಸೆಳೆದಿರುವಂತಹುದು ಮತ್ತೊಂದಿಲ್ಲ. ಕಾಪಾಲಿಕ ಸನ್ಯಾಸಿಗಳು ಸ್ಮಶಾನದಲ್ಲಿ ವಾಸಿಸುತ್ತಿದ್ದು ಮೈಗೆ ಬೂದಿ ಬಳಿದುಕೊಂಡು ಮೈಮೇಲೆ ಎಲುಬುಗಳನ್ನು ಧರಿಸಿ ನರಕಪಾಲದಲ್ಲಿ ಆಹಾರ ಸ್ವೀಕರಿಸುತ್ತಿದ್ದರು ಮಾತ್ರವಲ್ಲ, ಮಾಟಮಂತ್ರಗಳಲ್ಲಿ ನಿರತರಾಗಿದ್ದ ಅವರು ದೇವರಿಗೆ ನರಬಲಿ ಕೊಡುತ್ತಿದ್ದರು ಎಂಬಂತಹ ವರ್ಣನೆಗಳೂ ದೊರಕುತ್ತದೆ. ಅಂತಹ ವರ್ಣನೆಗಳು ಉತ್ಪ್ರೇಕ್ಷಿತವೆಂದಿಟ್ಟುಕೊಂಡರೂ ಜನರು ಅವರನ್ನು ಕಂಡರೆ ಭಯಪಡುತ್ತಿದ್ದರು. ಇಂದಿಗೂ ಬಂಗಾಳದಲ್ಲಿ (ಅಲ್ಲಿ ಹಿಂದೆ ಉಳಿದ ಕಡೆಗಳಿಗಿಂತ ಹೆಚ್ಚು ವಾಮಾಚಾರ ಮಾರ್ಗಿಗಳಿದ್ದರು) ಒಬ್ಬ ವ್ಯಕ್ತಿ ಕಾಪಾಲಿಕನೆಂದು ತಿಳಿದರೆ, ಅಂತಹ ಹೆಸರನ್ನು ಹೊತ್ತರೆ ಅವನನ್ನು ಜನ ಅಲ್ಲೇ ಕೊಲ್ಲುತ್ತಿದ್ದರೆಂದು ತಿಳಿದುಬರುತ್ತದೆ. ಆ ಕಾಪಾಲಿಕರಿಗೂ ನಾಥ ಅಥವಾ ಸಿದ್ಧ ಪಂಥೀಯರಿಗೂ ಹತ್ತಿರದ ಸಂಬಂಧವಿತ್ತು. ಆ ಪಂಥದ ಕೇಂದ್ರಗಳಲ್ಲಿ ಮಂಗಳೂರು ನಗರ ಮಧ್ಯದ ಕದ್ರಿಗುಡ್ಡದ ಮೇಲಿನ ನಾಥಪಂಥೀಯ ಗುಹೆಗಳು ಪ್ರಸಿದ್ಧ. ಇಂದಿಗೂ ಅಲ್ಲಿ ಉತ್ತರ ಭಾರತದ ಸಾಧುಗಳಿದ್ದಾರೆ. ನಾನು ಅಲ್ಲಿಗೆ ಗೆಳೆಯರ ಜೊತೆ ಮೊದಲ ಸಲ ಹೋದಾಗ ಗುಹೆಗಳನ್ನು ಭಯದಿಂದ ಪ್ರವೇಶಿಸಿದ್ದಲ್ಲದೆ ನಾಥಸಿದ್ಧರ ಜೊತೆ ಮಾತನಾಡುವಾಗಲೂ ಆ ಭಯ ಹೋಗಿರಲಿಲ್ಲ. ಅಲ್ಲಿದ್ದವರು ಯಜ್ಞಕುಂಡದಲ್ಲಿದ್ದ ಬೂದಿ ಬಳಿದುಕೊಂಡು ಹುಕ್ಕ ಸೇದುತ್ತಿದ್ದರು. ಆ ಕದ್ರಿಯ ನಾಥಪಂಥದವರ ಹತೋಟಿಯಲ್ಲಿ ಮೊದಲು ನಾಗಮಂಗಲ ತಾಲೂಕಿನ ಆದಿಚುಂಚನಗಿರಿ ಮಠವಿದ್ದು, ಅದರ ಒಡೆತನ ವಿವಾದಕ್ಕೊಳಗಾಗಿ ನ್ಯಾಯಾಲಯದ ಕಟ್ಟೆ ಹತ್ತಿ ಬಹುಕಾಲ ಅಲ್ಲಿ ವಾದಗಳು ನಡೆದು ಒಕ್ಕಲಿಗರು ಆ ಮೊಕದ್ದಮೆಯಲ್ಲಿ ಅಂತಿಮವಾಗಿ ಜಯ ಗಳಿಸಿದರು. ಈಗಲೂ ಅಲ್ಲಿಯ ಮಠಾಧ್ಯಕ್ಷರೆಲ್ಲರೂ ಪಳೆಯುಳಿಕೆ ರೂಪದ "ನಾಥ" ಎಂಬುದನ್ನು ತಮ್ಮ ಹೆಸರಲ್ಲಿ ಸೇರಿಸಿಕೊಂಡಿರುವುದು ಒಂದು ಐತಿಹಾಸಿಕ ಕುರುಹು. ಇದೂ ಎಲ್ಲರಿಗೂ ತಿಳಿದ ಪ್ರಸಿದ್ಧ ವಿಷಯ. ಈ ಮಧ್ಯೆ "ಆದಿಚುಂಚನಗಿರಿ ಮಹಾತ್ಮ್ಯ" ಎಂಬ 1900ರ ಸುಮಾರಿನ ಪದ್ಯಕೃತಿಯು ಆ ಮಠವು ನಾಥ ಪಂಥೀಯರ ಕೈಯಲ್ಲಿತ್ತು ಎಂಬುದನ್ನೂ ಹೇಳುತ್ತದೆ. ಅದನ್ನು ಈಗಾಗಲೇ ನನ್ನ ಬರಹಗಳಲ್ಲಿ ಪ್ರಸ್ತಾಪಿಸಿದ್ದೇನೆ.

ಆದಿಚುಂಚನಗಿರಿಯ ಸುತ್ತಮುತ್ತಣ ಹಳ್ಳಿಗಳಲ್ಲಿ ಕಾಪಾಲಿಕ ಎಂಬ ಜಾತಿಯ ಜನರಿರುವ ವಿಷಯ ಕೇಳಿದಾಗ ತೀರ ಆಶ್ಚರ್ಯಚಕಿತನಾದೆನೆಂದೇ ಹೇಳಬೇಕು. ಆದಿಚುಂಚನಗಿರಿ ಸಂಸ್ಥಾನವು ನಡೆಯಿಸುತ್ತಿರುವ ವಿದ್ಯಾಸಂಸ್ಥೆಯಲ್ಲಿ ಕೆಲಸ ಮಾಡುತ್ತಿರುವ ನನ್ನ ವಿದ್ಯಾರ್ಥಿ ಮಿತ್ರರಿಗೆ ತಿಳಿಸಿ ಆಚಾರ್ಯ ಬಿ.ಎಂ.ಶ್ರೀ. ಅವರ ಬೆಳ್ಳೂರು ಮೂಲಕ ಆದಿಚುಂಚನಗಿರಿಗೆ ಹೋದೆ. ಅಲ್ಲಿನ ಬೆಟ್ಟವು ದೂರಕ್ಕೆ ರೋಮನ್ ಕ್ಯಾಸಲ್ ಒಂದನ್ನು ನೆನಪಿಗೆ ತರುವಂತಿತ್ತು. ಅಲ್ಲಿ ಕೋಟೆ ಇಲ್ಲದಿದ್ದರೂ ಅದೊಂದು ಎತ್ತರದ ಸುಂದರ ಬೆಟ್ಟ. ಪೂಜ್ಯ ಶ್ರೀ ಗಂಗಾಧರನಾಥ

ಸ್ವಾಮೀಜಿಯವರ ದರ್ಶನವಾಯಿತು. ಅಲ್ಲಿನ ಭೈರವೇಶ್ವರ ದೇವಾಲಯ ಇತ್ಯಾದಿಗಳನ್ನು ನೋಡಿ, ಇಡೀ ಬೆಟ್ಟ ತನ್ನಲ್ಲಿ ಯಾವುದೋ ರಹಸ್ಯವನ್ನು ಹುದುಗಿಸಿಕೊಂಡಿದೆಯೆಂಬ ವಾತಾವರಣವು ಅಲ್ಲಿದೆ ಎಂದು ಗುರುತಿಸುತ್ತ ಅಲ್ಲಿದ್ದ ನಾಥಸಿದ್ಧರ ಸಮಾಧಿಗಳನ್ನು ನೋಡಿದೆ. ಅವು ನಾಥಪಂಥೀಯ ಮುನಿಗಳು ಧ್ಯಾನ ಮಾಡುತ್ತಿದ್ದ ಜಾಗಗಳೂ ಆಗಿದ್ದಿರಬೇಕು. ಆ ಸಮಾಧಿಗಳಲ್ಲಿ ಕೆಲವು ಮಾತ್ರ ಉಳಿದಿದ್ದುವು. ಉಳಿದುವು ವಿದ್ಯಾರ್ಥಿಗಳ ಕೋಣೆಗಳಾಗಿ ಪರಿವರ್ತಿತವಾಗುತ್ತಿದ್ದವು. ಹಾಗೇ ಬರುತ್ತಿರುವಾಗ ಶಿಲ್ಪ ಇರುವ ಚೌಕಾಕಾರದ ಕಲ್ಲುಗಳು ಒಂದೆಡೆ ಕಾಣಿಸಿದುವು. ಅವನ್ನು ಪರಿಶೀಲಿಸುತ್ತಿದ್ದಂತೆ ಅವುಗಳ ಮೇಲೆ ಒಂದೆಡೆ ರುಂಡವಿಲ್ಲದ ಮನುಷ್ಯ ದೇಹ, ಪಕ್ಕದಲ್ಲೇ ರುಂಡ, ಇವನ್ನು ಒಂದು ಸರ್ಪ ಸುತ್ತುವರಿದ ಶಿಲ್ಪವಿತ್ತು. ಓದುಗರು ಊಹಿಸಿಕೊಳ್ಳಬಹುದು: ಆ ಪ್ರದೇಶ ಒಮ್ಮೆ ಕಾಪಾಲಿಕರ ಕೇಂದ್ರವಾಗಿತ್ತೆಂಬುದಕ್ಕೆ ಅದೊಂದು ಪ್ರಬಲ ಸಾಕ್ಷ್ಯಾಧಾರವಾಯಿತು. ಆ ನರಬಲಿಯು ಕಾಪಾಲಿಕ ಸಾಧಕರ ಆತ್ಮಬಲಿಯಾಗಿತ್ತೇ ಹೊರತು, ಅನ್ಯರ ಬಲಿ ಆಗಿರಲಿಲ್ಲ. (ನರಬಲಿಗಳು ಹಾಗೆ ಶಿಲ್ಪದಲ್ಲಿ ದಾಖಲಾಗುವುದು ಕಷ್ಟ ಅಥವಾ ಅಸಾಧ್ಯ.) ಆ ಶಿಲ್ಪಗಳು ಎಲ್ಲರೂ ಓಡಾಡುವ ಜಾಗದಲ್ಲೇ ಇದ್ದರೂ ಅವುಗಳಲ್ಲಿನ ಕೆತ್ತನೆಯ ಪ್ರಾಮುಖ್ಯವನ್ನು ಯಾರೂ ಗುರುತಿಸಿರಲಿಲ್ಲ.

ಬೆಟ್ಟದಿಂದ ಇಳಿದು ಸಮೀಪದ ಹಳ್ಳಿಗೆ ಹೋದೆವು. ಅಲ್ಲಿ ಅಲ್ಪಸಂಖ್ಯಾತರಾಗಿದ್ದ ಕಾಪಾಲಿಕ ಜನರ ಜೊತೆ ಕುಳಿತು ಮಾತನಾಡಿದೆವು. ಬೆಟ್ಟದ ಮೇಲಿನ ಭೈರವನ ಪೂಜೆ ಮೂಲತಃ ತಮ್ಮ ಜಾತಿಯವರದಾಗಿತ್ತೆಂದು ಅವರಿಗೆಲ್ಲ ಹೆಮ್ಮೆ, ಅದು ಈಗ ತಪ್ಪಿಹೋಗಿದ್ದುದು ಅದಕ್ಕಿಂತ ಹೆಚ್ಚಿನ ನೋವು ತಂದಿದ್ದಿತು. ಅವರು ಯಾರೂ ಆ ಹಿಂದಿನ ಕಾಪಾಲಿಕರಲ್ಲ, ಎಲ್ಲರಂತೆ ಸಂಪೂರ್ಣ ಸಾತ್ವಿಕ ಜೀವನವನ್ನು ನಡೆಯಿಸುತ್ತಿರುವವರು, ಎಂದೋ ಬಹು ಹಿಂದೆ ನಾಥ - ಕಾಪಾಲಿಕ ಪಂಥದ ಅನುಯಾಯಿಗಳಾಗಿದ್ದವರು. ತಮ್ಮ ಜಾತಿಗೂ ಕಾಪಾಲಿಕ ಎಂಬ ಹೆಸರನ್ನೇ ಉಳಿಸಿಕೊಂಡಿದ್ದಾರೆ. ಅವರ ಸಾಮಾಜಿಕ ರೀತಿ ನೀತಿಗಳ ಬಗ್ಗೆ ಸಾಕಷ್ಟು ಮಾಹಿತಿ ಸಂಗ್ರಹಿಸಿದೆ. ಆ ಜಾತಿಯ ಜನರು ಬೆಂಗಳೂರು ಸಂಪಂಗಿರಾಮ ನಗರದಲ್ಲೂ ಇರುವ ವಿಷಯ ತಿಳಿದು ಅಲ್ಲಿಗೂ ಹೋಗಿ ಅವರ ದೇವಾಲಯದ ಅರ್ಚಕರಿಂದಲೂ ಮಾಹಿತಿ ಸಂಗ್ರಹಿಸಿದೆ. ಆ ಎಲ್ಲ ಟಿಪ್ಪಣಿ ಇನ್ನೂ ಕಡತದಲ್ಲೇ ಉಳಿದಿದೆ. ನರಬಲಿ, ಆತ್ಮಬಲಿಗಳೆರಡನ್ನೂ ಆಚರಣೆಯಲ್ಲಿಟ್ಟುಕೊಂಡ ಭಯಾನಕ ಮತೀಯ ಪಂಥವೊಂದರ ಹೆಸರಿನ ಜಾತಿಯೊಂದು ಕರ್ನಾಟಕದಲ್ಲಿರುವುದು ಇಂಡಾಲಜಿ ಕ್ಷೇತ್ರದಲ್ಲಿ ಒಂದು ವಿಶೇಷ ಸುದ್ದಿಯೇ ಆಗಬಹುದು. ನನಗಂತೂ ಇಡೀ ಶೋಧ ತೃಪ್ತಿ ಕೊಟ್ಟಿತಾದರೂ ಎಲ್ಲವನ್ನೂ ಬರಹಕ್ಕೆ ಇಳಿಸಲಾಗಿಲ್ಲ. ದಾವಣಗೆರೆ ಪಕ್ಕದ ಆವರಗೊಳದ ವೀರಭದ್ರನ ದೇವಾಲಯದ ಮುಂದೆ ತಲೆ ಕತ್ತರಿಸಿಕೊಂಡಿರುವ ಭಕ್ತರ ಶಿಲ್ಪಗಳಿವೆ. ಇಷ್ಟದೈವಕ್ಕೆ ಭಕ್ತರು ಆತ್ಮಬಲಿಯಾಗುವ ಪದ್ಧತಿ ಕಾಪಾಲಿಕೇತರರಲ್ಲೂ ಇತ್ತು. ಹಳೇಬೀಡಿನಲ್ಲೂ ತಲೆ ಕತ್ತರಿಸಿಕೊಂಡಿರುವ ವೀರನ ಶಿಲ್ಪವಿದೆ. ಅದು ಸ್ಪಷ್ಟವಾಗಿ ರಾಜನಿಗಾಗಿ, ರಾಜ ಸತ್ತಾಗ ತಮ್ಮನ್ನು ತಾವು ಬಲಿಕೊಟ್ಟುಕೊಳ್ಳುತ್ತಿದ್ದ ವೇಳೆವಾಳಿಗಳ ಶಿಲ್ಪ. ಆದಿಚುಂಚನಗಿರಿಯು ನಾಥಪಂಥೀಯ ಕಾಪಾಲಿಕರ ಕೇಂದ್ರವಾಗಿತ್ತೆಂಬುದಕ್ಕೆ ಪ್ರಬಲಾಧಾರಗಳಿರುವುದು, ಮತ್ತು

ಪಕ್ಕದಲ್ಲೇ ಕಾಪಾಲಿಕ ಎಂಬ ಜಾತಿಯ ಜನರಿರುವುದು, ಅಲ್ಲಿನ ನರಬಲಿ ಶಿಲ್ಪಗಳು ಕಾಪಾಲಿಕ ಸನ್ಯಾಸಿಗಳಿಗೆ ಸಂಬಂಧಿಸಿದುವಾಗಿದ್ದು (ಅವನ್ನು ನರಬಲಿಯೆಂದು ಕರೆಯುವುದಕ್ಕಿಂತ ಆತ್ಮಬಲಿಯೆಂದು ಕರೆಯುವುದೇ ಸೂಕ್ತ) ಹೆಚ್ಚಿನ ವಸ್ತುನಿಷ್ಠ ಶೋಧಕ್ಕೆ ಅರ್ಹ.

ಕಾಲಿದಾಸನ ಮೇಘ ಸಂದೇಶ ಕಾವ್ಯದ ಮಹಾಕಾಲ ದೇವಾಲಯ, ಸಿಪ್ರಾ ನದಿಗಳನ್ನು ನೋಡಲು ಮಧ್ಯಪ್ರದೇಶದ ಉಜ್ಜಯಿನಿಗೆ ಹೋದಾಗ, ಆ ಊರು ಕಾಪಾಲಿಕ ಸಿದ್ಧರ ಕೇಂದ್ರವಾಗಿತ್ತೆಂಬುದನ್ನು ತಿಳಿದಿದ್ದ ನಾನು ಆ ದೇವಾಲಯವನ್ನು ('ಮಹಾಕಾಲ' ಹೆಸರು ಗಮನಿಸಿ) ಮತ್ತೊಂದು ಕಡೆ ಇದ್ದ ಭಯಂಕರ ಕಾಲಿ ವಿಗ್ರಹವನ್ನು, ಸಿಪ್ರಾ ನದಿಯ ದಡದ ಕಾಪಾಲಿಕ ಗುಹೆಗಳನ್ನು ನೋಡಿ ವಿಸ್ಮಿತನಾದೆ. ಕಾಲಿದಾಸನ ಆ ಕಾವ್ಯದ ಮೂಲವನ್ನು ತರಗತಿಯಲ್ಲಿ ಕೇಳಿದ್ದ ನಾನು ಮೇಘಸಂದೇಶ ಕಾವ್ಯದ ಸುಕುಮಾರ ಭಾವಗಳನ್ನು ಮಾತ್ರ ಅನುಭವಿಸಿದ್ದೆನೆಂದು ಹೇಳಬೇಕಾಗಿಲ್ಲ. ಆ ಕಾಲೀ ದೇವಾಲಯದ ಮುಂದೆ ಹಠಯೋಗಿಯೊಬ್ಬ ಕಾಲಿಯ ಸ್ವರೂಪ ದರ್ಶನ ಮಾಡಬೇಕೆಂದು ಸಂಕಲ್ಪ ಮಾಡಿ, ಕೊನೆಗೆ ತನ್ನ ನಾಲಗೆಯನ್ನೇ ಕತ್ತರಿಸಿಕೊಂಡು ಆತ್ಮಬಲಿಯಾದದ್ದನ್ನು ಕಣ್ಣಾರೆ ಕಂಡ ಸಾಧುಗಳೊಬ್ಬರ ಬಾಯಿಂದ ಕೇಳಿದ್ದೇನೆ.

ಒಂದು ಸಮಸ್ಯೆ ಚಿಕ್ಕದೋ ದೊಡ್ಡದೋ ಅದನ್ನು ಬಿಡಿಸಲು ಸಾಧ್ಯವಾದರೆ ಆ ಪ್ರಯತ್ನ ಮಾಡಲೇಬೇಕೆಂಬ ಚಲ ನನ್ನ ಹುಟ್ಟುಗುಣ. ಹರಿಹರನ ರಗಳೆಯಲ್ಲಿ ಹಿರಿಯ ಹಂಪಾದೇವಿ, ಚಿಕ್ಕ ಹಂಪಾದೇವಿ ಎಂಬ ಎರಡು ದೈವಗಳು ಹಂಪೆಯಲ್ಲಿದ್ದುದಾಗಿ ವರ್ಣಿತವಾಗಿದೆ. ಹಿರಿಯಳೋ, ಕಿರಿಯಳೋ ಒಬ್ಬ ಹಂಪಾದೇವಿಯಂತೂ ಈಗಿನ ವಿರೂಪಾಕ್ಷ ದೇವಾಲಯದಲ್ಲಿನ ಪಂಪಾಂಬಿಕೆ. ಇನ್ನೊಬ್ಬ ಹಂಪಾದೇವಿ? (ಅದರ ಪಕ್ಕದ ದೇವಿಯ ಹೆಸರು ಭುವನೇಶ್ವರಿ, ಆ ದೇವತೆ ಬೇರೆ). ಹಂಪೆಯಲ್ಲೆಲ್ಲೂ ಆ ಹೆಸರಿನ ಇನ್ನೊಂದು ದೇವಾಲಯವಿಲ್ಲ. ನನಗೆ ಒಂದು ದಿನ ಪಂಪಾ ಸರೋವರ ಜ್ಞಾಪಕಕ್ಕೆ ಬಂದು ಅಲ್ಲಿನ ದಡದ ಮೇಲಿನ ದೇವಾಲಯದ ಗರ್ಭಗುಡಿಯಲ್ಲಿ ಶಿವಲಿಂಗವಿದ್ದುದರಿಂದ ಅದೊಂದು ಮೂಲತಃ ಶಿವದೇವಾಲಯವಾಗಿತ್ತೆಂಬುದನ್ನು ಖಚಿಪಡಿಸಿಕೊಂಡಿದ್ದೆ. ಅಲ್ಲಿನ ಪಕ್ಕದ ಗರ್ಭಗುಡಿಯ ಸ್ತ್ರೀ ದೇವತಾ ವಿಗ್ರಹವನ್ನು ಈಗ ಜಯಲಕ್ಷ್ಮಿಯೆಂದು ಕರೆದು ಉತ್ತರ ಭಾರತದಿಂದ ಬಂದು ನೆಲಸಿರುವ ಕೆಲವು ಸಾಧುಗಳು ವಿಶೇಷವಾಗಿ ಪೂಜಿಸುತ್ತಾರೆ. ಸಹಜವಾಗಿಯೇ ಶಿವಲಿಂಗವು ಉಪೇಕ್ಷೆಗೆ ಒಳಗಾಗಿದೆ. ಆ ಸ್ತ್ರೀ ವಿಗ್ರಹವು ಮೂಲತಃ ಒಬ್ಬ ಪಂಪಾದೇವಿಯ ವಿಗ್ರಹವಾಗಿರಬಹುದೇ ಎಂಬ ಅನುಮಾನ ಮೂಡಿತ್ತು. ಹಂಪೆಯಲ್ಲಿ ವಿಚಾರಿಸಿದಾಗ ವಿರೂಪಾಕ್ಷ ದೇವಾಲಯದ ಅರ್ಚಕರೂ ಸೇರಿದಂತೆ ಎಲ್ಲರೂ ಆ ದೇವತೆಯ ಮೂಲ ಹೆಸರು ಜಯಲಕ್ಷ್ಮಿ ಎಂದೇ ಸಾಧಿಸುತ್ತಿದ್ದರು. ಹಿಂದೆ ಕರೆಯುತ್ತಿದ್ದುದು ಅದೇ ಹೆಸರಲ್ಲೇ ಎಂದರು. ಒಬ್ಬ ವೃದ್ಧ ಸ್ಥಳೀಯನೂ ಅದೇ ರೀತಿ ಹೇಳಿದಾಗ, ಆತನ ಬಾಲ್ಯದಲ್ಲಿ ಅಲ್ಲಿಯ ಜನ ಕರೆಯುತ್ತಿದ್ದ ಹೆಸರೇನೆಂದು ಕೇಳಿದೆ. ಬಂದ "ಅಂಪವ್ವ" ಎಂಬ ಉತ್ತರ ನನಗೆ ಕತ್ತಲಲ್ಲಿ ಬೆಳಕು ಕಂಡಂತಾಯಿತು. ಸಿದ್ಧಜ್ಜನೂ ಅದನ್ನೇ ಪುನರುಚ್ಚರಿಸಿದ. ವಿರೂಪಾಕ್ಷ ದೇವಾಲಯದ ಒಬ್ಬ ವೃದ್ಧ ಅರ್ಚಕರೂ ಅದಕ್ಕೆ ದನಿಗೂಡಿಸಿದರು. ಇನ್ನೂ ಕೆಲವರಿಂದ ಅದೇ ಉತ್ತರ ದೊರೆತಾಗ ನನಗೆ ನನ್ನ ಊಹೆ ನಿಜವಾಯಿತೆನ್ನಿಸಿತು. 'ಪಂಪಾ ಸರೋವರ'

ಎಂಬ ಹೆಸರು ಬರಲು ಕಾರಣ ಆ ದೇವತೆಯೇ ಎಂಬುದೂ ಸ್ಪಷ್ಟವಾಗಿತ್ತು. ಆಕೆ ಹಿರಿಯ ಹಂಪಾದೇವಿ, ವಿರೂಪಾಕ್ಷ ದೇವಾಲಯದ ದೇವಿ ಚಿಕ್ಕ (ಕಿರಿಯ) ಹಂಪಾದೇವಿ ಎಂಬ ನನ್ನ ಊಹೆ ಮಾತ್ರ ಇನ್ನೂ ದುರ್ಬಲವಾಗಿಯೇ ಉಳಿದಿದೆ. ಇಂತಹ ಚಿಕ್ಕ ವಿಷಯಗಳು ಹರಿಹರನನ್ನು ಓದುವವರಿಗೆ ಸಹಾಯ ಮಾಡುತ್ತವೆ. ಅವನ ಪಂಪಾಕ್ಷೇತ್ರದ ರಗಳೆಯಲ್ಲಿ ಬರುವ ಅಂತಹ ದೇವ, ದೇವಿಯರನ್ನು ತೀರ್ಥಗಳನ್ನು ಪೂರ್ಣ ಗುರುತಿಸಬೇಕಾಗಿದೆ.

ಬೆಂಗಳೂರಲ್ಲಿ ನಾನು ಆಕಸ್ಮಿಕವಾಗಿ ಮೆರವಣಿಗೆಯೊಂದರಲ್ಲಿ ಉರುಳು ಹಲಗೆಗಳ (ತಂಬಟೆಗಳ) ಅಥವಾ ಜಗ್ಗಲಗೆಗಳ ಮೇಳವನ್ನು ಕಂಡು ಮಧ್ಯಾಹ್ನ ಅವರು ಉಳಿದುಕೊಂಡಿದ್ದ ಪ್ರಳಯ ಕಾಲದ ವೀರಭದ್ರಸ್ವಾಮಿ ಗುಡಿಗೆ ಹೋಗಿ ಮಾಹಿತಿ ಪಡೆದು ಬರೆದ ಲೇಖನವು ಅಂತಹ ಅಪೂರ್ವ ಕಲಾಪ್ರಕಾರವನ್ನು ಜಾನಪದ ಜಗತ್ತಿಗೆ ಮೊದಲು ಪರಿಚಯ ಮಾಡಿಕೊಟ್ಟಿತು ('ಮೊದಲು' ಎಂದುಕೊಂಡಿದ್ದೇನೆ). ಕುಮಾರಾಮನ ಸಾಂಗತ್ಯದಲ್ಲಿ ಬರುವ ಶೂಲದ ಹಬ್ಬದ ಹೆಸರಿನ ಹಬ್ಬವು ಮಂಡ್ಯ ಜಿಲ್ಲೆಯ ಅರಕೆರೆ ಗ್ರಾಮದಲ್ಲಿ ಈಗಲೂ ಪ್ರಚಲಿತವಿರುವ ವಿಷಯ ತಿಳಿದು ಅಲ್ಲಿಗೆ ಹೋಗಿ ಅಲ್ಲಿ ಮೂರು ದಿನವಿದ್ದು ಆ ಹಬ್ಬದ ಪ್ರತಿ ವಿವರವನ್ನೂ ಕಣ್ಣಾರೆ ಕಂಡು ಅದರ ಸಂಭ್ರಮವನ್ನು ಹೃದಯದಲ್ಲಿ ತುಂಬಿಕೊಂಡೆ. ಬಳಿಕ ಆ ಹಬ್ಬದ ವಿವರಗಳನ್ನು ಲೇಖನವೊಂದರಲ್ಲಿ ದಾಖಲಿಸಿದೆ.

ಕೋಲಾರ ಜಿಲ್ಲೆ ಚಿಂತಾಮಣಿ ತಾಲೂಕಲ್ಲಿ ದೊರಕಿದ ಒಂದು ಚೆನ್ನಾಗಿ ಸುಟ್ಟ ಒಡೆದ ಮಡಕೆ ಚೂರಿನ ಮೇಲೆ (7 ಶ.) ಅಕ್ಷರಗಳಿದ್ದು ಅದನ್ನು ಆರ್. ಶೇಷಶಾಸ್ತ್ರಿ ತಂದುಕೊಟ್ಟಾಗ ಆದ ಆನಂದ ಹೇಳಲಸದಳ. ಇಲ್ಲಿಯವರೆಗೆ ನಮಗೆ ಲೋಹ, ಶಿಲೆ ಬಿಟ್ಟರೆ ಮೃತ್ ಪಾತ್ರೆಯ ಮೇಲೆ ಲಿಖಿಸಿದ್ದ ಶಾಸನ ಒಂದೂ ದೊರೆತಿರಲಿಲ್ಲ. ಅಲ್ಲಿನ ಅಕ್ಷರಗಳಲ್ಲಿ ರಳ ಇದ್ದುದು ("ಱ") ಒಂದು ವಿಶೇಷವಾಗಿತ್ತು (".... ಸ ಗು ಱ ಮ ಱ ಳ್ಳಿ...."). ಹಾಗೆಯೇ ತುಮಕೂರು ಜಿಲ್ಲೆಯಲ್ಲಿ ದೊರಕಿದ್ದ 7-8ನೇ ಶತಮಾನದ ಒಂದು ಬಹು ಸುಂದರ ಲೋಹದ ಮುದ್ರೆಯನ್ನು (seal) ಎಂ. ಪ್ರಸನ್ನ ಕುಮಾರ್ ತಂದುಕೊಟ್ಟಾಗಲೂ ಅಷ್ಟೇ ("ಘನಧೀರನ್" ಎಂಬುವವನ ಮುದ್ರೆ). "ಸಿರಿಮಣುತಿ" ಎಂಬ ಮಹಿಳೆಯ ಹೆಸರಿರುವ ಅಪೂರ್ವ ಕಲ್ಲಿನ ಪದಕವು (pendant) ಕೈಗೆ ಬಂದಾಗಲೂ ಅಷ್ಟೇ ಸಂಭ್ರಮಗೊಂಡಿದ್ದೆ. ಮುದ್ದಣನ ರಾಮಾಶ್ವಮೇಧದ ಕವಿಯ ಸ್ವಹಸ್ತಾಕ್ಷರ ಪ್ರತಿಯನ್ನು (Autograph Copy) ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಸತತ ಪ್ರಯತ್ನದ ಮೂಲಕ ದೊರಕಿಸಿಕೊಂಡುದಾಯ್ತು. ಅದನ್ನಿಟ್ಟುಕೊಂಡು ಈಗ ಪ್ರಚಲಿತವಿರುವ ಪಾಠದ ಜೊತೆ ಹೋಲಿಸಿ ನೋಡಿದಾಗ ಬಹಳ ಕಡೆ ವ್ಯತ್ಯಾಸವಿರುವುದು ಗೋಚರವಾಯ್ತು. ಆತನು ಬಳಸಿದ್ದ ಹಲವು ಅಪೂರ್ವ ಪದಗಳು ಅರ್ಥವಾಗದೆ ತಿದ್ದುಪಡಿ ಮಾಡಲಾಗಿತ್ತು. ಅದನ್ನು ಸಂಪಾದಿಸಿ ಕವಿಯ ಮೂಲಪಾಠ ಸಮೇತ ಹೊರತರಲು ಕೆಲಸವನ್ನೂ ಆರಂಭಿಸಿದ್ದೆ. ಈ ಮಧ್ಯೆ ನನಗೆ ತಿಳಿಯದಂತೆ ಆ ಪ್ರತಿಯನ್ನು ವಿಭಾಗದಿಂದ ಕೊಂಡೊಯ್ದು ಅದನ್ನು ಒಬ್ಬ ವಿದ್ವಾಂಸರು ಅಚ್ಚುಮಾಡಿಸಿಬಿಟ್ಟರು. ಆ ಹಸ್ತಪ್ರತಿ ದೊರಕಿಸುವಲ್ಲಿ ಮತ್ತು ಆಮೇಲೆ ಅದನ್ನು ಸಂಪಾದಿಸಿದ ಕೆಲಸ ಆರಂಭಿಸಿ ಅದರಲ್ಲಿ ಸಾಕಷ್ಟು ಶ್ರಮ ಪಟ್ಟಿದ್ದೆ. ಮತ್ತು ಆ ಶ್ರಮದಲ್ಲಿ

ಬಹು ತೃಪ್ತಿಯನ್ನೂ ಕಂಡಿದ್ದೆ. ಆ ಮಾತು ಹಾಗಿರಲಿ. ನನ್ನ ಶೋಧಗಳು ಮನೆ ಕಟ್ಟಲು ಬಳಸುವ ಇಟ್ಟಿಗೆಗಳನ್ನು ಸಿದ್ಧಪಡಿಸಿದಂತೆ ಎಂದು ಕೆಲವರಿಗೆ ಅನ್ನಿಸಬಹುದು. ಇಟ್ಟಿಗೆಗಳನ್ನು ಸಿದ್ಧಪಡಿಸಿದಂತೆ ಕೆಲವು ಗುಡಿಸಲು, ಮನೆಗಳನ್ನೂ ಕಟ್ಟಿದ್ದೇನೆ. ಸೂರ್ಯಗ್ರಹಣ, ಅಸ್ಪೃಶ್ಯತೆ, ವಚನಸಾಹಿತ್ಯ, ಕನ್ನಡ ಸಂಸ್ಕೃತಿ, ಬಸವಣ್ಣನವರ ಜೀವನ ಚರಿತ್ರೆ, ಹಿಂದೂ - ವೀರಶೈವ ಇವುಗಳಿಗೆ ಸಂಬಂಧಿಸಿದ ಪೂರ್ಣಪ್ರಮಾಣದ ಕೃತಿಗಳನ್ನು ಕೆಲವು ಉದಾಹರಣೆಗಳಾಗಿ ನೋಡಬಹುದು.

## "ಶ್ರವಣ - ಮನನ - ನಿದಿಧ್ಯಾಸನ"

ನಾನು ಈ ಪದಗಳಲ್ಲಿ ಮೂರನೆಯದು "ನಿಧಿಧ್ಯಾಸನ" ಎಂದೇ ಭಾವಿಸಿದ್ದೆ. ನಾನು ಓದಿರುವ ಪುಸ್ತಕಗಳಲ್ಲಿ ಹಾಗೆಂದೇ ದಾಖಲಾಗಿರುವ ನೆನಪು. ಅದರ ನಿಜವಾದ ರೂಪ "ನಿದಿಧ್ಯಾಸನ" ಎಂಬುದು ಮೋನಿಯರ್ ವಿಲಿಯಂಸರ ಸಂಸ್ಕೃತ ನಿಘಂಟಿನಿಂದ ತಿಳಿದು ಸ್ವಲ್ಪ ಸಂತೋಷವಾಯಿತು. ಆ ಮೂರೂ ಪದಗಳ ಹಿಂದಿರುವ ಚಿಂತನೆ ತಿಳಿದು ಅಪಾರ ಸಂತೋಷವಾಯಿತು. ಸಾಹಿತಿಗಳೋ ಸಂಶೋಧಕರೋ ಆಗಲು ಬಯಸುವವರು ಆ ಚಿಂತನೆಯನ್ನು ತಿಳಿಯಬೇಕಾದ್ದು ಅಗತ್ಯ.

ನಾವು ಜ್ಞಾನವನ್ನು ಕಿವಿಯ ಮೂಲಕ ಗ್ರಹಿಸುವುದು "ಶ್ರವಣ" (ಕಣ್ಣಿನ ಮೂಲಕ ಗ್ರಹಿಸುವ ವಾಚನವನ್ನು ಅದರ ಜೊತೆ ಸೇರಿಸಿಕೊಳ್ಳಬೇಕು). ಶ್ರವಣ, ವಾಚನಗಳ ಮೂಲಕ ನಮ್ಮ ಒಳಗನ್ನು ಪ್ರವೇಶಿಸಿದ ಜ್ಞಾನವನ್ನು ಕುರಿತು ಮೆಲುಕು ಹಾಕುವುದು, ಅದನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸುವುದು "ಮನನ". ಮನನದ ಮುಖಾಂತರ ಜ್ಞಾನವು ನಮ್ಮ ಬುದ್ಧಿಯ ಭಾಗವಾಗುತ್ತದೆ. ಬುದ್ಧಿಯ ಭಾಗವಾದ ಜ್ಞಾನವನ್ನೇ ಆಳವಾಗಿ ಪರಿಭಾವಿಸಿ, ಅದು ನಮ್ಮ ಭಾಗವಾಗುವಂತೆ, ನಮ್ಮ ಪ್ರಜ್ಞೆಯ ಭಾಗವಾಗುವಂತೆ ಮಾಡುವುದೇ "ನಿದಿಧ್ಯಾಸನ". ಅದು ಒಂದು ಬಗೆಯ ಧ್ಯಾನ, ನಿರಂತರ ಅನುಸಂಧಾನ. ಬಾಯನ್ನು ಪ್ರವೇಶಿಸಿದ ಅನ್ನವು ಹಲ್ಲುಗಳಿಂದ ಅಗಿಯಲ್ಪಟ್ಟು ಹೊಟ್ಟೆಗೆ ಹೋಗಿ ಅರಗಿ ಅದು ನಮ್ಮ ಭಾಗವೇ ಆಗುವಂತೆ ಜ್ಞಾನವು ನಮ್ಮ ಭಾಗವೇ, ನಾವೇ ಆಗುತ್ತದೆ. ಕಾರು ಓಡಿಸುವುದನ್ನು ಶ್ರವಣದ ಮೂಲಕ ಕಲಿತವನು ಮನನದ (ಪ್ರಯತ್ನದ) ಮೂಲಕ ಅದನ್ನು ತನ್ನದನ್ನಾಗಿ ಮಾಡಿಕೊಂಡು, ಅಂತ್ಯದಲ್ಲಿ ವಾಹನಚಾಲನೆಯು ಅವನ ಪ್ರಜ್ಞೆಯ ಭಾಗವಾಗಿ ಪರಿಣಮಿಸಿದಾಗ ಆ ಚಾಲನೆ ತೀರ ಸ್ವಾಭಾವಿಕವಾಗುತ್ತದೆ. ಚಾಲನೆಯ ಆಯಾ ಕೆಲಸಗಳನ್ನು ಅವನು ಅಪ್ರಯತ್ನಪೂರ್ವಕವಾಗಿ ಮಾಡುತ್ತಾನೆ - ಬೌದ್ಧಿಕ ಸ್ತರವನ್ನು ಅದು ಮೀರಿರುತ್ತದೆ. ಆಧ್ಯಾತ್ಮಿಕ ಸಾಧಕನು ಅಂತ್ಯದಲ್ಲಿ ತಾನೇ ಬ್ರಹ್ಮವಸ್ತುವಾದ ಸ್ಥಿತಿಯೂ "ನಿದಿಧ್ಯಾಸನ"ವೇ. ಆಗ ವ್ಯಕ್ತಿ ತಾನು ಬ್ರಹ್ಮವಸ್ತುವನ್ನು ಅರಿತವನು ಎಂಬುದರ ಅರಿವಿಲ್ಲದಿರುವ ಸ್ಥಿತಿಗೆ ಏರಿರುತ್ತಾನೆ. ಮುಕ್ತಾಯಕ್ಕನ ಮಾತಿನಲ್ಲಿ ಹೇಳುವುದಾದರೆ ಆ ಜ್ಞಾನಿ ಒಬ್ಬ ಅದ್ವೈತಿ. ಅರಿತವನಾದರೂ ತಾನು ಅರಿತಿದ್ದೇನೆ ಎಂಬುದನ್ನೇ ಮರೆತವನು. ಶ್ರವಣ, ಮನನ, ನಿದಿಧ್ಯಾಸನಗಳನ್ನು ಎಲ್ಲ ರಂಗಗಳಿಗೂ ಅನ್ವಯಿಸಲು ಸಾಧ್ಯ, ಸ್ಥೂಲವಾಗಿ.

ಒಂದು ಸಂಗತಿ ಅಥವಾ ಬರಹ (ಅಥವಾ ಯಾವುದೋ ಉಪನ್ಯಾಸ) ನಮ್ಮ ಇಂದ್ರಿಯಗಳ ಮೂಲಕ ಪ್ರವೇಶಿಸಿದ್ದನ್ನು ಮನನದ ಮೂಲಕ ಅದನ್ನು ಅನುಭವಿಸಿ ಆ ಅನುಭವ ಅಥವಾ ಆಲೋಚನೆಯನ್ನು ಚಿಂತನೆಯ ಮೂಲಕ ಗ್ರಹಿಸುತ್ತೇವೆ. ಇಷ್ಟು ಶ್ರವಣ ಮತ್ತು ಮನನದ ಹಂತಗಳು. ಮುಂದಿನ ಹಂತವೇ ಮುಖ್ಯ. ಕವಿ ಅಥವಾ ಕತೆಗಾರ ಅಥವಾ ಸಂಶೋಧಕನಾಗಬಯಸುವವನು ಆಯಾ ಕ್ಷೇತ್ರದ ಇಡೀ ಅನುಭವದ ಹಿನ್ನೆಲೆಯಲ್ಲಿ ಅದರ ಗುಂಗನ್ನು ತಲೆಗೆ ಹಚ್ಚಿಕೊಳ್ಳಬೇಕು. ಸದಾ ಅದರ ಧ್ಯಾನ ಅವನದಾಗಬೇಕು. ಆ ಕಡೆ ಬೆಳೆಯುವ ತೀವ್ರ ಹಂಬಲ ಅವನದಾಗಬೇಕು. ಎಲ್ಲವನ್ನೂ ಏಕಾಗ್ರತೆಯಿಂದ ಪರಿಶೀಲಿಸುತ್ತ ಪರೀಕ್ಷಿಸುತ್ತ ಅದರ ಹುಚ್ಚನ್ನು ತಲೆಗೆ ಹಚ್ಚಿಕೊಳ್ಳಬೇಕು. (ದಿ) ವೆಂಕಟಪ್ಪನವರ ಒಂದು ವರ್ಣಚಿತ್ರ ಜ್ಞಾಪಕಕ್ಕೆ ಬರುತ್ತದೆ. ವರ್ಣ ಕಲಾವಿದನೊಬ್ಬ ತಾನು ಚಿತ್ರಿಸಿದ ಕಲಾಕೃತಿಗೆ ಮುಸುಕು ಹಾಕಿ, ವೀಣಾ ದೇವತೆಯ ಸಾಕ್ಷಾತ್ಕಾರಕ್ಕಾಗಿ ಅವಳ ಮುಂದೆ ಹುಚ್ಚನಂತೆ ಆರ್ತನಾಗಿ ಕುಳಿತು ಕೈಯೆತ್ತಿ ಪ್ರಾರ್ಥಿಸುತ್ತಿದ್ದಾನೆ. ವರ್ಣಕಲಾವಿದನೊಬ್ಬ ವಾದ್ಯಕಲಾವಿದನಾಗಬಯಸಿ ತೀವ್ರ ಸಾಧನೆಯಲ್ಲಿ ತೊಡಗಿರುವ ಚಿತ್ರ ಅದು. ಅದೇ "ನಿದಿಧ್ಯಾಸನ". ಅದು ವ್ಯಕ್ತಿಗೆ ತನ್ನ ಇಂದ್ರಿಯ ಬುದ್ಧಿಗಳನ್ನು ಮೀರಿದ ಅಗೋಚರ ಶಕ್ತಿಯನ್ನು, 'ಕಾಣುವ' ಶಕ್ತಿಯನ್ನು, ದರ್ಶನ ಸಾಮರ್ಥ್ಯವನ್ನು ತಂದುಕೊಡುತ್ತದೆ. ಆ ಶಕ್ತಿಯನ್ನು Intuition ಎನ್ನಿ, ಪ್ರತಿಭೆ ಎನ್ನಿ. ಆಗ ಕವಿಗೆ ಉಳಿದವರಿಗೆ ಹೊಳೆಯದ್ದು ಹೊಳೆಯುತ್ತದೆ. ಸಂಶೋಧಕನಿಗೆ ಉಳಿದವರಿಗೆ ಕಾಣದ್ದು ಕಾಣುತ್ತದೆ. ಆ ಶಕ್ತಿ ದೈವದತ್ತವಾದುದು ಎಂಬ ಮಾತಿನಷ್ಟೇ ವ್ಯಕ್ತಿಯ ತೀವ್ರ, ಶ್ರಮ, ಹಂಬಲ, ಪ್ರಯತ್ನಗಳ ಫಲವೆಂಬ ಮಾತೂ ನಿಜ.

"ನಿಧಿ"ಗೂ "ನಿಧಿಧ್ಯಾಸನ"ಕ್ಕೂ ಸಂಬಂಧವಿದೆಯೆಂಬ ನನ್ನ ಭ್ರಮೆ ದೂರವಾಗಿ, "ನಿ-ದಿಧ್ಯಾಸನ" ಎಂಬುದು ವಾಸ್ತವ ರೂಪ, ಅದು ಧ್ಯಾನಿಸು meditate ಎಂಬರ್ಥದ "ಧ್ಯೈ" ಧಾತುವಿನಿಂದ ಬಂದಿದೆ, ಶ್ರವಣ ಮನನ ನಿದಿಧ್ಯಾಸನಗಳು ಒಂದು ಅತ್ಯಮೂಲ್ಯ ಭಾರತೀಯ ಚಿಂತನ ಸ್ರೋತವನ್ನು ಒಳಗೊಂಡಿವೆಯೆಂಬುದು ಹೊಳೆದಾಗ ತೀರ ಸಂಭ್ರಮಗೊಂಡೆ ಮತ್ತು ಈಗಾಗಲೇ ಎರಡು ಸಭೆಗಳಲ್ಲಿ ಆ ಬಗ್ಗೆ ಮಾತನಾಡಿ ನನ್ನ ಸಂಭ್ರಮವನ್ನು ಸಾಂಕ್ರಾಮಿಕಗೊಳಿಸಲು ಯತ್ನಿಸಿ "ಸ-ವಿ-ಫಲ"ನಾಗಿದ್ದೇನೆ.

## "ನಾನು" ಕಂಡುಹಿಡಿದೆ ?

ಎಲ್ಲ ಕ್ಷೇತ್ರಗಳ (ವಿಜ್ಞಾನ, ತಂತ್ರಜ್ಞಾನ, ಸಮಾಜ ವಿಜ್ಞಾನಗಳು, ಸಾಹಿತ್ಯ) ಸಂಶೋಧಕರಿಗೆ ಆಗಿರುತ್ತವೆ, ಮೇಲಿನಂತಹ ಅನುಭವಗಳು. ಸಂಶೋಧಕನಾಗಿ ನಾನು ಅವುಗಳಲ್ಲಿ ಕೆಲವನ್ನು ವಿಸ್ತಾರವಾಗಿ, ಕೆಲವನ್ನು ಸೂಚ್ಯವಾಗಿ ಸಮಾರೋಪ ಪ್ರಾಯವಾಗಿ ಈ ಕೃತಿಯಲ್ಲಿ ನಿರೂಪಿಸಿದ್ದೇನೆ. ಮೇಲಿನ ನಿರೂಪಣೆಯಲ್ಲಿ ಮತ್ತೆ ಮತ್ತೆ "ನಾನು" "ನಾನು ಕಂಡು ಹಿಡಿದೆ" "ನಾನು ಹೊಸದಾಗಿ ಶೋಧಿಸಿದೆ" ಇತ್ಯಾದಿ ಕಡೆ ಉತ್ತಮ ಪುರುಷ ಏಕವಚನ ಸರ್ವನಾಮವು ಬಂದಿರುವುದು ಸಂಪ್ರಬಂಧ ಪರಂಪರೆಗೆ ಅಷ್ಟಾಗಿ

ಶೋಭಿಸುವುದಿಲ್ಲ. ಕಳೆದ ಶತಮಾನದ ಮಧ್ಯಭಾಗದಲ್ಲಿ ಬರೆದ ಸಂಪ್ರಬಂಧಗಳಲ್ಲಿ ನಾನು ಎಂಬುದನ್ನು ಬಳಸುವುದು ಅನಿವಾರ್ಯವಾಗಿದ್ದ ಕಡೆ "ನಾವು" ಎಂದು ಬಳಸುತ್ತಿದ್ದೆ. ನಾನು ಹಾಗೆ ಬಳಸುತ್ತಿದ್ದುದನ್ನು ನಿಲ್ಲಿಸಿ ಈಚಿನ ವರ್ಷಗಳಲ್ಲಿ "ನಾನು" ಪದವನ್ನೇ ಬಳಸುತ್ತಿದ್ದೇನೆ. ಆದರೂ ಅಂತಹ ಪ್ರಯೋಗ ಕಡಮೆ. ಏಕೆಂದರೆ, ಸಂಪ್ರಬಂಧಗಳಲ್ಲಿ ಸಂಶೋಧಕ ಅಮುಖ್ಯ, ಅವನು ಶೋಧಿಸಿದ ಸಂಗತಿ ಸತ್ಯ ವಾಸ್ತವ ಮುಖ್ಯ. ಒಬ್ಬ ವ್ಯಕ್ತಿಗೆ ಏನೋ ಅನ್ನಿಸಿದ್ದು ಸೃಜನಾತ್ಮಕ ಬರಹಗಳಲ್ಲಿ ಮಾನ್ಯವಾಗುತ್ತದೆ. ಕಾರಣ ಅಲ್ಲಿ ಸುಂದರವಾದುದು ಸತ್ಯ. ಸಂಶೋಧನೆಯಲ್ಲಿ ವ್ಯಕ್ತಿಗೆ ಏನೋ ಅನ್ನಿಸಿದ್ದು ಮುಖ್ಯವಲ್ಲ, ಅದು ನಿಜವೂ ಆಗಿರಬೇಕು; ಅದೇ ವಸ್ತುನಿಷ್ಠ ದೃಷ್ಟಿ. ನನ್ನ ಈ ಕೃತಿ ಸಂಶೋಧನ ಕೃತಿಯಲ್ಲ, ಸಂಶೋಧಕನ ಅನುಭವಗಳ ನೇರ ನಿರೂಪಣೆಯಾದ್ದರಿಂದ ಉತ್ತಮ ಪುರುಷ ಬಳಕೆಯು ಕ್ಷಮ್ಯ, ಅನಿವಾರ್ಯ. ಶ್ರೇಷ್ಠ ಸಂಶೋಧಕರು ತಮ್ಮ ಆತ್ಮಚರಿತ್ರೆಗಳನ್ನು ಬರೆದುಕೊಂಡಿರುವುದು ಕಡಮೆ. ಅಂತಹ ಕೃತಿಗಳು ಸಂಶೋಧನ ವಿಧಾನದ ಮಾರ್ಗದರ್ಶಿ ಪುಸ್ತಕಗಳಿಗಿಂತ ಹೆಚ್ಚು ಪರಿಣಾಮಕಾರಿಯಾಗಿ ಯುವ ಸಂಶೋಧಕರಿಗೆ ಮಾರ್ಗದರ್ಶಿಗಳಾಗಿ ನಿಲ್ಲಬಲ್ಲವು. ಅವುಗಳಿಗಿಂತ ಸಂಶೋಧಕರ ನಿಕಟ ಒಡನಾಟ ಇನ್ನೂ ಒಳ್ಳೆಯ ಮಾರ್ಗದರ್ಶಿ (ಅಂತಹ ಭಾಗ್ಯ ನನ್ನದಾಗಿತ್ತು).

ಸಂಶೋಧಕ ವಕೀಲನಂತೆ ಮಾಹಿತಿ ಸಂಗ್ರಹಿಸಿ ನ್ಯಾಯಮೂರ್ತಿಯಂತೆ ವರದಿ ಬರೆಯಬೇಕೆಂಬ ಒಂದು ಆಕರ್ಷಕ ಮಾತಿದೆ. ವಿಚಾರ ಮಾಡಿದರೆ ಅದು ಸರಿಯಲ್ಲ. ವಕೀಲನ ಉದ್ದೇಶ ತನ್ನ ಕಕ್ಷಿದಾರನನ್ನು ಗೆಲ್ಲಿಸಬೇಕು ಎಂಬುದೇ ಆಗಿರುವುದರಿಂದ ಅವನು ತನ್ನ ಕಕ್ಷಿದಾರನಿಗೆ ಅನುಕೂಲವಾಗಿರುವ ಮಾಹಿತಿಯನ್ನು ಮಾತ್ರ ಸಂಗ್ರಹಿಸುತ್ತಾನೆ. ಪ್ರತಿಪಕ್ಷದ ಕಕ್ಷಿದಾರನಿಗೆ ಅನುಕೂಲಕರವಾಗಿದ್ದು ತನ್ನ ಕಕ್ಷಿದಾರನಿಗೆ ವಿರೋಧವಾಗಿರುವ ಮಾಹಿತಿಯನ್ನು ಅವನು ನಿರಾಕರಿಸುವುದಿಲ್ಲವಾದರೂ ಅದು ತನ್ನ ವಾದದಲ್ಲಿ ಸಹಾಯಕವಾಗದಿದ್ದರೂ ಅಂತಹ ಮಾಹಿತಿಯು ತನಗೆ ತಿಳಿದಿದ್ದರೆ ಒಳ್ಳೆಯದು ಎಂಬ ದೃಷ್ಟಿಯಿಂದಲೂ ಸಂಗ್ರಹಿಸಬಹುದು. ಆದರೆ ವಕೀಲರು ತಾವೇ ಹೋಗಿ ಕಕ್ಷಿದಾರನನ್ನಲ್ಲದೆ ಬೇರೆ ಮೂಲಗಳಿಂದ ನೇರವಾಗಿ ವಿಷಯ ಸಂಗ್ರಹಿಸಲು ಹೋಗುವುದಿಲ್ಲ. ನ್ಯಾಯಮೂರ್ತಿಗಳಂತೂ ಎರಡೂ ಕಕ್ಷಿದಾರರು ಅವರ ಕಡೆಯ ಸಾಕ್ಷಿಗಳ ಮಾತು ಮತ್ತು ಒದಗಿಸುವ ಸಾಕ್ಷಿಗಳು, ಪೋಲೀಸರು ನೀಡುವ ಸಾಕ್ಷಿ, ವಕೀಲರ ವಾದ ಇಷ್ಟನ್ನು ಅವಲಂಬಿಸುತ್ತಾರೆ. ಇವರಿಂದ ತಪ್ಪಿಸಿಕೊಂಡ ಅಥವಾ ಮರೆಮಾಚಲಾದ ಮಾಹಿತಿಯನ್ನು ನೇರವಾಗಿ ನ್ಯಾಯಮೂರ್ತಿಗಳು ಸಂಗ್ರಹಿಸಲು ಹೋಗುವುದಿಲ್ಲ. ಸಂಶೋಧಕನಾದರೋ ಗೆಲ್ಲಿಸಬೇಕಾದುದು ಸತ್ಯವನ್ನು, ಸತ್ಯವನ್ನು ಮಾತ್ರ. ಮೆರೆಯಿಸಬೇಕಾದ್ದು ತನ್ನನ್ನು ಅಲ್ಲ, ತನ್ನಿಂದ ಭಿನ್ನವಾದ ಸತ್ಯವನ್ನು ಮಾತ್ರ. ಆ ಕಾರಣ ಅವನು ಹೆಜ್ಜೆಹೆಜ್ಜೆಗೆ ಎರಡೂ ಪಕ್ಷಗಳ ವಕೀಲರಂತೆ ಮಾತ್ರವಲ್ಲ, ತಾನೇ ಹಲವು ಮೂಲಗಳಿಗೆ ಹೋಗಿ ಶ್ರಮಪೂರ್ಣವಾಗಿ ಮಾಹಿತಿ ಸಂಗ್ರಹಿಸಬೇಕು. ಸಂಗ್ರಹಿಸುವಾಗಲೇ ಮನಸ್ಸಿನ ಮೂಲೆಯಲ್ಲಿ ನ್ಯಾಯಾಧೀಶನ ವಸ್ತುನಿಷ್ಠ ದೃಷ್ಟಿಕೋನ ಎಚ್ಚರವಾಗಿರಬೇಕು. ನ್ಯಾಯಾಧೀಶ ಒಮ್ಮೆ ತೀರ್ಪು ಕೊಟ್ಟ ಮೇಲೆ ತನ್ನ ತೀರ್ಪನ್ನು ಅವನೇ ಎಂದೂ ಬದಲಾಯಿಸಲಾರ.

ಆದರೆ ಸಂಶೋಧಕ ಹಾಗಲ್ಲ. ಅಗತ್ಯವಾದರೆ ಮುಕ್ತ ಮನಸ್ಸಿನಿಂದ ತನ್ನ ತೀರ್ಮಾನದ ಮಾರ್ಪಾಟಿಗೆ ಸಿದ್ಧನಾಗಿರಬೇಕು,

ಆದರೆ ಅದು ಹೇಳಿದಷ್ಟು ಸುಲಭವಲ್ಲ. ಎಲ್ಲರಿಗೂ ಇರುವಂತೆ ಸಂಶೋಧಕನಿಗೂ ಅಹಂ ಎಂಬುದೊಂದು ಇರುವುದು ಸ್ವಾಭಾವಿಕ. ತಾನು ಹೇಳಿದ್ದು ನಿಜ, ತಾನು ಹೇಳಿದ್ದೇ ನಿಜ ಎಂದು ಹಠ ಹಿಡಿಯುವವರೂ, ತನಗೆ ಎಂದೋ ಅನ್ನಿಸಿದ್ದಕ್ಕೆ ಅನುಕೂಲಕರವಾದ ಸಾಕ್ಷಿಗಳನ್ನು ಮಾತ್ರ ಇಟ್ಟುಕೊಂಡು ಅಥವಾ ಅವನ್ನು ತಿರುಚಿ ಉಳಿದುವನ್ನು ತಿರಸ್ಕರಿಸುವವರೂ ಇದ್ದಾರೆ. ಅವರು ಸಂಶೋಧನ ಕ್ಷೇತ್ರಕ್ಕೆ ಸಲ್ಲದ ಜನ. "ದೇವರು ರುಜು ಮಾಡಿದನು" ಎಂದು ಕವಿ ಹೇಳಿದರೆ ಅದು ನಿಜವೇ ಎಂದು ಪ್ರಶ್ನಿಸುವುದು ಅವಿವೇಕತನ. ಅದು ನಿಜ, ಕವಿಯೊಬ್ಬನ ತೀವ್ರ ಅನುಭವವಾಗಿ ನಿಜ. ಆದರೆ ಕಲ್ಯವು ಹದಿನಾರನೇ ಶತಮಾನದಲ್ಲಿ ದೊಡ್ಡ ಬೌದ್ಧ ಕೇಂದ್ರವಾಗಿದ್ದಿತೆಂಬ ಒಂದು ಶಾಸನಾಧಾರವನ್ನು ಸಂಪೂರ್ಣವಾಗಿ ಅವಲಂಬಿಸಿ ಒಂದು ನಿರ್ಣಯಕ್ಕೆ ನಾನು ಬಂದಿರುವುದು ಸರಿಯೇ ಎಂಬ ಪ್ರಶ್ನೆಯನ್ನೆತ್ತುವುದು ಸಾಧುವಾದುದು ಮಾತ್ರವಲ್ಲ, ತಜ್ಞರು ಎತ್ತಲೇಬೇಕು. ನನಗೇ ನನ್ನ ಆ ತೀರ್ಮಾನದ ಬಗ್ಗೆ ಸಮಾಧಾನವಿಲ್ಲ. ಆ ಊರಲ್ಲಿ ಬೌದ್ಧಧರ್ಮದ ಸ್ಪಷ್ಟ ಸಾಕ್ಷ್ಯಾಧಾರಗಳು ಇನ್ನೂ ದೊರಕಬೇಕಾಗಿದೆ. ಜೈನ ಬೌದ್ಧ ಮೂರ್ತಿಗಳಿಗೆ ಸಾಕಷ್ಟು ಹೋಲಿಕೆಯಿರುವುದರಿಂದ, ಇಂಡಾಲಜಿ ಅಧ್ಯಯನಗಳ ಆರಂಭದ ಹತ್ತೊಂಬತ್ತನೇ ಶತಮಾನದಲ್ಲಿ ಬಹುತೇಕ ಎಲ್ಲ ಪಾಶ್ಚಾತ್ಯ ವಿದ್ವಾಂಸರೂ ಜೈನಧರ್ಮದ ದೇವಾಲಯ ಶಿಲ್ಪ ಶಾಸನಗಳನ್ನು ತಮಗೆ ಪರಿಚಿತವಿದ್ದ ಬೌದ್ಧವೆಂದೇ ಪರಿಗಣಿಸಿದ್ದರು. ಇಂತಹ ಗೊಂದಲ ಕಲ್ಯದ ವಿಷಯದಲ್ಲೂ ಹಿಂದೆ ನಡೆದು ಅಲ್ಲಿನ ಜೈನ ಧರ್ಮವನ್ನು ಬೌದ್ಧವೆಂದೇ ಹದಿನಾರನೇ ಶತಮಾನದಲ್ಲಿ ಶಾಸನ ಪಾಠವನ್ನು ಸಿದ್ಧಪಡಿಸಿದ ವ್ಯಕ್ತಿ ಗೊಂದಲ ಮಾಡಿಕೊಂಡಿರಬಹುದೇ ಎಂಬ ಸಕಾರಣ ಅನುಮಾನ ನನ್ನನ್ನೇ ಕಾಡುತ್ತಿದೆ. ಸಿದ್ಧರಾಮನ ಲಿಂಗದೀಕ್ಷೆಯ ವಿಷಯದಲ್ಲಿ ತಮ್ಮ ವಾದಕ್ಕೇ ಅಂಟಿಕೊಂಡು ಕೆಲವು ನಿಷ್ಠುರ ಸನ್ನಿವೇಶಗಳನ್ನೂ ತಾಳ್ಮೆಯಿಂದಲೇ ಎದುರಿಸಿದ ಡಿ.ಎಲ್. ನರಸಿಂಹಾಚಾರ್ಯರು ತಮ್ಮ ವಾದಕ್ಕೆ ವಿರುದ್ಧವಾದ ಸಾಕ್ಷ್ಯಾಧಾರವು ತಮ್ಮ ಗಮನಕ್ಕೆ ಬಂದೊಡನೆ ಮುಕ್ತಮನಸ್ಸಿನಿಂದ ತಮ್ಮ ವಾದವನ್ನು ಕೈಬಿಟ್ಟು ಲೇಖನ ಬರೆದರು. ಅದರಿಂದ ಅವರು ದೊಡ್ಡವರೆನಿಸಿಕೊಂಡರು. "ಸತ್ಯವನ್ನು ನಾನು ಕಂಡೆ" ಎಂದು ಹೇಳಿಕೊಳ್ಳುವುದರಲ್ಲಿ ತಪ್ಪಿಲ್ಲವಾದರೂ ಪ್ರತಿಯೊಬ್ಬ ನಿಜವಾದ ಸಂಶೋಧಕನೂ ಒಂದು ಸತ್ಯವು ಹೊರಬರಲು ನಾನು ನಿಮಿತ್ತನಾದೆ, ಸತ್ಯವು ಪ್ರಕಾಶಗೊಳ್ಳಲು ನನ್ನನ್ನು ಆರಿಸಿಕೊಂಡು ಉಪಕಾರ ಮಾಡಿತು, ಧನ್ಯನನ್ನಾಗಿ ಮಾಡಿತು ಎಂದೇ ಭಾವಿಸುತ್ತಾನೆ. ಗಿರಿಜೆಯು ಮೇನಕೆಗೆ ಮಗುವಾಗಿ ಜನಿಸಿದಾಗ ಆ ಲೋಕಮಾತೆ ದಾಕ್ಷಾಯಣಿಯು ಜಗತ್ತಿಗೆ ವ್ಯಕ್ತವಾಗಲು ಮೇನಕೆ ನಿಮಿತ್ತವಾದವಳೇ ಹೊರತು ಅವಳೇ ತಾಯಿ ಅಲ್ಲ ಎಂಬ ಮಾತನ್ನು ಹರಿಹರ ಹೇಳುವಾಗ, ಸೂರ್ಯನು ಪೂರ್ವದಿಗಂತದಿಂದ ಮೂಡಿಬಂದಂತೆ ಎಂಬ ಉಪಮೆಯನ್ನು ಕೊಡುತ್ತಾನೆ. ಆ ಮಾತು ಎಲ್ಲ ಸಂಶೋಧಕರಿಗೂ ದಾರಿದೀಪವಾಗಿರಬೇಕು. ಸಂಶೋಧಕನಿಗೆ ಒಂದು ಸತ್ಯ ಕಾಣಿಸದಿದ್ದರೆ ಮುಂದೊಮ್ಮೆ ಯಾವನೋ ಸಂಶೋಧಕನಿಗೆ ಕಾಣಿಸುತ್ತಿತ್ತು.

ವಿ. ಸೀತಾರಾಮಯ್ಯನವರ "ಮಣಿಯದಿಹ ಮನವೊಂದು, ಸಾಧಿಸುವ ಹಠವೊಂದು, ನಿಜದ ನೇರಕೆ ನಡೆವ ನಿಶ್ಚಲತೆಯೊಂದು" ಎಂಬ ಕಾವ್ಯಭಾಗ ದೈನಂದಿನ ಬದುಕಿಗೆ ಹೇಗೋ ಸಂಶೋಧಕನಿಗೂ ದಾರಿದೀಪವಾಗಿರಬೇಕು. ಮುಕ್ತಮನಸ್ಸು, ನಿರಂತರ ಪ್ರಯತ್ನ, ನಿಜದ ಕಡೆಗೇ ಹೋಗುವೆನೆಂಬ, ಹೋಗಬೇಕೆಂಬ ದೃಢನಿಶ್ಚಯ ಇವು ಸಂಶೋಧಕನ ಮುಖ್ಯ ಲಕ್ಷಣ. ಮೇರೆಯರಿಯದ ಶ್ರಮ, ವ್ಯವಸ್ಥಿತ ಚಿಂತನೆ, ನಿರಂತರ ಉತ್ಸಾಹ ಇವೂ ಅಷ್ಟೇ. ಅಂತಹ ಶ್ರಮ ಎಂದೋ ಒಂದು ದಿನ ಖಂಡಿತ ಫಲ ನೀಡುತ್ತದೆ. ಆ ಫಲ ಸಾರ್ವಜನಿಕರಿಗೆ ಸತ್ಯದ ದರ್ಶನ ಮಾಡಿಸುತ್ತದೆ, ವ್ಯಕ್ತಿಗೆ ಪಾಂಡಿತ್ಯ ರಸಾನುಭವವನ್ನೂ ನೀಡುತ್ತದೆ. ಸಂಶೋಧಕನೊಬ್ಬ ಮಾಡಿರಬಹುದಾದ ತಪ್ಪನ್ನು ಇನ್ನೊಬ್ಬ ಸಂಶೋಧಕ ತಿದ್ದಿದಾಗ, ಆ ಶೋಧದ ಯಶಸ್ಸಿನ ಒಂದು ಭಾಗ ಮೊದಲನೆಯವನಿಗೂ ಸಲ್ಲುತ್ತದೆ. ಅವನ ತಪ್ಪು ಇವನ ಒಪ್ಪಕ್ಕೆ ಪ್ರೇರಣೆಯಾಯಿತು ತಾನೇ! ವಿ.ಸೀ. ಅವರ ಮೇಲೆ ಹೇಳಿದ "ಅಭೀಃ" ಕವನ ಮುಂದುವರಿದು ಹೇಳುತ್ತದೆ - "ಅನ್ಯಾಯಕೆಂದೆಂದು ಬಾಗದೆಚ್ಚರವೊಂದು" - ಒಮ್ಮೊಮ್ಮೆ ಸಂಶೋಧಕ ಸತ್ಯವನ್ನು ಹೇಳಲು ಹೆದರಿ ಮುದುರಿಕೊಳ್ಳಬೇಕಾದ ಸಂದರ್ಭಗಳು ಬಂದಾಗಲೂ ಅವನೊಬ್ಬ ಅಭೀಃ - ನಿರ್ಭಯ ಸ್ವಭಾವದ ವ್ಯಕ್ತಿಯಾಗಿದ್ದರೆ, ಅದಕ್ಕೂ ಸಿದ್ಧನಾಗಬೇಕು. ಜೀವನದಲ್ಲಿ ಹೇಗೋ ಸಂಶೋಧನೆಯಲ್ಲೂ ವ್ಯಕ್ತಿಯ ಸತ್ಯಪ್ರಿಯತೆ ಸಾಬೀತಾಗುವುದು ಅಂತಹ ಸಂದರ್ಭಗಳನ್ನು ನಿರ್ಭಯವಾಗಿ ಎದುರಿಸಿದಾಗ ಮಾತ್ರ. ಯಾವುದೇ ಅಹಂಕಾರದ ಭಯವಿಲ್ಲದೆ ಹೇಳುತ್ತೇನೆ : ನನಗಿಂತ ದೊಡ್ಡ ಸಂಶೋಧಕರು ಕನ್ನಡದಲ್ಲಿ ಆಗಿಹೋಗಿದ್ದಾರೆ. ಆದರೆ ನನ್ನಷ್ಟು ಉತ್ಕಟ ಸನ್ನಿವೇಶಗಳನ್ನು ಎದುರಿಸಿದವರು ಇಲ್ಲಿಯವರೆಗೆ ಕನ್ನಡದಲ್ಲಿ ಇಲ್ಲ.

ಸ್ವಲ್ಪ ತಮಾಷೆಯಾದರೂ ವಾಸ್ತವ ಸಂಗತಿಯೊಂದಿದೆ. ಕಾವ್ಯ, ನಾಟಕ, ಕತೆ, ಕಾದಂಬರಿ, ವಿಮರ್ಶೆ ಬರೆದವರ ಬರಹಗಳು ಅವರ ಹೆಸರಿನೊಂದಿಗೇ ಕಾಲದ ಪ್ರವಾಹದಲ್ಲಿ ಮುಂದುವರಿಯುತ್ತವೆ. ಕಾಲ ಕಳೆದಂತೆ ಸಂಶೋಧಕನೊಬ್ಬನ ಶೋಧವು ಉಳಿದಿರಬಹುದು, ಸಂಶೋಧಕನ ಹೆಸರು ಮರೆತುಹೋಗಬಹುದು. ಉದಾಹರಣೆಗೆ, ಪಂಪನ ಶಾಸನದ ಬಗ್ಗೆ ಮಾತನಾಡುವವರು ಅದನ್ನು ಶ್ರಮವಹಿಸಿ ಗುರುತಿಸಿ ಓದಿ ಆ ಬಗ್ಗೆ ಚರ್ಚೆಯನ್ನು ಆರಂಭಿಸಿದ ಡಾ. ವೆಂಕಟರಮಣಯ್ಯನವರ ಹೆಸರನ್ನೇ ಮರೆಯಬಹುದು. ಒಂದು ಕೃತಿರಚನೆ ಮಾಡಿದ ಲೇಖಕನ ಹೆಸರು ಕೃತಿಯ ಜೊತೆ ಜೊತೆಗೇ ಉಳಿಯುವಂತೆ ಪ್ರಚುರವಾಗುವಂತೆ ಒಂದು ಸಂಶೋಧನೆಯ ಜೊತೆ ಸಂಶೋಧಕನ ಹೆಸರು ಮುಂದೆ ಉಳಿಯುವುದಿಲ್ಲ (ಎಲ್ಲೋ ಕೆಲವರನ್ನು ಹೊರತುಪಡಿಸಿ). ಅದಕ್ಕೆ ಆ ಸಂಶೋಧಿತ ಸತ್ಯ ಅವನದಾಗಿರದೆ ಅವನ ಮೂಲಕ ವ್ಯಕ್ತವಾಗಿರುವುದಾಗಿರುವುದೇ ಕಾರಣ. ಇತಿಹಾಸೋಗ್ರಫಿಯಲ್ಲಿ (Historiography, ಎಂದರೆ ಇತಿಹಾಸದ ಇತಿಹಾಸದಲ್ಲಿ) ಅವರ ಹೆಸರುಗಳು ದಾಖಲಾಗಬಹುದು ಅಥವಾ ಅಲ್ಲೂ ಕೈಬಿಟ್ಟು ಹೋಗಬಹುದು. ಇಂತಹ ಮಾತು, ಸಂಶೋಧನೆಯ ಜೊತೆ ಸಂಶೋಧಕನ ಹೆಸರೂ ಉಳಿದುಬರುವಂತಹ ಮಾತು ಸಾಹಿತ್ಯ ಕ್ಷೇತ್ರದ ಸಂಶೋಧಕರಿಗೆ ಮಾತ್ರ ಅನ್ನಿಸುವಂತಹುದು. ಅಲ್ಲೂ ಅವರು, ಸಾಹಿತ್ಯಕ

ಸಂಶೋಧಕರು ಒಂದು ಸಮಾಧಾನ ಪಟ್ಟುಕೊಳ್ಳಬಹುದು ಅಗತ್ಯವಿದ್ದರೆ, ತಮ್ಮ ಮನಸ್ಸಿಗೆ ಸಮಾಧಾನ ಬೇಕಿದ್ದರೆ. ಒಂದು ಸಾಹಿತ್ಯಕೃತಿ ಉಳಿಯುವುದು ಅದರ ಅಭಿವ್ಯಕ್ತಿ ವಿಧಾನದಿಂದ, ಭಾಷೆಯ ಬಳಕೆಯಿಂದ, ಅದರ ರಸಮೌಲ್ಯದಿಂದ (Aesthetic Value). ರಸಮೌಲ್ಯಗಳು ಎಲ್ಲ ಕಾಲಕ್ಕೂ ಒಂದೇ ರೀತಿಯಾಗಿ ಉಳಿಯುವವೆಂದು ಹೇಳುವುದು ಕಷ್ಟ. ಒಂದು ಕಾಲದ ಉತ್ಕೃಷ್ಟ ಕೃತಿ ಇನ್ನೊಂದು ಕಾಲಕ್ಕೆ ತನ್ನ ಸ್ಥಾನದಿಂದ ಚ್ಯುತಗೊಳ್ಳಬಹುದು, ಅಥವಾ ಮೂಲೆಗುಂಪಾಗಬಹುದು. ಸಂಶೋಧನೆಯು ಅದರ ಅಭಿವ್ಯಕ್ತಿ ವಿಧಾನವನ್ನವಲಂಬಿಸದೆ ಅದು ನಿರೂಪಿಸುವ ಸತ್ಯವನ್ನವಲಂಬಿಸಿರುವುದಾದ್ದರಿಂದ ಅದು ಉಳಿಯುತ್ತದೆ, ಶಾಶ್ವತವಾಗಿ. ಕೊನೆಯ ಪಕ್ಷ ತಾತ್ವಿಕವಾಗಿಯಾದರೂ (Theoretically) ಹಾಗೆಂದು ಹೇಳಬಹುದು. ಅದು ಹಳತಾಯಿತೆಂಬ ಪ್ರಶ್ನೆಯೇ ಉದ್ಭವವಾಗುವುದಿಲ್ಲ. ಸಾಹಿತ್ಯ ಕ್ಷೇತ್ರದಲ್ಲೆಂತೋ ವಿದ್ವತ್ ಕ್ಷೇತ್ರದಲ್ಲೂ ಮಹಾಕಳ್ಳತನಗಳಾಗಿವೆ. ಒಬ್ಬ ವ್ಯಕ್ತಿ ಮಾಡಿದ ಕೆಲಸವನ್ನು ದೊಡ್ಡ ಹೆಸರಿನವರು ತಮ್ಮ ಹೆಸರಲ್ಲಿ ಪ್ರಕಟಿಸಿದ್ದುಂಟು. ಅಂತಹ ಸಾಹಿತ್ಯ ಮತ್ತು ಸಂಶೋಧನ ಕ್ಷೇತ್ರಗಳ ಒಂದೊಂದು ದೊಡ್ಡ ಉದಾಹರಣೆಯನ್ನು ನಾನು ಪ್ರತ್ಯಕ್ಷ ಬಲ್ಲೆನಾದರೂ ಅವನ್ನು ಹೇಳುವುದಕ್ಕೆ ಇದು ಸ್ಥಳವಲ್ಲ (ಸಣ್ಣ ಉದಾಹರಣೆಗಳೂ ಹಲವುಂಟು). ಅದೊಂದು ನೋವಿನ ಕತೆ. ನವರಸ, ಪಾಂಡಿತ್ಯರಸಗಳ ಪ್ರಸ್ತಾಪವಾಗಿರುವ ಈ ಪುಸ್ತಕದಲ್ಲಿ ಆ ರಸಭಂಗದ ಪ್ರಸ್ತಾಪ ಬೇಡ.

ತರಗತಿಯಲ್ಲಿ ಉಪಾಧ್ಯಾಯರು ಮಾಡಿದ ಪಾಠ ಮತ್ತು ಹೊರಗಡೆ ಅವರು ಕೊಟ್ಟ ಸೂಚನೆಗಳಂತೆ ಓದಿ ವಿದ್ಯಾರ್ಥಿ ಪದವೀಧರನಾಗುತ್ತಾನೆ. ಅವನು ತನ್ನ ಮಾರ್ಗದರ್ಶಕ ತೋರಿದ ಮಾರ್ಗದಲ್ಲಿ ಕೆಲಸ ಮಾಡಿ ಪಿಎಚ್.ಡಿ. ಪದವಿಯನ್ನೂ ಸಂಪಾದಿಸುತ್ತಾನೆ. ಡಾ. ಆ.ನೇ. ಉಪಾಧ್ಯೆಯವರು ಒಮ್ಮೆ ನನಗೆ ಹೇಳಿದ್ದರು - "ಪಿಎಚ್.ಡಿ. ಎಂಬುದು ಸಂಶೋಧನೆ ಮಾಡಿದ್ದಕ್ಕಾಗಿ ಒಂದು ವಿಶ್ವವಿದ್ಯಾಲಯ ಕೊಟ್ಟ ಪ್ರಶಸ್ತಿ ಪತ್ರ ಅಲ್ಲ. ಅದು ಆ ವ್ಯಕ್ತಿ ಸಂಶೋಧನೆ ಮಾಡಬಲ್ಲನೆಂಬುದಕ್ಕೆ ನೀಡಿದ ಶಿಫಾರಸು ಪತ್ರ". ಈ ಮಾತು ಶ್ರೇಷ್ಠ ವಿದ್ವಾಂಸರೊಬ್ಬರ ಬಾಯಲ್ಲಿ ಬಂದುದು, ಅವರು ಸದಾ ಸಂಶೋಧನೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದುದು ಆ ಮಾತಿಗೆ ನಿಜವಾದ ಅರ್ಥವನ್ನು ತಂದುಕೊಟ್ಟುದಾಗಿದ್ದು ಇಂದಿನ ಪಿಎಚ್.ಡಿ ಪದವೀಧರರು ಮುಖ್ಯವಾಗಿ ಲಕ್ಷಿಸಬೇಕಾದುದು. ಅದೇ ಸಂದರ್ಭದಲ್ಲಿ ಅವರು ನನಗೆ ಹೇಳಿದ ಒಂದು ಘಟನೆ ಹೀಗಿದೆ. ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದ ಸಂಸ್ಕೃತ ವಿಭಾಗದ ಪ್ರತಿಷ್ಠಿತ ಬೋಡೆನ್ ಪ್ರಾಧ್ಯಾಪಕ ಸ್ಥಾನಕ್ಕೆ ಅಭ್ಯರ್ಥಿಗಳಾಗಿ ಹೋಗಿ ಮೊದಲು ಯಾರು ಸಂದರ್ಶಕ ತಜ್ಞರ ಮುಂದೆ ಹಾಜರಾದರು, ನೆನಪಿಲ್ಲ - ಆ ಇಬ್ಬರಲ್ಲಿ ಒಬ್ಬರಾದ ಮೋನಿಯರ್ ವಿಲಿಯಂಸರಿಗೆ ಆಯ್ಕೆ ಸಮಿತಿಯ ತಜ್ಞರು ಹೇಳಿದರು : "ನೀವು ಈ ಸಂದರ್ಶನಕ್ಕೆ ಬಂದುದೇ ಒಂದು ಸೌಭಾಗ್ಯ. ನಿಮ್ಮ ಸಂಶೋಧನೆ ಬಗ್ಗೆ ನಾವು ಕೇಳುವುದೇನೂ ಇಲ್ಲ". ಅದಕ್ಕೆ ವಿಲಿಯಂಸ್ "ಅದು ನಿಜವಿರಬಹುದು. ಆದರೆ ಹೊರಗೆ ಕಾದಿರುವ ಇನ್ನೊಬ್ಬರು ನನಗಿಂತ ಹೆಚ್ಚು ಕೆಲಸ ಮಾಡಿದ್ದಾರೆ, ನಿಮಗೆ ನೆನಪಿರಲಿ" ಎಂದು ಹೇಳಿ ಹೊರಬಂದರು. ಬಳಿಕ ಹಾಜರಾದ ಮ್ಯಾಕ್ಸ್ ಮುಲರ್‌ಗೆ ಅದೇ ತಜ್ಞರು ಮೇಲಿನಂತಹುದೇ

ಮಾತನಾಡಿದಾಗ ಹೇಳಿದರು, "ಇರಬಹುದು, ಆದರೆ ಗಮನಿಸಿ. ಇದೇ ತಾನೇ ಸಂದರ್ಶನ ಮುಗಿಸಿಕೊಂಡು ಹೊರ ಹೋದವರು ನನಗಿಂತ ಹೆಚ್ಚು ಕೆಲಸ ಮಾಡಿದ್ದಾರೆ". ಸಮಿತಿಗೆ ಆ ಇಬ್ಬರಲ್ಲಿ ಒಬ್ಬರನ್ನು ಆರಿಸುವುದು ಕಷ್ಟವಾಗಿ ಜರ್ಮನ್ ಮೂಲದ ಮ್ಯಾಕ್ಸ್ ಮುಲರ್ ಬಿಟ್ಟು ಸ್ಥಳೀಯ ಮೂಲದ ಮೋನಿಯರ್ ವಿಲಿಯಂಸರನ್ನು ಆರಿಸಿದರು. ಆ ಘಟನೆಯನ್ನು ಕೇಳಿದಾಗ ನನಗೆ ಆದ ಅನುಭವವನ್ನು ಓದುಗರ ಊಹೆಗೆ ಬಿಡುತ್ತೇನೆ.

ಮುಂದೊಮ್ಮೆ ಅದೇ ಬೋಡೆನ್ ಪ್ರಾಧ್ಯಾಪಕರಾದ ಟಿ.ಬರೋ ಬಗ್ಗೆ ತೀ.ನಂ.ಶ್ರೀ. ಹೇಳಿದ್ದು. ಅವರು ಆ ಸ್ಥಾನಕ್ಕೆ ಆಯ್ಕೆಗೊಂಡು ಆಕ್ಸ್‌ಫರ್ಡ್ ವಿಶ್ವವಿದ್ಯಾಲಯಕ್ಕೆ ಹೋದ ದಿನ ಸಂಸ್ಕೃತಕ್ಕೆ ಎಷ್ಟು ವಿದ್ಯಾರ್ಥಿಗಳಿದ್ದಾರೆ ಎಂದು ಕೇಳಿದರು. ಕುಲಪತಿಗಳಿಂದ ಬಂದ ಉತ್ತರ - "ನೋಡಿ ಪ್ರಾಧ್ಯಾಪಕರೇ, ನಾವು ವಿದ್ಯಾರ್ಥಿಗಳಿಗೆ ಪ್ರಾಧ್ಯಾಪಕರಿರುವ ಖಾತ್ರಿ ಕೊಡುತ್ತೇವೆ. ಆದರೆ ಪ್ರಾಧ್ಯಾಪಕರಿಗೆ ವಿದ್ಯಾರ್ಥಿಗಳಿರುವ ಬಗ್ಗೆ ಖಾತ್ರಿ ನೀಡಲಾರೆವು". ಅದನ್ನು ಅರ್ಥಮಾಡಿಕೊಂಡ ಬರೋ ತಾವು ಏನು ಮಾಡಬೇಕೆಂದು ಕೇಳಿದಾಗ, ಅವರು ವಿಶ್ವದ ಇಷ್ಟ ಬಂದ ಕಡೆ ಹೋಗಿ ಸಂಶೋಧನೆ ನಡೆಸಲು ಸಲಹೆ ಬಂತು. ಅದರಂತೆ ಅವರು ಭಾರತಕ್ಕೆ ಬಂದು ಸಂಸ್ಕೃತ ವಿದ್ವಾಂಸರಾಗಿದ್ದರೂ (ಅವರ The Sanskrit Language ಒಂದು ಶ್ರೇಷ್ಠ ಕೃತಿ) ದಕ್ಷಿಣ ಭಾರತಕ್ಕೆ ಬಂದು ದ್ರಾವಿಡ ಭಾಷೆಗಳ ಬಗ್ಗೆ ಕೆಲಸ ಮಾಡಿ ಹಲವು ಸಂಪ್ರಬಂಧಗಳನ್ನು ಬರೆದರು (ಮೈಸೂರಲ್ಲಿ ಹಲವು ಕಾಲ ಇದ್ದ ಅವರಿಗೆ ಕನ್ನಡದ ವಿಷಯದಲ್ಲಿ ತೀ.ನಂ.ಶ್ರೀ. ಸಹಾಯ ಮಾಡಿದರು). ಹೀಗಿದೆ ನಿಜವಾದ ವಿದ್ವಾಂಸರ ಪರಸ್ಪರ ಗೌರವ ಮತ್ತು ವಿದ್ವಾಂಸರ ನಿರಂತರ ವ್ಯವಸಾಯ: ಬೋಧನೆಯ ಜವಾಬ್ದಾರಿ ಜೊತೆ ಅಥವಾ ಬೋಧನೆ ಇಲ್ಲದಿದ್ದರೂ ಸಂಶೋಧನೆಯ ಕೃಷಿ.

ಕನ್ನಡ ಸಾಹಿತ್ಯ ಪರಿಷತ್ತು ತೀ.ನಂ.ಶ್ರೀ.ಯವರನ್ನು ಸಮ್ಮೇಳನಾಧ್ಯಕ್ಷರನ್ನಾಗಿ ಆಯ್ಕೆ ಮಾಡಿತು. ಅವರು ತಮಗಿಂತ ಅರ್ಹರಿದ್ದಾರೆ ಎಂದು ಹೇಳಿದ್ದರಿಂದ ಪರಿಷತ್ತು ಡಿ.ಎಲ್.ಎನ್. ಅವರನ್ನು ಆರಿಸಿತು. ತೀ.ನಂ.ಶ್ರೀ. ಆ ಸ್ಥಾನವನ್ನು ತಿರಸ್ಕರಿಸಿದ್ದುದು ಡಿ.ಎಲ್.ಎನ್.ರಿಗೆ ಗೊತ್ತಿರಲಿಲ್ಲ. ಪ್ರಕೃತಿ ಪ್ರೇಮ, ಬಡವರ ಬಗ್ಗೆ ಕರುಣೆ, ರಾಷ್ಟ್ರೀಯತೆ, ಸಾಮಾಜಿಕ ಪ್ರಜ್ಞೆ ಇವುಗಳ ಬಗ್ಗೆ ಬರೆಯುವ ಸಾಹಿತ್ಯ ಕ್ಷೇತ್ರದ ಕೆಲವರಿಗೆ ಸಂಶೋಧನ ಕ್ಷೇತ್ರದ ವ್ಯಕ್ತಿಗಳೆಂದರೆ ಜಡರು, ನೀರಸರು, ಮಾನವೀಯ ಗುಣಗಳಿಂದ ದೂರವಿರುವವರು ಎಂಬ ಏನೆಲ್ಲ ತಪ್ಪು ಕಲ್ಪನೆಗಳಿರುತ್ತವೆ. ಮೂಲಭೂತವಾಗಿ ಸಂಶೋಧಕರೆಂದು ಗುರುತಿಸಬಹುದಾದ ಕ.ವೆಂ. ರಾಘವಾಚಾರ್ಯರನ್ನು ನಾವು "ದೂರ್ವಾಸ"ರೆಂದೇ ಕರೆಯುತ್ತಿದ್ದೆವು - ಆಗ ನಾವು ವಿದ್ಯಾರ್ಥಿಗಳು, ಹುಡುಗರು. ಸದಾ ಮುಖವನ್ನು ಸಿಂಡ್ರಿಸಿಕೊಂಡಿರುತ್ತಿದ್ದ ಅವರು ಸ್ವಲ್ಪ ಮುಂಗೋಪಿಗಳೂ ಆಗಿದ್ದರು. ನಮಗೆ ಓದಲು ಬೇಕಾದ ಪುಸ್ತಕವನ್ನು ಕೇಳಲು ಅವರ ಮನೆಗೆ ಹೆದರಿಕೊಂಡೇ ಹೋದರೆ "ಕೂತ್ಕೋ" ಎಂದು - ಸಿಡುಕಿನಿಂದ ಎಂದರೆ ತಪ್ಪಾದೀತು, ನಮಗೆ ಹಾಗನ್ನಿಸುತ್ತಿತ್ತು ಅಷ್ಟೇ - ಹೇಳಿ ಕುಳ್ಳಿರಿಸಿ ಒಳಗಿನಿಂದ ದೋಸೆಯನ್ನೋ ಪುಳಿಯೋಗರೆಯನ್ನೋ ತಂದು ತಿನ್ನಲು ಕೊಟ್ಟು ಪುಸ್ತಕವನ್ನೂ ಕೊಟ್ಟು ಕಳಿಸುತ್ತಿದ್ದರು. ಸಂಶೋಧಕರಲ್ಲೂ ಹೃದಯ ಶ್ರೀಮಂತರುಂಟು, ಸಾಹಿತಿಗಳಲ್ಲೂ ಉಂಟು; ಅಥವಾ ಎರಡೂ

ಕ್ಷೇತ್ರಗಳಲ್ಲಿ ನೀರಸಹೃದಯರೂ ಸ್ವಾರ್ಥಿಗಳೂ ಉಂಟು. ಸಾಹಿತ್ಯ ಕ್ಷೇತ್ರದ ಒಂದು ಅನುಕೂಲವೆಂದರೆ ಆಕರ್ಷಕ ಮಾತು ಬರಹಗಳಿಂದ ತಮ್ಮ ಕೊರತೆಗಳನ್ನು ಮುಚ್ಚಿಕೊಳ್ಳಲು ಅವಕಾಶವಿರುತ್ತದೆ. ಹತ್ತಿರದಿಂದ ಕಂಡವರಿಗೆ ಸಂಶೋಧಕರೂ ಎಲ್ಲರಂತೆ ಮನುಷ್ಯರೆಂಬುದು ತಿಳಿದಿರುತ್ತದೆ. ಸಂಶೋಧನೆಯ ಬಗ್ಗೆ ತಪ್ಪು ಕಲ್ಪನೆಗಳಿರುವುದು ಸಾಹಿತ್ಯ ಕ್ಷೇತ್ರದಲ್ಲಿ ಮಾತ್ರ. ಉಳಿದೆಲ್ಲ ಕಡೆ ಸಂಶೋಧಕನಿಗೇ ಅಗ್ರಸ್ಥಾನವೆಂಬುದನ್ನು ಎಲ್ಲರೂ ಬಲ್ಲರು. ಹಾಗೆ ನೋಡಿದರೆ ವಿಜ್ಞಾನ, ಸಮಾಜ ವಿಜ್ಞಾನ ಕ್ಷೇತ್ರಗಳ ಜನರು ಸಾಹಿತ್ಯ ಕ್ಷೇತ್ರದವರನ್ನು ಬರೀ ಭಾವುಕರು, ಕಲ್ಪನಾ ಗಗನವಿಹಾರಿಗಳು, ಭಾಷಣಕ್ಕೆ ಮಾತ್ರ ಅರ್ಹರು, ಬೇರೆ ಅರ್ಹತೆಯಿಲ್ಲದ್ದರಿಂದ ಸಾಹಿತ್ಯವನ್ನು ಆರಿಸಿಕೊಂಡವರು ಎಂಬ ಸ್ವಲ್ಪ ಹಗುರ ಭಾವನೆಯಿಂದಲೇ ನೋಡುತ್ತಾರೆ. ಒಮ್ಮೆ ವಿಜ್ಞಾನ ವಿಭಾಗದ ಅಧ್ಯಾಪಕ ಗೆಳೆಯನೊಬ್ಬ ನನಗೆ ಹೀಗೆ ತಮಾಷೆ ಮಾಡಿದ್ದರು ಕೇವಲ ಸ್ನೇಹದಿಂದ - "ಮೂರ್ತಿಗಳೇ, ನೀವು ಹೇಳುತ್ತಿರುವುದು ನಿಜವೋ ಸಾಹಿತ್ಯವೋ". ನಾನಂತೂ ಆ ಮಾತಿನಿಂದ ನಕ್ಕು ನಕ್ಕು ಬಿದ್ದೆ. ವಿಜ್ಞಾನ ಕ್ಷೇತ್ರದ ಕೆಲವರು ಸಾಹಿತ್ಯವನ್ನು ನೋಡುವುದು ಹಾಗೆ. ಸಾಹಿತ್ಯ, ಸಾಹಿತ್ಯೇತರ ಕ್ಷೇತ್ರಗಳ ವಿವೇಕಿಗಳು ಪರಸ್ಪರ ಲಘುವಾಗಿ ಯೋಚಿಸುವುದಿಲ್ಲವೆಂಬುದನ್ನು ಮತ್ತೆ ಹೇಳಬೇಕಾಗಿಲ್ಲ.

ಯಾವುದೇ ಕ್ಷೇತ್ರವಾಗಲಿ, ಅದರಲ್ಲಿ ತನ್ಮಯತೆಯಿಂದ ತೊಡಗಿಸಿಕೊಳ್ಳುವುದು ಮುಖ್ಯ, ಅಷ್ಟೇ. ಆರ್. ನರಸಿಂಹಾಚಾರ್, ಎಂ.ಎ. ರಾಮಾನುಜ ಅಯ್ಯಂಗಾರ್, ಬೆಳ್ಳಾವೆ ವೆಂಕಟನಾರಾಯಣಪ್ಪ, ಕೆ.ಜಿ. ಕುಂದಣಗಾರ, ಫ.ಗು. ಹಳಕಟ್ಟಿ, ಶಿ.ಶಿ. ಬಸವನಾಳ, ಡಿ.ಎಲ್.ಎನ್, ತೀ.ನಂ.ಶ್ರೀ, ಎಚ್. ದೇವೀರಪ್ಪ, ಎಲ್. ಬಸವರಾಜು ಇವರೇ ಮೊದಲಾದ ವಿದ್ವಾಂಸರು ಹುಳು ಹತ್ತಿದ ಹಸ್ತಪ್ರತಿಗಳನ್ನು ಸಂಗ್ರಹಿಸಿ ಒರಸಿ ಕಷ್ಟಪಟ್ಟು ಓದಿ ಚರಿತ್ರೆ ಬರೆಯದೇ ಇದ್ದಿದ್ದರೆ, ಪ್ರತಿ ಮಾಡಿ ಸಂಪಾದಿಸಿ (Edit) ಕೊಡದಿದ್ದರೆ ಆಧುನಿಕ ಪೂರ್ವ ಸಾಹಿತ್ಯ ಓದಲು ಇರಲಿ, ನೋಡಲಿಕ್ಕಾದರೂ ಎಲ್ಲಿ ಸಿಗುತ್ತಿತ್ತು ? ಇದೆಲ್ಲ ಬರೆಯುವುದು ವ್ಯರ್ಥವೆನ್ನಿಸಿದರೂ ಅದರಲ್ಲೂ ಕಳೆದ ಹತ್ತು ಹದಿನೈದು ವರ್ಷಗಳ ಅವಧಿಯಲ್ಲಿ ನಡೆದಿರುವ ವಿದ್ಯಮಾನಗಳ ಕೆಲವು ವಾಸ್ತವಗಳನ್ನು ಬಲ್ಲ ನಾನು ಅದನ್ನು ಇಲ್ಲಿ ಬರೆಯಲೇಬೇಕಾಗಿದೆ.

ಈ ಪುಸ್ತಿಕೆ ತರುಣ ಸಂಶೋಧಕರಿಗೆ ಉತ್ಸಾಹವನ್ನು ತುಂಬುವಂತಾಗಲಿ ಎಂಬ ಸೂಕ್ಷ್ಮ ಸಹಜ ಬಯಕೆ ಎಲ್ಲ ಲೇಖಕರಿಗಿರುವಂತೆ ನನಗೂ ಇದೆಯಾದರೂ, ಈ ಕೃತಿಯನ್ನು ಬರೆಯುವುದರಲ್ಲಿ ಎಲ್ಲ ಲೇಖಕರಂತೆ ನಾನೂ ಸಂತೋಷ ಪಟ್ಟಿದ್ದೇನೆ ಮಾತ್ರವಲ್ಲ, ನನ್ನೊಳಗಿನ ತೀವ್ರೋತ್ಸಾಹದ ಸಂಶೋಧಕನಿಗೆ ತಾರುಣ್ಯವನ್ನು ತಂದುಕೊಟ್ಟಿದ್ದೇನೆ ಎಂದೂ ಹೇಳಬಯಸುತ್ತೇನೆ.

**ಬಹು ದೊಡ್ಡ ಶೋಧಗಳು!**

ಹಲವು ಸಭೆಗಳಲ್ಲಿ ನನ್ನನ್ನು ಸಂಶೋಧಕನೆಂದು ಪರಿಚಯ ಮಾಡಿಕೊಡುವುದುಂಟು: ಅಲ್ಲಿ ಸಂಪ್ರದಾಯದಂತೆ ಕೆಲವು ಉತ್ಪ್ರೇಕ್ಷೆಯ ಮಾತುಗಳೂ ಬಂದಿರುತ್ತವೆ. ತಡವಾಗಿ ಆರಂಭವಾದ ಕೆಲವು ಸಭೆಗಳಲ್ಲಿ ಈಚಿನ ನನ್ನ ಬಹು ದೊಡ್ಡ ಶೋಧವೊಂದನ್ನು ತಿಳಿಸುತ್ತಿದ್ದೇನೆ ಎಂದಾಗ ಸಭಿಕರ ಕುತೂಹಲ ಕೆರಳುತ್ತದೆ. -

"ಈ ಶೋಧ ನಿಮಗೆ ಗೊತ್ತಿರುವುದೇ ಹೌದು, ಗೊತ್ತಿಲ್ಲದಿರುವುದೂ ಹೌದು. ಅಂಗಡಿಗಳಲ್ಲಿ ಕೋಟಿಗಟ್ಟಲೆ ಬೆಲೆ ಬಾಳುವ ಗಡಿಯಾರ ದೊರಕಬಹುದು : ಆದರೆ ಎಷ್ಟು ಕೋಟಿ ಹಣ ಕೊಟ್ಟರೂ ಯಾವುದೇ ಅಂಗಡಿಯಲ್ಲಿ ಒಂದು ನಿಮಿಷವೂ ದೊರಕದು." ಇದನ್ನು ಕೇಳಿದಾಗ ಶ್ರೋತೃಗಳ ಮುಖದಲ್ಲಿ ನಗುವಿನ ಎಳೆ ಕಾಣಿಸಿಕೊಂಡು ಹಾಗೇ ಮಾಯವಾಗುತ್ತದೆ. ಆ ಮಾತು ಅವರ ಮನಸ್ಸಿನ ಆಳಕ್ಕೆ ಇಳಿದುದು ಕಾಣುತ್ತದೆ : ಅದು ಮುಂದೆ ಅವರ ನಡೆಯಲ್ಲಿ ಕಾಣಿಸುವುದೇ, ಯಾರು ಹೇಳಬೇಕು?

ಹಿಂದೊಮ್ಮೆ ಸೂಚಿಸಿರುವಂತೆ, ಒಂದು ವಿಷಯದ ಬಗ್ಗೆ ಬಹು ಹೊತ್ತು ಆಕರ್ಷಕವಾಗಿ ಮಾತನಾಡಲು ಅಥವಾ ಬರೆಯಲು ವ್ಯಕ್ತಿ ಗಳಿಸಬೇಕಾದ ಅರ್ಹತೆಯೆಂದರೆ, ಅವನು ಅದರ ಬಗ್ಗೆ ಆದಷ್ಟು ಕಡಮೆ ತಿಳಿದಿರುವುದು! ಭಾಷೆ ನಮ್ಮ ಒಳಗನ್ನು ವ್ಯಕ್ತಪಡಿಸುವ ಸಾಧನದಂತೆಯೇ ಅದನ್ನು ಮುಚ್ಚಿಡುವ, ಇರುವ ವಾಸ್ತವವನ್ನು ಮುಚ್ಚಿ ನಮ್ಮನ್ನು ವೈಭವೀಕರಿಸಿಕೊಳ್ಳುವ ಸಾಧನವೂ ಹೌದು. ಇಂದು 'ಸತ್ಯವಂತ' ಯಾರು ? ಸತ್ಯದ ಬಗ್ಗೆ ಆಕರ್ಷಕವಾಗಿ ಮಾತನಾಡುವವನು, ಬರೆಯುವವನು ತಾನೇ!. ಸುಳ್ಳು ಹೇಳುವುದು ಅಥವಾ ಸುಳ್ಳನ್ನು ವ್ಯಕ್ತಪಡಿಸಲು ಪ್ರಾಣಿಗಳಿಗೆ ತಿಳಿಯದು. ಆ ಶಕ್ತಿ ಇರುವುದು ನರಮಾನವನಿಗೆ ಮಾತ್ರ!

'ಸತ್ಯ' ಶೋಧಕರಾದ ಸಂಶೋಧಕರು (ಅಂತೆಯೇ ನಾನು ಸೇರಿದಂತೆ ಎಲ್ಲರೂ) ಅಂತರ್ಗತಗೊಳಿಸಿಕೊಳ್ಳಬೇಕಾದ ಒಂದು ವಾಸ್ತವ ಅದು.

**ಕೊನೆಯ ಗುಟುಕು**

ಕನ್ನಡ ವಿಶ್ವವಿದ್ಯಾಲಯ ಪ್ರಕಟಿಸಿರುವ ನನ್ನ ಸಂಪ್ರಬಂಧ ಸಂಪುಟ "ಹೊಸತು ಹೊಸತು" ಕೃತಿಗೆ ಕೇಂದ್ರ ಸಾಹಿತ್ಯ ಅಕಾದೆಮಿ ಪ್ರಶಸ್ತಿ ಬಂದುದು ಕೇವಲ ಆಕಸ್ಮಿಕವೆಂದು ನಾನು ಭಾವಿಸಿಲ್ಲ. ಐರೋಪ್ಯ ತತ್ವಜ್ಞಾನಿ ಷೊಪೆನ್‌ಹೌರ್ ಉಪನಿಷತ್ತುಗಳ ಬಗ್ಗೆ ಹೀಗೆ ಬರೆಯುತ್ತಾನೆ - "The study of the Upanishads has been the solace of my life; it will be the solace of my death". ಉಪನಿಷತ್ತುಗಳ ಅಧ್ಯಯನ ಎಂಬ ಭಾಗದಲ್ಲಿ 'ಹಂಪಿ' ಎಂಬುದನ್ನು ಅಳವಡಿಸಿದರೆ ಮೇಲಿನ ವಾಕ್ಯ ನನ್ನ ಭಾವನೆಯನ್ನು ಬಿಂಬಿಸೀತು. ಅಂತಹ ಹಂಪಿಯ* ಕನ್ನಡ ವಿಶ್ವವಿದ್ಯಾಲಯ ಈ ಪುಸ್ತಿಕೆಯನ್ನು ಹೊರತರುತ್ತಿರುವುದು ನನಗೆ ಸಂತೋಷವಲ್ಲದೆ ಮತ್ತೇನು!

---

*ಹಂಪಿಯಂತೆ ಸ್ಥಳೀಯ ದೈವ ವಿಶ್ವೇಶ್ವರನ ನೇರ ಅಧೀನದಲ್ಲಿ ಕಾಶಿ ಇದ್ದಿತು ಎಂಬುದಕ್ಕೆ ಸ್ಪಷ್ಟ ಆಧಾರಗಳಿವೆ. "Shiva in the form of Bishveshwar is regarded as the spiritual monarch of the city and this is the holiest of all holy places in the sacred city (of Varanasi)." - Imperial Gazetteer of India. VII p. 190. "The popular belief is that this is the capital of Shiva and hence no one else can be the overlord of Kashi" - Baidyanath Saraswathi: Kashi (Myth and Reality of a classical cultural Tradition). P. 30 ಕಾಶಿಯ "ದೊರೆ"ಯು ವಿಶ್ವನಾಥನ ಪ್ರತಿನಿಧಿ : ಅವನ ಅರಮನೆ ಕಾಶಿಯ ಹೊರಗೆ, ರಾಮನಗರದಲ್ಲಿದೆ. (ಪು. 365 ನೋಡಿ.)

# ಕನ್ನಡಾಯಣ (ಜಲಬುಗ್ಗೆಯ ಸಿದ್ಧಗಂಗೆಯಿಂದ ತುಂಗಭದ್ರೆಯ ಹಂಪಿವರೆಗೆ)

## ಹಿನ್ನೆಲೆ

ಮೇ 11, 1985 ಹಂಪಿಗೆ ಬೆಂಗಳೂರಿನಿಂದ (ಸರಿಯಾಗಿ ಹೇಳಬೇಕಾದರೆ ಸಿದ್ಧಗಂಗೆಯಿಂದ) ನಡೆದೇ ಹೋಗಬೇಕು ಎಂಬ ಸಂಕಲ್ಪವನ್ನು ಮಾಡಿ, ಅಂದು ಹೊರಟೇಬಿಟ್ಟೆ. ಆ ದಿನಗಳು ನನಗೆ ಬಹುವಾದ ಖಿನ್ನತೆಯನ್ನು ತಂದಿದ್ದುವು. ಚಾಮರಾಜಪೇಟೆ ಪಕ್ಕ ಬಾಡಿಗೆ ಮನೆ ಮಾಡಿ, ವಿಜಯನಗರದ ಎರಡನೇ ಹಂತದಲ್ಲಿ ಕೊಂಡಿದ್ದ ಒಂದು ನಿವೇಶನದಲ್ಲಿ ಮನೆ ಕಟ್ಟಲು ಆರಂಭಿಸಿ ನೆಲಗಟ್ಟು ಕೂಡ ಹಾಕಿಸಿದೆ. ಆ ಬಗ್ಗೆ ಮುಂದೆ ಬರೆಯುತ್ತೇನೆ. ಮೈಕೋ ಕಾರ್ಖಾನೆಯ ಜಿ.ಸಿ. ನಾರಾಯಣ, ಮಿನರ್ವ ಮಿಲ್ಲಿನ ರೇ. ಸಿದ್ಧಲಿಂಗಯ್ಯ ಇಬ್ಬರೂ ತಾವೇ ನಿಂತು ಮನೆ ಕಟ್ಟಿಸುವುದಾಗಿಯೂ ನೆಲಗಟ್ಟಿನ ಮೇಲೆ ಗೋಡೆ ಏಳಿಸಿ ಮನೆ ಕಟ್ಟಿ ಮುಗಿಸುವಂತೆಯೂ ಪ್ರೀತಿಯಿಂದ ಒತ್ತಾಯಿಸಿದ್ದರು. ಆದರೆ ನನಗೆ ಬೆಂಗಳೂರಿನಿಂದ ಹೊರ ಹೋಗಬೇಕು, ದೂರ ಹೋಗಬೇಕು - ಆರಾಮವಾಗಿ ಅಲ್ಲ, ದೇಹವನ್ನು ದಂಡಿಸುತ್ತ, ಮನಸ್ಸನ್ನು ಹದಗೊಳಿಸುತ್ತ - ಎಂಬ ಭಾವನೆ ತೀವ್ರವಾಗಿ ಕಾಡುತ್ತಿತ್ತು. ಆ ದಿನಗಳಲ್ಲಿ ತೀವ್ರ ಬಳಲಿದ್ದೆ. ಆ ವರ್ಷದ ಪರೀಕ್ಷೆಯ ಮೌಲ್ಯಮಾಪನ ಕೆಲಸ ಬೇಡವೆಂದು ನಿರಾಕರಿಸಿದ್ದೆ. ವರ್ಷದ ಕೊನೆಯಲ್ಲಿ ನಡೆಯುವ ಎಂ.ಎ. ವಿದ್ಯಾರ್ಥಿಗಳ ಸಂತೋಷ ಕೂಟದಲ್ಲಿ ನಾನು ಮಾತನಾಡಿ, ನನ್ನ ಖಿನ್ನತೆಯನ್ನೂ ಹಂಪಿಗೆ ಹೋಗುವ ನನ್ನ ನಿರ್ಧಾರವನ್ನೂ ವ್ಯಕ್ತಪಡಿಸಿದಾಗ ಒಂದಿಬ್ಬರು ಸಹೋದ್ಯೋಗಿಗಳು ಸೂಕ್ಷ್ಮ ಗೇಲಿಯ ಧ್ವನಿಯಲ್ಲಿ ಮಾತೂ ಆಡಿದ್ದರು. ಅದು ನನಗೆ ಸ್ವಾಗತಾರ್ಹವೇ ಆಗಿತ್ತು. ಕಾರಣ, ಅದೆಲ್ಲವನ್ನೂ ನುಂಗಿ ಅರಗಿಸಿಕೊಳ್ಳುವ ಶಕ್ತಿಯನ್ನು ಅಂತಹ ಪ್ರಸಂಗಗಳಲ್ಲವೇ ತಂದುಕೊಡುವುದು ? 'ಸಾಹಿತಿಗಳ ಕಲಾವಿದರ ಬಳಗ'ದ ಕಾರ್ಯಕರ್ತರೆಲ್ಲ ನನ್ನ ಕಾಲ್ನಡಿಗೆ ಪ್ರವಾಸವನ್ನು ಖಂಡ ತುಂಡವಾಗಿ ವಿರೋಧಿಸಿದ್ದರು. ಅದೆಲ್ಲವೂ ನನ್ನ ನಿರ್ಧಾರವನ್ನು ಗಟ್ಟಿಗೊಳಿಸಿದ್ದುವು. ಮನೆಯಲ್ಲಿ ನನ್ನ ಹೆಂಡತಿ ಮಕ್ಕಳಿಬ್ಬರೂ ವಿರೋಧಿಸಿದ್ದರೂ ಅವರನ್ನು ಹೇಗೋ ಒಪ್ಪಿಸಿದ್ದೆ. ಮೇ 10, ನನ್ನ ಹುಟ್ಟಿದ ದಿನ; ಅಂದು ಬೆಂಗಳೂರಲ್ಲೇ ಇದ್ದು ಮಾರನೆಯ ದಿನ ಬೆಳಿಗ್ಗೆ ಬೆಂಗಳೂರಿಂದ ಸಿದ್ಧಗಂಗೆಗೆ ಬಸ್ಸಿನಲ್ಲಿ ಹೋಗಿ ಅಲ್ಲಿಂದ ಕಾಲ್ನಡಿಗೆ ಪ್ರವಾಸ ಕೈಗೊಳ್ಳಲು ನಿರ್ಧರಿಸಿದೆ. ಎರಡು ಚೀಲಗಳು - ಒಂದು ಕೈಯಲ್ಲಿ ಹಿಡಿಯಲು, ಇನ್ನೊಂದು ಬಗಲಿಗೆ ನೇತು ಹಾಕಿಕೊಳ್ಳಲು ಸಿದ್ಧವಾದುವು. ಹಾಕಿಕೊಂಡ ಉಡುಪುಗಳಲ್ಲದೆ ಒಂದು ಜೊತೆ ಬಟ್ಟೆ

(ಅಂಗಿ, ಪೈಜಾಮ, ನಿಕ್ಕರು, ಬನಿಯನ್), ಒಂದು ಟವಲ್, ಬ್ರಷ್, ಟೂತ್ ಪೇಸ್ಟ್, ಸೋಪು, ಒಂದು ನೀರಿನ ಬಾಟ್ಲಿ, ಒಂದು ಬೆಡ್ ಷೀಟ್, ಕೆಮ್ಮು ನೆಗಡಿ ಮಾತ್ರೆಗಳು ಇಷ್ಟು ಸ್ಥೂಲವಾಗಿ ನನ್ನ ಚೀಲಗಳಲ್ಲಿದ್ದ ವಸ್ತುಗಳು. ದಿನಚರಿಯನ್ನು ಬರೆಯಲು ಎರಡು ನೋಟ್ ಪುಸ್ತಕ ಇದ್ದುವು. ದಾರಿಯಲ್ಲಿ ಕಾಫಿ ತಿಂಡಿಗೆ ಸ್ವಲ್ಪ ಹಣವನ್ನು ಜೇಬಿಗೆ ಸೇರಿಸಿದೆ. 11.5.1985ರಂದು ಬೆಳಿಗ್ಗೆ ಬೆಂಗಳೂರಿನಿಂದ ಹೊರಟೆ. ಅಂದಿನಿಂದ ಪ್ರತಿದಿನದ ಅನುಭವವನ್ನು ಕಂಡದ್ದು, ಕೇಳಿದ್ದು, ಅನುಭವಿಸಿದ್ದು ಎಲ್ಲವನ್ನು ಅಲ್ಲಲ್ಲಿಯೇ, ಸಾಧ್ಯವಾದಷ್ಟು ಆಯಾ ದಿನವೇ ಬರೆದಿಟ್ಟೆ. ಅದನ್ನೆಲ್ಲ ಇಲ್ಲಿ ದಾಖಲು ಮಾಡುತ್ತಿದ್ದೇನೆ. ಇದೇ "ಕನ್ನಡಾಯಣ" - ಕನ್ನಡದ ದಾರಿ, ಕನ್ನಡಕ್ಕಾಗಿ ಓಡಾಟ.

## ಸಿದ್ಧಗಂಗೆ - ತುಮಕೂರು

"ಕನ್ನಡಕ್ಕಾಗಿ ನನ್ನನ್ನು ನಾನು ತೀವ್ರವಾಗಿ ಶೋಧಿಸಿಕೊಳ್ಳಬೇಕು, ಆ ಶೋಧನೆಯ ಮೂಲಕವೇ ನನ್ನನ್ನು ನಾನು ತಿದ್ದಿಕೊಳ್ಳಬೇಕು ಮತ್ತು ಆ ಮೂಲಕ ಒಬ್ಬ ಅಪ್ಪಟ ಕನ್ನಡ ಕಾರ್ಯಕರ್ತನಾಗಬೇಕು ಎಂಬ ತೀವ್ರ ತುಡಿತ ನನ್ನನ್ನು ಪ್ರಚೋದಿಸಿತ್ತು. ಯಾವುದೇ ಮೌಲ್ಯ ತನಗೆ ತಾನೇ ಸ್ವಯಂ ಪ್ರಕಾಶವುಳ್ಳ ವಸ್ತುವಲ್ಲ. ವ್ಯಕ್ತಿ ಅಥವಾ ವ್ಯಕ್ತಿಗಳ ನಿಷ್ಕಳಂಕ ಶ್ರಮ, ತ್ಯಾಗ, ಬಲಿದಾನಗಳು ಮಾತ್ರ ಅದಕ್ಕೆ ಒಂದು ಬೆಲೆಯನ್ನು ತಂದುಕೊಟ್ಟುದು ಕಾರಣವಾಗಿ ಅವಕ್ಕೆ ಬೆಲೆ ಬರುತ್ತದೆ. ವಿಶ್ವದ ಇತಿಹಾಸದ ಪುಟಗಳ ತುಂಬ ಅಂತಹ ತ್ಯಾಗಗಳ ಚರಿತ್ರೆಯೇ ತುಂಬಿದೆ. ಅಂತಹ ವ್ಯಕ್ತಿಗಳ ಚರಿತ್ರೆಯೇ ವಿಶ್ವದ ನಿಜವಾದ ಚರಿತ್ರೆ (ಬರೀ ರಾಜರದು ಅಲ್ಲ). ಹರಿಶ್ಚಂದ್ರ ಸತ್ಯಕ್ಕಾಗಿ, ಕರ್ಣ ತ್ಯಾಗಕ್ಕಾಗಿ ಎಂತಹ ಯಾತನೆಗೆ ತಮ್ಮನ್ನು ತಾವು ಒಡ್ಡಿಕೊಂಡರು ! ಏಸು ಶಿಲುಬೆಗೆ ಏರದಿದ್ದರೆ ವಿಶ್ವಪ್ರೇಮದ ಪರಿಕಲ್ಪನೆಗೆ ಹೇಗೆ ಬೆಲೆ ಬಂದೀತು ! ಸಾಕ್ರೆಟೀಸ್ ವಿಷ ಕುಡಿಯುವುದರ ಮೂಲಕವೇ ಜ್ಞಾನ ವಿವೇಕ ವೈಚಾರಿಕತೆಗಳ ಮೇಲ್ಮೆಯನ್ನು ಎತ್ತಿ ಹಿಡಿದ. ಗಾಂಧೀಜಿಯಿಂದ ಅಹಿಂಸೆಗೆ ಬೆಲೆ ಬಂದುದು ಹೇಗೆ ? ಅವರು ಅದಕ್ಕಾಗಿ ತೆತ್ತ ಬೆಲೆ ಸಾಮಾನ್ಯವೇ ? ಇಡೀ ತಮ್ಮ ಜೀವನವನ್ನೇ ಒಂದು ಸತ್ಯಶೋಧನೆ ಎಂದು ಕರೆದುಕೊಂಡರು, ತಮ್ಮನ್ನು ತಾವು ತೀವ್ರ ಪರೀಕ್ಷೆಗೆ ಒಡ್ಡಿಕೊಂಡರು. ಅಸ್ಪೃಶ್ಯರ ಅವಮಾನ ನೋವುಗಳನ್ನು ತಮ್ಮವೆಂದು ಭಾವಿಸಿದರು, ದೇಶದ ಸ್ವಾತಂತ್ರ್ಯಕ್ಕಾಗಿ ಪಣತೊಟ್ಟರು, ಪ್ರಾಣ ತೆತ್ತರು. ಸಿದ್ಧಾರ್ಥ ಭೋಗಜೀವನವನ್ನು ನಿರಾಕರಿಸಿ ಯಾತನಾಮಯ ಬದುಕನ್ನು ಆರಿಸಿಕೊಂಡ.

"ನನ್ನನ್ನು ನಾನು ದಂಡಿಸಿಕೊಳ್ಳುವುದಕ್ಕೂ ಒಂದು ಅರ್ಹತೆಯನ್ನು ಸಂಪಾದಿಸಿಕೊಳ್ಳಬೇಕು. ಭೋಗ ಒಂದು ಸ್ವಾರ್ಥವಾದರೆ ದೇಹ ದಂಡನೆಯೂ ಒಂದು ಸ್ವಾರ್ಥವಾಗಬಹುದು, ಒಂದು ಪ್ರದರ್ಶನ ಆಗಬಹುದು, ಜನರ ಗಮನವನ್ನು ಸೆಳೆದುಕೊಳ್ಳುವ ಒಂದು ಆಟ ಆಗಬಹುದು. ಅದನ್ನು ಮೀರಿ ನಿಲ್ಲಬೇಕು, ಬೆಳೆಯಬೇಕು.

"ದೇವರೇ, ಏನು ಬರೆಯಲಿ? ನನ್ನ ಆಳವಾದ ನೋವನ್ನು ಎಲ್ಲಿಂದ ಆರಂಭಿಸಲಿ? ಬರಹ ಒಂದು ಶಿಲ್ಪ ನಿಜ, ಆದರೆ ಎಲ್ಲಿಂದ ಹೇಗೆ ಆರಂಭಿಸಲಿ? ನನ್ನನ್ನು ಈ ಪಾದಯಾತ್ರೆಗೆ ತೊಡಗಿಸಿದ್ದು ಯಾವುದು? ಈ ಹುಚ್ಚು ಸಾಹಸಕ್ಕೆ ಏಕೆ ಕೈಹಾಕಿದೆ? ಯೋಚಿಸಲೂ ಹೆದರಿಕೆ ಆಗುತ್ತದೆ. ನನ್ನ ಸ್ವಭಾವವೇ ಅದು: ದೊಡ್ಡದಕ್ಕೆ ಕೈಹಾಕುತ್ತೇನೆ. ಆಮೇಲೆ ಹೆದರುತ್ತೇನೆ. ಆಮೇಲೆ ಧೈರ್ಯ ತಾಳುತ್ತೇನೆ. ಸಾಧಿಸುತ್ತೇನೆ, ಪೂರ್ತಿ ಅಲ್ಲದಿದ್ದರೂ.

"ಕನ್ನಡ ಅದೀಗ ನನ್ನ ಉಸಿರು, ಪ್ರಾಣ, ಆತ್ಮ. ಅದು ಕೇವಲ ಭಾಷೆ ಅಲ್ಲ, ಅದು ನನಗೆ ಆದರ್ಶ, ಮಂತ್ರ, ಸದ್ಗತಿ, ಮೋಕ್ಷ. ಅದಕ್ಕಾಗಿಯೇ ಅಲ್ಲವೇ ನಾನು ಯಾವು ಯಾವುದೋ ಕೋರ್ಸುಗಳನ್ನು ಬಿಟ್ಟು ಕನ್ನಡ ಆನರ್ಸಿಗೆ ಹೋದುದು ? ಅದರ ಕತೆ ಹಾಗಿರಲಿ. ಕಳೆದ ಮೂರು ವರ್ಷಗಳಿಂದ ಬೆಂಗಳೂರಲ್ಲಿ ನಾವು ಪಟ್ಟಿರುವ ಶ್ರಮ ಎಷ್ಟು! ಭೇಟಿ ಮಾಡಿರುವ ಜನ, ಕೂಗಿರುವ ಘೋಷಣೆ, ಹೊರಡಿಸಿದ ಕರಪತ್ರ, ಅಲೆದಾಟ, ಸಭೆಗಳು, ಬಿಟ್ಟ ನಿಟ್ಟುಸಿರುಗಳು ಇವನ್ನೆಲ್ಲ ಲೆಕ್ಕ ಇಡಲು ಸಾಧ್ಯವೇ ? 'ಗೋಕಾಕ್ ಚಳವಳಿ' ನಡೆಯಿತು. ಜನ ಎಚ್ಚೆತ್ತರು. ದನಿ ಎತ್ತಿದರು. ನಮಗೆಲ್ಲ ಸಂಭ್ರಮವೋ ಸಂಭ್ರಮ. ಓ, ಜನ ಮೇಲೆದ್ದಿದ್ದಾರೆ, ಇನ್ನು ಕನ್ನಡದ ಸಮಸ್ಯೆಗಳನ್ನು ಅವರು ಕೈಗೊತ್ತಿಕೊಳ್ಳುತ್ತಾರೆ, ಸ್ಪಂದಿಸುತ್ತಾರೆ, ಈ ಸಂಸ್ಕೃತಿಯನ್ನು ಉಳಿಸುತ್ತಾರೆ, ಕನ್ನಡದ ಪರಂಪರೆ ಹರಿಗಡಿದ ದಾರದಂತೆ ಛಿದ್ರವಾಗುವುದಿಲ್ಲ, ಹೊರಗಿನ ಮಾತಿರಲಿ, ಕೊನೆಯ ಪಕ್ಷ ಕರ್ನಾಟಕದಲ್ಲಿಯಾದರೂ ಕನ್ನಡಿಗನಿಗೆ ಆಶ್ರಯ ದೊರಕೀತು ಎಂಬ ಏನೆಲ್ಲ ಸುಂದರ ಕನಸುಗಳು ! ಅದೆಲ್ಲ ಕೇವಲ ಕನಸು. ಜನ ದನಿ ಎತ್ತಿದರು, ಎದ್ದರು, ಹಾಗೆಯೇ ಮಲಗಿದರು, ಚಳವಳಿ ನಡೆದುದನ್ನೇ ಮರೆತರು. ಬೆಂಗಳೂರಿನ ಎಲ್ಲೋ ಕೆಲವರು ನನ್ನಂತಹ ಕೆಲವು 'ಭ್ರಾಂತ' ಕಾರ್ಯಕರ್ತರನ್ನು ಬಿಟ್ಟರೆ ಉಳಿದಂತೆ ಎಲ್ಲ ಸ್ತಬ್ಧ. ಹಾಗಾದರೆ, ನಮ್ಮ ಪ್ರಯತ್ನಗಳಿಗೆ ಫಲವಿಲ್ಲವೆ ? ಅವೆಲ್ಲ ನೀರಿನಲ್ಲಿ ಮಾಡಿದ ಹೋಮದಂತೆ ವ್ಯರ್ಥವೇ ? ಉಳಿದ ಹಲವರಂತೆ ನಾವೂ ತೃಪ್ತರಾಗಿ, ಎಲ್ಲವೂ ಸರಿಯಾಗಿದೆ, ಎಲ್ಲವೂ ಸರಿ ಹೋಗಿದೆ, ಏನೂ ತೊಂದರೆಯಿಲ್ಲ, ತಮಿಳರೂ ಇರಲಿ, ಮಲಯಾಳಿಗಳೂ ಬರಲಿ, ಹಿಂದೀಗಳೂ ಏರಲಿ, ಮಾರವಾಡಿಗಳಂತು ಸರಿಯೇ - ಉದಾರಿಗಳಾಗಿರೋಣ ಇತ್ಯಾದಿ ದೊಡ್ಡ ಮಾತುಗಳಾಡುತ್ತ, ಹೊರಗಡೆ ದೊಡ್ಡತನ ತೋರಿಸುತ್ತಲೇ ಒಳಗಡೆ ನಮ್ಮ ನಮ್ಮ 'ಕೆಲಸ'ಗಳನ್ನು ಮಾಡಿಕೊಂಡು ನಾವೂ ಇರಬಹುದಿತ್ತಲ್ಲವೇ? ಗೋಕಾಕ್ ಚಳವಳಿ ಏನೋ ಪ್ರಭಾವ ಬೀರಿತು, ನಿಜ. ಆ ಪ್ರಭಾವ ಈಗ ಉಳಿದಿಲ್ಲ. ಆದರೆ ಏನು ಅನಾಹುತ ಆಗಬೇಕೋ ಆಗುತ್ತಿದೆ. ಬೆಂಗಳೂರಿನ ಕನ್ನಡಿಗರಿಗೆಲ್ಲ ಗೊತ್ತಿದೆ, ಕನ್ನಡದ ಮನೆ ನಮ್ಮ ಕಣ್ಣ ಮುಂದೆಯೇ ಮುರಿದು ಬೀಳುತ್ತಿದೆ. ಕನ್ನಡಿಗನ ಸ್ಥಾನ ಅಭದ್ರವಾಗುತ್ತಿದೆ. ಇದಕ್ಕೆ ಉದಾಹರಣೆಗಳು ಒಂದೇ ಎರಡೇ! ಜನತಾ ಸರ್ಕಾರ ಅಧಿಕಾರಕ್ಕೆ ಬಹುಮತದೊಡನೆ ಬಂದಮೇಲಂತೂ ಕನ್ನಡದ ಸೊಲ್ಲಡಗಿದೆ. ಕನ್ನಡ ಪತ್ರಿಕೆಗಳು ಕನ್ನಡವನ್ನು ಮರೆತಿವೆ. ಏನು ಮಾಡಬೇಕು ? ಯಾರ ಕಡೆ ನೋಡಬೇಕು? ಕಾಯಿಲೆ ತಿಳಿದಿದೆ, ಔಷಧ ತಿಳಿಯದು. ಈ ಹತಾಶೆ, ನೋವು ನಿರಾಸೆಗಳು ಸೂಕ್ಷ್ಮ

ಮನಸ್ಸಿನ ಯಾವನೇ ವ್ಯಕ್ತಿಯನ್ನು ಬುಡಸಹಿತ ಅಲ್ಲಾಡಿಸಬಲ್ಲುವು. ನನ್ನನ್ನಂತೂ ಜಗ್ಗಿ ಜಗ್ಗಿ ಅಲ್ಲಾಡಿಸಿ ನಿರ್ಜೀವನನ್ನಾಗಿ ಮಾಡಿದ್ದುವು.

"ಮೇ 10ನೇ ತಾರೀಖು ನನ್ನ ಹುಟ್ಟಿದ ಹಬ್ಬ. ಅಂದೇ ನನ್ನ ಪ್ರಯಾಣವನ್ನು ಕೈಗೊಳ್ಳುವ ಉದ್ದೇಶವಿತ್ತು. ಆದರೆ, ಎರಡು ದಿನ ಮುಂಚೆ ನನಗೆ ಬಹುವಾದ ನೆಗಡಿ ಆಗಿ, ಒಂದು ದಿನ ಮುಂದಕ್ಕೆ ಹೋಗಿದೆ. ಒಂದು ವಾರ ಬಿಟ್ಟು ಹೋಗಿ ಎಂದು ನನ್ನ ಹೆಂಡತಿ ಒತ್ತಾಯಿಸಿದ್ದಳು. ಹೇಗೋ ಹೋಗುವುದು ಖಚಿತ. ಹೊರಟು ಬಿಡಬೇಕು ಎಂದು ತೀರ್ಮಾನಿಸಿದೆ. 10ನೇ ತಾರೀಖು ರಾತ್ರಿ ಎಲ್ಲ ಸಿದ್ಧತೆ ಮಾಡಿಕೊಂಡೆ. ಹೆಂಡತಿಯ ಕೈಗೆ ತಿಂಗಳ ಖರ್ಚಿನ ಹಣ ಕೊಟ್ಟೆ. ಅವಳ ಹೆಸರಿಗೆ ನನ್ನ ಖಾತೆಯಿಂದ 10,000 ರೂಪಾಯಿ ಪಡೆಯಲು ಬ್ಯಾಂಕಿನ ಚೆಕ್ ಕೊಟ್ಟೆ. ನಾನು ಯಾವುದೋ ಉದ್ದೇಶದಿಂದ ಎಲ್ಲ ಅಂತಿಮ ಸಿದ್ಧತೆಗಳನ್ನು ಮಾಡುತ್ತಿದ್ದೇನೆ ಎಂಬ ಭಯ ನನ್ನ ಹೆಂಡತಿಯದು".

ಮೇಲಿನ ಭಾಗ ಹನ್ನೊಂದನೆಯ ತಾರೀಕು ರಾತ್ರಿ ತುಮಕೂರಿನಲ್ಲಿ ನನ್ನ ವಿದ್ಯಾರ್ಥಿ ಗೆಳೆಯ ಟಿ.ಎಸ್. ದಕ್ಷಿಣಾಮೂರ್ತಿಯವರ ಮನೆಯಲ್ಲಿ ಬರೆದದ್ದು. ಆಯಾ ದಿನದ ಅನುಭವಗಳನ್ನು ಆ ರಾತ್ರಿಯೇ ಬರೆದಿಡುತ್ತಿದ್ದೆ, ಎಲ್ಲೋ ಕೆಲವು ದಿನಗಳಲ್ಲಿ ಹೊರತುಪಡಿಸಿ. ಹನ್ನೊಂದನೆಯ ದಿನಾಂಕ (11.5.85) ಬೆಳಿಗ್ಗೆ ಬೆಂಗಳೂರಿನಿಂದ ಬಸ್ಸಿನಲ್ಲಿ ಹೊರಟು ಸಿದ್ಧಗಂಗೆಯಲ್ಲಿ ಇಳಿದೆ. 'ಅಭಿನವ ಅಲ್ಲಮ' ಎಂದು ಪ್ರಸಿದ್ಧರಾದ ಎಡೆಯೂರು ಸಿದ್ಧಲಿಂಗಯತಿಗಳ (1560) ಪಾದಸ್ಪರ್ಶದಿಂದ ಅಲ್ಲಿನ ಜಲಕ್ಷಾಮ ನಿವಾರಣೆಯಾಯಿತೆಂದು ಪ್ರತೀತಿ ಇದೆ. ಪಕ್ಕದ ಬೆಟ್ಟದ ಮಧ್ಯೆ ಎಂದೂ ಬತ್ತದ ನೀರಿನ ಒರತೆಯಿದೆ. ಅದೇ ಸಿದ್ಧರ ಗಂಗೆ. ಅಲ್ಲಿ ಇಳಿದವನೇ ಭಾವಾವೇಶದಿಂದ ನೆಲವನ್ನು ಮುಟ್ಟಿ ನಮಸ್ಕರಿಸಿ ಹಣೆಗೆ ಮಣ್ಣಿನ ಬೊಟ್ಟಿಟ್ಟೆ. ಅಲ್ಲಿಂದ ಪಕ್ಕದ ಶ್ರೀ ಸಿದ್ಧಗಂಗಾಮಠಕ್ಕೆ ಹೋಗಿ ಪೂಜ್ಯ ಡಾ. ಶಿವಕುಮಾರ ಸ್ವಾಮೀಜಿಯವರಿಗೆ ನಮಸ್ಕರಿಸಿ ಅವರ ಆಶೀರ್ವಾದವನ್ನು ಬೇಡಿದೆ. ಅವರಿಗೆ ಅರ್ಥವಾಯಿತು. ಆ ಹಿರಿಯರು ಕೆಲವು ಒಳ್ಳೆಯ ಮಾತನಾಡಿ ತುಂಬು ಮನಸ್ಸಿನಿಂದ ಆಶೀರ್ವದಿಸಿದರು. ಅಲ್ಲಿಂದ ತುಮಕೂರಿಗೆ ಸುಮಾರು ಬೆಳಿಗ್ಗೆ ಹನ್ನೆರಡರ ಹೊತ್ತಿಗೆ ಹೋಗಿ ದಕ್ಷಿಣಾಮೂರ್ತಿಯವರ ಮನೆಯಲ್ಲಿ ಉಳಿದುಕೊಂಡೆ. ಹಲವರು ಗೆಳೆಯರಿಗೆ ವಿಷಯ ತಿಳಿದು ಅವರು ಬಂದು ನನ್ನನ್ನು ಮಾತನಾಡಿಸಿದರು.

## ಹಬ್ಬತ್ತನ ಹಳ್ಳಿ

ಬೆಳಿಗ್ಗೆ (12.5.85) ಕೆ.ಜಿ. ನಾಗರಾಜಪ್ಪನವರ ಮನೆಯಲ್ಲಿ ತಿಂಡಿ, ಎಚ್.ವಿ. ವೀರಭದ್ರಯ್ಯನವರ ಮನೆಯಲ್ಲಿ ಕಾಫಿ ಸೇವನೆ ಆಯ್ತು. ನನ್ನ ಜೊತೆ ಬಿ. ವೀರಭದ್ರಯ್ಯ ಹೊರಟರು. ಹಿಂದಿನ ದಿನ ಸಣ್ಣ ಮಳೆ ಬಿದ್ದುದರಿಂದ ಹವೆ ತಣ್ಣಗಿತ್ತು. ಹರಟೆಯಲ್ಲಿ ಸಾಲು ಮರಗಳ ನೆರಳಲ್ಲಿ ದಾರಿ ಸಾಗಿತು. ಬೆಂಗಳೂರಿಂದ ತಂದ ಕೆಲವು ಸಣ್ಣ ವಸ್ತುಗಳನ್ನು ತುಮಕೂರಲ್ಲೇ ಬಿಟ್ಟೆ, ಅದಷ್ಟು ಭಾರ ಕಡಮೆ ಆಗಲೆಂದು. ದಾರಿಯಲ್ಲಿ ಹೆಗ್ಗೆರೆಯ

ಬೃಹತ್ ವೀರಗಲ್ಲುಗಳು ಕಾಣಿಸಿದುವು. ಅಷ್ಟು ದೊಡ್ಡ ವೀರಗಲ್ಲುಗಳು ವಿರಳ. ಬಿದ್ದು ಹೋಗುವಂತಿದ್ದ ಅವನ್ನು ವಿದ್ಯಾರ್ಥಿಗಳಿಂದ ಎತ್ತಿ ನಿಲ್ಲಿಸುವುದಾಗಿ ವೀರಭದ್ರಯ್ಯ ಹೇಳಿದರು (ಅವು ಏನಾಗಿವೆಯೋ ತಿಳಿಯದು). ಹೆಗ್ಗೆರೆ ಊರಿನ ಬಸ್ ನಿಲ್ದಾಣದ ಪಕ್ಕದಲ್ಲೇ ಒಂದು ಕೊಳವೆ ಬಾವಿ. ಒಬ್ಬ ಅಜ್ಜಿ ಅದರ ನೀರು ಕುಡಿದು, ತನ್ನ ಕೈಯ ತಂಬಿಗೆಯಲ್ಲೂ ತುಂಬಿಕೊಂಡು ನಮಗೂ ಆ ನೀರು ಕುಡಿಯಲು ಶಿಫಾರಸು ಮಾಡಿತು - "ನಿಮ್ಮ ಹತ್ತಿರವಿರುವ ನೀರು ಚೆಲ್ಲಿ ಈ ನೀರು ತುಂಬಿಕೊಳ್ಳಿ. ತುಮಕೂರಿನ ನೀರನ್ನು ಬಾಯಲ್ಲಿ ಹಾಕಿಕೊಂಡರೆ ಕತ್ತೆ ಗಂಜಳ. ಇಂತಹ ನೀರು ಎಲ್ಲೂ ಸಿಗಲ್ಲ, ಅಷ್ಟು ಸಿಹಿ" - ನೀರು ನಿಜವಾಗಿಯೂ ಬಹು ಸಿಹಿಯಾಗಿತ್ತು. ಅಜ್ಜಿಯ ಮಾತಿನ ಧಾಟಿ ಅದಕ್ಕಿಂತ ಸಿಹಿಯಾಗಿತ್ತು. ಜನತಾ ಸರ್ಕಾರದ ಸಾಧನೆಗಳಲ್ಲಿ ಈ ಕೊಳವೆ ಬಾವಿಗಳ ನಿರ್ಮಾಣವೂ ಒಂದು ಎಂಬಲ್ಲಿ ಅನುಮಾನವಿಲ್ಲ.

ರಸ್ತೆ ಬದಿಯ ಮಲ್ಲಸಂದ್ರದಲ್ಲಿ ವೀರಭದ್ರಯ್ಯನವರ ಗೆಳೆಯರಿರಲಿಲ್ಲವಾದ್ದರಿಂದ ಅಲ್ಲೇ ರಸ್ತೆ ಪಕ್ಕದಲ್ಲಿ ಒಂದು ಕಿಲೋಮೀಟರ್ ದೂರದ ಹಬ್ಬತ್ತನಹಳ್ಳಿಗೆ ಹೋದೆವು. ಅಲ್ಲಿ ಕೃಷಿ ವಿಜ್ಞಾನ ಪದವೀಧರ ಅಡವೀಶಪ್ಪ, ಒಬ್ಬ ಆದರ್ಶಪ್ರಿಯ, ಸ್ವಲ್ಪ ನೊಂದ, ಸ್ವಲ್ಪ ಕಹಿ ಮನಸ್ಸಿನ ವ್ಯಕ್ತಿ - ನಮ್ಮನ್ನು ಆದರದಿಂದ ಕಂಡರು, ಶಾಲೆಯಲ್ಲಿ ಉಳಿಸಿದರು. ಮಧ್ಯಾಹ್ನಾನಂತರ ಭಾರಿ ಬಿರುಗಾಳಿ ಬೀಸಿ ಸ್ವಲ್ಪ ಮಳೆಯೂ ಆಗಿ ನಿಂತ ಬಳಿಕ ಅವರು ಊರ ಸುತ್ತಮುತ್ತಣ ಹೊಲಗಳಿಗೆ ಕರೆದೊಯ್ದು ಅಲ್ಲಿನ ವೀರಗಲ್ಲು ಮಾಸ್ತಿ ಕಲ್ಲುಗಳನ್ನು ತೋರಿಸಿದರು.

ಯಾವುದೇ ಊರಿನ ಜನರ ಜೊತೆ ಹೃದಯ ಸಂವಾದ ಬೆಳೆಸಿಕೊಳ್ಳಬೇಕಾದರೆ ಎರಡು ಮಾರ್ಗಗಳಿವೆ. ಒಂದು, ಆ ಊರಿನ ತೀರ ಪ್ರಸ್ತುತವಾದ ಸಮಸ್ಯೆಗಳ ಬಗ್ಗೆ (ಕುಡಿಯುವ ನೀರು, ಶಾಲೆ, ಆಸ್ಪತ್ರೆ, ಮಳೆ, ಬೆಳೆ, ಕೃಷಿ, ರಸ್ತೆ ಇತ್ಯಾದಿ) ನಿಜವಾದ ಆಸಕ್ತಿಯನ್ನು ತೋರುವುದು; ಎರಡು, ಊರಿನ ಪರಂಪರೆಯ ಬಗ್ಗೆ (ಗುಡಿ, ಶಾಸನ, ಶಿಲ್ಪ, ಜಾನಪದ ಕಲೆ ಇತ್ಯಾದಿ) ಆಸಕ್ತಿಯನ್ನು ತೋರುವುದು. ಅವರ ಬಗ್ಗೆ ಮಾತನಾಡುವಾಗ ಮನಸ್ಸು ಬಿಚ್ಚಿ ಆತ್ಮೀಯವಾಗಿ ಮಾತನಾಡಬೇಕು. ಒಮ್ಮೆ ಹಳ್ಳಿಗರ ಒಲವನ್ನು ಗೆದ್ದುಕೊಂಡರೆ ಅವರ ಹೃದಯವನ್ನು ಪ್ರವೇಶಿಸಿದಂತೆ. ನಮ್ಮ ನಿಲುವು ಪ್ರೀತಿಯದ್ದಾಗಿರಬೇಕು. ಹಳ್ಳಿಗರಿಗೆ ಇವನೊಬ್ಬ ಪಟ್ಟಣದವ, ನಾಗರಿಕ ಎಂಬ ಭಾವನೆ ಬಾರದಂತಿರಬೇಕು ನಮ್ಮ ನಡೆ, ನುಡಿಗಳು. ನಾನು ಹುಟ್ಟಿನಿಂದ ಮತ್ತು ಈಗಲೂ ಸತ್ವಶಃ ಹಳ್ಳಿಯವನಾದ್ದರಿಂದ ಹಳ್ಳಿಯ ಜನರ ಜೊತೆ ಒಂದಾಗಿ ಬೆರೆಯಲು ಕಷ್ಟವೇ ಆಗುವುದಿಲ್ಲ.

ಆ ದಿನ ಮಧ್ಯಾಹ್ನ ಆ ಊರಿನ (ಹಬ್ಬತ್ತನಹಳ್ಳಿ) ಒಬ್ಬ ಅವಿದ್ಯಾವಂತ ಯುವಕ ಬೊಗಸೆ ತುಂಬ ಹಳೆಯ ನಾಣ್ಯಗಳನ್ನೂ Quartz ಕಲ್ಲಿನಲ್ಲಿ ಕೆತ್ತಿದ ಕೋನಗಳುಳ್ಳ ಕೋಲು ಆಕೃತಿಯ ವಸ್ತುಗಳನ್ನೂ ತಂದು ತೋರಿಸಿದ್ದ. ಅವುಗಳಲ್ಲಿ ಕೆಲವು ಇಂಗ್ಲಿಷರ ಕಾಲದ ನಾಣ್ಯಗಳು, ಇನ್ನು ಕೆಲವು ಅವರಿಗಿಂತ ಹಿಂದಿನ ನಾಣ್ಯಗಳು. ಕೆಲವಂತೂ ಮುಮ್ಮಡಿ

ಕೃಷ್ಣರಾಜ ಒಡೆಯರ ಕಾಲದ ಕ್ರಿ.ಶ. 1836ರ ನಾಣ್ಯಗಳು. ಮುಂದೊಮ್ಮೆ ಬೆಂಗಳೂರಿನ ಸಿಸೋದಿಯ ಅವರಿಗೆ ಅವನ್ನು ತೋರಿಸಬೇಕೆನ್ನಿಸಿತು. ಅವೆಲ್ಲ ಆ ಯುವಕ ಆ ಊರಿನ ಹೊಲಗಳಲ್ಲಿ ಹೆಕ್ಕಿ ಸಂಗ್ರಹಿಸಲ್ಪಟ್ಟವು. ಆ ಊರಿನ ಹೊಲಗಳಲ್ಲಿ ನಾಣ್ಯಗಳು, ಹಳೆಯ ಮಡಕೆ ಚೂರುಗಳು ಸಿಗುತ್ತವೆ. ನಾನೇ ಹೋಗಿ ನೋಡಿದಂತೆ ಹಲವು ಬೂದಿಮಣ್ಣಿನ ಹೊಲಗಳಿವೆ. ಹಬ್ಬತ್ತನಹಳ್ಳಿ ನಿಶ್ಚಿತವಾಗಿಯೂ ಬಹು ಪ್ರಾಚೀನ ಇತಿಹಾಸವಿರುವ ಜಾಗ. ಹೊಲಗಳಲ್ಲಿ ಹಲವು ವೀರಗಲ್ಲುಗಳಿವೆ. ಒಂದು ಕಡೆ ಇದ್ದ ವೀರಗಲ್ಲುಗಳ ಮೇಲಿನ ಗುಡಿಯ ಬಹುಭಾಗ ಬಿದ್ದು ಹೋಗಿದೆ. ಪಿನ್ನನಹಳ್ಳಿ (ಈಗ ಅಲ್ಲಿ ಹಂದಿ ಜೋಗಿ ಜನಾಂಗದ ಎರಡು ಮನೆಗಳಿವೆ) ಎಂಬ ಹಾಳಾದ ಹಳ್ಳಿಯ ಹೊಲವೊಂದರಲ್ಲಿ ಒಂದು ಸುಂದರ ವಾಮನ ಕಲ್ಲು, ಬದಿಯಲ್ಲೇ ಒಬ್ಬ ಶ್ರೀಮಂತ ಮಹಿಳೆಯ ಉಬ್ಬು ಶಿಲ್ಪದ ಕಲ್ಲೂ ಇದೆ. ಯಾವುದೋ ಬ್ರಾಹ್ಮಣನಿಗೆ ಬಹುಶಃ ಆ ಶ್ರೀಮಂತ ಮಹಿಳೆಯೋ ಅಥವಾ ಅವಳ ಹೆಸರಲ್ಲಿ ಇನ್ನಾರೋ ದತ್ತಿಯಾಗಿ ಕೊಟ್ಟ ಹೊಲ ಅದು. ಕಡುಬಡತನದ ಹಂದಿಜೋಗಿಗಳ ಅಂಗಳದ ತುಂಬ ಹಂದಿಗಳು. ಹೊಲಗಳಲ್ಲಿ ಸುಮಾರು ಎರಡು ಸಾವಿರ ವರ್ಷಗಳ ಹಿಂದಿನ ಕೆಂಪು ಬೋಕಿ ಚೂರುಗಳು ಸಾಕಷ್ಟು ಸಿಕ್ಕುವು. ಊರಿನ ಮಧ್ಯದ ಒಂದು ಸುಂದರ ವೀರಗಲ್ಲಿನ ಮೇಲಿರುವ ಶಾಸನದ ನಕಲನ್ನು ತೆಗೆಯಲು ಯತ್ನಿಸಿದೆ. ಸರಿಯಾದ ಬ್ರಷ್, ಇದ್ದಲು ಪುಡಿ, ಒರಟು ಕಾಗದ ಇಲ್ಲದೆ ಆ ನಕಲು ಸರಿಯಾಗಿ ಬರಲಿಲ್ಲ. ಊರಿನ ಜನ ತಮ್ಮ ಊರು ಐತಿಹಾಸಿಕ (ಪ್ರಾಗೈತಿಹಾಸಿಕ) ಮಹತ್ವದ್ದು ಎಂಬ ಸಂಗತಿ ತಿಳಿದು ಸಂಭ್ರಮಗೊಂಡರು.

ಹಬ್ಬತ್ತನಹಳ್ಳಿಯ ಮುಖ್ಯ ವೃತ್ತಿ ವ್ಯವಸಾಯ. ಅಲ್ಲಿ ಲಿಂಗಾಯತರು, ಕುರುಬರು, ಒಕ್ಕಲಿಗರು, ಉಪ್ಪಾರರು, ಹರಿಜನರು ಇದ್ದಾರೆ. ಇನ್ನೂರು ಮನೆಗಳ ಆ ಊರಲ್ಲಿ ಮೂರು ಕೊಳವೆ ಬಾವಿಗಳಿವೆ. ಬೇಸಿಗೆಯಲ್ಲೂ ಕುಡಿಯಲು ಸಮೃದ್ಧವಾಗಿ ನೀರು ದೊರಕುತ್ತದೆ. ಹರಿಜನರ ಕೇರಿಯ ಸಮೀಪದಲ್ಲೇ ಕೊಳವೆ ಬಾವಿ ಇದ್ದು ಸವರ್ಣೀಯರ ಜೊತೆ ನೀರಿಗಾಗಿ ಸೆಣಸಬೇಕಾಗಿಲ್ಲ (ಅಂತಹ ಸೆಣಸಾಟ ಎಲ್ಲೂ ಇರಕೂಡದು). ಮೂರು ಗೋಬರ್ ಅನಿಲಯಂತ್ರಗಳಿದ್ದು ಅವು ಮೂರೂ ಕೆಟ್ಟು ನಿಂತಿವೆ. ಊರ ಸುತ್ತಮುತ್ತ ಅಂತರ್ಜಲ ಸಮೃದ್ಧಿಯಿರುವುದರಿಂದ ಒಳ್ಳೆಯ ತೋಟಗಳಿವೆ. ಎಲ್ಲೆಲ್ಲೂ ದಟ್ಟವಾದ ತೋಪುಗಳೂ ಮರಗಳೂ ಇವೆ. ಈ ಸಮೃದ್ಧಿಯ ಮಧ್ಯೆಯೂ ಒಳ ಜಗಳಗಳೂ ರಾಜಕೀಯವೂ ಉಂಟು. ಅಡವೀಶಯ್ಯನವರ ಹದಿನೇಳು ವರ್ಷದ ಹಿರಿಯ ಮಗನ ಅಮಾನುಷ ಕೊಲೆ ಕೆಲವು ವರ್ಷಗಳ ಹಿಂದೆ ನಡೆದ ವಿಷಯ ಕೇಳಿ ನಾನು ದಂಗಾದೆ.

ವೀರಭದ್ರಯ್ಯ ಸಂಜೆ ತುಮಕೂರಿಗೆ ಹೊರಟು ಹೋದರು. ಶಾಲೆಯ ಅಂಗಳದಲ್ಲಿ ಕತ್ತಲಲ್ಲಿ ಏಕಾಂಗಿಯಾಗಿ ಕುಳಿತೆ. ದೂರದಲ್ಲಿ ಅಸಾಧ್ಯ ಮಿಂಚು. ಅಕ್ಕಪಕ್ಕದ ಮನೆಗಳಲ್ಲಿ ಮಕ್ಕಳು ನಗುತ್ತ ಆಡುತ್ತಿದ್ದವು. ಆ ಮನೆಗಳವರ ಮಾತೂ ಕೇಳಿಸುತ್ತಿದ್ದುವು. ಮನಸ್ಸು ತನ್ನನ್ನು ತಾನೇ ಕುರಿತು ಯೋಚಿಸಿತು. ಎಂತಹ ಅದ್ಭುತವಾದ ವಿಶ್ವ. ಅದರ ವಿಸ್ತಾರ ಅಮೇಯ. ಅದರಲ್ಲಿ ಮನುಷ್ಯ ಒಂದು ಕಣದಲ್ಲಿ ಕೇವಲ ಕಣ. ಅವನನ್ನು ಇತಿಹಾಸದಲ್ಲಿಟ್ಟು

ನೋಡಿದರೆ, ನಮಗಿಂತ ಹಿಂದೆ ನೋಡಿದರೆ, ಎಷ್ಟು ಸಹಸ್ರ ವರ್ಷಗಳಲ್ಲಿ ಎಷ್ಟು ಸಹಸ್ರ ಕೋಟಿ ಜನ ಆಗಿಹೋಗಿದ್ದಾರೆ ! ಮುಂದೆ ಎಷ್ಟು ಕೋಟಿ ಜನ ಬರಲಿದ್ದಾರೆ ! ಇದರ ಮಧ್ಯೆ ಜೀವ ತನ್ನನ್ನು ತಾನು ಮುಂದುವರಿಸಿಕೊಳ್ಳಲು ಪ್ರತಿಯೊಬ್ಬನನ್ನೂ ಒಂದು ಕೊಂಡಿಯಾಗಿ, ತಾನು ಪ್ರವಹಿಸಲು ಕೊಳಾಯಿಯಾಗಿ ತಂತಿಯಾಗಿ ಬಳಸಿಕೊಂಡಿದೆ. ಕಾಮವು (ಲೈಂಗಿಕ ಪ್ರವೃತ್ತಿ) ಆ ಜೀವವು ತನ್ನನ್ನು ತಾನು ಮುಂದುವರಿಸಿಕೊಳ್ಳಲು ಮನುಷ್ಯನಿಗೆ ಒಡ್ಡಿರುವ ಆಮಿಷ. ಆದರೂ ಮನುಷ್ಯನು ಜೀವದ ಪ್ರವಾಹವನ್ನು ಮುಂದುವರಿಸುವ ಕೇವಲ ತಂತಿಯಾಗದೆ, ತನ್ನನ್ನೇ ತಾನು ಚಿಂತಿಸಿಕೊಳ್ಳುತ್ತ ಒಂದು ನಾಗರಿಕತೆಯನ್ನು ನಿರ್ಮಿಸಿದ್ದಾನೆ. ಮನುಷ್ಯನ ಯಃಕಶ್ಚಿತ್ತು ಒಂದು ಕಡೆ, ಅವನ ಮಹತ್ತು ಇನ್ನೊಂದು ಕಡೆ. ಸಾವನ್ನು ಗೆಲ್ಲುವ ಹಲವು ತಂತ್ರಗಳು ಅವನವಾಗಿವೆ. ತಪಸ್ಸು, ತ್ಯಾಗ, ಜ್ಞಾನ, ಸಂಶೋಧನೆ, ಸಾಹಿತ್ಯ, ಕಲೆ, ಮತ, ಧರ್ಮ ಇಲ್ಲೆಲ್ಲ ಮಿತಿಗಳುಳ್ಳ ಮನುಷ್ಯ ಅಮಿತನಾಗುವ, ಶಾಶ್ವತನಾಗುವ ಯತ್ನವಿದೆ. ಅದರ ಜೊತೆ ಜೊತೆಗೇ ಮನುಷ್ಯನ ವ್ಯಕ್ತಿತ್ವದ ಒಂದು ಮುಖವಾಗಿ ಜೈನಪುರಾಣಗಳ ಭರತನ ಕತೆಯೂ ಜ್ಞಾಪಕಕ್ಕೆ ಬಂದಿತು. ಅವನು ಇಡೀ ಲೋಕವನ್ನು ಗೆದ್ದು, ಅದೂ 'ಚಕ್ರರತ್ನ'ದ ಸಹಾಯದಿಂದ, ಹಾಗೆ ಲೋಕವನ್ನು ಗೆದ್ದವರಲ್ಲಿ ಪ್ರಪ್ರಥಮ ನಾನೆ ಎಂದು ಅಹಂಕರಿಸಿ ಬೆಟ್ಟವೊಂದರ ಬಂಡೆಯ ಮೇಲೆ ಶಾಸನ ಕೊರೆಯಿಸಲು ಹೋದಾಗ ಅಲ್ಲಿ ಯಾವುದೇ ಬಂಡೆಯ ಮೇಲೂ ಅಕ್ಷರ ಕೊರೆಯಿಸಲು ಜಾಗವೇ ಇರಲಿಲ್ಲ. ಪ್ರತಿ ಬಂಡೆಯ ಮೇಲೂ ಹಿಂದೆ ಆಗಿ ಹೋದ ಅನೇಕ ಚಕ್ರವರ್ತಿಗಳು ಈ ಲೋಕವನ್ನು ಮೊದಲು ಗೆದ್ದವರು ತಾವೇ ಎಂದು ಪ್ರಶಸ್ತಿ ಬರೆಯಿಸಿಕೊಂಡಿದ್ದರು. ಭರತನ 'ಗರ್ವರಸ' ಒಳ ಸೋರಿತು ಎಂದು ಪಂಪ ತನ್ನ ಆದಿಪುರಾಣದಲ್ಲಿ ವರ್ಣಿಸುತ್ತಾನೆ. ಆದರೂ ಭರತ ಬಿಡಲಿಲ್ಲ. ಒಂದು ಬಂಡೆಯ ಮೇಲಿನ ಅಕ್ಷರಗಳನ್ನು ಅಳಿಸಿ ಅಲ್ಲಿ ತನ್ನ ಪ್ರಶಸ್ತಿ ಶಾಸನ ಹಾಕಿಸುತ್ತಾನೆ - "ನಿಲ್ವಿನೆಗಂ ನೆಲಂ"! ಎಂತಹ ವಿಡಂಬನೆ! ಅಲ್ಲೇ ಸೂಚನೆ ಇದೆ - ಇನ್ನಾವನೋ ಬರುತ್ತಾನೆ, ಅವನ ಶಿಲಾಕ್ಷರ ಅಳಿಸಿ ತನ್ನ ಪ್ರಶಸ್ತಿ ಬರಸುತ್ತಾನೆ. ಇದನ್ನೆಲ್ಲ ಜ್ಞಾಪಿಸಿಕೊಳ್ಳುತ್ತ, "ಓ ದೇವರೇ, ನನ್ನನ್ನು ನಿಜವಾದ ಮನುಷ್ಯನನ್ನಾಗಿ ಮಾಡು. ಮನಸ್ಸನ್ನು ಹದಗೊಳಿಸು. ಕನ್ನಡಕ್ಕಾಗಿ ನನ್ನನ್ನು ಒಪ್ಪಿಸಿಕೊಳ್ಳುವ ಯತ್ನವನ್ನು ದೃಢಪಡಿಸು. ನನ್ನ ಹೆಂಡತಿ, ಮಕ್ಕಳು, ತಾಯಿ ತಂಗಿಯರನ್ನು ಕಷ್ಟಗಳಿಂದ ಪಾರುಮಾಡು" ಎಂದು ಮನಸಾರೆ ಪ್ರಾರ್ಥಿಸಿದೆ. ಕಣ್ಣಲ್ಲಿ ನೀರು ಬಂತು. ನಾನು ನೋಡುತ್ತಿದ್ದಂತೆ ಶಾಲೆಯ ಸಮೀಪದ ಒಂದು ನೀಲಗಿರಿ ಮರ ಹಾಗೇ ನೆಲಕ್ಕೆ ಒರಗಿತು. ಒಂದೆರಡು ಗಂಟೆ ಹಿಂದೆ ಬೀಸಿದ ಬಿರುಗಾಳಿಯಿಂದ ದುರ್ಬಲವಾಗಿತ್ತೆಂದು ಕಾಣುತ್ತದೆ, ಆ ಹರೆಯದ ಗಿಡ. ರಾತ್ರಿ ಮಳೆ ಬಂದು ಹವಾ ತಂಪಾಯಿತು.

## ಗುಬ್ಬಿ

ಬೆಳಿಗ್ಗೆ (13.5.85) ಐದಕ್ಕೆ ಎದ್ದು ಅಡವೀಶಪ್ಪ ಮಲ್ಲಸಂದ್ರ ನಿಲ್ದಾಣದ ಬಳಿ ಕೊಡಿಸಿದ ಟೀ ಕುಡಿದು ಅವರಿಗೆ ಮನಸಾರೆ ಶುಭ ಕೋರಿ ನಾನೊಬ್ಬನೇ ಗುಬ್ಬಿಯತ್ತ ಹೊರಟೆ. ನಿಲ್ದಾಣದ ಬಳಿ ತಲೆಯೆತ್ತಿರುವ ಕ್ಷೀರ ಕೇಂದ್ರ ಆ ಪ್ರದೇಶದ ಸಮೃದ್ಧಿಗೆ ಸ್ವಲ್ಪ

ಕಾರಣವೆನ್ನಿಸಿತು. ಜನರು ಒಳ್ಳೆಯ ತಳಿ ಹಸು ಸಾಕಲು ಅದು ಸಾಲ ಒದಗಿಸುತ್ತಿದೆ. ದನಕರುಗಳ ಆರೋಗ್ಯ ನೋಡಿಕೊಳ್ಳಲು ಪಶುವೈದ್ಯರನ್ನು ದನಗಳ ಬಾಗಿಲಿಗೇ ಕಳಿಸುತ್ತದೆ. ಹಾಲಿಗೆ ಸರಿಯಾದ ಬೆಲೆ ಕೊಡುವುದಲ್ಲದೆ ಕಡಮೆ ಬೆಲೆಯಲ್ಲಿ ಬೂಸಾ ಒದಗಿಸುತ್ತದೆ. ಕ್ಷೀರಕ್ರಾಂತಿಯತ್ತ ಇದೊಂದು ದೊಡ್ಡ ಹೆಜ್ಜೆ.

ಹೆಗಲು ಚೀಲ ಸ್ವಲ್ಪ ಭಾರವೇ ಇತ್ತು. ಆದರೂ ಉತ್ಸಾಹ, ಹಠ. "ಚಲದೊಳ್ ದುರ್ಯೋಧನನ್", ಅಂತೆಯೇ "ನನ್ನಿಯೊಳ್ ಇನತನಯನ್" - ಎರಡೂ ಪಂಪನ ಉಕ್ತಿಗಳು ನನಗೆ ಪ್ರಿಯ. 'ಚಲ' ಮತ್ತು 'ನನ್ನಿ' (ಸತ್ಯ) ಇವೆರಡರ ಮೇಳ ನನ್ನ ಆದರ್ಶವಾಗಿರಲಿ ಎಂದು ಹಾರೈಸಿಕೊಂಡೆ. ಹಂಪಿಯತ್ತ ಹೆಜ್ಜೆ; ಹೆಜ್ಜೆ ಹಿಂದಕ್ಕೆ ಹಾಕುವ ಪ್ರಶ್ನೆಯೇ ಇಲ್ಲ. ಜನ ನನ್ನ ಈ ಹುಚ್ಚು ಕಾರ್ಯದ ಬಗ್ಗೆ ಏನಂದುಕೊಳ್ಳುವರೇ ಎಂಬ ಅಧೈರ್ಯ ಆಗಾಗ್ಗೆ ಕಾಣಿಸಿಕೊಂಡರೂ ಅದನ್ನು ಹಾಗೆಯೇ ಸರಿಪಡಿಸಿಕೊಂಡೆ. ಎದುರಿನಿಂದ ಬಸ್ಸುಗಳು ಬೆಂಗಳೂರಿಗೆ ಧಾವಿಸುತ್ತಿದ್ದುವು. ನೆನಪಿಗೆ ಬಂದ ಪಂಪ ರನ್ನರ ಪದ್ಯಗಳನ್ನು ಕುವೆಂಪು ಭಾವಗೀತೆಗಳನ್ನು ಗಟ್ಟಿಯಾಗಿ ಹೇಳಿಕೊಳ್ಳುತ್ತ ಮುಂದೆ ನಡೆದೆ. "ಓ ಮನಸ್ಸೇ, ಶುಭ್ರವಾಗು, ದೃಢವಾಗು, ಕನ್ನಡಕ್ಕೆ ಅರ್ಪಿಸಿಕೋ, ಅಭೀಃ, ನಿರ್ಭಯ ನಿರ್ಭಯ" - ಮನಸ್ಸಿಗೆ ಮತ್ತೆ ಮತ್ತೆ ಹೇಳಿಕೊಂಡೆ. ಎದುರಿಗೆ ಇಬ್ಬರು ಜೈನ ಶ್ವೇತಾಂಬರ ಯತಿಗಳು, ಅವರ ಹಿಂದೆ ಸ್ವಲ್ಪ ದೂರದಲ್ಲಿ ಅಂತಹ ಇನ್ನಿಬ್ಬರು ಕಾಲ್ನಡಗೆಯಲ್ಲಿ ಬರುತ್ತಿದ್ದರು. ಭಾರತವನ್ನು ಕಾಲ್ನಡಗೆಯಲ್ಲೇ ಸುತ್ತುವ ಆ ಮುನಿಗಳನ್ನು ಯಾವುದೋ ಉನ್ನತ ಆದರ್ಶ ಪ್ರೇರೇಪಿಸಿದೆ. ಅಲ್ಲಲ್ಲಿ ಸುಂದರ ಕನ್ನಡ ನಾಡಿನ ಹಳ್ಳಿಗಳು, ತೋಟ ತೋಪುಗಳು, ಅದೇ ಹಸಿರು ಕಚ್ಚಿದ್ದ ಹೊಂಗೆಯ ಮರಗಳ ವೈಭವ ಮನಸ್ಸನ್ನು ಸೆಳೆಯುತ್ತಿದ್ದುವು. ಒಂದು ಹಳ್ಳಿಯ ಹತ್ತಿರ ಕಣ್ಣು ಕಾಣದ ಮುದುಕನೊಬ್ಬ ತಡಕುತ್ತ ತಡಕುತ್ತ ನಡೆದಿದ್ದ. ಇನ್ನೊಂದು ಹಳ್ಳಿಯ ರಸ್ತೆಯ ಬದಿಯಲ್ಲಿ ರೋಗಿಷ್ಠ ಬಡಕಲು ಹೆಣ್ಣು ಮಗಳು ಮುದುರಿ ಕೂತಿದ್ದಳು. ದೇವರೇ, ಅವರ ಕಣ್ಣೀರನ್ನು ನಾನು ಒರಸಲಾರೆನಲ್ಲ ಎಂದು ಮನಸ್ಸು ಕಿವುಚಿತು. ಭಾರತ ವೈಜ್ಞಾನಿಕವಾಗಿ ಮುಂದುವರಿಯುತ್ತಿದೆ, ನಾವು ಆಧುನಿಕ ಕಂಪ್ಯೂಟರುಗಳ ಬಗ್ಗೆ ಮಾತನಾಡುತ್ತಿದ್ದೇವೆ. ಬಡತನ ಮಾತ್ರ ಜನರನ್ನು ಹಳೆಯ ಕಾಲದ ಗರಗಸದಂತೆ ಕೊಯ್ಯುತ್ತಿದೆ - ಚಿಂದಿಯಾಗಿ, ಹಸಿವಾಗಿ, ಅವಿದ್ಯೆಯಾಗಿ, ಮನೆಯಿಲ್ಲದ ಅನಾಥ ಸ್ಥಿತಿಯಾಗಿ.

ಅಲ್ಲೇ ತಂತಿಯ ಮೇಲೆ ಪುಟ್ಟ ಮಗುವಿನ ಕೈಯಲ್ಲಿ ಅಡಗುವಷ್ಟು ಗಾತ್ರದ ಕರಿಯ ಬಣ್ಣದ ಕೆಂಪು ಕೊಕ್ಕಿನ ಹಕ್ಕಿಯೊಂದು ಕುಳಿತಿತ್ತು. ಒಂದು ಸಾರಿ ಮೆತ್ತಗೆ ಕುಲುಕಿತು. ಆ ಕಡೆ ಈ ಕಡೆ ಪುಳು ಪುಳು ನೋಡಿ ಗರಿ ಕೊಡವಿ ನನ್ನ ಎದುರಿಗೇ ಎಡಗಡೆಗೆ ಹಾರಿಹೋಯ್ತು. ಎಷ್ಟು ತೃಪ್ತಿ ಸಂತೋಷದಲ್ಲಿದೆ! ಪಟ್ಟಣದಲ್ಲಿ ನಾವು ಅಕಸ್ಮಾತ್ ಹಕ್ಕಿಗಳನ್ನು ನೋಡಿದರೂ 'ಕಾಣು'ವುದಿಲ್ಲ. ಇನ್ನೊಂದು ಹಕ್ಕಿ ದಾರಿಯ ಪಕ್ಕದ ಒಂದು ನಿಲುಗಲ್ಲಿನ ಮೇಲೆ ನಿಂತು ತನ್ನ ತೋಕೆಯನ್ನು ಮೇಲೆತ್ತಿ ಒಮ್ಮೆ ಹಿಕ್ಕೆ ಹಾಕಿ ಅಭಿಮಾನದಿಂದ ತಲೆ ಎತ್ತಿದಾಗ ನನಗೆ ಬಹಳ ಸಂತೋಷವಾಯ್ತು. ಬಣ್ಣ ಬಣ್ಣದ ಹಂಗ, ಪಾರಿವಾಳದಂತಹ ಬೆಳವ, ಗುಬ್ಬಿ ಜಾತಿಯ ಹಕ್ಕಿ, ಗೊರವಂಕ ಎಲ್ಲವೂ ನನಗೆ ಸಂತೋಷ ತಂದುವು.

ತುಮಕೂರಿನಲ್ಲಿ ಕನ್ನಡ ಅಧ್ಯಾಪಕರಾಗಿರುವ ಆರಾಧ್ಯ (ಅವರು ನನ್ನ ವಿದ್ಯಾರ್ಥಿಯಾಗಿದ್ದವರು) ಹಿಂದಿನಿಂದ ತುಮಕೂರಿನಿಂದ ವಾಹನದಲ್ಲಿ ಬಂದವರು ನನ್ನ ಚೀಲವನ್ನು ಗುಬ್ಬಿಗೆ ಒಯ್ದರು. ಕೈ ಹಗುರಾದಾಗ ದಾರಿಯುದ್ದಕ್ಕೂ ಹಾಡುತ್ತಾ, ಸಂಕಲ್ಪಗಳನ್ನು ಮಾಡುತ್ತಾ, ಮನಸ್ಸಿನ ಜೊತೆ ಮಾತನಾಡುತ್ತಾ "ದೇವರೇ, ಎಲ್ಲ ಶಕ್ತಿಯನ್ನೂ ನನ್ನಲ್ಲಿ ತುಂಬು" ಎಂದು ಬೇಡುತ್ತ ನಡೆದೆ. ದಾರಿಯಲ್ಲಿ ಎಡಗಡೆ ಒಂದು ಸುಂದರ ವೀರಗಲ್ಲು ಕಾಣಿಸಿತು.

ಗುಬ್ಬಿ ಸಮೀಪವಾಗುತ್ತಿದ್ದಂತೆ ಆರಾಧ್ಯ ನನ್ನನ್ನು ಎದುರಾಗಿ ಸ್ವಾಗತಿಸಿದರು. ಗುಬ್ಬಿ ಮಲ್ಲಣಾರ್ಯನೆಂದೇ ಪ್ರಸಿದ್ಧನಾಗಿರುವ ಕವಿಯ ಊರು ಅದು. ತೋಂಟದ ಸಿದ್ಧಲಿಂಗಯತಿಯ ಗುರು ಗೋಸಲ ಚನ್ನಬಸವರ ಸಮಾಧಿಯಿಂದ (ಅದೇ 'ಗುಬ್ಬಿಯಪ್ಪ' ಎಂದು ಜನ ಕರೆಯುವ ಚನ್ನಬಸವೇಶ್ವರ ದೇವಾಲಯ), ಗುಬ್ಬಿ ವೀರಣ್ಣನವರಂತಹ ಕಲಾವಿದರಿಂದ ಪ್ರಖ್ಯಾತವಾಗಿದೆ ಅದು. ದಿನವೂ ದೇವಾಲಯದಲ್ಲಿ ಬಸವ ಪುರಾಣವನ್ನು ಆಸಕ್ತಿಯಿಂದ ಕೇಳುತ್ತಿದ್ದ ಎರಡು ಗುಬ್ಬಿಗಳು ಪ್ರವಚನಾಂತ್ಯದಲ್ಲಿ ಪ್ರಾಣತ್ಯಾಗ ಮಾಡಿದ್ದರಿಂದ ಆ ಊರಿಗೆ 'ಗುಬ್ಬಿ' ಎಂದು ಹೆಸರಾಯ್ತೆಂದು ಕತೆಯಿದೆ. ಬಹುಶಃ ಸ್ವಲ್ಪ ಎತ್ತರದ ಜಾಗ ಎಂಬರ್ಥದ ಪದ ಅದಾಗಿದ್ದು, ("ಕುಪ್ಪೆ" - ನೋಡಿ) ಅಲ್ಲಿಗೆ ಸಮೀಪದ ಹಳೆಗುಬ್ಬಿಯು ಸ್ವಲ್ಪ ಎತ್ತರದಲ್ಲಿರುವ ಊರಾಗಿದ್ದು, ಅಲ್ಲಿನ ಜನ ಬಂದು ಈಗಿನ ಗುಬ್ಬಿಗೆ ಬಂದು ನೆಲಸಿದ ಮೇಲೆ ಇದು "ಗುಬ್ಬಿ" ಆಯ್ತು, ಅದು "ಹಳೇ ಗುಬ್ಬಿ" ಆಯ್ತು. (ನೋಡಿ, ಈಗ "ಬೆಳ್ಗೊಳ" ಎಂದರೆ ಶ್ರವಣಬೆಳ್ಗೊಳ; ಆದರೆ ಅದು ಮೂಲತಃ ಅಲ್ಲಿಗೆ ಸ್ವಲ್ಪ ದೂರದ "ಹಳೆಯ ಬೆಳ್ಗೊಳ"). ಊರ ಹೊರಭಾಗದಲ್ಲಿರುವ ಚೆನ್ನಬಸವೇಶ್ವರ ದೇವಾಲಯಕ್ಕೆ ಹೋಗಿ ದೇವರ ದರ್ಶನ ಮಾಡಿ ಆಶೀರ್ವಾದ ಬೇಡಿದೆ. ಆ ಗುಡಿಯಲ್ಲಿದ್ದ ಪ್ರಾಚೀನ ಚಿತ್ರಗಳನ್ನು ಅಳಿಸಿ ಹಾಕಿಸಿದ್ದಾರೆಂಬ ಸಂಗತಿ ತಿಳಿದು ಬಹು ಖೇದವಾಯ್ತು. ನಮ್ಮ ಜನಕ್ಕೆ ಪರಂಪರೆಯನ್ನು ಉಳಿಸಿಕೊಳ್ಳುವ ಪ್ರಜ್ಞೆಯೇ ನಾಶವಾಗಿದೆ.

ಆರಾಧ್ಯರ ಮನೆ ಒಂದು ಸಾಮಾನ್ಯ ಹೆಂಚಿನ ಬಾಡಿಗೆ ಮನೆ. ಅವರು ಕಾಲೇಜಲ್ಲಿ ಅಧ್ಯಾಪಕರಾಗಿದ್ದರೂ ಅವರ ಸ್ವಾಭಿಮಾನಿ ತಂದೆ ತಮ್ಮ ಅದೇ ಪುರೋಹಿತ ವೃತ್ತಿ ಮುಂದುವರಿಸಿ ಮನೆಯಲ್ಲಿ ಉಳಿದಿದ್ದಾರೆ. ಆರಾಧ್ಯ ನನ್ನ ವಿದ್ಯಾರ್ಥಿ, ಎಂ.ಎ. ತರಗತಿಯಲ್ಲಿ. ಬಾಲ್ಯದಲ್ಲೇ ಕಣ್ಣು ಸ್ವಲ್ಪ ವಿಕಾರಗೊಂಡದ್ದರಿಂದ ಹಿಂದೆ ಬಹು ಕೀಳರಿಮೆ ಅನುಭವಿಸಿದ್ದವರು (ಈಗ ಶಸ್ತ್ರ ಚಿಕಿತ್ಸೆಯಿಂದಾಗಿ ಆ ವಿಕಾರ ಅಷ್ಟಾಗಿ ಕಾಣಿಸುವುದಿಲ್ಲ). ತಂದೆಯವರಿಗೆ ಕೋಪ ಬಂದರೂ, ವರದಕ್ಷಿಣೆ ತೆಗೆದುಕೊಳ್ಳದೇ ಮದುವೆಯಾಗಿ ಈಗ ಇಬ್ಬರು ಮಕ್ಕಳ ತಂದೆಯಾಗಿದ್ದಾರೆ. ಸಂಬಂಧಗಳು ಈಗ ಸರಿಹೋಗಿವೆ, ಸ್ವಾಭಾವಿಕವೇ.

ಸಂಜೆ ಊರ ಹೊರಗೆ ಗುಬ್ಬಿ ವೀರಣ್ಣನವರ ತೋಟದ ಮನೆ ಪಕ್ಕದ "ತೊರೆಮಠ"ಕ್ಕೆ ಹೋದೆವು. ಅದು ಸಿದ್ಧಗಂಗೆಯ ಈಗಿನ ಸ್ವಾಮಿಗಳವರಿಗಿಂತ ಹಿಂದಿದ್ದ ಶ್ರೀ ಉದ್ಧಾನ ಸ್ವಾಮಿಗಳ ಪೂರ್ವದ ಶ್ರೀ ಅಡವೀಶ ಸ್ವಾಮಿಗಳಿದ್ದ ಜಾಗ. ಗುಬ್ಬಿಯ ದೊಡ್ಡ ಕೆರೆಯ

ಕೋಡಿಯ ನೀರು ಹರಿಯುವ ತೊರೆಯ ದಡದಲ್ಲಿ, ತುಂಬಿದ ಮಡುವಿರುವ ಗದ್ದೆ ತೋಟಗಳ ಮಧ್ಯೆ ಇರುವ ಬಹು ರಮ್ಯ ಮಠ ಅದು. ಗುಳೇದಗುಡ್ಡಗಳ ಸ್ವಾಮಿಗಳೇ ಇದನ್ನೂ ನೋಡಿಕೊಳ್ಳುತ್ತಿದ್ದಾರೆ. ಅವರು ಬಹು ಸಾಂಪ್ರದಾಯಕವಾದ ನಂಬಿಕೆಗಳನ್ನು ಇಟ್ಟುಕೊಂಡಿದ್ದಾರೆ. ಹಲವು ಲಿಂಗಾಯತರು ಕೊರಳಲ್ಲಿ ಲಿಂಗ ಧರಿಸುವುದನ್ನು ಕೈಬಿಟ್ಟಿರುವುದು ಅವರಿಗೆ ಬಹು ನೋವಿನ ಸಂಗತಿಯಾಗಿದೆ. ಕೆಲವು ಸ್ವಾಮಿಗಳು "ಹೊಲೆಯರಿಗೆ" ಲಿಂಗ ಕಟ್ಟುತ್ತಿರುವುದನ್ನೂ ಅವರು ಬಹುವಾಗಿ ಟೀಕಿಸಿದರು. ಅವರ ಮಾತನ್ನು ಕೇಳುತ್ತ, ಜಂಗಮನಾದ ನನ್ನ ಹೆಂಡತಿಯ ತಂಗಿಯೊಬ್ಬಳು ಒಬ್ಬ ದಲಿತನನ್ನು ನಮ್ಮೆಲ್ಲರ ಒಪ್ಪಿಗೆ ಪಡೆದು ಮದುವೆಮಾಡಿಕೊಂಡು ಸುಖವಾಗಿರುವುದನ್ನು ಅವರ ಗಮನಕ್ಕೆ ಸೂಕ್ಷ್ಮವಾಗಿ ತಂದಾಗ ಅವರಿಗೆ ಬಹಳ ಕಸಿವಿಸಿಯಾಯಿತು. ದಲಿತರ ಮನೆಗಳಿಗೆ ನಿಸ್ಸಂಕೋಚವಾಗಿ ಹೋಗಿ ಬರುತ್ತಿದ್ದ ಬಸವನ ಪರಂಪರೆಗೆ ಒದಗಿರುವ ಅವನತಿ ನನಗೆ ತೀವ್ರ ಖೇದವುಂಟು ಮಾಡಿತು.

ರಾತ್ರಿ ವೀರಣ್ಣ ಎಂಬ ಉಪಾಧ್ಯಾಯರು (ಅವರ ಮಗಳು ನನ್ನ ವಿದ್ಯಾರ್ಥಿನಿ) ತಮ್ಮ ಬದುಕಿನ ಹಲವು ಅನುಭವಗಳನ್ನು ವಿಸ್ತರಿಸಿ ಹೇಳಿದುದನ್ನು ನಾನು ಅತ್ಯಂತ ತಾಳ್ಮೆಯಿಂದ ಕೇಳಿದೆ. ಅವರ ತಂದೆ ಮತ್ತು ತಮ್ಮಂದಿರು ಸೇರಿ ಅವರನ್ನು ಮನೆಯಿಂದ ಓಡಿಸಲು ಅವರ ಮರ್ಮಾಂಗವನ್ನೇ ಒಬ್ಬ ಹಿಡಿದು, ಇನ್ನೊಬ್ಬ ಅವರ ಕಿವಿ ಹಿಡಿದುದನ್ನು ಅವರು ಬಹು ನಾಟಕೀಯವಾಗಿ ವರ್ಣಿಸಿದ್ದನ್ನು ಕೇಳಿ ನನಗೆ ನಗು ತಡೆಯಲಾಗಲಿಲ್ಲ. ಪ್ರಾಥಮಿಕ ಶಾಲೆಯ ಉಪಾಧ್ಯಾಯರಾದ ಅವರು ಸ್ವಾಭಿಮಾನಿಗಳಾಗಿದ್ದುದು ನನಗೆ ಮೆಚ್ಚುಗೆಯಾಯ್ತು. ಅವರ ಒಂದಿಬ್ಬರು ಮಕ್ಕಳು ಜೂಜುಗಾರರಾಗಿ ಎಲ್ಲೋ ಕಾಲ ಕಳೆಯುತ್ತಿರುವ ಸಂಗತಿ ಹೇಳುತ್ತ ದುಃಖಿಸಿದರು. ಬದುಕಿನ ಕ್ರೌರ್ಯ ಅವರನ್ನು ಸಾಕಷ್ಟು ಘಾಸಿಗೊಳಿಸಿತ್ತು. ಅವರ ಬಾಯಿಂದ ಗುಬ್ಬಿ ಸುತ್ತ ಮುತ್ತ ಪ್ರಬಲವಾಗಿರುವ ಲಿಂಗಾಯತ ಸಮಾಜದ ರಚನೆ, ಮಠಗಳು, ಗುರುಪೀಠ ವಿರಕ್ತಪೀಠಗಳ ಕರ್ತವ್ಯಗಳು, ಲಿಂಗಾಯತರ ಉಪಜಾತಿಗಳು, ಸಮಾಜದಲ್ಲಿ ಸೆಟ್ಟಿ ಯಜಮಾನರ ಪಾತ್ರ, ಮದುವೆಗಳಲ್ಲಿ ಅವರಿಗೆ ಸಲ್ಲುವ ಗೌರವ ಇತ್ಯಾದಿ ಎಷ್ಟೋ ಮಾಹಿತಿ ಪಡೆದೆ. ಬಣಜಿಗರಾದ ಶೆಟ್ರು ಯಜಮಾನರುಗಳದ್ದು ಯಾವುದೇ ಮದುವೆಗಳಲ್ಲಿ 'ಪ್ರಧಾನಪಾತ್ರ: ಮದುವೆಗೆ ಮುನ್ನ ವಾದ್ಯಸಮೇತ ಅವರನ್ನು ಕರೆತಂದು ಮುಂದೆ ಕುಳ್ಳಿರಿಸಿ ಅವರಿಗೆ ಮೊದಲ ತಾಂಬೂಲ ಕೊಡಬೇಕು. ವ್ಯಾಜ್ಯ ಪರಿಹಾರದಲ್ಲೂ ಅವರು ಮುಖ್ಯ ಪಾತ್ರ ವಹಿಸುತ್ತಿದ್ದರು. ಮೊದಲಿನಿಂದ ವ್ಯಾಪಾರ ವೃತ್ತಿಯವರಾಗಿದ್ದ ಅವರ ಕೈಯಲ್ಲಿ ಹಣ ಓಡಾಡುತ್ತಿದ್ದು, ರೈತಾಪಿ ವರ್ಗದ ನೊಣಬರು ತಮಗಿಂತ ಅವರು ಮೇಲು ವರ್ಗದವರೆಂದು ನಡೆದುಕೊಳ್ಳುತ್ತಿದ್ದರು (ಈಗ ಸಹಜವಾಗಿಯೇ ಪರಿಸ್ಥಿತಿ ಬದಲಾಗಿದೆ). ವೀರಶೈವರಲ್ಲಿ ಪಣೆಗಾರರು* ಎಂಬ ಉಪಜಾತಿಯ ಹೆಸರನ್ನು ಅವರ ಬಾಯಿಂದಲೇ ನಾನು ಮೊದಲು ಕೇಳಿದ್ದು ; ಅವರಲ್ಲಿ ನಾಲ್ಕು ದಿನದವರು, ಮೂರು ದಿನದವರು ಎಂಬ ಭೇದಗಳಿವೆ. ನಾಲ್ಕು ದಿನದವರು ಮೊದಲು ವೀರಶೈವರಾದರು,

---

*ಇವರಿಗೂ ಕೇರಳದ 'ಪಣಿಕ್ಕರ್' ಎಂಬ ವಂಶನಾಮದವರಿಗೂ ಹೆಸರ ಹೋಲಿಕೆಯಿರುವಂತಿದೆ.

ಆಮೇಲೆ ಮೂರು ದಿನದವರು ವೀರಶೈವರಾದರು ಎಂಬುದು ವೀರಣ್ಣನವರ ವ್ಯಾಖ್ಯಾನ (ವಾಸ್ತವ ಸಂಗತಿ ಬೇರೆ ಇರುವಂತಿದೆ). ಪಣಿಗಾರರೆಲ್ಲ ಹೆಚ್ಚಾಗಿ ಬಡವರ್ಗಕ್ಕೆ ರೈತಾಪಿ ಗುಂಪಿಗೆ, ಅದರಲ್ಲೂ ಹೊಲಗಳಲ್ಲಿ ಕೆಲಸ ಮಾಡುವ ಕಾರ್ಮಿಕ ವರ್ಗಕ್ಕೆ ಸೇರಿದವರು. ಅವರ ಮಗಳಿಗೆ ಕನ್ನಡ ಎಂ.ಎ.ನಲ್ಲಿ ಕಡಮೆ ಅಂಕ ಬಂದುದಕ್ಕೆ ಆಕೆಯ ಒಬ್ಬ ಅಧ್ಯಾಪಕರು ಕೊಟ್ಟ ಕಾರಣ: ಆಕೆಯೂ ಆಕೆಯ ಸಹ ವಿದ್ಯಾರ್ಥಿಗಳೂ ತರಗತಿಯಲ್ಲಿ 'ಅವಿಧೇಯರಾಗಿ' ನಡೆದುಕೊಂಡರು. ಈ ಅಂಶವನ್ನು ಆ ಅಧ್ಯಾಪಕರೇ ವೀರಣ್ಣನವರಿಗೆ ಸ್ವತಃ ತಿಳಿಸಿದ್ದರಂತೆ. ಆ ಅಧ್ಯಾಪಕರು ಯಾರು ಎಂಬುದು ನನಗೆ ತಿಳಿದಿದೆ ಮತ್ತು ಅವರು ಹಾಗೆ ಮಾಡಿದ್ದರೆ ಆಶ್ಚರ್ಯವಿಲ್ಲ.

ಆ ಹಿಂದಿನ ಮೂರು ದಿನ ನಡೆಯುತ್ತಿದ್ದರೂ ಸರಿಯಾಗಿ ನಿದ್ದೆ ಬರುತ್ತಿರಲಿಲ್ಲ. ರಾತ್ರಿಯೆಲ್ಲ ಏನೋ ಕನಸು, ಯಾವಾಗಲೋ ಎಚ್ಚರ. ಮನಸ್ಸು ಬಹು ಕ್ಷುಭಿತವಾಗಿತ್ತು. ಎಚ್ಚರವಾದಾಗಲೆಲ್ಲ ಮನಸ್ಸು ದೈವಧ್ಯಾನದಲ್ಲಿ ತೊಡಗುತ್ತಿತ್ತು. ನನ್ನ ಮನೆಯವರ, ಕನ್ನಡದ ಕ್ಷೇಮಕ್ಕಾಗಿ ಧ್ವನಿಸುತ್ತಿತ್ತು. ಆಳವಾದ ನೋವುಗಳು ಮನಸ್ಸನ್ನು ಪ್ರವೇಶಿಸಿವೆ. ಅವು ನಿಧಾನವಾಗಿ ಮಾಯವಾಗಬೇಕು. ಮತ್ತೆ ಮತ್ತೆ ಹೇಳಿಕೊಂಡಿದ್ದೇನೆ - ಎಂದೂ 'ಸಿನಿಕ'ನಾಗಕೂಡದು (ಉತ್ಸಾಹದ 'ಸೈನಿಕ' ಆಗಬೇಕು). ಇಂದಿನ ನೋವು ಸೋಲುಗಳು ಬೇರೊಂದು ಗೆಲವಿಗೆ ಇಂಧನವಾಗಬೇಕು. ವ್ಯಕ್ತಿ ಒಂದರಲ್ಲಿ ಸೋತರೇನು, ಇನ್ನು ನೂರೊಂದರಲ್ಲಿ ಗೆಲ್ಲಬಹುದು.

## ನಿಟ್ಟೂರು

ಬೆಳಿಗ್ಗೆ (14.5.85) ಅಷ್ಟು ಹೊತ್ತಿಗೇ ಎದ್ದು ಆರಾಧ್ಯರ ತಾಯಿ ಮಾಡಿದ್ದ ಕಾಫಿ ಕುಡಿದು, ತಿಂಡಿ ಪೊಟ್ಟಣ ಚೀಲಕ್ಕೆ ಸೇರಿಸಿ ರಾತ್ರಿ ಮಲಗಿದ್ದ ಮನೆಯ ಮುಂದಿನ ಮನೆಯ ಅಜ್ಜಿಗೆ ಕೈಮುಗಿದು ಹೊರಟೆ. ಅಜ್ಜಿಗೆ ಸಂಕೋಚವಾಯಿತು. ದಿನಕ್ಕೊಂದು ಮನೆಯಲ್ಲಿ ವಾಸ್ತವ್ಯ, ಊರು; ಎಷ್ಟು ಜನರ ಜೊತೆ ಸ್ನೇಹದ ಸಂಭಾಷಣೆ, ಅವರ ಪ್ರೀತಿಯ ನಡವಳಿಕೆ! ಅವರಿಗೆಲ್ಲ ನನ್ನ ಬಗ್ಗೆ ಏನೋ ಕನಿಕರ. ಸದ್ಯ ಅದು ಮಾತಿನಲ್ಲಿ ವ್ಯಕ್ತವಾಗಿರಲಿಲ್ಲ, ನನ್ನ ಅದೃಷ್ಟ. ಆ ಅಜ್ಜಿ ಮೊದಲಾದ ಸುತ್ತ ಮುತ್ತಲ ಎಲ್ಲರಿಗೂ ಆರಾಧ್ಯರನ್ನು ಕಂಡರೆ ಅಭಿಮಾನ. ಕಡು ಬಡ ಮನೆತನದ ಒಬ್ಬ ಹುಡುಗ ಮೇಲಕ್ಕೆ ಬಂದಿರುವುದು ಅವರಿಗೆ ಸಾಮಾನ್ಯ ಸಂಗತಿಯೇನೂ ಆಗಿರಲಿಲ್ಲ.

ನನ್ನ ಹೆಗಲ ಚೀಲ ಆರಾಧ್ಯರ ವಾಹನದಲ್ಲಿ ನಿಟ್ಟೂರಿಗೆ ಹೋದುದರಿಂದ ಹಗುರ ಕೈಯಲ್ಲಿ ಹೊರಟೆ. ಏಕಾಂತತೆ, ಏಕಾಂಗಿತನ. ನನ್ನ ಬಾಲ್ಯದ ದಿನಗಳನ್ನು ತೀವ್ರವಾಗಿ ನೆನಪಿಗೆ ತರುವ ಹಳ್ಳಿಗಳ ವಾತಾವರಣ ಉದ್ದಕ್ಕೂ ಕಾಣಿಸುತ್ತಿತ್ತು. ಸೂರ್ಯ ಹುಟ್ಟಿ ಎಳೆ ಬಿಸಿಲು ಎಲ್ಲರನ್ನೂ ಹರಸುತ್ತಿತ್ತು. ದಾರಿಯಲ್ಲಿ ಅನಿರೀಕ್ಷಿತವಾಗಿ ನನ್ನ ಬಾಯಿಂದ ಪ್ರಾರ್ಥನೆ ಹೊರಟಿತು: "ಓ ದೇವರೇ, ಓ ನನ್ನ ಆರಾಧ್ಯ ದೈವವೇ, ಕಷ್ಟಗಳೆಲ್ಲ ನನಗಿರಲಿ. ನನ್ನ ಸಂಸಾರ, ತಾಯಿ ತಂಗಿಯರನ್ನು ಸುಖವಾಗಿಡು, ಕಷ್ಟಗಳಿಂದ ಅವರನ್ನು ದೂರಮಾಡು.

ಕನ್ನಡಕ್ಕಾಗಿ ನನ್ನನ್ನು ಸಿದ್ಧಪಡಿಸು. ನಿನ್ನಿಂದ ಸಿದ್ಧಗೊಳ್ಳಲು ನಾನು ಸಿದ್ಧನಾಗಿದ್ದೇನೆ. ನನ್ನನ್ನು ಪೂರ್ಣವಾಗಿ ಬಳಸಿಕೋ. ನನ್ನ ಅಂತರಂಗವನ್ನು ನಿಷ್ಕಲ್ಮಷವಾಗಿಸು". ಎದೆ ಬಡಿತ ಜಾಸ್ತಿಯಾಯ್ತು. ನಡಿಗೆ ಚುರುಕಾಯ್ತು. ಕಣ್ಣಲ್ಲಿ ನೀರು ತುಂಬುತ್ತಿದ್ದಂತೆ ದೇಹದಲ್ಲಿ ಚೈತನ್ಯದ ಸಂಚಾರವಾಯ್ತು. "ಅಭೀಃ, ಅಭೀಃ..... ಯಜ್ಞಶಾಲೆಗಳಿಂದ ಬಲಿಯಿಂದ ಸೆರೆಯಿಂದ, ತೊಂಡುಮಲೆತೆಲ್ಲವನು ತುಳಿದತ್ತಣಿಂದ....." ಇತಿಹಾಸದ ಪುಟ ಪುಟಗಳಿಂದ, ವಿಶ್ವದ ಎಲ್ಲೆಡೆಗಳಿಂದ ನಿರ್ಭಯ ನಿರ್ಭಯ.... ಹೆದರದಿರು, ಹೆದರದಿರು ಎಂಬ ಧ್ವನಿ ಅನುರಣಿತವಾಗುತ್ತಿದೆ. "ಉಳ್ಳವರು ಶಿವಾಲಯವ ಮಾಡುವರು....." ಎಂಬ ವಚನವನ್ನು ಹಾಡಿಕೊಂಡೆ. "ನಡೆ ಮುಂದೆ ನಡೆ ಮುಂದೆ ನುಗ್ಗಿ ನಡೆ ಮುಂದೆ, ಜಗ್ಗದೆಯೆ ಕುಗ್ಗದೆಯೆ ಹಿಗ್ಗಿ ನಡೆ ಮುಂದೆ". "ಹರೆ ಬಡಿಯಿರಿ. ಕೊಂಬುಗಳನ್ನು ಊದಿರಿ. ಯುದ್ಧಕ್ಕೆ ಮುನ್ನಡೆಯಿರಿ". ಉತ್ತ ಮಣ್ಣು, ಸತ್ತ ಹೆಣ, ಕೊನೆಗೆ ಹಸೆ ಏರಿದ ಹೆಣ್ಣು ಅತ್ತ ಇರಲಿ, ಹೊರಡಿ ಯುದ್ಧಕ್ಕೆ- ಬಿ.ಎಂ.ಶ್ರೀ. ಅನುವಾದಿಸಿದ ಪದ್ಯದ ಕನ್ನಡ ಸಾಲುಗಳನ್ನು ಹಾಡಿಕೊಂಡೆ. ನಾನು ಹೊರಟಿರುವುದು ಕನ್ನಡಮ್ಮನ ಅಡಿಯಾಳಾಗಿ, ಅವಳ ಬಿಡುಗಡೆಗಾಗಿ ನನ್ನನ್ನು ನಾನು ಸಮರ್ಪಿಸಿಕೊಳ್ಳುವ ಪ್ರತಿಜ್ಞೆಯನ್ನು ಕೈಗೊಳ್ಳುವುದಕ್ಕಾಗಿ. ಮತ್ತೆ ಮತ್ತೆ ನನ್ನ ಧ್ಯೇಯವನ್ನು ಜ್ಞಾಪಿಸಿಕೊಂಡು ಉತ್ಸಾಹವನ್ನು ತುಂಬಿಕೊಂಡೆ.

ಮೈಸೂರಲ್ಲಿ ಆಗಿನ್ನೂ ನಾನು ಯುವಕ. ಕರ್ನಾಟಕ ವಿಶ್ವವಿದ್ಯಾಲಯದ ಕುಲಪತಿ ಡಾ. ಡಿ.ಸಿ. ಪಾವಟೆಯವರ ಭಾಷಣದ ವಿವರಗಳು ಮರೆತು ಹೋಗಿವೆ. ಅವರು ಹೇಳಿದ ಒಂದು ಮಾತು ನೆನಪಿದೆ - "ಮನುಷ್ಯನ ಮನಸ್ಸಿನ ಆಳದಲ್ಲಿ ಹಲವು ಸ್ಫೂರ್ತಿ ಉತ್ಸಾಹಗಳ ಸೆಲೆ ಇವೆ. ಒಂದು ಬತ್ತಿದರೆ ಇನ್ನೊಂದನ್ನು ಬಳಸಿಕೊಳ್ಳುವುದನ್ನು ಮನುಷ್ಯ ಕಲಿಯಬೇಕು". ಆ ಮಾತು ಆಗ ಎಷ್ಟು ಅರ್ಥವಾಯಿತೋ! ಈಗ ಅದು ಚೆನ್ನಾಗಿ ಅನುಭವಕ್ಕೆ ಬರುತ್ತಿದೆ. ಉತ್ಸಾಹ ಹೊರಗಿನಿಂದ ಆಮದು ಮಾಡಿಕೊಳ್ಳುವ ವಸ್ತು ಅಲ್ಲ. ಅದು ತನ್ನಲ್ಲೇ, ತನ್ನಿಂದಲೇ ಜನ್ಮವಾಗುವಂತಹುದು. ಹೊರಗಿನ ಯಾವುದೋ ಮಾತು, ಯಾವುದೋ ಘಟನೆ, ಯಾರೋ ವ್ಯಕ್ತಿ ಉತ್ಸಾಹ ಹುಟ್ಟಲು ವರ್ಧಿಸಲು ನೆಪವಾಗಬಹುದು, ಅಷ್ಟೇ. "ನಿನಗೆ ನೀನೇ ಗುರು" - ಶರಣರ ಮಾತು ಎಷ್ಟು ಸತ್ಯ!

ದಾರಿಯಲ್ಲಿ ಎಡಗಡೆ "ಹೊಗೆ ರಹಿತ ಗ್ರಾಮ" ಎಂಬ ನಾಮಫಲಕ ಕಾಣಿಸಿತು. "ಅಸ್ತ್ರ ಒಲೆ ಯೋಜನೆ" ಎಂದೂ ಬರೆದಿತ್ತು (ASTRA - Application of Science & Technology in Rural Areas). ರಸ್ತೆ ಬದಿಯ ಟೀ ಅಂಗಡಿಯಲ್ಲಿ ವಿಚಾರಿಸಿದಾಗ ಒಬ್ಬ ಯುವಕ ನನ್ನನ್ನು ಹಿಂಭಾಗದ ಮನೆಗೆ ಕರೆದೊಯ್ದು. ನಾನು ಅವನನ್ನು ಹಿಂಬಾಲಿಸುತ್ತಿರುವಾಗ ಅಂಗಡಿ ಒಳಗಿನ ಒಬ್ಬಾತ ನನ್ನನ್ನು ರಸ್ತೆಯಲ್ಲಿ ಏಕಾಂಗಿಯಾಗಿ ಬರುತ್ತಿರುವುದನ್ನು ನೋಡಿದೆನೆಂದು ಹೇಳಿದಾಗ, ಇನ್ನೊಬ್ಬ "ಅವರ ಕಂತೆ ಪುರಾಣ ಕಟ್ಟಿಕೊಂಡು ನಮಗೇನು?" ಎಂದು ಗೊಣಗಿದ. ಇಂತಹ ಧೋರಣೆ ಹಳ್ಳಿಗಳಲ್ಲಿ ತೀರ ಅಪರೂಪ. ಹೊಸಬರ ಬಗ್ಗೆ ಕುತೂಹಲ, ಸಹಾಯಕ ಬುದ್ಧಿಗಳು ಹಳ್ಳಿಗಳಲ್ಲಿ ಸರ್ವೇ

ಸಾಮಾನ್ಯ. ಮನಸ್ಸಿನಲ್ಲೇ ನಾನು ನಗುತ್ತ, ಒಂದು ಚಿಕ್ಕ ಮನೆಗೆ ಹೋದೆ. ಅಲ್ಲಿ ಅಡಿಗೆ ಮನೆಯಲ್ಲಿದ್ದ ಒಲೆ ಬಹು ಸರಳವೂ ಉಪಯುಕ್ತವೂ ಆಗಿತ್ತು. ಒಂದೆಡೆ ಮೇಲೆ ಬಾಯಿ ತೆರೆದುಕೊಂಡಿರುವ ಚೌಕಾಕಾರದ ಒಲೆ. ಅದರ ಮೇಲೆ ಒಂದು ಕಬ್ಬಿಣದ ಮುಚ್ಚಳ. ಆ ಒಲೆಯಲ್ಲಿ ಸ್ವಲ್ಪ ಸೌದೆ ಹಾಕಿ ಬೆಂಕಿ ಹಾಕಿ ಕಬ್ಬಿಣದ ಮುಚ್ಚಳದಿಂದ ಮುಚ್ಚಿದರೆ, ಅದರ ಉರಿ ಅಥವಾ ಶಾಖ ಒಳಗಿನ ರಂಧ್ರಗಳ ಮೂಲಕ ಮೂರು ಒಲೆಗಳನ್ನು ತಲಪುತ್ತದೆ. ಏಕಕಾಲಕ್ಕೆ ಬೇಳೆ ಬೇಯಿಸಬಹುದು, ಮುದ್ದೆ ಮಾಡಬಹುದು, ನೀರು ಕಾಯಿಸಬಹುದು. ಉರಿ ಹೊರಕ್ಕೆ ಕಾಣಿಸುವುದಿಲ್ಲ. ಹೊಗೆ ತುದಿಯ ಕೊಳವೆಯ ಮೂಲಕ ಮೇಲಕ್ಕೆ ಹೋಗುತ್ತದೆ. ಹುಲ್ಲಿನ ಮನೆಯಲ್ಲೂ ಈ ಒಲೆ ನಿರಪಾಯಕಾರಿ. ಆ ಮನೆಯಾತ ಹೇಳಿದಂತೆ, ಸಾಮಾನ್ಯ ಒಲೆಗಳ ಒಂದು ದಿನದ ಸೌದೆಯನ್ನು ಈ ಒಲೆಗಳಲ್ಲಿ ನಾಲ್ಕು ದಿನ ಬಳಸಬಹುದು. ಸರ್ಕಾರ ಈ ಹಳ್ಳಿಯಲ್ಲಿ ವಡ್ಡ ಮತ್ತು ಹಂದಿ ಜೋಗಿಗಳ ಇಪ್ಪತ್ತು ನಾಲ್ಕು ಸಂಸಾರಗಳಿಗೆ ಮನೆ ಕಟ್ಟಿಸಿ ಮೇಲಿನ ಅನುಕೂಲ ಮಾಡಿಕೊಟ್ಟಿದೆ.

ಗಂಗವಾಡಿ 96000 ಎಂಬ ನಾಡಿನ (ದಕ್ಷಿಣ ಮೈಸೂರು ರಾಜ್ಯ) 'ನಾಭಿ' ಎಂದು ವರ್ಣಿತವಾಗಿರುವ ನಿಟ್ಟೂರು ಒಂದು ದೊಡ್ಡ ಗ್ರಾಮ. ಅದನ್ನು ಸಮೀಪಿಸುತ್ತಿದ್ದಂತೆ ಒಂದು ಆಶ್ಚರ್ಯ ಕಾದಿತ್ತು. ಹತ್ತು ಹದಿನೈದು ಜನ ಹೂವಿನ ಹಾರ ಹಿಡಿದು ಜಯಕಾರ ಹಾಕುತ್ತ ಮುಂದೆ ಬಂದರು. ನನಗೆ ತೀರ ಸಂಕೋಚವಾಯ್ತು. ಪ್ರಚಾರ ಕೊಡದೆ ನೀವು ಹೀಗೆ ಬಂದುದು ಸರಿಯಲ್ಲವೆಂದು ಆಕ್ಷೇಪಿಸಿದರು. ಮೊದಲು ನನ್ನನ್ನು ನಾನು ತಿದ್ದಿಕೊಳ್ಳುವ, ನನ್ನ ಕನ್ನಡ ನಿಷ್ಠೆಯನ್ನು ದೃಢಗೊಳಿಸಿಕೊಳ್ಳುವ ಕಾರ್ಯವೆಂದು ನಾನು ಅವರಿಗೆ ಸ್ಪಷ್ಟಪಡಿಸಿದೆನಲ್ಲದೆ, ಮುಂದಿನ ಕನ್ನಡದ ಕೆಲಸಗಳಿಗೆ ನೀವೂ ಸಿದ್ಧವಾಗಬೇಕೆಂದು ಹೇಳಿದೆ. ಕನ್ನಡ ಅಧ್ಯಾಪಕ ಯುವಕ ಭಾಸ್ಕರಾಚಾರ್ ಅವರ ಸೋದರ ಸಂಬಂಧಿ ಡಾ. ಚಂದ್ರಶೇಖರ ಆಚಾರ್ ಅವರ ಮನೆಗೆ ಬಂದೆ. ಮಾಧ್ಯಮಿಕ ಶಾಲೆಯ ಉಪಾಧ್ಯಾಯ ಸಿದ್ಧಲಿಂಗಪ್ಪ ಉತ್ಸಾಹಿ ಕನ್ನಡ ಕಾರ್ಯಕರ್ತ. ಅವರು ರಾತ್ರಿ ಊಟಕ್ಕೆ ಮನೆಗೆ ಆಹ್ವಾನಿಸಿದರು.

ನಾನು ಉಳಿದುಕೊಂಡ ಮನೆ ಸಾಕಷ್ಟು ದೊಡ್ಡದಾಗಿತ್ತು. ನಿಟ್ಟೂರಿನ ಕಡುಬಡತನದ ವಿಶ್ವಕರ್ಮ ಜನಾಂಗದ ವ್ಯಕ್ತಿಯೊಬ್ಬರು ಸಾಹಸದಿಂದ ತಮ್ಮ ಹಿರಿಯ ಮಗನನ್ನು ಡಿಪ್ಲೊಮ ಇಂಜಿನಿಯರಿಂಗ್ ಓದಿಸಿದರು. ಆ ತಂದೆ ಮತ್ತು ಹಿರಿಯ ಮಗ ಸೇರಿ ಕಿರಿಯ ಮಗನನ್ನು ವೈದ್ಯನನ್ನಾಗಿ ಮಾಡಿದರು. ಆ ಡಾ. ಚಂದ್ರಶೇಖರ ಆಚಾರ್ ಇಡೀ ಕುಟುಂಬವನ್ನು ಬಡತನದಿಂದ ಮೇಲೆತ್ತಿರುವ ರೀತಿ ಆಶ್ಚರ್ಯಕರ. ಅಣ್ಣನ ಮಕ್ಕಳನ್ನು ಓದಿಸಿದ್ದಾರೆ, ದೊಡ್ಡಮನೆ ಕಟ್ಟಿದ್ದಾರೆ, ಗದ್ದೆ ಹೊಲ ತೋಟ ಮಾಡಿದ್ದಾರೆ, ತೆಂಗಿನ ನಾರಿನ ಹಗ್ಗ ಹೊಸೆಯುವ ಚಿಕ್ಕ ಕಾರ್ಖಾನೆ ನಡೆಸುತ್ತಿದ್ದಾರೆ, ಔಷಧಿ ಅಂಗಡಿಗೆ ಸಿದ್ಧತೆ ನಡೆಸಿದ್ದಾರೆ. ಮನೆಯಿಂದ ಕೆಲವೇ ಗಜಗಳ ದೂರದಲ್ಲಿ ಆಸ್ಪತ್ರೆಯಿದ್ದರೂ ಮಧ್ಯಾಹ್ನದ ಊಟ ಅಲ್ಲಿಗೆ ತರಿಸಿಕೊಳ್ಳುತ್ತಾರೆ. ಬೆಳಿಗ್ಗೆ ಎಂಟರಿಂದ ರಾತ್ರಿ ಹತ್ತರವರೆಗೆ ರೋಗಿಗಳ ಕಡೆ ಆಸ್ಥೆಯ ಗಮನ. ಅಣ್ಣ ಅಕ್ಕ ತಂಗಿಯರ ಮಕ್ಕಳೆಲ್ಲರನ್ನೂ ಮೇಲೆತ್ತುವ ಹಂಬಲ. ಸ್ವಂತ ಅಕ್ಕನ ಮಗಳನ್ನೇ

ಮದುವೆಯಾಗಿದ್ದಾರೆ. ಎಲ್ಲರೂ ಕಪ್ಪ ಕಪ್ಪಾಗಿದ್ದಾರೆ, ಸುಖವಾಗಿದ್ದಾರೆ. ಈ ಅಪ್ಪಟ ಭಾರತೀಯ ನಿಕಟ ಸಾಂಸಾರಿಕ ಸಂಬಂಧ ಈಗೀಗ ಅಪೂರ್ವವಾಗುತ್ತಿದೆ.

ಯುವಕ ಭಾಸ್ಕರಾಚಾರ್ ತುಮಕೂರಿನಲ್ಲಿ ಕನ್ನಡ ಅಧ್ಯಾಪಕರು, ಆಸ್ತಮಾ ಪೀಡಿತರು. ನನಗಾಗಿ ನಿಟ್ಟೂರಿಗೆ ಬಂದು ಎಲ್ಲ ವ್ಯವಸ್ಥೆ ಮಾಡಿದರು. ಅವರದು ಇನ್ನೊಂದು ಸಾಹಸದ ಕತೆ. ಚಿಕ್ಕವಯಸ್ಸಿನಲ್ಲೇ ತಾಯ್ತಂದೆಯರನ್ನು ಕಳೆದುಕೊಂಡ ಅವರು ತಮ್ಮ ಉಪಾಧ್ಯಾಯರ ಸಹಾಯದಿಂದ ಹೇಗೋ ಓದಿ, ಸಿದ್ಧಗಂಗೆಯಲ್ಲಿ ಆಶ್ರಯ ಪಡೆದು, ಬಿ.ಎ. ಮುಗಿಸಿ ಆಮೇಲೆ ಎಂ.ಎ. ಓದಿದ್ದು ಒಂದು ಚಿಕ್ಕ ಪವಾಡವೇ. ಯಾರು ಏನೇ ಹೇಳಲಿ, ನನ್ನಂತಹ ಸಾವಿರಾರು ಜನ ಬೀದಿ ಪಾಲಾಗದೆ ಬೆಳಕು ಕಂಡಿದ್ದರೆ ಅದು ಸಿದ್ಧಗಂಗೆಯ ಶ್ರೀಗಳು ಎಂದು ಕೃತಜ್ಞತೆಯಿಂದ ಸ್ಮರಿಸಿಕೊಂಡರು. ಜೀವನದುದ್ದಕ್ಕೂ ವೀರಶೈವ ಉಚಿತ ವಿದ್ಯಾರ್ಥಿ ನಿಲಯಗಳಲ್ಲೇ ಓದಿಕೊಂಡು ಬಂದ ನನ್ನಂಥವರು ಅವು ಇಲ್ಲದೇ ಹೋಗಿದ್ದರೆ ಖಂಡಿತ ಪದವೀಧರರಾಗುತ್ತಿರಲಿಲ್ಲ. ನನಗೆ ಸಾಹಸದ ಜೀವನವನ್ನು ಬದುಕಿ ಕಷ್ಟಪಟ್ಟು ಮೇಲಕ್ಕೆ ಬರುವ ಯುವಕರನ್ನು ಕಂಡರೆ ಅತೀವ ಅಭಿಮಾನ.

ಮಧ್ಯಾಹ್ನ ಊಟಕ್ಕೆ ಮುಂಚೆ ನನ್ನ ಬಳಿ ಇದ್ದ ನೋಟ್ ಪುಸ್ತಕ ತೆಗೆದರೆ ಅದರಲ್ಲಿ ನನ್ನ ಮಗಳು ನನಗೆ ಬರೆದಿಟ್ಟಿದ್ದ ನಾಲ್ಕು ಪುಟಗಳ ಪತ್ರವಿತ್ತು. ತಮ್ಮನ್ನೆಲ್ಲ ಪ್ರೀತಿಯಿಂದ ಬೆಳಸಿ ತಮ್ಮ ಅಗತ್ಯಗಳನ್ನೆಲ್ಲ ಪೂರೈಸಲು ನಾನು ಹೆಣಗಿರುವುದು ಇವನ್ನೆಲ್ಲ ಜ್ಞಾಪಿಸಿಕೊಂಡು, ಈಚೆಗೆ ಆದರ್ಶಗಳ ಹಿಂದೆ ಬಿದ್ದು "ನಾಲ್ಕು ಜನ" ತಮ್ಮ ಬಗ್ಗೆ ಆಡಿಕೊಳ್ಳುವಂತಾಗಬಹುದೆಂಬ ಭಯವನ್ನು ಆಕೆ ವ್ಯಕ್ತಪಡಿಸಿದ್ದಳು. ನನ್ನ ಹೆಂಡತಿ ಮಕ್ಕಳಿಗೆ ಎಲ್ಲರಂತೆ ಒಳ್ಳೆಯ ಮನೆ, ಬಟ್ಟೆ, ವಾಹನ, ಒಡವೆ ಬೇಕು - ಅದು ತೀರ ಸ್ವಾಭಾವಿಕ. ಕಳೆದ ಮೂರು ವರ್ಷಗಳಿಂದ ಕನ್ನಡ ಚಳವಳಿಗೆ ಇಳಿದ ಮೇಲೆ ಅವರತ್ತ ಕೊಡಬೇಕಾದಷ್ಟು ಗಮನ ಕೊಟ್ಟಿಲ್ಲವೆಂಬ ಬಾಧೆ ನನಗೆ ಇದ್ದೇ ಇದೆ. ನಿಮ್ಮ ಆದರ್ಶ ನನಗೆ ಹಿಡಿಸಿಲ್ಲವೆಂದು ಮಗಳು ನೇರವಾಗಿ ಬರೆದಿದ್ದಳು. "ಸುಖವಾಗಿ ಹಿಂದಿರುಗಿ ಬನ್ನಿ, ಒಳ್ಳೆಯ ಕಾರ್ಯಕರ್ತನಾಗುವುದಕ್ಕಿಂತ ಒಳ್ಳೆಯ ಗಂಡನಾಗಿ ತಂದೆಯಾಗಿ ಹಿಂದಕ್ಕೆ ಬನ್ನಿ" ಎಂದು ಹಾರೈಸಿದ್ದಳು. ಆ ಮಾತುಗಳು ನನ್ನನ್ನು ಸ್ವಲ್ಪ ವಿಚಲಿತನನ್ನಾಗಿ ಮಾಡಿದುವು. ನನ್ನ ಹೆಂಡತಿ ಮಕ್ಕಳದ್ದು ನನಗಿಂತ ಹೆಚ್ಚು ಸ್ವಾಭಾವಿಕವೂ ವ್ಯಾವಹಾರಿಕವೂ ಆದ ದೃಷ್ಟಿ ಎಂಬಲ್ಲಿ ನನಗೆ ಸಂಶಯ ಎಂದೂ ಇರಲಿಲ್ಲ. ಆ ವಿಷಯದಲ್ಲಿ ತಪ್ಪು ನನ್ನದೇ ಎಂಬ ಬಗ್ಗೆಯೂ ಅನುಮಾನವೇ ಇಲ್ಲ. ನಾನೇನೂ ಮಾಡಲಾರೆ. ನಿಟ್ಟೂರಿನಿಂದ ವಾಪಸ್ ಬೆಂಗಳೂರಿಗೆ ಹೋಗಲಾರೆ, ಅಂತೆಯೇ ನನ್ನ ಆದರ್ಶಗಳಿಂದ ಹಿಂದಕ್ಕೆ.

ಮಧ್ಯಾಹ್ನ ಇದ್ದಕ್ಕಿದ್ದಂತೆ ತುಮಕೂರಿಂದ ನಾಗರಾಜಪ್ಪ, ದಕ್ಷಿಣಾಮೂರ್ತಿ, ಮಹಾದೇವಪ್ಪ ಬಂದರು. ನನ್ನ ಮುಂದಿನ ಪ್ರಯಾಣದ ವ್ಯವಸ್ಥೆ ಮಾಡಲು ಬಂದ ನಾಗರಾಜಪ್ಪ ಹಿಂದಿನ ದಿನ ಬೆಂಗಳೂರಿಗೆ ಹೋಗಿದ್ದಾಗ ನನ್ನ ಹೆಂಡತಿ ಮಕ್ಕಳು ನನ್ನ ಪ್ರವಾಸವನ್ನು ಮನಸ್ಸಿಗೆ ಬಹಳ ಹಚ್ಚಿಕೊಂಡಿದ್ದಾರೆಂದು ತಿಳಿದುಬಂದಿತು. ನನ್ನ ಮಗ ಕರ್ನಾಟಕದ ಹಾಕಿ ಆಟಗಾರರಲ್ಲೊಬ್ಬನಾಗಿ ಮಣಿಪುರಕ್ಕೆ ಹೋಗಿದ್ದಾನೆ. ಮನೆಯಲ್ಲಿ ತಾಯಿ ಮಗಳು ಇಬ್ಬರೇ.

ನನಗೋ ದಿನದಿನವೂ ಹೊಸ ದೃಶ್ಯ, ಜನ, ಅನುಭವಗಳು. ಹೇಗೋ ನೋವನ್ನು ಮರೆಯಬಲ್ಲೆ. ನನ್ನ ಮನೆಯವರಿಗೆ ನನ್ನದೊಂದೇ ಯೋಚನೆ. ದಾವಣಗೆರೆಯಲ್ಲಿದ್ದ ನನ್ನ ತಾಯಿಗೆ ಕಳುಹಿಸಿದ್ದ ರೂ. 200/- ಮನಿ ಆರ್ಡರನ್ನು ಸಾತ್ವಿಕ ಸ್ವಭಾವದ ನನ್ನ ಭಾವ ವಾಪಸ್ ಕಳಿಸಿದ್ದುದು ಮನಸ್ಸಿಗೆ ಸ್ವಲ್ಪ ನೋವುಂಟುಮಾಡಿತು. ಗಂಡನಿಂದ ಬೇರೆಯಾಗಿ ಬೆಂಗಳೂರಿನಲ್ಲಿ ವಾಸಿಸುತ್ತಿರುವ ಎರಡನೆಯ ಮಗಳ ಕೊರಗಿನಲ್ಲಿ ನನ್ನ ತಾಯಿ ದೊಡ್ಡ ಮಗಳ ಮನೆಯಲ್ಲಿ ದಾವಣಗೆರೆಯಲ್ಲಿ ಇದ್ದರು.

ಸಂಜೆ ನಿಟ್ಟೂರಿನ ಶಾಂತಿನಾಥಸ್ವಾಮಿ ಬಸದಿಗೆ ಹೋದೆವು. ಬಸದಿಯ ಅರ್ಧದಷ್ಟು ಭಾಗವನ್ನು ಈಚೆಗೆ ಕಟ್ಟಲಾಗಿದೆ. ಮೂಲ ಕಟ್ಟಡವು ಹನ್ನೆರಡನೇ ಶತಮಾನದ ಹೊಯ್ಸಳ ಶೈಲಿಯ ಸುಂದರ ಕಟ್ಟಡ. ಹೊರಭಾಗದ ಮೇಲಿನ ಜೈನವಿಗ್ರಹಗಳನ್ನೆಲ್ಲ ಕೆತ್ತಿ ಹಾಕಲಾಗಿದೆ. ಒಳಭಾಗದ ಮೂಲವಿಗ್ರಹವು ಶಿಥಿಲವಾದ್ದರಿಂದ ಹದಿನೈದು ವರ್ಷಗಳ ಹಿಂದೆ ಅದರ ಜಾಗದಲ್ಲಿ ಉತ್ತರದಿಂದ ತರಿಸಿದ ಅಮೃತಶಿಲೆಯ ವಿಗ್ರಹವನ್ನು ಸ್ಥಾಪಿಸಲಾಗಿದೆ. ಈಗ ಅಲ್ಲೇ ಸಮೀಪ ಇರುವ ಜೈನ ಮನೆತನದವರು ಅರ್ಚನಾದಿಗಳನ್ನು ನೋಡಿಕೊಳ್ಳುತ್ತಿದ್ದಾರೆ. ದೇವಾಲಯದ ಸುತ್ತ ಇರುವ ಬಿಡಿ ಪುರುಷ ವಿಗ್ರಹಗಳೇನೋ ತಿಳಿಯಲಿಲ್ಲ. ಜೈನರ ಮನೆಯಲ್ಲಿ ಗಂಡಸರಿರಲಿಲ್ಲವಾಗಿ ಹೆಚ್ಚಿನ ವಿವರಣೆ ದೊರಕಲಿಲ್ಲ. (ನಿಟ್ಟೂರು ಬಸದಿಯ ಶಾಸನಗಳನ್ನು ರೈಸ್ ಅವರ ಎಫಿಗ್ರಾಫಿಯಾ ಕರ್ನಾಟಿಕ, ಸಂಪುಟ 12, ಗುಬ್ಬಿ ತಾಲ್ಲೂಕು 4-8 ಇಲ್ಲಿ ನೋಡಬಹುದು). ಹದಿಮೂರನೇ ಶತಮಾನದ ಕೇಶಿರಾಜನ ಶಬ್ದಮಣಿದರ್ಪಣಕ್ಕೆ ವ್ಯಾಖ್ಯಾನ ಬರೆದ ನಿಟ್ಟೂರ ನಂಜಯ್ಯ ಈ ಊರಿನವನೆಂದು ಎಲ್ಲರ ಗ್ರಹಿಕೆ. (ನ್ಯಾ|| ನಿಟ್ಟೂರು ಶ್ರೀನಿವಾಸ ರಾಯರು ಇದೇ ಊರಿನವರು). ಆ ಊರಲ್ಲಿ ಹಸ್ತ ಪ್ರತಿಗಳಿರುವ ಬಗ್ಗೆ ಉತ್ತರ ಸಿಗಲಿಲ್ಲ. ಊರಲ್ಲಿ ಸುತ್ತಾಡುತ್ತ ವಾಪಸ್ ಬರುವಾಗ ಕೆಂಪಣ್ಣ ಎಂಬ ಸಮೃದ್ಧ ಗಡ್ಡ ಮೀಸೆಯ ವೃದ್ಧರೊಬ್ಬರು (ನಿವೃತ್ತ ಶಾಲಾ ಉಪಾಧ್ಯಾಯರು) ಸಿಕ್ಕರು. ಅವರ ಒಬ್ಬನೇ ಮಗ ತನ್ನ ಹೆಂಡತಿ ತಾಯಿಯರಿಗೆ ಹೊಂದಾಣಿಕೆಯಾಗದ್ದರಿಂದ ಬೇರೆ ಮನೆ ಮಾಡಿಕೊಂಡಿರುವುದನ್ನು ಸ್ವಲ್ಪ ಸಮಾಧಾನದಿಂದಲೇ ಹೇಳಿಕೊಂಡರು. 1953ರಲ್ಲಿ ನಾನು ತುಮಕೂರು ಕಾಲೇಜಿನಲ್ಲಿ ಅಧ್ಯಾಪಕನಾಗಿದ್ದಾಗ ಅಲ್ಲಿಯ ಉಪಾಧ್ಯಾಯ ಶಿಕ್ಷಣ ತರಬೇತಿ ಸಂಸ್ಥೆಯಲ್ಲಿ ವಿದ್ಯಾರ್ಥಿಯಾಗಿದ್ದ ಅವರು ನನ್ನನ್ನು ಕರೆದೊಯ್ದು 'ಸ್ವಪ್ನ ವಾಸವದತ್ತ' ನಾಟಕದ ಬಗ್ಗೆ ಭಾಷಣ ಮಾಡಿಸಿದ್ದನ್ನು ಜ್ಞಾಪಿಸಿಕೊಂಡರು. ಎಲ್ಲ ಹಿಂದಿನ ಶಾಲಾ ಉಪಾಧ್ಯಾಯರಂತೆ ಅವರಿಗೂ ತಮ್ಮ ವೃತ್ತಿ ಜೀವನದ ಬಗ್ಗೆ ಹೆಮ್ಮೆ ಇತ್ತು.

ಸಂಜೆ ಕತ್ತಲಾಗುವ ಹೊತ್ತಿಗೆ ತುಮಕೂರಿನ ಎಲ್ಲ ಗೆಳೆಯರೂ ನನ್ನ ಮುಂದಿನ ಪ್ರಯಾಣದ ಕೆಲವು ತಂಗುದಾಣಗಳನ್ನು ನಿರ್ಧರಿಸಿಕೊಂಡು ಬಂದ ವಿಷಯ ತಿಳಿಸಿ ಶುಭ ಕೋರಿ ಹೊರಟರು. ನಾಗರಾಜಪ್ಪನವರ ಮುಂದೆ ನನ್ನ ಹೆಂಡತಿ ನಾನು ಸನ್ಯಾಸಿಯಾಗಿ ಹೋಗಿಬಿಡಬಹುದೆಂಬ ಭಯ ವ್ಯಕ್ತಪಡಿಸಿದ್ದಳಂತೆ. ಸನ್ಯಾಸ ನನಗೆ ಒಗ್ಗಿ ಬಂದುದಲ್ಲ. ಸನ್ಯಾಸದ ಮೂಲ ಪ್ರೇರಣೆಗಳಾದ ತ್ಯಾಗ, ನಿಷ್ಕಲ್ಮಷ ಬುದ್ಧಿ, ಅಂತರಂಗ ಬೋಧ ಇವು ನನಗೆ ಪ್ರಿಯವೇ. ಕನ್ನಡದ ಕೆಲಸಕ್ಕೆ ನನ್ನನ್ನು ನಾನು ಅಣಿಮಾಡಿಕೊಂಡು ಬೆಂಗಳೂರಿಗೇ

ಹಿಂದಿರುಗುತ್ತಿರುವಾಗ ಸನ್ಯಾಸದ ವಿಷಯವೆಲ್ಲಿ ಬಂದಿತು ! ನಾಗರಾಜಪ್ಪ ನನ್ನ ಕೈಗೆ ಸ್ವಲ್ಪ ಹಣ ಕೊಡಲು ಯೋಚಿಸಿದಾಗ, ನಾನು ಊರಿಂದ ತಂದಿದ್ದ ನೂರು ರೂಪಾಯಿ ತೋರಿಸಿ ನಿರಾಕರಿಸಿದೆ. ನನಗೆ ಅಷ್ಟು ಹಣದ ಅಗತ್ಯವೇ ಇರಲಿಲ್ಲ.

ರಾತ್ರಿ ಭಾಸ್ಕರಾಚಾರ್ ಜೊತೆ ನಾನು ಸಿದ್ಧಲಿಂಗಪ್ಪನವರ ಮನೆಗೆ ಊಟಕ್ಕೆ ಹೋದಾಗ ಅವರ ಪಕ್ಕದ ಬಂಧುಗಳ ಮನೆಯ ಮುಂದೆ ಒಂದು ಹಸು ತೀರ ನಿತ್ರಾಣವಾಗಿ ಬಿದ್ದಿತ್ತು. ಅದೇ ದಿನ ಬೆಳಿಗ್ಗೆ ಮೂರು ಹಸುಗಳಿಗೆ ಕಾಯಿಲೆ ಆಗಿ ಅವೂ ಮಲಗಿದ್ದುವು. ಮಧ್ಯಾಹ್ನ ಮಲ್ಲಸಂದ್ರ ಡೈರಿಯ ಪಶುವೈದ್ಯರು ಕೊಟ್ಟು ಹೋಗಿದ್ದ ಔಷಧಿಯನ್ನು ಸೀಸೆಯಿಂದ ಕುಡಿಸುತ್ತಿದ್ದರು. ಎದ್ದು ನಿಲ್ಲುವ ಶಕ್ತಿ ಕೂಡ ಹೋಗಿದ್ದ ಆ ಹಸುವನ್ನು ಕಂಡು ಮನಸ್ಸು ಕರಗಿಹೋಯ್ತು. ಏಕಾದರೂ ಊಟಕ್ಕೆ ಒಪ್ಪಿಕೊಂಡೆನೋ ಎಂದು ಅನ್ನಿಸಿತು. ಸಿದ್ಧಲಿಂಗಪ್ಪ ಮಜಬೂತಾದ ಯುವಕ. ಅವರ ಪುಟ್ಟ ಹೆಂಚಿನ ಮನೆ ತುಂಬ ಮರದ ಹಲಗೆ, ಧಾನ್ಯದ ಮೂಟೆ. ಒಂದು ಬೆಕ್ಕು 'ಮ್ಯಾವ್ ಮ್ಯಾವ್' ಎನ್ನುತ್ತ ಚೀಲ ಹತ್ತಿ ಇಳಿಯುತ್ತಿದ್ದರೆ ಒಂದು ನಾಯಿ ಹಸಿದು ಮನೆ ಒಳಗೇ ಬಂದು ನಿಂತಿತ್ತು. ಒಂದು ವಾರದ ಹಿಂದೆ ಅವರ ಮನೆಯಲ್ಲಿ ಕಳವಾದ ವಿಷಯವನ್ನು ಸ್ವಾರಸ್ಯವಾಗಿ ವಿವರಿಸಿದರು. ಸಂಜೆಗೇ ಯಾವನೋ ಕಳ್ಳ ಒಳ ಸೇರಿ ರಾತ್ರಿ ಎಲ್ಲರೂ ಮಲಗಿರುವಾಗ ಟ್ರಂಕನ್ನು ಕೊಂಡೊಯ್ದುದು, ದಾರಿಯಲ್ಲಿ ಅಡ್ಡಲಾಗಿ ಮಲಗಿದ್ದ ತಮ್ಮನ್ನೂ ತಮ್ಮ ಮಕ್ಕಳನ್ನೂ ದಾಟಿ ಹೋದುದು, ನೀರು ತುಂಬಿದ್ದ ತಂಬಿಗೆ ಕೊಂಡೊಯ್ದು ಹೊರಗೆ ನೀರು ಚೆಲ್ಲಿದ್ದು, ಬೀಗ ಹಾಕದ ಪೆಟ್ಟಿಗೆಯಿಂದ ಹತ್ತು ಸಾವಿರ ರೂಪಾಯಿನಷ್ಟು ಸೀರೆ ಹಣ ಒಡವೆ ಕೊಂಡೊಯ್ದುದು ಎಲ್ಲವನ್ನೂ ಕಣ್ಣಾರೆ ಕಂಡವರಂತೆ ಬಣ್ಣಿಸಿದರು. ಹಳ್ಳಿಗಳ ಸಾಮಾಜಿಕ ಪರಿಸ್ಥಿತಿ ಕುರಿತು ಎಲ್ಲರ ಬಾಯಲ್ಲೂ ಒಂದೇ ಮಾತು: ಅವು ಕೆಟ್ಟು ಹೋಗುತ್ತಿವೆ. ಪರಸ್ಪರ ಅಸೂಯೆ, ಸಣ್ಣತನ, ಹೃದಯ ದಾರಿದ್ರ್ಯ, ರಾಜಕೀಯ, ಕುಡಿತದ ಚಟಗಳು, ಜಾತೀಯತೆ ಇವು ಹಳ್ಳಿಗರನ್ನೂ ಕ್ರಮೇಣ ವ್ಯಾಪಿಸುತ್ತಿವೆ, ಇನ್ನೂ ಮುಳುಗಿಸಿಲ್ಲ. ಪಟ್ಟಣಿಗರು ಅವನ್ನು ಬೆಳೆಸಿಕೊಳ್ಳುತ್ತಿರುವಾಗ ಹಳ್ಳಿಗರಾದರೂ ಅವುಗಳಿಂದ ಏಕೆ ದೂರವಿರುತ್ತಾರೆ ? ಎಲ್ಲದಕ್ಕೂ ನಗರಗಳೇ ಆದರ್ಶ ತಾನೇ! ಲಂಡನ್ನಿಗೆ ನ್ಯೂಯಾರ್ಕ್, ಮುಂಬಯಿಗೆ ಲಂಡನ್ ಮತ್ತು ನ್ಯೂಯಾರ್ಕ್, ಬೆಂಗಳೂರಿಗೆ ನ್ಯೂಯಾರ್ಕ್ ಲಂಡನ್ ಮುಂಬಯಿ, ನಿಟ್ಟೂರಿಗೆ ಆ ಎಲ್ಲ ನಗರಗಳು ಮೇಲ್ಪಂಕ್ತಿ. ದೂರದರ್ಶನ ಹೇಗೂ ಎಲ್ಲವನ್ನೂ ನಮ್ಮ ಅಡುಗೆ ಮನೆ, ಊಟದ ಮನೆಗಳಿಗೇ ತಲಪಿಸುತ್ತಿದೆ. ಊಟವೇನೋ ಚೆನ್ನಾಗಿತ್ತು. ನಾನೇ ಮಧ್ಯಾಹ್ನ ಕೇಳಿಕೊಂಡಂತೆ ಅಕ್ಕಿ ರೊಟ್ಟಿ, ಕೊಬ್ಬರಿ ಚಟ್ನಿ. ತಿಪಟೂರು ಪ್ರದೇಶದ ಸಮೃದ್ಧ ಅಪ್ಪಟ ಕೊಬ್ಬರಿ ಚಟ್ನಿ ಬೇರೆಡೆ ದೊರಕುವುದು ಕಷ್ಟ. ಹಲಸಿನ ತೊಳೆಗಳಿಗೆ ಕೊಬ್ಬರಿ ತುರಿದು ಭಕ್ಷ್ಯವಾಗಿ ಬಡಿಸಿದ್ದರು. ಸಿದ್ಧಲಿಂಗಪ್ಪನವರಂತಹ ಹಳ್ಳಿಯ ಯುವ ಕಾರ್ಯಕರ್ತರನ್ನು ಕನ್ನಡ ಚಳವಳಿಗೆ ಸೆಳೆದರೆ ಅವರು ಬೆಂಗಳೂರು ಕನ್ನಡಿಗರ ಜಡತೆಯನ್ನು ಬಡಿದೋಡಿಸಬಲ್ಲರೆನ್ನಿಸಿತು. ಆದರೆ ಹಳ್ಳಿಗಳಿಗೆ ಬೆಂಗಳೂರೇ ಆದರ್ಶವಾಗುತ್ತಿದೆಯಲ್ಲ ಎಂಬ ಸಣ್ಣ ಆತಂಕವಂತೂ ನನಗಿದ್ದೇ ಇದೆ.

ನನ್ನ ಹೆಂಡತಿ ಮಕ್ಕಳು ರಾತ್ರಿ ಒಂಬತ್ತಾಗಿದ್ದರೂ ಊಟ ಮಾಡಲು ಮನಸ್ಸಿಲ್ಲದೆ ಮಂಕಾಗಿ ಕುಳಿತಿದ್ದುದನ್ನು ಮಿತ್ರರು ತಿಳಿಸಿದ್ದರು. ನನ್ನ ಹುಚ್ಚು ಆದರ್ಶಗಳಿಂದ ಏನೇನು ಆಗಬಹುದೋ ಏನೋ ಎಂದು ನೆನೆಯುತ್ತಲೇ ಮಲಗಿಕೊಂಡೆ. ಮಧ್ಯರಾತ್ರಿಯವರೆಗೆ ತಕ್ಕ ಮಟ್ಟಿಗೆ ನಿದ್ದೆ ಬಂದಿತು. ಸಿನಿಮಾಕ್ಕೆ ಹೋಗಿದ್ದ ಹೆಂಗಸರ ಮಕ್ಕಳ ನಿನಾದ ಕೇಳಿಸಿತು. ಮಳೆ ರ್ಭೋರಾಗಿ ಆರಂಭವಾಗಿದ್ದು ಆಮೇಲೆ ಬಹು ಹೊತ್ತು ಮೆತ್ತಗೆ ಹನಿಯಿತು. ಆ ಅರೆ ಎಚ್ಚರ ಅರೆ ನಿದ್ದೆ ಸ್ಥಿತಿಯಲ್ಲಿ ನೀರೆಲ್ಲ ಹೋಗಿ ಭೂಮಿಯ ಮೇಲೆ ಹಲಗೆಯಂತೆ ನಿಂತಂತೆ, ಅಲ್ಲಿಂದ ಹನಿ ಹನಿಯಾಗಿ ಉರುಳಿದಂತೆ ಚಿತ್ರ ಕಾಣಿಸಿತು. ಹಾಸಿಗೆಯಲ್ಲಿ ಹೊರಳುವುದು, ಕನ್ನಡವನ್ನು ಜ್ಞಾಪಿಸಿಕೊಳ್ಳುವುದು, ನನಗೆ ನಾನೇ ಧೈರ್ಯ ಹೇಳಿಕೊಳ್ಳುವುದು. ಏನೋ ಎಚ್ಚರ, ಏನೋ ಕನಸು, ಏನೋ ಸಂಕಲ್ಪ. ಬೆಳಿಗ್ಗೆ ಗಡಿಯಾರ ನೋಡಿಕೊಳ್ಳುವ ಹೊತ್ತಿಗೆ ಬೆಳಕು ಹರಿದಿತ್ತು.

## ದೊಡ್ಡಗುಣಿ

ಈ ದಿನ (15.5.85) ಶೋಭಾಳ ಕಾಲೇಜು ಆರಂಭವಾಗುತ್ತದೆ. ವಿನಯ ಮಣಿಪುರದ ಇಂಫಾಲ ಸೇರಿರುತ್ತಾನೆ. ಅವನಿಗೆ ಅಷ್ಟು ಚಿಂತೆಯಿಲ್ಲ, ಧೈರ್ಯಶಾಲಿ, ಸಾಹಸಿ, ಸ್ವತಂತ್ರ ಪ್ರವೃತ್ತಿಯವನು. ಶೋಭಾ ತುಂಬ ಸೂಕ್ಷ್ಮ, ಎಲ್ಲ ಹುಡುಗಿಯರ ಹಾಗೆ. ಅಪ್ಪಾಜಿ ಮನೆ ಬಿಟ್ಟು ಹೋಗಿದ್ದಾರೆ, ಏಕೆ ಏನು ಎಂದು ಪತ್ರಿಕೆಗಳಲ್ಲಿ ಬಂದರೆ, ತನ್ನ ಉಪಾಧ್ಯಾಯರೂ ಗೆಳತಿಯರೂ ಕೇಳಿದರೆ ಏನು ಹೇಳಲಿ ಎಂದು ಬಹುವಾಗಿ ಹೆದರಿದ್ದಾಳೆ. ನನ್ನ ಗಡ್ಡ ಮೀಸೆಗಳ ಮುಖವನ್ನು ಕಲ್ಪಿಸಿಕೊಂಡೇ ಇಳಿದುಹೋಗಿರುತ್ತಾಳೆ. ನೋಡಿದರಂತೂ ಹೆದರಿಬಿಡುತ್ತಾಳೆ. ಪತ್ರ ಮೂಲಕ ಅವಳಿಗೆ ಧೈರ್ಯ ತುಂಬಬೇಕು.

ದೊಡ್ಡಗುಣಿಯ ಪಂಚಾಯ್ತಿ ಕಚೇರಿಯಲ್ಲಿ ಕುಳಿತು (ಸಂಜೆ 5.00) ಈ ಭಾಗ ಬರೆಯುತ್ತಿದ್ದೇನೆ. ಬಹುತೇಕ ಲಿಂಗಾಯತರೇ ಇರುವ ಊರು ಇದು. ಸುತ್ತ ಮುತ್ತ ಗುಡ್ಡಗಳು ಅಡಕೆ ತೋಟಗಳು ಇವೆ. ಸಾಕಷ್ಟು ವಿದ್ಯಾವಂತ ಯುವಕರು ಹುದ್ದೆಗಳಿಗೆ ಸೇರದೆ ಊರಲ್ಲೇ ನೆಲಸಿ ತೋಟ ಗದ್ದೆ ನೋಡಿಕೊಂಡು ನೆಮ್ಮದಿಯಿಂದ ಇದ್ದಾರೆ. ನನ್ನ ಮುಂದೆಯೇ ರಸ್ತೆ ಬದಿಯಲ್ಲಿ ಒಂದು ನಲ್ಲಿಯಿದೆ. ಎತ್ತರದ ದಿಬ್ಬದಿಂದ ಸಣ್ಣ ಕೈಕಾಲಿನ ದೊಡ್ಡ ಹೊಟ್ಟೆಯ ನರಪೇತಲ ಮಗುವೊಂದು ಇಳಿಯಲಾರದೆ ಇಳಿದು ಬಂದು ಒಂದು ಅಡಕೆ ಗರಿಯನ್ನು ಕೈಯಲ್ಲಿ ಎತ್ತಿ ಆಟವಾಡಲು ಯತ್ನಿಸಿತು. ಆಟವಾಡಲೂ ಉತ್ಸಾಹವಿಲ್ಲದ ನಿಸ್ತೇಜ ಮಗು ಅದು. ಸಮೃದ್ಧಿಯ ಮಧ್ಯೆ ದಾರಿದ್ರ್ಯ. ನನಗೆ ನನ್ನ ಬಾಲ್ಯದ ಹಳ್ಳಿಯ ಬಾವಿ ನೆನಪಿಗೆ ಬಂದಿತು. ಬಾವಿ ಬೆಳಿಗ್ಗೆ ಸಂಜೆ ಜನರ ಕಿಲಕಿಲ ನಗುವಿನಿಂದ ಲಕಲಕಿಸುತ್ತಿತ್ತು. ಎರಡೂ ಕಡೆ ನಾಲ್ಕು 'ಗಡಗ'ಗಳು. ಹಗ್ಗದಿಂದ ಖಾಲಿ ಕೊಡವನ್ನು ಇಳಿಬಿಟ್ಟು ಹೆಂಗಸರು ಒಂದು ಕಾಲನ್ನು ಬಾವಿಯ ಗೋಡೆಗೆ ಒದ್ದು ಒದ್ದು ನೀರು ತುಂಬಿದ ಕೊಡವನ್ನು ಮೇಲಕ್ಕೆ ಎಳೆಯುತ್ತಿದ್ದರು. ಕೆಲವೊಮ್ಮೆ ನಾಲ್ಕು ಕೈಗಳು ಹಗ್ಗವನ್ನು ಹಿಡಿದು "ನೀರು ಸೇದು"ತ್ತಿದ್ದುದುಂಟು.

ಗಂಡಸರು ನೀರು ಸೇದುತ್ತಿದ್ದಂತೆ ಕಟ್ಟೆಯ ಮೇಲೆ ಹಗ್ಗವು ಹಿಂಭಾಗದಿಂದ ದುಂಡಾಗಿ ಸುತ್ತಿಕೊಳ್ಳುತ್ತಿತ್ತು. ಕೆಲವೊಮ್ಮೆ ಹಗ್ಗದ ಹಿಂಬದಿಯನ್ನು ಬಾವಿಯ ಅಡ್ಡ ಕಂಬಿಗೆ ಕಟ್ಟಿ ನೀರು ಸೇದಿದಾಗ ಹಗ್ಗ ಬಾವಿಯ ಒಳಕ್ಕೆ ಇಳಿಯುತ್ತಿತ್ತು. ನಗು, ವಿನೋದ, ಕೇಕೆ, ಸ್ಪರ್ಧೆಗಳ ಮಧ್ಯೆ ಮಧ್ಯಾಹ್ನ ತಲೆಮೇಲೆ ಹತ್ತಾರು ಕೊಡ ನೀರು ಸುರಿದುಕೊಳ್ಳುವುದು, ಬಾವಿಯ ನಿಲುಗಲ್ಲಿಗೇ ಬೆನ್ನನ್ನು ಉಜ್ಜಿ ಶುದ್ಧಿಮಾಡಿಕೊಳ್ಳುವುದು - ಇಂತಹ ನನ್ನ ಬಾಲ್ಯದ ನೆನಪುಗಳು ಮರುಕಳಿಸಿದವು. ಅಂತಹ ಬಾವಿಗಳ ಮೇಲೆ ಒಂದು ಸುಂದರ ಪ್ರಬಂಧ ಬರೆಯಬಹುದು. ಅದರ ಜೊತೆಗೆ, ಒಂದು ಕರುಣಾಜನಕ ಚಿತ್ರವೂ ಮೂಡುತ್ತದೆ. ಆದಿ ಕರ್ನಾಟಕ ಜನ ತಮ್ಮ ಮಣ್ಣಿನ ಕೊಡಗಳನ್ನು ತಂದು ನಮ್ಮನ್ನು ಗೋಗರೆದು ನೀರು ಹಾಕಿಸಿಕೊಳ್ಳುತ್ತಿದ್ದರು. ಅದು ಈಗ ತಪ್ಪಿದೆ. ಬಹುತೇಕ ಹಳ್ಳಿಗಳಲ್ಲಿ ಆದಿ ಕರ್ನಾಟಕರ ಕೇರಿಗಳಿಗೇ ಪ್ರತ್ಯೇಕ ಕೊಳವೆ ಬಾವಿಗಳು ಬಂದಿವೆ. ಬಾವಿಯಾಗಲಿ ಕೊಳವೆ ಬಾವಿಯಾಗಲಿ ಸವರ್ಣೀಯರೋ ಅವರ್ಣೀಯರೋ ಎಲ್ಲರೂ ಒಟ್ಟಾಗಿ ಬಳಸುವಂತಹ ಕಾಲ ಬೇಗ ಬರಲಿ.

ಊರ ನಲ್ಲಿಯ ಸುತ್ತ ಹೆಂಗಸರು ಸೇರಿದ್ದರು. ಬಾವಿಗಳ ಸಂಭ್ರಮ ಸೊಗಸಂತೂ ಅಲ್ಲಿರಲಿಲ್ಲ. ನಲ್ಲಿ ನಿಲ್ಲುವ ಮೊದಲೇ ನೀರು ಹಿಡಿಯುವ ಆತುರ, ಸ್ಪರ್ಧೆ ಇದ್ದುವು. ಆ ಸ್ಪರ್ಧೆ ಬಹುಬೇಗ ಜಗಳಕ್ಕೆ ತಿರುಗಿದರೂ ಆಶ್ಚರ್ಯವಿಲ್ಲ. ಯಂತ್ರ ನಾಗರಿಕತೆ ಹಳ್ಳಿಗರ ಬದುಕಿನಲ್ಲಿ ಮಾಡಿರುವ ಮಾರ್ಪಾಟು ಅಂತಹುದು: ಒಳಿತೂ ಆಗಿದೆ, ಕೆಡಕೂ ಆಗಿದೆ. ಇಲ್ಲೆಲ್ಲ ನಿರಾಸೆಪಟ್ಟುಕೊಳ್ಳುವುದು ಏನೂ ಇಲ್ಲ. ವಿವೇಕಿಯಾದವನು ಮಾರ್ಪಾಟುಗಳನ್ನು ಗುರುತಿಸುತ್ತಾನೆ. ಸಾಧ್ಯವಾದರೆ ಕೆಡಕುಗಳ ನಿವಾರಣೆಗೆ ಪರಿಹಾರೋಪಾಯ ಚಿಂತಿಸುತ್ತಾನೆ.

ಹದಿನೈದರ ಬೆಳಿಗ್ಗೆ ಕಾಫಿ ಕುಡಿದು ನಿಟ್ಟೂರಿಂದ ಚೀಲ ಹಿಡಿದು ಹೊರಟೆ. ಇಡೀ ಎಂಟು ಮೈಲಿ ಚೀಲ ಹಿಡಿದು, ಹೊತ್ತು ನಡೆಯಬೇಕಿತ್ತು. ದೂರ ಹೆಚ್ಚಿದಷ್ಟು ಹಗುರನೆಯ ಚೀಲ ಭಾರವಾಗುತ್ತ ಹೋಗುತ್ತದೆ. ನನಗೆ ನಡಗೆಯಲ್ಲಿ ಹಿಂದಿನ ದಿನದ ಉತ್ಸಾಹ ಕಾಣಲಿಲ್ಲ. ಚನ್ನಾಗಿ ಮಳೆ ಬಂದು ಹೊಲಗಳೆಲ್ಲ ನೆನೆದಿದ್ದುವು. ಅಲ್ಲಲ್ಲಿ ನೀರು ನಿಂತಿತ್ತು. ನನ್ನ ಭಯವೆಂದರೆ ನನ್ನ ಉತ್ಸಾಹ ಸೋಡಾ ಸೀಸೆಯಂತೆ ಟುಸ್ಸೆಂದು ಸದ್ದು ಮಾಡುವುದೋ ಏನೋ ಎಂಬ ಆತಂಕ. ಯಥಾ ಪ್ರಕಾರ ರಾತ್ರಿ ಹೊರಟ ಬಸ್ಸುಗಳು ಎದುರಿನಿಂದ ಬೆಂಗಳೂರು ಕಡೆ ಧಾವಿಸುತ್ತಿದ್ದುವು. ಬೆಂಗಳೂರಿನತ್ತ ಮುಖ ತಿರುಗಿಸಲು ನನಗೆ ಮನಸ್ಸಿಲ್ಲ. ಕನ್ನಡವನ್ನು ಕಳೆದುಕೊಳ್ಳುತ್ತಿರುವ, ಕನ್ನಡಿಗರ ಕೈತಪ್ಪಿ ಹೋಗುತ್ತಿರುವ (ಅಥವಾ ತಪ್ಪಿ ಹೋಗಿರುವ) ಬೆಂಗಳೂರಿನಿಂದ ನಾನು ಕ್ರಮೇಣ ದೂರವಾಗುತ್ತಿದ್ದೆ.

ನಿಟ್ಟೂರಿನ ಹೊರಭಾಗದವರೆಗೆ ಭಾಸ್ಕರಾಚಾರ್ ಸೈಕಲ್ ಮೇಲೆ ಚೀಲ ಇಟ್ಟು ತಳ್ಳಿಕೊಂಡು ಬಂದು ನನ್ನನ್ನು ಮುಂದಕ್ಕೆ ಕಳಿಸಿ ವಾಪಸಾದರು. ಒಂದು ಹೆಗಲಲ್ಲಿ ನನ್ನ ಸಮಸ್ತ ವಸ್ತುಗಳಿರುವ ಚೀಲ, ಇನ್ನೊಂದು ಕೈಯಲ್ಲಿ ನೀರಿನ ಪ್ಲಾಸ್ಟಿಕ್ ಡಬ್ಬಿಯಿರುವ ಚೀಲ. ಹಕ್ಕಿಗಳು ಧ್ವನಿಮಾಡುತ್ತಿದ್ದುವು. ನಿಟ್ಟೂರಿಂದ ಮೂರು ಕಿಲೋ ಮೀಟರ್ ದೂರದಲ್ಲಿ

ಒಂದು ಅರಣ್ಯ ಪ್ರದೇಶ. ಅಕ್ಕಪಕ್ಕದಲ್ಲಿ ಬಿರ್ಲಾಗಳಿಗಾಗಿ ಕರ್ನಾಟಕ ಸರ್ಕಾರ ಅತ್ಯಂತ ಆಸ್ಥೆಯಿಂದ ಬೆಳೆಸಿದ ಸಾವಿರಾರು ನೀಲಗಿರಿ ಮತ್ತು ಇತರ ಜಾತಿ ಮರಗಳಿದ್ದುವು. ತೀರ ನಿಶ್ಶಬ್ದ. ನಾನು ರಸ್ತೆ ಪಕ್ಕದಲ್ಲೇ ಗಿಡಗಳ ಮರೆಗೆ ಮಲ ವಿಸರ್ಜನೆಗೆ ಹೋದಾಗ ಒಬ್ಬ ಸೈಕಲ್ ಸವಾರ ನನ್ನನ್ನು ನೋಡಿಕೊಂಡು ಮುಂದೆ ಹೋದವನು ಮತ್ತೆ ಹಿಂದಕ್ಕೆ ಬಂದು ರಸ್ತೆಯಲ್ಲೇ ಸೈಕಲ್ ಸ್ಟ್ಯಾಂಡ್ ಹಾಕಿ ನಿಲ್ಲಿಸಿದಾಗ ನನಗೆ ಸ್ವಲ್ಪ ಸಂದೇಹ ಬಂತು. ಅವನು ಆ ಕಡೆ ಈ ಕಡೆ ನೋಡುತ್ತ ನಿಂತು ಬಿಟ್ಟ. ನನ್ನ ದುರದೃಷ್ಟಕ್ಕೆ ಒಂದು ವಾಹನವೂ ಬರಲಿಲ್ಲ. ನನ್ನ ಬಳಿ ಇರುವ ವಸ್ತುಗಳನ್ನು ಕಿತ್ತುಕೊಂಡು ಹೋಗಬಹುದು ಎಂಬ ಅನುಮಾನ (ಭಯ ಅಲ್ಲ) ಬಂತು. ಬಣ್ಣ ಬಣ್ಣದ ಲುಂಗಿ ಪಂಚೆ ಉಟ್ಟ ಅನಾಕರ್ಷಕ, ಮೂವತ್ತರ ಹರೆಯದ ಹುಡುಗ. ನಾನು ಅವಸರದಿಂದ ಕೆಳಗಿಟ್ಟಿದ್ದ ನನ್ನ ಸಾಮಾನು ತೆಗೆದುಕೊಂಡು ರಸ್ತೆಗೆ ಬಂದೆ. "ಯಾವುದಾದರೂ ಸೈಕಲ್ ನೋಡಿದಿರಾ?" ಎಂದ. ನಾನು ಉತ್ತರ ಕೊಟ್ಟು ಮುಂದೆ ಹೊರಟೆ. "ನಿಮ್ಮ ಜೊತೆ ನಿಟ್ಟೂರಿಂದ ಹೊರಟ ಸೈಕಲ್ಲಿನವರು ಎಲ್ಲಿ?" ಎಂದ. ಅವರು ಹಿಂದಕ್ಕೆ ಹೋದರು ಎಂದು ಉತ್ತರಿಸಿ ಬೇಗ ಬೇಗ ಹೆಜ್ಜೆ ಹಾಕಿದೆ. ನನ್ನನ್ನು ಮಾತಿಗೆ ಎಳೆದು ಎಲ್ಲವನ್ನೂ ಕಿತ್ತುಕೊಳ್ಳುವ ಉದ್ದೇಶ ಅವನದ್ದಿರಬಹುದು ಎನ್ನಿಸಿತು. ಅವನು ಸೈಕಲ್ ಹತ್ತಿ ಹಿಂದೆ ಹೋದ. ದೂರದಲ್ಲಿ ಯಾವುದೋ ವಾಹನ ಕಾಣಿಸಿತು. ನನ್ನ ಕೈಗಡಿಯಾರ, ಹಣ ಹೋದರೆ ಚಿಂತೆ ಇಲ್ಲ; ಡೈರಿ, ಕನ್ನಡಕ ಕಿತ್ತುಕೊಂಡರೆ ಗತಿ ಏನು ಎಂಬ ಆತಂಕ ನನ್ನದು. ಕಿತ್ತುಕೊಂಡದ್ದನ್ನು ಯಾರಿಗಾದರೂ ಹೇಳಬಹುದೆಂದು ಅವನು ಹಿಂಸೆಗೂ ಕೈ ಹಾಕಬಹುದಿತ್ತಲ್ಲವೇ? ಮುಂದೆ ನಡೆಯುತ್ತ ಅಂದುಕೊಂಡೆ - ಅದಕ್ಕೂ ಮಾನಸಿಕವಾಗಿ ಸಿದ್ಧವಾಗಿರಬೇಕು.

ಮುಂದೆ ಸುಂದರ ದೃಶ್ಯಗಳು ಕಾಣಿಸಿದುವು. ಲಘು ಅರಣ್ಯ, ಚಿಕ್ಕ ಬೆಟ್ಟಗಳು, ಗದ್ದೆ, ತೋಟ ಎಲ್ಲವೂ ರಮ್ಯವಾಗಿದ್ದುವು. ಅಲ್ಲೇ ದೂರದ ಒಂದು ಗುಡ್ಡದ ಓರೆಯಲ್ಲಿ ನಡೆದುಬರುತ್ತಿದ್ದ ಒಬ್ಬ ಮುದುಕ ದೊಡ್ಡಗುಣಿ ಎರಡು ಮೈಲಿ ಇದೆ ಎನ್ನುವಷ್ಟರಲ್ಲಿ ರಸ್ತೆಗೆ ಬಂದು ಕೂಡಿಕೊಂಡ. ಅವನ ಹೆಸರು ಬಂಡಿರಂಗಯ್ಯ; ಜಾತಿಯಲ್ಲಿ "ಎಕೆ" (ಆದಿ ಕರ್ನಾಟಕ). ಮಗು ಚಿಕ್ಕ ವಯಸ್ಸಿನಲ್ಲೇ ತೀರಿಹೋಗಿ ಅವನೂ ಅವನ ಹೆಂಡತಿಯೂ ವೃದ್ಧಾಪ್ಯದಲ್ಲಿ ದುಡಿಯಲಾರದೆ ಸಾಯಲೂ ಆಗದೆ ಒದ್ದಾಡುತ್ತಿರುವ ಸಂಗತಿ ಅವನಿಂದ ತಿಳಿಯಿತು. ಅವನ ಊರಲ್ಲಿ ಪ್ರತ್ಯೇಕ ಕೊಳವೆ ಬಾವಿ ಇದ್ದುದರಿಂದ ಸವರ್ಣೀಯರನ್ನು ಆಶ್ರಯಿಸಬೇಕಾಗಿರಲಿಲ್ಲ. ದೊಡ್ಡಗುಣಿಗೆ ಯಾರೋ ಒಂದಿಷ್ಟು ಹಣ ಸಾಲ ಕೊಡಬಹುದೆಂದು ಹೋಗುತ್ತಿದ್ದ. ಅವನಿಗೆ ಸಾಲ ಕೊಡುವವರು ಯಾರು ? ಏನಾದರೂ ಬಟ್ಟೆ ಇದ್ದರೆ ಕೊಡಿ ಎಂದ. ನನ್ನ ಬಳಿ ಅವನಿಗೆ ಕೊಟ್ಟು ಪುಣ್ಯ ಕಟ್ಟಿಕೊಳ್ಳಲು ಹೆಚ್ಚಿನ ಬಟ್ಟೆ ಇರಲಿಲ್ಲ. ಊರಿನ ಮುಖಂಡರಿಂದ ಕೊಡಿಸುತ್ತೇನೆ ಎಂದು ಹೇಳಿದೆನಾದರೂ ಅದು ಸರಿ ಅಲ್ಲ ಎನಿಸಿತ್ತು. ಮುಖಂಡರೆಲ್ಲ ಅಪರಿಚಿತರು. ಹೋಗಿ ನಾನೇ ಪರಿಚಯ ಮಾಡಿಕೊಳ್ಳಬೇಕಾದವರು. ಅವನಿಗೆ ಒಂದು ರೂಪಾಯಿ ಕೊಟ್ಟು ಏನಾದರೂ ಪುರಿ ಹಣ್ಣು ತಿನ್ನು ಎಂದು ಕಳಿಸಿಕೊಟ್ಟೆ. ಮೋಹನ್ ಎಂಬ ಇಂಜಿನಿಯರಿಂಗ್ ವಿದ್ಯಾರ್ಥಿ ನನಗಾಗಿ ಊರ ಬಾಗಿಲಲ್ಲಿ ಕಾದಿದ್ದ

ತನ್ನ ಮನೆಗೆ ಕರೆದೊಯ್ದ. ಅವನ ತಂದೆ ನಿವೃತ್ತ ಜೂನಿಯರ್ ಇಂಜಿನಿಯರ್. ಅವರ ಮನೆಯಲ್ಲಿ ಸ್ನಾನಮಾಡಿ ಸೊಗಸಾದ ಉಪ್ಪಿಟ್ಟು ಮೊಸರು ತಿಂದೆ. ಅದೇ ಊರಿನ ಪದವೀಧರ ಯುವ ಮುಖಂಡ ರಾಜಶೇಖರ್ ನನ್ನನ್ನು ಗ್ರಾಮ ಪಂಚಾಯ್ತಿ ಕಟ್ಟಡದಲ್ಲಿ ಉಳಿಸಿದ. ಮಧ್ಯಾಹ್ನ ಒಂದು ಮದುವೆ ಮನೆಯಲ್ಲಿ ಊಟ. ಸಂಜೆ ಅದೇ ಊರಿನ ಹೊರಗೆ ನಡೆಯುತ್ತಿದ್ದ ಸಂತೆಯಲ್ಲಿ ಸುತ್ತಾಡಿದೆ. ನಾನು ಚಿಕ್ಕವನಾಗಿದ್ದಾಗ ನನ್ನ ಹಳ್ಳಿಗೆ ಮೂರು ನಾಲ್ಕು ಮೈಲಿ ದೂರದ ಸಂತೇಬೆನ್ನೂರು ಸಂತೆಗೆ ಅವ್ವ ಕೊಟ್ಟ ಜೋಳ ಬೇಳೆ ತೆಗೆದುಕೊಂಡು ಹೋಗಿ ಮಾರಿ ಬೆಂಕಿಪೊಟ್ಟಣ ಊದುಬತ್ತಿ ಬೆಲ್ಲವನ್ನು ಕೊಂಡುಕೊಂಡು, ಮರೆಯದೆ "ವಡೆ"ಯನ್ನೂ ಕೊಂಡು ತಿಂದು ಮನೆಗೆ ಬರುತ್ತಿದ್ದುದು ಜ್ಞಾಪಕಕ್ಕೆ ಬಂದಿತು. ಅದೇ ರೀತಿಯ ಸಂತೆ ಇದಾಗಿತ್ತು. ರಾಗಿ, ಬೆಲ್ಲ, ತೆಂಗು, ಕಡಲೆಕಾಯಿ, ಅಕ್ಕಿಗಳಲ್ಲದೆ ಕುಂಕುಮ, ಬಿಚ್ಚೋಲೆ, ವಿಭೂತಿ ಮೊದಲಾದ ವಸ್ತುಗಳನ್ನು ನೆಲದ ಮೇಲೆ ಹರಡಿ ಮಾರುತ್ತಿದ್ದರು. ಬೋಂಡ, ಪಕೋಡಗಳಂತೂ ಇರಲೇಬೇಕಲ್ಲವೇ ? ಹಿಂದಿಗಿಂತ ಈಗ ಹಣ ಸಾಕಷ್ಟು ಓಡಾಡುತ್ತಿದೆ - ಹೋಲಿಕೆಯೇ ಇಲ್ಲ. ಅಲ್ಲೇ ಪಕ್ಕದ ಕೆರೆಯಲ್ಲಿ ನೀರಿತ್ತು. ಜನ ಇದ್ದುದರಲ್ಲಿ ನೆಮ್ಮದಿವಂತರು.

ಊರಲ್ಲಿ ಮದುವೆ ಆದರೆ ಎಲ್ಲ ಮನೆಗಳವರೂ ಸಹಕರಿಸುವುದು ಒಂದು ರೂಢಿ. ಮಧ್ಯಾಹ್ನ ಆದುದು ಊರೂಟ. ರಾತ್ರಿ ಹೆಣ್ಣಿನ ಮನೆಯವರು ಬರುವುದಿತ್ತು. ಹೆಣ್ಣಿಗೆ ತಾಯ್ತಂದೆಯರು ಇಲ್ಲದಿದ್ದುದರಿಂದ ಗಂಡಿನ ಮನೆಯಲ್ಲಿ ಮಾರನೆಯ ದಿನ ಮದುವೆ ನಡೆಯುವುದಿತ್ತು. ರಾತ್ರಿ ಒಂಬತ್ತು ಗಂಟೆಯಲ್ಲಿ ಆ ಊರಲ್ಲಿ ಒಂದು ಓಲೆಗರಿ ಪ್ರತಿ ಇರುವುದು ತಿಳಿಯಿತು. ವಿದ್ಯುತ್ ದೀಪದ ಬೆಳಕಿನಲ್ಲೇ ಅದನ್ನು ಪರಿಶೀಲಿಸಿದಾಗ ಅದರ ಒಂದು ಭಾಗ ಸಂಸ್ಕೃತದ ನಾಮಲಿಂಗಾನುಶಾಸನವೆಂದು ತಿಳಿಯಿತು. ಇನ್ನೊಂದು ಭಾಗ ಒಂದು ಕನ್ನಡ ಕಾವ್ಯ. ಬಹಳ ಜೀರ್ಣವಾಗಿದ್ದುದಲ್ಲದೆ ಅಸ್ತವ್ಯಸ್ತವಾಗಿ ಹಾಳೆಗಳು ಸೇರಿದ್ದರಿಂದ, ಅದಕ್ಕಿಂತ ಕಣ್ಣಿಗೆ ಬಹಳ ಆಯಾಸವಾದುದರಿಂದ ಅದು ಯಾವ ಕಾವ್ಯವೆಂದು ತಿಳಿಯಲಾಗಲಿಲ್ಲ. ರಾತ್ರಿ ವಾಪಸ್ ಬರುವ ಹೊತ್ತಿಗೆ ಹಿಂದೆ ಆ ಊರಿಗೆ ಪಟೇಲರಾಗಿದ್ದ ಬೇಡರ ಜಾತಿಯ ಮುದುಕರೊಬ್ಬರು ಎಲ್ಲ ಕಿಟಕಿ ಬಾಗಿಲು ಮುಚ್ಚಿಕೊಂಡು ಮಲಗಿದ್ದರು. ಒಳಗೆ ಹೋಗಿ ಕಿಟಕಿ ತೆಗೆದು, ಬೀಡಿ ಸೇದುವಂತಿದ್ದರೆ ಹೊರಗೆ ಹೋಗಿ ಬನ್ನಿ ಎಂದೆ. ಕೊಠಡಿಯೆಲ್ಲ ಬೀಡಿ ಹೊಗೆ ವಾಸನೆಯಿಂದ ತುಂಬಿ ತುಳುಕುತ್ತಿತ್ತು. ಪಾಪ, ಮುದುಕರು ರಾತ್ರಿಯೆಲ್ಲ ಒಳಗೆ ಮಲಗಿಕೊಂಡೇ ಕೆಮ್ಮಿದರು. ನನಗೆ ನಿದ್ದೆ ಬರಲಿಲ್ಲ. ರಾತ್ರಿ ಬಹುವಾಗಿ ಮಿಂಚಿದರೂ ಮಳೆ ಬರಲಿಲ್ಲ. ಬೆಳಗಿನ ಜಾವ ಯಾರೋ ನೀನಿನ್ನೂ ಮನೆ ಕಟ್ಟಿಸಿಲ್ಲವೆಂದು ಗೇಲಿ ಮಾಡಿದಂತಾಯ್ತು. ಅದು ನನ್ನ ಹೆಂಡತಿ ಮಕ್ಕಳ ಬಹುದಿನಗಳ ಕನಸು. ನಾನಿನ್ನೂ ಮನೆ ಕಟ್ಟಿಸದೆ ಬದುಕಿನಲ್ಲಿ ಅಭದ್ರಸ್ಥಿತಿಯಲ್ಲಿದ್ದೇನೆ. ಆ ಅಭದ್ರಸ್ಥಿತಿಯೇ ನನಗೆ ನನ್ನ ಹುಚ್ಚು ಆದರ್ಶಗಳ ಬೆಂಬತ್ತಲು ಪ್ರಚೋದನೆಯೇ? ತಿಳಿಯದು. ವಾಸ್ತವದಿಂದ ಒಂದು ಬಗೆಯ ಪಲಾಯನವೇ? ಅದೂ ತಿಳಿಯದು. ಇದ್ದರೂ ಇದ್ದೀತು. ಇದ್ದರೆ ಅದನ್ನು ದೇವರು

ನೋಡಿಕೊಳ್ಳುತ್ತಾನೆ. ಮನೆಗೆ ಅಡಿಪಾಯ ಹಾಕಿಸಿ ಬಂದಿದ್ದೇನೆ. ನನ್ನಿಂದ ಸಾಧ್ಯವಿಲ್ಲದಿದ್ದರೂ ನನ್ನ ಮಕ್ಕಳಾದರೂ ನನ್ನ ದೊಡ್ಡ ನಿವೇಶನದಲ್ಲಿ ಒಳ್ಳೆಯ ಮನೆಯನ್ನು ಕಟ್ಟಿ ತಮ್ಮ ತಾಯಿಯನ್ನು ಸುಖವಾಗಿಡಲಿ ಎಂದು ಪ್ರಾರ್ಥಿಸಿದೆ.

ಹಳ್ಳಿಗಳಿಗೆ ಧ್ವನಿವರ್ಧಕಗಳು ಬಂದು ಅಲ್ಲಿನ ಪ್ರಶಾಂತ ವಾತಾವರಣವನ್ನು ಕೆಡಿಸಿರುವುದು ನನ್ನನ್ನು ಖಿನ್ನನನ್ನಾಗಿ ಮಾಡುತ್ತದೆ. ಬೆಳಿಗ್ಗೆ ರಸ್ತೆಯಲ್ಲಿ ನಡೆಯುತ್ತಿದ್ದರೆ ಹತ್ತಿರದ ಹಳ್ಳಿಗಳಿಂದ ಸಿನಿಮಾ ಹಾಡುಗಳು ಕೇಳುತ್ತವೆ. ಮದುವೆ ದಿನವಾದ್ದರಿಂದ ಅಂದು ಹಗಲು, ಸಂಜೆ, ರಾತ್ರಿಯೆಲ್ಲ ಸಿನಿಮಾ ಹಾಡುಗಳೇ ಕೇಳಿಸಿದುವು. ಹಿಂದೆ ಬೆಳಗಿನ ಜಾವ ರಾಗಿ ಜೋಳ ಬೀಸುವ ಮಂಜುಳ ಮಂಗಲಮಯ ಹಾಡುಗಳು ತೇಲಿಬರುತ್ತಿದ್ದವು. ಮದುವೆಗಳಲ್ಲಿ ಹಳ್ಳಿಗಳ ವಾದ್ಯನಿನಾದದ ಜೊತೆ ಸೋಬಾನೆ ಹಾಡುಗಳೂ ಕೇಳುತ್ತಿದ್ದುವು.

## ಹಾಲುಗೋಣ

ಬೆಳಿಗ್ಗೆ (16.5.85) ಕಾಫಿ ಕುಡಿದು ಒಬ್ಬನೇ ಹೊರಟೆ. ರಾತ್ರಿ ನಿದ್ದೆಯಿಲ್ಲದಿದ್ದರೂ ಮನಸ್ಸು ಉಲ್ಲಾಸಮಯವಾಗಿತ್ತು. ದೇಹ ಆಗಲೇ ಶ್ರಮಕ್ಕೆ ಒಗ್ಗಿಕೊಳ್ಳುತ್ತಿತ್ತು. ಮನಸ್ಸು ಗಟ್ಟಿಗೊಳ್ಳುತ್ತಿತ್ತು. ಹಾಡುತ್ತ, ಮಾತಾಡುತ್ತ ಹೊರಟೆ. ಬಿ.ಎ. ಆನರ್ಸ್ ಓದುತ್ತಿದ್ದಾಗ ಹೇಳಿಕೊಳ್ಳುತ್ತಿದ್ದ, ಈ ಮಧ್ಯೆ ನಿಂತುಹೋಗಿದ್ದ ಕವನಗಳೆಲ್ಲ ಜ್ಞಾಪಕಕ್ಕೆ ಬರುತ್ತಿವೆ. “ರವಿಗಿಲ್ಲದ ಭಯ, ಶಶಿಗಿಲ್ಲದ ಭಯ, ತಾರಾನಿವಹಕೆ ಇರದ ಭಯ, ನಿನಗೇತಕೆ ಬಿಡು, ಅಣು! ಶ್ರದ್ಧೆಯನಿಡು, ನಿನ್ನನೆ ನೈವೇದ್ಯವ ನೀಡು”. ನಮ್ಮನ್ನು ಭಯ ಎಷ್ಟು ಹೆದರಿಸಿ ಬಿಟ್ಟಿದೆ! ಭಯಕ್ಕೆ ಒಮ್ಮೊಮ್ಮೆ ಹೆದರುತ್ತೇವೆ, ಹಾಗೆಯೇ ಭಯವನ್ನು ಹುಟ್ಟಿಸಿ ಹೆದರಿಸುತ್ತೇವೆ. ನಮಗಿಂತ ಮೇಲಿನವರಿಗೆ, ಶಕ್ತರಿಗೆ ಹೆದರುವುದು ಸಾಮಾನ್ಯವಾಗಿ ಬಿಟ್ಟಿದೆ. ಸತ್ಯವನ್ನು ನುಡಿಯಲೂ ಹೆದರುತ್ತೇವೆ. ಎಲ್ಲ ಕಡೆಗೂ ಕ್ಲೈಬ್ಯ, ಸ್ವಾರ್ಥ, ಹೇಡಿತನ ಎದ್ದು ಕಾಣುತ್ತಿದೆ. ಇದು ಭಾರತದ ಎಲ್ಲ ಕಡೆಗೂ ಕಾಣುವ ಚಿತ್ರವಾದರೆ, ಅದರಲ್ಲೂ ಕನ್ನಡಿಗರು ಇನ್ನೂ ಹತ್ತು ಹೆಜ್ಜೆ ಹಿಂದೆ ಹೋಗಿದ್ದಾರೆ, ನಿಸ್ಸತ್ವರಾಗಿದ್ದಾರೆ. ಹಿಂದಿನ ಆ ಕ್ಷಾತ್ರ ಶೌರ್ಯವೆಲ್ಲ ಎಲ್ಲಿ ಹೋಯಿತು! ನನಗೆ ನಾನು ಮತ್ತೆ ಮತ್ತೆ ಹೇಳಿಕೊಂಡೆ, ಕನ್ನಡಕ್ಕಾಗಿ “ನಿನ್ನನೆ ನೈವೇದ್ಯವ ನೀಡು”. ಮನುಷ್ಯ ತನ್ನ ಸಮರ್ಪಣೆಯ ಮೂಲಕ ಮಾತ್ರವೇ ಅಮರನಾಗಬಲ್ಲ. “ಓ ದೇವರೇ, ಕನ್ನಡಮ್ಮನೇ, ನನ್ನನ್ನು ಅಪ್ಪಟ ಮನುಷ್ಯನನ್ನಾಗಿ ಮಾಡು. ನನ್ನ ಪ್ರೀತಿ ಇಡೀ ವಿಶ್ವವನ್ನು ತಬ್ಬಲಿ. ಕನ್ನಡ ಸಂಸ್ಕೃತಿಯನ್ನು ಉಳಿಸಲು, ನನ್ನನ್ನು ನಾನು ಅರ್ಪಣೆ ಮಾಡಿಕೊಳ್ಳಲು ನನ್ನ ಮನಸ್ಸನ್ನು ಅಣಿಗೊಳಿಸು. ನಾನು ಹಂಪಿಯನ್ನು ಸೇರಿ ದೃಢ ಪ್ರತಿಜ್ಞನಾಗಿ ಹಿಂದಕ್ಕೆ ಬೆಂಗಳೂರಿಗೆ ಹೋಗಬೇಕು. ಅಲ್ಲಿ ಮಾಡುವ ಕೆಲಸ ಬಹಳ ಇದೆ. ಓ ದೇವರೆ, ನನ್ನ ಮನಸ್ಸಿನ ಮೂಲೆ ಮೂಲೆಯನ್ನು ಹೊಕ್ಕು ಎಲ್ಲಾದರೂ ಸ್ವಾರ್ಥ, ಹೇಡಿತನ, ಮುಚ್ಚು ಮರೆ ಇದ್ದರೆ ಅದನ್ನೆಲ್ಲ ಗುಡಿಸಿ ಹಾಕುವ ಬಯಕೆ ನನ್ನದು. ಓ ವಿಶ್ವಶಕ್ತಿ, ಇಗೋ ವ್ಯಾಪಕ ಮಳೆಯಾಗಿ ಹುಟ್ಟಿ ಅಂಗೈ ಅಗಲವಾಗಿ ನನ್ನ ಮೇಲೆ ಸುರಿ, ನನ್ನಲ್ಲಿ ಅಂತರ್ಗತವಾಗು.

ಇದೋ ನಿನಗೆ ನಾನು ಒಪ್ಪಿಸಿಕೊಳ್ಳುತ್ತಿದ್ದೇನೆ" ಎಂದು ಭಾವಪೂರ್ಣನಾಗಿ ನನಗೆ ಕೇಳಿಸುವಂತೆ ಭಾವಾವಿಷ್ಟನಾಗಿ ಪ್ರಾರ್ಥಿಸಿದೆ.

ಮನಸ್ಸು ಕನ್ನಡದ ಕಡೆ, ಮುಖ ಹಂಪಿಯ ಕಡೆ. ಹಂಪಿ ಇನ್ನೂ ಬಲು ದೂರ. ನಿಧಾನವಾಗಿ ನಡೆದಂತೆ ಅಡಿ ಅಡಿ ಹತ್ತಿರವಾಗುತ್ತಿದೆ. ಹೆದರಿ ಹಿಂದಕ್ಕೆ ನಡೆದರೆ ಅಡಿ ಅಡಿ ದೂರವಾಗುತ್ತದೆ. ಕನ್ನಡದ ಕೆಲಸ ನಿಧಾನವಾಗಿ ಎಡೆಬಿಡದೆ ಮುಂದುವರಿಯಬೇಕು. ಹಂಪಿಗೆ ನಾನು ದಾಪುಗಾಲು ಹಾಕಿ ನಾಳೆಯೇ ಸೇರಲಿಕ್ಕಾಗುವುದಿಲ್ಲ ತಾನೇ! ಭಯ ಸಲ್ಲದು. ನಿರಾಸೆ ಸಲ್ಲದು. ಮನಸ್ಸೇ ಎಚ್ಚರಗೊಳ್ಳು. ಆಗ ನಿನ್ನಿಂದ ಕನ್ನಡಿಗರಲ್ಲಿ ಎಚ್ಚರ ಮೂಡಿಸಲು ಸಾಧ್ಯ. ಹಂಪಿಯನ್ನು ನೀನು ಮುಟ್ಟುವುದು ಖಂಡಿತ. ಮತ್ತೆ ಮತ್ತೆ ಮನಸ್ಸಿಗೆ ಹೇಳಿಕೊಂಡೆ - ದೈವವು ನಿನ್ನನ್ನು ಎಲ್ಲ ಬಗೆಯ ಯಾತನೆಗೆ ತಳ್ಳಿ ಮನಸ್ಸನ್ನು ಸ್ಥಿರಗೊಳಿಸಿ ಕನ್ನಡದ ಕೆಲಸವನ್ನು ಮಾಡಿಸುತ್ತದೆ. ಇಲ್ಲವೇ ಕನ್ನಡದ ಕೆಲಸ ಮಾಡು, ಇಲ್ಲವೇ ಅದರ ಬದಲು ಹುಚ್ಚನಾಗು. ದೈವಸಂಕಲ್ಪವೇನೋ ತಿಳಿಯದು. "ದೇವರೇ, ನೀನು ಇದ್ದರೆ ನಿನಗೆ ನಮಸ್ಕಾರ, ಇಲ್ಲದಿದ್ದರೆ ದಯಮಾಡಿ ನನಗಾಗಿ ಇರು" ಎಂದೆಲ್ಲ ಹೇಳಿಕೊಂಡೆ. ನನಗೆ ಹೇಳುವವರೂ ಇರಲಿಲ್ಲ, ನನ್ನ ಮಾತು ಕೇಳುವವರಂತೂ ಮೊದಲೇ ಇಲ್ಲ! ರಸ್ತೆಯಲ್ಲಿ ವಾಹನಗಳು ತಮ್ಮಷ್ಟಕ್ಕೆ ತಾವು ಹಿಂದಿನಿಂದ ಹೋಗುತ್ತಿವೆ, ಮುಂದಿನಿಂದ ಬರುತ್ತಿವೆ.

ಉದ್ದಕ್ಕೂ ತೆಂಗಿನ ತೋಟಗಳು. ಇಡೀ ಬಯಲು ಸೀಮೆಯ ಕರ್ನಾಟಕದಲ್ಲಿ ಇಷ್ಟು ಅಚ್ಚುಕಟ್ಟಾದ ಶುಭ್ರ ಸುಂದರ ಹಳ್ಳಿಗಳು ಎಲ್ಲೂ ಕಾಣೆಸವು. ದಾರಿಯಲ್ಲಿ ಮಳೆ ಬಂದು ಹವೆ ತಂಪಾಗಿತ್ತು. ಅಮ್ಮಸಂದ್ರದ ಸಿಮೆಂಟ್ ಕಾರ್ಖಾನೆಯ ಹೊಗೆ ದೂರಕ್ಕೆ ಕಾಣುತ್ತಿತ್ತು. ದಾರಿಯಲ್ಲಿ ಆ ಕಾರ್ಖಾನೆಗೆ ರೋಪ್‌ವೇ ಮೂಲಕ ಕಚ್ಚಾ ಸಾಮಗ್ರಿ ಸರಬರಾಜಾಗುತ್ತಿತ್ತು. ಹಳ್ಳಗಳಲ್ಲಿ ಹರಿಯುತ್ತಿದ್ದ ನೀರು ಎಷ್ಟು ಕೆಂಪಗಿತ್ತೆಂದರೆ ಅಂತಹ ನೀರನ್ನು ನಾನು ನೋಡಿಯೇ ಇಲ್ಲ. ಎಲ್ಲೆಲ್ಲೂ ಕೆಂಪು ಮಣ್ಣಿನ ಭೂಮಿ, ಕೆಂಪು ಹೆಂಚಿನ ("ಮಂಗಳೂರು ಹೆಂಚಿನ") ಮನೆಗಳು. ರೋಪ್‌ವೇ ದಾಟಿ ಬರುತ್ತಿದ್ದಂತೆ ಒಂದು ಒಣಮರದ ಬೊಡ್ಡೆಯನ್ನು ನೀಲಿ ಬಣ್ಣದ ಕೆಂಪು ಕೊಕ್ಕಿನ ಮರಕುಟುಗ ಕುಟ್ಟುತ್ತಿತ್ತು. ಆ ಕುಟ್ಟುವಿಕೆಯ ಸದ್ದು ದೂರಕ್ಕೂ ಕೇಳಿಸುತ್ತಿತ್ತು. ನಾನು ಮೆತ್ತಗೆ ಆ ಮರದ ತೀರ ಸಮೀಪಕ್ಕೆ ಹೋದರೂ ಅದು ತನ್ನ ಕೆಲಸವನ್ನು ಏಕಾಗ್ರತೆಯಿಂದ ಮುಂದುವರಿಸಿ ಡೊಗರಿನಿಂದ ಬಂದ ಹುಳುವನ್ನು ನುಂಗಿ ಪಕ್ಕದ ಒಣ ಚಕ್ಕೆಯನ್ನು ಕುಟ್ಟಲು ಆರಂಭಿಸಿತು. ಅದು ನನ್ನನ್ನು ಲಕ್ಷ್ಯದಲ್ಲಿಟ್ಟುಕೊಂಡೇ ತನ್ನ ಎಚ್ಚರವನ್ನು ಉಳಿಸಿಕೊಂಡೇ ಎರಡೂ ಕಾಲುಗಳನ್ನು ಮರಕ್ಕೆ ಅಂಟಿಸಿದಂತೆ ತಬ್ಬಿ ಹಿಡಿದು, ತಲೆಯನ್ನು ಮೇಲೆತ್ತಿ ಕೊಕ್ಕಿನಿಂದ ಕುಟ್ಟುವ ಕೆಲಸ ಶುರುಮಾಡಿತು. ಮರದ ಹತ್ತಿರ ಇನ್ನೂ ಹೋದಾಗ ಹಕ್ಕಿ ಮರದ ಹಿಂಬದಿಗೆ ಹೋಗಿ ಹಾರಿ ಹೋಯಿತು. ನನಗೆ ಅದು ಕುಕ್ಕಿದ ಡೊಗರು ಕಾಣಿಸಿತು. ಆಮೇಲೆ ಯಾರೋ ಗೆಳೆಯರು ಹೇಳಿದ್ದು - ಮರಕುಟುಗವು ಮಾಡುವ ಡೊಗರಿನಲ್ಲಿ ಮಳೆ ನೀರು ಸೇರಿ ಗೆದ್ದಲು ಬೆಳೆದು ಮರಗಳೇ ಹಾಳಾಗಿ ಹೋಗಿರುವ ಉದಾಹರಣೆಗಳಿವೆಯಂತೆ. ಏನೇ ಇರಲಿ - ಆ ಹಕ್ಕಿಯ ಏಕಾಗ್ರತೆ,

ಜೊತೆಗೆ ಜಾಗೃತವಾಗಿದ್ದ ಅದರ ಒಳವಿಚ್ಚರ, ನಿರಂತರ ಯತ್ನ, "ಫಲ" ಸಾಧನೆ ಇವು ನನಗೆ ಮೆಚ್ಚುಗೆ ಆದುವು.

ಕಿಬ್ಬನಹಳ್ಳಿಗೆ ಮುಂಚೆ ಬಲಕ್ಕೆ ಒಂದು ಸುಂದರ ಬೆಟ್ಟದ ಶ್ರೇಣಿ. ಆ ಬೆಟ್ಟದ ತುದಿಯಲ್ಲಿ ಲಕ್ಷ್ಮೀನಾರಾಯಣ ದೇವಾಲಯ. ಅದರ ತಪ್ಪಲಲ್ಲಿ "ದೊಣೆಗಂಗಾ" ಎಂದು "ಸಿದ್ಧರಾಮ ದೊಣೆ" ಎಂದೂ ಕರೆಯಲಾಗುವ ಒಂದು ಜಾಗದ ಬೋರ್ಡ್ ಕಾಣಿಸಿತು. ಮುಂದೆ ಹಲವು ವರ್ಷಗಳ ಬಳಿಕ ಅದನ್ನು ಹೋಗಿ ನೋಡಿದೆ. ಮುಖ್ಯರಸ್ತೆಯಿಂದ ಸುಮಾರು ಎರಡು ಕಿಲೋಮೀಟರ್ ದೂರಕ್ಕೆ ಹೋದರೆ ಕಾಡಿನ ಮಧ್ಯೆ ಒಂದು ಗುಹೆ, ಅದರ ಮುಂದೆ "ದೊಣೆ" ಇದೆ. ಆ ಗುಹೆ ಸಿದ್ಧರಾಮೇಶ್ವರ ಧ್ಯಾನ ಮಾಡಿದ ಜಾಗವೆಂದು ಜನ ನಂಬಿದ್ದಾರೆ. ಆ ಇಕ್ಕಟ್ಟಾದ ಗುಹೆಯ ಒಳಗಿನ ಚಿಕ್ಕ ಬಂಡೆಯ ಮೇಲೆ ಸಿದ್ಧರಾಮ ಮಲಗಿಕೊಂಡು ತನ್ನ ಎರಡೂ ಕಾಲುಗಳನ್ನು ಮೇಲ್ಭಾವಣೆಗೆ ಆನಿಸಿ ಧ್ಯಾನಮಾಡಿದ್ದರಿಂದ ಆ ಛಾವಣಿಯಲ್ಲಿ ಹೆಜ್ಜೆ ಗುರುತುಗಳಾಗಿವೆ ಎಂದು ತೋರಿಸುತ್ತಾರೆ. ದೊಣೆಯಲ್ಲಿ ವರ್ಷದ ಹನ್ನೆರಡೂ ತಿಂಗಳು ನೀರಿರುತ್ತದೆ. ಜನ ಭಕ್ತಿಯಿಂದ ಅಲ್ಲಿಗೆ ಬಂದು ಪೂಜಾದಿಗಳನ್ನು ನೆರವೇರಿಸುತ್ತಾರೆ. ನಾನು ಹೋದ ದಿನ ಆ ದೊಣೆ ತುಂಬ ಹೂವು, ಎಲೆಗಳು ತುಂಬಿ ಹೋಗಿದ್ದುವು. ಭಕ್ತರು ಹರಕೆ ಹೊತ್ತು ಅಲ್ಲಿ 'ದಾಸೋಹ' ಕೂಡ ನಡೆಸುತ್ತಾರೆ. ಅಲ್ಲಿ ಮಠವೊಂದು ಸಂಸ್ಕೃತ ಶಾಲೆ ನಡೆಸುತ್ತಿದ್ದು ನಿಂತು ಹೋಗಿದೆ. ಆ ಅತ್ಯಂತ ರಮಣೀಯ ಪ್ರದೇಶದಲ್ಲಿ ಅರಣ್ಯ ಇಲಾಖೆ ಸಾಕಷ್ಟು ಆಲದ ಮರ ಬೆಳೆಸಿದೆ. "ಸಿದ್ಧರಾಮನ ದೊಣೆ ಮುದ್ದೆ, ಆಲದ ಮರದ ಕೆಳಗೆ ನಿದ್ದೆ, ಇದ್ದರೆ ಇದ್ದೆ, ಹೋದರೆ ಹೋದೆ" ಎಂಬ ನಾಣ್ಣುಡಿ ಪ್ರಚಲಿತವಾಗಿದೆ. ಆ ಜಾಗದ ಪಾವಿತ್ರ್ಯವನ್ನು ಶ್ರದ್ಧೆಯಿಂದ ಉಳಿಸುವ ಅಗತ್ಯ ಇದೆ. ಅಲ್ಲಿಂದ ಕಿಬ್ಬನಹಳ್ಳಿ ಕ್ರಾಸ್ ಎಷ್ಟು ದೂರವೆಂದು ಕೇಳಿದರೆ, ಒಬ್ಬ ಮೂರು ಫರ್ಲಾಂಗ್ ಎಂದ, ಇನ್ನೊಬ್ಬ ಮೂರು ಮೈಲಿ ಎಂದ. ಹಳ್ಳಿಯ ಜನಕ್ಕೆ ದೂರವು ಲೆಕ್ಕಕ್ಕೆ ಬಾರದ ಯಃಕಶ್ಚಿತ್ ಸಂಗತಿ. "ಅಲ್ಲೇ ಸ್ವಾಮಿ, ಹೋಗಿ ಸಿಗುತ್ತೆ" ಎಂದು ಹೇಳುವ ಜಾಗ ಕೆಲವೊಮ್ಮೆ ಮೂರು ನಾಲ್ಕು ಮೈಲಿ ಇರುತ್ತದೆ. ಪಟ್ಟಣದ ಜನಕ್ಕೆ ನಡೆಯಲು ಒಂದು ಮೈಲಿ ಎಂದರೆ ಒಂದು ಯೋಜನದಷ್ಟು ದೂರ. ಸುಮಾರು ಒಂಬತ್ತರ ಹೊತ್ತಿಗೆ ಕಿಬ್ಬನಹಳ್ಳಿ ಕ್ರಾಸಿಗೆ ಬಂದೆ. ಅದರ ಸಮೀಪ ಇತಿಹಾಸಪೂರ್ವ ಶಿಲಾಯುಧಗಳೂ ಬೇರೆ ಬೇರೆ ಅವಶೇಷಗಳೂ ದೊರಕಿದ್ದುದನ್ನು ಇತಿಹಾಸದಲ್ಲಿ ಓದಿದ್ದೆ. ಆ ದಿನ ಎಂಟು ಮೈಲಿ ನಡೆದು ಆಯಾಸವಾಗಿತ್ತು.

ಕ್ರಾಸಿನಲ್ಲಿ ದಕ್ಷಿಣಾಮೂರ್ತಿಯ ತಂದೆ ಶಿವಣ್ಣನವರು ನನಗಾಗಿ ಕಾದಿದ್ದರು. ಶಿವಣ್ಣ ಆ ಕ್ರಾಸಿನಲ್ಲಿ ಒಂದು ಲೋಟ ಟೀ ಕುಡಿಸಿಯಾರೇ ಎಂದು ಹಂಬಲಿಸಿದೆ. ಅವರು ಅದನ್ನು ಅರಿಯದೆ ಮತ್ತೆ ಅಲ್ಲಿಂದ ಮೂರು ಮೈಲಿ ದೂರದ ಚಿಕ್ಕನಾಯಕನ ಹಳ್ಳಿ ರಸ್ತೆಯಲ್ಲಿದ್ದ ಹಾಲುಗೊಣ ಊರಿಗೆ ನನ್ನನ್ನು ಕರೆದೊಯ್ದರು. ಕಾಲೆಳೆಯುತ್ತ ನಾನು ದಾರಿಯಲ್ಲಿನ ಹಟ್ಣ ಎಂಬ ಊರಿನ ಜೈನ ಬಸದಿಯನ್ನು ನೋಡುವ ವ್ಯವಧಾನ ಇರದೆ ಅವರ ಜೊತೆ ಸಾಗಿದೆ.

ಅಲ್ಲಿ ಹಿತವಾದ ತಣ್ಣೀರು ಸ್ನಾನ. ಬೆನ್ನಲ್ಲೇ ಎರಡು ದೊಡ್ಡ ತಟ್ಟೆ ಇಡ್ಲಿಗಳು, ಕಿತ್ತಲೆ ಗಾತ್ರದ ಕೊಬ್ಬರಿ ಚಟ್ನಿ, ಒಂದು ಹಿಡಿ ತರಕಾರಿ ಪಲ್ಯ. ಎಲ್ಲದರ ಮೇಲೆ ತುಪ್ಪದ ಸುರಿಮಳೆ. ರುಚಿಕರ ಕಾಫಿ ಮುಗಿಯುತ್ತಿದ್ದಂತೆ ರಸಪೂರಿ ಮಾವಿನಹಣ್ಣು ತಿಂದೆ, ತೇಗಿದೆ, ಮಲಗಿದೆ. ಎಚ್ಚರವಾಗುವಷ್ಟರಲ್ಲಿ ನನ್ನನ್ನು ಎದುರುಗೊಳ್ಳಲು ಕಿಬ್ಬನಹಳ್ಳಿ ಕ್ರಾಸಿನಿಂದ ದೊಡ್ಡಗುಣಿಗೆ ನನ್ನ ಎದುರಿಗೇ, ನನ್ನನ್ನು ಗುರುತಿಸದೆ ಮೋಪೆಡ್ ಮೇಲೆ ಹೋಗಿದ್ದ ಬಸವಲಿಂಗಪ್ಪ ವಾಪಸ್ ಬಂದರು. ಎಚ್ಚರಾದಾಗ ಮತ್ತೆ ಮಾವಿನ ಹಣ್ಣು, ಒಂದು ಲೋಟ ಹಾಲು. ಶಿವಣ್ಣ ತರಬೇನಹಳ್ಳಿಯ ದೊಡ್ಡ ಜಮೀನುದಾರರು. ಹಾಲುಗೊಣದ ಬಸವಲಿಂಗಪ್ಪ ರಸ್ತೆ ಪಕ್ಕದಲ್ಲೇ ಮನೆ ಕಟ್ಟಿಕೊಂಡು ವಾಸವಾಗಿದ್ದ ನೆಮ್ಮದಿವಂತರು. ಹಿರಿಯ ಮಗ ಬಿ.ಎ., ಬಿ.ಎಡ್. ಮುಗಿಸಿ ಕೆಲಸ ಹುಡುಕುತ್ತಿದ್ದ. ಎರಡನೆಯ ಮಗ ತಿಪಟೂರಿನಲ್ಲಿ ವಿದ್ಯಾರ್ಥಿ. ಮೂರನೆಯವಳು ಮಗಳು. ಎಲ್ಲರೂ ಸುಸಂಸ್ಕೃತರು. ಹಾಲುಗೊಣ ಊರಿನ ಮುಂದೆಯೇ ಒಂದು ಚಿಕ್ಕಕುಂಟೆ (ಕೊಳ) ಇದೆ. ಅದರಿಂದಲೇ ಆ ಊರಿಗೆ ಆ ಹೆಸರು. ಹಿಂದೊಮ್ಮೆ ಒಂದು ಚಿಕ್ಕ ಕೋಟೆ ಇದ್ದು ಅದರ ಸುತ್ತಣ ಅಗುಳಿನ ಒಂದು ಭಾಗವಾಗಿತ್ತಂತೆ ಆ ಕುಂಟೆ. ಅವರ ಮನೆಯ ಮುಂದೆಯೇ ಒಂದು ಪೋಸ್ಟ್ ಡಬ್ಬವಿದ್ದು ಬೆಳಿಗ್ಗೆ ಸಮೀಪದ ಜಯಚಾಮರಾಜಪುರದ (ಹಿಂದಿನ "ಶೆಟ್ಟಿ ಹಳ್ಳಿ") ಅಂಚೆ ಮಾಸ್ತರು ಬಂದು ಅರ್ಧ ಗಂಟೆ ಇದ್ದು ಮನಿ ಆರ್ಡರ್ ಇತ್ಯಾದಿ ಸ್ವೀಕರಿಸಿ, ಡಬ್ಬಿಯಿಂದ ಅಂಚೆ ತೆಗೆದುಕೊಂಡು ಹೋಗುತ್ತಾರೆ. ಆ ಊರಲ್ಲಿ ಲಿಂಗಾಯತರೆ ಪ್ರಬಲ. ಬಸವಲಿಂಗಪ್ಪ ಒಂದು ಚಿಕ್ಕ ಅಂಗಡಿ ಇಟ್ಟುಕೊಂಡಿದ್ದಾರೆ. ಶಿವಣ್ಣನವರು ವ್ಯವಹಾರ ಬಲ್ಲ ಮನುಷ್ಯರು, ಬಹು ಉತ್ಸಾಹಶಾಲಿ. ಮಧ್ಯಾಹ್ನದಿಂದ ಸಂಜೆವರೆಗೆ ಊರಿನ ವಿಷಯ, ವ್ಯವಸಾಯ, ರಾಜಕೀಯವು ಜನರಲ್ಲಿ ಬೆಳೆಸುತ್ತಿರುವ ಅಸೂಯೆ, ಸಣ್ಣತನ ಇವೇ ಮೊದಲಾದ ಕೆಲ ವಾಸ್ತವ ವಿಷಯಗಳನ್ನು ಅವರು ಪ್ರಸ್ತಾಪಿಸಿದರು. ಸಂಜೆ ಮಳೆ ಬಂದಾಗ ಊರ ಹೊರಗಿನ ಹಳ್ಳದಲ್ಲಿ ಕೆಂಪು ಓಕುಳಿ ನೀರೇ ಹರಿಯುತ್ತಿತ್ತು. ಎಷ್ಟು ರಮ್ಯ ಸಂಜೆ ! ಭೈರಪ್ಪನವರು ಹೇಳುತ್ತಿದ್ದರಂತೆ - "ಇಲ್ಲಿಯ ಯಾವುದೇ ಹಳ್ಳಿ ನೋಡಿದರೂ ಮನೆ ಕಟ್ಟಿಕೊಂಡು ಇದ್ದು ಬಿಡೋಣ ಎಂದು ಅನ್ನಿಸುತ್ತೆ". ಬಸವಲಿಂಗಪ್ಪನವರ ಮಾವಿನ ಮರಗಳ ಗುತ್ತಿಗೆ ಹಿಡಿದಿದ್ದ ಮುಸ್ಲಿಮನೊಬ್ಬ ತನ್ನ ಕಡೆಯ ಕಾವಲುಗಾರನನ್ನು ನೇಮಿಸಿದ್ದ. ಆತನಿಗೆ ತೋಟದಲ್ಲಿ ದೆವ್ವದ ಭಯ ಎಂದು ಅವನ ಜೊತೆ ಮಲಗಲು ಬಸವಲಿಂಗಪ್ಪನವರ ಮಗ ಹೋದ. ಆ ಕಾವಲುಗಾರ ಸ್ವಲ್ಪ ಹುಚ್ಚನಂತಿದ್ದು ಸಾವು ಅವನಿಗೆ ದೆವ್ವದ ಭಯವಾಗಿ ಕಾಡುತ್ತಿತ್ತು. ನಾನು ಉಳಿದಿದ್ದ ಮನೆಯಲ್ಲಿ ಎಲ್ಲೆಂದರಲ್ಲಿ ಮಾವಿನ ಹಣ್ಣುಗಳೇ ಕಾಣಿಸುತ್ತಿದ್ದುವು - ತಿನ್ನುವ ಜನರಿಗಾಗಿ ಹಜಾರದಲ್ಲಿ, ತಿನ್ನಲಿರುವ ಜನರಿಗಾಗಿ ಹುಲ್ಲಿನಲ್ಲಿ ಕಾದು ಕುಳಿತಿದ್ದುವು. ಇಡೀ ಮನೆ ಮಾವಿನ ಹಣ್ಣಿನ ಬಣ್ಣ, ಸುವಾಸನೆಗಳಿಂದ ಸಡಗರಗೊಂಡಿತ್ತು. ಗುಬ್ಬಿ ತಿಪಟೂರು ಪ್ರದೇಶದಿಂದ ದೂರದ ಮುಂಬಯಿ ಮೊದಲಾದ ಊರುಗಳಿಗೆ ಮಾವು ಇಲ್ಲಿಂದ ಸರಬರಾಜಾಗುತ್ತದೆ. ರಸ್ತೆಯಲ್ಲಿ ಉದ್ದಕ್ಕೂ ಅಕ್ಕ ಪಕ್ಕದಲ್ಲಿ ಮಾವಿನ ಹಣ್ಣಿನ ರಾಶಿ ಹಾಕಿಕೊಂಡು ಬೆಳೆಗಾರರು ಗಿರಾಕಿಗಳಿಗೆ ಕಾಯುತ್ತಿದ್ದ ದೃಶ್ಯ ಸಾಮಾನ್ಯವಾಗಿತ್ತು. ತುಮಕೂರು ಜಿಲ್ಲೆ ಬರೀ ತೆಂಗಿಗಷ್ಟೇ ಅಲ್ಲ, ಮಾವಿನ ಹಣ್ಣಿಗೂ ಪ್ರಸಿದ್ಧವೆಂಬ ಸಂಗತಿ ನನಗೆ ತಿಳಿದದ್ದು, ಅನುಭವಕ್ಕೆ ಬಂದದ್ದು ಆಗಲೇ.

ಆ ದಿನ ಮುಂದಿನ ನನ್ನ ತಂಗುದಾಣದ ವಿಷಯ ಪ್ರಸ್ತಾಪಕ್ಕೆ ಬಂದಿತು. ಹಾಲುಗೊಣದಿಂದ ತಿಪಟೂರಿಗೆ ಹದಿನಾಲ್ಕು ಮೈಲಿ (ಸುಮಾರು 25 ಕಿ.ಮೀ). ನಾನು ಪ್ರತಿದಿನ ಸುಮಾರು ಎಂಟು ಒಂಬತ್ತು ಮೈಲಿ ಸರಾಸರಿ ನಡೆಯುವುದು ಎಂದು ಲೆಕ್ಕ ಹಾಕಿದ್ದೆ. ಮಧ್ಯೆ ಕರಡಿಯಲ್ಲೋ ಯಾವುದೋ ಊರಲ್ಲೋ ಉಳಿಯಬಹುದಿತ್ತು. ಹೇಗೋ ತಿಪಟೂರಿಗೇ ಹೋಗಿ ಅಲ್ಲಿ ಒಂದು ದಿನ ವಿಶ್ರಾಂತಿ ತೆಗೆದುಕೊಂಡು ಮುಂದುವರಿಸಿದರಾಯ್ತು, ಒಂದಷ್ಟು ಟಿಪ್ಪಣಿ ಉಳಿದುದನ್ನು ಅಲ್ಲಿ ಬರೆದು ಮುಗಿಸಿದರಾಯ್ತು ಎಂದು ನಿರ್ಧರಿಸಿದೆ. ಆ ಕಾರಣ, ಮಧ್ಯಾಹ್ನವೇ ನನ್ನ ಹೆಗಲು ಚೀಲವನ್ನು ತಿಪಟೂರಿಗೆ ಕಳಿಸಿಬಿಟ್ಟೆ, ಬ್ರಷ್ಷು ನೀರಿನ ಬಾಟ್ಲಿ ಟವಲ್ಲು ಇಷ್ಟನ್ನು ಮಾತ್ರ ಉಳಿಸಿಕೊಂಡು.

## ತಿಪಟೂರು

ಬೆಳಗಿನ ಜಾವ (17.5.85) ಐದಕ್ಕೆ ಎದ್ದರೆ ಒಂದು ಆಶ್ಚರ್ಯ ಕಾದಿತ್ತು. ತುಮಕೂರಿಂದ ಬಿ. ವೀರಭದ್ರಯ್ಯ, ಚಂದ್ರಪ್ಪ ಬಂದಿದ್ದರು. ಅವರು ಹಾಲುಗೊಣಕ್ಕೆ ಬರಲು ಕಿಬ್ಬನಹಳ್ಳಿ ಕ್ರಾಸಿನಲ್ಲಿ ಇಳಿದಾಗ ಭಾರೀ ಮಳೆ. ಅಲ್ಲಿಂದ ಹಾಲುಗೊಣಕ್ಕೆ ರಾತ್ರಿ ಕತ್ತಲಲ್ಲಿ ನಡೆಯಬಹುದಿತ್ತು. ಆದರೆ ಕರಡಿಗಳ ಕಾಟ ಎಂದು ಜನ ಹೆದರಿಸಿದ್ದರಿಂದ ಲಾರಿ ಹಿಡಿದು ಬಂದರೆ ಆ ಲಾರಿ ಹಾಲುಗೊಣ ದಾಟಿ ನಾಲ್ಕು ಕಿಲೋಮೀಟರ್ ಹೋದ ಮೇಲೆ ಅವರನ್ನು ಇಳಿಸಿತ್ತು. ಅಲ್ಲಿಂದ ಕತ್ತಲಲ್ಲಿ ಪ್ರತಿ ಪೊದೆಯನ್ನೂ ಕರಡಿ ಎಂದೇ ಕಲ್ಪಿಸಿಕೊಂಡು ನಡುಗುತ್ತ, ರಾತ್ರಿ ಒಂದು ಗಂಟೆಗೆ ಹಾಲುಗೊಣ ಸೇರಿ ನಗುತ್ತ ಮಲಗಿದ್ದರು. ಅವರು ಬಂದುದು ನನಗಂತೂ ಬಹು ಉತ್ಸಾಹವನ್ನು ತಂದಿತ್ತು. ಬೆಳಿಗ್ಗೆ ಕಾಫಿ ಹೀರಿ, ಉಪ್ಪಿಟ್ಟಿನ ಮತ್ತು ಮಾವಿನ ಹಣ್ಣುಗಳ ಗಂಟುಗಳನ್ನು ಹೊತ್ತು ಹೊರಟೆವು. ಜನ ನನ್ನ ಬಗ್ಗೆ ತೋರಿದ ಆದರ ಪ್ರೀತಿ ಅಭಿಮಾನಗಳಿಗೆ ನಾನೇನು ಕೊಡಬಲ್ಲೆ ? ಆ ಎಲ್ಲ ಮನೆಗಳಿಗೆ ಮರೆಯದೆ ಮನಸ್ಸಿನಲ್ಲೇ ಹಾರ್ದಿಕ ಶುಭವನ್ನು ಕೋರುತ್ತೇನೆ.

ಬಹು ಸುಂದರ ಪ್ರಾತಃಕಾಲ. ಬೆಂಗಳೂರಲ್ಲಿ ಹಣ ಕೊಟ್ಟರೆ ಎಲ್ಲವೂ ಸಿಕ್ಕೀತು. ಆದರೆ ಈ ಬೆಳಗು, ತಂಗಾಳಿ, ಶಾಂತಿ, ಪ್ರಸನ್ನತೆ, ಚಿಮ್ಮುವ ಹಾಡುವ ಹಕ್ಕಿಗಳು, ಕಾಡು ಹೂಗಳು, ಅಡಕೆ ತೆಂಗಿನ ತೋಟ ಎಲ್ಲಿ ಸಿಗುತ್ತವೆ! ರಾತ್ರಿಯ ಮಳೆಯಿಂದ ನೆಲವೆಲ್ಲ ನೆನೆದಿತ್ತು. ನನಗೆ ಆ ದಿನ ಕಾಣಿಸಿದ್ದು ಅಕ್ಷರಶಃ ನಂದನವನ. ನಾವು ಬಸ್ ಮಾರ್ಗ ಬಿಟ್ಟು ಒಳದಾರಿ ಹಿಡಿದಿದ್ದೆವಾದ್ದರಿಂದ ಬಸ್ಸು ಲಾರಿಗಳ ಧೂಮದರ್ಶನ ಇರಲಿಲ್ಲ. ಬಂಡಿ ಜಾಡು, ಕಾಲು ಜಾಡುಗಳ ಮೂಲಕ ತೆಂಗು ತೋಟಗಳ ಬೇಲಿ ಪಕ್ಕದಲ್ಲಿ ತಿಪಟೂರಿಗೆ ಹೊರಟೆವು. ಹಾಲುಗೊಣದ ಹುಡುಗರು ಆಗಲೇ ಮರಹತ್ತಿ ನೇರಿಲುಹಣ್ಣು ಉದುರಿಸುತ್ತಿದ್ದರು. ಕೆರೆ ದಾಟಿ ಹೋದರೆ ಬಹು ದೊಡ್ಡ ಮಲ್ಲಿಕಾರ್ಜುನ ದೇವಾಲಯ ಸಿಗುತ್ತದೆ. ವಿಜಯನಗರ ಕಾಲದ ಬೆಣಚುಗಲ್ಲಿನ ಸುಂದರ ದೊಡ್ಡ ಕಟ್ಟಡ. ಅದರ ಹಜಾರದಲ್ಲಿ ಒಂದು ಸಾವಿರ ಜನ ಕೂರಬಹುದು. ಕೊಳ ಬಾವಿಗಳ ಆಸರೆ ಪಡೆದಿರುವ ಆ ದೇವಾಲಯದ ವಿಶಾಲ ಅಂಗಳವನ್ನು ಸುತ್ತಮುತ್ತಣ ಊರಿನ ಜನ ಸಾಂಸ್ಕೃತಿಕ ಚಟುವಟಿಕೆಗಳಿಗೆ

ಬಳಸಿಕೊಳ್ಳಬಹುದೆನ್ನಿಸಿತು (ವಿದ್ಯಾವಂತ ಯುವಜನ ಮನಸ್ಸು ಮಾಡಬೇಕು). ಒಂದು ಕಡೆ ಅಮ್ಮನ, ಇನ್ನೊಂದು ಕಡೆ ವೀರಭದ್ರನ ಗುಡಿ ಇವೆ. ಹೊರ ಒಳ ಭಾಗಗಳಲ್ಲಿ ಅಲ್ಲಲ್ಲಿ ನರ್ತನದ, ಮುನಿಗಳ, ಹಸು ಕರು ಸರ್ಪಗಳ ಉಬ್ಬು ಶಿಲ್ಪಗಳಿವೆ. ನೂರೊಂದು ಲಿಂಗಗಳನ್ನು ಪ್ರತಿನಿಧಿಸುವ (ಇವು ನೂರೊಂದು ಸ್ಥಳಗಳ ಸಂಕೇತ) ನೂರು ಗುಂಡುಗಳಿಂದ ಕೂಡಿದೆ ಇಲ್ಲಿನ ಶಿವಲಿಂಗ (ಅಂತಹ ಶಿವಲಿಂಗ ಹಂಪಿಯ ಉದ್ದಾನಿ ವೀರಭದ್ರನ ಗುಡಿಯಲ್ಲಿದೆ). ಇಡೀ ದೇವಾಲಯ ವಿಜಯನಗರ ಶಿಲ್ಪಾಸಕ್ತರ ಹೆಚ್ಚಿನ ಗಮನಕ್ಕೆ ಬರುವ ಅಗತ್ಯವಿದೆ. ಆ ಊರಿನ ಹೆಸರು ವಿಚಿತ್ರ : “ಪಂಕಜನ ಹಳ್ಳಿ”. ಮಲ್ಲಿಕಾರ್ಜುನ ದೇವಾಲಯದ ಬಳಿ ಇದ್ದ ವಿಷ್ಣು ದೇವಾಲಯ ಹಾಳಾಗಿ ಹೋಗಿದೆ. ಮುಂದೆ ಕಾಣಿಸಿದ ತಿಮ್ಮಳಾಪುರ ಪಕ್ಕದ ಹೊಂಡದ ದಡದ ಬೇವಿನ ಕಟ್ಟೆ ಮೇಲೆ ಮೂರು ಶಿಲ್ಪದ ಕಲ್ಲುಗಳಿವೆ. ಒಂದು ಸಿಂಹಲಲಾಟ, ಇನ್ನೊಂದು ಪದ್ಮ; ಸಿಂಹ ಲಲಾಟದ ಪಕ್ಕದಲ್ಲಿ ಜಿನಮೂರ್ತಿಯ ಶಿಲ್ಪವಿದ್ದು ಆ ಮೂರು ಶಿಲ್ಪಗಳು ಯಾವುದೋ ಭಗ್ನ ಬಸದಿಯ ಅವಶೇಷಗಳೆಂಬುದು ಸ್ಪಷ್ಟವಾಯ್ತು. ಅಲ್ಲೇ ಪಕ್ಕದ ಹಳ್ಳಿಯ ಹೆಸರು ಜಕ್ಕನಹಳ್ಳಿ ಗಮನಾರ್ಹ (ಜೈನರ “ಯಕ್ಷ” ಪರಿಕಲ್ಪನೆ ಜ್ಞಾಪಕಕ್ಕೆ ಬಂದಿತು). ಮಲ್ಲಿಕಾರ್ಜುನ ದೀಪಸ್ತಂಭವು ಒಂದು ಮಾನಸ್ತಂಭದ ಆಕಾರದಲ್ಲಿದ್ದುದೂ ನೆನಪಿಗೆ ಬಂದಿತು. ಜೈನ, ವೈಷ್ಣವ, ಶೈವ ಧರ್ಮಗಳ ಮಧ್ಯೆ ನಡೆದ ಘರ್ಷಣೆಯ ಸ್ಥಾನಗಳಲ್ಲಿ ಆ ಪ್ರದೇಶವೂ ಒಂದೆಂದು ಕಾಣುತ್ತದೆ. ಶಿವಣ್ಣನವರೂ ಬಸವಲಿಂಗಪ್ಪನವರೂ ನಮ್ಮನ್ನು ಬೆಂಗಳೂರು - ತಿಪಟೂರು ಮುಖ್ಯರಸ್ತೆಗೆ ಮುಟ್ಟಿಸಿ ನಾವು ಮೂವರನ್ನೂ ಬೀಳ್ಕೊಟ್ಟು ಹಿಂದಿರುಗಿದರು. ಮೂವರೂ ಸಾಕಷ್ಟು ಹರಟೆ ಹೊಡೆದೆವು. ಒಂದು ಕಡೆ ಉಪ್ಪಿಟ್ಟು ತಿಂದು ಮಾವಿನ ಹಣ್ಣು ತೇಗಿದೆವು. ದಾರಿಯಲ್ಲಿ ಕೆರೆ ಹತ್ತಿರದ ಗುಡಿಸಲಂಗಡಿಯಲ್ಲಿ ಟೀ ಸವಿದು ಪಕ್ಕದ ಕರಡಿ ಊರಿಗೆ ಬಂದಾಗ ಅಲ್ಲಿ ಸೈನ್ಯದಲ್ಲಿ ಮೆಕ್ಯಾನಿಕ್ ಆಗಿ ಕೆಲಸ ಮಾಡಿಕೊಂಡಿದ್ದ ಯುವಕನ, ಬಿ.ಎ. ಓದಿದ್ದರೂ ರಸ್ತೆ ಬದಿಯಲ್ಲಿ ಕ್ಷೌರದ ಪೆಟ್ಟಿಗೆ ಅಂಗಡಿಯಿಟ್ಟುಕೊಂಡಿದ್ದ ಇನ್ನೊಬ್ಬ ಯುವಕನ ಪರಿಚಯವಾಯ್ತು. ಇಬ್ಬರ ಹೆಸರೂ ‘ವೆಂಕಟೇಶ್’. ತನಗೆ ಕನಿಷ್ಠ ಪಕ್ಷ ಗುಮಾಸ್ತೆ ಕೆಲಸ ಸಿಗುವವರೆಗೆ ಕ್ಷೌರಿಕ ವೃತ್ತಿಯಲ್ಲಿರುವುದಾಗಿ ತಿಳಿಸಿದ. ತಿಪಟೂರಿನ ಕಲ್ಪತರು ಕಾಲೇಜಿನ ವಿದ್ಯಾರ್ಥಿಯಾಗಿದ್ದ ಅವನಲ್ಲಿ ಯಾವುದೇ ಕೀಳರಿಮೆ ಇರದಿದ್ದುದು ಮಾತ್ರವಲ್ಲ, ದೃಢ ಆತ್ಮವಿಶ್ವಾಸವಿದ್ದುದು ನನಗೆ ಸಂತೋಷವುಂಟುಮಾಡಿತು. ನಾವು ಅವನನ್ನು ಬಹು ಅಭಿನಂದಿಸಿದೆವು. ವೀರಭದ್ರಯ್ಯ ಅಲ್ಲಿಂದ ತುಮಕೂರಿಗೆ ವಾಪಸಾದರು. ಕಲ್ ಪ್ರೇಮಿಗಳು ಆ ಊರಿನ ಕಲ್ಲು ಬೆಟ್ಟದ ಇಡೀ ಚರ್ಮ ಸುಲಿದು, ಮಾಂಸ ಖಂಡಗಳನ್ನು ಬಗಿದು ಹಾಕಿದ್ದರು. ಕರಡಿ ಊರಿನ ಹಳೆಯ ಹೆಸರು “ಕರುವಿಡಿ” (ಆ ಊರಿನ ಶಾಸನಗಳು ರೈಸರ ಎಪಿಗ್ರಾಫಿಯ ಕರ್ನಾಟಿಕ, ಸಂಪುಟ 12, ತಿಪಟೂರು 78 - ಇಲ್ಲಿ ಪ್ರಕಟವಾಗಿವೆ.) ಊರೊಳಗೆ ಗೋಪಾಲಕೃಷ್ಣನ ಪ್ರಾಚೀನ ದೇವಾಲಯವಿದೆಯೆಂದೂ ಆ ದೇವರಿಗೆ ನಡೆದುಕೊಂಡವರಿಗೆಲ್ಲ ಅನಿಷ್ಟ ಆದುದರಿಂದ ಪೂಜೆಗಳು ಈಗ ಸರಿಯಾಗಿ ನಡೆಯುತ್ತಿಲ್ಲವೆಂಬ ವಿಚಿತ್ರ ಸಂಗತಿಯೂ ತಿಳಿಯಿತು. ಹರಿ ಹರೀ! (“ಹರನೇ ಕಾಯೋ ತಂದೆ....”).

ಮುಂದೆ ಬೊಮ್ಮನ ಹಳ್ಳಿ ಎಂಬ ಊರಲ್ಲಿ ತೆಲುಗು ಜಂಗಮುಲು ಎಂಬ ಜನಾಂಗದವರ ಮದುವೆ ವಾದ್ಯ ಕೇಳಿಸಿತು. ಹೋಗಿ ಅವರ ಜೊತೆ ಮಾತನಾಡಿ ಆ ಜನಗಳ ಆಚಾರ ವಿಚಾರ ಕೇಳಿಕೊಂಡು, ಸಾಧ್ಯವಾದರೆ ಮದುವೆ ಊಟ ಮಾಡಿಕೊಂಡು ಬರುವ ಆಸೆಯನ್ನು ಹಾಗೇ ಅದುಮಿಟ್ಟೆ. ತೆಲುಗು ಜಂಗಮರ ಮನೆಮಾತು ತೆಲುಗು ಆದರೂ ಅವರು ಹಾಡುವ ಹಾಡುಗಳೆಲ್ಲ (ಬಾಲನಾಗಮ್ಮ, ಗಂಗೆ ಗೌರಿ ಜಗಳ, ಇ) ಕನ್ನಡದಲ್ಲಿರುತ್ತವೆ. ವೀರಭದ್ರಸ್ವಾಮಿ ಅವರ ಕುಲದೇವತೆ. ಕರ್ನಾಟಕದ ಜಂಗಮರ ಬಗ್ಗೆ ತಿಳಿದಿದೆ. ಆದರೆ ತೆಲುಗು ಜಂಗಮರ ರೀತಿ ಆಚಾರ ಶಾಸ್ತ್ರ ತಿಳಿದರೆ ಏನಾದರೂ ಹೊಸ ವಿಷಯ ಗೊತ್ತಾಗಬಹುದು ಎಂಬ ಸಂಶೋಧಕ ಬುದ್ಧಿ ನನ್ನದಾಗಿತ್ತು. ಅಲ್ಲೇ ಊರ ಹೊರಗಡೆ ಹೊಂಗೆ ಮರಗಳ ತಂಪಲ್ಲಿ ಕುಳಿತು ತಿಂಡಿ ತಿಂದು ಚಂದ್ರಪ್ಪ ಹಾಸಿದ ಹೊಂಗೆ ಮರಗಳ ಟೊಂಗೆ ಹಾಸಿನ ಮೇಲೆ ಮಲಗಿ ಒಂದು ಕ್ಷಣ ಪಂಚತಾರಾ ಮಂದಿರಗಳ ಸುಖದ ತಲೆ ಮೇಲೆ ಹೊಡೆಯುವ ತೃಪ್ತಿ ಅನುಭವಿಸಿದೆ. ಮೇಲೆ ಬಿಳಿ ಮೋಡಗಳು ಮೆತ್ತನೆ ತೇಲುತ್ತಿದ್ದುವು. ಅಲ್ಲೇ ಗುಡ್ಡಗಳ ಪಕ್ಕದಲ್ಲಿನ ಕೊಳದಲ್ಲಿ ಹೆಂಗಸರು ಬಟ್ಟೆ ಒಗೆಯುತ್ತಿದ್ದರು. ಸಮೀಪದ ರಸ್ತೆಯಲ್ಲಿ ವಾಹನಗಳ ಧಾವಂತ. ಹೊಂಗೆ ಮರದ ಕೆಳಗಿನ "ಸೊಪ್ಪತ್ತಿಗೆ"ಯ ಮೇಲೂ ಕಿರುಕುಳಗಳು ತಪ್ಪಿರಲಿಲ್ಲ. ಸಣ್ಣ ಸಣ್ಣ ನುಸಿಗಳು ಇರುವೆಗಳು ಮೈಮೇಲೆ ಅಂಗಿ ಒಳಗೆ ಹರಿದು ಸ್ವಲ್ಪ ಕಾಟ ಕೊಡುತ್ತಿದ್ದುವು. ಹಾಗೂ ಹೀಗೂ ಎರಡು ಗಂಟೆ ಹೊರ ಉರಿಬಿಸಿಲಿಂದ ರಕ್ಷಣೆ ಪಡೆದಿರುವಾಗ ಅಲ್ಲಿಗೆ ಒಬ್ಬ ವೃದ್ಧ ಬಂದರು. ಆತನ ಹೆಂಡತಿ ಸತ್ತು ಇದ್ದ ಒಬ್ಬಳೇ ಮಗಳಿಗೆ ಮದುವೆಯಾಗಿ 'ಸುಖ'ವಾಗಿದ್ದಾಳೆ. ಆ ಊರಲ್ಲಿ ಸಣ್ಣ ಅಂಗಡಿ ಇಟ್ಟುಕೊಂಡಿದ್ದ ಆ ವ್ಯಕ್ತಿಗೆ ಮಾತೆತ್ತಿದರೆ ತತ್ವಜ್ಞಾನ ಹೇಳುವ ಅಪೇಕ್ಷೆ. ಈ ಶತಮಾನದ ಆರಂಭದ ದಶಕಗಳ ಹಳ್ಳಿ ವೃದ್ಧರ ಒಂದು ಅವಶೇಷ ಅವನು (ನನ್ನ ಊರಲ್ಲೂ ಅಂಥವರಿದ್ದರು). ಪಾಪ, ಪುಣ್ಯ, ದೇವರು, ಹಣೇಬರಹ ಇಂತಹ ಮಾತಾಡುವುದರಲ್ಲಿ ಅವನಿಗೆ ತೀವ್ರ ಆಸಕ್ತಿ. ಆತನಿಂದ ತೆಲುಗು ಜಂಗಮರ ವಿಷಯ ಸ್ವಲ್ಪ ತಿಳಿದುಕೊಂಡೆ. ನನಗೆ ಲಿಂಗಾಯತರ ಜಂಗಮರಿಗೂ ಇವರಿಗೂ ಹೋಲಿಕೆ ವ್ಯತ್ಯಾಸಗಳೇನೆಂಬುದನ್ನು ತಿಳಿಯುವ ತೀವ್ರ ಕುತೂಹಲ. ತೆಲುಗು ಮಾತನಾಡುವ ಅವರು ಮದುವೆ ಸಮಯದಲ್ಲಿ ಗಂಡು ಹೆಣ್ಣುಗಳಿಗೆ ಲಿಂಗಧಾರಣೆ ಮಾಡಿಸುತ್ತಾರೆಂಬುದು ನನಗೆ ತೀರ ಹೊಸ ವಿಷಯವಾಗಿತ್ತು. ನ್ಯಾಯವಾಗಿ ಎಲ್ಲರೂ ದೇಹದ ಮೇಲೆ ಲಿಂಗ ಧರಿಸಬೇಕು. ಆದರೆ ಈಗ ಯಾರೂ ಧರಿಸುತ್ತಿಲ್ಲ ("ಏಕೆಂದರೆ ಲೋಕ ಕೆಟ್ಟು ಹೋಗಿದೆ"). ಅವರ ಮುಖ್ಯಸ್ಥನನ್ನು "ಗಣಾಚಾರಿ" ಎನ್ನುತ್ತಾರೆ (ವೀರಶೈವ ಜಂಗಮರಲ್ಲೂ ಗಣಾಚಾರಿಗಳುಂಟು). ಸತ್ತ ಶವಗಳನ್ನು ಸುಡುವುದಿಲ್ಲ, ಹೂಳುತ್ತಾರೆ. ಅವರಲ್ಲಿ ಕೆಲವರು ಏಕತಾರಿ ಹಿಡಿದು ಜಾನಪದ ಗೀತ ಹಾಡುತ್ತ ತಿರುಗಾಡಿ ಜೀವನ ನಡೆಸುತ್ತಾರೆ ("ಜಂಗಮ" ಎಂದರೆ ಸದಾ ಸಂಚರಿಸುವವನೆಂದರ್ಥ ತಾನೇ.) ವೀರಶೈವ ಜಂಗಮರು, ಬೇಡ ಜಂಗಮರು, 'ತೆಲುಗು ಜಂಗಮುಲು' ಈ ಎಲ್ಲ ಜನಾಂಗಗಳನ್ನು ಪರಸ್ಪರ ಹೋಲಿಸಿ ಮೂಲ ಜಂಗಮನ (Proto Jangama) ಸ್ವರೂಪವನ್ನು ಪುನಾರಚಿಸಬಹುದು. (ಇವರ ಜೊತೆ ಉತ್ತರ ಭಾರತದ

"ಜೋಗಿ ಜಂಗಮ"ರನ್ನೂ ಸೇರಿಸಬಹುದು). ಜಂಗಮ ಜಾತಿಯ ಮೂಲದ ರಹಸ್ಯವು ವೀರಶೈವದ ರಹಸ್ಯವನ್ನೂ ತಿಳಿಸಲು ಸಹಾಯಕವಾಗಬಹುದು*.

ದಾರಿಯಲ್ಲಿ ಉದ್ದಕ್ಕೂ ಸುಂದರ ದೃಶ್ಯಗಳನ್ನು ನೋಡುತ್ತ ಸಂಜೆ ಐದೂವರೆಗೆ ತಿಪಟೂರಿನ ಎನ್.ಎಚ್. ನಾಗರಾಜ್ ಮನೆ ತಲುಪಿದೆವು. ಎಲ್ಲಿ ಬಿದ್ದು ಹೋಗುವೆನೋ ಎಂಬಷ್ಟು ಆಯಾಸವಾಗಿತ್ತು. ಒಂದು ಕ್ರೋಸಿನ್ ನುಂಗಿ ಸ್ವಲ್ಪ ಕಾಫಿ ಕುಡಿದಾಗ ತಲೆನೋವು ಕಡಮೆ ಆಯ್ತು. ನಾಗರಾಜ್ ಮನೆಗೆ ನನ್ನ ಜೊತೆ ಮಾತನಾಡಲು ನಾಲ್ಕಾರು ಜನ ಬಂದರು. ನನ್ನ ಕಾಲ್ನಡಗೆ ಅವರಿಗೆ ವಿಚಿತ್ರವಾಗಿ ಕಂಡಿರುವುದು ಸ್ವಾಭಾವಿಕವೇ. ಮತ್ತು ನನ್ನನ್ನು ನಾನು ಪೂರ್ಣವಾಗಿ ಅವರಿಗೆ ಅರ್ಥೈಸುವುದೂ ಅಗತ್ಯವಾಗಿತ್ತು. ಒಬ್ಬರಂತೂ "ನಿಮ್ಮದು ಕನ್ನಡಕ್ಕಾಗಿ ಮಾಡುತ್ತಿರುವ ಮಹಾತ್ಯಾಗ" ಎಂದು ಸ್ವಲ್ಪ ಹೆಚ್ಚಾಗಿಯೇ ಹೊಗಳಿದಾಗ ನನಗೆ ತೀರ ಕಸಿವಿಸಿಯಾಯ್ತು. ಅಂತಹ ಸಂದರ್ಭಗಳಲ್ಲಿ ಏನಾದರೂ ಹೇಳುವುದೂ ಕಷ್ಟ, ಹೇಳದಿರುವುದೂ ಕಷ್ಟವೇ. ಅವರ ವಿಶ್ವಾಸ ದೊಡ್ಡದು. ಒಬ್ಬರು ನಟ ಡಾ. ರಾಜಕುಮಾರ್ ವಿಷಯ ಪ್ರಸ್ತಾಪಿಸಿ, ಗೋಕಾಕ್ ಚಳವಳಿಯಲ್ಲಿ ಭಾಗವಹಿಸಿ ಅದನ್ನು ಯಶಸ್ವಿಗೊಳಿಸಿದ ಅವರು ಆಮೇಲೆ ಮೌನವಹಿಸಿದ್ದಕ್ಕೆ ವ್ಯಥೆ ವ್ಯಕ್ತಪಡಿಸಿದರು. ಡಾ. ರಾಜಕುಮಾರ್ ಗೋಕಾಕ್ ಚಳವಳಿಯಲ್ಲಿ ಭಾಗವಹಿಸಿದ್ದರಿಂದ ಆ ಚಳವಳಿಗೆ ಒಂದು ತೀವ್ರತೆ ಬಂದಿತು ಎಂಬ ಮಾತು ನಿಜ. ಅವರು ಚಳವಳಿಯಲ್ಲಿ ಭಾಗವಹಿಸಲು ಒಪ್ಪಿ ನೀಡಿದ ಮೊದಲ ಪತ್ರಿಕಾ ಹೇಳಿಕೆಯನ್ನು ಬರೆದುಕೊಟ್ಟವನು ನಾನು (ಅದನ್ನು ಬರೆದದ್ದು ಗಾಂಧಿ ಬಜಾರಿನ ಹೋಟೆಲ್ ಮಹಡಿ ಮೇಲೆ). ಅವರು ಕರ್ನಾಟಕದ ಪ್ರವಾಸ ಕೈಗೊಳ್ಳುವ ಮೊದಲು ಆ ಪ್ರವಾಸದ ಇಡೀ ಕಾರ್ಯಕ್ರಮವನ್ನು "ವಜ್ರೇಶ್ವರಿ ಕಂಬೈಂಡ್" ಕಚೇರಿಯಲ್ಲಿ ಜಿ.ಕೆ. ಸತ್ಯ ಮತ್ತು ನಾನು ರೂಪಿಸಿ, ಆ ಪ್ರವಾಸದ ಆರಂಭದ ಜಾಗ ಬೆಳಗಾವಿಗೂ ಹೋದೆವು. ಅವರ ಆ ಪ್ರವಾಸ ಜನಜಾಗೃತಿ ಉಂಟುಮಾಡಿತು. ಸರ್ಕಾರದ ಕಣ್ಣು ತೆರೆಯಿಸಿತು. ರಾಜಕುಮಾರ್ ಎರಡು ಬಾರಿಯೂ ಚಳವಳಿಗೆ ಬಂದದ್ದು ಆ ಚಳವಳಿ ಬೆಳೆದು ತೀವ್ರಗತಿಯನ್ನು ಮುಟ್ಟಿದಾಗ ಮಾತ್ರ. ಅದರ ಇಳಿಮುಖ ಸ್ಥಿತಿಯಲ್ಲಿ ಅದನ್ನು ಬೆಳೆಸಿದ್ದು ಸಾಹಿತಿಗಳ ಕಲಾವಿದರ ಬಳಗವೇ. ಮುಂದೊಮ್ಮೆ "ಕಾವೇರಿ ಕಾಂಟಿನೆಂಟಲ್ ಹೋಟೆಲ್"ನಲ್ಲಿನ ಖಾಸಗಿ ಸಭೆಯೊಂದರಲ್ಲಿ, ಜನತೆಯನ್ನು ಆಕರ್ಷಿಸಬಲ್ಲ ಅವರು ಕನ್ನಡದ ವಿಷಯಗಳನ್ನು ಅರ್ಥಮಾಡಿಕೊಂಡು, ಜನರಿಗೆ ಸುಲಭವಾಗಿ ಲಭ್ಯವಾಗುತ್ತ ಚಳವಳಿಯ ನೇತೃತ್ವವನ್ನು ವಹಿಸಿ, ಒಬ್ಬ ನೇತಾರರಾಗಿ ಸಂಘಟಕರಾಗಿ ಕೆಲಸ ಮಾಡಿದರೆ ಎಲ್ಲ ಕನ್ನಡದ ಸಮಸ್ಯೆಗಳೂ

---

* "ಬೇಡ ಜಂಗಮ" ("ಬುಡ ಜಂಗಮ", "ಮಾಲಾ ಜಂಗಮ") ರಂತೆ ತಮ್ಮನ್ನೂ ಪರಿಶಿಷ್ಟ ಜಾತಿ - ವರ್ಗಕ್ಕೆ ಸೇರಿಸಬೇಕೆಂದೂ ತಮಗೂ ಮೀಸಲಾತಿ ಸೌಲಭ್ಯ ಕಲ್ಪಿಸಬೇಕೆಂದೂ ಕೆಲ ವೀರಶೈವ ಜಂಗಮರು ಧ್ವನಿ ಎತ್ತಿದಾಗ, ಸಮಾವೇಶ ನಡೆಸಿದಾಗ ಅದರ ವಿರುದ್ಧವಾಗಿ ನಾನು ನನ್ನ ಪ್ರತಿಭಟನೆಯನ್ನು ವ್ಯಕ್ತಪಡಿಸಿದ್ದೇನೆ. ಕೆಳಜಾತಿಯ ಬಡವರ ಜೊತೆ ತನ್ನನ್ನು ತಾನು ಸಮೀಕರಿಸಿಕೊಂಡ ಬಸವ ಎಲ್ಲಿ? ಅಕ್ರಮವಾಗಿ ಬಡವರ ಅನುಕೂಲಗಳನ್ನು ಕಿತ್ತುಕೊಳ್ಳುವ ಮೇಲ್ಜಾತಿಯ ಕೆಲ ವೀರಶೈವ ಜಂಗಮರೆಲ್ಲಿ ? ನನಗೆ ಇಡೀ ಪ್ರಸಂಗ ಯಾತನೆಯನ್ನುಂಟುಮಾಡಿತ್ತು.

ಪರಿಹಾರವಾಗುತ್ತವೆ ಎಂದು ಅವರಲ್ಲಿ ಮನವಿ ಮಾಡಿಕೊಂಡೆ. ಅದಕ್ಕೆ ತಾವು ಸಿದ್ಧವಿಲ್ಲವೆಂದು ಅವರು ಅಲ್ಲೇ ಸ್ಪಷ್ಟವಾಗಿ ಸೂಚಿಸಿದರು. (ಆ ಸಭೆಯಲ್ಲಿ ಹಿರಿಯ ಸಾಹಿತಿಗಳೂ ಕಲಾವಿದರೂ ಇದ್ದರು). ನಾನು ಇಂತಹ ಕೆಲವು ವಿಷಯಗಳನ್ನು ಸಂಕ್ಷೇಪವಾಗಿ ವಿಶ್ಲೇಷಿಸಿ ಎಂ.ಜಿ.ಆರ್. ರೀತಿ, ಎನ್.ಟಿ.ಆರ್. ರೀತಿ ರಾಜಕುಮಾರ್ ತಮ್ಮ ಸಿನಿಮಾ ವರ್ಚಸ್ಸನ್ನು ಕನ್ನಡಕ್ಕಾಗಿ ಬಳಸಿಕೊಂಡು ಸಂಘಟನೆಯಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿದ್ದರೆ ನನ್ನ ವೃತ್ತಿ-ಪ್ರವೃತ್ತಿ ಎರಡೂ ಆದ ಸಂಶೋಧನೆಯಲ್ಲೇ ನಾನು ಪೂರ್ಣವಾಗಿ ಉಳಿಯಬಹುದಿತ್ತು ಎಂದು ಸ್ಪಷ್ಟಪಡಿಸಿದೆ. ಅವರೆಲ್ಲರಿಗೆ ನನ್ನ ವಿಶ್ಲೇಷಣೆ ಒಪ್ಪಿತವಾಯ್ತು. ಡಾ. ರಾಜಕುಮಾರ್ ಅವರಿಗೆ ಹತ್ತಿರವಾಗಿದ್ದವರೊಬ್ಬರೂ ಕೂಡ ನನ್ನ ಮಾತು ಸರಿ ಎಂದರು.

ನಾಗರಾಜ್ ಸೂಕ್ಷ್ಮ ಜೀವಿ, ಭಾವುಕರು, ಬುದ್ಧಿವಂತರು. ಅವರಿಗೆ ಅವರ ವೃತ್ತಿಜೀವನದ ಕೆಲವು ಕಹಿ ಅನುಭವಗಳು ಮನಸ್ಸನ್ನು ಆಳವಾಗಿ ಕಲಕಿರುವಂತಿದೆ. ನನ್ನಂತೆಯೇ ಅವರು ತೀರ ಹಗುರ ನಿದ್ದೆಯವರು. ರಾತ್ರಿಯನ್ನು ಅವರ ಮನೆಯಲ್ಲಿ ಅವರ ಪ್ರೀತಿಯ ಉಪಚಾರದೊಡನೆ ಕಳೆದೆ.

ಮಾರನೆಯ ದಿನ (18.5.85) ನಾನೇ ಅವರಿಗೆ ಪ್ರವಾಸಿ ಮಂದಿರದಲ್ಲಿ ಉಳಿಯಲು ವ್ಯವಸ್ಥೆ ಮಾಡಲು ಕೇಳಿಕೊಂಡೆ. ಅಲ್ಲಿಯ ಮೇಟಿ ವೆಂಕಟರಾವ್ ತೆಲುಗು ಬ್ರಾಹ್ಮಣ; ಬ್ರಾಹ್ಮಣನಾಗಿ ಹುಟ್ಟಿ ತಿಥಿಗಳನ್ನು ಮಾಡಿ ಮಾಡಿ ಸಾಕಾಗಿದೆ ಎಂದು ತನ್ನ ಕೊರಗನ್ನು ಹೇಳಿಕೊಂಡ. ಬ್ರಾಹ್ಮಣನಾಗಿ ಹುಟ್ಟಿದ ಬಸವಣ್ಣ ವೀರಶೈವರಿಗೆ ಮಾಡಿದ ಉಪಕಾರಗಳಲ್ಲಿ ಇದೂ ಒಂದು - ತಿಥಿ ಅಪರಕರ್ಮಗಳನ್ನು ತೀರ ಸರಳಗೊಳಿಸಿ ಶಾಶ್ವತ ಉಪಕಾರ ಮಾಡಿದ. ಪ್ರವಾಸಿ ಮಂದಿರದಲ್ಲಿ ದಿನನಿತ್ಯದಂತೆ ಬಟ್ಟೆ ಒಗೆದು (ಪ್ರತಿದಿನ ಸ್ನಾನಕ್ಕೆ ಮುನ್ನ ಮಾರನೆಯ ದಿನಕ್ಕೆ ಬಟ್ಟೆ ಶುಭ್ರಗೊಳಿಸಿಕೊಳ್ಳುತ್ತಿದ್ದೆ) ಸ್ನಾನಮಾಡಿ ಸ್ವಲ್ಪ ವಿಶ್ರಾಂತಿ ತೆಗೆದುಕೊಳ್ಳುವಷ್ಟರಲ್ಲಿ ಮಕ್ಕಳಿಗಾಗಿ ಒಳ್ಳೆಯ ಗೀತಗಳನ್ನು ಪ್ರಕಟಿಸಿ ಖ್ಯಾತರಾದ ಟಿ.ಎಸ್. ನಾಗರಾಜ ಶೆಟ್ಟಿ ಬಂದರು. ಅವರು ಅಜ್ಜಂಪುರದಲ್ಲಿ ನಾನು ಉಳಿಯಲು ಪತ್ರ ಬರೆಯುವುದಾಗಿ ತಿಳಿಸಿದರು (ಅಜ್ಜಂಪುರ ವಿಳಾಸಕ್ಕೆ ಪತ್ರ ಬರೆಯಲು ನನ್ನ ಪತ್ನಿಗೆ ಅಂದೇ ಪತ್ರ ಬರೆದು ಹಾಕಿದೆ). ಸ್ವಲ್ಪ ಹೊತ್ತಿಗೆ ಅಲ್ಲಿನ ಕಾಲೇಜಿನ ಕೆಲವು ಅಧ್ಯಾಪಕರು ಬಂದರು. ವಿಶ್ವವಿದ್ಯಾಲಯಗಳ ಅಥವಾ ಕಾಲೇಜುಗಳ ಅಧ್ಯಾಪಕರಿಗೆ ದೇಶದ ರಾಜಕೀಯ, ಕಾಲೇಜು ರಾಜಕೀಯ ವಿಷಯ ಬಿಟ್ಟರೆ ಚರ್ಚೆಗೆ ಏನೂ ಕಾಣಿಸುವುದಿಲ್ಲವೆಂಬುದು ನನ್ನ ಹಲವು ದಶಕಗಳ ಅನುಭವ. ಬೆಂಗಳೂರು ವಿಶ್ವವಿದ್ಯಾಲಯದ ನನ್ನ ಹದಿನೇಳು ವರ್ಷಗಳ ಸೇವೆಯಲ್ಲಿ ಯಾವುದೇ ವಿಭಾಗದ ಇಬ್ಬರು ಅಧ್ಯಾಪಕರು ಸೇರಿ ಸಂಶೋಧನಾಧಾರಿತ ಅಥವಾ ವಿಚಾರಾಧಾರಿತ ಚರ್ಚೆ ನಡೆಸಿರುವುದು ನನ್ನ ಗಮನಕ್ಕೆ ಬಂದಿಲ್ಲ. ಪರನಿಂದೆ, ಚುನಾವಣೆ, ಬಡ್ತಿ, ರಜ, ಜಗಳ, "ಟೀಯೇಡೀಯೇ" ಇಷ್ಟೇ ಅವರ ಪ್ರಪಂಚ. ಈಚೆಗೆ ಬೆಂಗಳೂರು ವಿಶ್ವವಿದ್ಯಾಲಯದ ಡಾ. ರುದ್ರಯ್ಯನವರ ವಿಷಯ ಪತ್ರಿಕೆಗಳಲ್ಲಿ ಬಂದದ್ದು ಪ್ರಸ್ತಾಪವಾಯ್ತು. ಅವರು ಪ್ರತಿಭಾನ್ವಿತ ಗಣಿತ ಶಾಸ್ತ್ರಜ್ಞರು. ತಮ್ಮ ಸಂಶೋಧನೆಗೆ ಇಬ್ಬರು ಸಹಾಯಕ ಸಂಶೋಧಕರನ್ನು ನೇಮಿಸಿಕೊಂಡುದರಲ್ಲಿ ಸೆನೇಟ್ ತಪ್ಪು ಕಂಡುಹಿಡಿದು ಅವರನ್ನು

ಅಮಾನತ್ತಿಲ್ಲಿಡಬೇಕೆಂದು ಮಾಡಿದ್ದ ಶಿಫಾರಸ್ಸನ್ನು ಸಿಂಡಿಕೇಟ್ ತಿರಸ್ಕರಿಸಿತ್ತು. ಸಿಂಡಿಕೇಟ್ ನಿರ್ಣಯ ಸಾಧುವಾದುದೆಂದು ನನ್ನ ಭಾವನೆ. ಅಲ್ಲದೆ, ಪೂರ್ಣ ತನಿಖೆಗೆ ತಾವು ಸಿದ್ಧವೆಂದೂ ಡಾ. ರುದ್ರಯ್ಯ ಘೋಷಿಸಿದ್ದರು. ವೈಯಕ್ತಿಕ ಕಾರಣಗಳಿಗಾಗಿ ಸಣ್ಣದನ್ನು ದೊಡ್ಡದಾಗಿ ಅಥವಾ ದೊಡ್ಡದನ್ನು ಕ್ಷುಲ್ಲಕ ಮಾಡುವ ರಾಜಕಾರಣಿ ಜನರನ್ನು ನಾನು ಕಟುವಾಗಿ ಟೀಕಿಸಿದ್ದು ಅಲ್ಲಿಗೆ ಬಂದಿದ್ದ ಒಂದಿಬ್ಬರಿಗೆ ಹಿಡಿಸಲಿಲ್ಲವೆಂದು ತೋರಿತು. ಒಳ್ಳೆಯ ಕೆಲಸ ಮಾಡುವವರ ಮೇಲೆ ರಾಡಿ ಎರಚುವುದು, ದುಷ್ಟರು ನಿರ್ಯೋಚನೆಯಿಂದ ವಿಹರಿಸುವುದು ಎಲ್ಲ ವಿಶ್ವವಿದ್ಯಾಲಯಗಳ ಹಣೆ ಬರಹ. ಮಧ್ಯಾಹ್ನ ಅಪ್ಪಣ್ಣಯ್ಯನವರ ಮನೆಯಲ್ಲಿ ಊಟಕ್ಕೆ ಸೇರಿದಾಗಲೂ ಅಧ್ಯಾಪಕರ ಚರ್ಚೆ ಅದೇ ವಿಷಯಗಳ ಗೂಟದ ಸುತ್ತ ತಿರುಗುವುದನ್ನು ಗಮನಿಸಿದೆ. "ಉತ್ತಮರು ಪರಿಕಲ್ಪನೆಗಳನ್ನು, ಮಧ್ಯಮರು ಘಟನೆಗಳನ್ನು, ಸಾಮಾನ್ಯರು ವ್ಯಕ್ತಿಗಳನ್ನು ಚರ್ಚಿಸುತ್ತಾರೆ" ಎಂಬೊಂದು ಹೇಳಿಕೆಯಿದೆ. ಬಹುತೇಕ ಜನ ಮೂರನೆಯ ವರ್ಗಕ್ಕೆ, ಕೆಲವರು ಎರಡನೆಯ ವರ್ಗಕ್ಕೆ ಸೇರಿದವರು. ಮೊದಲ ವರ್ಗಕ್ಕೆ ಸೇರುವವರನ್ನು ಹುಡುಕಿ ತೆಗೆಯಬೇಕು. ಅಪ್ಪಣ್ಣಯ್ಯ ಉತ್ಸಾಹಿಗಳು. ಅವರಿಗೆ ಒಂದು ಉನ್ನತ ವಿಚಾರ ಗೋಷ್ಠಿಯಲ್ಲಿ ಸಂಪ್ರಬಂಧ ಮಂಡಿಸಲು ಆಹ್ವಾನ ಬಂದಿದ್ದು ತಮಗೆ ವಿಷಯ ಸಾಮಗ್ರಿ ದೊರಕಿಲ್ಲವೆಂದು ಪೇಚಾಡುತ್ತಿದ್ದರು. "ಒಪ್ಪಿಕೊಂಡು ಪತ್ರ ಬರೆದು ಬಿಡಿ, ನಿಮ್ಮ ಕೆಲಸ ಮುಂದುವರಿಯುತ್ತದೆ" ಎಂದು ಸಲಹೆ ಕೊಟ್ಟೆ. ಅವರು ಬಾಣಾವರದಲ್ಲಿ ನನ್ನ ವಾಸ್ತವ್ಯದ ಸಮಸ್ಯೆ ಪರಿಹರಿಸಿದರು. ಅವರ ಮನೆಯಲ್ಲಿ ಮಾಡಿದ್ದ ಅಕ್ಕಿ "ಕೀಲ್ಸ" (ಹಾಲ್ಬಾಯಿ) ನನಗೆ ಪ್ರಿಯವಾಯ್ತು. ನಾಗರಾಜ್ ಜೊತೆ ನನ್ನ ಹಳೆಯ ವಿದ್ಯಾರ್ಥಿ ಶಿವಣ್ಣ ಕೂಡ ಊಟಕ್ಕೆ ಬಂದಿದ್ದರು.

ಮಧ್ಯಾಹ್ನ ವಿಶ್ರಾಂತಿ ಬಳಿಕ ಒಂದಷ್ಟು ದಿನಚರಿ ಬರೆದೆ. ಎರಡು ಮೂರು ದಿನ ಬರಹ ನಿಂತು ಹೋಗಿತ್ತು. ಸಂಜೆ ಶ್ರೀನಿವಾಸಮೂರ್ತಿಯವರ ಹೊಸ ಮನೆಯಲ್ಲಿ ಉಪಾಹಾರ. ಬುದ್ಧಿವಂತರಾಗಿದ್ದರೂ ಅವರು ಗ್ರಾಮಾಂತರ ಪ್ರದೇಶದ ಕಾಲೇಜಿನಲ್ಲಿದ್ದುದರಿಂದ ಹೆಚ್ಚಿನ ಸಾಹಿತ್ಯ ಕೃಷಿ ಮಾಡಲಾಗಿರಲಿಲ್ಲ. ತಿಪಟೂರು ಗುಬ್ಬಿ ಪರಿಸರದ ಜೈನ ಧರ್ಮದ ಕುರುಹುಗಳನ್ನು ಕುರಿತು ಕೆಲಸ ಮಾಡಲು ಅವರಿಗೆ ಸಲಹೆ ಕೊಟ್ಟೆ. ಎಷ್ಟೋ ಬಾರಿ ನಮ್ಮ ಮಿತಿ, ಪರಿಸರ, ಅನುಕೂಲಗಳನ್ನು ಲಕ್ಷಿಸಿ ನಮ್ಮ ಸಾಹಿತ್ಯ, ಸಂಶೋಧನ ಕ್ಷೇತ್ರಗಳನ್ನು ನಿರ್ಧರಿಸಿಕೊಳ್ಳಬೇಕಾಗುತ್ತದೆ. ಬಹಳ ಜನರು ತಾವು ಇರುವ ಜಾಗದಲ್ಲಿ ಕೆಲಸ ಮಾಡಲಾಗಲು ಸಾಧ್ಯವಿಲ್ಲ, ಮೈಸೂರೋ ಬೆಂಗಳೂರೋ ಧಾರವಾಡವೋ ಆಗಿದ್ದರೆ ನಾನು ಏನೋ ಕೆಲಸ ಮಾಡಿಬಿಡುತ್ತಿದ್ದೆ ಎಂದು ಪೇಚಾಡುತ್ತಾರೆ. ಆ ನಗರಗಳಲ್ಲಿರುವವರು ಇನ್ನೇನೋ ಸಬೂಬು ಹೇಳುತ್ತಾರೆ. ಮೂಲಭೂತವಾಗಿ ನಮ್ಮ ದೇಶದಲ್ಲಿ ಉತ್ಸಾಹ ಶ್ರದ್ಧೆ ಛಲಗಳು ಬತ್ತಿ ಹೋಗಿ ಸುಲಭದಲ್ಲಿ ಹಣ, ಹೆಸರು, ಸ್ಥಾನ ಗಳಿಸುವ ವಿಧಾನದ ಕಡೆ ಎಲ್ಲರ ಗಮನ ಕೇಂದ್ರೀಕೃತವಾಗಿದೆ. ಉನ್ನತ ಧ್ಯೇಯ, ಆದರ್ಶ, ಮಹತ್ವಾಕಾಂಕ್ಷೆ, ಶ್ರಮಪ್ರಿಯತೆ ಕಡಮೆ ಆಗುತ್ತಿವೆ.

ಸಂಜೆ ಅರಸೀಕೆರೆಯ ರಾಮಚಂದ್ರರಾಯರು (ಇವರು ನನ್ನ ಗುರು ದಿ. ತೀ.ನಂ.ಶ್ರೀ. ಅವರ ಸಮೀಪ ಬಂಧುಗಳು, ತೀ.ನಂ.ಶ್ರೀ. ಮಗ ನಾಗಭೂಷಣನ ಮಾವನವರ ಅಣ್ಣನ ಮಗ) ಸಿಕ್ಕು ಅರಸೀಕೆರೆಯಲ್ಲಿ ತಮ್ಮ ಮನೆಯಲ್ಲಿ ಉಳಿಯಲು ಆಹ್ವಾನಿಸಿದರು. ಸಂತೋಷದಿಂದ ಒಪ್ಪಿದೆ.

•

ಕಲ್ಪತರು ಕಾಲೇಜಿನ ಕೆ.ಆರ್. ಬಸವರಾಜ್ (ಇವರು ನನ್ನ ವಿದ್ಯಾರ್ಥಿ ಮಿತ್ರರು) ರಾತ್ರಿ ತಮ್ಮ ಮನೆಗೆ ಊಟಕ್ಕೆ ಕರೆದಿದ್ದರು. ಅವರು ಸ್ಕೂಟರ್ ತಂದಾಗ ಅದರ ಮೇಲೆ ಹೋಗಲು ನಾನು ಬಯಸಲಿಲ್ಲ. ಅವರ ಮನೆ ತಿಪಟೂರು ಹೊರಗೆ, ಕಾಲೇಜಿನ ಹಿಂಭಾಗದ ಕಂಚಿಕಟ್ಟೆ ಎಂಬ ಹಳ್ಳಿಯಲ್ಲಿ. "ನೀವು ಮುಂದೆ ಹೋಗಿ, ನಾನು ನಡೆದೇ ಬರುತ್ತೇನೆ" ಎಂದು ಹೇಳಿದಾಗ, ಧರ್ಮರಾಜ್ ಹೇಳಿದರು - "ಅದೇ ಸರಿ. ನಡೆಯುತ್ತೇನೆ ಉದ್ದಕ್ಕೂ ಎಂದು ಮಾಡಿರುವ ನಿರ್ಧಾರವನ್ನು ಬದಲಾಯಿಸಬಾರದು. ಮಾರ್ಜಿನ್ನನ್ನು ಬದಲಾಯಿಸುತ್ತಾ ಹೋದರೆ ಇಡೀ ಪುಟವೇ ಮಾರ್ಜಿನ್ನಾಗಿ ಬಿಡುತ್ತದೆ". ಆ ಮಾತಿನ ರೀತಿ ನನಗೆ ಬಹುವಾಗಿ ಹಿಡಿಸಿತು. ಯಾರೋ ತಂದು ಕೊಟ್ಟಿದ್ದ ಮೂರು ಎಳನೀರು, ಬಾಳೆಹಣ್ಣು ಚಿಪ್ಪನ್ನು ಮೇಟಿಗೆ ಕೊಟ್ಟು ಪ್ರವಾಸಿ ಮಂದಿರ ಖಾಲಿ ಮಾಡಿ ಬಾಡಿಗೆ ಕಡೆ ಹತ್ತು ರೂಪಾಯಿ ಕೊಟ್ಟೆ. ಧರ್ಮರಾಜ್ ತಾವೇ ಕೊಡಲು ಬಂದಾಗ ಅವರಿಂದ ಅದನ್ನು ಕೊಡಿಸದೆ ನಾನೇ ಕೊಟ್ಟುದಕ್ಕೆ ಆಮೇಲೆ ಸ್ವಲ್ಪ ಚಡಪಡಿಸಿದೆ (ಇದ್ದ ಸ್ವಲ್ಪ ಹಣ ಖರ್ಚಾದರೆ, ಆಪತ್ಕಾಲಕ್ಕೆ ಯಾರನ್ನು ಕೇಳುವುದು? ಸೋಪು, ದಾರಿಯಲ್ಲಿ ಚಹ ಇಂಥದಕ್ಕೆ ಹಣ ಬೇಕಲ್ಲವೇ?).

ಐವತ್ತು ಮನೆಗಳ ಕಂಚಿಕಟ್ಟೆಗೆ ಕತ್ತಲಲ್ಲೇ ನಡೆದು ಹೋದೆವು. ಬಸವರಾಜ್ ಆವೇಶಪರ ವ್ಯಕ್ತಿ. ಅವರು ಗೋಡೆಕೆರೆ ಮಠ ಕುರಿತು ಬರೆದ ಪುಸ್ತಕವೊಂದನ್ನು ನನಗೆ ಕೊಟ್ಟಿದ್ದು ಅದರ ಬಗ್ಗೆ ಅವರಿಗೆ ಏನೂ ಬರೆದಿರಲಿಲ್ಲ (ಈ ತಪ್ಪನ್ನು ಹಲವರು ಗೆಳೆಯರ ವಿಷಯದಲ್ಲಿ ಮಾಡಿದ್ದೇನೆ). ಆ ಪುಸ್ತಕ ನನಗೆ ಅನೇಕ ಹೊಸ ವಿಷಯ ತಿಳಿಸಿತ್ತು. ಜೊತೆಗೆ ನನ್ನ "ಜಂಗಮ ಜಾತಿಯಲ್ಲಿ ಅನುಶ್ರೇಣಿ" ಎಂಬ ಸಂಪ್ರಬಂಧವೊಂದು ಕೂಡ ಅವರ ತೀವ್ರ ಅಸಮಾಧಾನಕ್ಕೆ ಕಾರಣವಾಗಿತ್ತು. ಇದಕ್ಕೆ ಕಾರಣ, ಅವರು ಇಡೀ ಬರಹದ ಧ್ವನಿ ಉದ್ದೇಶಗಳನ್ನು ಸರಿಯಾಗಿ ಗ್ರಹಿಸದೇ ಇದ್ದುದು. ಜಂಗಮರ ಶ್ರೇಷ್ಠತೆಯನ್ನು ಪ್ರತಿಪಾದಿಸಲು ಯತ್ನಿಸಿದ್ದೇನೆಂದೂ, 'ನೊಣಬ' (ನೊಣಂಬ, ನೊಳಂಬ) ಮಾತನ್ನು 'ನೊಣ' (ನೊಣ)ದಿಂದ ನಿಷ್ಪನ್ನಗೊಳಿಸಿ, ಆ ಜಾತಿಯನ್ನು ಅಪಮಾನಪಡಿಸಿದ್ದೇನೆಂದೂ, ಈ ಬಗ್ಗೆ ಅವರು "ಸಾಧನೆ" ಪತ್ರಿಕೆಗೆ ಬರೆದ ಪ್ರತಿಕ್ರಿಯೆ ವಿಶ್ವವಿದ್ಯಾಲಯದ 'ಗುಂಪುಗಾರಿಕೆ'ಯಿಂದ ಪ್ರಕಟವಾಗಲಿಲ್ಲವೆಂದೂ ನೇರವಾಗಿ ಆರೋಪ ಮಾಡಿದರು. ಆ ಟೀಕೆಯನ್ನು ನಾನು ಸಮಾಧಾನ ಮನಸ್ಸಿನಿಂದ ಎದುರಿಸುವುದು ಕಷ್ಟವಾಗಲಿಲ್ಲವಾದರೂ ಒಂದು ಸಮಾಜದ ರಚನೆಯ ವಿಶ್ಲೇಷಣೆಯನ್ನು ವಸ್ತುನಿಷ್ಠವಾಗಿ ಮಾಡಿರುವುದರ ಔಚಿತ್ಯವನ್ನು ಅವರಿಗೆ ತಿಳಿಸಲು ಯತ್ನಿಸಿ ವಿಫಲನಾದೆ. ಆವೇಶ ಹೆಚ್ಚಾದಾಗ ವಿಚಾರ ಹಿನ್ನೆಲೆಗೆ ಸರಿಯುತ್ತದೆಯೆಂಬುದು ಎಲ್ಲರಿಗೂ ಅನುಭವಕ್ಕೆ ಬಂದಿರುವ ವಿಷಯ. ಬರಹವನ್ನಿಟ್ಟುಕೊಂಡು ಸ್ಪಷ್ಟಪಡಿಸಲು ನನ್ನ ಆ ಲೇಖನ ಅಲ್ಲಿ ಲಭ್ಯವಿರಲಿಲ್ಲ. ಬಸವರಾಜರನ್ನು ತಪ್ಪು ತಿಳಿಯಲು ಸಾಧ್ಯವೇ ಇಲ್ಲ. ಅವರು ಒಳ್ಳೆಯವರು,

ಅನೇಕ ಸಾದರಂತೆ ನೊಣಬರಂತೆ ಸ್ವಲ್ಪ ನೇರ ಮಾತಾಡುವವರು. ಅವರಿಗೆ ತಮ್ಮ ನೊಣಬ ಪಂಗಡದ ಬಗ್ಗೆ ಇದ್ದ ಅಭಿಮಾನದಲ್ಲಿ ನನಗೆ ತಪ್ಪೇನೂ ಕಾಣಲಿಲ್ಲ. ನೊಣಬರು ತಾವೇ ಜಂಗಮರನ್ನು ಮಾಡಿಕೊಳ್ಳುವ ಪ್ರವೃತ್ತಿ ಈಚಿನ ಬೆಳವಣಿಗೆಯೆಂಬುದು ವಾಸ್ತವವಾಗಿದ್ದರೂ ಆ ವಾಸ್ತವ ಅವರಿಗೆ ಹಿಡಿಸಲಿಲ್ಲ. ಅವರಿಂದ ನೊಣಬ ಪಂಗಡದ ಬಗ್ಗೆ ಸಹಜವಾಗಿಯೇ ಕೆಲವು ಹೊಸ ಮಾಹಿತಿ ನನಗೆ ಲಭ್ಯವಾದುವು. ಅವರೂ ಅವರ ಹೆಂಡತಿಯೂ ನನ್ನ ಬಗ್ಗೆ ತುಂಬು ಆದರ ತೋರಿಸಿದರು. "ಗಡ್ಡ ಮೀಸೆ"ಯ ಹಳ್ಳಿ ಮಾವಿನಹಣ್ಣು ಅದೇ ಭೆಳೆಯುತ್ತಿದ್ದ ನನ್ನ ಮೀಸೆ ಗಡ್ಡದ ಮಧ್ಯದ ಬಿಲದ ಮೂಲಕ ಸ್ವಲ್ಪ ಹೆಚ್ಚಾಗಿಯೇ ಹೋದುದರಿಂದ ರಾತ್ರಿಯೆಲ್ಲಾ ಹೊಟ್ಟೆಯಲ್ಲಿ 'ಜೊಳ ಜೊಳ'.

## ಕೊನೆಹಳ್ಳಿ

ಬೆಳಿಗ್ಗೆ (19.5.85) ಶ್ರೀಮತಿ ಬಸವರಾಜ್ ಕಟ್ಟಿಕೊಟ್ಟ ಉಪ್ಪಿಟ್ಟು ಮಾವಿನಹಣ್ಣು ಹಿಡಿದು ಹೊರಟೆ. ಬಸವರಾಜ್ ಎರಡು ಕಿಲೋಮೀಟರ್ ನನ್ನ ಜೊತೆ ನಡೆದು ಬಂದರು. ಶ್ರೀನಿವಾಸಮೂರ್ತಿ, ನಾಗರಾಜಶೆಟ್ಟಿ ಸೈಕಲ್ ಮೇಲೆ ಹಿಂದಿನಿಂದ ಬಂದು ನಮ್ಮನ್ನು ಸೇರಿದರು. ದಾರಿಯಲ್ಲಿ "ಅಣ್ಣಯ್ಯನ ಬಾವಿ" ಎಂಬ ಬಹು ಸುಂದರ ಚಿಕ್ಕ ಕಲ್ಲುಕಟ್ಟೆಯ ಹೊಂಡವಿತ್ತು. ದನಗಳೂ ಇಳಿದು ನೀರು ಕುಡಿಯಲನುಕೂಲವಾಗುವಂತೆ ನಿಧಾನ ಇಳಿಜಾರಿನ ಒರಟು ಕಲ್ಲು ಚಪ್ಪಡಿ ಹೊಂದಿಸಿದ್ದರು. ತಿಪಟೂರಿನ ಹುಡುಗ ಹುಡುಗಿಯರಿಗೆ ಆ ಹಾದಿ ಬದಿಯ ತೋಪು ವಿಹಾರಾದಿಗಳಿಗೆ ಕೇಂದ್ರವೆಂದು ತಿಳಿಯಿತು. ಸರಿಯೇ, ಒಂದು ಜಾಗಕ್ಕೆ ಒಂದಕ್ಕಿಂತ ಹೆಚ್ಚು ಉಪಯೋಗಗಳಿರುತ್ತವೆ ತಾನೇ. ಮುಂದೆ ಒಂದು ತೋಟದ ನೆರಳಲ್ಲಿ ತಿಂಡಿ ತಿಂದು ಬಸವರಾಜ್ ಅವರನ್ನು ಹಿಂದಕ್ಕೆ ಕಳುಹಿಸಿ ಇಬ್ಬರು ಮಿತ್ರರ ಜೊತೆ ನಡೆದೆ. ತಿಪಟೂರಿನಂತಹ ಕಡೆ ಅವರು ಆಗಾಗ್ಗೆ ಸೇರಿ ಸಾಹಿತ್ಯಕ ಚಿಂತನೆಗಳನ್ನು ಹಂಚಿಕೊಳ್ಳುತ್ತಿರುವ ಸಂಗತಿ ತಿಳಿದು ಸಂತೋಷವಾಯಿತು. ಶ್ರೀನಿವಾಸಮೂರ್ತಿಯವರಿಗೂ ನನಗೂ ಗುರುಗಳಾದ (ದಿ) ಉ.ಕಾ. ಸುಬ್ಬರಾಯಾಚಾರ್ಯರ ಶುಭ್ರ ಬದುಕು, ಅವರನ್ನು ಕುವೆಂಪು "ಶುಭ್ರಾಯಾಚಾರ್" ಎಂದೇ ಕರೆಯುತ್ತಿದ್ದುದು, ಅವರು ತಮ್ಮ ವಿಧವೆ ತಂಗಿಗಾಗಿ ತಂಗಿ ಮಕ್ಕಳಿಗಾಗಿ ಮಾಡಿದ ತ್ಯಾಗ, ಬದುಕಿನಲ್ಲಿ ಕೆಲವು ಗಂಭೀರ ಪ್ರಸಂಗಗಳಿಗೆ ಸಿಲುಕಿಕೊಂಡದ್ದು, ಹಾಗೇ ಒಂದೆರಡು ವಿನೋದ ಪ್ರಸಂಗಗಳು ಎಲ್ಲವನ್ನೂ ನೆನಪಿಸಿಕೊಳ್ಳುತ್ತ ಅರ್ಧ ದಾರಿ ಸಾಗಿದ್ದು ಗೊತ್ತಾಗಲಿಲ್ಲ. ಅವರು ವಾಪಸ್ ತಿಪಟೂರಿಗೆ ಹೋದರಾದರೂ ನನ್ನ ಚೀಲಗಳೆರಡೂ ಗೆಳೆಯರ ಕೈಲಿಂದ, ಸೈಕಲ್ ಹ್ಯಾಂಡ್ಲಿಂದ ನನ್ನ ಕೈಗೆ ಬಂದುವಾದರೂ ಮುಂದಿನ ಅರ್ಧ ದಾರಿ ನನಗೆ ಆಯಾಸವೆನಿಸಲಿಲ್ಲ. ದಾರಿಯಲ್ಲಿ ಹೊಲ ಉಳುತ್ತಿದ್ದ ಒಬ್ಬ ವಿದ್ಯಾವಂತ ಯುವಕ ಬೆಂಕಿ ಪೊಟ್ಟಣ ಕೇಳಿದ್ದಕ್ಕೆ ಕುಡಿಯಲು ನೀರು ಕೊಟ್ಟೆ; ಕುಡಿದು ಖುಷಿಪಟ್ಟ. ಅವನ ಬಗ್ಗೆ ನಾನು ಪ್ರೋತ್ಸಾಹದ ಮಾತನಾಡಿ ಧೂಮಪಾನ ಕೈ ಬಿಡಲು ಸಲಹೆ ಕೊಟ್ಟೆ. ಆ ಸಲಹೆ ಬೆಂಕಿ ಪೊಟ್ಟಣ ಸಿಗುವವರೆಗೆ ಸ್ವೀಕೃತವಾಗಿರುತ್ತದೆಯೆಂದೂ ಅಂದುಕೊಂಡೆ.

ನನ್ನ ವೇಷ ನನಗೇ ನಗು ತರುತ್ತಿದೆ. ಬೆಳಿಗ್ಗೆ ಸುಮಾರು 5.30ಕ್ಕೆ ಎದ್ದರೆ ಹದಿನೈದು ನಿಮಿಷಗಳಲ್ಲಿ ಹೊರಡಲು ಸಿದ್ಧ. ಹಲ್ಲುಜ್ಜಿ ಮುಖ ತೊಳೆದು ಒಂದು ಲೋಟ ಕಾಫಿ ಅಥವಾ ಟೀ ಕುಡಿದು ಹೊರಟರೆ ಏಳೂವರೆ ಹೊತ್ತಿಗೆ ಬಿಸಿಲೇರುತ್ತಿದ್ದಂತೆ ಅಂಗಿ ತೆಗೆದು ಪೈಜಾಮ ಬನಿಯನ್ನಿನಲ್ಲಿರುತ್ತೇನೆ. ಒಂದೆರಡು ದಿನಗಳ ಹಿಂದೆ ದಾರಿಯಲ್ಲಿ ನನಗೆ ಚಿತ್ರದುರ್ಗ ಸಮೀಪದವನೆಂದು ಹೇಳಿಕೊಂಡ ಮುರಿಗಪ್ಪ ಎಂಬ ಒಬ್ಬ 'ಸನ್ಯಾಸಿ' ಸಿಕ್ಕಿದ್ದರು. ಇಬ್ಬರು ಹೆಣ್ಣು ಮಕ್ಕಳನ್ನೂ ಲಗ್ನಮಾಡಿ ಒಂದು ಬಗೆಯ ವಿರಕ್ತಿಯಿಂದ (ಅಥವಾ ಅರೆಹುಚ್ಚಿನಿಂದ) ಕಾವಿ ಧರಿಸಿ ಕೈಯಲ್ಲಿ ಬೇವಿನ ಸೊಪ್ಪಿನ ತ್ರಿಶೂಲ ಹಿಡಿದು ಶ್ರೀಶೈಲಕ್ಕೆ ಬರಿಗಾಲಲ್ಲಿ ಹೊರಟು ನನ್ನ ಜೊತೆ ಸ್ವಲ್ಪ ದೂರ ಬಂದರು. ಶುದ್ಧ ಒರಟು ಮಾತು ಅವರದ್ದು. ಆ ನಿರರ್ಗಳ ಮಾತುಗಾರಿಕೆಯ ಓಘ ನನ್ನನ್ನು ಮರುಳುಗೊಳಿಸಿತ್ತು. ಯಾರಿಗೂ ಬೆದರದ, ಯಾವುದೇ ಚಿಂತೆಯೂ ಇರದ ಸ್ಥಿತಿ ಅವರದ್ದು. ಯಾರೋ ಕೇಳಿದರಂತೆ - "ನಿಮ್ಮ ಜಾತಿ ಯಾವುದು?". ಅದಕ್ಕೆ ಆತ ಅಂದದ್ದು, "ಈಗ ಲಿಂಗಾಯತ, ಅಗೋ ಅಲ್ಲಿ ಒಕ್ಕಲಿಗ, ಮುಂದಿನ ಊರಿಗೆ ಕುರುಬ, ಅದರ ಮುಂದಿನ ಊರಿಗೆ ಹೊಲೆಯ. ಆಯ್ತಾ. ಏನ್ ಹರ್‌ಕೊಳ್ತೀಯಾ ಹರ್‌ಕೋ". ಇದು ಆತ ತಾನಾಗಿ ಆಡಿದ ಮಾತಿನ ಒಂದು ಮಾದರಿ. ಈಗಾಗಲೇ ಕರಿ ಬಿಳಿ ಗಡ್ಡ ಮೀಸೆ ಬೆಳೆದಿರುವ ನಾನೂ ಅದೇ "ಜಾತಿ"ಯವನೇ? ಕೊನೆಯ ಪಕ್ಷ ಜನ ನನ್ನ ಬಗ್ಗೆ ಹಾಗೆ ಆಡಿಕೊಳ್ಳಬಹುದೇ? ಆ ಬಗ್ಗೆ ನಾನೇನೂ ತಲೆಕೆಡಿಸಿಕೊಳ್ಳಬೇಕಾಗಿಲ್ಲ ಎಂದು ಚಿಂತಿಸುತ್ತಿದ್ದಂತೆ ಮುಂದಿನ ದಿಬ್ಬದ ತುದಿಯಲ್ಲಿ ಕೊನೆಹಳ್ಳಿ ಕಾಣಿಸಿತು. ತಗ್ಗಲ್ಲಿದ್ದವರಿಗೆ ಅದು ದಿಗಂತದ ಅಂಚಿನಲ್ಲಿರುವ ಹಳ್ಳಿಯಾಗಿ, ಕೊನೆಯ ಹಳ್ಳಿಯಾಗಿ ಕಾಣಿಸಿದುದರಿಂದ ಆ ಹೆಸರು ಬಂದಿತೆಂದು ನನ್ನ ತರ್ಕ. ಅದು ತುಮಕೂರು ಜಿಲ್ಲೆಯ ಕೊನೆಯ ಹಳ್ಳಿಯಾದುದರಿಂದ ಆ ಹೆಸರೆಂದು ಅಲ್ಲಿನವರ ಅಭಿಪ್ರಾಯ. ಈ ದಿನ ಏಳು ಮೈಲಿ ನಡೆದಿದ್ದೆನಾದರೂ ಆಯಾಸವೆನಿಸಲಿಲ್ಲ.

ಕೊನೇಹಳ್ಳಿ ಮೂಡಲಪಾಯ ಯಕ್ಷಗಾನದ ಕೇಂದ್ರವಾಗಿ ಹೆಸರಾಗಿತ್ತು. ಅಲ್ಲಿನವರು ಮಾಡಿದ್ದ ಕರಿಬಂಟ ಯಕ್ಷಗಾನವನ್ನು ನಾನು ಬಿ.ಆರ್. ಪ್ರಾಜೆಕ್ಟಿನಲ್ಲಿ ನೋಡಿದ್ದೆ (ಬಾಲ್ಯದಲ್ಲಿ ನನ್ನ ಊರ ಪಕ್ಕದ ಆಲೂರಿನವರು ಅದನ್ನು ಆಡುತ್ತಿದ್ದರು). ಡಾ. ಜೀ.ಶಂ.ಪ. ಅವರ ಬಂಧುಗಳೊಬ್ಬರ ಬಟ್ಟೆ ಅಂಗಡಿ ಅಲ್ಲೇ ಯಕ್ಷಗಾನ ಕೇಂದ್ರದ ಪಕ್ಕದಲ್ಲಿತ್ತು. ನಾನೇ ಹೋಗಿ ನನ್ನ ಪರಿಚಯ ಹೇಳಿಕೊಂಡಾಗ ಅವರಲ್ಲಿ ಅಂತಹ ಸೌಜನ್ಯ ನನಗೆ ಕಾಣಲಿಲ್ಲ. ಸ್ನೇಹವೋ ಅನಾದರವೋ ತಿರಸ್ಕಾರವೋ ಎಲ್ಲವನ್ನು ಸಮಾನವಾಗಿ ಸ್ವೀಕರಿಸಬೇಕೆಂಬುದು ನನ್ನ ಉದ್ದೇಶವಾಗಿತ್ತು. "ಹೋಗುತ್ತ ಇಲ್ಲೇ ತಿಂದುಕೊಂಡು ಹೋಗಿ" ಎಂದು ಅವರು ತಿಳಿಸಿದ್ದರು. ಅಷ್ಟರಲ್ಲಿ ಆ ಊರಿನ ಮಾಜಿ ಛೇರ್‌ಮನ್ ರಂಗಪ್ಪನವರು ಬಂದು "ನೀವು ಬರುವ ವಿಷಯವನ್ನು ದಕ್ಷಿಣಾಮೂರ್ತಿ ತಿಳಿಸಿದ್ದಾರೆ" ಎಂದು ಕರೆದೊಯ್ದರು. ರಂಗಪ್ಪ ಕುಳ್ಳ ಆಳು. ನನ್ನನ್ನು ಪಕ್ಕದ ಬಯಲು ರಂಗಮಂದಿರದ ಹಿಂಭಾಗದ ಕೊಠಡಿಗೆ ಕರೆದೊಯ್ದರು. ಅಲ್ಲಿಗೇ ತಿಂಡಿ ಬಂತು, ಸ್ನಾನಕ್ಕೆ ತಣ್ಣೀರು ಬಂತು. ಹದಿನೈದು ಇಪ್ಪತ್ತು ಹಳ್ಳಿ ಹುಡುಗರು ನಾನು ನಾಟಕ ಆಡುವವನೆಂದು ಭಾವಿಸಿ ಘೇರಾಯಿಸಿ "ಯಾವ ನಾಟಕ?" ಎಂದು

ಕೇಳಿಯೇ ಬಿಟ್ಟರು. ನಾನೂ ಗಡ್ಡ ಮೀಸೆ ಬಿಟ್ಟು ಪೋಷಕ ಖಳನಾಯಕನಂತೆ (ಖಳನಾಯಕನ ಅನುವರ್ತಿಯಂತೆ?) ಅವರಿಗೆ ಕಾಣಿಸಿರಬೇಕು. ಅವರನ್ನೆಲ್ಲ ಕೂರಿಸಿಕೊಂಡು ರಾಜಕುಮಾರ ರಾಜಕುಮಾರಿಯರ ಕತೆ ಹೇಳಿ ಅವರಿಗೆ ಇದ್ದುದರಲ್ಲಿ ಸಂತೋಷ ನೀಡಿದೆ. (ನನ್ನಂತೆ ಮಕ್ಕಳಿಗೆ ಕತೆ ಹೇಳುವವರು ಇಡೀ ಕರ್ನಾಟಕದಲ್ಲಿ ಬಹಳ ಜನ ಇಲ್ಲವೆಂದೇ ನನ್ನ ನಂಬಿಕೆ). ಬಹು ಚೂಟಿ ಮಕ್ಕಳು. ಅವರಿಗೆಲ್ಲ ಬಯಲಾಟದ ಹಾಡು ಹೇಳುವ ಕೇಳುವ, ಕುಣಿಯುವ ಹುಚ್ಚು. ಅವರದು ಗಲಾಟೆಯೋ ಗಲಾಟೆ. ಕೊಳಕು ಬಟ್ಟೆ, ಹರಿದ ಲಂಗ, ಕಿತ್ತ ಚಡ್ಡಿ, ಸೊರಗಿದ ಮುಖ ಇವುಗಳ ಹಿಂದಿನ ಕುತೂಹಲದ ಮನಸ್ಸು ಮಾತ್ರ ಬಡತನದ್ದಾಗಿರಲಿಲ್ಲ. ಅವರಲ್ಲೆ ಮೂರು ವರ್ಷದ ಬೆತ್ತಲೆ ಹುಡುಗ ದೀಪಕ್ ಅಕ್ಷರಶಃ ಚಂಡಿನಂತೆ ಪುಟಿಯುತ್ತ ಓಡುವ ಬೀಳುವ, ಇತರ ದೊಡ್ಡ ಮಕ್ಕಳ ಕೈಗೆ ಆಟದ ಸಾಮಾನಾಗುವ ಒಂದು ಅಪೂರ್ವ ವಸ್ತುವೆನ್ನಿಸಿದ್ದ. ಅವನು ರಜಪೂತ್ ಜಾತಿಯ ಬಡಗಿಯ ಮಗನಾಗಿದ್ದು ದಷ್ಟ ಪುಷ್ಟ ಲಕ್ಷಣವಂತನಾಗಿದ್ದ. ಅವನ ಮೂಗಿನಲ್ಲಿ ಸುರಿಯುತ್ತಿದ್ದ ಸಿಂಬಳ ತೆಗೆಯಲು ಪಕ್ಕದ ಹುಡುಗನಿಗೆ ನಾನು ಸೂಚಿಸಿದ್ದು ಏಕೋ ನಾನೇ ನಾಚಿಕೆಪಟ್ಟುಕೊಳ್ಳುವಂತಾಯ್ತು. ಪ್ರೊಫೆಸರ್ ಕೈಯಿ ಹಳ್ಳಿ ಹುಡುಗನ ಮೂಗನ್ನು ಮುಟ್ಟಬಾರದೆ? ರಂಗಪ್ಪ ಮತ್ತೆ ಮತ್ತೆ ಬಯ್ದು ಗಲಾಟೆ ಮಾಡುವ ಹುಡುಗರನ್ನು ಓಡಿಸುವುದು, ಇರಲಿ ಬಿಡಿ ಎಂದು ಸಮಾಧಾನಪಡಿಸುವುದು ಮುಂದುವರಿಯಿತು. ಹುಡುಗರು ಹಠ ಮಾಡಿ ನನ್ನಿಂದ ಒಂದು ಪ್ರಾಣಿ ಕತೆಯನ್ನು ಹೇಳಿಸಿಯೇ ಬಿಟ್ಟರು.

ಕರ್ನಾಟಕ ಜಾನಪದ ಅಕಾಡೆಮಿ, ತಾಲೂಕು ಬೋರ್ಡು ಇವೆಲ್ಲ ಸೇರಿ ಕಟ್ಟಿದ್ದ ಆ ಬಯಲು ರಂಗಭೂಮಿ ಇದ್ದುದರಲ್ಲಿ ಸುಸಜ್ಜಿತವಾಗಿತ್ತು. ಸ್ವಲ್ಪ ಹೊತ್ತಿಗೆ ಭಾಗವತ ನರಸಪ್ಪ ಬಂದರು. ರಂಗಪ್ಪ ಮತ್ತು ನರಸಪ್ಪ ಇಬ್ಬರೂ ಆ ಹಳ್ಳಿಯ ಅನರ್ಘ ರತ್ನಗಳು. ರಂಗಪ್ಪ ಒಕ್ಕಲಿಗರು, ಹದಿನೈದು ವರ್ಷ ಆ ಊರಿನ ಛೇರ್ಮನ್ ಆಗಿ ಹಳ್ಳಿಗಾಗಿ ದುಡಿದ ವಿನಯಶಾಲಿ. ಮೂಡಲಪಾಯ ಯಕ್ಷಗಾನದ ಕೆಲಸಗಳೆಂದರೆ ಅವರಿಗೆ ಎಲ್ಲಿಲ್ಲದ ಹುಮ್ಮಸ್ಸು. ನರಸಪ್ಪ ನಾಟಕದ ಹುಚ್ಚು ಹಚ್ಚಿಕೊಂಡು ಚಿಕ್ಕವಯಸ್ಸಿನಲ್ಲಿ ಸಾಕಷ್ಟು ಕುಣಿದು ಈಗ ಕೊನೇಹಳ್ಳಿಯಲ್ಲಿ ಯುವಕರಿಗೆ ಎಂಟು ಹತ್ತು ಮೂಡಲಪಾಯ ಬಯಲು ನಾಟಕಗಳನ್ನು (ಯಕ್ಷಗಾನಗಳನ್ನು) ಕಲಿಸುತ್ತ ಆ ಕಲೆಯ ಕೇಂದ್ರವಾಗಿದ್ದಾರೆ. ನಾವೆಲ್ಲ ಮಾತನಾಡುತ್ತಿರುವಾಗ ಪಕ್ಕದ ಹಳ್ಳಿಯ ನಿರುದ್ಯೋಗಿ ಯುವಕ, ಕನ್ನಡ ಎಂ.ಎ. ಪದವೀಧರ ಗುರುಸಿದ್ಧಯ್ಯ ಅಲ್ಲಿಗೆ ಬಂದ. ಬದುಕಿನ ವಾಸ್ತವತೆಗಳಲ್ಲಿ ನಲುಗಿ ಹೋಗಿರುವ ಕಹಿ ಮನಸ್ಸಿನ (ಸಹಜವೇ) ವ್ಯಕ್ತಿ ಅವನೆಂದು ಅನ್ನಿಸಿತು. ಕನ್ನಡ ವಿಭಾಗದ ಅಧ್ಯಾಪಕರ 'ಪಕ್ಷಪಾತಗಳ' ಬಗ್ಗೆ ಕಟುವಾಗಿ ಮಾತನಾಡಿದ. ಅವನು ಆ ದಿನ ತನ್ನ ತಂಗಿಯ ಮದುವೆಯ ಮಾತುಕತೆಗೆ ಗಂಡಿನ ಮನೆಗೆ ಹೊರಟಿದ್ದ. ಬೆಳಿಗ್ಗೆ 11.30ರ ಹೊತ್ತಿಗೆ ನರಸಪ್ಪನವರು ಒಂದು ದೊಡ್ಡ ಸಂಸಾರವನ್ನೇ ಕರೆತಂದರು. ತಿಪಟೂರಿನಲ್ಲಿ ನಾಗರಾಜ್ ಮನೆಯಲ್ಲಿ ನಾನು ಗೆಳೆಯರ ಜೊತೆ ಮಾತನಾಡುವಾಗ ಇದ್ದ ಆನಂದ ಎಂಬ ಹೆಸರಿನ ಜೀವವಿಮಾ ಅಧಿಕಾರಿಗಳು ಕಾರಲ್ಲಿ ಅರಸೀಕೆರೆಗೆ ಹೋಗುತ್ತ ತಮ್ಮ ವಾಹನ ನಿಲ್ಲಿಸಿ ತಮ್ಮ ಹೆಂಡತಿ ನಾಲ್ವರು ಮಕ್ಕಳ

ಸಮೇತ ನನ್ನನ್ನು ನೋಡಲು ಬಂದರು. ತಿಪಟೂರಲ್ಲಿ ನಟ ರಾಜಕುಮಾರ್ ಅವರ ಕನ್ನಡದ ಕೆಲಸವನ್ನು ನಾನು ವಿಶ್ಲೇಷಣೆ ಮಾಡಿದ ರ್‍ೀತಿ ಅವರಿಗೆ ಬಹಳ ಹಿಡಿಸಿತಂತೆ. ನನ್ನ ಬಗ್ಗೆ ಬಹಳ ಅಭಿಮಾನದ ಮಾತಾಡಿದರು. ಮಕ್ಕಳೆಲ್ಲ ಬಹು ಚೂಟಿ. ಅವರೆಲ್ಲ ಹೊರಟು ನಿಂತು ಅವರ ಹೆಂಡತಿ ಭಾವಾವಿಷ್ಟರಾಗಿ ನನ್ನ ಪಾದ ಮುಟ್ಟಿ ನಮಸ್ಕರಿಸಿದಾಗ ಅವಾಕ್ಕಾದೆ. ದೊಡ್ಡ ಸಂಕಲ್ಪವನ್ನು ಕೇಳಿಯೇ ಜನ ಹೀಗೆ ಬೆರಗಾಗುತ್ತಾರೆ. ನನಗೆ ಅನ್ನಿಸಿತು: ಇದೆಲ್ಲವೂ ನನ್ನ ಸಂಕಲ್ಪವನ್ನು ದೃಢಗೊಳಿಸಿಕೊಳ್ಳಲು, ಅಹಂಕಾರವನ್ನು ಮೆಟ್ಟಿ ನಿಂತು ಅಕೃತಕ ವಿನಯವನ್ನು ಬೆಳೆಸಿಕೊಳ್ಳಲು ಸಹಾಯಕವಾಗುತ್ತದೆ.

ಮಧ್ಯಾಹ್ನ ರಾಗಿ ಮುದ್ದೆ, ಮೊಳಕೆ ಹುರಳಿ ಸಾರು ರಂಗಭೂಮಿಗೇ ಬಂದಿತು. ರಂಗಪ್ಪನವರಿಗೆ "ಇದು ಸರಿಯಲ್ಲ, ನಾನು ನಿಮ್ಮ ಮನೆಗೆ ಊಟಕ್ಕೆ ಸಂತೋಷದಿಂದ ಬರುತ್ತಿದ್ದೆ" ಎಂದು ಹೇಳಿದೆ. ತಮ್ಮ ಮನೆ ಅಷ್ಟು ಚೆನ್ನಾಗಿಲ್ಲ ಎಂದರು. "ರಾತ್ರಿ ನಿಮ್ಮ ಮನೆಯಲ್ಲೇ ಊಟ" ಎಂದೆ. ಒಪ್ಪಿದರು. ಹಿಂದಿನ ರಾತ್ರಿ ಅವರ ಸೀಮೆ ಹಸು ಗಂಡುಕರು ಹಾಕಿದ್ದ ವಿಷಯವನ್ನು ತಿಳಿಸಿದರು. ರಂಗಮಂಟಪದ ಹೊರಗೆಲ್ಲ ಮಕ್ಕಳ ಗಲಾಟೆಯೋ ಗಲಾಟೆ; ಹಿಂಭಾಗದಲ್ಲೇ ಹೊಲಗಳು, ತೋಟಗಳು; ಪಕ್ಕದಲ್ಲೇ ಪ್ರೌಢಶಾಲೆಯ ಕಟ್ಟಡ.

ಸಂಜೆ ಬೆಂಗಳೂರಿನ ಕರ್ನಾಟಕ ರಾಜ್ಯರಸ್ತೆ ಸಾರಿಗೆ ಸಂಸ್ಥೆಯಲ್ಲಿ ಕೆಲಸದಲ್ಲಿದ್ದ ಅದೇ ಊರಿನ ಚಂದ್ರಶೇಖರ್ ಸಿಕ್ಕರು. ಬೆಂಗಳೂರಿನವರಾದ ಅವರಿಗೆ ಕನ್ನಡದ ಸಮಸ್ಯೆಗಳ ಅರಿವಿತ್ತು. ಹಣದ ಅಗತ್ಯವಿದ್ದರೆ ಊರಿನ ಜನರಿಂದ ಸಂಗ್ರಹಿಸಿ ಕೊಡುವುದಾಗಿ ಹೇಳಿದರು. ಅದನ್ನು ನಿರಾಕರಿಸಿದೆನೆಂದು ಹೇಳಬೇಕಾಗಿಲ್ಲ. ನರಸಪ್ಪನವರು ಮಕ್ಕಳಿಂದ ನರ್ತನ ಮಾಡಿಸಿದರು. ಕೊಳಕು ಅಂಗಿ ಚಡ್ಡಿಯ ಒಬ್ಬ ಹುಡುಗ ಕೃಷ್ಣನ ಕುಣಿತವನ್ನು ಚೆನ್ನಾಗಿ ಮಾಡಿ ತೋರಿಸಿದ. ತೀರ ಕೊಳಕು ಬನಿಯನ್, ಆರೆಂಟು ಹಿಂಬದಿ ಕಿಂಡಿಗಳಿದ್ದ ನಿಕ್ಕರ್ ಧರಿಸಿದ ಒಂದು ಪುಟ್ಟ ಮಗು ನಾರದ ಪಾತ್ರಧಾರಿಯಾಗಿ ಕೃಷ್ಣ ಧ್ಯಾನವನ್ನು ಮಾಡಿದಾಗ ನನಗೆ ನಗು ತಡೆಯಲಾರದೆ ಹೋಯ್ತು. ಹಳ್ಳಿಯ ಹುಡುಗರಾದುದರಿಂದಲೇ ಅವರಿಗೆ ಆ ಶ್ರದ್ಧೆ ತನ್ಮಯತೆಗಳು ಸಾಧ್ಯವಿದ್ದುವು. ಜನರು ನಾಟಕದಲ್ಲಿ ಪಾರ್ಟ್ ಮಾಡಲು ಅಷ್ಟು ಉತ್ಸಾಹ ತೋರುತ್ತಿಲ್ಲವೆಂಬ ಕೊರಗು ನರಸಪ್ಪನವರದು. ದೂರದರ್ಶನ, ಸಿನಿಮಾ ಇತ್ಯಾದಿ ಮನರಂಜನೆಗಳು ಹಳ್ಳಿಗಳಿಗೂ ಲಭ್ಯವಿರುವಾಗ ಆಸಕ್ತಿ ಕಡಮೆಯಾಗುವುದರಲ್ಲಿ ಆಶ್ಚರ್ಯವೇನೂ ಇಲ್ಲ. ಹುಡುಗರಿಗೆ ಒಂದೆರಡು ಕತೆ, ದೊಡ್ಡವರಿಗೆ ಕರಿಬಂಟ, ಶಿವಜಲಂಧರ ಇತ್ಯಾದಿ ಎಂಟು ಹತ್ತು ನಾಟಕ ಕಲಿಸಿದ್ದಾರೆ. ಎತ್ತರದ ಗಡಸುಧ್ವನಿಯ ಯುವಕನೊಬ್ಬ ಉದ್ದಂಡಿ ರಾಕ್ಷಸಿಯ ತಮ್ಮ ಬೊಮ್ಮ ರಾಕ್ಷಸನ ಪಾತ್ರವನ್ನು ತನ್ನ ಲುಂಗಿ ಪಂಚೆ ಮೇಲಕ್ಕೆ ಕಟ್ಟಿ ಕುಣಿದಾಗ ಆ ಪಾತ್ರ ಬಹಳ ಕಳೆಗಟ್ಟಿತು. ನಾರಣಪ್ಪ ಸದ್ಯಕ್ಕೆ ಒಬ್ಬ ಹಳ್ಳಿ ಸಬ್ ಪೋಸ್ಟ್ ಮಾಸ್ಟರ್; ತಿಂಗಳಿಗೆ ರೂ. 250/- ಸಂಬಳ. ಕೆಲವು ಟೆಸ್ಟ್‌ಗಳಲ್ಲಿ ತೇರ್ಗಡೆಯಾದರೆ ಪೋಸ್ಟ್ ಆಫೀಸುಗಳಲ್ಲಿ ಕ್ಲಾರ್ಕ್ ಹುದ್ದೆ, ಪೆನ್ಷನ್ ಸಿಗುವುದಿತ್ತು. ರಾತ್ರಿ ಊಟಕ್ಕೆ ಮುಂಚೆ ಮಕ್ಕಳಿಗೆ ಆಲಿಬಾಬ ನಲವತ್ತು ಕಳ್ಳರ ಕತೆ ಹೇಳಿದೆ. ಬೆಳಿಗ್ಗೆ ನಾನು ಕತೆ ಹೇಳುವಾಗ

ನರಸಪ್ಪನವರು ಸಶಬ್ದ ಹೂಸು ಬಿಟ್ಟಾಗ ರಸಭಂಗ ಎಷ್ಟಾಯಿತೆಂದರೆ ಮಕ್ಕಳ ಮುಸಿ ಮುಸಿ ನಗೆಯಿಂದ ನನಗೂ ನಗು ಬಂದು "ಏನು ಮಾಡುವುದು ನರಸಪ್ಪನವರೇ" ಎಂದೆ. ಪಾಪ, ಅವರೂ ನಿಸ್ಸಹಾಯಕರೇ ತಾನೇ. ಸಂಜೆ ಕತೆ ಹೇಳುವಾಗ ಅಂತಹ ರಸಭಂಗವೇನೂ ಆಗಲಿಲ್ಲ. ದೀಪಕನ ತಂದೆಯನ್ನು ಕರೆಸಿ ಅವನನ್ನು ಚೆನ್ನಾಗಿ ಬೆಳಸಿದರೆ ಮುಂದಕ್ಕೆ ಬರುವ ಚೂಟಿ ಹುಡುಗ ಎಂದು ಹೇಳಿದೆ. ತಾಯಿಗೆ ಆ ಬೆತ್ತಲೆ ಪೋರನ ತಂಟೆ ಸಹಿಸುವುದೇ ಕಷ್ಟವೆಂದು ಕೇಳಿದ ನನಗೂ ಅವನನ್ನು ಮರೆಯುವುದು ಕಷ್ಟವಾಗಿದೆ.

ರಾತ್ರಿ ರಂಗಪ್ಪ ಬಂದರು. ತಮ್ಮ ಮನೆ ಚೆನ್ನಾಗಿಲ್ಲವೆಂದು ಮತ್ತೆ ಮತ್ತೆ ಹೇಳಿದರು. ಅವರ ಮನೆಗೆ ಹೋದಾಗ ಅವರ ಮಾತು ನಿಜ ಎನ್ನಿಸಿತು. ನಾನು ಹಳ್ಳಿಯಲ್ಲಿ ಹುಟ್ಟಿದ ಮನೆಗಿಂತ ಜೀರ್ಣವಾಗಿತ್ತು. ಗೋಡೆ ನೆಲ ಎಲ್ಲವೂ ಒಡೆದಿದ್ದವು. ಅವರಿಗೂ ಅವರ ಹೆಂಡತಿಗೂ ಹೇಳಿದೆ, "ನನ್ನ ಮುಖ ಚನ್ನಾಗಿಲ್ಲ, ರಾಜಕುಮಾರ್ ಮುಖ ಚೆನ್ನಾಗಿದೆಯೆಂದು ನಾನು ನನ್ನ ಮುಖ ಮುಚ್ಚಿಕೊಳ್ಳಲು ಸಾಧ್ಯವೇ? ನಿಮ್ಮ ಮನೆ ಇರುವುದೇ ಹೀಗೆ. ನನ್ನನ್ನು ಮಹಲೊಂದರಲ್ಲಿ ಸೋಫಾ ಮೇಲೆ ಕೂರಿಸಿ ಫ್ಯಾನ್ ಹಾಕಿ "ಕೂಳು ತಿನ್ನಿ" ಎಂದು ಅಸಡ್ಡೆಯಿಂದ ಭಕ್ಷ್ಯ ಭೋಜ್ಯ ಬಡಿಸಿದರೂ ಅದನ್ನು ತಿನ್ನುತ್ತೇನೆಯೇ? ಪ್ರೀತಿ ಬದುಕಿನಲ್ಲಿ ಅಮೂಲ್ಯ - ಅಂತಹ ಸ್ನೇಹ ನಿಮ್ಮಲ್ಲಿದೆ." ಆ ಮಾತು ಅವರ ಮನಸ್ಸನ್ನು ಮುಟ್ಟಿತೆಂದು ಭಾವನೆಯಾಯ್ತು. ಆ ಅನ್ನಪೂರ್ಣಮ್ಮ ಗೃಹಿಣಿ (ಆಕೆಯ ಹೆಸರು ನನಗೆ ತಿಳಿಯದು) ಗಿಣ್ಣ ಪಾಯಸ ಮಾಡ್ಡಿದ್ದರು. ತಿಂದರೆ ಅನಾರೋಗ್ಯವಾಗಬಹುದೆಂಬ ಭಯ ಕಾಡಿದರೂ ಅವರಿಗೆ ನೋವಾದೀತು ಎಂದು ಸ್ವಲ್ಪ ಹೆಚ್ಚಾಗಿಯೇ ತಿಂದೆ. ಊಟ ಬಹು ರುಚಿಯಾಗಿತ್ತು. ರಾತ್ರಿ ನಾಟಕ ಮಂದಿರದಲ್ಲೇ ನರಸಪ್ಪನವರೂ ನಾನೂ ಚಾಪೆ ಮೇಲೆ ಮಲಗಿದೆವು. ನಿರೀಕ್ಷೆಯಂತೆ ರಾತ್ರಿಯೆಲ್ಲ ಹೊಟ್ಟೆಯಲ್ಲಿ ಚಿನಕುರಳಿ, ಪಟಾಕಿ, ಸುರ್ ಸುರ್ ಬತ್ತಿ; ಒಂದೆರಡು ಠಸ್ ಅಂದದ್ದೂ ಉಂಟು.

## ಅರಸೀಕೆರೆ

ಬೆಳಿಗ್ಗೆ (20.5.85) ಐದು ಗಂಟೆಗೆ ಎದ್ದರೆ ನಿರೀಕ್ಷೆಯಂತೆ ನೆಗಡಿ, ಸ್ವಲ್ಪ ಗಂಟಲು ನೋವು. ನರಸಪ್ಪ ಕಾಫಿ ಮಾಡಿಸಿಕೊಂಡು ತಂದರು. ರಂಗಪ್ಪನವರನ್ನು ನಾನು ವಿಚಾರಿಸಿದಾಗ ಅವರು ಬರಲಾರರು ಎಂಬ ಸೂಚನೆ ಬಂದಿತು. ಅವರಿಗೆ ಕುಡಿಯುವ ಚಟವಿದೆಯೆಂಬ ಸುಳುಹೂ ಕಾಣಿಸಿತು. ಒಳ್ಳೆಯ ಹೆಂಡತಿ, ಮುದ್ದಾದ ಮಕ್ಕಳು, ಸಹಾಯಕ ಬುದ್ಧಿಯ ಪ್ರೀತಿಪೂರ್ಣ ವ್ಯಕ್ತಿ ರಂಗಪ್ಪನವರ ಬಗ್ಗೆ ಆ ಕ್ಷಣ ತೀರ ಕನಿಕರವಾಯಿತು. ದೇವರೇ, ಅವರಿಗೆ ಒಳ್ಳೆಯದನ್ನು ಮಾಡು ಎಂದು ಮನಃಪೂರ್ವಕವಾಗಿ ಪ್ರಾರ್ಥಿಸಿದೆ.

ಆ ದಿನ ಕಾಲು ಭಾರ. ಸ್ವಲ್ಪ ತಲೆ ನೋವು ಬೇರೆ. ನನಗೆ ನಿಜವಾಗಿಯೂ ಭಯವಾಯ್ತು. ಇನ್ನು ಮುಂದೆ ಊಟದ ಬಗ್ಗೆ ಅತಿ ಎಚ್ಚರದಿಂದಿರಬೇಕು ಎಂದು ನಿರ್ಧರಿಸಿದೆ. ನಡೆ ನಿಧಾನವಲ್ಲದೆ ಬುದ್ಧಿಯೂ ಮಂದವಾಯಿತು. ಪ್ರಕೃತಿಯೂ ಮಂಕಾಗಿಯೇ ಕಾಣಿಸಿತು.

ಈ ಪ್ರವಾಸದಲ್ಲಿ ವಿಶೇಷವಾಗಿ ಮರಗಳು ನನಗೆ ಆಪ್ತ ಸ್ನೇಹಿತರಾದುವು. ಅವುಗಳ ಒಂದೊಂದು ಆಕಾರವನ್ನೂ ನಾನೂ ಗಮನಿಸಿದ್ದೇನೆ. ಉದ್ದಕ್ಕೆ ಬೆಳೆದದ್ದು, ಸುತ್ತಮುತ್ತ ಬೆಳೆದದ್ದು, ಒಂದು ಕಡೆ ನೆಲಕ್ಕೆ ಸಮಾನಾಂತರವಾಗಿ ಬೆಳೆದು ಬೇರುಗಳು ನೆಲವನ್ನು ಕಚ್ಚಿ ಹಿಡಿದು ನಿಲ್ಲಿಸಿರುವುದು, ಆಲದ ಬಿಳಿಲುಗಳು ನೆಲ ಸೇರಿ ಸಂತಾನವನ್ನು ಮುಂದುವರಿಸಿರುವುದು, ಬಿಳಿಲು ಮೊಟಕಾಗಿರುವುದು, ಅವು ಬೆಳೆದು ನೆಲವನ್ನು ತಬ್ಬಲು ಮುಂದೆ ಸಾಗಿದ್ದರೂ ಜನ ಅವುಗಳ ಪ್ರಣಯಕ್ಕೆ ಭಂಗ ತಂದಿರುವುದು, ಹೂತ ಹುಣಿಸೆಯ ಹೂವೊಂದು ನನ್ನ ತಲೆ ಮೇಲೆ ಬಿದ್ದು ಹರಸಿದ್ದು, ಜನ ಟೊಂಗೆಗಳನ್ನು ಕ್ಷೌರ ಮಾಡಿರುವುದು, ಬೊಡ್ಡೆಯಲ್ಲಿ ಗುಳಿ ಬಿದ್ದು ಸಮಯ ಬಂದರೆ ಜನ ಕುಳಿತುಕೊಳ್ಳಲು ಆಶ್ರಯವಾಗಿರುವುದು, ಆಲದ ಕೆಂಪು ಹಣ್ಣುಗಳು ತಿನ್ನುವವರಿಲ್ಲದೆ ಕೆಳಗೆ ಬಿದ್ದಿರುವುದು, ಬಿದ್ದ ನೇರಿಲ ಹಣ್ಣುಗಳನ್ನು ತಿಂದು ಮುಗಿಸಿ ಹುಡುಗರು ಕಲ್ಲಲ್ಲಿ ಹೊಡೆದು ಉರುಳಿಸಿದ್ದು, ಮಾವಿನ ಮರಗಳ ಮೈ ತುಂಬಿ ನೆಲ ತಾಗುವ ದಷ್ಟ ಪುಷ್ಟ ಕಾಯಿಗಳು, ಆಲದ ಮರದ ಬುಡದ ಮೇಲೆ ಹುಣಿಸೆ ಗಿಡ ಹೊರವಾಗಿ ಬೆಳೆದು ಮಧ್ಯೆಯೆಲ್ಲ ಹುಣಿಸೆ ಚಿಗುರು ಹೂವು, ಮೇಲೆ ಆಲದ ಎಲೆ ಹಣ್ಣು, ಎಂದರೆ ಆಲದ ಮರ ತನ್ನ ಮೊದಲ ಮಹಡಿಯನ್ನು ಹುಣಿಸೆಗೆ ಬಾಡಿಗೆಗೆ ಕೊಟ್ಟು ತಾನು ಮಹಡಿ ಮೇಲೆ ವಾಸಿಸುತ್ತಿರುವುದು (ಬಾಡಿಗೆದಾರ ಮಾಲಿಕನನ್ನೇ ಓಡಿಸುವಂತಹ ಸಂದರ್ಭ), ರಸ್ತೆಯಲ್ಲಿ ನಡೆಯುವಾಗ ಬಿಸಿಲಿಂದ ರಕ್ಷಣೆ ಪಡೆಯಲು ರಸ್ತೆಯ ಆ ಬದಿಯಿಂದ ನೆರಳಿರುವ ಇನ್ನೊಂದು ಬದಿಗೆ ಬಂದುದು, ಮರದ ಕೆಳಗೆ ಬಂಡೆಯ ಮೇಲೆ ಕುಳಿತೋ ಹುಲ್ಲಿನ ಮೇಲೆ ಕಾಲು ಚಾಚಿ ಮಲಗಿಯೋ ಆಯಾಸ ಪರಿಹರಿಸಿಕೊಂಡದ್ದು, ಮರಗಳ ನೆರಳು ರಸ್ತೆಯ ಮಧ್ಯಕ್ಕೆ ಬಿದ್ದು ಆ ನೆರಳು ನನಗೆ ದಕ್ಕದಂತಾದುದು - ಹೀಗೆ ಏನೇನೋ ದೃಶ್ಯಗಳು. ಒಂದು ಕಡೆ, ನೆರಳಲ್ಲಿ ಮಂಚದಂತಹ ಕರಿಯ ಕಲ್ಲು, ಅದರ ಮೇಲೆ ಬರೀ ಬನಿಯನ್ನಲ್ಲಿ ಶೇಷಶಾಯಿಯಾದುದನ್ನು ಯಾರಾದರೂ ಫೋಟೋ ಹೊಡೆದು ನನ್ನನ್ನು ಫೋಟೋದಲ್ಲಿ 'ಬೀಳಿಸ'ಬಾರದಿತ್ತೇ ಎಂದು ಆಶಿಸಿದ್ದೂ ಉಂಟು.

ನಡಗೆ ನಿಧಾನವಾಗಿ ಸಾಗಿತ್ತು. ಹೀಗೆ ನಾನು ಬರಬಾರದಿತ್ತು ಎಂದೂ ಒಂದು ಕ್ಷಣ ಅನ್ನಿಸಿತು. ಶುದ್ಧ ಹುಚ್ಚು. ಬೆಳಗ್ಗೆ ಎದ್ದ ತಕ್ಷಣ ಕಾಫಿ ಚೆನ್ನಾಗಿದೆಯೆಂದು ಸುಮ್ಮನೆ ಕುಡಿಯುವ, ಚೆನ್ನಾಗಿಲ್ಲದಿದ್ದರೆ ಹಾಗೆ ಹೇಳಿ ಹೆಂಡತಿಯಿಂದ ಗದರಿಸಿಕೊಂಡು ಬಾಯಿ ಮುಚ್ಚಿ ಕಣ್ಣು ತೆಗೆದು ಪೇಪರ್ ಓದುವ ಕೆಲಸ ಬಿಟ್ಟು ಈ ಅಲೆಮಾರಿತನ ಏಕೆ ? ಸ್ವಲ್ಪ ಮೈ ಕೈ ನೋವಾದರೂ ಮುಸುಕು ಹಾಕಿ ಮಲಗಿ ಹೆಂಡತಿ ಮಕ್ಕಳಿಂದ ಹಾಸ್ಯಮಾಡಿಸಿಕೊಳ್ಳುವುದು ಬಿಟ್ಟು ಬಿಟ್ಟು ಏನೋ ಕನ್ನಡದ ಕೆಲಸವೆಂದು ಹೊರಟುಬಿಟ್ಟಿದ್ದೇನೆ. ಬೆಂಗಳೂರಲ್ಲಿ ಬೆ.ರಾ. ನಾಗರಾಜ್ ಇಂತಹ ನಡಗೆಯಿಂದ ಏನೂ ಆಗುವುದಿಲ್ಲವೆಂದು ಹೇಳಿದ್ದರು. ಹಾಲುಗೊಣದಲ್ಲಿ ಒಂದಿಬ್ಬರು ನನ್ನನ್ನು ತಲೆಕೆಟ್ಟವನೆಂದು ಜನ ಹಾಸ್ಯಮಾಡಬಹುದೆಂದು ಹೇಳಿ ತಮ್ಮ ಅಭಿಪ್ರಾಯವನ್ನು ಪರೋಕ್ಷವಾಗಿ ಪರಿಣಾಮಕಾರಿಯಾಗಿ ಸೂಚಿಸಿದ್ದರು. ಇಂತಹ ನಿರಾಸೆ ಹತಾಶೆಗಳು ಈ ದಿನ ಮಾತ್ರ

ವಿಶೇಷವಾಗಿ ಕಾಡಿದುವು. "ಅಭೀಃ" "ಶಕ್ತಿಯ ಕೊಡು" "ಎಲ್ಲಾದರೂ ಇರು..." ಇವೇ ಮೊದಲಾದ ಮಾತುಗಳು ನನಗೆ ಅಂದು ಸಂಜೀವಿನಿ ಗುಳಿಗೆಗಳಾದುವು "ಅಯ್ಯಾ ಕನ್ನಡಿಗ, ನೀನೊಂದು ಶವ, ಅಲ್ಲ ಹೆಣ. 'ಶವ'ದಂತಹ ಸಂಸ್ಕೃತ ಮಾತಿಗೆ ನೀನು ಅನರ್ಹ. ಮೇಲೇಳು" ಎಂಬಂತಹ ಉದ್ರೇಕದ ಸ್ವಗತ ಭಾಷಣಗಳು ನಡೆದುವು. ಕನ್ನಡದ ಕೈಂಕರ್ಯದಲ್ಲಿ ಸಾರ್ವತ್ರಿಕ ಉದ್ಬೋಧನ ಕಾರ್ಯದಲ್ಲಿ ನಾನೊಂದು ಅಣು, ಒಂದು ಕ್ಷುದ್ರ ಜಂತು; ಒಂದು ವೇಳೆ ಅಳಿದರೂ ಅದರಿಂದ ನಾಡಿಗೆ ಆಗುವ ನಷ್ಟವೇನು? ಪ್ರಾಚೀನ ಕರ್ನಾಟಕದ ಗರುಡರ ವೇಳೆವಾಳಿಗಳ ಲೆಂಕವಾಳಿಗಳ ನೆನಪು ಬಂದಿತು. ಬುದ್ಧ, ಏಸುಕ್ರಿಸ್ತ, ಸಾಕ್ರಟೀಸ್, ಅಲ್ಲಮರಂತಹವರು ಆತ್ಮ ಜಾಗೃತಿಗಾಗಿ ಲೋಕ ಕಲ್ಯಾಣಕ್ಕಾಗಿ ಪಟ್ಟ ಕಷ್ಟ, ಮಾಡಿದ ತ್ಯಾಗ ಜ್ಞಾಪಕವಾದುವು. ಅವರ ಮುಂದೆ ನಾನೆಷ್ಟರವ ? ನನ್ನದೊಂದು ದೊಡ್ಡ ಸಾಧನೆ, ಹೀಗೆ ಮನೆ ಬಿಟ್ಟು ಬಂದಿರುವುದೇ ಏನೋ ವಿಶೇಷ ಎಂದು ಅಹಂಕರಿಸಿಕೊಳ್ಳುವ ಭಾವನೆಯನ್ನು ಹಾಗೇ ತಳ್ಳಿ ಹಾಕಿ ಬಿಡುತ್ತಿದ್ದೆ. ಏನು ಮಾಡುವುದು, ಮನಸ್ಸಿನ ಮೂಲೆಯ ಯಾವುದೋ ಭಾಗದಲ್ಲಿ ಆ ಭಾವನೆ ಒಮ್ಮೊಮ್ಮೆ ಮೆತ್ತಗೆ ತಲೆ ಎತ್ತಿ ಬಿಡುತ್ತಿತ್ತು. "ದೈವವೇ ಶಕ್ತಿಯಾಗಿ ಇಳಿ, ನನ್ನಲ್ಲಿ ಸೇರು, ಕಾಲಲ್ಲಿ ಶಕ್ತಿಯಾಗು, ಕಣ್ಣಲ್ಲಿ ಬೆಳಕಾಗು, ಹೃದಯದಲ್ಲಿ ಚೈತನ್ಯವಾಗು, ಬುದ್ಧಿಯಲ್ಲಿ ಮಿಂಚಾಗು, ನನ್ನನ್ನು ಬೆಳಸಿಕೋ, ಬಳಸಿಕೋ. ನಾನು ನಿನ್ನ ಅಧೀನ" ಎಂಬಂತಹ ಆ ಮಾತುಗಳು ನನ್ನಲ್ಲಿ ರೋಮಾಂಚನವನ್ನುಂಟುಮಾಡಿ ರಕ್ತದ ವೇಗವನ್ನು ಹೃದಯದ ಬಡಿತವನ್ನು ಹೆಚ್ಚಿಸುತ್ತಿದ್ದುವು. ಅರಸೀಕೆರೆಯ ಹೊರಭಾಗದ ಕೆರೆಯ ಕೋಡಿ ಕಂಡಾಗ ನಾನು ಮದುವೆಯಾದ ಹೊಸದರಲ್ಲಿ ನನ್ನ ಹೆಂಡತಿಯನ್ನು ಅವಳ ತೌರು ದಾವಣಗೆರೆಯಿಂದ ಮೊದಲ ಸಲ ಮೈಸೂರಿಗೆ ನನ್ನ ಮನೆಗೆ ಕರೆದೊಯ್ಯುವಾಗ ಅರಸೀಕೆರೆಯಲ್ಲಿ ಅವಳ ಬಂಧುಗಳ ಮನೆಯಲ್ಲಿ ತಂಗಿ, ಮಧ್ಯಾಹ್ನ ಆ ಕೆರೆಯ ಏರಿಯ ಮೇಲೆ ಮಧುಚಂದ್ರಕ್ಕೆ ಬಂದುದು ನೆನಪಾಯಿತು. ಆ ದೊಡ್ಡ ಕೆರೆಯ ಬತ್ತಿದ ನೀರಲ್ಲಿ ಬೆಸ್ತರು ಮೀನು ಹಿಡಿದಂತೆ ನೀರ ಹಕ್ಕಿಗಳೂ ಅದೇ ಕೆಲಸ ಮಾಡುತ್ತಿದ್ದುವು. ಸುಸ್ತಾಗಿ ಬೆಳಿಗ್ಗೆ ಹತ್ತೂ ಕಾಲರ ಹೊತ್ತಿಗೆ ರಾಮಚಂದ್ರರಾಯರ ಮನೆ ಸೇರಿದೆ. ಅದೇ ಪೂಜೆ ಮುಗಿಸಿ ಹೊರ ಬಂದ ಅವರು ನನ್ನನ್ನು ಆದರದಿಂದ ಕಂಡು ಬಿಸಿ ಕಾಫಿ ಕೊಟ್ಟಾಗ ಆಯಾಸ ಮರೆಯಾಯಿತು. ಆ ದಿನ ಅವರ ಹೆಂಡತಿ 'ರಜೆ' ತೆಗೆದುಕೊಂಡದ್ದರಿಂದ ಅವರನ್ನು ಚಿಕ್ಕಂದಿನಲ್ಲಿ ಸಾಕಿದ್ದ ಅಜ್ಜಿಯದೇ ಅಡುಗೆ. ರಾಯರು ನನ್ನನ್ನು ಬಹುವಾಗಿ ಉಪಚರಿಸಿದರು. ಅವರದು ಕೊಬ್ಬರಿ ವ್ಯಾಪಾರದ ಮಧ್ಯಮ ವರ್ಗದ ಸುಸಂಸ್ಕೃತ ಸಂಸಾರ. ಬೆಂಗಳೂರು ನ್ಯಾಷನಲ್ ಕಾಲೇಜಿನ ವಿದ್ಯಾರ್ಥಿಯಾಗಿ ಡಾ. ನರಸಿಂಹಯ್ಯನವರ ಸರಳತೆಗೂ ಆದರ್ಶ ಬದುಕಿಗೂ ಮಾರುಹೋಗಿದ್ದರು. ನೆಗಡಿ ಕಫದ ಗುಳಿಗೆ ನುಂಗಿದ್ದರಿಂದ ಸಂಜೆ ಹೊತ್ತಿಗೆ ಆ ತೊಂದರೆ ಉಪಶಮನವಾಯ್ತು.

ಅವರ ಮನೆಗೆ ಸಮೀಪದ ಈಶ್ವರ ದೇವಾಲಯ ನೋಡಲು ಹೋದೆ. ಕೆಲವು ಸುಂದರ ವೀರಗಲ್ಲುಗಳೂ ಸೂರ್ಯನ ವಿಗ್ರಹ ಮಾಯವಾಗಿರುವ ಸಪ್ತಾಶ್ವಗಳಿರುವ ಪೀಠವೂ ಅಲ್ಲಿ ಕಾಣಿಸಿದುವು. ಹೊಯ್ಸಳ ಕಾಲದ ವಾಸ್ತು, ಶಿಲ್ಪಗಳು. ಆ ಪುಟ್ಟ ಸುಂದರ ದೇವಾಲಯದ

ಹೊರ ಶಿಲ್ಪಗಳೆಲ್ಲ ಭಗ್ನವಾಗಿವೆ. ನವರಂಗದಲ್ಲಿರುವ ಭುವನೇಶ್ವರಿಯು ('ಭುವನೇಶ್ವರಿ' ವಾಸ್ತುಶಿಲ್ಪದ ಒಂದು ಶೈಲಿ; ಭಕ್ತರು ದೇವರ ದರ್ಶನಕ್ಕಾಗಿ ನಿಲ್ಲುವ ಹಜಾರದ ಮೇಲೆ ಕಿರೀಟಾಕಾರದ ಒಳ ಟೊಳ್ಳು ಪ್ರದೇಶವೇ ಭುವನೇಶ್ವರಿ. ಆ ಟೊಳ್ಳಿನಲ್ಲೆಲ್ಲ ಪುಟ್ಟ ಶಿಲ್ಪಗಳಿರುತ್ತವೆ) ಗರ್ಭಗುಡಿಯಿಂದ ಪ್ರತ್ಯೇಕವಾದ ಕಟ್ಟಡ. ನವರಂಗದಲ್ಲಿ ಸುತ್ತಲೂ ಆನೆಗಳನ್ನು ಕೆತ್ತಿದೆ. ಅರ್ಚಕರಿಗೆ ಹೇಳಿ ಕಳುಹಿಸಿ ಬೀಗ ತೆಗೆಸಿ ಒಳಭಾಗವನ್ನು ಪರಿಶೀಲಿಸಿದಾಗ ಲೇತ್‌ನಲ್ಲಿ ರೂಪಿಸಿದ ವಿವಿಧ ಆಕೃತಿಯ ಕಲಾತ್ಮಕ ಕಂಬಗಳು ಕಾಣಿಸಿದುವು. ದೇವಾಲಯಕ್ಕೆ ಸ್ವಲ್ಪವೂ ಹೊಂದದ ವಿಕಾರವಾದ ಕಬ್ಬಿಣದ ಸರಳಿನ ಬಾಗಿಲನ್ನು ಜೋಡಿಸಿರುವುದಲ್ಲದೆ ಆ ಸರಳುಗಳಲ್ಲಿ ದಾನಿಗಳ ಹೆಸರನ್ನೂ ಮಾಡಿಸಿದ್ದಾರೆ. ಆ ದಾನಿಗಳ ದಾನದ ಜೊತೆಗೇ ಹಿಂದಿನ ಆ ಕಲಾಕೃತಿಗೆ ಹೊಸದಾಗಿ ದತ್ತವಾದ ವಿಕಾರವೂ ಸದ್ಯಕ್ಕೆ ಶಾಶ್ವತ.

ಅರಸೀಕೆರೆಯ ಕನ್ನಡ ಅಧ್ಯಾಪಕರು ಯಾರೂ ಸಿಗಲಿಲ್ಲ. ಆ ಊರಿನ ಜೂನಿಯರ್ ಕಾಲೇಜಿನ ಕನ್ನಡ ಅಧ್ಯಾಪಕ ಬಿ.ಎಸ್. ಲಕ್ಷ್ಮಣರಾಯರು ರಾತ್ರಿ ಒಂಬತ್ತಕ್ಕೆ ಭೇಟಿ ಆದರು. ಮೂರು ವರ್ಷಗಳಲ್ಲಿ 'ಪ್ರಜಾವಾಣಿ'ಯಲ್ಲಿ ತಮ್ಮ ಐದು ನೂರು ಪತ್ರಗಳು ಪ್ರಕಟವಾಗಿರುವುದು ಒಂದು ವಿಕ್ರಮವೆಂದು ಹೆಮ್ಮೆ ಪಟ್ಟರು. ಅವರ ಹೆಮ್ಮೆ ವ್ಯರ್ಥವಾದುದಲ್ಲ. ತಮ್ಮ ಚಿಕ್ಕ ವಯಸ್ಸಿನಲ್ಲಿ ತಾಯಿ ಸತ್ತು ತಮ್ಮ ಮಲತಾಯಿಯಿಂದ ಆದ ಮಾನಸಿಕ ಆಘಾತಗಳನ್ನು ದುಃಖದಿಂದ ಹೇಳಿಕೊಂಡರು. ನಾನು ನನ್ನ ತಂದೆ ಪಟ್ಟ ಕಷ್ಟವನ್ನು ಅವರ ಜೊತೆ ಹಂಚಿಕೊಂಡೆ. ಬದುಕಿನ ಯಾತನೆ ಕೆಲವರಿಗೆ ಕಲ್ಲು ಚಪ್ಪಡಿಯಾಗಿ ಪರಿಣಮಿಸಿ ಅವರ ವ್ಯಕ್ತಿತ್ವವನ್ನು ನೆಲಸಮ ಮಾಡಬಹುದು. ಅಸಹನೀಯ ಯಾತನೆಯಿಂದ ಕೆಲವರು ಮುಂದೆ ನಿರಾಶಾವಾದಿಗಳೂ ಸಮಾಜ ಘಾತುಕರೂ ಆಗಬಹುದು. ಆದರೆ ಕೆಲವರ ಪಾಲಿಗೆ ಅದೇ ಯಾತನೆ ಜೀವನ ಸಾಫಲ್ಯಕ್ಕೆ ಗೊಬ್ಬರವೂ ಆಗಬಹುದು. ಲಕ್ಷ್ಮಣರಾಯರಿಗೆ ಆ ನೋವು ಗೊಬ್ಬರವಾಗಿದೆ.

ರಾತ್ರಿ ಮಲಗಿದ್ದಾಗ ಏನೋ ಢಡ್ಡೆಂದು ಸದ್ದಾಗಿ ಚಿಲಕ ತೆರೆದ ಸದ್ದಾಯಿತು. ರಾಯರನ್ನು ಎಳಿಸಿದಾಗ ಅದು ಗಾಳಿಯಿಂದ ಆದ ಸದ್ದೆಂದು ತಿಳಿಯಿತು. ರಾತ್ರಿ ಭಾರಿ ಮಳೆ ಬಿದ್ದು ಬೆಳಿಗ್ಗೆ ಹವೆ ತಂಪಾಗಿತ್ತು. ನನ್ನ ಕಾಲ್ನಡಿಗೆ ದಿನವೇ ತುಮಕೂರಲ್ಲಿ ಮಳೆ ಬಂದು "ತುಮಕೂರಿಗೆ ಮಳೆ ತಂದಿರಿ" ಎಂದು ವೀರಭದ್ರಯ್ಯ ನಗೆಯಾಡಿದ್ದರು. ಅದನ್ನು ಜ್ಞಾಪಿಸಿದಾಗ ರಾಯರು ನಕ್ಕರು.

## ಬಾಣಾವರ

ಬೆಳಗಿನ ಜಾವ ಎದ್ದು (21.5.85) ಅರಸೀಕೆರೆ ಬಿಟ್ಟಾಗ ಸಣ್ಣ ತುಂತುರು ಹನಿ. ರಾಯರು ನನ್ನನ್ನು ಬೀಳ್ಕೊಡುವಾಗ ನರಸಪ್ಪನವರಂತೆಯೇ ಸ್ವಲ್ಪ ಭಾವಾವಿಷ್ಟರಾದರು. ಎಲ್ಲೆಲ್ಲೂ ನೀರು ಬಿದ್ದು ನೆಲ ಹೊಲಗಳೆಲ್ಲ ನೆನೆದಿದ್ದುವು. ಹಳ್ಳಗಳಲ್ಲೆಲ್ಲ ನೀರು. ಸೂರ್ಯೋದಯಕ್ಕೆ ಹೊಂಬಣ್ಣ ಆವರಿಸಿ ಅರಸೀಕೆರೆಯ ಬೆಟ್ಟಗಳ ಹಿನ್ನೆಲೆಗೆ ಒಂದು

ಶೋಭೆಯನ್ನು ತಂದಿತು. ಆ ಬೆಳಗು ನನ್ನ ಮನಸ್ಸಿನ ಆಳಕ್ಕೆ ಇಳಿಯಿತು, ನನ್ನಲ್ಲಿ ಒಂದಾಯಿತು. ಆ ಆನಂದದಲ್ಲಿ "ಬಾ ಫಾಲ್ಗುಣ ರವಿ ದರ್ಶನಕೆ" ಇತ್ಯಾದಿ ಕವನ ಹಾಡಿದ್ದೇ ಹಾಡಿದ್ದು - ಕಿವಿಗಳಿಲ್ಲದ ಮರ, ಗಿಡ, ನೆಲ ನನ್ನ ಹಾಡನ್ನು ಕೇಳಿ ನಲಿದುವು (ನನ್ನ ಹಾಡನ್ನು ಕೇಳಿ ಸಹಿಸಿಕೊಳ್ಳುವುದನ್ನು ನಾನು ಅಭ್ಯಾಸ ಮಾಡಿಕೊಂಡಿದ್ದೆ). ನನ್ನದೇ ಪದ್ಯದ ಸಾಲುಗಳು ಮೂಡಿದುವು. ನನ್ನ ಸಂಸಾರಕ್ಕಾಗಿ ಪ್ರಾರ್ಥಿಸಿದೆ. ಕನ್ನಡಕ್ಕಾಗಿ ಪ್ರಾರ್ಥಿಸಿದೆ, ಗಟ್ಟಿಯಾಗಿಯೇ ಬಾಯಿ ಬಿಟ್ಟು. ದಾರಿಯುದ್ದಕ್ಕೂ ತೆಂಗಿನ ತೋಟಗಳು. ನನ್ನ ಬದುಕಿನ ಉದ್ದಕ್ಕೂ ಪುಸ್ತಕಗಳಲ್ಲಿ ಓದಿದ್ದ, ದೊಡ್ಡವರ ಬಾಯಿಂದ ಕೇಳಿದ್ದ, ಅವರ ನಡೆಯಲ್ಲಿ ಮೂಡಿದ್ದ ನೀತಿಗಳು, ಹಿರಿಯ ಆದರ್ಶಗಳು ನನ್ನ ಅವಿಭಾಜ್ಯ ಅಂಗವಾಗಬೇಕು, ಅಂತರ್ಗತವಾಗಬೇಕು; ಸತ್ಯ, ಅಹಿಂಸೆ, ಪ್ರೀತಿ, ಸ್ನೇಹ, ನಿಸ್ವಾರ್ಥ ಇವು ನನ್ನ ಆಲೋಚನೆಯ ಮಟ್ಟದಿಂದ ಏರಿ ನನ್ನ ಬದುಕಿನ ವಿಧಾನವಾಗಬೇಕು, ನನ್ನ ಬದುಕು ಪಾರದರ್ಶಕವಾಗಿರಬೇಕು, ಒಳ ಹೊರಗಳಿಗೆ ಏನೂ ಭೇದ ಇರಕೂಡದು. ಮತ್ತೆ ಮತ್ತೆ ಮನಸ್ಸಿಗೆ ಹೇಳಿಕೊಂಡೆ. ನನ್ನ ಒಳಗನ್ನು ಹೊಕ್ಕು ಮೂಲೆ ಮೂಲೆಗಳನ್ನು ತಡಕಿ ಅಲ್ಲಿರುವ ಕಸರನ್ನು ಕಿತ್ತು ಹಾಕಬೇಕು. ನನ್ನ ಕನ್ನಡದ ಕೆಲಸವು ಕೀರ್ತಿಯ ಬಯಕೆಯ ಛದ್ಮವೇಷವಾಗಕೂಡದು. ನಾನು ಅಪ್ಪಟ ಮನುಷ್ಯನಾಗಬೇಕು. "ಕಳಬೇಡ...." "ದಯವಿಲ್ಲದ...." "ಚಾಗದ ಭೋಗದ...." ಇಂತಹ ಕವಿ ರಚನೆಗಳು ನನಗೆ ಇನ್ನೂ ಹೆಚ್ಚು ಅರ್ಥಪೂರ್ಣವಾಗಿ ಕಂಡವು. ಬೆಂಗಳೂರಿನಂತಹ ಕಡೆ ವ್ಯಕ್ತಿಗೆ ತನ್ನನ್ನು ಬಿಟ್ಟು ಇತರ ಎಲ್ಲರೂ ಕಾಣಿಸುತ್ತಾರೆ, ಒರೆಗೆ ಹಚ್ಚಲು ಪರೀಕ್ಷಿಸಿ ತೀರ್ಪು ಕೊಡಲು. ಬೆಂಗಳೂರು ಬಿಟ್ಟು ಇಂತಹ ವಾತಾವರಣಕ್ಕೆ ಬಂದಾಗ ಮಾತ್ರ ವ್ಯಕ್ತಿಗೆ ತಾನು ಕಾಣಿಸುತ್ತಾನೆ, ಧೈರ್ಯವಿದ್ದರೆ ಒರೆಗೆ ಹಚ್ಚಲು, ಪರೀಕ್ಷೆಗೆ ಗುರಿ ಮಾಡಿ ತೀರ್ಪು ಕೊಡಲು. "ಮನೆಯೊಳಗೆ ಮನೆಯೊಡೆಯನಿದ್ದಾನೋ ಇಲ್ಲವೋ...." ನನ್ನ ಮನದ ಒಡೆಯ ವಾಸವಾಗಿರಲು ಅರ್ಹವಾಗಿರುವಂತಹ ಮನೆಯಾಗಬೇಕು ನನ್ನ ಮನ. ದಾರಿಯುದ್ದಕ್ಕೂ ಹೊಲಗಳಲ್ಲಿ ಉಳುಮೆ ಆರಂಭವಾಗಿತ್ತು. ಈ ಹಿಂದೆ ಬಿತ್ತಲಾಗಿದ್ದ ನೆಲಗಡಲೆ ನಳನಳಿಸುತ್ತಿತ್ತು. ದಟ್ಟ ದಾರಿದ್ರ್ಯ ಹೆಪ್ಪುಗಟ್ಟಿದ ಮುಖದ ಒಬ್ಬ ಹುಡುಗ ಎರಡು ಕುಳ್ಳು ಬಡಕಲು ಎತ್ತುಗಳ ಮೇಲೆ ಸಣ್ಣ ನೇಗಿಲು ಹೇರಿಕೊಂಡು ಹೊಲಕ್ಕೆ ಹೊರಟಿದ್ದ. ಏನು ಉಳುತ್ತಾನೋ, ದೇವರೇ ಹೇಳಬೇಕು. ದಾರಿಯಲ್ಲಿ ಇಬ್ಬರು ಈಡಿಗರು ಸಿಕ್ಕರು. ಅವರ ಕೆಲಸ ಈಚಲು ಮರಗಳಿಂದ ಸೇಂದಿ ಇಳಿಸುವುದು. ತಿಂಗಳಿಗೆ ನೂರು ರೂಪಾಯಿ ಸಂಬಳ. ಈಚಲು ಮರವೊಂದರ ಕೆತ್ತಿದ ಮುಖದ ಬಳಿ ಮಧುಕರ ಭ್ರಮರಗಳು ಈಚಲ 'ಬಂಡಿ'ಗಾಗಿ ಝೇಂಕರಿಸುತ್ತ ಭಂಡರಾಗಿದ್ದುವು. ಬಹುಶಃ ಭ್ರಮಾಧೀನವೂ ಆಗಿದ್ದುವು. 'ಮಧು' ಎಂದರೆ ಹೂವಿನ ರಸ ('ಬಂಡು') ಎಂದೂ ಅರ್ಥ, ಹೆಂಡ ಎಂದೂ ಅರ್ಥ. ("RUM" ಎಂದರೆ ರಂಭೆ, ಊರ್ವಶಿ, ಮೇನಕೆ ಎಂಬ ಹೆಸರುಗಳ ಇಂಗ್ಲೀಷ್ ಮೊದಲಕ್ಷರಗಳೆಂದು ನನ್ನ ರಸಿಕ ಗೆಳೆಯರೊಬ್ಬರ ವಿವರಣೆ). ಬಾಣಾವರವನ್ನು ಹತ್ತು ಗಂಟೆಗೆ ತಲುಪಿದಾಗ ಸ್ವಲ್ಪವೂ ಆಯಾಸವಾಗಿರಲಿಲ್ಲ. "ಕನ್ನಡಪ್ರಭ"ದ ಗರುಡನಗಿರಿ ನಾಗರಾಜ್ ಅವರ ತಮ್ಮ ಶ್ರೀಕಂಠಯ್ಯನವರು ("ಮರಿ") ಸುಬ್ಬರಾಯರ ಮನೆ ತೋರಿಸಿದರು. ಅವರೆಲ್ಲ ನನ್ನ

ನಿರೀಕ್ಷೆಯಲ್ಲಿದ್ದರು. ಸುಬ್ಬರಾಯರು ಎಪ್ಪತ್ತೈದು ವರ್ಷದ ಭಾರಿ ಆಳು, ತಿಪಟೂರಿನ ಅಪ್ಪಣ್ಣಯ್ಯನವರ ಮಾವ, ಕಂಟ್ರಾಕ್ಟರಾಗಿ ದುಡಿದು ಹಣ ಸಂಪಾದನೆ ಮಾಡಿ ತೋಟ ಮಾಡಿಕೊಂಡು ನೆಮ್ಮದಿಯಾಗಿರುವುದನ್ನು ಅವರ ಬೊಜ್ಜು ಹೇಳುತ್ತಿತ್ತು. ಅವರ ಆಸ್ತಮ ಅವರ ಪೂರ್ಣ ಸೌಖ್ಯಕ್ಕೆ ಅಡ್ಡಿಯಾಗಿತ್ತು. ಯಾವುದೇ ಮನೆಗೆ ಹೋದರೂ ಕೈ ಕಾಲು ತೊಳೆದು ನೇರವಾಗಿ ಅಡುಗೆ ಮನೆ ಬಾಗಿಲಿಗೆ ಹೋಗಿ ಆ ಮನೆಯ ಗೃಹಿಣಿಗೆ ಕೈಮುಗಿದು ನನ್ನ ಪರಿಚಯ-ಹೆಂಡತಿ, ಮಕ್ಕಳು, ತಂದೆ, ತಾಯಿ, ವೃತ್ತಿ ಇವನ್ನು ಹೇಳಿಕೊಳ್ಳುತ್ತಿದ್ದೆ. ಏಕೆಂದರೆ ಆ ಮನೆಯಲ್ಲಿ ಒಂದು ದಿನ ಅನ್ನ ಹಾಕಿ ಸಾಕುತ್ತಿದ್ದವರು ಅಂತಹ ಗೃಹಿಣಿಯರೇ ತಾನೇ. ಶ್ರೀಮತಿ ಸುಬ್ಬರಾಯರು ಕೊಟ್ಟ ರುಚಿಯಾದ ಅಕ್ಕಿ ರೊಟ್ಟಿಯನ್ನು ಸ್ವಲ್ಪ ಅಳತೆ ಮೀರಿಯೇ ತಿಂದೆ. ಬಳಿಕ ಸ್ನಾನ ಮಾಡಿ, ಸ್ವಲ್ಪ ವಿಶ್ರಾಂತಿ ತೆಗೆದುಕೊಂಡ ಮೇಲೆ ಸರಳವಾದ ಊಟ ಆಯ್ತು. "ದಯಮಾಡಿ ವಿಶೇಷ ಏನೂ ಮಾಡಬೇಡಿ, ನಿಮ್ಮ ಎಂದಿನ ಊಟವೇ ಇರಲಿ. ನನ್ನನ್ನು ನಿಮ್ಮ ಮನೆಯವನಂತೆ ಭಾವಿಸಿ" ಎಂದು ಬೇಡಿಕೊಳ್ಳುತ್ತಿದ್ದೆ. ಅವರ ಮಗಳು ಅಳಿಯ ಇಬ್ಬರೂ ಕನ್ನಡ ಎಂ.ಎ. ಪದವೀಧರರು. ಹಿಂದಿನ ದಿನ ತಾನೇ ಅವರ ಮಗಳು ನನ್ನ ಬಗ್ಗೆ ಅಭಿಮಾನದಿಂದ ಹೇಳಿದ್ದರಂತೆ. ಎಲ್ಲರೂ ನನ್ನನ್ನು ಬಹು ಅಭಿಮಾನದಿಂದ ಕಂಡರು. ಸುಬ್ಬರಾಯರು ಆ ಊರಿನ ಪ್ರಾಚೀನ ಸ್ಮಾರಕಗಳ ಬಗ್ಗೆ ವಿಸ್ತಾರವಾಗಿ ತಿಳಿಸಿದರು. ಸಂಜೆ ಅವರ ಮಗ ಮೋಹನ್ ಜೊತೆ ಅಳಿದುಳಿದ ಕೋಟೆ, ಬನಶಂಕರಿ ಗುಡಿ, ಕೇಶವ ಈಶ್ವರ ದೇವಾಲಯಗಳು ಇತ್ಯಾದಿ ನೋಡಿಕೊಂಡು ಬಂದೆ. ಕೋಟೆಯ 'ತೆನೆ'ಗಳ ಮೇಲೆ ಕೆತ್ತನೆ ಸ್ವಲ್ಪ ಉಳಿದಿದೆ. ಕೋಟೆ ಕೆಡವಿ ಪುರಸಭೆಯವರೇ ಸೈಟುಗಳನ್ನು ಮಾಡಿದ ಮೇಲೆ ಕೇಳುವವರು ಯಾರು ? ಕೋಟೆಯ ಅಗಳು ಮುಚ್ಚಿಹೋಗಿದೆ, ಕೋಟೆ ಗೋಡೆಯ ಕಲ್ಲುಗಳೆಲ್ಲ ಮನೆಕಟ್ಟಲು ಬಳಕೆಯಾಗಿವೆ. ಈಗ ಉಳಿದಿರುವ ಕೋಟೆಯ ಭಾಗವನ್ನಾದರೂ ಭದ್ರಗೊಳಿಸಿ ಮುಂದಿನ ಜನಾಂಗಕ್ಕೆ ನೋಡಲು ಉಳಿಸುವ ಅಗತ್ಯವಿದೆ. ಬನಶಂಕರಿ ಭಕ್ತರು ದೇವಾಂಗದವರು. ಬನಶಂಕರಿ ವಿಗ್ರಹಕ್ಕೆ ಕೆಲವೆಡೆ ಇರುವಂತೆ ಮೀಸೆ ಇರಲಿಲ್ಲ. (ಬನಶಂಕರಿಯು ಲೋಕ ಸೃಷ್ಟಿಗೆ ಮೂಲ ಕಾರಣ; ಅವಳು ಗಂಡೂ ಹೌದು, ಹೆಣ್ಣೂ ಹೌದು ಎಂಬುದನ್ನು ತೋರಿಸುವ ವಿಧಾನ ಅವಳ ಶಿಲ್ಪದಲ್ಲಿ ಮೀಸೆ ಸ್ತನ ಎರಡನ್ನೂ ತೋರಿಸುವುದು). ಬನಶಂಕರಿ ವಿಗ್ರಹದ ಮೇಲೆಲ್ಲ ಜಿರಲೆಗಳು. ಅದರ ಅರ್ಚಕ, ಪಾಪ, ಏನೂ ಅರಿಯದ ಒಬ್ಬ ಮುದುಕರು. ಅವರು ನನಗಾಗಿ ಬಾಗಿಲು ತೆರೆದು ದೀಪ ಹಚ್ಚಿ ವಿಗ್ರಹ ತೋರಿಸಿದ್ದಕ್ಕೆ ಅವರಿಗೆ ಕೊಡಲು ಜೇಬಲ್ಲಿ ಎಂಟಾಣೆಯೂ ಇರದೆ ಒದ್ದಾಡಿದೆ. ಕೋಟೆ ಬಾಗಿಲ ಬಳಿ ತೆರೆದ ಯೋನಿಯ ಒಂದು ಹೆಣ್ಣು ವಿಗ್ರಹ ಇದ್ದು ಅದರ ಬಗ್ಗೆ ಪ್ರಚಲಿತವಿರುವ ವದಂತಿ ಬಹು ಸ್ವಾರಸ್ಯವಾಗಿದೆ. ಹಿಂದೆ ಕೋಟೆ ಬಾಗಿಲ ಕಾವಲಿನವರು ಲಂಚ ತೆಗೆದುಕೊಂಡು ಮೋಸದಿಂದ ಶತ್ರುಗಳಿಗೆ ಬಾಗಿಲು ತೆರೆದರೆ ಆ ಹೆಣ್ಣಿನ ಮರ್ಮಾಂಗಕ್ಕೆ ಮೇಸಿಗೆ ಬಳಿದು ಕಾವಲುಗಾರರಿಂದ ನೆಕ್ಕಿಸುತ್ತಿದ್ದರಂತೆ. ಸುಬ್ಬರಾಯರ ಮನೆಯ ಹತ್ತಿರವೇ ಪಾಳಾದ ಎರಡು ದೊಡ್ಡ ಕೊಳಗಳಿವೆ. ಒಂದು ಕೊಳದ ಸಮೀಪ ಒಂದು ಕೆತ್ತನೆ ಕಂಬದ ಮೇಲೆ ಹೊಯ್ಸಳರ ಕಾಲದ ಯಾವುದೋ ಶಿಲಾ ವಿಗ್ರಹದ ಪ್ರಭಾವಳಿಯ ತುಂಡು

ಕುಳಿತಿತ್ತು. ಆ ಪ್ರಭಾವಳಿಯಲ್ಲಿ ಎರಡು ಪುಟ್ಟ ಮೂರ್ತಿಗಳಿದ್ದುವು. ಆ ತುಂಡು ಶಿಲ್ಪವನ್ನು ತಂದು ಸುಬ್ಬರಾಯರ ಮನೆಯಲ್ಲಿಟ್ಟು ಮುಂದೆ ಎಂದೋ ಬಂದು ಕೊಂಡೊಯ್ಯುವ ದುರಾಸೆಯನ್ನು ಸ್ವಲ್ಪ ಕಷ್ಟಪಟ್ಟೇ ಹತ್ತಿಕ್ಕಿದೆ.

ಸಂಜೆ ಕುರುಬ ಜಾತಿಯ ಒಡೆಯರ್ ಬಸಪ್ಪನವರ ಜೊತೆ ಮಾತನಾಡಿದೆ. ಅವರು ಎಲ್ಲ ದೇವರ ಕ್ಯಾಲೆಂಡರ್ ಫೋಟೋಗಳನ್ನು ಕಟ್ಟು ಹಾಕಿದ ಇತರ ಫೋಟೋಗಳನ್ನು ಗೋಡೆ ಮೇಲೆ ಹಾಕಿಕೊಂಡು ಸಿದ್ಧರಾಮೇಶ್ವರ ದೇವಾಲಯದಲ್ಲಿ ನೆಲಸಿ ಗೃಹಶಾಂತಿಗೆ, ಲಗ್ನ ಕಟ್ಟಿಸಲು, 'ಯೋನಿ ಶಾಂತಿ'ಗೆ, ಗ್ರಹಚೇಷ್ಟೆ ನಿಲ್ಲಿಸಲು ಇಷ್ಟಿಷ್ಟು ದರ ಎಂಬ ಫಲಕ ಹಾಕಿಕೊಂಡು ಅದನ್ನು ಒಂದು ವೃತ್ತಿಯಾಗಿ ಮಾಡಿಕೊಂಡಿದ್ದಾರೆ. ಉತ್ತರ ಕರ್ನಾಟಕದಿಂದ ಬಂದ ತೆಳ್ಳಗಿರುವ ಭಾರಿ ಮಾತುಗಾರ ಮುದುಕ ಅವರು. ಇಲ್ಲಿನ ಒಡೆಯರ್ ಜನಾಂಗದಲ್ಲಿ ವಿಧವೆಯರಾದ ಒಡೇರಮ್ಮರು (ಒಡೆಯರ್ ಗೃಹಸ್ಥರ ಗೃಹಿಣಿಯರು) ಮೈಮೇಲಿನ ತಾಳಿ, ಕುಂಕುಮ, ಬಳೆ, ಹೂ ತೆಗೆಯುವ ಪದ್ಧತಿ ಇರುವ ವಿಷಯ ತಿಳಿಯಿತು. ಚಿಕ್ಕನಾಯಕನ ಹಳ್ಳಿ ತಾಲೂಕಿನ ವಿಧವೆ ಒಡೇರಮ್ಮರು ಮುತ್ತೈದೆತನದ ಆ ಚಿಹ್ನೆಗಳನ್ನು ಹಾಗೆಯೇ ಉಳಿಸಿಕೊಂಡಿರುವ ಬಗ್ಗೆ ಆಗಲೇ ಲೇಖನ ಬರೆದಿದ್ದೇನೆ. ಅವರ ಪ್ರಕಾರ, ತಮ್ಮ ಮೈಮೇಲಿನ ಇಷ್ಟಲಿಂಗವೇ ತಮ್ಮ ಯಜಮಾನ. ಕೈ ಹಿಡಿದ ಗಂಡ ಸತ್ತ ಎಂದು ತಾಳಿ, ಕುಂಕುಮ ತೆಗೆದುಹಾಕುವುದು ಸರಿಯಲ್ಲ - ಹಿಂದುಳಿದ ಜನಾಂಗದಲ್ಲೂ ಇರುವ ಆ ಪ್ರಗತಿಪರ ಆಚರಣೆಗಳು ನನಗೆ ಬಹು ಮೆಚ್ಚುಗೆಯಾಗಿದ್ದುವು. ಆದರೆ ಬಾಣಾವರದ ಕುರುಬ ಒಡೆಯರ್ ಜನ ವೀರಶೈವ ಜಂಗಮರನ್ನು ಅನುಸರಿಸ ಹೋಗಿ ಹಲವು ಪ್ರಗತಿಪರ ಆಚರಣೆಗಳನ್ನು ಕಳೆದುಕೊಂಡಿದ್ದಾರೆ ಎಂದು ನನಗನ್ನಿಸಿತು. ಈ ಪ್ರದೇಶದ ಒಡೇರಮ್ಮ ಆತ್ಮವಿಶ್ವಾಸವಿಲ್ಲದ ಸಾಮಾನ್ಯ ಹೆಂಗಸು. ಆಕೆ ತನ್ನ ಗಂಡ ಬದುಕಿರುವಾಗ ಗಂಡನಂತೆಯೇ ಕುರುಬ ಜನಾಂಗದ ಪೌರೋಹಿತ್ಯ ಕಾರ್ಯಗಳನ್ನು ಮಾಡುವಳಾದರೂ ಗಂಡ ಸತ್ತ ಮೇಲೆ ಆ ಅಧಿಕಾರ ಕಳೆದುಕೊಳ್ಳುತ್ತಾಳೆ. ಚಿಕ್ಕನಾಯಕನಹಳ್ಳಿ ಪ್ರದೇಶದ ಒಡೇರಮ್ಮ ವಿಧವೆಯಾದರೂ ಸೌಭಾಗ್ಯತನದ ಲಕ್ಷಣಗಳನ್ನು ಉಳಿಸಿಕೊಳ್ಳುವುದಲ್ಲದೆ ಪೌರೋಹಿತ್ಯ ಕಾರ್ಯಕ್ಕೂ ಅರ್ಹಳಾಗಿರುತ್ತಾಳೆ, ಆ ದೃಷ್ಟಿಯಿಂದ ಅವಳು ಹೆಚ್ಚು ಆತ್ಮ ವಿಶ್ವಾಸ ಇರುವವಳು. ನಾವು ಮಾತನಾಡುತ್ತಿರುವಾಗ ಸುಬ್ಬರಾಯರ ತಮ್ಮ ಕೃಷ್ಣಪ್ಪ ಬಂದು ಹೋದರು. ಮಾಂತ್ರಿಕ ವೃತ್ತಿಯ ಬಸಪ್ಪ ಒಡೆಯರಿಗೆ ಕೃಷ್ಣಪ್ಪನವರ ಬಗ್ಗೆ ಸಕಾರಣ ಸಂದೇಹ. "ಅವರು ನನ್ನ ಬಗ್ಗೆ ಏನು ಹೇಳಿದರು" ಎಂದು ಕೇಳಿಯೇ ಬಿಟ್ಟರು. ಸೂಕ್ಷ್ಮ ಬುದ್ಧಿಯ ಕೃಷ್ಣಪ್ಪನವರಿಗೂ ಬಸಪ್ಪ ಒಡೆಯರ್ ತಮ್ಮ ಬಗ್ಗೆ ಏನೋ ಹೇಳಿರಬೇಕು ಎಂದು ಸಂದೇಹ. ಅವರಿಗೆ ಬ್ರಾಹ್ಮಣರ ಬಗ್ಗೆ ಅಭಿಮಾನ. ಅಂತೆಯೇ ಉಳಿದ ಜಾತಿಯ ಜನರ ಬಗ್ಗೆ ಸ್ವಲ್ಪ ತಿರಸ್ಕಾರ. ಬಾಣಾವರಕ್ಕೆ ಬರುವ ದಾರಿಯಲ್ಲಿ ಸಿಕ್ಕ ಬೆಂಡಿಕೆರೆ ಎಂಬ ಊರಲ್ಲಿ ನಾನು ಕಂಡ ಬಹು ಜನರ ಹಣೆಯ ಮೇಲೆ ವಿಭೂತಿ, ಕೊರಳಲ್ಲಿ ಕರಡಗೆಗಳು ನನ್ನ ಹುಟ್ಟೂರನ್ನು ನೆನಪಿಸಿದ್ದುವು. ಆದರೆ ಆ ಪ್ರದೇಶದ ಹಳ್ಳಿಗಳೆಲ್ಲ ನನ್ನ ಹುಟ್ಟು ಪ್ರದೇಶದ ಹಳ್ಳಿಗಳಿಗಿಂತ ಶುಭ್ರ, ಅಚ್ಚುಕಟ್ಟು. ಸಿರಿಗೆರೆ ಸ್ವಾಮಿಗಳು ಬಂದು ಬೆಂಡಿಕೆರೆಯ "ಎಂತೆಂಥದೋ ಜನಕ್ಕೆ ಕಲ್ಲು ಕಟ್ಟಿದರು" -

ಎಂದು ಕೃಷ್ಣಪ್ಪನವರು ಹೇಳುತ್ತ ಅವರನ್ನೆಲ್ಲ ಹಾಸ್ಯ ಮಾಡಿ, ಆ ಮಾತನ್ನು ಆಡಬಾರದಿತ್ತೆಂದು ಹಲ್ಲು ಕಚ್ಚಿದರು. ಆ ಊರಿನ ಜನರೆಲ್ಲ ಸಾದರು ಎಂದು ಒಬ್ಬ ವೃದ್ಧರು ನನಗೆ ತಿಳಿಸಿದರು. ನನ್ನ ಹಳ್ಳಿಯ ವೃದ್ಧರು ನನಗೆ ಹೇಳಿದ್ದು ಜ್ಞಾಪಕ ಇದೆ. ಚಿತ್ರದುರ್ಗ ಸ್ವಾಮಿಗಳು ಆ ಹಳ್ಳಿಗೆ ಬಂದು ಕುರುಬರು, ಬೇಡರು, ದಲಿತರು ಎಲ್ಲರಿಗೂ ಲಿಂಗ ಕಟ್ಟಿದರು. ಅವರಲ್ಲಿ ಹೆಂಡ ಕುಡಿವ ಅಭ್ಯಾಸವಿದ್ದವರು ತಮಗೆ ಕಟ್ಟಿದ ಲಿಂಗವನ್ನು ಊರ ಹೊರಗಿನ ಕಳ್ಳಿಗಿಡಕ್ಕೆ ಕಟ್ಟಿ, ಹೆಂಡ ಕುಡಿದಾದ ಮೇಲೆ ಮತ್ತೆ ಲಿಂಗ ಕಟ್ಟಿಕೊಳ್ಳುತ್ತಿದ್ದರು. ಲಿಂಗಕ್ಕಿಂತ ಹೆಂಡ ಅವರಿಗೆ ರುಚಿಯಾಗಿದ್ದುದರಿಂದ ಲಿಂಗ ಕಟ್ಟಿಕೊಳ್ಳುವುದನ್ನು ಕ್ರಮೇಣ ಕೈಬಿಟ್ಟರು. ಈ ಮಾತು ಎಷ್ಟು ಸತ್ಯವೋ ! ಒಂದು ಕಾಲಕ್ಕೆ ವೀರಶೈವ ಗುರುಗಳು ಇತರರನ್ನು ತಮ್ಮ ಮತಕ್ಕೆ ಸೇರಿಸಿಕೊಳ್ಳುತ್ತಿದ್ದರು ಎಂಬುದಂತೂ ಸತ್ಯ. ಈಗಲೂ ಅದು ಅಲ್ಲಲ್ಲಿ ನಡೆದಿರುವುದು ಎಲ್ಲರಿಗೂ ತಿಳಿದ ವಿಷಯವೇ.

ತೆಂಗಿನ ತೋಟವು ಕಲ್ಪವೃಕ್ಷಗಳ ನಂದನವೇ ಸರಿ. ಅದರ ಎಳನೀರು, ಕೊಬ್ಬರಿ ಸರಿಯೇ. ಆದರೆ ತೆಂಗಿನ ಕರಟ, ನಾರು, ಕಾಂಡ ಎಲ್ಲವೂ ಉಪಯುಕ್ತ, ಎಲ್ಲವೂ ಹಣ ತರುವಂಥವು. ಐವತ್ತು ತೆಂಗಿನ ಗಿಡ ಇದ್ದರೆ ವರ್ಷಕ್ಕೆ ಸರಾಸರಿ ಎರಡು ಮೂರು ಸಾವಿರ ತೆಂಗಿನಕಾಯಿ. ಐದಾರು ಸಾವಿರ ರೂಪಾಯಿ ಆದಾಯ. ಒಂದು ಚಿಕ್ಕ ಸಂಸಾರವನ್ನು ಹಳ್ಳಿಯಲ್ಲಿ ಹೇಗೋ ನಿಭಾಯಿಸಬಹುದು. ಇನ್ನೂರು ಮುನ್ನೂರು ತೆಂಗಿನ ಮರ ಇದ್ದರೆ ಇನ್ನೂ ಅನುಕೂಲ. ವರ್ಷಕ್ಕೆ ಮೂರು ಒಳ್ಳೆ ಮಳೆ ಬಂದರೆ ಸಾಕು ಅದಕ್ಕೆ. ಹೆಚ್ಚು ಶ್ರಮವಿಲ್ಲದ ಬೆಳೆ ಅದು. ಸುಬ್ಬರಾಯರ ಮನೆ ಮೂಲೆ ಅಟ್ಟಗಳೆಲ್ಲ ತೆಂಗುಮಯ. ಅಡಿಗೆ ಮನೆ, ಸ್ನಾನದ ಮನೆ ಎಲ್ಲ ಕಡೆ ತೆಂಗಿನ ಅವಶೇಷ. ಊಟದಲ್ಲಂತೂ ತೆಂಗಿನ ಕಾಯಿಯ ಅಪ್ಪಟ ಬಳಕೆ - ಚಟ್ನಿ, ಸಾರು, ಪಲ್ಯ ಎಲ್ಲ ಕಡೆ. ಅವರು ತಮ್ಮ ತೆಂಗಿನ ತೋಟ ನೋಡಿಕೊಳ್ಳಲು ಒಬ್ಬ ಮುದುಕನ ಸಂಸಾರ ಇಟ್ಟಿದ್ದಾರೆ. ಆ ಮುದುಕನಿಗೆ ವೃದ್ಧಾಪ್ಯ ಪೆನ್ಷನ್ ಬರುವಂತೆ ಮಾಡಿದ್ದಾರೆ. ಇದರಿಂದಾಗಿ ಆ ಮುದುಕ ತಮ್ಮ ತೋಟದ ಮೇಲಿನ ಮಾಲೀಕತ್ವ ಸ್ಥಾಪಿಸಲು ಯತ್ನಿಸಲಾರ ಎಂಬ ಆಲೋಚನೆಯ ಸುಬ್ಬರಾಯರ ಜಾಣ್ಮನಕ್ಕೆ ನಾನು ಬೆರಗಾದೆ. ತೆಂಗಿನ ನಾಡು ಇತರ ಪ್ರದೇಶಗಳಿಗಿಂತ ವಿಶಿಷ್ಟ. ತಿಪಟೂರಿನ ಒಬ್ಬ ಮಿತ್ರರು ಹೇಳಿದಂತೆ ತೆಂಗು ಜನಕ್ಕೆ ಐಶ್ವರ್ಯವನ್ನು ತಂದಿರುವಂತೆ ನಾಜೂಕನ್ನೂ ತೋರಿಕೆಯನ್ನೂ ಮುಚ್ಚು ಮರೆಯನ್ನೂ ತಂದಿದೆ, ಜಾಣ್ಮನವನ್ನೂ ತಂದಿದೆ. ಸರಳವಾದ ಸುಬ್ಬರಾಯರು ನನ್ನನ್ನು ಬಹು ಪ್ರೀತಿಯಿಂದ ನೋಡಿಕೊಂಡರು. ಮೇಲಿನ ಮಾತುಗಳು ಖಂಡಿತ ಅವರನ್ನು ಗಮನದಲ್ಲಿಟ್ಟುಕೊಂಡು ಆಡಿದ ಮಾತುಗಳಲ್ಲ. ಎಲ್ಲ ಬ್ರಾಹ್ಮಣರಂತೆ ಅವರಿಗೆ ತಮ್ಮ, ತಮ್ಮ ಸಂಸಾರದ ಬಂಧುಗಳ ವಿಷಯ, ಅವರ ಆಸ್ತಿ ಪಾಸ್ತಿ ಸ್ಥಾನ ಇವುಗಳನ್ನು ಹೇಳಿಕೊಳ್ಳುವುದರಲ್ಲಿ ಸಹಜವಾಗಿಯೇ ಆಸಕ್ತಿ. ಶೂದ್ರರಿಗೆ ತಮ್ಮ ಬಗ್ಗೆ ಹೇಳಿಕೊಳ್ಳಲು ಅವರಷ್ಟು ಖಂಡಿತ ಇರುವುದಿಲ್ಲ. ದಲಿತ ವರ್ಗದವರಿಗಂತೂ ತಮ್ಮ ಕುಟುಂಬಗಳ ಬಗ್ಗೆ ಏನು ಹೇಳಿಕೊಳ್ಳಲು ಸಾಧ್ಯ?

ಮುಂದಿನ ಊರು ಮತಿಘಟ್ಟದಲ್ಲಿ ಉಳಿಯುವ ವ್ಯವಸ್ಥೆಯಾಗಿರಲಿಲ್ಲ. ಒಬ್ಬ ಮಹನೀಯರು ಅಲ್ಲಿನ ಒಬ್ಬ ಶ್ರೀಮಂತರಿಗೆ ಒಂದು ಪರಿಚಯ ಪತ್ರ ಕೊಟ್ಟರು. ರಾತ್ರಿ ಲಿಂಗಾಯತರ ಮದುವೆಯ ಒಂದು ತಂಡ ಗಂಗಾಪೂಜೆಗೆ ಅಲ್ಲೇ ಹತ್ತಿರದ ಕೊಳಕ್ಕೆ ಬಂದಿತು. ವಾದ್ಯದವರ ಜೊತೆ ಒಂದು "ದೇಶಮುದ್ರೆ ಬಟ್ಲು" ಕಾಣಿಸಿತು. ಕೊಳದ ಹತ್ತಿರಕ್ಕೆ ನಾನು ಕುತೂಹಲದಿಂದ ಹೋದಾಗ ಅಲ್ಲಿ ಜನ ಕತ್ತಲಲ್ಲಿದ್ದ ಒಂದು ದೊಡ್ಡ ಮಂಡರಗಪ್ಪೆ ಚೀಳನ್ನು ಕೊಲ್ಲುತ್ತಿದ್ದರು. ದೇಶಮುದ್ರೆ ಬಟ್ಲನ್ನು ಲಿಂಗಾಯತರು ಮಾಡಿಸಿಕೊಟ್ಟಿದ್ದರು. ಅವರ ಮದುವೆ, ಸಾವುಗಳ ದಿನ ಊರಿನ ಒಬ್ಬ ಹರಿಜನ ವ್ಯಕ್ತಿ ಅದನ್ನು ಮೆರವಣಿಗೆ ಮುಂದೆ ಹೊತ್ತು ತರಬೇಕು. ಒಂದು ಸರಪಳಿ ತುದಿಯಲ್ಲಿ ಗಂಟೆ, ಆ ಸರಪಳಿಯನ್ನು ಲೋಹದ ದೊಡ್ಡ ಸೌಟಿನ ಆಕಾರದ ದಂಡಕ್ಕೆ ಕಟ್ಟಿರುತ್ತದೆ. ಸೌಟಿನ ಮೇಲೆ ಒಂದು ಚಿಕ್ಕ ಮಂಟಪ. ಅದರ ಒಳಗೆ ಒಂದು ಲಿಂಗ, ಮುಂದೆ ವೃಷಭ. ನಾನು ಇಷ್ಟನ್ನೂ ದೀಪದ ಬೆಳಕಿನಲ್ಲಿ ಪರಿಶೀಲಿಸುತ್ತಿರುವಾಗ ಅಲ್ಲಿದ್ದ ಒಬ್ಬ ವಾದ್ಯದಾತ (ಆತ ಪಾವಗಡದವನು) ಅಪ್ಪಟ ದೇಶಮುದ್ರೆ ಬಟ್ಟಲಲ್ಲಿ ಹದಿನೆಂಟು ಜಾತಿಗಳ ಚಿಹ್ನೆಗಳಿರುವುದನ್ನು ತಿಳಿಸಿದ: ಗಾಣಿಗರ ಗಾಣ, ಲಿಂಗಾಯತರ ಲಿಂಗ ಇತ್ಯಾದಿ. ನಾನು ನೋಡಿದ ಬಟ್ಟಲಲ್ಲಿ ಅಷ್ಟು ಚಿಹ್ನೆಗಳು ಇರಲಿಲ್ಲ. ಅಂತಹ ದೇಶಮುದ್ರೆ ಬಟ್ಟಲುಗಳ ಬಗ್ಗೆ ಸಚಿತ್ರ ಲೇಖನವೊಂದರ ಅಗತ್ಯವಿದೆ.

## ಮತಿಘಟ್ಟ

ಬೆಳಿಗ್ಗೆ (22.5.85) ಕಾಫಿ ಕುಡಿದು ಬಾಣಾವರ ಬಿಟ್ಟೆ. ಅಷ್ಟು ಹೊತ್ತಿಗೆ ಮುಸ್ಲಿಮರ ಮಸೀದಿಯಿಂದ ಧ್ವನಿವರ್ಧಕ ಅಬ್ಬರಿಸಿದರೆ ರಾಮಮಂದಿರದಿಂದ ಅದಕ್ಕೆ ಸ್ಪರ್ಧಿಯೆಂಬಂತೆ ಧ್ವನಿ ಹೊರಟಿತ್ತು. ಪ್ರಾರ್ಥನೆಗಳು ಹೃದಯವನ್ನು ಪರಿಪಾಕಗೊಳಿಸುವ ಬದಲು ಈರ್ಷ್ಯೆ ಸ್ಪರ್ಧೆಗಳನ್ನು ಬೆಳೆಸುವ ಸಾಧನಗಳೆಂಬುದು ನೋವಿನ ಸಂಗತಿ. ಕಾಲಲ್ಲಿ ನಿನ್ನೆ ಮಧ್ಯಾಹ್ನ ಕಾಣಿಸಿಕೊಂಡ ನೋವು ಸದ್ಯ ಮಾಯವಾಗಿತ್ತು. ಒಂದೆರಡು ವೇದ ಮಂತ್ರಗಳನ್ನು ಪಠಿಸಿದೆ - 'ಓಂ ಭೂರ್ಭುವಸ್ಸುವಃ....'' "ಓಂ ಅಸತೋ ಮಾ ಸದ್ಗಮಯ..." ನಿಧಾನಕ್ಕೆ ಹೆಜ್ಜೆ ಹಾಕುತ್ತ ಗಂಟೆಗೆ ಎರಡು ಮೈಲಿಯಂತೆ ನಡೆದೆ. ದಾರಿಯಲ್ಲಿ ಹೆಚ್ಚಿನ ಹಳ್ಳಿಗಳು ಕಾಣಿಸಲಿಲ್ಲ. ಕುಪ್ಪಾಳು ಎಂಬ ಗ್ರಾಮದ ಸಮೀಪ ಒಂದು ಮರದ ಕೆಳಗೆ ಕುಳಿತಿರುವಾಗ ಹೊಲಕ್ಕೆ ಹೋಗುತ್ತಿದ್ದ ಮೂವರು ಹೆಂಗಸರು ಬಂದು ನಿಂತು "ಏನು ತಾತ, ಇಲ್ಲಿ ಕುಳಿತಿದ್ದೀರಿ" ಎಂದು ಮಾತನಾಡಿಸಿದರು. ಚೂಪು ಮುಖದ ಚಾಲೂಕು ಮಾತಿನ ನಲವತ್ತು ವರ್ಷದ ಲಕ್ಷಣವಂತ ಹೆಣ್ಣು ಮಗಳೇ ಮುಖ್ಯವಾಗಿ ಮಾತನಾಡಿಸಿದ್ದು. ಅವಳು ಕೇಳಿದ್ದು "ಬಸ್‌ನಲ್ಲಿ ಏಕೆ ಹೋಗುವುದಿಲ್ಲ"? ಬೆಂಗಳೂರಲ್ಲಿ ಬಸ್ಸಿನಲ್ಲಿ ಆಟೋದಲ್ಲಿ "ಓಡಾಡಿ" ಬೇಜಾರಾಗಿದೆ, ಅದಕ್ಕೇ ಕಾಲ್ನಡಿಗೆಯಲ್ಲಿ ಹೊರಟೆ ಎಂದು ಉತ್ತರಿಸಿದೆ. ಅವರಿಗೋ ಬೆರಗು. ಅವರ ಕಣ್ಣಲ್ಲಿ ಆಗಲೇ "ತಾತ" ಆಗಿದ್ದೇನೆ. ನನಗೋ ಇನ್ನೂ ಐವತ್ತನಾಲ್ಕು ವರ್ಷ. ಗಡ್ಡ ಮೀಸೆ. ಬೇರೆ ಬೆಳೆದುಬಿಟ್ಟಿದೆ. ಅವರಿಗೋ ಎಲ್ಲ ಹಳ್ಳಿಗರಂತೆ ನನ್ನ ಹೆಂಡತಿ ಮಕ್ಕಳ ಆಸ್ತಿಯ

ವಿಷಯ ಕೇಳುವ ಕುತೂಹಲ. ನಾನು ಅಲ್ಲೇ ಕುಳಿತು ಇಡೀ ಗ್ರಾಮೀಣ ವಾತಾವರಣವನ್ನು ಅಂತರಂಗಕ್ಕೆ ಸುರಿದುಕೊಂಡೆ. ಅದು ಅಲ್ಲೇ ಇಂಗಿ ನನ್ನ ಭಾಗವಾಗಿಬಿಟ್ಟಿತು. ನೇಗಿಲುಗಳು ಹೊಲಗಳಲ್ಲಿ ಉಳುತ್ತಿದ್ದುವು, ಬಂಡಿಗಳು ಗಡಗಡ ಸದ್ದಿನೊಡನೆ ಉರುಳುತ್ತಿದ್ದುವು, ಜನ ಕಿಲಕಿಲ ನಗುತ್ತ ನನ್ನತ್ತ ಒಮ್ಮೆ ಕುತೂಹಲದಿಂದ ಕಣ್ಣರಳಿಸಿ ನೋಡಿ ಬುತ್ತಿ ಗಂಟನ್ನು ಎಡಗೈಯಲ್ಲಿ ಎತ್ತಿ ಹಿಡಿದು ಬಲಗೈಯಲ್ಲಿ ನೀರಿನ ತಂಬಿಗೆ ಸಮೇತ ಹೊಲಗಳಿಗೆ ಹೋಗುತ್ತಿದ್ದರು. ಕುಪ್ಪಾಳಿನ ಗೊಬ್ಬರದ ಗುಂಡಿ ವಾಸನೆ ಮೂಗಿಗೆ ಆಪ್ಯಾಯಮಾನವಾಗಿತ್ತು. ಅರೆಬೆತ್ತಲೆ ಹುಡುಗರು ನಿಂತು ನನ್ನನ್ನು ನೋಡಿ ತಮ್ಮ ಆಟಗಳನ್ನು ಮುಂದುವರಿಸಿದರು. ಊರ ಮುಂದೊಂದು ರಸ್ತೆ ಬದಿ ಬಂದು ಪೆಟ್ಟಿಗೆ ಅಂಗಡಿ: ಬೀಡಿ, ಸಿಗರೇಟು, ಬೆಂಕಿ ಪೊಟ್ಟಣ, ಎಲೆ ಅಡಕೆ ಸುಣ್ಣ, ಒಂದಷ್ಟು ಪೆಪರ್‌ಮೆಂಟ್, ಟೀ ಪೊಟ್ಟಣ, ಪುರಿ, ಕಡಲೆ, ಸೋಪು ಇತ್ಯಾದಿ ಅಲ್ಲಿದ್ದುವು. ಅದಕ್ಕೆ ಎಡಗಡೆ ಹತ್ತು ಹದಿನೈದು ಕಂಬಗಳ ಹಾಳು ಮಂಟಪ ಇತ್ತು. ಹೆಸರಿಗೆ ತಕ್ಕಂತೆ ಸ್ವಲ್ಪ ಎತ್ತರದ ಜಾಗದಲ್ಲಿದ್ದ (ಕುಪ್ಪೆ - ಗುಪ್ಪೆ = ದಿಣ್ಣೆ) ಕುಪ್ಪಾಳು ಹಿಂದಿನ ಇತಿಹಾಸವಿರುವ ಹಳ್ಳಿಯಿರಬೇಕೆಂದು ಮುಂದೆ ಕಾಲಿಡುತ್ತಿದ್ದಂತೆ ಶಾಲೆಯ ಮುಂದೆ ಪೂರ್ಣ ಕುಂಭದಿಂದ ಹೊರಟ ಬಳ್ಳಿಗಳನ್ನು ಕೆತ್ತಿದ ಎರಡು ಕಂಬಗಳು ಕಾಣಿಸಿದುವು. ಹಿಂದಿರುಗಿ ಬಂದು ಅಲ್ಲೇ ಕುಳಿತಿದ್ದ 'ಗೌಡ'ರ ಜಾತಿಯ ರಂಗಣ್ಣನನ್ನು ವಿಚಾರಿಸಿದಾಗ ಅವು ನಗರೇಶ್ವರ ದೇವಾಲಯದ ಕಂಬಗಳೆಂದು ತಿಳಿಸಿದ. ಆ ಹಾಳು ಮಂಟಪವೇ ನಗರೇಶ್ವರ. ಅಲ್ಲಿದ್ದ ಶಿವಲಿಂಗ ಭಿನ್ನವಾಗಿತ್ತಂತೆ. ಊರಲ್ಲಿ ವರ್ತಕ ಜಾತಿಯವರಿರಬೇಕೆಂದು ವಿಚಾರಿಸಿದಾಗ ಈಗ ಒಂದೇ ಒಂದು "ಬಣಜಿಗ ಶೆಟ್ಟಿ" ಮನೆತನ ಆ ಊರಲ್ಲಿ ಉಳಿದಿತ್ತು. (ನಕರ, ನಗರ = ವರ್ತಕ). ಊರೊಳಕ್ಕೆ ಕರೆದೊಯ್ದು ರಂಗಣ್ಣ ಆ ಊರ ಈಶ್ವರ ದೇವಾಲಯದ ಬಳಿ ಇದ್ದ ಆರೇಳು ವೀರಗಲ್ಲು, ಶಾಸನಗಳನ್ನು ತೋರಿಸಿದ. ಹೊಂಡದ ಬಳಿಯೂ ವೀರಗಲ್ಲಿದ್ದು, ಅವುಗಳಲ್ಲಿ ಅನೇಕವು ಎಂಟುನೂರು ವರ್ಷದಷ್ಟು ಹಿಂದಿನವಾಗಿದ್ದುವು. ಆಂಜನೇಯ ದೇವಾಲಯದ ಬಳಿ ನೇಗಿಲ ಚಿಹ್ನೆ ಕೆತ್ತಿದ್ದ ರಾಷ್ಟ್ರಕೂಟರ ಕಾಲದ ಶಾಸನವಿತ್ತು. ಇವೆಲ್ಲ ಪ್ರಕಟಗೊಂಡಿವೆಯೆಂಬುದು ಮುಂದೆ ತಿಳಿಯಿತು. (ಇಲ್ಲಿಯ ಶಾಸನಗಳು ರೈಸರ ಎಫಿಗ್ರಾಫಿಯ ಕರ್ನಾಟಿಕ. ಸಂಪುಟ 6, ಕಡೂರು 4-7ರಲ್ಲಿ ಪ್ರಕಟವಾಗಿವೆ. ಹಿಂದೆ ಆ "ಕುಪ್ಪೆಹಾಳು" ಆಸಂದಿ ಎಂಬ ನಾಡಲ್ಲಿತ್ತು). ಕುಪ್ಪಾಳು ಪ್ರಾಚೀನ ಸಂಸ್ಕೃತಿಯ ಮಹತ್ವದ ಜಾಗವೆನ್ನಿಸಿತು. ಅಂತಹ ಜಾಗ ನೋಡದೆ ಹಾಗೇ ಮುಂದೆ ಸಾಗಿದ್ದರೆ ಎಂತಹ ನಷ್ಟವಾಗುತ್ತಿತ್ತು! ಮತ್ತೊಮ್ಮೆ ಬರುತ್ತೇನೆಂದು ರಂಗಣ್ಣನಿಗೆ ಹೇಳಿ ಮತಿಘಟ್ಟಕ್ಕೆ ಬಂದು ಅಲ್ಲಿನ ಶ್ರೀಮಂತರಿಗೆ ನನ್ನ ಪರಿಚಯ ಪತ್ರ ಕೊಟ್ಟೆ. ಅವರು ತಮಗೆ ಆರೋಗ್ಯವಿಲ್ಲವೆಂದು ಹೇಳುತ್ತಲೆ ಪತ್ರವನ್ನು ಓದುತ್ತ, ಹಿಂಬದಿಯ ದನ ಕಟ್ಟುವ ಮನೆಯಲ್ಲಿ ತಿಂಡಿ ಕೊಡಿಸಿ ರಸ್ತೆ ಬದಿಯ ಕೊಠಡಿಗೆ ನನ್ನನ್ನು ಕರೆದೊಯ್ಯಲು ಹೇಳಿದರು. ಅವರ ಹೆಂಗಸರ ನಡತೆಯಲ್ಲೂ ಅಲಕ್ಷ್ಯ ಕಾಣಿಸಿತು. ಅವರ ಸೌಜನ್ಯದ ಲವಲೇಶವೂ ಇಲ್ಲದ ನಡತೆ ನನ್ನ ಸಹನೆ ತಾಳ್ಮೆಗೆ ಒಂದು ಶಿಕ್ಷಣವೆಂದು ಭಾವಿಸಿದೆ. ಲಂಬಾಣಿ ಹುಡುಗ ರಮೇಶ ನನ್ನನ್ನು ರಸ್ತೆ ಬದಿಯ ಒಂದು ಚಿಕ್ಕ ಖಾಲಿ ಮನೆಗೆ ಕರೆದೊಯ್ದ. ಅದರ ಗೋಡೆ ತುಂಬ ತೂತುಗಳು, ನೆಲದ

ಮೇಲೆಲ್ಲ ಎಣ್ಣೆ ಜಿಗುಟು. ಮತ್ತು ಅಲ್ಲೇ ಒಂದು ಚಾಪೆ. ಅಲ್ಲಿ ಪ್ರತಾಪ್ ಎಂಬುವರು ತಮ್ಮ ಸೈಕಲ್ ಅಂಗಡಿ ಇಟ್ಟಿದ್ದು, ಹೆಚ್ಚಿಸಿದ್ದ ಬಾಡಿಗೆ ಕೊಡಲಾರದೆ ಎರಡು ದಿನದ ಹಿಂದೆ ತಾನೇ ಆ ಮನೆ ಖಾಲಿ ಮಾಡಿ ಪಕ್ಕದ ಮನೆಗೆ ಸ್ಥಳಾಂತರಿಸಿದ್ದರು. ಅವರ ತಮ್ಮ ಹರೀಶ್ ಬಂದು ಸ್ನೇಹದಿಂದ ಮಾತನಾಡಿಸಿದ. ಎಸ್.ಎಸ್.ಎಲ್.ಸಿ. ಪಾಸಾಗಿದ್ದರೂ ಕೆಲಸ ಸಿಗದ ಅಣ್ಣನಿಗೆ ಸಹಾಯ ಮಾಡುತ್ತಿದ್ದ. ಒಟ್ಟು ಹದಿನೈದು ಬಾಡಿಗೆ ಸೈಕಲ್ಲುಗಳು, ಒಂದು ಧ್ವನಿವರ್ಧಕ ಸೆಟ್ ಅವರಲ್ಲಿತ್ತು. ದಿನಕ್ಕೆ ಇಪ್ಪತ್ತೈದು ಮೂವತ್ತು ರೂಪಾಯಿ ಸೈಕಲ್‌ಗಳಿಂದ (ಬಾಡಿಗೆ ಮತ್ತು ರಿಪೇರಿಯಿಂದ), ಮದುವೆ ಸೀಸನ್ನಿನಲ್ಲಿ ಧ್ವನಿವರ್ಧಕದಿಂದ ದಿನಕ್ಕೆ ಸರಾಸರಿ ನೂರು ರೂಪಾಯಿ ಆದಾಯ. ಆ ಶ್ರೀಮಂತರ ಇನ್ನೊಬ್ಬ ಮನೆ ಆಳು ಗೋಪಾಲನಾಯಕ ಎಂಬ ಲಂಬಾಣಿ ಹುಡುಗ ತಂದ ಒಂದು ಬಕೆಟ್ ನೀರಲ್ಲಿ ಸ್ನಾನ ಮಾಡಿದೆ. ಗೋಪಾಲನಿಗೆ "ನಿನ್ನದೂ ಬಣಜಾರ್ ಜಾತಿಯೆ?" ಎಂದು ಕೇಳಿದಾಗ, "ಅಲ್ಲ, ನಾನು ಲಂಬಾಣಿ" ಎಂದ. ಅವರಿಗೆ ಬಣಜಾರ್, ಲಂಬಾಣಿ ಒಂದೇ ಹೆಸರೆಂಬುದು ತಿಳಿಯದು. (ನಮ್ಮ ಕಡೆ ಜನರು ಆ ಜಾತಿಯವರನ್ನು 'ಲಂಬಾಣಿ' ಎಂದೇ ಕರೆಯುತ್ತಾರೆ. ಅದು ಸ್ವಲ್ಪ ಹೀನಾರ್ಥ ಸೂಚಕ. ಆ ಜಾತಿಯ ವಿದ್ಯಾವಂತರು ತಮ್ಮನ್ನು 'ಬಣಜಾರ'ರೆಂದು ಕರೆದುಕೊಳ್ಳಲು ಬಯಸುತ್ತಾರೆ). ಅವನದು ಕೋಲುಮುಖ, ಬಡಕಲು ದೇಹ. ತಿಂಗಳಿಗೆ ಇನ್ನೂರು ರೂಪಾಯಿ ಸಂಬಳವೆಂದು ಹೇಳಿಕೊಂಡರೂ ಆ ಬಗ್ಗೆ ನನಗೆ ಸಂದೇಹ ಉಳಿಯಿತು. ಅವನ ವಾಸ ಸಮೀಪದ ತಾಂಡವೊಂದರಲ್ಲಿ. ಟ್ರಾಕ್ಟರ್ ನಡೆಸುವುದು ಇತ್ಯಾದಿ ಎಲ್ಲ ಕೆಲಸ ಅವನದು. ಅದೇ ತಾಂಡವ ರಮೇಶನಿಗೆ ನಾಲ್ವರು ಸೋದರ ಸೋದರಿಯರು. ಅವನ ಹನ್ನೆರಡು ವರ್ಷದ ತಮ್ಮನೊಬ್ಬ ಅಜ್ಜಿಯ ಮನೆಯಲ್ಲಿ ಓದಿಕೊಂಡಿದ್ದವನು ಏನೋ ಬೈದರು ಎಂದು ಮನೆ ಬಿಟ್ಟು ಓಡಿಹೋಗಿದ್ದಾನೆ. ಅವನ ಅಣ್ಣ ಹತ್ತಿರದ ಕಡೂರು ಚಿಕ್ಕಮಗಳೂರು ಅರಸೀಕೆರೆಗಳಿಗೆ ಹೋಗಿ ಹುಡುಕಿ ಬಂದಿದ್ದರೂ ಇನ್ನೂ ಪತ್ತೆ ಆಗಿಲ್ಲ. ದಿನವೂ ಅವರ ಅವ್ವ ಮಗ ಹೋದನೆಂದು ಅಳುತ್ತಿದ್ದಾಳೆ. ಕೆಂಚಪ್ಪ ದೇವರು "ಅವನು ಬದುಕಿದ್ದಾನೆ, ಚೆನ್ನಾಗಿದ್ದಾನೆ" ಎಂದು ಹೇಳಿರುವುದೇ ಅವರಿಗೆಲ್ಲ ಒಂದು ಊರುಗೋಲು. ದೈವ ಇದೆಯೆಂಬ ನಂಬಿಕೆ ಇಲ್ಲದಿದ್ದರೆ ಈ ದೇಶದ ಗತಿ ಏನಾಗುತ್ತಿತ್ತು ? ನನಗೆ ಆ ಬಡ ಹುಡುಗನ ಕತೆ ಕೇಳಿ ಅಂತರಂಗ ಬಹುವಾಗಿ ಮಿಡಿಯಿತು. ಅವನದು ಊರ ಶ್ರೀಮಂತರ ಹಿಟ್ಟಿನ ಗಿರಣಿ ನಡೆಸುವ ಕೆಲಸ. ವರ್ಷಕ್ಕೆ ನಾನೂರ ಐವತ್ತು ರೂಪಾಯಿ ಸಂಬಳ. ಊಟ, ಬಟ್ಟೆ ಎಲ್ಲ ಸಾಹುಕಾರರದು. ಸೈಕಲ್ ಅಂಗಡಿ ಪ್ರತಾಪ್ ಬಂದು "ನಿಮಗೆ ಏನು ಸಹಾಯ ಬೇಕು, ಸರ್" ಎಂದ. ಆ ಮಾತಿನ ಹಿಂದಿನ ಸ್ನೇಹ ಅಕೃತಕವಾದುದು. ಅಷ್ಟರಲ್ಲಿ ಶ್ರೀಮಂತರ ಅಣ್ಣನ ಮಗ ಸಮಾಜಶಾಸ್ತ್ರದ ಎಂ.ಎ. ಪದವೀಧರ ಬಂದರು. ಅವರು ಜಾತಿ ರಿಸರ್ವೇಷನ್ ಬಗ್ಗೆ ಕಟುವಾಗಿ ಮಾತನಾಡಿ ಗುಜರಾತಿನಲ್ಲಿ ಆದಂತೆ ಆಗಬೇಕು ಎಂದರು (ಹರಿಜನರ ಮೇಲೆ ಹಲ್ಲೆ ನಡೆದಿತ್ತು ಅಲ್ಲಿ). ನಾನು ದಲಿತರ ಪರ ಮಾತನಾಡಿ ಒಳ್ಳೆಯ ಕೆಲಸದಲ್ಲಿರುವ ಒಳ್ಳೆಯ ಆದಾಯವಿರುವ ದಲಿತರಿಗೆ ಮಾತ್ರ ಮೀಸಲಾತಿ ತೆಗೆದುಹಾಕಿ, ತಲೆತಲಾಂತರದಿಂದ ಶೋಷಣೆಗೆ ಒಳಗಾಗಿರುವ ಹರಿಜನರಿಗೆ,

ಅವರು ಇತರರ ಜೊತೆ ಸ್ಪರ್ಧಿಸಲಾರರಾದ್ದರಿಂದ ಮೀಸಲಾತಿ ಇರಬೇಕೆಂದು ಅವರಿಗೆ ಹೇಳಿದ್ದು ಹಿಡಿಸಲಿಲ್ಲ. ಅವರು ಹೊರಹೋಗಿ ಯಾರದೋ ಕೈಯಲ್ಲಿ ಟೀ ಕಳಿಸಿದರು. ಚಾಪೆ ಮೇಲೆ ಮಲಗಿ ನಿದ್ದೆ ಮಾಡಿದೆ. ತಾರಾ ಹೋಟೆಲುಗಳಲ್ಲಿದ್ದೇನೆ, ಚಾಪೆ ನೆಲದ ಮೇಲೂ ಮಲಗಿದ್ದೇನೆ ಹಾಯಾಗಿ. ಈ ದೇಹ ಮನಸ್ಸು ಎರಡಕ್ಕೂ ಸುಲಭವಾಗಿ ಒಗ್ಗಿ ಹೋಗಿವೆ. ಒಂದು ಗಂಟೆ ಹೊತ್ತಿಗೆ ಗೋಪಾಲ ಬಂದು ಊಟಕ್ಕೆ ಕರೆದ. ಊಟದ ಮನೆಯ ಟೇಬಲ್ ಮುಂದೆ ಕುರ್ಚಿ ಮೇಲೆ ಕುಳಿತೆ. ಆ ದಿನ ನಂಟರಿಗಾಗಿ ಕರಿಗಡುಬು ಮಾಡಿದ್ದರು. ಹಿಂದಿನ ಅನುಭವದಿಂದಾಗಿ ಅದನ್ನು ನಿರಾಕರಿಸಿದೆ. ನಾನು ನಡೆದೇ ಪ್ರಯಾಣ ಮಾಡುತ್ತಿರುವುದರಿಂದ ಊಟದ ವಿಷಯದಲ್ಲಿ ಎಚ್ಚರ ವಹಿಸಬೇಕಾಗಿದೆ ಎಂಬ ನನ್ನ ವಿವರಣೆ ಮಹಿಳೆಗೆ ಅರ್ಥವಾಗಲಿಲ್ಲ. ಪರ ಊರಿಂದ ಪರಿಚಯ ಪತ್ರ ತಂದುದು, ಒಂದು ಹಾಳು ಕೊಠಡಿಯಲ್ಲಿ ಉಳಿದಿರುವುದು, ನನ್ನ ಗಡ್ಡ ಮೀಸೆ ಇವನ್ನೆಲ್ಲ ಗಮನಿಸಿದ ಅವರು ನನ್ನನ್ನು ಅನಾಥ, ಮತಿಭ್ರಮಿತ ಎಂದೇ ತಪ್ಪಾಗಿ ಗ್ರಹಿಸಿರಬೇಕು. ಸ್ವಲ್ಪ ಸಿಡುಕಿನಿಂದಲೇ ಅನ್ನ ಬಡಿಸಿದರು. ನಾನು ಏನೋ ಹೇಳಬೇಕೆಂದಿರುವಾಗ ಬಡಿಸುತ್ತಿದ್ದ ಹೆಣ್ಣು ಮಗಳನ್ನು ಇನ್ನೊಬ್ಬರು 'ಏನು ಮಾತು' ಎಂದು ಕರೆದರು. ನನ್ನ ಮನಸ್ಸಿಗೆ ತೀವ್ರ ನೋವಾಯ್ತು. ಆದರೆ ನಾನು ಅರಸಿಕೊಂಡು ಬಂದಿರುವುದೇ ಅಂತಹ ಅನುಭವಗಳಿಗಲ್ಲವೇ? ಮನಸ್ಸನ್ನು ಸ್ವಲ್ಪವೂ ಕಹಿಮಾಡಿಕೊಳ್ಳಲಿಲ್ಲ. ಮನೆಯಲ್ಲಿ ಮಧ್ಯಾಹ್ನವೆಲ್ಲ ಕೆಳಗೆ ಕುಳಿತೇ ಹಿಂದಿನ ದಿನಚರಿ ಬರೆದೆ. ಪ್ರತಾಪ್ ನಾಲ್ಕು ಗಂಟೆಗೆ ಒಂದು ಲೋಟ ಕಾಫಿ ತರಿಸಿಕೊಟ್ಟರು. ಕಾಫಿ ಲೋಟ ಕೊಂಡೊಯ್ಯಲು ಬಂದ ಹೋಟೆಲ್ ಬಸಪ್ಪನಿಗೆ "ಕಾಫಿ ಚೆನ್ನಾಗಿತ್ತು" ಎಂದಾಗ ಅವನಿಗೆ ತಬ್ಬಿಬ್ಬಾಯಿತು. ಊರ ಹೊರಗಿನ ಕೆರೆ ಬಳಿಗೆ ಬಹಿರ್ದೇಶಕ್ಕೆ ಹೋದಾಗ ಒಂದು ತಿಪ್ಪೆಯ ಬಳಿ ಮಾಸ್ತಿ ಕಲ್ಲು ಕಾಣಿಸಿತು. ಸಂಜೆಯಾಗುವವರೆಗೆ ದಿನಚರಿ, ಊರಿಗೆ ಪತ್ರ ಬರೆದೆ. ಸಂಜೆ ಅದೇ ಊರಿನ ಕೃಷ್ಣಮೂರ್ತಿ ನನ್ನ ಬಳಿಗೆ ಬಂದು ತಮ್ಮ ಊರಿನ ಚರಿತ್ರೆ ಏನು ಎಂದರು. ಸಮೀಪದ ಮಾಸ್ತಿಕಲ್ಲು ವಿಷಯ ಹೇಳಿದಾಗ ಅವರಿಗೆ ಆಶ್ಚರ್ಯವಾಯಿತು. ಅದನ್ನು ಅವರು ನೋಡಿಯೇ ಇರಲಿಲ್ಲ. 'ಅಲ್ಲಿಗೆ ಹೋಗೋಣ ಬನ್ನಿ, ತೋರಿಸುತ್ತೇನೆ' ಎಂದಾಗ ಏಕೋ ಬರಲು ಹೆದರಿದರು. ಆ ಜಾಗದ ಬಗ್ಗೆಯೋ ಅಥವಾ ಅಪರಿಚಿತ ನನ್ನ ಬಗ್ಗೆಯೋ ಭಯ ತಿಳಿಯಲಿಲ್ಲ. ತಿಪ್ಪೆ ಹತ್ತಿರ ಆಂಜನೇಯನ ಶಿಲ್ಪ, ಸಮೀಪದಲ್ಲೇ ಒಬ್ಬ ಪುರುಷನ ಅಕ್ಕಪಕ್ಕದಲ್ಲಿ ಇಬ್ಬರು ಸ್ತ್ರೀಯರಿದ್ದ ಶಿಲ್ಪ ಶಿಲೆಯಿತ್ತು. ಆ ಪುರುಷನ ಜೊತೆ ಸಹಗಮನ ಮಾಡಿದವರೇ 'ಮಹಾಸತಿ'ಯರು : 'ಮಹಾಸತಿ'ಯು 'ಮಾಸ್ತಿ' ಆಗಿ, 'ಮತ್ತಿ' ಆಗಿ ಮತಿಘಟ್ಟ ಎಂಬ ಹೆಸರು ಆ ಊರಿಗೆ ಪ್ರಾಪ್ತವಾಗಿದ್ದುದು ಸ್ಪಷ್ಟವಾಗಿತ್ತು (ನನ್ನ ಹಳ್ಳಿಯ ಸಮೀಪದಲ್ಲೂ ಮಾಸ್ತಿ ಕಲ್ಲಿಂದ "ಮತ್ತಿ" ಆಗಿದೆಯೆಂಬ ನನ್ನ ಊಹೆ ನಿರರ್ಥಕವಾಗಿರಲಿಲ್ಲ). ಕೆರೆಯ ಕೆಂಪು ನೀರು ಆ ಸಂಜೆ ಮನೋಹರವಾಗಿತ್ತು. ಏರಿಯ ಕೆಳಗೆ, ಅಕ್ಕಪಕ್ಕದ ತೆಂಗಿನ ತೋಟವೊಂದರಿಂದ ಬೆಂಗಳೂರು ಆಕಾಶವಾಣಿ ಪ್ರಸಾರ ಕೇಳಿ ಬರುತ್ತಿತ್ತು. ಜನರು ಮನೆಗಳಿಗೆ ಹಿಂದಿರುಗುತ್ತಿದ್ದರು. ಏರಿಯ ಮೇಲೆ ನಿಂತು "ಇದು ನನ್ನ ಸುಂದರ ಕರ್ನಾಟಕ" ಎಂದುಕೊಂಡೆ. ಹಿಂದಕ್ಕೆ ಬರುವಾಗ ಹುಡುಗರು

ದೊಡ್ಡ ಹಗ್ಗ ಹಿಡಿದು ಬಸವನ ಆಟ ಆಡುತ್ತಿದ್ದರು. ತಿಪ್ಪೆಯಲ್ಲಿ ಹಂದಿಗಳು, ಅದರ ಅಂಚಿನಲ್ಲಿ ಹುಡುಗರು ಇಬ್ಬರು ಆ ಸನ್ನಿವೇಶ ಮರೆತು ಹಿಗ್ಗಿನಲ್ಲಿದ್ದರು. ತಿಪ್ಪೆ ಸಮೀಪವಿದ್ದುದು ಕೆಳ ಬಡಜನರ ಮನೆಗಳು. ಅಲ್ಲಿ ಊರ ಒಳಗೆ ಲಿಂಗಾಯತರ ಕೆಂಪು ಹೆಂಚಿನ ಮನೆಗಳು ಕಂಗೊಳಿಸುತ್ತಿದ್ದುವು. ಇಲ್ಲಿ ಊರ ಹೊರಗೆ, ತಿಪ್ಪೆ ಪಕ್ಕ ಬಡ ಜೋಪಡಿ ಮನೆಗಳಲ್ಲಿ ತಿನ್ನಲೂ ಗತಿಯಿಲ್ಲದ ಜನ ಬದುಕುತ್ತಿದ್ದುವು. ಒಬ್ಬ ನಾಲ್ಕು ವರ್ಷದ ಹುಡುಗ ಓಡಲೂ ಶಕ್ತಿಯಿಲ್ಲದೆ ಬೆತ್ತಲೆಯಾಗಿ ಹೇಗೋ ಕಾಲೆಳೆಯುತ್ತ ಅಳುತ್ತ ನಡೆಯುತ್ತಿದ್ದ ದೃಶ್ಯ ಮನಸ್ಸಿನಲ್ಲಿ ಅಚ್ಚೊತ್ತಿತ್ತು. ಆ ಊರ ಎಂ.ಎ. ಪದವೀಧರ ಯುವಕನಿಗೆ ಎಸ್.ಐ. ಆಗಲು ಇಷ್ಟ: ಕೈಯಲ್ಲಿ ಹಣ ಇರುವುದರಿಂದ ಆದರೂ ಆಗಬಹುದು. ಆ ಹಣ ಹೇಗೂ ದಶಗುಣವಾಗಿ ಶತಗುಣವಾಗಿ ಹಿಂದಕ್ಕೆ ಬರುವುದು ಖಚಿತ.

ರಾತ್ರಿ ಪ್ರತಾಪ್ ಪಕ್ಕದ ಮನೆಯ ಚಿಪ್ಪಿಗ ಪೀರ್ ಜೊತೆ ಬಂದರು. ಪ್ರತಾಪ್‌ಗೆ ಏಕೋ ನನ್ನ ಬಗ್ಗೆ ಗೌರವ ಬಂದಿತ್ತು. “ನಿಮ್ಮಿಂದ ಕಲಿಯುವುದು ಬಹಳ ಇದೆ ಸಾರ್” ಎಂದರು. ಪೀರ್ ಮನೆಯಲ್ಲಿ ಹೆಂಡತಿ ಮತ್ತು ಮೂರು ಮಕ್ಕಳು. ಅವು ಮದುವೆಯ ದಿನಗಳಾದ್ದರಿಂದ ರಾತ್ರಿ ಹನ್ನೆರಡರವರೆಗೆ ಬಟ್ಟೆ ಹೊಲಿಯುತ್ತಾನೆ. ಒಂದು ಹೊಲಿಗೆ ಯಂತ್ರದಿಂದ ಹೇಗೋ ಅವನ ಸಂಸಾರ ನಡೆಯುತ್ತಿದೆ. ಅವನು ಕುಳಿತಿರುವಾಗಲೇ ಅವನ ಕೊನೆಯ ಬಡಕಲು ಮಗಳು ಸಿಂಬಳ ಸುರಿಸುತ್ತಾ ಒಳಗೆ ಬಂದಳು. ಪ್ರತಾಪ್ ಪ್ರಚಾರ ಮಾಡಿದ್ದರಿಂದ ಮೂವರು ಪ್ರೀ-ಯೂನಿವರ್ಸಿಟಿ ಹುಡುಗರು ಬಂದು “ನೀವು ಕತೆ ಹೇಳುತ್ತೀರಂತೆ, ಬಂದೆವು” ಎಂದರು. ಪ್ರತಾಪ್‌ಗೆ ಮಕ್ಕಳನ್ನು ಕರೆಸಿದರೆ ಕತೆ ಹೇಳಬಲ್ಲೆ ಎಂದು ಸೂಚನೆ ಕೊಟ್ಟದ್ದರ ಫಲ ಅದು. ಪ್ರತಾಪ್, ಪೀರ್ ನೆರೆಹೊರೆಯವರಾಗಿ ಸ್ನೇಹದಿಂದ ಇದ್ದರು. ಗೋಪಾಲ ಬಂದು ಊಟಕ್ಕೆ ಕರೆದ. ರಾತ್ರಿ ಊಟದ ಸಮಯದಲ್ಲಿ ನನ್ನನ್ನು ಅನಾದರದಿಂದ ಕಾಣಬಹುದೆಂಬ ನನ್ನ ಊಹೆ ನಿಜವಾಯ್ತು. ನಾನು ಶ್ರೀಮಂತರ ಮನೆಗೆ ಹೋಗುತ್ತಿದ್ದಂತೆ ಅಲ್ಲಿದ್ದ ಒಬ್ಬ ವಿದ್ಯಾವಂತ ಯುವಕ “ನೀವು ಯಾರು?” ಎಂದ. “ನನ್ನದು ಬೆಂಗಳೂರು” ಎಂದೆ. ಒಬ್ಬ ಮಹಿಳೆ ನನ್ನನ್ನು ಆಳುಗಳನ್ನು ಕೂರಿಸಿ ಊಟಕ್ಕೆ ಹಾಕುವ ಜಾಗದಲ್ಲಿ ನೆಲದ ಮೇಲೆ ಕುಳ್ಳಿರಿಸಿ ಒಂದು ತಟ್ಟೆಯಲ್ಲಿ ಅನ್ನ, ಸಾರು ಹಾಕಿದರು. “ಅನ್ನ ಜಾಸ್ತಿಯಾಯ್ತು, ತೆಗೆಯಿರಿ” ಎಂದಾಗ ಸ್ವಲ್ಪ ತೆಗೆದು, “ಮಜ್ಜಿಗೆ ಇಲ್ಲ, ಜಾಸ್ತಿಯಾದರೆ ಬಿಡಿ” ಎಂದು ಹೇಳಿ ಆಕೆ ಹೊರಟು ಹೋದರು. ಅದು ನನ್ನ ನಿಜವಾದ ಪರೀಕ್ಷೆಯ ಕಾಲ. ಕಣ್ಣಂಚಿನಲ್ಲಿ ನೀರು ಕಾಣಿಸಿತು. ಊಟ ಮಾಡಿದೆ. ಆಳು ಹುಡುಗನಿಗೆ ಸಂದರ್ಭ ಅರ್ಥವಾಯಿತು. ಅವನು “ಪರವಾ ಇಲ್ಲ. ಪೂರ್ತಿ ಊಟ ಮಾಡಿ” ಎಂದು ಉಪಚಾರದ ಮಾತಾಡಿದ. ಊಟ ಮುಗಿಸಿ ಆ ಹೆಣ್ಣು ಮಗಳಿಗೆ “ಅಮ್ಮ, ನನಗೆ ಒಂದು ದಿನ ಊಟ ಹಾಕಿದಿರಿ. ನಿಮ್ಮಿಂದ ಉಪಕಾರವಾಯ್ತು” ಎಂದು ಗೌರವದಿಂದ ಕೃತಜ್ಞತೆ ವ್ಯಕ್ತಪಡಿಸಿ, ಯಜಮಾನರಿಗೆ ವಂದನೆ ಸಲ್ಲಿಸಲು ಹೋದೆ. ಹೊರಗಡೆ ಕತ್ತಲಲ್ಲಿ ಕುಳಿತಿದ್ದ ಅವರು ಈ ಬಾರಿ ಗೌರವದಿಂದ ಎದ್ದು, ನನ್ನನ್ನು ಕುರ್ಚಿ ಮೇಲೆ ಕೂರಿಸಿದರು. ಅವರಿಗೆ ನಾನು ಕೃತಜ್ಞತೆ ಹೇಳಿ, ಆರೋಗ್ಯವನ್ನು ಹಾರೈಸಿ ಹಿಂದಕ್ಕೆ ಬಂದೆ. ಅವರಿಗೆ ಕಾರು, ದೊಡ್ಡಮನೆ,

ಆಸ್ತಿ, ಫೋನು ಎಲ್ಲ ಇದೆ. ಏಕೋ, ಮನಸ್ಸಿಗೆ ಕಸಿವಿಸಿ ಆಯ್ತು. ವಾಸ್ತವವಾಗಿ ನನಗೆ ಹಸಿವು ಹಾಗೇ ಇತ್ತು - ಸರಿಯಾಗಿ ಊಟ ಮಾಡಲಾಗಲಿಲ್ಲ. ಅವರ ಮನೆಯ ಯುವಕ ಅಲ್ಲೇ ಒಳಗಡೆ ಸೋಫಾ ಮೇಲೆ ಕುಳಿತು ಹರಟುತ್ತಿದ್ದನು. ಕಲ್ಪವೃಕ್ಷದ ನಾಡಿನಲ್ಲೂ ಇಂಥವರೇ ಎನ್ನಿಸಿತು. ಆದರೂ ಅವರ ಮನೆಗೆ ಒಳ್ಳೆಯದಾಗಲಿ ಎಂದೇ ಹಾರೈಸಿದೆ. ಮನಸ್ಸಿನಲ್ಲಿ ಅಪ್ರಿಯ ಭಾವನೆಗಳು ಬರಕೂಡದು, ಅಂದಿನ ಅನುಭವವನ್ನೂ ಸಮಾಧಾನದಿಂದ ನೀನು ಸ್ವೀಕರಿಸು ಎಂದು ಮನಸ್ಸಿಗೆ ಮತ್ತೆ ಮತ್ತೆ ತಾಕೀತು ಮಾಡಿದೆ. ಆ ಕುಟುಂಬದವರು ಸೌಜನ್ಯ ಅಸೌಜನ್ಯಗಳೆರಡನ್ನೂ ಒಂದೇ ಭಾವನೆಯಿಂದ ಸ್ವೀಕರಿಸಲು ನನ್ನ ಮನಸ್ಸನ್ನು ಅಣಿಗೊಳಿಸುವಲ್ಲಿ ಒಂದು ರೀತಿಯ ಸಹಾಯವನ್ನೇ ಮಾಡಿದ್ದರು.

ವಾಪಸ್ ನಾನಿದ್ದ ಸ್ಥಳಕ್ಕೆ ಬರುವ ಹೊತ್ತಿಗೆ ಆರೆಂಟು ಯುವಕರು ಬಂದಿದ್ದರು. ಅವರಿಗೆ ಗೋಕಾಕ್ ಚಳವಳಿ ವಿಷಯ ಹೇಗೆ ತಾನೇ ಗೊತ್ತಿದ್ದೀತು! ಆದರೆ ರಾಜಕುಮಾರ್ ವಿಷಯ ಗೊತ್ತಿತ್ತು - ಅವರ ಬಗ್ಗೆ ಹೇಳಿ ಎಂದರು. ಕನ್ನಡದ ಸಮಸ್ಯೆಗಳ ಬಗ್ಗೆ ಅವರಿಗೆ ಏನೂ ತಿಳಿದಿರಲಿಲ್ಲ. ಅಮೆರಿಕದ ಬಗ್ಗೆ ಒಂದಷ್ಟು ಕುತೂಹಲ ವ್ಯಕ್ತಪಡಿಸಿದರು. ನಾನು ಅವರಿಗೆ ನನ್ನ ಕೆಲ ಅನುಭವಗಳನ್ನು ಹೇಳಿದೆ. ಇಂತಹ ಯುವಕರನ್ನು ಮುಂದಿನ ಚಳವಳಿಗೆ ಸಿದ್ಧಪಡಿಸಬೇಕು, ಆದರೆ ಕಷ್ಟದ ಕೆಲಸವೆಂದು ಭಾವಿಸಿದೆ. ಎಲ್ಲರಿಗೂ ಉತ್ಸಾಹವಿದೆಯೆಂಬುದು ನಿಜವಾದರೂ ಅವರ ಗಮನವೆಲ್ಲ ಅಮಾರ್ಗ ಮುಖಿಯಾಗಿ ನಿಂತಿದೆ. ಪದವಿ ಪಡೆಯುವುದು, ಹಣ ಸಂಪಾದನೆ ಮಾಡುವುದು ಮುಖ್ಯ. ಮಾರ್ಗ ಯಾವುದು ಬೇಕಾದರೂ ಆಗಬಹುದು. ಅವರಲ್ಲಿ ನನಗೆ ತಪ್ಪು ಕಾಣಿಸಲಿಲ್ಲ. ಅವರು ಕಣ್ಣು ತೆರೆದು ಬದುಕುತ್ತಿರುವ ಸಮಾಜ ಕಲಿಸಿರುವ ಪಾಠ ಅದು. ಬದುಕಿನಲ್ಲಿ ದೊಡ್ಡದೆಂಬುದು ಬೇರೊಂದು ಇದೆ ಎಂಬುದು ಅವರಿಗೆ ತಿಳಿದೇ ಇಲ್ಲವೆಂಬ ಭಾವನೆ ನನಗೆ ಬಂದಿತು.

ರಾತ್ರಿ ಸೆಕೆ ಎಂದು ಬಾಗಿಲು ತೆಗೆದೇ ಮಲಗಿದ್ದೆ. ಚಾಪೆ ಒತ್ತುತ್ತಿದ್ದ ಕಾರಣವೋ ಏನೋ ನಿದ್ದೆ ಬರಲಿಲ್ಲ. ಒಂದು ಗಂಟೆ ಹೊತ್ತಿನಲ್ಲಿ ಬೆಕ್ಕೊಂದು ಬಳಿ ಬಂದು ನಾನು ಹೊರಳಿದ್ದನ್ನು ಕಂಡು ಹಾಗೇ ಓಡಿ ಹೋಯ್ತು. ಆಗಾಗ ರಸ್ತೆಯಲ್ಲಿ ಬಸ್ಸು ಲಾರಿಗಳ ಸದ್ದು ಕೇಳಿಸುತ್ತಿತ್ತು. ಆ ಊರ ಶ್ರೀಮಂತರ ಮನೆ ಅನುಭವ ಮತ್ತೆ ಮತ್ತೆ ಮನಸ್ಸಿಗೆ ಬಂದರೂ, ಮನಸ್ಸಿಗೆ ಮತ್ತೆ ಮತ್ತೆ ಎಚ್ಚರಿಕೆ ಕೊಟ್ಟೆ. ಆ ಅನುಭವ ನನಗೆ ಲಾಭದಾಯಕವೆಂದೇ ನನ್ನ ಭಾವನೆ ಇತ್ತು.

## ಕಡೂರು

ಬೆಳಿಗ್ಗೆ (23.5.85) ಐದಕ್ಕೆ ಹರೀಶನನ್ನು ಎಳಿಸಿದೆ. ಆತ ಹೋಗಿ ಹೋಟಲಲ್ಲಿ ವಿಚಾರಿಸಿ ಹಾಲು ಬರುವುದು ತಡವಾದ್ದರಿಂದ ಕಾಫಿ ಸಿಗಲು ಇನ್ನೂ ಗಂಟೆ ಕಾಯಬೇಕು ಎಂಬ ಸುದ್ದಿಯನ್ನು ತಂದ. ಕಾಯುವುದು ಬೇಡವೆಂದು ಪೀರ್ ಸಾಬನನ್ನು ಎಳಿಸಿದಾಗ - ಬೆಳಿಗ್ಗೆ ಹೋಗುವಾಗ ತನ್ನನ್ನು ಎಳಿಸಬೇಕೆಂದು ತಿಳಿಸಿದ್ದ - ಆತ ಇನ್ನೊಂದು ಹೋಟಲಿಗೆ

ಹೋಗಿ ಕಾಫಿ ತಂದ. ಆತನನ್ನು ನಾನು ಮನಸಾರೆ ವಂದಿಸಿದೆ. ಇಬ್ಬರಿಗೂ ಹಾರ್ದಿಕ ಶುಭವನ್ನು ಕೋರಿ ಹೊರಟೆ.

ದಾರಿಯುದ್ದಕ್ಕೂ ಹುಣಿಸೆ ಮರಗಳು, ಶ್ರೀಮಂತರ ಫಾರಮ್ಮುಗಳು. ರಾತ್ರಿ ನಿದ್ದೆ ಇಲ್ಲ. ಹಿಂದಿನ ದಿನದ ಅನುಭವ ಮತ್ತೆ ಮತ್ತೆ ನೆನಪಿಗೆ ಬಂದಿತು. ಏನೋ ತಪ್ಪು ಮಾಡುತ್ತಿದ್ದೇನೆಯೇ, ಇದೊಂದು ವ್ಯರ್ಥ ಸಾಹಸವೇ ? ಒಬ್ಬ ಸ್ವಾಭಿಮಾನಿಯಾದ ನಾನು (ಎಲ್ಲರಲ್ಲೂ ಆ ಗುಣ ಉಂಟು, ಅವರವರ ಪ್ರಮಾಣಕ್ಕನುಗುಣವಾಗಿ) ಇಂತಹ ಸಂದರ್ಭಗಳಿಗೆ ಬೇಕೆಂದೇ ಒಳಗು ಮಾಡಿಕೊಳ್ಳುವುದು ಸರಿಯೇ ? ಖಿನ್ನತೆ, ನಿರಾಸೆ ಬಹುವಾಗಿ ಕಾಡಿದುವು. ಮರುಕ್ಷಣವೇ ಹೌದು, ಇದು ನಾನಾಗಿಯೇ ಆರಿಸಿಕೊಂಡದ್ದು, ಇದೊಂದು ನಿಜವಾದ ಶಿಕ್ಷಣ ಎಂದು ಸಮಾಧಾನಪಟ್ಟುಕೊಂಡೆ. ನನಗೆ ಒಂದು ದಿನದ ಅನುಭವವೇ ಹೀಗಾದರೆ, ಬಾಳಿನುದ್ದಕ್ಕೂ ಇನ್ನೊಬ್ಬರ ಅಡಿಯಾಳಾಗಿ ಬದುಕುವವರ ಗತಿಯೇನು? ರಮೇಶ್ ನಾಯಕ್, ಗೋಪಾಲ ನಾಯಕರಂತಹ ಹುಡುಗರ ಬಾಳೇನು? ಅವರಲ್ಲಿನ ವ್ಯಕ್ತಿತ್ವ ಎಷ್ಟು ಉಳಿದಿರುತ್ತದೆ? ತೆಂಗಿನ ತೋಟಗಳು ದಾರಿ ಕ್ರಮಿಸಿದಂತೆ ಕಡಮೆ ಆಗುತ್ತಿದ್ದುವು. ಎತ್ತು ಕಟ್ಟಿದ ಒಂದು ಕಮಾನು ಗಾಡಿ ಝಲ್ ಝಲ್ ಎಂದು ಸದ್ದು ಮಾಡುತ್ತ ವೇಗವಾಗಿ ಹಿಂದಿನಿಂದ ಧಾವಿಸಿ ಬರುತ್ತಿತ್ತು. ಅದರ ತುಂಬ ಹೆಂಗಸರು ಮಕ್ಕಳು ಕಿಕ್ಕಿರಿದು ತುಂಬಿಕೊಂಡು ಅವರ ಮುಖಗಳಿಂದ ನಗು ಮಾತು ಚಿಮ್ಮುತ್ತಿದ್ದುವು. ಇಬ್ಬರು ಮಕ್ಕಳು ಗಾಡಿ ಹೊಡೆಯುವವನ ಹಿಂದೆ ಕುಳಿತು ತಾವೇ ಗಾಡಿ ಹೊಡೆಯುವವರಂತೆ ಎತ್ತುಗಳ ಬೆನ್ನು ತಟ್ಟಿ ಅಬ್ಬರಿಸುತ್ತಿದ್ದವು. ಅವರಿಗೆ ಖುಷಿಯೋ ಖುಷಿ. ಇಬ್ಬರು ಯುವಕರು ಗಾಡಿ ಮುಂದೆ ತಮಾಷೆಗೆ ಓಡುತ್ತಿದ್ದರು. ಇಳಿಜಾರಿನಲ್ಲಿ ಎತ್ತುಗಳ ಕೊರಳ ಮೇಲೆ ಭಾರ ಜಾಸ್ತಿ ಬೀಳುವುದೆಂದು ತಿಳಿದು ನಡೆದು ಬರುತ್ತಿದ್ದ ಒಬ್ಬ ಗಂಡಸು ಗಾಡಿ ಹಿಂಭಾಗವನ್ನೇರಿದ. ಯಾವುದೋ ಮದುವೆಗೆ ಹೊರಟಿದ್ದ ಸಂಭ್ರಮದ ಗುಂಪು. ಆ ಮುಗ್ಧ ಹಿಗ್ಗು ಸಂತೋಷ ಸಂಭ್ರಮಗಳು ಬೆಂಗಳೂರಲ್ಲಿ ಕೊಂಡುಕೊಳ್ಳಲು ಇರಲಿ, ನೋಡಲಿಕ್ಕೂ ಸಿಗವು. ಬೆಂಗಳೂರಲ್ಲಿ ಹಣ ಕೊಟ್ಟರೆ ಸುಖ ಸೇರಿದಂತೆ ಎಲ್ಲವೂ ಸಿಗುತ್ತದೆ. ಆದರೆ ತೃಪ್ತಿ ಸಂತೋಷಗಳು ಮಾತ್ರ ಲಭ್ಯವಿಲ್ಲ. ಸದ್ಯ ಹಳ್ಳಿಗಳಲ್ಲಿ ಅವು ಇನ್ನೂ ಕಾಣಲಿಕ್ಕೆ ಸಿಗುತ್ತವೆ. ಹಣದ ಬದಲು ಮನಸ್ಸು ಕೊಟ್ಟರೆ ಅವು ನಮಗೆ ದೊರಕಿಯೂ ದೊರಕುತ್ತವೆ. ಎತ್ತುಗಳ ಕೊರಳ ಗೆಜ್ಜೆ ಸದ್ದು ಕೇಳುತ್ತ ಕೇಳುತ್ತ ನಿಧಾನವಾಗಿ ಮರೆಯಾದರೂ ಗಾಡಿ ಇಳಿಜಾರಿನಲ್ಲಿ ಕಾಣಿಸುತ್ತಲೇ ಇತ್ತು (ನಾನೂ ಹಾಗೆ ಗಾಡಿ ಏರಿ ಯಾರೂ ಕರೆಯದಿದ್ದರೂ ಅವ್ವ ಅಯ್ಯರಿಗೆ ಹೇಳಿ ಮದುವೆಗಳಿಗೆ ಹೋದದ್ದು ಎಷ್ಟೋ ಸಾರಿ).

ಅಲ್ಲೇ ರಸ್ತೆ ಬದಿಯಲ್ಲಿ ಮಣ್ಣಿಂದ ಮುಚ್ಚಿದ ಒಂದು ಗುಡಿ. ಲಾರಿಗಳು ಹೋಗುತ್ತ ಬರುತ್ತ ಒಂದೊಂದು ಸೈಜುಗಲ್ಲನ್ನು ಉರುಳಿಸಿದ್ದರಿಂದ ರಸ್ತೆ ಬದಿಗಳಲ್ಲಿ ಅವೆಲ್ಲ ಚೆಲ್ಲಾಪಿಲ್ಲಿ ಬಿದ್ದಿದ್ದುವು. ತಗ್ಗಿನಲ್ಲಿದ್ದ ಗುಡಿಯ ಹತ್ತಿರ ಹೋಗಿ ಒಳಗೆ ಇಣುಕಿದಾಗ “ಯಾರು” ಎಂದು ಕೂಗಿದ್ದು ಕೇಳಿಸಿ ಬೆದರಿಬಿಟ್ಟೆ. ಆಗ ಸುಮಾರು ಬೆಳಿಗ್ಗೆ ಏಳುವರೆ ಎಂಟು ಗಂಟೆ. ಗುಡಿಗೆ ಬಾಗಿಲಿಲ್ಲ. ಇಣುಕಿ ನೋಡಿದರೆ ಒಬ್ಬ ವ್ಯಕ್ತಿ ಬಸವನ ವಿಗ್ರಹದ ಹತ್ತಿರ ಕುಳಿತಿದ್ದಾನೆ.

ತನಗೆ "ದೊಡ್ಡ ಕಾಯಿಲೆ", ಆಸ್ಪತ್ರೆಗೆ ಹೋಗಲು ಹಣವಿಲ್ಲವೆಂದೂ ಊರ ಜನ ತನ್ನನ್ನು ಇಲ್ಲಿ ಇರಲು ಬಿಟ್ಟಿದ್ದಾರೆಂದೂ ತಿಳಿಸಿದಾಗ ಮೈಮೇಲೆ ಮುಳ್ಳು ಹರಿದಂತಾಯಿತು. ನನ್ನ ಹತ್ತಿರ ಬೇರೆ ಬಟ್ಟೆಗಳಿಲ್ಲ, ಹಣವೂ ಇಲ್ಲ. ಇದ್ದ ಸ್ವಲ್ಪ ಹಣ ಸೋಪು, ಕಾಫಿ-ತಿಂಡಿಗೆ ಸಾಕಾಗುತ್ತಿತ್ತು. ಆದರೆ ಜ್ವರ ಬಂದು ಮಲಗಿದರೆ ಆಗ ಅದೂ ಸಾಕಾಗುತ್ತಿರಲಿಲ್ಲ - ಹಣದ ಬಗ್ಗೆ ಇದ್ದ ಭಯ ಅದು. ಕಲ್ಲು ಮನಸ್ಸು ಮಾಡಿ ಹಾಗೇ ಹೊರಟು ಬಿಟ್ಟೆ. ಬೇಗ ಬೇಗ ನಡೆದೆ. ಅವನ ಜೊತೆ ಮಾತನಾಡುವ ಧೈರ್ಯ ಉಳಿದಿರಲಿಲ್ಲ. ನನ್ನ ನಡವಳಿಕೆ ನನಗೆ ನಾಚಿಕೆ ಉಂಟುಮಾಡಿತು. ಕೆಲವು ಸಮಾಧಾನದ ಮಾತು ಆಡಬಹುದಿತ್ತಲ್ಲವೇ? ಸ್ವಲ್ಪ ದೂರ ಹೋದ ಮೇಲೆ ನನ್ನ ಬಳಿ ಇದ್ದ ಅಲ್ಪ ಹಣವನ್ನು ಕೊಟ್ಟು, ಮುಂದೆ ಯಾರಿಂದಲಾದರೂ ಪಡೆಯಬಹುದಿತ್ತಲ್ಲವೇ? ಎಂದು ಅನ್ನಿಸಿತು. ಆ ವ್ಯಕ್ತಿಯನ್ನು ದೇವರು ಉಳಿಸಬಾರದಿತ್ತು ಎಂದು ದೇವರ ಮೇಲೆ ಕೋಪವೂ ಬಂದಿತು. ಬಡತನ ರೋಗಗಳಿಂದ ಆ ವ್ಯಕ್ತಿ ಬಹಿಷ್ಕೃತನಾಗಿ ಆ ಹೊಲಗಳ ಮಧ್ಯದ ಬಟ್ಟ ಬಯಲಿನ ತಗ್ಗು ಗುಡಿ ಆಶ್ರಯಿಸಿದ್ದಾನೆ. "ಧೂಳ್ತ ತಗೊಂಡು ಹೋಗಿ" ಎಂದಾಗ ಒಳಗೆ ಹೋಗುವ ಮಾತಿರಲಿ, ಅಲ್ಲಿ ನಿಲ್ಲಲೂ ನನಗೆ ಧೈರ್ಯ ಬರಲಿಲ್ಲ. ಅವನ "ದೊಡ್ಡ ಕಾಯಿಲೆ" ನನ್ನನ್ನು ಹೆದರಿಸಿತ್ತು ಎಂಬುದು ಸಂಪೂರ್ಣ ಸತ್ಯ. ನಾನು ತೀರ ನಿಸ್ಸಹಾಯಕನಾಗಿದ್ದೆ - ಅದಕ್ಕೆ ಕಾರಣ ನನ್ನ ದೌರ್ಬಲ್ಯ.

ಮುಂದೆ ಗೆಜ್ಜಲಹಳ್ಳಿ ಎಂಬ ಚಿಕ್ಕ ಹಳ್ಳಿ ಸಿಕ್ಕಿತು. ರಾತ್ರಿ ಸರಿಯಾಗಿ ಊಟವಿಲ್ಲದೆ ಹೊಟ್ಟೆ ಖಾಲಿ ಆಗಿತ್ತು. ಇಲ್ಲಿಯವರೆಗೆ ಎಲ್ಲೂ ಒಂದು ಕಾಸೂ ಖರ್ಚು ಮಾಡಿರಲಿಲ್ಲ. ರಸ್ತೆ ಬದಿಯ ಗುಡಿಸಲು ಹೋಟೆಲಲ್ಲಿ ಟೀ ವಿಚಾರಿಸಿದೆ. ಹಾಲಿಲ್ಲ, ಬರೀ ಕಾಫಿ ಕೊಡುತ್ತೇನೆ ಎಂದಳು ಒಬ್ಬ ಹೆಂಗಸು. ಪಕ್ಕದ ಇನ್ನೊಂದು ಗುಡಿಸಲಲ್ಲಿ ಇಣಿಕಿ ನೋಡಿದರೆ ಅರವತ್ತು ವರ್ಷದ ಅಜ್ಜಿ ಏನೋ ಕಿರುಚುತ್ತ ಪುರಿಗೆ ಅರ್ಧ ಚಟಾಕು ಖಾರದ ಸೇಂಗಾಬೀಜ ಬೆರಸುತ್ತಿದ್ದಳು. ಟೀ ಕೂಡ ಅಲ್ಲಿತ್ತು. ನನ್ನ ಮುಂದೆಯೇ ತಲಾ ನಾಲ್ಕಾಣೆಯ ಏಳು ಸಿಗರೇಟುಗಳಿಗೆ ಪಾವಲಿ ಕಡಿಮೆ ಎರಡು ರೂಪಾಯಿ ಎಂದು ಅಜ್ಜಿ ಸರಿಯಾಗಿ ಲೆಕ್ಕ ಹೇಳಿದರೆ, ಗಿರಾಕಿ ಒಂದೂವರೆ ರೂಪಾಯಿ ಎಂದು ವಾದಿಸಿ ನನ್ನ ಮುಂದೆಯೇ ಲೆಕ್ಕಾಚಾರ ನಡೆದು ಎಲ್ಲ ಸರಿಹೋಯ್ತು. ಆ ಅಜ್ಜಿ ಅಂಗಡಿಯಲ್ಲಿ ಬೀಡಿ, ಸಿಗರೇಟು, ಬೆಂಕಿ ಪೊಟ್ಟಣ, ಮಂಡಕ್ಕಿ, ಅಲ್ಲದೆ ಒಂದು ಪ್ಲಾಸ್ಟಿಕ್ ಚೀಲದಲ್ಲಿ ಖಾರದ ಸೇಂಗ ಬೀಜ, ಇನ್ನೊಂದರಲ್ಲಿ ಚಕ್ಕುಲಿ, ಇನ್ನೊಂದರಲ್ಲಿ ಎಂಥದೋ ಪೆಪ್ಪರ್‌ಮೆಂಟ್ ಇತ್ಯಾದಿ ಇಟ್ಟಿದ್ದಳು. ಮುಂಭಾಗದ ಜೋಡಿಸಿದ ಎರಡು ಕಲ್ಲುಗಳ ಕಟ್ಟೆ ಮೇಲೆ ಒಬ್ಬ ಮುದುಕಿ ತಲೆ ಹತ್ತಿರ 'ಎಲಡಿಕೆ ಕುಟ್ಟಿ' ಇಟ್ಟುಕೊಂಡು ತಲೆತುಂಬ ಬೇರೊಂದು ಸೀರೆ ರೀತಿ ಬಟ್ಟೆ ಹೊದ್ದು ಮಲಗಿತ್ತು. (ಅದು ಮುದುಕ ಆಗಿದ್ದರೂ ಆಶ್ಚರ್ಯವಿಲ್ಲ). ಅಂಗಡಿ ಮುದುಕಿ ಭಾರಿ ಝೋರು. 'ಲೋಟ ತೊಳೆದು ಟೀ ಕೊಡಜ್ಜಿ' ಎಂದು ನಾನು ಕೇಳಿದ್ದಕ್ಕೆ 'ಲೋಟ ತೋಳೀದೇ ಕೊಡ್ತೀನಾ' ಎಂದು ರೋಪ್ಹಾಕಿ, ಎರಡು ಲೋಟಗಳನ್ನು ನನಗಾಗಿ ತಿಕ್ಕಿ ತಿಕ್ಕಿ ತಿಕ್ಕಿ ತೊಳೆದಳು. ಅದು ಮೌನವಾಗಿ ತನ್ನ ಮೋರೆಗೇ ತಿಕ್ಕಿದಂತಿತ್ತು. ಒಂದು ಅಲ್ಯೂಮಿನಿಯಂ ಲೋಟದಿಂದ ಸ್ವಲ್ಪ ಹಾಲು ಬಗ್ಗಿಸಿ ಟೀ ಮಾಡಿ ತೆಗೆದುಕೊಂಡು ಬರುವಷ್ಟರಲ್ಲಿ ಒಬ್ಬ

ಹಾಲು ಹುಡುಗ ಸೈಕಲ್ ಮೇಲೆ ಕಡೂರಿಗೆ ಹೊರಟಿದ್ದ. ವಾಪಸ್ ಬಂದು ಹಾಲು ತಂದು ಕೊಡಲು ಆ ಹುಡುಗನಿಗೆ ಕೂಗಿ ಹೇಳಿದ ಅಜ್ಜಿ ನನಗೆ "ಆ ಹುಡುಗ, ನೋಡಪ್ಪ, ಹೊಟ್ಟೆ ಹಸಿದಿದೆ ಎಂದು ಒಂದು ರೂಪಾಯಿ ತಿಂಡಿ ತಿಂದು ಈಗ ಕರೆದರೆ ಈ ಕಡೆ ತಿರುಗಿ ಕೂಡ ನೋಡಲ್ಲ" ಎಂದಳು. ಪಕ್ಕದ ಗುಡಿಸಿಲಿನವರು ಅಜ್ಜಿಗೆ ಮೂರು ರೂಪಾಯಿ ಕೊಡಬೇಕಿತ್ತು. "ದುಡ್ಡು ಕೇಳಿದರೆ ಪೋಲಿಸ್ ಕರಸ್ತಾನಂತೆ. ಇನ್ನೂ ಯಾಕೆ ಕರಸಿಲ್ಲವೋ" ಎಂದು ಸ್ವಲ್ಪ ಗಟ್ಟಿಯಾಗಿಯೇ ಅವನಿಗೆ ಕೇಳಿಸುವಂತೆ ಹೇಳಿದಳು. "ಈ ಊರಲ್ಲಿ ಎಷ್ಟು ಮನೆ ಇವೆ" ಎಂದು ನಾನು ಕೇಳಿದರೆ, "ನಾನ್ಯಾಕೆ ಎಣಿಸ್ಲಿ" ಎಂದು ಮತ್ತೊಮ್ಮೆ ರೋಪ್ಹಾಕಿ, ಎಲ್ಲವೂ ಒಡ್ಡರವು ಎಂದಳು. ನೀವು ಯಾವ ಜಾತಿ ಎಂದು ಅವಳು ನನ್ನನ್ನು ಕೇಳಿದಾಗ, ನಾನು ಬಿಟ್ಟೇನೆ - "ಲಿಂಗಾಯ್ತರವನು" ಎಂದೆ. ನಾನು ಪ್ರತಿಯಾಗಿ ಅವಳ ಜಾತಿ ಕೇಳಿದ್ದಕ್ಕೆ ಆ ಅಜ್ಜಿ ತನ್ನ ಸೆರಗು ಸರಿಸಿ ಪಟ್ಟೆ ಪಟ್ಟೆಯ ಕುಬಸದ ಮಧ್ಯೆ ಇದ್ದ ಬಿಳೀ ಕರಡಗೆ ತೋರಿಸಿ ತನ್ನ ಸುಕ್ಕು ಮುಖವನ್ನು ಪ್ರಸನ್ನಗೊಳಿಸಿದಳು. ಬಿಳಿ ಕರಡಗೆಯ ಮೂಲಕ ಶಿವನ ನಗೆ ಫಳಕ್ಕನೆ ಕಾಣಿಸಿಕೊಂಡ. ಆ ಅಜ್ಜಿ ಒಡ್ಡರ ಮಧ್ಯೆ ಇದ್ದು ಅವಕಾಶ ಸಿಕ್ಕರೆ ತಾನು ಆ ಜಾತಿಯವಳಲ್ಲ ಎಂಬುದನ್ನು ಮುಖ್ಯವಾಗಿ, ಅಂತೆಯೇ ಲಿಂಗಾಯತರವಳು ಎಂಬುದನ್ನೂ ತೋರಿಸಿಕೊಳ್ಳಲು ಕಾತರಳಾಗಿದ್ದಂತಿತ್ತು. ನನ್ನಿಂದ ಮಂಡಕ್ಕಿ ಟೀಗೆ ಎಂಟಾಣೆ ತೆಗೆದುಕೊಂಡಳು. ಅವಳ ಮಗ ಸೊಸೆ ಪಕ್ಕದ ಹಳ್ಳಿಯೊಂದರಲ್ಲಿದ್ದರೆ ಅಜ್ಜಿ ತನ್ನ ಮೊಮ್ಮಗನೊಂದಿಗೆ ಇಲ್ಲಿ ಹೋಟೆಲ್ ನಡೆಸುತ್ತಿದ್ದಳು. ಆ ಅಜ್ಜಿ ಖಂಡಿತವಾಗಿಯೂ ನಾನು ಮರೆಯಲಾಗದ (-ಬಾರದ) ಪಾತ್ರವಾಗಿ ಪರಿಣಮಿಸಿದಳು.

ಮುಂದೆ ವೇದಾವತಿ ನದಿ ಸಿಕ್ಕಿತು (ಇದೇ ಮುಂದೆ ಬಳ್ಳಾರಿ ಜಿಲ್ಲೆಯ 'ಹಗರಿ'. ಚಿನ್ನ ಹಗರಿ, ಚಿಕ್ಕ ಹಗರಿ ಎಂಬ ಬೇರೆ ಹಳ್ಳಗಳೂ ಇಲ್ಲುಂಟು). ನನ್ನ 'ಪ್ರಾತರ್ಬಾಧೆ' ಮುಗಿಯಿತು. ಪಕ್ಕದ ಕಡೂರಿನ ವಿನಾಯಕ ಆಯಿಲ್ ಮಿಲ್ಲಿನಲ್ಲಿ ನನ್ನ ನಿರೀಕ್ಷೆಯಲ್ಲಿದ್ದ ಮಂಜುನಾಥ್ ಅದರ ಮಾಲೀಕರಾದ ವೀರಭದ್ರಪ್ಪನವರ ಮನೆಗೆ ಕರೆದೊಯ್ದರು. ಅವರ ಆದರಪೂರ್ಣ ಸೌಜನ್ಯ ನನ್ನನ್ನು ಆಕರ್ಷಿಸಿತು. ಶ್ರೀಮಂತರೂ ಜನಾನುರಾಗಿಗಳೂ ಆಗಿದ್ದ ಅವರು ಹಿಂದೆ ಕಡೂರಿನ ಪುರಸಭಾಧ್ಯಕ್ಷರೂ ಆಗಿದ್ದರು. ಅವರ ಪತ್ನಿ ನನ್ನ ಹಳ್ಳಿಯ ಪಕ್ಕದ ಆಲೂರಿನ ನನ್ನ ಗೆಳೆಯ ಗುರುಮೂರ್ತಿಯ ತಂಗಿ ಎಂದು ತಿಳಿದು ಆಶ್ಚರ್ಯ ಸಂತೋಷ ಎರಡೂ ಆದುವು. ತಮ್ಮ ದೊಡ್ಡ ಮನೆಯ ಮಹಡಿಯಲ್ಲಿ ನನಗೆ ಉಳಿಯಲು ಪ್ರತ್ಯೇಕ ಕೊಠಡಿ ಬಿಟ್ಟುಕೊಟ್ಟರು.

ಅವರ ಆಯಿಲ್ ಮಿಲ್ಲಿನಲ್ಲಿ ಐವತ್ತು ಜನ ಕೆಲಸಗಾರರು. ದಾವಣಗೆರೆ ಕಡೆಯಿಂದ ಸೇಂಗಾ ತರಿಸಿ ಎಣ್ಣೆ ತೆಗೆದು ಡಬ್ಬಕ್ಕೆ ತುಂಬಿ ಕಳಿಸುತ್ತಾರೆ. ಕೊಬ್ಬರಿ ವ್ಯಾಪಾರವೂ ಉಂಟು. ಸಮೀಪದ ಹಳ್ಳಿಯಲ್ಲಿ ಸಾಕಷ್ಟು ಗದ್ದೆ ತೋಟಗಳೂ ಉಂಟು. ಶ್ರೀಮಂತಿಕೆ, ಸಜ್ಜನಿಕೆ ಎರಡೂ ಒಟ್ಟಿಗೆ ಇರಬಲ್ಲುವೆಂಬುದಕ್ಕೆ ಅವರೊಂದು ಸಾಕ್ಷಿ.

ಕಡೂರಿನ ಕೋಟೆಯಲ್ಲಿ ಅವರ ಮನೆ. ಈಗ ಕೋಟೆಯ ಸ್ವಲ್ಪ ಭಾಗ ಕಾಣಿಸುತ್ತದೆ. ಅಲ್ಲೇ ಸಮೀಪ ಜಿ.ಬಿ. ಆಂಜನೇಯನ ಗುಡಿ. "ಜಿ.ಬಿ." ಎಂದರೆ ಕೆಲವರ ಪ್ರಕಾರ

"ಗೇಟ್ ಬಳಿ", ಇನ್ನು ಕೆಲವರ ಪ್ರಕಾರ "ಗ್ರೌಂಡ್ ಬಿಲೊ". ಆ ದೇವರು ನೆಲಮಟ್ಟಕ್ಕಿಂತ ಕೆಳಗಿರುವುದು ನಿಜ. ಸಮೀಪದ ಪೋಲಿಸ್ ಠಾಣೆ ಮುಂದೆ ಕೆಲವು ಸುಂದರ ಹೊಯ್ಸಳ ಶಿಲ್ಪಗಳಿವೆ. ಸಂಜೆ ಕಡೂರಿನ ಸೌಜನ್ಯಪರ ವ್ಯಕ್ತಿ, ಪತ್ರಕರ್ತ ಬಿ.ಎಸ್. ಸೂರ್ಯನಾರಾಯಣರು ಸಿಕ್ಕರು. ಪುಸ್ತಕ ವ್ಯಾಪಾರದಲ್ಲಿ ಹಿಂದೆ ಆಗುತ್ತಿದ್ದ ಸಂಪಾದನೆ ಈಗ ಇಳಿದಿದೆ ಎಂದರು. ಕಷ್ಟದಲ್ಲೇ ಕಾಲ ಕಳೆದು, ಶ್ರೀಮಂತರಾಗದೆಯೇ ಇದ್ದುದರಲ್ಲಿ ನೆಮ್ಮದಿ ಕಂಡವರು. ಅವರ ಹೆಸರು ಸಾಹಿತ್ಯ ವಲಯಗಳಲ್ಲಿ, 'ಪ್ರಜಾವಾಣಿ'ಯ ಓದುಗರ ಓಲೆ ವಿಭಾಗದಲ್ಲಿ ಕನ್ನಡಿಗರಿಗೆ ಚಿರಪರಿಚಿತ.

ಸಂಜೆ ಸುಬ್ಬರಾವ್ ಎಂಬ ನಿವೃತ್ತ ಮಾಧ್ಯಮಿಕ ಶಾಲೆಯ ಉಪಾಧ್ಯಾಯರೊಬ್ಬರು ತಮ್ಮ ಬದುಕಿನ ಬವಣೆಯ ಒಂದು ಚಿತ್ರ ಕೊಟ್ಟರು. ಅವರಿಗೆ ಪೆರಾಲಿಸಿಸ್ ಹೊಡೆದು ಎರಡು ಕಾಲೂ ಬಿದ್ದು ಹೋಗಿ ಎಂಟು ಹತ್ತು ಸಾವಿರ ಖರ್ಚು ಮಾಡಿದರೂ ವಾಸಿಯಾಗಲಿಲ್ಲ. ಒಂದು ದಿನ ಅವರ ಮನೆ ಮುಂದೆ ಕುರುಭರ ಜಾತಿಯ ಚಿಂತಾಮಣಿಯ ಒಬ್ಬ ಎಂ.ಬಿ.ಬಿ.ಎಸ್. ಪದವೀಧರ ಬಂದ. ಆತನಿಗೆ ವೈರಾಗ್ಯ ಬಂದು "ವಗ್ಗಯ್ಯ" ಆಗಿ ತಲೆ ಮೇಲೆ ಕಂಬಳಿ ಟೋಪಿ, ಮೈಮೇಲೆ ಕಂಬಳಿ ಹೊದಿಕೆ, ಕೊರಳಲ್ಲಿ ಕವಡೆಸರ ಧರಿಸಿದ್ದ. ತಾನು ದೈವಾಜ್ಞೆ ಪಡೆದು ಬಂದುದಾಗಿ ಹೇಳಿ, ಔಷಧಿ ಕೊಟ್ಟು ಪೆರಾಲಿಸಿಸ್ಸನ್ನು ವಾಸಿಮಾಡಿದನಂತೆ. ಇವರು ಆತನಿಗೆ ಹಣ ಕಳುಹಿಸಿದಾಗ ಆತ ಅದನ್ನು ನಿರಾಕರಿಸಿ, ಮೈಲಾರ ದೇವರ ಗುಡ್ಡಕ್ಕೆ ಹೋಗಿ ದೇವರ ಸೇವೆ ಮಾಡುವಂತೆ ತಿಳಿಸಿದನಂತೆ. ಈಗ ಅವರು ತಕ್ಕಮಟ್ಟಿಗೆ ಓಡಾಡುತ್ತಿದ್ದಾರೆ. ಬಡತನ ರೋಗ ವೃದ್ಧಾಪ್ಯಗಳಲ್ಲಿ ಅವರಿಗಿರುವ ಏಕೈಕ ಅವಲಂಬನೆ ದೈವ, ದೈವೀ ಶ್ರದ್ಧೆ.

ಬೆಳಿಗ್ಗೆ ಕಂಡ ಒಂದು ಟ್ರಾಕ್ಟರ್ ಎಂಜಿನ್ ಮೇಲೆ ಎರಡು ಎತ್ತಿನ ಲೋಹದ ವಿಗ್ರಹಗಳನ್ನು ಬೆಸುಗೆ ಹಾಕಿಸಿದ್ದು ನನಗೆ ಮೆಚ್ಚುಗೆಯಾಯ್ತು. ಎತ್ತಿನ ಕೆಲಸವನ್ನು ಟ್ರಾಕ್ಟರ್ ಹತ್ತು ಪಾಲು ನೂರು ಪಾಲು ಮಾಡಿದರೂ ಆಧುನಿಕತೆಯು ಪರಂಪರೆಯನ್ನು ಮರೆಯಲು ಸಾಧ್ಯವೇ ಇಲ್ಲ. ಎತ್ತುಗಳನ್ನು ಸಾಂಕೇತಿಕವಾಗಿ ಮುಂದಿಟ್ಟುಕೊಂಡು ಟ್ರಾಕ್ಟರಿಂದ ಕೆಲಸ ಮಾಡಿಸುವ ಮನೋಭಾವ ನನಗೆ ಬಹು ಮೆಚ್ಚುಗೆಯಾಯ್ತು.

ಆಗ ನಾನು ಎರಡನೆಯ ಆನರ್ಸ್ ವಿದ್ಯಾರ್ಥಿಯಾಗಿ ಪರೀಕ್ಷೆ ಬರೆದಿದ್ದೆ. ಆ ಬೇಸಗೆ (1952) ಬೇಲೂರಲ್ಲಿ ಡಾ. ಎಸ್.ಸಿ. ನಂದಿಮಠರ ಅಧ್ಯಕ್ಷತೆಯಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನ ನಡೆಯುವುದರಲ್ಲಿತ್ತು. ನಾನು ದಾವಣಗೆರೆಯಿಂದ ರೈಲಲ್ಲಿ ಹೊರಟು, ರಾತ್ರಿ ಕಡೂರಲ್ಲಿಳಿದು ಅಲ್ಲಿಂದ ಬೇಲೂರು ಬಸ್ಸು ಹಿಡಿದೆ. ಆಗ ಸುಮಾರು ಎರಡು ಗಂಟೆ ಇರಬಹುದು. ಹಿಂದಿನ ಸೀಟಲ್ಲಿ ಕುಳಿತಿದ್ದ ನನಗೆ ಕಂಡಕ್ಟರ್ "ನೋಡಿ ನೋಡಿ" ಎಂದ. ತೂಕಡಿಸುತ್ತಿದ್ದ ನಾನು "ಏನು ಏನು" ಎಂದೆ ಗಾಬರಿಯಿಂದ. ಒಂದು ಹುಲಿ ರಸ್ತೆಯನ್ನು ದಾಟಿ ಮರೆಯಾಗಿತ್ತು. ನಿಜವಾದ ಕಾಡು ಹುಲಿ ನೋಡುವ ಅವಕಾಶ ಕಳೆದುಕೊಂಡು ಪೇಚಾಡಿದೆ. ಆಗಾಗ್ಗೆ ತಾನು ಹುಲಿ ನೋಡುತ್ತಿರುವ ಸಂಗತಿಯನ್ನು ಕಂಡಕ್ಟರ್ ನಿರ್ಭಾವವಾಗಿ ತಿಳಿಸಿದ.

## ಬೀರೂರು

ರಾತ್ರಿ ತಕ್ಕಮಟ್ಟಿಗೆ ನಿದ್ದೆ ಬಂದಿತು. ಬೆಳಿಗ್ಗೆ (24.5.85) ವೀರಭದ್ರಪ್ಪನವರು ಬೀರೂರಲ್ಲಿ ಉಳಿಯಲು ಎರಡು ಪರಿಚಯ ಪತ್ರ ಕೊಟ್ಟರು. ಕಡೂರಿಂದ ಬೀರೂರಿಗೆ ನಾಲ್ಕು ಮೈಲಿ ಮಾತ್ರ. ಬೆಳಿಗ್ಗೆ ಆರು ಗಂಟೆಗೇ ನಿಧಾನಕ್ಕೆ ಹೊರಟೆ. ಏಕೋ, ತೀರ ಉತ್ಸಾಹಿತನಾಗಿದ್ದೆ. ಊರ ಹೊರವಳಯದಲ್ಲಿ ಒಳ್ಳೆಯ ಅಡಕೆ ತೋಟಗಳು. ಎರಡು ನಗರಗಳು ಬಹುತೇಕ ಸೇರಿಕೊಂಡಂತಾಗಿವೆ. ಎರಡು ನಗರಗಳ ಹೆಚ್ಚು ಕಡಮೆ ಅರ್ಧ ಮಧ್ಯದಲ್ಲಿ ದಾರಿಯ ಬಲಕ್ಕೆ, ಶರಾವತಿ ವಿದ್ಯುತ್ ಉತ್ಪಾದನಾ ಕೇಂದ್ರದಿಂದ ಹೊರಟ ಕಂಬ ತಂತಿಗಳ ರಸ್ತೆ ದಾಟಿರುವ ಕಡೆ ಎರಡು ದಿಬ್ಬಗಳು, ನಿಂತ ಕಲ್ಲುಗಳು, ಚಲ್ಲುವರಿದ ಕಲ್ಲು ತುಂಡುಗಳು ಕಾಣಿಸಿದುವು. ಏನೋ ವಿಶೇಷವಿರಬೇಕೆಂದು ಹೋಗಿ ನೋಡಿದರೆ, ಯಾವುದೋ ಭೂಗತ ದೇವಾಲಯದ ಕುರುಹುಗಳು ಕಾಣಿಸಿದುವು. ನಾಗರ ಕಲ್ಲುಗಳು, ನಾನೂರು ವರ್ಷದ ಹಿಂದಿನ ಶಿಲ್ಪಗಳು ಕಾಣಿಸಿದುವು. ಅಲ್ಲಿ ಹಿಂದೆ ಒಂದು ಗ್ರಾಮವಿತ್ತೆಂದು ಆಮೇಲೆ ತಿಳಿಯಿತು. ಆ ಪ್ರದೇಶದ ರಾಜಕೀಯದಿಂದಾಗಿ ಅರ್ಧಕ್ಕೇ ನಿಂತ ಕಾಲೇಜು ಕಟ್ಟಡ ಕಾಣಿಸಿತು. ಅದರ ಪಕ್ಕದ್ದೇ ಅಮೃತ ಮಹಲ್ ಪಶುಪಾಲನಾ ಕೇಂದ್ರ. ಅಲ್ಲಿನ ವೈದ್ಯರಾದ ಡಾ. ಜಯರಾಮರ ಪತ್ನಿ ಜಯಶ್ರೀ ನನ್ನ ವಿದ್ಯಾರ್ಥಿನಿ. ಜಯಶ್ರೀ ಅವರ ಮುಖ ನನಗೆ ಮರೆತು ಹೋಗಿತ್ತು. ಡಾ. ಜಯರಾಂ ಅವರ ವಿಷಯವನ್ನು ದಕ್ಷಿಣಾಮೂರ್ತಿ ನನಗೆ ತಿಳಿಸಿದಾಗ, ಕರ್ನಾಟಕ ಸರ್ಕಾರದ ಆ ಪಶುಪಾಲನಾ ಕೇಂದ್ರಕ್ಕೆ ಹೋಗಿ ಬರಬೇಕೆಂದು ನಿರ್ಧರಿಸಿದ್ದೆ. ಡಾಕ್ಟರ್ ದಂಪತಿಗಳು ನನ್ನನ್ನು ತೀರ ಆದರದಿಂದ ಕಂಡರು. ನಾನು ಬರುವ ವಿಷಯ ಅವರಿಗೆ ಗೊತ್ತಿದ್ದುದರಿಂದ ಅವರು ನನ್ನ ನಿರೀಕ್ಷೆಯಲ್ಲಿದ್ದರು. ಜಯಶ್ರೀ ಸಂಭ್ರಮದಿಂದ ತಮ್ಮ ಗೆಳತಿಯರಿಗೆಲ್ಲ ಹೇಳಿದ್ದರಿಂದ ನಾನು ಹೋಗುತ್ತಿದ್ದಂತೆ ಆ ಫಾರಮ್ಮಿನ ಮಕ್ಕಳೆಲ್ಲ ಘೇರಾಯಿಸಿದರು. ಆ ಇಬ್ಬರ ಸ್ನೇಹಪರ ನಡವಳಿಕೆಯಿಂದ ಇಡೀ ಫಾರಂ ಒಂದು ಕುಟುಂಬದಂತೆ ವರ್ತಿಸುತ್ತಿತ್ತು.

ಆ ಎಂಟುನೂರು ಎಕರೆಗಳ ಫಾರಂನಲ್ಲಿದ್ದುದು ಇಪ್ಪತ್ತೈದು ಕುಟುಂಬಗಳು ಮಾತ್ರ. ಇದರಿಂದ ಅವರೆಲ್ಲರೂ ಸ್ನೇಹದಿಂದ ಇರುವುದು ಅನಿವಾರ್ಯವೂ ಆಗಿತ್ತು. ಸುತ್ತ ಮರಗಳು, ಜೋಳ ಮೇವು ಬೆಳೆಯಲು ಹೊಲಗಳು, ಬಯಲುಗಳು. ಎದುರಿಗೆ ಹತ್ತು ಹದಿನೈದು ಮೈಲಿ ದೂರದಲ್ಲಿ ಒಂದು ದೊಡ್ಡ ಗಿರಿ ಪಂಕ್ತಿ. ಒಂದೆರಡು ಕಿಲೋ ಮೀಟರ್ ದೂರಕ್ಕೆ ಬೀರೂರು ನಗರದ ಸರಹದ್ದು. ಇಡೀ ವಾತಾವರಣ ಬಹು ಆಪ್ಯಾಯಮಾನ. ಆ ದಿನ ಅನುಭವಿಸಿದ ಬೇಸಿಗೆಯ ತಂಗಾಳಿಯಂತೆ ಅದು ತೀರ ಆಹ್ಲಾದಕರವಾಗಿತ್ತು. ಜಯಶ್ರೀ ಅಲ್ಲಿದ್ದ ಎಲ್ಲ ಹೆಂಗಸರಿಗೂ, ಕೆಲಸಗಾರರ ಹೆಂಗಸರಿಗೂ ಹೆಣಿಗೆ ಕಸೂತಿ ಕೆಲಸಗಳನ್ನು ಕಲಿಸಿದ್ದರು. ಅವರ ಸರ್ಕಾರಿ ಕ್ವಾರ್ಟರ್ಸ್ ಮನೆ ಹಬ್ಬ, ಉತ್ಸವ, ಆಟಗಳ ಕೇಂದ್ರವಾಗಿತ್ತು. ಆ ಫಾರಂನಲ್ಲಿದ್ದ ನೂರಾರು ಬೇಲದ ಹಣ್ಣಿನ ಮರಗಳನ್ನು ಹರಾಜಿಗೆ ಹಾಕಿ ಗುತ್ತಿಗೆ ಕೊಟ್ಟಿದ್ದರೂ ಜಯರಾಮ್ ಮನೆಯ ಮುಂಭಾಗದ ಮರವನ್ನು ಮಾತ್ರ ಮಕ್ಕಳಿಗೆ ಬಿಡಿಸಿದ್ದರು. ಆ ಬೇಲದ ಹಣ್ಣುಗಳು ಮಕ್ಕಳ ಸೂಜಿಗಲ್ಲು. ಮನೆಗಳಿಗೆ ಬಾಡಿಗೆ ಇಲ್ಲ, ಅಡಿಗೆಗೆ ಬಿಟ್ಟಿ

ಗ್ಯಾಸ್ (ಗೋಬರ್ ಗ್ಯಾಸ್ ಪ್ಲಾಂಟಿನದು). ನೀರಿನ ಸೌಕರ್ಯ ಯಥೇಷ್ಟ. ಶಾಲಾ ಮಕ್ಕಳಿಗಾಗಿ ಬಲಿಷ್ಠ ಎತ್ತುಗಳು ಎಳೆಯುವ ಕಮಾನು ಬಂಡಿಯೊಂದು ದಿನವೂ ಬೀರೂರಿಗೆ ಹೋಗಿ ಬರುವ ಏರ್ಪಾಟು - ಎಲ್ಲ ಅನುಕೂಲಗಳೂ ಅಲ್ಲಿದ್ದವು. ಜಯರಾಮ್ ಬಂದಮೇಲೆ ಎಲ್ಲ ಕಡೆ ವಿದ್ಯುದ್ದೀಪ ಹಾಕಿಸಿ ರಸ್ತೆ ಮಾಡಿಸಿ ಹಲವರಿಗೆ ಕೆಲಸವನ್ನೂ ಕೊಡಿಸಿದ್ದರು. ತಮ್ಮ ಸಹೋದ್ಯೋಗಿಗಳು ಮತ್ತು ಕೆಲಸಗಾರರ ಜೊತೆ ಸ್ನೇಹಸಂಬಂಧವನ್ನು ಸ್ಥಾಪಿಸಿಕೊಂಡಿದ್ದರು. ಅವರ ಮನೆಯ ಮುಂದೆ ಜೋಳ ಬಿತ್ತನೆಯಾಗಿ ಸ್ಪ್ರಿಂಕ್ಲರುಗಳು ನೀರನ್ನು ಸುತ್ತ ಸಿಂಪಡಿಸುತ್ತಿದ್ದುವು.

ಫಾರಂ ಬಗ್ಗೆ ಕೆಲವು ಮಾತುಗಳನ್ನು ಹೇಳಬೇಕು. ಮಲೆನಾಡಿನ ಎತ್ತುಗಳು "ಮಲೆನಾಡು ಗಿಡ್ಡ" ಎಂದು ಹೆಸರಾಗಿವೆ. ಬಯಲು ಸೀಮೆಯ ಎತ್ತುಗಳಲ್ಲಿ "ಹಳ್ಳಿಕಾರ್" ಮತ್ತು "ಅಮೃತ ಮಹಲ್" ತಳಿಗಳು ಶ್ರೇಷ್ಠ. ಅಮೃತ ಮಹಲ್ ಜಾತಿಯ ಎತ್ತುಗಳು ಕರ್ನಾಟಕದಲ್ಲೇ ಏಕೆ, ಭಾರತದಲ್ಲೆಲ್ಲ ಪ್ರಸಿದ್ಧ. ಆ ಜಾತಿಯ ಬಲಿಷ್ಠ ಎತ್ತುಗಳು ದಿನದಲ್ಲಿ ಹದಿನಾರು ಗಂಟೆ ಶ್ರಮಸಾಧ್ಯ ಕೆಲಸಗಳನ್ನು ಸುಲಭವಾಗಿ ನಿಭಾಯಿಸಿಬಲ್ಲವು. ಆ ತಳಿಗೆ ಆ ಹೆಸರು ಏಕೆ ಬಂತೆಂಬುದು ಒಂದು ಸಮಸ್ಯೆ. ವಿಜಯನಗರ ಕಾಲದ ದೊರೆಗಳಿಂದ ಹಿಡಿದು ಮೈಸೂರು ದೊರೆಗಳವರೆಗೆ ಆ ತಳಿಯನ್ನು ರಾಜರು ವಿಶೇಷವಾಗಿ ಪೋಷಿಸಿದರು. ಈಚಿನ ಶತಮಾನಗಳಲ್ಲಿ ಆ ಎತ್ತುಗಳನ್ನು ಫಿರಂಗಿ ಗಾಡಿ ಎಳೆಯಲೂ ಬಳಸುತ್ತಿದ್ದರು. ಕರ್ನಾಟಕದಲ್ಲಿ ಹಲವು ಫಾರಂಗಳಿವೆ. ಉದಾಹರಣೆಗೆ, ಅಜ್ಜಂಪುರ ಸಮೀಪದ ಫಾರಂನಲ್ಲಿ ಅಮೃತ ಮಹಲ್ ಹಸುಗಳ ಜೊತೆ ಹೋರಿಗಳನ್ನು ಬಿಟ್ಟು (ನಲವತ್ತು ಹಸುಗಳಿಗೆ ಒಂದು ಹೋರಿ ಸಾಕು) ಅಲ್ಲಿ ಹುಟ್ಟಿದ ಮರಿಗಳನ್ನು ಈ ಬೀರೂರು ಫಾರಂಗೆ ಕಳಿಸುತ್ತಾರೆ. ಇಲ್ಲಿ ಅವನ್ನು ಒಂದು ಒಂದೂವರೆ ವರ್ಷ ಬೆಳೆಸಿ ಸಾಮಾನ್ಯವಾಗಿ ನವಂಬರ್ ತಿಂಗಳಲ್ಲಿ ಅರಸೀಕೆರೆ ಬಳಿ ಹರಾಜು ಹಾಕುತ್ತಾರೆ. ಚೆನ್ನಾಗಿ ಬೆಳೆದ ಅಮೃತಮಹಲ್ ಹೋರಿ ಕರುವಿನ ಜೋಡಿ ಏಳೆಂಟು ಸಾವಿರಕ್ಕೆ ಹರಾಜಾಗುವುದುಂಟು. ರೈತರಲ್ಲಿ ಆ ತಳಿಯ ಹೋರಿಗಳನ್ನಿಡುವುದು ಒಂದು ಪ್ರತಿಷ್ಠೆ ವಿಷಯ. ಎರಡು ಮೂರು ಜೋಡಿ ಇಟ್ಟವರಂತೂ ಭಾರೀ ಜಮೀನುದಾರರೆಂದೇ ಪರಿಗಣಿತರಾಗುತ್ತಾರೆ.

ಎಂಟುನೂರು ಎಕರೆ ವಿಸ್ತೀರ್ಣದಲ್ಲಿ ರಾಸುಗಳಿಗಾಗಿ ನೂರೈವತ್ತು ಎಕರೆ ಜಮೀನಿನಲ್ಲಿ ಜೋಳ, ಇತರ ಮೇವಿನ ಹುಲ್ಲು ಬೆಳೆಯುತ್ತಾರೆ. ಜೋಳ, ಮೆಕ್ಕೆ ಜೋಳದ ಕಾಳು ತೆಗೆಯದೆ ಹಸೀ ಜೋಳದ ದಂಟುಗಳನ್ನೇ ತೆನೆ ಸಮೇತ ಇಡಿಯಾಗಿ ದನಗಳಿಗೆ ಕೊಡುತ್ತಾರೆ. ಮೆಕ್ಕೆ ಜೋಳವು ಹೊಡೆಯಾಡುತ್ತಿರುವಾಗ ಅವನ್ನು ಕತ್ತರಿಸಿ ಚಿಕ್ಕ ಚಿಕ್ಕದಾಗಿ ಪುಡಿ ಮಾಡಿ, ಉಪ್ಪು ಸೇರಿಸಿ ಅಷ್ಟನ್ನೂ ಗುಂಡಿಯೊಳಗೆ ತುಂಬಿ ಮೇಲೆ ಮಣ್ಣು ಭರ್ತಿ ಮಾಡುತ್ತಾರೆ. ಬೇಸಗೆ ಕಾಲದಲ್ಲಿ ಅದು ದನಗಳಿಗೆ ಉಪ್ಪಿನಕಾಯಿಯಂತೆ ರುಚಿಕರವೂ ಆಗಿರುತ್ತದೆ, ಪುಷ್ಟಿಕರ ಆಹಾರವೂ ಆಗಿರುತ್ತದೆ. ಒಂದು ದೊಡ್ಡ ಗೋಬರ್ ಗ್ಯಾಸ್ ಪ್ಲ್ಯಾಂಟೂ ಇದೆ. ನಾನು ನೋಡಿದಾಗ ಅರವತ್ತು ಎಪ್ಪತ್ತು ಹೋರಿ ಕರುಗಳು ಬಯಲಲ್ಲಿ ಮೇದು ಓಂದಿರುಗುತ್ತಿದ್ದುವು. ಬಹು ಪೌರುಷಶಾಲಿಯಾಗಿಯೂ ಒಳ್ಳೆ ತೇಜಸ್ವಿಯೂ ಆಗಿದ್ದುವು.

ಡಾ. ಜಯರಾಮ್ ಅಲ್ಲೇ ಹಿಂದಿದ್ದ ಚೌಡಮ್ಮನ ಮರದ ಬಳಿಗೆ ಕರೆದೊಯ್ದರು. ಅದೊಂದು ದೊಡ್ಡ ಹಳೆಯ ಆಲದ ಮರ. ನಾನು ಹೋಗುತ್ತಿದ್ದಂತೆ ದೇವಿಭಕ್ತನೊಬ್ಬ ತಲೆ ಕಡಿದ ಕೋಳಿಯೊಂದನ್ನು ಆಚೆ ಎಸೆದ, ಇನ್ನೊಂದರ ತಲೆಯನ್ನೂ ಹಾಗೇ ಕಡಿದ. ಅವು ಒದ್ದಾಡಿ ಒದ್ದಾಡಿ ಸುಮ್ಮನಾದುವು. ಎರಡೂ ಚೌಡಮ್ಮನ ಕಲ್ಲ ಬಳಿ ಬಿದ್ದಿದ್ದವು. ಕಲ್ಲೆಲ್ಲಾ ರಕ್ತಮಯ. ಸುತ್ತಮುತ್ತಲ ಹಳ್ಳಿ ಜನ ಆಗಾಗ್ಗೆ ಬಂದು ಕೋಳಿ ಬಲಿ ಕೊಡುವುದು, ಅಲ್ಲೇ ಅಡಿಗೆ ಮಾಡಿ ಅಮ್ಮನಿಗೆ ಎಡೆಕೊಡುವುದು ಉಂಟು. ಆ ಅಮ್ಮ ಮಹಾಶಕ್ತಿಶಾಲಿಯಂತೆ. ಭಕ್ತಾದಿಗಳು ಗಂಟೆಗಳನ್ನು ತಂದು ಮರಕ್ಕೆ ತೂಗು ಹಾಕಿದ್ದಾರೆ. ಆ ಮರವಿದ್ದ ತಾಣ ನನ್ನಂತಹ ಹೊಸಬನಿಗೆ ನಿರ್ಜೀವವಾಗಿರಬಹುದು; ಆದರೆ ಆ ಹಳ್ಳಿ ಜನಕ್ಕೆ ಚೈತನ್ಯಪೂರ್ಣ. ಚೌಡಮ್ಮನಿಂದಾಗಿ ಇಡೀ ಫಾರಂ ಸಂರಕ್ಷಿತ (ಆ ದಿನ ಶುಕ್ರವಾರವಾದ್ದರಿಂದ ಸಂಜೆ ವಿಶೇಷ ಪೂಜೆ ಇತ್ತು). ನಾವು ಹೋದಾಗ ಅಲ್ಲಿ ಹಾಡಿದ ಭಜನೆಗಳಲ್ಲಿ "ಲಿಂಗವೇ ಏಕೆ ಮಾತನಾಡೆ" ಎಂಬ ಹಾಡು, "ಶರಣಂ ಅಯ್ಯಪ್ಪ" ಹಾಡು, "ಜ್ಞಾನಪೂರ್ಣ ಜಗಜ್ಜೋತಿ" ಹಾಡು ಇವನ್ನೆಲ್ಲ ಹಾಡಿದರು. ಫಾರಂನ ಒಂದು ನಾಯಿ ನಿಯತವಾಗಿ ಬಂದು ಪ್ರಾರ್ಥನೆಯ ಸಮಯದಲ್ಲಿ ಹಾಜರಿರುತ್ತದೆ. ಅದೂ ಅದರ ತಾಯಿಯೂ ಹಳ್ಳಿಯ ನಾಯಿಗಳಾದರೂ ಹೊಸಬರು ಯಾರನ್ನೂ ಫಾರಂ ಒಳಕ್ಕೆ ಬಿಡುವುದಿಲ್ಲ. ಇಡೀ ಫಾರಂ ಮಕ್ಕಳು ಆ ಎರಡು ನಾಯಿಗಳನ್ನು ಬಹುವಾಗಿ ಪ್ರೀತಿಸುತ್ತಾರೆ. ಡಾ. ಜಯರಾಮ್‌ಗೆ ಹೋರಿ ಕರುಗಳನ್ನು ಕಂಡರೆ ವಾತ್ಸಲ್ಯ. ಅವರು ತುರಿಸುವುದನ್ನು ಮರೆತರೆ ಕೆಲವಂತೂ ಹಗ್ಗದಲ್ಲಿ ಕಟ್ಟಿದ್ದರೂ ಕಣ್ಣಿ ಕಿತ್ತುಕೊಂಡು ಬಂದು ತಮ್ಮನ್ನು ತುರಿಸಲು ಅವುಗಳದೇ ಭಾಷೆ ರೀತಿಗಳಲ್ಲಿ ಕೇಳಿಕೊಳ್ಳುತ್ತವೆ. ಅವಿಧೇಯ ಕರುವೊಂದು ಇವರು ಆ ಫಾರಂಗೆ ಹೋದಮೇಲೆ ವಿನಯಶೀಲವಾಯಿತಂತೆ. ಪ್ರೀತಿಯ ಶಕ್ತಿ ಅದು. ಆದರೂ ಎಲ್ಲರೂ ಅಮೃತಮಹಲ್ ರಾಸುಗಳ ಬಗ್ಗೆ ಹುಷಾರಾಗಿರುತ್ತಾರೆ. ಚೆನ್ನಾಗಿ ತಿಂದು ಕೊಬ್ಬಿ ದಷ್ಟ ಪುಷ್ಟವಾಗಿರುವ ಅವು ಅರಿಯದೆ ಮೇಲೆ ಹಾಯಬಹುದು. ಒಮ್ಮೆ ಅವಕ್ಕೆ ಮೂಗುದಾರ ಹಾಕಿ ಪಳಗಿಸಿದರೆ ಮಹಾವಿಧೇಯರಾಗಿ ಬಿಡುತ್ತವೆ.

ಸಂಜೆ ಸಮೀಪದ ಬೇಗಡೆಹಳ್ಳಿಗೆ ಡಾ. ಜಯರಾಮ್‌ರ ಅಸಿಸ್ಟೆಂಟ್ ಕುಂದಗೋಳ ಮಠ ನನ್ನನ್ನು ಕರೆದೊಯ್ದರು. ಅದು ಬರೀ ಉಪ್ಪಾರ ಜಾತಿ ಜನ ವಾಸವಾಗಿರುವ ಹಳ್ಳಿ. ಅಲ್ಲಿಯ ಹಲವರು ಅಮೃತಮಹಲ್ ಫಾರಂನಲ್ಲಿ ದಿನಗೂಲಿ ನೌಕರರು. ದಾರಿದ್ರ್ಯ ತಾಂಡವವಾಡುತ್ತಿರುವ ಹಳ್ಳಿ. ನಾವು ನೇರವಾಗಿ ಅಲ್ಲಿನ ಭೂತದ ಗುಡಿಗೆ ಹೋದೆವು. ಅಲ್ಲಿಗೆ ಮೇಮೇಲೆ ದೆವ್ವ ಬಂದಿದ್ದ ಆ ಊರಿನ ಹರೆಯದ ಹುಡುಗಿ, ಆಕೆಯ ತಾಯಿ ಇಬ್ಬರನ್ನೂ ಕರೆತಂದಿದ್ದರು. ಆ ಭೂತರಾಯ ಎಂತಹ ದೆವ್ವವನ್ನಾದರೂ ಓಡಿಸಬಲ್ಲುದು. ಒಂದು ವಿಚಿತ್ರ ವಿನ್ಯಾಸವಿರುವ ಶಿಲೆಯೇ ಭೂತರಾಯ. ಅದರ ಅಕ್ಕಪಕ್ಕದಲ್ಲಿ ಮೀಸೆ, ಕಣ್ಣು ಇರುವ ಮುಖದ ಎರಡು ಲೋಹದ ದುಂಡು ವಿಗ್ರಹಗಳಿವೆ (ಕೇವಲ ಮುಖಮಾತ್ರ ಉಂಟು): ಒಂದು ಕೆಂಚರಾಯನ ಹರಿಗೆ, ಇನ್ನೊಂದು ಕಾಡರಾಯನ ಹರಿಗೆ. ಜನ ಅವನ್ನು ಹೊತ್ತು ಕುಣಿಯುತ್ತಾರೆ. ಹಿಂಭಾಗದಲ್ಲಿ ಹನ್ನೆರಡು ಅಡಿ ಉದ್ದದ ಭಾರಿ ತೂಕದ

ಒಂದು ಕಬ್ಬಿಣದ ಈಟಿ ಇತ್ತು. ಅದನ್ನು ಹೊತ್ತವರ ಮೇಲೆ ಭೂತರಾಯ ಬಂದು ಮಾತನಾಡುತ್ತಾನೆ. ಆ ಈಟಿಯಿಂದ ಏನೂ ಪರಿಣಾಮವಾಗದಿದ್ದರೆ ಇನ್ನೂ ಎರಡು ಕಡಮೆ ತೂಕದ ಈಟಿಗಳನ್ನು ಹಿಡಿದರೆ ಆಗ ಭೂತರಾಯ ಪ್ರತ್ಯಕ್ಷನಾಗುವುದು ಗ್ಯಾರಂಟಿ. ಭೂತರಾಯನ ಗುಡಿ ಮುಂದೆ ಒಂದು ಮೂರಡಿ ಉದ್ದ, ಎರಡಡಿ ಅಗಲ, ಮೂರಡಿ ಎತ್ತರದ ಬೊಮ್ಮದೇವರ ಗುಡಿಯಿದ್ದು ಅದರ ಪೂಜಾರಿ ನುಸುಳಿ ಬಾಗಿ ಪೂಜಿಸಿ ಹಾಗೇ ಹಿಂದಕ್ಕೆ ಬರಬೇಕು. ನಾನು ಕಷ್ಟಪಟ್ಟು ನುಸುಳಿ ಒಳಬಾಗಿ ನೋಡಿದಾಗ ಕುಂಕುಮ ಅರಿಸಿಣ ಬಳಿದಿದ್ದ ತ್ರಿಕೋನಾಕಾರದ ಕಲ್ಲುಗಳನ್ನು ಅಲ್ಲಿ ಕಂಡೆ. ಕೋಲಾರದ ಕಡೆ ಇಂತಹ ಜಾಗಗಳಲ್ಲಿ ಶಿಲಾಯುಗದ ಕಲ್ಲಿನ ಆಯುಧಗಳನ್ನೇ ರಾಶಿಮಾಡಿ ಪೂಜಿಸುತ್ತಾರೆ. ನಾನು ನೋಡಿದ ಕಲ್ಲುಗಳು ಶಿಲಾಯುಧಗಳಲ್ಲದಿದ್ದರೂ ಅವುಗಳ ಆಕಾರದ ಕಲ್ಲುಗಳನ್ನೇ ಜೋಡಿಸಿದ್ದರು. ಸಮೀಪದ ಶ್ರೀರಾಮ ಗುಡಿ ಮುಂದೆ ನೂರಾರು ಜನ ಸೇರಿ ಕೋಸಂಬರಿ ಪಾನಕ ಸ್ವೀಕರಿಸುತ್ತಿದ್ದರು. ಆ ಊರಿನ ಮುದುಕನೊಬ್ಬನನ್ನು ಮಣ್ಣು ಮಾಡಿ ಹಿಂದಕ್ಕೆ ಬಂದ ಜನ ಅವನ್ನು ಹಂಚುತ್ತಿದ್ದರು. ಸ್ಮಶಾನದಿಂದ ಹಿಂದಕ್ಕೆ ಊರಿಗೆ ಬಂದವರಿಗೆ ಹೀಗೆ ಪಾನಕ ಕೋಸಂಬರಿ ಹಂಚುವುದನ್ನು ನಾನು ನೋಡಿರಲಿಲ್ಲ. ನಾವು ಮಾಜಿ ಛೇರ್ಮನ್ ನಂಜುಂಡಪ್ಪನವರ ಮನೆಯ ಮುಂದೆ ಕುಳಿತೆವು. ರಸ್ತೆ ತುಂಬ ಕುರಿಗಳ ಹಿಕ್ಕೆ. ಉಪ್ಪಾರರು ಕುರಿ ಸಾಕುತ್ತಾರೆ. ನೇಕಾರರು ಅವುಗಳ ತುಪ್ಪಟ ಕತ್ತರಿಸಿಕೊಂಡು ಹೋಗಿ ಕಂಬಳಿ ನೇದು ಅವರಿಗೆ ಕೊಡುತ್ತಾರೆ. (ನೇದದ್ದಕ್ಕೆ ಕೂಲಿ ಉಂಟು). ಕೋಳಿ ಸಾಕಾಣಿಕೆ ಉಪ್ಪಾರರ ಇನ್ನೊಂದು ವೃತ್ತಿ. ಒಂದು ಕಾಲಕ್ಕೆ ಉಪ್ಪಾರರು ಉಪ್ಪನ್ನೂ ತಯಾರಿಸುತ್ತಿದ್ದು, ಈಗ ಉಪ್ಪಿನ ಮೋಳಿಗಳು ಮಾಯವಾಗಿವೆ. ಅವರನ್ನು 'ಮೇಲು ಸಕ್ಕರೆ'ಯವರು 'ಉಪವೀರ'ರು ಎಂದೂ ಕರೆಯುವುದುಂಟು; ಮೊದಲನೆಯದು Euphemism ಅಥವಾ ಸೌಮ್ಯೋಕ್ತಿ (ಸಮಾರಂಭಗಳಲ್ಲಿ ಉಪ್ಪನ್ನು 'ಸಕ್ಕರೆ' ಎಂದು ರುಚಿ / ರುತಿ ಎಂದು ಕರೆಯುವುದುಂಟು); ಎರಡನೆಯದು 'ಉಪ್ಪಾರ' ಎಂಬ ಕನ್ನಡ ಪದದ ಸಂಸ್ಕೃತೀಕರಣ. ಈಗ ಅವರ ಮುಖ್ಯ ಉದ್ಯೋಗ ವ್ಯವಸಾಯ. ಆ ಊರಲ್ಲಿ ಒಬ್ಬ ನಿರುದ್ಯೋಗಿ ಬಿ.ಎ. ಪದವೀಧರ ಇದ್ದ. ಬೆಂಗಳೂರಿನಂತಹ ಕಡೆಗಳಿಗೆ ಅನ್ಯಭಾಷಿಕರು ಬಂದು ಎಲ್ಲ ಉದ್ಯೋಗಗಳನ್ನು ಲಪಟಾಯಿಸಲು ಅವರಿಗೆ ಅವಕಾಶ ಕಲ್ಪಿಸಿ ಕೊಟ್ಟಿರುವಾಗ ಕನ್ನಡದ ನಿರುದ್ಯೋಗಿಗಳು ಹಳ್ಳಿ ಹಳ್ಳಿಗಳಲ್ಲಿ ಕಾಣಸಿಗುವುದರಲ್ಲಿ ಆಶ್ಚರ್ಯವೇನೂ ಇಲ್ಲ. ಊರ ಜನರ ತೋಟದ ಬಾವಿಗಳಿಗೆ ಪಂಪ್‌ಸೆಟ್ ಇದ್ದರೂ ಊರಿಗೆ ವಿದ್ಯುಚ್ಛಕ್ತಿ ಇಲ್ಲ. ಜನರ ಮುಗ್ಧತೆ, ದಡ್ಡತನ, ಒಳ ಒಡಕು ಅದಕ್ಕೆ ಕಾರಣ. ನಾವು ಕುಳಿತಿದ್ದ ಮನೆಯ ಮುಂದೆಯೇ ಸತ್ತ ಮುದುಕನ ಮನೆ. ಆ ಮನೆಯ ಮುದುಕಿಯ ಗೋಳು ಕೇಳಿದವರ ಹೃದಯವನ್ನು ಕರಗಿಸುತ್ತಿತ್ತು. ಆಕೆಯದು ಆ ಮುದುಕನ ಜೊತೆ ಹಲವು ದಶಕಗಳ ಸಹಜೀವನ. ವೃದ್ಧಾಪ್ಯದ ಒಂಟಿತನದ ಭಯ ಅವಳನ್ನು ಕಾಡುತ್ತಿತ್ತು. ಅಜ್ಜ ಚೆನ್ನಾಗಿ ಬದುಕಿದಾತ. ಈಗ ಆತನ ಮಕ್ಕಳು ದಡ್ಡರಾಗಿ ಆ ಹಿಂದಿನ ಸೌಖ್ಯ ಈಗ ಇರಲಿಲ್ಲ. ನಡು ಮನೆಯಲ್ಲಿ ಹಚ್ಚಿದ ದೀಪ ನಮಗೆ ಕಾಣುತ್ತಿತ್ತು. ಸ್ಮಶಾನಕ್ಕೆ ಹೋದವರೆಲ್ಲ ಬಾವಿಯ ಹತ್ತಿರ (ರಾಮನ ಗುಡಿ ಬಳಿ) ಕೋಸಂಬರಿ ತಿಂದು

ಪಾನಕ ಕುಡಿದು ಆ ಸಾವಿನ ಮನೆಗೆ ಬಂದು ದೀಪಕ್ಕೆ ಕೈ ಮುಗಿದು ಆ ದೀಪಕ್ಕೆ ಸುತ್ತು ಹಾಕಿ ಮನೆಗೆ ಹೋಗುತ್ತಿದ್ದರು. ಹೆಣ ಹೊತ್ತ ನಾಲ್ವರು ಮಾತ್ರ ಸ್ನಾನ ಮಾಡಿದರೆ ಸಾಕಿತ್ತು. ನಾವು ಅದೆಲ್ಲವನ್ನೂ ಕಾಣುತ್ತ ಕೇಳುತ್ತ ನಂಜುಂಡಪ್ಪನವರ ಮನೆಯ ಉಸುಳಿ ತಿಂದು ಕಾಫಿ ಕುಡಿದೆವು. ನಾವು ಮಾತನಾಡುತ್ತಿರುವಾಗಲೇ ಬಂದ ಭಾರಿ ದೇಹದ ನಂಜುಂಡಪ್ಪನವರ ಜೊತೆ ಮಾತನಾಡಿ ನಸು ಬೆಳದಿಂಗಳಲ್ಲಿ ಫಾರಂಗೆ ಬಂದೆವು. ಆ ತಂಗಾಳಿ, ಆ ಪ್ರಶಾಂತ ವಾತಾವರಣದಲ್ಲಿ ರಾತ್ರಿ ಎಂಟಕ್ಕೆ ಹಿಂದಕ್ಕೆ ಬಂದಾಗ ಕತೆ ಕೇಳಲು ಮಕ್ಕಳು ಹೊರನೋಟಕ್ಕೆ ಸುಮ್ಮನೆ, ಆದರೆ ಒಳಗೆ ಚಡಪಡಿಸುತ್ತ ನಿದ್ದೆ ಬಿಟ್ಟು ಕಾದು ಕುಳಿತಿದ್ದುವು. ಮಧ್ಯಾಹ್ನ ಹೇಳಿದ್ದ ಕತೆಗಳು ಅವರಿಗೆ ಬಹಳ ರುಚಿಸಿದ್ದುವು. ಮತ್ತೆ ಕತೆ ಹೇಳಿದೆ. ಮಕ್ಕಳಿಂದಾಗಿ ಅಲ್ಲಿನ ಅಕ್ಕ ಪಕ್ಕದ ಮನೆಯವರಿಗೂ ನನ್ನ ಬಗ್ಗೆ ಬಹಳ ಅಭಿಮಾನ ಮೂಡಿತ್ತು.

ಫಾರಂ ಜೀವನವೇ ಒಂದು ತರ. ಕಚೇರಿಯಲ್ಲಿ ಬೆಳಿಗ್ಗೆ 10.30 ರಿಂದ ಸಂಜೆ 5.00ರವರೆಗೆ ಕೆಲಸ ಮಾಡಿ ಅಲ್ಲಿಗೆ ಮುಗಿಯಿತು ಎಂದುಕೊಂಡಂತೆ ಅಲ್ಲ. ಕೆಲಸ ಇಡೀ ದಿನ. ಹೊಲ, ಮೇವು, ರಾಸುಗಳ ಆರೋಗ್ಯ, ನೀರು, ಗ್ಯಾಸ್ ಪ್ಲ್ಯಾಂಟ್, ಕೆಲಸಗಾರರು, ಅವರ ಕಷ್ಟ ಸುಖ, ಪತ್ರ ವ್ಯವಹಾರ, ರಾಸುಗಳ ಹರಾಜು, ಲೆಕ್ಕಪತ್ರ ಈ ಎಲ್ಲವುಗಳ ಕಡೆ ಗಮನವಿಟ್ಟು ಕರ್ತವ್ಯಗಳನ್ನು ಸಮರ್ಪಕವಾಗಿ ನಿರ್ವಹಿಸಬೇಕಾದರೆ ಆ ಕೆಲಸದಲ್ಲಿ ಸಂಪೂರ್ಣ ತಲ್ಲೀನನಾಗಿ ದುಡಿಯುವ ವ್ಯಕ್ತಿಗೆ ಮಾತ್ರ ಸಾಧ್ಯ. ಡಾ. ಜಯರಾಮ್ ಮತ್ತು ಶ್ರೀಮತಿ ಜಯಶ್ರೀ ಹಾಗೆ ಕೆಲಸವು ತಮ್ಮದೆಂದು ಭಾವಿಸಿ ದುಡಿದು ಇಡೀ ಫಾರಂಗೆ ಒಂದು ಕಳೆ ತಂದಿದ್ದರು. ಸಾಹಿತ್ಯಪ್ರಿಯರೂ ಆಗಿದ್ದ ಅವರಿಗೆ ಬೀರೂರು ಕಡೂರಿನ ಹಲವು ಸಾಹಿತ್ಯಾಭಿಮಾನಿಗಳ ಜೊತೆ ಸಾಂಸ್ಕೃತಿಕ ಸಂಪರ್ಕವಿತ್ತು. ಜಯಶ್ರೀಗೆ ತನ್ನ ಇಡೀ ಅನುಭವಗಳನ್ನು ಹಾಗೇ ಹಿಡಿದಿಡಲು, ಜಾನಪದ ಸಂಗ್ರಹ ಮತ್ತು ಹಸ್ತಪ್ರತಿ ಸಂಗ್ರಹ ಮಾಡಲು ಸೂಚಿಸಿದೆ. ಜಯರಾಮ್, "ಲಂಕೇಶ್ ಪತ್ರಿಕೆ"ಯು ಎಲ್ಲರನ್ನೂ ಬಯ್ಯುವ ಪ್ರವೃತ್ತಿ ಬೆಳೆಸಿಕೊಂಡಿರುವುದನ್ನು ಖಂಡಿಸಿದರು. ಆ ಮಾತಾಡುವಾಗ ನನ್ನನ್ನೂ ಆ ಪತ್ರಿಕೆ ಅವಹೇಳನ ಮಾಡಿ ಬರೆದುದು ಅವರ ಗಮನದಲ್ಲಿರಲಿಲ್ಲ. ಅವರ ಅಭಿಪ್ರಾಯ ಬಹಳ ಸರಿಯಾಗಿತ್ತು ಮಾತ್ರವಲ್ಲ, ಕರ್ನಾಟಕದ ಬಹುತೇಕ ಎಲ್ಲ ಕಡೆ ವಿಚಾರಮಾಡುವ ಜನರ ಅಭಿಪ್ರಾಯವೂ ಅದೇ ಆಗಿತ್ತು.

## ಅಜ್ಜಂಪುರ

ಹಗಲು ನಿದ್ದೆ ಮಾಡಿದ್ದರಿಂದಲೋ ಏನೋ ರಾತ್ರಿ ಅಷ್ಟು ಚೆನ್ನಾಗಿ ನಿದ್ದೆ ಬರಲಿಲ್ಲ. ಬೆಳಿಗ್ಗೆ (25.5.85) ಕಾಫಿ ಕುಡಿದು ಜಯಶ್ರೀ ಮಾಡಿಕೊಟ್ಟ ಉಪ್ಪಿಟ್ಟು ಗಂಟು, ನೀರಿನ ಬಾಟ್ಲು ತೆಗೆದುಕೊಂಡು ಆ ದಂಪತಿಗಳಿಗೆ ಪ್ರೀತಿಪೂರ್ವಕ ವಂದನೆ ಸಲ್ಲಿಸಿ ಹೊರಟೆ. ನನ್ನ ಹೆಗಲ ಚೀಲವನ್ನು ಅಜ್ಜಂಪುರಕ್ಕೆ ತಲುಪಿಸುವ ವ್ಯವಸ್ಥೆ ಆಗಿತ್ತು. ನನ್ನನ್ನು ಬೀರೂರುವರೆಗೆ ಕಳಿಸಲು ಬಂದ ಹಾಸನದ ಕಡೆಯ ಕೆಲಸಗಾರ ರಾಮಪ್ಪನದು ಒಂದು ವ್ಯಥೆಯ ಕಥೆ.

ತನಗೆ ಒಂದು ಹೆಣ್ಣು ಒಂದು ಗಂಡು ಎಂಬ ತೃಪ್ತಿಯಿಂದ ಹೆಂಡತಿಗೆ "ಆಪರೇಶನ್" ಮಾಡಿಸಿಬಿಟ್ಟ. ಹದಿನೈದು ದಿನಗಳ ಹಿಂದೆ ಹೋರಿ ಕರುವೊಂದು ನುಗ್ಗಿದಾಗ ಆತನ ಹೆಂಡತಿ ಎರಡು ವರ್ಷದ ಹೆಣ್ಣು ಮಗು ಸಮೇತ ಕೆಳಗೆ ಬಿದ್ದಳು. ಆ ಮಗು ತೀವ್ರವಾಗಿ ಹೆದರಿ ಸತ್ತೇ ಹೋಯಿತಂತೆ. ಈಗ ಉಳಿದಿರುವುದು ಒಂದು ಮಗು. ಗಾಬರಿಗೊಂಡಿರುವ ಹೆಂಡತಿಯನ್ನು ತೌರೂರಿನವರು ಕರೆದೊಯ್ದಿದ್ದಾರೆ.

ಆ ದಿನ ನಾನು ಹನ್ನೊಂದು ಮೈಲಿ ನಡೆಯಬೇಕಿತ್ತು. ಸದ್ಯ, ಭಾರದ ಚೀಲ ಇರಲಿಲ್ಲ. ನಿಧಾನಕ್ಕೆ ನಡೆಯುತ್ತ ಕನ್ನಡದ ಬಗ್ಗೆ ಸ್ವಲ್ಪ ಚಿಂತನೆ ನಡೆಸಿದೆ. "ಮೊದಲು ಶೌರ್ಯ, ಆಮೇಲೆ ಔದಾರ್ಯ" - ಹೇಡಿಯ ಔದಾರ್ಯಕ್ಕೆ ಬೆಲೆ ಇರದು. ಕನ್ನಡಿಗ ಮೊದಲು ತನ್ನನ್ನು ತಾನು ಉಳಿಸಿಕೊಳ್ಳಲು ಯತ್ನಿಸುವುದು ಈಗ ಆಗಬೇಕಾದ ಮೊದಲ ಕೆಲಸ. ಕನ್ನಡಿಗನಲ್ಲಿ ಸ್ವಾಭಿಮಾನವನ್ನು ಮೂಡಿಸುವ ಬಗೆ ಹೇಗೆ ? ಅದು ರಾಜ್ಯಮಟ್ಟದ ಸಂಘಟನೆಯಿಂದ ಸಾಧ್ಯ, ಅಂತಹ ಸಂಘಟನೆಯ ಸ್ಥಾಪನೆ ತೀರ ಅಗತ್ಯ. ಆದರೆ ಆ ಸಂಘಟನೆಗೆ ಹಣಕಾಸು, ಕಚೇರಿ ಇವುಗಳ ಸಮಸ್ಯೆಯಿದೆ. ಒಂದಂತೂ ಸ್ಪಷ್ಟವಾಗಿತ್ತು. ಹಿಂಸಾಚಾರ ಎಂದಿಗೂ ನಮ್ಮ ಗುರಿಸಾಧನೆಗೆ ಮಾರ್ಗ ಅಲ್ಲ. ನಮ್ಮ ಹೋರಾಟಕ್ಕೆ ಗಾಂಧೀಜಿ ಹಾಕಿಕೊಟ್ಟಿರುವ ಮಾರ್ಗ ಒಂದೇ ದಾರಿ : ಆ ಹೋರಾಟ ಸತ್ಯ, ಅಹಿಂಸೆಗಳ ಆಧಾರವನ್ನು ಪಡೆದಿರಬೇಕು. ಈ ಮಾರ್ಗ ನಿಧಾನ, ಅನಾಕರ್ಷಕ, ಒಂದು ರೀತಿ ಈ ಕಾಲಕ್ಕೆ ಹೊಂದದ್ದು. ಹಿಂಸೆ ಬೇಗ ಫಲ ಕೊಡುತ್ತದೆಯೆಂದು ಭಾವಿಸಿದರೂ ಆ ಫಲ ರೋಚಕ ಸುದ್ದಿಯ ರೂಪದ್ದೇ ಹೊರತು, ಉದ್ದೇಶ ಸಾಧನೆಯದಾಗಿರದು. ಹಿಂಸೆಯು ದ್ವೇಷಕ್ಕೆ ಎಡೆಮಾಡಿಕೊಡುತ್ತದೆ. ಸಿಖ್ಖರಂತೆ ಶ್ರೀಲಂಕಾದ ತಮಿಳರಂತೆ ಬಾಂಬನ್ನು ತಯಾರಿಸುವ ಮನೋಭಾವ ಕನ್ನಡಿಗರಿಗೆ ಬಂದಿಲ್ಲ, ಬರಲು ಸಾಧ್ಯವೂ ಇಲ್ಲ, ಬರಲೂಬಾರದು. ನಾನು ನನ್ನ ಮೇಲೆ ಹೊರಿಸಿಕೊಳ್ಳುತ್ತಿರುವ ದೈಹಿಕ, ಮಾನಸಿಕ ಯಾತನೆಯು ಕನ್ನಡಿಗನ ಕಣ್ಣು ತೆರೆಸಲು ಸಹಾಯಕವಾದೀತು. ಹಂಪಿಯಲ್ಲಿ ಭುವನೇಶ್ವರಿಯ ಮುಂದೆ ನನ್ನ ಎಡಗೈ ಕಿರು ಬೆರಳನ್ನು ಒಪ್ಪಿಸಿ ಪ್ರತಿಜ್ಞೆ ಸ್ವೀಕರಿಸಬೇಕೆಂಬ ಆಲೋಚನೆ ಆಗಾಗ್ಗೆ ಸುಳಿದಿದೆ. ನೆನೆದರೆ ಭಯವಾಗುತ್ತದೆ, ನನಗೇ ಧೈರ್ಯ ಸಾಲದು.

ಹವಾ ಹಿತವಾಗಿತ್ತು. ದಾರಿಯಲ್ಲಿ ಅರವತ್ತು ಎಪ್ಪತ್ತು ಮನೆಗಳ ಚಿಕ್ಕಹಳ್ಳಿಯಲ್ಲಿ ಮೂರು ಕೊಳವೆ ಬಾವಿಗಳಿದ್ದುವು. ಹರಿಜನರ ಕೇರಿಯಲ್ಲಿದ್ದ ಮೊದಲ ಬಾವಿಯಲ್ಲಿ ನನ್ನ ನೀರಿನ ಬಾಟ್ಲು ತುಂಬಿಸಿಕೊಂಡೆ. ಅವರಿಗೆ ಸರ್ಕಾರ ಮಂಗಳೂರು ಹೆಂಚಿನ ಮನೆಗಳನ್ನು ಕಟ್ಟಿಸಿಕೊಟ್ಟಿದ್ದರೂ ಅಲ್ಲಿ ವಾಸಿಸುವ ಜನಗಳ ಮುಖದಲ್ಲಿ ಅದೇ ಪ್ರೇತಕಳೆ ಸುರಿಯುತ್ತಿತ್ತು. ಪಂಪ್ ಒತ್ತಿದ ಒಬ್ಬ ವ್ಯಕ್ತಿಯ ದೇಹದಲ್ಲಿ ಏನೂ ಶಕ್ತಿ ಇರಲಿಲ್ಲ. ದಾರಿಯಲ್ಲಿ ಒಂದು ಕಾಗೆ ಗೊರವಂಕ ಹಕ್ಕಿಯ ಹೆಣವನ್ನು ತಿನ್ನುತ್ತ ನಾನೆಲ್ಲಿ ಕಿತ್ತುಕೊಳ್ಳುವೆನೋ ಎಂದು ಹೆದರಿ ದೂರಕ್ಕೆ ಕಚ್ಚಿ ಒಯ್ದಿತು. ಎಂಟು ಗಂಟೆಯ ಹೊತ್ತಿಗೆ ಮರದ ನೆರಳಲ್ಲಿ ಉಪ್ಪಿಟ್ಟು ತಿಂದು ಪಣ್ಣನ್ನೂ ನುಂಗಿದೆ. ದಾರಿಯಲ್ಲಿ ಬಲಗಡೆ ಒಂದು ನೀರಿನ ಕುಂಟೆ. ಅಲ್ಲಿನ ಕಲ್ಲ ಮೇಲೆ ಒಂದು 'ವಾಮನ ಮುದ್ರೆ' ಚಿಹ್ನೆ ಇತ್ತು. ಅಲ್ಲಿಗೆ ಬಂದ ಹೊಸೂರಿನ ಸೊಪ್ಪು ಮಾರುವ

ಹೆಂಗಸೊಬ್ಬಳ ಪ್ರಕಾರ ಅಲ್ಲಿ ಹಿಂದೆ ಚೆನ್ನೇನಹಳ್ಳಿ ಎಂಬ ಗ್ರಾಮವಿದ್ದಿತು. ಅದು ನಿಶ್ಚಿತವಾಗಿಯೂ ಬ್ರಾಹ್ಮಣ ದತ್ತಿ ಗ್ರಾಮವಾಗಿದ್ದಿತು. ವಾಮನಮುದ್ರೆ ಕಲ್ಲು ಅದಕ್ಕೆ ಸಾಕ್ಷಿ (ಬಲಿಯಿಂದ ವಾಮನ ಭೂಲೋಕವನ್ನು ದಾನವಾಗಿ ಪಡೆದನಷ್ಟೇ!) ನಿಧಾನಕ್ಕೆ ನಡೆದು ಹತ್ತೂವರೆ ಗಂಟೆಗೆ ಅಜ್ಜಂಪುರದ ಪಶುವೈದ್ಯಾಲಯಕ್ಕೆ ಹೋದೆ. ಅಲ್ಲಿಂದ ಆ ಊರಿನ ಲಕ್ಷ್ಮೀ ಭಂಡಾರದ ಮಾಲಿಕರಿಗೆ ಪತ್ರ ಬರೆದು ಕಳಿಸಿದೆ. ಅವರ ವಿಳಾಸಕ್ಕೆ ನನ್ನ ಹೆಂಡತಿ ಬರೆದಿದ್ದ ಪತ್ರ ತಲುಪಿತ್ತು. ತಾವೆಲ್ಲ ಆರೋಗ್ಯವೆಂದೂ ಆಗಾಗ್ಗೆ ಪತ್ರ ಬರೆಯಬೇಕೆಂದೂ ಹೆಂಡತಿ ಸೂಚಿಸಿ ವಿಸ್ತಾರವಾಗಿ ಪತ್ರ ಬರೆದಿದ್ದಳು. ನನಗೆ ಸಮಾಧಾನವಾಯ್ತು. ಆ ಮಾಲಿಕರಿಗೆ ತಿಪಟೂರಿನವರು ಬರೆದ ಪತ್ರ ತಲುಪಿರುವ ಸೂಚನೆ ಕಾಣಿಸಲಿಲ್ಲವಾದ ಪ್ರಯುಕ್ತ ನಾನು ಅಜ್ಜಂಪುರ ಪಕ್ಕದ ಅಮೃತಮಹಲ್ ಕಾವಲ್ ಪ್ರವಾಸಿ ಮಂದಿರಕ್ಕೆ ಹೋಗಲು ನಿರ್ಧರಿಸಿದೆ. ಬಿಜಾಪುರ ಪ್ರದೇಶದವರಾಗಿದ್ದ ಪಶುವೈದ್ಯಾಲಯದ ಇನ್‌ಸ್ಪೆಕ್ಟರ್ ಮಾತಿನಲ್ಲಿ ನಯ ಕಾಣಲಿಲ್ಲ. ಯಾರನ್ನೋ "ಎತ್ತಿ ಆಚೆ ಒಗೆಯುತ್ತಿದ್ದೆ" ಇತ್ಯಾದಿ ಅವರ ಮಾತುಗಳನ್ನು ಕೇಳುತ್ತಿದ್ದಂತೆ "ಅಮೃತಮಹಲ್ ತಳಿಯ ಹೋರಿ" ಆತ ಎಂದುಕೊಂಡೆ. ಅವರು ನನಗೆ ಒಳ್ಳೆಯ ಚಹಾ ತರಿಸಿಕೊಟ್ಟರು. ಅಜ್ಜಂಪುರಕ್ಕೆ ಒಂದು ಕಿಲೋ ಮೀಟರ್ ದೂರದ ಅಮೃತ್ ಮಹಲ್ ತಳಿ ಸಂಗೋಪನಾಲಯದ ಸೂಪರ್‌ವೈಸರ್ ರಾಮ ಸುಬ್ಬಯ್ಯ ಸೆಟ್ಟಿಯವರು ಹಳೇಕಾಲದ ಹೆಂಚು ಹೊದಿಸಿದ, ಅಷ್ಟೇ ಹಳೆಯ ಮಂಚ ಕುರ್ಚಿ ಮೇಜುಗಳ ಅತಿಥಿ ಗೃಹದಲ್ಲಿ ನನ್ನನ್ನು ಉಳಿಸಿದರು. ಅಲ್ಲಿಗೆ ಬಂದ ಕೆಲ ಮಕ್ಕಳಿಗೆ ಕತೆ ಹೇಳುತ್ತೇನೆ ಎಂದು ಹೇಳಿ ಕಳುಹಿಸಿದೆನಾದರೂ ಮತ್ತೆ ಅವು ಆ ಕಡೆ ಬರಲಿಲ್ಲ. ರಾಮಸುಬ್ಬಯ್ಯ ಶೆಟ್ಟಿ ಅವರ ಮನೆಯಲ್ಲೇ ಮಧ್ಯಾಹ್ನದ ಊಟ ಆಯ್ತು. ಮುಖ್ಯ ವೈದ್ಯಾಧಿಕಾರಿಗಳು ವರ್ಗಾವಣೆಗೆ ಪ್ರಯತ್ನ ನಡೆಸಿದ್ದರು. ಅಲ್ಲಿನ ಕಾವಲಿಗೂ ಬೀರೂರಿನ ಕಾವಲಿಗೂ ವ್ಯತ್ಯಾಸ ಎದ್ದು ಕಾಣುತ್ತಿತ್ತು. ಇಲ್ಲಿ ಎಲ್ಲದರ ಬಗ್ಗೆ ಏನೋ ಅಸಡ್ಡೆ, ನಿರ್ಲಕ್ಷ್ಯ, ಅತೃಪ್ತಿ. ಒಬ್ಬ ಮೇಲಧಿಕಾರಿ ನಗುನಗುತ್ತ ವ್ಯವಹರಿಸಿದರೆ ಅಥವಾ ಅದಕ್ಕೆ ತದ್ವಿರುದ್ಧವಾಗಿ ನಡೆದುಕೊಂಡರೆ ಏನೇನು ಆಗಬಹುದೆಂಬುದಕ್ಕೆ ಎರಡು ದಿನಗಳಲ್ಲಿ ಎರಡು ಸ್ಪಷ್ಟ ಉದಾಹರಣೆಗಳನ್ನು ಕಣ್ಣಾರೆ ಕಂಡೆ.

ಸಂಜೆ ಐದು ಗಂಟೆಗೆ ಶೆಟ್ಟಿಯವರ ಮಗಳು ಮತ್ತು ಅಣ್ಣನ ಮಗ ನನಗೆ ಕಾಫಿ ತಂದುಕೊಟ್ಟರು (ಮಧ್ಯಾಹ್ನ ಊಟ, ವಿಶ್ರಾಂತಿ ಆದಮೇಲೆ ಹಿಂದಿನ ದಿನಚರಿ ಬರೆದಿದ್ದೆ). ಅಲ್ಲೇ ಮುಂಭಾಗದ ರಾಮಮಂದಿರದಲ್ಲಿ ಜನ ಸೇರಿ ಭಜನೆ ಮಾಡಿದರು. ಶೆಟ್ಟಿಯವರು ಆ ಅಮೃತಮಹಲ್ ಕಾವಲಿನ ಪರಿಚಯ ಮಾಡಿಕೊಟ್ಟರು. ಬೀರೂರಿನದೂ ಸೇರಿದಂತೆ ಆರೇಳು ಅಮೃತಮಹಲ್ ತಳಿ ಉತ್ಪಾದನಾ ಕೇಂದ್ರಗಳಿಗೆ ಅಜ್ಜಂಪುರವೇ ಕೇಂದ್ರ. ಇಲ್ಲಿ ಅಮೃತಮಹಲ್ ಹಸುಗಳ ಜೊತೆ ಹೋರಿಗಳನ್ನು ಬಿಟ್ಟು ಅವು ಸುತ್ತಮುತ್ತಣ ವಿಸ್ತಾರವಾದ ಹುಲ್ಲುಗಾವಲಿನಲ್ಲಿ ಮೇಯುತ್ತ ಗರ್ಭ ಧರಿಸುವಂತೆ ಮಾಡುತ್ತಾರೆ. ಹುಟ್ಟಿದ ಕರುಗಳನ್ನು ಆರೆಂಟು ತಿಂಗಳು ಸಾಕಿ ಬೀರೂರಿಗೆ ಕಳಿಸುತ್ತಾರೆ. ಇಲ್ಲೂ ಮೇವಿನ ಸಂಗ್ರಹ ಪೌಷ್ಟಿಕ ಆಹಾರದ ಉತ್ಪಾದನೆ ಇದೆಯಾದರೂ ಗೋಬರ್ ಗ್ಯಾಸ್ ಪ್ಲಾಂಟ್ ಇಲ್ಲ. ಎರಡು ಭಾರಿ

ಹೋರಿಗಳನ್ನೂ ಕೋಣಗಳನ್ನೂ ಸಾಕಿ ಅವುಗಳ ವೀರ್ಯವನ್ನು ಸಂಗ್ರಹಿಸಿ ಹಳ್ಳಿಗರ ಹಸು, ಎಮ್ಮೆಗಳಿಗೆ ಕೃತಕ ಗರ್ಭಧಾರಣೆ ಮಾಡಿಸುತ್ತಾರೆ. ಹೋರಿ ಹಸುವಿನ ಮೇಲೆ ಹಾರಿದಾಗ ಅದರ ಶಿಶ್ನಕ್ಕೆ ಕೃತಕ ಯೋನಿಯನ್ನು ಅಳವಡಿಸಿ ವೀರ್ಯ ಸಂಗ್ರಹಿಸುತ್ತಾರೆ.

ಸಂಜೆ ಮಬ್ಬುಗತ್ತಲಲ್ಲಿ ಅಲ್ಲೇ ಹಿಂಭಾಗದಲ್ಲಿದ್ದ ಅರಳಿ ಕಟ್ಟೆ ನೋಡೋಣವೆಂದು ಹೋದರೆ ಅಲ್ಲಿ ಮೂರು ಹಂತಗಳ ಒಂದು ಸುಂದರ ವೀರಗಲ್ಲು. ಅದರ ಕೆಳಗೇ ಆರು ಜನ ಹೆಂಗಸರ ಕೆತ್ತನೆ ಇದ್ದ ಒಂದು ಮಾಸ್ತಿ ಕಲ್ಲಿತ್ತು. ಯಾವನೋ ವೀರ ಸತ್ತಾಗ ಅವನ ಜೊತೆ ಅವನ ಆರು ಜನ ಪತ್ನಿಯರೂ ಸಹಗಮನ ಮಾಡಿದ್ದು ಸ್ಪಷ್ಟವಾಗಿತ್ತು. ಅವನು ಯುದ್ಧದಲ್ಲಿ ಹೋರಾಡಿದ ಶೂರನೋ ಮನೆಯಲ್ಲಿ ಆರು ಜನ ಪತ್ನಿಯರನ್ನು ಎದುರಿಸದ ಧೀರನೋ, ತಿಳಿಯದು! ಸುತ್ತಮುತ್ತಣ ಊರ ಹೆಂಗಸರು ಅಲ್ಲಿಗೆ ಬಂದು ತಮ್ಮ ಹೊಸ ಸೀರೆಗಳನ್ನು ಆ ಮಾಸ್ತಿ ಕಲ್ಲಿಗೆ ಉಡಿಸಿ ಬಳಿಕ ಅವನ್ನು ಉಡುವ ಪದ್ಧತಿ ಅಲ್ಲಿದೆ. ತಾವೂ ಮಾಸ್ತಿಯರಂತೆ ಬದುಕಿನ ಉದ್ದಕ್ಕೂ ಮುತ್ತೈದೆಯರಾಗಿಯೇ ಉಳಿಯುವ ಹೆಣ್ಣು ಮಕ್ಕಳ ಬಯಕೆಯ ಪ್ರತೀಕ ಅದು. ರಾತ್ರಿ ಮತ್ತೆ ಶೆಟ್ಟಿ ಅವರ ಮನೆಯಲ್ಲಿ ಊಟ ಆಯ್ತು. ಅವರ ಜಾಣ ಹೆಣ್ಣು ಮಕ್ಕಳು ಮಾಡಿದ್ದ ಅಲಂಕಾರದ ಕುಸುರಿ ಕೆಲಸಗಳು ಗೋಡೆಗಳನ್ನು ಅಲಂಕರಿಸಿದ್ದುವು.

ರಾತ್ರಿ ಹತ್ತು ಗಂಟೆಗೆ ಚಿಕ್ಕಮಗಳೂರಿಗೆ ಹೋಗಿದ್ದ ಕಾವಲಿನ ಮುಖ್ಯಸ್ಥ ಡಾ. ರಾಜು ಬಂದರು. ಅವರಿಗೆ ಕನ್ನಡ ಚಳವಳಿಯಲ್ಲಿ ಆಸಕ್ತಿ ಇತ್ತು. ಭಾರತದಲ್ಲಿ ಮುಸ್ಲಿಮರ ಸಂಖ್ಯೆ ಬೆಳೆದು ಹಿಂದೂಗಳ ಸಂಖ್ಯೆ ಕಡಮೆಯಾಗುತ್ತ ಹೋದರೆ ಗತಿಯೇನು ಎಂಬ ತಮ್ಮ ತೀವ್ರ ಚಿಂತೆಯನ್ನು ವ್ಯಕ್ತಪಡಿಸಿದರು. ಅವರ ಆ ಭಯ ಎಲ್ಲ ವಿದ್ಯಾವಂತರಿಗಿದೆ, ಮತ್ತು ಅದು ನಿಷ್ಕಾರಣವಾದುದಲ್ಲ. ಈ ಬಗ್ಗೆ ಮಾತನಾಡಿದರೆ ಎಲ್ಲಿ ತಮ್ಮನ್ನು ಜಾತಿವಾದಿಗಳೆಂದು ಹೆಸರಿಸುವರೋ ಎಂಬ ಭಯದಿಂದ ಹಲವರು ಮೌನ ವಹಿಸುತ್ತಾರೆ.

## ಬುಕ್ಕಾಂಬೂದಿ

ಅಜ್ಜಂಪುರದ ಕಾಗೆಗಳು ಕರ್ರಗೆ ಧಪ್ಪಗೆ ಇರುವುದಲ್ಲದೆ ಬೆಳಗಿನ ಜಾವಕ್ಕೆ ಎದ್ದು ಗಟ್ಟಿಯಾಗಿ ಅರಚಿ ಗಲಾಟೆ ಮಾಡಿ ಏಳಿಸುತ್ತವೆ. "ನೀವು ಮಾತ್ರ ಅತ್ತ ಲಕ್ಷ್ಯ ಕೊಡದೆ ಚೆನ್ನಾಗಿ ಮಲಗಿರಿ" ಎಂದು ಯಾರೋ ಎಚ್ಚರಿಸಿದ್ದರು. ಚೆನ್ನಾಗಿ ಮಲಗುವವರಿಗೆ ತಾನೇ ಆ ಉಪದೇಶ ಎಂದು ನಾನು ಅವರ ಎಚ್ಚರಿಕೆಯಿಂದ ಸ್ವಲ್ಪವೂ ಹೆದರದೆ ಕಣ್ಮುಚ್ಚಿದರೆ ಅಕಸ್ಮಾತ್ ತಕ್ಕಮಟ್ಟಿಗೆ ಚೆನ್ನಾಗಿಯೇ ನಿದ್ದೆ ಬಂತು. ಬೆಳಗಿನ ಜಾವ ಕಾಗೆಗಳ ಹಾಹಾಕಾರ. ಎದ್ದು ನೋಡಿದರೆ ನನ್ನ ಕೈಗಡಿಯಾರ ನಿಂತುಬಿಟ್ಟಿದೆ. ಅದಕ್ಕೆ ಆ ಹಾಹಾಕಾರದಿಂದ ಹೃದಯ ಸ್ತಂಭನ ಆಗಿರಬೇಕು. ಸ್ವಲ್ಪ ಹೊತ್ತಿಗೆ ಗೋಡೆ ಗಡಿಯಾರ ನಾಲ್ಕು ಗಂಟೆ ಹೊಡೆಯಿತು. ಸ್ವಲ್ಪ ಹೊತ್ತು ಹೊರಳಾಡಿ, ಆರು ಗಂಟೆಗೆ ಸರಿಯಾಗಿ (26.5.85) ಕಾಫಿ ಕುಡಿದು ಹೊರಟೆ. ಕಾವಲಿನ ಹುಸೇನ್ ಸಾಬ್ ಒಳ ದಾರಿ ಮೂಲಕ ಮುಖ್ಯರಸ್ತೆ ಸೇರಲು ದಾರಿ ತೋರಿಸುವುದಕ್ಕಾಗಿ ಹೊರಟ. ಕೆರೆ ಏರಿಯ ಹಿಂದೆ ಒಂದು ಚಿಕ್ಕ ಹಳೆಯ

ದೇವಾಲಯದ ಮೇಲೆ ದೊಡ್ಡ ಮೀನನ್ನೂ ಹಾವನ್ನೂ ಕೆತ್ತಲಾಗಿತ್ತು. ಪಕ್ಕದ ಊರಲ್ಲಿ ಮುಸ್ಲಿಮರ ಆಕ್ರಮಣದಿಂದ ಪಾರುಮಾಡಲು ಮಣ್ಣಿಂದ ಮುಚ್ಚಿದ ಈಶ್ವರ ದೇವಾಲಯವಿತ್ತು. ಬಡವನಾಗಿದ್ದ ಹುಸೇನಸಾಬ್ ಮೂವರು ಮಕ್ಕಳ ತಂದೆ. ನನ್ನನ್ನು ಮುಖ್ಯರಸ್ತೆಗೆ ಸೇರಿಸಿ ಹಿಂದಿರುಗಿದ. ಅಲ್ಲೇ ಸಮೀಪದ ಬಗ್ಗರಳ್ಳಿ, ಆಸಂದಿ (ಇದು ಒಂದು ಚಿಕ್ಕ ನಾಡಿನ ಕೇಂದ್ರವಾಗಿತ್ತು), ಹಿರೇನಲ್ಲೂರುಗಳಲ್ಲಿ ಸುಂದರ ದೇವಾಲಯಗಳಿವೆಯೆಂದು ಅಲ್ಲಿನ ಜನರಿಂದ ತಿಳಿದುಬಂದರೂ ಅಷ್ಟು ದೂರ ನಡೆದು ಹೋಗುವ ಮನಸ್ಸು ಬರಲಿಲ್ಲ.

ಬೀರೂರಿಂದ ಅಜ್ಜಂಪುರಕ್ಕೆ ಬರುವಾಗ ದಾರಿಯುದ್ದಕ್ಕೂ ರಸ್ತೆ ಬದಿಯಲ್ಲಿ ಆಲದ ಮರ ಹುಣಿಸೇ ಮರಗಳು. ಒಂದು ಆಲದ ಮರದ ಬಿಳಿಲುಗಳಂತೂ ಜಟಿಲ ಕುಟಿಲವಾಗಿ ಹೆಣೆದುಕೊಂಡು ಭಾರಿ ಗಾತ್ರದ ಬೀಸಣಿಗೆಯಂತೆ ತೂಗಾಡುತ್ತಿದ್ದ ದೃಶ್ಯ ಅವರ್ಣನೀಯ. ಆದರೆ, ಅಜ್ಜಂಪುರ ಚನ್ನಗಿರಿ ರಸ್ತೆಯಲ್ಲಿ ಮರಗಳೇ ಇಲ್ಲವೆನ್ನುವಷ್ಟು ಕಡಮೆ. ಹೊಲಗಳ ಪಕ್ಕದಲ್ಲಿ ಉದ್ದಕ್ಕೂ ಮರಗಳನ್ನು ಹಾಕಿದರೆ ಸರಿಯಾಗಿ ಬೆಳೆ ಬರುವುದಿಲ್ಲವಾದ ಕಾರಣ ನಾವೇ ಅನೇಕ ರಸ್ತೆ ಗಿಡಗಳನ್ನು ಕಿತ್ತು ಹಾಕಿರುವುದಾಗಿ ಒಬ್ಬ ವ್ಯಕ್ತಿ ಹೇಳಿದ. ಅದೃಷ್ಟಕ್ಕೆ ತಂಗಾಳಿ ಬೀಸುತ್ತಿತ್ತು. ಹದ ಮಳೆ ಇನ್ನೂ ಬಿದ್ದಿರದಿದ್ದರೂ ಜನ ಹೊಲಗಳಲ್ಲಿ ಉಳುತ್ತಿದ್ದರು. ಹಣ್ಣೆ ಗ್ರಾಮಕ್ಕೆ ಮುನ್ನ ಬಲಗಡೆ ಹೊಲದಲ್ಲಿ ಎಂಟಡಿ ಎತ್ತರದ ಒಂದು ಕಲ್ಲು ಕಾಣಿಸಿತು. ಅದನ್ನು ಉಳುತ್ತಿದ್ದ ರೈತ ತಾನು ಉಳುತ್ತಿರುವುದು "ನೆಟ್ಟಗಲ್ಲು ಹೊಲ" ಎಂದ. ಆ ಕಲ್ಲಿನ ಮೇಲೆ ಯಾವುದೇ ಶಿಲ್ಪ ಬರಹ ಕಾಣಿಸಲಿಲ್ಲವಾದರೂ ಅದರ ತುಂಬ ಆಳವಾದ ಸಹಜ ಕುಳಿಗಳಿದ್ದು ಭೂಗರ್ಭವಿಜ್ಞಾನಿಗಳು ಗಮನಿಸಬೇಕಾದ ಶಿಲೆ ಎಂದು ಎಣಿಸಿದೆ. ಅಲ್ಲೇ ಇನ್ನೊಂದು ಚಿಕ್ಕ ಬಂಡೆಯ ಮೇಲೂ ಅಂತಹುದೇ ಕುಳಿಗಳಿದ್ದುವು. ಭೂಮಿಯೊಳಗಿನ ಲಾವಾರಸ ಉಕ್ಕಿ ಬಂದು ತಣ್ಣಗಾಗುವಾಗ ಉಂಟಾಗ ಕುಳಿಗಳಿರಬಹುದು ಅಥವಾ, ಯಾವುದೋ ಉಲ್ಕೆಯೋ ಏನೋ! ಹಣ್ಣೆ ಗ್ರಾಮದಲ್ಲಿ ಅರ್ಧದಷ್ಟು ಜನ ದೇವಾಂಗದವರಾದರೂ ಯಾರೂ ನೇಕಾರಿಕೆ ಮಾಡುತ್ತಿಲ್ಲ. ಊರ ಹೊರಗಡೆ ರಸ್ತೆ ಪಕ್ಕದಲ್ಲಿ ಒಂದು ಸುಂದರ ಭಗ್ನ ಸ್ತ್ರೀವಿಗ್ರಹ ಕಾಣಿಸಿತು. ಅಲ್ಲೇ ಪಕ್ಕದಲ್ಲಿದ್ದ ಗುಡಿಯಲ್ಲಿ ಹೊಸ ವಿಗ್ರಹ ಮಾಡಿಸಿ ಇರಿಸಿದ್ದರು. ದಾರಿಯಲ್ಲಿ ಉಕ್ಕಡದವ್ವನ ಗುಡಿ ಒಂದು ದಿಬ್ಬದ ಮೇಲಿತ್ತು (ಬಹುಶಃ ಹಿಂದೆ ಆ ಜಾಗದಲ್ಲಿ ಸುಂಕ ವಸೂಲಿ ಮಾಡುತ್ತಿದ್ದಿರಬಹುದು. ಉಕ್ಕಡ = ಸುಂಕ ವಸೂಲಿ ಜಾಗ). ಆ ಪುಟ್ಟ ಗುಡಿಯ ಮುಂದೆ ಎಲ್ಲ ಬಸ್ಸು ಲಾರಿಗಳೂ ನಿಲ್ಲುತ್ತವೆ. ದೇವರಿಗೆ ಒಳಗೆ ಪೂಜೆ ಮಾಡಿ ಪೂಜಾರಿ ಎಲ್ಲರಿಗೂ 'ತೀರ್ಥ' ಹಂಚಿ ವಾಹನಗಳಿಗೆ ಕುಂಕುಮ ಬಳಿಯುತ್ತಾನೆ. ಭಕ್ತಾದಿಗಳು ಇಳಿದು ಬಂದು ಅಥವಾ ವಾಹನಗಳಲ್ಲಿ ಕುಳಿತೇ ಕಾಣಿಕೆ ಒಪ್ಪಿಸುತ್ತಾರೆ. ಅಲ್ಲಿ ಒಂದು ಬೇವಿನ ಮರ ಸೊಂಪಾಗಿ ಬೆಳೆದು ಸಾಲುಮರಗಳೇ ಇಲ್ಲದ ಆ ರಸ್ತೆಯಲ್ಲಿ ಓಡಾಡುವ ಜನಕ್ಕೆ ಒಂದು ತಂಪು ತಂಗುದಾಣವಾಗಿದೆ. ಉಕ್ಕಡದಮ್ಮನ ಗುಡಿಯ ಮುಂಭಾಗವೆಲ್ಲ ರಕ್ತದಿಂದ ಕೆಂಪಾಗಿತ್ತು. ಕೋಳಿ ಹುಂಜಗಳ ಒಣಗಿದ ತಲೆಗಳು ಸಮೀಪದ ಗಿಡವೊಂದರಿಂದ ನೇತಾಡುತ್ತಿದ್ದುವು. ಒಬ್ಬ ಅಜ್ಜಿ ಮೊಮ್ಮಗನ ಜೊತೆ ಬಂದವಳೇ ಗುಡಿಯ ಮುಂದೆ ನಮ್ರತೆಯಿಂದ ಕೈಮುಗಿದು ಮೂರು ಬಾರಿ ಸುತ್ತಿ, ಅಡ್ಡ ಬಿದ್ದು "ಅವ್ವ

ನೀನು ಬಿಟ್ಟರೆ ಇನ್ನಾರಿದ್ದಾರವ್ವಾ, ನನ್ನನ್ನು ನೋಡಿಕೋ" ಎಂದು ಗಟ್ಟಿಯಾಗಿ ಹೇಳುತ್ತ ಹೋದಳು. ಬೆಳಿಗ್ಗೆ ಹತ್ತೂವರೆಗೆ ಬುಕ್ಕಾಂಬೂದಿ ಸೇರಿದೆ. ಅದು ಅಂತಹ ತೀರ ದೊಡ್ಡ ಊರಲ್ಲದಿದ್ದರೂ ಅಲ್ಲಿಯ ಗದ್ದೆ ತೋಟಗಳಿಂದ ಕೆಲವು ಜನ ಅತ್ಯಂತ ಶ್ರೀಮಂತರಾಗಿದ್ದರು. ನಾನು ನೇರವಾಗಿ ಪಶುವೈದ್ಯಾಲಯಕ್ಕೆ ಹೋಗಿ ಅಲ್ಲಿಯ ಹೆಲ್ತ್ ಇನ್‌ಸ್ಪೆಕ್ಟರನ್ನು ವಿಚಾರಿಸಿದಾಗ ಅವರು ಹಳ್ಳಿಗಳಿಗೆ ಹೋದ ವಿಷಯ ತಿಳಿಯಿತು. ಅಜ್ಜಂಪುರದ ಶೆಟ್ಟಿ ಅವರು ಅವರಿಗೆ ನನ್ನ ಪರಿಚಯದ ಪತ್ರ ಕೊಟ್ಟಿದ್ದರು. ಅಪರಿಚಿತ ಸ್ಥಳ ಅದು. ಆಸ್ಪತ್ರೆಯ ಜವಾನ ಪ್ರಭುದೇವ್‌ಗೆ ಇಲ್ಲಿ ಪ್ರೌಢಶಾಲೆಯ ಉಪಾಧ್ಯಾಯರಿದ್ದರೆ ಕರೆತನ್ನಿ ಎಂದು ನನ್ನ ವಿಳಾಸ ಕೊಟ್ಟೆ. ಸ್ವಲ್ಪ ಹೊತ್ತಿಗೆ ಕ್ರಾಫ್ಟ್ ಟೀಚರ್ ಚಂದ್ರಶೇಖರಪ್ಪ ಎಂಬುವರು ಬಂದರು. ಅವರಿಗೆ ನನ್ನ ವಿಷಯ ತಿಳಿದಿರದಿದ್ದರೂ ನಾನು ಬಂದ ಉದ್ದೇಶವನ್ನು ಸೂಕ್ಷ್ಮವಾಗಿ ವಿವರಿಸಿದೆ. ಅವರ ಮನೆಯಲ್ಲಿ ಏನೋ ಸೂತಕ ಇದ್ದುದರಿಂದ ಅವರು ತಮ್ಮ ಮನೆಗೆ ನನ್ನನ್ನು ಕರೆದೊಯ್ಯುವ ಸ್ಥಿತಿಯಲ್ಲಿರಲಿಲ್ಲ. ನಿಜ ಹೇಳಬೇಕೆಂದರೆ ಮೊದ ಮೊದಲು ಅವರಿಗೆ ನನ್ನ ಬಗ್ಗೆ ನಂಬಿಕೆ ಹುಟ್ಟಿದಂತೆ ಕಾಣಲಿಲ್ಲ. ವಿಶ್ವವಿದ್ಯಾಲಯದ ಪ್ರಾಧ್ಯಾಪಕನೊಬ್ಬ ಹೀಗೆ ಧುತ್ತೆಂದು ಹೇಳದೆ ಕೇಳದೆ ಬರುವುದೆಂದರೆ ಏನೊ? ಇವರು ಯಾರೋ ಹೇಗೋ ? - ಎಲ್ಲರಿಗೂ ಸಹಜವಾಗಿಯೇ ಬರಬಹುದಾದ ಮಾತ್ರವಲ್ಲ, ಬರಬೇಕಾದ ಸಂದೇಹಗಳು. ನನಗೆ ಆ ಕ್ಷಣ ಎಲ್ಲಕ್ಕಿಂತ ಹೆಚ್ಚಾಗಿ, ಆದರಾತಿಥ್ಯಕ್ಕಿಂತ ಹೆಚ್ಚಾಗಿ ಒಂದು ಲೋಟ ಕಾಫಿಯ ಮತ್ತು ಒಂದು ಚಾಪೆಯ ಅಗತ್ಯವಿತ್ತು. ಪಕ್ಕದ ಆಸ್ಪತ್ರೆಯ ಕಾಂಪೋಂಡರ್ ರಾತ್ರಿ ತಮ್ಮ ಆಸ್ಪತ್ರೆಯ ಒಂದು ಮಂಚದಲ್ಲಿ ಅವಕಾಶಮಾಡಿಕೊಡುವುದಾಗಿ ಭರವಸೆ ನೀಡಿದರು. ಅಲ್ಲಿಯವರೆಗೆ ಎಂದೂ ಆಸ್ಪತ್ರೆ ಸೇರಿರದಿದ್ದ ನಾನು ಅದೂ ಒಂದು ಅವಕಾಶವೆಂದು ಒಪ್ಪಿಕೊಂಡೆ, ಒಪ್ಪಿಕೊಳ್ಳದೆ ವಿಧಿಯೋ ಇರಲಿಲ್ಲ. ಅಷ್ಟರಲ್ಲಿ ಅಲ್ಲಿಗೆ ಬಂದ ಯಾವುದೋ ಊರಿನ ಹೈಸ್ಕೂಲ್ ಮುಖ್ಯೋಪಾಧ್ಯಾಯರೊಬ್ಬರು, "ನೀವೇನಾ ಗೋಕಾಕ್ ಚಳವಳಿಯ ಚಿದಾನಂದಮೂರ್ತಿ" ಎಂದಾಗ ಅಲ್ಲಿದ್ದವರಿಗೆ ಸ್ವಲ್ಪ ನಂಬಿಕೆ ಬಂದಿರಬೇಕು. "ನಿಮ್ಮ ಶಾಲೆಯಲ್ಲಿ ಜ್ಞಾನಗಂಗೋತ್ರಿ (ಸಂ: ನಿರಂಜನ) ಎಂಬ ಪುಸ್ತಕದಲ್ಲಿ ನನ್ನ ಪರಿಚಯವಿದೆ, ಜೊತೆಗೆ ನನ್ನ ಫೋಟೋ ಕೂಡ ಇದೆ" ಎಂದು ಆ ಮುಂಚೆ ಹೇಳಿದ್ದೆ. ಅಲ್ಲಿ ಬೇಕರಿ ನಡೆಸುವ ನಾಡಿಗ್ ಎಂಬುವವರು ನನ್ನ ಗೆಳೆಯರಾದ ಸುಮತೀಂದ್ರ ನಾಡಿಗರ ಬಂಧು ಎಂದು ಹೇಳಿಕೊಂಡು ನನ್ನ ಬಗ್ಗೆ ಜನಗಳಿಗೆ ಇನ್ನೂ ಸ್ವಲ್ಪ ವಿಶ್ವಾಸ ಬರುವಂತೆ ಮಾಡಿದರು. 1946-50ರಲ್ಲಿ ನನ್ನ ಗೆಳೆಯನಾಗಿದ್ದ ಅಣಪೂರು ಕರಿಬಸಪ್ಪನ ಬಂಧುಗಳ ಭೇಟಿಯಾಗಿ ನನ್ನ ಪರಿಚಯ ಬೆಳೆದಿತ್ತು. ಬುಕ್ಕಾಂಬೂದಿ ಶಾಲೆಯ ಜವಾನ ಚಂದ್ರಶೇಖರಪ್ಪನ ಹೆಂಡತಿ ಮಕ್ಕಳು ಊರಿಗೆ ಹೋಗಿದ್ದುದರಿಂದ ನಾನು ಆ ರಾತ್ರಿ ಅವನ ಮನೆಯಲ್ಲಿ ಉಳಿಯುವುದು ಎಂದು ಏರ್ಪಾಟಾಯಿತು. ನಾನು ಒಂದಷ್ಟು ಹಣ್ಣು ಬಿಸ್ಕತ್ತು ತರಿಸಿಕೊಂಡು ತಿಂದು ಆಸ್ಪತ್ರೆಯ ಚಾಪೆ ಮೇಲೆ ಕಾಲು ಚಾಚಿದೆ. ಆಗ ಸುಮಾರು ಮಧ್ಯಾಹ್ನ ಒಂದು ಗಂಟೆ.

ಎಚ್ಚರಾಗುವ ಹೊತ್ತಿಗೆ ಮಲ್ಲೇಗೌಡ ಬಂದಿದ್ದರು. ಅವರು ಬಿ.ಎಸ್.ಸಿ. ಪದವೀಧರರಾಗಿದ್ದು ಕೆಲಸಕ್ಕೆ ರಾಜೀನಾಮೆ ನೀಡಿ ಊರಲ್ಲೇ ತಮ್ಮ ಹೊಲ ತೋಟ

ನೋಡಿಕೊಂಡು ಊರಿನ ಸಮಾಜ ಕಾರ್ಯಕರ್ತರೆನ್ನಿಸಿಕೊಂಡಿದ್ದರು. ಅವರು ಆ ಹಿಂದೆ ನನ್ನನ್ನು ನೋಡಿ ಬಲ್ಲವರಾಗಿದ್ದರು. ವಿನಯ ಸೌಜನ್ಯಗಳ ಪ್ರತೀಕವಾಗಿದ್ದ ಅವರು ಆ ಊರಿನ ಒಂದು ರೀತಿಯ ಸಂಸ್ಕೃತಿಯ ಪ್ರತಿನಿಧಿ, ಬಡಜನರ ಆಶೋತ್ತರ. ಅವರು ವರಿಷ್ಠ ಸಂಖ್ಯೆಯಲ್ಲಿ ಬಡಜನರಿಗೆ ವೃದ್ಧಾಪ್ಯ ವೇತನ ಕೊಡಿಸಿದ್ದಾರೆ. ಹಲವಾರು ಬಡಜನರಿಗೆ ಸರ್ಕಾರಿ ಸಾಲ ಕೊಡಿಸಿದ್ದಾರೆ. ಆ ಪ್ರದೇಶದಲ್ಲಿ ಆ ಊರಲ್ಲೇ ಅತಿ ಹೆಚ್ಚು ಸಂಖ್ಯೆಯ ಜನತಾಗೃಹಗಳು ಆಗಿರುವುದು. ಉಚಿತ ನಿವೇಶನಗಳನ್ನು ಹಂಚುವಾಗ ಎಲ್ಲ ಜಾತಿಯ ಜನರೂ ಅಕ್ಕಪಕ್ಕದಲ್ಲಿರುವಂತೆ ನೋಡಿಕೊಂಡಿರುವುದು ನನಗೆ ಮೆಚ್ಚುಗೆ ಆಯ್ತು. ಅಲ್ಲದೆ, ತಮ್ಮ ಊರಿನ ಇತಿಹಾಸದ ಬಗ್ಗೆ ಅವರು ನಾಟಕ ಬರೆದು ಆ ಊರಲ್ಲಿ ಅದನ್ನು ಆಡಿಸಿದ್ದಾರೆ. ಆ ಗ್ರಾಮದ ಶಿಲ್ಪ ಶಾಸನಗಳನ್ನು ಸಂರಕ್ಷಿಸಲು ಅವರು ಆ ಮೊದಲೇ ಎಚ್ಚರ ವಹಿಸಿದ್ದು ನನಗೆ ಸ್ವಲ್ಪ ಆಶ್ಚರ್ಯವನ್ನೇ ಉಂಟುಮಾಡಿತು. ಅವರಂತೆ ವಿದ್ಯಾವಂತರಾಗಿ ಹಳ್ಳಿಯಲ್ಲಿ ನೆಲಸಿ, ಇಡೀ ಗ್ರಾಮದ ಎಲ್ಲ ಬಗೆಯ ಪ್ರಗತಿಗೆ ರಚನಾತ್ಮಕ ಗಮನವನ್ನು ಕೊಟ್ಟಿರುವ ಅಂತಹ ವ್ಯಕ್ತಿಯನ್ನು ನಾನಿನ್ನೂ ಕಾಣಬೇಕಾಗಿದೆ. ಅವರು ಆ ದಿನ ಕರೆದೊಯ್ದು ಊರ ಒಳಗಣ, ಹೊರಗಣ ಅನೇಕ ಜಾಗಗಳನ್ನು, ಐತಿಹಾಸಿಕ ಕುರುಹುಗಳನ್ನು ತೋರಿಸಿದರು.

ಬುಕ್ಕಾಂಬೂದಿಯ ನಿಜವಾದ ಹೆಸರು "ಬುಕ್ಕಾಂಬುಧಿ" : ಬುಕ್ಕನ ಹೆಸರಲ್ಲಿ ನಿರ್ಮಾಣವಾದ ಕೆರೆಯಿಂದ ("ಅಂಬುಧಿ") ಆ ಹೆಸರು ಬಂದಿದೆ ("ಬುಕ್ಕಾಂಬುಧಿ" ಎಂಬ ಮೂಲರೂಪ ರೈಸರ ಎಪಿಗ್ರಾಫಿಯ ಕರ್ನಾಟಿಕ, ಸಂಪುಟ 6, ತರೀಕೆರೆ 91 ಇಲ್ಲಿನ ಶಾಸನದಲ್ಲಿ ದಾಖಲಾಗಿದೆ). ಊರೊಳಗೆ ಒಂದು ಮಠದ ಮನೆ ಮತ್ತು ಗುಡಿಗಳ ಮಧ್ಯೆ ಒಂದು ಬಾವಿ ಇದೆ. ಅಲ್ಲಿಗೆ ಜನ ಗಂಗಾಪೂಜೆಗೆ ಬರುವುದರಿಂದ ಚಪ್ಪಲಿ ಧರಿಸಿರುವವರು ಗುಡಿಯ ಹಿಂಭಾಗದಲ್ಲಿ ಸುತ್ತಿಕೊಂಡು ಹೋಗಬೇಕೇ ಹೊರತು ಬಾವಿ, ಗುಡಿ ಮಧ್ಯದ ದಾರಿಯಲ್ಲಿ ಹೋಗಕೂಡದು. ಅಲ್ಲೇ ಬದಿಯಲ್ಲಿ ಶಾಲಿವಾಹನ ಶಕ 1467ರ (ಕ್ರಿ.ಶ. 1545) ಒಂದು ದೊಡ್ಡ ಶಿಲಾಶಾಸನವಿದೆ. ಅದರ ಮೇಲೆ ಜನ ತೆಂಗಿನಕಾಯಿ ಒಡೆದು ಒಡೆದು ಕೆಲಭಾಗ ಹಾಳಾಗಿದೆ. ದಾರಿಯ ಬದಿಯಲ್ಲೊಂದು ಗಜಲಕ್ಷ್ಮಿ ವಿಗ್ರಹ ಬಿದ್ದಿದೆ. ಹತ್ತಿರದ ಚನ್ನಕೇಶವ ದೇವಾಲಯದ ಬಹು ಸುಂದರ ಮೂಲ ವಿಗ್ರಹ ಹೊಯ್ಸಳರ ಕಾಲದ್ದು (13ನೇ ಶ.): ಅದರ ಮುಂದೆ ನಾಲ್ಕಂಗುಲ ಎತ್ತರದ ಒಂದು ಕಿರುಶಿಲ್ಪವಿದೆ. ಅದನ್ನು ಯಾರಾದರೂ ಜೇಬಿನಲ್ಲಿಟ್ಟುಕೊಂಡು ಒಯ್ಯಬಹುದೆಂಬ ಭಯ ನನ್ನನ್ನು ಕವಿದು (ನಾನೇ ಅದನ್ನು ತೆಗೆದುಕೊಂಡು ಬರಲೇ ಎಂಬ ಆಸೆಯೂ ಸುಳಿದು), ಅದನ್ನು ಸರಿಯಾದ ಕಡೆ ಸುರಕ್ಷಿತ ಮಾಡಬೇಕೆಂದು ಸೂಚಿಸಿದೆ. ಅಲ್ಲಿನ ಪಂಪಾ ವಿರೂಪಾಕ್ಷ ದೇವಾಲಯದಲ್ಲಿ ಬರಿ ಉತ್ಸವ ಮೂರ್ತಿ ಇದ್ದು, ಗುಡಿ ಪಕ್ಕ ಮೂಲ ದೇವಾಲಯದ ಕಂಬಗಳು ಮಣ್ಣಲ್ಲಿ ಬಿದ್ದಿವೆ. ಅಲ್ಲೇ ಮೂರೋ ನಾಲ್ಕೋ ಆಂಜನೇಯನ ವಿಗ್ರಹಗಳಿವೆ. ಹಿಂದೆ ಇದ್ದ ಕೋಟೆ ಹಾಳಾಗಿದೆ.

ಬುಕ್ಕಾಂಬೂದಿಯ ಪಕ್ಕದಲ್ಲಿ ಒಂದು ದೊಡ್ಡ ಗುಡ್ಡ ಇದೆ. ಅದರ ಮೇಲೆ ಸುಣ್ಣ ಬಳಿದಿರುವುದರಿಂದ ದೂರಕ್ಕೆ ಬೆಳ್ಳಗೆ ಕಾಣಿಸುವ ಒಂದು ದೇವಾಲಯವಿದೆ. ಅಲ್ಲಿ ಈ ಶತಮಾನದ ಎರಡನೆಯ ದಶಕದಲ್ಲಿ (ಸು. ಕ್ರಿ.ಶ. 1915) ಬಳ್ಳಾರಿ ಜಿಲ್ಲೆಯ ಉಜ್ಜಯಿನಿ ಪೀಠದ ಗುರುಗಳಾದ ಶ್ರೀ ಸಿದ್ಧಲಿಂಗ ಸ್ವಾಮಿಗಳು ತಪಸ್ಸು ಮಾಡಿದ ಗವಿಯಿದೆ. ಬಾಳೆಹಳ್ಳಿಯ ವೀರಸಿಂಹಾಸನದ ಗುರುಪೀಠವನ್ನು ಚಿತ್ರದುರ್ಗದ (ವಿರಕ್ತ ಪೀಠವಾದ) ಶ್ರೀ ಮುರುಗಾ ಮಠದ ಶ್ರೀ ಜಯದೇವ ಜಗದ್ಗುರುಗಳು ತಮ್ಮ 'ಮರಿ'ಯನ್ನು ಅಲ್ಲಿ ಪ್ರತಿಷ್ಠಾಪಿಸಿ ಅದನ್ನು ತಮ್ಮ ವಶಕ್ಕೆ ತೆಗೆದುಕೊಳ್ಳುವ ಯೋಚನೆಯಲ್ಲಿದ್ದಾಗ ಶ್ರೀ ಸಿದ್ಧಲಿಂಗ ಸ್ವಾಮಿಗಳಿಗೆ ಬೇರೇನೂ ತೋಚದೆ ಅದನ್ನು ಗುರುಪೀಠದವರ ಕೈಯಲ್ಲೇ ಉಳಿಸುವುದಕ್ಕಾಗಿ ಇಲ್ಲಿಗೆ ಬಂದು ಹುಲಿ ಕರಡಿಗಳ ಮಧ್ಯೆ ಆ ಗುಹೆಯಲ್ಲಿ ತಪಸ್ಸನ್ನಾಚರಿಸಿದರೆಂದೂ, ಮೈಸೂರು ಸರ್ಕಾರದ ಪ್ರತಿನಿಧಿಯೊಬ್ಬರು ತಾವೇ ಸ್ವತಃ ಬಂದು ಅಲ್ಲಿಗೆ ಬಾಳೆಹಳ್ಳಿ (ಬಾಳೆ ಹೊನ್ನೂರು) ಪೀಠದ ವಟುವನ್ನು ಪ್ರತಿಷ್ಠಾಪಿಸುವ ಹುಕುಮ್ಮನ್ನು ತೋರಿಸಿದ ಮೇಲೆ ಆ ಗುಡ್ಡದಿಂದ ಇಳಿದು ಬಂದರೆಂದೂ ಅಲ್ಲಿಯವರು ಹೇಳುತ್ತಾರೆ. ಗುರು-ವಿರಕ್ತರ ತಿಕ್ಕಾಟ ಬರೀ ಇತಿಹಾಸದ ಭಾಗವಾಗಿಲ್ಲ; ಈಗಿನ ವಾಸ್ತವವೂ ಹೌದು. "ಪಂಚಪೀಠಗಳನ್ನು ವಿರಕ್ತರು ನಾಶಮಾಡಲೆಂದಿದ್ದುದನ್ನು ಶ್ರೀ ಸಿದ್ಧಲಿಂಗಸ್ವಾಮಿಗಳು ತಡೆದರು" ಎಂದು ಅಲ್ಲಿನ ಜನಕ್ಕೆ ಅಭಿಮಾನವಿದೆ (ಶ್ರೀ ಸಿದ್ಧಲಿಂಗಸ್ವಾಮಿಗಳು ಏನೋ ಜಗಳ ಮಾಡಿಕೊಂಡು ಬಂದು ಕೆಲಕಾಲ ಇಲ್ಲಿದ್ದರೆಂದೂ ಕತೆ ಇದೆ). ಆ ಗುಡ್ಡಕ್ಕೆ ಬೈರಾಗಿಗುಡ್ಡವೆಂದು ಹೆಸರಿದೆ. ಹಿಂದೆ ಬುಕ್ಕರಾಯ ಎಂಬಾತ (ಇವನು ವಿಜಯನಗರದ ಹಕ್ಕ, ಬುಕ್ಕರಲ್ಲಿ ಒಬ್ಬನೆಂದು ನಂಬಿದ್ದಾರೆ) ಅಲ್ಲಿಗೆ ಬೈರಾಗಿಯಾಗಿ ಬಂದು ಅಲ್ಲಿ ಕೆರೆ ಕಟ್ಟಿಸಿದನೆಂದೂ ಆತನಿಗೆ ಅಲ್ಲೇ ಪದ್ಮಾವತಿ ಎಂಬುವಳೊಡನೆ ಮದುವೆಯಾಗಿ ಕ್ರಮೇಣ ಅವನ ಪ್ರಖ್ಯಾತಿ ಹೆಚ್ಚಿದ ಕಾರಣದಿಂದ ಜನ ಅವನನ್ನು ಕೊಲ್ಲಲು ಯತ್ನಿಸಿದಾಗ ಅವನು ಸತ್ತನೆಂಬ ಸುಳ್ಳು ಸುದ್ದಿ ಹಬ್ಬಿ ಪದ್ಮಾವತಿ ಬುಕ್ಕಾಂಬುಧಿ ಕೆರೆಗೆ ಹಾರಿ ಸತ್ತಳೆಂದೂ, ಹಾಗೆ ಹಾರುವ ಮುನ್ನ "ಈ ಊರಲ್ಲಿ ತನ್ನಂತೆಯೇ ಎಲ್ಲಾ ಹೆಂಗಸರೂ ವಿಧವೆಯರಾಗಲಿ" ಎಂಬ ಶಾಪ ಕೊಟ್ಟಳೆಂದೂ ಕತೆಯಿದೆ. ಆ ಬಳಿಕ ಬಹಳ ಕಾಲ ಆ ಊರಿನ ಗಂಡಸರ ಹೊಟ್ಟೆ ಉಬ್ಬಿ ಸಾಯುತ್ತ ಆ ಊರಲ್ಲಿ ವಿಧವೆಯರೇ ಹೆಚ್ಚಾಗುತ್ತ ಬಂದ ಕಾರಣ, ಆ ಊರಿಗೆ ಹೊರಗಿನವರು ಹೆಣ್ಣು ಮಕ್ಕಳನ್ನು ಕೊಡಲು ಹೆದರುತ್ತಿದ್ದರು. ಶ್ರೀ ಸಿದ್ಧಲಿಂಗಸ್ವಾಮಿಗಳಿಂದ ಆ ಶಾಪ ನಿವಾರಣೆಯಾಯಿತು ಎಂದು ಜನ ನಂಬಿದ್ದಾರೆ. ಈಗ ಆ ಸಮಸ್ಯೆ ಇಲ್ಲ. ಗುಡ್ಡದ ಮೇಲಿನ ದೇವಾಲಯದಲ್ಲಿ ಅವರ ಒಂದು ಶಿಲಾಪ್ರತಿಮೆಯನ್ನು ಸ್ಥಾಪಿಸಲು ಯತ್ನ ನಡೆದಿದೆ. ಆ ಪ್ರತಿಮೆಯನ್ನು ಊರೊಳಗೆ ಗುಡಿಯಲ್ಲಿ ನೀರು, ಬಿಲ್ವ, ಹೂವು, ಕುಂಕುಮಗಳ ಮಧ್ಯೆ ಇರಿಸಿದ್ದಾರೆ. ಬೆಟ್ಟವನ್ನೇರಲು ನಾನು ಹೋಗಲಿಲ್ಲ - ಅಷ್ಟು ಆಯಾಸವನ್ನು ಆ ಸಂದರ್ಭದಲ್ಲಿ ನನ್ನ ಬಡಕಲು ದೇಹಕ್ಕೆ ಕೊಡಲು ಹೆದರಿದೆ.

ಬುಕ್ಕಾಂಬುದಿ ಊರಿನ ಮೂಲ ಹೆಸರು ಹಾಗೆ ನೋಡಿದರೆ, ಅರಘಟ್ಟ - ಇದು ಒಂಬತ್ತನೇ ಶತಮಾನದಷ್ಟು ಹಳೆಯದು. ಕ್ರಿ.ಶ. 1208ರಲ್ಲಿ ಅಲ್ಲಿ "ಮಾದಸಮುದ್ರ"

ಎಂಬ ಹೆಸರ ಕೆರೆ ನಿರ್ಮಾಣವಾಯ್ತು. ಅದನ್ನು ಹದಿನಾಲ್ಕನೇ ಶತಮಾನದಲ್ಲಿ ಬುಕ್ಕರಾಯ ಜೀರ್ಣೋದ್ಧಾರ ಮಾಡಿಸಿದ್ದರಿಂದ ಅದು "ಬುಕ್ಕಾಂಬುಧಿ" ಎಂಬ ಹೆಸರು ಪಡೆಯಿತು. ಊರಿಗೆ ಮೂರು ಕಿಲೋ ಮೀಟರ್ ದೂರದಲ್ಲಿ ಕಣಿವೆಗಳ ಮಧ್ಯೆ ದೊಡ್ಡದಾದ ಕೆರೆ, "ಬುಕ್ಕಾಂಬುಧಿ" ಇದೆ. ಏರಿ ಉದ್ದ 840 ಮೀಟರ್, ಎತ್ತರ 13 ಮೀಟರ್. ಅದರ ಎಡ ಅಂಚಿನಲ್ಲಿ ಎತ್ತರದ ದಿಣ್ಣೆ ಮೇಲೆ ಪಂಪಾ ವಿರೂಪಾಕ್ಷ ಮೂಲ ದೇವಾಲಯವಿದೆ. (ಇನ್ನೊಂದು ಊರ ಒಳಗೆ ಇದೆ). ಅಲ್ಲೇ ಹೊರಗೆ ಇರುವ ಶಾಸನದಿಂದ ಅದು 12-13ನೇ ಶತಮಾನದ ಹೊಯ್ಸಳ ಶೈಲಿಯ ದೇವಾಲಯವೆಂಬುದು ಸ್ಪಷ್ಟ. ಲೇತ್‌ನಲ್ಲಿ ತಿರುಗಿಸಿದ ನುಣುಪು ಕಂಬಗಳು ಹೊರಗೆ ಬಿದ್ದಿದ್ದು ಅವನ್ನೆಲ್ಲ ಈಗ ಎತ್ತಿ ನಿಲ್ಲಿಸಿದ್ದಾರೆ. ಹಲವಾರು ಕುಸುರಿ ಕೆಲಸದ ಕಂಬಗಳೂ ಶಿಲ್ಪಗಳೂ ಪೊದೆಗಳಲ್ಲಿ ಬಿದ್ದಿವೆ. ಮೂಲ ದೇವಾಲಯದ ಮೇಲೆ ಹುಲಿಯನ್ನು ಸಳ ಕೊಲ್ಲುವ ಲಾಂಛನವಿದೆ. ದೇವಾಲಯದ ನವರಂಗದ ಭಾಗ ಈಚಿನ ವಿಜಯನಗರ ಕಾಲದ್ದು. ಕಂಬಗಳ ಮೇಲೆ ನರ್ತನ ಮಾಡುತ್ತಿರುವ ಶಿಲ್ಪಗಳಿವೆ. ಅಲ್ಲೇ ಒಂದು ಗುಂಡ ಬ್ರಹ್ಮಯ್ಯಗಳ* ಶಿಲ್ಪವೂ ಉಂಟು. ಎಲ್ಲವೂ ಅರಕ್ಷಿತ. ಸ್ವಲ್ಪ ಮೇಲೆ ಬಂಡೆಯಲ್ಲಿ 'ಒಡಮೂಡಿದ' (ಉದ್ಭವ) ಗಣೇಶ ಮೂರ್ತಿಯಿದೆ. ಅದು ಈಗಲೂ ಬೆಳೆಯುತ್ತಿದೆಯೆಂಬ ನಂಬಿಕೆ ಇದೆ. ಕೆರೆ ದಂಡೆಯ ಮೇಲೆ ಸಪ್ತ ಕನ್ನಿಕೆಯರ ಒಂದು ಹಳೆಯ, ಇನ್ನೊಂದು ಈಚಿನ ಎರಡು ಶಿಲ್ಪ ಪಟ್ಟಿಕೆಗಳಿವೆ. ಹಳೆಯದು ಕಳೆದು ಹೋದಾಗ ಹೊಸದನ್ನು ಮಾಡಿಸಿಟ್ಟರು (ಬಳಿಕ ಹಳೆಯದು ಸಿಕ್ಕಿತು). ಹೊಸದರ ಮೇಲೆ ಅಕ್ಷರಗಳಿವೆ. ಹಲವು ಕೆರೆಗಳ ಮೇಲೆ ಆ ಕೆರೆಯ ಅಧಿದೇವತೆಯೆಂದು ಜನ ನಂಬುವ ಏಳು ಕನ್ನಿಕೆಯರ ಶಿಲ್ಪಗಳಿರುತ್ತವೆ. ಇನ್ನು ಕೆಲವೆಡೆ - ಉದಾ. ಗೆ ನನ್ನ ಊರ ಕೆರೆ - ಏಳು ಕಲ್ಲುಗಳಿಗೆ ಸುಣ್ಣ ಬಳಿದು ಅವನ್ನೇ "ಕನ್ನಿಕೆರೆ" (=ಕನ್ನಿಕೆಯರು) ಎಂದು ಹೆಸರಿಸಿ ಪೂಜಿಸುತ್ತಾರೆ. ಹಂಪಿಯ ಜಾತ್ರೆಯ ದಿನವೇ ಇಲ್ಲೂ ಜಾತ್ರೆ ಉಂಟು. ಬುಕ್ಕಾಂಬೂದಿಯ ಕೆರೆ ತುಂಬಿದಾಗ ಪಂಪಾ ವಿರೂಪಾಕ್ಷನ ಪೂಜೆ ಮಾಡಿಸಿ ಸಪ್ತ ಕನ್ನಿಕೆಯರಿಗೆ ಪೂಜೆ ಸಲ್ಲಿಸಿ ದೊಡ್ಡ ತಂಬಿಟ್ಟಿನ ರಾಶಿಯನ್ನು ನೀರಲ್ಲಿ ತೇಲಿಬಿಡುತ್ತಾರೆ. ತಮ್ಮ ಹೊಟ್ಟೆ ತುಂಬಿತು ಎಂದು ಜನ ವ್ಯಕ್ತಪಡಿಸುವ ತೃಪ್ತಿಯ ಸಂಕೇತ ಅದು. ಮಳೆಯಿಲ್ಲದೆ ಕೆರೆ ನೀರು ಕಡಮೆ ಆದಾಗ ನೂರೊಂದು ಎಲೆಗಳ ಮೇಲೆ ಅವು ತೇಲುವಷ್ಟು ಮಾತ್ರ ಮೇಲೆ ಅನ್ನ ಇಟ್ಟು ಎಡೆಯನ್ನು ತೇಲಿಬಿಡುತ್ತಾರೆ. ಬಹು ಜನ ಹಸಿದಿದ್ದಾರೆ ಎಂಬುದನ್ನು ಗಂಗವ್ವನಿಗೆ ತಿಳಿಸುವ ರೀತಿ ಅದು. ಆ ಎರಡೂ ಸಂದರ್ಭಗಳಲ್ಲಿ ಆ ದೊಡ್ಡ ಕೆರೆಯ ನೀರನ್ನು ಉಣ್ಣುವ ಗದ್ದೆಗಳ ಏಳು ಊರಿನ ದೇವತೆಗಳೂ ಅಲ್ಲಿ ಸೇರಿರುತ್ತವೆ.

ಆ ಪ್ರಾಚೀನ ಕೆರೆ ಆ ಊರಿಗೊಂದು ನಿಜವಾದ ವರ. ಅದು 230 ಹೆಕ್ಟೇರ್ ಭೂಮಿಗೆ ನೀರು ಒದಗಿಸುತ್ತದೆ. 14-15ನೇ ಶತಮಾನದಲ್ಲಿ ಕಟ್ಟಲಾದ ಆ ಕೆರೆಗೆ ಒಂದು

---

* ಲಿಂಗಧಾರಿ ಕಳ್ಳರಿಬ್ಬರಿಗಾಗಿ, ತಾವೇ ಕಳ್ಳರೆಂದು ಹೇಳಿಕೊಂಡು ಅವರನ್ನು ಉಳಿಸಲು ತಾವೇ ಶೂಲ ಏರಿದ ಗುಂಡಯ್ಯ ಬ್ರಹ್ಮಯ್ಯರ ಶಿಲ್ಪಗಳು ಹಲವಿವೆ. ಅವರ ಶಿಲ್ಪಗಳಲ್ಲಿ ಅವರ ಚಿತ್ರಗಳಲ್ಲದೆ ಒಂದು ನೆಟ್ಟ ಶೂಲವೂ ಇರುತ್ತದೆ.

ತೂಬು ಇದೆ. ಕೆರೆ ತುಂಬಿ ಹೆಚ್ಚಾದ ನೀರು ಹರಿದು ಹೋಗಲು ಎರಡು ವ್ಯವಸ್ಥೆಗಳಿವೆ. ಕೆರೆ ತುಂಬಿದಾಗ ನೀರು 'ಮದಗ'ದ ಮೂಲಕ ಹೋಗುತ್ತದೆ. 'ಮದಗ'ವೂ ಕೋಡಿಯೇ. ಆದರೆ ನೀರು ಒಂದು ಸುರಂಗದ ಮೂಲಕ ಹೊರಗೆ ಹೋಗುತ್ತದೆ. ಎಂದರೆ, ಒಂದು ಹಂತದವರೆಗೆ ಕೋಡಿ ಕಟ್ಟೆಯ ತುದಿಯವರೆಗೆ ನಿಂತ ನೀರು ಹೆಚ್ಚಾದಾಗ ಆ ಕಟ್ಟೆಯಿಂದ ನೀರು ಧುಮುಕಿ ಸುರಂಗದ ಮೂಲಕ ಹೊರಕ್ಕೆ ಹರಿಯುತ್ತದೆ. ಆ ಸುರಂಗದ ಮೇಲೆ ಸೇತುವೆಯಂತಹ ವ್ಯವಸ್ಥೆ ಇದ್ದು ಅದರ ಮೇಲೆ ಜನಗಳೂ ವಾಹನಗಳೂ ಓಡಾಡಬಹುದು. ಇನ್ನೂ ಹೆಚ್ಚು ಮಳೆಯಾದಾಗ ಎಲ್ಲ ಕೆರೆಗಳಿಗಿರುವಂತಹ ಕೋಡಿಯ ಮೂಲಕ ನೀರು ಹೊರಗೆ ಹೋಗುತ್ತದೆ. ಈ ಕೋಡಿ ಬೀಳುವುದು ಈ ಕೆರೆಯಲ್ಲಿ ಕಡಮೆ. 'ಮದಗದ ಕೆರೆ'ಗಳು ಕರ್ನಾಟಕದಲ್ಲಿ ಬಹಳ ಇದ್ದರೂ 'ಮದಗ' ಎಂದರೆ ಏನೆಂಬುದು ನನಗೆ ತಿಳಿದದ್ದು ಬುಕ್ಕಾಂಬೂದಿ ಕೆರೆಯಿಂದಲೇ[1]. ಕೆರೆ ಪೂರ್ತಿ ಖಾಲಿಯಾದುದನ್ನು ಜನ ಎಂದೂ ಕಾಣರು. ಕೆರೆಯ ಹಿಂಭಾಗದಲ್ಲಿ ಉದ್ದಕ್ಕೆ ಜಮೀನು ಹಂಚಿಹೋಗಿ ಎಲ್ಲ ಗದ್ದೆ ತೋಟಗಳಿಗೂ ನೀರು ಸಮಾನವಾಗಿ ದೊರಕುವಂತೆ ಮಾಡಿರುವ ಇಂಜಿನಿಯರಿಂಗ್ ವ್ಯವಸ್ಥೆ ಅಪೂರ್ವವಾದುದು. ಎಲ್ಲ ಕಡೆ ಅಡಕೆ, ತೆಂಗು, ಬತ್ತದ ತೋಟ ಗದ್ದೆಗಳು ಲಕಲಕಿಸುತ್ತಿವೆ. ಬುಕ್ಕಾಂಬೂದಿಯ ರೈತರಲ್ಲಿ ಬಹುಜನ ಲಕ್ಷಾಧೀಶರಿದ್ದಾರೆ. ಸಣ್ಣ ಊರಾದರೂ ಬಹುತೇಕ ಕೆಂಪು ಹೆಂಚಿನ ಮನೆಗಳು ಅಲ್ಲಿಯವು. ಸಾಕಷ್ಟು ತಾರಸಿ ಮನೆಗಳೂ ತಲೆಯೆತ್ತಿವೆ. ಆ ಸಣ್ಣ ಊರಿಗೆ ಒಂದು ಬಾರ್ ಕೂಡ ಬಂದಿದೆ, ಅದು ಬರದಂತೆ ಮಾಡಲು ಏನೆಲ್ಲ ಪ್ರಯತ್ನ ಪಟ್ಟರೂ. ಈಗ ಸಣ್ಣ ಹಳ್ಳಿಗಳ ಜನರೂ ಲಿಕರ್ ಅಂಗಡಿಗಳನ್ನು ತೆರೆಯಲು ಲೈಸೆನ್ಸಿಗೆ ಅರ್ಜಿ ಹಾಕುತ್ತಿದ್ದಾರೆ. ಸಹಜವಾಗಿಯೇ ಕುಡಿತ ಹೆಚ್ಚಾಗಿದೆ. ಆ ಗ್ರಾಮದಲ್ಲೂ ಯಾವಾಗ ಬೇಕೆಂದರೆ ಎಲ್ಲ ಬಗೆಯ ವಿದೇಶಿ ಮದ್ಯಗಳು ದೊರಕುತ್ತವೆ. ವಿದ್ಯಾವಂತರ ಸಂಖ್ಯೆಯೂ ಸಾಕಷ್ಟಿದೆ.

ನನ್ನ ಪ್ರೌಢಶಾಲೆ ಗೆಳೆಯ, ವಿದ್ಯಾರ್ಥಿನಿಲಯದ 'ಸಹ ಕೋಣೆ', ಈಗ ಎಕ್ಸಿಕ್ಯುಟಿವ್ ಇಂಜಿನಿಯರ್ ಆಗಿರುವ ಅಣಪೂರ್ ಕರಿಬಸಪ್ಪನ ಬಂಧುಗಳು ಆ ಊರಲ್ಲಿರುವುದು ನನಗೆ ಗೊತ್ತಿತ್ತು. ಆ ಬಂಧುಗಳು ದಾವಣಗೆರೆಯಲ್ಲಿ ನಾವಿದ್ದ ವಿದ್ಯಾರ್ಥಿ ನಿಲಯಕ್ಕೆ ಬಂದು ಕರಿಬಸಪ್ಪನಿಗೆ ಒಂದಷ್ಟು ಜೇಬುಹಣ, ಜೊತೆಗೆ ಒಣ ಕೊಬ್ಬರಿ ಕೊಟ್ಟು ಹೋಗುತ್ತಿದ್ದರು (ಒಣ ಕೊಬ್ಬರಿಗೆ ನಾವೆಲ್ಲ ಇರುವೆಗಳಂತೆ ಮುತ್ತಿಕೊಳ್ಳುತ್ತಿದ್ದೆವು). ಆ ಬಂಧುಗಳು 'ಶೀಲವಂತ'ರೆಂದು ತಿಳಿದು ಅವರ ವಿಷಯ ತಿಳಿಯಲು ಅವರ ಮನೆಗೆ ಹೋದೆ. ಲಿಂಗಾಯತರಲ್ಲಿ "ಶೀಲವಂತ"[2]ರೆಂದು ಕರೆದುಕೊಳ್ಳುವವರ ಬಗ್ಗೆ ವಚನಗಳಲ್ಲಿ

---

1. ತಮಿಳಲ್ಲಿ "ಮದಗು" ಎಂದರೆ covered channel, sluice ಎಂಬರ್ಥವಿರುವುದು ಗಮನಾರ್ಹ. 'ಮದಗ (ಗು)' ಪದವು ಪ್ರಾಚೀನ ಕನ್ನಡ ಶಾಸನಗಳಲ್ಲಿ ಕಾಣಿಸಿದೆ (ಕನ್ನಡ ನಿಘಂಟು, VII. ಪು. 6893)

2. ಈಚೆಗೆ ಬೀದರ್ ಪ್ರದೇಶದ ಶೀಲವಂತರ ಬಗ್ಗೆ ಮಾಹಿತಿ ಸಂಗ್ರಹಿಸಿದೆ. ಅವರು ಬಹುತೇಕ ಸೋನಾರ್ - ಅಕ್ಕಸಾಲಿಗ ಜಾತಿಯ ಲಿಂಗವಂತರು (ಲಿಂಗಾಯತರಲ್ಲದ ಅಕ್ಕಸಾಲಿಗರನ್ನು ಜನಿವಾರದ ಅಕ್ಕಸಾಲಿಗರೆಂದು ಕರೆಯುತ್ತಾರೆ. ಇಬ್ಬರಿಗೂ ಕೊಡು ಕೊಳೆ ಇಲ್ಲ). ಅಲ್ಲಿಯ ಶೀಲವಂತರ ಮುಖ್ಯವೃತ್ತಿ ಚಿನ್ನದ ಕೆಲಸ. ಆಚಾರ ವ್ಯವಹಾರಗಳಲ್ಲಿ ಹೆಚ್ಚು ಮಡಿವಂತಿಕೆ ತೋರುವ ಜನ ಅವರು. ಚನ್ನಗಿರಿ ತಾಲೂಕಿನಲ್ಲಿ ಕ್ಷೌರಿಕ ಲಿಂಗಾಯತರನ್ನು ಶೀಲವಂತರೆಂದೂ ಕಾಯಕದವರೆಂದೂ ಕರೆಯುವುದುಂಟು.

ಮತ್ತು ಮುಂದಿನ ಸಾಹಿತ್ಯದಲ್ಲಿ ಸಾಕಷ್ಟು ಉಲ್ಲೇಖಗಳು ಬರುತ್ತವೆ. ಇಲ್ಲಿಯ ಶೀಲವಂತರು ಬಣಜಿಗರು (ಎಲ್ಲ ಬಣಜಿಗರೂ ಶೀಲವಂತರಲ್ಲ). ಇಲ್ಲಿನ ಬಣಜಿಗರು ಶೀಲವಂತರೆಂದು ಕರೆಯಿಸಿಕೊಳ್ಳಲು ಕಾರಣ ಸ್ಪಷ್ಟವಾಗಲಿಲ್ಲ. ಬಣಜಿಗರು ವೀರಶೈವರಲ್ಲಿನ ವರ್ತಕ ಸಮೂಹ (ವಣಿಜ → ಬಣಜಿಗ). ಅವರ ಪೈಕಿ ಹಿಂದೆ ಯಾರೋ ತಮಗಿಂತ ಮೇಲುಜಾತಿಯ, ಪುರೋಹಿತವರ್ಗದ ಜಂಗಮರಿಗೆ ಹೆಣ್ಣು ಕೊಟ್ಟ ಕಾರಣಕ್ಕಾಗಿ ವಿಶೇಷ 'ಶೀಲ'ಗಳನ್ನು ಆಚರಿಸಬೇಕಾಗಿ ಬಂದು ಅವರೇ ಶೀಲವಂತರೆಂದು ಹೆಸರಾಗಲು ಕಾರಣವಾಗಿರಬೇಕು ಎಂಬುದು ಒಂದು ಶುದ್ಧ, ಸಾಧ್ಯ ಊಹೆ ಮಾತ್ರ. ಶೀಲವಂತರು ಲಿಂಗಾಯತರನ್ನು ಬಿಟ್ಟು ಉಳಿದವರ ಮನೆಗಳಲ್ಲಿ ಎಂದೂ ಊಟ ಮಾಡುವುದಿಲ್ಲ, ನೀರು ಕೂಡ ಕುಡಿಯುವುದಿಲ್ಲ. ಲಿಂಗಾಯತರನ್ನು ಬಿಟ್ಟು ಉಳಿದವರಿಗೆ ಆಹಾರವನ್ನೂ ಕೊಡುವುದಿಲ್ಲ, ನೀರನ್ನೂ ಕೊಡುವುದಿಲ್ಲ. ಮದುವೆಗಳಲ್ಲಿ ಮಾಡಿದ ಅಡುಗೆ ಮಿಕ್ಕರೆ ನೆಲಕ್ಕೆ ಹಾಕಿ ಮುಚ್ಚಿಯಾರು, ಲಿಂಗಾಯತರಲ್ಲದವರಿಗೆ ತಪ್ಪಿಯೂ ಕೊಡುವುದಿಲ್ಲ. ಮನೆಯಲ್ಲಿ ಮಡಕೆ ಕುಡಿಕೆ ಒಡೆದು ಹೋದರೆ ನೆಲದಲ್ಲಿ ಹೂಳುತ್ತಿದ್ದರು (ಅವು ಲಿಂಗವಂತರಲ್ಲದವರ ಕೈಗೆ ಸಿಗಬಾರದು ತಾನೇ). ಹಿಂದೆ ಅವರು ವ್ಯಾಪಾರ ಮಾಡಿಕೊಂಡು ಮನೆಗೆ ಬಂದಾಗ ಬೆಳ್ಳಿಯ ರೂಪಾಯಿಗಳನ್ನು ನೀರಲ್ಲಿ ತೊಳೆದು ಮನೆಯೊಳಕ್ಕೆ ಕೊಂಡೊಯ್ಯುತ್ತಿದ್ದರು. ಕೆಲವರಂತೂ ತಮ್ಮ ಮನೆ ಬಳಕೆಗೆ ಬೇಕಾದ ನೀರಿಗಾಗಿ ಬಾವಿಯನ್ನು ತಾವೇ ನಿಂತು ಅಗೆದದ್ದೂ ಉಂಟು. ಪೂಜೆಗೆ ಕುಳಿತಾಗ ಭವಿಗಳ ಮಾತು ಕಿವಿಗೆ ಬೀಳಬಾರದು. ಬಾವಿಯಿಂದ ನೀರು ತರುವಾಗ ಪಾತ್ರೆಯನ್ನು ಬಟ್ಟೆಯಿಂದ ಮುಚ್ಚಿರುತ್ತಿದ್ದರು - ಭವಿಗಳ ಕಣ್ಣು ಬಿದ್ದೀತೆಂದು. ಹೊರಗಿನಿಂದ ತಂದ ಕಾಯಿ ಪಲ್ಯೆಗಳನ್ನು ತೊಳೆದೇ ಬಳಸಬೇಕು. ಗಂಡಸರಾಗಲಿ ಹೆಂಗಸರಾಗಲಿ ಪ್ರತಿನಿತ್ಯ ಬೆಳಿಗ್ಗೆ ಸ್ನಾನ ಮಾಡಿ ಲಿಂಗಪೂಜೆ ಮಾಡಿಕೊಂಡಾದ ಮೇಲೆಯೇ ತಿಂಡಿ ಅಥವಾ ಊಟ. ಅಂತೆಯೇ ರಾತ್ರಿಯೂ ಪೂಜೆ ಆದಮೇಲೇ ಊಟ. ಗಂಡು ಹುಡುಗರಿಗೆ ಮದುವೆಗೆ ಮುಂಚೆ ಜಂಗಮರಿಂದ ಲಿಂಗದೀಕ್ಷೆ ನಡೆಯುತ್ತದೆ. ಹೆಂಗಸರಿಗೆ ಅಂತಹ ದೀಕ್ಷೆ ಇಲ್ಲ.* ಅವರು ಹುಟ್ಟಿದಾಗ ಕಟ್ಟಿದ ಲಿಂಗವನ್ನೇ ಅವರು ಕೊರಳಲ್ಲಿ ಧರಿಸಿದರೆ ಸಾಕು. ಶೀಲವಂತರು ಉಳಿದ ಬಣಜಿಗರ ಜೊತೆ ಮಾತ್ರ ಸಂಬಂಧ ಬೆಳೆಸುತ್ತಾರೆ. ಅವರು ಜಂಗಮರಿಗೆ ಹೆಣ್ಣು ಕೊಡಲು ಸಿದ್ಧ. ಜಂಗಮರು ತಮ್ಮ ಹೆಣ್ಣನ್ನು ಅವರಿಗೆ ಸಾಮಾನ್ಯವಾಗಿ ಕೊಡುವುದಿಲ್ಲ. ಜಂಗಮರ ಹೆಣ್ಣು ತಮ್ಮ ಮನೆಗೆ ಸೊಸೆಯಾಗಿ ಬಂದರೆ ಏನಾದರೂ ಅನ್ನುವ ಪ್ರಸಂಗ ಬಂದಾಗ ಏಕವಚನ ಬಳಸಿ ಬಿಡುವ ಪ್ರಮೇಯ ಬರಬಹುದಾದ್ದರಿಂದ ತಾವೇ ಜಂಗಮರ ಹೆಣ್ಣುಗಳನ್ನು ತಂದುಕೊಳ್ಳುವುದಿಲ್ಲವೆಂದು ಶೀಲವಂತ ಬಣಜಿಗರ ವಿವರಣೆ.

---

*ಬಳ್ಳಾರಿ ಪ್ರದೇಶದಲ್ಲಿ ಬಳಕೆಯಲ್ಲಿರುವ ಅರ್ಥಪೂರ್ಣ ಗಾದೆ ಇದು : "ಮಾಡಿದವಳು ಮಾದಿಗ್ಗಿತ್ತಿ, ನೀಡಿದವಳು ಶೀಲವಂತಿ". ಕಷ್ಟಪಟ್ಟು ಕೈ ಮುಖ ಸೀರೆ ಎಲ್ಲ ಮಸಿಮಾಡಿಕೊಂಡು ಅಡಿಗೆ ಮಾಡಿದವಳು ಜನರಿಗೆ ಕನಿಷ್ಠವಾಗಿ ಕಾಣಿಸುತ್ತಾಳೆ. ಮಾಡಿಟ್ಟ ಅಡುಗೆಯನ್ನು ಏನೂ ಶ್ರಮವಿಲ್ಲದೆ, ಬಟ್ಟೆ ಕೊಳಕು ಮಾಡಿಕೊಳ್ಳದೆ ಬಡಿಸುವವಳು ಶ್ರೇಷ್ಠಳಾಗಿ ಕಾಣಿಸುತ್ತಾಳೆ - ಇದು ಎಲ್ಲ ಸಂದರ್ಭಗಳಿಗೆ, ಎಲ್ಲ ಕಾಲಕ್ಕೂ ಎಲ್ಲ ದೇಶಗಳಿಗೂ ನಿಜವಾದ ಮಾತು. ಇಲ್ಲಿ 'ಮಾದಿಗ್ಗಿತ್ತಿ' 'ಶೀಲವಂತಿ' ಪ್ರಾಸಕ್ಕಾಗಿ ಬಂದಿರುವ ಮಾತುಗಳಾದರೂ ಆ ಜಾತಿಗಳ ಜನರ ಒಂದು ಹೊರನೋಟವನ್ನೂ ನೀಡುತ್ತದೆ.

ಈಗ ಬುಕ್ಕಾಂಬೂದಿಯ ಒಂದು ಮನೆತನದವರು ಮಾತ್ರ ತಕ್ಕಮಟ್ಟಿಗೆ 'ಶೀಲ'ಗಳನ್ನು ಆಚರಿಸುತ್ತಾರೆ. ಬದಲಾಗುತ್ತಿರುವ ಆಧುನಿಕ ಕಾಲದಲ್ಲಿ ಅವನ್ನು ಆಚರಿಸುವುದು ಎಂಥವರಿಗೂ ಕಷ್ಟ, ಸ್ವಲ್ಪ ಮಟ್ಟಿಗೆ ಅಸಾಧ್ಯವೆಂಬುದು ಎಂಥವರಿಗೂ ತಿಳಿಯುತ್ತದೆ. ತೋಟಗಳಲ್ಲಿ ಕೆಲಸ ಮಾಡುವ 'ಭವಿ' ಕೆಲಸಗಾರರಿಗೆ ಊಟ ಕೊಡದಿದ್ದರೆ ಅವರಿಂದ ಕೆಲಸ ತೆಗೆಯುವ ಬಗೆಯಾದರೂ ಹೇಗೆ ? ಶೀಲವಂತರು ಶ್ರೀಮಂತರೂ ವರ್ತಕರೂ ಆಗಿರುವುದರಿಂದ ಬೇರೆ ಊರುಗಳಿಗೆ ಹೋಗಲೇಬೇಕಲ್ಲವೇ? ಜನಗಳ ಜೊತೆ ಬೆರೆಯಲೇಬೇಕಾಗುತ್ತದೆ. ಆಧುನಿಕತೆಯು ಜಾತೀಯ ಮಡಿ ಮೈಲಿಗೆ ಕಟ್ಟು ಪಾಡುಗಳನ್ನು ಸಡಿಲಗೊಳಿಸುತ್ತಿರುವುದರ ಒಂದು ನಿದರ್ಶನ ಮಾತ್ರ ಇದು. (ಬೆಂಗಳೂರು ಸಮೀಪದ ಗುಮ್ಮಳಾಪುರದಲ್ಲಿ - ಇದು ಈಗ ತಮಿಳುನಾಡಿನಲ್ಲಿದೆ - ಧೂಳಿಪಾವುಡ, ಸರ್ವಾಂಗ ಪಾವುಡ ಇವೇ ಮೊದಲಾದ ಅರವತ್ತನಾಲ್ಕು "ಶೀಲ"ಗಳನ್ನು ಆಚರಿಸುವ ಶೀಲವಂತರಿದ್ದರೆಂದು ವಿರೂಪಾಕ್ಷ ಪಂಡಿತನ ಚನ್ನಬಸವಪುರಾಣ ತಿಳಿಸುತ್ತದೆ).

27ನೇ ತಾರೀಖು ಬುಕ್ಕಾಂಬೂದಿಯಲ್ಲಿ ಒಂದು ದಿನ ಇದ್ದು ಹೋಗಲು ಮಲ್ಲೇಗೌಡರು ಒತ್ತಾಯಿಸಿದರು. ಅಂದು ಬೆಳಿಗ್ಗೆ ಊರ ಹೊರವಳಯದ ತೋಟದ ಹಾಳು ದೇವಾಲಯವೊಂದನ್ನು ನೋಡಲು ಹೋದೆವು. ಅದು ಪೂರ್ತಿ ಹಾಳಾಗಿ ಹೋಗಿದ್ದು ಅದನ್ನು ಸಿಮೆಂಟಿನಲ್ಲಿ ಕಟ್ಟುವ ಕಾರ್ಯ ಸ್ವಲ್ಪ ಸಾಗಿದೆ. ಅಲ್ಲೇ ಬಹುಶಃ ಹನ್ನೊಂದನೇ ಶತಮಾನದ ಚಾಳುಕ್ಯರ ಕಾಲದ ಶಾಸನವಿದೆ. ಶಾಸನ ಸಮೇತ ಸುಂದರ ವೀರಗಲ್ಲೂ ಒಂದು ಶಿಲೆಯ ಮೇಲಿದೆ. ಸಮೀಪದ ಡಣಾಯಕನ ಪುರದಲ್ಲಿ (ಡಣಾಯಕ = ದಂಡನಾಯಕ) ಬುಕ್ಕಾಂಬೂದಿಯ ಪಾಳೇಗಾರನ ದಂಡನಾಯಕ ಇದ್ದನಂತೆ. ಇಲ್ಲಿನ ಕಾಳಿಕಾದೇವಾಲಯದಲ್ಲಿ ಎರಡು ಬಹು ಜೀರ್ಣವಾಗಿದ್ದ ಓಲೆಗರಿ ಕಟ್ಟುಗಳನ್ನು ನೋಡಿದೆ. ಒಂದು, ತೊರವೆ ರಾಮಾಯಣ; ಮತ್ತೊಂದು, ಶರಣ ಲೀಲಾಮೃತ. (ಆ ಕಟ್ಟುಗಳಲ್ಲಿ ಇನ್ನೊಂದು ಕೃತಿಯೂ ಇರುವಂತಿದೆ). ಅದೇ ದೇವಾಲಯದಲ್ಲಿ 'ಬಾಣಪ್ಪ' ಇದೆ - ಅದು ಸುಮಾರು ಹದಿನಾಲ್ಕು ಅಡಿ ಉದ್ದದ ಬಾಣಾಕೃತಿಯ ಒಂದು ಮರದ ಕಂಬ. ಅದನ್ನು ನಿರ್ದಿಷ್ಟ ವ್ಯಕ್ತಿ ಹೊತ್ತು ನಿಂತರೆ ಬಾಣಪ್ಪ ದೇವರು ಅವನ ಮೂಲಕ ಅಪ್ಪಣೆ ಕೊಡಿಸುತ್ತದೆ (ಬುಕ್ಕಾಂಬೂದಿಯಲ್ಲೂ ಬಾಣಪ್ಪ ಉಂಟು). ಕೆರೆ ತುಂಬಿದಾಗ ಅಥವಾ ಬತ್ತಿದಾಗ ನಡೆಯುವ ಪೂಜಾ ಸಂದರ್ಭಗಳಲ್ಲಿ ಬಾಣಪ್ಪನನ್ನು 'ಹೊರಡಿಸಿಕೊಂಡು' ಕೆರೆ ಹತ್ತಿರದ ವಿರೂಪಾಕ್ಷ ದೇವಾಲಯಕ್ಕೆ ಹೋಗುತ್ತಾರೆ. ಅದನ್ನು ಹೊರುವ 'ಬಾಣದ ಮಲ್ಲಪ್ಪ' ಎಂದೇ ಖ್ಯಾತನಾದ ವ್ಯಕ್ತಿಯನ್ನು ನಾನು ನೋಡಿದೆ.

ನನ್ನ ಚಪ್ಪಲಿಯ ಒಂದು ಉಂಗುಟ ಹರಿದು ಹೋಗಿತ್ತು. ಅದನ್ನು ಹೊಲಿಸಲೆಂದು ರಾತ್ರಿ ಒಬ್ಬ ವ್ಯಕ್ತಿಯ ಹತ್ತಿರ ಹೋದೆವು. ಆತ "ರಾತ್ರಿಯಾದ ಮೇಲೆ ಅಡೆ ಉಳಿ ಬಿಚ್ಚೋಲ್ಲ" ಎಂದ. ಸೂರ್ಯ ಮುಳುಗಿದ ಮೇಲೆ ಹರಿಜನರು ಚರ್ಮದ ಕೆಲಸಗಳನ್ನು ಮಾಡುವುದಿಲ್ಲ. "ಉಳಿ" ಎಂಬುದು ಚರ್ಮ ಚುಚ್ಚುವ ಒಂದು ಸಾಧನ. ಅದರ ತುದಿಯಲ್ಲಿ ಕೊಕ್ಕೆಯಿದ್ದು ಅದಕ್ಕೆ ದಾರವನ್ನು ಸಿಕ್ಕಿಸಿರುತ್ತಾರೆ. "ಅಡೆ" ಎಂದರೆ ಚಪ್ಪಲಿ ಹೊಲೆಯಲು

ಬಳಸುವ ಎಲ್ಲ ಸಾಧನ ಸಲಕರಣೆಗಳ ಗಂಟು (ಇದನ್ನು ಮುಂದೆ ಚನ್ನಗಿರಿಯಲ್ಲಿ ನನ್ನ ಚಪ್ಪಲಿಗೆ ಅಟ್ಟೆ ಕಟ್ಟಿಸುವಾಗ ಖಚಿತಪಡಿಸಿಕೊಂಡೆ). "ಕೈಯುಳಿ ಕತ್ತಿ ಅಡಿಗೂಂಟಕ್ಕಡಿಯಾಗಬೇಡ ಅರಿ ನಿಜಾತ್ಮರಾಮ ರಾಮನ" ಎಂಬ ಮಾದಾರ ಚನ್ನಯ್ಯನ ವಚನಾಂಕಿತದಲ್ಲಿನ "ಅಡಿ"ಯು "ಅಡೆ" ಆಗಿರಬಹುದೇ ? ನೀನು ಕೇವಲ ಕೈಯ ಉಳಿ, ಕತ್ತಿ, ಅಡಿಗೂಂಟ ಇವು ಇರುವ "ಅಡೆ" (ಮೂಟೆ, ಚೀಲ) ಆಗದೆ, ದೈವವನ್ನು ಅರಿಯುವ ಚೇತನವಾಗು ಎಂಬುದು ಆ ವಚನಕಾರನ ಆಶಯವಾಗಿರುವಂತಿದೆ.

ಶಾಸನದ ಪಡಿಯಚ್ಚನ್ನು ತೆಗೆಯುವ ವಿಧಾನವನ್ನು ಮಲ್ಲೇಗೌಡರಿಗೆ ತೋರಿಸಿಕೊಟ್ಟೆ. ಬೆಳಿಗ್ಗೆ ಡಣಾಯಕನ ಪುರದಲ್ಲಿ ಹಸ್ತಪ್ರತಿಗಳನ್ನು ಓದಿ ಅವರಿಗೂ ಅಲ್ಲಿಯ ಹುಡುಗರಿಗೂ ಓದುವುದನ್ನು ತೋರಿಸಿದೆ. ಅವರಿಗೆಲ್ಲ ಅದು ಹೊಸ ಅನುಭವ. ಓಲೆಗರಿಯಲ್ಲಿನ ಅಕ್ಷರಗಳು ತಮಗೆ ತಿಳಿಯವೆಂದೇ ಭ್ರಮಿಸಿ ಅವನ್ನು ತೆರೆಯಲೂ ಹೋಗಿರಲಿಲ್ಲ. ಹಿಂದೆ ಕೇಳಿ ನೆನಪಿಟ್ಟುಕೊಂಡಿದ್ದ "ಶರಣ ಲೀಲಾಮೃತ"ದ ಕೆಲವು ಸಾಲುಗಳನ್ನು ಅಲ್ಲಿಯ ಒಬ್ಬ ಅನಕ್ಷರಸ್ಥರು ನೆನಪಿನ ಮೇಲೆ ಹೇಳಿದ್ದು ಎಲ್ಲರಿಗೂ ಸಂತೋಷ ವಿಸ್ಮಯಗಳನ್ನು ತಂದಿತು.

ಬುಕ್ಕಾಂಬೂದಿಯಲ್ಲಿ ಆ ದಿನ ಸಂಜೆ ಎಷ್ಟೋ ಮನೆಗಳಿಗೆ ಹೋದೆವು, ಪ್ರಾಚೀನ ದಾಖಲೆಗಳು ದೊರಕಬಹುದೆಂದು. ಇರಲಿಲ್ಲ, ಅಥವಾ ಇದ್ದರೂ ಜನ ತೋರಿಸಲು ಹಿಂಜರಿದರು. ಆ ರಾತ್ರಿ "ಮಾಮನೆ ಊಟ" ಮಾಡಿದೆ. (ಹೆಣ್ಣಿನ ಮನೆಯಲ್ಲಿ ಮದುವೆ ಆದಮೇಲೆ ಅವಳ ಕಡೆಯವರನ್ನು ಗಂಡಿನವರು ತಮ್ಮ ಮನೆಗೆ, ಎಂದರೆ ಹೆಣ್ಣಿನ ಮಾವನ ಮನೆಗೆ ಕರೆದು ಹಾಕುವ ಊಟವೇ "ಮಾಮನೆ ಊಟ"). ಮಲ್ಲೇಗೌಡರ ತಂದೆಗೆ ಮೂವರು ಹೆಂಡಿರು; ಕೊನೆಯ ಇಬ್ಬರೂ ಒಡಹುಟ್ಟಿದ ಅಕ್ಕತಂಗಿಯರು. ಇಬ್ಬರಿಗೂ ಏಳೆಂಟು ಮಕ್ಕಳು. ಆ ವೃದ್ಧರು ಹಿಂದಿನಿಂದ ಜಬರ್‌ದಸ್ತಿನಿಂದ ಪಟೇಲಿಕೆ ಮಾಡಿದವರು. ಅವರು ಬಹು ಹಿಂದಿನಿಂದ ಬರೆದಿಡುವ ಪದ್ಧತಿ ಇಟ್ಟುಕೊಂಡಿದ್ದಾರೆ (ಆ ದಿನಚರಿ ಪುಸ್ತಕಗಳನ್ನು ನಾನು ಕೇಳಿ ಪಡೆಯುವುದು ಮರೆತು ಹೋಯಿತು - ಕೊಡುತ್ತಿದ್ದರೋ ಏನೋ!) ಅವರು ಊಟಕ್ಕೆ ಕುಳಿತಾಗ "ಲೋಟ ತಾರ್ಲೋ" ಎಂಬ ಧ್ವನಿಯಲ್ಲೇ ಆಜ್ಞಾಪಿಸುತ್ತಿದ್ದರು. ಮಕ್ಕಳನ್ನು ಚೆನ್ನಾಗಿ ಹೊಡೆದು ಶಿಸ್ತಿನಿಂದ ಬೆಳೆಸಿದ್ದರು. ಎಲ್ಲ ಮಕ್ಕಳಿಗೂ ವಿದ್ಯೆ ಕೊಡಿಸಿದ್ದು ಫಲ ನೀಡಿದೆ. ಅವರ ಒಬ್ಬ ಮಗಳು ಎಂ.ಎ. ಪದವೀಧರೆ, ಬೀರೂರಿನ ತನ್ನ ಕಾಲೇಜಿನ ಸಹೋದ್ಯೋಗಿಯನ್ನು ಮದುವೆಯಾಗಲು ಬಯಸಿದಳು. ಅವಳು ಸಾದರ ಜಾತಿಯವಳು; ಅವನು ಬಳೆಗಾರ - ಇಬ್ಬರೂ ಲಿಂಗಾಯತರೇ ಆದರೂ ಗಂಡು ಪಂಚಪೀಠಕ್ಕೆ ಸೇರಿದವನು. ಆದರೂ ಆ ಗೌಡರು ಆ ಮದುವೆಗೆ ಒಪ್ಪಿಗೆ ಕೊಟ್ಟರು. ಆ ಅಧ್ಯಾಪಕ ಅಳಿಯ ಮೂರು ತಿಂಗಳ ಹಿಂದೆ ಬೀರೂರು ಕಡೂರು ಮಧ್ಯೆ ರಾತ್ರಿ ಹನ್ನೊಂದರಲ್ಲಿ ಅಪಘಾತಕ್ಕೆ ಸಿಕ್ಕು ಸತ್ತ. ರಾತ್ರಿಯೆಲ್ಲ ಬಸ್ಸು ಲಾರಿಗಳಲ್ಲಿ ಹೋಗುತ್ತಿದ್ದ ಜನ ಹೆಣವನ್ನು ನೋಡಿದರೂ[3] ಮೊಕದ್ದಮೆ

---

3. ಅಂತಹ ಒಂದು ಅನಾಥ ಹೆಣವನ್ನು ನಾನು ಕೊಡಗಿನಲ್ಲಿ ಕೆಲ ತಿಂಗಳ ಹಿಂದೆ ರಾತ್ರಿ ಒಂಬತ್ತರ ಹೊತ್ತಿನಲ್ಲಿ ಕುಶಾಲನಗರ ಸುಂಟಿಕೊಪ್ಪ ಮಧ್ಯೆ ರಸ್ತೆಯ ಪಕ್ಕದಲ್ಲಿ ಕಂಡೆ. ಕಾರಿನ ಚಾಲಕ ಒಂದು ಕ್ಷಣ ಹಿಂದೇಟು ಹಾಕಿದರೂ ನಾನು ಅವನಿಗೆ ಧೈರ್ಯ ಹೇಳಿ ಸುಂಟಿಕೊಪ್ಪ ಪೋಲೀಸ್ ಠಾಣೆಗೆ ತಿಳಿಸಿದೆ. ನಾವು ನೋಡುವ ಹೊತ್ತಿಗೆ ಒಂದೆರಡು ಲಾರಿಗಳು ಹೆಣದ ಮೇಲೆ ಹರಿದಂತಿತ್ತು. ಪಕ್ಕದ ನಿರ್ಜನ 'ಆನೆ ಕಾಡಿ'ನಿಂದ ಮಾಂಸಾಹಾರಿ ಪ್ರಾಣಿಗಳು ಬಂದು ಆ ಹೆಣಕ್ಕೆ ಬಾಯಿ ಹಾಕಿರಬೇಕು.

ಭಯದಿಂದಾಗಿ ಅದನ್ನು ಪೊಲೀಸರಿಗೆ ತಿಳಿಸಲಿಲ್ಲ. ಹೀಗಿದೆ ನಮ್ಮ 'ಅ-ಮಾನವೀಯತೆ'. ಬೆಳಿಗ್ಗೆ ಏಳು ಗಂಟೆಯ ಹೊತ್ತಿನಲ್ಲಿ ಕಾಲೇಜು ಜವಾನ ನೋಡಿ ಸುದ್ದಿ ಕೊಟ್ಟ. ಮಗಳು ವಿಧವೆಯಾದರೂ ಬದುಕಿಗೆ ಇತರರನ್ನು ಅವಲಂಬಿಸಬೇಕಾಗಿಲ್ಲ, ಆಕೆಗೆ ಹುದ್ದೆಯಿರುವುದರಿಂದ. ತನ್ನ ಒಬ್ಬ ಮಗನನ್ನು ತಾನೇ ಸಾಕಿ ಬೆಳಸುವ ಧೈರ್ಯ ಆಕೆಗಿದೆ. ಗೌಡರ ಇನ್ನೊಬ್ಬ ಮಗಳನ್ನು ನೋಡ ಬಂದ ಗಂಡು ಐವತ್ತು ಸಾವಿರ ವರದಕ್ಷಿಣೆ ಕೇಳಿದನಂತೆ. ಇನ್ನೂ ನಾಲ್ವರು ಹೆಣ್ಣು ಮಕ್ಕಳನ್ನು ಮದುವೆ ಮಾಡಿಕೊಡಬೇಕಾದ ಗೌಡರು ಎಲ್ಲಿಂದ ಹಣ ತರಬೇಕು ! ಮೊದಲ ಮಗಳು ಅಂತರ ಜಾತೀಯ ಮದುವೆ ಮಾಡಿಕೊಳ್ಳಲು ಸಿರಿಗೆರೆ ಸ್ವಾಮಿಗಳೇ ಒಪ್ಪಿಗೆ ನೀಡಿದ್ದರೂ ಅವರ ಅನೇಕ ಅನುಯಾಯಿಗಳಿಗೆ ಸಾದರಲ್ಲದ ಹುಡುಗನಿಗೆ ಮಗಳನ್ನು ಕೊಟ್ಟದ್ದಕ್ಕೆ ಇನ್ನೂ ಅಸಮಾಧಾನ ಇದೆ. ಆ ದಿನ ರಾತ್ರಿ ಊಟಕ್ಕೆ ಲಾಡು, ಮೈಸೂರು ಪಾಕು, ಪಾಯಸ, ಕೋಸಂಬರಿ ಎಲ್ಲ ಇತ್ತು. 'ಮಾಮನೆ ಊಟ' ತಾನೇ! ಹಿಂದಿನ ಕಾಲದಲ್ಲಿ "ಮಾಲ್ದಿ" (ಮಾದ್ಲಿ)ಯೇ ಬಹುಜನಪ್ರಿಯ ಸಿಹಿ ಎನ್ನಿಸಿತ್ತು. ಮದುವೆಗಳಲ್ಲೆಲ್ಲ ಅದನ್ನು ಮಾಡಿಸುತ್ತಿದ್ದರು. (ಗೋಧಿ ಕಡಲೆ ಹಿಟ್ಟಿಗೆ ಬೆಲ್ಲ ಏಲಕ್ಕಿ ಕೊಬ್ಬರಿ ಸೇರಿಸಿ ಕುಟ್ಟಿ ಮಾಡಿದ ಪುಡಿಯೇ "ಮಾಲ್ದಿ" - ನಾವು ಅದನ್ನು ತಿಂದು ಬರಲು ಮೈಲಿಗಟ್ಟಲೆ ಹೋಗಿ ಬರಲೂ ಹಿಂಜರಿಯುತ್ತಿರಲಿಲ್ಲ). ಆ ರಾತ್ರಿಯೆಲ್ಲ ಧ್ವನಿವರ್ಧಕದಲ್ಲಿ ಸಿನಿಮಾ ಸಂಗೀತ ಕೇಳಿ ಬರುತ್ತಿತ್ತು. ಹಿಂದಿನ ದಿನ ಮಧ್ಯಾಹ್ನ ಮದುವೆ ನಡೆದು ಆ ದಿನವೇ ಮಾಮನೆ ಇಟ್ಟುಕೊಂಡಿದ್ದರು. ಬುಕ್ಕಾಂಬೂದಿಯ ಒಂದು ಸಾಧಾರಣ ಮದುವೆಗೆ ಹೆಣ್ಣಿನ ಕಡೆಯವರಿಗೆ ಏನಿಲ್ಲವೆಂದರೂ ಒಂದೂವರೆ ಲಕ್ಷ ರೂಪಾಯಿ ಖರ್ಚು.

ರಾತ್ರಿ ಯಾವುದೋ ಸಂಸ್ಥೆಯ ಯುವ ಅಧಿಕಾರಿಯ ಮನೆಯಲ್ಲಿ ಮಲಗಿದೆ. ಅವನು ಒಬ್ಬ ಆರ್.ಎಸ್.ಎಸ್. ಅಭಿಮಾನಿ. ಓಕ್ ಭಾರತದಲ್ಲಿ ಮುಸ್ಲಿಮರು ಹಿಂಸೆ ನಡೆಸಿ ಮಾಡಿರುವ ಧಾಳಿಗಳ ಬಗ್ಗೆ ಬರೆದಿರುವ ಪುಸ್ತಕದ ಬಗ್ಗೆ ಬಹು ಅಭಿಮಾನ (ಓಕ್ ಪ್ರಕಾರ, ತಾಜ್ ಮಹಲ್ ಮೂಲತಃ ಒಂದು ಹಿಂದೂ ಕಟ್ಟಡ). ಭಾರತವೂ ಮುಸ್ಲಿಂಮಯವಾಗುವ ಭಯ ಆತನದು. ಆ ಭಯವನ್ನು ನನ್ನ ಮುಂದೆ ಬೇರೆ ಬೇರೆ ಸಂದರ್ಭಗಳಲ್ಲಿ ನನ್ನ ನಡಗೆ ಸಮಯದಲ್ಲಿ ವ್ಯಕ್ತಪಡಿಸಿದ್ದಾರೆ. ಆ ಯುವಕ ಒಂದು ಹಸುವಿಗೆ ಕೃತಕ ಗರ್ಭಧಾರಣೆ ಮಾಡಿಸುವ ಕ್ರಮವನ್ನು ಸವಿವರವಾಗಿ ವರ್ಣಿಸಿ ಹೇಳಿದ.

## ಮರವಂಜಿ

ಬೆಳಿಗ್ಗೆ ಕಾಫಿ ಕುಡಿದು (28.5.85) ಬುಕ್ಕಾಂಬೂದಿ ಕೆರೆ ಏರಿಯ ಮೇಲೆ ಹೊರಟು ಇನ್ನೊಂದು ತುದಿಯಲ್ಲಿದ್ದ 'ಮದಗ'ವನ್ನು ನೋಡುತ್ತ ಸುರಂಗದ ಒಳಗೆ ಹೋಗಬೇಕೆಂದಿರುವಾಗ ಮಲ್ಲೇಗೌಡರು ಕರಡಿ ವಾಸನೆ ಹಿಡಿದು ಒಳಗೆ ಹೋಗುವುದು ಬೇಡ ಎಂದು ತಡೆದರು. ಮಲ್ಲೇಗೌಡರನ್ನು ವಾಪಸ್ ಊರಿಗೆ ಕಳುಹಿಸಿ ನಾನೊಬ್ಬನೇ ಹೊರಟೆ. ಬುಕ್ಕಾಂಬೂದಿಯ ನನ್ನ ವಾಸ್ತವ್ಯ ಎಲ್ಲ ದೃಷ್ಟಿಯಿಂದ ಬಹು ಲಾಭದಾಯಕವಾಗಿತ್ತು. ದಾರಿಯಲ್ಲಿ ಬಲಗಡೆ ಮಸಣಿಕೆರೆ ಎಂಬ ಊರು, ಮುಂದೆ ಎಡಗಡೆ ಸ್ವಲ್ಪ ದೂರದಲ್ಲೇ

ಒಂದು ಹಾಳು ದೇವಾಲಯದ ಮಂಟಪ ಕಾಣಿಸಿತು. ಸಮೀಪ ಹೋಗಿ ನೋಡಿದರೆ ಹಳೆಯ ಕಾಲದ ಕೆತ್ತನೆ ಕಂಬಗಳು ಶಿಲ್ಪಗಳು, ಒಂದು ಕೋಟೆ ಬುರುಜು ಕಾಣಿಸಿದುವು. ಅದು ಕರ್ಕಿಕೆರೆ ಎಂಬ ಒಂದು ಹಾಳೂರು. ಪದ್ಮಗಿರಿ ಚೌಡಿಯಿಂದ ಆ ಊರು ಹಾಳಾಗಿ ಹೋಗಿದೆಯಂತೆ. ಮುಂದೆ ಗೌರಪ್ಪ ಎಂಬ ವ್ಯಾಪಾರಿ ಸೈಕಲ್ ಮೇಲೆ ಹೋಗುತ್ತಿದ್ದವರು ಇಳಿದು ನನ್ನ ಜೊತೆ ನಡೆದುಕೊಂಡು ಬಂದರು. ಅವರ ಸೈಕಲ್ ಹಿಂದೆ ಖಾಲಿ ಚೀಲಗಳು. ಅವರು ಹಳ್ಳಿಗಳಲ್ಲಿ ರಾಗಿ ಕೊಂಡು ಪೇಟೆಗೆ ಕಳಿಸಿ ಮಾರುತ್ತಿದ್ದರು. (ಆ ಖಾಲಿ ರಾಗಿ ಚೀಲಗಳನ್ನು ರೈತರಿಗೆ ಕೊಡಲು ಒಯ್ಯುತ್ತಿದ್ದರು). ಒಂದು ರಾಗಿ ತುಂಬಿದ ಚೀಲಕ್ಕೆ ಅವರು 120 ರೂಪಾಯಿ ಕೊಟ್ಟು ಪೇಟೆಯಲ್ಲಿ 130 ರೂಪಾಯಿಗೆ ಮಾರುತ್ತಿದ್ದರು. ಭಾರಿ ಚೂಟಿ ಮನುಷ್ಯ. "ನಾನೇನು ಸ್ವಾಮಿ, ಬಡವ. ಏನೋ, ಅರ್ಧ ಲಕ್ಷ ರೂಪಾಯಿನಷ್ಟು ಆಸ್ತಿ ಇದೆ, ಅದೂ ಇದೆ ಇದೂ ಇದೆ" ಎಂದು ಹೇಳುತ್ತ ತಾನು ವಾಸ್ತವವಾಗಿ ಬಡವನಲ್ಲವೆಂಬುದನ್ನು ಸೂಚಿಸಿದರು. ಅಲ್ಲೇ ಸಮೀಪ ಒಂದು ವಡ್ಡರ ಹಟ್ಟಿ. ಅಲ್ಲಿ ಭಾರಿ ಜಗಳ ನಡೆದಿತ್ತು. ಗುಡಿಸಲು ಮುಂದೆ ನಿಂತಿದ್ದ ಹೆಂಗಸು ತೆಲುಗಲ್ಲಿ ಗಟ್ಟಿಯಾಗಿ ಬಯ್ಯುತ್ತಿದ್ದರೆ ಆಕೆಯ ಗಂಡ ಮೌನವಾಗಿ ನಿಂತಿದ್ದ. ಅವನ ಅಗತ್ಯ ಅವಳಿಗಿರಲಿಲ್ಲ - ಆಕೆಯಲ್ಲಿ ಹತ್ತು ಗಂಡುಗಳ ಕಂಠ ಶಕ್ತಿ ಇತ್ತು. ಆಕೆ ಇನ್ನೊಬ್ಬ ಗಂಡಸನ್ನು ಆ ಗಂಡು ಈಕೆಯನ್ನು ಬೈಯುವುದು ಘೋರಾಗಿ ನಡೆದಿತ್ತು. ಸೋಲಿನ ಅಂಚಿಗೆ ಸಾಗುತ್ತಿದ್ದ ಆ ಗಂಡಸಿನ ಸಹಾಯಕ್ಕೆ ಅವನ ಹೆಂಡತಿ ಬಂದರೂ ಏನೂ ಪ್ರಯೋಜನವಾಗಲಿಲ್ಲ. ಮೊದಲ ಹೆಂಗಸು ತನ್ನ ಬೈಗುಳಗಳಲ್ಲಿ ಆಗಾಗ್ಗೆ ಗಂಡು ಹೆಣ್ಣುಗಳ ಮರ್ಮಾಂಗಗಳ ಅಚ್ಚಗನ್ನಡ ಪದಗಳನ್ನು ಬಳಸಿಕೊಳ್ಳುತ್ತಿದ್ದಳು. ಅಲ್ಲಿ ಸೇರಿದ್ದ ನಲವತ್ತು ಐವತ್ತು ಜನ ಹೊಸಬನಾದ ನನ್ನ ಕಡೆ ಲಕ್ಷ್ಯವನ್ನೇ ಕೊಡದೆ ನನ್ನಂತೆಯೇ ತದೇಕಚಿತ್ತರಾಗಿ ಆ ಬೈಗ್ವಾಬೈಗ್ಳಿಯನ್ನು ನೋಡುತ್ತ ಆಲಿಸುತ್ತ ಮೈಮರೆತು ನಿಂತಿದ್ದರು. ನಾನು ಅವರ ಮಧ್ಯೆ ನುಸುಳಿ ಮುಂದೆ ಹೋಗಿ ಕೊಳವೆ ಬಾವಿಯಿಂದ ಬಾಟ್ಲಿಗೆ ನೀರು ತುಂಬಿಸಿಕೊಂಡೆ. ಗೌರಪ್ಪ ಜಗಳ ಬಿಡಿಸಲು ಹೋಗಿ ಅವರಿಗೆಲ್ಲ ತಾನು ಯಾರು ಎಂಬುದು ತಿಳಿದಿದೆ ಎಂಬುದನ್ನು ಸಾಬೀತು ಮಾಡಿಬಿಟ್ಟ. ಮುಂದೆ ಸಾಗಿದ ನನ್ನನ್ನು ಬಂದು ಸೇರಿಕೊಂಡು ಆ ವಡ್ಡರ ಬೋಯಿಗಳು ನನ್ನ ವಸ್ತುಗಳನ್ನು ಕಿತ್ತುಕೊಳ್ಳಬಹುದೆಂದು ಹುಷಾರು ಹೇಳಿ ನನ್ನ ವಿಷಯ ಎಲ್ಲ ಕೇಳಿ ತಿಳಿದುಕೊಂಡು ನನ್ನ ವಿಳಾಸ ಪಡೆದು ಸೈಕಲ್ ಹತ್ತಿದ. ಒಬ್ಬ ವಿಶಿಷ್ಟ ವ್ಯಕ್ತಿಯೆಂಬಲ್ಲಿ ಅನುಮಾನವಿಲ್ಲ.

ದಾರಿಯಲ್ಲಿ ಸಣ್ಣ ದೊಡ್ಡ ಗುಡ್ಡಗಳು, ಸುತ್ತಲೂ ಸಣ್ಣ ಕಾಡು. ಅಲ್ಲೇ ಒಬ್ಬ ಅಜ್ಜಿ ತನ್ನ ಮಗ ಸೊಸೆ ಮೊಮ್ಮಗನೊಂದಿಗೆ ಹುಲ್ಲೀಚಲು ಗರಿ ಕಡಿದು ಸಾಗಿಸುತ್ತಿದ್ದಳು. ಹುಲ್ಲೀಚಲಿನ ಗರಿಗಳಿಂದ ಕಸಬರಿಗೆ ಕಟ್ಟಿದರೆ ಒಂದೊಂದಕ್ಕೂ ಐವತ್ತು ಪೈಸೆ ದೊರಕುತ್ತಿತ್ತು. ದಾರಿಯುದ್ದಕ್ಕೂ ಸುರಗಿ ಮರಗಳ ತೆಳು ಸುವಾಸನೆ. ಹಿಂದೆ 1950ರಲ್ಲಿ ನಾನು ಮೊದಲ ಕನ್ನಡ ಆನರ್ಸ್ ವಿದ್ಯಾರ್ಥಿಯಾಗಿದ್ದಾಗ ಪಂಪಭಾರತ ಪಾಠ ಹೇಳುತ್ತಿದ್ದ ಕುವೆಂಪು ಅವರು "ಸುರಿವ ಸುರಯಿಯಲರ ಮುಗುಳ್ಗೆ ಮೊಗಸಿದಳಿಕುಳಂಗಳಿಂ" ಎಂಬ ಕಾವ್ಯ ಭಾಗವನ್ನು ಓದಿ, ನಾವು ಯಾರೂ ಸುರಗಿ ಮರ ನೋಡಿಲ್ಲವೆಂಬುದನ್ನು ತಿಳಿದು ಅಸಂತುಷ್ಟರಾಗಿ,

(ನಾನು ಸಂತೆಯಲ್ಲಿ ಒಣಗಿದ ಹೂ ನೋಡಿದ್ದನ್ನು ಹೇಳಿದರೂ ಅವರಿಗೆ ಸಮಾಧಾನವಾಗಲಿಲ್ಲ) "ಕುಕ್ಷವಳ್ಳಿ ಕೆರೆಯ ಹಿಂದೆ ಇದೆ, ಹೋಗಿ ನೋಡಿ" ಎಂದು ಹೇಳಿದ್ದನ್ನೇ ನಾನು ತೀರ ಗಂಭೀರವಾಗಿ ಸ್ವೀಕರಿಸಿ, ಅದಕ್ಕಾಗಿ ಹುಡುಕಾಡಿ ಯಾವುದೋ ಮರವನ್ನೇ ಸುರಗಿ ಎಂದು ಭಾವಿಸಿ ಸಂತೃಪ್ತನಾದುದು ನೆನಪಿಗೆ ಬಂದಿತು. ನಾವು ಚಿಕ್ಕವರಾಗಿದ್ದಾಗ ದೊಡ್ಡ ಹಬ್ಬಗಳಿಗೆ ಮುನ್ನ ಸಂತೆಗೆ ಹೋಗಿ ಅಲ್ಲಿ ಮಾರುತ್ತಿದ್ದ ಒಣಗಿದ ಸುರಗಿ ಹೂವು ಕೊಂಡು ತರುತ್ತಿದ್ದೆವು. ದಾರಿಯ ಬದಿಯ ಒಂದು ಮಾವಿನ ಮರ ಹತ್ತಿ ಅಲ್ಲಿದ್ದ ಬಲಿತ ಕಾಯಿಗಳನ್ನು ಕೆಲವರು ಉದುರಿಸುತ್ತಿದ್ದರು. ಒಂದು ಕಡೆ ಎರಡೇ ಮನೆಗಳು. ಅವು ಜನತಾ ಮನೆಗಳಿರಬೇಕು. ಅವುಗಳ ಹೊರಗೆ ನಾಲ್ಕಾರು ಚಿಕ್ಕ ಕೊಳಕು ಮಕ್ಕಳು ಆಟವಾಡುತ್ತಿದ್ದವು. ಒಂದು ಸಿಂಬಳ ಸುರಿಸುವ ಮಗು ಅಳುತ್ತ ಕುಳಿತಿತ್ತು. ಅಲ್ಲಿಯ ಜನ ತೀರ ಕೆಳವರ್ಗದವರಿರಬೇಕು. ಒಬ್ಬ ಹುಡುಗಿ ರಸ್ತೆ ಬದಿಯ ಕೊಳವೆ ಬಾವಿಯಿಂದ ನೀರು ಹಿಡಿಯುತ್ತಿತ್ತು. ಎರಡೇ ಮನೆಗಳಿಗೆ ಒಂದು ಕೊಳವೆ ಬಾವಿ ಇದ್ದರೂ ಅದು ರಸ್ತೆಯಲ್ಲಿ ಹೋಗಿ ಬರುವವರಿಗೂ ಉಪಯೋಗವಾಗುತ್ತಿತ್ತು. ದಾರಿಯಲ್ಲಿ ಸಿಕ್ಕ ಒಬ್ಬ ಮುದುಕರನ್ನು ಕಿಲೋಮೀಟರ್ ಕಲ್ಲಿನ ಬರಹದಿಂದ ಮರವಂಜಿ ಎಷ್ಟು ದೂರ ಇದೆಯೆಂಬುದು ತಿಳಿದಿದ್ದರೂ ಪ್ರಶ್ನಿಸಿ ಪರಿಚಯಮಾಡಿಕೊಂಡೆ. ಮರವಂಜಿಯ ಓಂಕಾರಪ್ಪನವರು ಗೊತ್ತೆ ಎಂದೆ. ಆ ಮುದುಕರು ಪದ್ಮಗಿರಿ ಚೌಡಿ ನೋಡಲು ಹೋಗುತ್ತಿದ್ದರು. ಚೌಡಿ ಎಂದ ತಕ್ಷಣ ನಾನು "ಏಕೆ ನಡೆಯುತ್ತಿದ್ದೀರಿ, ಬಸ್ಸಿಗೆ ಹೋಗಬಹುದಿತ್ತಲ್ಲ" ಎಂದು ಕೇಳಿದಾಗ ಅವರು ನೇರವಾಗಿ ಹೇಳಿದ್ದು - "ಆ ಚೌಡಿ ನನ್ನ ಹತ್ತಿರ ಒಂದಿಷ್ಟೂ ಹಣ ಉಳಿಸಿಲ್ಲ". ಅಲ್ಲೇ ಮರದ ಕೆಳಗೆ ಕುಳ್ಳಿರಿಸಿದೆ. ಸಿದ್ಧಬಸಜ್ಜ ತಮ್ಮ ಕರುಣಾಜನಕ ಕತೆ ಹೇಳಿದರು. ಅವರಿಗೆ ಹೆಂಡತಿ, ನಾಲ್ವರು ಮಕ್ಕಳು : ಆ ಚೌಡಿಯಿಂದಾಗಿ ಎಲ್ಲರೂ ದಿಕ್ಕಾಪಾಲು. ಯಾರಿಗೂ ಪರಸ್ಪರ ಮಾತಿಲ್ಲ. ಎಲ್ಲರ ಮಧ್ಯೆ ಚೌಡಿ "ತಂದಿಟ್ಟಿದ್ದಾಳೆ". ಅವನಿಗೆ ಸಾಕಷ್ಟು ಜಮೀನಿದೆ. ಆದರೂ ಕಡುಬಡವ. ಹಿಂದೆ ಆತ ಆರು ಎಕರೆ ಜಮೀನು ಕೊಂಡುಕೊಂಡ. ಆ ಊರಿನ ಇನ್ನೊಬ್ಬನಿಗೆ ಆ ಜಮೀನು ಮೇಲೆ ಆಸೆ ಇತ್ತು. ಆದರೆ ಅವನ ಬಳಿ ಹಣ ಇರಲಿಲ್ಲ. ಇವನು ಜಮೀನು ಕೊಂಡಮೇಲೆ ಅವನು ತನಗೆ ಬೇಕೆಂದ, ಈತ ಕೊಡಲಿಲ್ಲ. ಅವನು ಚೌಡಿ ಬಿಡಿಸಿದ. ಆ ದಿನದಿಂದ ಈತನಿಗೆ ಚೌಡಿ ಕಾಟ. ಮನೆಯಲ್ಲಿ ಹೆಂಡತಿ ದಿನವೂ ಕೂಗುತ್ತಾಳೆ, ಕಿರುಚುತ್ತಾಳೆ. ಮಕ್ಕಳೆಲ್ಲಾ ಬೇರೆಯಾಗಿದ್ದಾರೆ. ಜಮೀನಿದ್ದರೂ ಮಾಡುವವರಿಲ್ಲ. ಎಲ್ಲ ಬೀಳು. ಈತ ಹೋಗಿ ಚೌಡಿ ಆಶ್ರಯಕ್ಕೆ ಬಿದ್ದಿದ್ದಾನೆ. ತನ್ನದು ತಪ್ಪಿದ್ದರೆ ಸುಟ್ಟುಬಿಡು ಎಂದೂ ಅಂಗಲಾಚಿದ್ದಾನೆ. ಚೌಡಿಗೆ ಈತ ಒಳ್ಳೆಯವನೆಂದು ಈಚೆಗೆ ತಿಳಿದಿದೆ. ಈತನ ಪ್ರತಿಸ್ಪರ್ಧಿಗೆ ಹೇಳಿ ಕಳುಹಿಸಿ ಪಂಚಾಯ್ತಿ ಮಾಡುತ್ತೇನೆ ಎಂದು ಚೌಡಿ ಹೇಳಿದ್ದಾಳೆ. ಆತ ಇನ್ನೂ ಹೋಗಿಲ್ಲ. ಆತನ ಮೇಲೆ ಶ್ರೀ ಚೌಡಿಗೆ ತಾನು ಹೇಳಿ ಕಳುಹಿಸಿದರೂ ಬಂದಿಲ್ಲವೆಂಬ ಕೋಪ ಇದೆ. "ಇರಲಿ, ನೀನು ತಾಳ್ಮೆಯಿಂದ ಕಾಯಿ. ನಿನಗೆ ಒಳ್ಳೆಯದು ಮಾಡುತ್ತೇನೆ, ಆತನಿಗೆ ಬುದ್ಧಿ ಕಲಿಸುತ್ತೇನೆ" ಎಂದಿದ್ದಾಳೆ. ಅದೊಂದೇ ಸಿದ್ಧಬಸಜ್ಜನಿಗೆ ಜೀವನದಲ್ಲಿ ದೊಡ್ಡ ಧೈರ್ಯ. ಚೌಡಿಗೆ ಭಾರಿ ಹೆದರಿದ್ದ. ಅವಳ "ಮರೆ" ಬಿದ್ದಿದ್ದಾನೆ, ಆ 'ಅವ್ವ' ತನ್ನನ್ನು

ಕಾಪಾಡುತ್ತಾಳೆ ಎಂಬ ಬಗ್ಗೆ ಲವಲೇಶವೂ ಸಂದೇಹ ಇಲ್ಲ. ಇಂದಲ್ಲ ನಾಳೆ "ಆ ದುಷ್ಟನು ಪಾಪರ್ ಆಗಲೇಬೇಕು". ಪದ್ಮಗಿರಿ ಚೌಡಿ ಅವನ ಕಣ್ಣಲ್ಲಿ ಒಂದು ವಾಸ್ತವ, ಅವಳು ಸರ್ವಾಂತರ್ಯಾಮಿ, ಸರ್ವಜ್ಞೆ, ಸರ್ವಶಕ್ತೆ (ಈ ಮಾತುಗಳು ಮಾತ್ರ ನನ್ನವು, ಅಭಿಪ್ರಾಯ ಅವನದೇ). ತನ್ನನ್ನು ಹೊಗಳಿದವರಿಗೆ ಅವಳು ಸುಪ್ರೀತಳು. ಅವಳು ಮೆಚ್ಚುವುದು ಸದ್ಗುಣಗಳಿಗಿಂತ ಹೆಚ್ಚಾಗಿ ತನ್ನನ್ನು ಹೊಗಳಿದವರನ್ನು ಎಂಬುದು ಸ್ಪಷ್ಟವಾಗಿತ್ತು. ಒಂದು ಸಾರಿ ಬೆನ್ನು ಹತ್ತಿದರೆ ಅವಳೆಂದೂ ಬಿಡುವವಳಲ್ಲ. ನನಗೆ ಪದ್ಮಗಿರಿ ಚೌಡಿ ಬಗ್ಗೆ ಇಲ್ಲದ ಕುತೂಹಲ ಬೆಳೆಯಿತು. ಸಿದ್ಧಬಸಜ್ಜ ತಾನು ಹೀಗೆ ಮಾತನಾಡಿದ್ದನ್ನು ಮರವಂಜಿ ಓಂಕಾರಪ್ಪನವರಿಗೆ ಹೇಳಬೇಡಿ ಎಂದ. ಆ ಮುದುಕ ಹಿಂದೆ ಹೋದವನು ನಿಂತು ನನ್ನನ್ನು ಕೂಗಿದಾಗ ತಿರುಗಿ ನಿಂತೆ. ನನ್ನನ್ನು ಹಣ ಕೇಳಬಹುದೆಂಬ ನನ್ನ ನಿರೀಕ್ಷೆ ತಪ್ಪಾಯಿತು (ವಾಸ್ತವವಾಗಿ ಅವನ ಬಳಿ ಹಣ ಇರಲಿಲ್ಲ). ಅವನು "ನನ್ನ ವಿಷಯ ಹೇಳಬೇಡಿಃ ಆ ಕೆಟ್ಟ ವ್ಯಕ್ತಿ ಮತ್ತು ಓಂಕಾರಪ್ಪ ಇಬ್ಬರೂ ಗೆಳೆಯರು" ಎಂದ. ನಾನು ಮಾತುಕೊಟ್ಟಿದ್ದರಿಂದ ಸಮಾಧಾನಗೊಂಡ ಮುದುಕ ಪದ್ಮಗಿರಿ ಚೌಡಿ ಕಡೆ ಹೊರಟ. ನಾನು ಮರವಂಜಿ ಕಡೆ ಮುಖಮಾಡಿದೆ. ಸಿದ್ಧಬಸಜ್ಜನ ಮೇಲೆ ಚೌಡಿ ಬಿಟ್ಟ ಹೊಸದರಲ್ಲಿ ಮನೆಯಲ್ಲಿ ಇಟ್ಟ ಸಾಮಾನೆಲ್ಲ ಅಸ್ತವ್ಯಸ್ತ ; ಮೈಮೇಲಿನ ಬಟ್ಟೆಗೇ ಧಿಗ್ಗನೆ ಬೆಂಕಿ. ನೆನಪಿಸಿಕೊಂಡು ನನಗೂ ಭಯವಾಯ್ತು. ಚೌಡಿ ಇದಾಳೋ ಇಲ್ಲವೋ; ಇದಾಳೆ ಎಂಬ ಜನರಲ್ಲಿನ ನಂಬಿಕೆ ಮಾತ್ರ ಒಂದು ಸತ್ಯಸ್ಯ ಸತ್ಯ.

ಬೆಳಿಗ್ಗೆ 10.30ರ ಹೊತ್ತಿಗೆ ಮರವಂಜಿ ತಲಪಿದೆ. ಸುತ್ತಲೂ ಅಡಕೆ ತೋಟಗಳು. ಓಂಕಾರಪ್ಪ ಪದವೀಧರರು. ಅವರ ಅಣ್ಣನವರೂ ಕೂಡ ಪದವೀಧರರು ಮತ್ತು ಹೈಸ್ಕೂಲ್ ಮುಖ್ಯೋಪಾಧ್ಯಾಯರು. ಅವರದು ಶ್ರೀಮಂತ ಕುಟುಂಬ. ಸಂಜೆ ಊರ ಹೊರಗಿನ ಈಶ್ವರ ದೇವಾಲಯಕ್ಕೆ ಹೋದೆ. ಬಾಗಿಲಿಲ್ಲ. ಒಳಗೆ ಹೊಯ್ಸಳರ ಕಾಲದ ಅಪೂರ್ವ ಶಿಲ್ಪಗಳು. ಹೊರಗೆ ಒಂದು ಗುಂಡನೆ ಕಲ್ಲಿನ ಮೇಲೆ ಮಧ್ಯೆ ಎರಡು ಪಾದಗಳು, ಅವನ್ನು ಸುತ್ತುವರಿದ ಎರಡು ಸರ್ಪಗಳು, ಕೆಳಗೆ ತಲೆಕಡಿದ ಮನುಷ್ಯರು ಮತ್ತು ಪ್ರಾಣಿಗಳ ರುಂಡಗಳು. ಆ ದೇಹಗಳ ಪಾದಗಳ ಬಳಿ ಮನುಷ್ಯರ ಮತ್ತು ಪ್ರಾಣಿಗಳ ಮುಂಡಗಳು. ಆ ಪ್ರದೇಶದಲ್ಲಿ ಹಿಂದೆ ದೇವರಿಗಾಗಿ ಪ್ರಾಣಿ ಬಲಿ ನಡೆಯುತ್ತಿದ್ದುದು ಮಾತ್ರವಲ್ಲ, ಭಕ್ತರು ತಮ್ಮನ್ನು ತಾವು ಬಲಿ ಕೊಟ್ಟುಕೊಳ್ಳುತ್ತಿದ್ದರು (ಅಥವಾ ಜನರನ್ನು ದೇವರಿಗೆ ಬಲಿಕೊಡುತ್ತಿದ್ದರು?). ಹಳೇ ಬೀಡಿನಲ್ಲಿಯೂ ಇಂತಹ ಶಿಲ್ಪ ನೋಡಿದ್ದೆನಾದರೂ ಅಲ್ಲಿ ಪ್ರಾಣಿಗಳ ರುಂಡ ಮುಂಡ ಇರಲಿಲ್ಲ. ಅಲ್ಲಿದ್ದುದು ರಾಜರು ಸತ್ತಾಗ ಅವರಿಗಾಗಿ ತಮ್ಮನ್ನು ತಾವು ಬಲಿಕೊಟ್ಟುಕೊಳ್ಳುತ್ತಿದ್ದ 'ವೇಳೆವಾಳಿ'ಗಳ ಶಿಲ್ಪಗಳು. ರಾಜ ಇರುವವರೆಗೆ ಅವನ ಸೇವೆ ಮಾಡಿ, ಅವನ ಸಾವಿನ ಬಳಿಕ ಅವನನ್ನು ಹಿಂಬಾಲಿಸುವ ಪ್ರತಿಜ್ಞೆ ಮಾಡುತ್ತಿದ್ದವರನ್ನು ವೇಳೆವಾಳಿಗಳೆಂದು (ಗರುಡರೆಂದು) ಕರೆಯುತ್ತಿದ್ದರು. (ಮರವಂಜಿಯ ಶಾಸನ ರೈಸರ ಎಫಿಗ್ರಾಫಿಯ ಕರ್ನಾಟಿಕ, ಸಂಪುಟ 6. ಕಡೂರು 30 - ಇಲ್ಲಿ ಪ್ರಕಟವಾಗಿದೆ). ಈಶ್ವರ ದೇವಾಲಯದ ಪಕ್ಕದಲ್ಲಿ ಒಂದು ವೀರಗಲ್ಲಿತ್ತು. ಹಿಂದಿನ ಒಂದು ಹಾಳು ದೇವಾಲಯದಲ್ಲಿ

ಒಂದು ಸುಂದರ ವಿಷ್ಣು ವಿಗ್ರಹವಿತ್ತು. ಆ ಕಲಾಸಂಪತ್ತನ್ನು ಉಳಿಸಿಕೊಳ್ಳಲು ಆ ದೇವಾಲಯಗಳಿಗೆ ಬಾಗಿಲು ಮಾಡಿಸಿ ಬೀಗ ಹಾಕಿ ಎಂದು ಊರವರಿಗೆ ಸಲಹೆ ನೀಡಿದೆ. ಸಮೀಪದಲ್ಲಿ ಒಂದು ಹಾಳು ಮಠವಿತ್ತು. ಹಿಂದೊಮ್ಮೆ ಅಲ್ಲಿ ಅನುಷ್ಠಾನ ಮಾಡಿ ಸಮಾಧಿಸ್ಥರಾದ ಶಿವಶರಣರೊಬ್ಬರ ಗದ್ದುಗೆ ಅದು, "ಅಪ್ಪಣೆ" ಕೊಡುವ ಸಮಾಧಿ. ಮಠದ ಹಳೆಯ ಕಟ್ಟಡದಲ್ಲಿ ಪಾಂಡೋಮಟ್ಟಿ ಗ್ರಾಮದ ಪದವೀಧರ ರುದ್ರಪ್ಪನವರು ವಾಸವಾಗಿದ್ದರು (ಅವರು 'ಲಂಕೇಶ್ ಪತ್ರಿಕೆ'ಯ ಮಾರಾಟದ ಏಜೆಂಟರೂ ಹೌದು). ಅವರು ಹಗಲು ಹೊತ್ತು ಎಲ್ಲಿ ಹೋದರೂ ಸಂಜೆ ಅಲ್ಲಿಗೇ ಬಂದು ಅಡುಗೆ ಮಾಡಿಕೊಂಡು ಊಟಮಾಡಿ ಅಲ್ಲೇ ಮಲಗಬೇಕು. ಶರಣರ ಆತ್ಮವೇ ಅಲ್ಲಿಯ ಅಧಿಧೈವ, ಆ ದೈವ ಆತನನ್ನು ಬಿಟ್ಟು ಕೊಡುತ್ತಿಲ್ಲ. "ಮುಂದೆ ಎಲ್ಲ ಒಳ್ಳೆಯದಾಗುತ್ತದೆ, ಇಲ್ಲೇ ಇರು" ಎಂದು ಅಪ್ಪಣೆ ಮಾಡಿದೆ. ಆತ ಅಲ್ಲೇ ಇರಲೇಬೇಕು. ಇತರರಂತೆ ಮದುವೆ ಮಾಡಿಕೊಂಡು ಸ್ವತಂತ್ರ ಜೀವನವನ್ನು ಬಾಳುವ, ಬೆಳೆಯುವ ಸ್ವಾತಂತ್ರ್ಯವನ್ನು ಅವನು ಕಳೆದುಕೊಂಡಿದ್ದಾನೆ. ಆ ಪ್ರದೇಶದ ದೈವ, ಪ್ರೇತಗಳಿಗೆ ತಮ್ಮ ಬದುಕುಗಳನ್ನು ಒಪ್ಪಿಸಿಕೊಂಡಿರುವ ಸಾವಿರಾರು ಜನರಲ್ಲಿ ರುದ್ರಪ್ಪನೂ ಒಬ್ಬ. ಆತನಿಗೆ ಪತ್ರಿಕೆಗಳು ಗೊತ್ತು ("ಲಂಕೇಶ್ ಪತ್ರಿಕೆ"ಯಂತೂ ಸರಿಯೇ), ವಚನ ಸಾಹಿತ್ಯ ಓದಿದ್ದಾನೆ, ನನ್ನ ಲೇಖನಗಳನ್ನೂ ಓದಿದ್ದಾನೆ. ಆದರೆ ತನ್ನ ಬಗ್ಗೆ ಮಾತ್ರ ಆತ ನಿಸ್ಸಹಾಯಕ. ಯಾವುದೋ ಮಾನಸಿಕ ದೌರ್ಬಲ್ಯದಿಂದ ನರಳುತ್ತಿರುವ ಆತ ಮಠದ ದೈವಕ್ಕೆ ಅಡಿಯಾಳಾಗಿದ್ದಾನೆ. ಕ್ರಿಯಾಶೀಲತೆ ಕಳೆದುಕೊಂಡು ಹಾಗೆ ಅಡಿಯಾಳಾಗುವುದು ಒಂದು ಶಾಶ್ವತ ಸೆರೆಗೆ ಸಿಕ್ಕಂತೆ. ನಾವು ಮಾತನಾಡುತ್ತಿದ್ದಂತೆ ಒಂದು ಬೆಕ್ಕು ನಾಲ್ಕು ಮರಿಗಳೊಡನೆ ಅಲ್ಲೇ ನಿಂತಿತ್ತು. ಬೆಕ್ಕನ್ನು ಯಾರೋ ಸವರಿದರು. ಅದು ಶರಣರ ಪ್ರಭಾವಕ್ಕೆ ಒಳಗಾಗದೆ ತನ್ನದೇ ಸ್ವತಂತ್ರ ಜೀವನವನ್ನು ನಡೆಸುತ್ತಿತ್ತು.

ಮರವಂಜಿಯ ಕರ್ನಾಟಕ ವಿದ್ಯುತ್ ಇಲಾಖೆಯ ನೌಕರನೊಬ್ಬ ಪದ್ಮಗಿರಿ ಚೌಡಿಯ ಭಕ್ತ. ಅವನು ಚೌಡಿ ವಿಷಯವಾಗಿ ಹೇಳಿದ ಕತೆ ಇದು. ಅವಳು ಮೂಲತಃ ಮಲೆನಾಡಿನವಳು. ತಂದೆ ಭಾರಿ ಶ್ರೀಮಂತ. ಏನೋ ಕಾರಣವಾಗಿ ಅವಳು ಗಂಡನ ಮನೆಗೆ ಹೋಗಲು ತನ್ನ ಎಲ್ಲ ಒಡವೆ ಹಾಕಿಕೊಂಡು ಒಬ್ಬಳೇ ಮಸಣಿಕೆರೆಗೆ ಬಂದಾಗ ರಾತ್ರಿಯಾಗಿತ್ತು. ತನ್ನ ಎಲ್ಲ ಒಡವೆಗಳನ್ನು ಅಲ್ಲಿಯ ಗೌಡನ ಕೈಗೆ ಕೊಟ್ಟು ಅವನ ಮನೆಯಲ್ಲೇ ಮಲಗಿದಳು. ಬೆಳಿಗ್ಗೆ ಗೌಡ ಒಡವೆ ಹಿಂದಿರುಗಿಸಲಿಲ್ಲ. ಅವಳು ಅಳುತ್ತ ಗಂಡನ ಮನೆಗೆ ಹೋಗಿ ಹೇಳಿದಳು. ಅವರಿಬ್ಬರೂ ಮಲೆನಾಡಿನ ಶ್ರೀಮಂತನ (ಹೆಣ್ಣಿನ ತಂದೆ) ಊರ ಚೌಡಿಯನ್ನು ಕರೆತಂದರು. ಆ ಚೌಡಿ ಮಸಣಿ ಕೆರೆಯ ಸುಳ್ಳುಗಾರ ಗೌಡನನ್ನು ಹಾಳುಮಾಡಿ ಆ ಊರಿನ ರುದ್ರಸ್ವಾಮಿಯ (ವೀರಭದ್ರ ದೇವರ) ಅನುಜ್ಞೆಯಂತೆ ಅಲ್ಲೇ ಒಂದು ಬೇವಿನಮರದಲ್ಲಿ ನೆಲಸಿದಳು. ರುದ್ರಸ್ವಾಮಿ ಊರ ಸುತ್ತ ಒಂದು ಗೆರೆ ಹಾಕಿದ್ದಾನೆ. ಅದನ್ನು ದಾಟಿ ಅವಳು ಆಚೆ ಹೋಗಳು. ರುದ್ರಸ್ವಾಮಿಯ ಎಲ್ಲ ಅಪ್ಪಣೆಗಳನ್ನು ಅವಳು ಪರಿಪಾಲಿಸುತ್ತಾಳೆ. ತನ್ನನ್ನು ಮರೆ ಹೊಕ್ಕ ಜನರು ಯಾರ ಮೇಲೆ ಮಾಟ ಮಾಡಿಸುತ್ತಾರೋ ಅವರನ್ನು ಹಿಂಡಿ ಹಿಪ್ಪೆ ಮಾಡುತ್ತಾಳೆ. ಅವಳ ಕಾಟ ಯಮಕಾಟ. ಅವಳ ಹೆಸರು ಕೇಳಿದರೆ ಸಾಕು, ಜನ ನಡುಗುತ್ತಾರೆ. ಮೇಲೆ

ಹೇಳಿದ ನೌಕರನೂ ಅವಳ ಕಾಟಕ್ಕೆ ಒಳಗಾಗಿ, ಬಳಿಕ ಅವಳನ್ನು ಶಾಂತಗೊಳಿಸಿ ಹೇಗೋ ಸಮಾಧಾನದಿಂದ ಬದುಕುತ್ತಿದ್ದಾನೆ. ಸಂಜೆ ಒಬ್ಬ ಎಂ.ಎ. ಪದವೀಧರರು - ಇವರು ಹಳ್ಳಿಗಳಲ್ಲಿ ಬಾವಿ ಕೊರೆಯುವ ಯಂತ್ರ ಇಟ್ಟುಕೊಂಡಿದ್ದಾರೆ - ದೇವರು ಇಲ್ಲವೆಂಬ ವಾದ ಹೂಡಿದರು. ನಾನು ಅವರ ಜೊತೆ ಪ್ರತಿವಾದ ಹೂಡಿ ವಾದಕ್ಕಿಳಿಯಲು ಸಿದ್ಧನಿರಲಿಲ್ಲ. ನಂಬಿಕೆ, ಶ್ರದ್ಧೆಗಳ ವಿಷಯ ಬಂದಾಗ ವಾದಿಸುವುದು ದಡ್ಡತನವಾಗುತ್ತದೆ. ಹಳ್ಳಿ ಹಳ್ಳಿಗಳಲ್ಲಿ ಡಾ. ಎಚ್. ನರಸಿಂಹಯ್ಯನವರ ವೈಜ್ಞಾನಿಕ ದೃಷ್ಟಿಕೋನ, ಶಿವಬಾಲಯೋಗಿಗಳ ಮಳೆ ಬರಿಸುವ ಶಕ್ತಿ ಇವುಗಳ ವಿಷಯ ಚರ್ಚಿತವಾಗುತ್ತಿರುವ ಸಂಗತಿ ಎದ್ದು ಕಾಣುತ್ತಿತ್ತು. ಮನುಷ್ಯನ ಮನಸ್ಸಿಗೆ ತಿಳಿಯದ ಅಪಾರಶಕ್ತಿಗಳಿರುವ ಬಗ್ಗೆ, ವಿಶ್ವದ ಹಿಂದೆ ಒಂದು ಚೈತನ್ಯ ಮಿಡಿಯುತ್ತಿರುವ ಬಗ್ಗೆ ಇರುವ ನನ್ನ ಶ್ರದ್ಧೆಯನ್ನು ಅವರಿಗೆ ಸೂಕ್ಷ್ಮವಾಗಿ ತಿಳಿಸಿದೆ. ನರಸಿಂಹಯ್ಯನವರಿಗೂ ಶಿವಬಾಲಯೋಗಿಗಳಿಗೂ ಬಂದಿರುವ ಸಂಘರ್ಷ ಸುಲಭವಾಗಿ ಬಗೆಹರಿಯುವಂತಹುದಲ್ಲ. ನಂಬಿಕೆ, ಮೂಢನಂಬಿಕೆ ಇವುಗಳ ಮಧ್ಯೆ ಸ್ಪಷ್ಟಗೆರೆ ಇರುವಂತೆ ಕಾಣದು.

ರಾತ್ರಿ ಹಳ್ಳಿಯ ಎಂಟು ಹತ್ತು ಜನ ಮಕ್ಕಳಿಗೆ ಆಲಿಬಾಬ ಮತ್ತು ನಲವತ್ತು ಕಳ್ಳರ ಕತೆ ಹೇಳಿದೆ.

## ಚನ್ನಗಿರಿ

ಬೆಳಿಗ್ಗೆ (29.5.85) ಕಾಫಿ ಕುಡಿದು ನನ್ನ ತಾಲ್ಲೂಕು ಚನ್ನಗಿರಿಯತ್ತ ಹೊರಟೆ. ಮರವಂಜಿಯಿಂದ ಚನ್ನಗಿರಿಗೆ ಐದೂವರೆ ಮೈಲಿ ಮಾತ್ರ. ದಾರಿಯುದ್ದಕ್ಕೂ ಮನಸ್ಸಿನಲ್ಲಿ ಮೌನವಾಗಿ, ಬಾಯ್ಬಿಟ್ಟು ಗಟ್ಟಿಯಾಗಿ ಧ್ಯಾನಿಸಿದೆ, ಪ್ರಾರ್ಥಿಸಿದೆ. "ಓ ದೈವವೇ, ನನ್ನ ಕುಟುಂಬವನ್ನು ನಿನ್ನ ರಕ್ಷಣೆಗೆ ತೆಗೆದುಕೋ", "ನನ್ನನ್ನು ಕನ್ನಡಕ್ಕಾಗಿ ಅಣಿಗೊಳಿಸು" ಎಂಬ ಮೊರೆ ಹೃದಯಾಂತರಾಳದಿಂದ ಹೊರಟಿತು. "ಕಳಬೇಡ ಕೊಲಬೇಡ...." ಇಂತಹ ಮೌಲ್ಯಗಳು ಪುಸ್ತಕದಿಂದ ನಾಲಗೆಗೆ, ನಾಲಗೆಯಿಂದ ಹೃದಯಕ್ಕೆ, ಹೃದಯದಲ್ಲಿ ಒಂದಾಗಿ ನನ್ನ ನಡೆ ನುಡಿಗೆ ಇಳಿಯಬೇಕು ಎಂದು ತೀವ್ರವಾಗಿ ಹಾರೈಸಿದೆ. ಬರುವಾಗ ಎಡಗಡೆ "ಮಾವಿನ ಹೊಳೆ ಕ್ಷೇತ್ರ" ಎಂಬ ದೊಡ್ಡ ಫಲಕ ಕಾಣಿಸಿತು. ಅಲ್ಲಿಗೆ ಹಿಂದೆ ಎರಡು ಬಾರಿ ಹೋಗಿದ್ದುದು, ನನ್ನ ಸಮೀಪದ ಬಂಧುವೊಬ್ಬರು ಅಲ್ಲಿಯ ರುದ್ರಸ್ವಾಮಿಗೆ (ವೀರಭದ್ರ ದೇವರಿಗೆ) ತನ್ನ ಬದುಕಿನ ನಿರ್ಣಯಗಳನ್ನು ಕೈಗೊಳ್ಳುವ ಜವಾಬ್ದಾರಿಯನ್ನು ಒಪ್ಪಿಸಿ ತನ್ನನ್ನು ಮತ್ತು ತನ್ನ ಕುಟುಂಬವನ್ನು ದುಃಖದ ಮಡಿಲಿಗೆ ತಳ್ಳಿದ ನೆನಪು ನನ್ನ ಮುಂದೆ ಸುಳಿಯಿತು. ಮಾವಿನ ಹೊಳೆ ರಸ್ತೆಯ ದಿಬ್ಬವನ್ನು ಹತ್ತುತ್ತಿದ್ದಂತೆ ಚನ್ನಗಿರಿ ಕೋಟೆ ಇರುವ ಗುಡ್ಡ ಕಾಣಿಸಿತು. ಗುಡ್ಡದ ಮೇಲೆ ಬೇಟೆಗಾರನ ಉಡುಪು ತೊಡುಗೆ ಹಾಕಿರುವ ಬೇಟೆ ರಂಗನಾಥ ಸ್ವಾಮಿಯ ಗುಡಿ ಇದೆ. ಸುಮಾರು ಒಂಬತ್ತು ಗಂಟೆಗೆ ಚನ್ನಗಿರಿ ತಲುಪಿದೆ. ರಸ್ತೆಯ ಬಲಭಾಗದಲ್ಲಿದ್ದ ಕಲ್ಮಠವನ್ನು ಪರಿಶೀಲಿಸಿದೆ. ಸುಮಾರು ಹನ್ನೊಂದನೇ ಶತಮಾನದ ಕಲ್ಲು

ಕಟ್ಟಡ ಅದು. ಹೊರಗಡೆ ಒಂದು ಶಾಸನವೂ ಇದೆ. ಇಡೀ ಕಟ್ಟಡವನ್ನು ಬಹು ಹಿಂದೆಯೇ ಮಣ್ಣಿಂದ ಮುಚ್ಚಿರುವುದಲ್ಲದೆ (ಅದಕ್ಕೆ ಕಾರಣ, ಹಿಂದೆ ಸೂಚಿಸಿರುವಂತೆ ವಿದೇಶೀ ಸಂಸ್ಕೃತಿಯ ಆಕ್ರಮಣದ ಭಯ) ಮುಂಭಾಗದಲ್ಲಿ ಕಂಬಗಳನ್ನು ನಿಲ್ಲಿಸಿ ಹೆಂಚು ಹೊದಿಸಿ ಇಡೀ ಕಟ್ಟಡವನ್ನು ವಿಕೃತಗೊಳಿಸಿದ್ದಾರೆ. ಚನ್ನಗಿರಿ ಬಸ್ ನಿಲ್ದಾಣದ ಹೋಟಲಲ್ಲಿ ಬಿಸ್ಕತ್ ತಿಂದು ಟೀ ಕುಡಿದು ನೇರವಾಗಿ ಪ್ರವಾಸಿ ಮಂದಿರಕ್ಕೆ ಹೋದೆ. ಹಿಂದಿನ ದಿನ ಡಾ. ಬಸವಣ್ಣಯ್ಯ, ಮಲ್ಲೇಶಪ್ಪ ಮತ್ತು ಇತರರು ನನ್ನ ನಿರೀಕ್ಷೆಯಲ್ಲಿದ್ದರೆಂದು ತಿಳಿಯಿದು. ಬುಕ್ಕಾಂಬೂದಿಯಲ್ಲಿ ಒಂದು ದಿನ ಹೆಚ್ಚಾಗಿ, ಅನಿರೀಕ್ಷಿತವಾಗಿ ಉಳಿದುದರ ಪರಿಣಾಮ ಅದು. ಪ್ರವಾಸಿ ಮಂದಿರದ ಮೇಟಿ ನಾರಾಯಣ ಭಟ್ಟರು ಆತ್ಮೀಯತೆಯಿಂದ ಒಂದು ಕೊಠಡಿ ಒದಗಿಸಿ ತಣ್ಣೀರು ತರಿಸಿ ಕೊಟ್ಟರು. ಅವರು ನನ್ನ ಬಗ್ಗೆ ಸ್ವಲ್ಪ ದೊಡ್ಡ ಮಾತೇ ಆಡಿದರು. "ಭಟ್ಟರೇ, ನಿಮ್ಮಲ್ಲಿ ನನಗೆ ಒಬ್ಬ ಮನುಷ್ಯ ಮಾತ್ರ ಕಾಣುತ್ತಾನೆ" ಎಂದೆ. ಒಂದು ಒಳ್ಳೆಯ ಮಾತು ಮನುಷ್ಯ ಸಂಬಂಧಗಳನ್ನು ಮಧುರ ರೀತಿಗೆ ಕೊಂಡೊಯ್ಯಬಲ್ಲುದು. ದಾರಿಯುದ್ದಕ್ಕೂ ನಾನು ಆಗಲೇ ಸೂಚಿಸಿದಂತೆ ಯಾವುದೇ ಮನೆಗೆ ಹೋದರೂ ಕೈ ಕಾಲು ತೊಳೆದು ನೇರವಾಗಿ ಅಡುಗೆ ಮನೆಯ ಬಾಗಿಲ ಬಳಿ ಹೋಗಿ ಅಲ್ಲಿನ ಮಹಿಳೆಯರಿಗೆ ಕೈಮುಗಿದು ನನ್ನ ಪರಿಚಯ ಹೇಳಿಕೊಂಡು ಅವರ ಪರಿಚಯ ಮಾಡಿಕೊಳ್ಳುತ್ತಿದ್ದೆ. ಆ ಮನೆ ಬಿಟ್ಟು ಹೊರಡುವಾಗಲೂ ಮತ್ತೆ ಅಡುಗೆ ಮನೆ ಬಳಿ ಹೋಗಿ ಕೈಮುಗಿದು ನನ್ನ ಹಾರ್ದಿಕ ಕೃತಜ್ಞತೆಗಳನ್ನು ಹೇಳಿ ಎಲ್ಲರಿಗೂ ಶುಭವನ್ನು ಕೋರಿ, ದೇವರ ಆಶೀರ್ವಾದ ಬೇಡಿ ಹೊರಡುತ್ತಿದ್ದೆ. ಆ ಮನೆ ನನಗೆ ಒಂದೋ ಎರಡೋ ದಿನ ಆಶ್ರಯ ಕೊಟ್ಟು ಸಾಕಿದ್ದಲ್ಲವೇ? ಉದ್ದಕ್ಕೂ ನಾನಂತೂ ಎಲ್ಲ ಕಡೆ ಆತ್ಮೀಯತೆಯ ಭಾವವನ್ನು ಸವಿದೆ.

ಸ್ನಾನ ಮುಗಿಸಿ ಸ್ವಲ್ಪ ವಿಶ್ರಾಂತಿ ತೆಗೆದುಕೊಂಡು ನನ್ನ ಭಾವ, ನಿವೃತ್ತ ಶಾಲಾ ಉಪಾಧ್ಯಾಯ ಮಹಾದೇವಯ್ಯನವರ ಮನೆಗೆ ಹೋಗಿ ಅವರ ಮನೆಗೆ ಮಧ್ಯಾಹ್ನ ಊಟಕ್ಕೆ ಬರುವುದಾಗಿ ತಿಳಿಸಿದೆ. ನನ್ನ ಅಕ್ಕ ಮೊದಲ ಹೆರಿಗೆಯಲ್ಲೇ ಹೊಟ್ಟೆಯಲ್ಲಿ ಮಗು ಸತ್ತು ತಾನೂ ಕಣ್ಮುಚ್ಚಿದ್ದಳು. ಅವಳ ಗಂಡ ನೀತಿಗೆರೆ ಮಹಾದೇವಯ್ಯನವರು ಚನ್ನಗಿರಿಯಲ್ಲಿ ಎರಡನೆಯ ಮದುವೆ ಮಾಡಿಕೊಂಡಿದ್ದರು. ಇಬ್ಬರೂ ಪ್ರೈಮರಿ ಶಾಲಾ ಉಪಾಧ್ಯಾಯರು, ಇಬ್ಬರೂ ಒಳ್ಳೆಯ ಸ್ವಭಾವದವರು. ಅವರ ಮನೆಯಿಂದ ನಾನು ಹಿಂದಕ್ಕೆ ಬರುವ ಹೊತ್ತಿಗೆ ಮಲ್ಲೇಶಪ್ಪ ಮಾಸ್ತರ್ ನನಗಾಗಿ ಕಾದು ಕುಳಿತಿದ್ದರು. ಅವರು ಜಾತಿಯಲ್ಲಿ ಮಡಿವಾಳ ಲಿಂಗಾಯತರು. ಹಿಂದೊಮ್ಮೆ ಅವರು ಕನ್ನಡ ಸಾಹಿತ್ಯ ಪರಿಷತ್ತಿನ ತಾಲೂಕು ಶಾಖೆಯ ಅಧ್ಯಕ್ಷರಾಗಿದ್ದಾಗ ಚನ್ನಗಿರಿಗೆ ನನ್ನನ್ನು ಕರೆಯಿಸಿ ಸನ್ಮಾನ ಮಾಡಿದ್ದರು. ಪ್ರೈಮರಿ ಶಾಲಾ ಉಪಾಧ್ಯಾಯರಾಗಿ ಕೆಲಸಕ್ಕೆ ಸೇರಿ ಕನ್ನಡ ಡಿಪ್ಲೊಮ ಪರೀಕ್ಷೆ ಮುಗಿಸಿ ಹೈಸ್ಕೂಲಿಗೆ ನೇಮಕಗೊಂಡು, ಆ ಸ್ಥಾನದಿಂದ ಚ್ಯುತಿಯಾಗಿ ಕೋರ್ಟಿಗೆ ಹೋಗಿ ಗೆದ್ದು ಮತ್ತೆ ಹೈಸ್ಕೂಲಿಗೆ ಉಪಾಧ್ಯಾಯರಾಗಿ ನೇಮಕ ಪಡೆದಿದ್ದರು. ಅವರ ಹೆಂಡತಿ ಕ್ಯಾನ್ಸರಿನಿಂದ ಸತ್ತಿದ್ದಳು. ಬಡತನ. ಇಬ್ಬರು ಹೆಣ್ಣು ಮಕ್ಕಳಿಗೆ ಇನ್ನೂ ಮದುವೆ ಇಲ್ಲ. ಆದರೂ ಸಾಹಿತ್ಯದ ಸಾಹಿತಿಗಳ ಸ್ನೇಹ ಅವರಿಗೆ ಆಪ್ಯಾಯಮಾನವಾಗಿತ್ತು.

ಚನ್ನಗಿರಿ ಪಕ್ಕದ ಚಿಕ್ಕುಲಿಕೆರೆಯ ತೋಟಗಳಲ್ಲಿ ನಡೆಯುತ್ತಿದ್ದ ಮಾಹೇಶ್ವರನ ಜಾತ್ರೆಗೆ ನಾನು ಪ್ರಾಥಮಿಕ ಶಾಲಾ ವಿದ್ಯಾರ್ಥಿಯಾಗಿದ್ದಾಗ ನೀತಿಗೆರೆಯಿಂದ್ಧ ಆರು ಎಂಟು ಮೈಲಿ ನಡೆದುಕೊಂಡು ಬಂದು ಕಿಚಡಿ, ಬಾಳೆಹಣ್ಣು, ಬೆಲ್ಲ, ಹಾಲು ಸವಿದ ಅನುಭವ ಜ್ಞಾಪಕದಲ್ಲಿತ್ತು. ಮಾಹೇಶ್ವರನ ಜಾತ್ರೆ ಸಾಮಾನ್ಯವಾಗಿ ಊರ ಹೊರಗೆ, ತೋಟಗಳಲ್ಲಿ. ಅಲ್ಲಿ ಅಂದು ಬರೀ ಸಿಹಿ ಊಟ (ಮೇಲೆ ಹೇಳಿದಂತೆ) - ಉಪ್ಪು, ಹುಳಿ, ಮೆಣಸಿನಕಾಯಿಗಳಿಗೆ ಅದರಲ್ಲಿ ಸ್ಥಾನ ಇಲ್ಲ. ಹೆಂಗಸರು ಆ ಜಾತ್ರೆ ಪ್ರದೇಶಕ್ಕೆ ಬರುವುದು ನಿಷಿದ್ಧ.

ಚನ್ನಗಿರಿಯ ಹಿಂದಿನ ಹೆಸರು ಹುಲಿಕೆರೆ. ಅಲ್ಲಿ ಕೆಳದಿ ಚನ್ನಮ್ಮಾಜಿ ಕೋಟೆ ಕಟ್ಟಿಸಿದ್ದರಿಂದ ಚನ್ನಗಿರಿ ಎಂಬ ಹೊಸ ಹೆಸರು ಬಂದಿತು. ಚಿಕ್ಕ ಹುಲಿಕೆರೆ (ಚಿಕ್ಕುಲಿಕೆರೆ) ಚನ್ನಗಿರಿ ಪಕ್ಕದ ಹಳ್ಳಿ. ಸಾತ್ವಿಕ ಸ್ವಭಾವದ ಡಾ. ಬಸವಣ್ಣಯ್ಯ ಆ ಊರಿನವರು. (ಮೈಸೂರು ಮೆಡಿಕಲ್ ಕಾಲೇಜಿನಲ್ಲಿ ವಿದ್ಯಾರ್ಥಿಯಾಗಿದ್ದ ಅವರಿಗೆ ನಾನು 1950ರಲ್ಲಿ ವೈದ್ಯಕೀಯ ಕಾಲೇಜಿಗೆ ಸೇರದೆ ಕನ್ನಡ ಆನರ್ಸ್ ಆಯ್ದುಕೊಂಡದ್ದು ತೀವ್ರ ಅಸಮಾಧಾನ ಉಂಟುಮಾಡಿತ್ತು). ಮಧ್ಯಾಹ್ನದ ಬಳಿಕ ಚನ್ನಗಿರಿಯ ವೈದ್ಯರಾದ ಡಾ. ಮರುಳಪ್ಪನವರು ನನ್ನ ಜೊತೆ ಮಾತನಾಡಲು ಬಂದರು. ಸಂಜೆ ಮಲ್ಲೇಶಪ್ಪ ಮತ್ತು ನಾನು ಕಲ್ಮಠವನ್ನು ಪರಿಶೀಲಿಸುತ್ತಿರುವಾಗ ಆ ಊರಿನ ಮೂವರು ಗಣ್ಯ ಲಿಂಗಾಯತರು ಬಂದರು. ಕಲ್ಮಠವು ಚನ್ನಗಿರಿಯ ವಿರಕ್ತಮಠದ ಹತೋಟಿಯಲ್ಲಿದೆ. ಅದರ ಪಕ್ಕದಲ್ಲಿ ವಿಶಾಲವಾದ ತೋಪು ಇದೆ. ಕಲ್ಮಠದ ಒಳಭಾಗದ ವಿಗ್ರಹಗಳೆಲ್ಲ ನಾಶವಾಗಿವೆ. ಕಲ್ಮಠದಂತೆಯೇ ಮುಂಚೆ ಹಾಳು ಸ್ಥಿತಿಯಲ್ಲಿದ್ದು ಮುಂದೆ ಜೀರ್ಣೋದ್ಧಾರವಾಗಿ ಪೂಜೆ ನಡೆಯುತ್ತಿರುವ ಚನ್ನಕೇಶವ ದೇವಾಲಯಕ್ಕೆ ಹೋದೆವು. ಅದರ ವಾಸ್ತು 15-16ನೇ ಶತಮಾನದ್ದು. ಅದರ ಮುಂದೆ ಎರಡು ಶಾಸನಗಳೂ ಸಮೀಪದ ಹೊಂಡದ ದಂಡೆ ಮೇಲೆ ಎರಡು ಸುಂದರ ವೀರಗಲ್ಲುಗಳೂ ಇವೆ. ಅಲ್ಲಿಯ ವಿರಕ್ತ ಮಠಕ್ಕೂ ಪಟ್ಟದ್ದೇವರ ಮಠಕ್ಕೂ ತಿಕ್ಕಾಟಗಳಿಲ್ಲವೆಂಬ ಸಂಗತಿ ತಿಳಿದು ಸಮಾಧಾನವಾಯಿತು. ವಿರಕ್ತಮಠಕ್ಕೆ ಉತ್ತರಾಧಿಕಾರಿಯನ್ನು ಆರಿಸಲು ಚಿಕ್ಕುಲಿಕೆರೆಯ ಶಿವಲಿಂಗಸ್ವಾಮಿ ಗದ್ದುಗೆಯ ಅಪ್ಪಣೆ ಕೇಳಿಕೊಂಡು ಬರಲು ಹೋಗಿದ್ದವರು ಅಲ್ಲಿಗೆ ಬಂದರು. ವಿರಕ್ತ ಮಠಕ್ಕೆ ಸ್ವಾಮಿಯಾಗಲಿರುವ ಕುಂಟು ನಡಗೆಯ ಒಬ್ಬ ಯುವಕರು ನನಗೆ ಗೊತ್ತಿತ್ತು. ಅವರ ಬಗ್ಗೆ ನನಗೆ ಅಂತಹ ಸದ್ಭಾವನೆ ಇರಲಿಲ್ಲ. ಅವರು ಸದ್ಯ ತಾಲೂಕು ಕಚೇರಿಯಲ್ಲಿ ಒಬ್ಬ ಗುಮಾಸ್ತೆ ಆಗಿದ್ದಾರೆ. ಆ ವ್ಯಕ್ತಿ ಕಾವಿ ಧರಿಸಿ ಮಂಚವೊಂದರ ಮೇಲೆ ಕುಳಿತು ಕಲ್ಲು ಸಕ್ಕರೆ ಪ್ರಸಾದವನ್ನು ಕೊಟ್ಟಾಗ ತೆಗೆದುಕೊಳ್ಳಲು ಹೇಗೊ ಹೇಗೋ ಅನ್ನಿಸಿತು *

* ಆ ಯುವಕರು ವಿರಕ್ತಮಠಾಧಿಕಾರಿಗಳಾಗಿ ತಕ್ಕಮಟ್ಟಿಗೆ ಒಳ್ಳೆ ಹೆಸರು ಗಳಿಸಿದ್ದಾರೆ ಎಂಬುದು ಸಮಾಧಾನದ ಸಂಗತಿ (1999).

ವಿರಕ್ತ ಮಠದಲ್ಲಿದ್ದ ಆ ಊರಿನ ಜಯಪ್ಪ ಎಂಬುವವರು ಮಾಹೇಶ್ವರನ ಜಾತ್ರೆಯ ಕೆಲವು ವಿವರಗಳನ್ನು ತಿಳಿಸಿದರು. ಎಷ್ಟೋ ವರ್ಷಗಳ ಹಿಂದೆ ಶಿವಲಿಂಗಸ್ವಾಮಿ ಎಂಬ ಗುರುಗಳೊಬ್ಬರು ಆ ಕಡೆ ಸಂಚಾರಿಯಾಗಿ ಬಂದಿದ್ದರು. ಚನ್ನಗಿರಿ ಚಿಕ್ಕುಲಿಕೆರೆ ಗ್ರಾಮಗಳ ಜನ ಪ್ಲೇಗು ಎಂದು ಊರ ಹೊರಗೆ ಜಯಪ್ಪನವರ ಹಿರಿಯರ ತೋಟದಲ್ಲಿ ಗುಡಿಸಲು ಹಾಕಿಕೊಂಡಿದ್ದರು. ಪ್ಲೇಗ್ ತಗಲಿ ಎಷ್ಟೋ ಜನ ಮಲಗಿದ್ದರು. ಮೇಲೆ ಹೇಳಿದ ಜಂಗಮರು ಕೊಟ್ಟ ಪಾದೋದಕವನ್ನು ಕುಡಿದ ಜನ ಹುಷಾರಾದರು. ಊರಿನ ಜನರೆಲ್ಲ ಆ ಜಂಗಮರಿಗೆ ಒಂದು ಗದ್ದುಗೆ ಮಾಡಿಸಿ "ಮಾಹೇಶ್ವರನ ಜಾತ್ರೆ" ಆರಂಭಿಸಿದರು. ಆ ಜಾತ್ರೆ ಪ್ರತಿವರ್ಷ ಪುಷ್ಯಮಾಸದ ಅಮಾವಾಸ್ಯೆ ಮೊದಲ ಸೋಮವಾರದಂದು ಆರಂಭ. ಆ ದಿನ ದೇವರ ಉತ್ಸವವು ಚನ್ನಗಿರಿಯಿಂದ ಹೊರಟು ಚಿಕ್ಕುಲಿಕೆರೆಯ ಶಿವಲಿಂಗಸ್ವಾಮಿಯ ಗದ್ದುಗೆಯನ್ನು ಸಂದರ್ಶಿಸಿ ಜಾತ್ರೆ ನಡೆಯುವ ನಿರ್ದಿಷ್ಟ ಜಾಗವನ್ನು ತಲಪುತ್ತದೆ. ಅಲ್ಲಿ ಪೂಜಾದಿಗಳು ನಡೆದ ಮೇಲೆ ಮುಂದಿನ ಐದು ದಿನ ನೂರಾರು ಜನಕ್ಕೆ ಊಟ ಹಾಕುತ್ತಾರೆ. ಮೊದಲ ದಿನ ಸೋಮವಾರ ಕೇವಲ ಕಿಚಡಿ, ಹಾಲು, ಬೆಲ್ಲ, ಬಾಳೆ ಹಣ್ಣು ಬಡಿಸುತ್ತಾರೆ. ಅದೇ ಮುಖ್ಯ ಊಟ. ಮಂಗಳವಾರ, ಬುಧವಾರ, ಗುರುವಾರ ಕಿಚಡಿಗೆ ಸಾರು ಬಡಿಸುತ್ತಾರೆ. (ಅದು ಖರ್ಚು ಕಡಮೆ ಮಾಡಲಿಕ್ಕೋಸ್ಕರ ಇರಬಹುದು). ಮತ್ತೆ ಕೊನೆಯ, ಎಂದರೆ ಐದನೆಯ ದಿನ ಮೊದಲ ದಿನದಂತೆ ಬರೀ ಸಿಹಿ ಊಟ (ಒಂದೇ ದಿನ ಮಾಹೇಶ್ವರನ ಜಾತ್ರೆ ನಡೆಯುವಲ್ಲಿ ಖಾರದ ಅಡಿಗೆ ಪೂರ್ಣ ನಿಷಿದ್ಧ). ಜಾತ್ರೆ ನಡೆಯುವ ತೋಟಕ್ಕೆ ಚಿಕ್ಕವರಾಗಲಿ ದೊಡ್ಡವರಾಗಲಿ ಹೆಂಗಸರಂತೂ ಬರಕೂಡದು. ಒಮ್ಮೆ ಗಂಡು ವೇಷದಲ್ಲಿ ಬಂದ ಹುಡುಗಿ ಅಲ್ಲಿ ಊಟಮಾಡಿ ಮುಂದೆ ತೊಂದರೆ ಅನುಭವಿಸಬೇಕಾಯಿತು ಎಂದು ಹೇಳಿದರು. ಮಾಂಸಾಹಾರಿಗಳಿಗಂತೂ ಅಲ್ಲಿಗೆ ಪ್ರವೇಶ ಇಲ್ಲ. ಆ ಜಾತ್ರೆಗಾಗಿ ಸುತ್ತ ಮುತ್ತಣ ಊರ ಜನ ಅಕ್ಕಿ ಬೆಲ್ಲ ಕೊಡುತ್ತಾರೆ. ಊಟಕ್ಕೆ ಬರುವವರೂ ತಮ್ಮ ಮನೆಯಲ್ಲಿಟ್ಟ "ಮೀಸಲು ಹಾಲು"* ತರುತ್ತಾರೆ. ಮಾಹೇಶ್ವರನ ಜಾತ್ರೆಯ ಊಟ ರುಚಿಕರವೂ ಹೌದು, ಪವಿತ್ರವೂ ಹೌದು. ಅಡುಗೆ ಊಟ ನಡೆಯುವ ಜಾಗಕ್ಕೆ ನಾಯಿಗಳು ಬರುವುದಿಲ್ಲ; ತಿಂದು ಎಸೆದ ಎಂಜಲನ್ನವನ್ನು ತಿನ್ನಲು ಕಾಗೆಗಳು ಬಂದುದನ್ನು ತಾವು ಎಂದೂ ಕಂಡಿಲ್ಲವೆಂದು ಡಾ. ಮರುಳಪ್ಪನವರು ದನಿಗೂಡಿಸಿದರು.

---

* ಎಮ್ಮೆ ಕರು ಹಾಕಿದ ಮೊದಲ ನಾಲ್ಕೈದು ದಿನಗಳ 'ಗೀಬು'ಹಾಲನ್ನು ದೇವರಿಗೆ ಒಪ್ಪಿಸಿ, ಗಿಣ್ಣ ಮಾಡಲು ಸಮೀಪದ ಬಂಧುಗಳಿಗೆ ನೆರೆ ಹೊರೆಯವರಿಗೆ ಕೊಡುತ್ತಾರೆ. ಆಮೇಲಿನ ಸಹಜ ಹಾಲನ್ನು ಕೆಲವರು "ಮೀಸಲು ಹಿಡಿ"ಯುತ್ತಾರೆ. ಮೀಸಲು ಹಾಲು ದೇವರಿಗೆ ಸೇರಿದ್ದು. ಆ ಹಾಲನ್ನು ದೇವರಿಗೆ ಮಠಕ್ಕೆ ಒಯ್ದು ಕೊಡುತ್ತಾರೆ. ಹಾಲು ಹೆಚ್ಚಾದರೆ ಅದನ್ನು ಕಾಯಿಸಿ ಮೊಸರು ಮಾಡಿ ಬೆಣ್ಣೆ ತೆಗೆದು ತುಪ್ಪ ಕಾಯಿಸಿ ಆ ತುಪ್ಪದಲ್ಲಿ ದೇವರಿಗೆ ದೀಪ ಹಚ್ಚುತ್ತಾರೆ. ಮೀಸಲು ಹಾಲು, ಅದರ ಉತ್ಪನ್ನಗಳನ್ನು ಮನೆಯವರೂ ಮಕ್ಕಳೂ ಉಪಯೋಗಿಸುವಂತಿಲ್ಲ. ಮಕ್ಕಳು ದೇವರ ರೂಪವೇ ಸರಿ ಎಂದು ಕೆಲವರು ರಿಯಾಯ್ತಿ ತೋರಿಸಬಹುದು. ಎಂಟು ಹತ್ತು ದಿನ ಮೀಸಲು ನಡೆದ ಮೇಲೆ ಹಾಲನ್ನು ಮನೆಯ ಜನ ಬಳಸಬಹುದು.

"ಮಾಹೇಶ್ವರ" ಎಂದರೆ ಜಂಗಮ ಎಂಬ ಅರ್ಥವಿದ್ದರೂ "ಮಾಹೇಶ್ವರ" ಎಂಬುದು ಒಂದು ಬಗೆಯ ವ್ಯಾಧಿಯನ್ನೂ ಸಾಂಕ್ರಾಮಿಕ ರೋಗವನ್ನೂ ಸೂಚಿಸುತ್ತದೆ. ಅದರ ಮುಖ್ಯ ಲಕ್ಷಣ ತೀವ್ರ ಜ್ವರ. 'ಮ(ಮಾ)ಹೇಶ್ವರ' ಹೆಸರಿನ ಜ್ವರಕ್ಕೆ ಕೊಡಬೇಕಾದ ಔಷಧವನ್ನು ಅನೇಕ ಹಳೆಯ ವೈದ್ಯ ಗ್ರಂಥಗಳು ಹೇಳಿವೆ. ಪ್ಲೇಗ್, ಕಾಲರಾ, ನ್ಯುಮೋನಿಯಗಳಂತಹ ಕಾಯಿಲೆಗಳ ಅಧಿದೇವತೆಯೇ ಮಾಹೇಶ್ವರಿ (ಅಂತಹ ಮಾಹೇಶ್ವರಮ್ಮನ ಗುಡಿಯೊಂದು ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತಿಗೆ ತೀರ ಸನಿಹದಲ್ಲಿದೆ. ಅಲ್ಲಿ ದೆವ್ವ ಹಿಡಿದವರಿಗೆ ದೆವ್ವ ಬಿಡಿಸುತ್ತಾರೆ ಅಥವಾ ಬಿಡಿಸುತ್ತಿದ್ದರು).

ಈಗ ಚನ್ನಗಿರಿ ಹತ್ತಿರದ ಚಿಕ್ಕುಲಿಕೆರೆಯ ಸಾದರಿಗೂ ಚನ್ನಗಿರಿಯ ಬಣಜಿಗರಿಗೂ ಜಗಳ ಬಂದು ಇಬ್ಬರೂ ಚಿಕ್ಕುಲಿಕೆರೆಯಲ್ಲಿ ಬೇರೆ ಬೇರೆ ಮಾಹೇಶ್ವರನ ಜಾತ್ರೆಗಳನ್ನು ನಡೆಸುತ್ತಿದ್ದಾರೆ. ಅವರ ಜಗಳ ಉನ್ನತ ನ್ಯಾಯಾಲಯವನ್ನೂ ತಲಪುವ ಘಟ್ಟಕ್ಕೆ ಹೋಗಿತ್ತು. ಜಾತ್ರೆ ನಡೆಸುವ ಹಕ್ಕು ತಮ್ಮದು ಎಂದು ಎರಡೂ ಬಣಗಳು ಪ್ರತಿಪಾದಿಸಿದ್ದೇ ಆ ಜಗಳಕ್ಕೆ ಮೂಲ. ಚಿತ್ರದುರ್ಗ, ಸಿರಿಗೆರೆ ಮಠಗಳ ಮಧ್ಯೆ ಇದ್ದ ತಿಕ್ಕಾಟಗಳು ಆ ಪ್ರದೇಶದ ಹಳ್ಳಿಯ ಬದುಕನ್ನು ವ್ಯಾಪಿಸಿದ್ದ ಕಾಲ ಅದು. ಆ ಎರಡು ಪಂಗಡಗಳ ಬಿರುಕು ಈಗ ಕಡಮೆ ಆಗಿದೆ, ಮಾಯವಾಗಿಲ್ಲ.

ರಾತ್ರಿ ನನ್ನ ಸೋದರಮಾವನ ಮಗ ವೀರಭದ್ರಯ್ಯನ ಮನೆಯಲ್ಲಿ ಊಟ ಆಯ್ತು. ಆರ್ಥಿಕವಾಗಿ ಹಿಂದುಳಿದಿರುವ ತನ್ನ ಅಣ್ಣನ ಮಗನಿಗೆ ಐ.ಟಿ.ಐ.ನಲ್ಲಿ "ಫಿಟ್ಟರ್" ಶಿಕ್ಷಣ ಕೊಡಿಸುತ್ತಿದ್ದಾನೆ. ರಾತ್ರಿ ಮಂಗಳೂರಿನ ಒಬ್ಬ ಯುವಕ ಹೆಂಚಿನ ವ್ಯಾಪಾರಕ್ಕೆ ಬಂದವನು ಪ್ರವಾಸಿ ಮಂದಿರದಲ್ಲಿ ಜಾಗ ಇಲ್ಲದೆ ಅಲ್ಲೇ ಊಟದ ಮನೆಯಲ್ಲಿ ಮಲಗಿದ್ದ. ಮೇಟಿ ಹಿಂಜರಿದರೂ ನಾನೇ ಒತ್ತಾಯಿಸಿ ಖಾಲಿಯಿದ್ದ ನನ್ನ ಕೊಠಡಿಯ ಒಂದು ಹಾಸುಗೆ ಮೇಲೆ ಮಲಗಲು ಹೇಳಿದಾಗ ಆ ಯುವಕನಿಗೆ ಬಹಳ ಸಂತೋಷವಾಯ್ತು.

## ದೇವರಹಳ್ಳಿ

ಬೆಳಿಗ್ಗೆ (30.5.85) ಬೇಡ ಎಂದರೂ ಕೇಳದೆ ಮಲ್ಲೇಶಪ್ಪ ನನ್ನ ಜೊತೆ ಹೊರಟರು. ದಾರಿಯಲ್ಲಿ ವಿರಕ್ತ ಮಠಕ್ಕೆ ಸೇರಿದ್ದ ಸೀಗೇಮಠದ ಭದ್ರವಾದ ಕಟ್ಟಡವಿತ್ತು. ಮುಂದೆ ನಾಲ್ಕು ಮುಖಗಳಲ್ಲೂ ಗೂಡುಗಳಿರುವ ಒಂದು ಚಿಕ್ಕ ಗೋಪುರಾಕೃತಿಯ ಕಟ್ಟಡ ಅದು. ಮೇಲಿನ ಗಾರೆಯೆಲ್ಲ ಉದುರಿ ಇಟ್ಟಿಗೆಗಳು ಕಾಣಿಸುತ್ತಿವೆ. ಗಾಳಿ ತಣ್ಣಗೆ ಬೀಸುತ್ತಿತ್ತು. ಇಡೀ ಆ ಪ್ರಾಂತದಲ್ಲಿ ಇನ್ನೂ ಮಳೆಯಾಗಿರಲಿಲ್ಲ. ರೈತರಿಗೆ ಜೋಳದ 'ಬೆದೆ' ಮುಗಿಯುವ ಕಾಲ ಬರುತ್ತಿದೆಯೆಂಬ ಆತಂಕ. ದೊಡ್ಡಬಳ್ಳಾಪುರದಲ್ಲಿ ಕನ್ನಡ ಅಧ್ಯಾಪಕರಾಗಿರುವ ನಾರಪ್ಪನವರ ಊರು ಗುಳ್ಳದಳ್ಳಿಯಲ್ಲಿ ಅವರ ಮನೆಗೆ ಹೋದೆವು. ಅವರ ತಮ್ಮ ಆರ್.ಎಸ್.ಎಸ್. ಅಭಿಮಾನಿ. ಇದೇ ಪರಿಸ್ಥಿತಿ ಮುಂದುವರಿದರೆ ಹಿಂದೂಗಳ ಗತಿ ಏನು ಎಂಬ ಚಿಂತೆ ಅವನದು. ಅವನು ಹೇಳಿದ್ದು - ಸರ್ಕಾರವೇನೋ ಹಳ್ಳಿ ಜನಕ್ಕೆ ಬೀಜ, ಗೊಬ್ಬರ ಕೊಳ್ಳಲು

ಕಡಮೆ ಬಡ್ಡಿಯಲ್ಲಿ ಸಾಲ ಕೊಡುತ್ತದೆ. ಕೈಗೆ ಸಿಕ್ಕ ಯಾವುದೋ ಕಳಪೆ ಬೀಜ ತಂದು ಬಿತ್ತಿರುತ್ತಾರೆ. ಕೈಗೆ ಬಂದ ಸಾಲದ ಹಣದಲ್ಲಿ ಚೆನ್ನಾಗಿ ಬಟ್ಟೆ ಹೊಲಿಸಿಕೊಂಡು ಇನ್ನಾವುದೋ ಹಿಂದಿನ ಸಾಲ ತೀರಿಸಿ, ಮನೆ ರಿಪೇರಿ ಮಾಡಿಸಿ ಮುಗಿಸುತ್ತಾರೆ. ಹೊಲದ ಕೆಲಸಗಳಿಗೆ ಮಾತ್ರ ಸಾಲದ ಹಣವು ಬಳಕೆಯಾಗಲಿಲ್ಲ - ಇದು ಇಂದಿನ ಹಲವು ರೈತರ ಕತೆ. ಚುನಾವಣೆ ಸಂದರ್ಭದಲ್ಲಿ ಜನ ಬಾಯಿಬಿಟ್ಟು "ಪಾನೀಯ"ಗಳು ಬೇಕೆಂದು ಕೇಳಿದ ವಿಷಯ ಗೊತ್ತಾಗಿ ನಾಯಕರೊಬ್ಬರು ತನ್ನ ಊರಿಗೆ ಎರಡು ಸಾವಿರ ರೂಪಾಯಿ ಕಳಿಸಿಕೊಟ್ಟದ್ದನ್ನು ಹೇಳಿದ. ಯಾವುದೋ ಊರಲ್ಲಿ ಕೆಳವರ್ಗದ ಜನರ ಗುಡಿಸಲುಗಳಿಗೆ ಬೆಂಕಿ ಬಿದ್ದಾಗ ಅವರೆಲ್ಲ ಕಾಂಗ್ರೆಸ್ಸಿಗೆ ಓಟು ಹಾಕುವವರೆಂದು ಮೇಲ್ವರ್ಗದ ಜನ ಸಹಾಯಕ್ಕೆ ಹೋಗಲಿಲ್ಲ. ಆಗ ಸಂತ್ರಸ್ತ ಜನ ಬಂದು "ತಪ್ಪಾಯ್ತು. ಇನ್ನು ಮೇಲೆ ಜನತಾಕ್ಕೆ ಓಟು ಹಾಕ್ತೀವೆ" ಎಂದಾಗ ಮೇಲ್ವರ್ಗದ ಜನ ಬೆಂಕಿ ಆರಿಸಲು ಕೊಡಗಳನ್ನು ಹಿಡಿದು ಹೊರಟರು. ಇದು ನಮ್ಮ ಬದುಕನ್ನು ಕೆಟ್ಟ ರಾಜಕೀಯವು ಇಬ್ಭಾಗ ಮಾತ್ರವಲ್ಲ, ಹಿಗ್ಗಾಗ ಮುಗ್ಗಾಗ ಎಳೆದು ಮಾಡಿರುವ ಘೋರ ರೀತಿ.

ಹತ್ತು ಗಂಟೆಗೆ ದೇವರಹಳ್ಳಿಯನ್ನು ಸೇರಿದೆವು. ಆ ಊರ ಸಮೀಪದ ನೀತಿಗೆರೆಯಲ್ಲೇ ನನ್ನ ತಂದೆ ಪ್ರಾಥಮಿಕ ಶಾಲಾ ಉಪಾಧ್ಯಾಯರಾಗಿದ್ದುದು, ನನ್ನ ಪ್ರಾಥಮಿಕ ಶಿಕ್ಷಣ ನಡೆದುದೂ ಅಲ್ಲೇ. ಗುಡ್ಡದ ಕೆಳಗೆ, ಗುಡ್ಡಕ್ಕೆ ಹೊಂದಿಕೊಂಡಂತೆ ಆ ಊರು ಇದೆ. ಗುಡ್ಡದ ಮೇಲೆ ಮರಡಿ ರಂಗಪ್ಪನ ಗುಡಿ (ಮರಡಿ - ಮೊರಡಿ = ಗುಡ್ಡ) ಇದೆ. ನಮಗಾಗಿ ಅದೇ ಊರಿನ ನೀಲಪ್ಪ, ರಾಮಯ್ಯನವರು ಕಾಯುತ್ತಿದ್ದರು. ನಮ್ಮನ್ನು ಉಳಿಸಿದ ಮನೆಯ ಪಕ್ಕದ ಕೊಠಡಿಯಲ್ಲಿ ನರ್ಸರಿ ಹುಡುಗರ ಗಲಾಟೆ ಕೇಳಿಸಿತು. ಆ ಮಕ್ಕಳಿಗೆ ಕತೆ ಹೇಳುವ ನನ್ನ ಆಸೆಯನ್ನು ಹತ್ತಿಕ್ಕಲಾಗಲಿಲ್ಲ. ಅಲ್ಲಿಗೆ ನಾಲ್ಕು ಮೈಲಿ ದೂರದ ಚಿಕ್ಕ ಗಂಗೂರಿನ ಒಬ್ಬ ಹೆಣ್ಣು ಮಗಳು ಅಲ್ಲಿ ಉಪಾಧ್ಯಾಯಿನಿ. ಆಕೆ ಇನ್ನೊಂದು ನರ್ಸರಿ ಶಾಲೆಯಿಂದಲೂ ಮಕ್ಕಳನ್ನು ಕರೆಯಿಸಿ ನನಗೆ ಹೇಳಿ ಕಳುಹಿಸಿದಳು. ಹೋಗಿ ನೋಡುತ್ತೇನೆ - ಒಂದು ಕೊಠಡಿ ತುಂಬ ಅರವತ್ತು ಎಪ್ಪತ್ತು ಹಾಲು ಹಸುಳೆಗಳು ಸಿಂಬಳ ಸುರಿಸುತ್ತ, ಕೆಲವು ಅಳುತ್ತ ಕುಳಿತಿವೆ. ಕೆಲವು ಮಕ್ಕಳು ನನ್ನನ್ನು ನೋಡಿ ಹೊಸದಾಗಿ ಅಳಲು ಆರಂಭಿಸಿದುವು. "ನೀವೆಲ್ಲ ಸುಮ್ಮನಿರಿ, ಸ್ವಲ್ಪ ಹೊತ್ತಿಗೆ ತಿಂಡಿ ಬರುತ್ತದೆ" ಎಂದು ಆಸೆ ತೋರಿಸಿ ಉಪಾಧ್ಯಾಯಿನಿ ಆ ಮಕ್ಕಳನ್ನು ಸುಮ್ಮನಾಗಿಸಲು ಯತ್ನಿಸಿದಳು. ಜೋರಾಗಿ ಚಪ್ಪಾಳೆ ತಟ್ಟಿ ಎಂದಾಗ ಚಪ್ಪಾಳೆ ತಟ್ಟಿದುವು. "ಕತೆ ಬೇಕೇ" ಎಂದಾಗ ಇಬ್ಬರು ಮೂವರು ಬೇಕು ಎಂದುವು. ಮಕ್ಕಳ ಅಳು, ಮಾತು, ಪರಸ್ಪರ ತಳ್ಳಾಟ ಹೆಚ್ಚಾದುವು. ಬಹುವಾಗಿ ಅಳುತ್ತಿದ್ದ ಮಗುವನ್ನು ಅಲ್ಲಿನ ಆಯಾ (ಸೇವಕಿ) ಹೊರಕ್ಕೆ ಕರೆದೊಯ್ದ ತಕ್ಷಣ ಇನ್ನೂ ಕೆಲವರು ಜಾಣ ಮಕ್ಕಳು ತಾವೂ ಅತ್ತು ತಮ್ಮನ್ನೂ ಅನಿವಾರ್ಯವಾಗಿ ಹೊರಕ್ಕೆ ಒಯ್ಯುವಂತೆ ಮಾಡಿದುವು. ಅದನ್ನು ನೋಡಿ ಇನ್ನೂ ಕೆಲವು ಅಳು ಶುರು ಮಾಡಿದುವು. ಗಲಾಟೆಯೋ ಗಲಾಟೆ, ಅಳುವೋ ಅಳು. ಕೆಲ ಮಕ್ಕಳು ಸುಮ್ಮನಿರಲಾರವು, ಅಳಲೂ ಆರವು. ಮತ್ತೆ ಚಪ್ಪಾಳೆ ತಟ್ಟಿಸಿದೆ. ನಿನ್ನ ಹೆಸರೇನೆಂದು ಕೇಳಿದರೆ ಸಾಕು ಅಳುತ್ತಿದ್ದುವು. ಕೊನೆಗೆ ಏನೋ

ಕತೆ ಹೇಳಿದ ಶಾಸ್ತ್ರ ಮಾಡಿ 'ಸಾಕಪ್ಪ' ಎಂದು ಹೊರ ಬಂದೆ. ನನ್ನ ಸೋಲು ಒಪ್ಪಿಕೊಂಡೆ. ಮಕ್ಕಳೂ ನಿರಾಳವಾಗಿ ತಮ್ಮ ಗಲಾಟೆ ಮುಂದುವರಿಸಿದುವು.

ಸಂಜೆ ನಾಯಕರ (ಬೇಡರ) ಕೇರಿಗೆ ಹೋದೆವು. ಅಲ್ಲಿ ಸಣ್ಣಮ್ಮ ಎಂಬ ಬಸವಿಯಿಂದ ದೇವರಿಗೆ ಹುಡುಗಿಯರನ್ನು ಬಸವಿ ಬಿಡುವ ಪದ್ಧತಿ ಕುರಿತಂತೆ ವಿಸ್ತಾರವಾಗಿ ಮಾಹಿತಿ ಸಂಗ್ರಹಿಸಿದೆ. ಬೇಡರ ಜಾತಿಯ ರಂಗಮ್ಮನ ಮಗಳಾದ ಸಣ್ಣಮ್ಮನಿಗೆ ಈಗ 65-70 ವಯಸ್ಸು. ಅನೇಕ ವಿಷಯಗಳನ್ನು ಅವಳು ಬಿಚ್ಚು ಮನಸ್ಸಿನಿಂದ ತಿಳಿಸಿದಳು. ನಾನೂ ಕೂಡ ಅವಳ ಮನಸ್ಸಿನಲ್ಲಿ ಯಾವುದೇ ಸಂದೇಹವೂ ಬಾರದಂತೆ ಅವಳ ಜೊತೆ ಗೌರವ ಪ್ರೀತಿಗಳಿಂದ ಮಾತನಾಡಿ ಆಕೆಯ ಸಂಪೂರ್ಣ ವಿಶ್ವಾಸವನ್ನು ಗಳಿಸಿದೆ . ಪ್ರೌಢಶಾಲಾ ಮುಖ್ಯೋಪಾಧ್ಯಾಯ ತಿಮ್ಮಪ್ಪನವರು ಬೇಕೆಂದೇ ಕೆಲವು "ಸೂಕ್ಷ್ಮ" ಪ್ರಶ್ನೆಗಳನ್ನು ಹಾಕಿ ಎಷ್ಟೋ ಮಾಹಿತಿ ಹೊರಬರುವಂತೆ ಮಾಡಿದರು. ಸಣ್ಣಮ್ಮನ ತಾಯಿ ರಂಗಮ್ಮನಿಗೆ ಐವರು ಮಕ್ಕಳಿದ್ದಾರೆ: ಮೂವರು ಹೆಣ್ಣು ಎರಡು ಗಂಡು. ಆ ಹೆಣ್ಣು ಮಕ್ಕಳಲ್ಲಿ ಸಣ್ಣಮ್ಮನೂ ಒಬ್ಬಳು. ಎಲ್ಲರಿಗೂ ಆಸ್ತಿ ಹಂಚಿಕೆಯಾಗಿದೆ. ಮತ್ತು ಬಸವಿ ಪದ್ಧತಿ ಈಗ ನಿಂತು ಹೋಗಿದೆ. ಅವರಲ್ಲಿ ಅಕ್ಕನ ಮಗಳನ್ನು ಮದುವೆ ಆಗುವ ಪದ್ಧತಿ ಇಲ್ಲ.

ಸಣ್ಣಮ್ಮ ತನ್ನ ಅಜ್ಜಿಯ ತಂಗಿ ಸುಂದರಮ್ಮನನ್ನು (ಈಕೆಗೆ ಕಾಯಿಲೆ ಆಗಿ ನಲವತ್ತು ಮೂರು ವರ್ಷಗಳ ಹಿಂದೆ, 1924ರಲ್ಲಿ ಸತ್ತು ಹೋದಳು) ಬಸವಿ ಮಾಡಿದುದರ ವಿವರಗಳನ್ನು, ತಾನೇ ಕಣ್ಣಾರೆ ಕಂಡದ್ದನ್ನು ವಿವರಿಸಿದಳು. ಸುಂದರಮ್ಮನಿಗೆ ಅರೆ ಬಿಳಚಿ ರಂಗನಾಥಸ್ವಾಮಿ ದೇವಾಲಯದಲ್ಲಿ ಶೃಂಗೇರಿ ಪೀಠದ ಅನುಯಾಯಿಗಳಾದ ಬ್ರಾಹ್ಮಣ ಗುರುಗಳಿಂದ ಚಿಕ್ಕ ವಯಸ್ಸಿನಲ್ಲೇ "ಚಕ್ರಾಂತಿ" ಮುದ್ರೆ ಆಗಿತ್ತು. ಈ ಚಕ್ರಾಂಕ ಮುದ್ರೆಯನ್ನು (ಚಕ್ರದ ಚಿಹ್ನೆ ಇರುವ ಮುದ್ರೆಯನ್ನು ಬೆಂಕಿಯಲ್ಲಿ ಕಾಯಿಸಿ ತೋಳಿಗೆ ಒತ್ತುವುದೇ "ಚಕ್ರಾಂತಿ" ಅಥವಾ ಚಕ್ರಾಂಕ ಮುದ್ರೆ) ಕುಟುಂಬದ ಹುಡುಗ ಹುಡುಗಿಯರಿಗೆಲ್ಲ ಒತ್ತುತ್ತಿದ್ದರು. ಹುಡುಗರು ದೊಡ್ಡವರಾದ ಮೇಲೆ ಹಿರಿಯ ಹುಡುಗನಿಗೆ ಮಾತ್ರ ಮದುವೆ ಮಾಡುತ್ತಿದ್ದರು. ಏಕೆಂದರೆ ಅವನಿಂದ ವಂಶವೃದ್ಧಿ ಆಗಬೇಕು. ಉಳಿದ ಗಂಡಸರು ಮರೆಯಲ್ಲಿ ಹೆಂಗಸರ ಸಂಪರ್ಕ ಇಟ್ಟುಕೊಳ್ಳುತ್ತಿದ್ದರು. ಸುಂದರಮ್ಮನನ್ನು ಬಸವಿ ('ಸೂಳೆ') ಬಿಡಬೇಕಾದ ದಿನ ಮನೆಯಲ್ಲಿ ಪಂಚಕಳಶ ಹೂಡಿ ಎಲ್ಲ ಬಳಗದವರನ್ನೂ ಸೇರಿಸಿ ಫಲದಾನ ಮಾಡಲಾಯ್ತು. ಎಲ್ಲರ ಊಟ ಆಗಿ ಸುಂದರಮ್ಮನಿಗೆ 'ಅರಿಸಿನೆಣ್ಣೆ' ಮಾಡಿಯಾದ ಮೇಲೆ (ಅರಿಸಿನ ಎಣ್ಣೆ ಸ್ನಾನ ಮಾಡಿಸುವುದು) ಬ್ರಾಹ್ಮಣನಿಂದ ರಂಗನಾಥ ದೇವಾಲಯದಲ್ಲಿ ಹೋಮ ನಡೆಯಿತು. ದೇವರಿಗೆ ಹಾಲು ತುಪ್ಪದ ಅಭಿಷೇಕ ನಡೆಯಿತು. ಸುಂದರಮ್ಮನಿಗೆ ಮನೆಯ ಸೀರೆ ಉಡಿಸಿ, ಅವಳಿಗೆ ರಂಗನಾಥ ದೇವಾಲಯದಲ್ಲಿ ಮತ್ತೊಮ್ಮೆ "ಚಕ್ರಾಂತಿ" ಮಾಡಿಸಲಾಯ್ತು. ಕಾಲಿಗೆ ಸುತ್ತಾಲುಂಗುರ ತೊಡಿಸಲಾಯ್ತು. ತೆಗೆದುಕೊಂಡು ಹೋಗಿದ್ದ "ತಾಳಿ"ಯನ್ನು ದೇವರ ಪರವಾಗಿ ಬ್ರಾಹ್ಮಣರೇ ಕೊರಳಿಗೆ ಕಟ್ಟಿದರು. ಹೀಗೆ ಸುಂದರಮ್ಮನ ಮದುವೆ ಸ್ವಾಮಿ ರಂಗನಾಥ ದೇವರ ಜೊತೆ ನಡೆದು "ಬಸವಿ" (ಸೂಳೆ) ಆದಳು. ಮೊದಲ ರಾತ್ರಿಯೇ "ಗೆಜ್ಜೆ ಪೂಜೆ" : ಅಂದು ಸಂಜೆ ಅವಳಿಗೆ ಮತ್ತೆ ಅರಿಸಿನೆಣ್ಣೆ ಮಾಡಿ ಎಲ್ಲರನ್ನೂ

ಸೇರಿಸಿ ಊಟ ಹಾಕಲಾಯ್ತು. ಅಂದಿನ ರಾತ್ರಿ "ಪ್ರಸ್ತ" ನಡೆಯಿತು. ಅಂದು ಹಣ ಕೊಟ್ಟ ಶ್ರೀಮಂತನ ಜೊತೆ ಸುಂದರಮ್ಮ ರಾತ್ರಿ ಕಳೆದಳು. ಮಾರನೆಯ ದಿನ ಪೀಯನ್ನು (ಪಿಯಾನೊ) ತಬಲ ಸಹಿತ ಮೆರವಣಿಗೆಯಲ್ಲಿ ದೇವಾಲಯಕ್ಕೆ ಕರೆದೊಯ್ದಾಗ ಬಸವಿಗೆ ಪುನಃ ತಾಳಿ ಕಟ್ಟಲಾಯ್ತು. ಈ ಬಾರಿ ಕಟ್ಟಿದವರು ಬಳಗಸ್ಥರೇ, ಬಳಗದ ಒಬ್ಬ ಹಿರಿಯ*. ಮೊದಲ ರಾತ್ರಿ ಕಳೆದ ಶ್ರೀಮಂತನೇ ಅವಳನ್ನು ಪ್ರೇಯಸಿಯಾಗಿ ಇಟ್ಟುಕೊಳ್ಳಬೇಕಾಗಿಲ್ಲ. "ಋಣಾನುಬಂಧ" ಇದ್ದರೆ ಅವನೇ ಇಟ್ಟುಕೊಳ್ಳಬಹುದು. ಸಣ್ಣಮ್ಮನ ತಾಯಿ ರಂಗಮ್ಮ ಕಾನೂನು ಪ್ರಕಾರ ಮದುವೆ ಆದವಳು. ದಾವಣಗೆರೆಯ ಮೋತಿ ವೀರಪ್ಪ ಎಂಬ ಶ್ರೀಮಂತರು ರಂಗಮ್ಮನ ಮಗಳೊಬ್ಬಳನ್ನು ದಾವಣಗೆರೆಗೆ ಕರೆದೊಯ್ದು ಇಟ್ಟುಕೊಂಡಿದ್ದರು (ನಾನು ಹೈಸ್ಕೂಲ್ ವಿದ್ಯಾರ್ಥಿಯಾಗಿದ್ದಾಗ ಮೋತಿ ವೀರಪ್ಪನವರನ್ನು ಕಂಡಿದ್ದೆ). ಮೋತಿ ವೀರಪ್ಪನವರ ಹೆಂಡತಿ ಮಕ್ಕಳಿಲ್ಲದೆ ಕ್ಷಯ ಆಗಿ ತೀರಿಹೋದರು. ಅವರು ಕುದುರೆ ಮೇಲೆ ದೇವರ ಹಳ್ಳಿಗೆ ರಾಜಾರೋಷಾಗಿ ಬರುತ್ತಿದ್ದರು. ತಮ್ಮ ಮನೆ ಖರ್ಚನ್ನೆಲ್ಲ ಮೋತಿ ವೀರಜ್ಜ ನೋಡಿಕೊಳ್ಳುತ್ತಿದ್ದರೆಂದು ಸಣ್ಣಮ್ಮನ ಹೇಳಿಕೆ. ಕೆಲವು ನೌಕರಿದಾರರು ದುಡ್ಡು ತಗೊಂಡು ಕಳ್ಳತನದಿಂದ ದೇವರಹಳ್ಳಿಗೆ ಬಸವಿಯರಿಗಾಗಿ ಬಂದಾಗ, ಅವರು ಆ ಊರಿಗೆ ಹೊಸಬರಾಗಿದ್ದರೆ ತನ್ನ ಸೋದರರೂ ಸೇರಿದಂತೆ ಗಂಡಸರು ಅಂಥವರನ್ನು 'ಸೂಳೆ'ಯರ ಮನೆಗೆ ಕರೆದೊಯ್ಯುತ್ತಿದ್ದರು (ಮತ್ತು ಸಂಭಾವನೆ ಪಡೆಯುತ್ತಿದ್ದರು). ಮನೆಗೆ ಬಂದ ಅತಿಥಿಗಳ ಅನ್ನಪಾನಾದಿಗಳ ಜವಾಬ್ದಾರಿ ಗಂಡಸರದು. ತನ್ನ ಕಾಲದಲ್ಲಿ ಲಕ್ಷ್ಮಣಸಾನಿ, ರಂಗಾಸಾನಿ ಇವರೇ ಮೊದಲಾದ ಬಸವಿಯರಿದ್ದುದನ್ನು ಸಣ್ಣಮ್ಮ ನೆನಪಿಸಿಕೊಂಡು, ದೇವರ ಹಳ್ಳಿಗೆ ಬಂದ ಗಂಡಸರು ಒಟ್ಟಿಗೆ ಎಂಟು ಹತ್ತು ದಿನ ಇರುತ್ತಿದ್ದುದನ್ನೂ ಹೇಳಿದಳು. ದೇವರ ಹಳ್ಳಿಯ "ಸಾನಿ"ಯರು ಎಷ್ಟೋ ಜನ ಮೈಸೂರಿಗೆ ಹೋಗಿ ಭರತನಾಟ್ಯ ಸಂಗೀತ ಕಲಿತು ಬರುತ್ತಿದ್ದರು. ಸಣ್ಣವ್ವನೂ ಬಸವಿಯಾಗಿಯೇ ಬದುಕಿದರೂ "ನನ್ನ ಚರಿತ್ರೆ ಹೊರಬರೋದು ಸುದೈವ" ಎಂದೇ ಹೇಳಿಕೊಂಡಳು. ಅವಳು ಆಧುನಿಕ ಕಾಲಕ್ಕೆ ತಕ್ಕಂತೆ ಬಸವಿ ಪದ್ಧತಿಯನ್ನು ಕೈಬಿಟ್ಟು ತನ್ನ ಮಕ್ಕಳು ಮೊಮ್ಮಕ್ಕಳ ಮದುವೆ ಮಾಡಿದ್ದಾಳೆ. "ನಮ್ಮ ಯಜಮಾನ್ರು ಕವಿತ್ವ ಮಾಡಿದ್ದರು" ಎಂದೂ ಸಣ್ಣವ್ವ ಜ್ಞಾಪಿಸಿಕೊಂಡಳು.

ಭರತನಾಟ್ಯ ಕಲಿತ ಸುಬ್ಬಮ್ಮ ಎಂಬ ಬಸವಿ ಮನೆ "ತಾಫೇದ ಮನೆತನ" ಎಂದೇ ಪ್ರಸಿದ್ಧವಾಗಿತ್ತು. ಅವಳ ಮನೆಯಲ್ಲೇ ದೇವರಹಳ್ಳಿ ರಂಗನಾಥಸ್ವಾಮಿಗೆ ಅರಿಸಿನ ಕುಟ್ಟಿ ಪುಡಿ ಸಿದ್ಧಪಡಿಸಲಾಗುತ್ತಿತ್ತು. ಸುಬ್ಬವ್ವನ ಅವ್ವ "ತಾಫೆ ಮಾಡದೆ ಸ್ವಾಮಿ ಮುಂದಡಿಯಿಡ". ಅವರಿಗೆ "ಮ್ಯಾಳದೊಲ" (ಮೇಳದ ಹೊಲ) ಎಂಬ ಹೆಸರಿನ ಜಮೀನನ್ನು ಉಂಬಳಿಯಾಗಿ

---

* ಮೊದಲ ರಾತ್ರಿ ಕಳೆದ ಶ್ರೀಮಂತನು ದೇವರ ಪ್ರತಿನಿಧಿ. ಆ ರಾತ್ರಿಯನ್ನು ಬಸವಿ ಶ್ರೀಮಂತನ ಜೊತೆ ಕಳೆಯುವುದರ ಮೂಲಕ ದೇವರ ಜೊತೆ ಕಳೆದಂತೆ. ಮಾರನೆಯ ದಿನ ಅವಳಿಗೆ ಬಳಗದವರೇ ತಾಳಿ ಕಟ್ಟುವ ಮೂಲಕ ಅವಳು ಬೇರೆಯವರ ಜೊತೆ ಬಾಳಲು ದೇವರೇ ಅನುಮತಿ ನೀಡಿದಂತೆ. ಆದರೂ ಅವಳು ಜೀವನದುದ್ದಕ್ಕೂ ದೇವರೇ ತನ್ನ ಗಂಡ ಎಂದು ಭಾವಿಸುತ್ತಾಳೆ.



ದೇವರ ಹಳ್ಳಿಯ ನೂರು ವರ್ಷ ಹಿಂದಿನ 'ಬಸವಿ'
ಲಕ್ಷ್ಮಾ ಸಾನಿಯ ವರ್ಣಚಿತ್ರ, (ಪು. 519)



ಮರಿಯಮ್ಮನ ಹಳ್ಳಿಯಲ್ಲಿನ
ಮಾಟ ಮಂತ್ರದ ಕಲ್ಲು (ಪು. 587)

ಕೊಡಲಾಗಿತ್ತು. ಪುಷ್ಯಮಾಸದಲ್ಲಿ ದೇವಾಲಯದಲ್ಲಿ ಲಕ್ಷ್ಮೀಪೂಜೆ ನಡೆಯುತ್ತಿತ್ತು. ಆಗ ಹಿರಿಯ ಮುತ್ತೈದೆಯರಿಗೆಲ್ಲ ಊಟ ನಡೆಯುತ್ತಿತ್ತು (ಬಸವಿಯರೆಲ್ಲರೂ ಶಾಶ್ವತ ಮುತ್ತೈದೆಯರು ತಾನೇ!). ದೇವರ ಉತ್ಸವದಲ್ಲಿ ಮೇಳದವರ ಮನೆಯವರ ಪಾತ್ರ ಮುಖ್ಯವಿತ್ತು. ಉತ್ಸವದ ಮುಂಭಾಗದಲ್ಲಿ ನಾಯಕಸಾನಿಯರ ನರ್ತನವಿರುತ್ತಿತ್ತು. ಆ ನರ್ತನಕ್ಕೆ ಹಿಮ್ಮೇಳವಾಗಿ ತಬಲ, ಪಿಟೀಲು, ಪೀಯನ್ನು ಇವುಗಳ ಸೆಟ್ ಇರಲೇಬೇಕು. ಆ ಎಲ್ಲ ವಾದ್ಯಕಾರರು ನಾಯಕರೇ ಆಗಿದ್ದರು. ಸುಬ್ಬವ್ವನ ಅವ್ವ ಲಕ್ಷ್ಮವ್ವ ಅಥವಾ ಲಕ್ಷ್ಮಾಸಾನಿಯ ಕುಣಿತ (ಆಕೆ ಸಂಗೀತ-ನಾಟಕ ನಿಪುಣ ಮುನಿಸ್ವಾಮಿಯ ಜೊತೆ ಬದುಕಿದಳು) ಆ ಕಾಲಕ್ಕೆ ಬಹಳ ಪ್ರಸಿದ್ಧ. ಸೂಳೆಯರ ಕುಣಿತದ ಹಿಂದೆ ರಂಗನಾಥಸ್ವಾಮಿ*ಯ ಉತ್ಸವವಿರುತ್ತಿತ್ತು. (ತಂಬೂರಿ ನುಡಿಸುತ್ತ ಕುಳಿತಿರುವ ಲಕ್ಷ್ಮಾಸಾನಿಯ 80-100 ವರ್ಷಗಳ ಹಿಂದಿನ ಒಂದು ವರ್ಣ ಚಿತ್ರವನ್ನು ಆ ಊರಿನ ಜನ ನನಗೆ ತೋರಿಸಿದರು). ಉತ್ಸವ ಮುಗಿದ ಮೇಲೆ ಸೂಳೆಯರು ಓಕುಳಿ ಆಡುತ್ತಿದ್ದರು. "ನಮ್ಮದೂ ದೇವರ ಪೂಜೆಯೇ. ಬ್ರಾಹ್ಮಣರದು ಒಳಗಣ ಪೂಜೆ, ನಮ್ಮದು ಹೊರಗಣ ಪೂಜೆ" ಎನ್ನುತ್ತಾಳೆ ಸಣ್ಣವ್ವ. ಬೇಡರ ಮನೆಗಳಲ್ಲಲ್ಲದೆ ತಳವಾರರ ಮನೆಗಳಲ್ಲೂ ಬಸವಿಯರಿದ್ದರಂತೆ.

ಬಸವಿ (ಸೂಳೆ) ಒಬ್ಬ ನಿಜವಾದ ಮುತ್ತೈದೆ, ವಿಷ್ಣುವಿನ ಪತ್ನಿ ಲಕ್ಷ್ಮಿ ಇದ್ದಂತೆ. ಅವಳು ಕನಸಿನಲ್ಲಿ ಬಂದರೆ ಶುಭ, ಎದುರಿಗೆ ಬಂದರೆ ಶುಭ. ಅವಳು ಸತ್ತರೆ "ಉಡುಮಲ್ಡಿ ರಂಗಪ್ಪ" ಜೊತೆ ಮತ್ತೆ ಮದುವೆ ಮಾಡಿ ಅವಳನ್ನು ವೈಕುಂಠಕ್ಕೆ (ಗಂಡನ ಮನೆಗೆ) ಕಳುಹಿಸುತ್ತಾರೆ. ಬ್ರಾಹ್ಮಣರ ಮದುವೆಗಳಲ್ಲಿ 'ಮಾಂಗಲ್ಯ'ವನ್ನು ಇವರು ಪೋಣಿಸಿಕೊಟ್ಟಿದ್ದಕ್ಕೆ ಅಕ್ಕಿ ಪಡಿ, ಬಟ್ಟೆ ಕೊಡುತ್ತಾರೆ. ಅವರು ಮುಟ್ಟಿದ ಮಾಂಗಲ್ಯವನ್ನು ಧರಿಸುವ ಬ್ರಾಹ್ಮಣ ಸ್ತ್ರೀಯು ಮುತ್ತೈದೆ ಸಾವನ್ನೇ ಪಡೆಯುವುದು ಖಂಡಿತವಂತೆ. ಈಗ ಆ "ಗೌರವ ಹೋಗಿ ಗಂಗವ್ವ ಆಗೀತೆ". ಆಧುನಿಕ ಕಾಲದಲ್ಲಿ ನಡೆದಿರುವ ಸಾಮಾಜಿಕ ಬದಲಾವಣೆಯನ್ನು ಸಣ್ಣವ್ವ ವ್ಯಕ್ತಪಡಿಸುವ ರೀತಿ ಇದು. ನಂಬಿಕೆಗಳು ಸಡಿಲಗೊಂಡಿವೆ. ಕೆಳವರ್ಗದ ಜನ ಎಚ್ಚೆತ್ತಿದ್ದಾರೆ - ಅದನ್ನು ಸಣ್ಣವ್ವ ಗುರುತಿಸಿದ್ದಾಳೆ. ತಾನೇ ಬಸವಿ ಪದ್ಧತಿಗೆ ವಿದಾಯ ಹೇಳಿದ್ದಾಳೆ. ಆ ಕಾರಣ, ಆ ವಿಷಯದಲ್ಲಿ ಅವಳಿಗೆ ದುಃಖವೇನೂ ಇಲ್ಲ. ಆ ಅನಿಷ್ಟ ಪದ್ಧತಿ ಸಂಪೂರ್ಣ ತೊಲಗುವ ಕಾಲ ಬರಲಿ.

ಚಿನ್ನಗುಡ್ಡಮ್ಮ ಎಂಬುವವಳ ಕತೆ ಅಲ್ಲಿ ಪ್ರಚಲಿತವಾಗಿದೆ. ಚಿನ್ನಗುಡ್ಡಮ್ಮ ದೇವರನ್ನು ಒಲಿದು ಅವನನ್ನು ಪೂಜಿಸಿ ಮಂಗಳಾರತಿ ಮಾಡಿದಾಗ ದೇವರ ತಲೆಯಲ್ಲಿ ಕೆಂಪು ಕೂದಲು ಕಾಣಿಸಿತು. ಅವನಿಗೆ "ಕೆಂಜಡೆ ರಾಮ" ಎಂಬ ಹೆಸರಾಯ್ತು. ಕೆಂಜಡೆರಾಮನಿಗೆ

---

* ದೇವರ ಹಳ್ಳಿಯ ಸ್ವಾಮಿ ಉತ್ಸವದ ಸಮಯದಲ್ಲಿ ಜನರೆಲ್ಲ ಬಸವಿಯರ ನಾಟ್ಯ ನೋಡುತ್ತ ಹಿಂದಿನ ರಂಗನಾಥಸ್ವಾಮಿಯ ಕಡೆ ಅಥವಾ ಸ್ವಾಮಿ ಬಳಿಯ ಬ್ರಾಹ್ಮಣರ ಕಡೆ ನೋಡುವವರೇ ಇಲ್ಲವಾದುದನ್ನು ಕಂಡ ಬ್ರಾಹ್ಮಣರು ಕ್ರಮೇಣ ಉತ್ಸವದ ಮುಂದೆ ನಡೆಯುತ್ತಿದ್ದ ನರ್ತನಗಳನ್ನು ನಿಲ್ಲಿಸಿದರೆಂದು ನನ್ನ ಗೆಳೆಯರು ಮುಂದೆ ತಿಳಿಸಿದರು.

ಚಿನ್ನಗುಡ್ಡಮ್ಮನ ಮೇಲೆ ಬಯಕೆಯಾದಾಗ, ಅವಳು ತನ್ನ ಗಂಡನಿಗೆ ಬೇರೊಂದು ಮದುವೆ ಮಾಡಿದಳು - ಅವನ ಗಂಡನ ಸಂತತಿ ಬೆಳೆಯಿತು. ಮುಂದೆ, ಚಿನ್ನಗುಡ್ಡಮ್ಮ ರಂಗನಾಥಸ್ವಾಮಿಯ ರಥ ಬರುವಾಗ ಕತ್ತಿ, ಕಠಾರಿ, ನಿಂಬೆ, ಕನ್ನಡಿ ಹಿಡಿದು* ಅಗ್ನಿಪ್ರವೇಶ ಮಾಡಿದ್ದರಿಂದ, ಈಗಲೂ ಚಿನ್ನಗುಡ್ಡಮ್ಮನ ಹುತ್ತಕ್ಕೆ (ಅದು ದೇವರ ಹುತ್ತ) ಚಿತ್ರಾನ್ನದ ಬಲಿ ಹಾಕಿದ ಮೇಲೆಯೇ ರಥ ಹೊರಡುವುದು.

ಪಿ. ಕಿಟ್ಟಪ್ಪನವರು ಮೇಲಿನ ಕತೆ ಹೇಳಿ ತಾಫೆ ಮಾಡುವವರು ಹಾಡುವ ಹಾಡುಗಳನ್ನೂ ಮಂಗಳಾರತಿ ಪದಗಳನ್ನೂ "ಅಂದು" ತೋರಿಸಿದರು.

**ತಾಫೆ ಹಾಡು 1**

ಕುದುರೆನೇರಿದ ಕುಶಲ
ಈತನ್ಯಾರೇ ನೋಡಮ್ಮಯ್ಯ ॥

ಮದನ ಕೋಟಿ ಲಾವಣ್ಯದಿ ರಾಜಿಪ
ಮದನ ಜನಕನೋ ಮಂದರೋದ್ಧರನೋ ॥

ಮಸ್ತಕದಲಿ ಮಣಿ ಖಚಿತ ಕಿರೀಟವೋ
ಮಕರ ಕುಂಡಲನೋ ನೋಡಮ್ಮಯ್ಯ

ಕಸ್ತುರಿ ನಾಮ ಲಲಾಟದಿ ಹೊಳೆವುತ
ಕೌಸ್ತುಭನವನನು ನೋಡಮ್ಮಯ್ಯ

ಹಸ್ತದಿ ಶಂಖ ಚಕ್ರಾನಾಂತು ಬರುತಿಹ
ಹಸ್ತಿಪ ವಂದ್ಯನೋ ಹನುಮನೊಡೆಯನೋ ॥

ಜಗಜಂಪಿನ ಕೊಡೆ ಜರತರ ಪೊಕ್ಕೆಯೋ
ಜೋಡು ಚಾಮರ ನೋಡಮ್ಮಯ್ಯ
ಖಗ ಕಪಿ ಧ್ವಜ ಖಂಡಧನು ಶರ ತಾ ಪಿಡಿದ
ಸುಗುಣವಿರಾಮನೋ ಸುಂದರಮಯನೋ ॥

ಎಡಬಲದಲಿ ಇಳೆ ಇಂದಿರದೇವಿಯ
ಸಡಗರವನು ನೋಡಮ್ಮಯ್ಯ

* ಇವನ್ನು ಹಿಂದೆ ಸಹಗಮನ ಮಾಡಿದ ಹೆಂಗಸರು ಹಿಡಿದಿರುತ್ತಿದ್ದರು.

ಎಡವಿಡಿದಾನತ ಗಡಣವ ಪಾಲಿಪ
ಕಡಲಶಯನನೋ ಕಾಮನ ಪಿತನೋ ॥

ಸಾಲು ಹಿಲಾಲ ಮಸಾಲು ಹಗಲ ಬತ್ತಿ
ಬಾಣ ಬಿರಿಸ ನೋಡಮ್ಮಯ್ಯ
ತಾಳ ತಂಬೂರಿ ಹಿಡಿದು ಪಾಡುವ ದಾಸ
ಊಳಿಗದವರ ನೋಡಮ್ಮಯ್ಯ ॥

ಬಹಳ ವಿನೋದದಿ ಭಜಕರ ಮಧ್ಯದಿ
ಬಾಲಗೊಲಿದನೋ ಭಾರ್ಗವ ಸಖನೋ
ತರತರದಲಿ ನೆರೆದವರಿಗ್ವರಗಳ
ನಿರದೇ ಕೊಡುವ ನೋಡಮ್ಮಯ್ಯ ॥

ಪರಿಪರಿ ರೂಪಿನ ಪರಮಾತ್ಮಕನುಡು
ಮರುಡಿ ಮಂದಿರನೋ ಮುರಸಂಹರನೋ ॥

**ತಾಫೇ ಹಾಡು 2**

ಸಡಗರದಿಂ ನಡೆದು ಬಾರೊ
ಕಡಲಶಯನ ರಂಗ ॥

ಸೂರ್ಯ ತೇಜನೀತ ರಾಮ
ಚೋರ ಕೃಷ್ಣ ಶೌರೀ
ನಾರಿ ರಥವನಳಿದು ತುರುಗ
ವೇರುವಂಥಗಾರೀ ॥

ಕಣ್ಣ ಬಿಡುತ ಬೆನ್ನ ತೋರುತ
ಮಣ್ಣ ನೆಗೆದ ಧೀರ
ಸಣ್ಣವಗೊಲಿದ ವಾಮನೋ
ರನ್ನ ಪರಶುರಾಮ ॥

ಧರೆಗಧಿ ಉಡುಗಿರಿ ನಗದೊಳ್
ಅರಸಿ ಸಹಿತ ಸೇರಿ
ಭಜನೆ ಮಾಳ್ಪ ಭಜಕರಿಂಗೆ
ಕರೆದಿಷ್ಟಾರ್ಥದೋರಿ....

## ಕೀರ್ತನೆ 1

ಶ್ರೀರಾಮ ರಾಮ ರಾಮ ರಾಮ
ರಾಮ ಕೋದಂಡ ರಾಘವಾ ॥ ಪ ॥

ಈಶ ನಿನ್ನ ಚರಣ ಭಜನೆ
ಆಸೆಯಿಂದ ಮಾಡುವೆನು
ರೋಷರಾಶಿ ನಾಶಮಾಡೋ ಶ್ರೀಶ ಕೇಶವಾ ॥ 1 ॥

ಶರಣು ಹೊಕ್ಕೆನಯ್ಯ ಯನ್ನ
ಮರಣ ಸಮಯದಲ್ಲಿ ನಿನ್ನ
ಚರಣ ಸ್ಮರಣೆ ಕರುಣಿಸಯ್ಯ ನಾರಾಯಣ ॥ 2 ॥

ಶೋಧಿಸೆನ್ನ ಭವದ ಕಲುಷ
ಬೋಧಿಸಯ್ಯ ಜ್ಞಾನವೆನಗೆ
ಬಾಧಿಸುವ ಜವನ ಬಾಧೆ ಬಿಡಿಸೋ ಮಾಧವಾ ॥ 3 ॥

ಹಿಂದನೇಕ ಯೋನಿಗಳಲಿ
ಬಂದು ಬಂದು ನೊಂದೆ ನಾನು
ಇಂದು ಭವದ ಬಂಧ ಬಿಡಿಸೋ ಗೋವಿಂದ ॥ 4 ॥

ಭ್ರಷ್ಟನೆನಿಸಬೇಡ ಕೃಷ್ಣ
ಇಷ್ಟು ಮಾತ್ರ ಬೇಡಿಕೊಂಡೆ
ಸೃಷ್ಟಿಗೊಡೆಯ ಇಷ್ಟು ಕಷ್ಟಪ(ಬಿ?) ಡಿಸು ವಿಷ್ಣುವೇ ॥ 5 ॥

## ಕೀರ್ತನೆ 2

ರಾಮ ಲಾಲಿ ಮೇಘಶ್ಯಾಮ ಲಾಲಿ
ತಾಮರಸದಳ ನಯನ ತನಯ ಲಾಲಿ ॥ ಪ ॥

ಸುತ್ರಾಮವಿನುತ ಶತಪತ್ರನೇತ್ರ
ಮಿತ್ರವಂಶಜಾತಸುತ ವಿಶ್ವಾಮಿತ್ರ ॥ 1 ॥

ಭೂಮಿ ಭಾರ ಹರಣ ಧೃತರಾಮ ರೂಪ
ಸೀಮಾತೀತ ಮಹಮುನಿಸ್ತೋಮದಾಪ್ತ ॥ 2 ॥

ಘೋರತಾಟಕಾಂಗ ಕಾಂತಾರ ಕುಠಾರ
ಭಾರಿ ರಾಕ್ಷಸ ಸಂಹಾರ ಮೇರುಧೀರಾ ॥ 3 ॥

ಸಾಕೇತ ಪುರಾಧಿನಾಥ ಲೋಕ ವಿಖ್ಯಾತ
ಭೂಕವ್ಯ ಸಮೇತ ವಾಲ್ಮೀಕಿ ಮುನಿ ವಿನುತ ॥ 4 ॥

ವಂದಾರುವೃಂದ ವಂದಿತ ಇಂದಿರೇಶ
ಇಂದುಧರಸಖ ಭವವೃಂದನಾಶ ॥ 5 ॥

ಭಾರ್ಗವ ಮದಹರ ಸನ್ಮಾರ್ಗವಂತ
ಸ್ವರ್ಗಭೋಗದಾತ ಭಕ್ತವರ್ಗವಿಖ್ಯಾತ ॥ 6 ॥

ಮನುವಂಶಪಾಲಕ ಭೂನುತ ಸುಖಪೋಷಕ
ವನಚರ ರಕ್ಷಕ ಸೀತಾವನಿತಾ ನಾಯಕ ॥ 7 ॥

### ಕೀರ್ತನೆ 3 (ಅಪೂರ್ಣ)

**ರಾಗ - ಕಲ್ಯಾಣಿ : ಆಟತಾಳ**
ಎಲ್ಲಿರುವನೊ ರಂಗ ಎಂಬ ಸಂಶಯ ಬೇಡ
ಎಲ್ಲಿ ಭಕ್ತರು ಕರೆದಲ್ಲೇ ವದಗುವನು ॥ ಪ ॥

ತರಳ ಪ್ರಹ್ಲಾದ ಶ್ರೀ ಹರಿ ವಿಶ್ವಮಯನೆಂದು
ಬರೆದೋದಲವನ ಪಿತ ಕೋಪದಿಂದಾ
.........................................
.........................................

ಡಿ.ಎಲ್. ತಿಪ್ಪಣ್ಣ ಎಂಬುವರು ಹೇಳಿದ ಒಂದು ಶೃಂಗಾರ ಗೀತದ ಕೆಲವು ತುಣುಕುಗಳು ಹೀಗಿವೆ (ಅವರಿಗೆ ಗೀತದ ಭಾಗಗಳು ಮರೆತು ಹೋಗಿವೆ) :

ನೋಡಿದೆಯಾ ಯಶೋದಾ ಕೃಷ್ಣನು
ಮಾಡಿದ ಬುದ್ಧಿ -
ನಾಡಲಾನು ॥

ನೋಡಿ ಗಂಡನಿಲ್ಲದಿರಲು
ಓಡಿ ಬಂದು ಗಲ್ಲ ಹಿಡಿದು
ಭೋಗಿಸೆ...

ಮೊಸರು ಮಾರುತ ಪೋಗುತಲಿದ್ದೆ
ಮೋಸದಿ ಮುಸುಕ ಹಿಡಿದು ಯೆಳದನೆನ್ನ
..........................................

ಹಿಂದೊಮ್ಮೆ ದೇವರ ಮುಂದೆ ಹಾಡುತ್ತಿದ್ದ ಭಕ್ತಿ ಗೀತಗಳು ಅಥವಾ ಕೀರ್ತನೆಗಳು (ಮಂಗಳಾರತಿ ಪದ) ಮತ್ತು ತಾಫೆ (ನರ್ತನ) ಮಾಡುತ್ತ ಹಾಡುತ್ತಿದ್ದ ಶೃಂಗಾರ ಗೀತಗಳು ಇವುಗಳ ಸ್ವರೂಪವನ್ನು ಕಲ್ಪಿಸಿಕೊಳ್ಳಲು ಮೇಲೆ ನಾನು ದಾಖಲಿಸಿರುವ ಹಾಡುಗಳು ಸಹಾಯ ಮಾಡುತ್ತವೆ.

ಮೇಲಿನ ಮಾಹಿತಿಯನ್ನು ಸಂಗ್ರಹಿಸಿದ ಮೇಲೆ ಗುಡ್ಡದ ರಂಗನಾಥಸ್ವಾಮಿ ದರ್ಶನಕ್ಕೆ ಗುಡ್ಡ ಹತ್ತಿ ಹೋದೆವು. ಅಲ್ಲಿ ಮೇಲೆ ಬಲಗಡೆ 14-15ನೇ ಶತಮಾನದ ಒಂದು ಶಾಸನದ ಕಲ್ಲಿತ್ತು. ಆ ಚಿಕ್ಕಗುಡ್ಡದ ತುದಿಯಲ್ಲಿ ಬೇರೆ ಬೇರೆ ದೇವತೆಗಳಿವೆ. ಅರ್ಚಕ ಕೃಷ್ಣಮೂರ್ತಿಯವರು ಆ ದೇವಾಲಯಕ್ಕೆ ಸಂಬಂಧಿಸಿದ ಹಲವು ಕತೆಗಳನ್ನು ಹೇಳಿದರು. ಗರ್ಭಗುಡಿಯಲ್ಲಿನ ಆಕಾರ ರಹಿತ ಕರಿಯ ಶಿಲೆಯ ಮುಂಭಾಗ ಹರಿಯೆಂದೂ ಹಿಂಭಾಗ ಹರನೆಂದೂ ಆಯಾ ದೈವಗಳ ಚಿಹ್ನೆಯನ್ನೂ ತೋರಿಸಿದರು. ರಂಗನಾಥ ಸ್ವಾಮಿ ಎಂದರೆ ಇಲ್ಲಿ ಶಂಖ, ಚಕ್ರ ಕೆತ್ತಿರುವ ಲಿಂಗವೇ ಆಗಿದೆ. ಗರ್ಭಗುಡಿ ಮುಂಭಾಗದ ಹಾಸುಗಲ್ಲಿನ ಮೇಲೆ ಹದಿನೇಳನೇ ಶತಮಾನದ ಸವೆದು ಹೋದ ಒಂದು ಶಾಸನವಿದೆ. ಗುಡಿಯಲ್ಲಿ ಸದಾಕಾಲವೂ ಕ್ಷಯ, ಮೂರ್ಛೆ ಇತ್ಯಾದಿಗಳಿಂದ ನರಳುತ್ತಿರುವ ರೋಗಿಗಳು ದೇವರ ಆಶ್ರಯವನ್ನು ಕೋರಿ ದೇವರ ಆಜ್ಞೆ ಮೇರೆಗೆ ಅಲ್ಲೇ ಉಳಿದಿರುತ್ತಾರೆ. ದೆವ್ವ ಹಿಡಿದವರಿಗಂತೂ ಅಲ್ಲಿಯೇ ಬಿಡುಗಡೆ. ಸಮೀಪದ ಚಿಕ್ಕದೇವರಹಳ್ಳಿ ಊರಿನ ಒಬ್ಬ ದೊಡ್ಡ ಲಿಂಗಾಯತ ಜಮೀನುದಾರನ ಹೆಂಡತಿ ಹಾಲಮ್ಮನಿಗೆ ನಾಲ್ವರು ಮಕ್ಕಳು. ಆಕೆ ಸುಮಾರು ಮೂವತ್ತು ವಯಸ್ಸಿನ ಸ್ಫುರದ್ರೂಪಿ ಹೆಣ್ಣು ಮಗಳು. ಏನೋ ವ್ಯತ್ಯಾಸವಾಗಿ ಆಕೆ ಕಳೆದ ಮೂರು ವರ್ಷಗಳಿಂದ ಇಲ್ಲೇ ವಾಸವಾಗಿದ್ದಾಳೆ. ಗಂಡ ದಿನವೂ ಇಲ್ಲಿಗೇ ಆಹಾರ ತಂದುಕೊಡುತ್ತಾನೆ. ಆಕೆಯನ್ನು ಕಂಡ ತಕ್ಷಣ ಏನೋ ಮಾನಸಿಕ ವ್ಯತ್ಯಾಸ ಕಾರಣದಿಂದ ಬಂದಿರಬೇಕೆನ್ನಿಸಿತು. "ಹಾಲಮ್ಮಾ, ಊರಲ್ಲಿ ಗಂಡ ಮಕ್ಕಳ ಜೊತೆ ವಾಸಮಾಡಬಾರದೇ? ಇಲ್ಲಿ ನೀನಿರುವ ಕಾರಣ ಏನು?" ಎಂದು ನಾನು ಕೇಳಿದ ತಕ್ಷಣ ಅವಳು ಮಾತು ಆರಂಭಿಸಿ ಒಮ್ಮೆಗೇ ಗರ್ಜಿಸಿದಳು. ಸಿಡಿಲು ಬಡಿದಂತೆ ಎಲ್ಲರೂ ಬೆದರಿ ಬೆಚ್ಚಿ ಬಿದ್ದರು. ನನಗೇ ಒಂದು ಕ್ಷಣ ದಿಗ್ಭ್ರಮೆ ಆಯಿತು. ನಿಶ್ಚೇಷ್ಟಿತಳಾಗಿ ನಿಂತ ಆಕೆಯನ್ನು ಮತ್ತೆ ನಾನು ಎಷ್ಟು ಮಾತನಾಡಿಸಿದರೂ ಮಾತನಾಡಲಿಲ್ಲ. ದೇವಾಲಯದ ಹಿಂಭಾಗದಲ್ಲಿದ್ದ ಲಕ್ಷ್ಮೀ ದೇವಾಲಯಕ್ಕೆ ಹೋದೆವು. ರಂಗನಾಥನಿಗಿಂತ ಲಕ್ಷ್ಮಿ ಅಲ್ಲಿ ಅತ್ಯಂತ ಪ್ರಬಲಳು. ಆಕೆಯ ಅಪ್ಪಣೆಯಿಲ್ಲದೆ ದೇವರಹಳ್ಳಿಯ ಮತ್ತು ಸುತ್ತಮುತ್ತಣ ಜನ ಏನೂ ಮಾಡುವುದಿಲ್ಲ. ಮನೆ ಕಟ್ಟಿಸಲು, ಬಾವಿ ತೆಗೆಸಲು, ಹೊಲ ಕೊಳ್ಳಲು, ಬೆಂಗಳೂರಿಗೆ ಯಾವುದೋ ಕೆಲಸ ನಿಮಿತ್ತ ಹೋಗಲು, ಹೆಣ್ಣು ತರಲು ಅಥವಾ ಕೊಡಲು ಯಾವುದಕ್ಕಾದರೂ ಅವಳ ಅಪ್ಪಣೆ ಬೇಕು. ಜನ ಲಕ್ಷ್ಮಿಗೆ

ಅಕ್ಷರಶಃ ಹೆದರುತ್ತಾರೆ. ಲಕ್ಷ್ಮಿ ವಿಗ್ರಹದ ಪ್ರಭಾವಳಿಯ ಭಾಗ ಸ್ವಲ್ಪ ಭಗ್ನವಾಗಿದೆ. ಮದುವೆ ಕಂಕಣ ಕಟ್ಟಿಸಲು ಹುಡುಗಿಯೊಬ್ಬಳನ್ನು ಅವಳ ಕಡೆಯವರು ಕರೆತಂದಿದ್ದರು. ವೀರಶೈವರಾಗಲಿ ಬ್ರಾಹ್ಮಣರಾಗಲಿ ಇತರ ಯಾವುದೇ ಜನ ಆಗಲಿ ವಧುವಿಗೆ ಮೊದಲ ಕಂಕಣ ಅಲ್ಲೇ ಆಗಬೇಕು. ವಾಪಸ್ ಬರುವಾಗ ಹಾಲಮ್ಮ ಭಕ್ತಿಯಿಂದ ದೇವಾಲಯದ ನವರಂಗದ ಭಾಗವನ್ನು ಸಾರಿಸುತ್ತಿದ್ದಳು. ನವರಂಗದಲ್ಲಿ ರಂಗನಾಥನ ಉತ್ಸವ ಮೂರ್ತಿ ಇದೆ. ಅಲ್ಲೇ ಪಕ್ಕದಲ್ಲಿ ಆಳ್ವಾರ್ ವಿಗ್ರಹ ಇದೆ. ಎಲ್ಲ ಮೂರ್ತಿಗಳಿಗೂ ನಾಮಧಾರಣೆ ಉಂಟು. ಶ್ರೀ ವೈಷ್ಣವ ಸಂಪ್ರದಾಯದ ದೇವಾಲಯದ ಅರ್ಚಕರು ಸ್ಮಾರ್ತರು. ದೇವರ 'ಒಳಪೂಜೆ' ಸ್ಮಾರ್ತರದಾದರೆ, 'ಹೊರಪೂಜೆ' ಬೇಡರದು. ಉತ್ಸವಮೂರ್ತಿಗೆ ಅಲಂಕಾರ ಮಾಡುವವರು ಬೇಡರೇ. ಉತ್ಸವಗಳಲ್ಲಿ ಮಾಂಸಾಹಾರದ 'ಎಡೆ' ಉಂಟು. ದೇವಾಲಯವು ಮೂಲತಃ ಶೂದ್ರರದಾಗಿದ್ದು, ಬಹುಶಃ ರಂಗನಾಥನಲ್ಲದ ಬೇರೊಂದು ದೈವದ್ದಾಗಿದ್ದು, ಕಾಲಾನಂತರ ಅದು ಬ್ರಾಹ್ಮಣರ ಕೈ ಸೇರಿ ರಂಗನಾಥನಾಗಿ ಮಾರ್ಪಾಟಾಗಿರುವ ಸಾಧ್ಯತೆ ಉಂಟು.

ದೇವರಹಳ್ಳಿಯ ಸುತ್ತಮುತ್ತಣ ಗ್ರಾಮಗಳಲ್ಲಿ ಉಡಗಳನ್ನು ಯಾರೂ ಕೊಲ್ಲುವುದಿಲ್ಲವಾದ್ದರಿಂದ ಎಲ್ಲ ಹಳ್ಳಿಗಳಲ್ಲಿ ಅವು ಸಾಕಷ್ಟು ಸಂಖ್ಯೆಯಲ್ಲಿ ಕಾಣಿಸುತ್ತವೆ. ಒಂದು ರೀತಿಯಲ್ಲಿ ಅದು ಉಡಗಳ ಸಂರಕ್ಷಿತ ಪ್ರದೇಶವಾಗಿದೆ. ರಂಗನಾಥ ಸ್ವಾಮಿಯು ಆ ಗುಡ್ಡಕ್ಕೆ ಉಡು ರೂಪದಲ್ಲಿ ಬಂದು ಮರೆಯಾದನೆಂದು ಕತೆ ಇದೆ. ಮತ್ತು ಆ ಕಾರಣದಿಂದಲೇ "ಉಡುಮರಡಿ ರಂಗಪ್ಪ" ಎಂದು ದೇವರ ಹೆಸರಾಗಿದೆಯೆಂದು ಕತೆ ಇದೆ. ವಾಸ್ತವವಾಗಿ ಆ ಪ್ರದೇಶದ ಕಾಲಾನುಕ್ರಮ ಚರಿತ್ರೆ ಸ್ಥೂಲವಾಗಿ ಹೀಗಿದೆ. ಅಲ್ಲಿ ಒಂದು ಮೊರಡಿ (=ಗುಡ್ಡ); ಆ ಮೊರಡಿ ಮೇಲೆ ಒಂದು ಹುಡೇವನ್ನು (ವೀಕ್ಷಣಾಲಯ) ಕಟ್ಟಿದ್ದರಿಂದ ಅದು ಹುಡೇವು ಮೊರಡಿ (ಉಡುಮರಡಿ) ಎನ್ನಿಸಿಕೊಂಡಿತು ; ಆ ಮೊರಡಿಯ ಮೇಲೆ ರಂಗನಾಥನ (ಅದೂ ಬೇರೊಂದು ದೈವದ ಜಾಗದಲ್ಲಿ?) ಪ್ರತಿಷ್ಠಾಪನೆಯಾಗಿ ದೇವರು "ಉಡುಮರಡಿ ರಂಗಪ್ಪ" (ಉಡುಮಳ್ಡಿ ರಂಗಪ್ಪ) ಎಂದಾದ. "ಉಡುಮರಡಿ" ಹೆಸರಿನ ಮೇಲೆ ಉಡದ ಕತೆ ಹುಟ್ಟಿತು. ಏನೇ ಆಗಲಿ, ಉಡಗಳು ಬದುಕಿದುವು. ದೇವಾಲಯದಿಂದ ಊರು ಬೆಳೆದು ಅದು "ದೇವರ ಹಳ್ಳಿ" ಎನ್ನಿಸಿಕೊಂಡಿತು.

ದೇವರ ಹಳ್ಳಿ ಇಂದು ಒಂದು ಆಧುನಿಕ ಗ್ರಾಮ. ಆಸ್ಪತ್ರೆ, ಬ್ಯಾಂಕು, ಪ್ರೌಢಶಾಲೆ, ರೇಷ್ಮೆ ಅಭಿವೃದ್ಧಿ ಕಚೇರಿಗಳು ಅಲ್ಲಿವೆ. ಆ ಊರಿನ ಜನರಲ್ಲಿ ಉಪ್ಪಾರರು ಶೇಕಡ ಎಂಬತ್ತು, ದೇವಾಂಗದವರು ಶೇಕಡ ಹತ್ತರಷ್ಟು ಇದ್ದಾರೆ. ಬೇಡ ನಾಯಕರೂ ತಕ್ಕಮಟ್ಟಿಗಿದ್ದಾರೆ. ಉಪ್ಪಾರರು ದೇವಾಂಗದವರ ಮಧ್ಯೆ ಜಾತಿ ತಿಕ್ಕಾಟಗಳಿವೆ. ಅಂತೆಯೇ ದೇವಾಲಯದ ಬಗ್ಗೆ ಬೇಡರಿಗೂ ಬ್ರಾಹ್ಮಣರಿಗೂ ಸ್ವಲ್ಪ ವಿರಸ ಭಾವನೆ ಇದೆ. ಅದು ಒಂದು ಕಾಲಕ್ಕೆ ಕೋರ್ಟ್ ಕಟ್ಟೆ ಕೂಡ ಹತ್ತಿದೆ. ಸಾಕಷ್ಟು ಜನ ವಿದ್ಯಾವಂತರಿರುವ ಊರು ಅದು.

ರಾತ್ರಿ ರಾಮಯ್ಯನವರ ಮನೆಯಲ್ಲಿ ಊಟ ಆಯ್ತು. ಅದೇ ಊರಿನ ಹೆಂಗಸರು ಮತ್ತು ಒಬ್ಬ ನಪುಂಸಕ ಉಡುಮರಡಿ ರಂಗಪ್ಪನನ್ನು ಕುರಿತಂತೆ ಅನೇಕ ಜಾನಪದ ಗೀತಗಳನ್ನು

ಹೇಳಿದರು. ಆ ಹೆಣ್ಣು ಹುಡುಗ ಹೆಂಗಸರ ಜೊತೆ ಸಂಪೂರ್ಣವಾಗಿ ಬೆರೆತು ಹೋಗಿದ್ದ. ಆತ ಹೆಂಗಸರಂತೆ ಮೊಳಕಾಲ ಮೇಲೆ ಕೈಯೂರಿ ಕುಳಿತು ಗಲ್ಲಕ್ಕೆ ಕೈ ಹಚ್ಚಿ ಹೆಂಗಸರಿಗೆ ಅಂಟಿಕೊಂಡೇ ಹಾಡುವುದನ್ನು ನೋಡಲು ಒಂದು ಮೋಜು.. ಮಧುರಕಂಠದ ಆತ ಹಾಡಲು ಮದುವೆ ಮನೆಗಳಿಂದ ಬಹಳ ಬೇಡಿಕೆ ಇದೆ; ಹಾಡೂ ಆಯ್ತು, ಮನರಂಜನೆಯೂ ಆಯ್ತು.

## ದೊಡ್ಡಮಲ್ಲಾಪುರ

ಬೆಳಿಗ್ಗೆ (31.5.85) ನೀಲಪ್ಪನವರೊಡನೆ ಹೊರಟು ರಂಗನಾಥಸ್ವಾಮಿಯ ಪಾದಗಳನ್ನು ದರ್ಶನಮಾಡಿ ಅಲ್ಲೇ ಇದ್ದ ಚೌಡಿಮರ, ಚೌಡಿಗುಡಿ (ಈ ಚೌಡಿಯೇ ಆ ಊರ ಮೂಲದೇವತೆ ಇರಬಹುದೇ?) ನೋಡಿಕೊಂಡು ಹಿರೇಹಳ್ಳ ದಾಟಿ ಕೊಂಡದಹ್ಳಳ್ಳಿಗೆ ಬಂದೆವು. ಹಿರೇಹಳ್ಳಕ್ಕೆ ತೀರ ಸಮೀಪದ ನೀತಿಗೆರೆಯಲ್ಲೇ ನನ್ನ ಬಾಲ್ಯ ಕಳೆದದ್ದು. ಆ ಹಳ್ಳ ಈಗ ಎಲ್ಲ ಹಳ್ಳಗಳಂತೆ ಸಾಮಾನ್ಯವಾಗಿ ಕಾಣುತ್ತಿದ್ದರೂ ನನ್ನ ಬಾಲ್ಯದ ಮಳೆಗಾಲದಲ್ಲಿ ಅದೊಂದು ಮಹಾನದಿಯಂತೆ ಕಾಣೆಸುತ್ತಿತ್ತು. ಅದಕ್ಕೆ ಅಡ್ಡಲಾಗಿ ಮುಂದೆ ಸೂಳೆಕೆರೆ ಕಟ್ಟಲಾಗಿದೆ*. ಆ ಹಳ್ಳವನ್ನು ಶಾಸನಗಳಲ್ಲಿ "ಹರಿದ್ರಾ" ನದಿಯೆಂದು ಕರೆದಿದೆ. "ಹರಿದ್ರಾ" ಮತ್ತು ತುಂಗಭದ್ರಾ ನದಿ ಕೂಡುವ ಜಾಗದಲ್ಲೇ ಈಗಿನ ಹರಿಹರ ಇರುವುದು (ಹರಿಹರ ನಗರದ ಪ್ರಾಚೀನ ಹೆಸರು "ಕೂಡಲೂರು" - ಕಾರಣ ಸ್ಪಷ್ಟವಾಗಿದೆ). ಹಿರೇಹಳ್ಳ ("ಹಿರೇತೊರೆ") ಎಂಬುದು ಭಾಷಿಕವಾಗಿ ಸಂಸ್ಕೃತದಲ್ಲಿ "ಹರಿದ್ರಾ" ಪದಕ್ಕೆ ಸಮೀಪವಾಗಿ ಕಾಣಿಸಿ, ವಿದ್ಯಾವಂತ ಜನ ಅದನ್ನು "ಹರಿದ್ರಾ" ಎಂದು ಸಂಸ್ಕೃತೀಕರಿಸಿರುವಂತಿದೆ. ಎರಡು ನದಿಗಳು ಸೇರುವ ಜಾಗವಾದ ಕೂಡಲೂರಲ್ಲಿ ದೇವಾಲಯದ ನಿರ್ಮಿಸಲು ಯೋಚಿಸಿದಾಗ ಎರಡು ದೈವಗಳೂ ಸೇರಿ ಒಂದಾಗಿರುವ ಹರಿ-ಹರ ದೇವಾಲಯವನ್ನು ಕಟ್ಟಲು "ಹರಿದ್ರಾ" (ಹಿರೇಹಳ್ಳ) ಹೆಸರು ಸೂಚನೆ ನೀಡಿರಬಹುದೆಂಬ ಸಂದೇಹ ನನಗಿದೆ. ಕೊಂಡದ ಹಳ್ಳಿಯ ಅಗ್ನಿಕುಂಡ (ಕೊಂಡ)ದಲ್ಲಿ ಹೆಣ್ಣೊಬ್ಬಳು ಅಗ್ನಿಪ್ರವೇಶ ಮಾಡಿದ್ದರಿಂದ ಆ ಹೆಸರನ್ನು ಪಡೆದಿದೆಯೆಂಬುದನ್ನು ಈಗಾಗಲೇ ನಾನು ಲೇಖನವೊಂದರಲ್ಲಿ ತೋರಿಸಿದ್ದೇನೆ. ಮತ್ತು ಅಲ್ಲಿಯ ಮಾಸ್ತಿಗುಡಿಯ ಬಗ್ಗೆಯೂ ವಿಸ್ತಾರವಾಗಿ ಬರೆದಿದ್ದೇನೆ. ಕೊಂಡದಹಳ್ಳಿಯ ಜನ ಒಂದು ಲಾರಿ ತುಂಬ

---

* ಸೂಳೆಕೆರೆ ಹೆಸರಲ್ಲಿ ಆ ಪ್ರದೇಶದ ಜನಕ್ಕೆ ಹಿಂದೆ ಯಾವುದೇ ಅಶ್ಲೀಲ ಕಾಣಿಸಿರಲಿಲ್ಲ, ಕಾಣಿಸಿಯೂ ಇಲ್ಲ. 'ಸೂಳೆ' ಎಂಬ ಅಪಖ್ಯಾತಿಯನ್ನು ಅನ್ಯಾಯವಾಗಿ ಹೊತ್ತ ಹೆಣ್ಣು ಮಗಳೊಬ್ಬಳು ಆ ಅಪಖ್ಯಾತಿ ನಿವಾರಣೆಗಾಗಿ ಕಟ್ಟಿಸಿದ ಕೆರೆ ಎಂದು ಜನ ಭಾವಿಸಿದ್ದಾರೆ. ಅವಳ ಬಗ್ಗೆ ಗೌರವಾಭಿಮಾನಗಳಿವೆ. ಆದರೆ ಅದನ್ನು ಅರ್ಥಮಾಡಿಕೊಳ್ಳದ ಅಧಿಕಾರಿಗಳೊಬ್ಬರು ಅದನ್ನು "ಶಾಂತಿಸಾಗರ" ಎಂದು ಮಾರ್ಪಡಿಸಿದ ಮೇಲೆ ಸರ್ಕಾರಿ ದಾಖಲೆಗಳಲ್ಲಿ ಮಾತ್ರ ಆ ಕೆರೆಯ ಹೊಸ ಹೆಸರು ದಾಖಲಾಯಿತೇ ಹೊರತು, ಜನರ ನಾಲಗೆ ಮೇಲೆ "ಸೂಳೆಕೆರೆ" ಎಂದೇ ಉಳಿಯಿತು. ಎರಡು ವರ್ಷಗಳ ಹಿಂದೆ ನಾವು ಮುಖ್ಯಮಂತ್ರಿಗಳಿಗೆ ಅರ್ಜಿಕೊಟ್ಟು, ಅಧಿಕೃತವಾಗಿ ಕೆರೆಯ ಹೆಸರು "ಸೂಳೆಕೆರೆ" ಎಂದಾಗುವಂತೆ ಮಾಡಿಸಿದ್ದೇವೆ. ಈಗ ಸರ್ಕಾರದ ದಾಖಲೆಗಳಲ್ಲೂ "ಸೂಳೆಕೆರೆ" ಎಂದೇ ಆಗಿದೆ.

ಯಾವುದೋ ಮದುವೆಗೆ ಹೊರಟಿದ್ದರು. ಅಲ್ಲಿಯ ಮಾಸ್ತಿ ಗುಡಿಯಲ್ಲಿ ಒಂದು ಕಲ್ಲು ಶಿಲಾಯುಗದ ಶಿಲಾಯುಧ ರೀತಿಯಲ್ಲಿದ್ದು ಅದು ಮಾಸ್ತಿಯ ಗಂಡನ ತಲೆಯೆಂದು ಜನ ನಂಬುತ್ತಾರೆ. ಒಬ್ಬ ಅಜ್ಜಿ ಮಾಸ್ತಿಕಲ್ಲು ಪೂಜೆ ಮಾಡಲು ಬಂದಿತು. ಆ ಗುಡಿಗೆ ಹೆಂಗಸರಾಗಲಿ ಮದುವೆಯಾದ ಗಂಡಸರಾಗಲಿ ಬರುವಂತಿಲ್ಲ. ನನಗೆ "ನೀವು ಮದುವೆ ಆದವರು, ಒಳಗೆ ಬರಬಾರದಿತ್ತು" ಎಂದು ಆಕ್ಷೇಪಿಸಿತು. ಆ ಅಜ್ಜಿಗಿಂತ ಮೊದಲು ಪೂಜಿಸುತ್ತಿದ್ದವನು ಮದುವೆಯಾಗಲಾರದ ಒಬ್ಬ ನಪುಂಸಕ. ಆತ ಸತ್ತ ಮೇಲೆ ಸಿದ್ಧರಾಮೇಶ್ವರ ದೇವರ ಅಪ್ಪಣೆ ಪಡೆದು ಆ ಅಜ್ಜಿ ಪೂಜೆ ಮಾಡುತ್ತಿತ್ತು. ಆ ಊರಿನ ಜನ ಮಾಸ್ತ್ಯಮ್ಮನನ್ನು ಕಂಡರೆ ನಡುಗುತ್ತಾರೆ. ಆಕೆಯೇ ಆ ಊರಿನ ಸರ್ವಾಧಿಕಾರಿಣಿ, ಕಾನೂನು.

ದೇವಸ್ಥಾನದ ಹೊರಗೆ ನನ್ನ ತಂದೆಯನ್ನು ಬಲ್ಲವರೊಬ್ಬರು ಭೇಟಿಯಾಗಿ ನನ್ನನ್ನು ಮಾತನಾಡಿಸಿದ್ದು ನನಗೆ ಬಹು ಹರ್ಷವನ್ನು ತಂದಿತು. ಕೊಂಡದಹಳ್ಳಿಯಿಂದ ಚಿಕ್ಕುಡಕ್ಕೆ ಬರುವಾಗ ದಾರಿಯಲ್ಲಿ ಅನೇಕ ಕುಡಿಕೆಗಳೂ ಬೇವಿನಸೊಪ್ಪೂ ಕಾಣಿಸಿದುವು. ಊರಿನ ಚಿಕ್ಕಮಕ್ಕಳಿಗೆ 'ಅಮ್ಮ' ಕಾಣಿಸಿಕೊಂಡರೆ ಆಗ ಅಮ್ಮನನ್ನು ಕಳಿಸುತ್ತಾರೆ. 'ಅಮ್ಮನ ಮರ'ದ ಬೇವಿನ ಸೊಪ್ಪು ತಂದು (ಯಾರೂ ಆ ಮರ ಹತ್ತಕೂಡದು) ಅದನ್ನು ನೀರು ತುಂಬಿದ ಹೊಸ ಕುಡಿಕೆಯಲ್ಲಿಟ್ಟು ಆ ಕುಡಿಕೆಗೆ ಬಳೆ ಏರಿಸಿ ಅದರೊಳಕ್ಕೆ ಸ್ವಲ್ಪ ದುಡ್ಡು ಹಾಕಿ ಸಂಜೆ ಪೂಜೆ ಮಾಡಿ ರಾತ್ರಿ ಅದನ್ನು 'ಅಮ್ಮನ ಮರ'ದ ಹತ್ತಿರ ಇಟ್ಟುಬರುವುದೇ 'ಅಮ್ಮನನ್ನು ಕಳಿಸು'ವುದು (ಮಕ್ಕಳಿಗೆ ಚಿಕ್ಕ ಕಾಯಿಲೆಗಳು ಬಂದರೂ ಅಮ್ಮನಿಗೆ ಆ ಬಗೆಯ ಪೂಜೆ ಸಲ್ಲಿಸುವುದೂ ಉಂಟು). ನಾನು ನೋಡಿದ ಜಾಗದಲ್ಲಿ ಬೇವಿನಮರವಿರದಿದ್ದರೂ ಹಿಂದೊಮ್ಮೆ ಅಲ್ಲಿ ದೇವಿಯ ಬೇವಿನ ಮರ ಇದ್ದಿರಬೇಕು. ಅಲ್ಲೇ ಎಡಗಡೆ ಒಂದು ಚಿಕ್ಕಗುಡಿ. ಅದರ ಮುಂದಿನ ಇನ್ನೂ ಚಿಕ್ಕ ಗುಡಿಯಲ್ಲಿ - ಗೂಡಿನಂತಹ ಗುಡಿಯಲ್ಲಿ ಒಂದು ಕಲ್ಲಿನ ಮೇಲೆ ನಾಲ್ವರು ಮನುಷ್ಯರ ಎಂಟು ಪಾದಗಳನ್ನು ಕೆತ್ತಿದ್ದರು. ಚಿಕ್ಕ ಗುಡಿಯಲ್ಲಿ ಎಣ್ಣೆ ಕುಂಕುಮ ಹಚ್ಚಿದ ವಿಚಿತ್ರ ಆಕಾರದ ಉಡಸಲಮ್ಮನ ವಿಗ್ರಹವಿತ್ತು. ಎಣ್ಣೆಯ ಜಿಡ್ಡು ಮೆತ್ತಿದ್ದರಿಂದ ಅದೇನು ಮನುಷ್ಯನೋ ಪ್ರಾಣಿಯೋ, ಎಷ್ಟು ತಲೆ ಕೈ ಕಾಲು ತಿಳಿಯುವಂತಿರಲಿಲ್ಲ. ಜನಗಳಿಗೆ ಅದೊಂದು 'ಅಮ್ಮ' ಅಷ್ಟೇ. ಉಡಸಲಮ್ಮ ಬಗ್ಗೆ ಊರಿನ ಜನ ಏನೂ ಹೇಳಲಿಲ್ಲವಾದರೂ ಅದು ಗುಹ್ಯರೋಗದಂತಹ ಭಯಂಕರ ಕಾಯಿಲೆಗಳ ಅಧಿದೈವ (ಉಡುಚು = ಗುಹ್ಯರೋಗ). ಬೇವಿನ ಸೊಪ್ಪು, ಕುಡಿಕೆಗಳು ಆ ದೇವಾಲಯದ ಬಳಿ ಇದ್ದುದಕ್ಕೆ ಕಾರಣ ಸ್ಪಷ್ಟವಾಗಿದೆ. ಚನ್ನಗಿರಿಯಲ್ಲಿ "ಮಣ್ಣಮ್ಮ" ಎಂಬ ಇನ್ನೊಂದು ಗ್ರಾಮದೈವವಿದೆಯೆಂದು ತಿಳಿದು ಬಂದಿತು. ಅದರ ಬಗ್ಗೆಯೂ ಮಾಹಿತಿ ಸಂಗ್ರಹಿಸುವ ಅಗತ್ಯವಿದೆ.

ಚಿಕ್ಕುಡ ಅಥವಾ ಚಿಕ್ಕುಡೇವು (ಸಮೀಪದಲ್ಲೇ ಹಿರೋಡೇವು ಊರಿದೆ. "ಹುಡೇವು" ಇದ್ದುದರಿಂದ ಊರಿಗೆ ಆ ಹೆಸರು) ಗ್ರಾಮದ ಮಾಸ್ತಿ ಗುಡಿಯ ಬಗ್ಗೆಯೂ ನಾನಾಗಲೇ ಪ್ರತ್ಯೇಕ ಲೇಖನ ಬರೆದಿದ್ದೇನೆ. ಅದನ್ನು ಕೆಲ ವರ್ಷಗಳ ಹಿಂದೆ ನಾನು ನೋಡಿದಾಗ ಅದನ್ನು ಪೂಜಿಸುತ್ತಿದ್ದ ಅಜ್ಜಿ ಕನ್ನಡಿ, ನಿಂಬೆಹಣ್ಣು, ಕಠಾರಿ ತೋರಿಸಿರಲಿಲ್ಲ. ಅದನ್ನು ಸಾಧ್ಯವಾದರೆ ಈಗ ನೋಡಬೇಕೆಂದು ನನ್ನ ಅಪೇಕ್ಷೆ. ಚಿಕ್ಕುಡದ ಮಾಸ್ತಿ ಗುಡಿಯ ಹಿಂಭಾಗದ

ಹನುಮಂತನ ದೇವಾಲಯ ಆ ಭಾಗದಲ್ಲಿ ಪ್ರಸಿದ್ಧ. ಅದಕ್ಕೆ ಸುತ್ತ ಬೇಲಿ ಹಾಕಿ ಗೋಡೆಗಳಿಗೆ ಚೆನ್ನಾಗಿ ಸುಣ್ಣ ಬಳಿದು ಒಪ್ಪವಾಗಿಟ್ಟಿದ್ದಾರೆ. ಅಲ್ಲಿಗೆ ರೋಗಿಗಳು ಬಂದು ಆಶ್ರಯ ಪಡೆಯುತ್ತಾರೆ. ಅಲ್ಲಿನ ಹನುಮಂತ ದೇವರ ಬಗ್ಗೆ ಕೇಳಿದಾಗ ಅಲ್ಲಿದ್ದ ವ್ಯಕ್ತಿ - ಬಹುಶಃ ಕೆಳವರ್ಗದ ಒಬ್ಬ ವ್ಯಕ್ತಿ ಇರಬೇಕು - "ಸ್ವಾಮಿಯು ವಿದ್ಯಾವಂತರಿಗೆ ಅಪ್ಪಣೆ ಕೊಡೋಲ್ಲ, ನಮ್ಮಂತಹ ಬಡವರಿಗೆ ಮಾತ್ರ ಅವನು ಅಪ್ಪಣೆ ಕೊಡೋದು" ಎಂದು ಮೃದುವಾಗಿ ಚುಚ್ಚಿದ. ವಿದ್ಯಾವಂತರಾದ ನಮಗೆ ದೇವರಲ್ಲಿ ನಂಬಿಕೆ ಇಲ್ಲ ಎಂಬುದನ್ನು, ಮೇಲುಜಾತಿಯವರ ಬಗ್ಗೆ ಕೆಳವರ್ಗದವರಿಗೆ ಒಂದು ಬಗೆಯ ಅಸಡ್ಡೆಯಿದೆಯೆಂಬುದನ್ನು ಎರಡನ್ನೂ ಅವನು ಸೂಚಿಸಿದ. "ಸರ್ಕಾರದ ಅಧಿಕಾರಿಗಳೆಲ್ಲ ದುಡ್ಡು ಇರೋರ ಕೆಲಸ ಮಾಡಿ ಕೊಡ್ತಾರೆ. ನಿಮ್ಮೂರ ಹನುಮಂತ ಕೊನೇ ಪಕ್ಷ ಬಡವರ ಕೆಲಸ ಮಾಡಿಕೊಡುತ್ತಾನೆ. ಸಂತೋಷ" ಎಂದು ತಮಾಷೆ ಮಾಡಿದೆ. ನನಗೆ ಕೆಳವರ್ಗದವರ ಆ ಬಗೆಯ ಸಿಟ್ಟು ಪ್ರಿಯ. ಅದು ಅವರ ಎಚ್ಚರದ ಚಿಹ್ನೆ. ಅಲ್ಲಿದ್ದವನೊಬ್ಬನನ್ನು ಕರೆದುಕೊಂಡು ಚಿಕ್ಕುಡ ಊರೊಳಗಿನ ಮಾಸ್ತಮ್ಮ ದೇವಿಯ ಮನೆಗೆ ಹೋದೆ. ಮಾಸ್ತಿ ಗುಡಿ ಊರ ಹೊರಗಿದ್ದರೂ ಮಾಸ್ತಮ್ಮನ ಸಾಮಾನುಗಳನ್ನು ಊರೊಳಗೆ ಇಟ್ಟಿದ್ದಾರೆ. ಆ ಮನೆಯಲ್ಲಿ ಸಂಸಾರಸ್ಥರು ವಾಸವಾಗಿರುವಂತಿಲ್ಲ. ದೇವಿಯನ್ನು ಒಬ್ಬ ವಿಧವೆಯೇ ಪೂಜಿಸಬೇಕು. ಹಿಂದೆ ಪೂಜೆ ಮಾಡುತ್ತಿದ್ದ ಅಜ್ಜಿ ಸತ್ತು ಹೋಗಿ ಅವಳ ತಂಗಿ ಈಗ ಪೂಜಿಸುತ್ತಿದ್ದಳು. ಅವಳ ಅಕ್ಕನಿಗೆ ನಾನು ಹಿಂದೆ ಒಂದು ಸೀರೆ ಕಳುಹಿಸಿಕೊಟ್ಟಿದ್ದೆ. ಆ ಸೀರೆಯನ್ನು ಅವಳು ಮಾಸ್ತಮ್ಮನಿಗೆ ಉಡಿಸಿದ ಮೇಲೆ ಅದನ್ನು ಉಟ್ಟುಕೊಂಡದ್ದನ್ನು ಜ್ಞಾಪಿಸಿಕೊಂಡಳು. ಆ ಮನೆ ಇದ್ದುದು ಬೇಡರ ಹಟ್ಟಿಯಲ್ಲಿ. ಮನೆಯ ಮುಂದೆ ಕಲ್ಲಲ್ಲೇ ಪಾತ್ರೆಯಂತೆ ಕುಳಿ ಮಾಡಿ ನೀರು ಹಾಕಿದ್ದರು - ಅದು ಕಾಲು ತೊಳೆದುಕೊಂಡು ಒಳ ಹೋಗಲು. ಬಾಗಿಲ ಹೊರಗೆ ಒಂದು ಸಾಮಾನ್ಯ ಕಲ್ಲು ಇತ್ತು. ಅದನ್ನು ನಾನು ಅರಿಯದೆ ತುಳಿದಾಗ, ಅದನ್ನು ತುಳಿಯಬಾರದಿತ್ತು ಎಂದು ಎಚ್ಚರಿಸಿದರು. ಮಾಸ್ತಮ್ಮನ ಮನೆಯ ಒಳಕ್ಕೆ ಪ್ರವೇಶವಿರದವರು ಅದಕ್ಕೆ ನಮಸ್ಕಾರ ಮಾಡಿದರೆ ಸಾಕು, ಆ ನಮಸ್ಕಾರ ಮಾಸ್ತಮ್ಮನನ್ನು ತಲಪುತ್ತದೆ. ಅಜ್ಜಿಗೆ ಮಾಸ್ತಮ್ಮನ ವಸ್ತುಗಳನ್ನು ತೋರಿಸಲು ಕೇಳಿಕೊಂಡಾಗ, ಯಾವುದೇ ಶನಿವಾರ ಅಥವಾ ಸೋಮವಾರ ಬಂದರೂ ತೋರಿಸುವುದಾಗಿ ಹೇಳಿತು. "ಈಗ ತೆಗೆದರೆ ನಮ್ಮ ಕಣ್ಣು ಸುಟ್ಟು ಭಸ್ಮವಾದಾವು" ಎಂದಿತು. ಅದು ಶುಕ್ರವಾರವಾಗಿತ್ತು. ಮರು ಮಾತಿಲ್ಲದೆ ಹೊರಟೆ, ಅಜ್ಜಿಗೆ ಸಲ್ಲಬೇಕಾದ ಗೌರವದ ಮಾತುಗಳನ್ನು ಹೇಳಿ. ನೀಲಪ್ಪನವರ ಮೂವರು ವಿದ್ಯಾರ್ಥಿನಿಯರು ಮನೆಗೆ ಬನ್ನಿ ಎಂದು ಕರೆದರು. ಅವರ ಮನೆಗೆ ಮಾಸ್ತಮ್ಮನ ಪೂಜಾರಿಣಿಯ ಮಗ ಬಂದ. ಆತ ಆ ವಿದ್ಯಾರ್ಥಿನಿಯರ ಬಂಧು. ನಾನು "ಕತ್ತಿ ಕನ್ನಡಿ ನನಗೆ ತೋರಿಸಿದರೆ ಮಾಸ್ತಮ್ಮ ಯಾವ ಕಾಲದವಳೆಂಬುದನ್ನು ಹೇಳಬಲ್ಲೆ" ಎಂಬ ಆಸೆ ತೋರಿಸಿದೆ. ಆತನಿಗೂ ತನ್ನ ಜನಾಂಗದವರ ಇತಿಹಾಸ ತಿಳಿಯುವ ಬಯಕೆ. ಆತ ತೋರಿಸಲು ಒಪ್ಪಿದ. ಆತ ಸ್ನಾನ ಮಾಡಲು ಹೋಗುತ್ತಿದ್ದಂತೆ, ಉಪ್ಪಿಟ್ಟು ಮಾಡಲು ನಾನೇ ಆ ಹುಡುಗಿಯರಿಗೆ ಸೂಚಿಸಿದೆ. ಉಪ್ಪಿಟ್ಟು ತಿಂದು ಮುಗಿಸುವ ಹೊತ್ತಿಗೆ ಮೇಲೆ ಹೇಳಿದ ಯುವಕ ತಾನೇ ಮಾಸ್ತಿ ಪೂಜೆ

ಮಾಡಿ ಮುಗಿಸಿ ಬಂದು ಮಾಸ್ತಿ ಮನೆಗೆ ನಮ್ಮನ್ನು ಕರೆದೊಯ್ದ. ಆ ದೊಡ್ಡ ಮನೆಯ ನಡುಮನೆಯ ಪಕ್ಕದಲ್ಲೇ ಒಂದು ಅಡುಗೆಮನೆ ; ಅಲ್ಲೇ ಒಂದೆಡೆ ಉಡುಸಲಮ್ಮನ ಮರದ ವಿಗ್ರಹವನ್ನು ಗೋಡೆಗೆ ನೇತು ಹಾಕಲಾಗಿತ್ತು. ಅದೇ ಗೋಡೆಯಲ್ಲಿ ಒಂದು ಗೂಡು, ಆ ಗೂಡಿಗೆ ನಾಲ್ಕು ಹಲಗೆಗಳನ್ನು ಸೇರಿಸಿ ಮುಚ್ಚಲಾಗಿತ್ತು. ಹೊರಗಡೆ ನಾಲ್ಕು ಕತ್ತಿಗಳನ್ನು ಇಟ್ಟಿದ್ದರು. ಆ ಯುವಕ ಹಲಗೆಗಳನ್ನು ತೆರೆದು ಕನ್ನಡಿಯನ್ನು ತೋರಿಸಿದ. ಮರದ ಅಖಂಡ ತುಂಡೊಂದನ್ನು ಚೌಕಾಕಾರಕ್ಕೆ ಕತ್ತರಿಸಿ ಅದರ ಮುಂಭಾಗದಲ್ಲಿ ಪಾರದರ್ಶಕ ಗಾಜೊಂದನ್ನು ಸಿಕ್ಕಿಸಿದ್ದರು. ಆ ಗಾಜಿನ ಬಹುಭಾಗ ಒಡೆದಿತ್ತು. ಕುಂಕುಮ ಇತ್ಯಾದಿಗಳನ್ನು ಬಳಿದು ತನ್ನ ಪಾರದರ್ಶಕತ್ವವನ್ನು ಕಳೆದುಕೊಂಡಿತ್ತು. ಕಠಾರಿಯೊಂದೂ ಅಲ್ಲಿತ್ತು. ಒಂದು ಬೆಳ್ಳಿಯ ನಿಂಬೆಹಣ್ಣೂ ಅಲ್ಲಿತ್ತು. ಜೊತೆಗೆ ಮೂರು "ತಾಳಿ" - ತಾಳಿ ಎಂದರೆ ದೊಡ್ಡ ಪದಕ. ಆ ಪದಕಗಳ ಮೇಲೆ ಕಠಾರಿ ಹಿಡಿದ ವೀರ, ಆತನ ಪಕ್ಕದಲ್ಲಿ ಕೈ ಎತ್ತಿ ನಿಂತ ಮಾಸ್ತಿಯ ಚಿತ್ರಗಳಿದ್ದುವು. ಅವು ಬಂಗಾರದವು ಎಂದು ಜನರ ನಂಬಿಕೆ. ಗಾಜು, ಕಠಾರಿಗಳು ಕನಿಷ್ಠ ಇನ್ನೂರು ವರ್ಷದವು ಇರಬಹುದು. ಪದಕಗಳನ್ನು ಆಮೇಲೆ ಮಾಡಿಸಿರಬಹುದು. ಗೂಡಿನ ಹೊರಗಿದ್ದ ಕತ್ತಿಗಳು ಹೋರಾಡಿ ಮಡಿದ ಅವಳ ಗಂಡನವಾಗಿದ್ದರೆ, ಕನ್ನಡಿ ಕಠಾರಿಗಳು ಮಾಸ್ತ್ಯಮ್ಮ ಅಗ್ನಿ ಪ್ರವೇಶಕ್ಕೆ ಹೋಗುವಾಗ ಹಿಡಿದ ವಸ್ತುಗಳಾಗಿರಬಹುದು. ಬೆಳ್ಳಿಯ ನಿಂಬೆ ಹಣ್ಣು ಕೂಡ ಅವಳು ಹಿಡಿದದ್ದೇ ಇರಬಹುದು, ಅಥವಾ ಅವಳು ಹಿಡಿದ ಸಹಜ ನಿಂಬೆ ಹಣ್ಣು ನಾಶವಾದ ಮೇಲೆ ಅದರ ಜಾಗದಲ್ಲಿ ಬೆಳ್ಳಿಯಲ್ಲಿ ಮಾಡಿಸಿ ಅದನ್ನು ಇಟ್ಟಿರಬಹುದು. ಮಾಸ್ತ್ಯಮ್ಮನ ವಸ್ತುಗಳನ್ನು ನಾನು ಪರಿಶೀಲಿಸಿದಾಗ ಅಜ್ಜಿ ಮನೆಯಲ್ಲಿತ್ತೋ ಇಲ್ಲವೋ, ನನ್ನ ಟಿಪ್ಪಣಿ ಮೌನ ವಹಿಸಿದೆ. ಆ ಅಜ್ಜಿಗೆ ನನ್ನ ಕ್ಷಮೆ ಇರಲಿ - ನೋಡಬಾರದ ದಿನ ಆ ವಸ್ತುಗಳನ್ನು ಆ ಅಜ್ಜಿಗೆ ತಿಳಿಸದೆ ನೋಡಿಬಿಟ್ಟೆ. ನನಗಂತೂ ಒಟ್ಟು ಆ ಅನುಭವ ಬಹು ತೃಪ್ತಿಯನ್ನು ಕೊಟ್ಟಿತು. ಮಾಸ್ತಿ ಶಿಲ್ಪಗಳಲ್ಲಿ ತೋರಿಸಿರುವ ಕೈಯ ನಿಂಬೆ, ಕನ್ನಡಿ, ಕಠಾರಿಗಳನ್ನು ಬೇರೆಡೆ ಎಲ್ಲಾದರೂ ಸಂರಕ್ಷಿಸಿರುವರೇ, ಸಂಶೋಧಕರು ಅವನ್ನು ನೋಡಿರುವರೇ ನನಗೆ ತಿಳಿಯದು. ಆ ಯುವಕನಿಗಂತೂ ನಾನು ಮನಸಾರೆ ವಂದಿಸಿ ಹೊರಟೆ.

ದಾರಿಯಲ್ಲಿ ಚನ್ನಾಪುರದ ಊರ ಹೊರಗಡೆ ಒಂದು ವೀರಗಲ್ಲು ಕಾಣಿಸಿತು. ನನ್ನ ತಂದೆ ಅಲ್ಲಿ ಉಪಾಧ್ಯಾಯರಾಗಿದ್ದರು. ಆ ಊರ ರಸ್ತೆಯ ಬಳಿ ನನ್ನನ್ನು ಬಾಲ್ಯದಲ್ಲಿ ಎತ್ತಿ ಆಡಿಸಿದ ವೃದ್ಧರೊಬ್ಬರು ಸಿಕ್ಕು ನನ್ನ ಕಾಲ್ನಡಗೆ ವಿಚಾರ ಕೇಳಿ ನನ್ನನ್ನು ಗೌತಮ ಬುದ್ಧನಿಗೆ ಹೋಲಿಸಿದಾಗ ನನಗೆ ನಗು ಬಂದಿತು. ಈಚಿನ ಕಾಲದಲ್ಲಿ ಎಲ್ಲವೂ ಕೆಟ್ಟು ಹೋಗಿದೆಯೆಂದು ಬಹು ಕಹಿಯಾಗಿ ಮಾತನಾಡಿದರು. ತಮ್ಮ ಮಗನಿಗೆ ಒಂದು ಕೆಲಸ ಕೊಡಿಸಲು ಅವರು ಕೇಳಿದಾಗ ನಾನು ನನ್ನ ನಿಸ್ಸಹಾಯಕತ್ವವನ್ನು ವ್ಯಕ್ತಪಡಿಸಿದೆ (ಭರವಸೆ ಕೊಡುವುದು ಹೇಗೂ ಸುಲಭ ತಾನೇ!) ಚನ್ನಾಪುರ, ಕೊಂಡದಳ್ಳಿ ಎಲ್ಲವೂ ನನ್ನ ತಂದೆಯ ನೆನಪು ತರುವ ಜಾಗಗಳು. ಚನ್ನಾಪುರ ರಸ್ತೆಯಿಂದ ದೊಡ್ಡ ಮಲ್ಲಾಪುರದ ಗಡಿಗೆ ಬರುತ್ತಿದ್ದಂತೆ ಹಿಂದೆ ನಮ್ಮದಾಗಿದ್ದ ಎರೆಹೊಲ ಸಿಗುತ್ತದೆ. ಅಲ್ಲಿಂದ ಬತ್ತದ ಸೀಮೆ ಆರಂಭ. ಹಿಂದೆ ಬೆಂಗಾಡಾಗಿದ್ದ

ಬಯಲು ಭದ್ರಾ ನಾಲುವೆಯಿಂದ ಗದ್ದೆ ತೆಂಗಿನ ತೋಟಗಳಿಂದ ನಂದನವನವಾಗಿದೆ. ಗದ್ದೆಯ ಬದುಗಳಲ್ಲಿ, ಇಕ್ಕಟ್ಟು ಕಾಲು ದಾರಿಯಲ್ಲಿ "ಕೆಸರತ್ತು" ಮಾಡುತ್ತ ನಡೆದು ಊರಿನ ಹೊರಭಾಗದ ತಿಪ್ಪೆಗುಂಡಿ ಕೊಚ್ಚೆಗುಂಡಿ ಪಾಯಖಾನೆಯ ಬೇಲಿ ಸಾಲು ದಾಟಿ ಊರೊಳಕ್ಕೆ ಬರುತ್ತಿದ್ದಂತೆ ಅಲ್ಲೇ ಆರೆಂಟು ಹರಿಜನರ ಮನೆಗಳು. ಗುಡಿಸಲ ಹೊರಗೆ ಒಬ್ಬ ಹೆಂಗಸು ದುಂಡಿಯಲ್ಲಿ ಕೆಂಪು ಚಟ್ನಿ ಅರೆಯುತ್ತಿದ್ದಳು. ಕೊಳಕು ಚಿಂದಿ ಬಟ್ಟೆಯ ಮಕ್ಕಳು ಅಲ್ಲೇ ಪಕ್ಕದ ಗದ್ದೆ ನೀರಿನ ಹಳ್ಳದಲ್ಲಿ ಆಡುತ್ತಿದ್ದುವು. ಯಾವ ಊರಿಗಾದರೂ ಆಧುನಿಕತೆ ಪ್ರವೇಶಿಸಿರಬಹುದು, ಆದರೆ ದೊಡ್ಡ ಮಲ್ಲಾಪುರದ ದಲಿತರ ಆ ಗುಡಿಸಲುಗಳ ಹತ್ತಿರ ಅದು ಕಾಲಿಟ್ಟಿಲ್ಲ. ಆ ಗ್ರಾಮ ಹಿಂದೆ ಒಂದು ಕುಗ್ರಾಮ. ಈಗ ನಾಲೆಯಿಂದಾಗಿ ಅಲ್ಲಿ ಹತ್ತೆಂಟು ಮಂಗಳೂರು ಹೆಂಚಿನ ಮನೆಗಳು ತಲೆಯೆತ್ತಿವೆ. ಬಹುತೇಕ ಮನೆಗಳಿಗೆ ರೇಡಿಯೋ ಪ್ರವೇಶಿಸಿದೆ. ಸುಮಾರು ಇಪ್ಪತ್ತು ಇಪ್ಪತ್ತೈದು ವರ್ಷಗಳ ಹಿಂದೆ ಆ ಊರಿನ ಪಟೇಲರ ಮನೆಗೆ ಒಂದು ರೇಡಿಯೋ ಹೊಸದಾಗಿ ಬಂದಾಗ ನಾನು ಅಲ್ಲಿದ್ದೆ. ಅದನ್ನು ನೋಡಲು ಜನರ ನೂಕುನುಗ್ಗಲು. ಅವರಿಗೆಲ್ಲ ಆ ದಿನ ಮಂಡಕ್ಕಿ ಖಾರ ಹಂಚಲಾಯ್ತು. ಅದನ್ನು ಕೇಳುತ್ತ ಕುಳಿತ ಜನ ಗದರಿಸಿದರೂ ಎದ್ದು ಹೋಗುತ್ತಿರಲಿಲ್ಲ. ಈಗ ಇನ್ನೂರು ಮನೆಗಳ ಆ ಗ್ರಾಮದಲ್ಲಿ ಇಪ್ಪತ್ತೆರಡಕ್ಕೆ ಕಡಮೆಯಿಲ್ಲದ ಟ್ರಾಕ್ಟರುಗಳಿವೆ. ಈಗಂತೂ ಪಕ್ಕದ ಗ್ರಾಮ ಹಿರೇಕೋಗಲೂರಿಗೆ ವೈನ್‌ಷಾಪ್ ಬಂದಿರುವುದರಿಂದ ಊರ ಜನ ಆಧುನಿಕ ಪಾನೀಯಗಳಿಗೆ ದಾವಣಗೆರೆ ನಗರಕ್ಕೇ ಹೋಗಬೇಕಾಗಿಲ್ಲ. ಹತ್ತು ಹದಿನೈದು ವರ್ಷದ ಹುಡುಗರು ತಮ್ಮ ಹತ್ತಿರ ಇರುವ ಹಣ ಸೇರಿಸಿ ಹದಿನೈದು ರೂಪಾಯಿ ಸಂಗ್ರಹ ಮಾಡಿಕೊಂಡರೆ ಅವರಿಗೂ ಆ ಪಾನೀಯ ಲಭ್ಯ. ಅದೊಂದು ಬೇರೆ ನೋವಿನ ಕತೆ.

ನಾನು ಹೋದ ಹಿಂದಿನ ದಿನ ದಾವಣಗೆರೆಯಿಂದ ನನ್ನ ತಾಯಿ, ಹಿರಿಯ ತಂಗಿ ರತ್ನಮ್ಮ ಇಬ್ಬರೂ ಆ ಹಳ್ಳಿಗೆ ಬಂದಿದ್ದರು. ನಾನು ಹೆಂಡತಿ ಮಕ್ಕಳಿಗೆ ಹೇಳದೆ "ಕಾಶಿಗೆ" ಯಾತ್ರೆ ಹೊರಟಿದ್ದೇನೆಂದು ಹೇಗೋ ಸುದ್ದಿ ಹಬ್ಬಿ ನನ್ನ ತಾಯಿ ಕಂಗಾಲಾಗಿದ್ದರು. ಎಲ್ಲರಿಗೂ ವಸ್ತುಸ್ಥಿತಿ ಹೇಳಿದರೂ "ಪುಸ್ತಕ ಬರೆಯಲು ವಿಷಯ ಸಂಗ್ರಹಿಸುತ್ತಿದ್ದೇನೆ" ಎಂಬ ನನ್ನ ಮಾತು ಮಾತ್ರ ಅವರಿಗೆ ಸ್ವಲ್ಪ ಸಮಾಧಾನವನ್ನು ತಂದಿತು. ನನ್ನ ಬಂಧುಗಳಾದ ಮೇಷ್ಟ್ರ ಮರುಳಯ್ಯನವರ ಮನೆಯಲ್ಲಿ ಉಳಿದುಕೊಂಡೆ. ಅವರು ತೀರ ಮುಗ್ಧ ಸ್ವಭಾವದವರು. ಅವರ ಒಬ್ಬನೇ ಮಗ ರಾಜಣ್ಣ ಹಿಟ್ಟಿನ ಗಿರಣಿ ಇಟ್ಟಿದ್ದಾನೆ. ಅವರದು ತೃಪ್ತ ಸಂಸಾರ. ನನ್ನ ಜೊತೆ ಬಂದಿದ್ದ ದೇವರ ಹಳ್ಳಿಯ ನೀಲಪ್ಪ ತಮ್ಮ ಊರಿನ ಲಕ್ಷ್ಮಾಸಾನಿಯ ವರ್ಣ ಚಿತ್ರದ ಫೋಟೋ ತೆಗೆಸಿ ಕಳಿಸುವುದಾಗಿ ಹೇಳಿ ಸಂತೇಬೆನ್ನೂರಿಗೆ ಹೋದರು. ಸಾಯಂಕಾಲ ಶಿವಲಿಂಗಪ್ಪನವರ ಮನೆಗೆ ಹೋದೆ. ಅವರು ಸಾದರು; ಜಂಗಮರಿಗಿಂತ ಭಿನ್ನವಾದ ಒಂದು ಉಪಜಾತಿಯವರಾದರೂ ನನ್ನ ತಾಯಿಯನ್ನು ತಮ್ಮ ತಾಯಿಯೆಂದೇ ಭಾವಿಸಿದ್ದಾರೆ. ನನ್ನ ತಾಯಿ ಆ ಹಳ್ಳಿಯಲ್ಲಿ ಉಳಿಯುತ್ತಿದ್ದುದು ಅವರ ಮನೆಯಲ್ಲೇ. ಜಾತಿ ಅಥವಾ ಉಪಜಾತಿ ಭೇದ ಹಳ್ಳಿಗಳಲ್ಲಿದ್ದರೆ ಅದು ಹೆಣ್ಣಿನ ಕೊಡು-ಕೊಳೆ ವಿಷಯದಲ್ಲಿ ಮಾತ್ರ. ಪ್ರೀತಿ ವಿಶ್ವಾಸಗಳಿಗೆ ಮಾತ್ರ ಯಾವುದೇ ಕಟ್ಟುಪಾಡು ಇರಲಿಲ್ಲ.

ರಾತ್ರಿ ಆ ಹಳ್ಳಿಯ ಹದಿನೈದು ಇಪ್ಪತ್ತು ಮಕ್ಕಳಿಗೆ ಆಲಿಬಾಬಾ ಕತೆ ಹೇಳಿದೆ. ಮಕ್ಕಳ ಜೊತೆ ಹಲವು ದೊಡ್ಡವರೂ ಬಾಯಿ ಬಿಟ್ಟುಕೊಂಡು ಕತೆ ಕೇಳಿದರು. ನನ್ನ ತಂದೆ ಆಸ್ತಿ ಮಾಡಿದ ಊರು ಅದು. ಅನೇಕರು ನಾನು ಬಂದ ವಿಷಯ ಕೇಳಿ ಮಾತನಾಡಿಸಿಕೊಂಡು ಹೋಗಲು ಬಂದಿದ್ದರು. ಆ ಊರಿನ ಕೆಂಚಪ್ಪ ಮಾಸ್ತರ್ ಇನ್ನೊಬ್ಬ ಮುಗ್ಧ ಹಿರಿಯರು. ಅವರು ನನಗೆ ಗುರು ಸಮಾನರು. ಅವರ ಪಾದ ಮುಟ್ಟಿ ನಮಸ್ಕರಿಸಲು ನಾನು ಬಯಸಿದರೂ ನಾನು ಗುರುವರ್ಗದ ಜಂಗಮನಾದ್ದರಿಂದ ಅದಕ್ಕೆ ಅವರು ಅವಕಾಶ ಮಾಡಿಕೊಡುತ್ತಿರಲಿಲ್ಲ. ಅವರೆಲ್ಲರಿಗೂ ನನ್ನ ಹಂಪಿಯ ಕಾಲ್ನಡಿಗೆಯ ವಿಷಯವು ಬೆರಗಿನ ಭಯದ ವಿಷಯವಾಗಿತ್ತು.

ಮಾರನೆಯ ದಿನ (1.6.85) ಮಲ್ಲಾಪುರದಲ್ಲಿ ವಿಶ್ರಾಂತಿ ಪಡೆದೆ. ಹಿಂದಿನ ಒಂದೆರಡು ದಿನಗಳ ದಿನಚರಿ ಟಿಪ್ಪಣಿ ಬರೆದು ಮುಗಿಸಿದೆ. ಬೆಳಿಗ್ಗೆ 6.30ಕ್ಕೆ ಎದ್ದು ಊರ ಪಶ್ಚಿಮದಲ್ಲಿ ಹರಿಯುವ ಕಾಲುವೆಯಲ್ಲಿ ಬಟ್ಟೆ ಒಗೆದುಕೊಂಡು ಅಲ್ಲೇ ಸ್ನಾನಮಾಡಿದೆ. ಭದ್ರಾ ಜಲಾಶಯದ ಕಾಲುವೆಯಿಂದಾಗಿ ಗ್ರಾಮದ ಮುಕ್ಕಾಲು ಭಾಗದ ಜಮೀನು ನೀರಾವರಿಯಾಗಿದೆ. ಹಿಂದೆ ಊರ ಪೂರ್ವಕ್ಕಿದ್ದ ಕೆರೆಯಿಂದ ಸ್ವಲ್ಪ ಜಮೀನು ನೀರಾವರಿಯಾಗುತ್ತಿತ್ತು. ಆ ಅಚ್ಚುಕಟ್ಟು ಪ್ರದೇಶದಲ್ಲಿ ನಮ್ಮ ಎರಡೂ ಮುಕ್ಕಾಲು ಎಕರೆ ಗದ್ದೆ ಇದ್ದುದನ್ನು ಹಿಂದೆಯೇ ಮಾರಿದ್ದೆವು. ಆ ಗದ್ದೆಯನ್ನು ಸಾಗುವಳಿ ಮಾಡುತ್ತಿದ್ದ ರೈತ (ಸತ್ಯಕ್ಕನ ಮಗ, ತಳವಾರ ಜಾತಿಯವನು) ಮಾರಾಟ ಮಾಡಲು ನನಗೆ ಉದಾರ ಮನಸ್ಸಿನಿಂದ ಬಿಟ್ಟುಕೊಟ್ಟಿದ್ದ. ಕೋಗಲೂರು ಕೆರೆಯ ಕೋಡಿ ಬಳಿ ಇದ್ದ ಆರು ಎಕರೆ ಹೊಲವು ಗದ್ದೆಯಾದ ಮೇಲೆ, ಅದನ್ನು ನನ್ನ ತಂಗಿಯರಿಗೆ ನನ್ನ ತಂದೆ ಹಂಚಿದರು. ಒಬ್ಬ ತಂಗಿಗೆ ಮೂರು ಎಕರೆಯ ಹಣವು ಸಂದಾಯವಾಯಿತು, ಇನ್ನೊಬ್ಬ ತಂಗಿಗೆ ಗದ್ದೆ ಲಭ್ಯವಾಯಿತು. ಊರೊಳಗೆ ಎರಡು ಕಣ, ಒಂದು ಮನೆಯ ನಿವೇಶನ ಈಗಲೂ ನನ್ನ ತಂದೆ ಹೆಸರಲ್ಲೇ ಇವೆ. ಬಹು ಹಿಂದಿನಿಂದ ಯಾರೋ ರೈತರು ಬಣವೆಗಳನ್ನು ಕಣಗಳಲ್ಲಿ ಹಾಕಿಕೊಂಡು ಬಳಸಿಕೊಳ್ಳುತ್ತಿದ್ದರು - ನಾನು ಅವನ್ನು ಅವರಿಂದ ಬಿಡಿಸಿಕೊಳ್ಳುವ ಅಥವಾ ಅವರಿಗೇ ಮಾರುವ ಗೋಜಿಗೆ ಹೋಗಿಲ್ಲ. ಊರೊಳಗಿನ ನಮ್ಮ ಮನೆ ಜಾಗದಲ್ಲಿ ಯಾರೋ ಮನೆ ಕಟ್ಟಿಕೊಂಡಿದ್ದಾರೆ - ಅದರ ಗೊಡವೆಗೂ ನಾನು ಹೋಗಿಲ್ಲ. ದೇವರು ನನಗೆ ಸಾಕಷ್ಟು ಕೊಟ್ಟಿದ್ದಾನೆ. ಆ ಬಗ್ಗೆ ನನಗೆ ತೃಪ್ತಿ ಇದೆ (ಆದರೂ ನಾನೊಬ್ಬ ತೀವ್ರ ಅತೃಪ್ತ, ಅದೇ ನನ್ನನ್ನು ಆ ಊರಿಗೆ ಕರೆತಂದಿರುವುದು). ಬಹು ಹಿಂದುಳಿದ ಈ ಗ್ರಾಮವು ಈಗ ಸಾಕಷ್ಟು ಆಧುನಿಕಗೊಂಡಿದೆ. ಜನಗಳ ಕೈಯಲ್ಲಿ ದುಡ್ಡು ಓಡಾಡುತ್ತಿದೆ; ಜನರೂ ಹೆಚ್ಚು ಓಡಾಡುತ್ತಿದ್ದಾರೆ ಎಂಬುದಕ್ಕಿಂತ ಹೆಚ್ಚು ಹೆಚ್ಚು 'ಸವಾರಿಸುತ್ತಿ'ದ್ದಾರೆ (ಬಸ್ಸು, ಲಾರಿ, ಟ್ರಾಕ್ಟರು, ಮೋಟರ್ ಬೈಕ್, ಸೈಕಲ್‌ಗಳ ಮೇಲೆ). ವಿದ್ಯಾವಂತರೂ ಸಾಕಷ್ಟಿದ್ದಾರೆ. ಬಡವರೂ ಸಾಕಷ್ಟಿದ್ದಾರೆ. ಕಾಲುವೆ ಬಂದು ಊರ ಜನರ ಜೀವನ ವಿಧಾನದಲ್ಲಿ ಬಹಳ ಬದಲಾವಣೆಗಳನ್ನು ತಂದಿದೆಯಾದರೂ ಇನ್ನೂ ಗ್ರಾಮೀಣ ವಾತಾವರಣವನ್ನು ಉಳಿಸಿಕೊಂಡಿದೆ. ಊರು ತಗ್ಗಿನಲ್ಲಿದೆ. ಎತ್ತರದ ಜಾಗದಲ್ಲಿ ನಾಲೆ ಹರಿದಿರುವುದರಿಂದ ಮಳೆಗಾಲದಲ್ಲಿ ಊರಲ್ಲೆಲ್ಲ ಜೌಗು. ಎಷ್ಟೋ ಮನೆಗಳಲ್ಲಿ ನೆಲಕ್ಕೆ ಹುಲ್ಲು ಹಾಸಿಕೊಂಡು ಅದರ ಮೇಲೆ ಜನ ಓಡಾಡುತ್ತಾರೆ. ಗೋಡೆಗಳೆಲ್ಲ "ತೊನಸಿ"

ಹಿಡಿದಿರುತ್ತವೆ. ಸರ್ಕಾರವು ಊರನ್ನು ಬೇರೆ ಕಡೆ ಕಟ್ಟಿಕೊಳ್ಳಲು ಜಾಗವನ್ನೂ ತೋರಿಸಿತು. ಮನೆ ಕಟ್ಟಿಕೊಳ್ಳಲು ಜಾಗವನ್ನೂ ಕೊಟ್ಟಿತು. ಮನೆ ಕಟ್ಟಿಕೊಳ್ಳಲು ಹಣವನ್ನೂ ಕೊಟ್ಟಿತು. ಜನ ಹಣ ತೆಗೆದುಕೊಂಡು ತಮಗೆ ಬೇಕಾದ ಉಳಿದ ಎಲ್ಲ ಬಗೆಯ ಅಗತ್ಯಗಳಿಗೆ ಬಳಸಿಕೊಂಡರು. ಊರು ಮಾತ್ರ ಅಲ್ಲೇ ಇದೆ. ಮಳೆಗಾಲದಲ್ಲಿ ಜೌಗನ್ನು ಶಪಿಸಿ ಅದು ಮುಗಿಯುತ್ತಲೇ ಮರೆತು ತಮ್ಮ ಎಂದಿನ ಕಾರ್ಯಗಳಲ್ಲಿ ತೊಡಗಿರುತ್ತಾರೆ. ಆದರೂ ಕೆಲವರು ಊರು ಬಿಟ್ಟು ಹೋಗಿ ಎತ್ತರದ ತಮ್ಮ ಗದ್ದೆಗಳ ಬಳಿ ಮನೆ ಮಾಡಿಕೊಂಡಿದ್ದಾರೆ. ಆ ಪ್ರದೇಶಕ್ಕೇ ಒಳ್ಳೆಯ ದುಡಿಮೆಗಾರರು ಎಂದು ಅಲ್ಲಿಯ ರೈತರಿಗೆ ಹೆಸರಿದೆ. ಪಕ್ಕದ ಆಲೂರು ಗ್ರಾಮವೂ ಮಲ್ಲಾಪುರದಂತೆಯೇ ನಾಲೆ ನೀರಿನಿಂದ ಜೌಗಿಗೊಳಗಾದಾಗ ಆ ಊರ ಜಾಣ ಜನ ಒಟ್ಟಿಗೆ ಸೇರಿ ಎತ್ತರದ ಜಾಗಕ್ಕೆ ಊರನ್ನು ಕೊಂಡೊಯ್ದು ಒಳ್ಳೆಯ ಕೆಲಸ ಮಾಡಿದ್ದಾರೆ ಎಂದು ಕೇಳಿದೆ.

ಮಲ್ಲಾಪುರದಲ್ಲಿನ ಹೆಚ್ಚು ಜನ ಲಿಂಗಾಯತರು, ಅವರೇ ಸಂಖ್ಯೆಯಲ್ಲಿ ಆಸ್ತಿಯಲ್ಲಿ ಪ್ರಬಲರು. ಅವರಲ್ಲಿ ಸಾದರು ಹೆಚ್ಚು. ಕೆಲವು ಜಂಗಮ ಕುಟುಂಬಗಳಿವೆ. ಆ ಜಂಗಮರೇ ಹಿಂದೊಮ್ಮೆ ಆ ಸಾದರ ಮನೆಗಳ ಪೌರೋಹಿತ್ಯ ಕಾರ್ಯ ಮಾಡುತ್ತಿದ್ದರು. ಕಳೆದ ಐವತ್ತು ವರ್ಷಗಳಿಂದ ಸಿರಿಗೆರೆ ಮಠದ ಭಕ್ತರಾದ ಸಾದರು ತಾವೇ ಜಂಗಮರನ್ನು ಮಾಡಿಕೊಂಡು ಹುಟ್ಟು ಜಂಗಮರನ್ನು ಪೌರೋಹಿತ್ಯಕ್ಕೆ ಕರೆಯುತ್ತಿಲ್ಲ. ಇದು ಸಹಜವಾಗಿಯೇ ಹುಟ್ಟು ಜಂಗಮರಿಗೆ ನೋವು ತರಿಸಿರುವ ವಿಚಾರ. ಜಂಗಮರಲ್ಲಿ ಬಹುಪಾಲು ಜನ ಬಡವರು. ಅದಕ್ಕೆ ನನ್ನ ತಂದೆಯೇ ಒಳ್ಳೆಯ ಉದಾಹರಣೆ. ತಮ್ಮನ್ನು ಸಮಾಜ ನೋಡಿಕೊಳ್ಳುತ್ತದೆಯೆಂದು ಆಸ್ತಿ ಮಾಡುವ ಬಗ್ಗೆ, ಮೈಮುರಿದು ದುಡಿಯುವ ಬಗ್ಗೆ ಕಾಳಜಿ ವಹಿಸಲಿಲ್ಲ (ವಿರಳವಾಗಿ ಅವರಲ್ಲೂ ಶ್ರೀಮಂತರಿದ್ದರೂ ಸಂಖ್ಯೆ ಕಡಮೆ). ಜಂಗಮರಲ್ಲೇ "ಬೂದಿ ಅಯ್ನೋರು" (ಬೂದಿ ಜಂಗಮರು) ಎಂಬ ಹೆಸರಿನ ಉಪವರ್ಗ ಇದೆ. ಅವರನ್ನು ಉಳಿದ ಜಂಗಮರು ತಮಗಿಂತ ಕಡಮೆ ಎಂದು ಭಾವಿಸುವುದಲ್ಲದೆ ಹೆಣ್ಣು ಕೊಟ್ಟು ತರುವುದನ್ನು ವಿರೋಧಿಸುತ್ತಾರೆ. ಬೂದಿ ಅಯ್ಗಳು ಹಿಂದೊಮ್ಮೆ ವಿಭೂತಿ ಮಾಡಿ ಮಾರುತ್ತಿದ್ದವರು. ಅವರಿಗೂ ಉಳಿದ ಜಂಗಮರಿಗೂ ಯಾವುದರಲ್ಲೂ ನನಗೆ ಭೇದ ಕಾಣಿಸಿಲ್ಲ. ನಾನು ಚಿಕ್ಕವನಾಗಿದ್ದಾಗ ಆ ಊರ ಹೊರಗೊಂದು ಮಠವಿದ್ದು ಅಲ್ಲಿ ಒಬ್ಬರು ಸ್ವಾಮಿಗಳೂ ಇದ್ದರು ಎಂದು ನೆನಪು. ಅದು ಬಿದ್ದು ಹೋಗಿ ಆ ಜಾಗ ಗೌಡರ ಆಸ್ತಿಯಾಗಿದೆ. ಆ ಮಠದಲ್ಲಿ ಊರ ಜನ ಸೇರಿ ಭಜನೆ, ತತ್ವ ಪದ ಹೇಳುತ್ತಿದ್ದರು. ಸಾದರ ಜಂಗಮರನ್ನು "ಹೊಸ ಅಯ್ನೋರು" ಎಂದು, ಹುಟ್ಟು ಜಂಗಮರನ್ನು "ಹಳೆ ಅಯ್ನೋರು" ಎಂದೂ ಕರೆಯುತ್ತಾರೆ. "ಹಳೆ ಅಯ್ನೋರ" ಆಸ್ತಿ ಎಂದರೆ ಹಿಂದಿನ ಪರಂಪರೆ, ಅದರ ನೆನಪು; "ಹೊಸ ಅಯ್ನೋರ" ಆಸ್ತಿ ಈಗಿನ ಜಮೀನುದಾರರಾದ ಶಿಷ್ಯವರ್ಗ. ಹುಟ್ಟು ಜಂಗಮರು ಅನಿವಾರ್ಯವಾಗಿ ಪೌರೋಹಿತ್ಯ ಕೆಲಸ ಬಿಟ್ಟು ಹೆಚ್ಚು ಹೆಚ್ಚು ದುಡಿಮೆಗೆ ಶಿಕ್ಷಣಕ್ಕೆ ಗಮನ ಕೊಡಲೇಬೇಕಾಗಿ ಬಂದಿದೆ. ಈಗ ಆಗಿರುವುದು ಒಳ್ಳೆಯದೇ ಆಯಿತು ಎಂದು ಅನೇಕರಿಗೆ ಸಮಾಧಾನ ಹೇಳಿದ್ದೇನೆ. ಜಂಗಮನ ಮನೆಗೂ ಭಕ್ತನ ಮನೆಗೂ ಹೆಚ್ಚಿನ ವ್ಯತ್ಯಾಸವಿಲ್ಲ. ಜಂಗಮನ ಮನೆಯಲ್ಲಿ ಪೂಜೆ ಕೋಣೆ

ಎಂಬುದಿರದಿದ್ದರೂ ಒಂದು ಗೂಡಿನಲ್ಲಿ ಸಾಮಾನ್ಯವಾಗಿ ಬಳಪದ ಕಲ್ಲಲ್ಲಿ ಮಾಡಿದ ಜೋಡೆತ್ತು ಇಟ್ಟು ಪೂಜಿಸುತ್ತಾರೆ. ಅಲ್ಲೇ ಭಸ್ಮದ ಪೆಟ್ಟಿಗೆ ಮತ್ತು ಬೆತ್ತ ಇರುತ್ತದೆ. ಜಂಗಮ ಪ್ರತಿ ದಿನ ಬೆಳಿಗ್ಗೆ ಕಡ್ಡಾಯವಾಗಿ ಸ್ನಾನಮಾಡಿ "ಪೂಜೆ ಮಾಡಿಕೊಳ್ಳಬೇಕು" - ಎಂದರೆ ತನ್ನ ಕೊರಳ ಲಿಂಗಕ್ಕೆ ಪೂಜೆ ಸಲ್ಲಿಸಬೇಕು. ಆ ಪೂಜೆ ಹೀಗಿರುತ್ತದೆ : ಸ್ನಾನ ಮಾಡಿ, ಮಡಿ ಪಂಚೆ ಉಟ್ಟು (ಹಿಂದೆ ಯಾರೋ ಕೊಟ್ಟ ಕೆಂಪು ಬಣ್ಣದ ರೇಷ್ಮೆ ವಸ್ತ್ರವು ಮಡಿವಸ್ತ್ರ ಎನ್ನಿಸಿಕೊಳ್ಳುತ್ತದೆ), ಗದ್ದುಗೆ (ಕಂಬಳಿ ತುಂಡು ಅಥವಾ ಹಲಗೆ) ಮೇಲೆ ಕುಳಿತು, ಹಣೆ ತೋಳು ಎದೆಗಳಿಗೆ ಭಸ್ಮಧಾರಣೆ ಮಾಡಿಕೊಂಡು, ಅಲ್ಲೇ ಹಚ್ಚಿಟ್ಟ ದೀಪಕ್ಕೂ ಬೆತ್ತಕ್ಕೂ ಭಸ್ಮ ಹಚ್ಚಿ, ಕೊರಳಲ್ಲಿ ಕಟ್ಟಿದ ಕರಡಗೆಯಿಂದ ಇಷ್ಟಲಿಂಗವನ್ನು ತೆಗೆದು ಎಡಗೈಯಲ್ಲಿಟ್ಟು ಅದನ್ನು ನಡುಬೆರಳಿಂದ ಭದ್ರವಾಗಿ ಹಿಡಿದು, ವಿಭೂತಿಧಾರಣೆ ಮಾಡಿದ ಗಿಂಡಿಯಿಂದ ಅದಕ್ಕೆ ನೀರೆರೆದು, ಅದನ್ನು ಪುಟ್ಟದಾದ ಲಿಂಗವಸ್ತ್ರದಲ್ಲಿ ಒರಸಿ, ವಿಭೂತಿ ಧರಿಸಿ ಗಂಧ ಸವರಿ, ಹೂ ಬಿಲ್ವಪತ್ರೆ (ಅಥವಾ ಬನ್ನಿ ಪತ್ರೆ) ಇವುಗಳನ್ನು ಲಿಂಗದ ಮೇಲಿಟ್ಟು, ಹಿಡಿ ಉಳ್ಳ ಚಿಕ್ಕ ಪಾತ್ರೆಯ ಕೆಂಡದ ಮೇಲೆ ಲೋಬಾನ ಹಾಕಿ ಅದರ ಧೂಮವು ಲಿಂಗವನ್ನು ತಾಗುವಂತೆ ಬೆಳಗಿ, ಊದು ಬತ್ತಿ ಬೆಳಗಿ, ಸ್ವಲ್ಪ ಹೊತ್ತು ಕೈ ಗಂಟೆ ಮೊಳಗಿಸಿ, ಬಳಿಕ ಎಡಗೈ ಬೆರಳು ಹಿಡಿದ ಲಿಂಗವನ್ನು ಹಾಗೇ ನಿಧಾನವಾಗಿ ಎತ್ತಿ ಮುಖದ ಮಟ್ಟಕ್ಕೆ ತಂದು ಒಂದು ನಿಮಿಷ ಕಣ್ಣು ಮುಚ್ಚಿ ಧ್ಯಾನಮಾಡಿ ಬಳಿಕ ಆ ಲಿಂಗದ ಮೇಲಿನ ಹೂ ಪತ್ರೆ ತೆಗೆದು ಪಾತ್ರೆಗೆ ಹಾಕಿ, ಆ ಲಿಂಗವನ್ನು ಪುಟ್ಟ ವಸ್ತ್ರದಲ್ಲಿ ಸುತ್ತಿ ಕರಡಗೆಗೆ ಸೇರಿಸಿ ಗಂಟು ಹಾಕಿದರೆ ಅಲ್ಲಿಗೆ ಲಿಂಗಪೂಜೆ ಮುಗಿದಂತೆ. ಹಿಂದೆ ಸಾಮಾನ್ಯವಾಗಿ ಜಂಗಮರು ಕೆಂಪು ಗೆರೆಗಳು ಇರುವ ರುಮಾಲನ್ನು (ಕಾವಿ ನೆನಪಿಗೆ ತರುವಂತಹುದು) ತಲೆಗೆ ಸುತ್ತಿಕೊಳ್ಳುತ್ತಿದ್ದರು, ಅಥವಾ ಟವಲನ್ನು ಹೆಗಲ ಮೇಲೆ ಹಾಕಿಕೊಂಡಿರುತ್ತಿದ್ದರು. 'ಪೂಜೆ ಮಾಡಿಕೊಂಡ ಮೇಲೆ' ('ಪೂಜೆ ಮಾಡಿದ ಮೇಲೆ' ಎಂದು ಹೇಳಬಾರದು. ಇದು ಗಮನಾರ್ಹ ಸಂಗತಿ) ಪೂಜಾ ಸಾಮಗ್ರಿಗಳನ್ನಿಟ್ಟಿರುವ ಸ್ವಲ್ಪ ಎತ್ತರದ ಮಣೆಯನ್ನು ಖಾಲಿ ಮಾಡಿ ಅದರ ಮೇಲೆ "ಗಂಗಾಳ" ಇಟ್ಟು ಮುದ್ದೆ (ಅಥವಾ ರೊಟ್ಟಿ) ಸಾರು ಬಡಿಸಿದರೆ, ಬಾಗಿ ಅದನ್ನು ಕೊರಳ ಇಷ್ಟಲಿಂಗಕ್ಕೆ ತೋರಿಸಿ ಅದಕ್ಕೆ ಒಪ್ಪಿಸಿ, "ಶಿವ ಶಿವಾ" ಎನ್ನುತ್ತ ನಿಧಾನವಾಗಿ ಊಟ ಮಾಡಬೇಕು. ಊಟವಾದ ಮೇಲೆ ಗಂಗಾಳದಲ್ಲಿ ಕೈ ತೊಳೆದು ಆ ಗಂಗಾಳದ ನೀರನ್ನು ಹಾಗೆಯೇ ಕುಡಿಯುತ್ತಿದ್ದರು. ಸಂಜೆ ಸ್ನಾನ ಮಾಡಬಹುದು, ಮಾಡದಿರಬಹುದು. ಆದರೆ ಕೈಕಾಲು ಮುಖ ತೊಳೆದು ಲಿಂಗಪೂಜೆ ಮಾಡಿಕೊಂಡಾದ ಮೇಲೆಯೇ ಊಟ.

ಅವರಿಗೆ ಮಾತ್ರ ಬೆತ್ತ ಹಿಡಿದು "ಕಂತೆ ಭಿಕ್ಷ" ಎತ್ತುವ ಹಕ್ಕು. ಅವರು ಬೆಳಿಗ್ಗೆ ಜೋಳಿಗೆಯನ್ನೋ ಅಥವಾ ಜನರ ಊಟದ ಹೊತ್ತಿಗೆ ಬುಟ್ಟಿಯನ್ನೋ ಹಿಡಿದು ಹೋಗಿ "ಶಿವ ಶಿವಾ, ಕ್ವಾರಾಣ್ಯದಾಗ ('ಕೋರಾನ್ನದಲ್ಲಿ') ಭಿಕ್ಷ" ಎಂದು ಬಾಗಿಲು ದಾಟಿ ಒಳಗೆ ಬಂದರೆ ಜನ ಜೋಳಿಗೆಗೆ ಕಾಳನ್ನೋ ಬುಟ್ಟಿಗೆ ಮುದ್ದೆ ರೊಟ್ಟಿಯನ್ನೋ (ಬುಟ್ಟಿಯ ಕುಡಿಕೆಗೆ ಸಾರನ್ನೂ) ಹಾಕಿ ಪಾದಮುಟ್ಟಿ ನಮಸ್ಕರಿಸಿ ಕಳುಹಿಸುತ್ತಾರೆ. ಉಳಿದ ಸಾಮಾನ್ಯ

ಭಿಕ್ಷುಕರ ಭಿಕ್ಷೆಗೂ ಜಂಗಮರ ಭಿಕ್ಷೆಗೂ ವ್ಯತ್ಯಾಸ ಕಾಣುತ್ತದೆ. ಹಬ್ಬದ ದಿನಗಳಲ್ಲಿ 'ಐನೋರಿ'ಗೆ 'ಬಿನ್ನ ಹಾಕಿ' ಅವರನ್ನು ಕರೆದೊಯ್ದು ಅವರ ಪಾದೋದಕದ ಒಂದೆರಡು ಹನಿ ಸೇವಿಸಿ, ಮನೆಗೆಲ್ಲ ಸಿಂಪಡಿಸಿ ಅವರಿಗೆ ಊಟ ಮಾಡಿಸಿದ ಮೇಲೆಯೇ ಭಕ್ತರ ಮನೆಗಳಲ್ಲಿ ಊಟ. (ಈಗ ಆ ಕಟ್ಟುಪಾಡುಗಳೆಲ್ಲ ಮಾಯವಾಗುತ್ತಿವೆ). ಯಾವುದೇ ಊರಲ್ಲಿ ಈ ರೀತಿ "ಬಿನ್ನ ತೀರಿಸಲು" ಒಂದು ನಿರ್ದಿಷ್ಟ ಜಂಗಮ ಕುಟುಂಬಕ್ಕೆ ಅಥವಾ ಅವರ ಅಣ್ಣ ತಮ್ಮಂದಿರ ಕುಟುಂಬಗಳಿಗೆ ಮಾತ್ರ ಅಧಿಕಾರ. ಬೇರೆ ಊರಿಂದ ಬಂದು ನೆಲಸಿದ ಜಂಗಮರಿಗೆ ಆ ಅಧಿಕಾರ ಇರುವುದಿಲ್ಲ. ನನ್ನ ತಂದೆ ತಮ್ಮ ಬಾಲ್ಯದಲ್ಲಿ ಅನಾಥರಾದಾಗ ಬೆತ್ತ ಹಿಡಿದು ಈ ಪ್ರದೇಶದ ಹಳ್ಳಿ ಹಳ್ಳಿಗಳಿಗೆ ಹೋಗಿ "ಕಂತೆ ಭಿಕ್ಷ" ಎತ್ತಿ ಬದುಕಿದವರು (ಜಂಗಮರಿಗೆ ಯಾವುದೇ ಊರಿಗೆ ಹೋಗಿ 'ಕಂತೆ ಭಿಕ್ಷ' ಎತ್ತುವ ಅಧಿಕಾರವಿದೆ). ಅವರು ಮುಂದೆ ಹಿರೇಕೋಗಲೂರಿನಲ್ಲಿ ನೆಲಸಿದರೂ ಅವರು ಮೂಲತಃ ಆ ಊರಿನವರಲ್ಲವಾದುದರಿಂದ ಅವರನ್ನು ಜನರು ಹಬ್ಬದ ದಿನ 'ಬಿನ್ನ ತೀರಿಸಲು' ಕರೆಯುತ್ತಿರಲಿಲ್ಲ. ಯಾರಾದರೂ ಕರೆಯಲು ಬಂದರೆ 'ನನಗೆ ಬರಲು ಅಧಿಕಾರವಿಲ್ಲ' ಎಂದು ನಿರಾಕರಿಸುತ್ತಿದ್ದರು. ಜಂಗಮನು ಯಾವ ಲಿಂಗಾಯತ ಕರೆದರೂ - ಸಾದರೋ, ಬಣಜಿಗರೋ, ಕ್ಷೌರಿಕರೋ, ನೇಕಾರರೋ - ಎಲ್ಲರ ಮನೆಗಳಿಗೂ ಹೋಗಿ 'ಬಿನ್ನ ತೀರಿಸಿ' ಬರಬೇಕು. ಹತ್ತಾರು ಮನೆಗಳಿಗೆ ಹೋಗಬೇಕಾದಾಗ ಉಳಿದ ಭಕ್ತರ ಮನೆಯಲ್ಲಿ ಊಟದ ರುಚಿ ನೋಡಿ, ಚೆನ್ನಾಗಿ ಅಡುಗೆ ಮಾಡುತ್ತಿದ್ದವರ ಮನೆಗಳಲ್ಲಿ ಚೆನ್ನಾಗಿಯೇ ಊಟ ಮಾಡುತ್ತಿದ್ದರು. 'ಬಿನ್ನ ತೀರಿಸಿ'ಯಾದ ಮೇಲೆ ಜಂಗಮರಿಗೆ ಸ್ವಲ್ಪ ಹಣವನ್ನು 'ದಕ್ಷಿಣೆ'ಯಾಗಿ (ನಾನು ಚಿಕ್ಕವನಾಗಿದ್ದಾಗ ಒಂದು ಬಿಲ್ಲೆ, ಅರ್ಧಾಣೆ ಅಥವಾ ಒಂದಾಣೆ) ಕೊಟ್ಟು ಕಾಲುಮುಟ್ಟಿ ನಮಸ್ಕರಿಸಿ ಬೀಳ್ಕೊಡುವುದು ಪದ್ಧತಿ.

ಪ್ರತಿ ಜಂಗಮ ಹುಡುಗನಿಗೂ "ಅಯ್ಯಾಚಾರ" ಆದರೆ ಮಾತ್ರ ಅವನಿಗೆ ಜಂಗಮನ ಮೇಲ್ಕಂಡ ಸವಲತ್ತುಗಳು. ನನಗೆ ನನ್ನ ಮದುವೆ ದಿನ ಬೆಳಿಗ್ಗೆ ಅಯ್ಯಾಚಾರ ನಡೆದು ಮಧ್ಯಾಹ್ನ ಮದುವೆಯಾಯ್ತು. ಪಂಚಕಳಶ ಹೂಡಿ, ಪೂಜಾದಿಗಳನ್ನು ಮಾಡಿ, ಕಿವಿಯಲ್ಲಿ ಪಂಚಾಕ್ಷರಿ ಮಂತ್ರವನ್ನುಪದೇಶಿಸಿ, ಗುರುಗಳು ಇಷ್ಟಲಿಂಗವನ್ನು ದಯಪಾಲಿಸಿದರು. ಆ ಇಷ್ಟಲಿಂಗ ಧರಿಸಿ ಬೆತ್ತ ಹಿಡಿದು ನಾನು ಕೆಲವು ಮನೆಗಳಿಗೆ ಹೋಗಿ 'ಕಂತೆ ಭಿಕ್ಷ' ಮಾಡಿದೆ. ನಾನು ಆ ಮುಂಚೆ ದಾವಣಗೆರೆ ಜಯದೇವ ಹಾಸ್ಟಲಿನ ಕಟ್ಟುಪಾಡಿಗೆ ಬಿದ್ದು ಕೊರಳಲ್ಲಿ ಲಿಂಗ ಕಟ್ಟಿಕೊಂಡಿದ್ದೆ (ಆ ಬಳಿಕ ಅದನ್ನು ಧರಿಸುತ್ತಿರಲಿಲ್ಲ. ಧರಿಸುತ್ತಿರುವವರ ಬಗ್ಗೆ ನನಗೆ ಗೌರವ ಇತ್ತು). ಹಾಗೆ ಕಟ್ಟಿಕೊಂಡಿದ್ದ ಲಿಂಗ ಎಲ್ಲ ವೀರಶೈವರೂ ಕಟ್ಟಿಕೊಳ್ಳುವ ಲಿಂಗ. ಆದರೆ ಅಯ್ಯಾಚಾರದ ಲಿಂಗವು ಸಾಮಾನ್ಯ ಲಿಂಗಾಯತನಂತಿದ್ದ ಜಂಗಮರ ಹುಡುಗನಿಗೆ ಜಂಗಮತ್ವ ನೀಡುವಂತಹುದು. ಮದುವೆಯಾದ ಒಂದೆರಡು ವಾರ ಅಂತಹ ಲಿಂಗವನ್ನು ಕಟ್ಟಿಕೊಂಡು ಪ್ರತಿದಿನ ಪೂಜಿಸುತ್ತ ಆಮೇಲೆ ಅದನ್ನು ತೆಗೆದುಹಾಕಿದೆ. ಹಾಗೆ ತೆಗೆದು ಹಾಕಲು ಅಸಡ್ಡೆ, ಅನಾದರ ಖಂಡಿತ ಕಾರಣ ಅಲ್ಲ.

ಎಲ್ಲ ಲಿಂಗಾಯತರಿಗೂ, ಜಂಗಮರೂ ಸೇರಿದಂತೆ ಎಂಟು ಹತ್ತು ದಿನಗಳ ಮಗುವಾಗಿದ್ದಾಗಲೇ ಒಂದು ಲಿಂಗವನ್ನು ದಯಪಾಲಿಸುತ್ತಾರೆ. ಆ ಲಿಂಗವನ್ನು ಮಕ್ಕಳ ತೊಟ್ಟಿಲಿಗೆ ಕಟ್ಟಿರುತ್ತಾರೆ. ಮುಂದೆ ದೊಡ್ಡವರಾದ ಮೇಲೆ ಅದೇ ಲಿಂಗವನ್ನು ಅಥವಾ ಬೇರೊಂದು ಲಿಂಗವನ್ನು ಹೆಂಗಸರಾಗಲಿ ಗಂಡಸರಾಗಲಿ ಕಟ್ಟಿಕೊಳ್ಳಬೇಕು. ಹಾಗೆ ಕಟ್ಟಿಕೊಳ್ಳಲು ವಿಶೇಷ ಸಂಸ್ಕಾರ ಕಾರ್ಯ ನಡೆಯಬೇಕಾಗಿಲ್ಲ. ಜಂಗಮರಿಗೆ ಮಾತ್ರ ಮೇಲೆ ಹೇಳಿದ ಅಯ್ಯಾಚಾರ ಎಂಬ ವಿಶೇಷ ಸಂಸ್ಕಾರ. ಭಕ್ತರು ದಿನವೂ ಸ್ನಾನ ಮಾಡಲೇಬೇಕೆಂದೇನೂ ಇಲ್ಲ. ದಿನವೂ ಪೂಜೆ ಮಾಡಿಕೊಳ್ಳಲೇಬೇಕಾಗಿಲ್ಲ, ಮೈಮೇಲೆ ಲಿಂಗ ಧರಿಸಲೇಬೇಕೆಂದೇನೂ ಇಲ್ಲ. ತಾತ್ವಿಕವಾಗಿ ಅವೆಲ್ಲ ಕಡ್ಡಾಯವಾದರೂ, ಅವರಿಗೆ ಎಂದರೆ ಭಕ್ತರಿಗೆ ಸಮಾಜ ವಿನಾಯ್ತಿ ತೋರಿಸುವಂತೆ ಜಂಗಮರಿಗೆ ತೋರಿಸುವುದಿಲ್ಲ. ಹೊಲ, ಮಗ್ಗ ಇತ್ಯಾದಿ ಕಡೆ ದುಡಿಯುವವರು ಭಕ್ತರಾದ್ದರಿಂದ ಅವರಿಗೆ ಆ ವಿನಾಯ್ತಿ.

ಮಲ್ಲಾಪುರದಲ್ಲಿದ್ದ ಜಂಗಮರಲ್ಲಿ ಮರುಳಯ್ಯನವರು ಮಠದ ಜಂಗಮರಾಗಿದ್ದರೆ ಹಾಲಯ್ಯನವರೂ ಚಂದ್ರಯ್ಯನವರೂ 'ಬೂದಿ ಅಯ್ನೋರು' ಜಾತಿಯ ಜಂಗಮರಾಗಿದ್ದರು. ಮೂವರೂ ಪ್ರಾಥಮಿಕ ಶಾಲಾ ಉಪಾಧ್ಯಾಯರಾಗಿ ಸಾತ್ವಿಕ ಜೀವನ ನಡೆಸಿದರು. ಅವರಲ್ಲಿ ಹಾಲಯ್ಯನವರದು "ಝೋರು ಖಂಠ" : ಅವರು ಗಟ್ಟಿಯಾಗಿ ಕೂಗಿದರೆ ಊರಿಗೇ ಕೇಳಿಸುತ್ತಿತ್ತು. ಅವರಿಗೆ ಹುಡುಗರು ಅಕ್ಷರಶಃ ಹೆದರುತ್ತಿದ್ದರು. ಜಂಗಮರಲ್ಲದಿದ್ದರೂ ಜಂಗಮರಂತೆ ನಿತ್ಯ ಸ್ನಾನ ಪೂಜೆ ಮಾಡುತ್ತಿದ್ದ ಮೇಷ್ಟ್ರು ರುದ್ರಪ್ಪನವರ ಬಗ್ಗೆ ಎರಡು ಮಾತು ಹೇಳಬೇಕು. ಅವರು ಸಾದರು, ಅತ್ಯಂತ ವಿನಯಶೀಲರು. ಯಾರೇ ಹಿರಿಯರ ಮುಂದೆ ಕುಳ್ಳಿರಲು ಸಂಕೋಚ. ಮಾತು ಮಾತಿಗೆ "ಶಿವ ಶಿವ" ಎನ್ನುತ್ತಿದ್ದ ಅವರು ತಮ್ಮ ತಂದೆಯನ್ನು ಗೌರವಿಸುತ್ತಿದ್ದ ರೀತಿ ವಿಶೇಷವಾದುದು. ಹಬ್ಬ ಉತ್ಸವಗಳಂದು ತಮ್ಮ ತಂದೆಯನ್ನು ಕಂಬಳಿ ಗದ್ದುಗೆ ಮೇಲೆ ಕುಳ್ಳಿರಿಸಿ, ದೇವರ ವಿಗ್ರಹವನ್ನು ಪೂಜಿಸುವಂತೆ ಪೂಜಿಸಿ ಮಂಗಳಾರತಿ ಬೆಳಗಿ ನಮಸ್ಕರಿಸುತ್ತಿದ್ದರು. ಸಾತ್ವಿಕರಾಗಿದ್ದ ಅವರ ಆ ಭಕ್ತಿ ಅಕೃತಕವೆಂದು ತಿಳಿದಿದ್ದ ಜನ ಅವರನ್ನು ತಮಾಷೆ ಮಾಡುತ್ತಿರಲಿಲ್ಲ. ನಾನು ಅವರ ಮನೆಗೆ ಹೋದರೆ ಅವರು ತೋರುತ್ತಿದ್ದ ವಿನಯ ಸಜ್ಜನಿಕೆಗಳು ಬೆರಗುಗೊಳಿಸುತ್ತಿದ್ದುವು. ಆಚಾರ ವಿಚಾರ ಎಲ್ಲ ದೃಷ್ಟಿಯಿಂದ ಅವರೊಬ್ಬ ನಿಜವಾದ ಜಂಗಮರಂತಿದ್ದರು.

ಇವು ಕೇವಲ ಆಚಾರದ ವಿಷಯವಾಯ್ತು. ಜಂಗಮರಾಗಲಿ ಸಾದರಾಗಲಿ ಬಣಜಿಗರಾಗಲಿ ಕ್ಷೌರಿಕರಾಗಲಿ - ಅವರು ಕೇವಲ ತಮ್ಮ ಶುಭ್ರ ಜೀವನದಿಂದ ಮಾತ್ರ ಎಲ್ಲರ ಗೌರವ ಸಂಪಾದಿಸುತ್ತಿದ್ದರು. ಕೆಟ್ಟ ಸ್ವಭಾವದ ಜಂಗಮನೊಬ್ಬನಿದ್ದರೆ ಅವನಿಗೆ ಹೊರಗಡೆ ನಮಸ್ಕರಿಸಿ ಅವನ ಬೆನ್ನ ಹಿಂದೆ ಟೀಕಿಸುತ್ತಿದ್ದರು. ಅನಕ್ಷರಸ್ಥರಾಗಿದ್ದ ಹಳ್ಳಿಯ ಜನರಲ್ಲಿ ಸಾರಾಸಾರ ವಿವೇಕ ಸಾಕಷ್ಟು ಜಾಗೃತವಾಗಿತ್ತು. ಅಪ್ರಸ್ತುತವೆನ್ನಿಸಿದರೂ ಲಿಂಗಾಯತ ಜನಾಂಗದ, ಅದರಲ್ಲೂ ಜಂಗಮ ವರ್ಗದ ಆಚಾರ ವ್ಯವಹಾರಗಳನ್ನು ದಾಖಲಿಸಲು ಈ ಅವಕಾಶ ಬಳಸಿಕೊಂಡಿದ್ದೇನೆ. ಆಧುನೀಕರಣದ ಜೊತೆ ಜೊತೆಗೆ ಅನೇಕ ಸಾಮಾಜಿಕ

ನಡೆ ನುಡಿಗಳಲ್ಲಿ ತೀವ್ರ ಗತಿಯ ಮಾರ್ಪಾಟುಗಳಾಗುತ್ತಿರುವುದರಿಂದ ಆ ಪದ್ಧತಿಗಳ ಇಂತಹ ದಾಖಲೀಕರಣ ಮುಖ್ಯವೆನ್ನಿಸುತ್ತದೆ.

ಮಧ್ಯಾಹ್ನ ಮುರಿಗೆಪ್ಪ ಮತ್ತು ಮಹೇಶ್ವರಪ್ಪ ಬಂದರು. ಇಬ್ಬರೂ ಮೂವತ್ತೈದು ನಲವತ್ತು ವರ್ಷದ ದುಡಿಮೆಗಾರರು. ದೊಡ್ಡ ವಿದ್ಯಾವಂತರಲ್ಲದಿದ್ದರೂ ಅಕ್ಷರಸ್ಥರು, ವ್ಯವಹಾರ ಬಲ್ಲವರು. ಮುರಿಗೆಪ್ಪ ದೊಡ್ಡ ರೈತ - ಆತನ ಪ್ರಕಾರ "ಕನ್ನಡ ಎಲ್ಲೂ ಹೋಗಲ್ಲ". ನಾನು ಆತನಿಗೆ ಬೆಂಗಳೂರಲ್ಲಿ ಕನ್ನಡದ, ಕನ್ನಡಿಗರ ಕೆಲವು ವಿಷಯಗಳನ್ನು ವಿವರಿಸಿದಾಗ ಅರ್ಥವಾಯ್ತು. ಇನ್ನೂ ಹತ್ತಿರದ ಹಿರಿಯೂರು ಭದ್ರಾವತಿಗಳಲ್ಲಿ ತಮಿಳರ ಪ್ರಾಧಾನ್ಯ ಹೆಚ್ಚಿರುವುದನ್ನು ಅವರ ಗಮನಕ್ಕೆ ತಂದೆ. ಅವರಿಗೆಲ್ಲ ಕನ್ನಡಕ್ಕೆ ಒದಗಿರುವ ಕುತ್ತಿನ ಅರಿವಿದೆ. ಸರ್ಕಾರದಿಂದ ಕನ್ನಡವನ್ನು ಗಟ್ಟಿಗೊಳಿಸುವ ಕೆಲಸ ಏನೂ ನಡೆಯುತ್ತಿಲ್ಲವೆಂಬ ವಿಷಯವೂ ಗೊತ್ತಿದೆ. ಅವರಷ್ಟು ಅರಿವು ಹಳ್ಳಿಗಳ ಪದವೀಧರರಿಗೆ ಇದ್ದರೂ ಸಾಕು, ನಾನು ಹೇಳಿದ್ದನ್ನು ಅವರು ಅರ್ಥಮಾಡಿಕೊಂಡಂತೆ ಉಳಿದವರು ಅರ್ಥಮಾಡಿಕೊಂಡರೂ ಸಾಕು, ಎಷ್ಟೋ ಕೆಲಸ ಆದಂತೆ.

ಮುರಿಗೆಪ್ಪ ಹಿಂದೆ ಹೇಳಿದ್ದ ವಿಷಯವೊಂದು ನೆನಪಿಗೆ ಬರುತ್ತಿದೆ. ಅವರೂ ಸೇರಿದಂತೆ ಊರಿನ ಕೆಲವು ಜನರು ಶ್ರೀಸಾಯಿಬಾಬಾ ಅವರ ದರ್ಶನಕ್ಕೆ ಪುಟ್ಟಪರ್ತಿಗೆ ಹೋದರು. ಬಾಬಾ ಅವರು ಬೆಳಗಿನ ಸಂದರ್ಭದಲ್ಲಿ ಮುರಿಗೆಪ್ಪನನ್ನು ಕರೆಯದೆ ಉಳಿದವರನ್ನು ಕರೆದರು. ಮುರಿಗೆಪ್ಪ ಹೊರಗಡೆ ಬಂದು ಅವರ ಬಗ್ಗೆ ಹಗುರವಾಗಿ ಮಾತನಾಡಿದಾಗ ದೇಹದ ಮೂತ್ರ ವಿಸರ್ಜನೆ ಭಾಗದಲ್ಲಿ ಇದ್ದಕ್ಕಿದ್ದಂತೆ ಉರಿ ಆರಂಭವಾಯಿತು. ಅದನ್ನು ಯಾರಿಗೂ ಹೇಳಲಿಲ್ಲ. ಸಹಜವಾಗಿಯೇ ಆತ ಹೆದರಿದ. ಸಂಜೆಯ ಸಂದರ್ಶನದಲ್ಲಿ ಬಾಬಾರು ಅವರನ್ನು ಕರೆದು, "ಹೀಗೆಲ್ಲ ಹಗುರವಾಗಿ ಮಾತನಾಡಬಾರದು. ಭಸ್ಮವನ್ನು ಹಚ್ಚಿಕೋ, ನಿನಗೆ ಒಳ್ಳೆಯದಾಗಲಿ" ಎಂದರು. ಅವನು ಉರಿಯ ಜಾಗಕ್ಕೆ ಭಸ್ಮ ಹಚ್ಚಿದಾಗ ಉಪಶಮನವಾಯಿತು. ಆತನ ಬಾಯಿಂದ ಈ ಕತೆ ಕೇಳಿದಾಗ, ಉರಿಯಲು ಆರಂಭವಾದುದು ಆಮೇಲೆ ಉಪಶಮನವಾದುದು ಇವುಗಳಿಗೆ ಮನೋವೈಜ್ಞಾನಿಕ ವಿವರಣೆ ಕೊಡಲು ಸಾಧ್ಯವಾದರೂ, ಆತ ಹಗುರ ಮಾತಾಡಿದ್ದು ಆತನಿಗೆ ಯಾತನೆ ಕಾಣಿಸಿಕೊಂಡುದು ಇವೆಲ್ಲ ಬಾಬಾರಿಗೆ ಗೊತ್ತಾದ ಬಗ್ಗೆ ವಿವರಣೆ ಕೊಡುವುದು ಕಷ್ಟವಾಗುತ್ತದೆ. ಮುರಿಗೆಪ್ಪ ಹೇಳಿದ್ದು ಒಂದು ಕಟ್ಟುಕತೆ ಎಂದು ತಕ್ಷಣದ ತೀರ್ಪು ಕೊಡುವುದಂತೂ ಅತಿ ಸುಲಭ.

ಒಟ್ಟಿಗೆ ಸುಖವಾಗಿ ಇದ್ದ ಕುಟುಂಬಗಳು ವಿಘಟನೆಗೊಂಡ ಎರಡು ಉದಾಹರಣೆಗಳನ್ನು ತಿಳಿದು ಖೇದವಾಯಿತು. ಅದಕ್ಕೆ ಸಂಬಂಧಪಡದ ಒಂದು ಸ್ವಾರಸ್ಯದ ಘಟನೆಯೊಂದಿದೆ. ನಮಗೆಲ್ಲ ಬೇಕಾಗಿದ್ದ ಶಿವಲಿಂಗಪ್ಪನ ಮಗಳ ವಿಷಯವನ್ನು "ಭದ್ರಮ್ಮ" ಎಂದು ಆಕೆಗೆ ಕಲ್ಪಿತ ಹೆಸರು ಕೊಟ್ಟು ಪತ್ರಿಕೆಯೊಂದಕ್ಕೆ ಬರೆದಿದ್ದೆ. ಅವಳ ನಿಜವಾದ ಹೆಸರು ರುದ್ರವ್ವ, ನಾನು ಹಿಂದೆ ಆ ಹಳ್ಳಿಗೆ ಹೋದಾಗ ಕತೆ ಕೇಳಲು ಸೇರುತ್ತಿದ್ದ ಮುಗ್ಧ ಹುಡುಗಿಯರಲ್ಲಿ ಒಬ್ಬಳು. ಆ ಊರಿನ ಒಂದು ಟ್ರಾಕ್ಟರ್ ರಿಪೇರಿಗಾಗಿ ಭದ್ರಾವತಿಯಿಂದ ಬಂದಿದ್ದ

ಯುವಕನೊಬ್ಬನನ್ನು ಅವಳು ಪ್ರೀತಿಸಿದಳು. ಅವನು ಲಿಂಗಾಯತೇತರ ಜಾತಿ ಹುಡುಗ, ಒಳ್ಳೆಯ ಹುಡುಗ. ಅವರ ವಿಷಯ ತಿಳಿದ ಶಿವಲಿಂಗಪ್ಪ ಮತ್ತು ಇತರರು ವಿರೋಧಿಸಿದರು, ಗಲಾಟೆ ಮಾಡಿದರು. ಹುಡುಗ ಹೆದರಿ ತನ್ನ ಊರಿಗೆ ವಾಪಸಾದ. ರುದ್ರವ್ವನನ್ನು ಹೆದರಿಸಿದರು, ಕೈಕಾಲು ಕಟ್ಟಿ ಭಾನಲಿಗೆ ಹಾಕುತ್ತೇವೆ ಎಂದರು. ಆದರೆ ಅವಳದು ಒಂದೇ ಮಾತು - "ನಾನು ಆ ಹುಡುಗನನ್ನೇ ಮದುವೆಯಾಗುತ್ತೇನೆ, ನೀವು ಏನಾದರೂ ಮಾಡಿಕೊಳ್ಳಿ". ನನ್ನ ಅವ್ವ ಹುಡುಗಿಯ ತಂದೆಗೆ ಬಹಳ ಹೇಳಿದರು, ನಾನು ಹೇಳಿದೆ - ಆದರೆ ಯಾವ ಮಾತನ್ನೂ ಶಿವಲಿಂಗಪ್ಪ ಕೇಳುವ ಸ್ಥಿತಿಯಲ್ಲಿರಲಿಲ್ಲ. ಅವರನ್ನು ನಾನು ಟೀಕಿಸಲಾರೆ. ಅನಕ್ಷರಸ್ಥರಾಗಿದ್ದ ಅವರ ಆ ನಡವಳಿಕೆಯ ಹಿಂದೆ ಸಂಪ್ರದಾಯದ ಮುಗ್ಧ ಅನುಸರಣೆ ಇತ್ತು. ಅವರಿಗೆ ತಮ್ಮ ಕುಟುಂಬದ ಗೌರವದ ಪ್ರಶ್ನೆ ಜೊತೆ ಇತರ ಮಕ್ಕಳ ಮದುವೆ ಪ್ರಶ್ನೆಯೂ ಮುಖ್ಯವಾಗಿತ್ತು. ಈ ಸಂದರ್ಭದಲ್ಲಿ ತೀರ ಅನಿರೀಕ್ಷಿತವಾದ ಘಟನೆ ನಡೆಯಿತು. ಹಳ್ಳಿಯನ್ನು ಬಿಟ್ಟು ಹೊರಗೆ ಎಂದೂ ಹೋಗದಿದ್ದ ರುದ್ರವ್ವ ಯಾರಿಗೂ ಹೇಳದೆ ಬಸ್ ಹತ್ತಿ ಭದ್ರಾವತಿಗೆ ಹೋಗಿ, ಆ ಹುಡುಗ ಊರು ಬಿಡುವಾಗ ಕೊಟ್ಟು ಹೋಗಿದ್ದ ವಿಳಾಸವನ್ನಿಟ್ಟುಕೊಂಡು ಅವರಿವರನ್ನು ಕೇಳಿ ಹುಡುಕಿ ಕೊನೆಗೂ ಹುಡುಗನ ಮನೆ ಪತ್ತೆ ಮಾಡಿ ಹುಡುಗನ ತಂದೆ ತಾಯಿಗಳಿಗೆ ತನ್ನ ಪರಿಚಯ ಹೇಳಿಕೊಂಡೇ ಬಿಟ್ಟಳು. ಅವರಿಗೆ ತಮ್ಮ ಹುಡುಗ ಹಳ್ಳಿಯ ಹುಡುಗಿಯೊಬ್ಬಳನ್ನು ಪ್ರೀತಿಸಿ, ಬೆದರಿಕೆಗೆ ಒಳಗಾಗಿ ಓಡಿ ಬಂದದ್ದು ಎಲ್ಲ ತಿಳಿದಿತ್ತು. ಅವರು ದೊಡ್ಡ ಮನಸ್ಸು ಮಾಡಿ ತಮ್ಮ ಸೊಸೆಯಾಗಿ ರುದ್ರವ್ವನನ್ನು ಸ್ವೀಕರಿಸಿಯೇ ಬಿಟ್ಟರು. ಕೊನೆಗೂ ಆ ಹಳ್ಳಿ ಹುಡುಗಿಯ ಪ್ರೀತಿ, ಅದು ತಂದುಕೊಟ್ಟಿದ್ದ ಧೈರ್ಯ ಛಲ ಇವು ಗೆದ್ದುವು. ಈ ವಿಷಯ ತಿಳಿದ ಶಿವಲಿಂಗಪ್ಪ ಮೊದ ಮೊದಲು ಹಾರಾಡಿದರೂ ಅವರಲ್ಲಿನ ತಂದೆತನ ಆ ಹಾರಾಟವನ್ನು ಮೌನಗೊಳಿಸಿತು. ಅವರೂ ಅವರ ಹೆಂಡತಿಯೂ ಆ ಬೇರೆ ಜಾತಿಯ ಹುಡುಗನನ್ನು ಒಪ್ಪಿ, ಮಗಳ ಮನೆಗೆ ಹೋಗಿ ಆಶೀರ್ವದಿಸಿ ಬಂದರು. ಹುಡುಗಿಯ ತಮ್ಮ ಆಗಾಗ್ಗೆ ಭದ್ರಾವತಿಗೆ ಹೋಗಿ ಬರುತ್ತಿದ್ದ. ಮಗಳನ್ನೂ ಅಳಿಯನನ್ನೂ ಹಳ್ಳಿಗೆ ಕರೆಸಿಕೊಳ್ಳುವ ಧೈರ್ಯವಿನ್ನೂ ಶಿವಲಿಂಗಪ್ಪನಿಗೆ ಬಂದಿಲ್ಲ. ಹಳ್ಳಿಗಳಲ್ಲಿ ಅಂತಹ ಧೈರ್ಯ ಯಾರಿಗೂ ಬರುವುದು ಕಷ್ಟವೇ, ಸದ್ಯ ಬರುವ ಸೂಚನೆಗಳೂ ಇಲ್ಲ.

ಮಂಟರಗಟ್ಟದ ಕರಿಬಸವಯ್ಯನವರ ತಂಗಿಯೇ ನಾನು ಉಳಿದುಕೊಂಡಿದ್ದ ಮರುಳಯ್ಯನವರ ಕುಟುಂಬ. ಕರಿಬಸವಯ್ಯ ಚಿಕ್ಕ ವಯಸ್ಸಿನಲ್ಲೇ ಹೆಂಡತಿ ಕಳೆದುಕೊಂಡು, ಧೈರ್ಯ ಮಾಡಿ ವಿಧವೆಯೊಬ್ಬಳನ್ನು "ಹಾರಿಸಿಕೊಂಡು" ಬಂದುದು ಒಂದು ರೋಚಕ ಕತೆ. ಅವರು ಆ ವಿಧವೆಯ ಜೊತೆ ಅವಳ ಮಗನನ್ನೂ ಒಪ್ಪಿಕೊಂಡು ಅವನಿಗೆ ಪ್ರೀತಿಯಿಂದ ಆಸ್ತಿ ಮಾಡಿದರು. ಅವರ ಮೊದಲ ಹೆಂಡತಿಯ ಮಗನನ್ನೂ ಬೆಳೆಸಿದರು. ಪ್ರಾಥಮಿಕ ಶಾಲಾ ಉಪಾಧ್ಯಾಯರಾಗಿದ್ದ ಕರಿಬಸವಯ್ಯನವರು ನನ್ನ ಹಿರಿಯರು ಮತ್ತು ಸಮೀಪ ಬಂಧುವೂ ಆಗಬೇಕು. ಅವರು ವಿಧವೆ ಜೊತೆ ಬದುಕಿ ಸಂಸಾರ ಮಾಡಿದ್ದು ಆ ಕಾಲಕ್ಕೆ (ಈ ಕಾಲಕ್ಕೂ) ಧೈರ್ಯದ ಕೆಲಸ, ಆದರ್ಶದ ಕೆಲಸ.

ಮಲ್ಲಾಪುರದ ಮುಖ್ಯ ದೈವ ವೀರಭದ್ರದೇವರು. ಅದರ ದೇವಾಲಯ ತೀರ ಸರಳ. ಊರ ಹೊರಗೆ ವಿಶ್ವಕರ್ಮರು ಪೂಜಿಸುವ ಕಾಳಮ್ಮನ ಗುಡಿ ಜೀರ್ಣೋದ್ಧಾರಗೊಂಡಿದೆ. ಕಾಳಮ್ಮ (ಕಾಳಿಕಾಂಬ) ವೀರಭದ್ರನ ಪತ್ನಿ ಎಂದು ಜನ ನಂಬುತ್ತಾರೆ. ಊರಲ್ಲಿ ಲಿಂಗಾಯತರನ್ನು ಬಿಟ್ಟರೆ ಉಳಿದಂತೆ ಕುರುಬರು, ಬೇಡರು, ಹರಿಜನರು ಇದ್ದಾರೆ. ಕುರುಬರ ಹಟ್ಟಿಯಲ್ಲಿ ಬೀರೇದೇವರ ಗುಡಿ ಇದೆ. ಅಲ್ಲಿನ ಕುರುಬರು ಬಾರಿಸುವ ಡೊಳ್ಳು ಗಾತ್ರದಲ್ಲಿ ದೊಡ್ಡದು. ಯುವಕರು ಈ ಭಾರಿ ಡೊಳ್ಳುಗಳನ್ನು ಕಟ್ಟಿಕೊಂಡು ಕುಣಿಯುತ್ತ ಬಾರಿಸುವ ದೃಶ್ಯ ರೋಮಾಂಚಕಾರಿ.

ಮಧ್ಯಾಹ್ನ ಅಂದು ಊರಲ್ಲಿ ನಡೆದ ಮದುವೆಗಳ ಸೋಬಾನೆ ಪದಗಳು ಕೇಳಿಸಿದುವು. ಅವು ರೆಕಾರ್ಡ್ ಹಾಡುಗಳಲ್ಲ, ಹೆಂಗಸರ ಹೃದಯಗಳಲ್ಲಿ ರೆಕಾರ್ಡ್ ಆಗಿ ಅವರ ಬಾಯಿಂದ ನೇರವಾಗಿ ಬಂದುವು. ನನಗೆ ಬಹು ಸಂತೋಷವಾಯಿತು. ರಾತ್ರಿ ಟ್ರಾಕ್ಟರಿನಲ್ಲೊಂದು, ಎತ್ತಿನ ಬಂಡಿಯಲ್ಲೊಂದು ದಂಪತಿಗಳ ಮೆರವಣಿಗೆಗಳು ; ಎರಡಕ್ಕೂ ಧ್ವನಿವರ್ಧಕ ಸಿಕ್ಕಿಸಿ ಸಿನಿಮಾ ಹಾಡು ಹಾಕಿದ್ದರು. ಮೆರವಣಿಗೆ ಮುಂಭಾಗದಲ್ಲಿ ಹುಡುಗರ (ಕೆಲವರು ಕುಡಿದಿದ್ದರೋ ಏನೋ) ಕುಣಿತ; ಕಳಶ ಹಿಡಿದ ಮುತ್ತೈದೆಯೊಬ್ಬಳು ಗ್ಯಾಸ್‌ಲೈಟ್ ಬೆಳಕಿನಲ್ಲಿ ಕಂಗಾಲಾಗಿ ಜನಗಳ ಮಧ್ಯೆ ಸಿಕ್ಕಿಕೊಂಡು ಅನಾಥಳಂತೆ ಒದ್ದಾಡುತ್ತಿದ್ದಳು. ಆ ದೃಶ್ಯ ಬಹು ಸಾಂಕೇತಿಕ. ರಾತ್ರಿ ಹತ್ತು ಗಂಟೆಯವರೆಗೆ ಸುಮಾರು 30-40 ಮಕ್ಕಳನ್ನು ಕೂರಿಸಿಕೊಂಡು ಅನೇಕ ಕತೆ ಹೇಳಿದೆ. ಒಂದೂ ಆಕಳಿಸಲಿಲ್ಲ. ಬದಲು ಇನ್ನಷ್ಟು ಹೇಳಿ ಎನ್ನುತ್ತಿದ್ದುವು. ದೊಡ್ಡವರೂ ಕಣ್ಣು ಬಾಯಿ ಬಿಟ್ಟುಕೊಂಡು ಕತೆ ಕೇಳಿದರು.

## ಶಾಗಲೆ

ಬೆಳಿಗ್ಗೆ (2.6.85) ಟೀ ಕುಡಿದು ಹೊರಟೆ. ನಾನು ಹುಟ್ಟಿ ಬೆಳೆದ ಹಳ್ಳಿ ಹಿರೇಕೋಗಲೂರು ಸಮೀಪಿಸುತ್ತಿತ್ತು. ಅಲ್ಲೇ ಪಕ್ಕದಲ್ಲೇ ಚನ್ನಗಿರಿ ತಾಲೂಕಿಗೇ ದೊಡ್ಡದೆನ್ನಬಹುದಾದ ಹನುಮಂತನ ದೇವಾಲಯ, ಚಿಕ್ಕ ಕೋಗಲೂರಿನಲ್ಲಿ. ಅದಕ್ಕೆ ಮುಂಚೆಯೇ ಎಡಕ್ಕೆ ತಿರುಗಿದರೆ ದೊಡ್ಡ ಕೆರೆ, ನನ್ನ ಬಾಲ್ಯದ ಮಧುರ ನೆನಪುಗಳನ್ನು ತರುವ ಜಾಗ. ಆ ಕೆರೆಯ ಕೋಡಿಯ ಬಳಿಯೇ ನನ್ನ ತಂಗಿಯರಿಗೆ ಕೊಟ್ಟ ಗದ್ದೆ. ಕೋಡಿ ಸಮೀಪ ಒಂದು ಮಿಂಚುಳ್ಳಿ ಹಾರಿ ಬಂದು ನೀರ ಮೇಲೆ ಬಯಲಲ್ಲಿ ಒಂದು ಕ್ಷಣ ನಿಂತು ಗಬಕ್ಕನೆ ನೀರಿಗೆ ಬಿದ್ದು ಮೀನು ಹಿಡಿದು ಮತ್ತೆ ಮೇಲಕ್ಕೆ ಹಾರಿತು. ಆ ದೃಶ್ಯ ನನಗೆ ಚಿರಪರಿಚಿತವಾದರೂ ಆ ದಿನ ಏಕೋ ಅದು ಅರ್ಥವನ್ನು ಪಡೆದುಕೊಂಡಿತು. ಆ ಕೆರೆಯಲ್ಲಿ ನಾನು ಬಿದ್ದದ್ದು ಹಾರಿದ್ದು ಈಜಿದ್ದು ಮುಳುಗಿ ನೀರು ಕುಡಿದು ಯಾರೋ ಎತ್ತಿದಾಗ ಏದುಸಿರು ಬಿಡುತ್ತ ದಡಕ್ಕೆ ಬಂದದ್ದು, ಐನೂರೊಂದು ಬಾರ್ ಸೋಪಿನಲ್ಲೋ ಸನ್‌ಲೈಟ್ ಸೋಪಿನಲ್ಲೋ ಬಟ್ಟೆ ಒಗೆದು ಏರಿ ಮೇಲಿನ ತಂಗಡಿಕೆ ಗಿಡಗಳ ಮೇಲೆ ಒಣಗಲು ಹಾಕಿದ್ದು, ಕೆರೆ ಹಿಂದಿನ ಪೊದೆಗಳಿಗೆ ನುಗ್ಗಿ ಜೇನು ಕಿತ್ತದ್ದು ಇತ್ಯಾದಿ ನಲವತ್ತರ ದಶಕದ ಬಾಲ್ಯದ ನೆನಪುಗಳು ಉಕ್ಕಿ ಹರಿದುವು. ಆ ಕೆರೆಯಲ್ಲಿ ಸಾಕಷ್ಟು ಜೊಂಡು

ಬೆಳೆದಿತ್ತು. ಅಲ್ಲಲ್ಲಿ ಸುಂದರ ಹಕ್ಕಿಗಳು ತೇಲುತ್ತಿದ್ದುವು. ಕೆರೆಯ ಹಿಂದೆ ಗದ್ದೆಗಳ ಹಚ್ಚ ಹಸುರಿನ ಹಾಳೆ. ಕೆರೆಗೆ ಛಾನಲ್ ನೀರು ಬಿಟ್ಟಿರುವುದರಿಂದ ಅದು ಒಣಗುವ ಪ್ರಶ್ನೆಯೇ ಇಲ್ಲ. ಕೆರೆ ಏರಿ ಮೇಲಿದ್ದ ಸುಣ್ಣ ಬಳಿದ ಏಳು ಕಲ್ಲುಗಳ "ಕನ್ನಿಕೇರು" - ಮೇಲೆ ಚಿಕ್ಕ ಗೂಡು ಕಟ್ಟಿ ಗುಡಿ ತರಹ ಮಾಡಿದ್ದಾರೆ. ಕೆರೆ ಏರಿ ದಾಟಿ ಊರ ಹತ್ತಿರ ಬರುತ್ತಿದ್ದಂತೆ ಶಾಗಲೆ ಚನ್ನಯ್ಯನ ಭೇಟಿ ಆಯ್ತು. ಆತ ನನ್ನ ಚಿಕ್ಕವ್ವನ ಅಳಿಯ, ಬಡ್ಡಿ ವ್ಯವಹಾರ ಇಟ್ಟುಕೊಂಡ ನೇರ ಮೆದು ಸ್ವಭಾವದ ವ್ಯಕ್ತಿ. ಅದೇ ಸೂರ್ಯೋದಯವಾಗುತ್ತಿತ್ತು. ಎದುರಿಗೆ ದನಗಳ ಗೋಮೂತ್ರವನ್ನು ("ಗ್ವಾತ") ಕೊಡಗಳಲ್ಲಿ ತುಂಬಿಕೊಂಡು ತಿಪ್ಪೆಗೆ ಸುರಿಯಲು ಹೋಗುತ್ತಿದ್ದರು. ಊರ ಪ್ರವೇಶ ದ್ವಾರದಲ್ಲೇ ಬಲಗಡೆ ವೀರಭದ್ರದೇವರ ಗುಡಿಯೂ ಅದರ ಹಿಂಬದಿಯ ಹನುಮಂತನ ಗುಡಿಯೂ ಆಧುನೀಕೃತಗೊಂಡಿವೆ, ಆಧುನಿಕತೆಯ ನೆಪದಲ್ಲಿ ಸ್ವಲ್ಪ ವಿಕೃತಗೊಂಡಿವೆ. ಹಿಂದಿನ ಕಾಲದ ದೇವರ ವಿಗ್ರಹವೊಂದನ್ನು ಬಿಟ್ಟರೆ ಅದೊಂದು ದೇವಾಲಯ ಅನ್ನಿಸದಂತಹ ರೂಪವನ್ನು ಅನೇಕ ಹಳ್ಳಿ ದೇವಾಲಯಗಳು ಪಡೆಯುತ್ತಿವೆ (ಒಳಭಾಗದಲ್ಲಿ ಕೆಲವೆಡೆ ನೆಲಕ್ಕೆ ಮೊಜೇಯಿಕ್ ಕೂಡ ಮಾಡಿಸಿರುವುದುಂಟು).

ನಾನು ಊರೊಳಕ್ಕೆ ಹೋಗಲಿಲ್ಲ. ಊರ ಹೊರಗೆ ಪ್ರಾಥಮಿಕ ಶಾಲಾ ಉಪಾಧ್ಯಾಯ, ನನ್ನ ಸೋದರ ಮಾವನ ಮಗ ಪಂಚಾಕ್ಷರಯ್ಯನ ಮನೆಗೆ ಹೋದೆ. ಎದುರಿಗೆ ನನ್ನ ಇನ್ನೊಬ್ಬ ಸೋದರ ಮಾವನ ಮಗ ಈಶ್ವರಯ್ಯ ಸೆಗಣಿಬುಟ್ಟಿ ಹೊತ್ತು ಎದುರಿಗೆ ಬಂದ. ಕಿತ್ತು ತಿನ್ನುತ್ತಿದ್ದ ಜಂಗಮರ ಹಿಂದಿನ ಬಡತನವನ್ನು ಅಮೂಲ್ಯ ಆಸ್ತಿಯೆಂಬಂತೆ ಉಳಿಸಿಕೊಂಡಿರುವ ಏಕಮಾತ್ರ ಕುಟುಂಬ ಅದು. ಅವನ ಸೋದರ ಕರಿಬಸವಯ್ಯ ಹುಚ್ಚನಾಗಿ ಅಲೆಯುತ್ತಿದ್ದಾನಂತೆ. ಅವರ ಮನೆಯ ಎದುರಿನ ಪಕ್ಕದ ಹೆಂಚಿನ ಮನೆಯೇ ನಾನು ಹುಟ್ಟಿದ ಮನೆ ; ನನ್ನ ತಾಯ ತೌರ್ಮನೆ.

ಪಂಚಾಕ್ಷರಯ್ಯ ಊರ ಹೊರಗೆ ಕಣದಲ್ಲಿ ತಕ್ಕಮಟ್ಟಿಗೆ ದೊಡ್ಡದಾದ ಮಂಗಳೂರು ಹೆಂಚಿನ ಮನೆ ಕಟ್ಟಿದ್ದಾನೆ. ಅವನ ಮನೆಯಲ್ಲಿ ಉಪಾಹಾರ ಮುಗಿಸಿ ಊರ ಹೊರಗೆ ತೋಟದಲ್ಲಿ ಮನೆ ಕಟ್ಟಿರುವ ಇನ್ನೊಬ್ಬ ಬಂಧು ನಂದ್ಯಯ್ಯನವರನ್ನು ಮಾತನಾಡಿಸಿಕೊಂಡು ಹಾಗೇ ಹೊರಟೆ. ನನ್ನ ಹಳ್ಳಿಯಲ್ಲಿ ಇದ್ದುದ್ದು ಕೇವಲ ಅರ್ಧ ಗಂಟೆ ಮಾತ್ರ (ನನ್ನ ಜೀವನ ಸ್ಮೃತಿಯಲ್ಲಿ ಆ ಹಳ್ಳಿಯ ಬಗ್ಗೆ ಸಾಕಷ್ಟು ಬರೆಯಲಿದ್ದೇನೆ). ಕೋಗಲೂರು ಮಲ್ಲಾಪುರಕ್ಕಿಂತ ಹೆಚ್ಚು ಆಧುನಿಕ ಗ್ರಾಮ. ಜನ ಮಲ್ಲಾಪುರದ ಜನರಷ್ಟು ಶ್ರಮಜೀವಿಗಳಲ್ಲವೆಂಬುದು ಅಲ್ಲಿನ ಪ್ರತೀತಿ. ಊರಿನ ಶೇಕಡ ಐವತ್ತರಷ್ಟು ಜಮೀನು ಮಾತ್ರ ಕಾಲುವೆ ನೀರಿನಿಂದಾಗಿ ಗದ್ದೆಗಳಾಗಿವೆ. ನನ್ನ ಚೀಲವು ಮೋಟಾರ್ ಬೈಕ್ ಮೇಲೆ ಶಾಗಲೆಗೆ ಹೋದುದರಿಂದ ಕೈಯಲ್ಲಿ ನೀರಿನ ಬಾಟ್ಲಿ ಇದ್ದ ಕೈ ಚೀಲ ಮಾತ್ರ ಇತ್ತು.

ಇರುಗನಹಳ್ಳಿಗೆ ಒಳದಾರಿಯಿಂದ ಹೊರಟೆ. ಬಾಲ್ಯದಲ್ಲಿ ಶಾಗಲೆಯ ನನ್ನ ದೊಡವ್ವ ಚಿಗವ್ವರನ್ನು ನೋಡಲು ಹೋಗಿ ಹೋಗಿ ಸವೆದ ದಾರಿ ಅದು. ಉಕ್ಕೆ ಹೊಡೆದ ಹೊಲಗಳ ಮಧ್ಯೆ ಕಾಲುದಾರಿ ಬಾಗಿ ಬಾಗಿ ಸಾಗಿತ್ತು. ಮಳೆಯಿಲ್ಲದೆ ಎರೆ ಹೊಲಗಳು ಅಗಲವಾಗಿ

ಬಿರುಕು ಬಿಟ್ಟಿದ್ದುವು. ಬಿದ್ದ ಮಳೆಯ ನೀರು ಆ ಬಿರುಕುಗಳ ಒಳಗೆ ಇಳಿದು ಮಣ್ಣನ್ನು ಕಲಸಿ ಬಿರುಕುಗಳನ್ನು ಮುಚ್ಚಿಬಿಡುತ್ತದೆ. ಎರೆ ಮಣ್ಣು ಕಪ್ಪು ಮಣ್ಣು. ಆದರೇನಂತೆ ಚಿನ್ನದ ಮಣ್ಣು.

ಇರುಗನಹಳ್ಳಿಯಲ್ಲಿ ಗುಡಿಸಲುಗಳು ಮಾತ್ರ ಹಿಂದೆ ಇದ್ದುವು. ಈಗ ಹೊಸ ಊರಲ್ಲಿ ತಕ್ಕ ಮಟ್ಟಿನ ಒಳ್ಳೆಯ ಮನೆಗಳು ಬಂದಿವೆ. ಅಲ್ಲೇ ಇದ್ದ ಹನುಮಂತಹ ಗುಡಿ ಒಳಗೆ ಒಂದು ಕತ್ತಿ, ಎರಡು ಕಲ್ಲು ಗುಂಡುಗಳು. ಆ ಊರಿನ ಸಮೀಪ ಕೋಟೆ ಇದ್ದ ಸೂಚನೆ ಆ ಗುಂಡುಗಳು. ಇಡೀ ಊರು ಸ್ಥಳಾಂತರಗೊಂಡಿದೆ. ಹಳೆಯ ಊರಿನಲ್ಲಿ ಒಂದೆರಡು ಗುಡಿಗಳು. ಇನ್ನು ಊರ ಸುತ್ತ ಗದ್ದೆಗಳು, ಹಾಗೆಯೇ ಜೌಗು ನೆಲ. ಆ ಜೌಗಿನಲ್ಲಿ ಜೊಂಡು ಆರೆಂಟು ಅಡಿ ಬೆಳೆದಿತ್ತು. ನೀರ ಮಧ್ಯದ ಅಂತಹ ಆರೆಂಟು ಜೊಂಡು ಕಡ್ಡಿಗಳನ್ನು ಸೇರಿಸಿ ಹೊಲೆದು, ಆ ಗುಚ್ಛಕ್ಕೆ ಹುಲ್ಲಿನಲ್ಲಿ ಹೆಣೆದಿರುವ ತೂಗುಮಂಚದ ಗೂಡುಗಳನ್ನು ಹಳದಿ ತಲೆಯ ಸುಂದರ ಹಕ್ಕಿಗಳು ಕಟ್ಟಿವೆ. ಅವುಗಳ ಕೌಶಲ ಅವರ್ಣನೀಯ. ಮರಗಳಲ್ಲಿ ಗೂಡು ಕಟ್ಟುತ್ತವೆ ಹಕ್ಕಿಗಳು. ಆದರೆ ತಮ್ಮ ಮಕ್ಕಳಿಗಾಗಿ ಇಲ್ಲಿ ಜೊಂಡು ಕಡ್ಡಿ ಸೇರಿಸಿ ಕಟ್ಟಿ ಅವುಗಳಿಗೆ ಗೂಡು ಹೆಣೆದು ತೂಗು ಹಾಕಿರುವ ರೀತಿ ಕುಶಲಕರ್ಮಿಗಳು ನೋಡಿ ಕಲಿಯಬೇಕಾದ್ದು.

ಇಡೀ ಬೆಳಗಿನ ವಾತಾವರಣ ಆಹ್ಲಾದಕರವಾಗಿತ್ತು. ಆ ದಿನ ನನಗೆ ಬೆಂಗಳೂರಿನಲ್ಲಿ ಕನ್ನಡದಲ್ಲಿ ಕಾಳಜಿ ಇರುವ ಜನರ ರಾಜ್ಯಮಟ್ಟದ ಮಹಾಸಭೆಯೊಂದನ್ನು ಕರೆದು ಕನ್ನಡಪರ ಕೇಂದ್ರ ಸಂಸ್ಥೆಯೊಂದನ್ನು ಸ್ಥಾಪಿಸುವ ಆಲೋಚನೆ ಹೊಳೆಯಿತು. ಆ ಸಂಘಟನೆಯ ಕಚೇರಿ ಬೆಂಗಳೂರಲ್ಲಿ; ಆ ಕಚೇರಿಗೆ ಜಾಗ, ಬೆರಳಚ್ಚು ಯಂತ್ರ, ಅದಕ್ಕೊಬ್ಬ ಬೆರಳಚ್ಚುಗಾರ ಅಗತ್ಯ. ಅದನ್ನು ನಡೆಸಲು ಬೇಕಾಗುವ ಹಣಕ್ಕಾಗಿ ಹಳ್ಳಿಯಿಂದ ಹಳ್ಳಿಗೆ ಪಟ್ಟಣದಿಂದ ಪಟ್ಟಣಕ್ಕೆ ಹತ್ತು ಹದಿನೈದು ಜನಗಳ (ಕಾರ್ಯಕರ್ತರ) ಜಾಥ. ಆ ಜಾಥ ಮೂಲಕ ಧನ ಸಂಗ್ರಹ, ಕನ್ನಡದ ಸಮಸ್ಯೆಗಳನ್ನು ಒಳಗೊಂಡ ಕರಪತ್ರ ವಿತರಣೆ, ಭಾಷಣಗಳ ಮೂಲಕ ಪ್ರಚಾರ. ಉದ್ದಕ್ಕೂ ಜನರಿಂದ ಕನ್ನಡಕ್ಕಾಗಿ ದುಡಿಯುವ ಪ್ರತಿಜ್ಞಾವಚನ ಸ್ವೀಕಾರ. ಜನತೆಯ ಅಮಿತೋತ್ಸಾಹದ ಕನಸನ್ನು ಕಾಣತ್ತಿದ್ದಂತೆ ದೇಹದಲ್ಲಿ ಏನೋ ಮಿಂಚಿನ ಸಂಚಾರವಾಯಿತು. "ಅಭೀಃ ಅಭೀಃ" "ರವಿಗಿಲ್ಲದ ಭಯ, ಶಶಿಗಿಲ್ಲದ ಭಯ, ತಾರಾ ನಿವಹಕೆ ಇರದ ಭಯ.... ನಿನಗೇತಕೆ ಬಿಡು, ಅಣು, ಶ್ರದ್ಧೆಯನಿಡು, ನಿನ್ನನೆ ನೈವೇದ್ಯವ ನೀಡು"; "ಎಲ್ಲಾದರು ಇರು..." "ಉದಯವಾಗಲಿ..." ಇಂತಹ ಗೀತಗಳು ಶ್ಲೋಕಗಳು ಬಾಯಿಂದ ಹೊರ ಹೊಮ್ಮಿದುವು. ಏರಿದ ಉತ್ಸಾಹದಿಂದ, ದಡ ದಡ ಬಡಿಯುವ ಹೃದಯದೊಡನೆ ತಗ್ಗಿನಿಂದ ಒಂದು ಏರನ್ನು ಹತ್ತಿದೆ. ನನಗೆ ಬಾಲ್ಯದಿಂದ ಪರಿಚಿತವಾದ ಗಿಡ್ಡೇನಹಳ್ಳಿ ಬುರುಜು - ಅಲ್ಲಿಂದ ಸುತ್ತಮುತ್ತ ಮೂವತ್ತು ಮೈಲಿಗಳ ದೂರದವರೆಗೆ ಎಲ್ಲವೂ ಕಾಣಿಸುತ್ತದೆ. ಸಮೀಪದ ಯಾವನೋ ಪಾಳೆಗಾರ (ಇರುಗನ ಹಳ್ಳಿಯವನು ? 'ಇರುಗ' ಎಂಬ ಹೆಸರಿನವನು?) ಕಟ್ಟಿಸಿದ ವೀಕ್ಷಣಾಲಯ ಅದು. ಅದು ಕಾಲ ಕಳೆದಂತೆ ಕರಗಿ ಹೋಗಿದ್ದರೂ ಅದಿನ್ನೂ ಇದ್ದುವರಲ್ಲಿ ಗಟ್ಟಿಯಾಗಿಯೇ ಉಳಿದಿರುವುದು ನನಗೆ ವಿಸ್ಮಯ ಉಂಟುಮಾಡಿತು. ಆ

ಬುರುಜು ಹತ್ತಿ ಇಳಿದೆ. ಶಾಗಲೆಯ ದಾರಿಯಲ್ಲಿ ನಾನು ಬಾಲ್ಯದಲ್ಲಿ ಕಂಡಿದ್ದ ಬಿಲ್ವಪತ್ರೆ ಮರ ಬಹಳ ದೊಡ್ಡದಾಗಿ ಬೆಳೆದಿತ್ತು. ನಾನು ಚಿಕ್ಕವನಾಗಿದ್ದಾಗ "ಶಾಗಲೆ ಅಜ್ಜ" ಎಂದೇ ಪ್ರಸಿದ್ಧರಾದ ಕರಿಸಿದ್ಧಯ್ಯನವರೆಂಬ ಎತ್ತರದ, ನಸುಬಾಗಿದ ವ್ಯಕ್ತಿ ಇದ್ದರು. ಅವರು ಜನರಿಗೆ ಔಷಧ ಕೊಡುವ ನಾಟಿ ವೈದ್ಯರಾಗಿದ್ದರು. ಅವರು ದೈವೀಶಕ್ತಿಗಳನ್ನು ವಶಪಡಿಸಿಕೊಂಡವರೆಂಬ ನಂಬಿಕೆ ಇದ್ದುದರಿಂದ ತಿಳಿದವರು ಯಾರೂ ಅವರ ಹೊಲಗಳಲ್ಲಿ ಕಳ್ಳತನದಿಂದ ತೆನೆ ಕೀಳುತ್ತಿರಲಿಲ್ಲ ಮಾತ್ರವಲ್ಲ, ಅವರ ಹೊಲದ ಮಾವಿನ ಮರದಲ್ಲಿ ಎಷ್ಟೇ ಕಾಯಿ ಹಣ್ಣುಗಳಿದ್ದರೂ ಕೀಳಲೂ ಹೋಗುತ್ತಿರಲಿಲ್ಲ. ಆ ಮಾವಿನ ಮರ ಅಲ್ಲಿತ್ತು. ಶಾಗಲೆ ಅಜ್ಜ ಈಗ ಇಲ್ಲ. ಎಲ್ಲರಂತೆ ನಾನೂ ಅವರಿಗೆ ಬಹಳ ಹೆದರುತ್ತಿದ್ದೆ. ಇಲಿ ಕಡಿದಿದೆಯೆಂದು ನನ್ನ ತಂದೆ ಅವರ ಹತ್ತಿರ ಔಷಧಿ ಕೊಡಿಸಿದ್ದರು.

ಶಾಗಲೆ ಮಾವಿನ ಮರಗಳಿಗೆ ಬಹಳ ಪ್ರಸಿದ್ಧಿ. ಹುಳಿ, ಸಿಹಿ, ಅರೆ ಸಿಹಿ, ಒಗರು ಇತ್ಯಾದಿ ಎಷ್ಟೋ ಜಾತಿಯ ನೂರಾರು ಮಾವಿನ ಮರಗಳು ಆ ಊರ ಸುತ್ತ ಮುತ್ತ. ಮಾವಿನಹಣ್ಣು ಸುಗ್ಗಿಯಲ್ಲಿ ನಾವು ಹೋದರೆ ಬುಟ್ಟಿಯಲ್ಲಿ ಒತ್ತು ಹಾಕಿದ ಮಾವಿನ ಹಣ್ಣುಗಳು ನಮ್ಮ ಎದುರಿಗೆ ಹಾಜರು. ಸಿಪ್ಪೆ ಸುಲಿದು ಅಥವಾ ಬಾಯಿ ಹಾಕಿ ಸಿಪ್ಪೆ ಸುಗಿದು, ಬೆರಳ ಮಧ್ಯೆ ಮಾವಿನ ಹಣ್ಣಿನ ರಸ ಇಳಿಯುತ್ತಿದ್ದಂತೆ ಅದನ್ನು ನೆಕ್ಕುತ್ತ ಇಡೀ ಹಣ್ಣನ್ನು ಬೋಳುಮಾಡಿ, ಕೊನೆಗೆ ನಾರಿನ ಮಾವು ಆಗಿದ್ದರೆ ವಾಟೆ ಮೇಲಿನ ನಾರು ಒಂದು ಒಣ ಜುಟ್ಟಾಗುವ ತನಕ ಅದರ ಒಳಗಿನ ರಸ ಹೀರಿ ವಾಟೆಯನ್ನು ಅಲ್ಲೇ ದನದ ಕೊಟ್ಟಿಗೆಗೆ ಎಸೆಯುವುದು ನಮಗೆ ಪ್ರಿಯ ಹವ್ಯಾಸವಾಗಿತ್ತು : ಅಂಗಿಯ ಮುಂಭಾಗವೆಲ್ಲ ಹೊಂಬಣ್ಣ.

ಶಾಗಲೆ ಊರ ಅಂಚಿನಲ್ಲಿ ಒಬ್ಬ ಹುಡುಗ ಕೂಳೆಗಳನ್ನು ತುಂಬಿದ್ದ ಬಿದಿರಿನ ಜಲ್ಲೆ ಹೊತ್ತು ಬರುತ್ತಿದ್ದ. "ಈಗಲೂ ನಿಮ್ಮ ಊರಲ್ಲಿ ಸಿಡಿ ಆಡ್ತಾರಾ" ಎಂದು ನಾನು ಕೇಳಿದ್ದಕ್ಕೆ - "ಆಡ್ತಾರೆ. ನಮ್ಮವ್ವ ಈ ವರ್ಷ ಸಿಡಿ ಆಡ್ಲಿಲ್ಲ, ಸೂತ್ಕ ಆಗಿದ್ದಳು" ಎಂದ. ಊರ ಹೊರಗೆ ಸಿಡಿ ಆಡುವ ಜಾಗ ಆಲದಮರ. ನನ್ನ ಚಿಕ್ಕಮ್ಮನ (ಚಿಗವ್ವನ) ಮಕ್ಕಳು ಮಹಾದೇವಯ್ಯ ಶೇಖರಯ್ಯರ ಮನೆಗೆ ಹೋದೆ (ಎರಡೂ ಅಕ್ಕ ಪಕ್ಕದಲ್ಲಿವೆ). ದಾರಿಯಲ್ಲೇ ಮಹಾದೇವಯ್ಯನ ಹೆಂಡತಿ ತೋಟಕ್ಕೆ ಹೊರಟಿದ್ದವರು ನನ್ನನ್ನು ನೋಡಿ ನನ್ನ ಜೊತೆಗೇ ಬಂದರು. ಅವರದೆಲ್ಲ ಹಿಂದೆ ಬಡತನದ ಕುಟುಂಬ. ಆದರೆ ನಾಲೆಯಿಂದಾಗಿ ಈಗ ಒಳ್ಳೆ ಮನೆ ಕಟ್ಟಿಕೊಂಡಿದ್ದಾರೆ. ಮಕ್ಕಳು ತಕ್ಕಮಟ್ಟಿನ ವಿದ್ಯಾವಂತರಾಗಿದ್ದಾರೆ. ಮನೆಯಲ್ಲಿ ಸೈಕಲ್ ರೇಡಿಯೋ ಇವೆ. ಆಹಾರದಲ್ಲೂ ತಕ್ಕಮಟ್ಟಿನ ಸುಧಾರಣೆ ಇದೆ. ಅಲ್ಲೇ ಇರುವ ನನ್ನ ದೊಡವ್ವನ ('ದೊಡ್ಡಿ' ಎಂದೇ ಕರೆಯುತ್ತಿದ್ದೆವು. ಚಿಕ್ಕವ್ವ ನಮ್ಮ ಬಾಯಲ್ಲಿ 'ಚಿಕ್ಕಿ' ಆಗುತ್ತಿದ್ದಳು) ಮಕ್ಕಳ ಕುಟುಂಬಗಳು ಅದೇ ಹೀನ ಬಡಸ್ಥಿತಿಯಲ್ಲಿವೆ. ಒಂದು ಮನೆಯಲ್ಲಿ 'ಐನೋರ ಬೆತ್ತ' ಇತ್ತು. ನನ್ನ ಬಂಧುವೊಬ್ಬರು "ನೀವು ಏಕೆ ಹೊರಟಿದ್ದೀರಿ?, ಅದೇ ಸಮಸ್ಯೆ" ಎಂದು ಬಹಳ ತಲೆಕೆಡಿಸಿಕೊಂಡರು.

ಮಧ್ಯಾಹ್ನ ವಿಶ್ರಾಂತಿ ಆದ ಮೇಲೆ 'ಶಾಗಲೆ ಅಜ್ಜ'ನವರ ಮನೆಗೆ ಹೋದೆ. ಅವರ ಮೊಮ್ಮಗ ದಾವಣಗೆರೆ ಕೆ.ಇ.ಬಿ.ಯಲ್ಲಿ ಜೂನಿಯರ್ ಇಂಜಿನಿಯರ್. ನನ್ನ ಹೆಂಡತಿ ತಂಗಿ ನಂದಿತಾಳನ್ನು ಮದುವೆ ಆಗಲು ಒಪ್ಪಿದ್ದ; ಆದರೆ ಆಕೆ ಹಳ್ಳಿಯಲ್ಲೇ ಇರಬೇಕು ಎಂಬ ಕರಾರು ಹಾಕಿದ್ದರಿಂದ ನಂದಿತಾ ಮದುವೆ ತಿರಸ್ಕರಿಸಿದ್ದಳು. ಈಗ 'ಶಾಗಲೆ ಅಜ್ಜ' (ಕರಿಸಿದ್ಧಯ್ಯ) ಇಲ್ಲದಿದ್ದರೂ ಅವರನ್ನು ಜನ ಮರೆತಿಲ್ಲ. ಆ ಕಾಲಕ್ಕೆ ಆ ಪ್ರದೇಶಕ್ಕೆ ಪವಾಡ ಪುರುಷ ಎನ್ನಿಸಿದ್ದ ಅವರ ಬಗ್ಗೆ ಮಾಹಿತಿ ಸಂಗ್ರಹಿಸಿದೆ. ಅವರಿಗೆ ಔಷಧಿ ಕೊಡುವುದರಲ್ಲಿ ಸಿದ್ಧಿಯಾದಂತೆಯೇ ಮಾಟಮಂತ್ರಗಳಲ್ಲೂ ಸಿದ್ಧಿ ಲಭಿಸಿತ್ತು. ಅವರು ಮೂಲತಃ ಹರಿಹರದ ಬಳಿಯ ದುಗ್ಗತ್ತಿಯವರು. ಅವರು ಹುಟ್ಟಿದ್ದು ಹರಿಹರದ ಸೇತುವೆ ಮೇಲೆ - ಆಗ ಸೂರ್ಯ ಅರ್ಧ ಹುಟ್ಟಿದ್ದ (ಇನ್ನು ಅರ್ಧ ಮುಳುಗಿದ್ದ) ; ಆ "ಅರ್ಧೋದಯ"ದಲ್ಲಿ ನೀರಿನ ಸೇತುವೆ ಮೇಲೆ ಹುಟ್ಟಿದ್ದು ವಿಶೇಷ. ಅವರು ಶಾಗಲೆ ಕಡೆ ಬಂದಾಗ ಅಲ್ಲಿನ ಜನ ಅಲ್ಲೇ ಅವರು ನೆಲಸುವಂತೆ ಮಾಡಿದರು. ಮದುವೆ, ಮಕ್ಕಳು ಎಲ್ಲ ಆದುವು. ಅವರಿಗೆ ನಾಗಕನ್ನಿಕೆಯರ ದರ್ಶನ ಆಗಿ ಮಾಟಮಂತ್ರಗಳೆಲ್ಲ ಲಭ್ಯವಾಗಿದ್ದುವು. ಊರಿನ ಕರಿಯವ್ವ ದೇವತೆ ಅವರ ಆಜ್ಞಾನುವರ್ತಿ. ಅವರ ಹೊಲದಲ್ಲಿ ಜನರೇ ಸ್ವಯಂ ಪ್ರೇರಣೆಯಿಂದ ಕೆಲಸ ಮಾಡಿ ಬೆಳೆ ಬೆಳೆದು ಕೊಡುತ್ತಿದ್ದರು. ಯಾರದೋ ಎತ್ತುಗಳು, ಯಾರದೋ ನೇಗಿಲು, ಯಾರೋ ಹೊಲವನ್ನು ಉತ್ತರೆ, ಯಾರೋ ಅದರಲ್ಲಿ ಬೀಜ ಬಿತ್ತುತ್ತಿದ್ದರು. ಕಟಾವು ಮಾಡಿ ಧಾನ್ಯವನ್ನು ಅವರಿಗೆ ಯಾರೋ ಒದಗಿಸುತ್ತಿದ್ದರು. ಎಲ್ಲ ಕೆಲಸಗಳೂ ನಿರ್ದಿಷ್ಟ ಭಕ್ತ ವ್ಯಕ್ತಿಗಳಿಗೆ ಹಂಚಿಕೆಯಾಗಿದ್ದುವು. ಅವರ ಬಗ್ಗೆ ಜನಕ್ಕೆ ಗೌರವ, ಭಯ. ಯಾವುದೇ ವಿಷಯದಲ್ಲಿ ಅವರದೇ ಕೊನೆಯ ಮಾತು. ಅವರ ಬಳಿ ಮಗುವನ್ನು ತೆಗೆದುಕೊಂಡು ಹೋಗಿ "ಮಗು ಅಡ್ಡಲಾಗಿದೆ" (ಮಗು ಕಾಯಿಲೆಯಿಂದ ಮಲಗಿದೆ) ಎಂದರೆ ನಾಡಿ ಹಿಡಿದು ನೋಡಿ ಔಷಧಿ ಕೊಡುತ್ತಿದ್ದರು. ಅವರ ಚಿಕಿತ್ಸೆಗಳು ಸರ್ಕಾರಿ ವೈದ್ಯರಿಗೂ ಆಶ್ಚರ್ಯ ಹುಟ್ಟಿಸುತ್ತಿದ್ದುವು. ಯಾರೋ ಒಬ್ಬ ಹರಿಜನ ಅರಿಯದೆ ಮಾವಿನಕಾಯಿ ಕೀಳಲು ಅವರ ಮಾವಿನಮರ ಹತ್ತಿಬಿಟ್ಟ. ಅಲ್ಲೇ ಅವನನ್ನು ಭೂತ ಹಿಡಿದು ನಿಲ್ಲಿಸಿಬಿಟ್ಟಿತು. ಶಾಗಲೆ ಅಜ್ಜನವರೇ ಬಂದು ಮಂತ್ರ ಹೇಳಿ ಇಳಿಸಬೇಕಾಯ್ತು. ಅವರ ಹೊಲಕ್ಕೆ ಕೆಲಸಕ್ಕಲ್ಲದೆ ಬೇರೆ ಕಾರಣಗಳಿಗಾಗಿ ಜನ ಕಾಲಿಡುತ್ತಿರಲಿಲ್ಲ (ಈಗಲೂ ಕಾಲಿಡರು). ದಿನದ ಯಾವುದೇ ಕಾಲವಾದರೂ ಜನ ಅವರನ್ನು ಕಂಡು ತಮ್ಮ ಕಷ್ಟ ಸುಖ ಹೇಳಿಕೊಂಡಾಗ ಕವಡೆ ಹಾಕಿ ಒಳಗಿನ ರಹಸ್ಯಗಳನ್ನು ತಿಳಿದು ಆ ಕಷ್ಟಗಳಿಗೆ ನಿವಾರಣೋಪಾಯ ಹೇಳುತ್ತಿದ್ದರು. ಅವರದು ಅಪಾರ ದೈವ ಶ್ರದ್ಧೆ. ಬೆಳಗಿನಿಂದ ಸಂಜೆಯವರೆಗೆ ಜನ ಅವರ ಮನೆಯಲ್ಲಿ ತುಂಬಿರುತ್ತಿದ್ದರು. ಧನ ಸಂಗ್ರಹದ ಹುಚ್ಚು ಅವರಿಂದ ದೂರ. ಅವರು ಬದುಕಿರುವಾಗ ನಾಗಕನ್ನಿಕೆಯರು ಅವರನ್ನು ಬಲವಂತದಿಂದ ಕೊಂಡೊಯ್ಯಲು ಬಂದಾಗ, ಅವರು ಕೋಪದಿಂದ ಗದರಿಸಿದ ಕಾರಣ ಮನೆಯ ಅಕ್ಕಿ ಸುಟ್ಟು ಹೋಯಿತು. ಕೆಲಕಾಲದ ಬಳಿಕ ತಾವೇ ಆಹ್ವಾನಿಸಿ ನಾಗಕನ್ನಿಕೆಯರ ಜೊತೆ ಕೈಲಾಸಕ್ಕೆ ಹೋದರು. ಅವರನ್ನು ಊರಿನ ಜನ ಮಲ್ಲೇಶ್ವರ ದೇವಾಲಯದ ಪಕ್ಕ ಸಮಾಧಿ ಮಾಡಿ ಅಲ್ಲೊಂದು ಕಟ್ಟಡ ಕಟ್ಟಿದ್ದಾರೆ. ದಿನವೂ ಅಲ್ಲಿ ಶಾಗಲೆ ಅಜ್ಜನ ಸಮಾಧಿಗೆ

ಪೂಜೆ ನಡೆಯುತ್ತದೆ. ದೈವಕ್ಕಿಂತ ಹೆಚ್ಚು ಶ್ರದ್ಧೆಯಿಂದ ಜನ ಆ ಸಮಾಧಿಗೆ ನಡೆದುಕೊಳ್ಳುತ್ತಾರೆ. ಈಗ ಅವರು ಪ್ರತ್ಯಕ್ಷ ದೇವರು, ಅಥವಾ ದೇವರಿಗಿಂತ ಒಂದು ಕೈ ಮಿಗಿಲು. ಸಮಾಧಿಯ ಮೇಲೆ ಲಿಂಗವನ್ನು ಸ್ಥಾಪಿಸಿ ಮುಂದೆ ಒಂದು ಬಸವನನ್ನು ಸ್ಥಾಪಿಸಿದ್ದಾರೆ. ಅವರನ್ನು ಕಾಣದವರೂ ಕೂಡ ಅವರ ಹೆಸರು ಹೇಳಿ ಕೈ ಮುಗಿಯುತ್ತಾರೆ. ಹೀಗೆ ಮಾನುಷ ವ್ಯಕ್ತಿಯೊಬ್ಬ ದೇವತಾಪುರುಷನಾಗಿರುವ ಉದಾಹರಣೆಯನ್ನು ನನ್ನ ಜೀವನದಲ್ಲೇ ಕಂಡಂತಾಯಿತು.

ಮಧ್ಯಾಹ್ನ ಹಾಲವ್ವ ಎಂಬ ಕರಿಯವ್ವನ ಭಕ್ತಳನ್ನು ಕಂಡೆ. ತಲೆತುಂಬ ಸುಕ್ಕುಗಟ್ಟಿದ ಕೂದಲು. ಹಾಗೆ ಸುಕ್ಕುಗಟ್ಟಿದ ಕೂದಲುಳ್ಳ ಹೆಣ್ಣು ಮಕ್ಕಳನ್ನು ದೇವತೆಗೆ ಬಿಡುತ್ತಾರೆ. ಚಿಕ್ಕವಯಸ್ಸಿನಲ್ಲೇ ಆ ಕೂದಲನ್ನು ಕತ್ತರಿಸಿದರೆ ಬೇರೆ ಸಹಜ ಕೂದಲು ಬೆಳೆಯುತ್ತದೆ. ಗಂಟುಗೂದಲು ಬಂದ ಎಷ್ಟೋ ಹೆಣ್ಣು ಮಕ್ಕಳು ಕೇವಲ ಜನರ ಮೌಢ್ಯದಿಂದಾಗಿ ಜೀವನದುದ್ದಕ್ಕೂ ಪರಾವಲಂಬಿಗಳಾಗಿ ಬದುಕಬೇಕಾಗುತ್ತದೆ. ಹಾಲವ್ವ ಹಣೆ ತುಂಬ 'ಭಂಡಾರ' (ಅರಿಸಿಣ) ಬಳಿದು ಕುಂಕುಮ ಇಟ್ಟಿದ್ದಳು. ಕೈ ತುಂಬ ಹಸಿರು ಬಳೆ, ಬೆಳ್ಳಿ ಕಡಗ, ಕೊರಳಲ್ಲಿ ತಾಳಿ, ಮೂಗಿಗೆ 'ಗರತಿ ಮುತ್ತು'. ಅವಳಿಗೆ ಹತ್ತು ಮಕ್ಕಳಾದ ಮೇಲೆ ದೇವಿ ಮೈಮೇಲೆ ಬರುವುದು ಷುರುವಾಯಿತು. ಕರಿಯವ್ವ ದೇವಿಯ ವಶ ಅವಳಾದಳೋ, ಅವಳ ವಶಕ್ಕೆ ಕರಿಯವ್ವ ದೇವಿ ಬಂದಳೋ! ಎರಡನೆಯ ಮಾತೇ ನಿಜವೆಂದು ಜನ ನಂಬಿದ್ದಾರೆ. ಅವಳಿಗೆ ಹದಿನಾಲ್ಕು ಮಕ್ಕಳು: ಅವಿವಾಹಿತೆಯು ಬಸವಿಯಾಗಿ ಪುರುಷರ ಸಂಪರ್ಕ ಪಡೆಯಲು ಅಡ್ಡಿ ಇಲ್ಲ. ಅವಳ ಪೂರ್ತಿ ಯೋಗಕ್ಷೇಮ ಊರಿನದು. ಜನಗಳ ಮನೆಯಲ್ಲಿ ಊಟ, ಅವರು ಕೊಡುವ ಕಾಳು ಅವಳ ಮನೆ ಸೇರುತ್ತದೆ. ಅವಳ ಜೊತೆ ಮಾತನಾಡುತ್ತಿರುವಂತೆ ಮೈಮೇಲೆ ದೇವಿ ಬಂದುಬಿಟ್ಟಳು. ಅದೊಂದು ಭಯಾನಕ ಅನುಭವ. ಅವಳ ಮಾತು ವಿದ್ಯುತ್ ಸ್ಪರ್ಶದ ಅನುಭವ ನೀಡಿತು.

ಊರ ಹೊರಗೆ ಬಯಲಲ್ಲೇ ಆಲದ ಮರದ ಕೆಳಗೆ ಕರಿಯವ್ವನ ಗುಡಿ ಇದೆ. ವರ್ಷಕ್ಕೊಮ್ಮೆ ಅಲ್ಲಿ "ಬಂಡಿ ಸಿಡಿ" ಆಡುತ್ತಾರೆ. ಒಂದು ಎಳೆಯುವ ಬಂಡಿ - ಆ ಬಂಡಿಯ ಮೇಲೆ ಒಂದು ದೊಡ್ಡ ಕಂಬ. ಆ ಕಂಬದ ಮೇಲೆ ತಿರುಗಣೆಗೆ ಅಡ್ಡ ಕಂಬ ಜೋಡಿಸಿರುತ್ತಾರೆ. ಅಡ್ಡ ಕಂಬದ ಒಂದು ತುದಿಗೆ ಹರಕೆ ಹೊತ್ತ ಹೆಂಗಸನ್ನು ಬಟ್ಟೆಯಿಂದ ಕಟ್ಟಿ (ಹೆಂಗಸಿನ ಬೆನ್ನ ಹುರಿಯನ್ನು ಕೊಕ್ಕಿಗೆ ಸಿಕ್ಕಿಸಿರುತ್ತಾರೆ) ಇನ್ನೊಂದು ತುದಿಗೆ ಕಟ್ಟಿರುವ ಹಗ್ಗದಿಂದ ಆಕಾಶದಲ್ಲೇ ಸುತ್ತಿಸುತ್ತಾರೆ. ಹೆಂಗಸು ಆಕಾಶದಲ್ಲಿ ಸುತ್ತುತ್ತಿರುವಾಗ ಬಂಡಿಯನ್ನು ಎಳೆಯುತ್ತಾರೆ. ಇದನ್ನು "ಸಿಡಿ" ಆಡುವುದು ಎನ್ನುತ್ತಾರೆ. "ಬಂಡಿ ಸಿಡಿ" ವಿರಳ. ನೆಲಕ್ಕೆ ಹೂತ ಕಂಬದ ಮೇಲಿನ ತಿರುಗಣೆಯಲ್ಲಿ ಸಿಡಿ ಆಗುವುದೇ ರೂಢಿ. ಕೋಗಲೂರಲ್ಲಿ ನಾನು ಬಾಲ್ಯದಲ್ಲಿ ಕಂಡದ್ದು ಅಂತಹ ನೆಲಸಿಡಿ. ಊರಲ್ಲಿ ಜುಂಜಪ್ಪ ದೇವರ ಅನುಯಾಯಿಗಳು ಇದ್ದಾರೆ. ಅಲ್ಲೇ ಮಾಂತ್ರಿಕ ರೇಖಾ ವಿನ್ಯಾಸದ ಕಲ್ಲಿಗೆ ಪೂಜೆ ನಡೆಯುತ್ತದೆ. ಆ ಕಲ್ಲು ಕಂಡರೆ ಅಕ್ಕಪಕ್ಕದ ಮನೆಗಳಿಗೆ ಅಪಾರ ಭಯ.

ಹೊರಗಿದ್ದ ಹರಿಜನರ ಕೇರಿಗೆ ನನ್ನ ಬಂಧುಗಳ ಸಮೇತ ಹೋದೆ. ನಾನು ಹಿಂದೆ ನೋಡಿದ್ದ ಕೇರಿಗಿಂತ ಈಗ ಸ್ವಲ್ಪ ಉತ್ತಮವಾಗಿದ್ದರೂ ಅದೇ ಬಡತನ ಎದ್ದು ಕಾಣುತ್ತಿತ್ತು. ದುರ್ಗವ್ವ ಅವರ ಆರಾಧ್ಯದೈವ. ಆ ದೇವಿಯ ಗುಡಿ ಕೇರಿ ಮಧ್ಯದಲ್ಲಿತ್ತು. ಅವರಲ್ಲಿ ಒಬ್ಬ ಬಿ.ಎ. ಪದವೀಧರನಿದ್ದ. ಬೆಂಗಳೂರಿನಲ್ಲಿ ನಡೆದ ಅಂಬೇಡಕರ್ ಜಯಂತಿಗೆ ಆತ ತನ್ನ ಜಾತಿಯ ಎಂಟು ಜನರನ್ನು ಕರೆದುಕೊಂಡು ಹೋಗಿದ್ದನಂತೆ. ಅವರ ಜೊತೆ ನಾನು ಮಾತನಾಡುವಾಗ ಒಬ್ಬ ನನ್ನ ಜೊತೆ ಸ್ವಲ್ಪ ಒರಟಾಗಿ ಮಾತನಾಡಿ ಅವರಲ್ಲೇ ಸ್ವಲ್ಪ ಜಗಳ ಆಯ್ತು. ಹಾಗೆ ನಡೆದುಕೊಳ್ಳುವುದು ಸರಿಯಲ್ಲವೆಂದು ಅಲ್ಲಿನವರು ವಾದಿಸಿದರು. ಮೇಲ್ಜಾತಿಯವರ ವಿಷಯದಲ್ಲಿ ಅವರಿಗೆ ಬಹು ಗುಮಾನಿಗಳಿರುವುದು ಆ ಊರಲ್ಲಿ ಮಾತ್ರವಲ್ಲ, ಉಳಿದ ಕಡೆಗಳಲ್ಲೂ ಎದ್ದು ಕಾಣುವ ಸಂಗತಿ. ಇದರಿಂದಾಗಿ ಅವರು ಸ್ವಲ್ಪ ಅಸೌಜನ್ಯದಿಂದ ನಡೆದುಕೊಳ್ಳುವುದು ಸಾಮಾನ್ಯವಾಗಿದೆ. ಬಹುಕಾಲ ತೀವ್ರ ಕೀಳರಿಮೆಯಿಂದ ನರಳಿ ಅಭ್ಯಾಸವಾಗಿರುವ ಅವರಿಗೆ ಆ ಬಗೆಯ ನಡವಳಿಕೆ ನಿರೀಕ್ಷಿತ. ಆ ಒರಟುತನ ಅವರಲ್ಲಿ ಎಚ್ಚರ ಮೂಡುತ್ತಿರುವುದರ ಸಂಕೇತವೂ ಹೌದು. (ಕೆಳವರ್ಗದ ವಚನಕಾರರು ಉಳಿದ ವಚನಕಾರರಿಗಿಂತ ಹೆಚ್ಚು ಕಟುವಾದ ನೇರವಾದ ಭಾಷೆಯನ್ನು ಬಳಸುವುದು, ತಮ್ಮನ್ನು ತಾವು ಪರೀಕ್ಷಿಸಿಕೊಳ್ಳುವುದಕ್ಕಿಂತ ಇತರರನ್ನು ವಿಮರ್ಶಿಸಲು ಮುಂದಾಗುವುದು ಈ ಸಂದರ್ಭದಲ್ಲಿ ಲಕ್ಷಿಸಬೇಕಾದ ಸಂಗತಿ). ಒಂದು ಸಂಗತಿ ನನಗೆ ಆಶ್ಚರ್ಯ ಹುಟ್ಟಿಸಿತು: ಅವರೆಲ್ಲರೂ 'ಶಾಗಲೆ ಅಜ್ಜ'ನ ಬಗ್ಗೆ ತುಂಬು ಗೌರವ ಇಟ್ಟುಕೊಂಡಿದ್ದಾರೆ.

ಊರ ಅಂಚಿನಲ್ಲಿ 12-13ನೇ ಶತಮಾನದ ಮಲ್ಲೇಶ್ವರನ ದೇವಾಲಯವಿದೆ. ಆ ಊರಲ್ಲಿ ಜ್ಞಾನಶಕ್ತಿ ಪಂಡಿತ ಎಂಬ ಮುನಿ ಹನ್ನೆರಡನೇ ಶತಮಾನದಲ್ಲಿದ್ದ ಎಂದು ಅಲ್ಲಿನ ಒಂದು ಶಾಸನ ಹೇಳುತ್ತದೆ (ರೈಸರ ಎಫಿಗ್ರಾಫಿಯ ಕರ್ನಾಟಿಕ 11. ದಾವಣಗೆರೆ. 27). ಈಶ್ವರನ ಲಿಂಗವಿರುವ ಗರ್ಭಗುಡಿಯ ಎದುರೇ ವಿಷ್ಣುವಿನ ಪ್ರತಿಮೆ ಇದೆ. ದೇವಾಲಯದಲ್ಲಿ "ರೇವಣಸಿದ್ಧನ ಕಂಬಿ" ಎಂದು ಕರೆಯುವ ಒಂದು ಚಿಕ್ಕ ಪಲ್ಲಕ್ಕಿ ಇದೆ. ಅದು ತಮಿಳರು ಆಡಿಕೃತ್ತಿಕೆ ದಿನ ಹೊತ್ತು ನಡೆಯುವ ಚಿಕ್ಕಪಲ್ಲಕ್ಕಿಯಂತಿರುತ್ತದೆ. ಆ ಕಂಬಿಯನ್ನು ಇಬ್ಬರು ಮುಂದೆ ಹಿಂದೆ ಹೊತ್ತು ನಡೆಯಬಹುದು. ಒಳಗೆ ಒಂದು ಚಿಕ್ಕ ವಿಗ್ರಹ ಇಡಬಹುದು. ಅದು ವಾಸ್ತವವಾಗಿ "ಪರ್ವತದ ಕಂಬಿ" ಅಥವಾ "ಪರ್ವತ ಮಲ್ಲಯ್ಯನ ಕಂಬಿ". ಹಿಂದೆ ವರ್ಷಕ್ಕೊಮ್ಮೆ ಊರ ಜನ ಶ್ರೀಶೈಲಕ್ಕೆ ಮಲ್ಲಿಕಾರ್ಜುನನ ಪರಿಶೆಗೆ ಆ ಕಂಬಿ ಹೊತ್ತುಕೊಂಡು "ಪರ್ವತ ಮಲ್ಲಯ್ಯನ ಕಂಬಿ, ಉಘೇ ಉಘೇ" ಎಂದು ಕೂಗುತ್ತ ಹೋಗುತ್ತಿದ್ದರು (ಸಿದ್ಧರಾಮನ ಕಾಲಕ್ಕಿಂತ ಹಿಂದಿನ ಪದ್ಧತಿ ಇದು - ಅಂತಹ "ಪರಿಸೆ"ಯ ಜೊತೆ ಸಿದ್ಧರಾಮನು ಶ್ರೀಶೈಲಕ್ಕೆ ಹೋದನೆಂದು ನಿರೂಪಣೆ ಇದೆ). ಶ್ರೀಶೈಲಕ್ಕೆ ಹೋಗಲು ಸಾಧ್ಯವಾಗದವರು ಆ ಕಂಬಿಗೆ ತಮ್ಮ ಕಾಣಿಕೆಗಳನ್ನು ಹಾಕುತ್ತಿದ್ದರು. 'ಪರಿಶೆ(ಸೆ)' ಮುಗಿಸಿಕೊಂಡು ಬಂದವರನ್ನು ಒಂದೊಂದು ಊರಿನವರೂ ಸ್ವಾಗತಿಸಿ, ಮಲ್ಲಿಕಾರ್ಜುನನ ದರ್ಶನ ಮಾಡಿ ಬಂದವರೆಂದು ಭಕ್ತಿಯಿಂದ ಅವರಿಗೆ ನಮಸ್ಕರಿಸಿ, ಅವರನ್ನು ಮೆರವಣಿಗೆಯಲ್ಲಿ ಕೊಂಡೊಯ್ದು, ಅವರಿಗೆ ಊಟೋಪಚಾರ ಮಾಡಿ ಕಳುಹಿಸುತ್ತಿದ್ದರು.

ಅಂತಹ ಕಂಬಿಗಳು ಶಿಕಾರಿಪುರ ತಾಲೂಕು ಪ್ರದೇಶದಲ್ಲಿ ಸಾಕಷ್ಟಿವೆ. ಉತ್ತರ ಕರ್ನಾಟಕದಲ್ಲಂತೂ ಅವು ವಿಶೇಷ. ಮಲ್ಲೇಶನ ದೇವಾಲಯವು ಒಂದು ಕಾಲಕ್ಕೆ ಆ ಊರಿನ ಜನ ಶ್ರೀ ಶೈಲಕ್ಕೆ ಹೋಗಿ ಮಲ್ಲಿಕಾರ್ಜುನನ ದರ್ಶನ ಮಾಡಿಕೊಂಡು ಬಂದು ಅವನ ಹೆಸರಲ್ಲಿ ಕಟ್ಟಿಸಿದ ದೇವಾಲಯವೆಂದು ಕಾಣುತ್ತದೆ. ಈಗ ಯಾರೂ ಶ್ರೀ ಶೈಲದ ಜಾತ್ರೆಗೆ ಹೋಗುತ್ತಿಲ್ಲ. ಮಲ್ಲೇಶ್ವರ ದೇವಾಲಯದ ಪಕ್ಕದಲ್ಲೇ ಶಾಗಲೆ ಅಜ್ಜನ ಗದ್ದುಗೆ ಇದೆ. ಮಲ್ಲಿಕಾರ್ಜುನ ಪೌರಾಣಿಕ ದೈವ, ರೇವಣಸಿದ್ಧ ಐತಿಹಾಸಿಕ ವ್ಯಕ್ತಿ, ಶಾಗಲೆ ಅಜ್ಜ ಸಮಕಾಲೀನ ವ್ಯಕ್ತಿ : ಎಲ್ಲವೂ ದೈವೀಕೃತಗೊಂಡು ಸಹಜೀವನ ನಡೆಸುತ್ತಿವೆ. ಇದು ಭಾರತೀಯ ಪ್ರವೃತ್ತಿಗೆ ಅನುಗುಣವಾದುದು.

ದೇವಾಲಯದ ಹೊರಗೆ ಪ್ರಾಂಗಣದಲ್ಲಿ ಸಪ್ತಮಾತೃಕೆಯರ ಶಿಲ್ಪವಿದೆ. ಒಂದು ಕಲ್ಲಿನ ಮೇಲೆ ಸುತ್ತುವರಿದ ಸರ್ಪಗಳು, ಮಧ್ಯೆ ಮನುಷ್ಯರ ಪಾದ, ಪಕ್ಕದಲ್ಲೇ ತಲೆಕಡಿದುಕೊಂಡಿರುವವರ ಶಿಲ್ಪ ಇದೆ. ಆ ದೇವಾಲಯದಲ್ಲಿ ಮನುಷ್ಯರು ದೈವಕ್ಕೆ ತಮ್ಮನ್ನು ತಾವು ಬಲಿಕೊಟ್ಟುಕೊಳ್ಳುತ್ತಿದ್ದ ಪದ್ಧತಿಯಿದ್ದುದರ ಸೂಚನೆ ಅದು.

ಜನ ಶ್ರದ್ಧೆಯಿಂದ ನಡೆದುಕೊಳ್ಳುವ ದೇವಾಲಯ, ಮಠ (ಸಮಾಧಿ) ಇವುಗಳ ಎದುರೇ ಪೋಲೀಸ್ ವ್ಯಾನೊಂದು ನಿಂತಿತ್ತು. ಹಳ್ಳಿಯ ಒಳ ರಾಜಕೀಯದ ಚಿಹ್ನೆ ಅದು. ಆ ಊರಿನ ಪ್ರಬಲ ಜನಾಂಗವಾದ ಸಾದ ಲಿಂಗಾಯತರಿಗೂ ಬೇಡರಿಗೂ ತೀವ್ರ ಭಿನ್ನಾಭಿಪ್ರಾಯಗಳು ಬೆಳೆದಿವೆ. ಎರಡು ಜಾತಿಗಳವರೂ ಪ್ರತ್ಯೇಕ ಪ್ರೌಢ ಶಾಲೆಗಳನ್ನು ಈರ್ಷ್ಯೆಯಿಂದ ನಡೆಸುತ್ತಿದ್ದಾರೆ. ಹಾಗೆ ನೋಡಿದರೆ ಆ ಹಳ್ಳಿಗೆ ಒಂದು ಪ್ರೌಢಶಾಲೆಯೇ ಹೆಚ್ಚು. ಬೇಡರ ನಾಯಕ ನಾಗಪ್ಪ ಒಬ್ಬ ಪ್ರಬಲ ರಾಜಕಾರಣಿ. ತಾಲೂಕು ಬೋರ್ಡ್ ಸದಸ್ಯ. ಜಂಗಮವರ್ಗದವರು ಬೇಡರ ಪಕ್ಷಪಾತಿಗಳು ಎಂಬ ಗುಮಾನಿ ಸಾದರಿಗಿದೆ. ನನ್ನ ಬಂಧು ವರ್ಗದವರನ್ನು ಕೇಳಿದರೆ, "ನಾವು ಯಾರ ಕಡೆಗೂ ಇಲ್ಲ. ನಮ್ಮ ಬದುಕನ್ನು ನೋಡಿಕೊಂಡರೆ ಸಾಕು" ಎನ್ನುತ್ತಾರೆ. ಆ ಪ್ರದೇಶದ ಹಳ್ಳಿಗಳಲ್ಲಿ ಸಿರಿಗೆರೆ ಮಠದ ಸಾದರಿಗೂ ಚಿತ್ರದುರ್ಗ ಮಠದ ಜಂಗಮರಿಗೂ (ಬಣಜಿಗರಿಗೂ) ಭಿನ್ನಾಭಿಪ್ರಾಯಗಳಿರುವುದು ಸಾಮಾನ್ಯ. ಲಿಂಗಾಯತೇತರ ಕೆಳವರ್ಗದವರಾದ ಬೇಡರು ಕುರುಬರು ಚಿತ್ರದುರ್ಗ ಮಠದ ಅನುಯಾಯಿಗಳ ವಿಷಯದಲ್ಲಿ ಒಳಗೆ ಹೆಚ್ಚಿನ ಒಲವನ್ನು ತೋರಿಸುತ್ತಾರೆಂಬುದು ಅಲ್ಲಲ್ಲಿ ಕೇಳಿ ಬರುತ್ತಿರುವ ಸಂಗತಿ. ಚುನಾವಣೆಗಳು ರಾಜಕೀಯ ಸ್ಪರ್ಧೆ ಇವುಗಳಿಂದಾಗಿ ಹಳ್ಳಿಗಳಲ್ಲಿ ಜಾತಿಭಾವನೆಗಳು ಜಾಗೃತವಾಗುತ್ತಿರುವುದು ತೀವ್ರ ಖೇದಕರ.

ಪುರಾಣ ಪ್ರವಚನಗಳಲ್ಲಿ, ಧಾರ್ಮಿಕ ವಿಷಯಗಳಲ್ಲಿ ಆಸಕ್ತಿ ಬೆಳೆಸಿಕೊಂಡ ಮಿತಭಾಷಿ, ಮೃದುಭಾಷಿ ಮೇಷ್ಟ್ರು ಗಿರಿಯಪ್ಪನವರು ಒಂದು ಕಾಲಕ್ಕೆ ಹುಡುಗರನ್ನು ಅಬ್ಬರಿಸಿ ಬೈದು ಹೊಡೆದು ಪ್ರೀತಿಯಿಂದ ತಿದ್ದಿದ ಹಳೇಕಾಲದ ಮೇಷ್ಟ್ರು. ಶಾಗಲೆ ಅಜ್ಜನ ಮೊಮ್ಮಗನ ಮನೆಯಲ್ಲಿರಬಹುದಾದ ಹಳೆ ಹಸ್ತಪ್ರತಿಗಳು, ಕಾಗದ ಪತ್ರಗಳು, ಮಂತ್ರದ ಪುಸ್ತಕಗಳನ್ನು ನಾನು ನೋಡುವ ಕುತೂಹಲವನ್ನು ವ್ಯಕ್ತಪಡಿಸಿದರೂ ಅವರ ಮೊಮ್ಮಗ ಅವನ್ನು ತೋರಿಸಲು

ಹಿಂದೇಟು ಹಾಕಿದ. ಅನೇಕ ವರ್ಷಗಳ ಹಿಂದೆ ಅದೇ ಊರಲ್ಲಿ ವಿಶ್ವಕರ್ಮರೊಬ್ಬರ ಮನೆಯಲ್ಲಿ ಕುಮಾರವ್ಯಾಸ ಭಾರತದ ಹಸ್ತಪ್ರತಿ ನೋಡಿದ್ದೆ. ಆದರೆ ಆ ಬಗ್ಗೆ ಏನೂ ಗೊತ್ತಿಲ್ಲವೆಂದು ಜನ ಹೇಳಿದರು.

ನಾನು ಶಾಗಲೆಯಲ್ಲಿದ್ದ ದಿನದ ಮಾರನೆಯ ದಿನವೇ "ಕರೆ ಹರಿಯುವ" ಹಬ್ಬ. ಅದು ಮುಖ್ಯವಾಗಿ ರೈತರು ಎತ್ತುಗಳನ್ನು ಪೂಜಿಸುವ ಹಬ್ಬ. ಸೆಗಣಿಯಲ್ಲಿ ನೆಲವನ್ನು ಚೌಕಾಕಾರವಾಗಿ ಸಾರಿಸಿ ಅದರ ಮೇಲೆ ನವಧಾನ್ಯ ಹಾಕಿ, ಅದರ ಮೇಲೆ ಬಸವನ ಪಾದ ಇರಿಸುತ್ತಾರೆ. ಬಳಿಕ ಬಸವನಿಗೆ ಪೂಜೆ. ಆ ದಿನ ಎತ್ತುಗಳಿಗೆ ಹಾಲು ಕಿಚಡಿ ತಿನ್ನಿಸುವರು. ಆ ದಿನ ಸಂಜೆ ಊರ ಪ್ರವೇಶ ದ್ವಾರದಲ್ಲಿ ಅತ್ತ ಇತ್ತ ನಿಲ್ಲಿಸಿರುವ "ಕರುಗಲ್ಲು"ಗಳಿಗೆ ಅಡ್ಡಲಾಗಿ ಮಾವು ಬೇವಿನ ಸೊಪ್ಪಿನ ಜೊತೆ ಬೇರೆ ಬೇರೆ ಬಳ್ಳಿಗಳನ್ನು ಬಿಗಿದಿರುವ ತೋರಣವನ್ನು ಕೆಳಗೆ ಕಟ್ಟುತ್ತಾರೆ. ದೇವರನ್ನು ಮೆರವಣಿಗೆಯಲ್ಲಿ ತಂದು, ಎತ್ತುಗಳನ್ನು ಪೂಜಿಸಿ ಅವುಗಳನ್ನು ಹೊರಗಿನಿಂದ ಊರ ಒಳಕ್ಕೆ ಕರುಗಲ್ಲುಗಳಿಗೆ ಅಡ್ಡ ಕಟ್ಟಿರುವ ತೋರಣದ ಮೂಲಕ ನುಗ್ಗಿಸುತ್ತಾರೆ. ಅವು ತೋರಣ ಕಿತ್ತುಕೊಂಡು ಒಳಕ್ಕೆ ನುಗ್ಗಿ ಬರುತ್ತವೆ. ಹಾಗೆ ಕಿತ್ತ ತೋರಣವನ್ನು ಜನ ಕಿತ್ತುಕೊಳ್ಳುತ್ತಾರೆ. ಕಿತ್ತ ಜನರ ಕೈಯಿಂದ ಬೇರೆಯವರು ಕಿತ್ತುಕೊಳ್ಳುತ್ತಾರೆ. ಇದೊಂದು ಸ್ಪರ್ಧೆಯೂ ಹೌದು, ಬಲಪ್ರದರ್ಶನವೂ ಹೌದು, ಆಟವೂ ಹೌದು. ಹಾಗೆ ಕಿತ್ತುಕೊಂಡು ಹೋದ ಸೊಪ್ಪನ್ನು ಮನೆಗೆ ಒಯ್ದು ಮುಂಭಾಗದ ಸೂರಿಗೆ ಸಿಕ್ಕಿಸುತ್ತಾರೆ. ಮೊದಲ ಬಿತ್ತನೆ ದಿನ ಆ ಒಣಗಿದ ಸೊಪ್ಪನ್ನು ಪುಡಿಮಾಡಿ ಬೀಜಕ್ಕೆ ಬೆರಸಿ ಬಿತ್ತುತ್ತಾರೆ. ಅದರಿಂದ ಸಮೃದ್ಧ ಬೆಳೆ ಬರುವುದೆಂಬ ನಂಬಿಕೆ.

"ಕರೆ"ಯನ್ನು ಬೇರೆ ಊರಿನವರು ಒಯ್ದರೆ ತಮ್ಮ ಊರಿನ "ಕರೆ" ಹರಿಯುವ ಸಂಪ್ರದಾಯ ಆ ಊರಿಗೆ ಹೋಗುವುದೆಂದು ಹೆದರಿ ಊರ ಹೊರಗಡೆ ತಮ್ಮ ಊರಿನ "ಕರೆ" ಸೊಪ್ಪನ್ನು ಬೇರೆಯವರು ಕೊಂಡೊಯ್ಯದಂತೆ ಬಡಿಗೆ ಹಿಡಿದು ಕಾಯುತ್ತಿರುತ್ತಾರೆ. ಹಾಗೆ ಕಾಯುವವರು ಊರಿನ ಕೆಳವರ್ಗದ ಜನ. ನನ್ನ ಹಳ್ಳಿಗೆ ಬೇರೆ ಊರಿಂದ "ಕರೆ" ತಂದವನನ್ನು ಆ ಊರಿನ ಜನ ಅಟ್ಟಿಸಿಕೊಂಡು ಬಂದರಂತೆ. ನನ್ನ ಆ ಹಳ್ಳಿಯಾತ ತನ್ನ ಕಾಲುಗಳಿಗೆ ಚುಚ್ಚಿದ್ದ ಮುಳ್ಳುಗಳನ್ನು ಕೀಳುತ್ತಿರುವಾಗ ಅವರು ಬಂದು ಹೊಡೆದು ಸಾಯಿಸಿದರು. ಆದರೆ ಆತ ನನ್ನ ಹಳ್ಳಿಯ ಗಡಿಯೊಳಕ್ಕೆ ಬಂದುದರಿಂದ ನನ್ನ ಹಳ್ಳಿಗೆ "ಕರೆ" ಹಕ್ಕು ಪ್ರಾಪ್ತವಾಯಿತು ಎಂಬ ಕತೆ ಇದೆ.

ಸಂಜೆ ಆ ಹಳ್ಳಿ ಯುವಕರು ಮಾತನಾಡಲು ಬಂದರು. ಒಬ್ಬ ಮೂರು ಬಾರಿ ಎಸ್.ಎಸ್.ಎಲ್.ಸಿ.ಯಲ್ಲಿ ಇನ್ನೊಬ್ಬ ಮೊದಲನೆಯ ಪಿ.ಯು.ಸಿ.ಯಲ್ಲಿ ಫೇಲಾಗಿದ್ದರು. ಅವನು ಹೈಸ್ಕೂಲ್ ಕನ್ನಡದಲ್ಲಿ ಮುಗಿಸಿ ಪಿ.ಯು.ಸಿ.ಯಲ್ಲಿ ಇಂಗ್ಲೀಷ್ ಮಾಧ್ಯಮ ಆರಿಸಿಕೊಂಡಿದ್ದ. ಒಬ್ಬ ಹುಡುಗ ಕನ್ನಡ ಮಾಧ್ಯಮದಲ್ಲಿ ಎಸ್.ಎಸ್.ಎಲ್.ಸಿ. ಪರೀಕ್ಷೆಗೆ ಕುಳಿತಿದ್ದ. ಬುದ್ಧಿವಂತ, ಸಹಜ ಮಹತ್ವಾಕಾಂಕ್ಷಿ. ಗಡಿಯಾರ ಕಟ್ಟಿ ಸ್ವಲ್ಪ ಬಿಳಿ ಬಟ್ಟೆ ಹಾಕಿಕೊಂಡರೆ "ಆಗಲೇ ಜಂಬ ಬಂತು" ಎಂದು ಹಳ್ಳಿ ಜನ ಆಡಿಕೊಳ್ಳುತ್ತಾರೆ; ಬಹಳ

ಅಸೂಯೆ; ದೊಡ್ಡಪ್ಪನಿಗೆ ತಮ್ಮನ ಮಗನ ಬಗ್ಗೆ ಅಸೂಯೆ, ತಮ್ಮನಿಗೆ ಇನ್ನೊಬ್ಬನ ಮೇಲೆ ಹೀಗೇ ಅಸಹನೆ ಬೆಳೆಯುತ್ತಿದೆ ಎಂದು ಯುವಕರು ನೊಂದುಕೊಂಡರು. ವಿಶೇಷವಾಗಿ ಜಂಗಮರಲ್ಲಿ ಪರಸ್ಪರ ಅಸೂಯೆ ಹೆಚ್ಚು. ಎಷ್ಟೇ ಆಗಲಿ, ಮೊದಲಿಂದ ನಾಲ್ಕಕ್ಷರ ಕಲಿತು ಇತರರಿಗೆ ಕಲಿಸಿದ ಜನ ಅಲ್ಲವೇ!

ರಾತ್ರಿ ಮಕ್ಕಳಿಗೆ ಕತೆ ಹೇಳಿದೆ. ನನ್ನ ಕತೆ ಕೇಳುತ್ತ ಹುಡುಗರು ನಕ್ಕರು, ಅಚ್ಚರಿ ಪಟ್ಟರು. ಒಂದು ಕ್ಷಣ ಭಯಭೀತರಾದರು. ಆಮೇಲೆ ಚಪ್ಪಾಳೆ ತಟ್ಟಿದರು. ಗಿರಿಯಪ್ಪ ಮೇಷ್ಟ್ರು ಹುಡುಗರ ಜೊತೆ ಕುಳಿತದ್ದರಿಂದ ಪಾಪ, ಮಕ್ಕಳು ತಮ್ಮ ಭಾವನೆಗಳನ್ನು ಮುಕ್ತವಾಗಿ ವ್ಯಕ್ತಪಡಿಸುವುದು ಕಷ್ಟವಾಯಿತು. ಅವರೇನಾದರೂ ಗಟ್ಟಿಯಾಗಿ ನಕ್ಕರೆ ಗಿರಿಯಪ್ಪನವರು ತಮ್ಮ ಮೇಷ್ಟ್ರು ಕಂಠದಿಂದ ನಿಯಂತ್ರಿಸುತ್ತಿದ್ದರು. ರಾತ್ರಿ ಹತ್ತರಲ್ಲಿ ಊರ ಹೊರಗೆ, ಹರಿಜನರ ಕೇರಿ ಬಳಿ, ಗದ್ದೆ ಹಿಂಭಾಗಕ್ಕೆ ಮಲವಿಸರ್ಜನೆಗೆ ಹೋದೆ. ಅದು ವಿಶೇಷವಾಗಿ ಕತ್ತಲಾಗುವ ಹೊತ್ತಿನಲ್ಲಿ ಹೆಂಗಸರು ಹೋಗುವ ಜಾಗ. ಮೇಲಿನ ಗದ್ದೆ ಜನ ತಮ್ಮ ಗದ್ದೆಗಳಿಗೆ ನೀರು ಹಾಯಿಸಿಕೊಳ್ಳುತ್ತಿದ್ದರು. ಕೆಲವರು ತಮ್ಮ ಗದ್ದೆ ತುಂಬಿ ತುಳುಕಿದರೂ ಕೆಳಗಿನ ಗದ್ದೆಗಳಿಗೆ, ಅದರಲ್ಲೂ ತಮಗಾದವರ ಗದ್ದೆಗಳಿಗೆ, ಕೆಳವರ್ಗದವರ ಗದ್ದೆಗಳಿಗೆ ನೀರು ಹೋಗಲು ಅವಕಾಶ ಕೊಡುತ್ತಿರಲಿಲ್ಲ. ಎಷ್ಟೋ ಜನ ರಾತ್ರಿ ತಮ್ಮ ಗದ್ದೆಗೆ ನೀರು ಹಾಯಿಸಲು ಕಾಯುತ್ತ ಅಲ್ಲೇ ಮಲಗುತ್ತಾರೆ. ಗದ್ದೆಗಳಿಂದ ವ್ಯರ್ಥವಾಗಿ ಹರಿಯುವ ನೀರಿನಿಂದಾಗಿ ಆ ಪ್ರದೇಶದ ಎಲ್ಲ ಹಳ್ಳಗಳೂ ಸದಾ ತುಂಬಿ ಹರಿಯುತ್ತವೆ.

ರಾತ್ರಿ ಎಮ್ಮೆ ಹಸುಗಳನ್ನು ಕಟ್ಟುವ ಕೊಟ್ಟಿಗೆ ಪಕ್ಕದಲ್ಲೇ ಮಲಗಬೇಕಾಯ್ತು. ಬಾಲ್ಯದಲ್ಲಿ ಹಾಗೆ ಮಲಗಿದ್ದರೂ ಈ ಮಧ್ಯೆ ಅಭ್ಯಾಸ ತಪ್ಪಿ ಗಂಜಳದ ವಾಸನೆ ಮೂಗಿಗೆ ಬಡಿದು ಸ್ವಲ್ಪ ಕಷ್ಟವೇ ಆಯ್ತು. ಮೂಗಿನ ಹತ್ತಿರ ಬಟ್ಟೆ ಇಟ್ಟುಕೊಳ್ಳಬೇಕಾಯ್ತು. ಸಂಜೆ ಮತ್ತು ಮಧ್ಯರಾತ್ರಿ ಆ ಊರಿಗೆ ಒಳ್ಳೆಯ ಮಳೆ ಆಯ್ತು.

## ಕುಕ್ಕುವಾಡ

ಬೆಳಿಗ್ಗೆ (3.6.85) ಶೇಖರಯ್ಯ ದಾರಿಯಲ್ಲಿ ತಿನ್ನಲು ಕರಿದ ಮಂಡಕ್ಕಿ ಸೇಂಗ ಕಟ್ಟಿಸಿಕೊಂಡು ನನ್ನ ಜೊತೆ ಹೊರಟ. ಅವನ ತಂಗಿ ಗಂಗವ್ವನ ಮನೆಗೆ ಹೋದರೆ ಅದು ನಾನು ಬಾಲ್ಯದಲ್ಲಿ ಆ ಊರಲ್ಲಿ ಕಂಡಿದ್ದ ಐನೋರ ಬಡ ಮನೆ ಇದ್ದಂತಿತ್ತು - ಗಂಡ ಚನ್ನಯ್ಯ ಬಡವನಂತೂ ಅಲ್ಲ. ಆಧುನಿಕ ಕಾಲದಲ್ಲಿ ನೀರಾವರಿ ಬಂದು ಹಿಂದಿನ ಮಾವಿನ ಮರಗಳು ಬಹುಪಾಲು ಮಾಯವಾಗಿ, ಶಾಗಲೆಯ ಮಾವಿನಹಣ್ಣು ನನಗೆ ಕನಸಿನ ವಸ್ತುವಾಗಿ ಉಳಿದಿದೆ. ಶಾಗಲೆಯ ಶೇಕಡ ತೊಂಬತ್ತರಷ್ಟು ಜಮೀನು ನೀರಾವರಿಗೊಳಪಟ್ಟಿದೆ. ಆ ಊರಲ್ಲಿ ರಾತ್ರಿ ಮೂರು ಬಸ್ಸುಗಳು ತಂಗುತ್ತವೆ. ದಾವಣಗೆರೆಗೆ ಗಂಟೆಗೊಂದರಂತೆ ಬಸ್ಸು. ಹಿಂದಿನ ಶಾಗಲೆ ಈಗಿನ ಶಾಗಲೆಗಿಂತ ಖಂಡಿತ ಬೇರೆ. ಊರಲ್ಲಿ ಹಲವರು ಶ್ರೀಮಂತರಾಗಿ ತಾರಸಿ ಮನೆಗಳನ್ನೂ ಕಟ್ಟಿಕೊಂಡಿದ್ದಾರೆ.

ದಾರಿಯಲ್ಲಿ ಶಾಗಲೆ ಹಳ್ಳ ತುಂಬಿ ಹರಿಯುತ್ತಿತ್ತು. ಹಿಂದೆ ಬೇಸಗೆಯಲ್ಲಿ ಅಲ್ಲಿ ಹರಿಯುತ್ತಿದ್ದ ಸಣಕಲು ನೀರಿನ ಹರಿವಿಗೆ ಅಡ್ಡಲಾಗಿ ಮಲಗಿ ಮರಳಲ್ಲಿ ಹೊರಳಾಡಿ ಮರಳಲ್ಲಿ ಬೇಕೆಂದೇ ಗುಂಡಿ ತೆಗೆದು ಅಲ್ಲಿ ಒಸರುತ್ತಿದ್ದ ನೀರನ್ನು ಕುಡಿಯುತ್ತಿದ್ದೆವು. ಶಾಗಲೆ ಹಳ್ಳ ಮುಂದೆ ಹಿರೇಹಳ್ಳಕ್ಕೆ ಸೇರಿ ಅವೆರಡೂ ಒಂದಾಗಿ ಹರಿಹರದ ಹತ್ತಿರ ತುಂಗಭದ್ರೆಯನ್ನು ಕೂಡಿಕೊಳ್ಳುತ್ತವೆ. ಹಳ್ಳದ ದಡದ ಮೇಲೆ ಒಂದು ಬ್ರಾಹ್ಮಣರ ಮಠ. ಹಳ್ಳದಾಚೆ ಒಂದೂವರೆ ಮೈಲಿ ದೂರದಲ್ಲಿ ಲೋಕಿಕೆರೆಯ ಕೆರೆಯ ಕೋಡಿ ಬಿದ್ದು ದಾರಿಯ ಮೇಲೆಲ್ಲ ನೀರು ಸಿಕ್ಕಾಪಟ್ಟೆ ಹರಿಯುತ್ತಿತ್ತು. ಕಾಲುವೆ ನೀರಿಂದ ಸದಾ ತುಂಬಿರುವ ಕೆರೆ. ಸ್ವಲ್ಪ ಮಳೆ ಬಂದರೂ ಸಾಕು ಕೋಡಿ ಬೀಳುತ್ತದೆ. ಅಲ್ಲೇ ಒಂದು ಪ್ರೌಢಶಾಲೆಯ ಮುಂದೆ ವಿಶಾಲವಾದ ಬಯಲು. ಹಳ್ಳಿಗೆ ಸಹಜವಾದ ಕೊಳಕು ತಿಪ್ಪೆಗುಂಡಿಗಳು. ಲೋಕಿಕೆರೆ ಎಂಟುನೂರು ಮನೆಗಳಿರುವ ದೊಡ್ಡ ಊರು. ಅಲ್ಲಿನ ದೇವಾಲಯ, ಜನ ಹೇಳುವಂತೆ 'ಜಕಣಾಚಾರಿ' ಕಟ್ಟಿದ್ದು. ಅಷ್ಟೇ ಅಲ್ಲ, ಅದೊಂದು "ಚೋಳರ ಕಟ್ಟಡ". ಅನೇಕ ಪ್ರಾಚೀನ, ಸುಂದರ ದೇವಾಲಯಗಳ ಬಗ್ಗೆ ಇಂತಹ ಮಾತುಗಳನ್ನು ಹೇಳುವುದು ರೂಢಿ. ಅಲ್ಲಿನ ಈಶ್ವರ ದೇವಾಲಯ ಬಹುಶಃ ಸಾವಿರ ವರ್ಷಗಳ ಹಿಂದಿನ, ಗಂಗರ ಕಾಲದ ಉಲ್ಲೇಖಾರ್ಹ ಕಟ್ಟಡ. ಅಲ್ಲಿನ ಭಿತ್ತಿಗಳ ಮೇಲೆ ಕಂಬದ ಶಿಲ್ಪಗಳನ್ನು ಕೊರೆದು ಮೇಲೆ ಸ್ತೂಪಾಕಾರದ 'ಆಶಯ'ಗಳನ್ನು (Motifs) ಬಿಡಿಸಲಾಗಿದೆ. ಹೊರಗೆ ಒಳಗೆ ಶಾಸನಗಳಿವೆ. ದೇವಾಲಯದ ಪೂರ್ವಭಾಗದಲ್ಲಿರುವ ಕಲ್ಲಿನ ಜಾಲಂಧ್ರ ಅತ್ಯಂತ ಆಕರ್ಷಕ. ಈಗಲೂ ಪೂಜೆ ನಡೆಯುತ್ತಿದೆ. ಕೆರೆ ದಾಟಿ ಎರಡು ಮೈಲಿ ಹೋದರೆ ಲೋಕಮ್ಮನ ಗುಡಿ ಇದೆಯಂತೆ. ಏಕೋ ಲೋಕಿಕೆರೆ ಪ್ರಾಚೀನ ಕಾಲದಲ್ಲಿ ಒಂದು ಬೌದ್ಧ ಕೇಂದ್ರವಾಗಿರಬಹುದೇ ಎಂಬ ಅನುಮಾನ (ನೋಡಿ : ಬೌದ್ಧರ ಅವಲೋಕಿತೇಶ್ವರ) ಬಂದಿತು. ಈಶ್ವರ ದೇವಾಲಯದ ಪೌಳಿ ಹೊರಗೆ ಮರದ ಕೆಳಗೆ ಚತುರ್ಮುಖ ವಿಗ್ರಹವೊಂದು ಹಾಳಾಗಿದೆ. ಅಲ್ಲೇ ಸಮೀಪ ಉಕ್ಕಿ ಹರಿಯುತ್ತಿದ್ದ ಕೆರೆ ಕೋಡಿ ಏರಿಯ ಮೇಲೆ ಇನ್ನೊಂದು ಶಿವದೇವಾಲಯ. ಒಳಗೆ ಈಶ್ವರ ವಿಗ್ರಹದ ಜೊತೆಗೆ ಸೂರ್ಯನ ವಿಗ್ರಹವಿತ್ತು. ಸೂರ್ಯನ ಕೈಗಳು ಮುರಿದಿವೆಯಾದರೂ ಕೆಳಗೆ ಪಾದಪೀಠದ ಮೇಲೆ ಸಪ್ತಾಶ್ವಗಳು ಸ್ಪಷ್ಟವಾಗಿವೆ. ಒಳಗಡೆ 11-12ನೇ ಶತಮಾನದ ನಾಲ್ಕಾರು ಮೂರ್ತಿಗಳಿದ್ದುವು. ಎಲ್ಲವೂ ಅನಾಥ. ಮೆಳೆ ಪೊದೆಗಳಿಂದ ಆವೃತವಾಗಿರುವ ಇದನ್ನು ಗವಿಮಠ ದೇವಾಲಯವೆಂದೂ ಕರೆಯುತ್ತಾರೆ. ಊರೊಳಗೆ ಹನುಮ, ಮೈಲಾರಲಿಂಗನ ದೇವಾಲಯಗಳಿವೆ. ಊರಲ್ಲಿ ಅಲ್ಲಲ್ಲಿ ಹಳೆಯ ಶಿಲ್ಪಗಳ ಭಗ್ನಾವಶೇಷಗಳಿವೆ. ದಾರಿಯ ಪಕ್ಕದಲ್ಲಿ ಮೂರು ಸುಂದರ ಮಾಸ್ತಿಕಲ್ಲುಗಳಿವೆ. ಹೊಂಡದ ಪಕ್ಕದಲ್ಲಿದ್ದುವನ್ನು ತಂದು ದಾರಿಯ ಬದಿಗೆ ಹಾಕಿದ್ದಾರೆ. ಅಲ್ಲಿದ್ದ ಒಬ್ಬ ಹೆಂಗಸನ್ನು ಅವುಗಳ ಬಗ್ಗೆ ಏನಾದರೂ ಕತೆ ಉಂಟೇ ಎಂದು ಕೇಳಿದಾಗ, "ಗುಡಿ ಕಟ್ಟಿಸಿ ಕೊಟ್ತೀರಾ?" ಎಂದು ನನ್ನನ್ನು ನೇರವಾಗಿ ಕೇಳಬೇಕೇ ! "ಅದು ನನ್ನ ಕೈಲಿಲ್ಲ" ಎಂದು ನಾನು ನಿಸ್ಸಹಾಯಕತೆ ವ್ಯಕ್ತಪಡಿಸಿದಾಗ, "ಅಷ್ಟೇನಾ!" ಎಂದು ಮುಖ ತಿರುಗಿಸಿ ತಿರಸ್ಕಾರದಿಂದ ಹೋದಳು. ಸರಿಯೇ. ಅವಳಿಗೆ ಬೇಕಾದ್ದನ್ನು ನಾನು ಮಾಡದೇ ಇದ್ದರೆ ನನಗೆ ಬೇಕಾದ್ದನ್ನು ಅವಳೇಕೆ ನೀಡಬೇಕು! ಊರಿನ

ಬಗ್ಗೆ ಅಂತಹ ಕತೆ ಏನೂ ಜನಕ್ಕೆ ತಿಳಿಯದು. ಅಲ್ಲೇ ಒಂದು ವೀರಗಲ್ಲಿತ್ತು. ಲೋಕಿಕೆರೆಯು ಇತಿಹಾಸಕಾರರು ಎಚ್ಚರಿಕೆಯಿಂದ ಶೋಧಿಸಬೇಕಾದ ಒಂದು ಪ್ರಾಚೀನ ಸ್ಥಳವೆಂಬಲ್ಲಿ ಅನುಮಾನವಿಲ್ಲ. ಬಸ್‌ಗಾಗಿ ಜನ ಕಾಯುತ್ತಿದ್ದರು. ನಾನು ಮಾಧ್ಯಮಿಕ ಶಾಲಾ ವಿದ್ಯಾರ್ಥಿಯಾಗಿದ್ದಾಗ ಇಲ್ಲಿನ ಸರ್ಕಾರಿ ಆಸ್ಪತ್ರೆಗೆ ಬಂದು ಔಷಧಿ ಪಡೆದ ಜ್ಞಾಪಕವಿದೆ. ಹಳ್ಳಿಯಾದರೂ ನಗರದ ಛಾಯೆ ಇರುವ ಊರು ಅದು. ಆ ಊರ ಹಳೆಯ ಹೆಸರು “ಲೊಕಿಯ ಕೆರೆ” - ಆ ಊರಲ್ಲಿ ಹದಿಮೂರನೇ ಶತಮಾನದಲ್ಲಿ “ಕೇತೇಶ್ವರ” ದೇವಾಲಯವಿತ್ತೆಂದು ಶಾಸನ ಹೇಳುತ್ತದೆ. (ರೈಸರ ಎಫಿಗ್ರಾಫಿಯ ಕರ್ನಾಟಿಕ. 11, ದಾವಣಗೆರೆ 129 ನೋಡಿ). ಲೋಕಿಕೆರೆ ಊರೊಳಗಿರುವ ಹನ್ನೆರಡು ಹದಿಮೂರನೇ ಶತಮಾನದ ಆ ಕೇತೇಶ್ವರ ಗುಡಿಯ ಒಂದು ಗೂಡಲ್ಲಿ ಹಿಂದಿನ ದಾಖಲೆಗಳು ಇವೆಯೆಂದು ಜನ ನಂಬಿದ್ದಾರೆ.

ಅಲ್ಲಿಂದ ಒಂದು ಮೈಲಿ ದೂರದಲ್ಲಿ ಹಾಳಾಗಿ ಹೋದ ತುರನೂರು ಇದೆ. ದೊಡ್ಡ ಆಲದ ಮರದ ಬಳಿ ದ್ವಾರಪಾಲಕರಿರುವ ಆಂಜನೇಯನ ಗುಡಿ ಇತ್ತು. ಅಲ್ಲೇ ಹಿಂದೆ ಗದ್ದೆಗಳ ಕೆಸರಲ್ಲಿ ಮೂರು ಹಂತಗಳ ಶಿಲ್ಪವಿರುವ ಒಂದು ದೊಡ್ಡ ವೀರಗಲ್ಲಿತ್ತು. ಕೆಸರು, ಮುಳ್ಳುಗಳ ಮಧ್ಯೆ ಅದರ ಸಮೀಪ ದುಸ್ತರದಿಂದ ಹೋಗಿ ನೋಡಿದರೆ ಅದು ತುರುಗೋಳ್ ವೀರಗಲ್ಲು, ತುರುಗಳನ್ನು ಅಪಹರಿಸಿದ ಕಳ್ಳರೊಡನೆ ಹೋರಾಡಿ ಮಡಿದ ವೀರನ ಸ್ಮಾರಕ ಶಿಲೆ ಅದು. “ತುರುವೀರನ ಊರು” ಎಂಬುದೇ “ತುರನೂರು” ಆಯಿತೇ? ತಿಳಿಯದು. ಅಲ್ಲೇ ಸಮೀಪ ಎತ್ತರದ ದಿಬ್ಬದಲ್ಲಿ ಗಿರಿಯಾಪುರ ಊರಿತ್ತು. ಆ ಊರಿನ ಶೇಕಡ ಐವತ್ತರಷ್ಟು ಜನ ಜಂಗಮರು; ಇಂತಹುದು ವಿರಳ. ಕೋಗಲೂರಿನ ನನ್ನ ಸೋದರಮಾವನ (ತಾಯಿಯ ಅಣ್ಣನ) ಮಗಳ ಮನೆಗೆ ಹೋದೆ. ಮಕ್ಕಳು, ಮೊಮ್ಮಕ್ಕಳಿಂದ ತುಂಬಿ ತಕ್ಕಮಟ್ಟಿಗೆ ನೆಮ್ಮದಿಯಾಗಿರುವುದು ಸಂತೋಷವುಂಟುಮಾಡಿತು (ಆಕೆಯ ತೌರುಮನೆಯಲ್ಲಿ ದಟ್ಟ ದಾರಿದ್ರ್ಯ). ಪಕ್ಕದ್ದೇ ನನ್ನ ಇನ್ನೊಬ್ಬ ಸಮೀಪ ಬಂಧು ಮಹಾದೇವಯ್ಯನ ಮನೆ. ನಮ್ಮನ್ನು ಮನೆಯವರು ಗುರುತಿಸದೇ ಹೋದುದರಿಂದ ಹತ್ತು ಹದಿನೈದು ನಿಮಿಷ ಮೌನ ಆವರಿಸಿಬಿಟ್ಟಿತು. ಸ್ವಲ್ಪ ಗಾಬರಿಯೂ ಅವರಿಗೆ ಆಗಿರಬೇಕು. ನಾವು ಯಾರು ಎಂಬುದನ್ನು ವಿವರಿಸಿದ ಮೇಲೆ ಮಾತಿನ ಜೊತೆ ಪ್ರೀತಿಯ ಹೊಳೆಯೂ ಹರಿಯಿತು. ಬೇಡ ನಾಯಕರ ಕೇರಿಯ ತುದಿಯಲ್ಲಿ ಒಂದು ‘ಮಾಷ್ಟವ್ವ’ ಗುಡಿ ಇದೆ. ಅಲ್ಲಿ ಬರೀ ಮಣ್ಣಿನ ರಾಶಿ ಇದೆ (ಒಳಗೆ ಮಾಸ್ತಿ ವಿಗ್ರಹ ಇರಬಹುದು). ಊರ ದೇವರು ಉತ್ಸವ ಹೊರಟಾಗ ಆ ‘ಮಾಷ್ಟವ್ವ’ನ ಗುಡಿಗೆ ಒಂದು ಸುತ್ತು ಹಾಕುತ್ತದೆ. ಬೇಡ ನಾಯಕರ ಮದುವೆ ಆದ ಮೇಲೆ ಇಲ್ಲಿಗೆ ಬಂದು ‘ಮಾಷ್ಟವ್ವ’ನ ಆಶೀರ್ವಾದ ಪಡೆಯುತ್ತಾರೆ. ಬರೀ ಮಣ್ಣಿನ ರಾಶಿಯೇ ಆದರೂ ಮಾಷ್ಟವ್ವ ಎಷ್ಟು ಪ್ರಬಲ ದೇವತೆಯೆಂದರೆ ಅವಳಿಗೆ ಜನ ಹೆದರುತ್ತಾರೆ. ಜಂಗಮರೇ ಹೆಚ್ಚಾಗಿದ್ದರೂ ಊರಲ್ಲಿ ಯಾವುದೇ ಓಲೆಗರಿ ಪ್ರತಿ ಇಲ್ಲವೆಂದು ತಿಳಿಯಿತು.

ಆ ಊರಲ್ಲಿ ತಿಂಡಿ, ಕಾಫಿ ಮುಗಿಸಿಕೊಂಡು ಹೊರಟರೆ ಮತ್ತೆ ಮುಂದೆ ಶಾಗಲೆ ಹಳ್ಳ ಸಿಕ್ಕಿತು. ನೀರಿಗೆ ಪೈಪ್ ಇಳಿಸಿ ಮೋಟಾರ್‌ನಿಂದ ನೀರೆತ್ತಿ ಗದ್ದೆಗಳಿಗೆ ಬಿಟ್ಟುಕೊಳ್ಳುತ್ತಿದ್ದಾರೆ.

ಹಳ್ಳದ ದಡದಲ್ಲೇ ಕುಕ್ಕುವಾಡ ಗ್ರಾಮ. ಅಲ್ಲಿ ಒಂದು ದೊಡ್ಡ ಸಕ್ಕರೆ ಕಾರ್ಖಾನೆಯಿದೆ. ನನ್ನ ಹಿರಿಯ ತಂಗಿಯ ಗಂಡನ ಅಣ್ಣ ಉದ್ದಾನಪ್ಪನವರ ಮನೆಯಲ್ಲಿ ಉಳಿದುಕೊಂಡೆ. ಉದ್ದಾನಪ್ಪ ಸ್ಥಿತಿವಂತರು. ಹೆಚ್ಚು ಮಾತಾಡದ ಮೃದು ಸ್ವಭಾವದ ವ್ಯಕ್ತಿ. ಮಗಳನ್ನು ಸ್ವಲ್ಪ ದಿನಗಳ ಹಿಂದೆ ಬಿ.ಎ. ಪದವೀಧರರೊಂದಿಗೆ ಮದುವೆ ಮಾಡಿಕೊಟ್ಟಿದ್ದರು. ವರದಕ್ಷಿಣೆ ರೂ. 30000/- ಸೇರಿದಂತೆ ಒಟ್ಟು ಮದುವೆಗೆ ರೂ. 80000/- ಖರ್ಚಾಯಿತೆಂದು ತಿಳಿಯಿತು. ಒಬ್ಬ ಮಗ ದಾವಣಗೆರೆ ಬ್ಯಾಂಕಿನಲ್ಲಿದ್ದಾನೆ. ಇದ್ದುದರಲ್ಲಿ ತೃಪ್ತ ಕುಟುಂಬ.

ಇನ್ನೊಬ್ಬ ಬಂಧು ಬಸವಲಿಂಗಯ್ಯನವರದು ವಿಘಟಿತ ಅಸುಖಿ ಸಂಸಾರ. ಮಕ್ಕಳು, ಸೊಸೆಯಂದಿರು, ಮೊಮ್ಮಕ್ಕಳು ಸೇರಿ ಒಟ್ಟು ಇಪ್ಪತ್ತೈದು ಜನ. ಮಕ್ಕಳು ಬೇರೆಯಾಗಿರುವುದು ಅವರಿಗೆ ಸಮಾಧಾನ ತಂದಿಲ್ಲ. ಅವರ ಅಣ್ಣ ಮಹಾದೇವಯ್ಯನವರದು ಸಂಪೂರ್ಣವಾಗಿ ಸಂಪ್ರದಾಯಬದ್ಧ ದೃಷ್ಟಿ.

ಒಂದೆರಡು ದಿನಗಳ ದಿನಚರಿ ಬಾಕಿ ಉಳಿದುದನ್ನು ಅಂದು ಕುಳಿತು ಬರೆದೆ. ಸಂಜೆ ಅಳಿಯ ಬಂದಾಗ ಇಡೀ ಮನೆ ಸಡಗರಗೊಂಡಿತು. ಹಳ್ಳಿಗರಲ್ಲಿ 'ಮನೆ ಅಳಿಯ'ನನ್ನು ಕಂಡರೆ ಹುಡುಗರಿಗಂತೂ ವಿನೋದ. ನಾನು ಕತೆ ಹೇಳುತ್ತಿದ್ದರೆ ಅವು ಅಲ್ಲೇ ಕುಳಿತಿದ್ದ ಅಳಿಯನ ಕಡೆ ನೋಡಿ ತುಂಟ ನಗೆ ಬೀರುತ್ತಿದ್ದವು. ಹೊಸ ವಧು-ಮನೆಯ ಮಗಳು ಖುಷಿಯಾಗಿದ್ದಳು. ಆಕೆ ಮನೆಗೆ ಬಂದ ಗಂಡನಿಗೆ ತಿಂಡಿ ಕೊಡುವ ಸಡಗರದಲ್ಲಿದ್ದರೆ, ಆಕೆಯ ತಾಯಿಯಾದಿಯಾಗಿ ಎಲ್ಲರೂ ಬಂದು ಮಕ್ಕಳ ಜೊತೆ ಕತೆ ಕೇಳಲು ಕುಳಿತುಬಿಟ್ಟಿದ್ದರು. ಹಾಗೆ ಕುಳ್ಳಿರುವುದರಲ್ಲಿ ರಸಿಕ ಔಚಿತ್ಯವೂ ಇತ್ತು.

ರಾತ್ರಿ ಹತ್ತು ಗಂಟೆಗೆ ಹಳ್ಳದ ಸಮೀಪ ಟಾರ್ಚ್ ಸಮೇತ 'ನೀರು ಕಡೆ' ಹೋದಾಗ, ಹಳ್ಳದ ಆಚೆ ದಡದಿಂದ ಧ್ವನಿವರ್ಧಕದ ಮೂಲಕ ಟೆಂಟ್ ಸಿನಿಮಾದ ಹಾಡುಗಳು ಕೇಳಿ ಬರುತ್ತಿದ್ದುವು. ಅದು ನೂರೈವತ್ತು ಇನ್ನೂರು ಮನೆ ಇರುವ ಗ್ರಾಮವಾದ್ದರಿಂದ ಸಿನಿಮಾದ್ದು ಒಂದೇ ಷೋ - ಸೆಕಂಡ್ ಷೋ, ರಾತ್ರಿ ಹತ್ತು ಗಂಟೆಗೆ. ದೊಡ್ಡ ಗ್ರಾಮವಾದ ಲೋಕಿಕೆರೆಯಲ್ಲಿ ಫಸ್ಟ್ ಷೋ ಮತ್ತು ಸೆಕಂಡ್ ಷೋ ಎರಡೂ ಉಂಟು.

## ದಾವಣಗೆರೆ

ಬೆಳಿಗ್ಗೆ (4.6.85) ನಾನೊಬ್ಬನೇ ಹನ್ನೊಂದು ಮೈಲಿ ದೂರದ ದಾವಣಗೆರೆಗೆ ಹೊರಟೆ. ನನ್ನ ಜೊತೆ ಹೊರಟ ಉದ್ದಾನಪ್ಪನವರನ್ನು ತಡೆದೆ. ಅವರ ಮಗ ಗುರುದೇವ್ ನನ್ನ ಚೀಲ ತೆಗೆದುಕೊಂಡು ಮೋಟಾರ್ ಬೈಕಿನಲ್ಲಿ ದಾವಣಗೆರೆಗೆ ಹೋದ. ಕೈಯಲ್ಲಿ ನೀರಿನ ಬಾಟ್ಲಿ, ತಿಂಡಿ ಪೊಟ್ಟಣ ಇದ್ದ ಚೀಲ ಮಾತ್ರ. ಉದ್ದಕ್ಕೂ ಹಸಿರು ಗದ್ದೆಗಳು, ಅಲ್ಲಲ್ಲಿ ಮಧ್ಯೆ ಬೆದ್ದಲು ಭೂಮಿ. ಹೈಸ್ಕೂಲ್ ವಿದ್ಯಾರ್ಥಿಯಾಗಿದ್ದಾಗ ನನ್ನ ಹಳ್ಳಿಯಿಂದ ಸಮೀಪ ಅಲ್ಲಿಗೆ ಆರು ಮೈಲಿ ದೂರದ ತ್ಯಾವಣಗಿಯಲ್ಲಿ ಬಸ್ ಹತ್ತಿ ದಾವಣಗೆರೆಗೆ ಬರುತ್ತಿದ್ದ ಪರಿಚಿತ ರಸ್ತೆ. ದಾರಿಯಲ್ಲಿ ಹದಡಿ ಕೆರೆ ಮೇಲೆ ನಡೆದು ಹೋಗುವಾಗ, ಹಿಂದೊಮ್ಮೆ ಬಸ್ಸಿನಲ್ಲಿ

ಬರುವಾಗ ಬೆಳದಿಂಗಳ ಪ್ರತಿಫಲನದಿಂದ ಇಡೀ ಕೆರೆ ಜಾಜ್ವಲ್ಯಮಾನವಾಗಿದ್ದ ದೃಶ್ಯ ನೆನಪಿಗೆ ಬಂದಿತು. ಅದೇ ಬಸ್ಸಿನಲ್ಲಿ ನನ್ನ ಒಬ್ಬ ಹೈಸ್ಕೂಲ್ ಗುರುಗಳೂ ಬಂದರು. ಅವರು ಮಾರನೆಯ ದಿನ ಕೆರೆಯಲ್ಲಿ ಕಂಡ ಸುಂದರ ದೃಶ್ಯದ ಬಗ್ಗೆ ನನ್ನನ್ನು ಪ್ರಶ್ನಿಸಿ, "ದೃಶ್ಯ ಹೇಗಿತ್ತು" ಎಂದರು. ಅವರು ಬಹು ಸಂತೋಷಪಟ್ಟಿದ್ದರು. ಹಳ್ಳಿಗಳಲ್ಲಿ ನನಗೆ ತೀರ ಪರಿಚಿತವಾದ ಆ ದೃಶ್ಯ ನನ್ನ ಗುರುಗಳ ಗಮನವನ್ನು ಸೆಳೆದುದರ ಕಾರಣವೋ ಏನೋ - ಚಂದ್ರ, ಪ್ರಕೃತಿ ಸೌಂದರ್ಯ ನನಗೆ ಅಂದು ಇನ್ನೂ ಹೆಚ್ಚು ಪ್ರಿಯವಾದುವು. ಚಂದ್ರ ಇನ್ನೂ ನನ್ನ ಹತ್ತಿರಕ್ಕೆ ಸರಿದ. ಆ ಕೆರೆಯ ಆರಂಭದ ಏರನ್ನು ಹತ್ತುತ್ತಿದ್ದಂತೆ ಏರಿ ಹಿಂದೆಯೇ ಇದ್ದ ಮಾರಿ ಗುಡಿ ('ಮಾರಿಕಾಂಬಾ ದೇವಾಲಯ') ಕಾಣಿಸಿತು. ಬರಿಯ ಮುಳ್ಳುಗಳೇ ಇರುವ ಒಂದು ದೊಡ್ಡ ಜಾಲಿಮರದ ಕೆಳಗೆ ಸಿಮೆಂಟು ಹಾಕಿ ಸೈಜ್‌ಗಲ್ಲಿನಲ್ಲಿ ಕಟ್ಟಿ ಬಣ್ಣ ಬಳಿದ ಗುಡಿಯ ಒಳಗೆ ಒಂದು ಹಳೆಯ ದೇವಿ ವಿಗ್ರಹವಿತ್ತು. ಅದಕ್ಕೆ ಕುಂಕುಮ, ಅರಿಸಿಣ, ರಕ್ತ ಮೆತ್ತಿತ್ತು. ಮೆಟ್ಟಿಲೆಲ್ಲ ರಕ್ತಮಯ. ಇಡೀ ಜಾಲಿಮರಕ್ಕೆ ಅಕ್ಷರಶಃ ನೂರಾರು ಕೋಳಿ ತಲೆ, ತಗರು ಮೇಕೆ ಕುರಿಗಳ ಕಾಲುಗಳನ್ನು ನೇತು ಹಾಕಲಾಗಿತ್ತು. ಒಂದು ಚಿಕ್ಕ ಹಗ್ಗದ ಉಯ್ಯಾಲೆಯಲ್ಲಿ ಕಲ್ಲನ್ನು ಕಟ್ಟಲಾಗಿತ್ತು. ಮಕ್ಕಳಾಗದವರ ಹರಕೆ ಅದು - ತಮಗೆ ಮಗುವಾಗಿ ಕೈಯಿಂದ ತೊಟ್ಟಿಲು ತೂಗುವಂತಾಗಲಿ ಎಂಬ ಬೇಡಿಕೆಯ ಸಂಕೇತ ಅದು. ಗುಡಿಯ ಸುತ್ತ ಜಾಲಿಮರಗಳು, ಬೇವಿನ ಮರ ಲಂಟಾನ ಪೊದೆಗಳು. ಹಿಂದೆ ಏರಿ ಕೆಳಗೆ ಗದ್ದೆಗಳಲ್ಲಿ ನಿರಾತಂಕವಾಗಿ ಹಸಿರಾಗಿ ಮಲಗಿದ್ದ ಬತ್ತದ ಬೆಳೆಯ ಬಯಲು. ಕೆರೆ ನೀರಿನಿಂದ ತುಂಬಿತ್ತು. ನೀರಲ್ಲಿ ಆಪಿನ ಜೊಂಡು ಯಥೇಷ್ಟವಾಗಿ ಬೆಳೆದಿತ್ತು. ಬೆಳ್ಳಕ್ಕಿ, ಕರಿ ಹಂಸ, ಮೀಂಚುಳ್ಳಿ, ಕೊಕ್ಕರೆ, ನೀರ ಮೇಲೆ ಹರಡಿಕೊಂಡಿದ್ದ ಎಲೆಗಳ ಮೇಲೆ ನಡೆದಾಡುವ ಹಕ್ಕಿಗಳು, ನೀರಿನ ಪದರನ್ನೇ ಕಾಲಿಗೆ ತಾಕಿಸಿಕೊಳ್ಳುತ್ತ ಹಾರುವ ಹಕ್ಕಿಗಳು. ಅದೊಂದು ವೈವಿಧ್ಯಮಯ ಪಕ್ಷಿ ಜಗತ್ತಾಗಿತ್ತು. ದಾವಣಗೆರೆ ಸಮೀಪದ ಒಂದು ವಿಶ್ರಾಂತಿ ನಿಲ್ದಾಣವಾಗಿ ಅದನ್ನು ಬೆಳೆಸಬಹುದೆಂಬ ಯೋಚನೆ ಬಂದರೂ ಅದು ಕುಡುಕರಿಂದ ಜೂಜುಗಾರರಿಂದ ಮಜಾಗಾರರಿಂದ ತನ್ನ ಚೆಲುವು ಶಾಂತಿ ಎರಡನ್ನೂ ಕಳೆದುಕೊಳ್ಳುವ ಭೀತಿಯೂ ಮೂಡಿತು. ಊರಲ್ಲಿ ಕೊಳವೆ ಬಾವಿಗಳಿದ್ದರೂ ಕೆರೆ ಅಂಚಿನ ಬಾವಿಯಿಂದ ಕುಡಿಯುವ ನೀರನ್ನು ಸೇದಿಕೊಂಡು ಕೊಡಗಳಲ್ಲಿ ಒಯ್ಯುತ್ತಿದ್ದರು. ಊರೊಳಗಿನ ಕೊಳವೆ ಬಾವಿಯಿಂದ ಡಬ್ಬಿಗೆ ನೀರು ತುಂಬಿಕೊಂಡೆ; ಉಪ್ಪು ನೀರು. ನನ್ನ ಬಗ್ಗೆ ಯಾವನೋ ಹುಡುಗ ಸ್ವಲ್ಪ ಕುಚೋದ್ಯದ ಮಾತಾಡಿದಂತೆ ಅನ್ನಿಸಿತು. ಏಳು ಗಂಟೆಗೇ ಊರ ಜನ ಚಾದಂಗಡಿಗಳಲ್ಲಿ ಚಾ ಹೀರುತ್ತಿದ್ದರು. ಪುಟ್ಟ ಹಳ್ಳಿಯಾದರೂ ಹತ್ತು ಮನೆಗಳಿಗೊಂದು ಚಾದಂಗಡಿ ಇತ್ತು. ನಗರಕ್ಕೆ ಸಮೀಪವಾಗಿರುವ ಮತ್ತು ನೂರಾರು ಬಸ್ ಓಡಾಡುವ ರಸ್ತೆ ಬದಿ ಊರು ತಾನೇ! ಬ್ರಾಂದಿ ಅಂಗಡಿಯೊಂದೂ ರಸ್ತೆಯ ಬದಿಯಲ್ಲಿತ್ತು.

ಮರಗಳಲ್ಲಿ ಕಡ್ಡಿಗಳಿಂದ ಗೂಡುಕಟ್ಟುವ ಹಳದಿ ತಲೆಯ ಹಕ್ಕಿಗಳು ತದೇಕ ಚಿತ್ತದಿಂದ ಕಾರ್ಯ ಮಗ್ನವಾಗಿರುವುದನ್ನು ಕೆಲ ಕಾಲ ನಿಂತು ಗಮನಿಸಿದೆ. ಒಂದು ಗೂಡು ಮುಕ್ಕಾಲು

ಮುಗಿದಿತ್ತು. ಇನ್ನೊಂದು ಆರಂಭದ ದೆಸೆಯಲ್ಲಿತ್ತು. "ಗುದ್ದಲಿ ಪೂಜೆ" ಮುಗಿಸಿ "ಬೇಸ್‌ಮೆಂಟ್" ಆರಂಭಿಸಿತ್ತು. ಗೂಡು ಹೆಣೆಯುವಾಗ ಬಿದ್ದ ಹುಲ್ಲುಕಡ್ಡಿಗಳು ಬೇಲಿಯ ಮೇಲೆ ಬಿದ್ದಿದ್ದುವು, ಆಗಾಗ್ಗೆ ತೀರ ವಿರಳವಾಗಿ ಬೀಳುತ್ತಿದ್ದುವು. (ನಾನು ಬೆಂಗಳೂರಲ್ಲಿ ಬೇಸ್‌ಮೆಂಟ್ ಹಾಕಿಸಿ, ಗೋಡೆ ಏಳಿಸುವ ಮುನ್ನವೇ ಬಂದು ಬಿಟ್ಟಿದ್ದೇನೆ. ಮುಗಿಸುವುದು ಯಾವಾಗ ? ನನಗೆ ಒಂದು ಕ್ಷಣ ಲಜ್ಜೆಯಾಯಿತು). ದಾರಿಯಲ್ಲಿ "ಕರಿತಾಯಿ" ಎಂಬ ಅಡ್ಡ ಹೆಸರಿನ (=ಕರಿಯವ್ವ, ಕರಿಮಾಯಿ) ವ್ಯಕ್ತಿಯೊಬ್ಬರು ನನಗೆ ಸಿಕ್ಕರು. ಮುಂದೆ, 'ತರಳಬಾಳು ನಗರ'ದ ಬಳಿ ದೊಡ್ಡ ಕೋಳಿ ಸಾಕಾಣಿಕೆ ಕೇಂದ್ರವಿತ್ತು. ಅಲ್ಲೆಲ್ಲ ಆಂಧ್ರದ ರೈತರು ಹೆಚ್ಚಾಗಿ ಗದ್ದೆಗಳನ್ನು ಕೊಂಡು ವ್ಯವಸಾಯ ಮಾಡುತ್ತಿದ್ದಾರೆ. ಇಲ್ಲಿಯವರಿಗಿಂತ ಹೆಚ್ಚು ಚೆನ್ನಾಗಿ ದುಡಿದು ಬೆಳೆ ತೆಗೆಯುವ ಜನ ಅವರು. ಹೆಚ್ಚು ಇಳುವರಿಯ ರಹಸ್ಯವನ್ನು ತಮಗೆ ಬಿಟ್ಟುಕೊಡುತ್ತಿಲ್ಲವೆಂದು ಸ್ಥಳೀಯ ರೈತರು ಕೊರಗಿದ್ದರು, ಗೊಣಗಿದ್ದರು. ದಾರಿಯಲ್ಲಿ ಒಂದು ರೈಸ್ ಮಿಲ್ ಸಮೀಪ ಕುಳಿತು ತಿಂಡಿ ತಿಂದೆ. ಅರ್ಧ ತಿಂದು ಉಳಿದುದನ್ನು ಅಲ್ಲೇ ಸಮೀಪ ಇದ್ದ ಸಾರಾಯಿ ಅಂಗಡಿ ಕೆಲಸದವನಿಗೆ ಕೊಟ್ಟೆ. ಬೆಳಗಿನ ಹವಾ ಹಿತವಾಗಿತ್ತು. ನಾನು ಬರುವುದನ್ನು ತಿಳಿದಿದ್ದ ಪ್ರೊ ಬಿ.ವಿ. ವೀರಭದ್ರಪ್ಪ, ಅವರ ಮಗಳು, ದುಷ್ಯಂತರಾಜ್ ಇವರು ಮೂವರೂ ದಾವಣಗೆರೆಯಿಂದ ಹೊರಟು ಸಿರುಮಗೊಂಡನಹಳ್ಳಿಗೆ ಮುಂಚೆ ನನಗೆ ಎದುರಾದರು. ಹರಟೆ ಹೊಡೆಯುತ್ತ ಸಿರುಮಗೊಂಡನಹಳ್ಳಿಗೆ ಬಂದಾಗ ಅಪ್ಪಟ ಹಳ್ಳಿ ಭಾಷೆಯಲ್ಲಿ ಮಾತನಾಡುವ ಭೀಮಪ್ಪನವರ ಪರಿಚಯವಾಯ್ತು. ಊರಲ್ಲಿ ಕೋಟೆ ಭರಮಪ್ಪನ ಗುಡಿ ಇದ್ದರೂ ಈಗ ಕೋಟೆ ಯಾವುದೂ ಇಲ್ಲ. ಆ ಊರಲ್ಲೊಂದು ಇದ್ದಿತೆಂದು ಹೇಳಲಾದ ಶಾಸನವು ಆಂಜನೇಯನ ಗುಡಿ ಹತ್ತಿರ ಹೂತು ಹೋಗಿರುವ ಸಾಧ್ಯತೆ ಇದೆ. ಆ ಊರಿನ ಸಮೀಪದ ನಾಗನೂರಿನಲ್ಲಿ ನಡೆಯುವ ಮಾಹೇಶ್ವರನ ಜಾತ್ರೆಯನ್ನು ಊರಿನ ಜನರೂ ಸೇರಿದಂತೆ ಶಾಮನೂರು, ಸಿರುಮಗೊಂಡನಹಳ್ಳಿ, ನಿಟುವಳ್ಳಿಗಳ ಜನ ಸೇರಿ ನಡೆಸುತ್ತಿದ್ದರು. ಒಮ್ಮೆ ಸಿರುಮಗೊಂಡನಹಳ್ಳಿಯಲ್ಲಿ ಕಾಲರಾ ಕಾಣಿಸಿಕೊಂಡಾಗ ಆ ಊರಿನ ಜನರನ್ನು ಸೇರಿಸಿಕೊಳ್ಳದೆ ನಾಗನೂರಿನವರು ಅವರ ದೇವರನ್ನು ಮಾತ್ರ ತೆಗೆದುಕೊಂಡು ಹೋಗಿ ಮಾಹೇಶ್ವರನ ಜಾತ್ರೆ ಮಾಡಿಕೊಂಡರು. ಅಂದಿನಿಂದ ಸಿರುಮಗೊಂಡನಹಳ್ಳಿಯವರು ಆ ಜಾತ್ರೆಗೆ ಹೋಗುವುದನ್ನೇ ನಿಲ್ಲಿಸಿದರೂ ತಮ್ಮ ಊರಿನ ದೈವವನ್ನು ಮಾತ್ರ ಕಳಿಸಿಕೊಡುತ್ತಾರೆ. ("ಮಾಹೇಶ್ವರನ ಜಾತ್ರೆ" ಮೂಲತಃ ಸಾಂಕ್ರಾಮಿಕ ರೋಗ ನಿವಾರಣೆಗೆ ಮಾಡುವ ದೈವ ಪ್ರೀತ್ಯರ್ಥದ ಆರಾಧನೆ ಎಂಬ ಊಹೆಯನ್ನು ಮಾಡಬಹುದು). ನಾಗನೂರಿನ ಜನ ಝೋರು; ಈಗ ಅವರೇ ಹಣ ಹಾಕಿಕೊಂಡು ಜಾತ್ರೆ ನಡೆಸುತ್ತಾರೆ. 'ಕಪ್ಪು ಜನ' ಬಿಟ್ಟು ('ಕಪ್ಪು ಜನ' ಎಂದರೆ ಅಸ್ಪೃಶ್ಯ ಜನ) ಉಳಿದವರೆಲ್ಲ ಊಟಕ್ಕೆ ಹೋಗಬಹುದು. ಯಾವ ಹೆಂಗಸರೂ ಹೋಗುವಂತಿಲ್ಲ (ಒಮ್ಮೆ ಗಂಡು ವೇಷ ಹಾಕಿಕೊಂಡು ಹೋದ ಹುಡುಗಿಗೆ ತೊಂದರೆಯಾಯಿತೆಂಬ ಕತೆ ಇಲ್ಲೂ ಇದೆ)

ಸಿರುಮಗೊಂಡನಹಳ್ಳಿ ದಾಟಿ ದಾವಣಗೆರೆ ಸಮೀಪಿಸುತ್ತಿದ್ದಂತೆ ನನ್ನ ತಂಗಿಯ ಅಳಿಯ ಬಸವರಾಜ್, ತಂಗಿಯ ಮಕ್ಕಳು ನಿರ್ಮಲ, ಕಲ್ಪನ, ಅವರ ಗೆಳತಿ ಇಷ್ಟು ಜನ ಎದುರುಗೊಳ್ಳಲು ಬರುತ್ತಿದ್ದರು. ಐ.ಟಿ.ಐ. ಬಳಿ ಬಂದಾಗ ಯಾರೋ ಹುಡುಗರು ವೀರಭದ್ರಪ್ಪನವರನ್ನೋ ದುಷ್ಯಂತರಾಜರನ್ನೋ ಗಮನದಲ್ಲಿಟ್ಟುಕೊಂಡು, ಪಿ.ಯು.ಸಿ. ಪರೀಕ್ಷೆಯಲ್ಲಿ ನಮಗೆ ಪರೀಕ್ಷೆ ಮೇಲ್ವಿಚಾರಕರಾಗಿದ್ದರು ಎಂದು ಗಟ್ಟಿಯಾಗಿ ಪರಸ್ಪರ ಮಾತನಾಡಿಕೊಂಡ ರೀತಿಯಲ್ಲಿ ಸ್ವಲ್ಪ ಹುಡುಗುತನವಿತ್ತು.

ಬೆಳಿಗ್ಗೆ ತಣ್ಣಗೆ ಹನಿದು ಮೋಡ ಇದ್ದುದರಿಂದ ಹನ್ನೊಂದು ಮೈಲಿ ನಡೆದರೂ ಅಷ್ಟು ಆಯಾಸವಾಗಿರಲಿಲ್ಲ. ತಂಗಿ ರತ್ನಮ್ಮನ ಮನೆ ಬಂದೂರ್ ಕ್ಯಾಂಪಿನಲ್ಲಿದೆ (ಈಗ ಅದು ಕೆ.ಟಿ. ಜಂಬಣ್ಣನಗರ). 'ಬಂದವರ' ಕ್ಯಾಂಪ್ : ಅಲ್ಲಿ ಬಹುತೇಕ ಆರ್ಥಿಕವಾಗಿ ಬಡವರು ಅಥವಾ ಇನ್ನೂ ತೀರ ಬಡವರೇ ಹೆಚ್ಚು. ಅದನ್ನು ಕೊಳೆಗೇರಿ ಎನ್ನದಿದ್ದರೂ, ಕೆಲವು ಭಾಗಗಳು ಆ ಮಾತಿಗೆ ಅನ್ವರ್ಥವಾಗುವಂತೆ ಇವೆ. ನಾವು ಕುಳಿತಿರುವಾಗಲೇ ಒಬ್ಬ ಮೆಡಿಕಲ್ ಪ್ರತಿನಿಧಿ, ಆತನ ಪತ್ನಿ ಅರ್ಥಶಾಸ್ತ್ರ ಅಧ್ಯಾಪಕಿ ಬಂದರು. ಎ.ವಿ.ಕೆ. ಮಹಿಳಾ ಕಾಲೇಜಿನವರು ಆಕೆಯ ಧೈರ್ಯದ ನಡವಳಿಕೆ ಕಂಡು ಅಪಾರ್ಥ ಮಾಡಿಕೊಂಡು ಕೆಲಸದಿಂದ ತೆಗೆದಿದ್ದರು. ಆಕೆ ಬುದ್ಧಿವಂತೆ ಎಂಬಲ್ಲಿ ಅನುಮಾನವಿಲ್ಲ. ಎಲ್ಲ ಕಡೆಗೂ ಇದೇ ಗೋಳು. ದಿಟ್ಟರಾಗಿರಬಾರದು, ಹೇಳಿದಂತೆ ಕೇಳಿಕೊಂಡಿರಬೇಕು. ಆಗ ಮಾತ್ರ ಎಲ್ಲರೂ ಕ್ಷೇಮ. ನನ್ನ ಕಾಲ್ನಡಿಗೆ ವಿಷಯ ಅವರಿಗೆ ಬೆರಗನ್ನು ತಂದಿತು. ನನ್ನನ್ನು ಸಮೀಪದ ಊರುಗಳಿಗೆ ತಮ್ಮ ವಾಹನದಲ್ಲಿ ಕರೆದೊಯ್ಯಲು ಅವರು ಮುಂದಾದರು. ಸಹಜವಾಗಿಯೇ ಅದನ್ನು ನಾನು ಸ್ನೇಹದಿಂದ ನಿರಾಕರಿಸಿದೆ. ನನ್ನ ತಂಗಿಯ ಹಿರಿಯ ಮಗಳಿಗೆ ಮೆಡಿಕಲ್ ಪ್ರತಿನಿಧಿ ಬಿಟ್ಟಿಯಾಗಿ ಟಾನಿಕ್, ಔಷಧಿ ಕೊಡುತ್ತಾರೆ.

ಸಂಜೆ ಐದರ ಹೊತ್ತಿಗೆ ನಿರ್ಮಲ ನನ್ನ ಹೆಂಡತಿಯ ತಮ್ಮ ಸಿದ್ದೇಶನ ಮನೆಗೆ ಹೋಗಿ ನನಗೆ ಬಂದಿದ್ದ ಕಾಗದ ತಂದಿದ್ದಳು. ಒಂದು, ವಿನಯನದು; ಇನ್ನೊಂದು ರೇಣುಕಾರಾಧ್ಯರದು. ವಿನಯ್ ತನ್ನ ಹಾಕಿ ಆಟ ನಿರಾಶಾದಾಯಕವಾಗಿತ್ತೆಂದು ತಿಳಿಸಿ, ನನ್ನ ನಡಗೆಯ ಉದ್ದೇಶ, ಚಲದ ಬಗ್ಗೆ ಆಶ್ಚರ್ಯವನ್ನು ವ್ಯಕ್ತಪಡಿಸಿದ್ದ. ರೇಣುಕಾರಾಧ್ಯರ ಪತ್ರದಿಂದ ನನ್ನ ಮನೆಯಲ್ಲಿ ಎಲ್ಲರೂ ಆರೋಗ್ಯವೆಂದು ತಿಳಿದು ಸಮಾಧಾನವಾಯ್ತು. ಧಾರವಾಡದಿಂದ ಡಾ. ಕಲ್ಬುರ್ಗಿ ಹಂಪಿಗೆ ಬಂದು ನನ್ನ ಜೊತೆ ಮಾತನಾಡುವವರಿದ್ದಾರೆ ಎಂಬ ಸೂಚನೆ ಅಲ್ಲಿತ್ತು. ನೂರು ರೂಪಾಯಿ ಮನಿ ಆರ್ಡರ್ ಕೂಡ ಮನೆಯಿಂದ ಬಂದಿತ್ತು. ಸಂಜೆಯೆಲ್ಲ ಪೂರ್ತಿ ವಿಶ್ರಾಂತಿ ತೆಗೆದುಕೊಂಡೆ. ನನ್ನ ಅತ್ತೆ, ಅವರ ಹಿರಿಯ ಮಗ ಪಂಚಾಕ್ಷರಯ್ಯ ಮತ್ತು ಅವರ ಹೆಂಡತಿ, ಎರಡನೆಯ ಮಗ ಸಿದ್ದೇಶ ಎಲ್ಲರೂ ಬಂದು ನನ್ನ ಆರೋಗ್ಯ ವಿಚಾರಿಸಿ ಆತಂಕಪಟ್ಟರು. ಎಲ್ಲರಿಗೂ ಸಮಾಧಾನ ಹೇಳಿದೆ.

## ಶಾಮನೂರು

ಬೆಳಿಗ್ಗೆ (5.6.85) ಹದಡಿ ರಸ್ತೆಯ ಪಕ್ಕದಲ್ಲಿರುವ ವಿದ್ಯಾನಗರ ಬಡಾವಣೆಗೆ ಹೋದೆ. ಅಲ್ಲಿಂದ ವೀರಭದ್ರಪ್ಪ ಮತ್ತು ನಾನು ಅಲ್ಲಿಗೆ ಸುಮಾರು ಮೂರು ಮೈಲಿ ದೂರದ ಶಾಮನೂರಿಗೆ ಹೋದೆವು. ಎಂಟುನೂರು ವರ್ಷಗಳ ಹಿಂದೆ ಅದು ಸೆಂಬನೂರ್ ಎಂಬ ಹೆಸರಿನ ಪ್ರಸಿದ್ಧ ಜೈನ ಕೇಂದ್ರವಾಗಿತ್ತು. ನೂರು ವರ್ಷಗಳ ಹಿಂದೆ ಜನರ ಬಾಯಲ್ಲಿ "ಶಾಬನೂರು" ಎಂದೇ ಬಳಕೆಯಲ್ಲಿತ್ತು (ಆಗ ದಾವಣಗೆರೆ ಈಗ ಹಳ್ಳಿಯಂತಿರುವ ಬೇತೂರು ಅಥವಾ "ಬೆಳ್ತುರು" ಗ್ರಾಮದ ಭಾಗವಾಗಿತ್ತು. ಬೇತೂರು ಈಗ ದಾವಣಗೆರೆಯ ಒಂದು ಬಡಾವಣೆಯಂತಾಗಿದೆ.) 1945-50ರಲ್ಲಿ ನಾನು ದಾವಣಗೆರೆಯ ಜಯದೇವ ವಿದ್ಯಾರ್ಥಿನಿಲಯದಲ್ಲಿದ್ದಾಗ ಶಾಮನೂರಿನ ಹುಡುಗರಿಗೆ ಹಾಸ್ಟಲಿನಲ್ಲಿ ಊಟ ವಸತಿಗೆ ಸೀಟು ಕೊಡುತ್ತಿದ್ದರು. ಅದೊಂದು ದೊಡ್ಡ ಊರು. ಅಲ್ಲಿ ಕೋಟೆ, ಪೇಟೆ ಎಂಬ ಎರಡು ಭಾಗಗಳಿದ್ದು ಕೋಟೆ ಭಾಗದಲ್ಲಿ ಒಂದು ಬಸದಿ ಇದೆ. ಅಲ್ಲಿನ ದೇವರನ್ನು "ಬಸಲಿ ದೇವರು" ಎನ್ನುತ್ತಾರೆ - ಊರ ಜನರ ಪ್ರಕಾರ ಅದು ಹೆಣ್ಣು ದೇವರಾದರೂ ಅದು ವಾಸ್ತವವಾಗಿ ಮಹಾವೀರ ತೀರ್ಥಂಕರ (ಆ ತೀರ್ಥಂಕರನ ಸಿಂಹ ಲಾಂಛನ ಸ್ಪಷ್ಟವಾಗಿದೆ). ಕೊಪ್ಪಳದಲ್ಲೂ ನಗ್ನ ಬಾಹುಬಲಿ ವಿಗ್ರಹವನ್ನು ಹೆಣ್ಣೆಂದು ಜನ ಕರೆಯುತ್ತಾರೆ ! ಆ ನಗ್ನ ಜಿನಮೂರ್ತಿಗೆ ವಿಭೂತಿ ಹಚ್ಚಿ ವೀರಶೈವರು ತಮ್ಮ ದೇವರಾಗಿ ಮಾಡಿಕೊಂಡಿದ್ದಾರೆ. ಶಿವರಾತ್ರಿ, ಕಾರ್ತಿಕ ದಿನಗಳಂದು ಅಲ್ಲಿ ಶಿವಪುರಾಣ, ಶಿವಕೀರ್ತನೆಗಳು ನಡೆಯುತ್ತವೆ. ಊರಿನ ಜೈನರು ವೀರಶೈವರಾದಾಗ ಆ ಜೈನರ ದೇವರೂ ಅನಿವಾರ್ಯವಾಗಿ ವೀರಶೈವನಾಗಿಬಿಟ್ಟ (ತಿಪಟೂರು ತಾಲೂಕಿನಲ್ಲಿಯೂ ಅಂತಹ ಒಂದು ನಿದರ್ಶನವಿದೆಯೆಂದು ಕೇಳಿದ್ದೇನೆ). ಬಸದಿಯ ಕೆಲವು ಕಂಬಗಳು ಬಿದ್ದುಹೋಗಿವೆ. ಈಗಿನ ಬಸದಿ ಕೆಳಗೆ ಹೂತು ಹೋಗಿರುವ ಇನ್ನೊಂದು ಜಿನವಿಗ್ರಹ ಇರುವ ಸಾಧ್ಯತೆ ಇದೆ. ಬಸದಿ ಹತ್ತಿರ ಹೆಣ್ಣುಮಕ್ಕಳು ಅಪ್ಪಿ ತಪ್ಪಿ ಸುಳಿದರೆ ಕೆಮ್ಮು, ನೆಗಡಿ, ಜ್ವರ, ತುರಿ ಬಾಧೆಗಳು ಖಚಿತ. ಅಂತಹ ತೊಂದರೆ ಕಾಣಿಸಿಕೊಂಡವರು ಇಲ್ಲಿ ಬಾಳೆಹಣ್ಣು ತಂದು ನೈವೇದ್ಯ ಮಾಡಿ ಹಂಚಿದರೆ ಅವು ಮಾಯವಾಗುತ್ತವೆ. ಹೊರಗಿನ ಜೈನ ಶ್ರೀಮಂತರು ಜಿನವಿಗ್ರಹವನ್ನು ಕೊಳ್ಳಲು ಸಿದ್ಧರಾಗಿದ್ದರಂತೆ. ಜನ ಕೊಡಲಿಲ್ಲ. ಸಹಜವೇ. ಜೈನರು ಆಗಾಗ್ಗೆ ಬಂದು ಪೂಜೆ ಮಾಡಿಕೊಂಡು ಹೋಗುತ್ತಾರೆ. ಕೋಟೆ ಮಾಯವಾಗಿದ್ದರೂ ಕಂದಕದ ಹತ್ತಿರ ಗೋಡೆ ಕಲ್ಲುಗಳು ಬಿದ್ದಿವೆ. ಕೋಟೆ ಮಣ್ಣನ್ನು "ಬರ ಮಣ್ಣು" ಎನ್ನುತ್ತಾರೆ. ಮಕ್ಕಳಿಗೆ ಕಾಯಿಲೆ ಆದರೆ "ಬರ ಮಣ್ಣ"ನ್ನು ತಂದು ಪೂಜಿಸಿ ಹರಕೆ ಮಾಡಿಕೊಳ್ಳುತ್ತಾರೆ.

ಕುರುಬರ ಕೇರಿಯಲ್ಲಿ ಕುದುರೆ ಹತ್ತಿರುವ ಆರು ಪ್ರತಿಮೆಗಳನ್ನು ಮೈಲಾರಲಿಂಗ ದೇವರೆಂದು ಪೂಜಿಸುತ್ತಾರೆ. ಹರಿಜನರ ಕೇರಿಯಲ್ಲಿ ಚರ್ಮ ಅದ್ದಿ ಹದಮಾಡಲು ನೀರು ಸುರಿಯುವ "ಗಲ್ಲಿ" ("ಕರೇಬಾವಿ") ಇವೆ - ಅದರ ನೀರನ್ನು "ದೇವಗಂಗೆ ನೀರು" ಎನ್ನುತ್ತಾರೆ. ಆ ನೀರನ್ನು ಬ್ರಾಹ್ಮಣರು ತೆಗೆದುಕೊಂಡು ಹೋಗಿ ತಮ್ಮ ಮದುವೆಗಳಲ್ಲಿ

ಪವಿತ್ರಕಾರ್ಯಕ್ಕೆ ಬಳಸಿಕೊಳ್ಳುತ್ತಾರೆಂದು ಕೇಳಿದೆ (ಕೆಲವೆಡೆ ಹರಿಜನರು ತಮ್ಮ ಕೇರಿಯ ನೀರನ್ನು ಬ್ರಾಹ್ಮಣರಿಗೆ ಕೊಡುವುದಿಲ್ಲ). ದುರುಗವ್ವನ ಗುಡಿ ಮುಂದೆ ಆ ದೇವಿಯ ಪಾದ ಚಿಹ್ನೆಗಳಿರುವ "ಪಾದಗಟ್ಟೆ" ಇದೆ. ಗುಡಿ ಒಳಗೆ ದುರುಗವ್ವ, ಕಾರಿಯವ್ವ, ಮರಿಯವ್ವ ಹೀಗೆ ಮೂರು ದೇವತೆಗಳ ವಿಗ್ರಹಗಳಿವೆ. ಊರಿಗೆ ಹುಲುಸನ್ನು (ಸಮೃದ್ಧಿಯನ್ನು) ತಂದ ವ್ಯಕ್ತಿಯ ತಲೆಯನ್ನು "ಹುಲುಸಿನ ತಲೆ" ಎಂದು ಕರೆಯುತ್ತಾರೆ : ಕಲ್ಪನೆಯೇ ತೀರ ವಿಚಿತ್ರ.

ಊರಿನ ಪ್ರಮುಖ ದೈವ ಆಂಜನೇಯನ ವಿಗ್ರಹ ಭವ್ಯವಾಗಿದೆ. ಪಕ್ಕದಲ್ಲಿ ಚತುರ್ಮುಖ ಬ್ರಹ್ಮನ ಸುಂದರ ವಿಗ್ರಹವಿದೆ (ಮೂಲತಃ ಇದು ಜೈನ ವಿಗ್ರಹವಿರಬೇಕು). ಎದುರಿಗಿರುವ ಬಸವಣ್ಣನ ಗುಡಿಯ ಮೇಲ್ಮಹಡಿಯಲ್ಲಿ ಬಸವನ ವಿಗ್ರಹವಿದೆ. ಕೆಳಗೆ ಯಾವುದೋ ವಿಗ್ರಹದ ಶಿರಸ್ಸು ಮಾತ್ರ ಇದೆ. ಇವೆಲ್ಲವೂ ಮೂಲತಃ ಬಸದಿಯ ಭಾಗಗಳೇ ಆಗಿದ್ದಿರಬಹುದು. ಅಲ್ಲೇ ಜೈನ ಶಾಸನವೂ ಇದೆ. (ಶಾಮನೂರಿನ ಶಾಸನಗಳಿಗೆ ನೋಡಿ, ರೈಸರ ಎಫಿಗ್ರಾಫಿಯ ಕರ್ನಾಟಿಕ, 11. ದಾವಣಗೆರೆ. 90-3). ಪಕ್ಕದಲ್ಲೊಂದು ವೀರಗಲ್ಲು ನಿಂತಿದೆ. ಕಲ್ಲೇಶ್ವರ ದೇವಾಲಯವು ಶ್ರೀಮಂತರೊಬ್ಬರ ಕಾಂಪೋಂಡ್ ಒಳಗೆ ಸೇರಿದೆ. ಅಲ್ಲಿ ಹಿಂದೆ ವೀರಗಲ್ಲೊಂದಿದೆ. ಶಾಮನೂರಿನ ಹೊರಗೆ, ರಾಷ್ಟ್ರೀಯ ಬೈ ಪಾಸ್ ಹೆದ್ದಾರಿಯ ಪಕ್ಕದಲ್ಲಿ ಒಂದು ಕಾಳಿಕಾ ವಿಗ್ರಹವಿದೆ. ಸಮೃದ್ಧ ಇತಿಹಾಸ, ಸಮೃದ್ಧ ಜಾನಪದಗಳ ಬೀಡಾಗಿರುವ ಶಾಮನೂರಿನ ಸೂಕ್ಷ್ಮಾಧ್ಯಯನ ಒಂದು ತೀರ ಅಗತ್ಯದ ಕೆಲಸ. ದಾವಣಗೆರೆಯ ಭಾಗವಾಗಲಿರುವ ಶಾಮನೂರು ತನ್ನ ಪರಂಪರೆಯ ದಾಖಲೆಗಳನ್ನು ಕಳೆದುಕೊಳ್ಳುವ ದಿನಗಳೂ ಬಹಳ ಇಲ್ಲ.

ಅದೇ ಊರಿನ ಮೆಕ್ಯಾನಿಕಲ್ ಇಂಜಿನಿಯರ್ ವೃಷಭೇಂದ್ರಪ್ಪನವರ ಮನೆಯಲ್ಲಿ ಉಪಾಹಾರವಾಯ್ತು. ಶಾಮನೂರನ್ನು ದಾವಣಗೆರೆ ಪುರಸಭೆಗೆ ಸೇರಿಸುವ ಸನ್ನಾಹದ ವಿರುದ್ಧ ಕೆಲ ಜನ ನಿಂತಿದ್ದಾರೆ. ಆ ಬಗ್ಗೆ ಉನ್ನತ ನ್ಯಾಯಾಲಯಕ್ಕೂ ಹೋಗಿ ತಡೆಯಾಜ್ಞೆ ತರಲಾಗಿದೆ. ಪುರಸಭೆಗೆ ಸೇರುವುದರಿಂದ ತಮ್ಮ ಊರು ತೆರಿಗೆ ಕೊಡಬೇಕಾಗುತ್ತದೆ. ಪ್ರತಿಯಾಗಿ ಪಡೆಯುವ ಲಾಭವೇನೂ ಇಲ್ಲ ಎಂದು ಜನರ ಭಾವನೆ. ಊರಿಗೆ ನೀರಿನ ಸಮಸ್ಯೆಯಿಲ್ಲ. ಊರಿನಲ್ಲಿ ಪ್ರತಿ ಮನೆಗೊಂದರಂತೆ ಮುಂಭಾಗದಲ್ಲಿ ಸಾವಿರ ತೆಂಗಿನ ಗಿಡ ನೆಟ್ಟರು. ಅದೊಂದು ಅತ್ಯಂತ ನವೀನ ಆಲೋಚನೆ. ಈಗ ಅವುಗಳಲ್ಲಿ ಆರು ನೂರು ಉಳಿದು, ಬೆಳೆದು ಮುಂದಿನ ವರ್ಷ ಫಲ ಕೊಟ್ಟಾಗ ಊರಿಗೆ ಮುಂದೆ ಲಕ್ಷ ರೂಪಾಯಿ ವಾರ್ಷಿಕ ಆದಾಯ ದೊರಕಲಿದೆಯೆಂದು ಜನ ಹೇಳಿದರು.

ದಾರಿಯಲ್ಲಿ ಬರುವಾಗ ಸಮಾಜ ವಿಜ್ಞಾನದಲ್ಲಿ ಪಿಎಚ್.ಡಿ ಪಡೆದಿರುವ ಡಾ. ಪರಮೇಶ್ವರಪ್ಪನವರಿಗೆ ಆ ಪ್ರದೇಶದಲ್ಲಿ ಸಿರಿಗೆರೆ, ಚಿತ್ರದುರ್ಗ ಮಠಗಳ ಅನುಯಾಯಿಗಳ ಮಧ್ಯೆ ಇರುವ ಪರಸ್ಪರ ಈರ್ಷ್ಯೆ, ಸ್ಪರ್ಧೆ, ಸಂದೇಹ, ಘರ್ಷಣೆ ಅವುಗಳ ಮೂಲ, ಪರಿಣಾಮ ಇವುಗಳ ಬಗ್ಗೆ ಸಂಶೋಧನೆ ಮಾಡಲು ಸೂಚಿಸಿದೆ. ಅವರಿಂದ ಅಂತಹ ಉತ್ಸಾಹದ ಪ್ರತಿಕ್ರಿಯೆ ಬರಲಿಲ್ಲ.

ಮಧ್ಯಾಹ್ನ ನನ್ನ ಸಮೀಪ ಬಂಧು ಬಾಡದ ಬಸವರಾಜಯ್ಯ ಬಂದಿದ್ದರು. ದೊಡ್ಡ ಜಮೀನುದಾರರಾದ ಅವರ ಸಮಸ್ಯೆ ಕೆಲಸದಾಳುಗಳದು. ಕೆಲಸದಾಳುಗಳನ್ನು ದಲ್ಲಾಳಿಗಳು ನಿಯಂತ್ರಿಸುತ್ತಿದ್ದಾರೆ. ಪ್ರತಿ ದಲ್ಲಾಳಿಯ ಕೈಲಿ 60-70 ಜನ ಕೂಲಿಯಾಳುಗಳು (ನಗರಗಳಲ್ಲಿ ಮೇಸ್ತ್ರಿಗಳ ಕೈಯಲ್ಲಿ ಕೆಲಸದವರಿದ್ದಂತೆ). ಒಬ್ಬ ಕೂಲಿಯವನಿಗೆ ದಿನಕ್ಕೆ ಬತ್ತ ಕೊಯ್ಯಲು ಊಟ ಸಮೇತ ಆರು, ಆರೂವರೆ ರೂಪಾಯಿ ಕೊಟ್ಟರೆ ಅದರಲ್ಲಿ ದಲ್ಲಾಳಿಯು ಕೆಲಸಗಾರರಿಗೆ ಕೊಡುವುದು ಐದೂವರೆ ಅಥವಾ ಆರು ರೂಪಾಯಿ. ಕೆಲಸಗಾರರನ್ನು ಒದಗಿಸಿದ್ದಕ್ಕೆ ದಲ್ಲಾಳಿಗೆ ಜಮೀನುದಾರ ದಿನಕ್ಕೆ ರೂ. 35/- ರಿಂದ 45/- ರೂಪಾಯಿ ಕೊಡಬೇಕು. ದಲ್ಲಾಳಿಗೆ ಎರಡು ಕಡೆಯಿಂದಲೂ ಆದಾಯ. ಅವನು ಕೆಲಸಗಾರರಿಗೆ ಆಗಾಗ್ಗೆ ಮುಂಗಡ ಕೊಟ್ಟು ಅವರನ್ನು ತನ್ನ ಹಿಡಿತದಲ್ಲಿಟ್ಟುಕೊಂಡಿರುವುದಲ್ಲದೆ ಅವರಿಗೆ ನಿರಂತರವಾಗಿ ಕೆಲಸ ಸಿಗುವಂತೆ ಮಾಡುತ್ತಾನೆ. ವ್ಯವಸಾಯ ಕ್ಷೇತ್ರದಲ್ಲಿ ಈ ವ್ಯವಸ್ಥೆ ಇರುವುದು ನನಗೆ ತಿಳಿದಿರಲಿಲ್ಲ.

ಮಾರನೆಯ ದಿನ ಪ್ರೊ. ವೀರಭದ್ರಪ್ಪ ದಾವಣಗೆರೆಯ ಕಾರ್ಮಿಕ ಮುಖಂಡ ಪಂಪಾಪತಿಯವರ ನೇತೃತ್ವದಲ್ಲಿ ಬಡವರ ನಾಲ್ಕಾರು ಮದುವೆಗಳನ್ನು ರಿಜಿಸ್ಟರ್ ಮಾಡಿಸಿ, ಅವರೆಲ್ಲ ವಾಪಸ್ ತಮ್ಮ ಮನೆಗಳಿಗೆ ಹೋಗಿ ಅಲ್ಲಿ ನೆಂಟರಿಷ್ಟರೊಡನೆ ಭೋಜನ ಸವಿಯುವ ವ್ಯವಸ್ಥೆ ಮಾಡಿದ್ದರು. ಚಪ್ಪರ, ವಾದ್ಯ, ಪುರೋಹಿತರು, ವರದಕ್ಷಿಣೆ ಯಾವುದೂ ಇಲ್ಲದ ಸರಳ ಮದುವೆಗಳು. ಅಂದು ನನ್ನ ಜೊತೆ ಕಕ್ಕರಗೊಳದವರೆಗೆ ಬಂದು ದಾವಣಗೆರೆಗೆ ವಾಪಸಾಗುವುದಾಗಿ ತಿಳಿಸಿದರು. ಬಾಪೂಜಿ ಬ್ಯಾಂಕಿನ ಪರಮೇಶ್ವರಪ್ಪ ಬಂದು ನನ್ನ ಮಾರನೆಯ ದಿನದ ತಂಗುದಾಣ ಕೊಂಡಜ್ಜಿಯಲ್ಲಿ ಎಲ್ಲ ವ್ಯವಸ್ಥೆಯಾಗಿರುವುದಾಗಿ ತಿಳಿಸಿದರು.

ರಾತ್ರಿ ರತ್ನಮ್ಮನ ಹಿರಿಯ ಮಗಳು ಶಾಂತಳ ಮನೆಯಲ್ಲಿ ಊಟವಾಯ್ತು. ಛಾನಲ್ ಡಿವಿಜನ್ನಿನ ಕ್ವಾರ್ಟರ್ಸ್‌ನಲ್ಲಿ, ಒಂದು ಚಿಕ್ಕ ಮನೆಯಲ್ಲಿ ಆಕೆ ತನ್ನ ಗಂಡ ಬಸವರಾಜ್ ಮತ್ತು ಮಕ್ಕಳೊಡನೆ ವಾಸವಾಗಿದ್ದಾಳೆ. ಶಾಂತಳನ್ನು ಅವಳ ಬಾಲ್ಯದಲ್ಲಿ, (ಆಗ ನನಗಿನ್ನೂ ಮದುವೆಯಾಗಿರಲಿಲ್ಲ. ಮದುವೆ ಆಗುವ ಸೂಚನೆಯೂ ಇರಲಿಲ್ಲ) ಮೈಸೂರಲ್ಲಿ ನಮ್ಮ ಮನೆಯ ಮಗಳೆಂಬಂತೆ ಬೆಳೆಸಿದ್ದೆವು. ಅವಳ ಮನೆಯಿಂದ ಹೊರಟು ರಾತ್ರಿ ಹತ್ತು ಗಂಟೆಗೆ ವಾಪಸಾಗುತ್ತಿದ್ದಾಗ ದಾರಿಯಲ್ಲಿ ಬೈಸಿಕಲ್ ಹತ್ತಿ ಬರುತ್ತಿದ್ದವನೊಬ್ಬನನ್ನು ಒಬ್ಬ ಹುಡುಗ ಮತ್ತು ಹೆಂಗಸರು ಇಬ್ಬರು ತಡೆದು ನಿಲ್ಲಿಸಿ ಅವಾಚ್ಯ ಶಬ್ದಗಳಿಂದ ಬೈಯುತ್ತಿದ್ದರು. ಬಡವರ್ಗದ ಜನ ಇರುವ ಆ ಪ್ರದೇಶದಲ್ಲಿ ಕೆಲವು ಅನಿಷ್ಟ ವ್ಯವಹಾರಗಳೂ ಇರುವುದನ್ನು ಬೇರೆ ಸಂದರ್ಭದಲ್ಲೂ ಗಮನಿಸಿದ್ದೇನೆ. ಅಲ್ಲಿ ನಿಲ್ಲಲು ಮನಸ್ಸಾಗದೆ ರತ್ನಮ್ಮನ ಮನೆಗೆ ಅವಸರದಿಂದ ತೆರಳಿದೆ.

## ಕೊಂಡಜ್ಜಿ

ಬೆಳಿಗ್ಗೆ (6.6.85) ವೀರಭದ್ರಪ್ಪ ಜೊತೆ ಆರಕ್ಕೆ ದಾವಣಗೆರೆ ಬಿಟ್ಟೆ. ಒಳ್ಳೆಯ ಜೊತೆ ನನಗೆ ಸಿಕ್ಕಂತಾಯಿತು. ನಮ್ಮಿಬ್ಬರ ಸಂಭಾಷಣೆ ಸಹಜವಾಗಿಯೇ ಆ ಪ್ರದೇಶದಲ್ಲಿ

ದಟ್ಟವಾಗಿರುವ ಮತ್ತು ಎಲ್ಲರಿಗೂ ತಿಳಿದಿರುವ, ಬಹಿರಂಗವಾಗಿ ವ್ಯಕ್ತಪಡಿಸಲು ಬಯಸದಿರುವ ಸಿರಿಗೆರೆ ಚಿತ್ರದುರ್ಗಗಳ ತಿಕ್ಕಾಟದ ಕಡೆ ಹೊರಳಿತು. ಬಣಜಿಗರಾಗಲಿ, ಜಂಗಮರಾಗಲಿ ಅಷ್ಟು ವಿಶ್ವಾಸಾರ್ಹರಲ್ಲವೆಂದು, (ಜಂಗಮನಾಗಿ ಜಂಗಮರ ವಿಷಯದಲ್ಲಿ ಸ್ವಲ್ಪ ಕಠಿಣವಾಗಿ ಮಾತನಾಡುವಲ್ಲಿ ನನಗೆ ಒಂದು ಬಗೆಯ ಸಂತೋಷವೂ ಲಾಭವೂ ಇರಬಹುದೋ ಏನೋ!) ಸಾದರು ಒರಟರು, ಹೆಚ್ಚು ಮುಗ್ಧರು, ಹೆಚ್ಚು ವಿಶ್ವಾಸಾರ್ಹರು ಎಂದು ಹೇಳಿದೆ. ಇಂತಹ ಮಾತುಗಳು ನೂರಕ್ಕೆ ನೂರು ಸತ್ಯವಾಗಿರುವುದಿಲ್ಲವೆಂಬ ಮಾತನ್ನು ಹೇಳಬೇಕಾಗಿಲ್ಲ. ವೀರಭದ್ರಪ್ಪನವರ ಪ್ರಕಾರ ಈಗ ಸಾದರು ಹೆಚ್ಚು ಕ್ರಿಯಾಶೀಲರು, ಹೆಚ್ಚು dynamic. ಅವರಲ್ಲಿ ಹಣ ಇದೆ, ಚೆನ್ನಾಗಿ ದುಡಿಯುವ ಪ್ರವೃತ್ತಿ ಇದೆ. ಹಿಂದೆ ಜಯದೇವ ಹಾಸ್ಟಲುಗಳು ಚೆನ್ನಾಗಿ ನಡೆದು ಸಾವಿರಾರು ವಿದ್ಯಾರ್ಥಿಗಳನ್ನು (ಅಂಥವರಲ್ಲಿ ನಾನೂ ಒಬ್ಬ) ಮೇಲಕ್ಕೆ ತಂದುದು ನಿಜವಾದರೂ, ಚಿತ್ರದುರ್ಗದ ಮಠದ ಅನುಯಾಯಿಗಳಲ್ಲಿ ಒಗ್ಗಟ್ಟಿಲ್ಲದೆ ಬರೀ ತಿಕ್ಕಾಟಗಳಲ್ಲಿ ಕಾಲ ಕಳೆಯುತ್ತಿದ್ದಾರೆ. ಒಂದು ಹಾಸ್ಟಲ್ ಕೂಡ ಸರಿಯಾಗಿ ನಡೆಸಲಾರರು. ಸಿರಿಗೆರೆಯ ದೊಡ್ಡ ಸ್ವಾಮಿಗಳು ಒಂದು ಬಗೆಯ ಚಲಗಾರರು, ಅವರು ಹೇಳಿದ್ದು ನಡೆಯಲೇಬೇಕು. ಸಾದರ ಕ್ರಿಯಾಶೀಲತೆಗೆ, ಅತಿ ಸ್ವಾಭಿಮಾನಕ್ಕೆ ಐತಿಹಾಸಿಕ ಕಾರಣವಿದೆ. ಹಿಂದೆ ಪಂಚಾಚಾರದವರೂ ಬಣಜಿಗರೂ ಅವರನ್ನು ಕಡಮೆಯಾಗಿ ಕಂಡರು. ಈಗಲೂ ಆ ಭಾವನೆ ಹೋಗಿಲ್ಲ. ಆ ಕಾರಣ, ಸಾದರು ಅದನ್ನೇ ಮುಂದಿಟ್ಟುಕೊಂಡು ಹಠದಿಂದ ಮೇಲೇರಿದ್ದಾರೆ. ದಾವಣಗೆರೆಯಲ್ಲಿ ಸಾದರ ಶಿವಶಂಕರಪ್ಪ, ಪಂಚಾಚಾರದವರ ಕೊಟ್ರಬಸಪ್ಪನವರ ವಿಷಯವನ್ನೇ ನೋಡಿ. ಬಾಪೂಜಿ ವಿದ್ಯಾಸಂಸ್ಥೆಯನ್ನು ಸ್ಥಾಪಿಸಿ ಆರಂಭದಲ್ಲಿ ಬೆಳಸಿದವರು ಕೊಟ್ರಬಸಪ್ಪ, ಈಗ ಅದು ಸಾದರ ಶಿವಶಂಕರಪ್ಪನವರ ಕೈಲಿದೆ ಇತ್ಯಾದಿ ಇತ್ಯಾದಿ ಎಷ್ಟೋ ವಿಷಯಗಳು ನಮ್ಮಲ್ಲಿ ಮುಕ್ತವಾಗಿ ಚರ್ಚೆಗೊಂಡುವು. ಒಂದು ವಸ್ತುನಿಷ್ಠ ಸಾಮಾಜಿಕ ಅಧ್ಯಯನಕ್ಕೆ ಒಳ್ಳೆಯ ವಸ್ತು. ಎಲ್ಲ ಲಿಂಗಾಯತರೂ ಎಲ್ಲ ದೃಷ್ಟಿಗಳಿಂದ ಸಮಾನರು ಎಂಬ ಮಾತಿಗೆ ಬೇರೆ ಮಾತಿಲ್ಲ. ಆ ಎರಡೂ ಮಠಗಳ ಸ್ವಾಮೀಜಿಗಳೂ ಅನುಯಾಯಿಗಳೂ ಸಾಮಾಜಿಕ ಹಿತಕ್ಕಾಗಿ ಒಂದಾಗಲೇಬೇಕು. ತಿಕ್ಕಾಟದ ಅಧ್ಯಯನವು ಸಮಸ್ಯೆಯ ನಿಜವಾದ ಸ್ವರೂಪವೇನು ಎಂಬುದನ್ನು ತಿಳಿಸಿ ಎರಡು ಕಡೆಯವರೂ ಆತ್ಮಾವಲೋಕನ ಮಾಡಿಕೊಳ್ಳಲು ನಿಮಿತ್ತವಾದೀತು ಎಂಬ ಆಶಯ ನನ್ನದಾಗಿತ್ತು.

ದಾವಣಗೆರೆಗೆ ನಾಲ್ಕು ಮೈಲಿ ದೂರದಲ್ಲಿನ ಆವರಗೊಳದ ಕನ್ನೇಶ್ವರ ದೇವಾಲಯ ಬಹು ಸುಂದರ. 12-13ನೇ ಶತಮಾನದ ಶಾಸನಗಳೂ ವೀರಗಲ್ಲುಗಳೂ ಅಲ್ಲಿವೆ. (ಇಲ್ಲಿಯ ಶಾಸನಗಳಿಗೆ ರೈಸರ ಎಪಿಗ್ರಾಫಿಯ ಕರ್ನಾಟಿಕ ದಾವಣಗೆರೆ, 11.94-7 ನೋಡಿ). ಗರ್ಭಗುಡಿಯ ಶಿವಲಿಂಗ ಭವ್ಯವಾಗಿದ್ದು ಜಲಹರಿ ಎಡಕ್ಕಿರುವ ಬದಲು ಬಲಭಾಗಕ್ಕಿದೆ. ದೇವಾಲಯವನ್ನು ಅಚ್ಚುಕಟ್ಟಾಗಿ ಶುಭ್ರವಾಗಿಟ್ಟಿರುವುದು ಒಂದು ವಿಶೇಷ. ಕಟ್ಟಡದ ಮುಂಭಾಗ ಆಧುನಿಕ ಕಾಲದ್ದಾದರೂ ಹಿಂಭಾಗದ ಪ್ರಾಚೀನ ಕಟ್ಟಡ ಇನ್ನೂ ಗಟ್ಟಿಯಾಗಿಯೇ ಇದೆ. ಈಶ್ವರ ದೇವಾಲಯದ ಮುಂಭಾಗದ ವೀರಭದ್ರನ ದೇವಾಲಯ ತೀರ ಈಚಿನದಾಗಿದ್ದು ಅದಕ್ಕೆ ಬಣ್ಣ ಬಡಿದು ವಿರೂಪಗೊಳಿಸಿದ್ದಾರೆ. ಎತ್ತರವಾಗಿರುವ ನಿಂತಿರುವ ವಿಗ್ರಹವು

ಸಾಕಷ್ಟು ಹಳೆಯದಾಗಿದ್ದು ರೌದ್ರಾವತಾರ ಮೂರ್ತಿಯಾಗಿದೆ. ಬೆಳ್ಳಿ ಮುಖವಾಡ ಅದಕ್ಕೆ ಹಾಕಿದ್ದಾರೆ. ಕೈ ಕಾಲುಗಳಿಗೆ ಕಡಗಗಳನ್ನೂ ಕೊರಳಿಗೆ ಕರಡಿಗೆಯನ್ನೂ ಹಾಕಿದ್ದಾರೆ. ಈಶ್ವರ ವೀರಭದ್ರ ಎರಡೂ ದೈವಗಳ ಬಗ್ಗೆ ಊರಿನ ಜನಕ್ಕೆ ಅಪಾರವಾದ ಶ್ರದ್ಧೆ; ಅದು ಕಾಟಾಚಾರದ ಶ್ರದ್ಧೆ ಅಲ್ಲವೆಂಬುದು ಎದ್ದು ಕಾಣುತ್ತಿತ್ತು. ದೇವಾಲಯಗಳ ಮುಂದೆ ಎರಡು ಯೂಪಸ್ತಂಭಾಕಾರದ ಕಂಬಗಳಿವೆ. ಎರಡರಲ್ಲೂ ಕಲ್ಲಿನ ಬಳೆಗಳಿವೆ. ಆ ಕಲ್ಲು ಕಂಬಗಳು ಅಲ್ಲಿಯವರ ಪ್ರಕಾರ "ಶಿರಸ್ ಪವಾಡ"ದ ಕಲ್ಲುಗಳು. ಎಡಗಂಬದ ತುದಿಯ ಟೋಪಿ ಕೆಳಗೆ ಒಂದು ಹೆಣ್ಣಿನ ತಲೆ ಕಡಿದಿರುವ ಶಿಲ್ಪವಿದೆ. ಇನ್ನೊಂದು ಶಿಲ್ಪ ವಿಚಿತ್ರ ಮನುಷ್ಯಾಕಾರದ್ದು. ಇನ್ನೊಂದು ಕಂಬ ಖಾಲಿ. ಪಕ್ಕದಲ್ಲಿ ಎರಡು ಶಿವಲಿಂಗಗಳು, ಎರಡು ಮನುಷ್ಯ ತಲೆಗಳು; ಮನುಷ್ಯ ತಲೆಗಳನ್ನು ಒಂದು ಹಾವು ಸುತ್ತುವರಿದಿದೆ. ದೇವಾಲಯದ ರಂಗಮಂಟಪದಲ್ಲಿ ಆ ಕಡೆ ಈ ಕಡೆ ಕತ್ತಿ ಹಿಡಿದ ಗಂಡಸರ, ನಿಂತ ಹೆಂಗಸಿನ ಶಿಲ್ಪವಿದ್ದು ಮಧ್ಯೆ ಶೂಲದ ಶಿಲ್ಪವಿದೆ. ಅದು "ಶೂಲಬ್ರಹ್ಮ"ದ ಶಿಲ್ಪವಿರಬೇಕು. ಈಗಿನ ಕೆಲವರು ಹೇಳುವಂತೆ, ಐವತ್ತು ಅರವತ್ತು ವರ್ಷಗಳ ಹಿಂದೆ "ಶಿರಸ್ ಪವಾಡ" ಮಾಡಿಕೊಳ್ಳಲು ಒಬ್ಬ ವ್ಯಕ್ತಿ ಮುಂದೆ ಬಂದಿದ್ದ; ಜನ ಅವನಿಗೆ ಅವಕಾಶ ನೀಡಲಿಲ್ಲ. ದೇವರಿಗೆ ಒಬ್ಬ ವ್ಯಕ್ತಿ ತನ್ನ ತಲೆಯನ್ನು ತಾನೇ ಕಡಿದುಕೊಂಡು ಒಪ್ಪಿಸುವುದೇ ಶಿರಸ್ ಪವಾಡ. ಆ ಊರು ಧಾರ್ಮಿಕ ಆತ್ಮ ಬಲಿಗೆ ಒಂದು ಕಾಲಕ್ಕೆ ಹೆಸರುವಾಸಿಯಾದ ಸ್ಥಳವಾಗಿತ್ತೆಂಬುದು ಸ್ಪಷ್ಟ. ಜಾತ್ರೆಯಲ್ಲಿ "ವೀರ ಖಡ್ಗ" ಹಿಡಿದು ಭಕ್ತರು ಕುಣಿಯುತ್ತಾರೆ. ಅಲ್ಲಿಯ ಜನ ಸಾತ್ವಿಕನಾದ ಈಶ್ವರನಿಗಿಂತ ಪ್ರಚಂಡನಾದ ವೀರಭದ್ರನ ಬಗ್ಗೆಯೇ ಹೆಚ್ಚು ಭಕ್ತಿ ವಿಶ್ವಾಸ ಹೊಂದಿದ್ದಾರೆ. ಎಲ್ಲ ಊರುಗಳಲ್ಲೂ ಇದೇ ಪರಿಸ್ಥಿತಿ (ಇದು ಇಂದು ಮತ್ತು ಎಲ್ಲ ಕಾಲಕ್ಕೂ ನಾವು ಕಾಣುವ ಸಾಮಾಜಿಕ ವಾಸ್ತವವೆಂದು ಕಾಣುತ್ತದೆ). ಬಿರು ಬಿಸಿಲಿದ್ದೂ ಈ ದಿನವೇ ಬಿತ್ತನೆ ಕಾರ್ಯ ಆಗಬೇಕು ಎಂದು ವೀರಭದ್ರಸ್ವಾಮಿ ಆಜ್ಞಾಪಿಸಿದರೆ (ಭಕ್ತರ ಮೂಲಕ, ಸಂಕೇತಗಳ ಮೂಲಕ) ಆ ದಿನ ಬಿತ್ತನೆ ನಡೆಯಲೇಬೇಕು. ಹಾಗೆ ಹೇಳಿದ ದಿನದ ಸಂಜೆಯ ಹೊತ್ತಿಗೆ ಮಳೆ ಬರುವುದು ಗ್ಯಾರಂಟಿ. ವಾರ್ತಾಪ್ರಚಾರದ ಇಲಾಖೆಯವರಿಂದ ಜಾತ್ರೆಯ ಸಾಕ್ಷ್ಯಚಿತ್ರ ಮಾಡಿಸಲು ಜನ ಪ್ರಯತ್ನಿಸಿದ್ದಾರೆ. ಈ ಊರಲ್ಲಿ ಸಾರ್ವತ್ರಿಕವಾಗಿ ದೈವಭಕ್ತಿ ಜಾಗೃತವಾಗಿದೆ. ಅಲ್ಲಿ ಕಾಫಿ ಕುಡಿದಾಗ, ಬಹುತೇಕ ಜಂಗಮರೇ ಇರುವ ಆ ಊರಲ್ಲಿನ (ಇದು ತೀರ ವಿರಳ) ಕೆಲವರು ನನ್ನ ಬಂಧುಗಳೆಂದೂ ತಿಳಿಯಿತು.

ಅದೇ ದೇವಾಲಯದ ಮುಂದೆ ಒಂದು ಕಲ್ಲುಗೂಡಲ್ಲಿ 'ಭರಮಪ್ಪ'ನ ಮೂರ್ತಿ, ಎಂದರೆ ಬರೀ ಒಂದು ತಲೆ ಇದೆ. ಆ ಗೂಡಿನ ಸುತ್ತ ಕುಂಕುಮ ಚೆಲ್ಲಿದ್ದಾರೆ. ಭರಮಪ್ಪನ ಮುಖಕ್ಕೆ ಒಂದು ದೊಡ್ಡ ಕುಂಕುಮದ ಬೊಟ್ಟು ಇಟ್ಟಿದ್ದಾರೆ ಮಕ್ಕಳಿಗೆ ತೊಂದರೆ ಆದರೆ, ಭರಮಪ್ಪ ತನಗೆ ನೀಡಿ ಹಂಚುವ ಬಾಳೆಹಣ್ಣಿನ ನೈವೇದ್ಯಕ್ಕೆ ತೃಪ್ತನಾಗಿ ಆ ಎಲ್ಲ ತೊಂದರೆಗಳನ್ನು ಪರಿಹರಿಸುತ್ತಾನೆ. ಆ ಊರಿನ ಜನ ಎಪಿಗ್ರಾಫಿಯ ಕರ್ನಾಟಿಕದಲ್ಲಿ (ಸಂಪುಟ 11. ರೈಸ್ ಆವೃತ್ತಿ) ಪ್ರಕಟವಾಗಿರುವ ಆ ಊರಿನ ಎಲ್ಲ ಶಾಸನಗಳನ್ನೂ ಬರೆದಿಟ್ಟುಕೊಂಡಿದ್ದಾರೆ.

ಆ ಶ್ರದ್ಧೆ ಆಸಕ್ತಿ ಬೇರೆ ಊರಲ್ಲಿ ನನಗೆ ಕಂಡಿಲ್ಲ. ಆ ಊರಲ್ಲಿ ಹಿಂದೆ "ಮಹಾಗಣಂಗಳ ಪರ್ವ" ನಡೆಯುತ್ತಿತ್ತೆಂದು ಪ್ರಾಚೀನ ಶಾಸನಗಳಲ್ಲಿ ಉಕ್ತವಾಗಿದೆ.

ಮುಂದೆ ಕಕ್ಕರಗೊಳದಲ್ಲಿ ಪರಮೇಶ್ವರಪ್ಪನವರ ಮನೆಯಲ್ಲಿ ಉಪಾಹಾರವಾಯ್ತು. ಅವರು ಸಾದರಾದರೂ ಮನೆಯಲ್ಲಿ ಚಿತ್ರದುರ್ಗದ ಸ್ವಾಮಿಗಳ ಭಾವಚಿತ್ರವನ್ನು ಹಾಕಿಕೊಂಡಿದ್ದಾರೆ. ಕೆಲವು ಸಾದರು (ಉದಾ : ಶಾಮನೂರು ಶಿವಶಂಕರಪ್ಪ) ಸಿರಿಗೆರೆ ಮಠಕ್ಕಲ್ಲದೆ ಪಂಚಪೀಠದ ಗುರುವರ್ಗದವರಿಗೂ ಚಿತ್ರದುರ್ಗದ ಮಠಕ್ಕೂ ನಡೆದುಕೊಳ್ಳುವುದು ಉಂಟು. ಆ ಊರಲ್ಲಿ ಫೋನ್ ಇದೆ. ಒಂದು ಜೂನಿಯರ್ ಕಾಲೇಜೂ ಇದೆ. ಊರ ಸುತ್ತಮುತ್ತ ಎಲ್ಲ ಜಮೀನುಗಳೂ ನೀರಾವರಿಯಾಗಿವೆ. ಒಬ್ಬ ಸರ್ಕಾರಿ ಉದ್ಯೋಗಿಯೊಬ್ಬರು ನನ್ನ ಜೊತೆ ಮಾತನಾಡುವಾಗ ಉದ್ದಕ್ಕೂ ತಲೆ ತಗ್ಗಿಸಿಕೊಂಡೇ ಇದ್ದರು. ಅವರಿಗೂ ಒಬ್ಬ ಹೆಣ್ಣು ಮಗಳಿಗೂ ಸಂಬಂಧ ಕಲ್ಪಿಸಿದ್ದ ಕತೆಗಳನ್ನು ನಾನು ಕೇಳಿದ್ದನ್ನು ಅವರು ಬಲ್ಲವರಾಗಿದ್ದುದು ಕಾರಣವಿರಬೇಕೆನ್ನಿಸಿತು.

ವೀರಭದ್ರಪ್ಪ ಕಕ್ಕರಗೊಳದಿಂದ ವಾಪಸ್ ದಾವಣಗೆರೆಗೆ ಹೋದರು. ನಾನೊಬ್ಬನೇ ದಾರಿಯಲ್ಲಿ ಎಂದಿನಂತೆ ದೈವೀ ಪ್ರಾರ್ಥನೆ ಮಾಡುತ್ತ ಕೊಂಡಜ್ಜಿ ಸೇರಿದೆ. ಆ ಊರಿನ ಗೌಡ್ರ ಸಂಗಪ್ಪನವರು ನನಗಾಗಿ ವ್ಯವಸ್ಥೆ ಮಾಡಲು ಸೂಚನೆ ನೀಡಿದ್ದು ಅವರ ತಮ್ಮ ಹನುಮಂತಪ್ಪನವರು ನನಗಾಗಿ ಕಾಯುತ್ತಿದ್ದು ನನ್ನನ್ನು ತಮ್ಮ ಮನೆಗೆ ಕರೆದೊಯ್ದರು. ಕಣದಲ್ಲಿದ್ದ ಅವರ ಮನೆಯಲ್ಲಿ ಅಂದು ಯಾರೂ ಇರಲಿಲ್ಲ. ಹನುಮಂತಪ್ಪನವರೇ ನನಗೆ ಕಾಫಿ ಮಾಡಿಕೊಟ್ಟರು. ಮಧ್ಯಾಹ್ನ ಬೇರೊಬ್ಬರ ಮನೆಯಿಂದ ಊಟ ಬಂದಿತು. ಮಧ್ಯಾಹ್ನ ನಿದ್ದೆ ಮುಗಿಯುತ್ತಿದ್ದಂತೆ ಆ ಊರ ಯುವಕ, ಬಿ.ಎ. ಪದವೀಧರ ಸಂಗಪ್ಪ ಬಂದರು. ಎರಡು ಮಕ್ಕಳ ತಂದೆ, ಟ್ರಾಕ್ಟರ್ ಇಟ್ಟಿದ್ದಾರೆ. ಅವರದೂ ಮನೆ ಕಣದಲ್ಲಿ. ಸ್ವಲ್ಪ ರಾಜಕೀಯ ಸಂಪರ್ಕವನ್ನೂ ಇಟ್ಟುಕೊಂಡಿದ್ದಾರೆ. ತಮ್ಮ ಊರಿನ ವಿಷಯ ತಿಳಿಸಲು ಆ ಊರಿನ ಏಕೈಕ ಬ್ರಾಹ್ಮಣ ರಾಮರಾಯರನ್ನು ಕರೆಸಿದರು. ಊರಿಗೆ ಒಂದು ಕಿಲೋಮೀಟರ್ ದೂರದಲ್ಲಿದ್ದ ದೊಡ್ಡ ಕೆರೆಯ ಹಿಂಭಾಗದಲ್ಲಿ ಒಂದು ಮತ್ಸ್ಯಾಗಾರವಿತ್ತು (Fishery). ಅಲ್ಲೇ ಪಕ್ಕದಲ್ಲಿ ಹನುಮಂತ ದೇವರ ಗುಡಿಗೆ ಹೊಂದಿಕೊಂಡಂತೆ ಒಂದು ಕಲ್ಯಾಣ ಮಂಟಪವಿತ್ತು. ಆ ಹನುಮಂತ ದೇವರು ನಿತ್ಯವೂ ಓಡಾಡುವುದರಿಂದ ಅವನ ಐದು ಅಡಿ ಉದ್ದದ ಅಡ್ಡದ, ಅಷ್ಟೇ ಎತ್ತರದ ಚಪ್ಪಲಿಗಳು ಒಂದು ವರ್ಷದಲ್ಲಿ ಸವೆದುಬಿಡುತ್ತವೆ ಎಂದು ಹೇಳುತ್ತಾರೆ. ಹಿಂಭಾಗದಲ್ಲಿ ಬಂದಮ್ಮನ (ಬನದಮ್ಮ, ಬನಶಂಕರಿ) ವಿಗ್ರಹದ ಬಳಿ ಗಜಲಕ್ಷ್ಮಿ ಶಿಲಾಫಲಕವಿತ್ತು. ಕೊಂಡಜ್ಜಿ ಊರು ಮೊದಲು ಅಲ್ಲಿತ್ತೆಂದು ಹೇಳುತ್ತಾರೆ. ಅಲ್ಲಿದ್ದರೆ ಕಾಡುಮೃಗಗಳ ಕಾಟವೆಂದು ಈಗ ಇರುವ ಜಾಗಕ್ಕೆ ಊರು ಸ್ಥಳಾಂತರಗೊಂಡಿತು. ಆ ಊರಿಗೆ ಕೊಂಡಜ್ಜಿ ಎಂಬ ಹೆಸರು ಬರಲು ಕಾರಣ ಅಲ್ಲಿನ ಗುಡ್ಡ ("ಕೊಂಡ"). ಎರಡು ಗುಡ್ಡಗಳ ಮಧ್ಯದ ಕೆರೆ ಸದಾ ತುಂಬಿರುತ್ತದೆ. ಅದೊಂದು ಅತಿ ಸುಂದರ ದೃಶ್ಯ. ಎಡತುದಿಯಲ್ಲಿ ಸ್ಕೌಟ್ ಕೇಂದ್ರವಿತ್ತು. ಆ ಊರಿನ ಮುಖಂಡ, ರಾಜಕಾರಣಿ, ಸ್ವಾತಂತ್ರ್ಯ

ಹೋರಾಟಗಾರ (ದಿ) ಕೊಂಡಜ್ಜಿ ಬಸಪ್ಪನವರ ಹೆಸರು ಆ ಪ್ರದೇಶದಲ್ಲಿ ಬಹು ಪ್ರಖ್ಯಾತ. ಅವರು ಸ್ಕೌಟ್ ಚಳವಳಿಯ ನೇತಾರರಲ್ಲೊಬ್ಬರು (ಅವರ ಮಗ ಬೆಂಗಳೂರಿನ ಕೆ.ಬಿ. ಷಣ್ಮುಖಪ್ಪ ನನ್ನ ಮಿತ್ರರು, ಆ ಕೆಲಸವನ್ನು ಮುಂದುವರಿಸಿದ್ದಾರೆ). ಬಹು ರಮ್ಯವಾದ ವಿಹಾರಸ್ಥಳ. ಬಲತುದಿಯಲ್ಲಿ ಮಲ್ಲಿಕಾರ್ಜುನ ದೇವಾಲಯವಿದ್ದು, ಅದರ ಎದುರು ಹಾಳಾದ ಒಂದು ಭಗ್ನ ಸೂರ್ಯ ವಿಗ್ರಹವಿದೆ. ಸೂರ್ಯನ ವಿಗ್ರಹವಿಲ್ಲ; ಆದರೆ ಅದರ ಪೀಠದ ಮೇಲಿನ ಸಪ್ತಾಶ್ವಗಳು ಅದು ಸೂರ್ಯ ವಿಗ್ರಹವಾಗಿತ್ತು ಎಂಬುದರ ಸೂಚಕವಾಗಿವೆ. ಹತ್ತಿಪ್ಪತ್ತು ಹೆಜ್ಜೆ ಗುಡ್ಡ ಹತ್ತಿದರೆ ಸಾಕು, ಅಲ್ಲಿ ಒಂದು ಅರ್ಧ ತೋಡಿದ ಗುಹೆ, ದಾರಿಯಲ್ಲಿ ಹೆಜ್ಜೆ ಹೆಜ್ಜೆಗೆ ಪ್ರಾಚೀನ ಮಾನವನ ಶಿಲಾಯುಧಗಳು ದೊರಕುತ್ತವೆ. ಬೆಟ್ಟದ ಮೇಲಂತೂ ಸಾವಿರಾರು ಶಿಲಾಯುಧಗಳು ದೊರಕುತ್ತವೆ ಎಂದರು. ಬೆಟ್ಟದ ತುದಿಯಲ್ಲಿ ಒಂದು 'ಅಯ್ಯನ ಗವಿ'ಯೂ ಇದೆ. ಅಲ್ಲೆಲ್ಲ ಬರೀ ಬಿಲ್ವಪತ್ರೆ ಮರಗಳು ಇವೆಯೆಂದು ಹೇಳಿದರು. ಆ ಗವಿಯ ಒಳಗೆ ಕುಳಿತು, ಮಲಗಿ, ತೆವಳಿ, ನಿಂತು ಸ್ವಲ್ಪ ದೂರ ಹೋದರೆ ಒಳಗೆ ಶಂಖ ಚಕ್ರಗಳ ಚಿಹ್ನೆಗಳೂ ಒಂದು ಗದ್ದುಗೆಯೂ ಇವೆ ಎಂದು ತಿಳಿಸಿದರು. ಸಂಪೂರ್ಣ ಶೋಧನೆಗೊಳಗಾಗಬೇಕಾದ ಜಾಗ ಅದು. ಆ ಬೆಟ್ಟದ ಬುಡದಲ್ಲಿ ನಿಂತಾಗ ಕಾಣುವ ಸಂಜೆಯ ದೃಶ್ಯ ಅವರ್ಣನೀಯ. (ಕೊಂಡಜ್ಜಿ ಶಾಸನಕ್ಕೆ ಎಪಿಗ್ರಾಫಿಯ ಕರ್ನಾಟಿಕ. 11. ದಾವಣಗೆರೆ 78 ನೋಡಿ).

ಸಂಜೆ ಊರಿಗೆ ವಾಪಸಾಗುವಾಗ ಹನುಮಂತಯ್ಯ, ಇಮ್ತಿಯಾಜ್ ಹುಸೇನ್ ಎಂಬುವರು ಬಂದರು. ಹುಸೇನ್ ದಾವಣಗೆರೆಯಲ್ಲಿ ಒಂದು ಮುದ್ರಣಾಲಯ ಇಟ್ಟಿರುವ ಸಿ.ಪಿ..ಐ. ಪಕ್ಷದ ಕಾರ್ಯಕರ್ತ. ತಾವು ಸಂಗ್ರಹಿಸಿದ್ದ ಶಿಲಾಯುಧಗಳನ್ನು ತೋರಲು ಬಂದಿದ್ದರು. ಹಂಪಿಯ ನನ್ನ ಕಾಲ್ನಡಿಗೆ, ನನ್ನ ಸಂಕಲ್ಪದ ವಿಷಯಗಳನ್ನು ಕೇಳಿದ ಹುಸೇನ್ ಅವರಿಗೆ ಇಡೀ ಆಲೋಚನೆ ಸಹ್ಯವಾಗಲಿಲ್ಲ. ಇದೊಂದು ಪಾಳೇಗಾರಿಕೆ (Feudal) ಮನೋಧರ್ಮ ಎಂದು ಟೀಕಿಸಿದರು. ಕರ್ನಾಟಕದಲ್ಲಿ ಕನ್ನಡ, ಕನ್ನಡಿಗನಿಗೆ ಪ್ರಾಧಾನ್ಯವಿರಬೇಕೆಂಬ ಆಲೋಚನೆ ಅವರಿಗೆ ಸರಿ ಬೀಳಲಿಲ್ಲ. ಅನೇಕ ಕಮ್ಯುನಿಸ್ಟರು ಅದೇ ಅಭಿಪ್ರಾಯ ವ್ಯಕ್ತಪಡಿಸಿರುವುದು ನನಗೆ ತಿಳಿದಿದೆ. ಅವರಿಗೆ ನಾನು ಕೆಲವು ಸ್ಪಷ್ಟೀಕರಣ ನೀಡಿದೆನಾದರೂ ಅವರಿಗೆ ಸಮಾಧಾನವಾದಂತೆ ತೋರಲಿಲ್ಲ.

ರಾತ್ರಿ ಸಂಗಪ್ಪನವರ ತಮ್ಮ ಹನುಮಂತಪ್ಪನವರ ಮನೆಯಲ್ಲಿ ಊಟ ಮಾಡಿದೆ. ಹನುಮಂತಪ್ಪ ಎಸ್.ಎಸ್.ಎಲ್.ಸಿ. ಓದಿದ್ದರೂ ಒಂದು ಬಗೆಯ ಹಳೇ ಕಾಲದ ಹಳ್ಳಿ ಮನುಷ್ಯನಾಗಿ, ಆ ಕಾರಣದಿಂದ ನನಗೆ ಬಹು ಪ್ರಿಯರಾದ ವ್ಯಕ್ತಿಯಾಗಿ ಕಂಡರು. ಊಟ ಖಾರವಾಗಿದ್ದರೂ, ಅವರ ಸುಂದರ ಮಕ್ಕಳು ಇಡೀ ವಾತಾವರಣವನ್ನು ಮುದ್ದುಗೊಳಿಸಿದ್ದುವು. ರಾತ್ರಿ ಅವರ ಹೆಂಡತಿ ನನ್ನ ಪಾದಗಳಿಗೆ ಭಾವುಕರಾಗಿ ನಮಸ್ಕರಿಸಲು ಬಂದಾಗ ನಾನು ಸಂಕೋಚದಿಂದ ಹಿಂದೆ ಸರಿಯಬೇಕಾಯ್ತು.

## ತೆಲಿಗಿ

ಬೆಳಿಗ್ಗೆ (7.6.85) ಅವರ ಮನೆಯಲ್ಲಿ ಕಾಫಿ ಕುಡಿದು, ಕಟ್ಟಿಕೊಟ್ಟ ತಿಂಡಿಪೊಟ್ಟಣ ಹಿಡಿದು, ಎಲ್ಲರಿಗೂ ನಮಸ್ಕಾರ ಹೇಳಿ, ಮಕ್ಕಳಿಗೆಲ್ಲ ಶುಭವನ್ನು ಕೋರಿ ಹೊರಟೆ. ಎಷ್ಟೋ ಬಾರಿ, ನನಗೆ ಆಶ್ರಯ ನೀಡಿದ ಮನೆಯವರಿಗೆಲ್ಲ ಕಾಲು ಮುಟ್ಟಿ ನಮಸ್ಕರಿಸುವ ಬಯಕೆಯಾಗುತ್ತಿತ್ತು. ಕೊಂಡಜ್ಜಿ ಬಿಟ್ಟಾಗ ಇನ್ನೂ ಸೂರ್ಯೋದಯವಾಗಿರಲಿಲ್ಲ. ಎದುರಿಗೆ ಅರ್ಧ ಹರಿದ ಬಟ್ಟೆಯ ಕೆದರುಗೂದಲಿನ ನರಪೇತಲ ಮಗುವೊಂದು ಅಳುತ್ತ ಬರುತ್ತಿತ್ತು. ಆ ದೃಶ್ಯ ತೀವ್ರ ವ್ಯಾಕುಲವನ್ನುಂಟುಮಾಡಿತು.

ಬೆಳಗಿನ ಪ್ರಸನ್ನ ವಾತಾವರಣದಲ್ಲಿ ಮನಸ್ಸು ಹೇಳಿತು - "ಸಮರಕ್ಕೆ ಸಿದ್ಧನಾಗು". ಮುಂದಿನ ಕನ್ನಡದ ಕೆಲಸದ ಬಗ್ಗೆ ಬಗೆ ಬಗೆಯ ಚಿಂತನೆಗಳು ಮೂಡಿದುವು. ಬಾಯಿಂದ ಕಠಿಣ ಪ್ರತಿಜ್ಞೆಗಳು ಹೊರಟುವು. ಮುಖ್ಯವಾಗಿ ನನ್ನನ್ನು ನಾನು ಗೆಲ್ಲಬೇಕು ನಾನು ಹಿಡಿದ ಧ್ಯೇಯ ಗೆಲ್ಲಬೇಕಾದರೆ, ಎಂಬುದನ್ನು ಹತ್ತಾರು ಬಾರಿ ಹೇಳಿಕೊಂಡೆ. ಇಂದ್ರಿಯ ನಿಗ್ರಹ ಮಾಡಬೇಕು. ಎಲ್ಲರ ಬಗ್ಗೆ ಪ್ರೀತಿಯನ್ನು ಬೆಳೆಸಿಕೊಳ್ಳಬೇಕು. ದೇಹ ಮನಸ್ಸನ್ನು ತೀವ್ರ ಶ್ರಮಕ್ಕೆ ಒಳಗು ಮಾಡಬೇಕು. ಅಪ್ಪಿ ತಪ್ಪಿಯಾದರೂ ಸ್ವಾರ್ಥ ಮನಸ್ಸಿನಲ್ಲಿ ಸುಳಿಯಕೂಡದು. ಇಂತಹ ಆಲೋಚನೆಗಳು, ಅವನ್ನು ಒಳಗೊಂಡಿರುವ ಕವನಗಳು, ಕವನ ಭಾಗಗಳು ಮನಸ್ಸಿಗೆ ಬಂದುವು. ಬಾಯಿಂದ ಹೊರ ಹೊಮ್ಮಿದುವು.

ದಾರಿಯಲ್ಲಿ ಒಂದು ಮೈಲಾರಲಿಂಗನ ಗುಡಿ ಇತ್ತು. ಅದರ ಸಂಕೇತ ಕಲ್ಲಿನ ಚೌಕಟ್ಟು, ಅದರ ಮೇಲಿನ ತ್ರಿಶೂಲ ಅಲ್ಲಿತ್ತು. ಬುಳ್ಳಾಪುರದಲ್ಲಿ ವನ್ಯತಮ್ಮ ಎಂಬ ವಿಲಕ್ಷಣ ಹೆಸರಿನ ಅಮ್ಮನ ಗುಡಿ ಇತ್ತು. ಆ ಪ್ರದೇಶದಲ್ಲಿ ಮಾತ್ರ ಆ ಹೆಸರಿನ ಗುಡಿಗಳಿರುವುದು ('ವನ್ಯತಮ್ಮ' ಬಹುಶಃ ಹೊನ್ನತ್ಯಮ್ಮ - ಹೊನ್ಯತಮ್ಮ) ಮೂಲತಃ ರಾಣೆಬೆನ್ನೂರು ತಾಲೂಕಿನ 'ಹೊನ್ನವತ್ತಿ' ಗ್ರಾಮದ ದೇವತೆ. ಆ ದೇವತೆ ಬಗ್ಗೆ ಮಾಹಿತಿ ಸಂಗ್ರಹದ ಅಗತ್ಯವಿದೆ. ದಾರಿಯಲ್ಲಿ ಕುರುಬರಹಳ್ಳಿ ಕ್ರಾಸಿನಲ್ಲಿ ಒಂದು ಗುಬ್ಬಿ ಯಾವುದೋ ವಾಹನಕ್ಕೋ ಗಿಡಗನ ಬಾಯಿಗೋ ಸಿಕ್ಕು ಸತ್ತಿರಬೇಕು. ಅದರ ಶವ ಮುಗ್ಧ ಹುಡುಗರ ಆಟದ ವಸ್ತುವಾಗಿತ್ತು. ಅಲ್ಲೇ ಸಮೀಪದ ಹಳ್ಳದ ದಡದ ತೋಟದ ನೆರಳಲ್ಲಿ ಕುಳಿತು ಅಲ್ಲೇ ಇದ್ದ ಹುಡುಗನ ಜೊತೆ ಉಪ್ಪಿಟ್ಟು ತಿಂದೆ. ದಾರಿಯಲ್ಲಿ ದುಗ್ಗತ್ತಿ ಊರು ಕಾಣಿಸಿತು. ಶಾಗಲೆ ಅಜ್ಜ ಆ ಊರಿನವರು. ತೆಲಿಗಿ ಊರಲ್ಲಿ ಮಹಾದೇವಯ್ಯ ಎಂಬ ಜೂನಿಯರ್ ಇಂಜಿನಿಯರ್ ಅವರ ಊರ ಹೊರಗಿನ ಮನೆಯಲ್ಲಿ ಉಳಿದುಕೊಂಡೆ. ಆ ಊರಲ್ಲಿ ಗಾಣಿಗ ಲಿಂಗಾಯತರು ಸಾಕಷ್ಟಿದ್ದಾರೆ. 'ತೈಲ' ತೆಗೆಯುವವನೇ ತೈಲಿಕ ಅಥವಾ ತೆಲ್ಲಿಗ - ಈ ಹೆಸರು ಹಿಂದಿನ ಶಾಸನಗಳಲ್ಲಿ ಸಾಕಷ್ಟು ಕಡೆ ಬರುತ್ತದೆ. ಅಂತಹ ತೆಲ್ಲಿಗರ ಊರೇ 'ತೆಲಗಿ'. ಆ ಊರಲ್ಲಿ ಪಂಚಮಸಾಲಿ ಮತ್ತು ಬಣಜಿಗ ಲಿಂಗಾಯತರಿಗೂ ಗಾಣಿಗ ಲಿಂಗಾಯತರಿಗೂ ಸ್ಪರ್ಧೆ ತೀವ್ರ. ಸಾದರು ಹೆಚ್ಚಾಗಿ ಇಲ್ಲ : ಪಂಚಮಸಾಲಿಗಳೇ ದಾವಣಗೆರೆ ಪ್ರದೇಶದ 'ಪಂಚಾಚಾರ'ದವರು.

ಬಣಜಿಗರನ್ನು ಬಣಸ್ತನದವರು ಎಂದು ಕರೆಯುತ್ತಾರೆ. ಅವರಲ್ಲಿ "ಮೇಲ್ ಪವಾಡ"ದವರು ಎಂಬ ಒಳಗುಂಪು ಇದೆ. ಕೊಡದ ಮೇಲೆ ಪಾವುಡ ಅಥವಾ ಬಟ್ಟೆ ಮುಚ್ಚಿ ಬಾವಿಯಿಂದ ನೀರು ತರುವವರೇ ಮೇಲ್ ಪವಾಡದವರು (ಭವಿಗಳ ಕಣ್ಣಿಗೆ ನೀರು ಬೀಳಬಾರದು); ಇವರನ್ನು "ವಸ್ತ್ರದವರು" ಎಂದೂ ಕರೆಯುವುದುಂಟು. ಇವರ ಮನೆಗಳಿಂದ ಜಂಗಮರು ಹೆಣ್ಣು ತಂದುಕೊಳ್ಳುತ್ತಾರೆ, ಆದರೆ ಕೊಡುವುದಿಲ್ಲ. (ಕೆಲವೆಡೆ "ವಸ್ತ್ರದವರು" ಜಂಗಮರೆಂದು ಕರೆದುಕೊಳ್ಳುತ್ತಾರೆ). ಅವರು ತಮ್ಮ ಮನೆಗಳಿಂದ ಹೊರಗೆ ಜಂಗಮರ ಮನೆಗಳಲ್ಲಿ ಮಾತ್ರ ನೀರು ಕುಡಿಯುವುದು. ಜಂಗಮರಂತೆ ಊಟವಾದ ಬಳಿಕ ತಟ್ಟೆ ತೊಳೆದ ನೀರು ಕುಡಿಯುತ್ತಾರೆ. ಪಂಚಮಸಾಲಿಗಳ ಪ್ರಕಾರ ಇವರು ಆಮೇಲೆ ವೀರಶೈವರಾದವರು, ತಾವು ಮಾತ್ರ ಮೊದಲಿಂದ ವೀರಶೈವರಾಗಿದ್ದವರು. ಪಂಚಮಸಾಲಿಗಳು ತಾವು ಇತರ ವೀರಶೈವರಿಗಿಂತ ಶ್ರೇಷ್ಠರೆಂದೂ ಜಂಗಮರ ನಂತರದ ಶ್ರೇಷ್ಠ ಜಾತಿಯವರೆಂದೂ ಭಾವಿಸುತ್ತಾರೆ. ಜಂಗಮರು ಪಂಚಮಸಾಲಿಗಳಿಂದ ನಿಸ್ಸಂಕೋಚವಾಗಿ ಹೆಣ್ಣು ತಂದುಕೊಳ್ಳುತ್ತಾರೆ, ಕೊಡುವುದಿಲ್ಲ (ಅಥವಾ ಪಂಚಮಸಾಲಿಗಳು ಹೆಣ್ಣನ್ನು ತರುವುದಿಲ್ಲ - ಕಾರಣ, ಜಂಗಮ ಹೆಣ್ಣು ಮಕ್ಕಳು ತಮ್ಮ ಮನೆಗಳಲ್ಲಿ ಸೊಸೆಯರಾಗಿ ತಮ್ಮ ಎಂಜಲನ್ನು ತೆಗೆಯಬೇಕಾಗುತ್ತದೆ). ಬಣಜಿಗರು ಮುಖ್ಯವಾಗಿ ವರ್ತಕ ವರ್ಗದವರಾಗಿ ಹಣ ಇರುವವರಾದ್ದರಿಂದ ತಾವು ಪಂಚಮಸಾಲಿಗಳಿಗಿಂತ ಶ್ರೇಷ್ಠವೆಂದು ಹೇಳಿಕೊಳ್ಳುತ್ತಾರೆ. ಆಧುನಿಕ ಕಾಲದಲ್ಲಿ ಸಹಜವಾಗಿಯೇ ಸಮಾನತೆಯ ಪರ ಬದಲಾವಣೆಗಳಾಗುತ್ತಿವೆ.

ತೆಲಿಗಿ ಹಳೆಯ ಇತಿಹಾಸವಿರುವ ಒಂದು ದೊಡ್ಡ ಗ್ರಾಮ. ಹಿಂದಿನ ಕಾಲದ ಕೋಟೆ ಮತ್ತು ಹಲವು ದೇವಾಲಯಗಳು ಅಲ್ಲಿವೆ. ಕೋಟೆಯಲ್ಲಿನ ಕಾಲಭೈರವ ಮೂರ್ತಿ ಅತ್ಯಂತ ಸುಂದರ. ಅಲ್ಲೇ ಕಮಲವನ್ನು ಕೆತ್ತಿದ ಒಂದು ಹಾಳು ಮಂಟಪ, ವೀರಗಲ್ಲು, ಸಪ್ತಮಾತೃಕೆಯರು, ಶಿವಲಿಂಗಗಳಿವೆ. ಒಂದೇ ಪೀಠದ ಮೇಲೆ ವಿರುದ್ಧ ದಿಕ್ಕುಗಳಲ್ಲಿ ಕೂರಿಸಿರುವ ಜೋಡು ಈಶ್ವರ ಲಿಂಗವನ್ನು "ಹರಿ ಹರ" ಎಂದು ಕರೆಯುವುದು ವಿಶೇಷ. ಆ ದೇವಾಲಯದ ಕಂಬದ ಮೇಲೆ ಸುಂದರ ಕೆತ್ತನೆ ಇದೆ (ಅಲ್ಲಿನ ಕ್ರಿ.ಶ. 1032ರ ಶಾಸನದ ಪ್ರಕಾರ ಆ ಊರ ಹೆಸರು "ತೆಲಗಿ". ಅದು "ಬಿಕ್ಕಿಗ 70" ಎಂಬ ನಾಡಿನ ಒಂದು ಅಗ್ರಹಾರವಾಗಿತ್ತು. ಆ ಊರಿನ ಒಡೆಯ ಕಣ್ಣಮಯ್ಯ ಎಂಬಾತ. ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ್. ಸಂ.9 ಭಾಗ. 1. ಸಂಖ್ಯೆ 85). ಅಲ್ಲಿ "ಪರವ್ವ"* ಮಾಡಿದರೆ ಮಳೆ ಬಂದೇ ಬರುತ್ತದೆ. ಅಲ್ಲೊಂದು ವೀರಗಲ್ಲು ಉಂಟು. ಕೋಟೆಯ ಕಲ್ಮಠದಲ್ಲಿರುವ ಶಾಲಿವಾಹನ ಶಕ 1253ರ (ಕ್ರಿ.ಶ. 1331) ಶಾಸನದಲ್ಲಿ "ಹಿರೇಮಠ"ಕ್ಕೆ ದತ್ತಿಕೊಟ್ಟ

* "ಪರವ್ವ" ಸಂಸ್ಕೃತದ "ಪರ್ವ"ದ (=ಹಬ್ಬ) ರೂಪಾಂತರ. ದೇವಾಲಯವನ್ನು ಪೂರ್ತಿ ತೊಳೆದು, ಈಶ್ವರ ಲಿಂಗಕ್ಕೆ ಅಭಿಷೇಕ ಮಾಡಿ, ಜಂಗಮರ ಊಟ ಆದಮೇಲೆ ಎಲ್ಲ ಜನಕ್ಕೆ ದಾಸೋಹ ನಡೆಯುತ್ತದೆ ದೇವಾಲಯದ ಪೌಳಿಯಲ್ಲಿ. ಅದೇ "ಪರವ್ವ" - ಇಡೀ ಊರಿನ ಜನ ಅದರಲ್ಲಿ ಭಾಗವಹಿಸುತ್ತಾರೆ. ಆರಾಧನೆಗೆ ಎಲ್ಲ ಜಾತಿಯ ಜನರೂ ಅಕ್ಕಿ, ಗೋಧಿ, 'ಬ್ಯಾಳಿ', ಮೆಣಸಿನಕಾಯಿ, ಮೀಸಲು ಹಾಲು ತುಪ್ಪ ತರುತ್ತಾರೆ. "ಕಪ್ಪು ಜನ"ರೂ (ಅಸ್ಪೃಶ್ಯರೂ) ಹಾಲು ತುಪ್ಪ ತರುತ್ತಾರೆ. ಲಿಂಗಾಯತರಿಗೆ ದೇವಾಲಯದ ಒಳಗೆ ಪೌಳಿಯಲ್ಲಿ ದಾಸೋಹ. ಉಳಿದವರಿಗೆ ಪೌಳಿ ಹೊರಗೆ, ಬೀದಿಯಲ್ಲಿ.

ವಿಷಯವಿದೆ. ತೆಲಿಗಿಯಲ್ಲಿ ಒಟ್ಟು ಮೂರು ಮಠಗಳಿವೆ : ಗುಳೇದಗುಡ್ಡದ ಮಠ, ಹಾಲಪ್ಪದೇವರ ಮಠ ಮತ್ತು ಕಲ್ಮಠ (ಹಿರೇಮಠ). ಸಂದುಗೊಂದುಗಳು ಇಕ್ಕಟ್ಟಾದ ಓಣಿಗಳು ಸಾಕಷ್ಟು ಇರುವ ತೆಲಿಗಿ ಗ್ರಾಮದ ಐತಿಹಾಸಿಕ ಸಮೀಕ್ಷೆ ಖಂಡಿತ ಲಾಭದಾಯಕ.

ಆ ಊರಲ್ಲಿ ನಡೆಯುವ ಮಾಹೇಶ್ವರನ ಜಾತ್ರೆ ಪ್ರಖ್ಯಾತವಾದುದು. ಮಾರ್ಗಶಿರ ಬಹುಳ ಪುಷ್ಯಮಾಸದ ಒಳಗೆ ಮಾಹೇಶ್ವರನ ಜಾತ್ರೆ ನಡೆಯಬೇಕು. ಒಂದು ಭಾನುವಾರ ತೋಟದ ನಿರ್ದಿಷ್ಟ ಜಾಗದಲ್ಲಿ "ಸ್ವಾಮಿ ಬಾವಿ" ತೋಡುತ್ತಾರೆ. ಆ ಜಾಗದಲ್ಲಿ ಒಂದು ವರ್ಷದ ಹಿಂದೆ ಮಾಹೇಶ್ವರನ ಪೂಜೆ ಆಗಿ ಎಲ್ಲರ ಊಟ ಆದ ಮೇಲೆ ಉಳಿದ ಪ್ರಸಾದವನ್ನು ಬಾಳೆ ಎಲೆಯಲ್ಲಿ ಮುಚ್ಚಿ ಅದೇ ಜಾಗದಲ್ಲಿ ಹೂತು ಮಣ್ಣು ಮುಚ್ಚಿರುತ್ತಾರೆ. ಪ್ರಸಾದದ ಮೇಲೆ ಮಣ್ಣು, ಕೆಸರು, ನೀರು ಇದ್ದರೂ ಬಾಳೆಲೆ ಕೆಳಗಿನ ಮಾಹೇಶ್ವರನ ಪ್ರಸಾದ ಏನೂ ಆಗಿರುವುದಿಲ್ಲ. ಈ ಮಹಾತ್ಮೆಯನ್ನು ಕಣ್ಣಾರೆ ಕಂಡವರೇ (ಕೊಟ್ರಪ್ಪ ಮೇಷ್ಟು, ಶಿವಲಿಂಗಪ್ಪ ಮೇಷ್ಟು) ಹೇಳಿದ್ದು. ಆ ಪ್ರಸಾದವನ್ನು ಎಲ್ಲರಿಗೂ ಹಂಚುತ್ತಾರೆ. ಸೋಮವಾರ ಊರಲ್ಲಿಯೇ ಜನರು ಮನೆಗಳಲ್ಲಿ ಗಣಂಗಳಿಗೆ (ಜಂಗಮರಿಗೆ) ಉಪ್ಪು ಕಾರ ಹಾಕದ ಬರೀ ಸಿಹಿ ಊಟ ಹಾಕುತ್ತಾರೆ. ಸೋಮವಾರ ಸಂಜೆ ಮಾಹೇಶ್ವರನನ್ನು (ಲಿಂಗಾಕಾರದ ಲೋಹದ ಪ್ರತಿಮೆ) ಮೆರವಣಿಗೆಯಲ್ಲಿ ಹೊರಡಿಸಿ, 'ಪುರಂತರು' ಸಮೇತ (ಪುರವಂತರು. ಇವರು ವೀರಭದ್ರನಂತೆ ಅಲಂಕರಿಸಿಕೊಂಡು ಖಡ್ಗ ಹಿಡಿದು ವೀರಭದ್ರನ ಹಲಗೆ ಹಿಡಿದು ಅವನ ಸ್ತೋತ್ರ ರೂಪದ 'ಖಡ್ಗ'ಗಳನ್ನು. ವಡಬುಗಳನ್ನು ಹೇಳುತ್ತಾರೆ. ಕೆಲವೊಮ್ಮೆ ಕೆನ್ನೆಗೆ ಸೂಜಿ ದಬ್ಬಳ ಚುಚ್ಚಿಕೊಳ್ಳುವುದುಂಟು) ವಾದ್ಯಘೋಷದ ಮಧ್ಯೆ ದುರ್ಗಮ್ಮ ದೇವಾಲಯದ ಕಟ್ಟೆ ಮೇಲೆ ಕೂರಿಸುತ್ತಾರೆ. ಅಲ್ಲಿ ಪುರಂತರ ಕುಣಿತ, ವಡಬು ಹೇಳುವುದು, ಕೊಬ್ಬರಿ ಸುಡುವುದು (ಕೊಬ್ಬರಿ ಸುಡುವ ಹರಕೆಯನ್ನು ಕೆಲವರು ಹೊತ್ತಿರುತ್ತಾರೆ) ಎಲ್ಲ ನಡೆಯುತ್ತದೆ. ರಾತ್ರಿಯೆಲ್ಲ ಎಲ್ಲ ಮನೆಗಳಿಂದ ಬಂದ ಆರತಿಗಳು ಬೆಳಗುತ್ತವೆ. ಮಂಗಳವಾರ ಮಾಹೇಶ್ವರನ ಮೆರವಣಿಗೆಯು ಜಾತ್ರೆ ನಡೆಯುವ ಎರಡೂ ತೋಟಗಳಿಗೆ ಸಾಗುತ್ತದೆ. ಆ ತೋಟಗಳಲ್ಲಿ ಮಂಗಳವಾರ ಜಂಗಮರ 'ಪ್ರಸಾದ' ಆದಮೇಲೆ ಅವರ ಪಾದೋದಕ ಸಮೇತ ಲಿಂಗಾಯತರಿಗೆ ಮಾತ್ರ ಅನ್ನ, ಗೋಧಿ ಕಿಚಡಿ, ಬಾಳೆಹಣ್ಣು, ಬೆಲ್ಲ, ಸಕ್ಕರೆಗಳ ಊಟ ಹಾಕುತ್ತಾರೆ. ಅದೇ ರೀತಿ ಅದೇ ಜನಕ್ಕೆ ಬುಧವಾರ ಅನ್ನ ಸಾರು ಊಟ ಹಾಕುತ್ತಾರೆ. 'ಕಪ್ಪು ಮಂದಿ'ಗೆ ಪ್ರವೇಶ ಇಲ್ಲ. ಬುಧವಾರ ಒಂದು 'ಡಬ್ಬಿ ಗಡಿಗೆ' (ದೊಡ್ಡ ಮಣ್ಣ ಪಾತ್ರೆ) ಹಿಡಿದ ದೇವರ ಮೆರವಣಿಗೆ ಊರಲ್ಲಿ ನಡೆಯುತ್ತದೆ. ಜನ ಆ ಗಡಿಗೆಗೆ ತಮ್ಮ ಕಾಣಿಕೆ ಸಲ್ಲಿಸುತ್ತಾರೆ. ಮೆರವಣಿಗೆಯಲ್ಲಿ ಆರತಿ ಹಿಡಿದು ಸಾಗಿದ ಹೆಂಗಸರು ಒಂದು ನಿರ್ದಿಷ್ಟ ಜಾಗದವರೆಗೆ ಹೋಗಿ ಹಿಂದಿರುಗುತ್ತಾರೆ. ಅವರು ಮಾಹೇಶ್ವರನ ಜಾತ್ರೆ ನಡೆಯುವ ತೋಟಗಳಿಗೆ ಹೋಗುವುದಿಲ್ಲ. ಒಂದು ತೋಟದಲ್ಲಿ ಡಬ್ಬಿ ಗಡಿಗೆ ಒಡೆದು "ಮಾಹೇಶ್ವರನ್ನ ಬಾವಿಗೆ ಸೇರಿಸ್ತಾರೆ" - ಅಂದರೆ ಹಿಂದಿನ ವರ್ಷದ ಪ್ರಸಾದವನ್ನು ಅಗೆದು ತೆಗೆದ ಬಾವಿಗೆ ಆ ವರ್ಷದ ದಾಸೋಹ ನಡೆದು ಉಳಿದ ಪ್ರಸಾದವನ್ನು ಬಾಳೆ ಎಲೆಯಲ್ಲಿ ಮುಚ್ಚಿ ಹೂತು ಮಣ್ಣು ತುಂಬುತ್ತಾರೆ. ಅದನ್ನು ತೆಗೆಯುವುದು ಮುಂದಿನ ವರ್ಷವೇ.

ಅಲ್ಲಿಯವರೆಗೂ ಆ ಪ್ರಸಾದ ಏನೂ ಆಗಿರುವುದಿಲ್ಲ. ಮಾಹೇಶ್ವರನ ಜಾತ್ರೆ ಬಳಿ ಕಾಗೆ, ನೊಣ, ನಾಯಿ ಯಾವುವೂ ಸುಳಿಯುವುದಿಲ್ಲ.

ರಾತ್ರಿ ಐದು ಜನ ಮಕ್ಕಳನ್ನು ಕುಳ್ಳಿರಿಸಿಕೊಂಡು ಕತೆ ಹೇಳಿದೆ. ಊರಲ್ಲಿ ಅನೇಕ ಬಡವರು ಹೊಲಿಗೆ ಯಂತ್ರಗಳನ್ನು ಕೊಳ್ಳಲು ಸಾವಿರ, ಎಂಟು ನೂರು ಹೀಗೆ ಸಹಾಯಧನ ಪಡೆದವರು ಆ ಹಣವನ್ನು ಯಾವು ಯಾವುದಕ್ಕೋ ಬಳಸಿ ಸರ್ಕಾರದ ಹಣ ಪೋಲು ಮಾಡಿದ್ದಾರೆ. ಹೊಲಿಗೆ ಯಂತ್ರಗಳನ್ನು ಕೊಂಡ ಕೆಲವರು ಅವುಗಳಿಂದ ಜೀವನೋಪಾಯ ನಡೆಸುತ್ತಿದ್ದಾರೆ.

## ನೀಲಗುಂದ

ಬೆಳಿಗ್ಗೆ (8.6.85) ಜೂನಿಯರ್ ಇಂಜಿನಿಯರ್ ಮಹಾದೇವಯ್ಯನವರು ಸ್ವಲ್ಪ ನೀಲಿಗಾಜು ಕಣ್ಣಿನ ಮೇಸ್ತ್ರಿ ನಾಗರಾಜನನ್ನು ನನ್ನ ಜೊತೆ ಕಳಿಸಿದರು. ಮಹಾದೇವಯ್ಯನವರ ಕುಟುಂಬಕ್ಕೆ ಹಾರ್ದಿಕ ಶುಭವನ್ನು ಕೋರಿ ಹೊರಟೆ. "ದುಡ್ಡಿದ್ದವ ದುಗ್ಗತ್ತೀಲಿ, ತೆಲಿ ಕೆಟ್ಟಿದ್ರೆ ತೆಲಿಗೀಲಿ" ಎಂಬ ಗಾದೆ ಇದೆ. ತೆಲಿಗಿಗೆ ಎಂದೂ ಕ್ಷಾಮ ಬಂದಿಲ್ಲ. "ತೆಲಿಗಿಗೆ ಬರ" ಎಂದು ಯಾರಾದರೂ ಅಂದರೆ ಸಾಕು ಅವರಿಗೆ ದೇವರ ಶಾಪ ತಟ್ಟುತ್ತದೆ. ಆದರೆ ಹೊಡೆದಾಟಕ್ಕೆ ಆ ಊರು ಎತ್ತಿದ ಕೈ : ಆ ಕಾರಣದಿಂದಲೇ ಮೇಲಿನ ಗಾದೆ ಹುಟ್ಟಿದೆಯಂತೆ. ಆ ಪ್ರದೇಶದಲ್ಲಿ ಸಾದರ ಬಣಜಿಗರ ತಿಕ್ಕಾಟಗಳು ನಡೆಯುವುದುಂಟು. ದಾರಿಯಲ್ಲಿ ಭೇಟಿಯಾದ ತೆಲುಗು ಮಾತನಾಡುವ ಹಾವಾಡಿಗರೂ ಕೂಡ ತೆಲಿಗಿ ಜನರ ಹೊಡೆದಾಟ ಪ್ರಿಯತೆಯನ್ನು ಬಣ್ಣಿಸಿದರು. ನಾಗರಾಜ್ ತನ್ನ ಹೊಲಕ್ಕೆ ಸೇಂಗ ಬಿತ್ತಿದ್ದನ್ನು ತೋರಿಸಿದ. ಅಲ್ಲೇ ಕುಳಿತು ತಿಂಡಿ ತಿಂದೆವು. "ತೆಲಿಗಿ ಈಚೆ ಮಾಹೇಶ್ವರನ ಜಾತ್ರೆ ಇಲ್ಲ" ಎಂದು ನಾಗರಾಜ್ ಹೇಳಿದ. ತೆಲಿಗಿ ಹರಿಹರ ಹರಪನಹಳ್ಳಿ ರಸ್ತೆಯಲ್ಲಿದೆ. ನಾವು ಹರಪನಹಳ್ಳಿ ಕಡೆ ಹೊರಟಿದ್ದೆವು.

ರಸ್ತೆಯ ಎಡಬದಿಗೆ ನೀಲಗುಂದ ಊರು. ಅಲ್ಲಿ ನಾನು ಆ ದಿನ ಉಳಿಯಬೇಕಿತ್ತು. ಬಸ್ ರಸ್ತೆಯಿಂದ ಊರಿಗೆ ಸುಮಾರು ಎರಡು ಕಿಲೋಮೀಟರ್. ಆ ಚೌಕದಲ್ಲಿ ಸಾಕಷ್ಟು ಮರಗಳನ್ನು ಬೆಳೆಸಿದ್ದರು. ಅಲ್ಲೇ ಸಮೀಪದಲ್ಲಿ ಒಂದು ಗುಡ್ಡ : ಅದೇ "ಕುಂದ". "ಕುಂದ" ಎಂದರೆ ಗುಡ್ಡ ಅಥವಾ ಬೆಟ್ಟ (ತಮಿಳು. ಕುನ್ರಂ, ತೆಲುಗು. ಕೊಂಡ, ಕನ್ನಡ. ಕುಂದ). -ಕುಂದ, -ಗುಂದ ಎಂದು ಕೊನೆಯಾಗುವ ಹೆಸರುಗಳಿರುವ ಉತ್ತರ ಕರ್ನಾಟಕದ ಊರ ಸಮೀಪ ಕಡ್ಡಾಯವಾಗಿ ಒಂದು ಗುಡ್ಡವೋ ಬೆಟ್ಟವೋ ಇರುತ್ತದೆ. ನೀಲಗುಂದದ ಹಿಂದಿನ ಹೆಸರು "ನೀರಗುಂದ" : ಬೆಟ್ಟದ ಬದಿಯಲ್ಲೇ ಒಂದು ದೊಡ್ಡ ಕೆರೆಯಿರುವುದರಿಂದ ಅದನ್ನು ನೀರಗುಂದ ಎಂದು ಕರೆದಿದ್ದರು. ದಾರಿಯ ಬದಿಯಲ್ಲೇ "ಊರಮ್ಮ" ಹೆಸರಿನ ಗ್ರಾಮದೇವತೆ ಇದ್ದಾಳೆ. ಊರೊಳಗಿನ ಗ್ರಾಮದೇವತೆ ವಿಧವೆಯಾದಾಗ ಇಲ್ಲಿಗೆ, ಊರ ಹೊರಕ್ಕೆ ಬಂದು ತನ್ನ ಬಳೆ ಒಡೆದುಕೊಳ್ಳುತ್ತಾಳೆ. ಹೊಲಗಳು ಹೆಚ್ಚಾಗಿ ಸುಣ್ಣದ ಕಲ್ಲಿನ ಮಣ್ಣಿನಿಂದ ಕೂಡಿವೆ.

ನೀಲಗುಂದ ಸಾಕಷ್ಟು ದೊಡ್ಡ ಊರು. ಆ ಊರಿನಿಂದ ಬಂದು ದಾವಣಗೆರೆಯಲ್ಲಿ ನೆಲಸಿದ್ದ ಶ್ರೀಮಂತ ವರ್ತಕರೊಬ್ಬರ ಮಗ - ಆ ಹುಡುಗನನ್ನು "ಮುರಿಗಜ್ಜ" ಎಂದೇ ಕರೆಯುತ್ತಿದ್ದೆವು - ನನ್ನ ಹೈಸ್ಕೂಲ್ ಸಹಪಾಠಿ. ಕೆಲವು ದಿನಗಳ ಹಿಂದೆ ನೀಲಗುಂದದ ಪಟ್ಟದ್ದೇವರು ಲಿಂಗೈಕ್ಯರಾದ್ದರಿಂದ ನಾನು ಹೋದ ದಿನ ಅಲ್ಲಿ ಕೈಲಾಸ ಸಮಾರಾಧನೆ ನಡೆದಿತ್ತು. ಹೊನ್ನಾಳಿಯ ಕಲ್ಮಠದ ಸ್ವಾಮಿಗಳು ತಮ್ಮ ಕಾರಿನಲ್ಲಿ ದಯಮಾಡಿಸಿದ್ದರು. ಅವರು ಮೈಸೂರಿನಲ್ಲಿ ಇಂಟರ್ಮಿಡಿಯೇಟ್ ಓದುತ್ತಿದ್ದಾಗ ನನ್ನ ವಿದ್ಯಾರ್ಥಿಗಳಾಗಿದ್ದರಂತೆ. ಮೆದು ಸ್ವಭಾವದ ಹಿತಭಾಷಿ ಅವರು. "ಪಟ್ಟದ ಮಠ" ಎಂದರೆ ಹಿಂದಿನ ಕಾಲದ ಒಂದು ಮಾಳಿಗೆ ಮನೆ. ಮಠದ ಕಟ್ಟೆಯ ಮೇಲೆ ಲಿಂಗೈಕ್ಯ ಸ್ವಾಮಿಗಳ ಚಿತ್ರವನ್ನಿಟ್ಟು ಪೂಜಿಸಿದ್ದರು. ನನಗೆ ಆ ದಿನ ವಿಪರೀತ ಆಯಾಸವಾಗಿದ್ದರೂ ವಿಶ್ರಾಂತಿ ತೆಗೆದುಕೊಳ್ಳಲು ಅವಕಾಶವಿರಲಿಲ್ಲ. ಜನರ ಗಲಾಟೆಯೋ ಗಲಾಟೆ. ಊರಿನ ಬೇಡ ಜನಾಂಗದವರು ನನಗೆ ಪರಿಚಿತ ಶೈಲಿಯಲ್ಲಿ ಭಜನೆ ಹಾಡುಗಳನ್ನು ಹೇಳುತ್ತಿದ್ದರು. "ಪಟ್ಟದ್ದೇವರಿಲ್ಲದ ಈ ಕಾರ್ತಿಕ ಮಾಸ ಹೇಗೆ ಕಳೆಯೋದು" ಎಂದು ಲಂಬಾಣಿ ಹೆಂಗಸರು ಪ್ರಲಾಪಿಸಿದರು. ಕಾರ್ತಿಕದಲ್ಲಿ ಲಿಂಗೈಕ್ಯ ಸ್ವಾಮಿಗಳ ಪ್ರವಚನ ಜನರಿಗೆ ಬಹು ಆಪ್ಯಾಯಮಾನವಾಗಿರುತ್ತಿತ್ತು. ಸಾಕಷ್ಟು ಜಂಗಮರು ಕೈಲಾಸ ಸಮಾರಾಧನೆಗೆ ಬಂದಿದ್ದರು. ನನ್ನ ಗೆಳೆಯರಾದ ಡಾ. ಶಿವಮೂರ್ತಿ ಮತ್ತು ಡಾ. ಶಿವಕುಮಾರ ಸ್ವಾಮಿಯವರು (ಇಬ್ಬರೂ ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ನನ್ನ ಸಹೋದ್ಯೋಗಿಗಳು) ಬಂದಿದ್ದರು. ಧ್ವನಿವರ್ಧಕದಲ್ಲಿ ಚಲನಚಿತ್ರದ ಹಾಡುಗಳು ಮಂತ್ರಘೋಷಕ್ಕಿಂತ ಭಜನೆಯ ಹಾಡುಗಳಿಗಿಂತ ಪ್ರಮುಖವಾಗಿ ಕೇಳಿಬರುತ್ತಿದ್ದವು. ಊರ ಹೊರಗೆ ಹಿಂದಿನ ಸ್ವಾಮಿಗಳ ಸಮಾಧಿಯ ಪಕ್ಕ ಲಿಂಗೈಕ್ಯ ಸ್ವಾಮಿಗಳ ಸಮಾಧಿಯನ್ನು ಮಾಡಲಾಗಿದ್ದು ನಾನು ಮೆರವಣಿಗೆಯಲ್ಲಿ ಹೋಗಿ ಆ ಸಮಾಧಿ ದರ್ಶನ ಮಾಡಿಕೊಂಡು ಬಂದೆ. "ಹಿಂದಿನ ಸ್ವಾಮಿಗಳ ಸಮಾಧಿ ಪಕ್ಕದಲ್ಲೇ, ಇಲ್ಲೇ ಆಗಬೇಕು; ಏನೋ ಖಂಡಿತ ಸಿಗುತ್ತದೆ" ಎಂದು ಯಾರೋ ಸೂಚಿಸಿದಾಗ ಅಲ್ಲೇ ಅಗೆದ ಜಾಗದಲ್ಲಿ ಯಾವುದೋ ವಿಗ್ರಹದ ಪೀಠ ದೊರಕಿದ್ದು ಜನರಿಗೆ ಒಂದು ಅದ್ಭುತ ಪವಾಡವಾಗಿ ಕಾಣಿಸಿತ್ತು. ನೀಲಗುಂದಕ್ಕೆ ಬಂದ ಜನರೆಲ್ಲ ಸಮಾಧಿದರ್ಶನ ಮಾಡಿದರು. ಹಿಂದಿನ ದಿನ ನಡೆದ ಭಾಷಣ ಪ್ರವಚನಗಳಿಗೆ ನೂರಾರು ಜನ ಸೇರಿದ್ದರಂತೆ. ನನಗೆ ಹಿಂದೆಯೇ ಪರಿಚಯವಿದ್ದ ಒಬ್ಬರು ಸ್ವಾಮಿಗಳೂ ಬಂದರು ; ಆಧ್ಯಾತ್ಮಿಕ ದೃಷ್ಟಿಗಿಂತ ಸ್ವಲ್ಪ ಲೌಕಿಕ ದೃಷ್ಟಿಯನ್ನು ಅವರ ನಡೆನುಡಿಯಲ್ಲಿ ಗುರುತಿಸಿದ್ದೆ. ಕುರುವತ್ತಿಯ ವೃದ್ಧ ಪಟ್ಟದ್ದೇವರೂ ಬಂದರು. ಎಲ್ಲರಿಗೂ ಒಟ್ಟಿಗೆ ಲಿಂಗಪೂಜೆ ನಡೆದು ಬೆಂಗಳೂರಿನ ಇಬ್ಬರು ಪ್ರಾಧ್ಯಾಪಕರ ಜೊತೆ ಎಲ್ಲ ಸ್ವಾಮಿಗಳಿಗೆ ಪ್ರಸಾದ ವಿನಿಯೋಗ ನಡೆಯಿತು. ನನ್ನನ್ನು ಅವರ ಜೊತೆ ಊಟಕ್ಕೆ ಕುಳ್ಳಿರಿಸಲಿಲ್ಲ. ಅದು ಸ್ವಾಭಾವಿಕವಾಗಿತ್ತು ಮತ್ತು ನಿರೀಕ್ಷಿತವಾಗಿತ್ತು. ನನ್ನ ಮೈ ಮೇಲೆ ಇಷ್ಟಲಿಂಗವಿಲ್ಲವೆಂಬುದನ್ನು ಮತ್ತು ಸ್ವಲ್ಪ ವಿಚಿಕಿತ್ಸಕ ಬುದ್ಧಿಯವನು ಎಂಬುದನ್ನು ಅವರೆಲ್ಲರೂ ಬಲ್ಲವರಾಗಿದ್ದರು. ಅಂದು ಹೋಳಿಗಿ, ಸೀಕರಿಣೆ, ಬೂಂದಿ ಊಟದಲ್ಲಿ ವಿಶೇಷವಾಗಿತ್ತು. ಸಮಾಧಿಗೆ ಹೋಗಿದ್ದ ಊರ ಜನರ ಮೆರವಣಿಗೆ ಬಂದಾಗ ಜನಸಂದಣಿ ದಟ್ಟವಾಗಿತ್ತು. ಮುಂದಿನ ಪಟ್ಟಾಧಿಕಾರಿಯಾಗಲಿದ್ದ

ಹುಡುಗ ಎಂಟನೇ ತರಗತಿ ವಿದ್ಯಾರ್ಥಿಯಾಗಿದ್ದ. ಜನ ಆ ಹುಡುಗನ ಮುಂದೆ ಜೋಡಿ ತೆಂಗಿನ ಕಾಯಿಟ್ಟು ಅದರ ಮೇಲೆ ಆತ ಕಾಲಿಡುವಂತೆ ಮಾಡಿ ಆಶೀರ್ವಾದ ಪಡೆದರು. ಒಬ್ಬಾತ ತನ್ನ ಮಗುವನ್ನು ಆ ಹುಡುಗನ ತೊಡೆ ಮೇಲೆ ಮಲಗಿಸಿದ. ಆಶೀರ್ವಾದ ಹೇಗೆ ಮಾಡಬೇಕೆಂದು ಹಿರಿಯರು ಹೊಸ ಪಟ್ಟದ್ದೇವರಿಗೆ ಹೇಳಿಕೊಟ್ಟರು. ಮುದ್ದಾದ ಆ ಹುಡುಗನಿಗೆ ಕಾವಿ ಬಟ್ಟೆ ಹೊದೆಸಿದ್ದರು. ಇನ್ನೊಬ್ಬ ಪಿ.ಯು.ಸಿ. ಪಾಸ್ ಮಾಡಿದ ವಿಘ್ನೇಶ್ ಎಂಬಾತ ಪಟ್ಟದ್ದೇವರು ಆಗಬೇಕಿತ್ತು. ಆಗುವ ಆಸೆಯೂ ಇತ್ತು. ಆತನಲ್ಲಿ ಸ್ವಲ್ಪ ಧಾರ್ಮಿಕ ಭಾವನೆಯ ಸೂಚನೆಯೂ ಕಂಡು ಬಂದಿತು ನನಗೆ. ಆತ ಬಳ್ಳಾರಿಯಿಂದ ನೀಲಗುಂದಕ್ಕೆ ಬರುವುದು ಸ್ವಲ್ಪ ತಡವಾಗಿ ಬೇರೊಬ್ಬ ಹುಡುಗನಿಗೆ ಪಟ್ಟದ್ದೇವರ ಪಟ್ಟ ಕಟ್ಟಿದ್ದರಿಂದ ವಿಘ್ನೇಶಗೆ ಸ್ವಲ್ಪ ನಿರಾಶೆ ಆಗಿತ್ತು. ತನ್ನ ಜೊತೆಗಾರ ಹುಡುಗರು ನಮಸ್ಕರಿಸಿದಾಗ ನೂತನ ಪಟ್ಟದ್ದೇವರಿಗೇ ನಗು : ಸ್ವಲ್ಪ ಕೃತಕ ಗಾಂಭೀರ್ಯವನ್ನು ಮುಖದಲ್ಲಿ ತಂದುಕೊಂಡ. ಹೆಂಗಸರೆಲ್ಲ ಆತನನ್ನು ಮುದ್ದಿಸುತ್ತ ಆರೈಕೆ ಮಾಡುತ್ತ ಕೆಂಪು ಹೂವಿನ ಹಾರ ಹಾಕಿ ಅಲಂಕರಿಸಿದರು.

ಅಲ್ಲಿ ಬಂದವರಲ್ಲಿ ಒಬ್ಬ ಸ್ವಾಮಿಗಳು ಬೇರೆ ವಿಷಯಗಳನ್ನು ಬಿಟ್ಟು ಎಲ್ಲರ ಮುಂದೆ ತಮ್ಮ ಸ್ವಂತ ವಿಷಯಗಳನ್ನೇ ಪ್ರಸ್ತಾಪಿಸಿದ್ದು ನನಗೆ ಅಷ್ಟು ಪ್ರಿಯವಾಗಲಿಲ್ಲ. ಮಧ್ಯಾಹ್ನದ ನಂತರ ಅಲ್ಲೇ, ಕಟ್ಟೆ ಮೇಲೆ ಜನಗಳ ಗೊಂದಲದ ಮಧ್ಯೆ ಮಲಗಿ ವಿಶ್ರಾಂತಿ ತೆಗೆದುಕೊಂಡೆ. ಅದು ಅನಿವಾರ್ಯವಾಗಿತ್ತು. ಒಬ್ಬ ಶಿಕ್ಷಣ ತರಬೇತಿ ಕಾಲೇಜಿನ ಅಧ್ಯಾಪಕರಿಗೆ ಶಿಕ್ಷಣದ ಬಗ್ಗೆ ಆಸಕ್ತಿಯೇ ಇರದಿದ್ದುದು ನನಗೆ ಆಶ್ಚರ್ಯವುಂಟುಮಾಡಲಿಲ್ಲ.

ಸ್ವಲ್ಪ ಬಿಸಿಲು ಇಳಿಯುತ್ತಿದ್ದಂತೆ ಆ ಊರ ಬಗ್ಗೆ ಮಾಹಿತಿ ಸಂಗ್ರಹಿಸಲುಪಕ್ರಮಿಸಿದೆ. ನಾನು ಉಳಿದುಕೊಂಡದ್ದು ಊರ ಒಳಗಿನ ಪಟ್ಟದ ಮಠದಲ್ಲಿ. ಊರ ಹೊರಗೆ ಒಂದು ವಿರಕ್ತಮಠವಿದೆ. ಪಟ್ಟದ ಮಠಗಳೆಲ್ಲ ಇರುವುದು ಊರ ಒಳಗೆ. ಪಟ್ಟದ್ದೇವರು ಜನರ ಕಷ್ಟ ಸುಖಗಳಲ್ಲಿ ಭಾಗಿಯಾಗುತ್ತ ನೈತಿಕ ಮಾರ್ಗದರ್ಶನ ಮಾಡುತ್ತ ಅವರ ಪೌರೋಹಿತ್ಯ ಕಾರ್ಯಗಳನ್ನು (ಹುಟ್ಟು, ಮದುವೆ, ಸಾವು, ಹಬ್ಬ ಇತ್ಯಾದಿ ಸಂದರ್ಭಗಳಲ್ಲಿ) ನೋಡಿಕೊಳ್ಳುತ್ತ ತಮ್ಮ ಅಣ್ಣ ತಮ್ಮಂದಿರ ಜೊತೆಯಲ್ಲಿ ಇರುವ ಗುರುಗಳು. ಅವರು ಸಾಮಾನ್ಯವಾಗಿ ಬ್ರಹ್ಮಚಾರಿಗಳಾಗಿದ್ದರೂ ಗೃಹಸ್ಥರಾಗಿರುವ ಪಟ್ಟದ್ದೇವರೂ ಉಂಟು. ವಿರಕ್ತಮಠಗಳೆಲ್ಲ ಇರುವುದು ಸಾಮಾನ್ಯವಾಗಿ ಊರ ಹೊರಗೆ. ವಿರಕ್ತ ಒಬ್ಬ "ನಿರಾಭಾರಿ"; ಆತನಿಗೆ ಪೌರೋಹಿತ್ಯದಂತಹ ಲೌಕಿಕ ಕರ್ತವ್ಯಗಳಿಲ್ಲ. ಆತನ ಬದುಕು ಮುಖ್ಯವಾಗಿ ಒಳ ಪ್ರಪಂಚದ್ದು; ಅಧ್ಯಯನ, ತಪಸ್ಸು ಆತನ ಮುಖ್ಯ ಕರ್ತವ್ಯಗಳು. ವಿರಕ್ತ ಕಡ್ಡಾಯವಾಗಿ ಬ್ರಹ್ಮಚಾರಿಯಾಗಿರಬೇಕು. ಕಳೆದ ಕೆಲವು ದಶಕಗಳಲ್ಲಿ ಪಟ್ಟದ ಮಠಗಳಿಗೂ ವಿರಕ್ತ ಮಠಗಳಿಗೂ ಸಾಕಷ್ಟು ವಾದ ವಿವಾದಗಳು ನಡೆದಿವೆ. ತಮ್ಮ ತಮ್ಮ ಶ್ರೇಷ್ಠತೆಯನ್ನು ಸ್ಥಾಪಿಸಿಕೊಳ್ಳಲು ಯತ್ನಗಳು ನಡೆದಿವೆ. ಆ ಎಲ್ಲ ವಿವರಗಳನ್ನು ಇಲ್ಲಿ ಕೊಡುವುದು ಸದ್ಯಕ್ಕೆ ಅನಗತ್ಯ

ಊರ ಹೊರಗೆ ಮಲ್ಲಿಕಾರ್ಜುನನ ಚಿಕ್ಕ ಗುಡಿ ಇದ್ದು ಮುಂದೆ ಒಂದು ವೀರಗಲ್ಲು, ಶಾಸನ ಇವೆ. ಹಿಂಭಾಗದಲ್ಲಿ ಅಂತಹುದೇ ಶಿಲೆ ಇದೆ. ಸಮೀಪ ಒಂದು ದೊಡ್ಡ ಆಲದ

ಮರದ ಮೇಲೆ ಯಾರೋ ಎಸೆದ ಶಿವಲಿಂಗಾಕೃತಿಯ, ಗದೆ ಹೋಲುವ ಮರದ ವಸ್ತುವೊಂದು ನಟ್ಟಿದೆ. 'ಭೀಮನ ಗದೆ'ಯೆಂದು ಜನ ಕರೆದು ಅದನ್ನು ಪೂಜಿಸುತ್ತಾರೆ. ಆ ಊರಲ್ಲಿ "ಮಾಸಾಮಿ ಜಾತ್ರೆ"ಯೂ (ಮಹಾಸ್ವಾಮಿಯ ಜಾತ್ರೆ ಅಥವಾ ಮಲ್ಲಿಕಾರ್ಜುನಸ್ವಾಮಿಯ ಜಾತ್ರೆ) ನಡೆಯುತ್ತದೆ.

ಊರ ಹೊರಭಾಗದ ಪ್ರಮುಖ ಆಕರ್ಷಣೆಯೆಂದರೆ ಬೆಟ್ಟದ ಬುಡದ ಸುಂದರ ಕೆರೆ, ಬದಿಯ ಭೀಮೇಶ್ವರ ದೇವಾಲಯ. ಅದು ನಿಶ್ಚಿತವಾಗಿಯೂ ಏಳು ಎಂಟು ನೂರು ವರ್ಷಗಳಷ್ಟು ಹಿಂದಿನದ್ದು. ಅಲ್ಲೇ ಲಕ್ಷ್ಮೀನಾರಾಯಣ, ಅನಂತಶಯನರ ಸುಂದರ ವಿಗ್ರಹಗಳೂ ಭೀಮೇಶ್ವರ ಗುಡಿಗೆ ಹೋಗುವ ದಾರಿಯಲ್ಲಿ ಬಂಡೆಮೇಲೆ ಈಚಿನ ಒಂದು ಶಾಸನವೂ ಇದೆ. ಕೆರೆಯಿಂದ ನೀರು ಹೋಗುವ ಕಾಲುವೆಯನ್ನು 'ರಾಜಗಾಲುವೆ' ಎನ್ನುತ್ತಾರೆ. ಅಲ್ಲಿ ಒಂದು ಕೋಟೆಯಿತ್ತೆಂಬುದಕ್ಕೆ ಕುರುಹುಗಳಿವೆ. ಊರ ಪಕ್ಕದ ಹಾಳಾದ ಬಸವಮಂಟಪದಲ್ಲಿ ಹಿಂದೆ ಶಾಲೆ ನಡೆಯುತ್ತಿತ್ತೆಂದು ಪ್ರತೀತಿ.

ಅಲ್ಲಿನ ಹರಿಜನರು ಎಲ್ಲ ಕಡೆಯಲ್ಲಿನಂತೆ ಕಡುಬಡವರು. ಅಲ್ಲಿ ದುರ್ಗಮ್ಮನ ಗುಡಿ, ಬೇಡರ ಕೇರಿಯಲ್ಲಿ ಚೌಡೇಶ್ವರಿ ಗುಡಿ ಇವೆ.

ನೀಲಗುಂದದ ಶಾಸನಗಳ ಪ್ರಕಾರ (ಸೌತ್ ಇಂಡಿಯನ್ ಇನ್‌ಸ್‌ಕ್ರಿಪ್ಷನ್ಸ್, 9:1. ಸಂಖ್ಯೆ 141, 176, 181, 293, 340) ಆ "ನಿರ್ಗುಂದ" ಹೆಸರಿನ ಊರು ಕೋಗುಳಿ ನಾಡಿನ ಒಂದು "ಮಹಾಗ್ರಾಮ". ಆ ಊರಲ್ಲಿ ಹನ್ನೆರಡನೆಯ ಶತಮಾನದಲ್ಲಿ "ವೀರ ಪಾಂಡ್ಯದೇವರ ಮಠ" ಇತ್ತು. ಆ ಊರಲ್ಲಿ ಹಲವು ದೇವಾಲಯಗಳಲ್ಲದೆ ಮಹಾಜನ ಬ್ರಾಹ್ಮಣರೂ ಬಣಜಿಗರೂ ತೋಟಿಗರೂ "ಕೊನೆಕಾರ"ರೂ (ತೆಂಗಿನ ಅಡಕೆಯ ಗೊನೆ ಇಳಿಸುವವರು) "ಉಳಿ"ಯವರೂ (ಅಡಕೆ ಮರ ಹತ್ತಿ ವೀಳ್ಯದೆಲೆ ಕೊಯ್ಯುವವರು) ಇದ್ದರು. ಅದು ಮುಖ್ಯವಾಗಿ ಒಂದು ಅಗ್ರಹಾರವೆನ್ನಿಸಿತ್ತು.

ಪಟ್ಟದ್ದೇವರ ಮಠದಲ್ಲಿ ಶಿವಯ್ಯನವರ ವಶದಲ್ಲಿ ಎರಡು ಹಸ್ತಪ್ರತಿಗಳಿವೆ. 1. ಭೈರವೇಶ್ವರ ಕಾವ್ಯ ; 2. ಬಸವಪುರಾಣದ ಎರಡು ಪ್ರತಿಗಳು : ಒಂದು ಶಾಲಿವಾಹನ ಶಕ 1690 ರದ್ದು (ಕ್ರಿ.ಶ. 1768) - ಇದು ಓಲೆಗರಿ ಮೇಲಿದೆ ; ಕಾಗದ ಪ್ರತಿ ಶಾಲಿವಾಹನ ಶಕ 1792 ರದ್ದು (ಕ್ರಿ.ಶ. 1870). ಅವುಗಳ ಬಗ್ಗೆ ಅಲ್ಲಿ ಯಾರಿಗೂ ಆಸಕ್ತಿ ಉಳಿದಿಲ್ಲ. ರಾತ್ರಿ ಊಟಕ್ಕೆ ಮುನ್ನ ಕಟ್ಟೆ ತುಂಬ ಸೇರಿದ್ದ ಮೂವತ್ತು ಮಕ್ಕಳಿಗೆ ಕತೆ ಹೇಳಿದೆ. ಮಕ್ಕಳ ಜೊತೆ ಕೆಲವು ದೊಡ್ಡವರೂ ಕುಳಿತಿದ್ದರು. ಮಧ್ಯಾಹ್ನದ ರೀತಿಯ ಊಟವೇ ರಾತ್ರಿಯೂ ದೊರಕಿತು. ಅಂದು ರಾತ್ರಿ ಸ್ವಲ್ಪ ಚಳಿ ಗಾಳಿ ಇದ್ದು ರಾತ್ರಿ ಕಟ್ಟೆ ಚಾಪೆ ಮೇಲೆ ನಡುಗುತ್ತ ಮಲಗಿದ್ದೆ. ಸ್ವಲ್ಪವೂ ನಿದ್ದೆ ಬರಲಿಲ್ಲ. ನೀಲಗುಂದವೂ ಐತಿಹಾಸಿಕ ಸಂಶೋಧಕರ ಸೂಕ್ಷ್ಮಾಧ್ಯಯನಕ್ಕೆ ಅರ್ಹವಾದ ಜಾಗ.

## ಹರಪನಹಳ್ಳಿ

ಬೆಳಿಗ್ಗೆ (9.6.85) ಎದ್ದು ಹೊರಟಾಗ ಇನ್ನೂ ಮಲಗಿದ್ದ ರಸ್ತೆ ಬದಿಯ ಚಹಾ ಅಂಗಡಿಯಾತನನ್ನು ಏಳಿಸಿ ಒಲೆ ಹಚ್ಚಿ ಟೀ ಕೊಡುವಂತೆ ಪುಸಲಾಯಿಸಿದೆ. ನೀಲಗುಂದಕ್ಕೆ ಹರಪನಹಳ್ಳಿ ಸುಮಾರು ಹತ್ತು ಮೈಲಿ. ಮಳೆ ಬಂದಾಗ ಮಾತ್ರ ವರ್ಷದ ದಾಹವನ್ನು ಇಂಗಿಸಿಕೊಂಡು ಬದುಕುವ ಒಣ ಹೊಲಗಳು. ರಸ್ತೆ ಅಕ್ಕ ಪಕ್ಕ ಮರಗಳಿಲ್ಲ. ಉದ್ದಕ್ಕೂ ಗುಡ್ಡಗಳು, ಸಣ್ಣ ಕಾಡು, ಸುಂದರ ದೃಶ್ಯಗಳಿದ್ದರೂ ಮೈ ಕೈ ನೋವು ಅತ್ತ ಕಣ್ಣು ಹೋಗಲು, ಕಣ್ಣು ಹೋದರೂ ಮನಸ್ಸು ಹೋಗಲು ಅವಕಾಶ ನೀಡಲಿಲ್ಲ. ಸಂಕಲ್ಪವೇನೋ ದೃಢ; ಮನಸ್ಸಿನ ತುಂಬ ದುಗುಡ. ಹರಪನಹಳ್ಳಿ ಕಡೆ ಹೆಜ್ಜೆ ಇಟ್ಟಂತೆ ಅನೇಕ ಕಹಿ ನೆನಪುಗಳು ಎದುರಾಗುತ್ತವೆ. ಮನಸ್ಸಿನ ಖಿನ್ನತೆ ದುಗುಡಗಳನ್ನು ದೂರಮಾಡುವ ಏಕೈಕ ಸಾಧನವೆಂದರೆ ಪಂಪಾ ವಿರೂಪಾಕ್ಷನ ನಾಮಸ್ಮರಣೆಯೊಂದೇ ನನಗೆ. ದೈವವನ್ನು ಕುರಿತು ಮನಸಾರೆ ಸ್ತೋತ್ರ ಮಾಡಿದೆ, ಹಾಡಿದೆ. "ಕರುಣಾಳು ಬಾ ಬೆಳಕೆ...." : ಮುಸುಕಿದ ಮಬ್ಬಿನಲ್ಲಿ ಅವನೇ ಕೈ ಹಿಡಿದು ನಡೆಸುವ ಶಕ್ತಿ. ಇದ್ದುದರಲ್ಲಿ ಉತ್ಸಾಹವನ್ನು ತುಂಬಿಕೊಂಡು ನಡೆದೆ. ಹರಪನಹಳ್ಳಿ ಸಮೀಪದ ದಿಣ್ಣೆ ಹತ್ತಿ ಇಳಿಯುತ್ತಿದ್ದಂತೆ ಎದುರಿಗೆ ಒಂದು ಮೋಪೆಡ್ ಬಂದು ಆಘಾಗಿ ನಿಂತು, ಸ್ಟಾರ್ಟಾಗಿ ನನ್ನ ಹಿಂದೆ ಹೋಯಿತು. ಎದುರಿಗೆ ಕೆಟ್ಟು ನಿಂತಿದ್ದ ಲಾರಿಯೊಂದು ಸ್ಟಾರ್ಟಾಗಿ ದಿಬ್ಬ ಹತ್ತುತ್ತ ನನ್ನ ಪಕ್ಕದಲ್ಲೇ ಹೋಯಿತು. ತಿರುಗಿ ನೋಡುತ್ತಿದ್ದಂತೆ ಅಲ್ಲೇ ನಿಂತು ಬಿಟ್ಟಿತು. ರಸ್ತೆ ಬಲಬದಿಯಲ್ಲಿ ಹರಡಿದ್ದ ಲಾರಿ ಎಣ್ಣೆಯಲ್ಲಿ ಕಾಲಿಟ್ಟು ಜಾರಿ ಬಿದ್ದೆ. ನನ್ನ ಪೈಜಾಮಕ್ಕೆ ಎಣ್ಣೆ ಕರೆ ಹತ್ತಿತು. ಈ ಹಿಂದೆ ಸ್ಟಾರ್ಟಾಗಿ ಹೋಗಿದ್ದ ಮೋಪೆಡ್ ಮತ್ತೆ ನನ್ನ ಹಿಂದಿನಿಂದ ಬಂದು ಮತ್ತೆ ನನ್ನ ಹತ್ತಿರ ನಿಂತು ಸ್ಟಾರ್ಟಾಗಿ ನನ್ನ ಮುಂದೆ ಹೋಯಿತು. ಈ ವಿಚಿತ್ರ ಘಟನಾವಳಿಗಳಿಗೆ ಅರ್ಥ ಕಲ್ಪಿಸುವಂತಹ ಮನಸ್ಥಿತಿಯಲ್ಲಂತೂ ನಾನು ಇರಲಿಲ್ಲ. ಇವು ಅಪಶಕುನಗಳೇ ? ಅಥವಾ ಭರವಸೆ ನೀಡುವ ಶಕ್ತಿವರ್ಧಕಗಳೇ ? ಭಗವಂತನ ಮೇಲೆ ಸಂಪೂರ್ಣ ಶ್ರದ್ಧೆ ಇಟ್ಟಿದ್ದ ನಾನು ಆತಂಕಪಡುವ ಪ್ರಮೇಯ ಇರಲಿಲ್ಲ.

ದಾರಿಯಲ್ಲಿ ಕೆರೆಗೆ ಮುನ್ನ ಏಕಶಿಲೆಯಲ್ಲಿ ಮಾಡಿದ ದೊಡ್ಡ ಏಳು ಹೆಡೆ ಸರ್ಪದ ಗುಡಿ ಇತ್ತು. ಸರ್ಪದ ದೇಹ ಸುರುಳಿ ಸುರುಳಿಯಾಗಿ ಮಡಿಚಿಕೊಂಡಿತ್ತು. ಸಮೀಪದಲ್ಲೇ ಬಸವಣ್ಣನ ಗುಡಿ. ಇವನ್ನು ದಾಟಿ ಬರುತ್ತಿದ್ದಂತೆ ಭಾರಿ ಕಲ್ಲು ಕಟ್ಟಡದ ಏರಿಯ ದೊಡ್ಡಕೆರೆ; ಅಲ್ಲೇ ಕೋಟೆ. ಕೆರೆಯ ಏರಿಯ ಮೇಲೆ ಹಾದು ಹರಪನಹಳ್ಳಿ ನಗರ ಪ್ರವೇಶ ದ್ವಾರದಲ್ಲಿನ ಹೋಟೆಲೊಂದರಲ್ಲಿ ಕಾಫಿ ಕುಡಿದು ನನ್ನ ಬಂಧು ಅಸಿಸ್ಟೆಂಟ್ ಎಕ್ಸಿಕ್ಯುಟಿವ್ ಇಂಜಿನಿಯರ್ ರುದ್ರಸ್ವಾಮಿಯ ಸರ್ಕಾರಿ ಮನೆಗೆ ಹೋಗಿ ಉಳಿದುಕೊಂಡೆ. ನನ್ನ ಮದುವೆ ಆದ ಸಂದರ್ಭದಲ್ಲಿಯೇ ಆತನ ಮದುವೆ ದಾವಣಗೆರೆಯಲ್ಲಿ ನಿಶ್ಚಯವಾದದ್ದು. ಆತನ ಪತ್ನಿ ಶಶಿ ಮತ್ತು ಮುದ್ದಾದ ಮಕ್ಕಳು ನನ್ನನ್ನು ವಿಶ್ವಾಸದಿಂದ ಉಪಚರಿಸಿದರು. ಅವರ ಮನೆಯಲ್ಲಿ ಸ್ನಾನ, ಊಟ, ವಿಶ್ರಾಂತಿಗಳ ಬಳಿಕ ಎಲ್ಲೂ ಹೋಗದೆ ಹಿಂದಿನ ಒಂದೆರಡು ದಿನಗಳ ದಿನಚರಿಯನ್ನು ಬರೆದು ಮುಗಿಸಿ, ಸ್ವಲ್ಪ ಹೊತ್ತು ದೂರದರ್ಶನ ನೋಡಿದೆ.

ಸಂಜೆ ನನ್ನ ಎರಡನೆಯ ತಂಗಿಯ ಮಗ ಚೈತನ್ಯ ಅವನ ಗೆಳೆಯ ಕುಲಕರ್ಣಿ ಇಬ್ಬರೂ ಬಂದರು. ನನ್ನ ತಂಗಿಯ ಮನೆ ಸರ್ಕಾರಿ ಮನೆಯಿಂದ ಐದು ನಿಮಿಷ ಕಾಲ್ನಡಗೆ ದೂರವಿದ್ದರೂ ಹೋಗಲಿಲ್ಲ. ಕೆಲವು ಬೆಳವಣಿಗೆಗಳಿಂದಾಗಿ ಅವಳ ಬದುಕು ಅಸ್ತವ್ಯಸ್ತಗೊಂಡು ಅವಳು ಬೆಂಗಳೂರಿನ ಅನಾಥಾಶ್ರಮವೊಂದರಲ್ಲಿ ಕೆಲಸ ಮಾಡಿಕೊಂಡಿದ್ದಳು. ಆ ಬಗ್ಗೆ ನಾವು ಅನುಭವಿಸಿದ ಯಾತನೆ ಅಪಾರ. ನನ್ನ ತಾಯಿ ನನ್ನ ಜೊತೆ ಬೆಂಗಳೂರಲ್ಲಿದ್ದವರು, ಅದೇ ಕೊರಗನ್ನು ಹಚ್ಚಿಕೊಂಡು ತಾತ್ಕಾಲಿಕವಾಗಿ ನನ್ನ ಹಿರಿಯ ತಂಗಿಯ ಜೊತೆ ದಾವಣಗೆರೆಯಲ್ಲಿ ಇದ್ದರು. ಆ ರಾತ್ರಿ ತೀರ ಆಯಾಸವಾಗಿದ್ದುದರಿಂದಲೋ ಏನೋ ಸುಖನಿದ್ರೆ ಬಂದಿತು.

## ನಂದಿಬೇವೂರು

ಬೆಳಿಗ್ಗೆ (10.6.85) ಚೈತನ್ಯ ಬಂದು ನನ್ನ ಕೈ ಚೀಲವನ್ನು ಕೊಂಡೊಯ್ದ. ಹಂಪಿಗೆ ನೇರ ಅಭಿಮುಖವಾಗಿ ಹೊರಟದ್ದೆ. ಮುಂದೆ ಅತ್ಯಂತ ಮನೋಹರ ದೃಶ್ಯಗಳು ಕಂಡವು. ಪಂಪಾ ವಿರೂಪಾಕ್ಷ, ಭುವನೇಶ್ವರಿಯರನ್ನು ಭಾವುಕನಾಗಿ ಧ್ಯಾನಿಸಿದೆ. “ದೈವವೇ ದೈವವೇ....”, “ಕನ್ನಡವೆ ನನ್ನ ದೈವ, ಕನ್ನಡವೆ ನನ್ನ ಬದುಕು” ಇತ್ಯಾದಿ ಉದ್ಗಾರಗಳು ಗಟ್ಟಿಯಾಗಿ ನನ್ನ ಬಾಯಿಂದ ಬಂದುವು. ಆ ಮಾತುಗಳು ನನ್ನಲ್ಲಿ ತೀವ್ರ ಆವೇಶವನ್ನು ಸೃಷ್ಟಿಸಿದುವು. ಮನಸ್ಸು ಪ್ರಫುಲ್ಲವಾಯಿತು. ಹಲವು ಕನ್ನಡ ಕವಿತೆಗಳ ಭಾಗಗಳನ್ನು ಗಟ್ಟಿಯಾಗಿ ಹೇಳಿಕೊಂಡೆ, ಹಾಡಿಕೊಂಡೆ. “ತುಳೀ ತುಳೀ, ಹತ್ತಿ ತುಳಿ ಒತ್ತಿ ತುಳಿ, ಅಹಂಕಾರವಳಿಯಲಿ. ನಾನು ಎಂಬುದೆಲ್ಲ ಅಳಿದು ನೀನು ಮಾತ್ರ ಉಳಿಯಲಿ” ಎಂಬ ಮಾತುಗಳು ಕೇವಲ ಪದ್ಯವಾಗಿರದೆ ಅವು ನನ್ನ ಬದುಕಿನ ಭಾಗವಾದಾಗಲೇ, ನನ್ನ ಬದುಕಿನ ಭಾಗವಾಗುವಂತೆ ಬದುಕಿದಾಗಲೇ ಸಾರ್ಥಕ. ಸುತ್ತಲೂ ಬೆಟ್ಟಗಳು, ರಮಣೀಯ ದೃಶ್ಯ. ಏಕೋ, ಕನ್ನಡ ಗರುಡ ಪಡೆಯೊಂದನ್ನು ರೂಪಿಸುವ ಒಂದು ಹಗಲುಗನಸನ್ನು ಕಾಣುತ್ತಿದ್ದಂತೆ ವಾಸ್ತವವಾಗಿ ಒಂದು ಗರುಡ ಪಕ್ಷಿ ಕಾಣಿಸಿತು. ಅದರಲ್ಲಿ ಯಾವುದೋ ಅರ್ಥ ಕಂಡು ಕಣ್ಣಲ್ಲಿ ನೀರು ಚಿಮ್ಮಿತು. ಗರುಡನಂತೆ ಎಲ್ಲ ಬಗೆಯ ತ್ಯಾಗಕ್ಕೆ ಸಿದ್ಧನಾಗು ಎಂಬ ಅಂತರ್ಬೋಧೆಯನ್ನು ಮಾಡಿಕೊಂಡೆ. ಹೊಯ್ಸಳ ಕಾಲದ ‘ಗರುಡ’ ತನ್ನ ಯಜಮಾನನಿಗೆ ಸಂಪೂರ್ಣವಾಗಿ ಒಪ್ಪಿಸಿಕೊಂಡ ಸೇವಕ. ಯಜಮಾನ ಬದುಕಿರುವಾಗ ಅವನ ಅನ್ನವನ್ನುಂಡು ಬೆಳೆದವನು. ಯಜಮಾನ ಮಡಿದರೆ ಅವನ ಜೊತೆ ತನ್ನನ್ನು ಸಮರ್ಪಿಸಿಕೊಳ್ಳುತ್ತಿದ್ದ. ಅಂತಹ ಹಲವು ಗರುಡರ (ವೇಳೆವಾಳಿಗಳ) ಉಲ್ಲೇಖಗಳು, ಅವರ ಶಿಲ್ಪಗಳು ಹಿಂದಿನ ಕರ್ನಾಟಕದ ಹಲವು ಕಲ್ಲುಗಳ ಮೇಲೆ ಟಂಕೋತ್ಕೀರ್ಣಗೊಂಡಿವೆ. ನನ್ನ ಕಣ್ಣ ಮುಂದೆ ಆ ಹಿಂದಿನ ವಿಸ್ತಾರವಾದ ಸ್ವಾಭಿಮಾನಿ ಕರ್ನಾಟಕದ ಪಕ್ಕ ಇಂದಿನ ಕುಗ್ಗಿದ ನಿರಭಿಮಾನಿ ಕರ್ನಾಟಕದ ಚಿತ್ರವೂ ಕಾಣಿಸಿ ಕಣ್ಣು ತೇವಗೊಂಡುವು. ಜನರ ಕುಗ್ಗಿದ ಸ್ವಾಭಿಮಾನವನ್ನು ಬಡ್ಡಿ ಸಮೇತ ನನ್ನಲ್ಲಿ ತುಂಬಿಸಿಕೊಂಡು ಕಾರ್ಯಪ್ರವೃತ್ತವಾಗುವುದೊಂದೇ ನನ್ನ ಏಕೈಕ ಗುರಿಯಾಗಿತ್ತು.

ಮುಖ್ಯ ಬೆಳೆಯೇ ಹೂವು ಆಗಿರುವ ಸಿಂಗಾರತೋಟ ಎಂಬ ಸುಂದರ ಹೆಸರಿನ ಹಳ್ಳಿ ದಾರಿಯಲ್ಲಿ ಎದುರಾಯಿತು. ಒಬ್ಬ ಚೆಲುವೆ ಹುಡುಗಿ ದಾರಿಯಲ್ಲಿನ ತನ್ನ ತೋಟಕ್ಕೆ ಹೂ ಬಿಡಿಸಲು ಹೊರಟಳು. ಅವಳು ಉಪ್ಪಾರರ ಜಾತಿಯವಳು ಮತ್ತು ಒಳ್ಳೆಯ ಮಾತುಗಾತಿ. ಅವಳ ಮನೆದೇವರು ಎಲ್ಲಮ್ಮ ಎಂದು ತಿಳಿದು, "ದೇವರೇ, ಈ ಹುಡುಗಿ ಮುಂದೆ ಒಬ್ಬ ಗೃಹಿಣಿಯಾಗಲಿ" ಎಂದು ಮನಸಾರೆ ಪ್ರಾರ್ಥಿಸಿದೆ. ಉದ್ದಕ್ಕೂ ಬಹು ಸುಂದರ ದೃಶ್ಯಗಳು. ಎದುರಿಗೆ ನಸುಕೆಂಬಣ್ಣದ ಜಾಜಿಕಲ್ ಗುಡ್ಡದ ಶ್ರೇಣಿ ಎದುರಾಯಿತು. ಅಲ್ಲೇ ಒಂದು ಕಡೆ, ಹೊಲದ ಅಂಚಿನ ಬಂಡೆ ಮೇಲೆ ಚಪಾತಿ ಉಪ್ಪಿನಕಾಯಿ ಜೊತೆ ಇಟ್ಟಿದ್ದ ಹಸಿಯ ಮೆಣಸಿನಕಾಯಿ ಎಲ್ಲವನ್ನೂ ಸವಿದು ಚಪ್ಪರಿಸಿದೆ. ಮುಂದಿನ ಸುಂದರ ದೃಶ್ಯಗಳನ್ನು ನೋಡುತ್ತ ತೆರಳುತ್ತಿರುವಾಗ, ಇಷ್ಟೊಂದು ಶ್ರೇಷ್ಠ ದೀರ್ಘ ಪರಂಪರೆ ಇರುವ ಕರ್ನಾಟಕಕ್ಕೆ, ಕನ್ನಡಕ್ಕೆ ಒಂದು ಪ್ರತ್ಯೇಕ ವಿಶ್ವವಿದ್ಯಾಲಯವೊಂದು ಅಗತ್ಯವಲ್ಲವೇ ಎಂಬ ಆಲೋಚನೆ ಹೊಳೆಯಿತು (ಇದನ್ನು ಈಗಾಗಲೇ ಅನ್ಯತ್ರ ದಾಖಲಿಸಿದ್ದೇನೆ). ತಮಿಳು ವಿಶ್ವವಿದ್ಯಾಲಯವು ತಮಿಳುನಾಡಿನ ಸಾಂಸ್ಕೃತಿಕ ಕೇಂದ್ರವಾದ ತಂಜಾವೂರಿನಲ್ಲಿ ಸ್ಥಾಪಿತವಾಗಿ, ಅದರ ಮೊದಲ ಕುಲಪತಿಗಳೂ ನನ್ನ ಸ್ನೇಹಿತರೂ ಆದ ಡಾ. ವಿ.ಐ. ಸುಬ್ರಹ್ಮಣ್ಯಂ ಅವರ ಆಹ್ವಾನದ ಮೇಲೆ ಎರಡು ಬಾರಿ ಅಲ್ಲಿಗೆ ಹೋಗಿ ಅದರ ಯೋಜನೆ ಕಾರ್ಯವಿಧಾನಗಳನ್ನು ಮೆಚ್ಚಿಕೊಂಡು ಬಂದಿದ್ದೆ. ಕನ್ನಡ ವಿಶ್ವವಿದ್ಯಾಲಯದ ಆಲೋಚನೆ ನನಗೆ ಬರುತ್ತಿದ್ದಂತೆ, ಅದು ಆಗುವುದಾದರೆ ಹಂಪಿಯಲ್ಲೇ ಆಗಬೇಕು ಎಂದು ಎನ್ನಿಸಿತು. ಹಂಪಿ ಒಂದು ರೀತಿಯಲ್ಲಿ ಕರ್ನಾಟಕದ ಸಾಂಸ್ಕೃತಿಕ ರಾಜಧಾನಿ, ಸ್ಫೂರ್ತಿ ಕೇಂದ್ರ ; ಅದು ಭೌಗೋಳಿಕವಾಗಿಯೂ ಕರ್ನಾಟಕದ ಮಧ್ಯದಲ್ಲಿದೆ. ತುಂಗಭದ್ರಾ ಜಲಾಶಯದಿಂದಾಗಿ ಇಡೀ ಪ್ರದೇಶ ಹಸಿರಾಗಿ ನಳನಳಿಸುತ್ತಿದೆ. ಸಮೀಪದಲ್ಲೇ ದೊರಕುವ ಉತ್ತಮ ಕಬ್ಬಿಣ ಅದುರಿನಿಂದಾಗಿ ಬೃಹತ್ ಕಬ್ಬಿಣ ಉಕ್ಕಿನ ಕಾರ್ಖಾನೆ, ಅದರ ಸಹಾಯಕ ಪುಟ್ಟ ಉದ್ಯಮಗಳು ತಲೆಯೆತ್ತಲಿರುವ ಸಂಗತಿ ನೆನಪಾಗಿ ಇಡೀ ಪ್ರದೇಶ ಸಾಂಸ್ಕೃತಿಕ ಸಂಪತ್ತನ್ನು ಹೊಂದಿರುವಂತೆ ಆರ್ಥಿಕ ಸಂಪತ್ತಿನ ಪ್ರದೇಶವೂ ಆಗಲಿರುವ ಸಂಗತಿ ನೆನಪಿಗೆ ಬಂದು ಆ ಆಲೋಚನೆ ತೀವ್ರ ಹರ್ಷವನ್ನುಂಟುಮಾಡಿತು.

ಆ ಆಲೋಚನೆಯನ್ನೇ ಮನಸ್ಸಿನ ನಾಲಗೆ ಮೇಲೆ ಚಪ್ಪರಿಸುತ್ತ ಅಕ್ಕಪಕ್ಕದ ತೋಟಗಳನ್ನು ನೋಡುತ್ತ ಹೆಚ್ಚಾಗಿ ಬೇಡರೇ ಇದ್ದ ಕಣಿವೇ ಹಳ್ಳಿಗೆ ಹೋದೆ. ಹೆಸರಿಗೆ ತಕ್ಕಂತೆ ಅದು ಇದ್ದ ಜಾಗ ಒಂದು ಇಕ್ಕಟ್ಟಾದ ಕಣಿವೆಯೇ ಆಗಿತ್ತು. ಬಹು ಆಯಕಟ್ಟಿನ ಸ್ಥಳದಲ್ಲಿದ್ದ ಅದು ಐತಿಹಾಸಿಕ ಮಹತ್ವದ ಜಾಗ ಆಗಿರಬೇಕು ಎಂಬ ನನ್ನ ನಿರೀಕ್ಷೆ ವಿಫಲವಾಗಲಿಲ್ಲ. ಅಲ್ಲೇ ಚಹದಂಗಡಿ ಮುಂದೆ ಇದ್ದ ಒಬ್ಬ ವೃದ್ಧರು ಅಲ್ಲಿನ "ದೊಡ್ಡ ಬಾವಿ" ತೋರಿಸಿದರು. ಅದು ಹಿಂದೆ ದೊರೆಗಳು ಪಾಳೆಗಾರರು ತಮ್ಮ ರಾಜ್ಯಗಳ ರಕ್ಷಣೆಗಾಗಿ ಬಳಸಿಕೊಂಡಿದ್ದ ಆಯಕಟ್ಟಿನ ಜಾಗವೆಂಬಲ್ಲಿ ಅನುಮಾನ ಉಳಿಯಲಿಲ್ಲ. ಅಲ್ಲಿದ್ದ ಒಂದು ಮಾವಿನ ತೋಟವನ್ನು ಆ ವರ್ಷ ರೂ 3000/- ಕ್ಕೆ ಒಬ್ಬರು ಕೇಣಿ ಹಿಡಿದವರು ನಷ್ಟವನ್ನು ತಂದಿದೆಯೆಂದು

ಕೊರಗುತ್ತಲೇ ನನಗೆ ತಿನ್ನಲು ಮಾವಿನ ಹಣ್ಣು ಕೊಟ್ಟರು. (ಈ ಪ್ರದೇಶದ ಪ್ರಾಚೀನ ಕುರುಹುಗಳನ್ನು ಟಿಪ್ಪಣಿ ಮಾಡಿಕೊಂಡದ್ದು ನನಗೆ ಲಭ್ಯವಾಗುತ್ತಿಲ್ಲ).

ನಂದಿಬೇವೂರು ಸಮೀಪಿಸುತ್ತಿದ್ದಂತೆ ಎಡಕ್ಕೆ ಹನುಮಂತನ ಗುಡಿ, ಅಲ್ಲೇ ಇಬ್ಬರು ಹೆಂಗಸರ ಶಿಲ್ಪವಿರುವ ಮಾಸ್ತಿ ಕಲ್ಲು ಇದ್ದುವು. ಬೆಳಿಗ್ಗೆ ಹತ್ತರ ಹೊತ್ತಿಗೆ ದೊಡ್ಡ ಮಳೆ ಬೀಳಲು ಆರಂಭಿಸಿದಾಗ ಒಂದು ದೊಡ್ಡ ಬೇವಿನ ಮರದ ಬೊಡ್ಡೆಯನ್ನು ನಾನು ಆಶ್ರಯಿಸಿದೆ. ನಂದಿಬೇವೂರಲ್ಲಿ ನನಗಾಗಿ ಡಾ. ಪರಮೇಶ್ವರಪ್ಪ ಕಾಯುತ್ತಿದ್ದರು. ಅಂತೆಯೇ ಅವರ ಜೊತೆ ಛೇರ್‌ಮನ್ ನಾಗಪ್ಪ, ಯುವಕರಾದ ಶ್ರೀಧರ್, ಜ್ಯೋತಿಗೌಡ ಎಲ್ಲರೂ ಇದ್ದು ಬಹು ಹಾರ್ದಿಕವಾದ ಸ್ವಾಗತವನ್ನು ನೀಡಿದರು. ನನ್ನನ್ನು ಊರ ಮುಂಭಾಗದ ಪಂಚಾಯ್ತಿ ಕಚೇರಿಯಲ್ಲಿ ಇಳಿಸಿದರು. ಮುಖ್ಯೋಪಾಧ್ಯಾಯರಾದ ಸಿದ್ಧರಾಮಯ್ಯನವರ ಮನೆಯಲ್ಲಿ ಊಟ ಮಾಡಿದೆ. ಆ ಪದವೀಧರ ದಂಪತಿಗಳು ಅಚ್ಚುಕಟ್ಟಾದ ಚಿಕ್ಕ ಮನೆಯೊಂದರಲ್ಲಿ ಸಂಸಾರ ಮಾಡಿಕೊಂಡಿದ್ದರು. ಮಧ್ಯಾಹ್ನ ವಿಶ್ರಾಂತಿಯ ಬಳಿಕ ಊರೊಳಗೆ ಹೋಗಿ ಅಲ್ಲಿನ ದೇವಾಲಯ ಇತ್ಯಾದಿ ಪ್ರಾಚೀನ ಸ್ಮಾರಕಗಳನ್ನು ಪರಿಶೀಲಿಸಿದೆ.

ನಂದಿಬೇವೂರು ಎಂದು ಹೆಸರು ಈ ಊರಿಗೆ ಬರಲು ಕಾರಣ, ಅಲ್ಲಿಯ ಸುಂದರ ನಂದಿ ಇರುವ ಆಕರ್ಷಕ ದೇವಾಲಯ. ಅದರ ಪಕ್ಕದಲ್ಲೇ ಇರುವ ಈಶ್ವರ ದೇವಾಲಯದಲ್ಲಿ ಚಾಲುಕ್ಯರ ಕಾಲದ ಬಾಗಿಲುವಾಡ, ಅದರ ಮೇಲೆ ದೇವತೆಗಳ ಶಿಲ್ಪಗಳು ಇವೆ. ಅಲ್ಲಿನ ಶಾಸನವನ್ನು ಸುಣ್ಣದಿಂದ ಬಳಿದು ಮುಚ್ಚಲಾಗಿದೆ. ಕಲ್ಲಲ್ಲಿ ಕಟ್ಟಲಾಗಿರುವ ಈಶ್ವರ ದೇವಾಲಯವು ವಿಜಯನಗರದ ಮಲ್ಲಿಕಾರ್ಜುನ ಚಕ್ರವರ್ತಿಯಿಂದ ಶಾಲಿವಾಹನಶಕ 1480ರಲ್ಲಿ (ಕ್ರಿ.ಶ. 1558) ನಿರ್ಮಾಣವಾಯಿತೆಂದು ಅಲ್ಲಿನ ಒಂದು ಶಾಸನ ಹೇಳುತ್ತದೆ. ಶಾಸನದಲ್ಲಿ ಅದನ್ನು "ನಂದಿ ಬೇವೂರ ಅಗ್ರಹಾರ" ಎಂದು ಕರೆದಿರುವುದರಿಂದ ಅದೊಂದು ಬ್ರಾಹ್ಮಣ ದತ್ತಿ ಗ್ರಾಮವಾಗಿತ್ತೆಂಬಲ್ಲಿ ಅನುಮಾನವಿಲ್ಲ. ಈಶ್ವರ ದೇವಾಲಯಕ್ಕೆ ಗರ್ಭಗುಡಿ, ಶುಕನಾಸಿ, ಮುಖಮಂಟಪಗಳು ಇವೆ. ಹಿಂದಿನ ಕಣದಲ್ಲಿ ತಲೆ ಭಿನ್ನವಾಗಿರುವ ಲಕ್ಷ್ಮೀನಾರಾಯಣ ಮೂರ್ತಿ ಇದೆ. ಒಂದು ಸಂಪೂರ್ಣ ಇಸ್ಲಾಮಿಕ್ ಶೈಲಿಯ ಕಟ್ಟಡವೊಂದು ಮೇಲೆ ಗುಮ್ಮಟವನ್ನು ಹೊತ್ತಿದೆ. ಹಿಂದೊಮ್ಮೆ ಅದು ಮಸೀದಿ ಆಗಿದ್ದಿರಬಹುದು. ಊರ ಮುಂದೆ ಎರಡು ಸಾಮಾನ್ಯ ಮಸೀದಿ ಕಟ್ಟಡಗಳಿವೆ. ಆಂಜನೇಯ ದೇವಾಲಯದ ಮುಂದೆ ಹಾಳಾದ ಒಂದು ಜೈನ ಶಾಸನವಿದ್ದು ಅದರ ಮೇಲೆ ತೀರ್ಥಂಕರ, ಹಸು, ಕರು, ಚಿತ್ರಗಳಿವೆ. ಅದರ ಹಿಂದೆ ಒಂದು ಸುಂದರ ಮಾಸ್ತಿಕಲ್ಲು, ಒಂದು ಗಜಲಕ್ಷ್ಮಿ ವಿಗ್ರಹ ಇವೆ. ಗರ್ಭಿಣಿಯರಿಗೆ ಹೆರಿಗೆ ಕಷ್ಟವಾದರೆ ಗಜಲಕ್ಷ್ಮಿ ಕಲ್ಲನ್ನು ತಿರುವಿ ಹಾಕುತ್ತಾರೆ. ಸುಖ ಹೆರಿಗೆಯಾದರೆ ಮೇಲ್ಮುಖಮಾಡಿ ಎಣ್ಣೆ ಬಿಡುತ್ತಾರೆ. ಹೊಸ ಆಂಜನೇಯ ಗುಡಿ ಪಕ್ಕದಲ್ಲಿ ಎರಡು ಮಾಸ್ತಿ ಕಲ್ಲುಗಳಿವೆ.

ನಂದಿ ಬೇವೂರನ್ನು ಕ್ರಿ.ಶ. 1054ರ ಶಾಸನದಲ್ಲಿ "ಬೇಹೂರ್" ಎಂದಿದೆ. ಅಲ್ಲಿನ ಬ್ರಾಹ್ಮಣರು ಆ ಊರಿನ ಜೈನ ಬಸದಿಗೆ ದತ್ತಿ ಕೊಟ್ಟ ವಿಷಯ ಅಲ್ಲಿದೆ. (ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ್. 9:1. ಸಂಖ್ಯೆ 115).

ಸಂಜೆ ಶಾಲಾಮಕ್ಕಳಿಗೆ ಕತೆ ಹೇಳಿದೆ. ರಾತ್ರಿ ಊರೊಳಗಿದ್ದ ಬ್ರಾಹ್ಮಣರೊಬ್ಬರ (ಶಾನುಭೋಗರು?) ಮನೆಯಲ್ಲಿ ಊಟ ಆಯ್ತು. ಅಲ್ಲಿ ಸಾಕಷ್ಟು ಹರಟೆ ಹೊಡೆದು, ಸಂತೋಷದಿಂದ ಹಿಂದಿರುಗಿ ಊರ ಹೊರಗಿದ್ದ ಪಂಚಾಯ್ತಿ ಕಚೇರಿಯಲ್ಲಿ ಮಲಗಿದೆ. ಬಹಳ ಸೆಖೆ ಇದ್ದುದರಿಂದ ಎಲ್ಲ ಕಿಟಕಿಗಳನ್ನು ತೆಗೆದು, ಒಳಗೆ ಕಿಟಕಿ ಹತ್ತಿರವೇ ಮಲಗಿದ್ದೆ. ಬಹಳ ತಡವಾಗಿ ನಿದ್ದೆ ಬಂದಿತು. ಬೆಳಗಿನ ಜಾವ ಎರಡೋ ಮೂರೋ ಗಂಟೆ ಇರಬೇಕು. ಯಾರೋ ಕೂಗಿ ಬಾಗಿಲು ತಟ್ಟಿದಂತಾಯಿತು. ಕಿಟಕಿಯಿಂದ ನೋಡಿದರೆ, ಮೂವರು ನಿಂತು ಬಾಗಿಲು ತೆಗೆಯಲು ಗಟ್ಟಿಯಾಗಿ ಕೂಗುತ್ತಿದ್ದರು. ಯಾರೋ ಅಪರಿಚಿತರು ಎಂದು ಸ್ವಲ್ಪ ಹಿಂದೇಟು ಹಾಕುತ್ತ, "ಯಾರು ನೀವು" ಎಂದೆ. ಅವರಲ್ಲಿ ಒಬ್ಬಾತ "ಇವನು ಯಾವನೋ ನಮ್ಮನ್ನೇ ಯಾರು ಎಂದು ಕೇಳುತ್ತಾನೆ" ಎಂದು ಗಟ್ಟಿಯಾಗಿ ನಕ್ಕು, "ಏ ಬಾಗಿಲು ತೆಗಿಯೋ ಸುಮ್ನೆ" ಎಂದ. ಎಲ್ಲರೂ ಚೆನ್ನಾಗಿ ಕುಡಿದಿರುವುದು ಸ್ಪಷ್ಟವಾಗಿತ್ತು. "ನೀನು ಯಾರು?" ಎಂದು ನನ್ನನ್ನು ಕೇಳಿದ್ದಕ್ಕೆ, ಬೆಂಗಳೂರಿನವನು ನಾನು ಎಂದು ಹೇಳಿ, ಅಲ್ಲೇ ಸ್ವಲ್ಪ ದೂರದಲ್ಲಿ ಬೀದಿ ಆಚೆ ಮನೆ ಮುಂಭಾಗದಲ್ಲಿ ಹಚ್ಚಿಟ್ಟಿದ್ದ ಲಾಟೀನನ್ನು ತೋರಿಸಿ, "ಸ್ವಲ್ಪ ಆ ಮನೆಯವರನ್ನು ಕರೆತನ್ನಿ, ಬಾಗಿಲು ತೆಗೆಯುತ್ತೇನೆ" ಎಂದೆ. ಆ ಕುಡುಕ ವ್ಯಕ್ತಿಯ ಜೊತೆ ಇದ್ದ ಇನ್ನೊಬ್ಬ "ಏ, ಇವರು ಯಾರು ಅಂತ ಅಂದ್ಕೊಂಡಿದೀಯಾ? ಇವರು ಹಳ್ಳಿ ಆಪೀಸ್ರು" ಎಂದ. ನಾನು, "ಇರಬಹುದು, ಆದರೂ ಆ ಮನೆಯವರನ್ನು ಕರೆತನ್ನಿ" ಎಂದುದಕ್ಕೆ ಆ ಮೂವರೂ ಕೋಪದಿಂದ ಕೂಗುತ್ತ ಬಾಗಿಲನ್ನು ಬಲವಾಗಿ ತಳ್ಳಲು ಆರಂಭಿಸಿದರು. ಅವರು ಬಾಗಿಲು ಮುರಿದು ನನಗೆ ಏನಾದರೂ ಮಾಡಿಯಾರೆಂದು ಹೆದರಿ - ಎಷ್ಟೇ ಆಗಲಿ ಕುಡುಕರಲ್ಲವೇ! 'ದೇವರೇ, ಆದದ್ದಾಗಲಿ' ಎಂದು ಅವನ ಮೇಲೆ ಭಾರ ಹಾಕಿ ಬಾಗಿಲು ತೆರೆದರೆ ಒಳಕ್ಕೆ ಗಮ್ಮೆಂದು ವಾಸನೆ ಹಬ್ಬಿತು. ನಾನು ತಕ್ಷಣ ನನ್ನ ಎಲ್ಲ ವಸ್ತುಗಳನ್ನು ಚೀಲಗಳಿಗೆ ಸೇರಿಸಿ, ಅವರಿಗೆ ಮಲಗಲು ಹೇಳಿ ಶಾನುಭೋಗರ ಮನೆಗೆ ಹೊರಟೆ. "ನಾವೇನೂ ಹೋಗು ಎಂದು ಹೇಳಿಲ್ಲ. ಬೇಕಾದರೆ ಇಲ್ಲೇ ಮಲಗು" ಎಂದರು. ನಾನು ಮರುಮಾತಾಡದೆ ನನ್ನ ಚೀಲವನ್ನು ಹೆಗಲಿಗೇರಿಸಿ, ಅರೆಕತ್ತಲು ತುಂಬಿದ ಇಕ್ಕಟ್ಟಾದ ಓಣಿಗಳನ್ನು ಹಾದು ಶಾನುಭೋಗರ ಮನೆಗೆ ಬಂದು ಬಾಗಿಲು ತಟ್ಟಿದೆ. ನಡೆದ ವಿಷಯ ಕೇಳಿ ಮನೆಯವರು "ಅಯ್ಯೋ, ಅವನಾ" ಎಂದು ಹೇಳಿ ಒಳಗೆ ಎಲ್ಲೋ ಒಂದು ಕಡೆ ಹಾಸಿಗೆ ಹಾಸಿ ಮಲಗಲು ವ್ಯವಸ್ಥೆ ಮಾಡಿದರು. ಸೆಖೆ. ಇನ್ನೆಲ್ಲಿಯ ನಿದ್ದೆ?.

## ಇಟ್ಟಿಗಿ

ಬೆಳಗಿನ ಜಾವ (11.6.85) ನಾನು ಏಳುತ್ತಲೇ ಆ ಮನೆಯವರು ಬಹು ಪಶ್ಚಾತ್ತಾಪಪಡುತ್ತ ಆತನ ಹೆಸರು ಹನುಮಂತಪ್ಪನೆಂದೂ, ದಲಿತ ವರ್ಗದ ಆತ ವಿಲೇಜ್ ಅಕೌಂಟೆಂಟ್ ಆಗಿ ಯಾರಿಗೂ "ಕೇರ್" ಮಾಡುವವನಲ್ಲವೆಂದೂ ಆತನ ಬಳಿ ವಿಲೇಜ್ ಪಂಚಾಯ್ತಿ ಕಚೇರಿಯ ಒಂದು ಬೀಗದ ಕೈ ಇದ್ದು ಆಗಾಗ್ಗೆ ಕುಡಿದು ಬಂದು ರಾತ್ರಿ

ಮಲಗುವ ವಿಷಯವನ್ನೂ ತಿಳಿಸಿದರು. ಮೇಲಧಿಕಾರಿಗಳ ಜೊತೆ ಅನೇಕ ದಲಿತರು ಒರಟಾಗಿ ನಡೆದುಕೊಳ್ಳುವುದು ಹಳ್ಳಿಯಲ್ಲಿಯೂ ಕಾಣಿಸಿಕೊಂಡಿದ್ದು ನನಗೆ ಆಶ್ಚರ್ಯವನ್ನು ತರಲಿಲ್ಲ. ಹನುಮಂತಪ್ಪನ ಬಗ್ಗೆ ಕೋಪ ಬರಲು ಸಾಧ್ಯವೇ ಇರಲಿಲ್ಲ. ಕುಡುಕನಾಗಿ ಬಂದ ಆತನ ವಿಷಯದಲ್ಲಿ ಸ್ವಲ್ಪ ಭಯ ಬಂದುದು ನಿಜ. ನನ್ನ ಬಳಿ ಇದ್ದುದನ್ನೆಲ್ಲ (ಇದ್ದದ್ದು ಒಂದು ಹಳೆಯ ಕೈಗಡಿಯಾರ, ನೂರು ಅಥವಾ ನೂರೈವತ್ತು ರೂಪಾಯಿ) ಸಂತೋಷದಿಂದ ಕೊಟ್ಟುಬಿಡುತ್ತಿದ್ದೆ. ಆದರೆ ಹೊಡೆದರೆ ಗತಿ ಏನು? ಆಮೇಲೆ ಏನು ಪಶ್ಚಾತ್ತಾಪಪಟ್ಟರೂ ಹೊಡೆತವನ್ನು ಹಿಂದಕ್ಕೆ ಪಡೆಯಲಾಗುವುದಿಲ್ಲ ತಾನೇ! ಊರ ಮುಂಭಾಗದ ಕಲ್ಲಿನ ಮೇಲಿನ ಶಾಸನವನ್ನು ಹಿಂದಿನ ದಿನ ನೋಡಿರಲಿಲ್ಲ. ಬೆಳಿಗ್ಗೆ ಪರಿಶೀಲಿಸಿದಾಗ ಅದು ಜೈನರದು ಇರಬಹುದು ಎನ್ನಿಸಿತು. ಅಲ್ಲಿಗೆ ಬಂದ ಊರ ಕೆಲವು ಜನರಿಗೆ ಮಧ್ಯರಾತ್ರಿ ನಡೆದ ವಿಷಯ ತಿಳಿದು ಎಲ್ಲರೂ ಹನುಮಂತಪ್ಪನ ನಡವಳಿಕೆ ಬಗ್ಗೆ ತೀವ್ರ ಅಸಮಾಧಾನ ವ್ಯಕ್ತಪಡಿಸಿದರು.

ನಂದಿಬೇವೂರಿನಿಂದ ಇಟ್ಟಿಗೆ ಊರು ಕೇವಲ ಆರು ಮೈಲಿ. ನಾನು ಹೋದಾಗ ನನ್ನ ಹಳೆಯ ಗೆಳೆಯ ಡಾ. ನಾಗಪ್ಪ ಇರಲಿಲ್ಲ. ಅವರ ಅಣ್ಣ ಅಂದಾನಪ್ಪನವರು (ಮಾಜಿ ಶಾಸಕರು) ನನ್ನನ್ನು ಪ್ರೀತಿಯಿಂದ ಬರಮಾಡಿಕೊಂಡರು. ಅಂದಾನಪ್ಪ ಚೆನ್ನಾಗಿ ಓದಿಕೊಂಡ ಸುಸಂಸ್ಕೃತ ವ್ಯಕ್ತಿ. ಬ್ರಹ್ಮಚಾರಿ ನಾಗಣ್ಣನ ಕೊಠಡಿ ಅಸ್ತವ್ಯಸ್ತದ ಪರಮಾವಧಿ. ಔಷಧಿಗಳು, ದಿಂಬು, ಜಮಖಾನ, ಪುಸ್ತಕಗಳು ಇವು ಯಾವುವೂ ಇರಬೇಕಾದ ಕಡೆ ಅಥವಾ ಇರಬೇಕಾದ ಸ್ಥಿತಿಯಲ್ಲಿ ಇರಲಿಲ್ಲ. ಆಯುರ್ವೇದ ಅಭ್ಯಾಸಮಾಡಿ ಹಳ್ಳಿಯಲ್ಲಿ ನೆಲಸಿ ಜನರಿಗೆ ಆಪ್ತನಾಗಿ, ಅವರ ಕಷ್ಟ ನಷ್ಟ ಸುಖಗಳಲ್ಲಿ ಭಾಗಿಯಾಗುತ್ತಿರುವ ನಾಗಣ್ಣನ ಅಸ್ತವ್ಯಸ್ತ ಕೊಠಡಿ ನನಗೆ ಆಪ್ಯಾಯಮಾನವಾಗಿತ್ತು. ಬಿಸ್ಕತ್ ಜೊತೆ ಬಂದ ಮಧುರವಾದ ಕಾಫಿ ಹೀರಿದೆ. ಅಂದಾನಪ್ಪನವರೂ ಬ್ರಹ್ಮಚಾರಿಗಳೇ. ಮಧ್ಯಾಹ್ನ ಅವರ ಪಕ್ಕದ ಸಮೀಪ ಬಂಧುಗಳ ಮನೆಯಲ್ಲಿ ಪುಷ್ಕಳ ಊಟವಾಯಿತು. ಅಂದಾನಪ್ಪ ಅಮೆರಿಕಕ್ಕೆ ಟೊಮ್ಯಾಟೊ ಬೀಜ ಸರಬರಾಜು ಮಾಡುವುದರಿಂದ ವರ್ಷಕ್ಕೊಮ್ಮೆ ಅಲ್ಲಿಂದ ಬರುವ ಇಬ್ಬರು ಅಮೇರಿಕದ ರೈತರಿಗಾಗಿ ಒಂದು ಅತಿಥಿಗೃಹ ಕಟ್ಟಿಸಿದ್ದಾರೆ. ದೊಡ್ಡ ಆಧುನಿಕ ರೈತರಾದ ಅವರಿಂದ ಅಲ್ಲಿನ ರೈತರು ಹೊಸ ರೀತಿಯ ಉಳುಮೆ, ತಳಿ ಬಳಕೆಗಳನ್ನು ರೂಢಿಸಿಕೊಂಡಿದ್ದಾರೆ. ಹೈಸ್ಕೂಲ್ ಜವಾನ ಗಂಗಪ್ಪನ ಸರಳ ಸಜ್ಜನಿಕೆ ನನಗೆ ಮೆಚ್ಚುಗೆ ಆದುವು. ಊಟವಾದ ಮೇಲೆ ಮಲಗಿ ಏಳುತ್ತಿದ್ದಂತೆ ಡಾ. ನಾಗಣ್ಣ ಬಂದರು. ಖಾರದ ಮಂಡಕ್ಕಿ, ಕಾಫಿ ಸರಬರಾಜಾದಾಗ ನಾನಿದ್ದ ಅಸ್ತವ್ಯಸ್ತ ಕೊಠಡಿಯಲ್ಲಿ ಏಕಾಗ್ರತೆಯಿಂದ ಇಸ್ಪೀಟ್ ಆಟ ನಡೆಯುತ್ತಿತ್ತು. ನಾನು ಆ ಆಟವನ್ನೂ ಶ್ರೀಮಂತ ರೈತರೊಬ್ಬರ ಭಾರಿ ಹೊಟ್ಟೆಯನ್ನೂ ನೋಡುತ್ತ ಈ ಜನ್ಮದಲ್ಲಿ ಇವೆರಡೂ ನನಗೆ ಲಭ್ಯವಿಲ್ಲವೆಂದು ಹೊಟ್ಟೆಯೊಳಗೇ ಬಿದ್ದು ಬಿದ್ದು ನಕ್ಕೆ.

ಊರ ಹೊರಗೆ ಒಂದು ಹಳೆಯ ಕಲ್ಲೇಶ್ವರ ಗುಡಿ, ಊರ ಒಳಗೆ ಅತ್ಯಂತ ಸುಂದರ ಹನುಮಂತನ ದೇವಾಲಯ ಇವೆ. ಕೆತ್ತನೆಯ ಮರದಿಂದ ಬಹುತೇಕ ಹನುಮಂತನ ದೇವಾಲಯ ನಿರ್ಮಾಣವಾಗಿದೆ. ಇಂತಹ ದೇವಾಲಯವನ್ನು ನಾನು ನೋಡಿಲ್ಲ. ರಾತ್ರಿ ಲಿಂಗಾಯತ ಸಮಾಜದ ಬಗ್ಗೆ ವಿಮರ್ಶಕ ದೃಷ್ಟಿಯ ಒಬ್ಬ ಬಣಜಿಗರಿಂದ ಶೀಲವಂತರ ಬಗ್ಗೆ ಕೆಲವು ಹೆಚ್ಚಿನ ವಿವರಗಳು ದೊರಕಿದುವು. ಶೀಲವಂತರು ಇತರ ವೀರಶೈವರಂತೆ ಹಣೆ ತೋಳು ಎದೆಗೆ ಮಾತ್ರವಲ್ಲ, ಕಾಲಿಗೂ ವಿಭೂತಿ ಧರಿಸುತ್ತಾರೆ. ಅವರ ಪ್ರಕಾರ "ಶೀಲ"ಗಳನ್ನು ಅನುಸರಿಸುವ ಶೀಲವಂತ ದೀಕ್ಷೆಯನ್ನು ಯಾವುದೇ ಲಿಂಗಾಯತನೂ ಜಂಗಮರಿಂದ ಪಡೆಯಬಹುದು. ಅವರನ್ನು "ಮೇಲ್ಪಾವುಡ"ದವರು ಎನ್ನುತ್ತಾರೆ. (ಇಟ್ಟಿಗಿಯ ನನ್ನ ದಿನಚರಿಯ ಹೆಚ್ಚಿನ ವಿವರಗಳು ಕಳೆದಿವೆ).

ಕೋಗಳಿಯು ಹರಪನಹಳ್ಳಿ ಹೊಸಪೇಟೆ ರಸ್ತೆ ಮಾರ್ಗದಲ್ಲಿ ಇಲ್ಲವಾದ ಕಾರಣ ಅಲ್ಲಿಗೆ ಹೋಗುವ ಕಾರ್ಯಕ್ರಮವಿರಲಿಲ್ಲ. ಆದರೆ ಇಟ್ಟಿಗಿಯಿಂದ ಅಲ್ಲಿಗೆ ಕೇವಲ ಐದು ಮೈಲಿ ಎಂದು ತಿಳಿದು ಅಲ್ಲಿ ಒಂದು ದಿನವಿರುವ ಯೋಚನೆಮಾಡಿ, ಒಂದು ದಿನ ತಡವಾಗಿ ಬರುವುದಾಗಿ ಹಗರಿಬೊಮ್ಮನಹಳ್ಳಿಯ ವಿರೂಪಾಕ್ಷ ಗೌಡರಿಗೆ ಹೇಳಿ ಕಳುಹಿಸಿದೆ.

## ಕ್ವಾಗಳಿ (ಕೋಗಳಿ)

ಮಾರನೆಯ ದಿನ ಬೆಳಿಗ್ಗೆ (12.6.85) ಬ್ರೆಡ್ಡು ಕಾಫಿ ಮುಗಿಸಿ ಹೊರಟೆ. ನನ್ನ ಜೊತೆ ಶೇಖರಪ್ಪ, ನಾಗಪ್ಪ ಎಂಬ ಇಬ್ಬರು ಉಪಾಧ್ಯಾಯರು ಕೋಗಳಿಗೆ ಜೊತೆಯಾದರು. ದಾರಿಯಲ್ಲಿ ಅವರ ಜೊತೆ ಮಾತನಾಡುವಾಗ ಆ ಪ್ರದೇಶದ ಲಿಂಗಾಯತ ಉಪಜಾತಿಗಳಲ್ಲಿ ನಡೆದಿರುವ ಹೊಡೆದಾಟದ ವಿವರಗಳು ದೊರೆತುವು. ವಿಶೇಷವಾಗಿ ಸಾದರಿಗೂ ಪಂಚಾಚಾರದವರಿಗೂ (ಬಣಜಿಗರು ಮತ್ತು ಪಂಚಮಸಾಲಿಗಳು), ಸಾದರಿಗೂ ರೆಡ್ಡಿ ಲಿಂಗಾಯತರಿಗೂ ಅಲ್ಲಿ ಘರ್ಷಣೆಗಳು ನಡೆದಿವೆ. ಉಜ್ಜಿನಿ (ಉಜ್ಜಯಿನಿ) ಪೀಠವು ಪಂಚಾಚಾರದವರ ಕೈಯಲ್ಲಿದೆ. ಅದು ತಮ್ಮದು ಎಂದು ಬಹು ಹಿಂದಿನಿಂದ ಸಾದರು ಅದರ ಮೇಲೆ ತಮ್ಮ ಸ್ವಾಮ್ಯ ಸ್ಥಾಪಿಸಲು ಪ್ರಯತ್ನ ನಡೆಸಿದ್ದಾರೆ. ದಾವಣಗೆರೆಯ ನನ್ನ ಬಂಧುವೊಬ್ಬರು ಉಜ್ಜಿನಿ ಪೀಠಕ್ಕಾಗಿ ಸಾದರ ವಿರುದ್ಧ "ಕಣೆಗಿ ಹಿಡಿದು" ಹೊಡೆದಾಡಲು ಒಮ್ಮೆ ಹೋದುದನ್ನು ನನ್ನ ಜೊತೆ ಹೇಳಿಕೊಂಡಿದ್ದರು. ತಮ್ಮನ್ನು ಕಡಮೆಯಾಗಿ ಕಾಣುವ ಪಂಚಾಚಾರದವರ ಬಗ್ಗೆ ಸಾದರಿಗೆ ಸ್ವಲ್ಪ ಕೋಪ ಇದೆ. ಅವರು ಚೆನ್ನಾಗಿ ದುಡಿದು ಉಳಿದವರಿಗಿಂತ ಹೆಚ್ಚು ಅನುಕೂಲ ಸ್ಥಿತಿಯಲ್ಲಿದ್ದಾರೆ. ಒಬ್ಬ ಸಾದರ ಪ್ರಕಾರ, ಉಳಿದವರಿಗಿಂತ ಸಾದರಿಗೇ ತಮ್ಮ ಬಗ್ಗೆ ಹೆಚ್ಚು ಅಭಿಮಾನ, ಜಂಬ. ಹರಿಹರದ ಶಾಸಕರು ಪ್ರಯತ್ನಿಸಿದರೂ ಉತ್ತಂಗಿಯಲ್ಲಿ ತೀವ್ರವಾಗಿರುವ ಘರ್ಷಣೆಗಳನ್ನು ನಿಲ್ಲಿಸಲಾಗಿಲ್ಲ.

ಕೋಗಳಿ ಪಕ್ಕದ ಚಿನ್ನ ಹಗರಿ ಹಳ್ಳವು ಹಗರಿಯ ಉಪನದಿ. (ಹಗರಿಯೇ ಹಿಂದಿನ ಶಾಸನಗಳ "ಪಗರೆ".) ಆ ಚಿಕ್ಕ ನದಿಯು ಹರಿದು ಕೆಲವು ಭಾಗಗಳಿಗೆ ನೀರುಣ್ಣಿಸಿದೆ.

ಉಪ್ಪು ಮಣ್ಣಿನ ಮೂಲಕ ಹರಿದು ಬರುವುದರಿಂದ ಅದರ ನೀರು ಸ್ವಲ್ಪ ಉಪ್ಪು ಮಾತ್ರವಲ್ಲದೆ, ಬೆಳೆಯೂ ಸಮೃದ್ಧವಾಗಿ ಬರುವುದಿಲ್ಲ.

ಕೋಗಳಿ ಕರ್ನಾಟಕದ ಚರಿತ್ರೆಯಲ್ಲಿ ವಿಶೇಷ ಉಲ್ಲೇಖ ಪಡೆದ ಊರುಗಳಲ್ಲೊಂದು ಎಂಬ ಕಾರಣದಿಂದ ನಾನು ಸ್ವಲ್ಪ ಮಾರ್ಗ ಬದಲಿಸಿ ಆ ಊರಿಗೆ ಹೋದುದು. ಹತ್ತನೆಯ ಶತಮಾನದ ಗದ್ಯಗ್ರಂಥ "ವಡ್ಡಾರಾಧನೆ"ಯಲ್ಲಿ ಕೋಗಳಿಯ ಉಲ್ಲೇಖವಿದೆಯಲ್ಲದೆ, ಕೋಗಳಿಯ ಹಲವು ಜೈನ ಶಾಸನಗಳು ಹಲವು ಕಾರಣಗಳಿಂದ ಪ್ರಖ್ಯಾತವಾಗಿವೆ.

ಕೋಗಳಿಯಲ್ಲಿ (ಜನರ ಬಾಯಲ್ಲಿ 'ಕ್ವಾಗಳಿ') ಸೌಜನ್ಯಶೀಲ ವಕೀಲ ಭೋಜನಗೌಡರ ಮನೆಗೆ ಹೋದೆವು. ಅವರು ದೊಡ್ಡ ಹತ್ತಿ ಬೆಳೆಗಾರರೂ ವ್ಯಾಪಾರಸ್ಥರೂ ಆಗಿದ್ದರು. ಅವರ ಮನೆಯ ಮುಂದೆಯೇ ಐದು ಜಿನಮೂರ್ತಿಗಳಿದ್ದ ಶಿಲಾಫಲಕ, ವೀರಗಲ್ಲು ಇತ್ಯಾದಿ ಕಾಣಿಸಿದುವು. ಅವರ ಮನೆಯಲ್ಲಿದ್ದಾಗಲೇ ಕ್ವಾಗಳಿ ತಾಂಡಾದ ಗಂಗಾನಾಯ್ಕ ಬಂದರು. ಗಂಗಾನಾಯ್ಕನಿಗೆ ಹರಟೆ ಹೊಡೆಯುವುದರಲ್ಲಿ ಬಹು ಆಸಕ್ತಿ. ನಾನು ರಾತ್ರಿ ಅಲ್ಲಿನ ಮಾಜಿ ರಾಜಕೀಯ ನಾಯಕರೊಬ್ಬರ ಮನೆಯಲ್ಲಿ ಉಳಿಯುವುದು ಎಂದು ನಿರ್ಧಾರವಾಗಿ ನನ್ನನ್ನು ಅವರ ಮನೆಗೆ ಕರೆದೊಯ್ದರು. ದೊಡ್ಡಮನೆ, ಕಾರುಗಳನ್ನು ಹೊಂದಿದ್ದ ಅವರಲ್ಲಿ ನನಗೆ ಅಂತಹ ಸಹೃದಯತೆ ಕಾಣಿಸಲಿಲ್ಲ. ಸ್ವಪ್ರದರ್ಶನ ಚಾಪಲ್ಯ ಹೆಚ್ಚು ಎನ್ನಿಸಿತು. ಅವರ ಬಗ್ಗೆ ಎಲ್ಲರಿಗೂ ಅದೇ ಭಾವನೆ. ಹಗರಿ ಬೊಮ್ಮನಹಳ್ಳಿಯಿಂದ ಗುರುಮೂರ್ತಿ ಪೆಂಡಕೂರು, ವಿರೂಪಾಕ್ಷಗೌಡರು ಬಂದು ನನ್ನನ್ನು ಮಾತನಾಡಿಸಿಕೊಂಡು ಹೋದಮೇಲೆ ಆ ಮುಖಂಡರಿಗೆ ನನ್ನ ಬಗ್ಗೆ ಹೆಚ್ಚಿನ ವಿಶ್ವಾಸ ಮೂಡಿದಂತೆ ಕಂಡಿತು.

"ಕೋಗಳಿ 500" ಎಂದೇ ಪ್ರಸಿದ್ಧವಾಗಿದ್ದ ನಾಡಿನ ಕೇಂದ್ರವಾಗಿದ್ದ ಕೋಗಳಿ ಐತಿಹಾಸಿಕ, ವಿಶೇಷವಾಗಿ ಜೈನ ಸ್ಮಾರಕಗಳಿಂದ ತುಂಬಿರುವ ಒಂದು ಮಹತ್ವದ ಜಾಗ. ಗಂಗದೊರೆ ದುರ್ವಿನೀತನು (ಎಂಟನೇ ಶತಮಾನ) ನಿರ್ಮಿಸಿದ ಪ್ರಾಚೀನ ಜಿನಮಂದಿರವಿರುವ ಸ್ಥಳ. ಅಲ್ಲಿನ ವೀರಭದ್ರದೇವಾಲಯ ಮೂಲತಃ ಒಂದು ಬಸದಿ. ವೀರಭದ್ರನ ವಿಗ್ರಹದ ಪಾದಪೀಠದ ಮೇಲೆ ಹನ್ನೊಂದನೇ ಶತಮಾನದ ಶಾಸನವಿದ್ದು, ಆ ಪಾದಪೀಠವು ಜೈನ ವಿಗ್ರಹವನ್ನು ಹೊತ್ತಿದ್ದಿತೆಂದು ಹೇಳಲು ಆಧಾರಗಳಿವೆ. ದೇವಾಲಯದ ಮುಂದೆ ಕ್ರಿ.ಶ. 1502ರ ಒಂದು ಶೈವ ಶಾಸನವಿದೆ. ಹನ್ನೆರಡು ಹದಿನೈದನೇ ಶತಮಾನಗಳ ಮಧ್ಯೆ ಯಾವಾಗಲೋ ಅದು ಜೈನರ ಪೂಜಾಲಯವಾಗಿದ್ದುದು ಶೈವ ಕೇಂದ್ರವಾಯಿತೆಂದು ಹೇಳಬಹುದು. ಬಾಗಿಲುವಾಡವೂ ಗುಡಿಯ ಮುಂದಿನ ಐದು ಜೈನ ವಿಗ್ರಹಗಳ ಶಿಲೆಯೂ ಅದು ಮೂಲತಃ ಬಸದಿಯೆಂಬುದಕ್ಕೆ ಹೆಚ್ಚಿನ ಸ್ಪಷ್ಟ ಸಾಕ್ಷ್ಯಾಧಾರಗಳು. ಹತ್ತಡಿ ಎತ್ತರದ ಪಾರ್ಶ್ವನಾಥನ ಬಹು ಸುಂದರ ವಿಗ್ರಹವನ್ನು "ಬಸದಿ ದಿಣ್ಣೆಪ್ಪ" ಎಂದು ಕರೆಯುವುದು ಸ್ವಾರಸ್ಯವಾಗಿದೆ. ಪಾರ್ಶ್ವನಾಥನಿಗೆ ಊರಲ್ಲಿ ಮಳೆ ಬರದಿದ್ದರೆ ವಿಶೇಷ ಪೂಜೆ ಸಲ್ಲಿಸುತ್ತಾರೆ. ಆ ಹಾಳಾದ ಬಸದಿಯ ಮಂಟಪದ ಅಡ್ಡ ಪಟ್ಟಿಕೆಗಳ ಮೇಲೆ, ನವರಂಗದಲ್ಲಿ ಜಿನವಿಗ್ರಹಗಳೂ ಪಕ್ಕದಲ್ಲಿ ಹತ್ತು ಹನ್ನೊಂದನೇ ಶತಮಾನದ ಭಗ್ನ ಜೈನ ಶಾಸನವೂ ಇದೆ. ದುರ್ಗವ್ವನ

ಗುಡಿಯೂ ಒಂದು ಕಾಲಕ್ಕೆ ಜೈನರ ಪೂಜನೀಯ ಸ್ಥಾನವಾಗಿದ್ದಿರಬೇಕು. ಅಲ್ಲೊಂದು ಜೈನಶಾಸನದ ಬಲಗಡೆ ಕೆಳಗೆ ನವಿಲನ್ನು ಕೆತ್ತಲಾಗಿದ್ದು ಅಲ್ಲೇ ನೆಲದಲ್ಲಿ ಹೂತು ಹೋಗಿದ್ದ "ಸಮೇವು" (ದೀಪಸ್ತಂಭ) ದೇವಿಯ ಮುಂದಿದೆ. ಊರ ಹೊರಗಡೆ ಕಲ್ಲೇಶ್ವರ ದೇವಾಲಯವಿರುವುದಲ್ಲದೆ ಹೊಲಗಳಲ್ಲಿ ಹಳೆಯ ಇಟ್ಟಿಗೆಗಳೂ ವರ್ಣಲೇಪಿತ ಮಡಕೆ ಚೂರುಗಳೂ ದೊರಕುತ್ತವೆ. ಆಂಜನೇಯನ ಗುಡಿಯ ಮುಂದೆ ಬಹುಶಃ ರಾಷ್ಟ್ರಕೂಟರ ಕಾಲದ ಸುಂದರ ವೀರಗಲ್ಲಿದೆ. ಅದು ಗೋಗ್ರಹಣ ಅಥವಾ ತುರುಗ್ಗೋಳಿನ ವೀರಗಲ್ಲು: ಕೆಳಗೆ ಕಳ್ಳರು ಅಪಹರಿಸಿದ ಊರ ದನಗಳನ್ನು ವೀರನು ಹೋರಾಡಿ ಬಿಡಿಸುತ್ತಿರುವ ದೃಶ್ಯ, ಮಧ್ಯದಲ್ಲಿ ಅವನು ಸತ್ತು ಸ್ವರ್ಗಕ್ಕೆ ಹಾರುತ್ತಿರುವ ದೃಶ್ಯ, ಮೇಲಿನ ಹಂತದಲ್ಲಿ ಅವನು ವೀರಸ್ವರ್ಗದಲ್ಲಿರುವ ದೃಶ್ಯ - ಈ ಮೂರು ಹಂತದ ದೃಶ್ಯಗಳಿವೆ.

ಆ ಊರಿನ ದುರ್ಗವ್ವನ ಜಾತ್ರೆಗೆ ಸಂಬಂಧಿಸಿದ ಕೆಲವು ವಿವರಗಳು ಲಭ್ಯವಾದುವು. ಆ ದೇವತೆಯ ಜಾತ್ರೆ ಮಾಡಲು ಊರಿನ "ಸಮಸ್ತ ಗೌಡ್ರು, ಬಣಕಾರ್ರು, ಶೆಟ್ರು"* ಆದಿಯಾಗಿ ಎಲ್ಲ ಜಾತಿ ಜನ ಸೇರಿ "ಪಟ್ಟಿ ಹಾಕ್ತಾರೆ". ಎಂದರೆ ಅವರವರು ತಮ್ಮ ಕೈಲಾದಷ್ಟು ಕಾಣಿಕೆ ಕೊಡುತ್ತಾರೆ. ಉಳಿದ ಎಲ್ಲ ಜಾತಿ ಜನ ಎಂದರೆ ಶಾನುಭೋಗರು, ಪೂಜಾರರು, ನಾಯಕರು, ಬಾರಿಕರು ಇವರೆಲ್ಲ ಸೇರುತ್ತಾರೆ. ಇವರು "ಬಾಬುದಾರ್ರು", ಎಂದರೆ ಬಹುಶಃ ಜಾತ್ರೆಯ ಫಲದಾರರು. ದುರ್ಗಮ್ಮನ ಜಾತ್ರೆ ಇಡೀ ಊರ ಜನ ಸೇರಿ ನಡೆಸುವಂತಹುದಾದರೂ ಮುಖ್ಯ ಪಾತ್ರ ಹರಿಜನರದ್ದು.

ಜಾತ್ರೆ ಇಷ್ಟನೆಯ ದಿನ ಎಂದು "ಮಿತಿ" ಗೊತ್ತುಪಡಿಸುತ್ತಾರೆ. ಕೋಣವನ್ನು ಕಡಿಯುವ ದಿನಕ್ಕೆ ಏಳೆಂಟು ದಿನ ಮೊದಲು ದೇವಿಯನ್ನು ಅಲಂಕಾರಮಾಡಿ ಗುಡಿಯಿಂದ ಹೊರಗೆ ತಂದು ಮೆರವಣಿಗೆಯಲ್ಲಿ ಬಡಿಗೇರರ ಮನೆಗೆ ಬಂದಾಗ ದೇವಿಯನ್ನು ಬಣಕಾರರು, ಗೌಡರು, ಪೂಜಾರರು (ಇವರೂ ಲಿಂಗಾಯತರು) ಇಳಿಸಿಕೊಳ್ಳುತ್ತಾರೆ. ದುರ್ಗೆಗೆ ಬಡಿಗೇರರ ಮನೆಯೇ ತೌರುಮನೆ. ಬಡಿಗೇರರು ಸೇರಿದಂತೆ ಎಲ್ಲ ವಿಶ್ವಕರ್ಮರೂ ಕಾಳಿಕಾದೇವಿಯ ಆರಾಧಕರು. ಕಾಳಿಕಾದೇವಿಯನ್ನೇ ಕರಿಯವ್ವನೆಂದೋ ದುರ್ಗವ್ವನೆಂದೋ ಕರೆದರೆ ಅವಳು ಕೆಳವರ್ಗದ ದೇವತೆಯಾಗುತ್ತಾಳೆ. (ಕಾಳಿ = ಕರಿಯ ದೇವತೆ = ದುರ್ಗಾ). ಬಡಿಗೇರರು ತಮ್ಮ ಮನೆ ಮಗಳಿಗೆ ಮೂಗುತಿ, ತಾಳಿ, ಬಳೆ, ಸೀರೆ, 'ಉಡೆಯಕ್ಕಿ ಸಾಮಾನು' ಇತ್ಯಾದಿ ಕೊಟ್ಟು ಮುತ್ತೈದೆ ಮಾಡುತ್ತಾರೆ, ವಧುವಾಗಿ ಮಾಡುತ್ತಾರೆ. ಊರಿನ 'ಸಮಸ್ತ ದೈವ'ದವರೆಲ್ಲ ಸೇರಿ ಆಕೆಯನ್ನು ಗಂಡನ ಮನೆಗೆ ಕಳಿಸಲು ಕೇಳಿಕೊಂಡಾಗ ಎರಡು ಕಡೆಯವರಿಗೂ ಮಾತುಕತೆ ಆಗುತ್ತದೆ. ತಮ್ಮ ಮಗಳಿಗೆ "ತೆರ" ಕೊಡಲು ಬಡಿಗೇರರು

* ವೀರಶೈವ 'ಶೆಟ್ರು' ಅಥವಾ ಬಣಜಿಗರ ಮುಖ್ಯಸ್ಥನೇ ಬಣಕಾರ. 'ಬಣಕಾರ್ರು' 'ಶೆಟ್ರು' ಒಂದೇ ಎಂದು ಕೆಲವರು ಹೇಳಿದರೂ, ಕೆಲವೆಡೆ ಸಾದರ ಜಾತಿಯ ಬಣಕಾರರೂ ಇದ್ದಾರೆ. ಗೌಡ್ರು ಎಂದರೆ ಊರಿನ ಪಟೇಲ. ನಾಯಕರು ಬೇಡರ ಜಾತಿಯವರು; ಅವರಿಗೆ ತಳವಾರಿಕೆ ವೃತ್ತಿ ಕೊಡುವುದರಿಂದ ಅವರನ್ನು ತಳವಾರರು ಎಂದೂ ಕರೆಯುತ್ತಾರೆ.

ಕೇಳಿದಾಗ ಗೌಡರು, ಬಣಕಾರರು ಅದನ್ನು ಕೊಟ್ಟು ಗಂಡನ ಮನೆಗೆ ಹೊರಡಿಸುತ್ತಾರೆ. ರಾತ್ರಿ ಊರಲ್ಲಿ ಮೆರವಣಿಗೆಯಾಗುತ್ತದೆ. ದುರ್ಗಾ ಮೊದಲು ಗೌಡರ, ಬಣಕಾರರ ಮನೆಗಳಿಗೆ ಭೇಟಿ ನೀಡಿ ಅವರಿಂದ ಉಡಿಯಕ್ಕಿ ಪಡೆಯುತ್ತಾಳೆ. ರಾತ್ರಿ ಹತ್ತು ಗಂಟೆಗೆ ಆರಂಭವಾದ ಮೆರವಣಿಗೆ ಬೆಳಗಿನ ಜಾವ ನಾಲ್ಕಕ್ಕೆ ಮುಗಿದು ತನ್ನ ಗುಡಿ ಪ್ರವೇಶಿಸುತ್ತಾಳೆ. ಮೆರವಣಿಗೆ ಮುಂದೆ ಕುಣಿತ, ವಾದ್ಯ ಘೋಷಗಳು ನಡೆಯುತ್ತವೆ.

ಆಮೇಲೆ ಹರಿಜನ ಮುತ್ತೈದೆಯರು ಇಡೀ ದಿನ ಉಪವಾಸವಿದ್ದು ಸ್ನಾನಮಾಡಿ ಹೊಸ ಮಡಕೆಗಳಲ್ಲಿ ಅವುಗಳಿಗೆ ತಮ್ಮ ಉಸಿರು ತಾಗದಂತೆ ಮೂಗು ಬಾಯಿಗೆ ಬಟ್ಟೆ ಕಟ್ಟಿಕೊಂಡು ಇಪ್ಪತ್ತು ಸೇರು ಬೇಳೆ ಹೋಳಿಗೆ ಮಾಡುತ್ತಾರೆ. ಅದರ ಜೊತೆ, ತಲಾ ಇಪ್ಪತ್ತೈದು ಸೇರಿನ ಗೋಧಿ ಹುಗ್ಗಿ, ಅನ್ನ ಬೇಯಿಸುತ್ತಾರೆ. ಅವುಗಳಿಗೆ ನಲವತ್ತು ಕೆ.ಜಿ. ಬೆಲ್ಲ ಜೊತೆ ನೂರೊಂದು ಬಾಳೆ ಹಣ್ಣು, ಹಾಲು ತುಪ್ಪ ಹಾಕಿ ಕಲಸಿ ನೆಲದ ಮೇಲೆ ಬಾಳೆಲೆ ಹಾಸಿ ಅದರ ಮೇಲೆ ಚೌಕಟ್ಟಾಗಿ ಏಣಿಯಂತೆ ಏರಿಸುತ್ತಾರೆ. ಇದು ನಡೆಯುವುದು ಸೋಮವಾರ. ಅಂದು ಗೋಧಿ ಹಿಟ್ಟಿನಲ್ಲಿ ಮಾಡಿದ ಕಣಕದ ಕೋಣವನ್ನು ಕಡಿಯುತ್ತಾರೆ. ಅಂದಿನಿಂದ ಎರಡು ಮೂರು ದಿನ ಯಾರೂ ಊರ ಕರುಗಲ್ಲು ಮೂಲಕ ಹೊರಗೆ ಹೋಗುವಂತಿಲ್ಲ, ಒಳಗೆ ಬರುವಂತಿಲ್ಲ. ಕರುಗಲ್ಲು ಕಂಬಗಳಿಗೆ ಹಗ್ಗ ಕಟ್ಟಿ ಮುಳ್ಳು ಹಚ್ಚಿ ಕಾಯುತ್ತಾರೆ. ಊರಿನ ಉಳಿದ ಅನಧಿಕೃತ ಬಾಗಿಲುಗಳ ಮೂಲಕ ಜನ ಹೋಗಿ ಬರಬಹುದು (ನನ್ನ ಊರಿನ ಕರಿಯವ್ವನ ಹಬ್ಬದ ಆರಂಭದ ಮೊದಲನೆಯ ದಿನ ರಾತ್ರಿ ಮೂರು "ಸಾರು"ಗಳನ್ನು, ಎಂದರೆ ಪ್ರಕಟಣೆ ಹಾಕಿ, ಊರಿನೊಳಗೆ ಹೊರ ಊರಿನವರು ಇದ್ದರೆ ಹೊರಗೆ ಹೋಗಬೇಕೆಂದೂ, ಅವರು ಮೂರನೆಯ ಸಾರು ಬಿದ್ದಾಗ ಊರೊಳಗೆ ಇದ್ದರೆ ಅವರು ಕಡ್ಡಾಯವಾಗಿ "ಸಿಡಿ" ದಿನ ಊರಿಗೆ ಬರಲೇಬೇಕೆಂದೂ ಘೋಷಿಸುತ್ತಿದ್ದರು. ಕೊನೆಯ ಸಾರು ಬಿದ್ದಾಗ ಊರಲ್ಲಿದ್ದ ಜನರೆಲ್ಲ "ಸಿಡಿ" ದಿನ ಊರಲ್ಲೇ ಇರುತ್ತಿದ್ದರು. ಹಬ್ಬದಲ್ಲಿ ಭಾಗವಹಿಸುತ್ತಿದ್ದರು). ಬುಧವಾರ ನಿಜವಾದ ಕೋಣವನ್ನು ಕಡಿದು, ದೇವತೆಗೆ ಒಂದು ಪಲ್ಲ ಜೋಳದ ಕಿಚಡಿಗೆ ಆ ಕೋಣದ ದೇಹದ ಒಳಗಿನ "ಕಸರ"ನ್ನು (ಕಸರು : ಕೋಣದ ಮಲ) ಬೆರಸಿ ಅದನ್ನು ಹರಿಜನರು ಹೊತ್ತು ಊರ ಗಡಿಗಳಲ್ಲಿ ಗುರುವಾರ ಚರಗವಾಗಿ ಸ್ವಲ್ಪ ಭಾಗ ಉಗ್ಗುತ್ತಾರೆ. ಆ ಕರಸೇ (ಕಸರೇ) "ಹುಲುಸು" : ಅದು ಊರಿನ ರೈತರಿಗೆ ಮಾತ್ರ ಸೇರಿದ್ದು ಅದನ್ನು ಅವರು ತಮ್ಮ ತಿಪ್ಪೆಗಳಿಗೆ ಸೇರಿಸುತ್ತಾರೆ. "ಕರಸು" ರೂಪದ "ಹುಲುಸು" ತಮ್ಮ ತಿಪ್ಪೆಯ ಗೊಬ್ಬರದ ಜೊತೆ ಸೇರಿ ತಮ್ಮ ಬೆಳೆ ಹುಲುಸಾಗಿ ಬೆಳೆಯಲು ಕಾರಣವಾಗುತ್ತದೆ ಎಂಬ ನಂಬಿಕೆ ಇದೆ. ಆ ದಿನಗಳಲ್ಲಿ ಮಾಡಿದ ಅಡುಗೆ, ಕೋಣನ ಮಾಂಸ ಎಲ್ಲವನ್ನೂ ಹರಿಜನರು ಹಂಚಿಕೊಂಡು ಉಣ್ಣುತ್ತಾರೆ.

ಕೋಗಳಿಯಲ್ಲಿ ನಿಜವಾದ ಕೋಣವನ್ನು ಕಡಿಯುವ ಮೊದಲು ಗೋಧಿ ಹಿಟ್ಟಿನ ಕೋಣವನ್ನು ಕಡಿಯುವುದು ವಿಶೇಷವಾಗಿ ಗಮನಿಸಬೇಕಾದ್ದು. ಹಿಂದೊಮ್ಮೆ ಊರಲ್ಲಿದ್ದ ಜೈನರು ಸಂಪೂರ್ಣ ಅಹಿಂಸಾವಾದಿಗಳಾದ್ದರಿಂದ ಅವರಿಗಾಗಿ ಊರ ಕೆಳವರ್ಗದ ಜನರು

ದೇವತೆಯ ತೃಪ್ತ್ಯರ್ಥವಾಗಿ ಗೋಧಿ ಹಿಟ್ಟಿನ ಕೋಣವನ್ನು ಸಾಂಕೇತಿಕವಾಗಿ ಕಡಿಯುತ್ತಿದ್ದರೆಂದು ಕಾಣುತ್ತದೆ (ಆಗ ದುರ್ಗವ್ವನ ಗುಡಿ ಬೇರೆಡೆ ಇದ್ದಿರಬಹುದು). ಊರಿಂದ ಜೈನಧರ್ಮ ಮಾಯವಾದ ಮೇಲೆ ಜೈನರೆಲ್ಲ ವೀರಶೈವರಾದ ಮೇಲೆ ಎಲ್ಲ ಊರುಗಳಲ್ಲಿರುವಂತೆ ಬದುಕಿರುವ ಕೋಣವನ್ನು ಕಡಿಯುವ ಪದ್ಧತಿ ಜಾರಿಗೆ ಬಂದರೂ ಹಿಂದೆ ಗೋಧಿ ಹಿಟ್ಟಿನ ಕೋಣವನ್ನು ಬಲಿಕೊಡುತ್ತಿದ್ದ ಪದ್ಧತಿ ಮುಂದುವರಿಯಿತು. ಇದೊಂದು ಸಾಧ್ಯ ಪ್ರಮೇಯ. ಜನ್ನನ ಯಶೋಧರ ಚರಿತೆಯಲ್ಲಿ ಜೈನಧರ್ಮೀಯ ರಾಜನು ದೇವಿಗೆ ಹಿಟ್ಟಿನ ಕೋಳಿಯನ್ನು ಬಲಿಯಾಗಿ ಕೊಟ್ಟರೂ ಅವನಿಗೆ ಪಾಪ ಅಂಟದೆ ಬಿಡಲಿಲ್ಲ. ಏಕೆಂದರೆ ಅವನು ಯಾವುದೇ ಜೀವಿಯನ್ನು ವಾಸ್ತವವಾಗಿ ಬಲಿ ಕೊಡದಿದ್ದರೂ ಮಾನಸಿಕವಾಗಿ ಆವನು ಹಿಂಸಾ ಮೂಲವಾದ ಬಲಿಪದ್ಧತಿಗೆ ತನ್ನ ಒಪ್ಪಿಗೆ ಮುದ್ರೆ ಕೊಟ್ಟಂತಾಗಿತ್ತು. ಈ ಕಾರಣವಾಗಿ ಅವನು ಬೇರೆ ಬೇರೆ ಜನ್ಮಗಳನ್ನು ಎತ್ತಿ ಪಡಬಾರದ ಕಷ್ಟಗಳನ್ನು ಅನುಭವಿಸಿ ಬಳಿಕ ಕರ್ಮ ಬಂಧನದಿಂದ ಮುಕ್ತನಾಗುತ್ತಾನೆ. ಹಿಂದೊಮ್ಮೆ ಜೈನರು ವಾಸವಾಗಿದ್ದ ಹಳೆಯ ಬೆಳ್ಗೊಳದಲ್ಲಿ (ಶ್ರವಣಬೆಳ್ಗೊಳ ಪಕ್ಕದ ಊರು) ಜೈನರು ಈಗ ಯಾರೂ ಇಲ್ಲದಿದ್ದರೂ ಅಲ್ಲಿಯ ಮಾಂಸಾಹಾರಿ ಜನ ಪ್ರಾಣಿಗಳನ್ನು ಊರ ಹೊರಕ್ಕೆ ಒಯ್ದು ಕೊಂದು ಊರೊಳಕ್ಕೆ ಮಾಂಸ ತರುತ್ತಾರೆ ಎಂಬುದು ಇಲ್ಲಿ ನೆನಪಾಗುತ್ತದೆ. ಕೋಗಳಿ ಊರು ಇತಿಹಾಸ ಮತ್ತು ಜಾನಪದ ಎರಡರ ದೃಷ್ಟಿಯಿಂದಲೂ ಇನ್ನೂ ಹೆಚ್ಚಿನ ಅಧ್ಯಯನ ಕೈಕೊಳ್ಳಬೇಕಾದ ಊರು ಎಂಬಲ್ಲಿ ಅನುಮಾನವಿಲ್ಲ.

ಕೋಗಳಿ ಶಾಸನಗಳಲ್ಲಿ ಆ ಊರನ್ನು "ಪಟ್ಟಣಂಗಳ ಚಕ್ರವರ್ತಿ" ಎಂದು ಹೊಗಳಲಾಗಿದೆ. ಆ ಊರಲ್ಲಿ ಜೈನರಲ್ಲದೆ ಬ್ರಾಹ್ಮಣರು, "ಗಾವುಂಡುಗಳು", ನಕರರು (ವರ್ತಕರು), "ಪನ್ನಸಿಗರು" (ಕಂದಾಯ ವಿನಾಯ್ತಿ ಪಡೆದವರು) ಇವರಿದ್ದರು. "ಪಂಚಮಠ ಸ್ಥಾನ"ವೂ ಅಲ್ಲಿದ್ದಿತು. ಆ ಊರಲ್ಲಿ "ಉದ್ಭವಲಿಂಗ"ಗಳಿದ್ದ ಉಲ್ಲೇಖವೂ ಉಂಟು. (ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ್. 9.1 : ಸಂಖ್ಯೆ 56,77,106, 117, 130, 317, 346, 347)

ಕೋಗಳಿಯಲ್ಲಿ ಮಾಹೇಶ್ವರನ ಜಾತ್ರೆಯ ಬಗ್ಗೆ ದೊರಕಿದ ವಿವರಗಳು ನಾನು ಹಿಂದೆ ಆ ಬಗ್ಗೆ ಸಂಗ್ರಹಿಸಿದುವೇ ಆಗಿದ್ದುವು. ಸಮೀಪದ ಒಳ ಬಳ್ಳಾರಿ ಊರಲ್ಲಿ ಈಗಲೂ ವಿಭೂತಿ ಮಾಡುವ ಜನರಿದ್ದಾರೆ (ಬೂದಿ ಆಯ್ನೋರು) ಎಂದೂ, ಅಲ್ಲಿಗೆ ಹೋದರೆ ಆ ವಿವರಗಳನ್ನು ಪಡೆಯಬಹುದೆಂದೂ ತಿಳಿಯಿತು. ಒಮ್ಮೆ ಭಸ್ಮ ಮಾಡುವ ಕಾರ್ಯ ಆರಂಭಿಸಿದರೆ, ಅದಕ್ಕೆ ನೂರೊಂದು ಹಸುಗಳ ಸೆಗಣಿಯೇ ಆಗಬೇಕು (ಸ್ಥಲಗಳು ನೂರೊಂದು ತಾನೇ ! ವೀರಶೈವ ಧರ್ಮದಲ್ಲಿ ನೂರೊಂದು ಸಂಖ್ಯೆಗೆ ವಿಶೇಷ ಸ್ಥಾನವಿದೆ)

ಮಧ್ಯಾಹ್ನ ಭೇಟಿಯಾಗಿದ್ದ ಗಂಗಾನಾಯ್ಕ ಸಂಜೆ ಬಂದು ತನ್ನ ತಾಂಡಾಕ್ಕೆ ಬರಲು ಆಹ್ವಾನ ಕೊಟ್ಟಾಗ ಬಹು ಸಂತೋಷವಾಯಿತು. ಎರಡು ಕಾರಣಗಳು : ಮುಖಂಡರ ಮನೆಯಲ್ಲಿ ನಾನು ಅಷ್ಟು ಉತ್ಸಾಹದಿಂದ ಉಳಿಯುವ ಸ್ಥಿತಿಯಲ್ಲಿರಲಿಲ್ಲ. ಬೇರೆ ದಾರಿ

ಇಲ್ಲದಿದ್ದರೆ ಅದೂ ಒಂದು ಅನುಭವ ಎಂದು ಸ್ವಾಗತಿಸುತ್ತಿದ್ದೆ. ಆದರೆ ಪ್ರಬಲ ಕಾರಣ, ಲಂಬಾಣಿಗಳ ವಿಷಯದಲ್ಲಿ ನನಗೆ ಇದ್ದ ವಿಶೇಷ ಮಮತೆ. ಬಾಲ್ಯದಲ್ಲಿ ನನ್ನ ಹಳ್ಳಿಗೆ ಬರುತ್ತಿದ್ದ ಲಂಬಾಣಿಗಳ ಹಾಡು ಕುಣಿತಗಳನ್ನು ಕೇಳಿ ಸಂತೋಷಿಸಿದ್ದೆ. ಅದಕ್ಕಿಂತ ಹೆಚ್ಚಾಗಿ ನನ್ನ ಸಂಶೋಧನ ಜೀವನದ ಆರಂಭದ ದಿನಗಳಲ್ಲಿ ಚನ್ನಗಿರಿ ಸಮೀಪದ ತಾಂಡವೊಂದರ ವಿಸ್ತೃತ ಅಧ್ಯಯನವನ್ನು ನಡೆಸಿ ಅವರ ಭಾಷೆ, ಹಾಡು, ಕತೆ, ನಂಬಿಕೆಗಳ ಬಗ್ಗೆ ಈಗಲೂ ಅನೇಕರಿಗೆ ಮೆಚ್ಚುಗೆಯಾಗಿರುವ ಒಂದು ಸಂಪ್ರಬಂಧವನ್ನು ಪ್ರಕಟಿಸಿದೆ. ಬಡವರಾಗಿದ್ದರೂ ತಮ್ಮ ಪರಂಪರೆಯ ಬಗ್ಗೆ ತೀವ್ರ ಅಭಿಮಾನವನ್ನು ಉಳಿಸಿಕೊಂಡಿದ್ದ ಆ ಮುಗ್ಧ ಜನಾಂಗದ ಕೆಲವು ಅವಿವಾಹಿತ ಸ್ಫುರದ್ರೂಪಿ ಹೆಣ್ಣುಮಕ್ಕಳನ್ನು ಕಂಡು ಮದುವೆಯಾಗದೆ ಬ್ರಹ್ಮಚಾರಿಯಾಗಿಯೇ ಉಳಿಯುತ್ತೇನೆ ಎಂಬ ನನ್ನ ಸಂಕಲ್ಪವನ್ನು ಆಗ ಶಪಿಸಿದ್ದುಂಟು. ಒಟ್ಟು ಆ ಎಲ್ಲ ನೆನಪು ಕೋಗಳಿ ತಾಂಡಕ್ಕೆ ನಾನು ಹೋಗಲು ನಿಜವಾದ ಕಾರಣವಾಗಿತ್ತು.

ಸಂಜೆ ಕತ್ತಲಾಗುತ್ತಿದ್ದಂತೆ ಮುಖಂಡರಿಗೂ ಅವರ ಮನೆಯವರಿಗೂ ನನ್ನ ಕೃತಜ್ಞತೆಗಳನ್ನು ತಿಳಿಸಿ ನಸುಗತ್ತಲಲ್ಲಿ ಹೊರಟರೆ, ದಾರಿಯಲ್ಲಿ ಒಂದು ಮಂಡರಗಪ್ಪೆ ಚೇಳು ಎದುರಾಯಿತು. ಅಲ್ಲೇ ಹೊಲವೊಂದರಲ್ಲಿ ರಾಶಿ ಹಾಕಿದ್ದ ಕೂಳೆಗೆ ಬೆಂಕಿ ಹಾಕಿ ಸುಡುತ್ತಿದ್ದರು. - ನಾಯಕ್, -ರಾಠೋಡ್, -ಚವಾಣ್, -ಪವಾರ್ ಇತ್ಯಾದಿ ನಾಮಾಂತ್ಯಗಳನ್ನು ಹೊಂದಿರುವ ಜನರ ಆ ತಾಂಡದಲ್ಲಿ ಕೇವಲ ಲಂಬಾಣಿಗಳೇ ವಾಸವಾಗಿದ್ದರು. ಆ ಊರಿಗೆ ವಿದ್ಯುಚ್ಛಕ್ತಿಯ ಸೌಕರ್ಯ ದೊರಕಿತ್ತು. ಕೆಲವರು ವಿದ್ಯಾವಂತರೂ ಆಗಿದ್ದರು. ಆ ರಾತ್ರಿ ತಾಂಡದ ಮಕ್ಕಳಿಗೆ ಕತೆ ಹೇಳಿದ್ದಲ್ಲದೆ ಕೆಲ ಹೆಂಗಸರ ಬಾಯಿಂದ ಹಾಡುಗಳನ್ನು ಹೇಳಿಸಿದೆ. ಆ ದಿನ ಉಳಿದವರಿಗಿಂತ ನಾನೇ ಹೆಚ್ಚು ಮಾತನಾಡುವುದಿತ್ತು. ಅವರ ಜನಾಂಗದ ಬಗ್ಗೆ ನಾನು ಮಾಡಿರುವ ಕೆಲಸವನ್ನು, ಅವರ ದೇವರಾದ ಸೇವಾಭಾಯಿ ಬಗ್ಗೆ, ಅವರ ಅಭಿಮಾನದ ಹೂನಾ ಸತ್ತಿಯ ಬಗ್ಗೆ (ಹೂನಾ ಎಂಬ ಮಹಾಸತಿ) ಇದ್ದ ಕತೆಗಳನ್ನು ಅವರಿಗೆ ಸ್ವಲ್ಪ ವಿಸ್ತಾರವಾಗಿ ಹೇಳಿದೆ. ಸಹಜವಾಗಿಯೇ ಅವರು ತುಂಬು ಆಸಕ್ತಿಯಿಂದ ಅದನ್ನೆಲ್ಲ ಕೇಳಿದರು. ರಾತ್ರಿ ಅಲ್ಲೇ ಗಂಗಾನಾಯ್ಕನ ಮನೆಯಲ್ಲಿ ಊಟ ಮಾಡಿ, ಅವನ ಹೆಂಚಿನ ಮನೆಯ ಕಟ್ಟೆಯ ಮೇಲೆ ಸುಖವಾಗಿ ನಿದ್ರಿಸಿದೆ. ಆ ಜನ ಆ ದಿನ ನನ್ನನ್ನು ಬಹುವಾಗಿ ಉಪಚರಿಸಿದರು. ಅವರ ಶುಭ್ರ ಮನಸ್ಸಿನ ಪ್ರೀತಿ ವಿಶ್ವಾಸಗಳಿಗೆ ನನ್ನ ನಮಸ್ಕಾರಗಳು*.

## ಹಗರಿಬೊಮ್ಮನಹಳ್ಳಿ

ಬೆಳಿಗ್ಗೆ (13.6.85) ಚಾ ಕುಡಿದು ಗಂಗಾನಾಯ್ಕನ ಮಗ ದುರ್ಗಾನಾಯ್ಕನ ಜೊತೆ ಹಗರಿಬೊಮ್ಮನಹಳ್ಳಿಗೆ ಹೊರಟೆ. ಸಾಕಷ್ಟು ಮರ ಗಿಡಗಳಿದ್ದರೂ ಎಲ್ಲವೂ ಬೆದ್ದಲೆ. ಹೊಲಗಳು

---

* ಒಂದು ವರ್ಷದ ಬಳಿಕ ಗಂಗಾನಾಯ್ಕ ಬೆಂಗಳೂರಿನಲ್ಲಿ ಹೊಸದಾಗಿ ಕಟ್ಟಿದ ನನ್ನ ಮನೆಗೆ ಬಂದು ಅದೇ ವಿಶ್ವಾಸದಿಂದ ಮಾತನಾಡಿಸಿಕೊಂಡು ಹೋದ. ಬರುವಾಗ ಊರಿಂದ ನನಗಾಗಿ ಸೇಂಗ ತಂದ ನೆನಪು.

ಮಳೆಗಾಗಿ ಕಾಯುತ್ತಿದ್ದುವು. ಅಲ್ಲಲ್ಲಿ ಹೊಲಗಳಲ್ಲಿ ಪಂಪ್ ಹಾಕಿಸಿ ನೀರಾವರಿ ಮಾಡುತ್ತಿದ್ದುದು ಕಾಣಿಸಿತು.

ದಾರಿಯಲ್ಲಿ ಮಾಲ್ವಿ ಎಂಬ ಚಿಕ್ಕ ಊರು ಸಿಕ್ಕಿತು. ಊರ ಹೊರಗೆ ಹನುಮಂತನ ಗುಡಿ ಪಕ್ಕದಲ್ಲಿ ಜೈನರ ನಿಸಿದಿ ಕಲ್ಲು ಕಾಣಿಸಿತು. ಒಂದು ಕಾಲಕ್ಕೆ ಅಲ್ಲಿ ಜೈನರು ಇದ್ದಿರಬೇಕು. ಅಲ್ಲೇ ಇದ್ದ ಗಜಲಕ್ಷ್ಮಿ ಕಲ್ಲಿಗೆ ಪೂಜೆ ಸಲ್ಲುತ್ತಿದೆ. ಹೆರಿಗೆ ಸರಿಯಾಗಿ ಆಗದಿದ್ದರೆ ಮಗುಚಿ ಹಾಕುತ್ತಾರೆ. ಹೆರಿಗೆ ಆದಮೇಲೆ ಅದರ ವಿಗ್ರಹ ಕಾಣಿಸುವಂತೆ ಮೇಲ್ಮುಖವಾಗಿ ಹಾಕುತ್ತಾರೆ. ಈ ಪದ್ಧತಿ ಆ ಕಡೆ ವ್ಯಾಪಕವಾಗಿ ಇದೆ (ಸಮೀಪದ ಕೋಡಿಹಳ್ಳಿಯಲ್ಲಿಯೂ ಅಂತಹ ಗಜಲಕ್ಷ್ಮಿ ವಿಗ್ರಹ ಇದೆಯಂತೆ).

ಮುಂದೆ ಸಿಕ್ಕ ಅರೆಗೊಂಡನಹಳ್ಳಿಯ ಒಬ್ಬ ಅಜ್ಜಿ ತೀರ ಸ್ವಾಭಿಮಾನಿ ಎನ್ನಿಸಿತು. ಅವಳ ಇಬ್ಬರು ಗಂಡುಮಕ್ಕಳಿಗೂ ಮದುವೆಯಾಗಿ ಇಬ್ಬರು ಸೊಸೆಯರಿದ್ದಾರೆ. ನನ್ನ ಜೊತೆ ಸ್ವಲ್ಪ ಹರಟೆ ಹೊಡೆಯಲು ಮುಂದಾದ ಅಜ್ಜಿ ನನ್ನ ಮಗಳ ವಿಷಯ ಬಂದಾಗ, ವರದಕ್ಷಿಣೆ ಕೊಡದೆ ಮದುವೆ ಮಾಡಬೇಕು ಎಂದು ನನಗೆ ಬುದ್ಧಿವಾದ ಹೇಳಿದಳು. ಪ್ರತಿ ಗುರುವಾರ ಎತ್ತು ಕುರಿಗಳ ಮಾರಾಟದ ಸಂತೆ ನಡೆಯುವ ಒಳ್ಳೆಯ ಜಾಗಗಳು ಅದು ಮತ್ತು ಹಳೆಯ ಬೊಮ್ಮನಹಳ್ಳಿ ಕೂಡ. ಅಲ್ಲಿನ ಅಂಗಡಿಗಳಲ್ಲಿ ಎತ್ತುಗಳಿಗೆ ಹಾಕುವ ಎಲ್ಲ ಬಗೆಯ ಅಲಂಕಾರ ಸಾಮಗ್ರಿಗಳು ದೊರಕುತ್ತವೆ. ಅಲಂಕಾರ ಜೂಲುಗಳು, ಮೂಗುದಾಣ, ಕಾಲಿಗೆ ಲಾಳ, ಮಿಣಿ, ಹಗ್ಗ, ಕೋಡಣಸು ಇತ್ಯಾದಿ. ಅದೊಂದು ಜೀವಂತ ಜಾನುವಾರು ಜಾನಪದ ವಸ್ತುಸಂಗ್ರಹಾಲಯ ಮಾತ್ರವಲ್ಲ, ಜೀವಂತ ಪ್ರದರ್ಶನಾಲಯ. ಎತ್ತುಗಳ ಕೊಳ್ಳುವಿಕೆ, 'ಸಾಟಿ' (ಒಂದು ಎತ್ತನ್ನು ಕೊಟ್ಟು ಅದರ ಬದಲು ಇನ್ನೊಂದನ್ನು ಪಡೆಯುವುದು) ಇವು ನಿರಂತರವಾಗಿ ಒಂದು ರೀತಿ ಪ್ರತಿ ದಿನವೂ ಒಂದಲ್ಲ ಒಂದು ಪ್ರಮಾಣದಲ್ಲಿ ನಡೆಯುತ್ತವೆ. ಎತ್ತುಗಳ ಸುಳಿ, ಸುಳಿಗಳ ಅರ್ಥ, ಶುಭ ಅಶುಭ ಮತ್ತು ಎತ್ತು ಮಾರಾಟದ ಸಂದರ್ಭದಲ್ಲಿ ಬಳಸಲಾಗುವ ಗುಪ್ತ ಸಂಕೇತಗಳು ಇತ್ಯಾದಿ ಕುರಿತಂತೆ ಇಲ್ಲಿ ಒಂದು ಕಡೆ ಒಟ್ಟಿಗೆ ದೊರಕುವ ಜಾನುವಾರ ಜಾನಪದ ಸಾಮಗ್ರಿಯು ಒಂದು ಪ್ರತ್ಯೇಕ ಪಿಎಚ್.ಡಿ.ಗೆ ವಸ್ತುವಾಗಬಲ್ಲುದು. ನಾನು ನೋಡುತ್ತಿದ್ದಂತೆ, ಒಂದು ಎತ್ತನ್ನು ಮಾರಿ ಹಣ ಪಡೆದ ವ್ಯಕ್ತಿ ಅದನ್ನು ಅದರ ಹೊಸ ಯಜಮಾನನಿಗೆ ಒಪ್ಪಿಸುವ ಮುನ್ನ ಅದಕ್ಕೆ ಪೂಜೆ ಮಾಡಿ ಕಣ್ಣೀರು ಸುರಿಸುತ್ತ ಪಾದಕ್ಕೆ ನಮಸ್ಕರಿಸಿದ್ದು ಒಂದು ಅತ್ಯಂತ ಭಾವುಕ ದೃಶ್ಯವಾಗಿತ್ತು. ನನಗೆ ತಿಳಿದಂತೆ ಅರೆಗೊಂಡನಹಳ್ಳಿ, ಹಳೆ ಬೊಮ್ಮನಹಳ್ಳಿಗಳು ಜಾನುವಾರು ಜಾನಪದದ ಬಹು ದೊಡ್ಡ ಕೇಂದ್ರಗಳು; ಅಂಥ ಒಂದು ಕೇಂದ್ರ ಬೇರೆಡೆ ಇದೆಯೇ ತಿಳಿಯದು.

ಬೆಳಿಗ್ಗೆ ಹತ್ತು ಗಂಟೆಗೆ ಚಿಕ್ಕ ಹಗರಿ ನದಿ ದಾಟಿ ಹಗರಿಬೊಮ್ಮನಹಳ್ಳಿ ತಲಪಿ ನದಿ ದಂಡೆಯ ಮೇಲಿದ್ದ ಪ್ರವಾಸಿ ಮಂದಿರಕ್ಕೆ ಹೋಗುತ್ತಿದ್ದಂತೆ ಒಂದು ಅಚ್ಚರಿ ಕಾದಿತ್ತು. ವಿರೂಪಾಕ್ಷಗೌಡ, ಗುರುಮೂರ್ತಿ ಪೆಂಡಕೂರು, ಹುರಿಕಡ್ಲೆ ಶಿವಕುಮಾರ್, ಕೊಟ್ರಪ್ಪ, ಸ್ಥಳೀಯ ತಹಸೀಲ್ದಾರ್, ಜೂನಿಯರ್ ಇಂಜಿನಿಯರ್, ಡಾಕ್ಟರ್ ಹೀಗೆ ಹಲವರು ಹಾರ ಹಿಡಿದು ನನಗಾಗಿ ಕಾದಿದ್ದರು. ಆ ಎಲ್ಲ ಗೌರವ ನನ್ನ ಕೈಗೊಂಡಿದ್ದ ಧ್ಯೇಯಕ್ಕೆ ಎಂಬುದರ

ಬಗ್ಗೆ ಪೂರ್ಣ ಅರಿವು ನನಗಿತ್ತು. ಯುವಕರ ಸಂಘದ ಪದಾಧಿಕಾರಿಗಳ ಪರಿಚಯವಾಯ್ತು. ಊಟ, ವಿಶ್ರಾಂತಿ ಆದ ಮೇಲೆ ಸಾಕಷ್ಟು ಹರಟೆ ಹೊಡೆದೆವು. ಸಂಜೆ ಪಕ್ಕದ ಹಳೆ ಬೊಮ್ಮನ ಹಳ್ಳಿಗೆ ಹೋದೆವು. ಅದು ಹಿಂದೆ ಆಗಲೇ ಹೇಳಿದ್ದಂತೆ ಜಾನುವಾರು ಜಾನಪದದ ಜೀವಂತ ಕೋಶ. ಅಲ್ಲಿ ಹಲವಾರು ಗೋಗ್ರಹಣದ ವೀರಗಲ್ಲುಗಳೂ ಸಮೀಪದ ಕೊಂಡೆಕಟ್ಟೆಯಲ್ಲಿ ಒಂದು ಮಾಸ್ತಿಕಲ್ಲೂ ಕಾಣಿಸಿದುವು. ಹೆರಿಗೆ ಸಮಯದಲ್ಲಿ ಜನರು ಆಶ್ರಯಿಸುವ ಗಜಲಕ್ಷ್ಮಿ ಶಿಲ್ಪವೂ ಅಲ್ಲಿತ್ತು. ಅಲ್ಲಿ ನಿಡುಮಾಮಿಡಿ ಜಗದ್ಗುರುಗಳ ಭಕ್ತರಿರುವ ಒಂದು ಸಾಂಪ್ರದಾಯಕ ವೀರಶೈವ ಕುಟುಂಬದವರ ಪರಿಚಯವಾಯಿತು. ಅಲ್ಲೇ ವನ್ಯತಮ್ಮನ (ವನತ್ಯಮ್ಮ = ಹೊನ್ನತ್ಯಮ್ಮ) ಗುಡಿಯೂ ಅಲ್ಲೇ ಸಮೀಪ ಹಾಡುತ್ತಿದ್ದ ಒಬ್ಬ ಹೆಂಡಗುಡುಕನೂ ಇದ್ದುವು. ರಾತ್ರಿ ಸಾಹಿತ್ಯ ಪ್ರೇಮಿ ಗುರುಮೂರ್ತಿ ಪೆಂಡಕೂರು ಮನೆಯಲ್ಲಿ ಊಟ ಆಯಿತು.

ಮಾರನೆಯ ದಿನ ಬೆಳಿಗ್ಗೆ (14.6.85) ಕಾಫಿ ಕುಡಿದು ಪೇಪರ್ ಓದುತ್ತಿರುವಾಗ ಡಾ. ಕಲಬುರ್ಗಿಯವರು ಪಂಪನ ಬಗ್ಗೆ ದಿಗಿಲು ಹುಟ್ಟಿಸುವಂತಹ ಸಂಗತಿಯೊಂದನ್ನು ಹೇಳಿದ್ದು ಪತ್ರಿಕೆಗಳಲ್ಲಿ ಪ್ರಮುಖವಾಗಿ ವರದಿಯಾಗಿದ್ದುದನ್ನು ಹಗರಿ ಬೊಮ್ಮನ ಹಳ್ಳಿಯ ಚಿದಾನಂದಗೌಡರು ನನ್ನ ಗಮನಕ್ಕೆ ತಂದರು. “ಪಂಪ ಮತಾಂತರ ಮಾಡದಿದ್ದರೆ ಒಬ್ಬ ಮಹಾಕವಿ ಆಗುತ್ತಿರಲಿಲ್ಲ..... ಆತನಿಗೆ ಆತನ ರಾಜ ಅರಿಕೇಸರಿ ಧರ್ಮಪುರಿ ಮತ್ತು ಅಗ್ರಹಾರಗಳ ನಿರ್ವಹಣೆಯನ್ನು ವಹಿಸಿಕೊಟ್ಟ. ಬ್ರಾಹ್ಮಣರು ಆತನ ಬಗ್ಗೆ ಅಸಂತುಷ್ಟರಾಗಿದ್ದರು.... 40ನೆಯ ವಯಸ್ಸಿನ ನಂತರ ಆತ ಏನನ್ನೂ ಬರೆಯದೆ ಇದ್ದುದರಿಂದ ಪ್ರಾಯಶಃ ಆತ ಅಕಾಲ ಮರಣಕ್ಕೆ ತುತ್ತಾಗಿರಬಹುದು” ಎಂದು ಅವರು ಹೇಳಿದ್ದಂತೆ ಒಂದು ಪತ್ರಿಕೆಯಲ್ಲಿ ವರದಿಯಾಗಿತ್ತು (ಪ್ರಜಾವಾಣಿ. 11.6.85). “ಡಾ. ಕಲಬುರ್ಗಿ ಅವರು ಪಂಪನಿಗೆ ಅರಿಕೇಸರಿ ದೊರೆಯಿಂದ ಬಂದ ಧರ್ಮಪುರ ಅಗ್ರಹಾರದಲ್ಲಿನ ಬ್ರಾಹ್ಮಣರು ಪಂಪ ಮಹಾಕವಿಯನ್ನು ಕೊಂದು ಹಾಕಿರಬಹುದೇ ಎಂಬ ಪ್ರಶ್ನೆಯನ್ನು ಎತ್ತಿ ಇಡೀ ಸಭೆ ನಿಬ್ಬೆರಗಾಗಿ ತಡವರಿಸುವಂತೆ ಮಾಡಿದರು”ಎಂದು ಇನ್ನೊಂದು ಪತ್ರಿಕೆ “ಪಂಪನನ್ನು ಬ್ರಾಹ್ಮಣರು ಕೊಲೆ ಮಾಡಿದರೇ” ಎಂಬ ಶೀರ್ಷಿಕೆಯಲ್ಲಿ ವರದಿಮಾಡಿತ್ತು (ಕನ್ನಡಪ್ರಭ. 11.6.85). ನನಗೆ ಆ ನಿರಾಧಾರ ಹೇಳಿಕೆ ಕಸಿವಿಸಿ ಉಂಟುಮಾಡಿತು. ಮತ್ತು ಅದನ್ನು ಮಿತ್ರರಿಗೆ ಸ್ಪಷ್ಟಪಡಿಸಿದೆ. ಕಲಬುರ್ಗಿಯವರು ಆ ಬಗ್ಗೆ ಸ್ಪಷ್ಟೀಕರಣ ನೀಡಿ - “ಬ್ರಾಹ್ಮಣರಿಗೆ ಮಾತ್ರ ಕೊಡಬೇಕಾದ ಮತ್ತು ಬ್ರಾಹ್ಮಣರಿಗೆ ಮಾತ್ರ ಕೊಟ್ಟಿದ್ದ ಅಗ್ರಹಾರ ಧರ್ಮಪುರವನ್ನು ಅವರಿಂದ ಬಿಡಿಸಿ ಅಬ್ರಾಹ್ಮಣನಾದ ಪಂಪನಿಗೆ ಕೊಡಲಾಯಿತು. ಇದರಿಂದ ಬ್ರಾಹ್ಮಣರು ಅಸಂತುಷ್ಟರಾಗಿರಬಹುದು. ತನ್ನ 40ನೇ ವಯಸ್ಸಿನ ತರುವಾಯ ಪಂಪ ಸಾಹಿತ್ಯ ರಚನೆ ಮಾಡಿದ ಬಗ್ಗೆ ಆಧಾರಗಳಿಲ್ಲದಿರುವುದರಿಂದ ಅನೇಕ ಸಂಖ್ಯೆಯಲ್ಲಿ ಜೈನರನ್ನು ಸ್ಥಾಪಿಸುವುದರ ಮೂಲಕ ತಮ್ಮನಾದ ಜಿನವಲ್ಲಭ ಬ್ರಾಹ್ಮಣರ ನೆಲೆಯಾದ ಧರ್ಮಪುರವನ್ನು ಜೈನನೆಲೆಯನ್ನಾಗಿ ಪರಿವರ್ತಿಸಿದನೆಂದು ಕುರ್ಕಿಯಾಲ ಶಾಸನ ಉತ್ಸಾಹದಿಂದ ಹೇಳುತ್ತದೆ. ಇದರಿಂದ ಇನ್ನೂ ಕ್ಷುದ್ರರಾದ ಬ್ರಾಹ್ಮಣರಿಂದ ಧರ್ಮಪುರ ಹಾಳಾಗಿರಬೇಕು.. ನನ್ನ ಅಭಿಪ್ರಾಯದಲ್ಲಿ ಒಟ್ಟಿನಲ್ಲಿ

ಪಂಪ ಯಾವುದೋ ಕಾರಣಗಳಿಂದಾಗಿ ಅಕಾಲ ಮರಣಕ್ಕೆ ತುತ್ತಾಗಿರಬೇಕು..." (ಕನ್ನಡಪ್ರಭ. 15.6.85) ಆಕರ್ಷಕ ವಿಷಯಗಳು ತಮಗೆ ಸತ್ಯವೆಂದು ತೋರಿದ ಕ್ಷಣ ದಿಢೀರನೆ ಅದನ್ನು ಹೇಳುವುದು ಡಾ. ಕಲಬುರ್ಗಿಯವರ ಸಂಶೋಧನೆಯ ಮುಖ್ಯ ದೌರ್ಬಲ್ಯಗಳಲ್ಲೊಂದು. ಮುಂದೆ ನಾನು ಅವರ ಅಭಿಪ್ರಾಯಗಳಿಗೆ ನನ್ನ ಪ್ರತಿಕ್ರಿಯೆಯನ್ನು (ಕನ್ನಡಪ್ರಭ. 23.6.85) ವ್ಯಕ್ತಪಡಿಸಿದೆ (ಆ ಪತ್ರಕ್ಕೆ, ಅನುಬಂಧ 1 - ಪುಸ್ತಕದ ಕೊನೆ ನೋಡಿ).

ಹಗರಿ ಬೊಮ್ಮನಹಳ್ಳಿಯಲ್ಲಿ ನಾನು ಉಳಿದಿದ್ದ ಪ್ರವಾಸಿ ಮಂದಿರಕ್ಕೆ ಹಲವರು ಬಂದು ಮಾತನಾಡಿಸಿಕೊಂಡು ಹೋದರು. ಗುರುಮೂರ್ತಿ ಮತ್ತು ವಿರೂಪಾಕ್ಷ ಗೌಡರಂತಹ ಸಾಹಿತ್ಯ ಪ್ರಿಯರಿಂದಾಗಿ ಅಲ್ಲಿ ಒಂದು ಸಾಹಿತ್ಯಕ ಸಾಂಸ್ಕೃತಿಕ ವಾತಾವರಣ ನಿರ್ಮಾಣವಾಗಿದೆಯೆಂದು ಅನ್ನಿಸಿತು. ಅಲ್ಲಿಂದ ಒಳ್ಳೆಯ ಕೃತಿಗಳೂ ಪ್ರಕಾಶನಗೊಂಡಿವೆ. ಬೆಳಿಗ್ಗೆಯೆಲ್ಲ ಕುಳಿತು ಹಿಂದಿನ ದಿನಚರಿಗಳನ್ನು ಬರೆದೆ. ಮಧ್ಯಾಹ್ನ ಊಟ ವಿಶ್ರಾಂತಿಗಳ ಬಳಿಕ ರಾಷ್ಟ್ರೀಯ ಸ್ವಯಂ ಸೇವಕ ಸಂಘದವರು ನಡೆಸುತ್ತಿರುವ ರಾಷ್ಟ್ರೋತ್ಥಾನ ಶಾಲೆಗೆ ನನ್ನನ್ನು ಅತಿಥಿಯಾಗಿ ಕರೆದೊಯ್ದರು. ಅವರು ತಂದ ವಾಹನವನ್ನು ನಿರಾಕರಿಸಿ ನಡೆದೇ ಹೋದೆ. ವಾಪಸ್ ನಡೆದೇ ಬಂದೆ. ಬಹು ಶಿಸ್ತುಬದ್ಧ ಶಾಲೆ ಅದು. ಮಕ್ಕಳಿಗೆ ಶ್ರೇಷ್ಠ ಶಿಕ್ಷಣ ಕೊಡುವುದಲ್ಲದೆ ದೇಶಾಭಿಮಾನವನ್ನೂ ಭಾರತೀಯ ಸಂಸ್ಕೃತಿಯ ಬಗ್ಗೆ ಪ್ರೀತ್ಯಾದರಗಳನ್ನೂ ಮೂಡಿಸುವ ಪ್ರಯತ್ನ ಅಲ್ಲಿನ ವ್ಯವಸ್ಥೆಯಲ್ಲಿದೆ. ಸಂಜೆ ತಿರುಗಾಡಲು ಹೋದಾಗ ನದಿ ದಂಡೆ ಮೇಲಿನ ಬಂಡೆ ತುದಿಯ ಬಸವಣ್ಣನ ಗುಡಿಯ ಕೆಳಗೆ ಒಂದು ಸೂರ್ಯ ವಿಗ್ರಹವಿತ್ತು. ಸೂರ್ಯ ವಿಗ್ರಹಗಳ ಕಾಲುಗಳನ್ನು ಎತ್ತರದ ಪಾದರಕ್ಷೆಗಳಿಂದ ಮುಚ್ಚಿರುತ್ತಾರೆ. ಆದರೆ ಇಲ್ಲಿ ಕಾಲುಗಳು ಕಾಣಿಸುತ್ತಿದ್ದವು. ಸಂಜೆ ಸಾಕಷ್ಟು ಸೇಂಗ, ರುಚಿಯಾದ ಬೆಲ್ಲ ತಿಂದಿದ್ದರಿಂದ ಊಟ ಬೇಡವಾಗಿತ್ತಾದರೂ ರಾತ್ರಿ ಊಟಮಾಡಬೇಕಾಯ್ತು. ಸಂಜೆ ಗಂಗಾನಾಯ್ಕ ಬಂದು ಇನ್ನೊಂದು ತಾಂಡಾಕ್ಕೆ ಬರಲು ಕರೆದ. ಹೋಗಲು ಸಮಯ, ಶಕ್ತಿ ಎರಡೂ ಇರಲಿಲ್ಲ. ರಾತ್ರಿ ನನ್ನ ಸಹಪಾಠಿ ಧಾರವಾಡದ ಪ್ರೊ. ವೃಷಭೇಂದ್ರಸ್ವಾಮಿಯ ತಮ್ಮ ಆಯುರ್ವೇದ ವೈದ್ಯ ಡಾ. ಶಿವಾನಂದಸ್ವಾಮಿ ಮತ್ತು ಡಾ. ನಾಗಣ್ಣ ಇಬ್ಬರೂ ಪ್ರವಾಸಿ ಮಂದಿರಕ್ಕೆ ಬಂದು ಮಾತನಾಡಿಸಿದರು. ಡಾ. ಶಿವಾನಂದಸ್ವಾಮಿ ಹಗರಿ ಬೊಮ್ಮನ ಹಳ್ಳಿಯಲ್ಲಿ ಸ್ವಂತ ಪ್ರ್ಯಾಕ್ಟೀಸ್ ಮಾಡುತ್ತಿದ್ದಾರೆ.

ಇಟಗಿ ಡಾ. ನಾಗಣ್ಣನ ಮೂಲಕ ಬಂದ ಕಾಗದದ ಹಸ್ತಪ್ರತಿಯಲ್ಲಿ ಕೃಷ್ಣನಿಗೆ ಸಂಬಂಧಿಸಿದ ಒಂದು ಯಕ್ಷಗಾನ ಮತ್ತು ಕುರುಬರ ರಟ್ಟಮತ ಎಂಬ ಕೃತಿ ಇದ್ದುವು. ಕುರುಬರ ರಟ್ಟಮತದ ಅಪೂರ್ಣ ಪ್ರತಿಯಲ್ಲಿ ಮಳೆ, ಬೆಳೆ ಇತ್ಯಾದಿಗಳ ಬಗ್ಗೆ ಭವಿಷ್ಯವಾಣಿ ಇತ್ತು. ಓಲೆಗರಿ ಪ್ರತಿಯಲ್ಲಿ ವೀರಸಂಗಯ್ಯನ ಸಾಂಗತ್ಯ ಎಂಬ ಅಪೂರ್ಣ ಕೃತಿ ಇತ್ತು. ಅದರ ಆರಂಭದ ಕಂದಪದ್ಯದಲ್ಲಿ ಗುರುವರನಾದ ಮಲ್ಲಿಕಾರ್ಜುನನ ಹೆಸರಿತ್ತು. ಮೂರನೆಯ ಹಸ್ತಪ್ರತಿಯಲ್ಲಿ ವಜ್ರಮುಕುಟರಾಯನ ಹೆಸರಿತ್ತು. ಆ ಕೃತಿಯನ್ನು ಪರಿಶೀಲಿಸಲಾಗಲಿಲ್ಲ.

"ಕುರುಬರ ರಟ್ಟಮತ"ದ ಒಂದು ಭಾಗ ಹೀಗಿದೆ - "ಕ್ರೋಧಿ ನಾಮ ಸಂವತ್ಸರದಲ್ಲಿ ಬ್ರಹ್ಮ ಸ್ವಾಮಿಯಾಗುವನು । ಶನಿ ಒಡೆಯನಾಗುವನು । ಮಳೆ ಬೆಳೆಯು ಬಡವಕ್ಕು । ತೃಣ ಧಾನ್ಯಗಳು ಸಂಗ್ರವಾಗಿಯಿರಬೇಕು । ರೋಗಗಳು ಬಹಳವುಂಟು । ಮಳೆಗಳಿಂದ ವೃಕ್ಷಗಳು ಲಯವಾದುವು । ವುತ್ರ ದೇಶಕ್ಕೆ ಮಾರಾಟಗಳಾದುವು । ದಕ್ಷಿಣ ದೇಶಕ್ಕೆ ಮಹಾ ಉತ್ಪಾತವಾದುವು । ಚೈತ್ರ ವೈಶಾಖ ಮಾಸಂಗಳಲ್ಲಿ ಸುಖವಾದೀತು । ಜೇಷ್ಠ ಆಷಾಢ ಶಾವಣದಲ್ಲಿ ಧಾರಣೆಗಳಾದಾವು । ಭಾದ್ರಪದ ಆಸ್ವೇಜ ಸು. ವು ಕಾರ್ತಿಕ ಮಾರ್ಗಸಿರ ಮಾಸಂಗಳಲ್ಲಿ ಸುಭಿಕ್ಷವುಂಟು । ಪುಷ್ಯ ಮಾಘ ಮಾಸಂಗಳಲ್ಲಿ ಧಾರಣೆ ಸ್ವಲ್ಪ ಪರಿಣಾವುಂಟು। ಫಾಲ್ಗುಣ ಮಾಸದಲ್ಲಿ ಮಹಾ ಪೀಡಾಕಾರಗಳುಂಟು । ದಣಿವು ಆಪತ್ತು ॥ ಕ್ಷಯ ನಾಮ ಸಂವತ್ಸರದಲ್ಲಿ ರಾಮಸ್ವಾಮಿಯಾಳಿಕೆಯಾಗುವುದೂ । ಮಳೆ ಬೆಳೆ ಮಧ್ಯಮ ಪ್ರಕಾರವು । ಚೈತ್ರಮಾಸದಲ್ಲಿ ಉತ್ಪಾತಗಳಾದಾವು । ವೈಶಾಖಮಾಸದಲಿ ಅರಿಷಗಳಾದವು । ಜ್ಯೇಷ್ಠ ಮಾಸದಲಿ ಭೂಮಿಯ ಮೇಲೆ ಹೊಸರಾಯರು ಆದಾರು । ಆಷಾಢಮಾಸದಲ್ಲಿ ಮರ್ಕುರ್ಕುರಿಗಳಾದ್ಧಾವು । ಶ್ರಾವಣಮಾಸದಲ್ಲಿ ಮಹಾವಾಯು ಬೀಸೀತು । ಭಾದ್ರಪದ ಮಾಸದಲ್ಲಿ ಮಳೆಯುಂಟು । ಅಸ್ವೀಜಮಾಸದಲ್ಲಿ....."

"ವೀರಸಂಗಯ್ಯನ ಸಾಂಗತ್ಯ"ದ ಆರಂಭದ ಪದ್ಯ ಹೀಗಿತ್ತು. "ಕಂದಾ ॥ ಶ್ರೀ ಗುರುರಾಯ ಶರನಿಧಿಯಂ । ಶ್ರೀ ಗುರುವರ ತಿಮಿರ ಭಾನು ಶ್ರೀಗುರು ಲಿಂಗಂ । ಶ್ರೀ ಗುರುವರ ಕರದಭಯಂ । ಶ್ರೀ ಗುರುವರ ಸಿದ್ಧಮಲ್ಲಿಕಾರ್ಜುನ ಪ್ರಭುವೇ".

## ಉಪ್ಪಿನಾಯಕನಹಳ್ಳಿ

ಬೆಳಿಗ್ಗೆ (15.6.85) ಕಾಫಿ ಕುಡಿದು ಹೊರಟಾಗ, ರಾತ್ರಿ ಊಟ ಜಾಸ್ತಿಯಾದ್ದರಿಂದ ನಿದ್ದೆ ಬಾರದೆ ನಡೆಯಲು ಮೈ ಜಡವೆನ್ನಿಸಿಬಿಟ್ಟಿತು. ದಾರಿಯಲ್ಲಿ ನಾನು ನೋಡುತ್ತಿದ್ದಂತೆ ವೇಗವಾಗಿ ಬರುತ್ತಿದ್ದ ಸೈಕಲ್ಲು ರಸ್ತೆ ದಾಟುತ್ತಿದ್ದವನಿಗೆ ಬಲವಾಗಿ ಡಿಕ್ಕಿ ಹೊಡೆದು ಇಬ್ಬರೂ ಬಿದ್ದರು. ದಾರಿಯಲ್ಲಿ ಓಬಳೇಶ ಹನುಮಪ್ಪನ ಗುಡಿ, ಅಲ್ಲೇ ಸಮೀಪದ ಗುಡ್ಡದ ಮೇಲೆ ಶಾಸನವೊಂದು ಕಾಣಿಸಿದುವು. ದಾರಿ ಬದಿಯಲ್ಲಿ ಗಜಲಕ್ಷ್ಮಿ ವಿಗ್ರಹವೂ ಕಾಣಿಸಿತು.

ಎಂಟು ಮೈಲಿ ದೂರದ ಉಪ್ಪಿನಾಯಕನ ಹಳ್ಳಿಗೆ ಹೋದಾಗ ಅಲ್ಲಿನ ಶಾಲೆಯಲ್ಲಿ ನನ್ನನ್ನು ಉಳಿಸಿದರು. ಅದೊಂದು ಉನ್ನತ ಪ್ರಾಥಮಿಕ ಶಾಲೆ. ಇಂಗ್ಲಿಷ್ ಭಾಷೆಯ ಬಗ್ಗೆ ಸ್ವಲ್ಪ ಪಕ್ಷಪಾತವಿರುವ ಮುಖ್ಯೋಪಾಧ್ಯಾಯರು ತಮ್ಮದೇ ರೀತಿಯ ಕಲ್ಪನೆಗಳನ್ನಿಟ್ಟುಕೊಂಡಿದ್ದರು, ಭಾಷಾ ಬೋಧನೆ ಬಗ್ಗೆ. ಅವರಿಗೆ ಗೋಕಾಕ್ ವರದಿಯ ಸ್ವರೂಪವನ್ನು ವಿವರಿಸಿ ಪ್ರೌಢಶಾಲೆಗಳ ಭಾಷಾಧ್ಯಯನದ ವ್ಯವಸ್ಥೆ ಕುರಿತಾದ ಅದು ಇಂಗ್ಲಿಷ್ ಭಾಷೆಗೆ ವಿರುದ್ಧವಾದುದಲ್ಲವೆಂದೂ ಪ್ರಾಸಂಗಿಕವಾಗಿ ಮಕ್ಕಳಿಗೆ ಅವರ ಮಾತೃಭಾಷೆಯ ಬೋಧನೆಯ ಪ್ರಾಮುಖ್ಯವನ್ನು ಗುರುತಿಸಿ ಒಳ್ಳೆಯ ಕೆಲಸ ಮಾಡಿರುವ ವರದಿಯೆಂದೂ ಹೇಳಿದೆ. ಆ ಶಾಲೆಯಲ್ಲಿ ಹಳಬ ಮತ್ತು ಹೊಸಬ ಉಪಾಧ್ಯಾಯರ

ಮಧ್ಯೆ ತಿಕ್ಕಾಟಗಳಿದ್ದುದು ಸೂಚಿತವಾಗುತ್ತಿತ್ತು. ಕುರುಬರ ಮನೆಯಲ್ಲಿ ಮಧ್ಯಾಹ್ನದ ಊಟ ಆಗಬಹುದೇ ಎಂದು ಅವರು ಕೇಳಿದಾಗ ನಕ್ಕು ಬಿಟ್ಟು "ಅದೊಂದು ಪುಣ್ಯ" ಎಂದು ತಮಾಷೆ ಮಾಡಿದೆ. ಸ್ನಾನ ತಿಂಡಿ ಆದಮೇಲೆ ಶಾಲೆಯ ಮಕ್ಕಳಿಗೆ ಕತೆ ಹೇಳಿದೆ. ತಿಂಡಿ ಹೋಟಲಿಂದ ಬಂದಿತ್ತು.

ಆ ಊರಲ್ಲಿ ಶೇಕಡ ತೊಂಬತ್ತರಷ್ಟು ಕುರುಬರು; ಬೇಡರ ಲಿಂಗಾಯತರ ಸಂಖ್ಯೆ ತೀರ ಕಡಮೆ. ಕುರುಬರೇ ಹೆಚ್ಚಾಗಿದ್ದರೂ ಆ ಊರಲ್ಲಿ ಬೀರೇಶ್ವರನ ಗುಡಿ ಇರದಿದ್ದುದು ಸ್ವಲ್ಪ ಆಶ್ಚರ್ಯಕರವಾಗಿತ್ತು. ಹಳ್ಳಿಗಳಲ್ಲಿ ಇಂದಿಗೂ ಊಟ, ಮದುವೆ ವಿಚಾರಗಳಲ್ಲಿ ಜಾತಿ ಭೇದ ಹೋಗಿಲ್ಲ. ಆದರೆ ಪ್ರೀತಿಯ ಸಂಬಂಧಗಳಿರುತ್ತವೆ. ಆ ಎಲ್ಲ ಕಟ್ಟುಪಾಡುಗಳೂ ಕ್ರಮೇಣ ಸಡಿಲುತ್ತಿವೆ ಎಂಬುದು ಎಲ್ಲರಿಗೂ ತಿಳಿದಿರುವ ಸಂಗತಿ.

ಆ ಊರಿನದೊಂದು ಎಲ್ಲ ಹಳ್ಳಿಗಳಲ್ಲಿನಂತಹ ಶಾಲೆ. ಪಕ್ಕದಲ್ಲಿ ಆಟವಾಡಲು ಮೈದಾನವಿತ್ತು (ಹಳ್ಳಿಯಲ್ಲಿ ಆಟಕ್ಕೆಂದೇ ಇರುವುದಿಲ್ಲ, ಇಡೀ ಹಳ್ಳಿಯ ಪರಿಸರವೇ ಆಟದ ಮೈದಾನ). ಅಲ್ಲಿಯ ಶಾಲೆಯಲ್ಲಿ ಐವತ್ತೆಂಟು ಮಕ್ಕಳಿದ್ದರೆ ಉಪಾಧ್ಯಾಯರು ಮೂವರು. ಒಂದರಿಂದ ಏಳರವರೆಗೆ ಪ್ರತಿ ತರಗತಿಯಲ್ಲಿ ಇದ್ದ ವಿದ್ಯಾರ್ಥಿಗಳು ಅನುಕ್ರಮವಾಗಿ 20 + 10 + ? + 8 + 5 + 7 + 8 (ಮೂರನೆಯ ತರಗತಿಯ ವಿದ್ಯಾರ್ಥಿಗಳ ಸಂಖ್ಯೆಯನ್ನು ನನ್ನ ಟಿಪ್ಪಣಿ ನಮೂದಿಸಿಲ್ಲ. ಬಹುಶಃ ಒಬ್ಬನೂ ಇಲ್ಲ. ಮೂರು ವರ್ಷಗಳ ಹಿಂದೆ ಒಂದನೇ ತರಗತಿಗೆ ಸೇರಲು ವಿದ್ಯಾರ್ಥಿಗಳು ಯಾರೂ ಬರಲಿಲ್ಲವೆಂದು ಕಾಣುತ್ತದೆ).

ಐದನೇ ತರಗತಿ - ವಿದ್ಯಾರ್ಥಿಗಳ ಹೆಸರುಗಳು ಹೀಗಿವೆ - ಉಲಗಪ್ಪ; ದೊಡ್ಡ ಬಸ್ಯ; ಗೋವಿಂದ; ಶಿವಯ್ಯ; ಸುಶೀಲ (5).

ಆರನೇ ತರಗತಿ - ಉಲಗಪ್ಪ; ಗೋಣಿ ಬಸಪ್ಪ; ಪೀರಾ ನಾಯ್ಕ; ಪಕೀರೇ ನಾಯ್ಕ; ಚಿನ್ನೀ ಪರಪ್ಪ; ಪಂಪಾವತಿ? (7).

ಏಳನೇ ತರಗತಿ - ತಿಮ್ಮ; ಷಣ್ಮುಖ; ಮಾಯೇಶ್; ನಾಗರಾಜ; ದೊಡ್ಡ ಬಸ್ಯ; ಶಿವಯ್ಯ; ಚೌಡಪ್ಪ; ರೇಣುಕ (8).

ಇಪ್ಪತ್ತರಲ್ಲಿ ಇಬ್ಬರು ಹುಡುಗಿಯರಿರುವುದು ಗಮನಾರ್ಹ. ಪರಂಪರಾಗತ ಹೆಸರುಗಳ ಜೊತೆ ಆಧುನಿಕತೆಯ ಸ್ಪರ್ಶ ಹೊಂದಿರುವ ಹೆಸರುಗಳೂ ಇರುವುದು ಗಮನಾರ್ಹ.

ಬೆಳಿಗ್ಗೆ ಹನ್ನೊಂದು ಗಂಟೆಗೆ ಶಾಲೆಯ ಮುಂದೆ ಶಾಮಿಯಾನ ಹಾಕಲಾಯ್ತು. ಆ ದಿನ ತಹಸೀಲ್ದಾರರು ಭೇಟಿ ನೀಡಿ ಜನರ ಅಹವಾಲುಗಳನ್ನು ಸ್ವೀಕರಿಸುವವರಿದ್ದರು. ಅವರಿಗೆ ಅರ್ಜಿ ಬರೆದುಕೊಡುವಂತೆ ಹಳ್ಳಿಯ ಜನರು ಮುಖ್ಯೋಪಾಧ್ಯಾಯರನ್ನು ಕೇಳಿಕೊಳ್ಳುತ್ತಿದ್ದರು. ಒಬ್ಬ ರಾಜಕೀಯ ಯುವ ಮುಖಂಡ ದಬಾಯ್ಸುವ ಧಾಟಿಯಲ್ಲಿ ಅರ್ಜಿ ಬರೆದುಕೊಡಲು ಮೇಷ್ಟರಿಗೆ ಸಲಹೆಕೊಡುತ್ತಿದ್ದ. ಶಾಲೆಯ ಮುಂದೆ ಸೇರಿದ್ದ ಸಭೆಗೆ ಮಧ್ಯಾಹ್ನ ತಹಸೀಲ್ದಾರರು ಬಂದಾಗ ಅವರ ಮುಂದೆ ಜನ ಅನೇಕ ಬಗೆಯ ಅರ್ಜಿ

ಕೊಟ್ಟು ತಮ್ಮ ಕಷ್ಟ ಸುಖ ಹೇಳಿಕೊಂಡರು. ಒಬ್ಬ ಹೆಂಗಸು ಗೊಬ್ಬರಕ್ಕೆ ಬೀಜಕ್ಕೆ ಧನ ಸಹಾಯ ಮಾಡಲು ಅಂಗಲಾಚಿ ಬೇಡಿಕೊಂಡಳು. ಅವಳಿಗೆ ಮಂಜೂರಾದ ಹಣದಲ್ಲಿ ಶೇಕಡ ಐವತ್ತರಷ್ಟು ಅವಳ ಕೈಗೆ ಬಂದಿರಲಿಲ್ಲ. ಅಂದು ನಾನು ಕೇಳಿದ ಅಹವಾಲುಗಳು - ವೃದ್ಧಾಪ್ಯ ವೇತನ ತಲುಪಿಲ್ಲ, ಅಂಗವಿಕಲರಿಗೆ ಮಂಜೂರಾದ ಸಹಾಯ ಧನ ಬಂದಿಲ್ಲ, "ತಾಳಿಭಾಗ್ಯ"ದ ಅಡಿಯ ಸಹಾಯ ಧನ ತಲಪಿಲ್ಲ, ಎಸ್.ಸಿ., ಎಸ್.ಟಿ.ಗಳಿಗೆ ಮಂಜೂರಾದ ಸಾಲದ ಕಡತ ಕಡತವಾಗಿಯೇ ಉಳಿದಿದೆ, ಉಚಿತ ಬೀಜ ವಿಲೇವಾರಿ ಬಗ್ಗೆ ಕ್ರಮ ಕೈಗೊಂಡಿಲ್ಲ. ಎಲ್ಲವೂ "ಇಲ್ಲವು"ಗಳೇ ಆಗಿದ್ದುವು. ತಹಸೀಲ್ದಾರರು ಎಲ್ಲರಿಗೂ ಸಮಾಧಾನ ಹೇಳಿದರು.

ಆ ಊರಿನ ಪ್ರಮುಖರೊಬ್ಬರು ತಮ್ಮ ಮನೆಗೆ ಊಟಕ್ಕೆ ಆಹ್ವಾನಿಸಲು ನನ್ನ ಜಾತಿ ಕೇಳಿದರು. ನಾನು ನನ್ನ ಜಾತಿ ಹೇಳಿ ಯಾವ ಜಾತಿಯವರಾದರೂ ಸರಿಯೇ, ಅಲ್ಲಿ ಸಂತೋಷದಿಂದ ಊಟ ಮಾಡುತ್ತೇನೆ ಎಂದು ಹೇಳಿದೆ. ಬಹುಶಃ ಅವರು ಕುರುಬರು. ನನ್ನ ಊಟ ಮುಗಿದು ವಾಪಸ್ ಶಾಲೆಗೆ ಬರುವಷ್ಟರಲ್ಲಿ ತಹಸೀಲ್ದಾರರ ಜಮಾಬಂದಿ ಮುಗಿದಿತ್ತು. ಸ್ವಲ್ಪ ಹೊತ್ತು ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದಂತೆ, ಶಾಲೆಯ ಮಕ್ಕಳು ನನ್ನ ಕೊಠಡಿಗೆ ಧಾಳಿ ಮಾಡಿ ಕತೆ ಹೇಳಲು ದುಂಬಾಲು ಬಿದ್ದರು. ಅವರು ಹಾಗೆ ದುಂಬಾಲು ಬೀಳುವ ಅಗತ್ಯವೇ ಇರಲಿಲ್ಲ. ಅವರಿಗೆಲ್ಲ ತೃಪ್ತಿಯಾಗುವಷ್ಟು ಕತೆ ಹೇಳಿದೆ. ಅವರೆಲ್ಲ ಮನೆಗೆ ಹಿಂದಿರುಗಿದರು. ಊರಲ್ಲಿನ ಬಹು ದೊಡ್ಡ ಮಾಸ್ತಿಕಲ್ಲಿನಲ್ಲಿ ಸ್ಫುರದ್ರೂಪಿ ವೀರ ಮತ್ತು ಅವನ ಪತ್ನಿಯಿದ್ದಾರೆ. ವೀರನ ಕೈಯಲ್ಲಿ ಬಾಣವನ್ನು ಪ್ರಮುಖವಾಗಿ ತೋರಿಸಲಾಗಿದೆ. ಆ ಊರಿನ ಆಂಜನೇಯ ಸ್ವಾಮಿ ಸದಾ ಸಂಚಾರಿಯಾದ ಕಾರಣ ಅವನ ಚಪ್ಪಲಿ ಸವೆದುಬಿಟ್ಟಿವೆ. ಊರ ಹೊರಗೆ ಇನ್ನೊಂದು ಮಾಸ್ತಿಕಲ್ಲು, ವೈಭವದ ಹಬ್ಬ ನಡೆಯುವ ಚೌಡಮ್ಮನ ಗುಡಿ ಇವೆ. ಮಧ್ಯಾಹ್ನ ಊಟ ಮಾಡಿದ ಪ್ರಮುಖರ ಮನೆಗೆ ರಾತ್ರಿ ಊಟಕ್ಕೆ ಹೋದೆ. ಅವರಿಗೂ ಅವರ ಪತ್ನಿಗೂ ಇನ್ನೂ ಚಿಕ್ಕ ವಯಸ್ಸಾದರೂ ಐದು ಜನ ಮಕ್ಕಳಿದ್ದಾರೆ. ಇನ್ನೂ ಹೆಚ್ಚು ಮಕ್ಕಳನ್ನು ಪಡೆಯಲು ಗಂಡಿಗೆ ಉತ್ಸಾಹ ಇದೆ. ಹೆಣ್ಣೂ ಆ ಸವಾಲನ್ನು ಒಪ್ಪಿಕೊಂಡಿತ್ತು. ಆ ಕಾರಣ ಒಟ್ಟಿನಲ್ಲಿ ಸುಖೀ ಸಂಸಾರ.

ಕುರುಬರ ಕುರಿ ಸಾಕಾಣಿಕೆ ಬಗ್ಗೆ ಸ್ವಲ್ಪ ಮಾಹಿತಿ ದೊರಕಿತು. ತಕ್ಕಮಟ್ಟಿನ ಒಂದು ಕುಟುಂಬವನ್ನು ಸಾಕಲು ಒಂದು ನೂರು ಕುರಿಗಳಿದ್ದರೆ ಸಾಕು. ಅವುಗಳ ಹಾಲು ಒಂದೆರಡು ಕೊಡವಾದರೂ ಪ್ರತಿ ದಿನ ದೊರಕುತ್ತದೆ. ಒಂದು ರಾತ್ರಿ ಅವುಗಳನ್ನು ರೈತರ ಹೊಲದಲ್ಲಿ ನಿಲ್ಲಿಸಿದರೆ ಕುರಿ ಯಜಮಾನನಿಗೆ ಊಟ, ಬೀಡಿ ಸಮೇತ ಇಪ್ಪತ್ತೈದು ರೂಪಾಯಿ ಸಿಗುತ್ತದೆ. ಕುರಿಗಳ ಮೂತ್ರ ಹಿಕ್ಕೆ ಹೊಲಕ್ಕೆ ಒಳ್ಳೆಯ ಗೊಬ್ಬರವಾಗುತ್ತದೆ. ಹಟ್ಟಿಯಲ್ಲಿ ಸಂಗ್ರಹಿತವಾದ ಕುರಿ ಗೊಬ್ಬರ ಬಂಡಿಗೆ ಅರವತ್ತು ರೂಪಾಯಿ ದೊರಕುತ್ತದೆ. ವರ್ಷಕ್ಕೆ ನಲವತ್ತು ಐವತ್ತಾದರೂ ಕುರಿ ಮರಿಗಳು ದೊರಕುತ್ತವೆ. ಒಂದು ಮರಿ ಮಾರಿದರೆ ಮೂವತ್ತರಿಂದ ನಲವತ್ತು ರೂಪಾಯಿ ಸಿಗುತ್ತದೆ. ಮಾರದೆ ಎರಡನೆಯ ವರ್ಷದವರೆಗೆ ಇಟ್ಟುಕೊಂಡು ಮಾರಿದರೆ ನೂರಿಪ್ಪತ್ತರಿಂದ ನೂರ ಮೂವತ್ತು ರೂಪಾಯಿ. ಬೆಳೆದ ದೊಡ್ಡ ಕುರಿ ಬೆಲೆ ನೂರೈವತ್ತರಿಂದ

ಇನ್ನೂರು ರೂಪಾಯಿ. ಕುರಿ ಮೇಲಿನ ತುಪ್ಪಟದಿಂದಲೂ ಆದಾಯ ಉಂಟು. ಒಟ್ಟಾರೆ ನೂರು ಕುರಿಗಳಿಂದ ವರ್ಷಕ್ಕೆ ಕನಿಷ್ಠ ಹತ್ತು ಸಾವಿರ ರೂಪಾಯಿ ಆದಾಯ ಉಂಟು. ಕುರಿ ಸಾಕಾಣಿಕೆಗೆ ಈಗ ಇರುವ ತೊಂದರೆ ಎಂದರೆ ಅವು ಮೇಯಲು ಭೂಮಿ ಸಿಗುತ್ತಿಲ್ಲ. ಎಲ್ಲ ಹುಲ್ಲುಗಾವಲುಗಳೂ ಬಯಲುಗಳೂ ಹೊಲ ಗದ್ದೆ ತೋಟ ಆಗುತ್ತಿರುವುದು ಕುರುಬರಿಗೆ ಒಂದು ಕೊರಗನ್ನು ತಂದಿದೆ. ಕುರಿ ಸಾಕುವುದನ್ನು ಕೈಬಿಡುವ ಯೋಚನೆ ಅನೇಕರದು, ಮತ್ತು ಕೈಬಿಟ್ಟವರೂ ಇದ್ದಾರೆ.

ಊರಲ್ಲಿ ಕೆಲವು ಜನ ಹೊಲಗಳಲ್ಲಿ ಹೂ ಬೆಳೆಯುತ್ತಾರೆ. ಅರ್ಧ ಎಕರೆ ಹೂವಿನ ಹೊಲದಿಂದ ಇಪ್ಪತ್ತು ಸಾವಿರದಷ್ಟು ಆದಾಯವುಂಟು. ಆದರೆ ಅದರಲ್ಲಿ ಹತ್ತು ಸಾವಿರವಾದರೂ ಖರ್ಚಾಗಿರುತ್ತದೆ. ದಿನವೂ ಕೆಲಸಮಾಡುವ ನಲವತ್ತು ಜನ ಕೆಲಸದವರು, ಅವರ ಮೇಸ್ತ್ರಿ ಇವರಿಗೆಲ್ಲ ಕೂಲಿ, ಊಟ ಕೊಡಬೇಕು.

ಊರಿನ ಚೌಡಮ್ಮನ ಜಾತ್ರೆ ಬಹಳ ಅದ್ದೂರಿಯಿಂದ ನಡೆಯುತ್ತದೆ. ಐದು ವರ್ಷ ಅಥವಾ ಏಳು ವರ್ಷಕ್ಕೊಮ್ಮೆ ನಡೆಯುವ ಜಾತ್ರೆಗೆ ಕನಿಷ್ಠ ಎರಡು ಲಕ್ಷ ಖರ್ಚಾಗುತ್ತದೆ. ಸಾಧಾರಣವಾಗಿ ಪ್ರತಿ ಮನೆಯವರೂ ಎರಡು ಸಾವಿರ ಚಂದಾವನ್ನು ಉತ್ಸವಕ್ಕೆ ಸಲ್ಲಿಸುತ್ತಾರೆ. ಜಾತ್ರೆಯ ಕೊನೆಯ ದಿನ ದೇವಿಗೆ ಕುರಿಯನ್ನು 'ಗಾವು ಸಿಗಿಯುವ' ಆಚರಣೆ ಉಂಟು. ಕುರಿಯನ್ನು ಹರಿತವಾದ ಆಯುಧದಿಂದ ಬಲಿ ಕೊಡುವುದರ ಬದಲು, ಜೀವಂತ ಕುರಿಯನ್ನು ಎತ್ತಿ ಹಿಡಿದು ಹರಿತ ಹಲ್ಲಿನ ಮನುಷ್ಯ ಅದರ ಕೊರಳಿಗೆ ಬಾಯಿ ಹಾಕಿ ಬಿಸಿರಕ್ತ ಚಿಮ್ಮುವಂತೆ ಮಾಡಿ ಹೀರಿ ಅದರ ಪ್ರಾಣವನ್ನು ಕಳೆದು ಅದರ ಎರಡು ಕಾಲುಗಳನ್ನು ಹಿಡಿದು ಅದರ ದೇಹ ಎರಡು ಭಾಗವಾಗುವಂತೆ ಸೀಳುತ್ತಾನೆ. ಇದೇ "ಗಾವು ಸಿಗಿಯುವುದು". ವರ್ಷವೆಲ್ಲ ದೇವಿಯ ಮುಂದೆ ಗರ್ಭಗುಡಿಯಲ್ಲಿ "ಮಿಣಿ ಮಿಣಿ ದೀಪ" ಇರಲೇ ಬೇಕು.

ಈ ಎಲ್ಲ ಕತೆ ಕೇಳಿ ರಾತ್ರಿ ಮಲಗಲು ಶಾಲೆಗೆ ವಾಪಸಾದೆ. ಆ ರಾತ್ರಿ ನನ್ನ ಜೊತೆ ಮೂವರು ಮಲಗಿದರು. ಒಬ್ಬ ಕ್ಷೌರಿಕ ಲಿಂಗಾಯತ, ಇನ್ನೊಬ್ಬ ಪಂಚಮಸಾಲಿ ಲಿಂಗಾಯತ (ಈತ ಬಡ ಪದವೀಧರ, ಮದುವೆ ಗೊತ್ತಾಗಿತ್ತು), ಮತ್ತೊಬ್ಬ ಬೇಡ ಜಾತಿಯ ಮುದುಕ. ಆ ಬೇಡರವನಿಂದ ಆ ಪ್ರದೇಶದಲ್ಲಿ ಇನ್ನೂ ಜೀವಂತವಾಗಿರುವ ಬಸವಿ ಪದ್ಧತಿ ವಿಷಯ ತಿಳಿಯಿತು. ಹೊಸಪೇಟೆ ಪಕ್ಕದ ಹುಲುಗವ್ವನಿಗೆ ಕೆಲವು ಬೇಡರು ತಮ್ಮ ಹೆಣ್ಣು ಮಕ್ಕಳನ್ನು ಬಸವಿ ಬಿಡುತ್ತಾರೆ. ಎಂದರೆ ಮದುವೆ ಶಾಸ್ತ್ರ ಮಾಡುವ ರೀತಿಯಲ್ಲೇ ಬಸವಿ ಬಿಡುವ ಶಾಸ್ತ್ರವೂ ಇರುತ್ತದೆ. ತಂದೆ ತಾಯಿ ಅಣ್ಣ ತಮ್ಮಂದಿರ ಜೊತೆ ಇರುವ ಬಸವಿ ಮನೆಗೆ ವಿಟ ಗಂಡಸು ಬಂದರೆ ಎಲ್ಲರೂ ಮನೆಯಿಂದ ಹೊರ ಬರಬೇಕು. ಆ ಗಂಡಸಿಗೆ ಮಿರ್ಜಿ (ಮೆಣಸಿನಕಾಯಿ ಒಳಗಿರುವ ಉದ್ದನೆಯ ಬೋಂಡಾ), ಖಾರ, ಮಂಡಾಳು (ಮಂಡಕ್ಕಿ), ವೀಳ್ಯ ತಂದು ಒದಗಿಸಬೇಕು. ಮುದುಕ ಹೇಳಿದ, "ಆ ಎಲ್ಲ ಫಜೀತಿ ನನಗೆ ಹಿಡಿಸೋಲ್ಲ". ಹಿಂದೆ ಬಸವಿ ತನ್ನನ್ನು ಇಟ್ಟುಕೊಂಡ ಪುರುಷನನ್ನು ಅವನ ಹೆಂಡತಿಗಿಂತ ಹೆಚ್ಚು ಆದರಿಸುತ್ತಿದ್ದಳು. ಈಗ "ಬರೀ ಸೂಳೇರು. ಅವರು ಬರೀ ಹಣಕ್ಕಾಗಿ ಬಾಯ್ಬಿಡುತ್ತವೆ".

ಹೆಂಡತಿಗಿಂತ ಹೆಚ್ಚು ನಿಷ್ಠೆಯಿಂದ ನಡೆದುಕೊಳ್ಳುವ ಅಂತಹ ಜೀವಂತ ಉದಾಹರಣೆಯನ್ನೂ ಕೊಟ್ಟ. ಆ ಮುದುಕನ ಗಂಡು ಮಗ ಹೆಣ್ಣು ಮಗಳು ಇಬ್ಬರಿಗೂ ಮದುವೆಯಾಗಿ ಸುಖವಾಗಿರುವುದರಿಂದ ತಾನು ನಿಶ್ಚಿಂತ ಎಂದು ಹೇಳುತ್ತಲೇ ನಿದ್ದೆ ಮಾಡಿದ. ನಿದ್ದೆ ಮಾಡುತ್ತ ಗೊರಕೆ ಹೊಡೆದ. ಎದ್ದು ಬೀಡಿ ಹಚ್ಚಿ ಸೇದಿದ. ನಾನು ರಾತ್ರಿಯೆಲ್ಲ ಮೂಗು ಮುಚ್ಚಿಕೊಂಡೇ ಮಲಗಬೇಕಾಯ್ತು. ಆ ರಾತ್ರಿ ಗಾಳಿ ಜಾಸ್ತಿ ಎಂದು ಮೂರು ಕಿಟಕಿ ಮುಚ್ಚಿ ಒಂದು ಕಿಟಕಿ ತೆಗೆದಿತ್ತು. ಬೆಳಗಿನ ಜಾವ ನನಗೆ ಸ್ವಲ್ಪ ನಿದ್ದೆ ಬಂದಂತಾದಾಗ ಮುದುಕನಿಗೆ ಎಚ್ಚರವಾಗಿ, ಯಾವುದೋ ಸಮೀಪದ ಹೂದೋಟದಲ್ಲಿ ಏನೋ ಕುಟ್ಟಿದ ಸದ್ದು ಕೇಳಿಸಿ, ಕ್ಷೌರಿಕ ಮೈಲಾರಪ್ಪನನ್ನು ಏಳಿಸಿದ. ಮೈಲಾರಪ್ಪ ಬಯ್ದು ಗೊಣಗುತ್ತ ಮಲಗಿ ನಿದ್ದೆ ಹೊಡೆದ. ಮುದುಕನೂ ಗೊರಕೆ ಹೊಡೆದ. ನನಗೆ ಗೊರಕೆ, ಸುಂಯ್ ಗಾಳಿ ಸದ್ದು ಎರಡೂ ಸ್ಪಷ್ಟವಾಗಿ ಕೇಳಿಸುತ್ತಿದ್ದುವು. ಬೆಳಿಗ್ಗೆ ಮುದುಕನಿಗೂ ನನಗೂ ಒಟ್ಟಿಗೆ ಎಚ್ಚರವಾದಾಗ ಇಡೀ ಕೊಠಡಿ ತುಂಬ ಬೀಡಿ ವಾಸನೆ. ಮುದುಕ ನನಗೆ ಎಚ್ಚರವಾದಾಗಲೆಲ್ಲ ಬಿಡಿ ಸೇದುತ್ತಿದ್ದ. "ಯಾರಾದರೂ ನಿಮ್ಮ ಜೊತೆ ಇರಬೇಕು" ಎಂದು ಊರಿನ ಜನ ಕೇಳಿದಾಗ ನಾನು ಒಪ್ಪಿಗೆ ಕೊಟ್ಟು ತಪ್ಪು ಮಾಡಿದೆ. ಆದರೆ ತಪ್ಪು ಮಾಡಿದರೂ ಬಹಳ ದಿನಗಳ ಬಳಿಕ ಬೀಡಿ ವಾಸನೆ ಅನುಭವ ಪಡೆದದ್ದು, ಹುಲುಗವ್ವನಿಗೆ ಬಸವಿ ಬಿಡುವ ಪದ್ಧತಿ ಬಗ್ಗೆ ಮಾಹಿತಿ ಪಡೆದದ್ದು ಇವು ನಗಣ್ಯ ಲಾಭಗಳೇನೂ ಅಲ್ಲವಲ್ಲ !

## ಮರಿಯಮ್ಮನಹಳ್ಳಿ

ಬೆಳಿಗ್ಗೆ (16.6.85) ಅಲ್ಲೇ ಊರ ಮುಂದೆ ಇದ್ದ ಪೆಟ್ಟಿಗೆ ಹೋಟಲಲ್ಲಿ ಇಡ್ಲಿ, ಚಾ ಸಿದ್ಧವಾಗಿದ್ದುವು. ಚಾ ಅಂಗಡಿ ಹುಡುಗ ನಿಜವಾಗಿಯೂ ಚಾಲೂಕಾಗಿದ್ದ. ನನ್ನ ಚಾ ಹಣವನ್ನು ರಾತ್ರಿ ನನ್ನ ಜೊತೆ ಮಲಗಿದ್ದ ಪದವೀಧರ ಯುವಕ ನಾನು ಬೇಡವೆಂದರೂ ತಾನೇ ಕೊಟ್ಟ. ಹಿಂದಿನ ದಿನ ಅದೇ ಅಂಗಡಿಯಿಂದ ಶಾಲೆಯ ಎಲ್ಲ ಮಕ್ಕಳಿಗೆ ಚಾ ತರಿಸಿಕೊಟ್ಟಿದ್ದೆ.

ಎರಡೂ ಚೀಲಗಳು ಆ ದಿನ ಮೈಗೆ ಭಾರ ಎನ್ನಿಸಿದುವು. ಹಿಂದಿನಿಂದ ತಂಗಾಳಿ ಬೀಸುತ್ತಿತ್ತು. ಎದುರಿಗೆ ಒಬ್ಬ ಆಜಾನುಬಾಹು ಮುಸ್ಲಿಮ್ ಒಬ್ಬ ಆಜಾನುಬಾಹು ಹೆಣ್ಣು ಮಗಳ ಜೊತೆ ಬರುತ್ತಿದ್ದ. ನಾನು ಆ ಹೆಂಗಸು ಅವನ ಮಗಳೋ ಮೊಮ್ಮಗಳೋ ಎಂದುಕೊಂಡು "ಎಷ್ಟು ಜನ ಮಕ್ಕಳು" ಎಂದು ಕೇಳಿದ್ದಕ್ಕೆ, "ಏಕ್ ದೋ ತೀನ್" ಎಂದು ಉತ್ತರಿಸಿ ತನ್ನ ಜೊತೆ ಇರುವಾಕೆ ತನ್ನ ಹೆಂಡತಿ, ಮಗಳಲ್ಲ ಎಂದು ನಸುನಕ್ಕು ಮುಂದುವರಿದ. "ಭಲಾಪ್ಪ" ಎಂದೆ. ದಾರಿಯಲ್ಲಿ ನಂದಿಬಂಡಿ ಊರಲ್ಲಿ ಮೂರು ನಾಲ್ಕು ಗುಡಿಗಳಿದ್ದು ಅಲ್ಲಿ ಹುಡುಗಿಯರು ಆಟವಾಡುತ್ತಿದ್ದರು. 'ಅಗಸೀ ಬಾಗಿಲ' (ಪ್ರವೇಶ ದ್ವಾರ) ಹತ್ತಿರ ಆಚೆ ಈಚೆ ಎರಡು ಕಲ್ಲುಗಳನ್ನು ನಟ್ಟು ಅವುಗಳ ಮೇಲೆ ತ್ರಿಶೂಲ ಕೆತ್ತಿದ್ದರು. ತುದಿಯಲ್ಲಿ ಬರಹವೋ ಮಂತ್ರದ ರೇಖೆಗಳೋ ಇದ್ದುವು. ದಾರಿಯುದ್ದಕ್ಕೂ ಧ್ಯಾನ, ಆತ್ಮಾವಲೋಕನ, ಕವನ ಪಠಣ ನಡೆದಿತ್ತು. ಮಳೆ ಆಗದೆ ಬಿತ್ತನೆ ಆಗಿರಲಿಲ್ಲ.

ಮರಿಯಮ್ಮನ ಹಳ್ಳಿ ಈಗ ಸಾಕಷ್ಟು ದೊಡ್ಡ ಊರು. ಅಲ್ಲೇ ರಸ್ತೆ ಬದಿಯ ಫೋಟೋಗ್ರಾಫರ್ ಶ್ರೀನಿವಾಸ್ ನನ್ನನ್ನು ಮೇಷ್ಟು ಕೊಟ್ರಬಸವಯ್ಯನವರ ಮನೆಗೆ ಕರೆದೊಯ್ದರು. ಹಳ್ಳಿಯಾದರೂ ಅಗಲವಾದ ರಸ್ತೆಗಳು ಕಾಣಿಸಿದುವು. ದಾರಿಯಲ್ಲಿ ಮಂತ್ರದ ಕಲ್ಲು ಕಾಣಿಸಿತು. ಅಂತಹ ಮಂತ್ರದ ಕಲ್ಲುಗಳ ಉದ್ದೇಶ, ಹಾಕಿಸುವ ವಿಧಾನ, ಜನ ಅವುಗಳಿಗೆ ನಡೆದುಕೊಳ್ಳುವ ರೀತಿ ಈ ಬಗ್ಗೆ ಯಾರಾದರೂ ವ್ಯಾಪಕ ಕ್ಷೇತ್ರಕಾರ್ಯ ಕೈಗೊಳ್ಳಬೇಕು.

ನಾನು ಹೋದ ದಿನ ಕೊಟ್ರಬಸವಯ್ಯನವರ ಮನೆಯಲ್ಲಿ ಸಂಭ್ರಮವೋ ಸಂಭ್ರಮ. ಆ ದಿನ ರಾತ್ರಿ ಅವರ ಮಗಳ ಮದುವೆಯ ನಿಶ್ಚಿತಾರ್ಥದ ಕಾರ್ಯಕ್ರಮವಿತ್ತು. ಬಹು ಸೌಜನ್ಯಶೀಲರಾದ ಅವರು ನನ್ನನ್ನು ಪ್ರೀತಿಯಿಂದ ಕಂಡರು. ಮಂತ್ರಿಗಳಾದ ಎಂ.ಪಿ. ಪ್ರಕಾಶ್ ಅವರ ಮೂಲಕ ಅವರೂ ನಾನೂ ದೂರದ ಬಂಧುಗಳಾಗಬೇಕೆಂಬ ವಿಷಯ ಇಬ್ಬರಿಗೂ ತಿಳಿದುದು ಆಗಲೇ. ಅವರ ಮನೆಯಲ್ಲಿ ಸ್ನಾನ ಮಾಡಿ, ಊಟ ಮುಗಿಸಿ ವಿಶ್ರಾಂತಿ ಪಡೆದು ಬಳಿಕ ಊರಿನ ಪರಿಶೀಲನೆಗೆ ಹೊರಟೆ.

ಚಿಕ್ಕ ಹಳ್ಳಿಯಾಗಿದ್ದ ಮರಿಯಮ್ಮನಹಳ್ಳಿಯು ಬೆಳೆಯಲು ಒಂದು ಮುಖ್ಯ ಕಾರಣವಿದೆ. ತುಂಗಭದ್ರಾ ಜಲಾಶಯದಲ್ಲಿ ನಾರಾಯಣದೇವರ ಕೆರೆ ಎಂಬ ಐತಿಹಾಸಿಕ ಸ್ಮಾರಕಗಳ ಒಂದು ದೊಡ್ಡ ಊರು ಮುಳುಗಿ ಹೋಯಿತು. ಒಂಬತ್ತು ಅಕ್ಷರಗಳು ಇರುವ ಹೆಸರುಳ್ಳ ಊರು ಇಡೀ ದೇಶದಲ್ಲಿಯೇ ಇಲ್ಲವೆಂದು ಅಲ್ಲಿನ ಜನ ಹೆಮ್ಮೆ ಪಡುತ್ತಿದ್ದರಂತೆ ! ಅಲ್ಲಿನ ಅನೇಕ ಜನ ಇಲ್ಲಿಗೆ ಬಂದು ನೆಲಸಿದರು. ಅಷ್ಟೇ ಅಲ್ಲ, ಅಲ್ಲಿನ ಅನೇಕ ಗುಡಿ ಮಂದಿರಗಳನ್ನು ಹಾಗೇ ಕಳಚಿ, ಸಾಧ್ಯವಾದಷ್ಟು ಅದೇ ರೀತಿ ಇಲ್ಲಿ ನಿಲ್ಲಿಸಿದರು. ಮುಳುಗಿದ ಊರಿನ ಕೆಲವು ಜನ ಸಮೀಪದಲ್ಲೇ ಲೋಕಪ್ಪನ ಹೊಲದಲ್ಲಿ ಮನೆ ಕಟ್ಟಿಕೊಂಡು ವಾಸವಾಗಿದ್ದಾರೆ. ಆ ಹೆಸರಿನ ಹೊಸ ಊರಲ್ಲೂ ನಾರಾಯಣದೇವರ ಕೆರೆಯ ಒಂದೆರಡು ದೇವಾಲಯಗಳಿವೆ. ಧ್ರುವನಾರಾಯಣರು "ನಾರಾಯಣದೇವರ ಕೆರೆ" ಎಂಬ ಪ್ರತ್ಯೇಕವಾದ ಪುಸ್ತಕವನ್ನೇ ಬರೆದು ಆ ಊರು, ಆ ಊರಿನ ಜನಜೀವನ, ಜಾನಪದ, ಸ್ಮಾರಕಗಳು ಇವುಗಳ ಬಗ್ಗೆ ವಿಸ್ತಾರವಾಗಿ ದಾಖಲಿಸಿ ಆ ಊರನ್ನು ತಮ್ಮ ಕೃತಿಯಲ್ಲಿ ಉಳಿಸಿದ್ದಾರೆ. ಮರಿಯಮ್ಮನ ಹಳ್ಳಿ ಬೆಳೆಯಲು ಅದು ಮುಖ್ಯ ಕಾರಣ. ಆ ಹಳ್ಳಿಗೆ ತೀರ ಸಮೀಪದಲ್ಲೇ ತುಂಗಭದ್ರಾ ಜಲಾಶಯದ ಜಲಸಂಗ್ರಹದ ಅಂಚು.

ಆ ಊರಲ್ಲಿನ ನಗರೇಶ್ವರ ದೇವಾಲಯ, ಕನ್ನಿಕಾ ಪರಮೇಶ್ವರಿ ದೇವಾಲಯಗಳು ನೋಡಬೇಕಾದುವು. ದುರ್ಗಾ ಗುಡಿ ಮುಂದೆ ಜನರು ಮಳೆ ಬಗ್ಗೆ ದೇವರ ಅಪ್ಪಣೆ ಕೇಳಲು ಸೇರಿದ್ದರು. ಒಂದು ತಂಬಿಗೆ ತುಂಬ ನೀರು ತುಂಬಿ ಅದನ್ನು ಪೂಜಿಸಿ ಅದಕ್ಕೆ ತೆಂಗಿನಕಾಯಿ ಒಡೆದು ಎರಡು ಚೀಟಿಗಳನ್ನು ಅದರ ತಳಕ್ಕೆ ಸೇರಿಸಿದರು. ಯಾವ ಚೀಟಿ ಮೊದಲು ಮೇಲೆ ಬಂದು ಕಾಣಿಸಿಕೊಳ್ಳುವುದೋ ಅದರಲ್ಲಿರುವುದು ದೇವರ ಅಭಿಪ್ರಾಯವೆಂದು ಜನ ಬಹು ಆಸಕ್ತಿಯಿಂದ ಚೀಟಿ ನೀರಿಂದ ಮೇಲೆ ಬರುವುದನ್ನೇ ಕಾಯುತ್ತಿದ್ದರು. ಒಂದು ಮರದ ಕೆಳಗೆ ಯಾವುದೋ ದೇವಾಲಯದ ರಂಗಮಂಟಪದ

ಕಂಬಗಳ ಮೇಲೆ 'ನಾಮ ಸೃಷ್ಟಿ ಆಳ್ವಾರ'ರ, ಬೆಣ್ಣೆ ಕೃಷ್ಣನ ವಿಗ್ರಹಗಳಿದ್ದವು. (ಅಂತಹ ದೇವಾಲಯಗಳ ಬಿಡಿ ಭಾಗಗಳು ಜೋಡಣೆಗೊಳ್ಳದೆ ಮರಿಯಮ್ಮನ ಹಳ್ಳಿಯಲ್ಲಿವೆ - ಬಹುಭಾಗ ಅವಶೇಷಗಳು ನಾರಾಯಣದೇವರ ಕೆರೆಯವು. ಮುಳುಗಿ ಹೋದ ಬೇರೆ ಊರುಗಳ ಶಿಲಾ ಅವಶೇಷಗಳೂ ಅಲ್ಲಿವೆ). ದೀಪದ ಕಂಬವೊಂದರ ಮೇಲೆ ಪಾಳೆಗಾರನ ಶಿಲ್ಪವಿದೆ. ಹುಲಿ ಬೇಟೆಯ ದೃಶ್ಯವಿರುವ ವಿಗ್ರಹವೊಂದಿದೆ (ದೀಪದ ಕಂಬದ ಮೇಲಿನ ಪಾಳೆಗಾರನು ಹರಪನಹಳ್ಳಿಯ ಸೋಮಶೇಖರ ನಾಯಕ ಎನ್ನುತ್ತಾರೆ. ಅವನ ಹಣೆಯ ಮೇಲೆ ನಾಮ ಇದೆ). ಮಾಂತ್ರಿಕ ಚಿಹ್ನೆಗಳ ಒಂದು ಶಿಲಾಫಲಕ ವಿಶೇಷ ಗಮನವನ್ನು ಸೆಳೆಯಿತು. ಒಂದರ ಒಳಗೊಂದು ಸುತ್ತಿಕೊಂಡಿರುವ ಮೂರು ಚಕ್ರಗಳ ಮೇಲ್ಭಾಗದ ಚಕ್ರದ ಮೇಲೆ ಸುತ್ತಲೂ ತ್ರಿಶೂಲಗಳನ್ನು ಕೆತ್ತಿದೆ. ಮೇಲೆ ಸೂರ್ಯ ಚಂದ್ರರ ಕೆತ್ತನೆ ಇದೆ. ಕೆಳಗೆ ತ್ರಿಕೋನಗಳು ಚೌಕಗಳು ಇವೆ. ಇನ್ನೂ ಅನೇಕ ಚಿಹ್ನೆಗಳಿವೆ. ಆಗಲೇ ಸೂಚಿಸಿದಂತೆ ಆ ಬಗ್ಗೆ ಮಾಟದ ಸಂಪ್ರದಾಯವನ್ನು ತಿಳಿದವರಿಂದ ಅಧ್ಯಯನ ನಡೆಯುವ ಅಗತ್ಯವಿದೆ. 'ಮಾಟ'ದ ಸತ್ಯಾಸತ್ಯತೆಯ ವಿಷಯ ಬೇರೆ; ಕೊನೆಯ ಪಕ್ಷ, ಚಿಹ್ನೆಗಳ ಪಾರಂಪರಿಕ ಅರ್ಥವೇನೆಂಬುದು ಹೊರಬರಬೇಕು - ಅದು ಕೇವಲ ಶೈಕ್ಷಣಿಕಾಸಕ್ತಿಯ ವಿಷಯ ಮಾತ್ರ.

ನನ್ನ ವಿಶೇಷ ಗಮನವನ್ನು ಸೆಳೆದುದು ಆ ಊರಿನ ನಾರಾಯಣದೇವರ ಗುಡಿ: ಅದು ಮೂಲತಃ ನಾರಾಯಣದೇವರ ಕೆರೆ ಊರಿನದು. ಆ ದೇವಾಲಯಕ್ಕೆ ಸಂಜೆ ಅದೇ ಊರಿನ ಡಾ. ಅಂಬಣ್ಣ (ಇವರು ಸಾಹಿತ್ಯಾಸಕ್ತಿಯ, ಆಯುರ್ವೇದದ ಬಹು ಜನಪ್ರಿಯ ವೈದ್ಯರು) ಮತ್ತು ಅದೇ ಊರಿನ ನಾರಾಯಣಮೂರ್ತಿಯವರ ಜೊತೆ ಹೋದಾಗ ಆ ದೇವರ ಮುಂಭಾಗದಲ್ಲಿ ಹಲವು ಜನ ಕುಳಿತು ಲೋಕಾಭಿರಾಮವಾಗಿ ಮಾತನಾಡುತ್ತಿದ್ದರು. ಆ ಗುಡಿಯ ಬಳಿ ಲೈಂಗಿಕ ಶಿಲ್ಪಗಳನ್ನುಳ್ಳ ಎಣ್ಣೆ ಬಳಿದ ಎರಡು ರಥಗಳಿದ್ದುವು. ಅದೊಂದು ವಿಜಯನಗರ ಕಾಲದ ಸುಂದರ ದೇವಾಲಯ. ಅದರ ಕಂಬಗಳ ಮೇಲೆ ಬೇರೆ ಬೇರೆ ಶಿಲ್ಪಗಳಿದ್ದರೂ ಒಂದು ಕಂಬ ವಿಶೇಷವಾಗಿ ನನ್ನ ಗಮನವನ್ನು ಸೆಳೆಯಿತು. ಬಲಗಡೆ ಸೊಂಟದ ಮೇಲೆ ಕೈಯಿಟ್ಟಿರುವ ವಿಠ್ಠಲ ಸ್ವಾಮಿಯ ಮೂರ್ತಿ, ಎಡಗಡೆ ತಂತೀ ವಾದ್ಯವನ್ನು ನುಡಿಸುತ್ತಿರುವ ಒಬ್ಬ ಭಕ್ತನ ಮೂರ್ತಿ. ಆ ಭಕ್ತನ ಹೆಸರು ಅಲ್ಲಿನ ಶಾಸನವೇ ಹೇಳುವಂತೆ "ಭಾಗವತ ತಿಮ್ಮಯ್ಯ", ವಿಷ್ಣುಭಕ್ತನಾಗಿದ್ದ ತಿಮ್ಮಯ್ಯ. ಆ ಶಾಸನದ ಲಿಪಿ ಸ್ಪಷ್ಟವಾಗಿ ಸುಮಾರು ಕ್ರಿ.ಶ. 1550, ಪುರಂದರದಾಸರ ಕಾಲದ್ದು. ಮೋಟು ಪಂಚೆ ಉಟ್ಟು ಬಲಗೈಯಲ್ಲಿ ಕಿನ್ನರಿ ನುಡಿಸುತ್ತ ಎಡಗೈ ಎತ್ತಿ ಹಾಡುತ್ತಿದ್ದಾನೆ. ವಿಶೇಷವಾಗಿ ಅವನ ಕೈಯಲ್ಲಿದ್ದ ತಂತೀವಾದ್ಯದ ರಚನೆ ನನಗೆ ಮುಖ್ಯವಾಗಿ ಕಂಡಿತು. ಮೇಲೊಂದು ಬುರುಡೆ ಇದ್ದು, ಇಡೀ ವಾದ್ಯವನ್ನು ಎದೆಗೊತ್ತಿಗೊಂಡು ಮೇಲಿನ ಬುರುಡೆಯನ್ನು ಬಲಭುಜದ ಮೇಲೆ ನಿಲ್ಲಿಸಿಕೊಂಡು ನುಡಿಸುವ ರೀತಿಯಲ್ಲಿತ್ತು.

ಭಾಗವತ ತಿಮ್ಮಯ್ಯನ ಕಾಲದವನೇ ಆದ ಪುರಂದರದಾಸನೂ ಕೂಡ ಒಬ್ಬ ವಿಠ್ಠಲನ ಭಕ್ತ. ಪುರಂದರದಾಸನೂ ಹಂಪೆಯ ಪ್ರದೇಶದಲ್ಲಿದ್ದವನೇ, ಕೃಷ್ಣದೇವರಾಯನ ರಾಜಗುರು ವ್ಯಾಸರಾಯರ ಶಿಷ್ಯ. ತಿಮ್ಮಯ್ಯ ಪುರಂದರ ಇಬ್ಬರೂ ಪರಸ್ಪರ ಬಲ್ಲವರೇ? ತಿಳಿಯದು.

ಪುರಂದರದಾಸನ ಹಿಂದಿನ ಶಿಲ್ಪ, ಚಿತ್ರ ನಮಗೆ ದೊರಕುತ್ತಿಲ್ಲ. ಹಂಪೆಯ ಪುರಂದರ ಮಂಟಪದ ಕಂಬದ ಮೇಲಿನ ಅವನ ಶಿಲ್ಪ ಈಚೆಗೆ, 1940ರಿಂದ ಈಚೆಗೆ ಕೆತ್ತಿದ್ದು. ಅವನ ಕೈಯಲ್ಲಿ ಈಗಿನ ಸಂಗೀತ ಕಚೇರಿಗಳಲ್ಲಿ ಬಳಸುವ ತಂಬೂರಿಯನ್ನು ಶಿಲ್ಪಿಯು ಕೆತ್ತಿರುವುದು ಸರಿಯಲ್ಲವೆಂದೂ, ಅವನ ಕೈಯ ತಂತೀ ವಾದ್ಯವು ಭಾಗವತ ತಿಮ್ಮಯ್ಯನ ಕೈಯಲ್ಲಿರುವ ವಾದ್ಯದಂತಿರಬೇಕೆಂದೂ ನನಗೆ ಹೊಳೆಯಿತು. ಪುರಂದರನ ವೇಷಭೂಷಣಗಳೂ ಕೂಡ ತಿಮ್ಮಯ್ಯನಂತೆ ಇದ್ದರೆ ಚರಿತ್ರೆಗೆ ಹೆಚ್ಚು ಸಮೀಪವಾಗುತ್ತದೆ. ಈ ಹೊಸ ಅಂಶದ ಬಗ್ಗೆ ಲೇಖನ ಬರೆಯುವುದಾಗಿ ಹೇಳಿ, ಅದರ ಚಿತ್ರ ತೆಗೆಸಿ ಕಳಿಸಲು ಡಾ. ಅಂಬಣ್ಣನವರನ್ನು ಕೇಳಿಕೊಂಡೆ. (ಮುಂದೆ ಅವರು ಚಿತ್ರ ಕಳಿಸಿದರು, ಆ ಬಗ್ಗೆ ನಾನು ಒಂದು ಲೇಖನವನ್ನೂ ಪ್ರಕಟಿಸಿದ್ದೇನೆ)

ಡಾ. ಅಂಬಣ್ಣ ಅವರು ಮುಂದೆ ಬರೆದ ಒಂದು ಪತ್ರದ ಪ್ರಕಾರ ನಾರಾಯಣ ದೇವರ ಕೆರೆ ಎಂಬ ಊರಿನ ಮೊದಲ ಹೆಸರು "ಗೊಲ್ಲರ ಕೆರೆ" ಎಂದಿದ್ದು, ಆ ಊರಲ್ಲಿ ಮೇಲ್ಕಂಡ ನಾರಾಯಣ ದೇವಾಲಯದಿಂದಾಗಿ ಹಳೆಯ ಹೆಸರ ಜಾಗದಲ್ಲಿ ಹೊಸ ಹೆಸರು ಬಂದಿತು. ಆ ಕೆರೆಗೆ ಒಂಬತ್ತು "ಮದಗ"ಗಳಿದ್ದುವಂತೆ ('ಮದಗ'ದ ವಿವರಣೆ ಹಿಂದೆಯೇ ಬಂದಿದೆ). ಟಿಪ್ಪುಸುಲ್ತಾನನು ಆ ಊರಿಗೆ ಬಂದು ಲಕ್ಷ್ಮೀನಾರಾಯಣ ದೇವರಿಗೆ ಒಂದು "ಪಟ್ಟಾಭಿರಾಮ ಸರ" ಮತ್ತು ಮೂರು ಕಿರೀಟಗಳನ್ನು ಮಾಡಿಸಿಕೊಟ್ಟನೆಂದೂ ಆ ಕಾಲದಲ್ಲಿ ಆ ಊರು ಹರಪನಹಳ್ಳಿಯ ಪಾಳೇಗಾರ ಸೋಮಶೇಖರ ನಾಯ್ಕನ ಅಧೀನದಲ್ಲಿತ್ತೆಂದೂ ಜನ ಪ್ರತೀತಿ ಇದೆ. ಇನ್ನೊಂದು ಪ್ರತೀತಿಯ ಪ್ರಕಾರ, ಗೊಲ್ಲರ ಕೆರೆಯಲ್ಲಿದ್ದ ಒಂದು "ತುರ್ಚಿಕರ ವರ್ತಿ"ಗೆ (ಇಳಿದು ನೀರು ತುಂಬಿಕೊಳ್ಳುವ ಬಾವಿ) ಹರಿದಾಸ ನರಹರಿ ತೀರ್ಥರು ಇಳಿದಾಗ ಅಲ್ಲಿ ಪ್ರತ್ಯಕ್ಷವಾದ ಲಕ್ಷ್ಮೀನಾರಾಯಣಸ್ವಾಮಿಯು ತನಗೆ ಆ ಊರಲ್ಲಿ ಆಂಜನೇಯ ಗುಡಿ ಕಟ್ಟಿಸಲು ಆದೇಶಿಸಿದನೆಂದೂ ಅದರಂತೆ ಆ ದೇವಾಲಯ ನಿರ್ಮಾಣವಾಯಿತೆಂದೂ ಪ್ರತೀತಿ ಇದೆ. "ವರ್ತಿ" ಎಂದರೆ ಒರತೆ, ನೀರು ಜಿನುಗುವ ಗುಂಡಿ. "ತುರ್ಚಿಕರ" ಎಂದರೇನೋ ತಿಳಿಯದು. ("ಬದುಕು" ಮಾತಿಗೆ ಆಸ್ತಿ, ಸಂಪತ್ತು ಎಂಬರ್ಥಗಳೂ ಹಿಂದೆ ಇದ್ದುವು. ಬೆಳಗಾವಿ ಪ್ರದೇಶದಲ್ಲಿ ಕೆಲವೆಡೆ ಆ ಮಾತಿಗೆ ಹೂತಿಟ್ಟ ನಿಧಿ ಎಂಬರ್ಥವಿದೆಯೆಂಬ ಸಂಗತಿ ಅಲ್ಲಿ ತಿಳಿದದ್ದನ್ನು ಇಲ್ಲಿ ಕುತೂಹಲಕ್ಕಾಗಿ ದಾಖಲಿಸುತ್ತಿದ್ದೇನೆ).

ನಾರಾಯಣ ದೇವರ ಗುಡಿಯ ಸಮೀಪವೇ ಹನುಮ ಮತ್ತು ಲಕ್ಷ್ಮೀನಾರಾಯಣ ದೇವಾಲಯಗಳಿವೆ. ಆ ದೇವಾಲಯಗಳ ಕೆತ್ತನೆಯ ಕಂಬಗಳೂ ಕೂಡ ಆಕರ್ಷಕ. ಆ ಪ್ರದೇಶದ ಜನರನ್ನು ಕೇಳಿದಾಗ, ಭಾಗವತ ತಿಮ್ಮಯ್ಯನ ಶಿಲ್ಪ ಶಾಸನಗಳಿದ್ದ ಕಂಬವನ್ನು "ಪುರಂದರ ದಾಸರ ಕಂಬ"ವೆಂದೂ ಕರೆಯುವ ಸಂಗತಿ ತಿಳಿಯಿತು. ಇಬ್ಬರು ಶಾನುಭೋಗರ ಮತ್ತು ನಾರಾಯಣ ಮೂರ್ತಿಯವರ ಜೊತೆ ಊರ ಹೊರಗಿನ ಒಂದು ವೀರಶೈವಮಠಕ್ಕೆ ಹೋದೆ. ಅದೊಂದು ದೊಡ್ಡ ಕಟ್ಟಡ. ಅಲ್ಲಿದ್ದ ಒಬ್ಬ ಚೂಟಿ ಹುಡುಗನ ನಡವಳಿಕೆ ನನಗೆ ಪ್ರಿಯವಾಯ್ತು. ಮಠದ ಯಜಮಾನರ ದರ್ಶನ ಆಗಲಿಲ್ಲ. "ಬಳ್ಳಕ್ಷರ" ಎಂದರೆ ಮಕ್ಕಳ

ಬರಹ, elementary writing ಎಂಬರ್ಥದ ಪದ ಆ ಪ್ರದೇಶದಲ್ಲಿರುವುದು ತಿಳಿಯಿತು. "ಬಳ್ಳಿ" ಎಂದರೆ ಕಾಗುಣಿತ : ಇದಕ್ಕೆ ಪ್ರಾಚೀನ ಪ್ರಯೋಗಗಳು ದೊರಕುತ್ತವೆ.

ಎಲ್ಲ ಮುಗಿಸಿ ಕೊಟ್ರಬಸವಯ್ಯನವರ ಮನೆಗೆ ಹೋದಾಗ ರಾತ್ರಿ ಎಂಟು ಗಂಟೆ. ಆ ಹೊತ್ತಿಗೆ ಅವರ ಮನೆ ತುಂಬ ನೆಂಟರಿಷ್ಟರು ಬಂದಿಳಿದಿದ್ದರು. ಸಡಗರವೋ ಸಡಗರ. ಅವರ ಹೊಸಪೇಟೆಯ ಬಂಧುಗಳೊಬ್ಬರು, ಗಣಿ ಒಡೆಯರು, ಶ್ರೀಮಂತರು ಬಂದಿದ್ದು ಅವರು ನನ್ನ ಜೊತೆ ಬರೀ ಇಂಗ್ಲಿಷಿನಲ್ಲಿ ಮಾತನಾಡಿ ಡೆಲ್ಲಿಗೆ ವಿಮಾನದಲ್ಲಿ ಹೋಗಲಿರುವ ವಿಷಯ ತಿಳಿಸಿದರು. ಹುಡುಗನ ಕಡೆಯವರು ಹಳ್ಳಿಯ ಜನರಾದರೂ ಚಾಲೂಕಾಗಿದ್ದರು; ಮತ್ತು ಸಹಜ ನಡೆಯವರಾಗಿದ್ದರು. ಬೆಂಗಳೂರಿನ ನನ್ನ ಜೊತೆ ಅವರಲ್ಲಿ ಕೆಲವರು ನಟ ಡಾ. ರಾಜಕುಮಾರ್ ವಿಷಯ ಮಾತನಾಡಲು ಬಹು ಉತ್ಸಾಹವನ್ನು ತೋರಿಸಿದರು. ಅವರನ್ನು ವೈಯಕ್ತಿಕವಾಗಿ ಬಲ್ಲ ನಾನು ಅವರ ಬಗ್ಗೆ ನನಗೆ ತಿಳಿದುದನ್ನು ಹೇಳಿ ಸಂತೋಷಪಡಿಸಿದೆ. ಅಂಗಳದ ಕಟ್ಟೆ ಮೇಲೆ ನಾವು ಮಾತನಾಡುತ್ತಿದ್ದರೆ ಒಳಗೆ ನಿಶ್ಚಿತಾರ್ಥದ ಶಾಸ್ತ್ರ ನಡೆದಿತ್ತು. ನಾವಿದ್ದಲ್ಲಿಗೇ ವೀಳ್ಯ ಬಂದಿತು. ರಾತ್ರಿ ಹತ್ತೂವರೆಗೆ ಊಟದ ವ್ಯವಸ್ಥೆಯಾಯಿತು. ನನಗೆ ಸ್ವಲ್ಪ ಅಜೀರ್ಣವಿದ್ದರೂ "ನಮ್ಮವರು" ಆದ್ದರಿಂದ ಊಟ ಮಾಡಲೇಬೇಕಾಯ್ತು. ಇಡೀ ಕಾರ್ಯಕ್ರಮ ಬಹು ಹಿತವಾಗಿತ್ತು. ಮರಿಯಮ್ಮನ ಹಳ್ಳಿಯಲ್ಲಿ ತಿಳಿದುಬಂದಂತೆ ಹಿರಿಯೂರಿನ ಜಿ.ಎಂ. ನಿಜಗುಣ ಮೂರ್ತಿಯವರಲ್ಲಿ ಸಾಕಷ್ಟು ಹಸ್ತಪ್ರತಿಗಳಿವೆ. ಆಸಕ್ತರು ಹೋಗಿ ಅವನ್ನು ಪರಿಶೀಲಿಸಬೇಕು. ಸಂಯುಕ್ತ ಪದವಿ ಪೂರ್ವ ಕಾಲೇಜಿನಲ್ಲಿ ಮಲಗಿದಾಗ ರಾತ್ರಿ ಹನ್ನೆರಡಾಗಿತ್ತು. ರಾತ್ರಿ ಸ್ವಲ್ಪ ಚಳಿಯೂ ಆಯ್ತು.

## ಹೊಸಪೇಟೆ

ಬೆಳಿಗ್ಗೆ (17.6.85) ಟೀ ಕುಡಿದು ಮರಿಯಮ್ಮನ ಹಳ್ಳಿಯಿಂದ ನೇರವಾಗಿ ಹೊಸಪೇಟೆಗೆ ಹೊರಟೆ. ರಾತ್ರಿಯೇ ನಾನು ಹಿಂದೆ ಹೇಳಿದ ಶ್ರೀಮಂತರ ಕಾರಲ್ಲಿ ನನ್ನ ಚೀಲ ಹೊಸಪೇಟೆಗೆ ತೆರಳಿತ್ತು. ಎದುರಿಗೆ ಹೊಸಪೇಟೆ ಗುಡ್ಡದ ಸಾಲು; ಕಬ್ಬಿಣದ ಅದುರನ್ನು ಸಮೃದ್ಧವಾಗಿ ಗರ್ಭೀಕರಿಸಿಕೊಂಡಿರುವ ಭವ್ಯ ಬೆಟ್ಟಗಳು. ದಾರಿಯಲ್ಲಿ ವ್ಯಾಸರಾಯನ ಕೆರೆ ಊರಲ್ಲಿ ಹುಲುಗೆಮ್ಮನ ದೇವಾಲಯವಿತ್ತು. ದೊಡ್ಡ ಬಣ್ಣದ ವಿಗ್ರಹಗಳಿಗೆ ಬಳೆಗಳನ್ನು ಕಟ್ಟಿದ್ದರು. ದಾರಿಯ ಎಡಕ್ಕೆ ಬತ್ತಿದ ತುಂಗಭದ್ರಾ ಜಲಾಶಯವಿದ್ದರೆ ಬಲಗಡೆ ಸೊಂಡೂರ್ ಐರನ್ ವರ್ಕ್ಸ್ ಕಾರ್ಖಾನೆ ಒಂದೇ ಸಮನೆ ಹೊಗೆ ಉಗುಳುತ್ತಿತ್ತು. ಏರಿಯಲ್ಲಿ ಹೋಗುತ್ತಿದ್ದ ಒಂದು ಎತ್ತಿನ ಬಂಡಿಯ ಹುಡುಗನಿಗೆ ನನ್ನ ಬಗ್ಗೆ ಕರುಣೆ ಬಂದಿತೆಂದು ಕಾಣುತ್ತದೆ. ಬಂಡಿ ಏರಲು ನನ್ನನ್ನು ಕರೆದ. "ದೇವರು ಒಂದು ಭಾವನೆ, ಒಂದು ಆದರ್ಶ. ಮಾನವನ ತೀವ್ರ ಭಯದ ತುದಿ ಬಿಂದುವಿನಲ್ಲಿ ದೇವರ ಜನನ" ಎಂದು ಚಿಂತಿಸಿದೆ. ಅಂತೆಯೇ ಅವನು ಒಂದು ವಾಸ್ತವ, ಒಂದು ಚಿರಂತನ ಸತ್ಯ ಎಂಬ ದೃಢ ವಿಶ್ವಾಸವು ನನ್ನ ಭಾಗವಾಗಿತ್ತು. "ಓ ದೇವರೆ, ನನ್ನನ್ನು ಆದರ್ಶದ ಶಿಖರಕ್ಕೆ, ಮನುಷ್ಯತ್ವದ

ಮಹೋನ್ನತ ತುದಿಗೆ ನಡೆಯಿಸು. ನನ್ನ ನಾಡು ನುಡಿಗಾಗಿ ನನ್ನನ್ನು ಅರ್ಪಿಸಿಕೊಳ್ಳುತ್ತಿದ್ದೇನೆ. ನಾನು ಒಬ್ಬ 'ಗರುಡ'ನಾಗಬೇಕು" ಎಂದು ಚಿಂತಿಸಿದೆ. ನನ್ನ ದೃಢ ಶ್ರದ್ಧೆಯ ಕುರುಹಾಗಿ ಹಂಪೆಯಲ್ಲಿ ನನ್ನ ಕಿರು ಬೆರಳನ್ನು ಏಕೆ ಅರ್ಪಿಸಬಾರದು ಎಂದು ಹಿಂದೆ ಕನಸು ಕಂಡದ್ದು ನೆನಪಾಗಿ ಒಂದು ಕ್ಷಣ ನಡುಗಿದೆ. ಆ ಕ್ಷಣವೇ ನನಗೆ ಧೈರ್ಯ ಕೊಟ್ಟಿದ್ದು "ಅಭೀಃ" ಎಂಬ ಅಮೃತಸಮ ವಾಣಿ. ನನ್ನ ಈ ಕಾಲ್ನಡಗೆಯ ಬಗ್ಗೆ ಜನ ಹೇಗೆ ಚಿಂತಿಸಿಯಾರು ಎಂಬ ಭಯ ಒಂದು ಕಡೆ. ಆ ಬಗ್ಗೆ ಏನೂ ಯೋಚಿಸಲೇಬೇಡ ಎಂಬ ಸಮಾಧಾನ ಮರುಕ್ಷಣದಲ್ಲಿ. ಕನ್ನಡದ ದೃಢ ಸಂಕಲ್ಪವನ್ನು ಗಟ್ಟಿಗೊಳಿಸುವ, ನನ್ನದೇ ಆ ಕ್ಷಣ ಕಟ್ಟಿದ, ಹೊಳೆದ, ಬಾಯಿಂದ ಬಂದ ಹಾಡೊಂದನ್ನು ಗಟ್ಟಿಯಾಗಿಯೇ ಹಾಡುತ್ತ ತೀವ್ರ ಉತ್ಸಾಹದಿಂದ ಮುನ್ನಡೆದೆ - ಮುಂದಿನಿಂದ ಯಾವ ಬಸ್ಸೂ ಬರುತ್ತಿಲ್ಲವೆಂದು ಖಚಿತಪಡಿಸಿಕೊಂಡು (ಹಿಂದಿನಿಂದ ಬರುವ ಬಸ್ಸುಗಳ ಬಗ್ಗೆ ನನಗೆ ಯೋಚನೆ ಇರಲಿಲ್ಲ).

ಕನ್ನಡವೆ ನನ್ನ ದೈವ, ಕನ್ನಡವೆ ನನ್ನ ಪ್ರಾಣ
ಕನ್ನಡವೆ ನನ್ನ ಉಸಿರು, ಕನ್ನಡವೆ ನನ್ನ ಹೆಸರು
ಕನ್ನಡವೆ ನನ್ನ ಒಳಗು, ಕನ್ನಡವೆ ನನ್ನ ಹೊರಗು
ಕನ್ನಡವೆ ನನ್ನ ನೆಲ, ಕನ್ನಡವೆ ನನ್ನ ಬಾನು
ಕನ್ನಡವೆ ನನ್ನ ಮಾನ, ಕನ್ನಡವೆ ನನ್ನ ಪ್ರಾಣ

ಮತ್ತೆ ಮತ್ತೆ "ದೈವವೇ ದೈವವೇ" ಎಂದು ಉದ್ಗರಿಸಿದೆ. ನನ್ನ ಒಳಗನ್ನು ಪರೀಕ್ಷಿಸಿದ್ದೇನೆ, ಅದು ದೃಢವಾಗುತ್ತಿದೆ ಎಂದು ಭಾವಿಸಿದೆ. "ದೇವರೇ, ನನ್ನ ಸಂಸಾರದ ರಕ್ಷಣೆ ನಿನ್ನದು. ಹೆಂಡತಿ, ಮಕ್ಕಳು, ತಾಯಿ ಇವರನ್ನು ನಿನ್ನ ಶ್ರೀರಕ್ಷೆಗೆ ತೆಗೆದುಕೋ. ತಂಗಿಯ ಸಂಸಾರ ನೇರವಾಗಲಿ. ನನ್ನನ್ನು ನಿನ್ನ ಉಪಕರಣವಾಗಿ ಮಾಡಿಕೋ - ನಾ ನಿನ್ನ ಕೈಯ ಗುದ್ದಲಿ-ಅಗಿ; ಲೇಖಣಿ - ಬರಿ; ಕುಂಚ - ಚಿತ್ರಿಸು; ಖಡ್ಗ - ತಿವಿ." ಎಲ್ಲವೂ ಹುಚ್ಚು ಹುಚ್ಚು ಮಾತುಗಳು, ಆದರೆ ಅವನ್ನು ಆಡಿದಾಗ ಅಲ್ಲ. ಎದುರಿಗೆ ಪಕ್ಕದಲ್ಲಿ ಬೆಟ್ಟಗಳು, ಬೆಟ್ಟಗಳ ಮುಂದೆ ಚಿಕ್ಕ ಬೆಟ್ಟಗಳು. ಬೆಟ್ಟದ ಕೆಳಗೆ ಮುಂಭಾಗದಲ್ಲಿ ಒಂದು ಚಿಕ್ಕ ಬೆಟ್ಟ ನನಗೆ ಸವಾರ ಮತ್ತು ಅವನು ಏರಿದ ಕುದುರೆಯನ್ನು ನೆನಪಿಗೆ ತಂದು, ವಿಜಯನಗರ ಶೈಲಿಯ ಶಿಲ್ಪದಲ್ಲಿ ಕುದುರೆ ಏರಿದ ಸವಾರ ಒಂದು ಆಶಯವಾಗಿ (Motif) ಮೂಡಲು ಇಂತಹ ದೃಶ್ಯ ಕಾರಣವಿರಬಹುದೇ ಎಂಬ ಊಹೆಯೂ ಸುಳಿಯಿತು (ನನ್ನಲ್ಲಿನ ಸಂಶೋಧಕ ಆ ಭಾವುಕದ ಕಲ್ಪನೆಯನ್ನು ತಿರಸ್ಕರಿಸಿದ). ಗುಡ್ಡಗಳ ತುದಿಯ ಗಣಿಗಳಿಂದ ಅದುರು ತುಂಬಿದ ಲಾರಿಗಳ ಸಂಚಾರ ಸಾಕಷ್ಟು ನಡೆದಿತ್ತು. ಬೆಟ್ಟಗಳ ಬುಡದಲ್ಲಿ ಶ್ರೀಗಂಧದ ಕಾದಿಟ್ಟ ಅರಣ್ಯದ ರಮ್ಯದೃಶ್ಯ. ಬತ್ತಿದ ತುಂಗಭದ್ರಾ ಜಲಾಶಯದ ನೀರು ಸರಿದು ಹಿಂದೊಮ್ಮೆ ಇದ್ದ ಪಳ್ಳಿಯ ಒಂದು ಶಾಸನ ಸಮೇತ ವೀರಗಲ್ಲು ರಸ್ತೆಗೇ ಕಾಣಿಸುತ್ತಿತ್ತು. ಮುಂದೆ ಕಣಿವೆಯಲ್ಲಿ ಕಣಿವೆ ವೀರಭದ್ರನ ಗುಡಿಯ ಪೌಳಿಯಲ್ಲಿ ಒಂದು ಪುಟ್ಟ ಸುಂದರ ವಿಷ್ಣು ವಿಗ್ರಹವಿತ್ತು. ಅದನ್ನು ಯಾರೂ ಕಾಣದಂತೆ ನನ್ನ ನೀರಿನ ಬಾಟಲಿ ಕೈ ಚೀಲಕ್ಕೆ ಸೇರಿಸುವ ಬಯಕೆಯನ್ನು ಸ್ವಲ್ಪ ಕಷ್ಟದಿಂದ ಹತ್ತಿಕ್ಕಿದೆ. ಅದನ್ನು ಕೈಗೆತ್ತಿಕೊಂಡಿದ್ದವನು ನನ್ನ ಸಣ್ಣತನಕ್ಕೆ, ವಿಗ್ರಹ ಚೌರ್ಯ

ಕೃತ್ಯಕ್ಕೆ ನನಗೇ ನಾಚಿಕೆಯಾಗಿ ಅಲ್ಲೇ ಇಟ್ಟೆ. ಆಸೆಯನ್ನು ಗೆಲ್ಲುವುದು ಎಷ್ಟು ಕಷ್ಟವೆಂಬುದು ಇಂತಹ ಸಂದರ್ಭಗಳಲ್ಲೇ ತಿಳಿಯುವುದು. ಅಲ್ಲೇ ಇನ್ನೊಂದು ವೇಣುಗೋಪಾಲನ ಶಿಲ್ಪವೂ ರಸ್ತೆ ಬದಿಯಲ್ಲಿ ಭಗ್ನ ವಿಷ್ಣು ವಿಗ್ರಹವೂ ಇದ್ದುವು. ಮೂಲತಃ ಅಲ್ಲೊಂದು ವಿಷ್ಣು ದೇವಾಲಯವಿದ್ದಿರಬೇಕು. ಅಲ್ಲಿನ ಮಠದಲ್ಲಿ ವೀರಶೈವ ಸ್ವಾಮಿಗಳು ಇರಲಿಲ್ಲ. ವಿದ್ಯಾವಂತ ಕುಟುಂಬದ ಹೆಣ್ಣು ಗಂಡು ಭಕ್ತರು ಅಲ್ಲಿಗೆ ಬಂದಿದ್ದರು. ಕಣಿವೆ ಬಸವಣ್ಣನ ದೇವಾಲಯದ ಮುಂದೆ ವಾಹನಗಳನ್ನು ನಿಲ್ಲಿಸಿ ಹಣವನ್ನು ಗುಡಿ ಮುಂದೆ ಎಸೆದದ್ದು ಸಾಕಷ್ಟು ಸಂಗ್ರಹಗೊಂಡಿತ್ತು. ಮುಂದೆ ಹುಲಿಗೆಮ್ಮ ದೇವತೆಯ ಸಂಕೇತವಾಗಿ ಎರಡು ಗುಂಡುಗಳೂ ಒಂದು ಭಗ್ನ ನಂದಿ ವಿಗ್ರಹವೂ ಇದ್ದುವು. ಮುಂದೆ ಬಲಗಡೆ ಈಚೆಗೆ ಕಟ್ಟಲಾದ ಈಶ್ವರ ದೇವಾಲಯದಲ್ಲಿ ಬಹುಶಃ ಪ್ಲಾಸ್ಟರ್ ಆಫ್ ಪ್ಯಾರಿಸಿನಲ್ಲಿ ಮಾಡಿದ ಬಿಳಿ ಈಶ್ವರಲಿಂಗವಿತ್ತು (ಅಮೃತ ಶಿಲೆಯದು ಎಂದು ಅನ್ನಿಸಲಿಲ್ಲ). ಇಡೀ ಆ ಕಣಿವೆ ಪ್ರದೇಶ ದೊಡ್ಡ ಬೆಟ್ಟಗಳ ಅದ್ಭುತ ದೃಶ್ಯಗಳಿಂದ ಕೂಡಿತ್ತು.

ಮುಂದೆ ಎರಡು ಮೂರು ಕಿಲೋಮೀಟರ್ ದೂರದಲ್ಲಿ ಹೊಸಪೇಟೆ ನಗರ ಕಾಣಿಸುತ್ತಿತ್ತು. ಊರ ಹೊರಭಾಗದಲ್ಲೇ ಸಾಕಷ್ಟು ಗಜಿಬಿಜಿಯಿತ್ತು. ದೂರದೂರಿನ ಲಾರಿಗಳ ಹತ್ತಿರ ಹರೆಯದ ಹುಡುಗಿಯರು ಲಾರಿ ಚಾಲಕರ ಜೊತೆ ಮಾತನಾಡುತ್ತಿದ್ದರು (ಬಹುಶಃ ವ್ಯವಹಾರ ಕುದುರಿಸುತ್ತಿದ್ದರು). ಬೆಟ್ಟ ಕಣಿವೆ ಪ್ರದೇಶದ ಪ್ರಸನ್ನ ವಾತಾವರಣಕ್ಕೂ ಇದಕ್ಕೂ ಎಲ್ಲಿಂದೆಲ್ಲಿಯ ಸಂಬಂಧ ! ಮೇದಾರ ಕೇತಯ್ಯಗಳ ಭಕ್ತರ ಮಠದ ಸ್ವಾಮಿಗಳೊಬ್ಬರು ಅವಾಚ್ಯ ಶಬ್ದವನ್ನು ಬಳಸಿ ಕಲ್ಲುಂಡಿಂದ ಒಂದು ಎಮ್ಮೆ ಓಡಿಸಿದರು. ಅಲ್ಲೇ ಚೌಡೇಶ್ವರಿ ದೇವಾಲಯವಿತ್ತು. ಇಕ್ಕಟ್ಟಾದ ಗಲ್ಲಿಗಳಲ್ಲಿ ಹಾದು ನಗರ ಮಧ್ಯದ ಶ್ರೀ ಕೊಟ್ಟೂರೇಶ್ವರ ಮಠಕ್ಕೆ ಹೋದೆ.

ಶ್ರೀ ಕೊಟ್ಟೂರೇಶ್ವರ ಮಠದ ಶ್ರೀ ಸಂಗನಬಸವ ಸ್ವಾಮಿಗಳು ನನಗೆ ಬಹು ದಿನಗಳಿಂದ ಪರಿಚಯ. ಅವರ ನಿಕಟ ಸಂಪರ್ಕವೆಲ್ಲ ಬಹುತೇಕ ಹಳ್ಳಿಗರ ಜೊತೆಯಾದ್ದರಿಂದ ಅದರ ಛಾಯೆ ಅವರ ನಡೆ ನುಡಿಗಳಲ್ಲಿ ಕಾಣಿಸುತ್ತದೆ. ನಿಷ್ಕಳಂಕ ಹೃದಯದ ಅವರು ಒಳ್ಳೆಯ ಮಾತುಗಾರರಲ್ಲದಿದ್ದರೂ, ಒಳ್ಳೆಯ ಸಾಮಾಜಿಕ ಕಾಳಜಿ ಉಳ್ಳ ಸೇವಾ ಮನೋಭಾವದ ಸರಳರು. ಹಿಂದೆ ನಾನು ಹಂಪಿಯಲ್ಲಿ ಹರಿಹರನ ವಾಸಸ್ಥಾನದ ಬಗ್ಗೆ ಶೋಧಗಳನ್ನು ಕೈಗೊಂಡಾಗ ಅವರು ಎಲ್ಲ ರೀತಿಯಲ್ಲಿ ಸಹಕರಿಸಿದ್ದರು. ಮಠಕ್ಕೆ ಹೋದಾಗ ಸ್ವಾಮಿಗಳು ಇರಲಿಲ್ಲ. ಮ್ಯಾನೇಜರ್ ಬಸವರಾಜ್ ನನಗೆ ಮಠದಲ್ಲಿ ಉಳಿಯಲು ತಕ್ಷಣ ವ್ಯವಸ್ಥೆ ಮಾಡಿದರು. ಹಾಲು ಬಿಸ್ಕತ್ ಸೇವನೆ ಮುಗಿಯುತ್ತಿದ್ದಂತೆ ವಿಜಯನಗರ ಕಾಲೇಜಿನ ಡಾ. ಬಸವರಾಜ ಮಲಶೆಟ್ಟಿ ಬಂದರು. ಅವರ ಜೊತೆ ಹರಟೆ ಸಾಗಿತು. ಮಠದಲ್ಲಿ ಸ್ನಾನ, ಊಟ ಮುಗಿಸಿ ಮಲಗಿಕೊಂಡರೆ ಭಾರಿ ನಿದ್ದೆ ಆವರಿಸಿತು. ಆ ದಿನ ಬಹು ಆಯಾಸವಾಗಿತ್ತು. ಹಲವು ಏರುಗಳನ್ನು ಹತ್ತಿ ಇಳಿದಿದ್ದೆ. ಸಂಜೆ ಅದೇ ಕಾಲೇಜಿನಲ್ಲಿ ಅಧ್ಯಾಪಕರಾಗಿರುವ ತಿರುಪಾಲಯ್ಯ ಬಂದು (ಆತ ನನ್ನ ವಿದ್ಯಾರ್ಥಿಯಾಗಿದ್ದರು) ತನ್ನ ಮನೆಯಲ್ಲಿ ವಿಶ್ರಮಿಸಲು ಕರೆದಾಗ ನಾನು ಒಪ್ಪಲಿಲ್ಲ. ರಾತ್ರಿ ಬೇಗ ಮಲಗಿದೆ. ನಿದ್ದೆಯೂ ಬಂತು. ಬೆಳಕಿನ ಜಾವ

ದೇವಾಲಯಗಳಲ್ಲಿ ನಡೆಯುತ್ತಿದ್ದ ಆಕರ್ಷಕ ನೃತ್ಯವೊಂದರ ಕನಸು ಕಂಡೆ. ಮನಸ್ಸು ತನ್ನನ್ನು ತಾನು ಹಗುರಗೊಳಿಸಿಕೊಳ್ಳುವ ವಿಧಾನಗಳಲ್ಲಿ ಅದೂ ಒಂದು ಇರಬಹುದು. ಒಂದು ದಿನವೂ ನನಗೆ ಕನ್ನಡದ ಕನಸು ಬೀಳಲಿಲ್ಲವೆಂದು ಕೊರಗಿದೆ. ಕನ್ನಡವು ನನ್ನ ಒಳಪ್ರಪಂಚದ ಭಾಗವಾಗಿಲ್ಲವೇ ಎಂಬ ನೋವೂ ನನ್ನನ್ನು ಕಾಡಿತು. ನೃತ್ಯದ ಕನಸಿನ ಜೊತೆಯಲ್ಲೇ ಮಿಶ್ರವಾಗಿ ನಾನು ಒಂದು ಮನೆ ಕಟ್ಟಿಸಿದ್ದು, ಅದು ತಗಡಿನ ಮನೆಯಂತೆ ಹೆಂಚಿನ ಮನೆಯಂತೆ ಕಾಣಿಸಿದ್ದು - ಇಂತಹ ಕನಸುಗಳೂ ಬಿದ್ದುವು. ಎಲ್ಲವೂ ಗೊಂದಲ. ಎಚ್ಚರವಾದಾಗಂತೂ ಆ ಗೊಂದಲವು ಗೊಂದಲತರ, ಗೊಂದಲತಮವಾಗಿ ಪರಿಣಮಿಸಿ ತಬ್ಬಿಬ್ಬು ಮಾಡಿತು.

ಬೆಳಿಗ್ಗೆ (18.6.85) ಚೆನ್ನಾಗಿ ಮಲ ವಿಸರ್ಜನೆಯಾಯಿತು. ಮಲಬದ್ಧತೆ ನನಗೆ ಅಂಟಿಕೊಂಡು ಬಂದಿರುವ ರೋಗ. ಏಕೋ ಆ ದಿನ ಬೆಳಿಗ್ಗೆ ಒಂಬತ್ತಕ್ಕೆ ಹೊಟ್ಟೆಯಲ್ಲಿ ಸಂಕಟ ಶುರುವಾಗಿ, ಸ್ವಲ್ಪ ತಿಂಡಿ ತಿಂದು ಟೀ ಕುಡಿದು ಕ್ರೋಸಿನ್ ಮಾತ್ರೆ ನುಂಗಿದೆ. ಸ್ವಲ್ಪ ಹೊತ್ತಿನಲ್ಲೇ ಬಂದ ಮಲಶೆಟ್ಟಿಯವರಿಗೆ 23ನೇ ತಾರೀಕಿನ ನನ್ನ "ಕನ್ನಡ ಸಂಕಲ್ಪ"ದ ವಿಷಯ ತಿಳಿಸಿದೆ. ಹೊಸಪೇಟೆ ಸಮೀಪದ ಉಕ್ಕಿನ ಕಾರ್ಖಾನೆ ವಿಷಯ ಪತ್ರಿಕೆಗಳಲ್ಲಿ ಪ್ರಕಟವಾಗಿತ್ತು. ಹೊಸಪೇಟೆಯಲ್ಲಿ ತೆಲುಗರದು ಮಾತ್ರವಲ್ಲ, ತಮಿಳರ ದಬ್ಬಾಳಿಕೆಯೂ ನಡೆದಿರುವ ವಿಷಯ ತಿಳಿದು ನನಗೆ ಸ್ವಲ್ಪ ಆಶ್ಚರ್ಯವಾಯಿತು. ಬಂಗಾಲಿಗಳು ದುರ್ಗಾ ಪೂಜೆ ನಡೆಸುತ್ತಾರೆ. ಲಿಂಗಾಯತರು ಬಸವ ಜಯಂತಿ ನಡೆಸುತ್ತಾರೆ - ಎರಡಕ್ಕೂ ಜನ ದೌಡಾಯಿಸುತ್ತಾರೆ. ರಾಜ್ಯೋತ್ಸವ ಎಂದರೆ ಕನ್ನಡಿಗರಿಗೇ ಅಸಡ್ಡೆ. ಸ್ಥಳೀಯ ರಾಜಕಾರಣಿಗಳ ಕಿತ್ತಾಟದಲ್ಲಿ ಪ್ರಬಲವಾಗುತ್ತಿರುವವರು ಜಮೀನುದಾರರಾದ ರೆಡ್ಡಿಗಳು. ಕನ್ನಡಿಗರಲ್ಲಿ ಒಟ್ಟಾರೆ ಸಂಘಟನೆ ಇಲ್ಲ, ಉತ್ಸಾಹವಿಲ್ಲ ಎಂಬ ನೋವಿನ ಧ್ವನಿ ಅವರ ಮಾತಲ್ಲಿತ್ತು.

ಮಠದಲ್ಲಿದ್ದ ಹುಡುಗರ ಜೊತೆ ಸ್ನೇಹ ಬೆಳೆಸಿದೆ. ಹಂಪಿಯಲ್ಲಿರುವ ಮಠದ ಕಟ್ಟಡದಲ್ಲಿ ಸಂಸ್ಕೃತ ಕಲಿಕೆಗೆ ವ್ಯವಸ್ಥೆ ಮಾಡಿ ಅಲ್ಲಿಟ್ಟಿದ್ದ ಇಪ್ಪತ್ತೆಂಟು ವಿದ್ಯಾರ್ಥಿಗಳಲ್ಲಿ ಆರು ಜನ ಮಾತ್ರ ಉಳಿದುದರಿಂದ ಅವರೆಲ್ಲರನ್ನೂ ವಾಪಸ್ ಕರಸಿ ಇಲ್ಲೇ ಇಟ್ಟಿದ್ದರು. ಕಪ್ಪು ಬಣ್ಣದ ಮುರುಗೇಶ್, ಗಿರಿಗೌಡ, ಮೈಸೂರಿನ 'ಶಾಸ್ತ್ರಿ' ಇವರೆಲ್ಲ ತೀವ್ರ ಬಡತನದ ಬೇಗೆಯಲ್ಲಿ ನಲುಗಿದವರು. ಹೊಸಪೇಟೆಯ ಶ್ರೀ ಕೊಟ್ಟೂರೇಶ್ವರ ಮಠವು ವಿರಕ್ತ ಸಂಪ್ರದಾಯದ ಮಠ.

ಮಧ್ಯಾಹ್ನ 12.30ಕ್ಕೆ ತಿರುಪಾಲಯ್ಯನ ಮನೆಗೆ ಊಟಕ್ಕೆ ಹೋದೆ. ಬಡ ಹಿನ್ನೆಲೆಯ ಅವನು ತನ್ನ ತಂಗಿಯನ್ನು ಕಷ್ಟಪಟ್ಟು ಮದುವೆಮಾಡಿದ್ದ; ಆದರೆ ಆ ತಂಗಿ ಸುಖವಾಗಿಲ್ಲ ಎಂಬ ದುಃಖದಲ್ಲಿದ್ದ. ತನ್ನ ಕೆಟ್ಟಿದ್ದ ಆರೋಗ್ಯವನ್ನು ಯೋಗಾಭ್ಯಾಸದಿಂದ ಸರಿಪಡಿಸಿಕೊಂಡ ಸಮಾಧಾನ ಅವನದು. ಅವನ ಮನೆಯಲ್ಲಿ ಮಾಡಿದ್ದ ಒಬ್ಬಟ್ಟು ಊಟವನ್ನು ಮುಕ್ತವಾಗಿ ಸ್ವೀಕರಿಸಿದೆ - ಹೇಗೂ ನನ್ನ ಕಾಲ್ನಡಗೆ ಕೊನೆಯ ಹಂತಕ್ಕೆ ಬಂದಿತ್ತು. ಅವನ ಮನೆಯಲ್ಲೇ ವಿಶ್ರಾಂತಿ ಪಡೆದು, ಕಾಫಿ ಕುಡಿದು, ಅವನು ಕೃತಜ್ಞತೆಯಿಂದ ಕೊಟ್ಟ ಕ್ಯಾಲ್ಕುಲೇಟರ್

ಪೆನ್ನು ಕಾಣಿಕೆಗಳನ್ನು ಸ್ವೀಕರಿಸಿ ಮಠಕ್ಕೆ ಹಿಂದಿರುಗಿದೆ (ಅವನಿಗೆ ಹೊಸಪೇಟೆ ಕಾಲೇಜಿನಲ್ಲಿ ಕೆಲಸ ದೊರಕಲು ನನ್ನಿಂದಾದ ಅಲ್ಪ ಸಹಾಯವೂ ಆ ಕಾಣಿಕೆಗೆ ಕಾರಣವಾಗಿತ್ತು.)

ಸಂಜೆ ಐದು ಗಂಟೆಗೆ ಮಠಕ್ಕೆ ಮಹಿಳೆಯರೂ ಸೇರಿದಂತೆ ಹಲವು ಕನ್ನಡಾಭಿಮಾನಿಗಳು, 'ಪ್ರಜಾವಾಣಿ' ಪತ್ರಿಕೆಯ ಪ್ರತಿನಿಧಿ, ಡಾ. ಮಲಶೆಟ್ಟಿ ಬಂದರು. ಅವರದೆಲ್ಲ ಒಂದೇ ಕೊರಗು - ಹೊಸಪೇಟೆಯಲ್ಲಿ ಅನ್ಯಭಾಷಿಕರ ಪ್ರಭಾವ ಹೆಚ್ಚುತ್ತಿದೆ. ತುಂಗಭದ್ರಾ ಅಣೆಕಟ್ಟಿನಲ್ಲಿ ಕನ್ನಡ ಬಲ್ಲವರು ಇಲ್ಲವೇ ಇಲ್ಲವೆನ್ನುವಷ್ಟು ಕಡಮೆ. ಸುತ್ತಮುತ್ತ ಇರುವ ಕಾರ್ಖಾನೆಗಳಲ್ಲೂ ಅಷ್ಟೇ. ಇರುವ ಕನ್ನಡಿಗರೂ ಅನ್ಯರ ಜೊತೆ ಅವರವರ ಭಾಷೆಯಲ್ಲೇ ಮಾತನಾಡುತ್ತಾರೆ. ಶಿಕ್ಷಣ ಮಾಧ್ಯಮವಾಗಿ ಕನ್ನಡ ಮೂಲೆ ಸೇರುತ್ತಿದೆ. ಇಂತಹ ಮಾತುಗಳೇ ಅಲ್ಲಿ ಕೇಳಿ ಬಂದುವು. ನಾನು ಅಂತಹ ವಿಷಯಗಳನ್ನು ಕೈಗೆತ್ತಿಕೊಳ್ಳುವ ಉದ್ದೇಶದಿಂದಲೇ ಕೆಲವು ದೃಢ ನಿರ್ಧಾರಗಳನ್ನು ಮಾಡಲು ಹಂಪಿಗೆ ಹೋಗುತ್ತಿರುವುದಾಗಿ, ಅಲ್ಲಿ 23ನೇ ತಾರೀಕು ಕನ್ನಡ ಸಂಕಲ್ಪವನ್ನು ಸ್ವೀಕರಿಸುವುದಾಗಿ ತಿಳಿಸಿ ಸಾಧ್ಯವಾದರೆ ಆ ದಿನ ಬನ್ನಿ ಎಂದು ಕರೆದೆ. ನೀವೆಲ್ಲ ಒಂದು ಸಂಘಟನೆ ಕಟ್ಟಿಕೊಳ್ಳಿ ಎಂಬ ಸೂಚನೆ ನೀಡಿದೆ. ಒಬ್ಬ ಮಹಿಳೆಯಂತೂ "ಎಲ್ಲಾ ಬರೀ ಮಾತು. ಗಟ್ಟಿಯಾಗಿ ಏನಾದರೂ ಕೆಲಸ ಆಗಬೇಕು" ಎಂದಳು. ಹೊಸಪೇಟೆ ಉಕ್ಕು ಕಾರ್ಖಾನೆಯಲ್ಲಿ ಕನ್ನಡಿಗರಿಗೆ ಉದ್ಯೋಗದಲ್ಲಿ ಆದ್ಯತೆ ಸಿಗುವ ಬಗ್ಗೆ ನೀವೆಲ್ಲ ಧ್ವನಿ ಎತ್ತಬೇಕು ಎಂಬ ಸೂಚನೆ ನೀಡಿದೆ. ಬೆಂಗಳೂರಲ್ಲಿ ನಾವು ಮಾಡಬೇಕೆಂದಿರುವ ರಾಜ್ಯಮಟ್ಟದ ಸಂಘಟನೆಗೆ ಅವರೆಲ್ಲರ ಸಹಕಾರ ಕೇಳಿದೆ.

ರಾತ್ರಿ ಮೂರು ಕಿಲೋಮೀಟರು ದೂರದಲ್ಲಿದ್ದ ಡಾ. ಮಲಶೆಟ್ಟಿ ಅವರ ಮನೆಗೆ ಊಟಕ್ಕೆ ಹೋಗಿ ಬಂದೆ. ಬಹು ಸುಖ ಸಂಸಾರ. ಮಗಳು ಬಹು ಚೂಟಿ. ನಾಳೆ ಹಂಪಿಗೆ ನಡೆದು ಹೋಗುವಾಗ ದಾರಿಯಲ್ಲಿ ತಿನ್ನಲು ಚಪಾತಿ ಮಾಡಿಕೊಡಲು ನಾನೇ ಕೇಳಿಕೊಂಡು, ಅದರ ಪೊಟ್ಟಣ ಸಮೇತ ಮಠಕ್ಕೆ ಹಿಂದಿರುಗಿದೆ.

## ಹಂಪಿ (ಅ)

ಬೆಳಿಗ್ಗೆ (19.6.85) ಎದ್ದು ಮಹಡಿ ಮೇಲಿದ್ದ ಮ್ಯಾನೇಜರ್ ಬಸವರಾಜ್ ಏಳಿಸಿದೆ. ಮಠದ ಹಳೆಯ ಮಣ್ಣಿನ ಛಾವಣಿ ಇನ್ನೂ ಉಳಿದುಕೊಂಡಿದೆ. ಪೂಜ್ಯ ಸ್ವಾಮೀಜಿಯವರು ಹಂಪಿಯ ತಮ್ಮ ಮಠದಲ್ಲಿ ಇರಲು ನನಗೆ ಅವಕಾಶ ಮಾಡಿ, ಅಲ್ಲಿ ನಾನಿರುವಷ್ಟು ದಿನವೂ ಅಡುಗೆ ವ್ಯವಸ್ಥೆ ಕೂಡ ಮಾಡಿದ್ದರು. ಮುರುಗೇಶ್ ಜೊತೆ ಅಡುಗೆ ಸಾಮಗ್ರಿಗಳೆಲ್ಲ ಹಂಪಿಗೆ ಬಸ್ಸಿನಲ್ಲಿ ಹೋಗುವುದರಲ್ಲಿದ್ದುವು.

ಹೊಸಪೇಟೆಯಿಂದ ಹಂಪಿಗೆ ಎಂಟು ಮೈಲಿ - ನನ್ನ ಕಾಲ್ನಡಗೆಯ ಕೊನೆಯ ದಿನ. ಸಹಜವಾಗಿಯೇ ನಾನು ಅತ್ಯಂತ ಉತ್ಸಾಹಭರಿತನಾಗಿದ್ದೆ. ಸ್ವಲ್ಪ ಭಾವೋದ್ವೇಗವೂ ಸಹಜವಾಗಿಯೇ ನನ್ನಲ್ಲಿತ್ತು. ದಾರಿಯಲ್ಲಿ ಭವ್ಯ ಭಗ್ನ ಅನಂತಶಯನ ಗುಡಿ ತಿಪ್ಪೆಗಳ ಮಧ್ಯೆ ಮೆರೆದಿದೆ. ದೊಡ್ಡ ಕಂಬಗಳು : ಬಹುದೊಡ್ಡ ಪ್ರಾಕಾರ. ಒಳಗಡೆ ಎಡಕ್ಕೆ ಗೋಡೆ ಮೇಲೆ

ಉದ್ದಕ್ಕೂ ಶಾಸನಗಳು. ನವರಂಗದ ಎತ್ತರವೇ ಬೆಚ್ಚಿ ಬೀಳಿಸುತ್ತದೆ. ಗರ್ಭಗುಡಿ ಒಳಗಿನ ಆಳವಾದ ಗುಮ್ಮಟವು ಆಶ್ಚರ್ಯ ಹುಟ್ಟಿಸುತ್ತದೆ. ದೇವಾಲಯ ನಿರ್ಮಾಣವಾದರೂ ರಕ್ಕಸ ತಂಗಡಿ ಯುದ್ಧದಿಂದಾಗಿ ಒಳಗೆ ಅನಂತಶಯನ ಮೂರ್ತಿಯ ಪ್ರತಿಷ್ಠಾಪನೆ ಆಗಲಿಲ್ಲವೆಂಬ ಹೇಳಿಕೆ ಇದೆ. ಅಲ್ಲಿ ಪ್ರತಿಷ್ಠಾಪಿತವಾಗಬೇಕಾಗಿದ್ದ ಮೂರ್ತಿಯು ಸಮೀಪದ ಹೊಳಲು ಎಂಬ ಹಳ್ಳಿಯೊಂದರಲ್ಲಿದೆಯೆಂದೂ ಜನ ಹೇಳಿದರು. ದೇವಾಲಯದ ಕಾವಲುಗಾರ ತಮಿಳುನಾಡಿನವನು. ಅವನು ನನಗೆ ಪ್ರಾಮಾಣಿಕವಾಗಿ ಕೊಟ್ಟ ಬುದ್ಧಿವಾದ (ಕನ್ನಡದಲ್ಲಿ) ಹೀಗಿತ್ತು - "ನೀನು ಇಲ್ಲಿಂದ ಬಸ್ಸಿನಲ್ಲಿ ಕಮಲಾಪುರಕ್ಕೆ ಹೋಗು. ಅಲ್ಲಿ ಇಳಿದು ನದಿಗೆ ಹೋಗು. ನದಿ ಹತ್ತಿರ ಮೂರು ಕ್ಷೌರದ ಅಂಗಡಿಗಳಿವೆ. ಕ್ಷೌರ ಮಾಡಿಸಿಕೋ. ಸ್ನಾನ ಮಾಡುವಾಗ ಬಟ್ಟೆ ಬಿಡಬೇಡ, ಕಳ್ಳರಿರುತ್ತಾರೆ. ಕಾಲಲ್ಲಿ ನಡಕೊಂಡು ಹೋಗಬೇಡ". ಐದು ವಾರಗಳ ಕೂದಲ ಹುಲುಸು ಬೆಳೆಯು ಮುಖದಲ್ಲಿ, ತಲೆ ಮೇಲೆ ಇತ್ತು. ಅವನ ಏಕವಚನದಲ್ಲಿ ಅವಿನಯ ಇರಲಿಲ್ಲ. ತಮಿಳು ಗ್ರಾಮ್ಯ ಭಾಷೆಯಲ್ಲಿ ಎಲ್ಲರನ್ನೂ ಏಕವಚನದಲ್ಲೇ ಮಾತನಾಡಿಸುವುದು, ಇಂಗ್ಲಿಷಿನಲ್ಲಿರುವಂತೆ. ಅಲ್ಲೇ ಆಳ್ವಾರರ ವಿಗ್ರಹಗಳಿದ್ದುವು. "ಬನ್ನಿ ಮಹಂಕಾಳಿ"ಯ ದೇವಾಲಯದ ಸಮೀಪ ಒಬ್ಬ ಕರಿಯ ಧಡೂತಿ ಸನ್ಯಾಸಿ ಹಣೆಗೆ ಕುಂಕುಮ ಬಳಿದು ಮೈತುಂಬ ವಿಭೂತಿ ಧರಿಸಿ "ಚಪ್ಪಲಿ ಹೊರಗೇ ಬಿಟ್ಟು ಬಾ ಅಂತೀನಿ" ಎಂದು ಗುಡುಗಿದ. ನಾನು ಚಪ್ಪಲಿ ಧರಿಸಿ ಒಳಕ್ಕೆ ಹೋಗುವ ಉದ್ದೇಶವೇನೂ ಇರಲಿಲ್ಲ.

ಮುಂದೆ ಸಿಕ್ಕ ಊರು "ಮಲಪನಗುಡಿ", ಎಂದರೆ ಮಲ್ಲಪ್ಪನ ಗುಡಿ. ಅಲ್ಲಿರುವ ಮಲ್ಲೇಶ್ವರ ದೇವಾಲಯದಿಂದ ಆ ಹೆಸರು ಊರಿಗೆ ಬಂದಿದೆ. ವಿಜಯನಗರ ಶೈಲಿಯ ಆ ಆಕರ್ಷಕ ದೇವಾಲಯದ ಪ್ರಾಕಾರದ ಮೇಲೆ ಇಟ್ಟಿಗೆ ಗಾರೆಯಲ್ಲಿ ಮಾಡಿದ ಹಿಂದಿನ ವಿಗ್ರಹಗಳ ಮೇಲ್ಭಾಗದ ಪದರು ಕೆಲವೆಡೆ ಬಿಟ್ಟುಹೋಗಿದ್ದರೂ ಸುಂದರವಾಗಿದೆ. ಆ ದೇವಾಲಯದಲ್ಲಿ ಪೂಜೆ ನಡೆಯುತ್ತದೆ. ಅಲ್ಲೇ ಒಬ್ಬ ಅನಾಥ ಅಜ್ಜಿ ಬೇರೆ ಗತಿಯಿಲ್ಲದೆ ಗುಡಿಯ ಕಸ ಗುಡಿಸಿಕೊಂಡು ವಾಸವಾಗಿದೆ. ಗರ್ಭಗುಡಿ ಮುಂದೆ ಇಬ್ಬರು ಮಕ್ಕಳು ರೊಟ್ಟಿ ತಿನ್ನುತ್ತ ಕುಳಿತಿದ್ದವು. ಪಕ್ಕದಲ್ಲೇ ಅಡುಗೆ ಮನೆ ; ಅಲ್ಲಿ ಹಳೆಯ ಹಾಸಿಗೆ ಹೊದಿಕೆ ಮುದುರಿದ್ದುವು. ಅಜ್ಜಿಯ ಐವತ್ತು ಎಕರೆ ಭೂಮಿಯನ್ನು "ಯಾರೋ ಕಿತ್ತುಕೊಂಡಿದ್ದಾರೆ" - ಆ ಅಜ್ಜಿ ಕೊಡುವ ಸೂಚನೆ ಪ್ರಕಾರ. ಉಳುವವನಿಗೇ ಭೂಮಿ ಕಾನೂನು ಅಡಿಯಲ್ಲಿ ಆ ಅಜ್ಜಿ ಭೂಮಿ ಕಳೆದುಕೊಂಡಿತು. "ಅವನಿಗೆ ಯಾರೂ ಇಲ್ಲ" ಎಂದು ದೇವರನ್ನು ತೋರಿಸುತ್ತ ಹೇಳಿತು. "ನಾನೇ ನೀರು ಹಾಕ್ತೀನಿ. ಮೊಮ್ಮಕ್ಳು ನೀರು ತರ್ತಾರೆ. ತೇರಿನ ಜಾತ್ರೆ ಸಂದರ್ಭದಲ್ಲಿ ಪಟ್ಟೆ ಎತ್ತಾರೆ. ಅವರೇ ತಿಂತಾರೆ". ಹರಿದ ಸೀರೆಯ ಆ ಮುತ್ತ ಮುದುಕಿ ಜಾತಿಯಲ್ಲಿ ಜಂಗಮರೆಂದು ತಿಳಿಯಿತು. ಅಜ್ಜಿಗೆ ಜೇಬಿನಲ್ಲಿದ್ದ ನಲವತ್ತು ಪೈಸೆ ಕೊಟ್ಟೆ. "ಬೆಳಗಿನಿಂದ ಗಂಟೆ ಒಡೀತಾರೆ. ಬಗ್ಗಿ ಹೋಗ್ತಾರೆ. ದುಡ್ಡಿಲ್ಲ" ಎಂದಿತು ಅಜ್ಜಿ. ಆ ಅಜ್ಜಿ "ಬಿಸಿ ರೊಟ್ಟಿ ತಿನ್ನಪ್ಪ" ಎಂದು ರೊಟ್ಟಿ ಕೊಡಲು ಮುಂದಾದಾಗ ನನಗೆ ಅಲ್ಲಿರುವುದು ಕಷ್ಟವಾಯ್ತು. ಗಾಬರಿ ನೋವುಗಳಿಂದ ಅಲ್ಲಿಂದ ಕಾಲೆತ್ತಿದೆ. ಆ ಹಳೆಯ ಭವ್ಯ ಪರಂಪರೆಯ ಗುಡಿಯ ಹಿಂದೆಯೇ ಹೊಸ ಈಶ್ವರ ದೇವಾಲಯ ಬಣ್ಣ ಬಳಿದ

ಮಂಟಪದೊಳಗೆ ರಾರಾಜಿಸುತ್ತಿತ್ತು. ಅಜ್ಜಿ, ಹಳೆಯ ದೇಗುಲ ಎರಡಕ್ಕೂ ಪರಂಪರೆ ಉಂಟು, ಸತ್ವ ಉಂಟು. ಆದರೆ ಗತಕಾಲದ ನೆನಪೊಂದೇ ಅವುಗಳ ಆಸ್ತಿ. ಪಕ್ಕದಲ್ಲೇ ಆಧುನಿಕ ಕಟ್ಟಡ - ಎಲ್ಲವೂ ವಿರುದ್ಧ. ಮಲ್ಲೇಶ್ವರ ದೇವಾಲಯದ ಮೇಲಿದ್ದ ಕೆಂಪು ಮುಖದ ಮುದಿ ಗಂಡು ಕೋತಿಯು ಕೆಳಗೆ ನಿಂತಿದ್ದ ಮಗು ಹಾಲು ಕುಡಿಸುವಂತೆ ಒತ್ತಾಯಿಸಿ ಅಳುತ್ತಿದ್ದುದನ್ನು ಇಣುಕಿ ನೋಡುತ್ತಿದ್ದ ದೃಶ್ಯವನ್ನು ಮರೆಯಲಾರೆ. ಕ್ರಿ.ಶ. 1412ರ ಶಾಸನದಲ್ಲಿ ಆ ಊರಲ್ಲಿ (ಮಲಪನ ಗುಡಿ) ಅರವಟಿಗೆಗೆ ನೀರು ತರಲು, ಮರಗಳನ್ನು ಬೆಳೆಸಿ ನೀರು ಎರೆಯಲು, ಬಾವಿ ಹೂಳಿದರೆ ತೋಡಲು ದತ್ತಿ ಕೊಟ್ಟಿರುವ ವಿಷಯ ಉಲ್ಲೇಖವಾಗಿದೆ. ಅಲ್ಲಿಯ ಅರವಟಿಗೆಯ ದಾನಿ ಸೋವಣ್ಣಣ್ಣ. (ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ್. 9:2 ಸಂಖ್ಯೆ 436). ಮಲಪನಗುಡಿ ಹೊರ ಅಂಚಿನಲ್ಲಿನ ಹೊಸ ಮಲಪನ ಗುಡಿಯ ಜನರಲ್ಲಿ ಶೇಕಡ ಎಂಬತ್ತರಷ್ಟು ಜನ ಕುರುಬರು ಮತ್ತು ಬೇಡರು.

ಮುಂದೆ ದಾರಿಯ ಎಡಗಡೆ ಹೊಸದಾಗಿ ಕಟ್ಟಿರುವ ಗಾಳೆವ್ವನ ಗುಡಿ ಇತ್ತು. ಬಣ್ಣ ಹಚ್ಚಿದ ಹತ್ತು ಮರದ ವಿಗ್ರಹಗಳಿದ್ದುವು. ಒಂದು ತೇರೂ ಅಲ್ಲಿತ್ತು. ಎಲ್ಲ ವಿಗ್ರಹಗಳಿಗೂ ಸೀರೆ ಉಡಿಸಿ ಬಲಗೈಗೆ ಖಡ್ಗ ಕೊಟ್ಟಿತ್ತು. ಒಳಗೆ ಗಾಳೆವ್ವನ ಕಲ್ಲಿನ ವಿಗ್ರಹವಿತ್ತು. ದೇವಸ್ಥಾನದ ಮೇಲೆ ಸಿಮೆಂಟಿನಲ್ಲಿ ಮಾಡಿ ಬಣ್ಣ ಬಳಿದ, ಈಟಿ ಹಿಡಿದ ಧಡೂತಿ ಹುಡುಗಿಯರ ಪ್ರತಿಮೆಗಳಿದ್ದುವು. ಹುಡುಗಿಯರಿಗೆ ಮೊಲೆಕಟ್ಟು ಬೇರೆ. ಈ ತಮಾಷಾ ಭಯಂಕರ ಮೂರ್ತಿಗಳ ಹಿಂದೆ ಸಿಮೆಂಟ್ ಸಿಂಹ ಮೈಕ್ ಹೊತ್ತಿದೆ. ಬೆಳಿಗ್ಗೆ ಗಾಳೆಮ್ಮನ ಸುಪ್ರಭಾತವನ್ನು ಅದು ಸಾರುತ್ತದೆ. ಕೆಳಗೆ ನೆಲದ ಮೇಲೆ ನೆಟ್ಟಿದ್ದ ಈಟಿಗಳ ಮೇಲೆ ಬಳೆಗಳ ರಾಶಿಯೇ ಇತ್ತು. ಹರಕೆ ಹೊತ್ತ ಹೆಂಗಸರು ಐದೈದು ಬಳೆಗಳನ್ನು ಕಾಣಿಕೆಯಾಗಿ ಒಪ್ಪಿಸುತ್ತಾರೆ. ತುರಿ ಕಜ್ಜಿ ಆದವರು ಅರ್ಧ ಸೇರು ಉಪ್ಪನ್ನು ಸುರಿಯುತ್ತಾರೆ. ಭಕ್ತರು ಭಕ್ತಿಯಿಂದ ಬಾಯಿಗೆ ಹಾಕಿಕೊಂಡು ರುಚಿ ನೋಡುತ್ತಾರೆ. ಹರಿದ ಕಾವಿಧ್ವಜವೊಂದು ಅಲ್ಲಿ ಹಾರುತ್ತಿತ್ತು. ದೇವಿಯ 'ಪೂಜಾರಾಣಿ' (ಪೂಜಾರಿಣಿ) ಅಲ್ಲಿ ದರ್ಶನಕ್ಕೆ ಬಂದಿದ್ದ ಲಂಬಾಣಿ ಗಂಡಸರ ಹೆಂಗಸರ ಮೇಲೆ ಝೋರು ಮಾಡುತ್ತಿದ್ದಳು. ಭಕ್ತರು ವಿಭೂತಿ ಹಚ್ಚಿಕೊಂಡು ಕುಂಕುಮ ಧರಿಸಿದ್ದರು. ಗೋಣಿಚೀಲ, ಪೆಟ್ಟಿಗೆ ಇಟ್ಟುಕೊಂಡಿದ್ದ ಒಬ್ಬನನ್ನು ಅವನೊಬ್ಬ ವ್ಯಾಪಾರಿ ಎಂದುಕೊಂಡು, "ಚೀಲದಲ್ಲಿ ಏನಿದೆ" ಎಂದೆ. "ತಿಂಡಿ" ಎಂದ. "ಯಾವ ತಿಂಡಿ" ಎಂದುದಕ್ಕೆ "ನಾನು ತಿನ್ನೋದು" ಎಂದು ಅಲಕ್ಷ್ಯದಿಂದ ಉತ್ತರಿಸಿದ. "ಇನ್ನೊಂದು ಚೀಲದಲ್ಲಿ ಏನಿದೆ" ಎಂದುದಕ್ಕೆ "ಬಟ್ಟೆ" ಎಂದ. "ಎಂಥ ಬಟ್ಟೆ?" ಎಂದು ನಾನೂ ಸ್ವಲ್ಪ ಸಿಟ್ಟಿನಿಂದಲೇ ಕೇಳಿ, ನಿಸ್ಸಹಾಯಕನಾಗಿ ಹೊರಟೆ. ವಾಸ್ತವವಾಗಿ ಅವನ ಮೇಲೆ ರೇಗಲು ನನಗೆ ಹಕ್ಕೇನೂ ಇರಲಿಲ್ಲ.

ಗಾಳೆವ್ವನ ಗುಡಿಗೆ ಕುರಿ ಮೇಕೆಗಳ ಬಲಿ ನಡೆಯುತ್ತದೆ. "ಗಾಳಿ" ಎಂದರೆ ಮೈಸೂರು ಕಡೆ ದೆವ್ವ, ಭೂತ ಎಂಬರ್ಥವೂ ಇದೆ. ಆದರೆ ಈ ಗಾಳೆವ್ವ ಮೀನು ಹಿಡಿಯಲು ಗಾಳ ಬಳಸುವ ಮೀನುಗಾರರ ದೇವತೆ ಎಂದು ಯಾರೋ ಹೇಳಿದ್ದು ನೆನಪಾಯಿತು.

ಎದುರಿಗೆ ಹಂಪಿಯ ಗುಡ್ಡಗಳ ಸಾಲು ಉದ್ದಕ್ಕೂ ಕಾಣಿಸುತ್ತಿತ್ತು. ಗಾಳೆವ್ವನ ಗುಡಿ ಮುಂದಿನ ಏರನ್ನು ಹತ್ತುತ್ತಿದ್ದಂತೆ ಮತಂಗ ಪರ್ವತ, ಹಾಗೆಯೇ ಹಂಪೆಯ ವಿರೂಪಾಕ್ಷನ ಗೋಪುರ ಕಾಣಿಸಿದುವು. ರಸ್ತೆಯಿಂದ ಎಡಕ್ಕೆ ಒಳದಾರಿಯಲ್ಲಿ ಹೊರಳಿ ಹೋದರೆ ಮುಸ್ಲಿಮರ ಗೋರಿಗಳು, ದರ್ವಾಜಗಳು. ಉದ್ದಕ್ಕೂ ಗದ್ದೆ ತೋಟಗಳು ಸಮೃದ್ಧವಾಗಿದ್ದುವು. ಅವೆಲ್ಲ ಹದಿನೈದು ಹದಿನಾರನೇ ಶತಮಾನದ "ವಿಜಯನಗರ ಕಾಲುವೆ" ನೀರಿನ ಆಸರೆಯಲ್ಲಿ ಬೆಳೆದುವು. ಹಂಪಿಗೆ ಮುನ್ನ ಕಡ್ಡೀ ರಾಮಪುರವಿದೆ (ಅದು ವಾಸ್ತವವಾಗಿ "ಕಡೇ ರಾಮಪುರ") : ಬಡ ಲಂಬಾಣಿಗಳೇ ಹೆಚ್ಚಾಗಿರುವ ಆ ಊರಲ್ಲಿ ತಮಿಳರೂ ಸಾಕಷ್ಟು ಜನರಿದ್ದಾರೆ. ಅವರಲ್ಲಿ ನಟ ರಾಜಕುಮಾರ್ ಬಗ್ಗೆ ಕನ್ನಡದಲ್ಲಿ ಚರ್ಚೆ ನಡೆದಿತ್ತು. ಅಲ್ಲೇ ಸುಬ್ರಹ್ಮಣ್ಯ ಸ್ವಾಮಿಯ ಆಧುನಿಕ ಸಿಮೆಂಟ್ ಕಟ್ಟಡದ ದೇವಾಲಯವಿದ್ದು ಅದರ ಹೆಸರನ್ನು ಕನ್ನಡ ಇಂಗ್ಲಿಷ್ ತಮಿಳು ಈ ಮೂರು ಭಾಷೆಗಳಲ್ಲೂ ಹಾಕಿದ್ದರು. ಹೊರಗಿನಿಂದ ನೋಡಿದಾಗ ಒಳಗೆ ಗೋಡೆಗಳ ಮೇಲೆ ಬಣ್ಣ ಬಣ್ಣದ ದೇವಾನುದೇವತೆಗಳ ಮೂರ್ತಿಗಳ ವರ್ಣಚಿತ್ರಗಳು ಕಾಣಿಸಿದುವು. ಅದನ್ನು "ಬಾಳೆ ಕಾಯಿ ರೆಡ್ಡಿ" ಎಂಬಾತ ಕಟ್ಟಿಸಿದ್ದಾನೆಂದು ಜನ ತಿಳಿಸಿದರು. ಆತ ತಮಿಳು ಹಿನ್ನೆಲೆಯವನೆಂದೂ ಕಡ್ಡಿರಾಂಪುರದಲ್ಲಿ ಸಾಮಾನ್ಯ ಕೆಲಸಕ್ಕಿದ್ದವ ಈಗ ಹೊಸಪೇಟೆಯಲ್ಲಿ ದೊಡ್ಡ ಮನೆ ಕಟ್ಟಿಕೊಂಡು 130-140 ಎಕರೆ ತರಿ ಜಮೀನು ತೋಟಕ್ಕೂ ಒಡೆಯನಾಗಿದ್ದಾನೆ. ಆತನ ತೋಟದಲ್ಲಿ ಕೆಲಸಮಾಡುತ್ತಿದ್ದ ನೀಲಗುಂದ ಸಮೀಪದ ಇಬ್ಬರು ಕೆಲಸಗಾರರು ತಮಗೆ ವಾರಕ್ಕೆ ತಲಾ ನಲವತ್ತು ರೂಪಾಯಿ ಸಂಬಳ, ವರ್ಷಕ್ಕೆ ಎರಡು ಜೊತೆ ಬಟ್ಟೆ ಸಿಗುವುದೆಂದೂ ಹೇಳಿದರು. ಅಂತಹ ನೂರು ಕೆಲಸಗಾರರು ಆತನ ತೋಟದಲ್ಲಿ ಕೆಲಸ ಮಾಡುತ್ತಿದ್ದಾರೆ. "ರೆಡ್ಡಿ" ಕಾರಿನಲ್ಲಿ ದಿನವೂ ಬಂದು ಹೋಗುತ್ತಾನೆ. ಬೆಲ್ಲ ತಯಾರಿಸುವ ದೊಡ್ಡ ಕಾರ್ಖಾನೆ ಅಲ್ಲಿತ್ತು.

ಎರಡು ಕಿಲೋ ಮೀಟರ್ ದೂರದ ಹಂಪಿ ರಸ್ತೆಯಲ್ಲಿ ದೊಡ್ಡ ಗಾರೆ ಗೋಪುರದ ವಿಷ್ಣು ದೇವಾಲಯ, ಭಗ್ನಗೊಂಡ ಲಿಂಗ ಬಸವ ಕಾಣಿಸಿದುವು. ಎಡಗಡೆ ಹೇಮಕೂಟದ ಬೆಟ್ಟದ ಮೆಟ್ಟಲು, ಒಬ್ಬ ಕಾವಲುಗಾರ ಮುದುಕ ಕಾಣಿಸಿದ. ಹಂಪಿ ಸಮೀಪಿಸಿದಂತೆ ಏಕೋ ಪೂರ್ತಿ ನಿರ್ಭಾವುಕನಾಗಿ ಬಿಟ್ಟಿದ್ದೆ. ಭಾವುಕತೆ ಕಡಮೆಯಾಯಿತಲ್ಲ ಕಾರಣವೇನು ಎಂದು ಪೇಚಾಡಿದೆ. ಮನಸ್ಸು ಒಂದು ದೃಢ ನಿರ್ಧಾರಕ್ಕೆ ಬಂದುದು ಕಾರಣವಿರಬಹುದೆಂದು ಸಮಾಧಾನ ಪಟ್ಟುಕೊಂಡೆ. ಅಲ್ಲದೆ, ಹಂಪಿಯನ್ನು ಕಾಣುತ್ತಲೇ ನನ್ನಲ್ಲಿನ ಕನ್ನಡ ಕಾರ್ಯಕರ್ತನು ಸಂಶೋಧಕನಿಗೆ ಜಾಗಬಿಟ್ಟುಕೊಟ್ಟಿದ್ದನೆಂದು ಕಾಣುತ್ತದೆ. ಎಡಗೈ ಕಿರು ಬೆರಳನ್ನು ಮತ್ತೆ ಮತ್ತೆ ಮುಟ್ಟಿಕೊಂಡೆ.

ಹಂಪಿಯ ಸ್ಮಾರಕಗಳನ್ನು ನೋಡುತ್ತ ಹೇಮಕೂಟಾಚಲವನ್ನು ಬಳಸಿ ಕೆಳಗಿಳಿದು ವಿರೂಪಾಕ್ಷ ದೇವಾಲಯದ ಹೊರಭಾಗದ ಮೂಲಕ ನದಿಯ ಕಡೆಯ ಗೋಪುರ ಹಾದು, ಮನ್ಮಥ ಕುಂಡದ ಪಕ್ಕದ ಹಾದಿಯಲ್ಲಿ ಕೊಟ್ಟೂರೇಶ್ವರ ಮಠಕ್ಕೆ ಬಂದೆ. ಆ ಕೊಳದ ಬದಿಯಲ್ಲೇ ಹರಿಹರನ ವಾಸಸ್ಥಾನವಿದ್ದುದನ್ನು ಹಿಂದೆಯೇ ಗುರುತಿಸಿದ್ದೆ. ಯಾರೋ ಪುಣ್ಯಾತ್ಮರು ಒಂದು ಶಿಥಿಲ ತಗಡಲ್ಲಿ "ಹರಿಹರನ ವಾಸದ ಮನೆ" ಎಂದು ಬರೆದು ಅಲ್ಲಿ

ಗೂಟಕ್ಕೆ ತಗಲಿಸಿದ್ದರು. ಮುಂಭಾಗದ ಬಾಗಿಲು ಮುಚ್ಚಿದ್ದರಿಂದ ಹಿಂಭಾಗಕ್ಕೆ ಹೋದೆ. ಮಠದಲ್ಲೇ ವಾಸವಾಗಿದ್ದ ಸಂಗಯ್ಯನ ತಂದೆ ಮಠದ ಹಿಂಭಾಗದ ಬಾಗಿಲಲ್ಲಿ ಲಕ್ವಾ ಹೊಡೆದು ಮಲಗಿದ್ದರು. ಆತ ಎಲ್ಲಿಂದಲೋ ಓಡಿ ಬಂದು ಹಂಪಿಯಲ್ಲಿ ಸಣ್ಣ ವ್ಯಾಪಾರ ಮಾಡುತ್ತ ಸಂಸಾರಿಗನಾದ. ಮುಂದೆ ಯಾರೋ ಆಗದವರು "ಲಕ್ವ ಹೊಡೆದದ್ದೇ ಸರಿ. ಕೆಟ್ಟವ" ಎಂದು ಆತನನ್ನು ನನ್ನ ಮುಂದೆ ಬಯ್ದದ್ದುಂಟು. ಆತನಿಗೆ ಐವರು ಗಂಡು, ಎರಡು ಹೆಣ್ಣು ಮಕ್ಕಳು. ಮುಂದಿನ ಮೂರು ನಾಲ್ಕು ದಿನ ಆತ ಆ ಮಠದಲ್ಲಿ ನನ್ನ ಸಹವಾಸಿಯಾದ ತನ್ನ ಎಲ್ಲ ಕೆಮ್ಮು, ಮುಲುಕು, ಕೂಗು, ಗೂರ್ಲು, ಕ್ಯಾಕರುಗಿತ ಸಮೇತ, ನನ್ನ ಸಮಕ್ಷದಲ್ಲಿಯೇ. ನನಗೆ ಸ್ವಲ್ಪವೂ ಬೇಸರವಾಗಲಿಲ್ಲ.

ತುಂಗಭದ್ರೆಯ ದಡದಲ್ಲೇ ಶ್ರೀ ಕೊಟ್ಟೂರೇಶ್ವರ ಮಠ. ಹಂಪಿಯಲ್ಲೇ ಇರುವ ಸಿದ್ದಜ್ಜ ಹೇಳಿದ್ದು. ಸಿದ್ದಜ್ಜ ಬಾಲ್ಯದಲ್ಲಿ ತನ್ನ ಊರಿಂದ ಹಂಪಿಗೆ ಓಡಿಬಂದಾಗ ಹಂಪಿ ಊರಲ್ಲಿ ಹೆಚ್ಚಿನ ಮನೆಗಳು ಇರಲಿಲ್ಲ. ಸಂಜೆ ಆಗುತ್ತಲೇ "ಹೊರಗಿನವರು ಒಳಗೆ ಬನ್ನಿ" ಎಂದು ಕೂಗಿ ಎಲ್ಲರನ್ನೂ ಪೌಳಿ ಒಳಕ್ಕೆ ಸೇರಿಸಿ ಬಾಗಿಲು ಹಾಕುತ್ತಿದ್ದರು. ರಾತ್ರಿ ಹೊರಗೆ ಕರಡಿ, ಚಿರತೆ, ಹುಲಿ ಕಾಟ ಇತ್ತು. ಇಪ್ಪತ್ತನೇ ಶತಮಾನದ ಎರಡನೆಯ ಅಥವಾ ಮೂರನೆಯ ದಶಕದಲ್ಲಿ ಹಂಪಿಗೆ ಒಂದು ಐತಿಹಾಸಿಕ ಪ್ರವಾಸಿ ಕೇಂದ್ರವಾಗಿ ಪ್ರಾಮುಖ್ಯ ಬಂದಿತು. ಅದಕ್ಕಿಂತ ಮುಂಚಿನವನು ಸಿದ್ದಜ್ಜ - ಸಿದ್ದಜ್ಜ ವಿರೂಪಾಕ್ಷ ದೇವಾಲಯದ ಕಾವಲುಗಾರ. ಅವನು ಒಮ್ಮೆ ಮಾತ್ರ ಭಕ್ತರಿಂದ ಪಡೆದ ಬಾಗಿಲು ಕಾಣಿಕೆಯನ್ನು ದೇವಸ್ಥಾನಕ್ಕೆ ಒಪ್ಪಿಸದೆ "ಮೋಸ ಮಾಡಿದ್ದು ಬಿಟ್ಟರೆ" ಎಂದೂ ಅನ್ಯಾಯದಿಂದ ನಡೆದುಕೊಂಡದ್ದೇ ಇಲ್ಲ. ಆಗ ದೇವಾಲಯದ ಸುತ್ತ ಹಾಳು ಕಟ್ಟಡಗಳು, ಮಂಟಪಗಳು ಸಾಕಷ್ಟಿದ್ದುವು. ಸಿದ್ದಜ್ಜ ಹೊಸಪೇಟೆಯ ಆಗಿನ (1920 - 30) ಕೊಟ್ಟೂರುಮಠದ ಸ್ವಾಮಿಗಳಿಗೆ "ನೀವು ಒಂದು ಕಟ್ಟಡ ಸ್ವಾಧೀನಕ್ಕೆ ತೆಗೆದುಕೊಂಡು ನಿಮ್ಮದಾಗಿ ಮಾಡಿಕೊಳ್ಳಿ" ಎಂದು ಸಲಹೆ ಕೊಟ್ಟ. ಆ ಅನಾಥ ಕಟ್ಟಡ ಒಂದು ವೀರಶೈವ ಮಠವಾದುದು ಹೀಗೆ, ಸಿದ್ದಜ್ಜನ ಪ್ರಕಾರ*. ಸಾಕಷ್ಟು ವಿಶಾಲವಾಗಿರುವ ಪೌಳಿಯನ್ನು ಪ್ರವೇಶಿಸಿದರೆ ಎಡಗಡೆ ಒಂದು ಧೂಳು ಕತ್ತಲು ತುಂಬಿದ ಅಡುಗೆ ಮನೆ, ಎದುರಿಗೆ ದೊಡ್ಡ ಕಲ್ಲು ಮಂಟಪ, ಬಲಕ್ಕೆ ಒಂದು ವೇದಿಕೆ. ಅದು ಹಿಂದೆ ಯಾತ್ರಾರ್ಥಿಗಳು ಉಳಿಯುವ ಒಂದು ಚತ್ರವಾಗಿದ್ದಿರಬೇಕು. ಆ ಮಠದ ಮುಂದಿನ ಕಿರು ಓಣಿಯ ಬದಿಯೇ ತುಂಗಭದ್ರೆಯ ಬಲ ದಡ. ರಾತ್ರಿಯೆಲ್ಲಾ ಪ್ರಶಾಂತ ವಾತಾವರಣದಲ್ಲಿ ನದಿಯ ನೀರ ತೆಳು ಮೊರೆತ. ಶತತಾರಾ ಲಾಡ್ಜಿಂಗನ್ನು ಇದರ ಮುಂದೆ ನೀವಾಳಿಸಿ ಎಸೆಯಬೇಕು. ಮಠದ ಮುಂದೆಯೇ ವಡ್ಡರ ಗುಡಿಸಲುಗಳು. ಆ ಗುಡಿಸಲುಗಳ ಮುಗ್ಧ ಕರಿಯ ದಿಗಂಬರ ಶಿಶುಗಳು ಆಗಾಗ್ಗೆ ಒಳ ಸುಳಿಯುತ್ತಿದ್ದುವು.

---

* ಆ ಸಿದ್ದಜ್ಜ ಈಗ ಇಲ್ಲ. "ಮನ್ಮಥ ತೀರ್ಥ"ದ ಹೆಸರು ನಿಜವಾಗಿಯೂ "ಮನ್ಮುಖ ತೀರ್ಥ" ಎಂಬುದನ್ನು ಗುರುತಿಸಲು, ಪಾರಂಪರಿಕವಾಗಿ ಬಂದಿದ್ದ ಹೇಳಿಕೆಯನ್ನು ಆತ ನನಗೆ ತಿಳಿಸಿದ್ದು ಸಹಾಯಕವಾಯಿತು. ಆತನ ಸಹಾಯವನ್ನು ನಾನು ಒಂದು ಲೇಖನದಲ್ಲಿ ಗುರುತಿಸಿದ್ದೇನೆ.

ಹೊಸಪೇಟೆಯಿಂದ ನಳಮಹಾರಾಜ ಮುರುಗೇಶ ಬಂದವನೇ ಅಡುಗೆ ಆರಂಭಿಸಿದ. ನಾನು ಹೊಸಪೇಟೆಯಿಂದ ತಂದಿದ್ದ ಚಪಾತಿ ತಿಂದು ಟೀ ಕುಡಿದು ಸ್ವಲ್ಪ ವಿಶ್ರಾಂತಿ ಪಡೆದೆ, ಅಲ್ಲಿದ್ದ ಒತ್ತು ಚಾಪೆ ಮೇಲೆ. ಅದೇ ಮುಂದಿನ ನಾಲ್ಕು ದಿನಗಳ ಚಂದ್ರಮಂಚವಾಯಿತು. ಬೆಳಗಿನ ಬೇಸಗೆ ಏರು ಬಿಸಿಲಲ್ಲಿ ನಡೆದು ಸುಮಾರು ಹನ್ನೊಂದರ ಒಳಗೆ ಮನೆಗಳಲ್ಲಿ ತಣ್ಣೀರು ಸ್ನಾನ ಮಾಡುತ್ತಿದ್ದವನು ಈ ದಿನ ಬೇಕೆಂದೇ ಮಧ್ಯಾಹ್ನದವರೆಗೆ ಕಾದೆ. ನದಿ ಸ್ನಾನ ಲಭ್ಯವಾಗಿತ್ತು. ಟವಲ್ ಹಿಡಿದು ಮತ್ತೊಮ್ಮೆ ಹರಿಹರ ಕವಿಯ ವಾಸಸ್ಥಾನವನ್ನು, ಡಾ. ಸುಂದರ್ ಮಾರ್ಗದರ್ಶನದಲ್ಲಿ ಅದರ ಬಳಿ ನಡೆಯುತ್ತಿದ್ದ ಕಾಮಗಾರಿ ಕಾರ್ಯವನ್ನು ನೋಡಿಕೊಂಡು ನದಿ ದಡದಲ್ಲೇ ಅನತಿ ದೂರದಲ್ಲಿದ್ದ ಶ್ರೀ ಶಿವಾನಂದ ಯೋಗಾಶ್ರಮಕ್ಕೆ ಹೋಗಿ ಶ್ರೀ ಸದಾಶಿವ ಯೋಗಿಗಳ ದರ್ಶನ ಪಡೆದೆ. ಹರಿಹರನ ವಾಸಸ್ಥಾನವನ್ನು ಪತ್ತೆ ಮಾಡಲು ಹಿಂದೆ ಬಂದಾಗ ಅವರ ಪರಿಚಯವಾಗಿ, ನನ್ನ ಕಣ್ಣ ಮುಂದೆಯೇ ಅವರು ಭಸ್ಮ ಸೃಷ್ಟಿಸಿ, ಆದರೆ ಅದೊಂದು ಕೇವಲ ಕೈಚಳಕ ಎಂಬುದನ್ನು ಹೇಳಿ ನನ್ನ ಗೌರವ ಪ್ರೀತಿ ಸಂಪಾದಿಸಿದ್ದರು. ನಾನು ಹೋದಾಗ ಗುಹೆಯಂತಹ ತಮ್ಮ ಪುಟ್ಟ ಕೋಣೆಯಲ್ಲಿ ನಾಲ್ವರು ಹೆಂಗಸರಿಗೆ ಕೊಡಲು ಪುಟ್ಟ ತಕ್ಕಡಿಯಲ್ಲಿ ಔಷಧಿ ತೂಗುತ್ತಿದ್ದರು. ವಾಚ್ ಕಟ್ಟಿದ ತೆಲುಗು ಹುಡುಗಿಯೊಬ್ಬಳ ಜೊತೆ ತೆಲುಗಲ್ಲೇ ಮಾತನಾಡಿದರು. ಅವರು ತರಿಸಿಕೊಟ್ಟ ಟೀ ಕುಡಿದು, ಗಲೀಜು ದಾಟಿ ನದಿಯ ಜುಳು ಜುಳು ಹರಿಯುವ ನೀರಲ್ಲಿ ನಿಧಾನವಾಗಿ ಸ್ನಾನಮಾಡಿದೆ. ಅಲ್ಲಿ ಕಂಬವೊಂದು ನೀರಿನಿಂದ ಮೇಲೆದ್ದು ಕಾಣುತ್ತಿತ್ತು. ಬಂಡೆಗಳ ಮಧ್ಯೆ ನೀರು ಜುಳು ಜುಳು ಮೃದುವಾಗಿ ಹರಿಯುತ್ತಿದ್ದರೆ ಜನ, ಗಂಡಸರು ಹೆಂಗಸರು ಮಕ್ಕಳು ಗಟ್ಟಿ ಗಲಾಟೆ ಮಾಡುತ್ತ ಸ್ನಾನ ಮಾಡುತ್ತಿದ್ದರು. ನದಿಯ ಇನ್ನೊಂದು ಕಡೆ ವಿರೂಪಾಪುರ ಗಡ್ಡೆ, ಅಲ್ಲಿನ ಗುಡ್ಡ ಎಲ್ಲವೂ ಅತ್ಯಂತ ಹಿತವಾಗಿದ್ದುವು. ವಾಪಸಾಗುವ ಹೊತ್ತಿಗೆ ಅನ್ನ, ಮುರುಗೇಶನ ವಿಶೇಷ ಸೃಷ್ಟಿ ಖಾರದ ಸಾರು ಸಿದ್ಧವಾಗಿದ್ದುವು. ಊಟದ ಬಳಿಕ ಚಾಪೆ ಮೇಲೆ ಮಲಗಿ ವಿಶ್ರಾಂತಿ ಪಡೆಯುವ ಹೊತ್ತಿಗೆ ಸುಮಾರು ಮೂರು ಗಂಟೆಗೆ ಗುಡುಗಿನಿಂದ ಕೂಡಿದ ಸಣ್ಣ ಮಳೆ ಬಿದ್ದು ಹವಾ ತಂಪಾಯಿತು. ಮಳೆ ಹನಿಗಳ ಸದ್ದನ್ನು ಮಠದ ಮುಂದಿನ ಗೋಣಿ ಮರದ ಕುರುಕಾಟ ಮುಲುಕಾಟಗಳು ಮುಳುಗಿಸಿದ್ದುವು. ಈ ಮಧ್ಯೆ ಆಯಾಸವೂ ಮರೆಯಾಗಿತ್ತು.

ಮಧ್ಯಾಹ್ನ ಮೂರರ ಬಳಿಕ ದಿನಚರಿ ಬರೆದು ಸಂಜೆ ಆರರ ಹೊತ್ತಿಗೆ ವಿರೂಪಾಕ್ಷ ದೇವಾಲಯದಿಂದ ಮೂರು ಕಿಲೋಮೀಟರ್ ದೂರದ ಚಂದ್ರಮಹಲ್ ಬಳಿ ಹೋದೆ. ದಾರಿಯಲ್ಲಿ ಗಣಪ, ಉದ್ದಾನ ವೀರಭದ್ರಸ್ವಾಮಿ, ಎಡಗಡೆ ಕೋಟೆ ಗೋಡೆ ನೋಡುತ್ತ ಹೋಗುವಾಗ ದಾರಿಯ ಒಂದು ಹಾಳುಮಂಟಪದಲ್ಲಿ ಒಬ್ಬ ಹುಚ್ಚಿ ಕಾಣಿಸಿದಳು. ಅಲ್ಲೇ ಸಮೀಪದ ಒಂದು ತೋಟದಲ್ಲಿ ಒಬ್ಬ ಹುಚ್ಚ ಒಂದು ತೆಂಗಿನಕಾಯಿ ಬುರುಡೆ ಎತ್ತಿ ನನಗೆ ಸ್ವಲ್ಪ ದೂರದಲ್ಲಿದ್ದ ಕೋತಿಯೊಂದರ ಕಡೆ ಎಸೆದ. ಸದ್ಯ ಅದು ನನಗೂ ತಗಲಲಿಲ್ಲ, ಕೋತಿಗೂ ತಗಲಲಿಲ್ಲ. ಆಗಲೇ ಮಬ್ಬುಗತ್ತಲು. ಕರ್ನಾಟಕ ಸರ್ಕಾರದ ಭೂಶೋಧ ನಡೆಯುವ ಜಾಗಕ್ಕೆ ಹೋದಾಗ ಅಲ್ಲಿ ಮತ್ತೆ ಡಾ. ಸುಂದರ್ ಸಿಕ್ಕು ಅವರ ಜೊತೆ

ಮಾತನಾಡಿದೆ. ಅಲ್ಲೇ ದೊಡ್ಡ ಬಂಡೆಯ ಮೇಲೆ ಬಾಟ್ಲಿ ಹಿಡಿದ ಇಬ್ಬರು ಪರಸ್ಪರ ಸಲ್ಲಾಪದಲ್ಲಿ ಎಲ್ಲವನ್ನೂ ಮರೆತಿದ್ದರು. ಸುಂದರ್ ತಾವು ಉಳಿದಿದ್ದ ನಿವಾಸಕ್ಕೆ ವಾಪಸಾದರು. ಕಪ್ಪು ಮುಖದ ಮುಸಿಯಗಳು ಬಂಡೆಗಳ ಮೇಲೆ ಕುಳಿತು ಮೌನವಾಗಿ ಎಲ್ಲವನ್ನೂ ವೀಕ್ಷಿಸುತ್ತಿದ್ದುವು. ಬೇಗ ಬೇಗ ಮುಖ್ಯ ರಸ್ತೆಗೆ ಬಂದರೆ ನಿರ್ಜನ ಕತ್ತಲಲ್ಲಿ ಮೇಲೆ ಅಲ್ಲಲ್ಲೇ ಬಂಡೆಗಳು ಕೇವಲ ರೇಖೆಗಳಾಗಿ ತುದಿಯಲ್ಲಿ ವಿನ್ಯಾಸವನ್ನು ರೂಪಿಸಿದ್ದುವು. ಇಕ್ಕೆಲದ ಗದ್ದೆ ತೆಂಗು ಬಾಳೆ ತೋಟಗಳಲ್ಲಿ ಅಸಂಖ್ಯಾತ ಮಿಂಚಿನ ಹುಳುಗಳು ಮಿನುಗುತ್ತಿದ್ದುವು. ನನ್ನಲ್ಲೇ ಮೌನವಾಗಿ ಪ್ರಾರ್ಥನೆ ಅನುರಣಿಸಿತು - "ಓ ಭುವನೇಶ್ವರಿ, ನಿನ್ನ ಅಡಿಗೆ ಸಾವಿರ ನಮಸ್ಕಾರಗಳು. ಎಲ್ಲರನ್ನೂ ಕಾಪಾಡು. ಈ ಹಂಪಿ ಒಂದು ಪುಣ್ಯಭೂಮಿ. ಕನ್ನಡವನ್ನು ಕರ್ನಾಟಕವನ್ನು ಭಾರತವನ್ನು ಭಾರತೀಯ ಸಂಸ್ಕೃತಿಯನ್ನು ಉಳಿಸಿದ ವಿದ್ಯಾರಣ್ಯರ ತಪೋ ಭೂಮಿ. ಇಂದಿನ ಕನ್ನಡದ ಕಷ್ಟದ ದಿನಗಳಲ್ಲಿ ಅದರ ಉಳಿವಿಗಾಗಿ ನನ್ನನ್ನು ಅರ್ಪಿಸಿಕೊಳ್ಳುತ್ತಿದ್ದೇನೆ. ನಾನೊಬ್ಬ ಕ್ಷುದ್ರ. ನನ್ನಂಥವನೂ ಸೇವೆ ಸಲ್ಲಿಸಲು ಒಂದು ಅವಕಾಶ ಕೊಡು". ನನಗೆ ನಾನೆ - "ನೀನು ಕಠಿಣಕ್ಕೆ ಕಠಿಣನಾಗು, ಮೃದುತ್ವಕ್ಕೆ ಮೃದುವಾಗು. ಕಿರುಬೆರಳು ಕೊಡಲು ಸಿದ್ಧವಾಗು, ದೈವವೇ ದೈವವೇ, ಅಭೀಃ ಎಂಬ ಮಂತ್ರ ನನ್ನ ಚೈತನ್ಯದ ಭಾಗವಾಗಲಿ. ನಾನು ಮಾನವತೆಯ ಮಹೋನ್ನತ ಆದರ್ಶದ ಚರಮ ಸೀಮೆಯನ್ನು ಮುಟ್ಟಬೇಕು. ಮಹೋನ್ನತ ತ್ಯಾಗದ ತುತ್ತತುದಿಗೆ ಏರಬೇಕು. ಇಂದಿನಿಂದ ನನ್ನದೆಂಬುದು ಇಲ್ಲ. ಎಲ್ಲವೂ ಇರುವುದು ಕನ್ನಡಕ್ಕಾಗಿ. ಊರೂರುಗಳಲ್ಲಿ ಕನ್ನಡದ ಧ್ವಜ ಹಾರಾಡಬೇಕು. ಆದದ್ದಾಗಲಿ, ಅದನ್ನು ಸಾಧಿಸಿಯೇ ತೀರುತ್ತೇನೆ. ಆತ್ಮವಿಶ್ವಾಸ ಒಳಗನ್ನು ತುಂಬುತ್ತಿದೆ. ಆ ಬಗ್ಗೆ ಪೂರ್ಣ ನಂಬಿಕೆ ಬರುತ್ತಿದೆ. ತೋಳುಗಳಲ್ಲಿ ಬಲವಿದೆ, ಕಾಲಲ್ಲಿ ಶಕ್ತಿಯಿದೆ, ನರನಾಡಿಗಳಲ್ಲಿ ರಕ್ತ ಬಿಸಿ ಇದೆ. ಮೇಲೆ ಮೇಲೆ, ಅದರಾಚೆ, ಗಗನದಾಚೆ ಏರುತ್ತೇನೆ. ಅಲ್ಲಿ ಕನ್ನಡ ಬಾವುಟವನ್ನು ಹಾರಿಸುತ್ತೇನೆ...". ಸಣ್ಣಗೆ ಹಾಡಿದೆ, ಭಾಷಣ ಮಾಡಿದೆ. ಕೆಲವು ಸೈಕಲ್ ಸವಾರರು ಕತ್ತಲಲ್ಲೇ ತಿರುಗಿ ನೋಡಿದಂತಾಯಿತು. ಹಾವುಗಳ ಬಗ್ಗೆ ಸ್ವಲ್ಪ ಹುಷಾರಾಗಿಯೇ ಇರಬೇಕೆಂದುಕೊಂಡರೂ ಕತ್ತಲಲ್ಲಿ ಏನು ಮಾಡಲೂ ಸಾಧ್ಯವಿರಲಿಲ್ಲ. ಅತ್ತ ಇತ್ತಣ ಮಿಣುಕು ಹುಳುಗಳು ಕೆಲವು ದಿನಗಳ ಹಿಂದಿನ ಕೊಂಡಜ್ಜಿಯನ್ನು ನೆನಪಿಸಿದುವು.

ರಾತ್ರಿ 7.45ಕ್ಕೆ ಹಂಪಿಯ ತೇರು ಬೀದಿಗೆ ಬಂದಾಗ ಬೀದಿ ದೀಪಗಳ ಬೆಳಕಲ್ಲಿ ಜನ ತಮ್ಮ ವ್ಯವಹಾರಗಳಲ್ಲಿ ಮಗ್ನರಾಗಿದ್ದರು. ಅಂಗಡಿ ಹೋಟೆಲುಗಳಲ್ಲಿ ವ್ಯಾಪಾರ ನಡೆದಿತ್ತು. ಮಕ್ಕಳ ತಮಾಷೆ ಆಟಿಕೆಗಳು ಅಲ್ಲಿದ್ದುವು. ನಾಲ್ಕು ಬಾಳೆಹಣ್ಣು ಕೊಂಡೆ. ಹಸಿವಿರಲಿಲ್ಲ. ಆ ದಿನ ಏನಿಲ್ಲವೆಂದರೂ ಹನ್ನೆರಡು ಮೈಲಿ ನಡೆದಿದ್ದೆ. ದೂರದಲ್ಲಿ ಮಿಂಚುತ್ತಿತ್ತು. ಮಠದ ಹಿಂಬದಿಯಲ್ಲಿ ಕೆಸರು ತುಳಿದು ಗೋಡೆ ಹಾರಿ ಒಳಕ್ಕೆ ಬಂದಾಗ ಮುಂಬತ್ತಿ ಬೆಳಕಿನಲ್ಲಿ ಲಕ್ವ ಹೊಡೆದ ರೋಗಿ ಕೆಮ್ಮುತ್ತಿದ್ದರು. ಆತನಿಗೆ ಮಕ್ಕಳು ಆರೈಕೆ ಮಾಡುತ್ತಿದ್ದರು. ಊಟ ಬೇಡವೆಂದು ಹೇಳಿ ದಿನಚರಿ ಬರೆಯಲು ಪುಸ್ತಕ ತೆಗೆದುಕೊಂಡು ಶಿವಾನಂದಾಶ್ರಮಕ್ಕೆ ಬಂದರೆ ಗಂಗಾವತಿಯ ಹೆಂಗಸು ಮೂರ್ಛೆ ರೋಗ ಬರುತ್ತಿದ್ದ ಮಗಳು ಶಾಂತಳ ಜೊತೆ ಇದ್ದಳು. ಸ್ವಾಮಿಗಳು ಆ ರೋಗಕ್ಕೆ ಔಷಧಿ ನೀಡುತ್ತಿದ್ದರು. ಸ್ವಾಮೀಜಿ ಹಿಂದೊಮ್ಮೆ

ಪರಿಚಿತರಾಗಿದ್ದರು. ಇನ್ನೂ ಆತ್ಮೀಯತೆ ಅಷ್ಟಾಗಿ ಬೆಳೆದಿರಲಿಲ್ಲ. ಯೋಗದ ಬಗ್ಗೆ ಚೆನ್ನಾಗಿ ತಿಳಿದವರು, ಮತ್ತು ಸ್ವತಃ ಯೋಗಾಭ್ಯಾಸಿಗಳು. ಹೋಮಿಯೋಪತಿ ಚೆನ್ನಾಗಿ ಓದಿಕೊಂಡು, ಜೊತೆಗೆ ಮ್ಯಾಗ್ನೆಟೋ - ಥೆರಪಿಯನ್ನು ಕೂಡ ಅಭ್ಯಾಸಮಾಡುತ್ತಿದ್ದರು. ಅವರ ಬಳಿಗೆ ತೀವ್ರ ಮೂರ್ಛೆರೋಗದವರು, ಪೋಲಿಯೋ ಪೀಡಿತರು ಇತ್ಯಾದಿ ರೋಗಿಗಳು ಬಂದು ಅವರಿಂದ ಚಿಕಿತ್ಸೆ ಪಡೆಯುತ್ತಿದ್ದರು. ಅವರ ಆಶ್ರಮದ ಕಟ್ಟೆ ಮೇಲೆ ಕುಳಿತು ಕೈ ಚಾಚಿದರೆ ಅದು ನದಿಯ ನೀರ ಮೇಲಿರುತ್ತಿತ್ತು. ಅಷ್ಟು ಒಳ್ಳೆಯ ಜಾಗದಲ್ಲಿ ಅವರ ಆಶ್ರಮವಿತ್ತು. ಅವರ ಜೊತೆ ಕನ್ನಡ ಸಂಕಲ್ಪದ ವಿಷಯ ಮಾತಾಡಿದಾಗ ಅವರಿಗೆ ಕನ್ನಡಿಗರ ದೌರ್ಬಲ್ಯಗಳ ಸಂಪೂರ್ಣ ಅರಿವಿದ್ದುದು ಸ್ಪಷ್ಟವಾಯಿತು. ತಿನ್ನಲು ಸಿಹಿ, ಹಣ್ಣು ಕೊಟ್ಟು ಟಾರ್ಚ್‌ನಲ್ಲಿ ದಾರಿ ತೋರಿಸುತ್ತ ಅಲ್ಲೇ ಸಮೀಪದ ಮಠಕ್ಕೆ ನನ್ನನ್ನು ಬಿಟ್ಟು ವಾಪಸ್ ಹೋದರು. ಒಳಗೆ ಅಲ್ಲೇ ಸಮೀಪ ಕೆಮ್ಮು ಗೂರ್ಲು ಶಬ್ದ, ಹೊರಗೆ ಭಾರಿ ಗಾಳಿ, ಕತ್ತಲೆ - ಈ ಮಧ್ಯೆ ಒತ್ತು ಚಾಪೆ ಬೇರೆ; ಮೊದಲ ದಿನ ನಿದ್ದೆ ಸರಿಯಾಗಿ ಬರಲಿಲ್ಲ.

ಬೆಳಗಿನ ಜಾವ ಎಚ್ಚರವಾಗುತ್ತಲೇ ಮುಂದಿನ ಮಾರ್ಗ ಸ್ಪಷ್ಟವಾಯಿತು. ಭಾನುವಾರ ಬೆಳಗಿನಿಂದ ಮೌನ ಆಚರಿಸಿ ಬೆಳಿಗ್ಗೆ ಹತ್ತಕ್ಕೆ ವಿರೂಪಾಕ್ಷೇಶ್ವರನಿಗೆ ಪೂಜೆ ಸಲ್ಲಿಸಿ, ಎಡಗೈ ಬೆರಳಿನ ರಕ್ತವನ್ನು ಸಾಂಕೇತಿಕವಾಗಿ ಅರ್ಪಿಸಿ ಕನ್ನಡ ಸಂಕಲ್ಪವನ್ನು ಮಾಡಬೇಕೆಂದು ನಿರ್ಧರಿಸಿದೆ. ಎಡಗೈ ಬೆರಳನ್ನು ಕತ್ತರಿಸಿ ಅರ್ಪಿಸುವ ಆಲೋಚನೆ ಕೈಬಿಟ್ಟೆ. "ನಾನು ಕೈಗೊಳ್ಳುವ ಸಂಕಲ್ಪದ ಸ್ವರೂಪವನ್ನು ಶನಿವಾರ ಗುಡ್ಡದ ಮೇಲೆ ಏಕಾಂಗಿಯಾಗಿ ಕುಳಿತು ರೂಪಿಸಬೇಕು. ನಾನು 'ಕನ್ನಡ ಗರುಡ'ನಾಗಬೇಕು. 'ಕನ್ನಡ ಗರುಡ ಪಡೆ' ಕಟ್ಟಬೇಕು. ಸಂಕಲ್ಪ ಸ್ವೀಕಾರ ಸಂದರ್ಭಕ್ಕೆ ಹಂಪಿಯ ಕೆಲವರನ್ನಾದರೂ ಕರೆಯಬೇಕು. ಹೊಸಪೇಟೆಯಿಂದ ಕೆಲ ಸ್ನೇಹಿತರಂತೂ ಬಂದಿರುತ್ತಾರೆ. ಬೆಂಗಳೂರು ಧಾರವಾಡ ಹಗರಿ ಬೊಮ್ಮನಹಳ್ಳಿಯಿಂದಲೂ ಕೆಲವರು ಬರುವ ಸಾಧ್ಯತೆ ಇದೆ. ಹೆಂಡತಿ ಮಕ್ಕಳಿಗೆ ಪತ್ರ ಬರೆದು ಸಂಕಲ್ಪ ವಿಷಯ ತಿಳಿಸಬೇಕು. ನನ್ನ ಮಕ್ಕಳು ನನ್ನ ಎರಡು ಕಣ್ಣು, ಹೆಂಡತಿ ನನ್ನ ಪ್ರಾಣ, ಅವ್ವ ನನ್ನ ಆಶ್ರಯ, ಕನ್ನಡ ನನ್ನ ಆತ್ಮ" ಎಂದುಕೊಳ್ಳುತ್ತಲೇ ಎಷ್ಟೋ ಸಮಾಧಾನ ಆಯ್ತು. ಕೊರಳ ಸುತ್ತಣ ಬೆನ್ನು ನೋಯುತ್ತಿದ್ದರೂ ಮೂಡಿದ ಆ ಉತ್ಸಾಹದಲ್ಲಿ ಅದು ಮರೆಯಾಯ್ತು. ಮಂಪರಿನಲ್ಲೇ ಎದ್ದಾಗ ಬೆಳಗಿನ ಜಾವ ಐದು ಗಂಟೆ (ಆ ಹೊತ್ತಿಗೆ ಏಳುವುದು ಅಭ್ಯಾಸವಾಗಿಬಿಟ್ಟಿತ್ತು). ಯಾವುದೋ ಹಕ್ಕಿ ಅಗಲವಾದ ಸಂಕೀರ್ಣ ಸ್ವರಗಳಲ್ಲಿ ಕೂಗಿದರೆ ದೂರದಲ್ಲಿ ಎರಡು ಮೂರು ಹಕ್ಕಿಗಳು ಏನೋ ಉತ್ತರ ಕೊಡುತ್ತಿದ್ದುವು. ಸ್ವಲ್ಪ ಹೊತ್ತಿಗೆ ಕೋಗಿಲೆ ಕುಕಿಲಿ ದೀರ್ಘವಾಗಿ ರಾಗ ಎಳೆಯಿತು. ನಾಲ್ಕು ಹತ್ತು ನೂರು ಹಕ್ಕಿಗಳ ಚಿಲಿಪಿಲಿ ಕೇಳಿಸಿತು. ಮೂಡಣ ಬೆಳಕಾಗಿತ್ತು. ಮುಖಕ್ಕೆ ರಾತ್ರಿಯೆಲ್ಲಾ ಮುಸುಕು ಹಾಕಿ ಮೂಗಿನ ತುದಿ ಮಾತ್ರ ಹೊರಕ್ಕೆ ಬಿಟ್ಟು ಇಡೀ ದೇಹವನ್ನು ಬೆಡ್ ಷೀಟ್‌ನಲ್ಲಿ ಮುಚ್ಚಿಕೊಂಡು ಮಲಗಿದ್ದೆ. ನೊಣ ಸೊಳ್ಳೆಗಳು ಮೂಗಿನ ತುದಿಯನ್ನೇ ರಾತ್ರಿ ಕಚ್ಚಿದ್ದುವು. ರಾತ್ರಿ ಆಗಾಗ ಬಂದು ಮೂಗಿನ ಹತ್ತಿರ ಸದ್ದು ಮಾಡಿ ಮೌನವಾದಾಗ, ಮೂಗಿನ ತುದಿಗೆ ಮೃದು ಕುಟುಕಿನ ಅನುಭವವಾಗುತ್ತಿತ್ತು. ಆ ದಿನ ಬೆಳಿಗ್ಗೆ ಹಾಸಿಗೆಯಿಂದ ಎದ್ದಾಗ 6.45.

ನಿರಾಳವಾಗಿ ಮಲಗಿದ್ದ ಮುರುಗೇಶನನ್ನು ಎಳಿಸಿದೆ. ಚೆನ್ನಾಗಿ ನಿದ್ದೆ ಬಂದವರನ್ನು ಸೊಳ್ಳೆಗಳು ಕಚ್ಚುವುದಿಲ್ಲವೆಂಬ ನನ್ನ ಹಳ್ಳಿ ಜನರ ಮಾತು ನಿಜವೋ ಏನೋ ಎನ್ನುವಂತೆ ನಿದ್ದೆ ಹೊಡೆದಿದ್ದ. ಮುರುಗೇಶನನ್ನು ಎಳಿಸಿದ್ದೇ ತಡ, ದಡ ದಡ ಎದ್ದು ಚೆಂಬು ಹಿಡಿದು "ದೊಡ್ಡಿ"ಗೆ ಹೋಗಿ ಬಂದ.

## ಹಂಪಿ (ಆ)

ಬೆಳಿಗ್ಗೆ (20.6.85) ಅಲ್ಲೇ ಮಠದಲ್ಲಿ ಹಲ್ಲುಜ್ಜುತ್ತಿದ್ದಂತೆ ಶ್ರೀ ಸದಾಶಿವ ಯೋಗಿಗಳು ಕಳಿಸಿದ್ದ ಇಡ್ಲಿ, ಟೀ ಮುಗಿಸಿ ಆಶ್ರಮಕ್ಕೆ ಹೋದರೆ ಅಲ್ಲಿ ಶಾಂತ ಶಾಂತವಾಗಿ ಮುಗ್ಧವಾಗಿ ಕುಳಿತಿದ್ದಳು. ಹೊಸಪೇಟೆಯ ವಿದ್ಯಾವಂತರಿಗೆ ಸ್ವಾಮಿಗಳು ಔಷಧಿ ಕೊಡುತ್ತಿದ್ದಂತೆ ಹಂಪೆಯ ವಿರೂಪಾಕ್ಷ ದೇವಾಲಯದ ರಥ ಮಾಡುವ ವಿಶ್ವಕರ್ಮ ಜನಾಂಗದ ಒಬ್ಬಾತ ತನ್ನ ಹೆಂಡತಿ ಕರೆದುಕೊಂಡು ಬಂದ. ಇಪ್ಪತ್ತು ವರ್ಷದ ಆಕೆಗೆ ಮೂರ್ಛೆರೋಗ. ಆಕೆಯು ತಂದಿದ್ದ ಹಿಂದಿನ ವೈದ್ಯರ ಔಷಧಿ ಚೀಟಿ ಅರ್ಥವಾಗೋಲ್ಲ ಎಂದು ಹೇಳಿ, "ನಾಳೆ ಬನ್ನಿ, ಔಷಧಿ ಕೊಟ್ಟು ವಾಸಿ ಮಾಡುತ್ತೇನೆ" ಎಂದು ಆತ್ಮವಿಶ್ವಾಸದಿಂದ ನುಡಿದರು. ಹಂಪಿಯಲ್ಲಿ ವಿರೂಪಾಕ್ಷಸ್ವಾಮಿಯ ಹೆಸರಲ್ಲಿ ಸಾಕಷ್ಟು ಹಣದ ಅವ್ಯವಹಾರವಾಗಿದೆಯೆಂದರು.

ಆಶ್ರಮದ ಕೆಳಗೆ ನೀರಿನ ಮಧ್ಯದ ಬಂಡೆಯ ಮೇಲೆ ಒಂದು ಕಂಬ, ಬಸವ ಇದ್ದು ನನ್ನ ಕುತೂಹಲವನ್ನು ಕೆರಳಿಸಿದ್ದುವು. ಸ್ವಾಮಿಗಳ ಜೊತೆ ಆಳವಿಲ್ಲದೆಡೆ ನೀರಿನಲ್ಲಿ ಆ ಬಂಡೆಗಳ ಬಳಿ ಹೋದೆವು. ಸ್ವಾಮಿಗಳು ಬಂಡೆ ಹತ್ತಿದರೂ, ನನಗೆ ಹತ್ತಲಾಗಲಿಲ್ಲ. ನೀರಲ್ಲೇ ನಿಂತು ಪರಿಶೀಲಿಸಿದೆ. ಮೇಲ್ಗಡೆ ಯಾವುದೇ ಶಾಸನವೂ ಇರಲಿಲ್ಲ. ಕಂಬದ ಮೇಲೆ ಒಬ್ಬ ರಾಜನ ವಿಗ್ರಹವಿದೆ. ಕೆಳಗೆ ಅಲ್ಲೇ ಕೆತ್ತಿದ್ದ ಮೆಟ್ಟಿಲ ಬಳಿ ಶಿವ, ಗಣಪತಿ ವಿಗ್ರಹಗಳು, ದಾನಿಗಳ ವಿಗ್ರಹಗಳು, ಶಾಸನ ಉಂಟು. ನದಿಯಲ್ಲಿ ಚಾಲುಕ್ಯರ ಕಾಲದ ನಂದಿ, ಮಾನುಷ ವಿಗ್ರಹಗಳು ಕಾಣಿಸಿದುವು. ಬೇಸಗೆಯಲ್ಲಿ ನೀರು ಬತ್ತಿ ಹೋದಾಗ ಮಾತ್ರ ಕಾಣುವ ಆ ಅವಶೇಷಗಳನ್ನು ಸೂಕ್ಷ್ಮವಾಗಿ ಪರಿಶೀಲಿಸುವ ಅಗತ್ಯವಿದೆ.

ಆಶ್ರಮದ ಹತ್ತಿರ ನೀರಲ್ಲಿ ಕೆಲವು ಹುಡುಗರು ಜಾಲಾಡಿ ಹಳೆಯ ನಾಣ್ಯಗಳನ್ನು ಸಂಗ್ರಹಿಸುತ್ತಿದ್ದರು. ಆಗಾಗ್ಗೆ ಚಿನ್ನದ ನಾಣ್ಯಗಳೂ ಚೂರುಗಳೂ ಸಿಗುವುದುಂಟು. ಹಳೆಯ ನಾಣ್ಯಗಳನ್ನು ಪ್ರತಿಯೊಂದಕ್ಕೆ ಸುಮಾರು ಆರು ರೂಪಾಯಿನಂತೆ ಮಾರುತ್ತಾರೆ. ಸ್ವಾಮಿಗಳ ಹತ್ತಿರ ತಟ್ಟೆ ತುಂಬ ನಾಣ್ಯಗಳಿದ್ದು ನನಗೆ ಐವತ್ತು ಅರವತ್ತು ನಾಣ್ಯ ಕೊಟ್ಟರು. ಬಹಳ ಕಾಲದಿಂದ ಜನ ಕಾಣಿಕೆಯಾಗಿ ನದಿಗೆ ನಾಣ್ಯ ಹಾಕುವ ಪದ್ಧತಿ ಇದೆ. ನಾನು ಚಿಕ್ಕವನಾಗಿದ್ದಾಗ ನೀರು ಹರಿಯುವ ಹಳ್ಳಕ್ಕೆ ಅಥವಾ ನದಿಗೆ ನಾಣ್ಯ ಎಸೆಯುವುದನ್ನು ನೋಡಿದ್ದೇನೆ. ತುಂಗಭದ್ರೆಗೆ ಹಿಂದೆ ಹಾಕಿದ್ದ ನಾಣ್ಯಗಳು ಆಶ್ರಮದ ಬಳಿ ಸಂಗ್ರಹಗೊಂಡು ಜನರ ಕೈಗೆ ಸಿಗುತ್ತವೆ. ಆಶ್ರಮದಿಂದ ಮುಂದೆ ಹರಿದು ಹೋಗುವ ತುಂಗಭದ್ರೆ ಒಂದು ತಿರುವನ್ನು ಪಡೆಯುತ್ತದೆ - ಅದೇ ತಿರುಗಣೆ ಮಡು ಅಥವಾ ಚಕ್ರತೀರ್ಥ. ನೀರು ಅಲ್ಲಿ ಎಡಕ್ಕೆ

ತಿರುಗುವುದರಿಂದ ತಿರುಗಣೆಗೆ ಮುಂಚೆ ಕೆಲಕಾಲ ಸ್ಥಗಿತವಾಗುತ್ತದೆ. ಮರಳು, ನಾಣ್ಯಗಳು ಅಲ್ಲಿ ಶೇಖರವಾಗುತ್ತವೆ. ನದಿಯ ಆಚೆ ದಡದಲ್ಲಿ ಒಂದು ಪುಟ್ಟ ದ್ವೀಪ. ತುಂಗಭದ್ರ ಎರಡು ಸೀಳಾಗಿ ಅಲ್ಲಿ ಒಂದು ಪುಟ್ಟ ದ್ವೀಪವನ್ನು ಸೃಷ್ಟಿಸಿದೆ. ಅದೇ "ವಿರೂಪಾಕ್ಷಪುರ ಗಡ್ಡೆ". ಅದನ್ನು ಆಂಧ್ರದ ಕೆಲ ಜನ ಆಕ್ರಮಿಸಿ, ಅಲ್ಲಿ ತೋಟ ಮಾಡಿಕೊಂಡಿದ್ದಾರೆ. ಎಂಥ ಸುಂದರ, ಅದ್ಭುತ, ಐತಿಹಾಸಿಕ, ಪುಣ್ಯಕರ ಸ್ಥಾನ ಅತಿಕ್ರಮಣಕ್ಕೀಡಾಗಿದೆ! ಹಂಪಿಯಲ್ಲೇ ನೆಲಸಿರುವ ಸ್ವಾಮಿಗಳಿಗೆ ಪ್ರತಿ ವಿವರಗಳು ಗೊತ್ತಿವೆ. ಅವರ ಪ್ರಕಾರ, ಪುರಾತತ್ವ ವಿಭಾಗದವರು ಹಂಪಿಯಲ್ಲಿ ನಡೆಯುವ ಸಂರಕ್ಷಣೆ ಕೆಲಸದ (Conservation) ನೆಪದಲ್ಲಿ ನಾಲ್ಕಾರು ಸಾವಿರ ರೂಪಾಯಿ ಕೆಲಸಕ್ಕೆ ಐವತ್ತು ಸಾವಿರ ಖರ್ಚು ಮಾಡುತ್ತಾರೆ.

ಮಧ್ಯಾಹ್ನದ ಬಿಸಿಲಿನಲ್ಲಿ ನದಿಯ ಸ್ನಾನ ತೀರ ಹಿತವಾಗಿತ್ತು. ಎಲ್ಲ ಬಟ್ಟೆ ಒಗೆದುಕೊಂಡು ಮಠಕ್ಕೆ ಬಂದರೆ ಮುರುಗೇಶನ ಅಡುಗೆ ಸಿದ್ಧವಾಗಿ ಕಾಯುತ್ತಿತ್ತು. ರುಚಿಕರ ಅಡುಗೆ ತಯಾರಿಸಿದ್ದ. ಊಟ ಮಾಡಿದ್ದು ಹೆಪ್ಪುಗಟ್ಟಿದ ಮೊಸರೇ ಆದ್ದರಿಂದ ಬಳಿಕ ನನಗೆ ಬಂದುದು ಹೆಪ್ಪುಗಟ್ಟಿದ ನಿದ್ದೆ. ಗಂಗಾವತಿ ಕಾರ್ಯಕರ್ತರು ಬಂದು ಹಟ್ಟಿ ಗಣಿಯಲ್ಲಿನ ಅನ್ಯಭಾಷಿಕರ ಪ್ರಭಾವ, ಕೃಷ್ಣ ಯೋಜನೆಯ ವ್ಯಾಪ್ತಿಗೆ ಬರುವ ಜಮೀನುಗಳು ಸ್ಥಳೀಯರಿಂದ ಆಂಧ್ರದವರಿಗೆ ಪರಭಾರೆ ಆಗುತ್ತಿರುವ ಅದೇ ಸುದ್ದಿ ತಿಳಿಸಿದಾಗ, ನೀವೆಲ್ಲ ಸಂಘಟಿತರಾಗಬೇಕೆಂದು ತಿಳಿಸಿದೆ. ಗಂಗಾವತಿಯ ಒಬ್ಬ ಪತ್ರಕರ್ತರು ಸ್ವಲ್ಪ ನಿಷ್ಠುರವಾದಿಗಳಾಗಿದ್ದು, ಅವರು ಮನಸ್ಸು ಮಾಡಿದರೆ ಸಂಘಟನೆ ಕೆಲಸ ಮಾಡಬಹುದು ಎಂದು ನನಗೆ ಅನ್ನಿಸಿತು. ನದಿಯಲ್ಲಿ ನಾಣ್ಯ ಸಂಗ್ರಹಿಸುವ ಹುಡುಗನೊಬ್ಬ ನಾಣ್ಯಗಳನ್ನು ತಂದಾಗ ನಾನು ಅವನಿಂದ ಕೊಳ್ಳದೇ ಇದ್ದುದು ಅವನಿಗೆ ನಿರಾಸೆ ಆಯ್ತು.

ಸಂಗಯ್ಯನ ತಾಯಿ ಮಠದ ಅಂಗಳದಲ್ಲಿ ಬತ್ತ ಹರಡಿದ್ದರು. ಬಡತನ, ಜೊತೆಗೆ ರೋಗಿಷ್ಠ ಗಂಡ : ಸೋತು ಸುಣ್ಣವಾದ ಜೀವ ಅದು. ಅವರನ್ನು ಮಾತನಾಡಿಸಿದೆ. ನನ್ನ ಜೊತೆ ಮಾತನಾಡಲು ಒಂದು ಬಗೆಯ ಅಳುಕು, ಭಯ. ಎಷ್ಟೇ ಆಗಲಿ, ನಾನು ಬೆಂಗಳೂರಿನವನು. ಜೊತೆಗೆ, ಗಡ್ಡ ಮೀಸೆ ಬೇರೆ. ಅವರಿಗೆ ನನಗಿಂತ ಹೆಚ್ಚು ವಯಸ್ಸಾಗಿದೆ ಎಂದು ಭಾವಿಸಿದ್ದ ನನಗೆ ಅವರು ನನಗಿಂತ ಚಿಕ್ಕವರು ಎಂದು ತಿಳಿದು ಆಶ್ಚರ್ಯವೇ ಆಯ್ತು. ಈ ಅನುಭವ ನನಗೆ ಹಲವು ಬಾರಿ ಆಗಿದೆ. ನನ್ನನ್ನು ಬಿಟ್ಟು ಉಳಿದೆಲ್ಲರಿಗೂ ವಯಸ್ಸಾಗಿ ಬಿಟ್ಟಿದೆ ಎಂಬ ಭ್ರಾಂತಿಯಲ್ಲೇ ನಾನು ಇದ್ದೇನೆ. ಅದರಲ್ಲೂ ಉಪಾಧ್ಯಾಯರು ಪ್ರತಿವರ್ಷ ಒಂದೇ ವಯಸ್ಸಿನ ವಿದ್ಯಾರ್ಥಿಗಳ ಜೊತೆ ಬದುಕುವವರಾದ್ದರಿಂದ ತಮಗೆ ವಯಸ್ಸಾದಂತೆ ಅವರಿಗೆ ಅನ್ನಿಸುವುದಿಲ್ಲವೆಂದು ತೋರುತ್ತದೆ.

ಸಂಜೆ "ಅರಸರ ಗುಹೆ" ನೋಡಲು ಕರೆದೊಯ್ಯುವುದಾಗಿ ಸ್ವಾಮೀಜಿ ಹೇಳಿದ್ದರು. ನಾನಿನ್ನೂ ಮಠಕ್ಕೆ ಅಂಟಿಕೊಂಡಂತಿದ್ದ ವಿರೂಪಾಕ್ಷನ ದರ್ಶನ ಮಾಡಿರಲಿಲ್ಲ. ಬಂದು ಆಗಲೇ ಒಂದು ದಿನದ ಮೇಲಾಗಿತ್ತು. ಸಂಜೆ ಐದಕ್ಕೆ ಮುಖ ತೊಳೆದು, ದಾರಿಯಲ್ಲಿ ನಾಗನಾಥ ದೇವಾಲಯವನ್ನು ಪರಿಶೀಲಿಸಿದೆ (ಅದು ಈಗ "ನಾಗನಂದೇಶ್ವರ" ಆಗಿದೆ).

ಅದರ ಎಡಕ್ಕೆ ಇರುವ ಚಂದ್ರಶೇಖರ ದೇವಾಲಯ ಮೂಲತಃ ಸೂರ್ಯ ದೇವಾಲಯ. ನಂತರದ ಶಂಕರೇಶ್ವರ ನಿಶ್ಚಿತವಾಗಿಯೂ ವಿಜಯನಗರ ಕಾಲದ್ದು. ಪಕ್ಕದ ದುರ್ಗಾ ('ಚಾಮುಂಡಾ') ನಿಶ್ಚಿತವಾಗಿಯೂ ಚಾಲುಕ್ಯರ ಕಾಲದ್ದು. ಈ ದೇವಾಲಯ ಸಮುಚ್ಚಯದ ಮುಂಭಾಗದಲ್ಲಿ, ಮನ್ಮಥ ಕುಂಡದ ದಡದಲ್ಲಿ ಹರಿಹರ ಕವಿ ನೆಲಸಿದ್ದ ವಾಸದ ಮನೆ ಇದ್ದು, ಅಲ್ಲಿ ಒಂದು ಕಟ್ಟಿಗೆ ತುದಿಗೆ ತಗಡಿನಲ್ಲಿ 'ಹರಿಹರನ ವಾಸದ ಮನೆ' ಎಂದು ಬರೆಯಿಸಿ ಮೊಳೆ ಹೊಡೆದು ತೂಗು ಹಾಕಲಾಗಿತ್ತು. ಅದು ಗಾಳಿ ಬೀಸಿದಾಗ ಉಯ್ಯಾಲೆಯಾಡುತ್ತಿತ್ತು. ಆ ಜಾಗದಲ್ಲಿ ಕಲ್ಲ ಮೇಲೆ ಮಸಿಯಿಂದ ಬರೆಯಿಸುವುದು ಅಗತ್ಯವೆನ್ನಿಸಿತು. ಹೆಮ್ಮೆಯ ಕವಿ ಹರಿಹರ ವಾಸವಾಗಿದ್ದ ಜಾಗದ ಬದಿಯಲ್ಲಿಯೇ ಇರುವ ಕೊಟ್ಟೂರೇಶ್ವರ ಮಠವು ಹರಿಹರ ಅಧ್ಯಯನ ಕೇಂದ್ರವಾಗಿ ರೂಪುಗೊಳ್ಳುವ ಅಗತ್ಯವನ್ನು ಕುರಿತು ಚಿಂತಿಸಿದೆ. ಒಳಗೆ ಭುವನೇಶ್ವರಿ ದೇವಿಯ ಮುಂದೆ ಇಬ್ಬರು ಬಾಲಕರು ರುದ್ರ - ನಮಕ - ಚಮಕ ಹೇಳುತ್ತಿದ್ದರು. ಬಹುತೇಕ ನಿರ್ಜನವಾಗಿದ್ದ ವಿರೂಪಾಕ್ಷ ದೇವಾಲಯದಲ್ಲಿ ಭುವನೇಶ್ವರಿ ಪಂಪಾಂಬಿಕೆಯರ ದರ್ಶನ ಮಾಡಿ, ವಿರೂಪಾಕ್ಷನಿಗೆ ನಮಸ್ಕರಿಸಿ ಆಶ್ರಮದಲ್ಲಿ ನನಗಾಗಿ ಕಾಯುತ್ತಿದ್ದ ಸದಾಶಿವಯೋಗಿಗಳ ಬಳಿಗೆ ಹೋದರೆ ಅಲ್ಲಿ ಅವರು ಗಂಗಾವತಿಯ ಒಬ್ಬ ವಕೀಲರ ಜೊತೆ ಹಳ್ಳಿಯ ಒಬ್ಬ ಛೇರ್‌ಮನ್ ಜೊತೆ ಮಾತಾಡುತ್ತ, ಪ್ರಾಸಂಗಿಕವಾಗಿ ಪಂಪಾ ಸರೋವರದ ದೇವಿಯು "ಜಯಲಕ್ಷ್ಮಿ" ಅಲ್ಲವೆಂದೂ ಆಕೆ ವಾಸ್ತವವಾಗಿ ಪಂಪಾಂಬಿಕೆಯೇ ಎಂದು ಹಂಪಿ ಸಮೀಪದ ಒಬ್ಬ ಗುರುಗಳು ಕೋರ್ಟಿಗೆ * ಹೋಗಿರುವ ವಿಷಯವನ್ನು ತಿಳಿಸಿದರು (ಗಂಗಾವತಿ ಬಳಿ ಇನ್ನೂರು "ಮೊರೇರ ಗುಡಿಗಳು" - Dolmens - ಇವೆಯೆಂದು ಛೇರ್ಮನ್ ತಿಳಿಸಿದರು. ವಕೀಲರಿಗೆ ವೀರಶೈವಾಭಿಮಾನ ತೀವ್ರವಾಗಿದ್ದರೂ ಹರಿಹರನ ಬಗ್ಗೆ ಏನೂ ತಿಳಿದಿರಲಿಲ್ಲ). ಹಂಪಿಯ ಎಷ್ಟೋ ದೇವಾಲಯಗಳು ಹಸ್ತಾಂತರವಾಗಿರುವುದಲ್ಲದೆ ದೇವತೆಗಳ ಹೆಸರುಗಳೇ ಬದಲಾಗಿಬಿಟ್ಟಿವೆ. ಯೋಗಿಗಳನ್ನು ಕಾಣಲು ಕೆಲವು ರೋಗಿಗಳು, ವಿಶೇಷವಾಗಿ ಇಸಬಿನವರು ಬಂದಿದ್ದರು.

'ಅರಸರ ಗುಹೆ' ವಿರೂಪಾಕ್ಷನ ಗುಡಿ ಹಿಂದೆ, ಆಶ್ರಮಕ್ಕೆ ಸುಮಾರು ಒಂದು ಕಿಲೋಮೀಟರ್ ದೂರದಲ್ಲಿದೆ. ನದಿ ದಂಡೆಯ ತೋಟಗಳನ್ನು ಬಲಕ್ಕಿಟ್ಟುಕೊಂಡು ನಡೆದು

---

* ಹೊಳಗುಂದಿಯ ಸ್ವಾಮಿಗಳು ಕೋರ್ಟಿಗೆ ಹೋಗಿರುವುದು ಆಮೇಲೆ ಖಚಿತವಾಯಿತು. ಅವರ ವಾದ ಸರಿ. ಪಂಪಾ ಸರೋವರದ ದಡದ ದೇವಾಲಯವು ಪಂಪಾದೇವಿಯದು. ಅವಳೇ ಹರಿಹರ ಹೇಳುವ 'ಹಿರಿಯ ಹಂಪಾದೇವಿ'; ವಿರೂಪಾಕ್ಷ ದೇವಾಲಯದ ಪಂಪಾಂಬಿಕೆಯು 'ಕಿರಿಯ ಹಂಪಾದೇವಿ'. ಹಿರಿಯ ಹಂಪಾದೇವಿಯನ್ನು ಹಿಂದೆ ಜನ 'ಹಂಪವ್ವ' ಎಂದೇ ಕರೆಯುತ್ತಿದ್ದುದನ್ನು ನಾನು ಖಚಿತಪಡಿಸಿ ಕೊಂಡಿದ್ದೇನೆ. ಉತ್ತರ ಭಾರತದಿಂದ ಬಂದ ಕೆಲವು ಸಾಧುಗಳು ಈಗ ಕೆಲವು ದಶಕಗಳ ಹಿಂದೆ ಅಲ್ಲಿ ನೆಲಸಿ, ಪಂಪಾಸರೋವರದ ದಡದ ಶಿವದೇವಾಲಯವನ್ನು (ಅಲ್ಲಿ ಈಗಲೂ ಸ್ಪಷ್ಟವಾಗಿ ಶಿವಲಿಂಗ ಇದೆ) ತಮ್ಮ ಸ್ವಾರ್ಥಕ್ಕಾಗಿ ವೈಷ್ಣವ ದೇವಾಲಯ ಎಂದು ಕರೆದು, ಅಲ್ಲಿನ ಪಂಪಾಂಬಿಕಾ ವಿಗ್ರಹವನ್ನು 'ಜಯಲಕ್ಷ್ಮಿ' ಎಂದು ಹೆಸರಿಸಿ ಪೂಜಿಸಲು ಆರಂಭಿಸಿರುವುದು ಈಗಲೂ ಮುಂದುವರಿದಿದೆ. ಆ ಸಾಧುಗಳಿಗೆ ಸ್ಥಳೀಯ ಶ್ರೀಮಂತ ಜಮೀನುದಾರರ ಬೆಂಬಲವಿದೆಯೆಂದೂ ತಿಳಿಯಿತು.

ಹೋದರೆ ಎಡಕ್ಕೆ ಉದ್ದಕ್ಕೂ ದೊಡ್ಡ ಬಂಡೆಗಳು. ನಾನು ಅದನ್ನು ಕುತೂಹಲದಿಂದ ನೋಡುತ್ತ, ನಿಧಾನವಾಗಿ ಹೆಜ್ಜೆಯಿಡುತ್ತ ಮುಂದೆ ಹೋದಾಗ ಅಲ್ಲಿ ಒಂದು ದೊಡ್ಡ ಬಾಗಿದ ಬಂಡೆಯ ಮೇಲೆ ಏನೋ ಕಾಣಿಸಿದಂತಾಯಿತು. ಆಶ್ಚರ್ಯವೋ ಆಶ್ಚರ್ಯ ! ಅಲ್ಲಿ ಮಸಕು ಮಸಕಾಗಿ ಇತಿಹಾಸಪೂರ್ವದ ಬಂಡೆ ಚಿತ್ರಗಳಿದ್ದುವು - ಪ್ರಾಣಿಗಳು, ಮನುಷ್ಯರು ಇತ್ಯಾದಿ ವರ್ಣಚಿತ್ರಗಳು. ಸ್ವಾಮೀಜಿಯವರು ಅದನ್ನು ತಾವು ನೋಡಿಯೇ ಇರಲಿಲ್ಲವೆಂದರು. ಸುತ್ತಿ ಬಳಸಿದ ಕಾಲು ದಾರಿ ಹಿಡಿದು ಹೋದರೆ ಮಂಟಪಗಳು, ಒಂದು ಬಣ್ಣ ಬಳಿದ ಆಂಜನೇಯ ಕಾಣಿಸಿದುವು. ವಿಜಯನಗರ ಕಾಲದ ಕಾಲುವೆ ಅಲ್ಲಿ ಎತ್ತರದಲ್ಲಿ ಹರಿದು ವಿರೂಪಾಕ್ಷನ ಗುಡಿ ಪಕ್ಕ ಎತ್ತರದಲ್ಲಿ ಹರಿದು ಹೋಗುತ್ತದೆ (ಹಿಂದೆ ವಿರೂಪಾಕ್ಷನ ಭಕ್ತರಿಗೆ, ಪೂಜಾರಿಗಳಿಗೆ ಆ ನೀರು ಬಳಕೆಯಾಗುತ್ತಿತ್ತು. ಈಗಲೂ ಬಳಸುತ್ತಾರೆ) - ಆ ಕಾಲುವೆ ದಾಟಿ ಗಿಡ ಪೊದೆಗಳ ಮಧ್ಯೆ ದಿಬ್ಬ ಹತ್ತಿದರೆ ಸ್ವಲ್ಪ ಎತ್ತರದಲ್ಲೇ ಒಂದು ದೊಡ್ಡ ಮುಖ ಮಂಟಪ. ಒಳಗೆ ದೊಡ್ಡ ಗುಹೆಗಳು ಕಾಣಿಸಿದುವು. ಅಲ್ಲೇ ಒಡೆದ ನಂದಿ, ಶಿವಲಿಂಗದ ಭಗ್ನ ಪಾಣಿಪೀಠ ಇದ್ದುವು. ಅದೇ ಅರಸರ ಗುಹೆ. ಒಂದು ಕಡೆ ಮಣ್ಣಿನ ಗೋಡೆ ಕಟ್ಟಿದ ಗುಹೆಯ ಒಳಕ್ಕೆ ಹೋಗಿ ಟಾರ್ಚ್ ಬಿಟ್ಟು ನೋಡಿದಾಗ ಅದೊಂದು ಕಲ್ಪನೆಗೂ ಮೀರಿದ ಸುಂದರ ಸ್ಥಳವಾಗಿತ್ತು. ಬಂಡೆಯಿಂದ ಬಂಡೆಗೆ ಜಿಗಿಯುತ್ತ ಅಲ್ಲಲ್ಲೇ ಇದ್ದ ಹಿಂದಿನ ಕಾಲದ ಮೆಟ್ಟಿಲುಗಳನ್ನು ಹತ್ತುತ್ತ ಹೋದರೆ ಗುಡ್ಡದ ಮೇಲೆ ಬಂಡೆಗಳಲ್ಲಿ ಕೆತ್ತಿದ ಹತ್ತಾರು ಒರಳು ಗುಂಡಿಗಳು. ಅಲ್ಲಲ್ಲೇ ಹತ್ತಾರು ಭಗ್ನ ಗುಡಿಗಳು ಇದ್ದುವು. ಕೋಟೆ ಹತ್ತಿ ಆ ಕಡೆಗೆ ಹೋದರೆ ಅದೇ ಹೇಮಕೂಟ. ಅಲ್ಲಿಯೂ ಹಲವು ದೋಣೆಗಳು, ಗುಡಿಗಳು. ಒಂದು ಕಲ್ಲು ಮಂಟಪದ ಮೇಲೆ ಇನ್ನೊಂದು ಕಲ್ಲು ಮಂಟಪ ಕಟ್ಟಿರುವ ದೃಶ್ಯ ಕಾಣಿಸಿತು. “ಮೂಲ ವಿರೂಪಾಕ್ಷನ ಗುಡಿ” ಎಂದು ಕರೆಯುವ ಪುಟ್ಟದೇಗುಲ ಉಂಟು. ಒಂದು ಕಡೆ ಕೆಳಗೆ ದೇವಾಂಗದವರ ಮಠ. ಅದರ ಸಮೀಪವೇ ಬಹು ಸುಂದರ, “ಜೈನ” ಎಂದು ಕರೆಯುವ ದೇವಾಲಯಗಳು (ಅವೂ ನಿಶ್ಚಿತವಾಗಿಯೂ “ಜೈನ” ಅಲ್ಲ). ಹೇಮಕೂಟದಿಂದ ಹಂಪೆ ಊರಿನತ್ತ ವಿರೂಪಾಕ್ಷನ ಪ್ರವೇಶ ದ್ವಾರದ ಕಡೆಗೆ ಇಳಿದು ಬರುವ ಹೊತ್ತಿಗೆ ಕತ್ತಲಾಗಿತ್ತು. ಆ ದಿನ ಕುಡಿಯಲು ಅಲ್ಲಿ ಎಲ್ಲೂ ಚಾ ಸಿಗಲಿಲ್ಲ. ಮುಂಭಾಗದ ಬಿಳಿ ಗೋಪುರದ ಕೆಳಗೆ ಪ್ರವಾಸಿಗರನ್ನು ಅಂಗಡಿ ಬೀದಿ ಇವನ್ನು ನೋಡಿಕೊಂಡು ಮಠಕ್ಕೆ ವಾಪಸಾದರೆ, ಊಟ ಆಗಲೇ ಸಿದ್ಧವಾಗಿತ್ತು. ಗಟ್ಟಿ ಮೊಸರಿನ ಊಟ ರುಚಿಸಿತು. ಊಟ ಮಾಡಿ ಮತ್ತೆ ಅಂಗಡಿ ಬೀದಿಗೆ ಬಂದು ಅಡ್ಡಾಡಿ, ಬಾಳೆಹಣ್ಣು ಕೊಂಡು ರಾತ್ರಿ ಒಂಬತ್ತಕ್ಕೆ ವಾಪಸಾದೆ. ಸರಿಯಾಗಿ ಉರಿಯದ ಟಾರ್ಚ್ ಹಿಡಿದು ಪೊದೆಗಳ ಮಧ್ಯೆ ಅಲ್ಲಲ್ಲಿ ಹೊಲಸಿಲ್ಲದ ಕಡೆ ಕಾಲಿಟ್ಟು “ದೊಡ್ಡಿ”ಗೆ ಹೋದೆ - ಅರಿಯದೆ ಕೆಸರಲ್ಲಿ ದಾಟಿ ಹೊಳೆ ಮುಟ್ಟಿ ಬಂದೆ. ಅಡುಗೆ ಮನೆಯಲ್ಲಿ ಇಳಿಬಿಟ್ಟಿದ್ದ ಬಾಗಿಲು ತೆರೆಗಳನ್ನು ಮಡಿಸಿ ಚಾಪೆ ಮೇಲೆ ಹಾಸಿ ಅವನ್ನೇ ಇದ್ದುದರಲ್ಲಿ ಸುಪ್ಪತ್ತಿಗೆ ಮಾಡಿಕೊಂಡೆ. ಆ ದಿನ ಲಕ್ವಾ ಪೀಡಿತರ ಕೆಮ್ಮು ರಾತ್ರಿ ಅಷ್ಟಾಗಿ ಇರಲಿಲ್ಲ. ಯಾವುದೋ ಬೆಕ್ಕೋ ಹೆಗ್ಗಣವೋ ರಾತ್ರಿ ಆಗಾಗ ಸರಸರ ಸದ್ದು ಮಾಡುತ್ತಿತ್ತು. ನಾನು ಮಲಗಿದ್ದ ಮಂಟಪಕ್ಕೆ ಮೂರು ಕಡೆ ಮಾತ್ರ

ಗೋಡೆ ಇತ್ತು, ಮುಂಭಾಗ ಇಡೀ ಖಾಲಿ. ಗಾಳಿ ಸುಯ್ಯನೆ ಬೀಸುತ್ತಿತ್ತು. ವಿರೂಪಾಕ್ಷನ ಗುಡಿಯ ಗೋಪುರದ ತುದಿಯ ಹಸಿರು ದೀಪದ ಬೆಳಕಿನ ಭಾಗ ಅಂಗಳದ ಅಂಚಿನಲ್ಲಿ ಕಾಣಿಸುತ್ತಿತ್ತು. ಉಳಿದಂತೆ ಎಲ್ಲ ಕಡೆ ಕತ್ತಲೋ ಕತ್ತಲು, ರಾತ್ರಿಯೆಲ್ಲ ನೀರಿನ ಸಣ್ಣ ಜುಳು ಜುಳು ನಿನಾದ.

## ಹಂಪಿ (೩)

ಬೆಳಿಗ್ಗೆ (21.6.85) ನಾನು ಕರೆದೊಡನೆ ಮುರುಗೇಶ ಓ ಎಂದು ಎದ್ದು ಪ್ರಾಥಮಿಕ ಕರ್ತವ್ಯ 'ದೊಡ್ಡಿ'ಗೆ ಓಡಿದ. ನಾನು ಹಾಸಿಗೆ ಮೇಲೆ ಕುಳಿತೇ ಮುಖ ಕೂಡ ತೊಳೆಯದೆ, ಹಿಂದಿನ ದಿನದ ದಿನಚರಿ ಬರೆದೆ. ಸ್ವಲ್ಪ ಹೊತ್ತು ಬಿಟ್ಟು ಬಂದ ಸಂಗಯ್ಯನಿಗೆ ಹಾಲು ತರಲು ದುಡ್ಡು ಕೊಟ್ಟೆ. ಸದಾಶಿವಯೋಗಿಗಳ ಕಡೆಯಿಂದ ಬಂದ ನಾಲ್ಕು ಕಪ್ಪು ಚಾಗಳಲ್ಲಿ ಒಂದು ಮುರುಗೇಶನಿಗೆ, ಇನ್ನೊಂದು ಸಂಗಯ್ಯನ ಹೆಂಡತಿ ಗಿರಿಜವ್ವಗೆ ಕೊಟ್ಟು ನಾನೂ ಕುಡಿದೆ. ಗಿರಿಜವ್ವನ ಒಂದು ವರ್ಷದ ಮಗ ಚಾ ಕುಡಿಯಲು ನಿರಾಕರಿಸಿತು. ಅದರ ಎಂಜಲು ಟೀಯನ್ನು ಗಿರಿಜವ್ವನೇ ಕುಡಿದು ಹಿಗ್ಗಿದಳು. ಬಳಿಕ ಹೋಟೆಲ್ ತಿಂಡಿ ಮುಗಿಸಿ ಮುರಿಗೇಶ್ ಜೊತೆ ಚಕ್ರತೀರ್ಥಕ್ಕೆ ಹೊರಟೆ. ಸಂಗಯ್ಯ ವಿರೂಪಾಕ್ಷನ ಗುಡಿ ಮುಂದೆ ತೆಂಗಿನ ಕಾಯಿ ಹೂ ಮಾರುತ್ತಿದ್ದ. ರಥ ಬೀದಿಯ ಇಬ್ಬದಿಯ ಮಂಟಪಗಳೆಲ್ಲ ಬಹುತೇಕ ಅಂಗಡಿ ಹೋಟೆಲ್ ಆಗಿ ಪರಿವರ್ತಿತವಾಗಿವೆ. ಕೆಲವರು ಮಂಟಪಗಳಿಗೆ ಮಣ್ಣಿನ ಗೋಡೆ ಹಾಕಿಕೊಂಡೋ ಈಚಲುಗರಿ ಕಟ್ಟಿಕೊಂಡೋ ವಾಸಿಸಲು 'ಮನೆ(ನಿ)' ಮಾಡಿಕೊಂಡಿದ್ದಾರೆ. ಕೆಲವರು ಇಟ್ಟಿಗೆ ಸಿಮೆಂಟ್ ಗೋಡೆ ಹಾಕಿ ಮಹಡಿ ಕೂಡ ಕಟ್ಟಿದ್ದಾರೆ. ಕೆಲವೆಡೆ ಮೇಲೆ ಮಂಟಪ ಉಳಿದಿದೆ, ಕೆಳಗಿನ ಮಂಟಪದಲ್ಲಿ ವಾಸ. "ಹಂಪಿ ಭುವನೇಶ್ವರಿ ಕೆಲಸಗಾರರ ಸಂಘ"ವೊಂದು ಆ ಮಹಡಿಗಳನ್ನು ಸರ್ಕಾರ ತೆರವು ಮಾಡಿಸಲು ಅಡ್ಡಿ ಮಾಡುತ್ತಿದೆ. ಖಾಲಿ ಮಾಡಿಸುವುದು ಕಷ್ಟ ಮಾತ್ರವಲ್ಲ, ಅಸಾಧ್ಯ. ಎರಡು ವೀರಶೈವ 'ದಾಸೋಹ ಮಠ'ಗಳಿಗೆ ಬೋರ್ಡು ಇದೆಯಾದರೂ, ಅಲ್ಲಿ ಬೋರ್ಡಿಂಗ್ ಇಲ್ಲ. ಒಂದರಲ್ಲಿ ಮಾತ್ರ ಜನವಾಸವಿದೆ. ಪೂರ್ತಿ ಟಾರ್ ಹಾಕಿರುವ ತೇರಿನ ಬೀದಿಯ ಇನ್ನೊಂದು ಬದಿಯಲ್ಲಿ ಟಾರ್ ತೆಗೆಸಿ ಅಲ್ಲಿದ್ದ ಹಿಂದಿನ ಕಾಲದ ಚಪ್ಪಡಿಗಳು ಕಾಣುವಂತೆ ಮಾಡಿದ್ದಾರೆ. ಎದುರಿಗೇ ದೊಡ್ಡ ಮಂಟಪದಲ್ಲಿ ವಿರೂಪಾಕ್ಷ ಲಿಂಗಕ್ಕೆ ಸುಮಾರು ಒಂದು ಫರ್ಲಾಂಗು ದೂರದಲ್ಲಿ ದೊಡ್ಡ ಮಂಟಪದಲ್ಲಿ ಎದುರು ಬಸವಣ್ಣ, ಬಲಕ್ಕೇ ಮತಂಗ ಪರ್ವತ.

ಅಲ್ಲೇ ಎಡಕ್ಕೆ ತಿರುಗಿ ಹೋದರೆ ನದಿಯವರೆಗೆ ಉದ್ದಕ್ಕೂ ಕಲ್ಲು ಚಪ್ಪಡಿಗಳು ಮಾತ್ರವಲ್ಲ, ಮುರಿದು ನೆಲಕ್ಕೆ ಬಿದ್ದ ಕಲ್ಲು ಕಂಬವೊಂದೂ ಇದೆ. ಕೆಲವೆಡೆ ನದಿಯ ನೀರು ಬಂಡೆಗಳನ್ನೇ ಉರುಳಿಸಿದೆ. ವಿರೂಪಾಕ್ಷ ದೇವಾಲಯದ ಕಡೆಯಿಂದ ಹರಿದು ಬರುವ ನೀರು ಇಲ್ಲಿ ಎಡಕ್ಕೆ ತಿರುಗುವುದರಿಂದ ನೀರು ಚಕ್ರಾಕಾರವಾಗಿ ತಿರುಗಿ ಹೊರಳುತ್ತದೆಯಾದ ಕಾರಣ ಆ ಭಾಗವನ್ನು ಚಕ್ರತೀರ್ಥವೆಂದೂ "ತಿರುಗಣಿ ಮಡು"ವೆಂದೂ ಕರೆಯುತ್ತಾರೆ.

ನೀರೂ ಕೂಡ ಸಾಕಷ್ಟು ಆಳ. ಮನುಜರ ಕಾವ್ಯವಾದ 'ಹರಿಶ್ಚಂದ್ರ ಕಾವ್ಯ'ವನ್ನು ಬರೆದುದಕ್ಕೆ ರಾಘವಾಂಕ ತನ್ನ ಸೋದರಮಾವ ಹರಿಹರನಿಂದ ಛೀಮಾರಿ ಹಾಕಿಸಿಕೊಂಡು ಆ ನೋವನ್ನು ತಳೆಯಲಾರದೆ ಚಕ್ರತೀರ್ಥದಲ್ಲಿ ಮುಳುಗಿ ಪ್ರಾಣ ಬಿಡಲು ಪ್ರಯತ್ನಿಸಿದನೆಂದು ಕತೆಯೂ ಇದೆ. ಪ್ರವಾಹ ತಂದ ಮರಳ ರಾಶಿ ಎದುರಿಗೆ ವಿಶಾಲವಾಗಿ ಒರಗಿದೆ. ಅಲ್ಲೇ ಬಹು ಸುಂದರ ದೊಡ್ಡ ಮೂರ್ತಿಗಳು ಇರುವ ರಾಮನಾಥ ದೇವಾಲಯವಿದೆ. ಆ ದೇವಾಲಯದ ಅರ್ಚಕರು ವೈಖಾನಸ ಸಂಪ್ರದಾಯದವರು. ದೇವಾಲಯ ಸ್ಪಷ್ಟವಾಗಿ ವಿಜಯನಗರ ಕಾಲದ್ದು. ಪ್ರವಾಸಿಗಳು ಸಾಕಷ್ಟು ಜನ ಬರುವುದರಿಂದ ಅಲ್ಲಿ ಟೀ ಅಂಗಡಿಗಳು ಉಂಟು. ಭಿಕ್ಷುಕರಂತೂ ಸರಿಯೇ. ಮುಂದೆ ಕಾಣುವ ದೇವಾಲಯವೊಂದು ವಿಜಯನಗರ ಪೂರ್ವದ್ದೆಂದು ಕಾಣುತ್ತದೆ. ಬಲಕ್ಕೆ ಹೋಗಿದ್ದರೆ ಅಚ್ಯುತರಾಯ ದೇವಾಲಯ ಸಂಕೀರ್ಣ ಸಿಗುತ್ತಿತ್ತು. ಹೋಗಲಿಲ್ಲ. ನದಿ ದಂಡೆಯ ಉದ್ದಕ್ಕೂ ದೇವಾಲಯ ಮಂಟಪಗಳಲ್ಲದೆ ಬಂಡೆಗಳ ಮಧ್ಯೆ ನೀರು ಹರಿದು ಹೋಗುವ ದೃಶ್ಯ ಬಹು ಹಿಗ್ಗನ್ನು ತರುತ್ತದೆ. ಎಡಕ್ಕೆ ಸುಗ್ರೀವನ ಗುಹೆ ಇದೆ. ಬಲಕ್ಕೆ ಮುಸ್ಲಿಮರು ಒಂದು ಸಮಾಧಿ ಕಲ್ಪಿಸಿ ಅದಕ್ಕೆ ಸುಣ್ಣ ಬಳಿದು ಹಸಿರು ಧ್ವಜ ನೆಟ್ಟು ಅಲ್ಲಿನ ಜಾಗವನ್ನು ತಮ್ಮದು ಮಾಡಿಕೊಳ್ಳಲು ಯತ್ನಿಸಿದ್ದಾರೆ. ಅಲ್ಲಿಗೆ ಒಂದು ಕಿಲೋಮೀಟರ್ ದೂರದಲ್ಲಿ ಹಳೆಯ ಕಾಲದ ಸೇತುವೆಯ ಕುರುಹಾಗಿ ನೀರಲ್ಲಿ ನಿಂತ ಕಂಬಗಳು ಕಾಣುತ್ತವೆ. ಅದರ ಸಮೀಪವೇ "ಶ್ರೀ ಪುರಂದರ ದಾಸರ ಮಂಟಪ" ಹೆಸರಿನ ಮಂಟಪದ ಕಂಬದ ಮೇಲೆ ಪೇಟ ಹಾಕಿದ ಪುರಂದರರ ಈಚಿನ ಮೂರ್ತಿಯನ್ನೂ ಕೆತ್ತಿದ್ದಾರೆ. ಮಂಟಪದಲ್ಲಿ ಒಬ್ಬ ಸನ್ಯಾಸಿ ಆಕಳಿಸುತ್ತ ಕುಳಿತಿದ್ದ. ತನ್ನ ಹಾಸಿಗೆ, ಹೊದಿಕೆ, ಉಳಿದ ಸಾಧನ ಎಲ್ಲವನ್ನೂ ಪುಟ್ಟ ರಾಶಿಮಾಡಿ ಮೇಲೆ ಬಟ್ಟೆ ಹೊದಿಸಿದ್ದ. ಮೂಲೆಯಲ್ಲಿ ಒಂದು ಚೆಂಬು, ಪೊರಕೆ, ಒಲೆಕಟ್ಟಿಗೆ ಇದ್ದುವು - ಆತ ಅಲ್ಲೇ ವಾಸವಾಗಿರುವಾತ. ಕಂಬಕ್ಕೆ ದಾರಕಟ್ಟಿ ಎಲೆ ಹೂ ಪೋಣಿಸಿದ್ದ ಪುರಂದರರ ಮೂರ್ತಿಯ ಮುಂದೆ ಕೆಲವು ಪುಡಿಗಾಸುಗಳೂ ಬಿದ್ದಿದ್ದುವು. ರೈತನೊಬ್ಬ ಹೊರಗಡೆ ಒಂದು ಚಪ್ಪಡಿ ಮೇಲೆ ಪುರಂದರರ ಕಡೆ ಕಾಲುಮಾಡಿ ಮಲಗಿ ನಿದ್ದೆ ಮಾಡುತ್ತಿದ್ದ - ತಾನೇನು ಮಾಡಿದ್ದೇನೆ ಎಂಬುದರ ಅರಿವಿಲ್ಲದೆ. ಬಸ್ಸಿನಲ್ಲಿ ಜನ ಬಂದು ನೀರಲ್ಲಿ ಇಳಿದು ಓಡಾಡಿ ಎಲ್ಲವನ್ನೂ ಕಂಡು ಹಿಗ್ಗುತ್ತಿದ್ದರು. ಅಲ್ಲಿ ನನಗೆ "ಪ್ರಕೃತಿ ಕರೆ"ಗೆ ಓಗೊಡುವುದು ಕಷ್ಟವಾಯಿತು. ನನ್ನ ಹಳ್ಳಿಯ ಕಡೆ ಒಂದು ಕತೆ ಇದೆ. ಹಂಪಿಗೆ ಹೋದ ಹೆಣ್ಣು ಮಗಳೊಬ್ಬಳು ತಾನೆಂದೂ ಅತ್ತ ಕಾಲಿಡುವುದಿಲ್ಲವೆಂದಳಂತೆ. ಕಾರಣ, ಅಲ್ಲಿ ಎಲ್ಲಿ ಹೋದರೂ ಶಿವಲಿಂಗಗಳೇ ಇದ್ದುದರಿಂದ 'ವಂದ ಮಾಡೋಕೆ' ಆಕೆಗೆ ಬಹಳ ಕಷ್ಟ ಆಯಿತು.

ಮುಂದೆ ಹೋದರೆ ಅನುಪಮ ಕಲಾಕೌಶಲದ ವಿಠ್ಠಲಗುಡಿಯ ಮುಂದೆ 'ತುಲಾಭಾರ' ಕಂಬ ಇದೆ. ವಿಟ್ಠಲಗುಡಿಯಲ್ಲಿ ಮೂರ್ತಿ ಪ್ರತಿಷ್ಠಾಪನೆ ಆಗದೆ ಹಾಗೆಯೇ ಉಳಿದುಬಿಟ್ಟಿದೆ. ಕಲ್ಲಿನ ರಥವು ಅಲ್ಲಿನ ಒಂದು ವಿಶೇಷ. ವಿಗ್ರಹಗಳಿಗೆ ಅವುಗಳನ್ನು ಮಾಡಿದಾಗಲೇ ಹಚ್ಚಿದ್ದ ಬಣ್ಣ ಅಲ್ಲಲ್ಲಿ ಮಸುಕಾಗಿ ಕಾಣಿಸುತ್ತಿತ್ತು. ಅಲ್ಲಿನ ಕಲ್ಯಾಣ ಮಂಟಪದ ಕುಸುರಿ ಕೆಲಸ ಅನುಪಮ. ಇಡೀ ಗುಡಿ ಪೂರ್ಣಗೊಳ್ಳದಿರುವುದು ಹೃದಯ ವಿದ್ರಾವಕ. ಅಲ್ಲಿನ

ಕ್ರಿ.ಶ. 1533ರ ಒಂದು ಶಾಸನವು "ವೋದುವ" ತಿರುಮಲಮ್ಮ ಎಂಬ ಕವಯಿತ್ರಿಯು ಹೇಳಿದ ಶ್ಲೋಕವೊಂದನ್ನು ದಾಖಲಿಸಿದೆ. ಅಚ್ಯುತದೇವ ಮಹಾರಾಜರು ವಿಠ್ಠಲದೇವರಿಗೆ ಮಾಡಿದ "ಸುವರ್ಣ ಮೇರು" ಎಂದ ದಾನದ ಬಗ್ಗೆ ಅವಳು ಹೇಳಿದ (ರಚಿಸಿದ) ಸಂಸ್ಕೃತ ಶ್ಲೋಕ ಅದು (ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ್. 9:2. ಸಂಖ್ಯೆ 557). ಇಡೀ ಹಂಪಿ ಜಗತ್ತಿನ ಅದ್ಭುತಗಳಲ್ಲೊಂದು; ಐತಿಹಾಸಿಕ ಕಲಾತ್ಮಕ ಮಹಾ ಸ್ಮಶಾನ. ನೋಡಿದಷ್ಟೂ ವಿಸ್ಮಯ, ಒಳಗನ್ನು ತಿಳಿದಷ್ಟೂ ಯಾತನೆ. ಆ ನಗರ 1565 ರಲ್ಲಿ ಶತ್ರುಗಳಿಂದ ನಾಶವಾದುದನ್ನು Sewell ಅವರು ಹೀಗೆ ಹೇಳಿದ್ದಾರೆ: "....with fire and sword, with crowbars and axes, they carried on day after day their work of destruction. Never perhaps in the history of the world has havoc been wrought, and wrought so suddently, on so splendid a city teeming with a wealthy and industrious population in the full plentiude of prosperity one day, and on the next, seized, pillaged and reduced to ruins, amid scenes of savage massacre and horrors begarring description" (A Forgotten Empre, P. 208)

ಬಂದ ದಾರಿಯಲ್ಲೇ ವಾಪಸಾಗುವಾಗ ಆಂಧ್ರದ ಪ್ರವಾಸಿಗರು ಕಾಣಿಸಿದರು. ಅವರಿಗೆ ವಿಜಯನಗರ ಸಾಮ್ರಾಜ್ಯ ಕನ್ನಡಿಗರಿಗೆ ಸೇರಿದ್ದಕ್ಕಿಂತ ಹೆಚ್ಚು ತಮಗೆ ಸೇರಿದ್ದೆಂಬ ಅಭಿಮಾನ. ಮುಸ್ಲಿಮರು ಹೊಸದಾಗಿ ನಿರ್ಮಿಸಿಕೊಂಡಿದ್ದ ಸಮಾಧಿ ಬಳಿ ಕೆಲ ಮುಸ್ಲಿಮ್ ಯುವಕರಿದ್ದುದಲ್ಲದೆ, ಒಂದು ಸಂಸಾರ ಅಲ್ಲಿಗೆ ಬರುತ್ತಿದ್ದುದೂ ಕಾಣಿಸಿತು. ಅಲ್ಲೇ ನದಿಯ ದಡದಲ್ಲಿ ಒಬ್ಬ ಬ್ರಾಹ್ಮಣ ಸಂಧ್ಯಾವಂದನೆ ಮಾಡುತ್ತಿದ್ದ. ಎಂತಹ ವೈರುಧ್ಯ! ವಾಪಸ್ ಪೇಟೆ ಬೀದಿಗೆ ಬಂದಾಗ ಪುರಾತತ್ವ ಇಲಾಖೆಯಲ್ಲಿ ಕೆಲಸ ಮಾಡುತ್ತಿದ್ದ ಬಾಲಸುಬ್ರಹ್ಮಣ್ಯಂ ನನ್ನ ಬಗ್ಗೆ ವಿಚಾರಿಸಿದ್ದ ವಿಷಯ ತಿಳಿಯಿತು. ಅಲ್ಲಿನ "ವೆಂಕಟೇಶ್ವರ ಭವನ"ದ ಮಾಲಿಕ ಒಬ್ಬ ಲಿಂಗಾಯತರು ; ವ್ಯಾಪಾರದ ದೃಷ್ಟಿಯಿಂದ ಆ ಹೆಸರು. ತಿಂಡಿ ತಿನ್ನಲು ಅಲ್ಲಿಗೆ ಹೋದಾಗ ಓದಲು ಹಿಂದಿನ ದಿನದ ಕನ್ನಡ ಪೇಪರು ದೊರಕಿತು. "ಜನ ಬರ್‍ತಾರೆ, ಮೂಲೇಲಿ ಕೂತ್ಕೊಂಡು ಓತ್ತಾರೆ. ಲಾಟರಿ ಭಾಗ ಕಿತ್ಕೊಂಡು ಯಾತ್ತಾರೆ ಅಥವಾ ಕೆಲವೊಮ್ಮೆ ಆ ಭಾಗಕ್ಕಾಗಿ ಇಡೀ ಪೇಪರ್ ಒಯ್ತಾರೆ. ಹರಿದು ಬಿಟ್ಟ ಪೇಪರ್‌ನಲ್ಲಿ ನಾವು ಮಾರನೆ ದಿನ ತಿಂಡಿ ಕಟ್ಟಿ ಕೊಡ್ತೇವೆ" - ಇದು ಆ ಹೋಟೆಲಿನ ಮಾಣಿ ಹೇಳಿದ್ದು. ಇನ್ನೊಂದು ಹೋಟೆಲ್ "ಶ್ರೀನಿವಾಸ ಭವನ"ದ ಮಾಲೀಕರೂ ಲಿಂಗಾಯತರೇ. ಅಷ್ಟೇ ಅಲ್ಲ, ಅದರ ಕೆಳಗೆ "ಬ್ರಾಹ್ಮಣ ಫಲಾಹಾರ ಮಂದಿರ" ಎಂದೂ ಬರೆಯಿಸಲಾಗಿದೆ. "ಉದರ ನಿಮಿತ್ತಂ ಬಹುಕೃತ ವೇಷಂ" ಎನ್ನಬೇಕೇ!

ಮುರಿಗೇಶ್ ಅಡುಗೆಗೆ ತೊಡಗಿದ. ಅವನು ತಾನಾಗಿಯೇ ಹೇಳಿದರೆ ಮಂತ್ರ ಚೆನ್ನಾಗಿ ಹೇಳುತ್ತಾನೆ. ಚೆನ್ನಾಗಿ ಹಾಡುತ್ತಾನೆ. ನಾವು ಮಾತನಾಡಿಸಿದಾಗ ಮಾತ್ರ ಬಹಳ ಉಗ್ಗುತ್ತಾನೆ. ಚೆನ್ನಾಗಿ ನಗುತ್ತಾನೆ. ಅವನನ್ನು ಯಾರೂ ಮಾತನಾಡಿಸದೇ ಇದ್ದರೇ ಅವನು

ಸುಖಿ. ಜಾಣ, ಕರಿಯ ಜಟ್ಟಿ, ಆದರೆ ಉಗ್ಗಿನಿಂದಾಗಿ ತಾನಾಗಿ ಅವನು ಯಾರನ್ನೂ ಮಾತನಾಡಿಸಲು ಹೋಗುವುದಿಲ್ಲ. ಹಾಡಿದಾಗ ಅವನ ಉಚ್ಚಾರ ತೀರ ಸ್ಪಷ್ಟ. ಸಂಭಾಷಣೆ ಮಾತ್ರ ಅವನಿಂದ ಸಾಧ್ಯವಿಲ್ಲ. ಯಾವುದೋ ನಿಗೂಢ ಮನೋದೌರ್ಬಲ್ಯದಿಂದ ನರಳುತ್ತಿರುವುದು ಸ್ಪಷ್ಟವಿತ್ತು.

ಸುಮಾರು 12.30ರ ತನಕ ದಿನಚರಿ ಬರೆದು, ಸ್ನಾನಕ್ಕೆ ನದಿಗೆ ಹೋದೆ. ತೆಳ್ಳಗೆ ಹರಿಯುತ್ತಿದ್ದ ನೀರನ್ನು ದಾಟಿ ನದಿಯ ಆಚೆಯ ದಡಕ್ಕೆ ಹೋದರೆ ಸಾವಿರಾರು ಪುಟ್ಟ ನುಣುಪು ಕಲ್ಲುಗಳು. ಬಂಡೆಗಳಲ್ಲಿ ಒರಳು ಕಲ್ಲಿನಂತಹ ಗುಂಡಿಗಳೂ ಕಲಾತ್ಮಕ ಮಡಿಕೆಗಳೂ ನೀರಿನ ಕೊರೆತದಿಂದ ರೂಪುಗೊಂಡಿದ್ದವು. 1953ರಲ್ಲಿ ತುಂಗೆಯನ್ನು ತೀರ್ಥಹಳ್ಳಿ ಬಳಿ ಕಂಡದ್ದು, ಅಲ್ಲಿನ ನೀರಲ್ಲಿ ಸ್ನಾನಮಾಡಿದ್ದು ಜ್ಞಾಪಕವಾಯಿತು. ನಾಡಿದ್ದು ಮೌನವನ್ನಾಚರಿಸಿ, ಪೂಜೆಮಾಡಿ ಸಂಕಲ್ಪವನ್ನು ತೊಡಬೇಕೆಂದು ನಿರ್ಧರಿಸಿದೆ. ಹಾಗೆ ಯೋಚಿಸುತ್ತ ಮರಳಲ್ಲೇ ಸ್ವಲ್ಪ ತಿರುಗಾಡಿದೆ. ಆಚೆಯ ದಡದಲ್ಲಿ ಕುರಿ ಮೇಕೆಗಳು ಮೇಯುತ್ತಿದ್ದುವು, ಭಾರಿ ನಾಯಿಯೊಂದರ ಕಾವಲಿನಲ್ಲಿ. ಅದರ ಕೊರಳಿಗೆ ಮೂರು ನಾಲ್ಕು ಸುತ್ತಿನ ಬಳೆಯಂತಹ ವಸ್ತು ಕಟ್ಟಿದ್ದರು. ಅದು ಓಡಾಡಿದರೆ ಜಂಗ್ ಜಂಗ್ ಎಂದು ಸದ್ದಾಗುತ್ತಿತ್ತು. ಜನ ನದಿಯನ್ನು ದಾಟುವ 'ಕಡವು' ಅದು. ಜನ ನದಿಗೇ ಪಂಪ್ ಹಾಕಿ ನೀರನ್ನು ತೋಟಕ್ಕೆ ಹಾಯಿಸಿಕೊಳ್ಳುತ್ತಿದ್ದರು. ಆ ಪುಟ್ಟ ದ್ವೀಪದಾಚೆ ಪಂಪಾಸರೋವರ. ಮುಂದೆ ಆನೆಗುಂದಿ. ದ್ವೀಪದ ಗುಡ್ಡದ ಮೇಲೆ ಹನುಮನ ದೇಗುಲ. 'ವಿರೂಪಾಪುರ' ಹೆಸರಿನ ಆ ದ್ವೀಪಕ್ಕೆ ಒಮ್ಮೆ ಹೋಗಿ * ಎಲ್ಲ ಪರಿಶೀಲಿಸಬೇಕೆನಿಸಿತು. ನಾನು ನೋಡುತ್ತಿದ್ದಂತೆ ಆ ಗಡ್ಡೆಯಿಂದ ನಾಲ್ವರು ಅಲ್ಲಿಯ ನಿವಾಸಿ ತೆಲುಗರು ದಾಟಿ ಈಚೆ ದಡಕ್ಕೆ ಬಂದರು. ಗಂಗಾವತಿ ಮಾನ್ವಿ ಕಡೆ ತೆಲುಗರು ಹಣ ಸಂಖ್ಯೆಯಲ್ಲಿ ಎಷ್ಟು ಪ್ರಬಲರಾಗಿದ್ದಾರೆಂದರೆ ಅಲ್ಲಿಂದ ಕನ್ನಡಿಗರು ತಾವೇ ಚುನಾವಣೆಯಲ್ಲಿ ಆಯ್ಕೆಯಾಗಲಾರರು; ಆಯ್ಕೆಯಾಗಲು ಅವರ ಬೆಂಬಲ ಬೇಕೇ ಬೇಕು. ಬೆಳಗಾವಿ ಕಡೆ ಮರಾಠಿಗರು, ಇಲ್ಲಿ ಆಂಧ್ರರು, ದಕ್ಷಿಣ ಕನ್ನಡ ಕೊಡಗುಗಳಲ್ಲಿ ಮಲಯಾಳಿಗಳು, ಬೆಂಗಳೂರಲ್ಲಂತೂ ಸರಿಯೇ ತಮಿಳರು ಸಂಖ್ಯೆಯಲ್ಲಿ (ಆರ್ಥಿಕವಾಗಿ ಉತ್ತರ ಭಾರತೀಯರು) : ಎಲ್ಲ ಕಡೆಯಿಂದ ಕರ್ನಾಟಕದ ಮೇಲೆ ಎಲ್ಲ ಬಗೆಯ ಆಕ್ರಮಣ ನಡೆದಿದೆ.

ನೆತ್ತಿಯ ಮೇಲೆ ಸೂರ್ಯ ಉರಿಯುತ್ತಿದ್ದರೂ ನದಿಯ ಸ್ನಾನ ದೇಹಕ್ಕೆ ಹಿತವನ್ನು ನೀಡಿತು. ನಾನು ಸ್ನಾನ ಮಾಡುತ್ತಿದ್ದ ಬಳಿಯ ಬಂಡೆ ಹತ್ತಿರಕ್ಕೆ ಇಬ್ಬರು ಹೆಂಗಸರು (50 ವರ್ಷ, 16 ವರ್ಷ) ಎರಡು ಕುಕ್ಕೆ ತುಂಬ ಬಟ್ಟೆ ತಂದು ನಿಸ್ಸಂಕೋಚವಾಗಿ ಬಂಡೆಗೆ ಬಟ್ಟೆ ಬಡಿಯುತ್ತ ಮಾತಿನಲ್ಲಿ ಯಾರು ಯಾರನ್ನೋ ಕುಕ್ಕಿರಬೇಕು. ತೆಳ್ಳಗೆ ಉದ್ದಕ್ಕೆ ಇದ್ದ ಒಬ್ಬ ಲಂಬಾಣಿ ಸ್ಫುರದ್ರೂಪಿ ಯುವತಿ ಬೆನ್ನು ಕಾಣಿಸುವ ಕುಬಸ ತೊಟ್ಟು ನದಿ ದಾಟುವಾಗ ಒಬ್ಬ ಹುಡುಗ ಕೆಟ್ಟ ಮಾತಿನಲ್ಲಿ ಕಿಚಾಯಿಸಿದ. ಅವಳೂ ಬಿಡಲಿಲ್ಲ. ಚನ್ನಾಗಿ ಬಯ್ದಳು.

* ಮುಂದೆ ಅವರ ಮೂಲಕ ಒಂದಲ್ಲ, ಎರಡು ಸಲ ದಾಟಿ ಹೋಗಿದ್ದೇನೆ. ಅಲ್ಲಿಯ ಎಲ್ಲ ಅವಶೇಷಗಳನ್ನು ಪರಿಶೀಲಿಸಲಾಗಿಲ್ಲ.

ಅವಳು ಬಯ್ದರೆ ಹುಡುಗನಿಗೆ ನಗು. ಮಧ್ಯ ಕರ್ನಾಟಕದಲ್ಲಿ ಲಂಬಾಣಿ ಹೆಂಗಸರನ್ನು ಜನ ಹಗುರವಾಗಿ ಕಾಣುವುದು ಅಪರೂಪವಲ್ಲ. ನಾನು ವಿಶಾಲಾಕ್ಷಿ ಶೋಭಾ ವಿನಯ್‌ಗೆ ಬರೆದ ಪತ್ರ ಪೋಸ್ಟಿಗೆ ಹಾಕುವ ಹೊತ್ತಿಗೆ ಡಬ್ಬಿಯಿಂದ ಪೋಸ್ಟ್ ತೆಗೆಯಲಾಗಿತ್ತು. ಸ್ವಾಮಿಗಳು ಅದನ್ನು ಪೋಸ್ಟ್ ಮಾಸ್ಟರಿಗೆ ಹೇಳಿ ತೆಗೆಸಿ, ಯಾರದೋ ಕೈಲಿ ಹೊಸಪೇಟೆಗೆ ಅಂದೇ ಪೋಸ್ಟ್ ಮಾಡಲು ಸೂಚಿಸಿ, ಹರಿಹರ ಕವಿಯ ವಾಸಸ್ಥಾನದ ವಿಷಯ ಬರೆಯಲು ಬಣ್ಣ ತರಲು ಹೇಳಿದರು. ಸ್ನಾನ ಮುಗಿಸಿಕೊಂಡು ಮಠಕ್ಕೆ ಬಂದರೆ ಮುರಿಗೇಶ ನನ್ನ ಬಿಳಿ ಬೆಡ್ ಷೀಟ್ ತಲೆದಿಂಬು ಮಾಡಿಕೊಂಡು ಗೊರಕೆ ಹೊಡೆಯುತ್ತಿದ್ದ. ಅವನನ್ನು ಎಳಿಸಿದ ತಕ್ಷಣ ಸ್ನಾನಕ್ಕೆ ಓಡಿ ಹೋಗಿ, ಒಂದು ಮುಳುಗು ಹಾಕಿ ಹತ್ತು ನಿಮಿಷದಲ್ಲಿ ವಾಪಸಾಗಿ ಖಾರ ಕಡಮೆ ಹಾಕಿದ್ದ ಸಾರು, ಅನ್ನ, ಸ್ವಲ್ಪ ಕಿಲಿಬಿದ್ದ ಮೊಸರು ಬಡಿಸಿದ. ಅವನಿಗೆ ಸಪ್ಪೆ ಎನ್ನಿಸಿದ ಆ ಊಟ ನನಗೆ ತುಸು ಖಾರವಾಗಿತ್ತಾದರೂ ಊಟ ಚೆನ್ನಾಗಿತ್ತು. ಹೊಟ್ಟೆಯೂ ಹಸಿದಿತ್ತು ಎಂದು ಹೇಳಬೇಕಾಗಿಲ್ಲ.

ಮಲಗಿ ನಾಲ್ಕಕ್ಕೆ ಎದ್ದು ಹೊರಟೆ. ಅಂದು ಯಾವುದೋ ಹಬ್ಬವೆಂದು ಕಾಣುತ್ತದೆ-- ಪರಸ್ಪರ ಆಲಿಂಗನ ಮಾಡುತ್ತ ಶುಭಾಶಯ ಹೇಳುವ ಮುಸ್ಲಿಮರು ಸಾಕಷ್ಟು ಕಾಣಿಸಿದರು. ಚುರುಕುಗುಟ್ಟಿಸುತ್ತಿದ್ದ ಬಿಸಿಲಲ್ಲಿ ಉದ್ದಾನಿ ವೀರಭದ್ರ, ಅಕ್ಕ ತಂಗಿಯರ ಕಲ್ಲು ದಾಟಿ ಎಡಕ್ಕೆ ಹೋದರೆ ಅಲ್ಲಿ ಕರ್ನಾಟಕ ಪುರಾತತ್ವ ಇಲಾಖೆಯಿಂದ ಭೂಶೋಧ ಕಾರ್ಯ ತೀವ್ರವಾಗಿ ನಡೆದಿತ್ತು. ತಜ್ಞರ ಉಸ್ತುವಾರಿಯಲ್ಲಿ ನೆಲ ಅಗೆದು ಕೆಲಸಗಾರರು ವಾಸದ ಮನೆಗಳನ್ನು ಬಿಡಿಸಿದ್ದರು. ಬಹು ಸೂಕ್ಷ್ಮ ಎಚ್ಚರಿಕೆ ಕೆಲಸ ಅದು. ನನ್ನ "ಬಸವಣ್ಣನವರು" ಪುಸ್ತಕ ಓದಿದ್ದ ಆರಾಧ್ಯ, ಜಗಳೂರಿನ ಮಂಜುನಾಥ್ ಉತ್ಖನನದ ಉಸ್ತುವಾರಿ ನೋಡಿಕೊಳ್ಳುತ್ತಿದ್ದರು. ಅವರಿಗೆ ದಿನಕ್ಕೆ ಇಪ್ಪತ್ತು ರೂಪಾಯಿ ದಿನಗೂಲಿ. ಒಂದೆಡೆ ಮಣ್ಣು ಅಗೆದು ಅದನ್ನು ತುಂಬಿ ಹೊತ್ತು ಇನ್ನೊಂದೆಡೆ ಹಾಕುತ್ತಿದ್ದರು. ಅಗೆಯುವ ಜಾಗದಲ್ಲಿ ಒಬ್ಬರು, ಮಣ್ಣು ಸುರಿಯುವ ಜಾಗದಲ್ಲಿ ಇನ್ನೊಬ್ಬರು ತೆರೆದ ಕಣ್ಣಿಂದ ಎಲ್ಲವನ್ನೂ ಪರಿಶೀಲಿಸುತ್ತಿದ್ದರು. ಹಳೆಯ ಅವಶೇಷಗಳನ್ನು ಕೆದಕಿ ಕೆದಕಿ ಹುಡುಕಿ ತೆಗೆದಿಡುತ್ತಿದ್ದರು. ಹೆಂಗಸರೂ ಗಂಡಸರೂ ಸೇರಿ ಅರವತ್ತರಿಂದ ಎಂಬತ್ತು ಜನ ಕೆಲಸಗಾರರು ಅಲ್ಲಿದ್ದರು. ಕಮಲ ಮಹಲ್ ಸಮೀಪದ ಒಂದು ದೊಡ್ಡ ಪ್ರಾಕಾರದಲ್ಲಿ ಬಿಡಿಸಿದ್ದ ಮನೆಗಳನ್ನು ಅಧಿಕಾರಿಗಳವು (Nobles' Quarters) ಎಂದು ಗುರುತಿಸಲಾಗಿತ್ತು. ಒಂದು ಕಡೆ ಬಚ್ಚಲು ಮನೆ, ಅದಕ್ಕೆ ಜೋಡಿಸಿದ್ದ ಬಾಗಿಲ ಜಾಗ ಗುರುತಿಸಿದ್ದರು. ತೊಲೆ, ಕಂಬ ಇತ್ಯಾದಿ ಮರದ ವಸ್ತುಗಳೆಲ್ಲ ಸುಟ್ಟು ಕರಕಲಾಗಿದ್ದುವು. ನೆಲಕ್ಕೆ ಹಾಕಿದ ಗಾರೆಯನ್ನೂ ಗೋಡೆಗಳಿಗೆ ಸಿಕ್ಕಿಬಿದ್ದ ಗಾಜುಗಳನ್ನೂ ಗುರುತಿಸಲಾಗಿತ್ತು. ಅಲ್ಲಿ ಸಾಕಷ್ಟು ಕವಡೆ, ಬಳೆ, ನಾಣ್ಯ ದೊರಕಿದ್ದುವು. ಒಂದು ದೊಡ್ಡ ಹಜಾರ, ಅದಕ್ಕೆ ಹೊಂದಿಕೊಂಡ ಅಂಗಳಗಳು, ನಾವು ಕುಡಿಯಬಹುದಾದ ಸಿಹಿ ನಿರ್ಮಲ ನೀರಿದ್ದ ಕಲ್ಲು ಬಾವಿಯನ್ನು ನೆಲದಿಂದ ಬಿಡಿಸಿದ್ದರು. ಒಂದು ಮನೆಯ ಹಜಾರದಲ್ಲಿ ನರ್ತನದ ಭಿತ್ತಿ ಶಿಲ್ಪದ ಒಂದು ಶಿಲಾಪಟ್ಟಿಕೆಯಿತ್ತು. ಅಲ್ಲೇ ಯಾಳಿ ಇರುವ ಮೆಟ್ಟಿಲುಗಳು, ಬೀಸುವ ಕಲ್ಲು, ಸಣ್ಣ ನಡುವಿನ ಒರಳು ಕಲ್ಲುಗಳು ಸಿಕ್ಕಿದ್ದುವು. ಆಯಾ ಮನೆಗೆ ಚೌಕಗಳಲ್ಲಿ 1,2,3

ಹೀಗೆ ಸಂಖ್ಯೆ ಕೊಟ್ಟು ಗುರುತಿಸಲಾಗಿತ್ತು. ಆಯಾ ಚೌಕದಲ್ಲಿಟ್ಟ ಹೆಂಚಿನ ಚೂರು, ಬಳೆ ಇತ್ಯಾದಿ ಆಯಾ ಸಂಖ್ಯೆಯ ಮನೆಗೆ ಸೇರಿದುವು ಎಂಬುದನ್ನು ಗುರುತಿಸಲು ಅದು ಅನುಕೂಲವಾಗಿತ್ತು. ಆ ನಿವೇಶನದಲ್ಲಿ ಉದಾಸೀನ ಮಾಡಲು ಸಾಧ್ಯವಾಗದ ಅಪರೂಪದ ವಸ್ತು ಸಿಕ್ಕರೆ ತಕ್ಷಣ ಅದರ ಮೇಲೆ ಆ ಮನೆಯ ಸಂಖ್ಯೆಯನ್ನು ಬಣ್ಣದಲ್ಲಿ ಬರೆಯುತ್ತಾರೆ. ಭೂಶೋಧ ಮಾಡಿದ ಜಾಗವು ಮಳೆಯಿಂದ ಜರಗಿ ಹೋಗದಂತೆ ಹಿಂದಿನ ಕಾಲದ ಗಾರೆಯಂತಹ ವಸ್ತುವಿನಿಂದ ಗಟ್ಟಿಗೊಳಿಸುತ್ತಾರೆ.

ನನಗೆ ಅದು ವಿಶೇಷವಾದ ಅನುಭವವಾಗಿತ್ತು. ಭೂಶೋಧದ ಬಗ್ಗೆ ಓದಿದ್ದೆ. ಉಪನ್ಯಾಸ ಕೇಳಿದ್ದೆ. ಆದರೆ ಪ್ರತ್ಯಕ್ಷವಾಗಿ ಅದು ನಡೆದಿರುವುದನ್ನು ಕಂಡಿರಲಿಲ್ಲ. ಭೂಶೋಧ, ರಕ್ಷಣೆ, ಶೋಧನೆ (Excavation - Preservation - Exploration) ಇವು ಅಲ್ಲಿ ತೀವ್ರವಾಗಿ ಶಾಸ್ತ್ರೀಯವಾಗಿ ನಡೆದಿರುವುದರಿಂದ ಹಲವು ಬಹುಸಂಖ್ಯೆ ಅವಶೇಷಗಳಲ್ಲದೆ ಶಾಸನಗಳೂ ಶಿಲ್ಪಗಳೂ ವರ್ಣಚಿತ್ರಗಳೂ ಲಭ್ಯವಾಗಿವೆ. ಅಲ್ಲೇ ಸಮೀಪದ ಭೂಶೋಧದ ಅಧಿಕಾರಿಗಳಿಗಾಗಿ ಗುಡಾರಗಳನ್ನು (Tents) ಹಾಕಲಾಗಿತ್ತು. ಒಂದೊಂದು ಗುಡಾರದಲ್ಲೂ ಮೂರು ನಾಲ್ಕು ಮಂಚಗಳು. ಅಲ್ಲೇ ಕಟ್ಟಿದ್ದ ಹಗ್ಗಗಳಿಗೆ ಅಂಗಿಗಳನ್ನು ನೇತು ಹಾಕಬೇಕು. ಅಧಿಕಾರಿಗಳೂ ಸೇರಿದಂತೆ ಎಲ್ಲರೂ ಕೆಲಕಾಲ ಜೀವನ ಪ್ರವಾಹದಿಂದ ದೂರ ಬದುಕಬೇಕಾಗಿತ್ತು. ಎಲ್ಲರ ಮುಖಗಳೂ ಸೂರ್ಯನ ಬಿಸಿಲಿಂದ ಬಾಡಿ ಹೋಗಿದ್ದುವು. ಸಂಜೆ ಅಲ್ಲೇ ಅವರು ಚೆಂಡಾಟ ಆಡಿದರು, ಮನರಂಜನೆಗೆ. ಇನ್ನೊಬ್ಬ ಅಧಿಕಾರಿ ಬಾಲಸುಬ್ರಹ್ಮಣ್ಯಮ್‌ಗೆ ಅವರ ಜೊತೆ ಟೀ ಕುಡಿಯುತ್ತ ಬಹು ಹಿಂದೆಯೇ ಹರಿಹರನ ಮನೆ ಇದ್ದ ಜಾಗವನ್ನು ಗುರುತಿಸಿದ್ದ ವಿಷಯ ತಿಳಿಸಿದೆ. ಹರಿಹರನ "ಪಂಪಾಕ್ಷೇತ್ರದ ರಗಳೆ"ಯಲ್ಲಿ ಉಲ್ಲೇಖಗೊಂಡಿರುವ ಜಾಗಗಳನ್ನು ಗುರುತಿಸುವ ಅಗತ್ಯವಿದೆಯೆಂದೆ. ದಿನಗೂಲಿ ಮೇಲೆ ದೂರದಿಂದ ಬಂದು ಕೆಲಸ ಮಾಡುವ ಯುವಕರಲ್ಲಿ ಉತ್ಸಾಹವಿದೆ. ಆದರೆ ಖಾಯಂ ಕೆಲಸದ ಭರವಸೆ ಇಲ್ಲ. ಜಗಳೂರು ಮಂಜುನಾಥ್‌ಗೆ ಹದಿನಾಲ್ಕು ಎಕರೆ ಜಮೀನಿದ್ದರೂ ಇಬ್ಬರು ತಮ್ಮಂದಿರು ಇರುವುದರಿಂದ ಈ ಕೆಲಸ ಮಾಡಲೇಬೇಕು. ತಿಂಗಳಿನ 600/- ರೂಪಾಯಿ ದಿನಗೂಲಿಯಲ್ಲಿ 300/- ರೂಪಾಯಿ ಊಟಕ್ಕೆ ಖರ್ಚಾಗುತ್ತದೆ. ಊರಿಗೆ ಹೋಗಿ ಬಂದರೆ ನೂರರಿಂದ ನೂರೈವತ್ತು ರೂಪಾಯಿ ಬೇಕು. ಹಣ ಉಳಿಸುವುದು ಹೇಗೆ ? ಅಮೆರಿಕದವರು ಇಂಥ ಯೋಜನೆಗಳನ್ನು ಕೈಗೆತ್ತಿಕೊಂಡು ಮುಂದೆ ಅದರ ಫಲಿತಾಂಶಗಳನ್ನು ಪ್ರಕಟಿಸುತ್ತಾರೆ. ನಮ್ಮಲ್ಲಿ ಆ ಕೆಲಸ ನಡೆಯುವುದಿಲ್ಲ. ನಮ್ಮ ಶ್ರಮವೆಲ್ಲ ವ್ಯರ್ಥ ಎಂದು ಆ ಯುವಕರ ನೋವು.

ಅಲ್ಲೇ ಸಮೀಪ "ಪಟ್ಟಣದ ಎಲ್ಲಮ್ಮ" ದೇವತೆ ಒಂದು ಕಾಲನ್ನು ಕೆಳಗೆ ಇಳಿಬಿಟ್ಟು ಕೂತಿದ್ದಾಳೆ. ದೇಗುಲದ ಮೇಲ್ಛಾವಣಿ ತೀರ ಕೆಳಗಿದೆ. ಶುಕ್ರವಾರ ಅವಳ ದರ್ಶನಕ್ಕೆ ಹತ್ತಾರು ಬಂಡಿಗಳಲ್ಲಿ ನೂರಾರು ಜನ ಬರುತ್ತಾರೆ. ಜಾತ್ರೆಯಲ್ಲಿ ಅವಳಿಗೆ ಕೋಣದ ಬಲಿ ಇಲ್ಲ, ಕುರಿ ಬಲಿ. ಆಕೆ ಹಿಂದೆ ವಿಜಯನಗರದ ದೊರೆಗಳ ಮನೆದೇವತೆಯಾಗಿದ್ದಳೆಂಬ ಐತಿಹ್ಯವಿದೆ. ಮುಖಭಾಗವನ್ನು ಬಹು ಸುಂದರವಾಗಿ ಅಲಂಕರಿಸಿದ್ದರು. ಹೆಣ್ಣು

ದೇವತೆಯಾದರೂ ಮೀಸೆ ಪ್ರಧಾನವಾಗಿದ್ದುದರಲ್ಲಿ ವಿಶೇಷವೇನೂ ಇರಲಿಲ್ಲ. ಹಲವೆಡೆ ಅದನ್ನು ಕಾಣಬಹುದು*. ಮಂಜುನಾಥ್‌ಗೆ ಪೂಜಾರಿ ಪರಿಚಯವಿದ್ದುದರಿಂದ ನನಗೆ ಅರ್ಧ ತೆಂಗಿನಕಾಯಿ ಹೋಳು ಪ್ರಸಾದ ಲಭ್ಯವಾಯ್ತು. ಹಂಪಿ ಪರಿಸರದಲ್ಲಿ ಮತ್ತೆ ಮತ್ತೆ ಕಾಣಿಸುವ ದೈವಮೂರ್ತಿಗಳೆಂದರೆ ವೀರಭದ್ರ, ಭೈರವ, ಗಣಪತಿ ಮತ್ತು ಆಂಜನೇಯ ಎಂದು ತಿಳಿಯಿತು.

ಮಾರ್ನನಮಿ ದಿಬ್ಬದ ಮುಂದೆ ಕೇಂದ್ರ ಪುರಾತತ್ವ ಇಲಾಖೆಯವರು ನಡೆಸಿದ ಭೂಶೋಧದಲ್ಲಿ ಬಿಡಿಸಲಾದ ಒಂದು ಸಭಾಂಗಣವನ್ನೂ ಅತ್ಯಂತ ಆಕರ್ಷಕವಾದ ಕೊಳವನ್ನೂ ನೋಡಿದೆ. ಕೊಳವು ಹಿಂದಿನ ಕಾಲದಲ್ಲಿಯೇ ಔಪಯೋಗಿಕ ಮೌಲ್ಯಕ್ಕಿಂತ ಕಲಾತ್ಮಕ ಮೌಲ್ಯದ್ದಾಗಿರಬಹುದು ಎಂದು ಅಲ್ಲಿನವರು ತಿಳಿಸಿದರು. ಚಿಕ್ಕ ದೊಡ್ಡ ಮೆಟ್ಟಿಲುಗಳಿಗೆಲ್ಲ ಹಿಂದೆಯೇ ಸಂಖ್ಯೆಯನ್ನು ಅಕ್ಷರಗಳಲ್ಲಿ ನೀಡಲಾಗಿದೆ. ಆ ಕೊಳ ತನ್ನಷ್ಟಕ್ಕೆ ತಾನೇ ಒಂದು ಕಲಾಕೃತಿ. ನಾನು ಕಲಾಕೃತಿ ಬಗ್ಗೆ ಮಾತನಾಡುತ್ತಿದ್ದಾಗ ಅಲ್ಲಿದ್ದ ಕಾವಲುಗಾರ ಹಿಂದಿನ ದಿನ ಅಲ್ಲಿಗೆ ಹಾವೊಂದು ಬಂದ ವಿಷಯ ತಿಳಿಸಿದ. ಅವನಿಗೆ ಅದು ಮುಖ್ಯ ವಿಷಯ - ತೀರ ಮುಖ್ಯ ವಿಷಯ.

ಸಂಜೆ ನನ್ನನ್ನು ಇಲಾಖೆಯ ಕಾರಿನಲ್ಲಿ ಕಳಿಸುವುದಾಗಿ ಸೂಚಿಸಿದರು. ನಡೆದೇ ಹೊರಟೆ. ದಾರಿಯಲ್ಲಿ ಚೌಡಮ್ಮನ 'ಕೃಪೆ'ಗೆ ಪಾತ್ರಳಾದ ಹತ್ತು ವರ್ಷದ ಹುಡುಗಿ ತನ್ನ ತಾಯಿ ಜೊತೆ ಹೋಗುತ್ತಿದ್ದಳು. ಆ ಮುಗ್ಧ ಹುಡುಗಿಗೆ ಸುಕ್ಕು ಸುಕ್ಕು ಅಂಟುಗೂದಲ ಜಡೆ ಇದ್ದುದರಿಂದ ಅವಳು ಚೌಡಮ್ಮನ ಹುಡುಗಿಯೆಂದು ಜನ ಭಾವಿಸಿ ಅವಳಿಗಾಗಲೇ ಕುಂಕುಮ ಅರಿಶಿಣ ಬಳಿದಿದ್ದರು. ಸೀರೆ ಉಟ್ಟು ಜಾಕೀಟು ತೊಟ್ಟಿದ್ದಳು. "ಚೌಡಮ್ಮನೇ ಅವಳಿಗೆ ಜಡೆ ಬೀಳಿಸ್ಯಾಳೆ" ಎಂಬುದು ಆ ಹುಡುಗಿಯ ಅವ್ವನ ಅಭಿಪ್ರಾಯ. ಅವಳು ಯಾವಜ್ಜೀವವೂ ಬ್ರಹ್ಮಚಾರಿಣಿಯಾಗಿಯೇ ಇರಬೇಕು. ಅವಳ ಜೊತೆ ಇದ್ದ ಅವಳ ವಯಸ್ಸಿನ ಹುಡುಗ "ಯಾರಾದರೂ ಅವಳನ್ನು ಅರ್ಧಗಂಟೆ ನೋಡಿದರೆ ಕಣ್ಣೇ ಹೋಗ್ತಾವೆ" ಎಂದ. ಅವಳನ್ನು ಜನ ಕೆಡಿಸದಿರಲಿ ಎಂಬ ದೃಷ್ಟಿಯಿಂದ ಹುಟ್ಟಿಸಿರುವ ಭಯ ಅದು. ಆ ಹುಡುಗ ಹುಡುಗಿ ಹೊಲದಿಂದ ಬರುತ್ತ ಬಳ್ಳಿ ಹಿಡಿದು ಎಳೆಯುತ್ತ ಆಟ ಆಡುತ್ತ ಹೋಗುತ್ತಿದ್ದರು. ಆ ಹುಡುಗಿಯ ಅಂಟು ಜಡೆ ಸಮೇತ ಪೂರ್ತಿ ಕೂದಲು ತೆಗೆಸಿದರೆ ಹೊಸ ಸ್ವಾಭಾವಿಕ ಕೂದಲು ಬಂದು ಉಳಿದವರಂತೆ ಅವಳು ಗೃಹಿಣಿಯಾಗಿ ಬದುಕಬಹುದಿತ್ತು. ಆದರೆ ನಂಬಿಕೆಯ ಹಿಡಿತಕ್ಕೆ ಸಿಕ್ಕಮೇಲೆ ಯಾವ ಮನುಷ್ಯನೂ ನಿಸ್ಸಹಾಯಕನಾಗುತ್ತಾನೆ. ನನ್ನ ಕಣ್ಣಲ್ಲಿ ಸಣ್ಣಗೆ ಹನಿ ಕಾಣಿಸಿತು. ಆಕಸ್ಮಿಕವೆಂಬಂತೆ ಹಜಾರ ರಾಮನ ಗುಡಿ ಹತ್ತಿರ ಸಣ್ಣಗೆ ಮಳೆ ಹನಿಯಲು ಆರಂಭವಾಯ್ತು. ಹಂಪಿಯ ಶಿಲ್ಪಗಳ ವೇಷ, ಭೂಷಣ, ನರ್ತನಭಂಗಿ

---

* ಆದಿಶಕ್ತಿ" ಪರಿಕಲ್ಪನೆಯಲ್ಲಿ ಆಕೆ ತ್ರಿಮೂರ್ತಿಗಳಿಗಿಂತ ಹಿಂದಿನವಳು, ಅವಳೇ ಸೃಷ್ಟಿಕರ್ತೆ ಎಂಬುದು ಪ್ರಧಾನವಾದುದು. ಸೃಷ್ಟಿಗೆ ಗಂಡು ಹೆಣ್ಣು ಎರಡೂ ಮುಖ್ಯ : ಆ ಎರಡೂ ಗುಣಗಳು ಆದಿಶಕ್ತಿಯಲ್ಲಿವೆ. ಆಕೆ ಗಂಡೂ ಅಲ್ಲ ಹೆಣ್ಣೂ ಅಲ್ಲ, ಅಥವಾ ಎರಡೂ ಹೌದು. ಆ ಕಾರಣ ಬನಶಂಕರಿ, ಎಲ್ಲಮ್ಮ, ಕರಿಯಮ್ಮನಂತಹ ದೇವತೆಗಳ ವಿಗ್ರಹಗಳಲ್ಲಿ ಸ್ತನ, ಮೀಸೆ ಎರಡನ್ನೂ ಬಿಡಿಸಿರುತ್ತಾರೆ.

ಇತ್ಯಾದಿಗಳ ಸಾಮಾಜಿಕ ಅಧ್ಯಯನ ನಡೆಸಬೇಕೆಂದು ಯೋಚಿಸುತ್ತ ಬೇಗ ಬೇಗ ಕಾಲು ಹಾಕಿದೆ. ಅರೆಗತ್ತಲೆಯಲ್ಲಿ ಮಳೆ ಸ್ವಲ್ಪ ಜೋರಾಯ್ತು. ಕೆಲವೆಡೆ ಮೆತ್ತಗೆ ಓಡಿದೆ. ಮಿಂಚು ಗುಡುಗು ಬೇರೆ ಇತ್ತು. ಉದ್ದಾನಿ ವೀರಭದ್ರನ ಗುಡಿ ಹತ್ತಿರ ಯಾರೋ “ಸಾಹೇಬ್ರೇ, ಇರ್ರೀ, ಬಸ್ ಬರುತ್ತೆ ಹೋಗ್ರೀ, ಅದೋ ಬರ್‍ತಾ ಇದೆ. ಬನ್ರೀ ಬನ್ರೀ” ಎಂದು ಕರುಣೆಯಿಂದಲೇ ಕೂಗಿದ. ನಾನು ನಿರ್ದಯವಾಗಿ ಮಳೆಯಲ್ಲಿ ನೆನೆಯುತ್ತ ಹಂಪಿ ಕಡೆ ಮೆತ್ತಗೆ ಓಡಿದೆ.

ಹೇಮಕೂಟದ ಇಳಿಜಾರಿನಲ್ಲಿ ನಾನು ಹೋಗುತ್ತಿದ್ದರೆ ಎದುರಿಗೆ ಒಂದು ಬಸ್ಸು ಹುಸ್ಸೆಂದು ಹತ್ತುತ್ತಿತ್ತು. ಅದು ಮುಸ್ಲಿಂ ಪ್ರಯಾಣಿಕರಿಂದ ತುಂಬಿ ತುಳುಕಿತ್ತು. ಹಿಂದಿನಿಂದ ಎಂಟು ಹತ್ತು ಹುಡುಗ ಹುಡುಗಿಯರು ಬಸ್ ನಿಲ್ಲಿಸು ಎಂದು ಕೂಗುತ್ತ ಓಡಿ ಬರುತ್ತಿದ್ದರು. ಹಂಪಿಯ ತರಕಾರಿ ಅಂಗಡಿಗೆ ಹೋದರೆ ಅಲ್ಲೊಬ್ಬ ಭಾರಿ ಮಾತಿನ ಹೆಂಗಸು. ಇಪ್ಪತ್ತೈದು ಪೈಸೆಗೆ ಮೂರು ಸಿವುಡು ಮೆಂತ್ಯ ಸೊಪ್ಪು, ಹತ್ತು ಪೈಸೆಗೆ ಬೇರೆ ಸೊಪ್ಪು, ಮೂವತ್ತು ಪೈಸೆಗೆ ಒಂದು ನಿಂಬೆಹಣ್ಣು, ಹತ್ತು ಪೈಸೆಗೆ ಒಂದಷ್ಟು ಮೆಣಸಿನಕಾಯಿ ಕೊಂಡುಕೊಂಡು ಮಠಕ್ಕೆ ತಂದರೆ ಮುರುಗೇಶ್ ಮೆಂತ್ಯದ ಸಿವುಡನ್ನೇ ಬಿಡಿಸಿ ಬಿಡಿಸಿ ಚಪ್ಪರಿಸಿದ. ಅವನು ಮಾಡಿದ್ದ ಗುರೆಳ್ಳು ಪುಡಿಯನ್ನು ಗಿರಿಜವ್ವನಿಗೆ ಕೊಟ್ಟೆ. ಅವಳು ಅದನ್ನು ತನ್ನ ಮನೆಯವರ ಜೊತೆ ಹಂಚಿಕೊಂಡಳು. ಇಬ್ಬರಿಗೂ ಒಂದು ಪುಟ್ಟ ನಗು ಕತೆ ಹೇಳಿದೆ. ನನ್ನ ಊಟವೂ ಮುಗಿಯಿತು.

ಟಾರ್ಚ್ ಹಿಡಿದು ಸ್ವಾಮಿಗಳ ಆಶ್ರಮಕ್ಕೆ ರಾತ್ರಿ ಒಂಬತ್ತಕ್ಕೆ ಹೋದರೆ ಶಾಂತ, ಶಾಂತಳ ತಾಯಿ ಇಬ್ಬರೂ ತಮಗೆ ಕೊಟ್ಟಿದ್ದ ಬೋನಿನಂತಹ ಪುಟ್ಟ ಕೊಠಡಿಯ ಬಾಗಿಲು ತೆಗೆದುಕೊಂಡು ಮಲಗಿದ್ದರು. ದೀಪದ ಬೆಳಕಲ್ಲಿ ಸ್ವಾಮಿಗಳು ಯಾವುದೋ ಹೋಮಿಯೋಪತಿ ಪುಸ್ತಕ ಹಿಡಿದು ಓದುತ್ತಿದ್ದರು. ಬೆಂಗಳೂರಿಗೆ ನನ್ನ ಪತ್ರಗಳು ಹೋದ ವಿಷಯ ತಿಳಿಸಿದರು. ಅರವತ್ತು ಎಪ್ಪತ್ತು ವರ್ಷಗಳ ಹಿಂದಿನ ಹಂಪಿಯ ಕೆಲ ಸ್ವಾರಸ್ಯಕರ ವಿಷಯ ತಿಳಿಸಿದರು. ಆಗ ಮಂಟಪಗಳಿಗೆ ರಾತ್ರಿ ಹುಲಿ ಚಿರತೆಗಳು ನುಗ್ಗಿ ಗಲಾಟೆ ಮಾಡುತ್ತಿದ್ದುವು. ದೇವಾಲಯದ ಹೊರಗೆ ಇದ್ದುದೇ ಆಗ ನಾಲ್ಕಾರು ಮನೆಗಳು (ಅರ್ಚಕರವು, ಕೆಲಸಗಾರರವು). ಸಂಜೆ ಆಗುತ್ತಿದ್ದಂತೆ ಆ ಮನೆಗಳ ಎಲ್ಲರೂ ಮನೆ ಬಾಗಿಲು ಹಾಕಿಕೊಂಡು ದೇವಾಲಯದ ಗೋಪುರದ ಒಳಕ್ಕೆ ಸೇರಿ ಬಾಗಿಲು ಹಾಕಿಕೊಳ್ಳುತ್ತಿದ್ದರು. ಆಗ ಪೂರ್ತಿ ಜನವಿಹೀನ. ದೇವಾಲಯದ ಅರ್ಚಕರು ಜಂಗಮರಾಗಿದ್ದರು. ಆದರೆ ದೇವರಿಗೆ ಆಗಮೋಕ್ತ ಪೂಜೆ ಸಲ್ಲಬೇಕೆಂದು ಅವರನ್ನು ಬಿಡಿಸಿ ಬ್ರಾಹ್ಮಣ ಅರ್ಚಕರನ್ನು ನೇಮಿಸಿದರು. ಮುಂದೆ ಬ್ರಾಹ್ಮಣರು ಕಲಿಯುಗದಲ್ಲಿ ಹಂಪಿಯಲ್ಲಿ ಆಂಜನೇಯನ ಉದಯವಾಗುವುದೆಂದು ಹೇಳಿ ಲಕ್ಷಾಂತರ ರೂಪಾಯಿ ಸಂಗ್ರಹಿಸಿದ್ದರಿಂದ ಮುಂದೆ ಅವರಿಗೇ ಕೇಡುಂಟಾಯಿತು. ಜಾತ್ರೆ ಸಮಯದಲ್ಲಿ ಅಗ್ನಿಕುಂಡ ಸ್ಥಾಪಿಸಿ ಹೋಮ ಹವನಾದಿಗಳನ್ನು ನೆರವೇರಿಸಿ, ಮಕ್ಕಳಿಲ್ಲದವರಿಗೆ ಮಕ್ಕಳಾಗಲು ಜನ ಹರಕೆ ಹೊರುವಂತೆ ಮಾಡಿದರು. ತುಮಕೂರಿನ ಸಿದ್ಧಗಂಗಾ ಮಠದ ವಿದ್ಯಾರ್ಥಿಯಾಗಿದ್ದ

ಅವರು ಬಿ.ಎ. ಓದುತ್ತಿರುವಾಗಲೇ ಯೋಗಿಯಾಗುವ ಹಂಬಲ ಹಚ್ಚಿಕೊಂಡು ಉತ್ತರದಲ್ಲೆಲ್ಲ ಸಂಚರಿಸಿ, ಹಂಪಿಗೆ ತುಂಗಭದ್ರೆ ಈಜಿಕೊಂಡು ಬಂದು ಅಲ್ಲಿನ ಗುಡ್ಡಗಳಲ್ಲಿ ಹುಲ್ಲಿನ ರಸ ಕುಡಿದು ಎಷ್ಟೋ ದಿನ ಬದುಕಿದರು. ಅವರ ಕೈಲಿ ಹಣ ಇರಲಿಲ್ಲ. "ಇಲ್ಲಿ ಎಲ್ಲವೂ ಮೋಸ" ಎಂದು ಬರೆದು ದೇವಾಲಯದ ಮುಂದೆ ಕುಳಿತುಬಿಟ್ಟರು. ಜನ ಬಂದು ಗಲಾಟೆ ಮಾಡಿದರೂ ಜಗ್ಗಲಿಲ್ಲ. ವಕೀಲರು ಬಂದು ಹೆದರಿಸಿದರೂ ಜಗ್ಗಲಿಲ್ಲ. "ನೀವು ಲಿಂಗಾಯತರು. ಬ್ರಾಹ್ಮಣರ ಕೈಲಿ ಪ್ರಸಾದ ತೆಗೆದುಕೊಳ್ಳೋದಕ್ಕೆ ನಾಚಿಕೆ ಆಗಲ್ವ" ಎಂದು ಒಬ್ಬ ಲಿಂಗಾಯತ ಸ್ವಾಮಿಗಳಿಗೇ ಬಯ್ದರು. ಅವರ ಕಡೆಗೂ ಆಗ ಕೆಲ ಜನ ಬಂದು ಇಬ್ಭಾಗವಾದರು. ಹರಿಹರದ ಒಬ್ಬ ಬ್ರಾಹ್ಮಣ ಒಬ್ಬ ಬೋವಿ ಕೈಯಲ್ಲಿ ಒಂದು ಸಂಜೆ ಆಂಜನೇಯ ವಿಗ್ರಹ ಹೊರಿಸಿಕೊಂಡು ಬಂದ. ಹೊತ್ತು ತಂದವನಿಗೆ ನಾಲ್ಕು ರೂಪಾಯಿ ಕೊಟ್ಟ. ವಿಗ್ರಹ ಕಟೆದವನಿಗೆ 350 ರೂಪಾಯಿ ಕೊಡದೆ ಬಾಕಿ ಉಳಿಸಿಕೊಂಡ ವಿಷಯ ಒಂದು ಹೋಟಲಲ್ಲಿ ನಡೆದ ಗುಸು ಗುಸು ಮಾತಿನಿಂದ ಗೊತ್ತಾಯ್ತು. ಆ ವಿಗ್ರಹವನ್ನು ವಿರೂಪಾಕ್ಷನ ಗುಡಿಯ ಪಕ್ಕದಲ್ಲಿನ ಊಟದ ಎಲೆ ಹಾಕಿದ್ದ ಕಾಲುವೆಯಲ್ಲಿ ಮುಚ್ಚಿಟ್ಟಿದ್ದರು. ಅದನ್ನು ತಿಕ್ಕುತ್ತಿದ್ದವರನ್ನು ಒಬ್ಬ ರೈತ ನೋಡಿದ್ದ. ಅದನ್ನು ಯಜ್ಞಕುಂಡದ ಕೆಳಗೆ ಮಣ್ಣಲ್ಲಿ ಹುದುಗಿಸಿಟ್ಟು, ಮಧ್ಯರಾತ್ರಿ ಹೊತ್ತಿಗೆ "ಉದ್ಭವ ಉದ್ಭವ" ಎಂದು ಕೂಗಿ ಜಯಕಾರ ಹಾಕಿದಾಗ ಅಲ್ಲಿ ನೆರೆದಿದ್ದ ಕೆಲ ಜನ ನಕ್ಕುಬಿಟ್ಟರು. "ಯಜ್ಞ ಕುಂಡಕ್ಕೆ ನೀರು ಹಾಕಿ ಬೆಂಕಿ ಆರಿಸಲೇಕೆ ? ವಿಗ್ರಹ ಅದೇ ಬರಲಿ" ಎಂದು ಸವಾಲು ಹಾಕಿದಾಗ ಆ ಬ್ರಾಹ್ಮಣ ಓಡಿಹೋದ. ಕೆಳಗೆ ಹುದುಗಿಸಿಟ್ಟಿದ್ದ ಆಂಜನೇಯ ವಿಗ್ರಹ ಎಲ್ಲೋ ಇರಬೇಕು. ಇಂತಹ ಮೋಸಗಳು ನಡೆದಿವೆ ಎಂದು ಹೇಳುತ್ತ, ಲಿಂಗಾಯತ ಸ್ವಾಮಿಗಳ ಬಗ್ಗೆಯೂ ಅಷ್ಟೇ ಖಾರವಾಗಿ ಮಾತನಾಡಿದರು. ತಾವು ಸಿದ್ಧಗಂಗೆಯಲ್ಲಿದ್ದಾಗ ಹಿರಿಯ ಸ್ವಾಮಿಗಳು ಬರಲಿನಿಂದ ತಮ್ಮನ್ನೆಲ್ಲ ಹೊಡೆಯುತ್ತಿದ್ದರೂ ಅವರ ಬಗ್ಗೆ ಅಪಾರ ಗೌರವ ತಮಗಿದೆಯೆಂದರು. ಪಂಚಪೀಠದವರು ಸಮಾಜಕ್ಕೆ ಏನೂ ಮಾಡಿಲ್ಲ, ವಿರಕ್ತರೇ ಏನಾದರೂ ಸಮಾಜಕ್ಕೆ ಮಾಡಿದವರು ಎಂದು ಹೇಳಿ, ಗುರು ವಿರಕ್ತರ ಜಗಳವನ್ನು ತೀವ್ರವಾಗಿ ಖಂಡಿಸಿದರು. "ಲಿಂಗ ಕೊರಳಲ್ಲೇ, ಎದೆ ಮೇಲೇ, ಹೊಟ್ಟೆ ಮೇಲೇ, ಬಗಲಲ್ಲೇ? ಇಷ್ಟಲಿಂಗದ ಮೇಲೆ ಪೂಜೆ ಸಮಯದಲ್ಲಿ ಎರಡನೆಯ ಬೆರಳೇ, ಮೂರನೆಯ ಬೆರಳೇ? ಬೆರಳೇ ಇಲ್ಲದವ ಏನು ಮಾಡಬೇಕು? ಅವನು ಲಿಂಗಾಯತ ಅಲ್ಲವೇ?" ಇತ್ಯಾದಿ ಮಾತನ್ನು ಆವೇಶಪೂರ್ಣವಾಗಿ ಆಡಿದರು. ಜತ್ತಿಯವರು ಬಸವ ಕಲ್ಯಾಣಕ್ಕೆ ಪಾದಯಾತ್ರೆ ಮಾಡುತ್ತ ಹಂಪಿಗೆ ಬಂದಾಗ ತಾವು ಕೊಟ್ಟ ಐವತ್ತು ರೂಪಾಯಿಗೆ ರಸೀತಿ ಇನ್ನೂ ಇದೆ ಎಂದರು. ಮಾತು ಪರಿಣಾಮಕಾರಿ. ಆಲೋಚನೆ ಸಂಪೂರ್ಣ ತಾರ್ಕಿಕ. ಯಾರ ಬಗ್ಗೆಯೂ ಮುಲಾಜಿಲ್ಲ. ಅವರ ಆಶ್ರಮ ಯಾರ ಸಹಾಯ ಧನದಿಂದಲೂ ನಡೆಯುತ್ತಿಲ್ಲವೆಂಬುದೇ ಅವರಿಗಿರುವ ಧೈರ್ಯ. ಅವರು ಇರುವ ಆಶ್ರಮದ ಕಟ್ಟಡ ಹಿಂದಿನ ಯಾವುದೋ ಆಶ್ರಮವಿರಬೇಕು. ಆ ಕಲ್ಲು ಕಟ್ಟಡದ ಮುಂಭಾಗದ ಪ್ರವೇಶ ದ್ವಾರ ಹಾಗೇ ಉಳಿದಿದೆ. ಹಿಂದೆ ಅವರೇ ಹೊಸ ಕಟ್ಟಡ ಕಟ್ಟಿಸಿ ಕೆಳಗಡೆ ಯೋಗ ಸಾಧನೆಗೆ, ಮೇಲ್ಗಡೆ ಮಲಗಲು ಜಾಗ ಮಾಡಿಕೊಂಡಿದ್ದಾರೆ. ಪಕ್ಕದಲ್ಲಿ ಅಡುಗೆ ಮನೆ,

ಔಷಧಿ ಇಡಲು ಕೊಠಡಿ ಇಷ್ಟನ್ನೂ ಕಟ್ಟಿಸಿಕೊಂಡಿದ್ದಾರೆ. ರಾತ್ರಿ ಹೊತ್ತಾಗಿ, ನಿದ್ದೆಗಣ್ಣು ಎಳೆಯುತ್ತಿತ್ತು. ಸ್ವಾಮಿಗಳು ಹಂಪಿಗೆ ಬಂದ ಕೆಲವು ಕಾಲಾನಂತರ ಪಟ್ಟಬದ್ಧ ಹಿತಾಸಕ್ತರ ವಿರೋಧ ಲೆಕ್ಕಿಸದೆ ಖಾಲಿಯಿದ್ದ ಈಗಿನ ಜಾಗದಲ್ಲಿ ಸೇರಿಕೊಂಡ ಕತೆ ಹೇಳಿದರು*. ಒಂದು ಘಟ್ಟದಲ್ಲಿ "ಮುಟ್ಟಿದರೆ ಹೊಡೆದು ಹಾಕ್ತೀನಿ" ಎಂದೂ ಅವರು ಬೆದರಿಸಬೇಕಾಯಿತಂತೆ. ಮಠಕ್ಕೆ ರಾತ್ರಿ ತಡವಾಗಿ ಹೋಗಿ ಮಲಗಿದೆ.

## ಹಂಪಿ (ಈ)

ಬೆಳಗಿನ ಜಾವ (22.6.85) ಗೊರವಂಕ ಮತ್ತೆ ಮತ್ತೆ ಕುಲುಕಿತು. ಕೋಗಿಲೆ ಬಹಳ ಗಟ್ಟಿಯಾಗಿ ನನ್ನ ಕಿವಿ ಪಕ್ಕದಲ್ಲೇ ಕುಳಿತಂತೆ ಹಾಡಿತು. ಗುಬ್ಬಚ್ಚಿಗಳ ಮೆಲು ಚಿಲಿಪಿಲಿ ಕೇಳಿಸಿತು. ಇದು ಹಕ್ಕಿ ಉಲಿಗಳ ಅನುಕ್ರಮವಾಗಿತ್ತು. ಕಣ್ತೆರೆದರೆ ಎದುರಿಗೇ, ನದಿಯಾಚೆ ಬಂಡೆ ಗುಡ್ಡಗಳು. ಮುಸುಕು ಹಾಕಿಕೊಂಡು ಮಲಗಿದ್ದ ಮುರುಗೇಶನನ್ನು ಏಳಿಸಿದರೆ ಹಾಗೇ ಎದ್ದು ಮತ್ತೆ ಮುಸುಕು ಹಾಕಿದ. ಅವನೇ ಟೀ ಮಾಡಿದ. ವಡ್ಡರವನಿಂದ ಜಾಯಿಕಾಯಿ ಹಳೆಯ ಪೆಟ್ಟಿಗೆಯೊಂದನ್ನು ಅಡಿಗೆ ಒಲೆಗೆ ತುಂಡು ಮಾಡಿಸಿದ. ನದಿ ಪಕ್ಕದಲ್ಲೇ ಇದ್ದರೂ ಒಬ್ಬ ವಡ್ಡರ ಹುಡುಗ ಎಂದೂ ಸ್ನಾನ ಮಾಡದವನಂತೆ ಇದ್ದ. ಇನ್ನೊಬ್ಬನ ಮೈ ಮೇಲೆ ಹರಿದ ಅಂಗಿ, ಸೊಂಟದಿಂದ ಕೆಳಗೆ ಬಟ್ಟೆ ಇಲ್ಲ. ಇಬ್ಬರೂ ಒಂದೊಂದು ಪುಟ್ಟ ಕಬ್ಬಿನ ತುಂಡು ಹಿಡಿದು ಸಿಗಿಯುತ್ತಿದ್ದರೆ ಅವರ ಜೊತೆ ನೊಣಗಳೂ ಕಬ್ಬಿನ ಹಾಲು ಸವಿಯುತ್ತಿದ್ದುವು, ಕಬ್ಬಿನ ಮೇಲಿನ, ಅವರ ಕೈ ಬಾಯಿ ಮೇಲಿನ ಹಾಲನ್ನು. ಪೆಟ್ಟಿಗೆ ಸಿಗಿದದ್ದಕ್ಕೆ ನಾಲ್ಕಾಣೆ ಕೊಟ್ಟೆ. ಕತ್ತೆಗಳು ಚಿಂದಿ ಬಟ್ಟೆಯ ಜೀನು ಹೊತ್ತು ವಡ್ಡರ ಜೊತೆ ನದಿಯಾಚೆ ಹೋಗಿ ಬೆನ್ನ ಮೇಲೆ ಅತ್ತ ಇತ್ತ ಸಣ್ಣ ಸೌದೆ ಕಟ್ಟುಗಳನ್ನು ಹೊತ್ತು ತರಲು ಸಿದ್ಧವಾಗಿದ್ದುವು. ವಡ್ಡರ ಮುದುಕ ಹೆಂಗಸು ತನಗಿನ್ನೂ ಮಠದಿಂದ ಸ್ವಲ್ಪ ಬಾಕಿ ಬರಬೇಕೆಂದು ಗೊಣಗಿದ್ದಳು.

ಮುರುಗೇಶ ನಾನು 'ವೆಂಕಟೇಶ್ವರ ಭವನ'ಕ್ಕೆ ಇಡ್ಲಿ ವಡೆ ತಿನ್ನಲು ಹೋದರೆ ಅಲ್ಲಿ ತೆಲುಗಲ್ಲಿ ಶ್ರೀನಿವಾಸ ದೇವರ ಸ್ತೋತ್ರ ಕೇಳಿಸುತ್ತಿತ್ತು. ಮುರುಗೇಶ ಒಂದು ಪ್ಲೇಟ್ ಮಿರ್ಚಿ ಹೆಚ್ಚಾಗಿ ತಿಂದ. ಅವನು ಅಡುಗೆಗೆ ಎಣ್ಣೆ ಕೊಳ್ಳಲು ಎರಡು ರೂಪಾಯಿ ಕೊಟ್ಟೆ. ದೇವಾಲಯದ ರಾಯರ ಗೋಪುರದ ಮುಂದೆ "ಶಕ 1420" ಎಂದು ಬರೆದಿತ್ತು. ಶಕ ವರ್ಷ ಯಾರಿಗೆ ಅರ್ಥವಾಗಬೇಕು? 78 ಅದಕ್ಕೆ ಸೇರಿಸಿದರೆ ಕ್ರಿಸ್ತಶಕ ಆಗುತ್ತದೆ ಎಂದು ಯಾರಿಗೂ ಗೊತ್ತಿಲ್ಲ. ಬಹು ಹಿಂದೊಮ್ಮೆ ನಾನು ಬಂದಾಗ ವಿರೂಪಾಕ್ಷ ಸ್ವಾಮಿಯ ಗರ್ಭಗುಡಿಯ ಮೇಲ್ಭಾಗದಲ್ಲಿ ಹರಿಹರನ ಶತಕದ ಸ್ತೋತ್ರವನ್ನು ಬರೆಸಿದ್ದರು. ಅದನ್ನು ಅಳಿಸಿದ್ದನ್ನು ಕಂಡು ನನಗೆ ಒಳಗೇ ಕೋಪಬಂದಿತು. ಬ್ರಾಹ್ಮಣ ಅರ್ಚಕರಿಗೆ ಬ್ರಾಹ್ಮಣೇತರ ಕವಿಯ ಬಗ್ಗೆ ತಿರಸ್ಕಾರ ಏಕೆ ಬಂತೋ? (ಕೋಪ ಬಂದಾಕ್ಷಣ ಮನಸ್ಸಿಗೆ ಎಚ್ಚರಿಕೆ ಹೇಳಿದೆ

---

* ಈ ಶತಮಾನದ ಆದಿಯ ಹಂಪಿಯ ಬಗ್ಗೆ ಹೇಳಿದ ವಿಷಯಗಳನ್ನು ಸ್ವಾಮಿಗಳು ಹೇಳಿದಂತೆಯೇ ದಾಖಲಿಸಿದ್ದೇನೆ. ಅವುಗಳ ಸತ್ಯಾಸತ್ಯತೆ ಪರಿಶೀಲನಾರ್ಹ.

- "ಕೋಪ ಇದ್ದರೂ ದ್ವೇಷ ಇರಕೂಡದು. ಸಿಟ್ಟು ಬಂದರೂ ಸೇಡನ್ನು ಉಳಿಸಿಕೊಳ್ಳಬೇಡ"), ಆ ವಿಷಯವನ್ನು ಪತ್ರಿಕೆಗಳಿಗೆ ಬರೆದು ಟೀಕಿಸಬೇಕು ಎಂದೂ ಆಲೋಚಿಸಿದೆ. ದೇವಸ್ಥಾನದವರು ಹರಿಹರನ ವಾಸಸ್ಥಾನದ ಜಾಗದಲ್ಲಿ ಬಿದ್ದು ಹೋಗುವಂತಹ ಬೋರ್ಡನ್ನು ಹಾಕಿಸಿರುವುದು ಕಾಟಾಚಾರಕ್ಕೆ ಎಂದು ಅನ್ನಿಸಿತು. ವಿರೂಪಾಕ್ಷನಿಗೆ ನನ್ನ ಭಕ್ತಿಯನ್ನು ಸಮರ್ಪಿಸಿ ಹೊರಗೆ ಬಂದರೆ, ಕೋತಿಯೊಂದು ಒಬ್ಬ ಅಜ್ಜಿಯ ಚೀಲಕ್ಕೆ ಒಡೆದ ತೆಂಗಿನಕಾಯಿಗಾಗಿ ಬಾಯಿ ಹಾಕುತ್ತಿದ್ದಂತೆ ಅಜ್ಜಿ ಚೀಲ ಎಳೆದುಕೊಂಡು ಕೋತಿ ಓಡಿಸಿದಳು. ಅಲ್ಲೇ ಇದ್ದ ಅಂಚೆ ಕಚೇರಿಯ ರೆಡ್ಡಿ ಕೊಡಿಸಿದ ಟೀ ಕುಡಿದು ಹೇಮಕೂಟವನ್ನು ಹತ್ತಿದೆ. ಜೇಬಲ್ಲಿ ಕಲ್ಲು ಸಕ್ಕರೆ ಚೂರುಗಳಿದ್ದುವು - ಬಾಯಾರಿಕೆಗೆ. ಬುಡದಲ್ಲಿ ವಿರೂಪಾಕ್ಷ ದೇವಾಲಯ, ಅದರ ಬದಿಗೆ ತುಂಗಭದ್ರೆ, ಅದರ ಅಂಚಿಗೆ ಬೆಟ್ಟ; ಇಡೀ ದೃಶ್ಯ ಮನಮೋಹಕ. "ಜೈನ ದೇವಾಲಯ"ಗಳನ್ನು ಎಚ್ಚರಿಕೆಯಿಂದ ಪರಿಶೀಲಿಸಿದಾಗ ಅವು ಹಿಂದೂ ದೇವಾಲಯಗಳೇ ಎಂಬುದು ಖಾತ್ರಿಯಾಯ್ತು. ಆ ದೇವಾಲಯಗಳಲ್ಲಿ ಗಣೇಶ, ನರಸಿಂಹ ವಿಗ್ರಹಗಳು ಉಂಟು. ಇಡೀ ವಾತಾವರಣ ಸಂಪೂರ್ಣ ನಿಶ್ಯಬ್ದವಾಗಿತ್ತು. ವಿರೂಪಾಕ್ಷ ದೇವಾಲಯದ ಪೂಜೆಯ ಗಂಟೆಯ ಧ್ವನಿ ಕೇಳಿಸಿತು. ಅಲ್ಲೇ ಒಂದು ದೇವಾಲಯದ ಒಳ ಜಗಲಿ ಮೇಲೆ ಕುಳಿತು ಕಣ್ಮುಚ್ಚಿದೆ. ಒಂದು ಇಡೀ ರಾತ್ರಿ ಅಲ್ಲಿ ಮಲಗುವ ಆಸೆಯಾಯ್ತು. ಮನಸ್ಸು ತೀರ ಪ್ರಸನ್ನವಾಗಿತ್ತು. ಹೀಗೆ ಹೇಳಿಕೊಂಡೆ - "ಕನ್ನಡದ ಏಳಿಗೆಗೆ ನಿನ್ನ ಮನಸ್ಸೇ ಮಾರ್ಗ. ಮೊದಲು ದೃಢ ಮನಸ್ಸು ಮಾಡು. ತನಗೆ ತಾನೇ ಮುಂದಿನ ದಾರಿ ಕಾಣಿಸುತ್ತದೆ". ಮುಂದೆ ನುಗ್ಗಬೇಕು, ನಾಡಿನ ತುಂಬ ಸಂಚರಿಸಬೇಕು, ಜನರನ್ನು ಸಂಘಟಿಸಬೇಕು, ಆ ಮೂಲಕ ಅವರನ್ನು "ಹೊಡೆ"ದೆಬ್ಬಿಸಬೇಕು. "ಉತ್ತಿಷ್ಠತ, ಜಾಗ್ರತ, ಪ್ರಾಪ್ಯವರಾನ್ನಿಬೋಧತ"- (ಏಳು, ಎಚ್ಚರಗೊಳ್ಳು, ಗುರಿ ಮುಟ್ಟುವವರೆಗೂ ನಿಲ್ಲದಿರು). ಮಡದಿ ಮಕ್ಕಳಿಗೆ ಒಂದು ಆಸರೆ, ಸೂರು ಅಗತ್ಯ. ಅದರ ಕಡೆ ಮೊದಲು ಗಮನಕೊಡಬೇಕು. ಅವರು ನೆಮ್ಮದಿಯಾಗಿದ್ದರೆ ನನ್ನ ಕೆಲಸ ಹಗುರ. ನನ್ನ ಸುಖ ಮಾತ್ರ ಕನ್ನಡದ ಕೆಲಸದಲ್ಲಿದೆ. ಮಂಗಳ ವಾದ್ಯಗಳು ಮತ್ತೆ ಕೇಳಿಸಿದುವು. ದೇವಾಲಯದ ಆನೆಯ ಕೊರಳ ಗಂಟೆ ನಿಧಾನವಾಗಿ ತೇಲಿ ಬಂತು. ಹಕ್ಕಿಗಳ ಚಿಲಿಪಿಲಿ, ತಂಗಾಳಿ ಇವೆಲ್ಲ ಇರುವ ಹೇಮಕೂಟ ನನಗೆ ಸ್ವರ್ಗವಾಗಿ ಕಾಣಿಸಿತು. ಆ ಸ್ವರ್ಗದಲ್ಲಿ ಕುಳಿತು ನನ್ನನ್ನೇ ಕೆಲವು ಕಾಲ ಮರೆತು ಇಡೀ ದೃಶ್ಯದಲ್ಲಿ ತಲ್ಲೀನನಾದೆ.

ನಾನು ಕೂತಿದ್ದು ಹೇಮಕೂಟಾಚಲದ ಮೇಲೆ. ಹರಿಹರನ ಗಿರಿಜಾ ಕಲ್ಯಾಣದ ಪ್ರಕಾರ, ಶಿವ ತಪಸ್ಸಿಗೆ ಕೂತದ್ದು ಹೇಮಕೂಟಾಚಲದ ಮೇಲೆ. ಅವನು ತನ್ನ ತಪಸ್ಸು ಕೆಡಿಸಲು ಮತಂಗ ಪರ್ವತದಿಂದ ಬಾಣಬಿಟ್ಟ ಮನ್ಮಥನ ಮೇಲೆ ಮೂರನೆಯ ಕಣ್ಣನ್ನು ತೆರೆದು ಸುಟ್ಟದ್ದು ಇಲ್ಲಿಂದಲೇ. ಆ ಕಣ್ಣ ಬೆಂಕಿ ಹಾದು ಹೋದಾಗ ಬಂಡೆಯಲ್ಲಿ ಬಿದ್ದ ಕೊರಕಲನ್ನು ಜನ ತೋರಿಸುತ್ತಾರೆ. ಹೊಸಪೇಟೆಯ ಕೊಟ್ಟೂರೇಶ್ವರ ಮಠದ ಸ್ವಾಮಿಗಳನ್ನು "ಹೇಮಕೂಟ ಸಿಂಹಾಸನಾಧೀಶ್ವರ" ಎಂದು ಹಳೆಯ ದಾಖಲೆಗಳಲ್ಲಿ ಕರೆದಿರಲು ಕಾರಣವೇನು? ಹೇಮಕೂಟದ ಮೇಲೆ ಆ ಮಠದ ಮೂಲ ಮಠವಿತ್ತೇ, ತಿಳಿಯದು.

ಅಲ್ಲೇ ಎಲ್ಲೋ ಒಂದು ಕಡೆ "ಸರಳ ಶಿವಭಕ್ತರ ಸೀಮೆ" ಎಂಬ ಕಲ್ಬರಹವಿದೆಯೆಂದು ಯಾರೋ ಹೇಳಿದ್ದರು, ಹುಡುಕಬೇಕು. ಹೇಮಕೂಟದ ಮೇಲೆ "ಅಖಿಲ ಭಾರತ ದೇವಾಂಗ ಪೀಠ" ಉಂಟು. ಅದು ಬಹು ದೊಡ್ಡ ಕಟ್ಟಡ. ಅಲ್ಲಿನ ಯಜ್ಞಕುಂಡವನ್ನು ನೋಡಿದೆ. ಹೇಮಕೂಟದ ಮೇಲೆ ಬ್ರಾಹ್ಮಣ ವರ್ಗದವರೂ ಹಕ್ಕು ಸ್ಥಾಪನೆಗೆ ಯತ್ನ ನಡೆಸಿರುವುದು ಉಂಟು. ವಚನ ವ್ಯಾಖ್ಯಾನಕಾರ ಕಲ್ಲುಮಠದ ಪ್ರಭುದೇವನ "ಕಲ್ಲು ಮಠ" ಎಲ್ಲಿತ್ತು? ವಿಜಯನಗರದಲ್ಲಿದ್ದ ನೂರೊಂದು ವಿರಕ್ತರು ಇದ್ದ ತಾಣ ಅಥವಾ ತಾಣಗಳು ಎಲ್ಲಿವೆ ? - ಹೀಗೆ ಚಿಂತಿಸುತ್ತ, ಎಲ್ಲವನ್ನೂ ನೋಡುತ್ತ ತಿರುಗಾಡಿ ಬೆಟ್ಟದಿಂದ ಕೆಳಗಿಳಿದು ಬಂದು ಸ್ನಾನ ಮಾಡಿ, ಊಟ ಮುಗಿಸಿ ಮಧ್ಯಾಹ್ನದ ಮೇಲೆ ಸುಮಾರು ಮೂರರ ಹೊತ್ತಿಗೆ ಮತ್ತೆ ಅದೇ ಹೇಮಕೂಟದ ದೇವಾಲಯಗಳಿಗೆ ಹಿಂದಿರುಗಿದೆ. ಬೆಳಿಗ್ಗೆ ಕುಳಿತಿದ್ದಾಗ ಹದಿನೈದು ಇಪ್ಪತ್ತು ಪ್ರವಾಸಿಗಳು ಅವನ್ನು ನೋಡಲು ಬಂದಿದ್ದರು. ಕೆಲವು ಮುಸ್ಲಿಮ್ ಹುಡುಗರು ಬಂದಾಗ ಚಪ್ಪಲಿ ತೆಗೆದು ಒಳಗೆ ಹೋಗಲು ಹೇಳಿದ್ದೆ. "ಚಪ್ಪಲಿ ಬಿಡಬೇಕೆ" ಎಂದು ಅವರು ನನ್ನನ್ನು ಪ್ರಶ್ನಿಸಿ, ಚಪ್ಪಲಿ ಹೊರಗೇ ಬಿಟ್ಟು ಒಳಗೆ ಹೋಗಿ ನೋಡಿಕೊಂಡು ಬಂದಿದ್ದರು.

ಹೊರಗೆ ಬಿಸಿಲಿದ್ದರೂ ದೇವಾಲಯದ ಅಂಗಳ ತಣ್ಣಗಿತ್ತು. ಪ್ರವಾಸಿಗರೂ ಯಾರೂ ಇರಲಿಲ್ಲ. ಕೆಳಗೆ ದೇವಾಲಯದ ಕಡೆಯಿಂದ ಸಾಕಿದ ನವಿಲೊಂದು ಕೇಕೆ ಹಾಕಿತು. ನನಗೆ ನಾನೇ ಅವಲೋಕನ ಮಾಡಿಕೊಂಡೆ. ಅಲ್ಲಿನ ದಾಖಲಿತ ಚಿಂತನೆ ಹೀಗಿದೆ :

> ಈ ನಲವತ್ತೊಂದು ದಿನಗಳ (11.5.85 - 22.6.85) ಕಾಲ್ನಡಿಗೆ ಮಾಡಿದ್ದೇನೆ. ಅದರ ಫಲ ಶ್ರುತಿ ಏನು ? ನನಗೆ ತಿಳಿಯದು. ನಾನು ಹೆಚ್ಚು ಅಂತರ್ಮುಖಿಯಾಗಿದ್ದೇನೆಂಬುದು ಸ್ವಾಮಿಗಳ ಅನಿಸಿಕೆ ಇರಬಹುದು. ಈ ನಲವತ್ತೊಂದು ದಿನ ತೆರೆದ ಕಣ್ಣಿಂದ ಲೋಕವನ್ನು ನೋಡಿದ್ದೇನೆ. ಇನ್ನೂ ತೆರೆದ ಕಣ್ಣಿಂದ ನನ್ನ ಒಳಲೋಕವನ್ನು ನೋಡಿಕೊಂಡಿದ್ದೇನೆ. ಬೆಂಗಳೂರಿನಂತಹ ಕಡೆ ವ್ಯಕ್ತಿಗೆ ವಿಮರ್ಶಿಸಲು ಹೊರಗಿನ ಇಡೀ ಲೋಕ ಕಾಣಿಸುತ್ತದೆ, ತನ್ನನ್ನು ಮಾತ್ರ ಹೊರತುಪಡಿಸಿ. ಅದಕ್ಕಾಗಿಯೇ ನಾನು ಏಕಾಂಗಿಯಾಗಿ ನಡೆದು ಬಂದಿರುವುದು. ನನ್ನನ್ನು ನಾನು ಅಂತರ್ನಿರೀಕ್ಷೆ ಮಾಡಿಕೊಳ್ಳಲು ಸಮಯ, ಸನ್ನಿವೇಶಗಳನ್ನು ಸೃಷ್ಟಿಸಿಕೊಂಡಿದ್ದೇನೆ. ಮನಸ್ಸಿಗೆ ಮತ್ತೆ ಮತ್ತೆ ಹೇಳಿಕೊಂಡಿದ್ದೇನೆ, ಕೇಳಿಕೊಂಡಿದ್ದೇನೆ, ಸಂಪೂರ್ಣ ಪರಿಶುದ್ಧವಾಗಲು. ಕೆಟ್ಟ ಭಾವನೆಗಳಿದ್ದರೆ ಅವನ್ನು ಅತ್ತ ತಳ್ಳಿ ಮನಸ್ಸನ್ನು ನಿರ್ಮಲವಾಗಿರಿಸಿಕೊಂಡಿದ್ದೇನೆ. ಐವತ್ತನ್ನು ದಾಟಿರುವುದರಿಂದ ಲೈಂಗಿಕ ಭಾವನೆಗಳನ್ನು ಸಂಯಮದಿಂದಿಡಲು ಕಷ್ಟಪಡಬೇಕಾಗಿಲ್ಲ. ಒಂದೆರಡು ಬಾರಿ ಹೆಣ್ಣುಗಳನ್ನು ಕಂಡಾಗ ಎದ್ದ ನನ್ನ ಮನಸ್ಸಿನ ಲೈಂಗಿಕ ತೃಷೆಗಳನ್ನು ಆ ಕ್ಷಣವೇ ಪರಿಭಾವನೆಯ ಮೂಲಕ ರೂಪಾಂತರಗೊಳಿಸಿದ್ದೇನೆ. ಆ ತೃಷೆಗಳು ಭಗವದಭಿಮುಖವಾಗಲೆಂದು ಪ್ರಾರ್ಥಿಸಿದೆ. ಎಂದೂ ಕೋಪವನ್ನು ಪೂರ್ಣ ಬಿಡಬೇಕಾಗಿಲ್ಲ, ಏಕೆಂದರೆ ಕ್ರಿಯಾತ್ಮಕ ಮನುಷ್ಯನಿಗೆ ಅದರ ಅಗತ್ಯವಿದೆ. ಅದು ಕ್ರಿಯಾತ್ಮಕ ಮನುಷ್ಯನ ಅನಿವಾರ್ಯ ಗೆಳೆಯನೂ ಹೌದು. ಆದರೆ ಅದು ಅಗತ್ಯಕ್ಕಿಂತ ಹೆಚ್ಚು ಪ್ರಕಟವಾಗಕೂಡದು ಮತ್ತು ಅದು ಎಂದೂ ದ್ವೇಷವಾಗಿ ಪರಿವರ್ತಿತವಾಗಕೂಡದು. ದ್ವೇಷವನ್ನು ಸಂಪೂರ್ಣ ಹತ್ತಿಕ್ಕಿದ್ದೇನೆ. ಯಾರೇ ಆಗಲಿ, ಯಾವ ಜಾತಿಯವನೇ ಆಗಲಿ, ವರ್ಗದವನೇ ಆಗಲಿ ಎಲ್ಲರ ಬಗ್ಗೆ ಪ್ರೀತಿ ಬೆಳೆಸಿಕೊಳ್ಳಲು ಯತ್ನಿಸಿದ್ದೇನೆ. ಸಜ್ಜನಿಕೆ ಒಬ್ಬ ಚಪ್ಪಲಿ ಹೊಲೆಯುವವನಲ್ಲಿದ್ದರೆ ಅವನು ಧರಿಸುವ ಪಾದರಕ್ಷೆ ನನ್ನ ತಲೆಯ

ಮೇಲಿರಲಿ. ದೌಷ್ಟ್ಯ ಯಾವನಲ್ಲಿದೆ ಅವನು ಯಾರೇ ಆಗಿರಲಿ, ಅವನ ಬಗ್ಗೆ ಸಂಪೂರ್ಣ ಧಿಕ್ಕಾರವಿರಲಿ. ಈ ನಲವತ್ತೊಂದು ದಿನ ನಿಜವಾದ ಬದುಕಿನೊಡನೆ ಬೆರೆತು ಕಾಲವನ್ನು ಕಳೆದಿದ್ದೇನೆ. ಲೋಭ ಎಂದೂ ನನ್ನ ಬಳಿ ಸುಳಿಯಕೂಡದು. ಮೋಹ ಎಂದೂ ಕೂಡದು: ಕನ್ನಡದ ವಿಷಯದಲ್ಲಿ ಮಾತ್ರ ಅದಕ್ಕೆ ವಿನಾಯ್ತಿ. ಮದ ಮಾತ್ಸರ್ಯ ಹಿಂದೆಯೂ ಇರಲಿಲ್ಲ - ಮುಂದೆಯೂ ಇರವು. ನನ್ನ ಮಾತಿನ ಮೇಲೆ ಹತೋಟಿ ಸಾಧಿಸಬೇಕು. ಕನ್ನಡದ ದೃಷ್ಟಿಯಿಂದ ಎಲ್ಲ ಬಗೆಯ ಸಂಯಮ ಬಹು ಮುಖ್ಯವಾಗಿದೆ. ಕನ್ನಡದ ಸಮಸ್ಯೆಗಳನ್ನು ವಸ್ತುನಿಷ್ಠವಾಗಿ ವಿಶ್ಲೇಷಿಸಿ ಶಾಂತವಾಗಿ ಅವನ್ನು ಜನಕ್ಕೆ ವಿವರಿಸಬೇಕು. ಜನಕ್ಕೆ ಅವುಗಳ ಸ್ವರೂಪ ತಿಳಿಯಬೇಕು. ವಿಷಯ ತಿಳಿಯದೆ ಕೇವಲ ಭಾವಾವೇಶಕ್ಕೆ ಒಳಗಾಗುವುದರಿಂದ ಏನೂ ಪ್ರಯೋಜನವಾಗದು. ಅಗತ್ಯ ಬಿದ್ದಾಗ ಜನರನ್ನು ಭಾವಾವೇಶಪರರಾಗುವಂತೆಯೂ ಮಾಡಬೇಕು. ಆದರೆ ಅದು ದೌಷ್ಟ್ಯದ ಕಡೆ ಕೊಂಡೊಯ್ಯದಂತೆ ನಿಗಾ ವಹಿಸಬೇಕು. ಚಳವಳಿಯಲ್ಲಿ ಇವೆರಡೂ ಮುಖ್ಯ. ಆವೇಶ, ಸಂಯಮ ಇವೆರಡನ್ನೂ ಉಚಿತವಾಗಿ ಬಳಸಿಕೊಳ್ಳುವುದರಲ್ಲೇ ಯಾವುದೇ ಚಳವಳಿಯ ಯಶಸ್ಸು ಹುದುಗಿರುವುದು. ಇದನ್ನು ನಾನು ಸಾಧಿಸಬೇಕು.

ಮುಖ್ಯವಾಗಿ ನನ್ನ ಮಾತಿಗೆ ಬೆಲೆ ಬರುವಂತೆ ನಾನು ನಡೆದುಕೊಳ್ಳಬೇಕು. ನನ್ನನ್ನು ಜನ ಗಂಭೀರವಾಗಿ ಪರಿಭಾವಿಸಬೇಕು. ಅದಕ್ಕಾಗಿ ನಾನು ಸಾಧನೆ ಮಾಡಬೇಕು. ಅದಕ್ಕೆ ಬಹು ಮುಖ್ಯವಾದುದು ಆತ್ಮಸಂಯಮ ಮತ್ತು ನಿಸ್ವಾರ್ಥ ಬದುಕು. ಅಂತಹ ಬದುಕಿನಿಂದಲೇ ನನ್ನ ಕನ್ನಡ ಪ್ರೇಮ ಅರ್ಥಪೂರ್ಣವಾಗುವುದು. "ಮಾ ವಿದ್ವಿಷಾವಹೈ" ಎಂದೂ ದ್ವೇಷ ಕೂಡದು, ಯಾರ ಬಗ್ಗೆಯೂ, ಅನ್ಯಭಾಷಿಕರ ಬಗ್ಗೆಯೂ. ಕನ್ನಡಿಗರಲ್ಲಿ ಹಿಂಸೆ ದ್ವೇಷಗಳಿಂದ ಮುಕ್ತವಾದ 'ಮಿಲಿಟೆನ್ಸಿ' ಬೆಳೆಯಬೇಕು. ಸಪ್ಪೆ ಒಳ್ಳೆಯತನ ಹೋಗಬೇಕು. ಇಂತಹ ಒಳ್ಳೆಯತನ ಎಂಬುದು ನಿಷ್ಕ್ರಿಯತೆಗೆ ಕೊಡುವ ಒಂದು ಮಂಗಳಕರ ಹೆಸರು. ಕನ್ನಡತನದ ಬೇರುಗಳು ಭದ್ರವಾಗಬೇಕು. ಅದಕ್ಕಾಗಿ ಸಂಘಟನೆ, ಪ್ರಚಾರಗಳು ಅಗತ್ಯ.

ಹೊಯ್ಸಳರ ಕಾಲದಲ್ಲಿ 'ಗರುಡ'ರಿದ್ದರು. ಅದು ಒಂದು ಸಾಂಸ್ಕೃತಿಕ ಮಹತ್ವದ ಪರಿಕಲ್ಪನೆ. ಗರುಡ ನಿಷ್ಠೆ ಧೈರ್ಯಕ್ಕೆ ಸಂಕೇತ. ಗರುಡಪಕ್ಷಿ ಭಗವಂತನ ವಾಹನ, ನಿಷ್ಠಾವಂತ ಆತ್ಮರೂಪಿ ಹಕ್ಕಿ. ನಿಷ್ಠೆಯಷ್ಟೇ ಧೈರ್ಯಕ್ಕೂ ಅದು ಸಂಕೇತ. ಹೊಯ್ಸಳರ ಕಾಲದ ಗರುಡರು ರಾಜನಿಗಾಗಿ ಬದುಕಿದವರು. ಅವನಲ್ಲಿ ಅವಿಚ್ಛಿನ್ನ ನಿಷ್ಠೆ ಇಟ್ಟಿದ್ದರು. ತಮ್ಮ ಯಜಮಾನನಿಗಾಗಿ ಪ್ರಾಣವನ್ನು ಹುಲ್ಲಿಗಿಂತ ಕಡೆಯಾಗಿ ಭಾವಿಸಿದ್ದರು. ಕನ್ನಡದ ಬಗ್ಗೆ ನಿಷ್ಠೆ ಉಳ್ಳ ಯುವಕರನ್ನು ಸೇರಿಸಿ "ಕನ್ನಡ ಗರುಡ ಪಡೆ" ಕಟ್ಟಬಹುದು. ಹೆಸರು ಏನು ಬೇಕಾದರೂ ಇರಬಹುದು - "ಕನ್ನಡ ಗರುಡ ಸಂಘ", "ಕನ್ನಡ ಗರುಡ ಗುಂಪು", "ಕನ್ನಡ ಗರುಡ ಬಲ", "ಕನ್ನಡ ಗರುಡ ಸೇನೆ" - ಇಂತಹ ಹೆಸರಲ್ಲಿ ಸಂಘಟನೆಗಳು ಮೇಲೇಳಬೇಕು. ಬೆಂಗಳೂರಿನಲ್ಲಿ "ಕನ್ನಡ ಗರುಡ ಕೇಂದ್ರ"ವಿರಬೇಕು. ಇದು ಕೇಂದ್ರ, ಮೂಲ ಸಂಘಟನೆ; ಇದರ ಶಾಖೋಪಶಾಖೆಗಳು ಕರ್ನಾಟಕದ ಉದ್ದಗಲದಲ್ಲಿ ಸ್ಥಾಪನೆಗೊಳ್ಳಬೇಕು. "ಕನ್ನಡ ಗರುಡ ಕೇಂದ್ರ"ಕ್ಕೆ ಪ್ರತ್ಯೇಕ ಸರಳ, ವಿಶಿಷ್ಟ ಲಾಂಛನವಿರಬೇಕು. ಬೇರೆ ಹೆಸರಿನ ಸಂಘಟನೆಗಳ ಜೊತೆ ಅದು ಸಹಯೋಗವನ್ನು ಪಡೆದು ಪರಸ್ಪರ ಸಹಕರಿಸಿ ಕೆಲಸ ಮಾಡಬಹುದು.

ಆ "ಕನ್ನಡ ಗರುಡ ಕೇಂದ್ರ"ದ ಕಚೇರಿ ರಿಜಿಸ್ಟರ್ಡ್ ಆಗಿ ಬೆಂಗಳೂರಿನಿಂದ ಕೆಲಸ ಮಾಡಬೇಕು. ಆ ಕಚೇರಿ ಸಾಧ್ಯವಾದಷ್ಟು ಕೆಂಪೇಗೌಡ ವೃತ್ತಕ್ಕೆ ಸಮೀಪವಲ್ಲಿದ್ದರೆ ಒಳ್ಳೆಯದು. ಅದರ ಕಚೇರಿಗೆ ಬಾಡಿಗೆ ಕೊಡಲು, ಒಬ್ಬ ಅರೆಸಂಬಳದ ಕಾರಕೂನ ಮತ್ತು ಜವಾನ

ಇವರಿಗೆ ಸಂಬಳ ನೀಡಲು ಹಣ ಸಂಗ್ರಹವಾಗಬೇಕು. ಆ ಕಚೇರಿಯ ಕೆಲಸದ ಅವಧಿ ಸಂಜೆ 5.30 ರಿಂದ 8.30ರವರೆಗೆ

| | | |
|---|---|---|
| ಕಾರಕೂನ | : | ರೂ. 250/- |
| ಜವಾನ | : | ರೂ. 200/- |
| ಬಾಡಿಗೆ | : | ರೂ. 450/- |
| ಅಂಚೆ ವೆಚ್ಚ | : | ರೂ. 100/- |

ತಿಂಗಳ ಸರಾಸರಿ ಖರ್ಚು ರೂ 1000/-. ಆರಂಭದಲ್ಲಂತೂ ನಾವೇ (ನಾನೇ) ಕಾರಕೂನ, ಜವಾನ. ಸರ್ಪಭೂಷಣ ಮಠದಲ್ಲಿ ಅದರ ಕಚೇರಿಗೆ ಪ್ರತ್ಯೇಕ ಕೊಠಡಿ ಉಚಿತವಾಗಿ ದೊರಕೀತೇ? "ಕನ್ನಡ ಗರುಡ ಕೇಂದ್ರ"ದ ವಾರ್ಷಿಕ ಸದಸ್ಯತ್ವ ರೂ 5/-. ಕೆಲವು ಪುದುವಟ್ಟುಗಳನ್ನು ಸ್ಥಾಪಿಸಿ ಆ ನಿಧಿಯನ್ನು ಬ್ಯಾಂಕಿನಲ್ಲಿ ಶಾಶ್ವತ ಠೇವಣಿಯಾಗಿಟ್ಟು ಅವುಗಳ ಬಡ್ಡಿಯನ್ನು ಬಳಸಿಕೊಳ್ಳಬಹುದು. ಕರ್ನಾಟಕಾದ್ಯಂತ ಮೂವತ್ತು ನಲವತ್ತು ಕಾರ್ಯಕರ್ತರನ್ನೊಳಗೊಂಡ ಒಂದು ತಂಡವು ಜಾಥಾ ಹೋಗಿ "ಕನ್ನಡ ಗರುಡ ಕೇಂದ್ರ"ಕ್ಕೆ ಹಣ ಸಂಗ್ರಹಿಸಿ, ಕರಪತ್ರ ಭಾಷಣ ಮೂಲದ ಜನಜಾಗೃತಿ ಮಾಡಬೇಕು. ಜಿಲ್ಲಾ, ತಾಲೂಕು ಕೇಂದ್ರಗಳಲ್ಲಿ ಸಾರ್ವಜನಿಕ ಸಭೆಗಳು ನಡೆದು ಅಲ್ಲಿ ಜನರಿಗೆ ವಿಷಯ ತಿಳಿಸಿ ಹೇಳಬೇಕು. ವಿದ್ಯಾರ್ಥಿಗಳ, ಕಾರ್ಮಿಕರ ಸಂಘಟನೆಗಳಾಗಬೇಕು. "ಕನ್ನಡ ಗರುಡ ಕೇಂದ್ರ"ವು ಎಲ್ಲ ರಾಜಕೀಯ ಪಕ್ಷಗಳ ಜೊತೆ ಸೌಹಾರ್ದದ ಸಂಪರ್ಕವಿಟ್ಟುಕೊಳ್ಳುವುದೇ ಹೊರತು, ಅದೇ ಒಂದು ರಾಜಕೀಯ ಪಕ್ಷ ಅಲ್ಲ. ಅದೊಂದು ಪಕ್ಷಾತೀತ ಸಂಘಟನೆಯಾಗಿರುತ್ತದೆ. ಕನ್ನಡಿಗರಿಗೆ ಅನ್ಯಾಯಗಳಾದ ಕಡೆಗಳಲ್ಲೆಲ್ಲ ತೀವ್ರ ಪ್ರತಿಭಟನೆಗಳಾಗಬೇಕು.

ಈ ಸಂಘಟನೆಯಲ್ಲಿ ಕನ್ನಡ ದೇವಿಯೇ ಮೂಲ ಮೂರ್ತಿ, ಉತ್ಸವ ಮೂರ್ತಿ. ಇಲ್ಲಿ ವ್ಯಕ್ತಿ ಪೂಜೆಗೆ ಸ್ಥಾನವೇ ಇಲ್ಲ.

ವಿಶೇಷವಾಗಿ ಬೆಂಗಳೂರಿನಲ್ಲಿ "ಕನ್ನಡ ಗರುಡ ಕೇಂದ್ರ"ದ ಕಾರ್ಯಕ್ರಮಗಳು ಈ ಕೆಳಗಿನ ವಿಷಯಗಳಿಗೆ ಸಂಬಂಧಿಸಿದಂತೆ ರೂಪುಗೊಳ್ಳಬೇಕು.

1. ಕನ್ನಡಿಗರಿಗೆ ರಾಜ್ಯ, ಕೇಂದ್ರ, ಖಾಸಗಿ ಉದ್ಯಮಗಳಲ್ಲಿ ಉದ್ಯೋಗ ರಕ್ಷಣೆ.

2. ಕೊಳೆಗೇರಿಗಳ ಕನ್ನಡಿಗರಿಗೆ ಸೂಕ್ತ ವಸತಿ ಸೌಲಭ್ಯ ಕಲ್ಪಿಸುವುದು. ವಿಶೇಷವಾಗಿ ಉತ್ತರ ಕರ್ನಾಟಕದಿಂದ ಕೆಲಸ ಹುಡುಕಿಕೊಂಡು ಗೋವೆ, ಮಹಾರಾಷ್ಟ್ರ, ಆಂಧ್ರ ಕಡೆ ಹೋಗುವುದರ ಬದಲು ಬೆಂಗಳೂರಿನ ಕಡೆ ಬಂದು ಇಲ್ಲಿ ನೆಲಸುವಂತೆ ವ್ಯವಸ್ಥೆ ಮಾಡಬೇಕು.

3. ಎಲ್ಲ ಹಂತಗಳಲ್ಲಿ, ವಿಶೇಷವಾಗಿ ಕೆಳ ಹಂತದಲ್ಲಿ ಎಸ್.ಎಸ್.ಎಲ್.ಸಿ. ವರೆಗೆ ಎಲ್ಲ ಕಡೆಗೆ ಕನ್ನಡವು ಶಿಕ್ಷಣ ಮಾಧ್ಯಮವಾಗಿರಬೇಕು. ಎಲ್ಲೂ ಇಂಗ್ಲೀಷ್ ಶಾಲೆಗಳು ಇರಕೂಡದು (ಭಾಷೆಯಾಗಿ ಇಂಗ್ಲಿಷ್ ಕಲಿಕೆಗೆ ಅವಕಾಶವುಂಟು).

4. ಆಡಳಿತ ಭಾಷೆಯಾಗಿ ಕನ್ನಡವು ಹಳ್ಳಿಯಿಂದ ವಿಧಾನಸೌಧದವರೆಗೆ ಜಾರಿಯಾಗಬೇಕು.

"ಕನ್ನಡ ಗರುಡ ಕೇಂದ್ರ"ವು ಬೆಂಗಳೂರಿನ ಎಲ್ಲ ಕನ್ನಡ ಪರ ಸಂಘಟನೆಗಳ ಜೊತೆ ಹಾರ್ದಿಕ ಸಂಪರ್ಕವನ್ನು ಪಡೆಯುತ್ತದೆ. ಕನ್ನಡ ಪರವಾಗಿರುವ ಶಾಸಕರ ಸಭೆ ಕರೆಯಬೇಕು.

ಗರುಡ ಕೇಂದ್ರವು ಕರ್ನಾಟಕದ ಒಂದು ಕನ್ನಡಪರ ಪ್ರಾತಿನಿಧಿಕ ಸಂಘಟನೆಯಾಗಬೇಕಾದರೆ ಮೊದಲು ರಾಜ್ಯಮಟ್ಟದ ಸಮ್ಮೇಳನ ಬೆಂಗಳೂರಲ್ಲಿ ಆದಷ್ಟು ಬೇಗ ನಡೆಯಬೇಕು.

ಯಾವುದೇ ಕರ್ನಾಟಕ ಸರ್ಕಾರ ತಾನಾಗಿ ಕನ್ನಡಕ್ಕೆ ಏನೂ ಮಾಡುವುದಿಲ್ಲ. ಜನತೆ ಸರ್ಕಾರದ ಮೇಲೆ ಒತ್ತಡ ತರಬೇಕು, ಹಾಗೆ ಒತ್ತಡ ಬರುವಂತೆ ಮಾಡಲು ಗರುಡ ಕೇಂದ್ರ ನಿಮಿತ್ತವಾಗಬೇಕು. ನಾನು ಆತ್ಮ ಶಕ್ತಿಯನ್ನು ಬೆಳೆಸಿಕೊಳ್ಳಬೇಕು. ನನ್ನ ಒಳ, ಹೊರ ಚಿಂತನೆ ಮತ್ತು ಕ್ರಿಯೆಗಳಲ್ಲಿ ಪರಸ್ಪರ ವಿರೋಧವಿರಕೂಡದು ಮತ್ತು ಎಲ್ಲೂ ಮುಚ್ಚು ಮರೆ ಇಲ್ಲದ ನಡವಳಿಕೆ ನನ್ನದಾಗಬೇಕು. ಕನ್ನಡ ತಾಯಿ ನಮ್ಮೆಲ್ಲರ ಮೂಲಕ ಗುಡುಗಾಗಿ ಸಿಡಿಲಾಗಿ ಮೊಳಗಬೇಕು. ಶಕ್ತಿ ಸಂಪನ್ನೆಯಾದ ಆಕೆ ತನ್ನ ಮಕ್ಕಳನ್ನಲ್ಲದೆ ಇತರರ ಮಕ್ಕಳನ್ನೂ ಕಾಪಾಡಬಲ್ಲಳು.

ನಾಳೆ ಬೆಳಿಗ್ಗೆ ಸಂಪೂರ್ಣವಾಗಿ ಮೌನವನ್ನಾಚರಿಸುತ್ತೇನೆ. ಬೆರಳ ಬಲಿ ಸದ್ಯಕ್ಕೆ ಬೇಡ. ಜನತೆಯ ಗಮನವು ಕನ್ನಡದ ಕಡೆ ಹಾಯದಿದ್ದರೆ ಮುಂದೆ ನೋಡೋಣ. ನಾಳೆ ಬೆಳಿಗ್ಗೆ ಹತ್ತಕ್ಕೆ ಭುವನೇಶ್ವರಿ, ಪಂಪಾಂಬಿಕೆ, ವಿರೂಪಾಕ್ಷ ಸ್ವಾಮಿಗೆ ಪೂಜೆ ಸಲ್ಲಿಸುತ್ತೇನೆ. ಅದಕ್ಕೆ ಮುನ್ನ, ಪ್ರಾತಃಕಾಲದಲ್ಲಿಯೇ ಸಿದ್ಧಪಡಿಸಿದ ಸಂಕ್ಷಿಪ್ತ ಸಂಕಲ್ಪ ಪ್ರತಿಜ್ಞೆಯನ್ನು ಪೂಜೆಯ ಬಳಿಕ ಮಿತ್ರರ ಮುಂದೆ ಓದಿ ಸ್ವೀಕರಿಸುತ್ತೇನೆ. ಬೆಂಗಳೂರಿನ ಕೆಲವು ಮಿತ್ರರು ಬಂದರೆ ಸಂತೋಷ. ಅವರಿಗೆ ಪತ್ರಗಳು ಸಕಾಲಕ್ಕೆ ಮುಟ್ಟಿರಬಹುದು. ಹೊಸಪೇಟೆ, ಹಗರಿಬೊಮ್ಮನಹಳ್ಳಿ, ಹಂಪಿಯ ಕೆಲವು ಮಿತ್ರರಂತೂ ಇರುತ್ತಾರೆ.

"ನಿರ್ಭಯ, ನಿರ್ಭಯ, ನಿರ್ಭಯ". ಹೇಡಿತನಕ್ಕೆ ಆಸ್ಪದವೇ ಇಲ್ಲ. ಎಲೆ ಜೀವವೇ, ಸಂಪೂರ್ಣ ಆತ್ಮವಿಶ್ವಾಸದೊಡನೆ ಹಿಂದಿರುಗು.

ಇವು ಹೇಮಕೂಟದ ಮೇಲೆ ನನಗೇ ನಾನು ಅಂದುಕೊಂಡ ಚಿಂತನೆಗಳು, ಮಾಡಿಕೊಂಡ ಟಿಪ್ಪಣಿಗಳು. ಈ ಮಧ್ಯೆ ಅಲ್ಲಿಗೇ ಬಸವರಾಜ ಮಲಶೆಟ್ಟಿ, ಹೊಸಪೇಟೆಯ ವಕೀಲ ಬಸವರಾಜಪ್ಪನವರ ಜೊತೆ ಬಂದು ಸೌಜನ್ಯದ ಮಾತನಾಡಿಕೊಂಡು ತೆರಳಿದರು.

ಹೇಮಕೂಟದ ಮೇಲಿರುವಾಗ ಎದುರಿಗೆ ತುಂಗಭದ್ರಾ ನದಿಯ ಮೇಲೆ ಜಡೆ ಇಳಿದಂತೆ ಮಳೆ ಆರಂಭವಾಯಿತು. ಎದುರಿನ ಬೆಟ್ಟದ ಶ್ರೇಣಿಗಳು ಮೋಡಗಳಿಂದ ಒಂದೊಂದೇ ಕ್ರಮೇಣ ಮರೆಯಾಗುತ್ತಿದ್ದುದು ಒಂದು ಅವರ್ಣನೀಯ ಸುಂದರ ದೃಶ್ಯವಾಗಿತ್ತು. ನಾನು ಕುಳಿತಿದ್ದ ದೇವಾಲಯದ ಮುಂಭಾಗದ ಎರಡು ಕಟ್ಟೆಗಳೂ ತೊಯ್ದುದರಿಂದ ನಾನು ನೆಲದ ಮೇಲೆ ಕುಳಿತು ಟಿಪ್ಪಣಿ ಬರೆಯಬೇಕಾಯ್ತು. ಸಂಜೆ ಐದರ ಹೊತ್ತಿಗೆ ಮಳೆ ನಿಂತಿತು. ಹೊರಗೆ ಕೋಟೆ, ಕೋಟೆ ಕಡೆಯ ಹಳೆ ಕಾಲುವೆ ನೋಡಿದೆ. ಮತ್ತೆ ನಾನು ಕುಳಿತಿದ್ದ ಜಾಗಕ್ಕೆ ಬಂದೆ. ಧೈರ್ಯವೊಂದೇ ಸರ್ವತ್ರ ಸಾಧನ ಎಂಬ ವಾಕ್ಯದೊಂದಿಗೆ ಮೇಲೆದ್ದೆ. ನೀರಿನಿಂದ ನೆನೆದಿದ್ದ ಬಂಡೆಗಳ ಮೇಲೆ ಹುಷಾರಾಗಿ ಕಾಲಿಡುತ್ತ ಒಮ್ಮೆ ಪೂರ್ತಿ ಹೇಮಕೂಟ ಸುತ್ತು ಹಾಕಿದೆ. ದೂರದಲ್ಲಿ ದೇವಾಲಯವೊಂದು ಎರಡು ಮರಗಳ ಜೊತೆ ಬೆಟ್ಟದ ತುದಿಯಲ್ಲಿರುವುದು ಕಾಣಿಸಿತು. ಹೇಮಕೂಟದ ಮೇಲೆ ಹತ್ತಾರು ದೇವಾಲಯಗಳು, ಬಂಡೆಗಳ ಮೇಲೆ ಕೆತ್ತಿದ ಲಿಂಗಗಳು ಹಲವಾರು ಇದ್ದುವು. ಮೂಲ ವಿರೂಪಾಕ್ಷನ ದೇವಾಲಯದ ಹತ್ತಿರವಿರುವ ದೋಣೆಗೆ ಸುಣ್ಣ ಬಳಿದಿದ್ದರು. ಹತ್ತಿರವೇ ಶಾಸನ, ಎದುರಿಗೆ ಮತಂಗ ಪರ್ವತ. ಬಂಡೆಯ ಮೇಲೆ ಒಂದು ಮುಸಿಯ ಕುಳಿತು ಎಲ್ಲವನ್ನೂ ವೀಕ್ಷಿಸುತ್ತಿತ್ತು.

ಅಲ್ಲಿನ ಮಹಡಿ ಮಂಟಪದ ಬಳಿ ಹೋದೆ. ಅಲ್ಲೇ ಬಂಡೆಮೇಲೆ ಚಕ್ರಾಕಾರದ ಒಂದು ಸುಂದರ ಕೆತ್ತನೆ. ಬಂಡೆಗಳ ಮೇಲೇರಿ ಬಂಡೆ ಒಡೆಯಲಿರಬೇಕು, ಸಣ್ಣ ಏಣಿ ತರಹ ಕೆತ್ತಿದ್ದರು. ಕೋಟೆ, ಮಂಟಪ, ದೇವಾಲಯ ಕಟ್ಟಲು ಅಲ್ಲಿನ ಅನೇಕ ಬಂಡೆಗಳನ್ನು ವಿಜಯನಗರ ಕಾಲದ ಕಲ್ಕುಟಿಗರು ಒಡೆದಾಗ ಎಷ್ಟೋ ಹಳೆಯ ಶಾಸನಗಳು ಹಾಳಾಗಿರಬಹುದು. ಶ್ರವಣಬೆಳ್ಗೊಳದಲ್ಲಿ ರನ್ನನ ಹಸ್ತಾಕ್ಷರ ಸಿಕ್ಕಂತೆ ಇಲ್ಲೂ ಹರಿಹರ ರಾಘವಾಂಕರ ಹಸ್ತಾಕ್ಷರ ಸಿಗಬಹುದೆಂಬ ಒಂದು ಚಿಕ್ಕ ನಿರೀಕ್ಷೆ ಮಿಂಚಿ ಮಾಯವಾಯಿತು. ಆ ದೃಷ್ಟಿಯಿಂದಲೇ ಸ್ವಲ್ಪ ಹೊತ್ತು ಹುಡುಕಾಡಿದೆ. ಅನೇಕ ಸಂಕ್ಷಿಪ್ತ ಶಾಸನಗಳೇನೋ ಇದ್ದುವು. ಅವೆಲ್ಲ ಈಚಿನವು. ಮೂಲ ವಿರೂಪಾಕ್ಷನ ಗುಡಿಯಲ್ಲಿ ಇಬ್ಬರು ಸನ್ಯಾಸಿಗಳು ಒಬ್ಬ ಭಕ್ತನೊಡನೆ ಕುಳಿತು ತಿಂಡಿ ತಿನ್ನುತ್ತಿದ್ದರು. ಕೆಳಗಿನಿಂದ ಧ್ವನಿವರ್ಧಕ ಹಾಡುಗಳು ಕೇಳಿ ಬಂದುವು. ನ್ಯಾಯವಾಗಿ ಹಂಪಿಯ ಆ ಪರಿಸರದಲ್ಲಿ ಬೆಳಿಗ್ಗೆ ಸಂಜೆ ಹರಿಹರನ ರಕ್ಷಾಶತಕ, ಪಂಪಾಶತಕಗಳ ಕ್ಯಾಸೆಟ್ಟುಗಳನ್ನು ಹಾಕಿ ಅವನ್ನು ಜನಕ್ಕೆ ಕೇಳಿಸಬೇಕು. ಅಂತೆಯೇ, ಚಂದ್ರಕವಿಯ "ವಿರೂಪಾಕ್ಷಾಸ್ಥಾನ ವರ್ಣನ" ಕೂಡ ಕ್ಯಾಸೆಟ್ ಆಗಬೇಕು. ಅವು ವೀರಶೈವರ ಕೃತಿಗಳೆಂಬುದು ಅದಕ್ಕೆ ಸ್ವಲ್ಪ ಅಡ್ಡಿಯಾಗಬಹುದೇನೋ ಎಂದು ಅನ್ನಿಸಿತು. ಕೊನೆಯ ಪಕ್ಷ ಅವು ಕೊಟ್ಟೂರೇಶ್ವರ ಮಠದಿಂದ ಪ್ರಸಾರವಾಗಲು ಅಡ್ಡಿಯಿಲ್ಲವಲ್ಲ ಎಂದು ಸಮಾಧಾನಪಟ್ಟುಕೊಂಡೆ.

ಎಷ್ಟೋ ಇಂತಹ ಕನಸುಗಳನ್ನು ಕಾಣುತ್ತ ನಿಧಾನಕ್ಕೆ ಕೆಳಗೆ ಇಳಿಯುತ್ತಿದ್ದಂತೆ ಕಾವಲುಗಾರ ನನ್ನನ್ನು ಹುಡುಕಿಕೊಂಡು ಬಂದಿದ್ದ. ಸಂಜೆ ನನ್ನನ್ನು ನೋಡಿದ್ದ ಆತ ಕತ್ತಲಾಗುವುದರೊಳಗೆ ಹೇಮಕೂಟದಿಂದ ಹೊರಗೆ ಕಳುಹಿಸಬೇಕಾಗಿತ್ತು. ನಾನು ಇಳಿದು ಬರುವಷ್ಟರಲ್ಲಿ ಸದಾಶಿವಯೋಗಿಗಳು ಬಣ್ಣದಲ್ಲಿ "ಹರಿಹರ ಕವಿಯ ವಾಸಸ್ಥಾನ" ಎಂದು ಮನ್ಮಥ ಕುಂಡ ಕೊಳದ ಕಟ್ಟೆಯ ಮೇಲೆ ಬರೆಸಿದ್ದರು. ಹೊಸಪೇಟೆಯಿಂದ ಬಂದಿದ್ದ ಇಟಗಿ ವೀರಣ್ಣ ಯಲಬುರ್ಗಿ ತಾಲ್ಲೂಕು ಕುದುರಿ ಮೋತಿ ಎಂಬ ಊರಿನ ಮಠದ ಸ್ವಾಮಿಗಳು ನಡೆಸಿದರೆನ್ನಲಾದ ಘೋರ ಅಕೃತ್ಯಗಳನ್ನು ವರ್ಣಿಸಿದಾಗ ನನಗೆ ನಂಬುವುದೇ ಕಷ್ಟವಾಯಿತು. ಆ ಲೈಂಗಿಕ ಅಕೃತ್ಯದಲ್ಲಿ ಬಲಿಪಶುವಾದ ಇಬ್ಬರು ಹೆಂಗಸರಲ್ಲಿ ಒಬ್ಬಳು ಮುಸ್ಲಿಮ್. ಅವನ್ನು ಹೇಳುತ್ತಿದ್ದಂತೆ ಆಶ್ರಮಕ್ಕೆ ಬಂದಿದ್ದ ಮಂಗಳೂರು ಪ್ರದೇಶದ ಮುಸ್ಲಿಮ್ ಮುದುಕ "ಇದು ಜಾತಿ ವಿಷಯ ಅಲ್ಲ"ವೆಂಬ ವಿವೇಕದ ಮಾತಾಡಿದ. ಆ ಬಗ್ಗೆ ಮುಂದೆ ಪ್ರಕಟವಾದ ನನ್ನ ಪತ್ರಕ್ಕೆ (ಕನ್ನಡಪ್ರಭ. 2.7.85) ಅನುಬಂಧ 2 ನೋಡಿ (ಪುಸ್ತಕದ ಕೊನೆಯಲ್ಲಿ).

ರಾತ್ರಿ ಊಟಮಾಡಿ ಸ್ವಾಮಿಗಳ ಆಶ್ರಮಕ್ಕೆ ಹೋದಾಗ ಅವರು, "ಸ್ವಾಮಿಗಳನ್ನು ಮಾಡಬಾರದು, ಸ್ವಾಮಿಗಳು ಆಗಬೇಕು", "ಸುಧಾರಕರು ಬೇಡ, ಸುಧಾರಿತರಾದವರು ಬೇಕು" ಎಂಬಂತಹ ವಿವೇಕದ ಮಾತುಗಳನ್ನು ಸ್ವಲ್ಪ ಆವೇಶದಿಂದ ಹೇಳಿದರು. ಸಮೀಪದ ಹಳ್ಳಿಯ ಜಂಗಮನೊಬ್ಬನಿಗೆ ಆಸೆ ತೋರಿಸಿ ಕ್ರಿಶ್ಚಿಯನ್ ಮತಕ್ಕೆ ಸೇರಿಸಿ ಪಾದ್ರಿ ಮಾಡಿಕೊಂಡರಂತೆ. ಆತ ಸ್ವತಃ ಸುಮಾರು ನೂರು ಜನರನ್ನು ಕ್ರಿಶ್ಚಿಯನ್ನರಾಗಿ

ಮತಾಂತರಗೊಳಿಸಿದ. ಅದಕ್ಕೆ ಅವನಿಗೆ ಸ್ಕೂಟರ್, ಟೆಲಿವಿಷನ್ ಕೊಟ್ಟರು. ಆ ಮಠದ ವೀರಭದ್ರಯ್ಯ ಎಂಬ ಹಿಂದಿನ ಹೆಸರಿನ ವ್ಯಕ್ತಿ "ನಾನು ಜಂಗಮ ಕ್ರಿಶ್ಚಿಯನ್" ಎಂದು ಜಂಬದಿಂದ ಹೇಳಿಕೊಂಡಾಗ. "ನೀನು ದ್ರೋಹಿ, ಇಲ್ಲಿ ಏನು ಕೆಟ್ಟಿದ್ದಿದೆ ಎಂದು ಬಿಟ್ಟೆ. ಅಲ್ಲಿ ಏನು ಒಳ್ಳೆದಿದೆ ಎಂದು ಹೋದೆ. ನೀನೊಬ್ಬ ಆಸೆಬುರ್ಕ. ಆದದ್ದಾಯ್ತು. ನೀನು ಕ್ರಿಶ್ಚಿಯನ್ನು ಎಂದು ಬೇಕಾದರೆ ಹೇಳಿಕೋ. ನಿನ್ನ ಅಯ್ಯತನ ಹೇಳಿಕೋಬೇಡ" ಎಂದು ಚೆನ್ನಾಗಿ ಬೈದುದನ್ನು ಹೇಳುತ್ತಿರುವಾಗ ಸ್ವಾಮಿಗಳ ನರಗಳು ಉಬ್ಬಿ ಮೈಯೆಲ್ಲ ನಡುಗುತ್ತಿತ್ತು. ದಟ್ಟ ಕತ್ತಲೆಯ ರಾತ್ರಿ ಹತ್ತರಲ್ಲಿ ಬತ್ತಿದ ನದಿಯ ನೀರು ಬಂಡೆಗಳ ಮಧ್ಯೆ ಜುಳು ಜುಳು ಹರಿಯುತ್ತಿದ್ದರೆ ಸ್ವಾಮಿಗಳ ಬಾಯಿಂದ ವಾಗ್ಗಂಗೆ ಭೋರ್ಗರೆಯುತ್ತ ನುಗ್ಗುತ್ತಿದ್ದಳು.

ಟಾರ್ಚ್ ಹಿಡಿದು ವಾಪಸ್ ಮಠಕ್ಕೆ ಬಂದರೂ ದಾರಿಯಲ್ಲಿ ಕೆಸರು ತುಳಿದೆ. ಸಂಗಯ್ಯರನ್ನು ಏಳಿಸಿ ಮಾರನೆಯ ದಿನದ ಪೂಜೆಗೆ ಇಪ್ಪತ್ತು ರೂಪಾಯಿ ಕೊಟ್ಟು ಎಲ್ಲ ವ್ಯವಸ್ಥೆ ಮಾಡಲು ಸೂಚಿಸಿದೆ. ಆಶ್ರಮದಲ್ಲಿರುವಾಗಲೇ ಅಂಗಿಯಲ್ಲೇ ಏನೋ ಹುಳ ಸೇರಿಕೊಂಡಿತ್ತು. ಅದನ್ನು ತೆಗೆಯಲಾಗದೆ ಹಾಗೆ ಮೇಲೆ ಕೈ ಹಾಕಿ ತಿಕ್ಕಿ ಕೊಂದಿದ್ದೆ. ಟಾರ್ಚ್ ಹಿಡಿದು ಬನಿಯನ್ ಬಿಚ್ಚಿ ನೋಡಿದರೆ ಅದು ಅಪ್ಪಚ್ಚಿಯಾಗಿದ್ದರೂ, ಬೆನ್ನಲ್ಲಿ ಅಲ್ಲಲ್ಲಿ ಚುಚ್ಚಿದಂತಾಗುತ್ತಿತ್ತು.

## ಹಂಪಿ (ಉ)

ಬೆಳಿಗ್ಗೆ (23.6.85) ಎದ್ದರೆ ಕುತ್ತಿಗೆ ಮೇಲೆ ಹಿಂದಿನ ದಿನದ ಹುಳದ ಕಡಿತದಿಂದ ಚಿಕ್ಕ ಚಿಕ್ಕ ಗುಳ್ಳೆ ಆಗಿದ್ದುವು. ಸ್ವಾಮಿಗಳಿಂದ ಚಹಾ ಬಂದಿತು. ಪ್ರಕೃತಿ ಅತ್ಯಂತ ಪ್ರಸನ್ನವಾಗಿತ್ತು. ಹಿಂದಿನ ದಿನದ ದಿನಚರಿ ಸ್ವಲ್ಪ ಬರೆದೆ. ಬರೆಯುವಾಗ ಅಮಂಗಳ ಎಂದು ಹೇಳಬಹುದಾದ ಒಂದೆರಡು ಸಣ್ಣ ಸಂಗತಿಗಳು ನಡೆದು ಮನಸ್ಸಿನಲ್ಲಿ ಸ್ವಲ್ಪ ಆತಂಕ ಮೂಡಿಸಿದರೂ ಆ ಭಯವನ್ನು ಸುಲಭವಾಗಿ ನಿವಾರಿಸಿಕೊಂಡೆ. ಮಠಕ್ಕೆ ಬಂದ ತಿಂಡಿಯನ್ನು ತಿಂದೆ. ದೇವಾಲಯದಲ್ಲಿ ಪೂಜೆಗೆ ಎಲ್ಲ ಏರ್ಪಾಟು ಮಾಡಿದ್ದರು. ಎಂಟೂ ಮೂವತ್ತಕ್ಕೆ ನದಿಗೆ ಹೋಗಿ ಸ್ನಾನಮಾಡಿ ಬಂದೆ. ಅಂದು ಬೆಳಗಿನಿಂದ ಸಂಕಲ್ಪ ಮುಗಿಯುವವರೆಗೆ ಮೌನವನ್ನಾಚರಿಸಲು ನಿರ್ಧರಿಸಿದ್ದೆ. ಹಂಪಿಯ ರಾಮಸಿಂಗ್ ಬಂದಾಗ, ಚೀಟಿಯಲ್ಲಿ ಬರೆದುದನ್ನು ತೋರಿಸಿದೆ. ಹತ್ತಕ್ಕೆ ವಿರೂಪಾಕ್ಷನ ಗುಡಿಗೆ ಬನ್ನಿ ಎಂದು ಅದರಲ್ಲಿ ಬರೆದಿದ್ದೆ. ಸಂಕಲ್ಪದ ಪಾಠ ಭಾಗವನ್ನು ಬರೆದಿಟ್ಟೆ. 9.45ಕ್ಕೆ ಹೊಸಪೇಟೆಯಿಂದ ಕೆಲವು ಪತ್ರಕರ್ತರು, ಗೆಳೆಯರು ಬಂದರು. ಹತ್ತಕ್ಕೆ ಸರಿಯಾಗಿ ಮನ್ಮಥ ಕುಂಡದ ಪಕ್ಕದಲ್ಲಿ ಹೋಗಿ, ಬಿಷ್ಟಪ್ಪಯ್ಯನ ಗೋಪುರದ ಮೂಲಕ ಹಾದು ಒಮ್ಮೆ ವಿರೂಪಾಕ್ಷನ ದೇವಾಲಯಕ್ಕೆ ಸುತ್ತು ಹಾಕಿ, ಮೊದಲು ಭುವನೇಶ್ವರಿ ಗುಡಿಗೆ ಹೋದೆ. ಪೂಜೆಯ ಬಳಿಕ ಭಕ್ತಿಯಿಂದ ದೇವಿಗೆ ನಮಸ್ಕರಿಸಿ, ಸಂಕಲ್ಪವನ್ನು ಓದಿ ಬ್ಲೇಡಿನಿಂದ ಎಡಗೈ ಬೆರಳಿನ ರಕ್ತ ತೆಗೆದು ಹಣೆಗೆ ಹಚ್ಚಿಕೊಂಡೆ. ಸಂಕಲ್ಪದ ಪಾಠವನ್ನು ಓದುವಾಗ ಸ್ವಲ್ಪ ಭಾವಾವೇಶ ಕಾಣಿಸಿಕೊಂಡು ತೊದಲಿದೆ. ನಾನು ಕೈಗೊಂಡ ಸಂಕಲ್ಪದ ಪಾಠಭಾಗ ಇದು.

ಕನ್ನಡಕ್ಕೆ ಜಯವಾಗಲಿ
ಸಿರಿಗನ್ನಡಂ ಗೆಲ್ಗೆ

★

23.6.1985

ಹಂಪಿಯ ಕನ್ನಡ ಭುವನೇಶ್ವರಿಯ ಮುಂದೆ ಸಂಕಲ್ಪ

★

11.5.1985 ರಂದು ತುಮಕೂರಿನ ಸಿದ್ಧಗಂಗೆಯಿಂದ ಆರಂಭವಾದ ನನ್ನ ಕಾಲ್ನಡಗೆ ರೂಪದ ಯಾತ್ರೆ ಈ ದಿನಕ್ಕೆ ಕೊನೆಗೊಂಡಿದೆ. ಈ ಅವಧಿಯಲ್ಲಿ ಉದ್ದಕ್ಕೂ ಕನ್ನಡದ ಒಬ್ಬ ದೀನ ಕಾರ್ಯಕರ್ತನಾಗುವ ಅರ್ಹತೆಯನ್ನು ಸಂಪಾದಿಸಲು ನನ್ನನ್ನು ನಾನು ಸಂಪೂರ್ಣವಾಗಿ ಪರೀಕ್ಷಿಸಿಕೊಂಡಿದ್ದೇನೆ. ಹಿಡಿದ ಕಾರ್ಯವನ್ನು ಕೊನೆ ಮುಟ್ಟಸಬಲ್ಲೆನೆಂಬ ದೃಢ ವಿಶ್ವಾಸ ನನಗೆ ಬಂದಿದೆ. ನನ್ನ ಕನ್ನಡ ಪ್ರೇಮದಲ್ಲಿ ಯಾವುದೇ ಸ್ವಾರ್ಥವೂ ಇಲ್ಲವೆಂಬುದನ್ನು ನಾನು ಖಚಿತಪಡಿಸಿಕೊಂಡಿದ್ದೇನೆ. ಕನ್ನಡದ ಪ್ರೇಮವು ಯಾವುದೇ ಅನ್ಯವಿಷಯಕ ದ್ವೇಷದಿಂದ ಹುಟ್ಟಿಲ್ಲವೆಂಬುದನ್ನೂ ಖಚಿತಪಡಿಸಿಕೊಂಡಿದ್ದೇನೆ. ಬುದ್ಧ, ಬಸವ, ಗಾಂಧೀಜಿಯವರು ಬದುಕಿ ಬೋಧಿಸಿದ ಮತ್ತು ಕನ್ನಡ ಸಂಸ್ಕೃತಿ ಎತ್ತಿ ಹಿಡಿದಿರುವ ಸತ್ಯ, ಅಹಿಂಸೆ, ತ್ಯಾಗ, ವಿನಯ, ಮಹೋದ್ದೇಶ, ನಿಸ್ವಾರ್ಥ, ಮೃದೂಕ್ತಿ, ಧೈರ್ಯ, ಅನ್ಯಾಯದ ವಿರುದ್ಧ ನಿಲ್ಲುವ ದಿಟ್ಟತನ ಇವೇ ಮೊದಲಾದ ಉನ್ನತ ಮೌಲ್ಯಗಳು ನನ್ನ ಅಂತರಂಗದ ಭಾಗವಾಗುವಂತೆ ಮತ್ತು ನನ್ನ ಬದುಕಿನಲ್ಲಿ ವ್ಯಕ್ತವಾಗುವಂತೆ ಉದ್ದಕ್ಕೂ ಹಾರೈಸಿಕೊಳ್ಳುತ್ತ ಬಂದಿದ್ದೇನೆ. ಅಗತ್ಯವಾಗಿ ನಡೆಯಲೇಬೇಕಾಗಿರುವ ಕನ್ನಡ ಚಳವಳಿಯ ಬುನಾದಿಯಾಗಿ ಮೇಲಿನ ಮೌಲ್ಯಗಳು ನಿಲ್ಲಬೇಕು ಎಂದು ಹಾರೈಸುತ್ತ ಬಂದಿದ್ದೇನೆ.

ಹಲವು ವರ್ಷಗಳ ಆಸೆ, ಕಳೆದ ಕೆಲವು ವರ್ಷಗಳಲ್ಲಿ ಕನ್ನಡದ ದುಸ್ಥಿತಿಯನ್ನು ಕಂಡು ಆದ ಮಾನಸಿಕ ಯಾತನೆ, ಈಚಿನ ಕೆಲವು ತಿಂಗಳುಗಳ ತೀವ್ರ ತುಡಿತ ಇವುಗಳ ಪರಿಣಾಮವೇ ಈ ದಿನದ ಸಂಕಲ್ಪ.

ಇಲ್ಲಿಯವರೆಗೆ ಕನ್ನಡಕ್ಕಾಗಿ ದುಡಿದು ಮಡಿದಿರುವ, ದುಡಿದು ಸಣ್ಣಗಾಗಿ ಹುಮ್ಮಸ್ಸಿನಿಂದ ದುಡಿಯುತ್ತಿರುವ ಮತ್ತು ದುಡಿಯಲು ಸಿದ್ಧರಾಗಿರುವ ಸಾವಿರಾರು ಕನ್ನಡ ಕಾರ್ಯಕರ್ತರನ್ನು ಸ್ಮರಿಸುತ್ತ, ಎರಡು ಸಾವಿರ ವರ್ಷಕ್ಕೂ ಮೇಲ್ಪಟ್ಟು ಬೆಳೆದಿರುವ ಕನ್ನಡ ಸಂಸ್ಕೃತಿಯನ್ನು ಕಟ್ಟಿ ಬೆಳೆಸಿರುವ ಕವಿಗಳನ್ನು ಸಂತರನ್ನು ರಾಜರ್ಷಿಗಳನ್ನು ವೀರರನ್ನು ವೀರರಮಣಿಯರನ್ನು ಕಲಾವಿದರನ್ನು ಸಾಮಾನ್ಯ ಕನ್ನಡ ಜನತೆಯನ್ನು ಕೃತಜ್ಞತೆಯಿಂದ ಸ್ಮರಿಸುತ್ತ ಕನ್ನಡ ತಾಯಿ ಭುವನೇಶ್ವರಿಗೆ ಭಕ್ತಿಯಿಂದ ವಂದಿಸುತ್ತ ಈ ಮುಂದಿನ ಸಂಕಲ್ಪವನ್ನು ತೊಡುತ್ತಿದ್ದೇನೆ.

- ★ ನನ್ನ ಬದುಕಿನ ಉಳಿದ ಆಯುಸ್ಸನ್ನು ಕನ್ನಡಕ್ಕಾಗಿ ಮೀಸಲಿಡಲು ದೃಢಸಂಕಲ್ಪವನ್ನು ಮಾಡುತ್ತಿದ್ದೇನೆ.
- ★ ಕನ್ನಡದ ಅಳಿವು ನನ್ನ ಅಳಿವು, ಕನ್ನಡದ ಉಳಿವು ನನ್ನ ಉಳಿವು.
- ★ ಇಂದಿನಿಂದ ಭಯವೆಂಬುದು ನನಗೆ ಇಲ್ಲ.
- ★ ಕನ್ನಡದ ಯಾವುದೇ ಕೆಲಸದಲ್ಲಿ ಪಾಲ್ಗೊಳ್ಳಲು ಯಾವುದೇ ಕನ್ನಡದ ಕಾರ್ಯಕರ್ತರ ಜೊತೆ ದುಡಿಯಲು ಸಿದ್ಧ.
- ★ ಕನ್ನಡದ ಹೆಸರಲ್ಲಿ ನನ್ನ ಬಳಿ ಬರುವ ಯಾವುದೇ ಹಣವೂ ಕನ್ನಡಕ್ಕಾಗಿ ಮೀಸಲು.
- ★ ಕನ್ನಡದ ಹೆಸರಲ್ಲಿ ನಾನು ಯಾವುದೇ ಸ್ಥಾನವನ್ನೂ ಬಯಸುವವನಲ್ಲ.
- ★ ನಾನೊಬ್ಬ ಕನ್ನಡದ "ಗರುಡ" - ಗರುಡರು ತಮ್ಮ ಸ್ವಾಮಿಗಾಗಿ ತಮ್ಮನ್ನು ತಾವು ಅರ್ಪಿಸಿಕೊಂಡಿದ್ದ ನಿಸ್ವಾರ್ಥ ವೀರರು.
- ★ ಕನ್ನಡ, ಕನ್ನಡದ ಜನತೆ ಬಲಿಷ್ಠವಾಗದೆ ಭಾರತ ಬಲಿಷ್ಠವಾಗದು. ಇದನ್ನು ಜನರಿಗೆ ಮತ್ತೆ ಮತ್ತೆ ಹೇಳಿ ಎಚ್ಚರವನ್ನು ಮೂಡಿಸುವುದು ನನ್ನ ಕರ್ತವ್ಯವಾಗಿದೆ.
- ★ ನನ್ನ ಅಂತರಂಗ ಬಹಿರಂಗಗಳೆರಡನ್ನೂ ಸ್ಪಷ್ಟವಾಗಿರಿಸಿಕೊಳ್ಳುತ್ತೇನೆ.
- ★ ನಿರಾಶೆ ಎಂಬುದು ನನ್ನತ್ತ ಸುಳಿಯದಿರಲಿ.
- ★ ಕನ್ನಡ ತಾಯಿ ನನ್ನಿಂದ ಹೆಚ್ಚಿನ ತ್ಯಾಗವನ್ನು ಬಯಸಿದರೆ ಅದಕ್ಕೂ ಸಿದ್ಧವಾಗಿದ್ದೇನೆ.

ಹಂಪೆ ಪವಿತ್ರಕ್ಷೇತ್ರ, ಕರ್ನಾಟಕ ಸಂಸ್ಕೃತಿಯನ್ನು ಭಾರತೀಯ ಸಂಸ್ಕೃತಿಯನ್ನು ಉಳಿಸಿದ ಪುಣ್ಯಭೂಮಿ. ಕವಿಗಳಾದ ಹರಿಹರ ರಾಘವಾಂಕರ, ಸಂತರಾದ ವಿದ್ಯಾರಣ್ಯರ ಕ್ರಿಯಾಶಕ್ತಿಗಳ ಪುರಂದರದಾಸರ, ರಾಜನೀತಿ ವಿಶಾರದರಾದ ಹಕ್ಕ, ಬುಕ್ಕ, ಕೃಷ್ಣದೇವರಾಯರ ಹೆಸರುಗಳನ್ನು ಸ್ಮರಿಸುತ್ತ ತುಂಗಭದ್ರೆಯ ತಡಿಯಲ್ಲಿ ಪಂಪಾವಿರೂಪಾಕ್ಷ ಪಂಪಾದೇವಿಯರ ಮತ್ತು ಇಲ್ಲಿ ನೆರೆದಿರುವ ಕನ್ನಡಾಭಿಮಾನಿಗಳ ಸಾಕ್ಷಿಯಲ್ಲಿ ತಾಯಿ ಭುವನೇಶ್ವರಿಯ ಮುಂದೆ ಮೇಲಿನ ಪ್ರತಿಜ್ಞೆಯನ್ನು ತೊಡುತ್ತಿದ್ದೇನೆ.

ನನ್ನ ಪ್ರತಿಜ್ಞೆ ವಿಫಲವಾಗದಂತೆ ತಾಯಿ ಹರಸಲಿ. ಕನ್ನಡದ ಜನ ಎಚ್ಚರಗೊಳ್ಳಲಿ ಕನ್ನಡ ಉಳಿಯಲಿ ಬೆಳೆಯಲಿ.

ಆ ಬಳಿಕ ಅಲ್ಲೇ ಪಕ್ಕದ ಪಂಪಾದೇವಿಗೆ, ಬಳಿಕ ವಿರೂಪಾಕ್ಷ ಸ್ವಾಮಿಗೆ ಪೂಜೆ ಸಲ್ಲಿಸಿ ಕುಂಕುಮವನ್ನು ಹಣೆಗೆ ಹಚ್ಚಿದೆ. ವಿರೂಪಾಕ್ಷಸ್ವಾಮಿಯ ಮುಂದೆ ಎಣ್ಣೆ ಜಿಡ್ಡಿನಿಂದ

ಸ್ವಲ್ಪ ಜಾರುತ್ತಿದ್ದ ಕಲ್ಲ ಹಾಸಿನ ಮೇಲೆ ಕುಳಿತೆ. ಎಡಗೈ ಬೆರಳಿಂದ ಒಂದೆರಡು ರಕ್ತದ ಹನಿಗಳು ಕೆಳಕ್ಕೆ ಜಿನುಗಿದುವು. ಅವನ್ನು ಹಣೆಗೆ ಹಚ್ಚಿದೆ. ಹೊಸಪೇಟೆಯಿಂದ ತಿರುಪಾಲಯ್ಯ ಚಂದ್ರಶೇಖರ್ ಬಂದರು. ಎಲ್ಲರೂ ಮಠಕ್ಕೆ ಹಿಂದಿರುಗಿದೆವು. ಅಲ್ಲಿ ಎಲ್ಲರಿಗೂ ಚಹಾ ಸೇವನೆ ಆಯಿತು.

ಅಲ್ಲಿಂದ ಬಸವರಾಜ ಮಲಶೆಟ್ಟಿ, ಮುದೇನೂರು ಸಂಗಣ್ಣ ಜೊತೆ ಎಲ್ಲರೂ ಇತಿಹಾಸಪೂರ್ವ ಬಂಡೆ ಚಿತ್ರಗಳನ್ನು, ಅರಸರ ಗವಿಯನ್ನು ನೋಡಿದೆವು. ಸಂಗಣ್ಣ ಸ್ವಲ್ಪ ಸುಣ್ಣ ಬಳಿದ ಗೋಡೆ ಕೆದಕಿದಾಗ ಗೋಡೆ ಮೇಲೆ ವರ್ಣಚಿತ್ರಗಳಿದ್ದ ಕುರುಹು ಕಾಣಿಸಿತು. ಸ್ವಾಮೀಜಿಯವರು ಆ ಗುಹೆಗೆ ನನ್ನನ್ನು ಕರೆತಂದಾಗ ಚಿತ್ರಗಳು ಅಲ್ಲಿರುವ ಸಾಧ್ಯತೆಯೂ ತಿಳಿದಿರಲಿಲ್ಲ. ಅವು ಸ್ಪಷ್ಟವಾಗಿ ವಿಜಯನಗರ ಕಾಲದ ಚಿತ್ರಗಳಾಗಿದ್ದಿರಬೇಕು*. ಅಲ್ಲಿಂದ ಹಿಂದಿರುಗುತ್ತಿದ್ದಂತೆ ರಾಮಸಿಂಗ್ ಮನೆಗೆ ಊಟಕ್ಕೆ ಹೋದೆವು. ರಾಮಸಿಂಗ್ ಹಂಪಿಗೆ ಅನಾಥನಾಗಿ ಬಂದ ಹುಡುಗ. ಅವನಿಗೆ ಸ್ವಾಮಿಗಳು ಅಕ್ಷರಾಭ್ಯಾಸ ಮಾಡಿಸುವಾಗ ಅದೇ ಹಂಪಿಯ ರಾಮಸಿಂಗ್ ಜಾತಿಯ ಹುಡುಗಿಯೂ ಪಾಠ ನಡೆಯುವ ಜಾಗಕ್ಕೆ ಬರುತ್ತಿದ್ದಳು. ಸ್ಫುರದ್ರೂಪಿಯಾಗಿದ್ದರೂ ಮೂಕಿ ಮತ್ತು ಕಿವುಡಿ. ಅವಳಿಗೆ ಗಂಡು ದೊರಕುವುದು ಕಷ್ಟವಾದಾಗ, ಸ್ವಾಮಿಗಳೇ ಹೇಳಿ ಅವಳನ್ನು ರಾಮಸಿಂಗ್‌ಗೆ ಕೊಟ್ಟು ಮದುವೆ ಮಾಡಿಸಿದರು. ಅವನಿಗೆ ಸ್ವಲ್ಪ ಆಸ್ತಿಯೂ ದೊರಕಿತು. ನಾವು ರಾಮಸಿಂಗ್ ಮನೆಗೆ ಹೋದಾಗ ಆಕೆ ಬಾಗಿಲು ಹಾಕಿಕೊಂಡು ಅಡುಗೆ ಮಾಡಿಟ್ಟು ನಮಗಾಗಿ ಕಾದು ಮಲಗಿಬಿಟ್ಟಿದ್ದಳು. ಎಷ್ಟು ಕೂಗಿದರೂ ಬಾಗಿಲೂ ತಟ್ಟಿದರೂ ಅವಳಿಗೆ ಕೇಳಿಸಲೇ ಇಲ್ಲ. ಸುಮಾರು ಹದಿನೈದು ನಿಮಿಷ ಹೀಗೇ ನಡೆಯಿತು. ಕೊನೆಗೆ ಏಣಿ ತರಿಸಿ ಬಾಗಿಲು ಮೇಲಿನ ಗವಾಕ್ಷವನ್ನು ತೆರೆದು ತೀರ ಗಟ್ಟಿಯಾಗಿ ಕಿರಿಚಿ ಒಳಕ್ಕೆ ನೀರು ಎರಚಿದಾಗ ಎಚ್ಚೆತ್ತ ಅವಳು ತೀರ ನಾಚಿಕೆಯಿಂದ ಬಾಗಿಲು ತೆರೆದಳು. ರಾಮಸಿಂಗ್ ಕ್ಷಮೆ ಯಾಚಿಸಿದರೂ ನಮಗೆ ಅದು ಸಂಪೂರ್ಣ ಅನಗತ್ಯವಾಗಿತ್ತು. ಆ ಹೆಣ್ಣು ಮಗಳ ಮೇಲೆ ನನಗೆ ಅಪಾರ ಮಮತೆ, ಮತ್ತು ರಾಮಸಿಂಗ್ ವಿಷಯದಲ್ಲಿ ಅಭಿಮಾನ. ಅವರಿಗೆ ಇಬ್ಬರು ಮಕ್ಕಳು. ಇದ್ದುದರಲ್ಲಿ ಸುಖವಾಗಿದ್ದ ವ್ಯಕ್ತಿ. ನದಿಯ ನೇರ ಎದುರು ಮನೆ. ಊಟ ನಮಗೆಲ್ಲ ಬಹಳ ರುಚಿಸಿತು.

ಮಧ್ಯಾಹ್ನ ನಿದ್ದೆ ಆದಮೇಲೆ ತಿರುಪಾಲಯ್ಯ, ಚಂದ್ರಶೇಖರ್ ಜೊತೆ ಇಟಗಿ ವೀರಣ್ಣ, ಹಗರಿಬೊಮ್ಮನಹಳ್ಳಿಯ ಶಿವಕುಮಾರ್ ಜೊತೆ ಚನ್ನಾಗಿ ಹರಟಿದ್ದಾಯಿತು. ಶಿವಕುಮಾರ್ "ಚನ್ನಬಸವಪುರಾಣ"ದ ಕಾಗದದ ಹಸ್ತಪ್ರತಿ ತಂದಿದ್ದರು. ಆ ಕೃತಿಯ ಕರ್ತೃ ಹದಿನಾರನೇ ಶತಮಾನದ ವಿದ್ಯಾನಗರಿಯ (ಹಂಪಿಯ) ಹಿರಿಯ ಮಠದ ಸಿದ್ಧವೀರೇಶನ ಶಿಷ್ಯನಾದ ವಿರೂಪಾಕ್ಷ ಪಂಡಿತ. ಆಶ್ರಮಕ್ಕೆ ಬಂದಿದ್ದ ಗಂಗಾವತಿ ಯುವಕರೊಬ್ಬರು ಹರಿಜನರ

---

* "ಅರಸರ ಗವಿ" ಹೆಸರೇ ಹೇಳುವಂತೆ, ವಿಜಯನಗರದ ಕಾಲದಲ್ಲಿ ಸಾಕಷ್ಟು ಪ್ರಸಿದ್ಧವಾದ ಜಾಗವಾಗಿದ್ದಿರಬೇಕು. ಅದು ರಾಜಪೂಜಿತರಾಗಿದ್ದ (ಶೈವ) ಗುರುಗಳೊಬ್ಬರ ಬಹುಶಃ ಕಾಶೀವಿಲಾಸ ಕ್ರಿಯಾಶಕ್ತಿಗಳ ಅನುಷ್ಠಾನದ ಜಾಗವಿರಬೇಕು. ಕಾಶೀವಿಲಾಸ ಕ್ರಿಯಾಶಕ್ತಿಗಳು ಹಕ್ಕ ಬುಕ್ಕರ ಕುಲಗುರುಗಳೆಂದು ಶಾಸನಗಳಲ್ಲಿ ಉಲ್ಲೇಖವಾಗಿದೆ.

ಹುಡುಗನೊಬ್ಬ ಲಿಂಗಾಯತರ ಹುಡುಗಿ ಜೊತೆ ಮದುವೆ ಮಾಡಿಕೊಂಡ ವಿಷಯವನ್ನು ಹರ್ಷದಿಂದ ತಿಳಿಸಿದರು. ಆಶ್ರಮದಲ್ಲಿ ಕುಳಿತಿರುವಾಗಲೇ ಭಾರಿ ಮಳೆ ಸುರಿಯಿತು. ಮಳೆಯಲ್ಲೇ ಧಾರವಾಡದಿಂದ ಡಾ. ಕಲಬುರ್ಗಿ, ಡಾ. ಬಿ.ಆರ್. ಹಿರೇಮಠ, ಡಾ. ಸಿರೂರ್, ಗದಗಿನಿಂದ ಶಾಮಸುಂದರ ಬಿದರಕುಂದಿ ಬಂದಿದ್ದರು. ಅವರ ಮುಂದೆ ಮತ್ತೊಮ್ಮೆ ಬೆಳಿಗ್ಗೆ ನಾನು ಕೈಗೊಂಡಿದ್ದ ಸಂಕಲ್ಪವನ್ನು ಓದಿ ಹೇಳಿದಾಗ ಅವರು ನನ್ನ ಬಗ್ಗೆ ಅಭಿಮಾನದ ಮಾತುಗಳನ್ನಾಡಿ, ಕನ್ನಡಕ್ಕೆ ಉತ್ತರ ಕರ್ನಾಟಕದಲ್ಲಿ ಒಂದು ಸ್ಥಾನವನ್ನು ದೊರಕಿಸಿಕೊಟ್ಟ "ಡೆಪ್ಯೂಟಿ ಚನ್ನಬಸಪ್ಪ" ಪುಸ್ತಕ ಕೊಟ್ಟರು. ಅದು ಬಹು ಸಾಂಕೇತಿಕವಾಗಿತ್ತು. ಆಶ್ರಮದಲ್ಲಿ ಎಲ್ಲರಿಗೂ ತಿಂಡಿ ಚಾ ತರಿಸಿಕೊಟ್ಟರು ಸ್ವಾಮಿಗಳು.

ಮಳೆ ನಿಂತ ಮೇಲೆ ಗೆಳೆಯರನ್ನೆಲ್ಲ ಕರೆದೊಯ್ದು ಬಂಡೆ ಚಿತ್ರ, ಗವಿ ಚಿತ್ರ ತೋರಿಸಿದಾಗ ಅವುಗಳ ಛಾಯಾಚಿತ್ರ ತೆಗೆಸಿ ಕಳಿಸಿಕೊಡುವ ಜವಾಬ್ದಾರಿಯನ್ನು ಇಟಗಿ ವೀರಣ್ಣ ಹೊತ್ತರು. ಅರಸರ ಗುಹೆ ಹತ್ತಿರ ಮುಳ್ಳು ಹಂದಿಯ ಮುಳ್ಳೊಂದು ದೊರಕಿತು. ವಾಪಸ್ ಆಶ್ರಮಕ್ಕೆ ಬಂದು, ಸದಾಶಿವಯೋಗಿಗಳಿಗೆ ಹಾರ್ದಿಕ ಕೃತಜ್ಞತೆ ಸಲ್ಲಿಸಿ, ಮಠಕ್ಕೆ ಬಂದು ಸಂಗಯ್ಯನ ತಾಯಿಗೆ ಹೇಳಿ, ನನ್ನ ಚೀಲಗಳ ಸಮೇತ ಕತ್ತಲಲ್ಲೇ ಹಾದು ವಿರೂಪಾಕ್ಷ, ಪಂಪಾಂಬಿಕೆ, ಭುವನೇಶ್ವರಿಯರ ದರ್ಶನ ಪಡೆದು ಹೊಸಪೇಟೆಗೆ ಎಲ್ಲರೂ ಬಸ್ ಹತ್ತಿದೆವು. ಐದು ವಾರಗಳಲ್ಲಿ ಅದು ಮೊದಲ ಬಸ್ ಪ್ರಯಾಣವಾಗಿತ್ತು. ಅಲ್ಲಿಗೆ ನನ್ನ "ಕನ್ನಡಾಯಣ"ದ ಮೊದಲ ಹಂತ ಮುಗಿಯಿತು. ಹೊಸಪೇಟೆಯಲ್ಲಿ ಶ್ರೀ ಕೊಟ್ಟೂರೇಶ್ವರ ಮಠಕ್ಕೆ ರಾತ್ರಿ ಹೋದಾಗ ಬೇರೆ ಊರಿಗೆ ಹೋಗಿದ್ದ ಪೂಜ್ಯ ಸ್ವಾಮೀಜಿಯವರು ಇನ್ನೂ ವಾಪಸಾಗಿರಲಿಲ್ಲ. ಬೆಳಿಗ್ಗೆ ಎದ್ದು ಅಲ್ಲಿನ ಮ್ಯಾನೇಜರ್‌ಗೆ ಮುರಿಗೇಶ್‌ಗೆ ನನ್ನ ಕೃತಜ್ಞತೆ ಹೇಳಿ, ಸ್ವಾಮೀಜಿಯವರಿಗೆ ನನ್ನ ಉಪಕಾರ ಸ್ಮರಣೆಯನ್ನು ಮರೆಯದೆ ತಿಳಿಸುವಂತೆ ಕೇಳಿಕೊಂಡು, ಬಸ್ಸಿನಲ್ಲಿ ಹೊರಟು ಬಳ್ಳಾರಿ ಮೂಲಕ ಬೆಂಗಳೂರಿಗೆ ಸಂಜೆ ಏಳರ ಹೊತ್ತಿಗೆ ಬಂದೆ. ಬೆಳಕಿದ್ದಂತೆ ಬೆಂಗಳೂರಿಗೆ ಬಂದು ನನ್ನ ಗಡ್ಡ ಮೀಸೆ ತುಂಬಿದ ಮುಖವನ್ನು ಜನರಿಗೆ ತೋರಿಸುವ ಧೈರ್ಯವಾಗಲಿಲ್ಲ. ರಾತ್ರಿ ಮನೆಗೆ ಹೋದಾಗ ಹೆಂಡತಿ ಮಕ್ಕಳು ನನ್ನನ್ನು ಪ್ರೀತಿ ಸಮಾಧಾನದಿಂದ ಸ್ವಾಗತಿಸಿದರೂ ಆಳದಲ್ಲಿದ್ದ ನೋವು ನನಗೆ ಅರ್ಥವಾಗುತ್ತಿತ್ತು.

ಬೆಳಿಗ್ಗೆ (24.6.85) ನಾನು ಮಾಡಿದ ಮೊದಲ ಕೆಲಸವೆಂದರೆ ಮುಖದ ಹೊರಭಾಗವನ್ನು ಕೆರೆದು ಹಾಕಿದ್ದು. ನನಗೆ ನೆನಪಿರುವಂತೆ ಅದಕ್ಕಾಗಿ ಮೂರು ಹೊಸ ಬ್ಲೇಡುಗಳು ಪ್ರಾಮಾಣಿಕವಾಗಿ ಕೆಲಸಮಾಡಿ ಆಮೇಲೆ ಮೊಂಡು ಹಿಡಿದು ಮೂಲೆ ಸೇರಿದುವು.

## ಮುಂದಿನ ಕತೆ : ಕನ್ನಡ ಕಾರ್ಯಕರ್ತನಾಗಿ

ಇಲ್ಲಿಗೆ "ಕನ್ನಡಾಯಣ" ಕತೆ ಒಂದು ರೀತಿ ನಿಲ್ಲಬೇಕು. "ಕನ್ನಡಾಯಣ" ಎಂದರೆ ಕನ್ನಡದ ಮಾರ್ಗ, ಹಾದಿ ಎಂದಾಗಬಹುದು ; ಕನ್ನಡಾಭಿಮುಖವಾದ ಸಂಚಾರ ಎಂದೂ ಆಗಬಹುದು (ನೋಡಿ - "ರಾಮಾಯಣ", "ಉತ್ತರಾಯಣ"). ಕನ್ನಡಕ್ಕಾಗಿ ನಡೆದು ಹೋದದ್ದರ ಕತೆ ಎಂದು ಅರ್ಥ ಮಾಡಿದರೂ ಅನುಚಿತವಾಗಲಾರದು.

ಮುಂದಿನ ಕೆಲವು ಪುಟಗಳು ಆ ಕತೆಯ ಮುಂದುವರಿಕೆ. ಅದನ್ನು ಬರೆಯುವುದು ಹಿಂದೆ ಬರೆದಷ್ಟು ಸುಲಭವಲ್ಲ. ಏಕೆಂದರೆ ಆ ಬಗ್ಗೆ ನಾನು ದಿನಚರಿ ಬರೆದಿಟ್ಟುಕೊಂಡಿಲ್ಲ. ಆದರೂ ಬರೆದಿದ್ದೇನೆ.

ವಾಪಸ್ ಬೆಂಗಳೂರಿಗೆ ಬಂದ ಮೇಲೆ ನಿಜವಾಗಿಯೂ ಹೊಸ ಉತ್ಸಾಹದ ಆತ್ಮವಿಶ್ವಾಸದ ಮನುಷ್ಯನಾಗಿದ್ದೆ. ಮೊದಲು ಮಾಡಿದ ಕೆಲಸವೆಂದರೆ ವಿಜಯನಗರ ಎರಡನೆಯ ಹಂತದ ಬಡಾವಣೆಯಲ್ಲಿ ಬೇಸ್‌ಮೆಂಟ್ ಹಾಕಿ ಬಿಟ್ಟು ಹೋಗಿದ್ದ ಕೆಲಸವನ್ನು ಮುಂದುವರಿಸಿ ಮನೆ ಕಟ್ಟಿದ್ದು. ಈ ವಿಷಯದಲ್ಲಿ ಜಿ.ಸಿ. ನಾರಾಯಣರ ಸಂಪೂರ್ಣ ಸಹಕಾರ ದೊರಕಿತು. ಒಂದು ವರ್ಷದಲ್ಲೇ ಮನೆ ಮುಗಿಸಿ 1986ರಲ್ಲಿ ಗೃಹಪ್ರವೇಶ ಮಾಡಿದೆ. ಅಲ್ಲಿಗೆ ನನ್ನ ಹೆಂಡತಿ, ಮಕ್ಕಳು ಒಂದು ರೀತಿಯಲ್ಲಿ ನಿಶ್ಚಿಂತರಾದರು. ನನ್ನ ಎರಡನೆಯ ತಂಗಿಯ ಸಮಸ್ಯೆ ಪರಿಹಾರವಾಗಿ ಅವಳು ಹೋಗಿ ತನ್ನ ಗಂಡನನ್ನೂ ಮಕ್ಕಳನ್ನೂ ಸೇರಿಕೊಂಡಳು. ನನ್ನ ತಾಯಿಗೆ ಅದು ತೀರ ಸಮಾಧಾನವನ್ನು ತಂದಿತು. ಮಗ ಕಟ್ಟಿದ ಮನೆಯಲ್ಲಿ ಮೊಮ್ಮಗಳ ತಲೆ ಬಾಚುತ್ತ ಮೊಮ್ಮಗನ ಜೊತೆ ಮಾತಾಡುತ್ತ ಮನೆ ಮುಂದಿನ ತೋಟದಲ್ಲಿ ಅಲ್ಪಸ್ವಲ್ಪ ಕೆಲಸ ಮಾಡಿ ಬೇಸರ ನೀಗಿಸಿಕೊಳ್ಳುತ್ತ ಅವ್ವ ತನ್ನ ಎಂಬತ್ತೆಂಟನೆಯ ವಯಸ್ಸಿನಲ್ಲಿ ಹೆಚ್ಚು ನರಳದೆ ಕಣ್ಮುಚ್ಚಿದಳು.

ಇನ್ನು ಮುಖ್ಯವಾಗಿ ಎಲ್ಲರ ಸಹಕಾರ ಪಡೆದು ಮಾಡಿದ ಕನ್ನಡದ ಕೆಲಸಗಳ ಪಟ್ಟಿಯನ್ನು ಕೊಡುವುದು ಕಷ್ಟ. 1985ರ ಹೊತ್ತಿಗೆ ಗೋಕಾಕ್ ಚಳವಳಿ, ಮಹಿಷಿ ಚಳವಳಿ, ದೂರದರ್ಶನ ಚಳವಳಿಗಳನ್ನು ಯಶಸ್ವಿಯಾಗಿ ನಡೆಸಲಾಗಿತ್ತು. "ಯಶಸ್ವಿ" ಮಾತನ್ನು ಬರೀ ಮೆರವಣಿಗೆ, ಪತ್ರಿಕೆಗಳಲ್ಲಿ ದೊರಕುವ ಪ್ರಾಮುಖ್ಯವನ್ನು ಮಾತ್ರ ಗಮನದಲ್ಲಿಟ್ಟುಕೊಂಡು ಬಳಸಿಲ್ಲ. ಅವು ಯಾವ ಉದ್ದೇಶಕ್ಕೆ ನಡೆದುವೋ ಅವನ್ನು ಸಾಧಿಸಿದ್ದಾಗಿತ್ತು. 1986ರ ಬಳಿಕ ಆದ ಕೆಲವು ಕನ್ನಡದ ಮುಖ್ಯ ಕೆಲಸಗಳು ಹೀಗಿವೆ. ಬೆಂಗಳೂರಿನ ದೂರದರ್ಶನದ ಕಾರ್ಯಕ್ರಮಗಳು ರಾಜ್ಯಾದ್ಯಂತ ಪ್ರಸಾರವಾಗದಿದ್ದ ಪರಿಸ್ಥಿತಿಯ ವಿರುದ್ಧ ನಡೆದ ಹೋರಾಟ ಯಶಸ್ವಿಯಾಯಿತು. ಪಟ್ಟು ಹಿಡಿದು, ನಿರಂತರ ಅನುಸರಣ ಕಾರ್ಯವನ್ನು ನಡೆಯಿಸಿ ಹಂಪಿಯಲ್ಲಿ ಕನ್ನಡ ವಿಶ್ವವಿದ್ಯಾಲಯ ಸ್ಥಾಪನೆಯಾಗುವಂತೆ ಮಾಡಿದೆವು. ಹಂಪಿಯಲ್ಲಿ ಶ್ರೀ ಸದಾಶಿವ ಯೋಗಿಗಳು ಕನ್ನಡ ವಿಶ್ವವಿದ್ಯಾಲಯಕ್ಕೆ ಹಿಂದೆ ಹೇಳಿದ ವಿರುಪಾಪುರ ಗಡ್ಡೆ ಪ್ರಶಸ್ತ ಸ್ಥಳವೆಂದು, ಸರ್ಕಾರ ಮನಸ್ಸು ಮಾಡಿದರೆ ಅದನ್ನು ಗುತ್ತಿಗೆ ಕೊಟ್ಟಿರುವುದನ್ನು ರದ್ದುಪಡಿಸಿ ಅಲ್ಲಿ ವಿಶ್ವವಿದ್ಯಾಲಯವನ್ನು ಆರಂಭಿಸಬಹುದೆಂದು ಸೂಚಿಸಿದ್ದರು. ಅವರ ಸಲಹೆ ಕಾರ್ಯಗತವಾಗಿದ್ದರೆ ವಿಶ್ವದ ಅತ್ಯಂತ ಸುಂದರ ವಿಶ್ವವಿದ್ಯಾಲಯಗಳಲ್ಲಿ ಒಂದು ಅದಾಗುತ್ತಿತ್ತು. ಕಾಮಲಾಪುರ ಪಕ್ಕದಲ್ಲಿ ಅಂತಿಮವಾಗಿ ಅದು ಸ್ಥಾಪನೆಗೊಂಡು ಕಾರ್ಯಾರಂಭ ಮಾಡಿದ್ದನ್ನು ಕಂಡು ಕೇಳಿ ನಮ್ಮ ಶ್ರಮ ಸಾರ್ಥಕವಾಯಿತು ಎಂದು ನಾವೆಲ್ಲ ಹಿಗ್ಗಿದ್ದುಂಟು. ಇಂತಹ ಹಲವಾರು ಕೆಲಸಗಳು ನಡೆದುವು. ಸಾಹಿತಿಗಳ ಕಲಾವಿದರ ಬಳಗ ನಡೆಸಿದ ಸಭೆಗಳು, ಮೆರವಣಿಗೆಗಳು ಹಲವಾರು.

ಆದರೂ ರಾಜ್ಯಮಟ್ಟದ ಸಂಘಟನೆಯೊಂದು ಅಸ್ತಿತ್ವಕ್ಕೆ ಬರುವುದು ಅಗತ್ಯವಾಗಿತ್ತು. ಅದಕ್ಕಾಗಿ ರಾಜ್ಯಾದ್ಯಂತ ಕಾರ್ಯಕರ್ತರು ಪ್ರವಾಸಮಾಡಿ, ಪತ್ರಗಳನ್ನು ಬರೆದು, ಬೆಂಗಳೂರಿನಲ್ಲಿ ಸಾಕಷ್ಟು ವಿಚಾರ ವಿನಿಯಮ ನಡೆದು ಕೊನೆಗೂ 1988ರಲ್ಲಿ "ಕನ್ನಡ ಶಕ್ತಿ ಕೇಂದ್ರ" ಅಸ್ತಿತ್ವಕ್ಕೆ ಬಂದಿತು. ಮುಂದೆ ಅದು ಮೈಸೂರು, ಮಂಡ್ಯ, ಕೋಲಾರ, ಕೆ.ಜಿ.ಎಫ್, ತುಮಕೂರು, ಚಿತ್ರದುರ್ಗ, ಶಿವಮೊಗ್ಗ, ಧಾರವಾಡ, ರಾಯಚೂರು, ಬಿಜಾಪುರ, ಗುಲ್ಬರ್ಗ, ಬೀದರ್, ಬಳ್ಳಾರಿ ಜಿಲ್ಲಾ ಘಟಕಗಳನ್ನು ಸ್ಥಾಪಿಸಿತು. ಅದರಂತೆಯೇ ಕನ್ನಡ ಶಕ್ತಿ ಕೇಂದ್ರದ ಮಹಿಳಾ ಘಟಕವನ್ನೂ ಸ್ಥಾಪಿಸಲಾಯ್ತು.

ಕನ್ನಡ ಶಕ್ತಿ ಕೇಂದ್ರದ ಕೆಲಸಗಳನ್ನು ತೀವ್ರಗೊಳಿಸುವ ಎಲ್ಲ ಪ್ರಯತ್ನಗಳನ್ನು ಕೈಗೆತ್ತಿಕೊಂಡೆವು. ಹಂಪಿಯಲ್ಲಿ ಕೈಗೊಂಡಿದ್ದ ಸಂಕಲ್ಪವು ಬರೀ ಮಾತಾಗಿ ಉಳಿಯಲು ಸಾಧ್ಯವೇ ಇರಲಿಲ್ಲ. ಆದರೆ, ಸಮಯವನ್ನು ಎಲ್ಲಿಂದ ತರಲಿ? ಬೆಂಗಳೂರು ವಿಶ್ವವಿದ್ಯಾಲಯದ ನನ್ನ ವೃತ್ತಿಯನ್ನು ನಾನು ಉದಾಸೀನ ಮಾಡುವಂತಿಲ್ಲ. ಅಲ್ಲಿನ ಸಂಬಳ ಪಡೆಯುತ್ತಿದ್ದುದು ಅಧ್ಯಯನ, ಅಧ್ಯಾಪನ ಮತ್ತು ಸಂಶೋಧನೆಗಳಿಗೆ : ಅವುಗಳನ್ನು ನಾನು ಪ್ರಾಮಾಣಿಕವಾಗಿ ನಿರ್ವಹಿಸದಿದ್ದರೆ ನಾನು ತಪ್ಪಿತಸ್ಥನಾಗುತ್ತಿದ್ದೆ. ಬೆಳಿಗ್ಗೆ ಹನ್ನೊಂದರಿಂದ ಸಂಜೆ ನಾಲ್ಕರವರೆಗೆ ಅಲ್ಲಿರಬೇಕು ಮತ್ತು ಶೈಕ್ಷಣಿಕ ಕೆಲಸಗಳಲ್ಲಿ ತೊಡಗಿಸಿಕೊಂಡಿರಬೇಕು. 1982ರಲ್ಲಿ ಗೋಕಾಕ್ ಚಳವಳಿ ನಡೆದ ಕಾಲದಿಂದ ನಾನು ಏನಿದ್ದರೂ ಮಾಡಿದ ಕೆಲಸಗಳು ನನ್ನ ವೃತ್ತಿ ಜೀವನದ ಉಳಿದ ಸಮಯದಲ್ಲಿ ಮಾತ್ರ. ಆದರೆ, ಕನ್ನಡ ಶಕ್ತಿ ಕೇಂದ್ರದ ರಾಜ್ಯಮಟ್ಟದ ಚಟುವಟಿಕೆಗಳನ್ನು ನನ್ನ ಹುದ್ದೆಯಲ್ಲಿದ್ದುಕೊಂಡು ಮಾಡುವುದು ಕಷ್ಟವೆನ್ನಿಸಿತು. ಮಗಳ ಮದುವೆ ಆಗಿರಲಿಲ್ಲ. ಅದಕ್ಕೆ ಮುನ್ನವೇ ಸ್ವಯಂ ನಿವೃತ್ತಿ ಪಡೆಯುವುದು ಆತ್ಮಘಾತಕವಾಗುತ್ತದೆಂಬ ಸಕಾರಣ ಭಯ ನನ್ನದು. ನನ್ನ ಮಗಳ ಮದುವೆ 1990ರ ಆರಂಭದಲ್ಲಿ ನಡೆದು ಒಂದು ರೀತಿಯಲ್ಲಿ ನಾನು ನಿರಾಳನಾದೆ. ಒಮ್ಮೆ ನನ್ನ ಹೆಂಡತಿ ಸ್ವಲ್ಪ ಕೋಪದಿಂದಲೇ ಹೇಳಿದ್ದಳು - "ನೀವೊಂದು ಮನೆ ಮಾಡಿ, ಮಗಳಿಗೆ ಮದುವೆ ಮಾಡಿ. ಆಮೇಲೆ ನೀವು ಸನ್ಯಾಸಿಯಾಗಿ ಹೋದರೂ ಬೇಡ ಅನ್ನೋದಿಲ್ಲ". ನಿಜ ಹೇಳಲೇ, ಗೃಹಿಣಿಯಾಗಿ ಅದಕ್ಕಿಂತ ಹೆಚ್ಚಾಗಿ ತಾಯಿಯಾಗಿ ಅವಳು ಈ ರೀತಿ ನಡೆದುಕೊಳ್ಳದಿದ್ದರೆ ಮನೆ ಯಾವಾಗ ಕಟ್ಟುತ್ತಿದ್ದೆನೋ, ತಿಳಿಯದು. ಇನ್ನೂ ಒಂದು ವರ್ಷ ಸೇವಾವಧಿಯಿದ್ದರೂ ಸ್ವಯಂ ನಿವೃತ್ತಿ ಪಡೆಯುವುದರ ಬಗ್ಗೆ ಗಂಭೀರವಾಗಿ ಚಿಂತಿಸಿ ಆ ಬಗ್ಗೆ ನಿರ್ಧಾರವನ್ನು ಕೈಗೊಳ್ಳಲು ಹಂಪಿಯೇ ಸರಿಯಾದ ಜಾಗವೆಂದು ಯೋಚಿಸಿದೆ.

ಹಂಪಿಯೆ ಏಕೆ ? ಇದ್ದ ಕಡೆಯೆ ನಿರ್ಧರಿಸಬಹುದಿತ್ತಲ್ಲ ಎಂಬ ಪ್ರಶ್ನೆಗೆ ಉತ್ತರ ಸುಲಭ. ನನ್ನಂತಹ ದುರ್ಬಲನು ಮತ್ತೆ ಮತ್ತೆ ಮನಸ್ಸಿಗೆ ಧೈರ್ಯ ತಂದುಕೊಳ್ಳುವುದಕ್ಕೆ, ಕೈಗೊಂಡ ನಿರ್ಧಾರ ಅಚಲವಾಗಿ ಉಳಿಯುವಂತಹ ಮನಸ್ಥಿತಿಯನ್ನು ಉಳಿಸಿಕೊಳ್ಳುವುದಕ್ಕೆ ಧೈರ್ಯಮಾಡಲು ಒಂದು ವಾತಾವರಣ ಅಗತ್ಯ. ಆ ಸ್ಥಳ ಹಂಪಿ ಎಂದು ಮನಸ್ಸು ಹೇಳಿತ್ತು. ಹಿಂದಿನ ಕಾಲ್ನಡಗೆ ನನಗೆ ಹೆಚ್ಚಿನ ಆತ್ಮವಿಶ್ವಾಸವನ್ನು ತಂದುಕೊಟ್ಟಿತ್ತು. ನನ್ನ ದೇಹ,

ಮನಸ್ಸುಗಳೆರಡನ್ನೂ ಅದು ಗಟ್ಟಿಗೊಳಿಸಿತ್ತು. ಫೆಬ್ರವರಿ 90ರಲ್ಲಿ ಮಗಳ ಮದುವೆ ನಡೆದು ಅವಳು ಒಳ್ಳೆಯ ಮನೆ ಸೇರಿದಳು ಎಂಬ ಸಮಾಧಾನವಾಯಿತು.

## ಮತ್ತೆ ಹಂಪಿ

ಈ ಬಾರಿ ಹಂಪಿಗೆ ರೈಲಲ್ಲಿ ಹೋದೆ. ಸ್ವಯಂ ನಿವೃತ್ತಿ ಪಡೆಯಲು ನಿರ್ಧರಿಸಿರುವುದನ್ನು ಮನೆಯಲ್ಲಿ ಸೂಕ್ಷ್ಮವಾಗಿ ತಿಳಿಸಿದ್ದೆ. ಹಂಪಿಯಲ್ಲಿ ಶ್ರೀ ಸದಾಶಿವ ಯೋಗಿಗಳ ಆಶ್ರಮದಲ್ಲಿ ಉಳಿದೆ. ಅವರು ಈ ಹೊತ್ತಿಗೆ ತಮ್ಮ ಚಿಕಿತ್ಸಾಲಯದ ಮೇಲ್ಭಾಗದಲ್ಲಿ ಒಂದು ಕೊಠಡಿ ಕಟ್ಟಿಸಿದ್ದರು. ಅಲ್ಲಿನ ಕಿಟಕಿ ಮೂಲಕ ನೋಡಿದರೆ ಕೆಳಗೆ ತುಂಗಭದ್ರೆ ಹರಿಯುವುದು ಕಾಣುತ್ತಿತ್ತು. ಈ ಬಾರಿ ಕಾಮಲಾಪುರಕ್ಕೆ ಹೋಗಿ ಅಲ್ಲಿ ಕಾರ್ಯಾರಂಭ ಮಾಡಿದ್ದ ಕನ್ನಡ ವಿಶ್ವವಿದ್ಯಾಲಯದ ಕಛೇರಿಯಲ್ಲಿ ಅದರ ಆಡಳಿತಾಧಿಕಾರಿಗಳ ಜೊತೆ ಮಾತನಾಡಿಕೊಂಡು ಬಂದೆ. ಕುಲಪತಿಗಳ ನೇಮಕವಿನ್ನೂ ಆಗಿರಲಿಲ್ಲ. ಆಶ್ರಮದಲ್ಲೇ ಮೂರು ದಿನ ಇದ್ದು ಮೂರನೆಯ ದಿನ (11.6.90) ಮೌನವ್ರತವನ್ನು ಆಚರಿಸಿ ಕೆಲವು ಆಪ್ತರ ಮುಂದೆ ಈ ಕೆಳಗಿನಂತೆ ಸಂಕಲ್ಪವನ್ನು ಸ್ವೀಕರಿಸಿದೆ. ಆ ಸಂಕಲ್ಪವು ಭುವನೇಶ್ವರಿ, ಪಂಪಾಂಬಿಕೆಯರಿಗೆ ಪೂಜೆ ಸಲ್ಲಿಸಿದ ಬಳಿಕ ಶ್ರೀ ವಿರೂಪಾಕ್ಷ ಸ್ವಾಮಿಯ ಸನ್ನಿಧಿಯಲ್ಲಿ ಮಾಡಿಕೊಂಡ ಪ್ರಾರ್ಥನಾರೂಪವಾಗಿತ್ತು.

**11.6.90 : ಸೋಮವಾರ**

(ಹಂಪಿಯ ಶ್ರೀ ವಿರೂಪಾಕ್ಷಸ್ವಾಮಿಯ ಮುಂದೆ ಮಾಡಿದ ಸಂಕಲ್ಪ)

**ಸರಿಯಾಗಿ ಐದು ವರ್ಷಗಳ ಹಿಂದೆ (23.6.1985) ತಾಯಿ ಭುವನೇಶ್ವರಿಯ ಮುಂದೆ ನನ್ನ ಉಳಿದ ಆಯುಸ್ಸಿನ ಭಾಗವನ್ನು ಕನ್ನಡದ ಕೆಲಸಕ್ಕಾಗಿ ಮೀಸಲಿಡುವ ಸಂಕಲ್ಪವನ್ನು ಮಾಡಿದ್ದೆ. ನಾನೊಬ್ಬ 'ಕನ್ನಡದ ಗರುಡ'ನೆಂದು ಕರೆದುಕೊಂಡಿದ್ದೆ. ಆ ಕೆಲಸವನ್ನು ಈ ಐದು ವರ್ಷ ನನ್ನ ಶಕ್ತಿ ಮೀರಿ ನಡೆಸಿಕೊಂಡು ಬಂದಿದ್ದೇನೆ.**

**ಅಂದು ನಾನು ಮೌನವಾಗಿ ನನ್ನ ಕುಟುಂಬದ ಒಳಿತಿಗಾಗಿಯೂ ಪ್ರಾರ್ಥಿಸಿದ್ದೆ. ನಿನ್ನ ದಯೆ - ಸ್ವಂತ ಮನೆ ಆಗಿದೆ. ಮಗಳು ಯೋಗ್ಯ ಮನೆಯನ್ನು ಸೇರಿದ್ದಾಳೆ. ಮಗನಿಗೆ ಉದ್ಯೋಗವು ದೊರಕಿದೆ.**

**ಕಳೆದ ತಿಂಗಳು (10.5.90) ನನ್ನ ಆಯುಸ್ಸಿನ ಐವತ್ತೊಂಬತ್ತು ವರ್ಷಗಳನ್ನು ಮುಗಿಸಿ ಅರವತ್ತನೆಯದಕ್ಕೆ ಕಾಲಿಟ್ಟದ್ದೇನೆ. ನನಗೀಗ ಸಾಂಸಾರಿಕ ಜವಾಬ್ದಾರಿಗಳು ಇಲ್ಲವೆಂದು ಹೇಳಲಾರೆನಾದರೂ ಬಹು ಕಡಮೆ ಆಗಿವೆಯೆಂಬುದು ನಿಜ. ನನ್ನ ಇಡೀ ಸಮಯವನ್ನು ಕನ್ನಡದ ಕೆಲಸಕ್ಕಾಗಿ ಮೀಸಲಿಡಲು ಕಾಲ ಈಗ ಪಕ್ವವಾಗಿವೆ. ನಾನು ನನ್ನ ಹುದ್ದೆಯಿಂದ ಸ್ವಯಂಸೇವಾ ನಿವೃತ್ತಿಯನ್ನು ಪಡೆಯಲು ಅನುಮತಿ ಕೊಡು.**

ಬಸವಣ್ಣನವರ ಕಾಲದಲ್ಲಿ 'ಜಂಗಮತ್ವ' ಎಂಬುದು ಒಂದು ಶ್ರೇಷ್ಠ ಪರಿಕಲ್ಪನೆಯಾಗಿತ್ತು. ಯಾವುದೇ ಜಾತಿಯಲ್ಲಿ ಹುಟ್ಟಿದವನಾದರೂ ಸರಿಯೇ, ಒಬ್ಬ ವ್ಯಕ್ತಿ ಒಂದು ದೊಡ್ಡ ಆದರ್ಶಕ್ಕಾಗಿ ತನ್ನನ್ನು ತಾನು ಮೀಸಲಿಟ್ಟುಕೊಂಡು ಸಮಯದ ಬಹುಭಾಗವನ್ನು ಸಂಚಾರದಲ್ಲಿ ತೊಡಗಿಸಿಕೊಳ್ಳುತ್ತಿದ್ದ ವ್ಯಕ್ತಿಯೇ 'ಜಂಗಮ'ನೆನ್ನಿಸಿಕೊಳ್ಳುತ್ತಿದ್ದ. ಬಡತನವನ್ನು ಸ್ವಇಚ್ಛೆಯಿಂದ ಆರಿಸಿಕೊಂಡು, ಒಳ ಎಚ್ಚರವನ್ನು ಪಡೆಯುತ್ತ ಜನತೆಯಲ್ಲೂ ಆ ಎಚ್ಚರವನ್ನು ಮೂಡಿಸುವ ಪವಿತ್ರಕಾರ್ಯ ಅವನದಾಗಿತ್ತು. ಲೋಕದ ಕಣ್ಣೀರನ್ನು ತೊಡೆಯುವುದು ಅವನ ಕಾಯಕವಾಗಿತ್ತು : ಅಲ್ಲಮ ಅಂತಹ ವ್ಯಕ್ತಿಯಾಗಿದ್ದ.

ಈ ಹಿನ್ನೆಲೆಯಲ್ಲಿ ನಾನು ಇಂದಿನಿಂದ 'ಕನ್ನಡದ ಜಂಗಮ'ನೆಂದು ನಿನ್ನ ಮುಂದೆ ಘೋಷಿಸಿಕೊಳ್ಳುತ್ತೇನೆ. ಕನ್ನಡಿಗರಲ್ಲಿ ಕನ್ನಡತನದ ಅರಿವನ್ನು ಮೂಡಿಸುವುದು ನನ್ನ ಧ್ಯೇಯ. ಅದರ ಜೊತೆ ಜೊತೆಗೇ ದಾರಿದ್ರ್ಯ ಅಸ್ಪೃಶ್ಯತೆಗಳನ್ನು ನಿವಾರಿಸಲು ನನ್ನ ಬದುಕು ಮೀಸಲಾಗಿರುತ್ತದೆ. ಮನುಷ್ಯನನ್ನು ಪ್ರೀತಿಸುತ್ತ, ಆ ಪ್ರೀತಿಯನ್ನು ಎಲ್ಲೆಡೆ ಹಬ್ಬಿಸುತ್ತೇನೆ. ನನ್ನ ಮುಂದಿನ ಬದುಕು ಸರಳವಾಗಿರುತ್ತದೆ. ಜನ ಕಲ್ಯಾಣವನ್ನು ಸಾಧಿಸುತ್ತ ಆತ್ಮಕಲ್ಯಾಣಕಾರಕವೂ ಆಗಿರುತ್ತದೆ.

ಕನ್ನಡಿಗರನ್ನು ಎಚ್ಚರಿಸುವ ನಿರಂತರ ಕಾರ್ಯದಲ್ಲಿ ನಾನು ಎಂದೂ ವಿಫಲವಾಗುವುದಿಲ್ಲ. ವಿಫಲನಾದೆನೆಂಬ ಅರಿವು ಬಂದ ಸಮಯದಲ್ಲಿ ನಾನು ಬಂದು ನಿನ್ನ ಬಳಿಯ ನೀರಿನ ಹೊನಲಲ್ಲಿ ಒಂದಾಗುತ್ತೇನೆ. ನನ್ನ ಒಡಲು ಮಣ್ಣಾದರೆ ನಿನ್ನ ನೆಲವನ್ನು ಸೇರಲಿ, ಬೂದಿಯಾದರೆ ನಿನ್ನ ಕ್ಷೇತ್ರದಲ್ಲಿ ಹರಡಲಿ.

ಕರ್ನಾಟಕಕ್ಕೆ ಕತ್ತಲು ಮುಸುಕಿದಾಗ ದಾರಿ ತೋರಿದ ನಿನ್ನ ಸಾನ್ನಿಧ್ಯದ ಈ ಕ್ಷೇತ್ರ ನನ್ನ ಬದುಕಿನ ದಾರಿದೀಪವಾಗಿರಲಿ, ಸ್ಫೂರ್ತಿಯಾಗಿರಲಿ.

ನಾನೇನೂ ಸನ್ಯಾಸಿಯಲ್ಲವಾದುದರಿಂದ ನಿನ್ನಲ್ಲಿ ಮುಚ್ಚುಮರೆಯಿಲ್ಲದೆ ಈ ಕೋರಿಕೆಯನ್ನು ಸಲ್ಲಿಸುತ್ತೇನೆ. ನನ್ನ ಮಗಳ ಬದುಕು ಹೀಗೆಯೇ ಹಸನಾಗಿರಲಿ. ನನ್ನ ಮಗನ ಬದುಕೂ ಹಸನಾಗಿ ರೂಪುಗೊಳ್ಳುವಂತೆ ಹರಸು. ಹಾಗೆಯೇ ನನ್ನ ಹೆಂಡತಿಯ ಆರೋಗ್ಯವು ಉತ್ತಮಗೊಳ್ಳುವಂತೆ ಆಶೀರ್ವದಿಸು. ಇಷ್ಟು ನನ್ನ ಕುಟುಂಬದ ವಿಷಯವಾಯ್ತು. ಕರ್ನಾಟಕದ ಅಂತಶ್ಚೇತನ ಅರಳುವಂತೆ ದಯೆಯನ್ನು ತೋರಿಸು. ಸಾಹಿತಿಗಳ ಕಲಾವಿದರ ಬಳಗ ಮತ್ತು ಕನ್ನಡ ಶಕ್ತಿ ಕೇಂದ್ರಗಳು ಸಂವರ್ಧನೆಗೊಳ್ಳುವಂತೆ ಮಾಡು.

ಆದರೆ ಎಲ್ಲ ನೋವೂ ನನಗಿರಲಿ. ಕನ್ನಡಿಗನು ಅನುಭವಿಸುತ್ತಿರುವ ಯಾತನೆ, ಅದರ ಫಲವಾಗಿ ತಲೆಯೆತ್ತುತ್ತಿರುವ ಅಥವಾ ತಲೆಯೆತ್ತಲು ಯತ್ನಿಸುತ್ತಿರುವ ಸ್ವಾಭಿಮಾನದ ಸಂಕೇತವಾಗಿ ನನ್ನನ್ನು ರೂಪಿಸು. ಕನ್ನಡಿಗನ ಎಲ್ಲ ನೋವು ಅಪಮಾನಗಳನ್ನೂ ನಾನು ಸ್ವಸಂತೋಷದಿಂದ ಹೊರಲು ಸಿದ್ಧನಾಗಿದ್ದೇನೆ. ನೋವಿನ ಮೂಲಕವೇ

**ಕನ್ನಡಿಗನ ದುಸ್ಥಿತಿಯನ್ನು ಕನ್ನಡಿಗನಿಗೆ ತಿಳಿಸಲು ಸಾಧ್ಯವೆಂಬ ತೀರ್ಮಾನಕ್ಕೆ ಬಂದಿದ್ದೇನೆ.**

**ನಾನು ಕಣ್ಣು ಮುಚ್ಚುವ ಮುನ್ನ ಚೈತನ್ಯಸ್ವರೂಪಿಯಾದ ನಿನ್ನನ್ನು ಕಂಡೇ ಕಾಣುತ್ತೇನೆ. ಅಲ್ಲಿಯವರೆಗೆ ನಾನು ಮಾಡುವ ಕೆಲಸದಲ್ಲಿಯೇ ನೀನು ಕಾಣಿಸುತ್ತಿರುತ್ತೀಯೆ.**

ನನ್ನ ಎರಡನೆಯ ಸಂಕಲ್ಪವನ್ನೂ ನನ್ನ ಹೆಂಡತಿ ಮಗ ಸ್ವಾಗತಿಸಿದರೆಂದು ಹೇಳಲಾರೆ - ಅದು ತೀರ ಸ್ವಾಭಾವಿಕ. ನನ್ನ ಸ್ವಯಂನಿವೃತ್ತಿ ವಿಶ್ವವಿದ್ಯಾಲಯದಿಂದ ಸ್ವೀಕೃತವಾದಾಗ ನನಗೆ ಇನ್ನೂ ಹತ್ತು ತಿಂಗಳ ಸೇವಾವಧಿಯಿತ್ತು.

ಹಂಪಿಯಲ್ಲಿ ಈ ಬಾರಿ ಇಟ್ಟಗಿ ವೀರಣ್ಣ ಒಂದು ಇಂದ್ರಜಾಲ ತೋರಿಸಿದರು. ನಾನು ಮೂರು ಕಲ್ಲುಗಳನ್ನು ಆರಿಸಿ ಇಟ್ಟೆ. ಅವರು ಇನ್ನೊಂದು ಕಡೆ ಮುಖಮಾಡಿ ಕಣ್ಣು ಕಟ್ಟಿಸಿಕೊಂಡರು. ಆ ಮೂರು ಕಲ್ಲುಗಳಲ್ಲಿ ನಾನು ಯಾವುದನ್ನು ಮುಟ್ಟಿದೆನೋ ಅದನ್ನು ಅವರು ಕಣ್ಣು ಬಿಚ್ಚಿಸಿಕೊಂಡು ತಮ್ಮ ಕೈಯಲ್ಲಿದ್ದ ಸಾಲಿಗ್ರಾಮದಂತಹ ವಸ್ತುವನ್ನು ಆ ಕಲ್ಲುಗಳಿಗೆ ಮುಟ್ಟಿಸಿ, ನಾನು ಮುಟ್ಟಿದ್ದನ್ನು ಗುರುತಿಸಿದರು. ಇದು ಆರೆಂಟು ಬಾರಿ ನಡೆಯಿತು. ನನಗೆ ಅದೊಂದು ವಿಸ್ಮಯ.

## ಕನ್ನಡದ ಕೆಲಸಗಳು

ಇಮ್ಮಡಿ ಏಳ್ಮಡಿ ನೂರ್ಮಡಿ ವೃದ್ಧಿಸಿದ ಉತ್ಸಾಹದೊಡನೆ ನನ್ನ ಕನ್ನಡದ ಕೆಲಸಗಳನ್ನು ಮುಂದುವರಿಸಿದೆ. 1982ರಿಂದ ನಾನು ಕನ್ನಡದ ಕೆಲಸಗಳಿಗೆ, ಚಳವಳಿಗೆ ಬಂದುದು ನನ್ನ ಅಧಃಪತನವೆಂದು ಕೆಲವರು ಮೃದುವಾಗಿ ಸದುದ್ದೇಶದಿಂದಲೇ, ಒಂದಿಬ್ಬರು ಸ್ವಲ್ಪ ವ್ಯಂಗ್ಯದಿಂದಲೇ ಟೀಕಿಸಿದ್ದರು. ಕನ್ನಡ ಸಂಶೋಧನೆಗೆ ಅದರಿಂದ ನಷ್ಟವೆಂದು ಹಲವರು ಕೊರಗಿದರು. 'ಕನ್ನಡ' ಇದ್ದರೆ ತಾನೇ ಸಂಶೋಧನೆ, ಸಾಹಿತ್ಯ, ಸಂಸ್ಕೃತಿ, ಕೊನೆಗೆ ಕರ್ನಾಟಕ - ಇದು ನನ್ನ ದೃಢ ನಂಬಿಕೆಯಾಗಿತ್ತು. ಆ ಹೊತ್ತಿಗೆ ನಾನು ಬೆಂಗಳೂರು ವಿಶ್ವವಿದ್ಯಾಲಯದ ಪರೀಕ್ಷಾ ಕೆಲಸಗಳನ್ನು ಅವು ಅನಿವಾರ್ಯವಾದ ಕಾರಣ ಒಪ್ಪಿಕೊಳ್ಳುತ್ತಿದ್ದೆ. ಅವನ್ನು ಹೊರತುಪಡಿಸಿ ಬೇರೆ ಕೆಲಸಗಳನ್ನು ಒಪ್ಪಿಕೊಳ್ಳುತ್ತಿರಲಿಲ್ಲ. ಎಷ್ಟೋ ಪರೀಕ್ಷಾ ಕೆಲಸಗಳ ಸಂಭಾವನೆಯನ್ನು ಪಡೆಯಲು ಯತ್ನಿಸಲಿಲ್ಲ. ಎಷ್ಟೋ ಚೆಕ್ಕುಗಳನ್ನು, ಪ್ರತಿ ತಿಂಗಳ ಸಂಬಳದ ಚೆಕ್ಕುಗಳನ್ನು ಹೊರತುಪಡಿಸಿ, ಬ್ಯಾಂಕಿಗೆ ಕಟ್ಟಲಿಲ್ಲ. ಎಷ್ಟೇ ಆಗಲಿ ನನ್ನ ಕಾಲದ ಒಂದು ಭಾಗ ಕನ್ನಡದ ಕೆಲಸಗಳಿಗೆ ಹೋಗುತ್ತಿದ್ದುದರಿಂದ ಅಷ್ಟರಮಟ್ಟಿಗೆ ನನ್ನ ಓದು, ಸಂಶೋಧನೆ ಕುಂಠಿತ. ಅಷ್ಟರಮಟ್ಟಿಗೆ ನಾನು ವಿಶ್ವವಿದ್ಯಾಲಯದ ಕರ್ತವ್ಯಕ್ಕೆ ಭಂಗ ತರುತ್ತಿದ್ದೇನೆ ಎಂಬ ಒಂದು ಸೂಕ್ಷ್ಮ ಅಪರಾಧ ಮನೋಭಾವ ನನ್ನನ್ನು ಕಾಡುತ್ತಿದ್ದುದರಿಂದ ಆ ಚೆಕ್ಕುಗಳನ್ನು (ಉದಾಹರಣೆಗೆ, ನನ್ನ ಸಂಬಳ ಹೆಚ್ಚಾದುದರ ಪರಿಣಾಮವಾಗಿ ಬಂದ ಬಾಕಿ ಹಣದ ಚೆಕ್ಕುಗಳು) ಬ್ಯಾಂಕಿಗೆ ಕಟ್ಟದೆ ಸಮಾಧಾನ ಪಟ್ಟುಕೊಂಡೆ (ಆ ಚೆಕ್ಕುಗಳು ಈಗಲೂ ಹಾಗೇ ಎಲ್ಲೋ ನನ್ನ ಕಡತಗಳಲ್ಲಿ ಬಿದ್ದಿವೆ). ಅದಿರಲಿ. ನಿವೃತ್ತಿ ಬಳಿಕ ಸಾಕಷ್ಟು ಶ್ರಮಿಸಿದೆ; ಓಡಾಡಿದೆ, ಸಂಘಟಿಸಿದೆ, ಹಲವು ಸಂಘಟನೆಗಳ ಜೊತೆ ಸಹಕರಿಸಿದೆ. ಕನ್ನಡ ಶಕ್ತಿ

ಕೇಂದ್ರವು ರಾಜ್ಯಮಟ್ಟದ ನಿಜವಾದ ಕನ್ನಡಪರ ಕಾಳಜಿಯ ಸಂಘಟನೆಯೆಂದು ಜನ-ಮನ್ನಣೆ ಪಡೆಯಿತು. ಆ ಎಲ್ಲ ಕೆಲಸಗಳ ವಿವರಗಳನ್ನು ನಾನು ಪ್ರತ್ಯೇಕವಾಗಿ ಬರೆಯುತ್ತಿರುವ ನನ್ನ ಆತ್ಮ ವೃತ್ತದಲ್ಲಿ ಕಾಣಿಸಲಿದ್ದೇನೆ. ಬಹುತೇಕ ಕನ್ನಡದ ಎಲ್ಲ ಸಮಸ್ಯೆಗಳಿಗೆ ಫಲಪ್ರದವಾಗಿ ಸ್ಪಂದಿಸುವ ಕೆಲಸಗಳನ್ನು ಸಾಹಿತಿಗಳ ಕಲಾವಿದರ ಬಳಗ, ಅದರ ಮುಂದಿನ ವಿಕಾಸವಾದ ಕನ್ನಡ ಶಕ್ತಿ ಕೇಂದ್ರ ಇವು ಕೈಕೊಂಡುವು. ನೂರಾರು ನಿಷ್ಠಾವಂತ ಕನ್ನಡ ಕಾರ್ಯಕರ್ತರ ಜೊತೆ ಕೈ ಜೋಡಿಸಿ ದುಡಿಯುವ ಪುಣ್ಯ ಕಾರ್ಯ ನನ್ನದಾಯಿತು. ಕನ್ನಡ ವಿಶ್ವವಿದ್ಯಾಲಯ ಪ್ರಕಟಿಸಿರುವ ಮತ್ತು ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದ "ಹೊಸತು ಹೊಸತು" ಕೃತಿಯನ್ನು ಆ ಕಾರ್ಯಕರ್ತರಿಗೆ ಅರ್ಪಿಸಿ ನನ್ನ ಪ್ರೀತಿಯನ್ನು ವ್ಯಕ್ತಪಡಿಸಿದ್ದೇನೆ. ಹಲವು ಕ್ಷೇತ್ರಗಳಲ್ಲಿ ನಾವೆಲ್ಲ ಸೇರಿ ಮಾಡಿರುವ ಕೆಲಸಗಳಲ್ಲಿ ಕೆಲವು ಹೀಗಿವೆ. :

1. ಗೋಕಾಕ್ ಚಳವಳಿ. ಅದರ ಫಲವಾಗಿ ಹೊಮ್ಮಿದ ಪರಿಷ್ಕೃತ ಭಾಷಾ ಸೂತ್ರದ ಅನುಷ್ಠಾನ. (ಆ ಚಳವಳಿ ನಮಗೆ ಎರಡು ದಿನಗಳ ಜೈಲುವಾಸದ ಅನುಭವವನ್ನೂ ತಂದುಕೊಟ್ಟಿತು)

2. ಕನ್ನಡಿಗರಿಗೆ ಉದ್ಯೋಗದ ರಕ್ಷಣೆಯ ಉದ್ದೇಶದ ಚಳುವಳಿ. ಅದರ ಫಲವಾಗಿ ಮಹಿಷಿ ಆಯೋಗ ಮತ್ತು ಅದರ ವರದಿ.

3. ಆ ವರದಿಯ ಮತ್ತು ಆಡಳಿತ ಭಾಷೆಯಾಗಿ ಕನ್ನಡದ ಅನುಷ್ಠಾನದ ಉದ್ದೇಶದ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಸ್ಥಾಪನೆ.

4. ಕನ್ನಡಕ್ಕೆ ಸ್ವತಂತ್ರ ದೂರದರ್ಶನ ಲಭ್ಯವಾಗಿದ್ದು, ಬೆಂಗಳೂರು ದೂರದರ್ಶನದ ಕಾರ್ಯಕ್ರಮಗಳು ಕರ್ನಾಟಕಾದ್ಯಂತ ಪ್ರಸಾರವಾಗುವಂತೆ ಮಾಡಿದ್ದು. ಉರ್ದು ವಾರ್ತಾ ಪ್ರಸಾರದ ಯಶಸ್ವೀ ತಡೆ.

5. ಹಂಪಿಯಲ್ಲಿ ಕನ್ನಡ ವಿಶ್ವವಿದ್ಯಾಲಯ ಮತ್ತು ಬೆಳಗಾವಿಯಲ್ಲಿ ತಾಂತ್ರಿಕ ವಿಶ್ವವಿದ್ಯಾಲಯಗಳ ಸ್ಥಾಪನೆ. ಚುನಾವಣಾ ಅಕ್ರಮಗಳು ನಡೆದು ಅನ್ಯಾಯಗಳ ಗೂಡಾಗಿದ್ದ ಕನ್ನಡ ಸಾಹಿತ್ಯ ಪರಿಷತ್ತಿನ ಶುದ್ಧೀಕರಣಕ್ಕೆ ಪ್ರೊ. ಎಂ.ವಿ. ಸೀತಾರಾಮಯ್ಯನವರ ಜೊತೆ ಯಶಸ್ವೀ ಹೋರಾಟ.

6. ನಾಮಫಲಕಗಳಲ್ಲಿ ಕನ್ನಡಕ್ಕೆ ಆದ್ಯತೆ ಕುರಿತ ಸರ್ಕಾರಿ ಆಜ್ಞೆ ; ಆ ಬಗ್ಗೆ ಕಾರ್ಮಿಕ ಆಯುಕ್ತರ ಜೊತೆ ನಿರಂತರ ಸಂಪರ್ಕ.

7. ಬರ ಪೀಡಿತ ಮತ್ತು ಪ್ರವಾಹ ಪೀಡಿತ ರೈತರಿಗೆ ನಿಧಿ ಸಂಗ್ರಹಣೆ. ಕಾರ್ಗಿಲ್ ವೀರಯೋಧ ನಿಧಿ ಸಂಗ್ರಹಣೆ.

8. ಸಾರ್ವತ್ರಿಕ ಮಾತೃಭಾಷಾ ಮಾಧ್ಯಮದ ಬಗ್ಗೆ ಆಜನ್ಮ ಉಪವಾಸ ಸತ್ಯಾಗ್ರಹ, ಅದರ ಪರಿಣಾಮವಾಗಿ ಸರ್ಕಾರದ ಆಜ್ಞೆ (ಅದರ ಯಶಸ್ವೀ ಜಾರಿಗೆ ಉನ್ನತ ನ್ಯಾಯಲಯದಿಂದ ತೊಡಕು).

9. ಕನ್ನಡ ಕಾರ್ಯಕರ್ತರಿಗೆ ಮಾತುಗಾರಿಕೆ ಶಿಬಿರಗಳು; ಕನ್ನಡದ ಕೆಲಸ ಮಾಡುವ ಬಗ್ಗೆ ರಾಜ್ಯಮಟ್ಟದ ಸಂಘಟನೆಗಳ ಶಿಬಿರಗಳು.

10. ಬೆಳಗಾವಿಯಲ್ಲಿ "ಬೆಳಗಾವಿ ಕರ್ನಾಟಕದ ಅವಿಭಾಜ್ಯ ಅಂಗ"ವೆಂಬ ಘೋಷಣೆಯೊಡನೆ ರಾಜ್ಯಮಟ್ಟದ ಸಭೆ; ಬೆಳಗಾವಿ ಜಿಲ್ಲಾ ವಿಭಜನೆ ತಡೆ; ಕಾಸರಗೋಡಿನ ನಿಯೋಗವನ್ನು ಬರಮಾಡಿಕೊಂಡು ಅದರ ಜೊತೆ ಸೇರಿ ಬೆಂಗಳೂರಿನಲ್ಲಿ ಮಹಾಜನ ವರದಿ ಒತ್ತಾಯಿಸಿ ಸಭೆ.

11. ಕಾವೇರಿ, ಕೃಷ್ಣಾ ನೀರಿನ ವಿತರಣೆಯಲ್ಲಿ ಕರ್ನಾಟಕಕ್ಕೆ ಆಗಿರುವ ಅನ್ಯಾಯಗಳ ಬಗ್ಗೆ ಮೊದಲ ಬಾರಿಗೆ ಜನರಿಗೆ ಮಾಹಿತಿ ನೀಡುವ ಕಿರು ಕೃತಿಗಳ ಪ್ರಕಟಣೆ. (ತಲಾ ಹತ್ತು ಸಾವಿರ).

12. ಅನ್ಯ ಪ್ರಾಂತೀಯ ಶಿವಾಜಿ, ತಿರುವಳ್ಳುವರ್ ಪ್ರತಿಮೆಗಳ ಸ್ಥಾಪನೆಯನ್ನು ವಿರೋಧಿಸಿದ್ದಲ್ಲದೆ, ಇತ್ಯಾತ್ಮಕ ಮಾರ್ಗವನ್ನು ಹಿಡಿದು ಬೆಂಗಳೂರಲ್ಲಿ ಕುವೆಂಪು, ಬಿ.ಎಂ.ಶ್ರೀ. ಪ್ರತಿಮೆಗಳ ಸ್ಥಾಪನೆ. (ಅಂತೆಯೇ ಪರೋಕ್ಷವಾಗಿ ತೀ.ನಂ.ಶ್ರೀ. ಪ್ರತಿಮೆ ಸ್ಥಾಪನೆಯಲ್ಲಿ ಕನ್ನಡ ಶಕ್ತಿ ಕೇಂದ್ರದ ಪಾತ್ರವಿದೆ). ಸದ್ಯದಲ್ಲೇ ಬೆಂಗಳೂರಲ್ಲಿ ಕಿತ್ತೂರು ಚನ್ನಮ್ಮ ಪ್ರತಿಮೆ ಸ್ಥಾಪನೆ ಸರ್ಕಾರದ ವತಿಯಿಂದ. ಅಂತೆಯೇ ರಾಣಿ ಅಬ್ಬಕ್ಕದೇವಿಯ ಪ್ರತಿಮೆ ಬೆಂಗಳೂರಲ್ಲಿ. ಕಿಟಲ್ ಪ್ರತಿಮೆ ಸ್ಥಾಪನೆಯಲ್ಲಿ ಪಾತ್ರ. ಸರ್ವಜ್ಞ ಪ್ರತಿಮೆ ಮದ್ರಾಸಿನಲ್ಲಿ ಸ್ಥಾಪಿಸುವ ಫಲಪ್ರದ ಪ್ರಯತ್ನ ಮುಂದುವರಿದಿದೆ.

13. ಕನ್ನಡದ ಕನ್ನಡಿಗರ ಹೆಸರುಗಳನ್ನು ಉಳಿಸಿಕೊಳ್ಳುವ ಪ್ರಯತ್ನ. ಬೆಂಗಳೂರಿನಲ್ಲಿ "ದೊಮ್ಮಲೂರು" ಬಡಾವಣೆ ಹೆಸರನ್ನು ಉಳಿಸಿದ್ದು ; "ದ.ರಾ. ಬೇಂದ್ರೆ ಮಾರ್ಗ" ಎಂಬ ನಾಮಕರಣ, ರಸ್ತೆಯೊಂದಕ್ಕೆ ; "ಶಾಂತಿಸಾಗರ" ಎಂಬ ಹೆಸರನ್ನು ತೆಗೆಯಿಸಿ "ಸೂಳೆಕೆರೆ" ಎಂಬ ಪರಂಪರೆಯ ಹೆಸರನ್ನು ಅಧಿಕೃತಗೊಳಿಸಿದ್ದು ; ಧಾರವಾಡ ಪಕ್ಕದ ಕೃಷಿ ವಿಶ್ವವಿದ್ಯಾಲಯದ ಆವರಣಕ್ಕೆ "ಎತ್ತಿನ ಗುಡ್ಡ ಆವರಣ" ಎಂಬ ನಾಮಕರಣ ಇತ್ಯಾದಿ. 'ಬಾಳೇ ಕುಂದ್ರಿ ವೃತ್ತ', 'ಸಿದ್ಧಯ್ಯ ಪುರಾಣಿಕ ಮಾರ್ಗ', 'ಶ್ರೀ ರೇಣುಕಾಚಾರ್ಯ ವೃತ್ತ' ನಾಮಕರಣದಲ್ಲಿ ಪ್ರಮುಖ ಪಾತ್ರ.

14. ಹಂಪಿ, ಗೋಕರ್ಣಗಳಲ್ಲಿ ಹಿಪ್ಪಿಗಳಿಂದ ಆಗುತ್ತಿರುವ ನೈತಿಕ ಮತ್ತು ಭೌತಿಕ ಮಾಲಿನ್ಯದ ತಡೆಗೆ ಸರ್ಕಾರಿ ಆಜ್ಞೆ.

15. ಕರ್ನಾಟಕ ಲೋಕಸೇವಾ ಆಯೋಗದ ಪರೀಕ್ಷೆಗಳಲ್ಲಿ "ಸಿ" ವರ್ಗದ ಹುದ್ದೆಗಳಿಗೆ ಕನ್ನಡ ಭಾಷಾ ಜ್ಞಾನ ಕಡ್ಡಾಯವಾಗಲು ಒತ್ತಾಯ (ಇದು ಇನ್ನೂ ಫಲ ಕೊಟ್ಟಿಲ್ಲ).

16. ಬೆಂಗಳೂರಿನಲ್ಲಿ ಕೇಂದ್ರ ಸರ್ಕಾರದ ಕೆಳವರ್ಗದ ನೇಮಕಾತಿಗಳಿಗಾಗಿ ಸ್ಟಾಫ್ ಸೆಲೆಕ್ಷನ್ ಕಮಿಷನ್ ಕಚೇರಿ ಆರಂಭ. ಆಮೇಲೆ ಅದು ಮದ್ರಾಸಿಗೆ ವರ್ಗಾವಣೆ ಆಗದಂತೆ ತಡೆ.

17. "ಬೆಂಗಳೂರಿನ ಸೌಂದರ್ಯೀಕರಣ ಮತ್ತು (ಕರ್ನಾಟಕ) ಸಂಸ್ಕೃತೀಕರಣ" ಕುರಿತಂತೆ ಸಭೆಗಳು. ಆ ಬಗ್ಗೆ ಬೆಂಗಳೂರು ಮಹಾನಗರ ಪಾಲಿಕೆಯಿಂದ ಅಧಿಕೃತ ಸಲಹಾ ಮಂಡಲಿ ರಚನೆ. ಸದ್ಯದಲ್ಲೇ ಹೊರಬರಲಿರುವ ಬೆಂಗಳೂರು ದೂರವಾಣಿ ಕನ್ನಡ ಆವೃತ್ತಿಯ ಹಿಂದೆ ಕನ್ನಡ ಶಕ್ತಿ ಕೇಂದ್ರದ ಪ್ರಯತ್ನವಿದೆ.

18. ಉತ್ತರ ಕರ್ನಾಟಕ ಮತ್ತು ಕೊಡಗಿನಲ್ಲಿ ಬೆಳೆಯುತ್ತಿದ್ದ ಪ್ರತ್ಯೇಕತಾವಾದವನ್ನು ದುರ್ಬಲಗೊಳಿಸುವಲ್ಲಿ (ಕೈ ಬಿಡುವಂತೆ ಮಾಡುವಲ್ಲಿ) ಬಹುಮಟ್ಟಿನ ಯಶಸ್ಸು ಸಾಧಿಸಿದ್ದು. ಅಂತೆಯೇ ಸ್ಥಳೀಯರ ಜೊತೆ ಸೇರಿ ಕೆ.ಜಿ.ಎಫ್.ನಲ್ಲಿ ಕನ್ನಡವನ್ನು ಬಲಗೊಳಿಸಿದ್ದು.

19. ಹಿಂದಿ ಹೇರಿಕೆ ವಿರುದ್ಧ ಅನೇಕ ಬಗೆಯ ಕಾರ್ಯಕ್ರಮಗಳು.

20. ಸಂಗೀತ, ನೃತ್ಯ ಈ ಕ್ಷೇತ್ರಗಳಲ್ಲಿ ಸರ್ಕಾರಿ ಅಥವಾ ಖಾಸಗಿ ಕಾರ್ಯಕ್ರಮಗಳಲ್ಲಿ ಕನ್ನಡಕ್ಕೆ, ಕನ್ನಡಿಗರಿಗೆ ಆದ್ಯತೆ.

21. ರಾಜ್ಯಮಟ್ಟದ ಮೂರು ಸಮಾವೇಶಗಳು (ಹಂಪಿ, ಬೀದರ್, ಬೆಳಗಾವಿ)

22. ಕನ್ನಡ ಉಳಿಸಿ ವರ್ಷ ಆಚರಣೆ (1990-1)

23. ಕರ್ನಾಟಕದ ಪರಂಪರೆ ಬಗ್ಗೆ ಉಪನ್ಯಾಸಮಾಲೆ.

24. ಕರ್ನಾಟಕದಲ್ಲಿ ಚಲನ ಚಿತ್ರೋದ್ಯಮ ರಂಗ ನೆಲೆಗೊಳ್ಳಲು ಸಭೆಗಳು.

25. ಪ್ರಧಾನಿಗಳ ಜೊತೆ ಕರ್ನಾಟಕದ ಸಮಸ್ಯೆಗಳ ಪರಿಹಾರಕ್ಕೆ ಭೇಟಿ (ಬೆಂಗಳೂರಿನಲ್ಲಿ ರಾಜೀವ್ ಗಾಂಧಿ, ದೆಹಲಿಯಲ್ಲಿ ಎಚ್.ಡಿ. ದೇವೇಗೌಡ)

26. ದೆಹಲಿಗೆ ಹೋಗಿ ರೈಲ್ವೆ ಸಚಿವರನ್ನು ಮತ್ತು ಕರ್ನಾಟಕದ ಸಂಸದರನ್ನು ಭೇಟಿ ಮಾಡಿ ಹುಬ್ಬಳ್ಳಿಯಲ್ಲಿ ರೈಲ್ವೆ ನೈರುತ್ಯ ವಲಯ ಕೇಂದ್ರ ಸ್ಥಾಪನೆಗೆ ಒತ್ತಾಯ (ಈ ಬಗ್ಗೆ ಆದ ಪ್ರಯತ್ನಗಳು ಸದ್ಯದಲ್ಲೇ ಫಲ ನೀಡುವ ಖಚಿತ ಸೂಚನೆಗಳಿವೆ).

27. ಪಿ.ಯು.ಸಿ. ತರಗತಿಯ ಪಠ್ಯದಲ್ಲಿ ಕರ್ನಾಟಕ ಇತಿಹಾಸದ ವಿಷಯ ಉಳಿಸಿದ್ದು.

28. ಕಾವೇರಿ ಗಲಭೆ ವಿಚಾರಣಾ ಆಯೋಗದ ಮುಂದೆ ಕನ್ನಡಿಗರ ದೃಷ್ಟಿಕೋನದ ಯಶಸ್ವಿ ಮಂಡನೆ.

29. ಬಿ.ಇ.ಎಲ್., ಹಿಂದೂಸ್ತಾನ ವಿಮಾನ ಕಾರ್ಖಾನೆ, ಭಾರತೀಯ ದೂರವಾಣಿ ಕಾರ್ಖಾನೆ, ಮೈಕೋ, ಯು.ಬಿ.ಮೆಕ್., ಬಿ.ಎಚ್.ಇ.ಎಲ್., ಬಿ.ಇ.ಎಂ.ಎಲ್.,

ರೋಮನ್ ಕಥೋಲಿಕ ಕ್ರೈಸ್ತರ ಕನ್ನಡ ಸಂಘ, ರಾಜ್ಯರಸ್ತೆ ಸಾರಿಗೆ ಸಂಸ್ಥೆ ಕನ್ನಡ ಕ್ರಿಯಾಸಮಿತಿ, ಮೈಸೂರು ಬ್ಯಾಂಕ್ ಕನ್ನಡ ಬಳಗ, ಯುನೈಟೆಡ್ ಇನ್ಸೂರೆನ್ಸ್ ಕಂಪನಿ ಕನ್ನಡ ಸಂಘ, ರೈಲ್ವೆ ನೌಕರರ ಕನ್ನಡ ಸಂಘ, ಎ.ಜಿ. ಕಚೇರಿ ಕನ್ನಡ ಬಳಗ, ರಿಸರ್ವ್ ಬ್ಯಾಂಕ್ ಕನ್ನಡ ಬಳಗ, ಹೋಟೆಲ್ ನೌಕರರ ಸಂಘ, ಬೆಂಗಳೂರು ವಿಶ್ವವಿದ್ಯಾಲಯ ಕನ್ನಡ ಅಧ್ಯಾಪಕರ ಸಂಘ, ದಕ್ಷಿಣ ಕನ್ನಡ ಕನ್ನಡಿಗರ ಸಂಘ - ಇತ್ಯಾದಿ ಅನೇಕ ಸಂಘಟನೆಗಳ ಜೊತೆ ಕನ್ನಡಪರ ಕಾರ್ಯಗಳಲ್ಲಿ ಸಕ್ರಿಯ ಸಹಕಾರ.

30. ಕೊಳೆಗೇರಿ ಹೆಣ್ಣು ಮಕ್ಕಳಿಗೆ ಸಂಜೆ ತರಗತಿ ಆರಂಭ (ಕಾರ್ಯಕ್ರಮ ಯಶಸ್ವಿಯಾಗಿ ನಡೆಯಲಿಲ್ಲ). ಶಾಲೆಗಳಲ್ಲಿ ಬಡಮಕ್ಕಳಿಗೆ ವಸ್ತ್ರ ವಿತರಣೆ.

31. ಕರ್ನಾಟಕ ಸರ್ಕಾರಿ ಸ್ವಾಮ್ಯದ ಎನ್.ಜಿ.ಇ.ಎಫ್. ಹಸ್ತಾಂತರಕ್ಕೆ ವಿರೋಧ.

32. "ಕನ್ನಡ-ಕನ್ನಡಿಗ-ಕರ್ನಾಟಕ"ದಂತಹ ಹಲವು ಮೌಲಿಕ ಕೃತಿಗಳ ಪ್ರಕಟಣೆ.

33. ಸಿ.ಇ.ಟಿ. ಆಯ್ಕೆಯಲ್ಲಿ ಕನ್ನಡಿಗರಿಗೆ ಹೆಚ್ಚಿನ ಪ್ರಾತಿನಿಧ್ಯ : ಸ್ಥಳೀಯ ಬಡ ಹುಡುಗರಿಗೆ ಉನ್ನತ ಶಿಕ್ಷಣಕ್ಕೆ ಬ್ಯಾಂಕಿನಿಂದ ಸಾಲದ ಪ್ರಯತ್ನ.

34. ಬೀದರಿನಲ್ಲಿ ಸಿಖ್ ಹುಡುಗರ ಬರ್ಬರ ಕೊಲೆ ಹಿಂದೆ ಇದ್ದ ಸ್ಥಳೀಯ ಸಾಮಾನ್ಯ ಜನರ ನೋವಿನ ಬಗ್ಗೆ ಸ್ಪಂದನ. ಆ ಬಗ್ಗೆ ವಸ್ತುನಿಷ್ಠ ವರದಿ. (ಅದರ ಫಲ - ನನಗೆ ಮತ್ತು ನನ್ನ ಕುಟುಂಬದವರಿಗೆ "ಖಲಿಸ್ತಾನ್ ಕಮಾಂಡೋ ಫೋರ್ಸ್"ನಿಂದ ಕೊಲೆ ಬೆದರಿಕೆ. ನಾಲ್ಕು ತಿಂಗಳು ನನ್ನ ಮನೆಗೆ ಸಶಸ್ತ್ರ ಪೊಲೀಸ್ ರಕ್ಷಣೆ).

35. ಯಶಸ್ವೀ "ನಬಾರ್ಡ್ ಚಳವಳಿ".

36. "ಮೈಸೂರು ಸೇಲ್ಸ್ ಇಂಟರ್ ನ್ಯಾಷನಲ್" ಪ್ರಕಟಣೆಗಳಲ್ಲಿ ಕನ್ನಡ ಬಳಕೆ ಬಗ್ಗೆ.

37. ಕೆಲವು ಕಾಲ "ಕನ್ನಡ ಕಲಿ" (ಕನ್ನಡದ ವಾರ್ತಾಪತ್ರ) ಪ್ರಕಟಣೆ.

38. "ಜಪಾನ್ ವಸಾಹತು ಶಾಹಿ ವಿರೋಧಿ ಕ್ರಿಯಾಸಮಿತಿ" ಅಧ್ಯಕ್ಷನಾಗಿ ಜಪಾನ್ ಕೈಗಾರಿಕಾನಗರ ಸ್ಥಾಪನೆ (ಬಿಡದಿ, ಸಾತನೂರು ಬಳಿ) ತಡೆಹಿಡಿದುದು.

39. ನಾವು ಶಾಸಕರಿಂದ ಕನ್ನಡಕ್ಕೆ ಏನೂ ಕೆಲಸ ಆಗುತ್ತಿಲ್ಲವೆಂದು ಕರಪತ್ರ ಹೊರಡಿಸಿದಾಗ ನನ್ನನ್ನು ಹಕ್ಕು ಚ್ಯುತಿ ಸಮಿತಿ ಮುಂದೆ ಕರೆದು, "ಇದು ನ್ಯಾಯಾಲಯದಂತೆ, ಎಚ್ಚರ" ಎಂದು ಬೆದರಿಸಿದರೂ, "ನಾನೇನೂ ಮಗುವಲ್ಲ" ಎಂದು ಹೇಳಿ ನನ್ನನ್ನು ಬಲವಾಗಿ ಸಮರ್ಥಿಸಿಕೊಂಡದ್ದು.

40. ಅಂಚೆ ಇಲಾಖೆಯು ಕರ್ನಾಟಕದ ಶ್ರೇಷ್ಠರ ಅಂಚೆ ಚೀಟಿಗಳನ್ನು ಹೊರತಂದಿರುವುದು ತೀರ ಕಡಮೆ. ಆ ಬಗ್ಗೆ ಸಾಕಷ್ಟು ಬಾರಿ ಅಧಿಕಾರಿಗಳನ್ನು ಭೇಟಿಮಾಡಿ ಸಲಹಾಮಂಡಲಿ ರಚನೆಯಾಗುವಂತೆ ಮಾಡಿದ್ದು. (ಅದೂ ಫಲ ನೀಡಿಲ್ಲ).

41. 1982 ರಿಂದ 99ರ ವರೆಗೆ ಪ್ರತಿ ಬುಧವಾರ ತಪ್ಪದೆ ಕನ್ನಡ ಕಾರ್ಯಕರ್ತರ ಸಭೆ ನಡೆದಿವೆ. ಆ ಸಭೆಗಳು ನಮ್ಮನ್ನು ಕನ್ನಡ ಕಾರ್ಯಕರ್ತರಾಗಿ ಜೀವಂತವಾಗಿಟ್ಟಿವೆ.

ಮೇಲೆ ಕನ್ನಡ ಶಕ್ತಿ ಕೇಂದ್ರವು (ಸಾಹಿತಿಗಳ ಕಲಾವಿದರ ಬಳಗ) ಈಚಿನವರೆಗೆ ಮಾಡಿದ ಕೆಲವು ಮುಖ್ಯ ಕೆಲಸಗಳನ್ನು ಮಾತ್ರ ಪಟ್ಟಿ ಮಾಡಿದೆ. ಆ ಕೆಲಸಗಳಿಗಾಗಿ ನಡೆಸಿದ ಸಭೆಗಳು, ಮೆರವಣಿಗೆಗಳು, ಧರಣಿಗಳು, ರಸ್ತೆ ತಡೆಗಳು, ಕೊಂಡೊಯ್ದ ನಿಯೋಗಗಳು, ನಿರಂತರ ಅನುಸರಣ ಕಾರ್ಯಗಳು, ಚಳವಳಿಗಳ ಸಂದರ್ಭದಲ್ಲಿ ನಡೆದ ಬಂಧನಗಳು - ಇವನ್ನೆಲ್ಲ ವಿವರಿಸುವುದು ಸದ್ಯಕ್ಕೆ ಅಪ್ರಸ್ತುತ. ಅನುಸರಣ ಕಾರ್ಯ ಪತ್ರಿಕೆಗಳಲ್ಲಿ ಪ್ರಕಟವಾಗತಕ್ಕದ್ದು ಅಲ್ಲ. ಮಂತ್ರಿಗಳ ಅಧಿಕಾರಿಗಳ ಶಾಸಕರ ಮನೆ ಕಚೇರಿಗಳಲ್ಲಿ ಅವರಿಗಾಗಿ ಕಾಯುವುದು, ಬೇಸರವಿಲ್ಲದೆ ಮನವಿ ಮಾಡಿಕೊಳ್ಳುವುದು, ಒತ್ತಾಯ ಹಾಕುವುದು, ಪತ್ರ ಮುಖೇನ ಜ್ಞಾಪಿಸುವುದು, ಮತ್ತೆ ಮತ್ತೆ ಭೇಟಿ ಮಾಡುವುದು ಇತ್ಯಾದಿಗಳನ್ನು ಅದು ಒಳಗೊಂಡಿದೆ. ಇಂತಹ ಅನುಸರಣ ಕಾರ್ಯಗಳು ನಮಗೆ ಸಂತೋಷ ತಂದಿವೆ, ಫಲ ನೀಡಿವೆ. (ವಿವರಗಳಿಗೆ ಆಸಕ್ತರು ರಾ.ನಂ. ಚಂದ್ರಶೇಖರ್ ಅವರ "ಕನ್ನಡ ಶಕ್ತಿ", "ಕನ್ನಡ ಚಳವಳಿ : ಸಾಹಿತಿಗಳ ಕಲಾವಿದರ ಬಳಗ", "ಕನ್ನಡ ಹೋರಾಟಗಳು - ಒಂದು ನೋಟ" ಎಂಬ ಕೃತಿಗಳನ್ನು ನೋಡಬಹುದು)

ಮೇಲಿನ ಆ ಎಲ್ಲ ಅಂಶಗಳನ್ನು ಕೇವಲ ಹೆಸರಿಸಿಯಾದರೂ ಓದುಗರ ಗಮನಕ್ಕೆ ತರುವುದು ಅಗತ್ಯವಾಗಿತ್ತು. ಕಾರಣ ಸ್ಪಷ್ಟವಾಗಿದೆ. ಹಂಪಿಗೆ ಹೋಗಿ ಎರಡು ಬಾರಿ ಸಂಕಲ್ಪಗಳನ್ನು ಕೈಗೊಂಡದ್ದರ ಉತ್ಸಾಹದ ಫಲವಾಗಿ ನಾನು ಹಲವು ಕನ್ನಡಪರ ಕೆಲಸಗಳನ್ನು ಮಾಡಿದ್ದನ್ನು ಹೇಳಿಕೊಳ್ಳಲೇಬೇಕು. ("ನಾನು" ಎಂದು ಹೇಳಿಕೊಂಡರೂ ನೂರಾರು ಜನರ ಜೊತೆ ಸೇರಿ ಕೆಲಸಮಾಡಿದ್ದೇನೆ ಎಂಬುದನ್ನೂ ಹೇಳಿಕೊಳ್ಳಲೇಬೇಕು). ನನ್ನ ಸ್ವಯಂ ನಿವೃತ್ತಿ ವಿಫಲವಾಗಲಿಲ್ಲ. ಹಾಗೆ ಹೇಳಿಕೊಳ್ಳುವಾಗ, ಎಲ್ಲೂ ಅಪ್ಪಿ ತಪ್ಪಿಯೂ ಅಹಂಕಾರ ಸುಳಿಯದಂತೆ ನೋಡಿಕೊಂಡಿದ್ದೇನೆ.

ಹಾಗೆ ಸುಳಿಯಲು ಸಾಧ್ಯವೇ ಇಲ್ಲ. ಉತ್ಪ್ರೇಕ್ಷೆಯಿಲ್ಲದೆ, ಸಂಕೋಚವಿಲ್ಲದೆ ಹೇಳಿಕೊಳ್ಳುತ್ತಿದ್ದೇನೆ - ಎಂತಹ ಸಂದರ್ಭದಲ್ಲೂ ಎಂತಹುದೇ ಶ್ರಮಕ್ಕೂ ಸಿದ್ಧವಾಗಿರಲು ಮನಸ್ಸನ್ನು ಸಿದ್ಧಪಡಿಸಿಕೊಂಡಿದ್ದೆ. ಶ್ರೇಷ್ಠ ಕಾರ್ಯಕರ್ತರ, ಸಹಾನುಭೂತಿ ಮನಸ್ಸುಳ್ಳ ಶ್ರೇಷ್ಠ ಸಾಹಿತಿಗಳ ಕಲಾವಿದರ ಪ್ರೀತಿಪೂರ್ವಕ ಸಹಕಾರ ದೊರಕಿದ್ದು ನನ್ನ ಕೆಲಸಗಳಲ್ಲಿ ನನಗೆ ಸಂತೋಷ ಚೈತನ್ಯವೆರಡನ್ನೂ ತಂದಿತು.

ಬಳಗ ಮತ್ತು ಕೇಂದ್ರಗಳ ಮೂಲಕ ಮಾಡಿದ ಕೆಲಸಗಳು ಎಷ್ಟೇ ಸಮಾಧಾನಕೊಟ್ಟರೂ ನನ್ನಲ್ಲಿ ತೀವ್ರ ಅತೃಪ್ತಿಯನ್ನು ಉಳಿಸಿದುವು. ಕಾರ್ಯಕರ್ತರು ದೊರಕಿದ್ದರು. ಆದರೆ ಮುಂದಿನ ಜವಾಬ್ದಾರಿಗಳನ್ನು ಹೊರಬಲ್ಲ ನಾಯಕತ್ವದ ಪ್ರಶ್ನೆ ನನ್ನನ್ನು ಕಾಡುತ್ತಿತ್ತು. (ಅದಕ್ಕೂ ಪ್ರಯತ್ನಪಟ್ಟು ವಿಫಲನಾದ ಕತೆಯೊಂದಿದೆ). ನನ್ನನ್ನು ಕಾಡುತ್ತಿದ್ದ ಸಮಸ್ಯೆ - "ಕನ್ನಡಿಗರನ್ನು ಎಚ್ಚರಿಸುವ" ಕೆಲಸ ಆಗಿದೆಯೇ? "ಆಗಿದೆ" ಎಂದು ನನ್ನನ್ನು ನಾನು ಸಮಾಧಾನಪಡಿಸಿಕೊಳ್ಳಲು ಸಾಕಷ್ಟು

ನೆಪಗಳಿದ್ದುವು. ಹಾಗೆ ಸಮಾಧಾನಪಟ್ಟುಕೊಂಡಿದ್ದರೆ ಅದು ನನ್ನ ದೌರ್ಬಲ್ಯದ ಸ್ಪಷ್ಟ ಕುರುಹೇ ಆಗುತ್ತಿತ್ತು. ನಾನೊಬ್ಬ ಹಲವು ವಿಷಯಗಳಲ್ಲಿ ತೀವ್ರ ಅತೃಪ್ತ. ನನ್ನ ಸ್ಥಾನ ಮಾನ ಆಸ್ತಿ ಬಗ್ಗೆ ಮಾತ್ರ ಪೂರ್ಣತೃಪ್ತ.

ವಿಧಾನಪರಿಷತ್ತಿನ ಸದಸ್ಯನೋ ಕನ್ನಡ ವಿಶ್ವವಿದ್ಯಾಲಯದ ಕುಲಪತಿ ಅಥವಾ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷನೋ ಆಗಬಹುತ್ತಿತ್ತು - ನಾನು ಬಯಸಿದ್ದಲ್ಲಿ. ಅಂತಹ ಸ್ಪಷ್ಟ ಸೂಚನೆಗಳೂ ಬಂದಿದ್ದುವು. ರಾಜ್ಯಸಭಾ ಸದಸ್ಯನಾಗಲು ಅಷ್ಟು ಸ್ಪಷ್ಟ ಸೂಚನೆ ಬರದಿದ್ದರೂ ಅಂತಹ ಅವಕಾಶವೂ ಇತ್ತು. ಇವಕ್ಕಿಂತ ಕನ್ನಡದ ಕಾರ್ಯಕರ್ತನಾಗಿ ನನ್ನ ಕನ್ನಡದ ಕೆಲಸ ಮುಖ್ಯವೆಂದು ಭಾವಿಸುವಲ್ಲಿ ಯಾವುದೇ ನನಗೆ ಅಡ್ಡಿಯಾಗಲಿಲ್ಲ.

★ ★ ★

ಈ ಮಧ್ಯೆ ನನ್ನ ಬದುಕಿನ ವೈಯಕ್ತಿಕ ನೋವೊಂದು ತೀರ ಜರ್ಝರಿತನನ್ನಾಗಿ ಮಾಡಿತ್ತು. ಕಫ, ನೆಗಡಿ, ನಿಶ್ಶಕ್ತಿಗಳು ನನ್ನ ದೇಹವನ್ನು ಎಡೆಬಿಡದೆ ಕಾಡಿದುವು. ನನಗೆ ಹದಿನೈದು ದಿನಗಳ ವಿಶ್ರಾಂತಿ ಅಗತ್ಯವೆಂದು ಭಾವಿಸಿದೆ. ಅದು 1997ರ ಜೂನ್ ಜುಲೈ ತಿಂಗಳು. ಹಂಪಿಯಲ್ಲಿ ಎರಡು ವಾರ ವಿಶ್ರಾಂತಿ ಪಡೆದು ಹಿಂದಿರುಗಬೇಕೆಂದು ನಿಶ್ಚಯಿಸಿ, ಮನೆಯವರಿಗೆ ಅದನ್ನು ತಿಳಿಸಿ, 14.8.97ರ ರಾತ್ರಿ ಬೆಂಗಳೂರಿನ ರೈಲಲ್ಲಿ ಹೊರಟೆ. ಮುಂದೆ ನಡೆದುದನ್ನು 1997ರ ಅಕ್ಟೋಬರಿನಲ್ಲಿ ನಾನು ಅಚ್ಚು ಮಾಡಿಸಿ ಹಂಚಿದ ಕಿರುಪುಸ್ತಿಕೆ (ಐದುಸಾವಿರ ಪ್ರತಿ) ಸಂಕ್ಷಿಪ್ತವಾಗಿ ತಿಳಿಸುತ್ತದೆ. (ಆ ಕಿರುಕೃತಿ ಇದು)

★ ★ ★

## ಹಂಪಿಯಲ್ಲಿ "ಜಲಪ್ರವೇಶ" - ಹಿನ್ನೆಲೆ, ಮುನ್ನೆಲೆ

**ಇದಿಗೆ (23.10.97) ಸರಿಯಾಗಿ ಎರಡು ತಿಂಗಳ ಹಿಂದೆ ನಾನು ಹಂಪಿಯಲ್ಲಿ ಜಲಪ್ರವೇಶ ಮಾಡಿದ್ದುದು (23.8.97, ಶನಿವಾರ, ಮಧ್ಯಾಹ್ನ 2.30) ಪತ್ರಿಕೆಗಳಲ್ಲಿ ಅಲ್ಲಿ ಇಲ್ಲಿ ಸುದ್ದಿಯಾದುದರಿಂದ ನಾನು ಒಂದು ಸಂಕ್ಷಿಪ್ತ ಸ್ಪಷ್ಟೀಕರಣವನ್ನು ಪತ್ರಿಕೆಗಳಿಗೆ ನೀಡಬೇಕಾಯ್ತು. ಆದರೂ ನನ್ನ ಆಪ್ತರು, ಪರಿಚಯ ಇರುವ ಇಲ್ಲದಿರುವ ಹಲವು ಕನ್ನಡಾಭಿಮಾನಿಗಳು ಈ ಬಗ್ಗೆ ನನ್ನನ್ನು ಪ್ರಶ್ನಿಸುತ್ತಲೇ ಇದ್ದಾರೆ - ಪತ್ರಗಳ ಮೂಲಕ, ಮಾತಿನ ಮೂಲಕ. ಅವರೆಲ್ಲರ ಸ್ನೇಹ, ಪ್ರೀತಿಗಳು ನನ್ನನ್ನು ಕಲಕಿವೆ. ಅವರೆಲ್ಲರಿಗೂ ನಾನು ಆಭಾರಿಯಾಗಿದ್ದೇನೆ. ಹಂಪೆಯ ಆ ಘಟನೆಯ ಹೆಚ್ಚಿನ ವಿವರಗಳು ಸಾರ್ವಜನಿಕರಿಗೆ ತಿಳಿಯುವದು ಅಗತ್ಯವಾಗಿದೆ. ಈ ಹಿನ್ನೆಲೆಯಲ್ಲಿ ಹಂಪಿಯಿಂದ ಪ್ರೊ. ಎಲ್.ಎಸ್. ಶೇಷಗಿರಿರಾಯರಿಗೆ ಬರೆದ ಪತ್ರ ಮತ್ತು ಇತರ ಅಂಶಗಳನ್ನು ಇಲ್ಲಿ ಹಾಗೆಯೇ ಕೊಡುತ್ತೇನೆ.**

**ಹಂಪಿ**
**20.8.97**

ಹಿರಿಯ ಮಿತ್ರರಾದ ಪ್ರೊ ಎಲ್.ಎಸ್. ಎಸ್. ಅವರಲ್ಲಿ ನಮಸ್ಕಾರಗಳು.

ಇಲ್ಲಿಗೆ ನಾನು 15ನೇ ತಾರೀಖು ಬಂದೆ. ಗಾಳಿ ಚಳಿಯಿಂದಾಗಿ ನೆಗಡಿ ಕಫ ಆಯ್ತು. ಜ್ವರ ಬಂತು. ಔಷಧಿಯಿಂದ ಜ್ವರ ನಿವಾರಣೆಯಾಯ್ತು. ಹಿಂದಿನಂತೆ ಸ್ವಲ್ಪ ನಿಶ್ಯಕ್ತಿ - ಆದರೂ ಹಂಪಿಯಲ್ಲಿ ನಾನಿರುವ ಜಾಗದಿಂದ ಸ್ವಲ್ಪ ದೂರ ಹೋಗಿ ಬರುವಷ್ಟು ಶಕ್ತಿ ಇದ್ದೇ ಇದೆ.

ಇಲ್ಲಿ ನಾನು ಉಳಿದಿರುವ ಜಾಗ ನದಿಯ ದಂಡೆಯ ಮೇಲಿದೆ. ನನ್ನ ಕೊಠಡಿ ಶ್ರೀ ಶಿವಾನಂದ ಯೋಗಾಶ್ರಮದ ಮೇಲಿನ ಮಹಡಿಯ ಕೊಠಡಿ. ಪೂಜ್ಯ ಶ್ರೀ ಸದಾಶಿವಯೋಗಿಗಳಿಗೆ ನನ್ನನ್ನು ಕಂಡರೆ ತುಂಬು ಪ್ರೀತಿ. ಏಕಾಂಗಿ - ಆದರೂ ಜನಗಳ ಜೊತೆ ಕಷ್ಟ ಸುಖಗಳಲ್ಲಿ ಬೆರೆಯುವವರು. ಬಿ.ಕಾಂ.ವರೆಗೆ ಓದಿದ್ದಾರೆ (ಬೆಂಗಳೂರು ಆರ್.ಸಿ. ಕಾಲೇಜಿನಲ್ಲಿ). ಆಶ್ರಮದ ಕೊಠಡಿಯ ಕೆಳಗೆ ನದಿ ಹರಿಯುತ್ತದೆ. ಹಗಲೆಲ್ಲಾ ರಾತ್ರಿಯೆಲ್ಲಾ ನದಿಯ ಮೊರೆತ, ಬಟ್ಟೆ ಒಗೆವ ಶಬ್ದ. ಕೇಕೆಯೊಡನೆ ಜನ ನೀರಿಗೆ ಧುಮುಕುವ ಶಬ್ದ-ಸಂಭ್ರಮ, ಭಜನೆ ಸಮೇತ ಜನ ನದಿಗೆ ಬರುವ ಸಂಭ್ರಮ ಎಲ್ಲವೂ ಕಿಟಕಿಯಲ್ಲಿ. ನಿಂತರೆ ನೇರ ಕೆಳಗೆ ಕಾಣಿಸುತ್ತದೆ. ಇನ್ನೊಂದು ಬದಿಯಲ್ಲಿ ತೋಟ, ಅಲ್ಲೇ ಆಚೆ ವಿರೂಪಾಕ್ಷನ ಗುಡಿ. ನಾನು ಎರಡು ನಿಮಿಷ ನಡೆದರೆ ಸಾಕು, ವಿರೂಪಾಕ್ಷನ ದರ್ಶನ. ಚೆಲುವಿನ ತಾಣ. ಈ "ಲಾಜಿಂಗ್" ಲಕ್ಷ ರೂಪಾಯಿ ಕೊಟ್ಟರೂ ಸಿಗದು. ನಾನು ಕುಳಿತಿರುವ ಜಾಗಕ್ಕೆ ಕಿಟಕಿಯಲ್ಲಿ ನದಿಯ ಇನ್ನೊಂದು ಪಾರ್ಶ್ವದ ಬೆಟ್ಟ ಸಾಲು ಕಾಣಿಸುತ್ತದೆ. ಆ ಬೆಟ್ಟದ ಸಾಲು ಒಂದು ದ್ವೀಪದ ಮಧ್ಯೆ ಇದೆ. ಅದರಾಚೆ ನದಿಯ ಒಂದು ಚಿಕ್ಕ ಸೀಳು. ದ್ವೀಪದ ಹೆಸರು "ವಿರೂಪಾಪುರ ಗಡ್ಡೆ" : ಇಲ್ಲಿರಲು "ಪಡೆದು ಬಂದಿರಬೇಕು".

ಇಂಥ ಕಡೆ ಹದಿನೈದು ದಿನ ಹೆಚ್ಚು ಮಾತನಾಡದೆ ನನ್ನನ್ನು ನಾನು ವಿಮರ್ಶಿಸಿಕೊಳ್ಳುತ್ತ, ಆತ್ಮಶೋಧ ಮಾಡಿಕೊಳ್ಳುತ್ತ ನೈತಿಕ ಶಕ್ತಿಯನ್ನು ಬೆಳೆಸಿಕೊಂಡು ಮುಂದಿನ ಕನ್ನಡದ ಕೆಲಸಗಳ ಬಗ್ಗೆ ಮಾರ್ಗ ಕಂಡುಕೊಳ್ಳುವ ಉದ್ದೇಶವಿಟ್ಟುಕೊಂಡು ಬೆಂಗಳೂರಿಂದ ಹೊರಟೆ. ಸೆಪ್ಟೆಂಬರ್ ಅಕ್ಟೋಬರ್ ಬೆಂಗಳೂರಿನಲ್ಲಿ ನನ್ನ ಮನೆಯ ಒಳವ್ಯವಸ್ಥೆ, ಅಸ್ತವ್ಯಸ್ತ ಕಡತಗಳ ಒಪ್ಪ ಓರಣ (ಸಾಧ್ಯವಾದರೆ), ನನ್ನ ಕೃತಿಗಳ ಸಮಗ್ರ ಸಂಪುಟ ಪ್ರಕಟಣೆ (ಬೆಳಗಾವಿ ರುದ್ರಾಕ್ಷಿ ಮಠ - ನಾಗನೂರು ಮಠ, ಮುಂದೆ ಬಂದಿದೆ), ಶಕ್ತಿ ಕೇಂದ್ರದ ಮುಂದಿನ ವ್ಯವಸ್ಥೆ ಎಲ್ಲ ಮುಗಿಸಿ, ನವೆಂಬರ್ 1 ರಿಂದ ಹಂಪಿಯಲ್ಲಿ ಆಮರಣಾಂತ ಧರಣ ಇತ್ಯಾದಿಗಳ ಬಗ್ಗೆ ಯೋಚಿಸಲು, ದೃಢ ನಿರ್ಧಾರ ಕೈಗೊಳ್ಳಲು, ಭಕ್ತಿ ಆಧ್ಯಾತ್ಮಗಳ ತವರಾದ ಹಂಪಿಯಲ್ಲಿ ಆತ್ಮ ಚಿಂತನ ಮಾಡಲು ಯೋಚಿಸಿದ್ದೆ. ಆಗಸ್ಟು 15ರ ಬೆಳಗಿನ ಜಾವ ರೈಲು ಇನ್ನೂ ಬಳ್ಳಾರಿ ಸೇರಿರಲಿಲ್ಲ. ನನ್ನ ಮುಂದಿನ ಯೋಚನೆಗಳು ನೆನಪಿಗೆ ಬಂದುವು. ನನ್ನ ಕುಗ್ಗುತ್ತಿರುವ ಆರೋಗ್ಯ, ಮನಸ್ಸು ಇವುಗಳಿಂದಾಗಿ ಅವೆಲ್ಲ ಸಾಧ್ಯವೇ ಎನ್ನಿಸಿ, ನನ್ನ 'ಪ್ರತಿಜ್ಞೆ' ಎಲ್ಲಿ ಭಂಗವಾಗುವುದೋ ಎಂಬ ಭಯವಾಯ್ತು.

ಆ ಪ್ರತಿಜ್ಞೆ ಎಂಟು ಒಂಬತ್ತು ವರ್ಷಗಳ ಹಿಂದೆ ಹಂಪಿಯಲ್ಲಿ ಹಲವು ಜನರ ಮುಂದೆ ವಿರೂಪಾಕ್ಷ ಸ್ವಾಮಿಯ ಮುಂದೆ ಕೈಗೊಂಡಿದ್ದು. "ನಾನು ಇಡೀ ಕರ್ನಾಟಕದಲ್ಲಿ ಒಂದು ಕನ್ನಡಪರ ಎಚ್ಚರ ಮೂಡಿಸುತ್ತೇನೆ. ಇಲ್ಲವಾದಲ್ಲಿ ಇಲ್ಲೇ ತುಂಗಭದ್ರೆಯಲ್ಲಿ ನನ್ನನ್ನು ನಾನು ಒಪ್ಪಿಕೊಳ್ಳುತ್ತೇನೆ." ಇದು ರಹಸ್ಯವೇನಲ್ಲ; ಬೆಂಗಳೂರಲ್ಲಿ ಹಲವರಿಗೂ ಗೊತ್ತು, ನಿಮಗೂ ತಿಳಿದಿರಬಹುದು. ಆ ಪ್ರತಿಜ್ಞೆ ಅದು ದೃಢ ಪ್ರತಿಜ್ಞೆ, ದೀರ್ಘವಾಗಿ ಯೋಚಿಸಿ ಕೈಗೊಂಡ ಪ್ರತಿಜ್ಞೆ, ಎಂದೋ ಭಾವಾವೇಶದಲ್ಲಿ ಕೈಗೊಂಡ ಪ್ರತಿಜ್ಞೆ ಅಲ್ಲ. ಅದನ್ನು ಹಲವರ ಮುಂದೆ

ಕೈಗೊಳ್ಳಲು ಕಾರಣ ಸ್ಪಷ್ಟವಾಗಿದೆ. ನಾನೊಬ್ಬನೇ ಕೈಗೊಂಡಿದ್ದರೆ ದುರ್ಬಲ ಗಳಿಗೆಯಲ್ಲಿ ಅದನ್ನು ಮರೆತು ಹಾಯಾಗಿರುವ ಅಪಾಯವೂ ಇರುತ್ತಿತ್ತು. ಆ ಭಯದಿಂದ ಮುಕ್ತನಾಗಲು ನಾನು ಕೈಗೊಂಡ ಮಾರ್ಗ ಅದಾಗಿತ್ತು.

ಎಚ್ಚರ ಮೂಡಿಸಲು ಸಂಘಟನೆ ಕಟ್ಟಿದೆ (ನ್ಯಾಯವಾಗಿ 'ಕಟ್ಟಿದೆವು' ಎಂದಿರಬೇಕು). ಕನ್ನಡದ ಕೆಲಸಗಳು ಆದುವು, ಕೆಲವು ಆದುವು; ಸಾರ್ವತ್ರಿಕ ಎಚ್ಚರ ಮೂಡಿಸಲಾಗಲಿಲ್ಲ. ಸಂಘಟನೆ ಕಟ್ಟಿ ಬೆಳೆಸಬೇಕಾದರೆ ಹಣಬೇಕು. ಹಣ ಶ್ರೀಮಂತರಿಂದ ಬರಬೇಕು. ಶ್ರೀಮಂತರನ್ನು ನಾನು ಕೇಳುವುದೇ ? ಅವರಿಂದ ಹಣ ಪಡೆದರೆ, ಅನ್ಯಾಯ ಶೋಷಣೆ ಪಾಪಗಳ ವಿರುದ್ಧ ಮಾತನಾಡುವ ನೈತಿಕ ಶಕ್ತಿಯನ್ನೇ ಕಳೆದುಕೊಂಡಂತೆ. ಶ್ರೀಮಂತರನ್ನು ಹೊಗಳಬೇಕು. ಇದೆಲ್ಲಾ ಸಾಧ್ಯವೇ ? ನನ್ನಿಂದ ಬಲಿಷ್ಠ ರಾಜ್ಯಮಟ್ಟದ ಸಂಘಟನೆ ಕಟ್ಟಲಾಗಲಿಲ್ಲ. ಬರೀ ಹಣದ ಕೊರತೆ ಅಲ್ಲ, ಸಂಘಟನೆ ಕಟ್ಟಬೇಕಾದ ಕೆಲವು ಗುಣಗಳ ಕೊರತೆಗಳೂ ನನ್ನಲ್ಲಿವೆ. ಅದಿರಲಿ. ಯಾವುದನ್ನು ಸಂಘಟನೆ ಮೂಲಕ ಮಾಡಲು ಸಾಧ್ಯವಾಗಲಿಲ್ಲ, ಅದನ್ನು ವ್ಯಕ್ತಿಯಾಗಿ ನಾನು ಮಾಡಬೇಕು ಎಂದು ಕೆಲ ತಿಂಗಳಿಂದ ಯೋಚಿಸುತ್ತಿದ್ದೆ. 'ಪ್ರತಿಜ್ಞೆ' ಜ್ಞಾಪಕವಿತ್ತು. ಬೆಂಗಳೂರು ಬಿಟ್ಟು ನಿಜವಾದ 'ಜಂಗಮ'ನಂತೆ ಊರಿಂದ ಊರು ತಿರುಗುತ್ತ ಜಗತ್ತಿನ ದುಃಖದಲ್ಲಿ ಭಾಗಿಯಾಗುತ್ತ ಜನರಿಗೆ ಸಾಂತ್ವನ ಹೇಳುತ್ತ ಹಾಗೆಯೇ ಕನ್ನಡದ ದ್ವೇಷರಹಿತ ಅಭಿಮಾನವನ್ನು ಮೂಡಿಸುತ್ತ ಕೆಲಕಾಲ ಸಂಚರಿಸಿ ಜನಜಾಗೃತಿ ಮಾಡಬೇಕೆಂಬ ಕನಸು ಕಾಣುತ್ತಿದ್ದೆ. ಅದನ್ನು ಗೊರುಚ ಮತ್ತು ಡಾ. ಎಚ್.ಎಂ. ಅವರಿಗೂ ಹೇಳಿದ್ದೆ. ಆದರೆ ನನ್ನ ಕ್ಷೀಣಿಸುತ್ತಿರುವ ಆರೋಗ್ಯ ನೋಡಿದರೆ ಎಲ್ಲಿ ನಾನು ಹಾಸಿಗೆ ಹಿಡಿದು ಪರಾವಲಂಬಿಯಾಗಿ ನೋವು ಅನುಭವಿಸುತ್ತ, ಇನ್ನೊಬ್ಬರ ಅವಲಂಬಿಯಾದೆ ಎಂಬ ಹೆಚ್ಚಿನ ನೋವು ತಿನ್ನುತ್ತ ನನ್ನ ಪ್ರತಿಜ್ಞೆಯಿಂದ ವಂಚಿತನಾಗುವೆನೋ ಎಂಬ ಭಯ ಕಾಡಲು ಆರಂಭವಾಯ್ತು. ಮಳೆಗಾಲ - ಚಳಿಗಾಲದಲ್ಲಿ ಶೀತ - ನೆಗಡಿ - ಕಫ ಇವುಗಳಿಂದ ಬಿಡುಗಡೆ ಇಲ್ಲ. ಇದ್ದುದರಲ್ಲಿ ಬೇಸಿಗೆಯ ಮೂರು ನಾಲ್ಕು ತಿಂಗಳು ಪರವಾ ಇಲ್ಲ. ಆದರೆ ನನ್ನನ್ನು ಬಾಧಿಸುತ್ತಿರುವ ವೈಯಕ್ತಿಕ ನೋವು ಆಳದಲ್ಲಿ ತನ್ನ ವಿನಾಶ ಕಾರ್ಯವನ್ನು ಮಾಡುತ್ತಲೇ ಇದೆ. ನಿದ್ದೆ ಇಲ್ಲ. ಯಾವ ಆಹಾರವೂ ರುಚಿಸದು, ಮಲಗಿರಬೇಕೆಂದರೆ ಹಾಗೇ ಇರಬೇಕೆಂಬ ಅಪೇಕ್ಷೆ. ಕನ್ನಡದ ಕೆಲಸಗಳಲ್ಲಿ ಉತ್ಸಾಹ ಆಸಕ್ತಿ ಉಳಿಸಿದ್ದು ಆ "ಪ್ರತಿಜ್ಞೆ" ಮಾತ್ರ.

ಈಚಿನ ದಿನಗಳಲ್ಲಿ "ಯಾವುದನ್ನು ಸಂಘಟನೆಯಿಂದ ಮಾಡಲು ಸಾಧ್ಯವಾಗಿಲ್ಲ, ನನ್ನ ಸಾವಿನಿಂದ ಒಮ್ಮೆಗೇ ಜನರ ಮನಸ್ಸಿನಲ್ಲಿ ಭುಗ್ಗನೆ ಏಕಕಾಲಕ್ಕೆ ಅಭಿಮಾನ ಮೂಡಿಸುವುದು ಸಾಧ್ಯವಾಗದೇ" ಎಂಬ ಕಲ್ಪನೆ (ಕವಿ ಕಲ್ಪನೆ) ಮೂಡಲು ಆರಂಭವಾಯ್ತು. ನಿಮಗೆ ತಿಳಿದಿದೆ. ನಾನು ಸಂಶೋಧಕನಂತೆಯೇ ಕಲ್ಪನಾ ಜೀವಿ. ವಸ್ತುನಿಷ್ಠ ವಿಶ್ಲೇಷಕನಂತೆಯೇ ಭಾವುಕನೂ ಕೂಡ. ಮೇಲೇರಿದರೂ ವಾಸ್ತವದ ಮೇಲೆ ಕಣ್ಣು ಇರುವವನು. ಅದು ಆಗುತ್ತೋ ಇಲ್ಲವೋ - "ಪ್ರತಿಜ್ಞೆ"ಯನ್ನಂತೂ ಪೂರೈಸಬೇಕು. ಆತ್ಮಾರ್ಪಣೆ ಸೋಲನ್ನು ಒಪ್ಪಿಕೊಂಡಂತಲ್ಲ, ಸೋಲಿಗೆ ಹಾಕುವ ಸವಾಲು ಅದು.

ಅಂತಿಮವಾಗಿ 'ಸೋಲು' ಯಾರದು? ನನ್ನದೇ? ಎಲ್ಲ ಕನ್ನಡಿಗರದೇ? ಆ ಪ್ರಶ್ನೆಯಂತೂ ಇದ್ದೇ ಇದೆ.

ಆಗಸ್ಟ್ ಹದಿನೈದರ ಬೆಳಗಿನ ಜಾವ ನನಗೆ ಅನ್ನಿಸಿತು. ಬಲಿದಾನವನ್ನು ಮುಂದಕ್ಕೆ ಹಾಕುವುದು ಬೇಡ. ನಿಶ್ಚಿತ ಕಾರ್ಯಕ್ರಮದಂತೆ 31ರ ತನಕ ಇಲ್ಲಿದ್ದು ಸೆಪ್ಟೆಂಬರ್ 1ರಂದು

ಗದಗಿಗೆ ಹೋಗಿ ಅಖಿಲ ಕ.ರಾ.ರ.ಸಾ. ಕ್ರಿಯಾ ಸಮಿತಿಯ ಸಭೆಯಲ್ಲಿ ಭಾಗವಹಿಸಿ, ಅಂದು ರಾತ್ರಿ ಹುಬ್ಬಳ್ಳಿಯಿಂದ ಹೊರಟು 2ನೇ ತಾರೀಖು ಬೆಂಗಳೂರಿಗೆ ಬರುವುದು. ಹಂಪಿಯಲ್ಲಿ ಆತ್ಮಾರ್ಪಣೆ ಮಾಡಿಕೊಂಡರೆ ಸುಳ್ಳು ಹೇಳಿದಂತೆ ಅಲ್ಲವೇ ಎಂಬ ಪ್ರಶ್ನೆ ಕಾಡಿದರೂ ಅದಕ್ಕಾಗಿ ವಿರೂಪಾಕ್ಷನ ಕ್ಷಮೆ ಕೇಳಿದರಾಯಿತು ಎಂದು ಸಮಾಧಾನ ಕೇಳಿಕೊಂಡೆ. ಆ ಬಗ್ಗೆ ಎಲ್ಲರ ಕ್ಷಮೆ ಕೇಳುತ್ತೇನೆ. ನನ್ನ ವೈಯಕ್ತಿಕ ನೋವಿನ ಪರಿಹಾರದ ಧ್ವನಿಯು ಇರುವ ನನ್ನಿಂದ ಹೊರಡುವುದಕ್ಕಿಂತ ಇಲ್ಲದ ನನ್ನಿಂದ ಹೊರಟರೆ ಹೆಚ್ಚು ಪರಿಣಾಮಕಾರಿ ಎಂಬ ಆಲೋಚನೆಯೂ ಸೇರಿತು.

ಬದುಕಿದ್ದಾಗ ಸಾಧಿಸಲಾಗಲಿಲ್ಲ, ಬದುಕಿನಿಂದ ದೂರ ಹೋಗಿ ಸಾಧಿಸ ಬಯಸಿದ್ದೇನೆ. (ನನ್ನಿಂದ) ಶಕ್ತಿ ಕೇಂದ್ರದಿಂದ ಮಾಡಲಾಗದ್ದನ್ನು ಆತ್ಮಬಲಿ ಮೂಲಕ ಮಾಡಲು ಹೊರಟದ್ದೇನೆ. (ಈ ಪ್ಯಾರಾ ಪತ್ರ ಬರೆದು ಮುಗಿಸಿದ ಮೇಲೆ ಈ ಜಾಗದಲ್ಲಿ ಸೇರಿಸಿದ್ದು).

ನನ್ನ ಆಲೋಚನೆ ಬಂದದ್ದೇ 2-3 ದಿನ ಅದು ಎದ್ದರೆ ಬಿದ್ದರೆ ಭೂತದಂತೆ ಕಾಡಿತು. ಹಂಪಿಯ ಚೆಲುವು ಕಾಣಿಸಲಿಲ್ಲ, ನನ್ನನ್ನೂ ನನ್ನಂಥವನನ್ನೂ ಒಂದು ಭಯವಾಗಿ ಹೆದರಿಸಿತು. ಜೊತೆಗೆ ಶೀತ-ಜ್ವರ-ನಿಶ್ಶಕ್ತಿ, ಹಾಸುಗೆಯಲ್ಲಿ ಹೊರಳಾಡಿದೆ. ನನ್ನ ಕೊಠಡಿ ಕೆಳಗೇ ನದಿ - ನನ್ನ ಮುಕ್ತಿಯ ದಾರಿ - ಪವಿತ್ರ ತುಂಗಭದ್ರೆ. "ಕ್ಷುದ್ರಂ ಹೃದಯ ದೌರ್ಬಲ್ಯಂ, ತಕ್ತ್ವ ಉತ್ತಿಷ್ಠ ಪರಂತಪ" ; "ಅಭೀಃ" ; "ಏಳು ಎದ್ದೇಳು, ಗುರಿ ಮುಟ್ಟುವವರೆಗೂ ನಿಲ್ಲದಿರು" ; "ಅಭೀಃ" :

"ಚಂಡಿ ಚಾಮುಂಡಿ ಪೇಳ್ ಬೇಕಾದುದೇನು?"
"ಗಂಡುಸಾದರೆ ನಿನ್ನ ಬಲಿ ಕೊಡುವಿಯೇನು?"

"ತುಳೀ ತುಳೀ ಹತ್ತಿ ತುಳಿ ಅಹಂಕಾರವಳಿಯಲಿ" ಎಂಬಂತಹ ಆರ್ಯೋಕ್ತಿ ಕವಿಸೂಕ್ತಿಗಳನ್ನು ನೆನಪಿಗೆ ತಂದುಕೊಂಡೆ. ಶರಣರ ಧೀರ ಬದುಕು, ಮಾತು, ತ್ಯಾಗ ನೆನಪಿಗೆ ಬಂದುವು. ಹರಿದಾಸರು ಜ್ಞಾಪಕಕ್ಕೆ ಬಂದರು. ಶ್ರೇಷ್ಠ ಮೌಲ್ಯಕ್ಕಾಗಿ ತಮ್ಮನ್ನು ತಾವು ಅರ್ಪಿಸಿಕೊಂಡ ಧೀರ ಚೇತನದ ಚೇತನಗಳನ್ನು ಜ್ಞಾಪಿಸಿಕೊಂಡೆ. ಸಾವನ್ನು ತೃಣವಾಗಿ ಕಂಡ ಅಕ್ಕ ಮಹಾದೇವಿ ನೆನಪಾದಳು. ನನ್ನ ಬದುಕು ರೂಪಿತವಾದದ್ದೇ ಅಂತಹ ಮಹನೀಯರ ಬೋಧನೆಯಿಂದ, ಶ್ರೇಷ್ಠಗುರುಗಳ ಮಾರ್ಗದರ್ಶನದಿಂದ. ಎರಡು ಮೂರು ದಿನಗಳ ಬಳಿಕ ಭಯ, ಅಳುಕು, ಆತಂಕ ಕಡಮೆ ಆಯಿತು. ಮನಸ್ಸು ದೃಢವಾಗುತ್ತಾ ಬಂದಿತು.

ಆತ್ಮಾರ್ಪಣೆಯೂ ಕೂಡ ಒಂದು ಕ್ಷಣದ ನಿರ್ಧಾರವಾಗಬಾರದು. ಪ್ರತಿಜ್ಞೆಯ ಪೂರೈಕೆ ಅನಿವಾರ್ಯವಿದ್ದಲ್ಲಿ ಇದ್ದೇ ಇದೆ ಎಂದು, ಬದುಕಿ ಉಳಿದರೂ ಏನು ಪರ್ಯಾಯಗಳು ಎಂಬುದನ್ನು ಯೋಚಿಸಿದೆ. ನನ್ನ ಶಕ್ತಿಯ ಚೌಕಟ್ಟಿನೊಳಗೆ ಯಾವುದೇ ಪರ್ಯಾಯ ನನಗೆ ಕಾಣಲಿಲ್ಲ. ಇನ್ನು ಕೆಲವು ಕಾಲ ಬದುಕುವ ಆಸೆಗಾಗಿ ಯಾವುದೇ ಕಲ್ಪಿತ ಪರ್ಯಾಯದ ಬೆನ್ನು ಹೋಗುವ ಬಗ್ಗೆ ಎಚ್ಚರ ವಹಿಸಿದೆ. ನನ್ನ ನಿರ್ಧಾರ ದೃಢವಾಯಿತು.

ನನ್ನ 'ಜಲಪ್ರವೇಶ' ಆತ್ಮಹತ್ಯೆ ಅಲ್ಲ (Suicide), ಆತ್ಮಬಲಿ (Self-immolation). 'ಆತ್ಮಹತ್ಯೆ' ಒಂದು ಪಾಪ, ವ್ಯಕ್ತಿ ಯಾವುದೋ ಕ್ಷಣಿಕ ಗಳಿಗೆಯಲ್ಲಿ ಕೈಗೊಳ್ಳುವ ವೈಯಕ್ತಿಕ ನಿರ್ಧಾರ, ದುರ್ಬಲಗಳಿಗೆಯಲ್ಲಿ ನಡೆಯುವ ಕ್ರಿಯೆ ಅದು. ಆ ಗಳಿಗೆ ಮುಗಿದ ಮೇಲೆ ವ್ಯಕ್ತಿ ಬದುಕಬಹುದು. 'ಆತ್ಮಬಲಿ'ಯೂ ವ್ಯಕ್ತಿ ತನ್ನನ್ನು ತಾನು ಕೊಂದುಕೊಳ್ಳುವುದೇ ಹೌದಾದಾರೂ,

ಅದು ದುರ್ಬಲ ಮನಸ್ಸಿನ ಕ್ಷಣದ ನಿರ್ಧಾರ ಅಲ್ಲ. ಅದರ ಹಿಂದೆ ಒಂದು ಧ್ಯೇಯ ಸಾಧನೆಯಿರುತ್ತದೆ. ವ್ಯಕ್ತಿ ತನ್ನ ನಿರ್ಧಾರದಿಂದ ಹಿಂದೆ ಸರಿಯಲು ಅವಕಾಶಗಳಿರುತ್ತವೆ. ಅದರಲ್ಲಿ ತನ್ನ ಒಳಿತಿನಂತೆಯೇ ಲೋಕ ಕಲ್ಯಾಣದ ಉದ್ದೇಶವೂ ಇರುತ್ತದೆ. ಈಚಿನ ಉದಾಹರಣೆ - ಪೊಟ್ಟಿ ಶ್ರೀರಾಮುಲು ಅವರದು ಆತ್ಮಹತ್ಯೆ ಅಲ್ಲ, 'ಆತ್ಮಬಲಿ'. ಈ ಸಂಗತಿ ಎಲ್ಲರಿಗೂ ತಿಳಿದಿರುವ ಸಂಗತಿ ಆದರೂ, ಉಲ್ಲೇಖ ಮಾಡಿದ್ದೇನೆ. ಭಾರತೀಯ ಪರಂಪರೆ ಆತ್ಮಹತ್ಯೆಯನ್ನು ಖಂಡಿಸಿದೆ, 'ಆತ್ಮಬಲಿ'ಗೆ ಅವಕಾಶ ನೀಡಿದೆ, ಅದನ್ನು ವೈಭವೀಕರಿಸದಿದ್ದರೂ.

ನನ್ನ ಆತ್ಮತ್ಯಾಗದ ಬಗ್ಗೆ ಎಂಟು ವರ್ಷಗಳಿಗೂ ಹಿಂದೆಯೇ ಹೆಚ್ಚು ಕಡಿಮೆ ನಿರ್ಧಾರವಾಗಿತ್ತು. ಕರ್ನಾಟಕದ ಸಮಗ್ರ ಜಾಗೃತಿ ಕೆಲಸವನ್ನು ನನ್ನಿಂದ ಮಾಡಲಾಗದಿದ್ದರೆ ಇದು ಆ ನಿರ್ಧಾರ. ಹಿಂದೆ ಸೂಚಿಸಿರುವಂತೆ ಅದು ಅನೇಕರಿಗೆ ತಿಳಿದೂ ಇದೆ. ಈ ಬಗ್ಗೆ ನನಗೆ ಅಳುಕು ಇಲ್ಲ, ಭಯ ಇಲ್ಲ. ಧ್ಯೇಯ ಸಾಧನೆಗಾಗಿ ನಾನು ಆತ್ಮತ್ಯಾಗ ಮಾಡುತ್ತಿದ್ದೇನೆ.

ಆತ್ಮತ್ಯಾಗಕ್ಕಾಗಿ ಆತ್ಮತ್ಯಾಗ ಅಲ್ಲ. ಕೇವಲ ಪ್ರತಿಜ್ಞಾ ಪೂರೈಕೆಗೂ ಅಲ್ಲ. ನಾನು ಬದುಕಿದ್ದಾಗ ಮಾಡಲಾಗದ್ದನ್ನು ಸತ್ತು ಮಾಡುತ್ತಿದ್ದೇನೆ. ನನ್ನದು ದೊಡ್ಡ ಕೆಲಸವೆಂದು ಭಾವಿಸುವ ದಡ್ಡ ನಾನಲ್ಲ. ಹೇಗೂ ಸಾಯಬೇಕು - ಒಂದೆರಡು ವರ್ಷ ಮುಂಚೆ ಸಾಯುತ್ತಿದ್ದೇನೆ. ಆ ಪ್ರಶ್ನೆ ಬೇರೆ. ಆದರೆ ಎಲ್ಲ ಕನ್ನಡಿಗರೂ ತಮ್ಮನ್ನು ತಾವು ಮುಕ್ತವಾಗಿ ಚಿಂತಿಸುವಂತೆ ಮಾಡುವುದು ನನ್ನ ಆತ್ಮತ್ಯಾಗದ ಉದ್ದೇಶ. ತಮ್ಮ ಆಲಸ್ಯದಿಂದ, ನಿರುತ್ಸಾಹದಿಂದ, ನಿರಭಿಮಾನದಿಂದ, ನಿಷ್ಕ್ರಿಯತೆಯಿಂದ ಕರ್ನಾಟಕದ ಸಂಪತ್ತು ಹೊರಗಿನವರಿಂದ ಲೂಟಿಯಾಗುತ್ತಿರುವ ಬಗ್ಗೆ ಕನ್ನಡದ ಜನ ನಾಚಿಕೆ ಪಟ್ಟುಕೊಳ್ಳುವಂತೆ ಮಾಡುವುದು ನನ್ನ ಉದ್ದೇಶ. ಬರೀ ನಾಚಿಕೆ ಪಟ್ಟುಕೊಳ್ಳುವುದು ಸಾಲದು; ತೇಜಸ್ವಿಗಳಾಗಿ, ವೀರರಾಗಿ, ಉತ್ಸಾಹಿಗಳಾಗಿ ಕರ್ನಾಟಕವನ್ನು ಉಳಿಸಿ ಬೆಳೆಸಲು ಸಮರ್ಥರಾದ ಯೋಧರನ್ನಾಗಿ ಮಾಡುವುದು. ನನ್ನ ಆತ್ಮತ್ಯಾಗ ಎಲ್ಲರ ಹೃದಯ ಗಹ್ವರಗಳಲ್ಲಿ ಫಳಕ್ಕನೆ ಮಿಂಚಿ ವಿದ್ಯುತ್ ಸಂಚಾರವುಂಟುಮಾಡಲಿ. ಹೆಚ್ಚಿನ ತ್ಯಾಗಕ್ಕೆ ಅವರನ್ನು ಸಿದ್ಧಗೊಳಿಸಲಿ.

ನನ್ನ ಲೇಖನ ಭಾಷಣವಾದೀತೆಂಬ ಭಯವಿದೆ. ನನ್ನದು ಸಂಕುಚಿತ ದೃಷ್ಟಿಯೆಂದು, ಬರೀ 'ಕನ್ನಡ ಕನ್ನಡ' ಎಂದು ಬಡಿದಾಡುವ ಬಾಯೆಂದು ಕೆಲವರು ಗೇಲಿ ಮಾಡಿದ್ದಾರೆ. ನಮ್ಮದು ಬರೀ ಭಾಷೆಯ ಹೋರಾಟ ಅಲ್ಲ, ಅದರ ನೆಪದಲ್ಲಿ ಬದುಕಿನ ಎಲ್ಲ ಕ್ಷೇತ್ರಗಳಿಗೂ ನಮ್ಮ ಚಳವಳಿ ವ್ಯಾಪಿಸಿದೆ. ನಿಮಗೆ ಚೆನ್ನಾಗಿ ತಿಳಿದ ವಿಷಯ. ಸ್ವತಂತ್ರ ದೂರದರ್ಶನ, ಮಹಿಷಿ ಆಯೋಗ - ವರದಿ, ಅದರ ಅನುಷ್ಠಾನಕ್ಕಾಗಿ ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಕನ್ನಡ ವಿಶ್ವವಿದ್ಯಾಲಯ, (ಮೂಲೆ ಗುಂಪಾಗಿದ್ದ ತಾಂತ್ರಿಕ ವಿಶ್ವವಿದ್ಯಾಲಯಕ್ಕೆ ಜೀವ ತುಂಬಿ ಅದು ರೂಪುಗೊಳ್ಳುವಲ್ಲಿ ಕನ್ನಡ ಶಕ್ತಿ ಕೇಂದ್ರದ ಪಾತ್ರ ಮಹತ್ವದ್ದು), ಗೋಕಾಕ್ ಚಳವಳಿ - ಭಾಷಾ ಸೂತ್ರ, ಎರಡು ಕವಿ ಪ್ರತಿಮೆಗಳ ನಿರ್ಮಾಣ (ಸಾ.ಕ. ಬಳಗವೂ ಕನ್ನಡ ಶಕ್ತಿ ಕೇಂದ್ರವೂ ಒಂದೇ), ಕಿತ್ತೂರು ರಾಣಿ ಚೆನ್ನಮ್ಮ ಪ್ರತಿಮೆ ಸ್ಥಾಪನೆ, ಬೆಳಗಾಂ - ಕಾಸರಗೋಡು, ದ.ರಾ. ಬೇಂದ್ರೆ ಮಾರ್ಗ ನಾಮಕರಣ, ನಾಮ ಫಲಕದ ಆಜ್ಞೆ, ಕಾವೇರಿ ಕೃಷ್ಣಾ ಜಲವಿವಾದ (10,000 + 10,000 ಪ್ರತಿಗಳು ಜನರ ಕೈಸೇರಿವೆ) ಉಪಯುಕ್ತ ಪುಸ್ತಕಗಳ ಪ್ರಕಟಣೆ, ಉರ್ದು ವಾರ್ತೆ ನಿಲ್ಲಿಸಿದ್ದು, ಹುಬ್ಬಳ್ಳಿಯಲ್ಲಿ ನೈರುತ್ಯ ವಲಯ ಸ್ಥಾಪನೆ (ಆಗದೇ ಇದ್ದುದು ದುರಂತ), ಸಿ.ಇ.ಟಿ., ಪಿ.ಯು.ಸಿ. ಪಠ್ಯದಲ್ಲಿ ಕರ್ನಾಟಕ ಇತಿಹಾಸ ವಿಷಯ ಉಳಿಸಿದ್ದು, ಮಾತೃ ಭಾಷಾ ಮಾಧ್ಯಮ, ಶ್ವೇತ ಪತ್ರ ಪ್ರಕಟಣೆ, 'ಸೂಳೆಕೆರೆ' ನಾಮಕರಣ, ಕನ್ನಡ ಸಾಹಿತ್ಯ ಪರಿಷತ್ ಶುದ್ಧೀಕರಣ,

ಕಾವೇರಿ ಗಲಭೆ ಆಯೋಗ, ಬರ ಪರಿಹಾರ ನಿಧಿ, ಪ್ರವಾಹ ಪೀಡಿತರ ನಿಧಿ ಇತ್ಯಾದಿ ಇತ್ಯಾದಿ ಇಲ್ಲೆಲ್ಲ ಕನ್ನಡ ಶಕ್ತಿ ಕೇಂದ್ರದ ಪಾತ್ರ ಅನನ್ಯ. ಇಷ್ಟಾದರೂ ಸಾರ್ವತ್ರಿಕ ಎಚ್ಚರ ಮೂಡಿಸುವ ವಿಷಯ ತೀರ ಅತೃಪ್ತಿಕರ. ನೀವು ನಾವೆಲ್ಲ ಶ್ರಮಿಸಿದ್ದೇವೆ. ದುಡಿದಿದ್ದೇವೆ. ಕರ್ನಾಟಕದಲ್ಲಿ ಕನ್ನಡದ ಬಗ್ಗೆ ಒಂದು ಸಾಮಾನ್ಯ ಎಚ್ಚರ ಮೂಡಿದೆ. ಆದರೆ ಏನೇನೂ ಸಾಲದು. ಸಾಲದು ಎಂದರೆ ಸಾಲದು.

ಅದೇ ನನ್ನಲ್ಲಿ ಬೆಂಕಿಯಾಗಿ ಧಗಧಗ ಉರಿಯುತ್ತಿರುವುದು, ನನ್ನ ಎಲ್ಲ ಚಿತ್ತಶಾಂತಿಯನ್ನು ಕದಡಿರುವುದು, ರಾತ್ರಿ ಹಗಲು ಬೇತಾಳದಂತೆ ಕಾಡುತ್ತಿರುವುದು.

ಹೀಗೇ ಆದರೆ ಮುಂದೇನು ? ಮುಂದೇನು?

'ಕರ್ನಾಟಕ' ಎಲ್ಲಿರುತ್ತದೆ?

ಪರಿಹಾರ : ಸಾಮೂಹಿಕ ಎಚ್ಚರ.

ಕನ್ನಡದ ವಿರಾಟ್ ಪುರುಷನ ಕುಂಡಲಿನಿ ಶಕ್ತಿಯ ಜಾಗೃತಿ.

ಇದು ಅಮೂರ್ತ - ಆಲಂಕಾರಿಕ.

ವಾಸ್ತವವಾಗಿ ಆಗಬೇಕಾದ್ದು ಮುಖ್ಯಮಂತ್ರಿ, ಮಂತ್ರಿಗಳು, ಶಾಸಕರು, ಅಧಿಕಾರಿಗಳು, ಸಾಹಿತಿಗಳು, ಕಲಾವಿದರು, ವಿದ್ಯಾರ್ಥಿಗಳು, ರೈತರು ಎಲ್ಲರಲ್ಲಿ ಎಚ್ಚರ.... ಪಶ್ಚಾತ್ತಾಪ... ಕ್ರಿಯಾಶೀಲರಾಗಬೇಕೆಂಬ ಹಂಬಲ - ನವೋತ್ಸಾಹದ ಚೈತನ್ಯ.

ಅದನ್ನು ಮೂಡಿಸಲು ಈ ಆತ್ಮಬಲಿ.

ಕನ್ನಡದ ಬಗ್ಗೆ ಯಾರೂ ನೋವು ಪಡುತ್ತಿಲ್ಲ (ಕೆಲವರನ್ನು ಹೊರತುಪಡಿಸಿ); ಆ ಪಡಬೇಕಾಗಿದ್ದ ಎಲ್ಲ ನೋವನ್ನು ನಾನು ಹೊತ್ತು ಹೋಗುತ್ತಿದ್ದೇನೆ. ಕನ್ನಡದ ಬಗ್ಗೆ ಅಲಕ್ಷ್ಯ ತೋರಿ ಪಾಪಕಾರ್ಯ ಮಾಡಿದ್ದಾರೆ (ಎಲ್ಲರೂ ಅಲ್ಲ). ಆ ಎಲ್ಲ ಪಾಪದ ಮೂಟೆ ಹೊತ್ತಿದ್ದೇನೆ, - ಹೊರಟಿದ್ದೇನೆ.

ಕೆಲವರನ್ನು ಹೊರತುಪಡಿಸಿ, ಎಂದೆ - ಎಷ್ಟು ಜನ ?

ಎದ್ದು ಕಾಣುವ ಹೆಸರುಗಳಲ್ಲಿ ಎಷ್ಟು ಜನ ! ಅವರನ್ನು ಎಣಿಸಲು ನನ್ನ ಕೈ ಬೆರಳು ನಿಮ್ಮ ಕೈ ಬೆರಳು ಸಾಕು.

ಕಾರ್ಯಕರ್ತರು, ಒಂದು ನೂರು ಜನ ? ಇನ್ನೂರು ಜನ ?

ಇಷ್ಟು ಸಾಕೇ ? ಅಯ್ಯೋ ದೇವರೇ - ವಿರೂಪಾಕ್ಷ !

ಒಬ್ಬೊಬ್ಬರ ಹತ್ತಿರ ಹೋಗಿ, ಊರೂರಿಗೆ ಹೋಗಿ ಪ್ರಚಾರ ಮಾಡುವುದು ನನ್ನಿಂದ ಕಷ್ಟವಾಯ್ತು. ನನ್ನಿಂದ ಆಗದ ಕೆಲಸವಾಗಿತ್ತು. ಇದೋ ನನ್ನ ಆತ್ಮಬಲಿಯ ಮೂಲಕ ಎಲ್ಲರ ಮನಸ್ಸು ಸೇರಿದ್ದೇನೆ.

ಅವರ ಒಳ ಪ್ರಜ್ಞೆಯನ್ನು ಮುಟ್ಟುತ್ತೇನೆ, ಪ್ರಾರ್ಥಿಸುತ್ತೇನೆ. ಪ್ರೀತಿಯಿಂದ ಕರೆಯುತ್ತೇನೆ, ಅಳುತ್ತೇನೆ, ಕಾಡುತ್ತೇನೆ.

ಅವರ ಪ್ರಜ್ಞೆಯಲ್ಲಿ ಮಿಂಚಾಗುತ್ತೇನೆ, ಗುಡುಗಾಗುತ್ತೇನೆ, ಸಿಡಿಲಾಗುತ್ತೇನೆ.

ಕನ್ನಡದ ಜನರೇ ಇದು ಬರೀ ಕಾವ್ಯವೆಂದು ಖುಷಿಪಡಬೇಡಿ. ನಿಮ್ಮ ರಕ್ತ ಹಂಚಿಕೊಂಡು ಹುಟ್ಟಿದ ಒಬ್ಬ ದೀನ ಸೋದರರನ ಅಳಲಿನ ಕರೆ, ಮೊರೆ.

ಕನ್ನಡ ಶಕ್ತಿ ಕೇಂದ್ರ :

1. ಕೇಂದ್ರದ ಕಾರ್ಯಕಾರಿ ಸಮಿತಿ ಕರೆಯಲು ಶ್ರೀ ರಾ.ನಂ.ಚಂ.ಗೆ ಹೇಳಿ.

2. ಮುಂದಿನ ಅಧ್ಯಕ್ಷರು, ಇದು ಬಹುಮುಖ್ಯ ಪ್ರಶ್ನೆ. ನಿಮ್ಮಿಂದ ಸಾಧ್ಯವಿಲ್ಲ - ನೀವು 'ಕೃಷ್ಣ' ಆಗಬಹುದು, 'ಪಾರ್ಥ' ಆಗಲಾರಿರಿ (ಮೊದಲು ಬಾಣ ಎದುರಿಸುವಾತ ಸಾರಥಿಯೇ ಅಲ್ಲವೇ?). ಎರಡು ಹೆಸರು ನೆನಪಾಗುತ್ತವೆ :

1. ಗೊರುಚ 2. ಸಿ.ಎಚ್.ಹ :

ಶ್ರೀ ಗೊರುಚ ಅವರಿಗೆ ಅದ್ಭುತ ಸಂಘಟನಾ ಶಕ್ತಿ ಇದೆ, ಮಾತುಗಾರಿಕೆ ಇದೆ, ಜನಸಂಪರ್ಕ ಇದೆ. ಕರ್ನಾಟಕದ ಸಮಸ್ಯೆ ಬಲ್ಲರು. ಅವರು ಶ.ಸಾ. ಪರಿಷತ್ತಿನ ಕೆಲಸವನ್ನು ಡಾ. ಎಚ್.ಎಂ.ಮ. ಅವರಿಗೆ ವಹಿಸಿ ಇತ್ತ ಬರುವುದಾದರೆ ಅದ್ಭುತ - ಒಂದು ಅದ್ಭುತ ನಡೆದಂತೆ. ಅವರು ಕ.ಅ.ಪ್ರಾ. ಅಧ್ಯಕ್ಷರಾಗಬೇಕಿತ್ತು - ಆ ವಿಷಯ ಹಾಗಿರಲಿ. ಅವರು ಬಹು ತ್ಯಾಗ ಮಾಡಬೇಕಾಗುತ್ತದೆ. ನನ್ನನ್ನು ಕೇಳಿದರೆ, ಅವರು ಮಾಡುತ್ತಿರುವ ಶ.ಸಾ.ಪ. ಕೆಲಸ ಮುಖ್ಯ - ಅಷ್ಟೇ ಮುಖ್ಯ ಅದಕ್ಕಿಂತ ಮುಖ್ಯ (? ಕ್ಷಮೆ ಇರಲಿ) ಕರ್ನಾಟಕ ಉಳಿಸುವ ಕೆಲಸ. ಅದು ಕನ್ನಡ ಶಕ್ತಿ ಕೇಂದ್ರದ ಅಧ್ಯಕ್ಷ ಸ್ಥಾನವೇ ಆಗಬೇಕಾಗಿಲ್ಲ. ಆದರೆ ಕನ್ನಡಪರ ಸಂಘಟನೆ - ವ್ಯಾಪಕ ಸಂಘಟನೆ, ಕೆಲಸ, ಅನುಸರಣ ಇವು ಆಗದಿದ್ದರೆ ವಷ್ಟ ಅನೂಹ್ಯ. ಇದು ನಿಮ್ಮೆಲ್ಲರ ಗಮನಕ್ಕೆ.

ಶ್ರೀ ಸಿ.ಎಚ್.ಹ. ಸಮಸ್ಯೆಗಳನ್ನು ಬಲ್ಲವರು, ಅದ್ಭುತ ಕಾನೂನು ಪಂಡಿತರು, ಹೊರ ಒಳ ಶ್ರೇಷ್ಠ ವ್ಯಕ್ತಿತ್ವ ಉಳ್ಳವರು, ಐಶ್ವರ್ಯವಂತರು, ಕನ್ನಡದ ಸಮಸ್ಯೆ ಬಲ್ಲವರು. ಅವರು ಈಗಿನ ತಮ್ಮ ವೃತ್ತಿಯ ಒತ್ತಡ ಕಡಮೆ ಮಾಡಿಕೊಂಡು, ಕ್ರಮೇಣ ನಿಲ್ಲಿಸಿ ವ್ಯಾಪಕವಾಗಿ ಕನ್ನಡದ ಕೆಲಸಕ್ಕಾಗಿಯೇ ನಿಂತರೆ, ಎಂತಹ ತ್ಯಾಗ ಆದೀತು ! ನೆಹ್ರೂ ಮನೆತನ ಐಶ್ವರ್ಯವನ್ನು ರಾಷ್ಟ್ರಕ್ಕಾಗಿ ಧಾರೆ ಎರೆಯಿತು. ಹಾಗೆ ಸಿ.ಎಚ್.ಹ. ಆಗಬಲ್ಲರು.

ನನ್ನ ಆತ್ಮಬಲಿ ಮೂಡಿಸುವ ನೋವನ್ನು ಆಘಾತವನ್ನು ಪರಿಣಾಮವನ್ನು ವ್ಯವಸ್ಥಿತವಾಗಿ ಬಳಸಿಕೊಳ್ಳುವ ಕೆಲಸ ಶಕ್ತಿ ಕೇಂದ್ರದಿಂದ ಆಗಬೇಕು. ಶಕ್ತಿ ಕೇಂದ್ರಕ್ಕೆ ಒಳ್ಳೆ ಹೆಸರಿದೆ. ಅದು ಪ್ರಧಾನಿಗಳನ್ನೂ ಭೇಟಿಮಾಡಬಲ್ಲುದು (ರಾಜೀವ್ ಭೇಟಿ ನಿಮಗೆ ನೆನಪಿದೆ). ಮುಖ್ಯಮಂತ್ರಿಗಳು, ಅಧಿಕಾರಿಗಳು, ಶಾಸಕರನ್ನು ಯಾರನ್ನೂ ಭೇಟಿಮಾಡಬಲ್ಲದು.... ಎಲ್ಲರಿಗೂ ಒಳ್ಳೆಯ ಭಾವನೆ ಇದೆ. ಎಲ್ಲ ಸಾಹಿತಿಗಳ, ಕಲಾವಿದರ (ಚಿತ್ರ, ಸಂಗೀತ, ನೃತ್ಯ, ಶಿಲ್ಪ, ಚಲನಚಿತ್ರ) ಜೊತೆ ಸಂಪರ್ಕ ಇದೆ. ಕರೆದರೆ ಬರುತ್ತಾರೆ. ಆ ಹೆಸರನ್ನು ಬಳಸಿಕೊಳ್ಳಬೇಕು.

ಕನ್ನಡ ಶಕ್ತಿ ಕೇಂದ್ರವೇ ಆಗಬೇಕಾಗಿಲ್ಲ. ಅದರ ಜಾಗದಲ್ಲಿ ಬೇರೊಂದು ರಾಜ್ಯಮಟ್ಟದ ವ್ಯವಸ್ಥಿತ ಶಿಸ್ತಿನ ಮಹೋದ್ದೇಶದ ಆದರ್ಶಗಳನ್ನು ಮೈಗೂಡಿಸಿಕೊಂಡ ಒಂದು ಸಂಘಟನೆಯಾದರೂ ಸರಿಯೇ. ಕೆಲಸ ಮುಂದುವರಿಯಬೇಕು. ಈ ಬಗ್ಗೆ ಕನ್ನಡ ಶಕ್ತಿ ಕೇಂದ್ರದ ಕಾರ್ಯಕಾರಿ ಸಮಿತಿಯಲ್ಲಿ ಮಾತನಾಡಿ.

ಹಣಕಾಸು ವಿಚಾರ

ಈಗ ಖಾತೆಯಲ್ಲಿ ಸುಮಾರು 18,000/- ಇರಬಹುದು. ಪಾಸ್‌ಬುಕ್, ಚೆಕ್ ಪುಸ್ತಕಗಳನ್ನು ವಿನಯನಿಂದ ರಾನಂಚಂ ಪಡೆದುಕೊಳ್ಳಲಿ. ಖಾತೆಯನ್ನು ನಾನು ರಾನಂಚಂ ಇಬ್ಬರೂ ನಿರ್ವಹಿಸುತ್ತಿದ್ದೆವು. ಕಾರ್ಯಕಾರಿ ಸಮಿತಿ ನಿರ್ಧರಿಸುವ ವ್ಯಕ್ತಿಗಳು ಮುಂದೆ ಖಾತೆ ನೋಡಿಕೊಳ್ಳುತ್ತಾರೆ. ಆ ಬಗೆಯ ನಿರ್ಣಯ ಆಗಬೇಕು.

ಎಂದೂ ಲೆಕ್ಕ ಇಟ್ಟಿಲ್ಲ, ಲೆಕ್ಕ ಇಡುವವರು ಯಾರು ? ಕಚೇರಿ ಇಲ್ಲ, ಸಿಬ್ಬಂದಿ ಇಲ್ಲ, ಖರ್ಚಾಗಿರುವ ಹಣಕ್ಕೆ ಲೆಕ್ಕ ಇಟ್ಟು ಹಣ ಪಡೆದಿದ್ದರೆ ಹಣವೇ ಇರುತ್ತಿರಲಿಲ್ಲ. ಒಂದು ಬಗೆಯ ನಂಬಿಕೆಯಿಂದ ನಡೆದು ಹೋಗಿದೆ. ಇದು ಸರಿ ಅಲ್ಲ ಎಂದು ತಿಳಿದಿದೆ. ನನ್ನ ದೌರ್ಬಲ್ಯ - ಖಜಾಂಚಿ ಇದ್ದರೂ ಲೆಕ್ಕ ಪತ್ರ ಇತ್ಯಾದಿ ಇರಿಸುವ ಗೋಜಿಗೆ ಹೋಗಲಿಲ್ಲ. ಇಷ್ಟು ಖಚಿತ - ಹಣದ ಅವ್ಯವಹಾರ ನಡೆಯಲು ಸಾಧ್ಯವೇ ಇಲ್ಲ. 'ವ್ಯವಹಾರ'ವೇ ಇಲ್ಲದಿರುವಾಗ 'ಅವ್ಯವಹಾರ' ಎಲ್ಲಿಂದ ಬಂದೀತು ! ಕಾರ್ಯಕರ್ತರ (ನಾನೂ ಸೇರಿದಂತೆ) ಕೈಯಿಂದ ಹಣ ಸಾಕಷ್ಟು ಖರ್ಚಾಗಿದೆ. ಮುಂದೆಯೂ ಆ ರೀತಿ ನಡೆಯುವುದು ಕಷ್ಟವಾಗಬಹುದು.

ಶ್ರೀ ರಾ.ನಂ.ಚಂ.ಗೆ ಕನಿಷ್ಠ 500/- 1000/- ಆದರೂ ಹಣ ತಲುಪಬೇಕು. ಹಾಗೇ, 'ಸ್ನೇಹಾ ಪ್ರಿಂಟರ್ಸ್'ಗೆ ಸ್ವಲ್ಪ ಹಣ ಕೊಡಬೇಕು.

ನನ್ನ ಬಳಿ 'ಕ.ಕ.ಕ.' ಪುಸ್ತಕದ ರೂ. 850/- ಇತ್ತು. ಅದರ ಮೇಲೆ ಹಣ ಖರ್ಚಾಗಿದೆ. ಉಳಿದಂತೆ, ದಾಖಲೆಗಳನ್ನು ವ್ಯವಸ್ಥಿತವಾಗಿ ಇಟ್ಟಿಲ್ಲ. ನೀವು ಅಕಸ್ಮಾತ್ ನಮ್ಮ ಮನೆಗೆ ಹೋದರೆ ನೋಡಬಹುದು. ನನ್ನ ಮೇಜು, ಕೊನೆಗೆ ಹಾಸುಗೆ ಎಲ್ಲ ಕಡೆ ಏನೇನೋ ಕಾಗದ. ಅವನ್ನೆಲ್ಲ ನಿಧಾನವಾಗಿ ಜೋಡಿಸಲು ಕಾರ್ಯಕರ್ತರ ಸಹಾಯ ಪಡೆಯುವಂತೆ ವಿಶಾಲಾಕ್ಷಿಗೆ ಹೇಳಿದ್ದೇನೆ. ನನ್ನ ಕೆಲಸಗಳ ಒತ್ತಡ, ಆಲಸ್ಯ, ಮುಖ್ಯವಾಗಿ ಮರವು ಇವುಗಳಿಂದ ಎಷ್ಟೋ ಪತ್ರಗಳಿಗೆ ಉತ್ತರಿಸಿಲ್ಲ, ಕೆಲವನ್ನು ಒಡೆಯದೆಯೂ ಇರಬಹುದು. ಆ ಎಲ್ಲರೂ ನನ್ನನ್ನು ಕ್ಷಮಿಸಬೇಕು.

ನನ್ನ ಗೈರುಹಾಜರಿ ಸ್ವಲ್ಪ ಕಾಲ ಕ.ಶ.ಕೇಂದ್ರ ಕೆಲಸಕ್ಕೆ ಅಡ್ಡಿಯಾಗಬಹುದು. ಆದರೆ ಅನುಸರಣ ಕಾರ್ಯವನ್ನು ಮುಂದುವರಿಸಲು ಶ್ರೀ ರಾ.ನಂ.ಚಂ.ಗೆ ಹೇಳಿ (ಚನ್ನಮ್ಮ ಪ್ರತಿಮೆ + ಶ್ವೇತ ಪತ್ರ + ಬೆಂಗಳೂರು ಸೌಂದರ್ಯೀಕರಣ + ನಾಮಫಲಕ)

ಹಾಗೆಯೇ ಬಿ.ಇ.ಎಲ್. ಕಾರ್ಮಿಕರ ಹಿತರಕ್ಷಕ ಸಮಿತಿ, ಕ.ರಾ.ರ.ಸಾ. ಕ್ರಿಯಾ ಸಮಿತಿ ಇಲ್ಲಿಯೂ ತೊಂದರೆ ಆಗಬಹುದು.

ಇಲ್ಲದ ನನ್ನನ್ನು ಕಲ್ಪಿಸಿಕೊಂಡು, ಸ್ಫೂರ್ತರಾಗಿ ಅವರೆಲ್ಲ ಮುಂದೆ ನುಗ್ಗಲಿ, ಅಲ್ಲೇ ಇರುತ್ತೇನೆ. ಉತ್ಸಾಹ ಬತ್ತಕೂಡದು. ವರ್ಧಿಸಬೇಕು. ಹಾಗೇ ರೋಮನ್ ಕಥೋಲಿಕ ಕ್ರೈಸ್ತರ ಕನ್ನಡ ಸಂಘಕ್ಕೂ ಹೇಳಿ.

ಎಲ್ಲರೂ ಅದ್ಭುತ ಕಾರ್ಯಕರ್ತರು, ನಿಷ್ಠಾವಂತರು, ಸ್ಫೂರ್ತಿದಾಯಕರು. ನಾಡಿನ ದೊಡ್ಡ ಆಸ್ತಿ ಅವರು.

ಕೊನೆಗೆ

ಈ ನನ್ನ ಆತ್ಮಾರ್ಪಣೆ ಸಹಜವಾಗಿಯೇ ಸುದ್ದಿ ಆಗುತ್ತದೆ. ಕೆಲವು ಸಂತಾಪ ಸಭೆಗಳೂ ಆಗಬಹುದು. ನನ್ನ ಬಗ್ಗೆ ಹೊಗಳಿಕೆಯ ಮಾತುಗಳೂ ಬರುತ್ತವೆ. ಎಲ್ಲವೂ ಸಹಜ, ನಿರೀಕ್ಷಿತ. "ಚಿಮೂ ಹೆಸರಲ್ಲಿ ಏನಾದರೂ ಮಾಡಬೇಕು" ಎಂಬಂತಹ ಸಲಹೆಗಳೂ ಕೇಳಿಸಬಹುದು. ನನಗೆ ನಿಜವಾಗಿ ಕನ್ನಡಿಗರ ಎಚ್ಚರವಾದಾಗ ಮಾತ್ರ ಶಾಂತಿ, ಸಮಾಧಾನ. ಮುಖ್ಯವಾಗಿ ವಿದ್ಯಾರ್ಥಿ ವರ್ಗವೇ, ಕಾರ್ಮಿಕ ವರ್ಗವೇ, ರೈತ ವರ್ಗವೇ ದಯಮಾಡಿ ಸಮಸ್ಯೆಗಳನ್ನು ತಿಳಿಯಿರಿ. ನಮ್ಮ ಕಾಲ ಕೆಳಗಿನ ನೆಲ ಕುಸಿಯುತ್ತಿರುವುದನ್ನು ಗಮನಿಸಿ. ಕನ್ನಡಿಗರ ಸಂಖ್ಯೆ ಪ್ರಾಮುಖ್ಯ ಧುಸ್ಸೆಂದು ಇಳಿಮುಖವಾಗುತ್ತಿದೆ. ನಮ್ಮನ್ನು ಕರ್ನಾಟಕದಲ್ಲಿ ಯಾರು ಲೆಕ್ಕಕ್ಕಿಟ್ಟಿದ್ದಾರೆ? ಒಂದಷ್ಟು ಹಣ ಸಂಗ್ರಹಿಸಿ, ರಾಜ್ಯೋತ್ಸವ ಮಾಡಿ ಕನ್ನಡವನ್ನು ಮರೆಯುವ ವಂಚನೆಗೆ ಇತಿಶ್ರೀ ಹಾಡಿ.

ಎಲ್ಲಿ ಕನ್ನಡ ಪರ ಘೋಷಣೆಯೋ ಅಲ್ಲಿ ನಾನಿರುತ್ತೇನೆ.

ಎಲ್ಲಿ ಕನ್ನಡ ಪರ ಕೆಲಸವೋ ಅಲ್ಲಿ ನಾನಿರುತ್ತೇನೆ.

ಈ ಪತ್ರ ಬರೆಯುವಾಗ ಸ್ವಲ್ಪವೂ ಆವೇಶ ಪರವಾಗಿಲ್ಲ, ನನ್ನ ಉಸಿರಾಟ, ಎದೆಮಿಡಿತಗಳಲ್ಲಿ ವ್ಯತ್ಯಾಸವಾಗಿಲ್ಲ. ವಸ್ತುನಿಷ್ಠ ಸಂಶೋಧನ ಪ್ರಬಂಧ ಬರೆದಷ್ಟು ಸಮಾಧಾನ ಚಿತ್ತದಿಂದ ಬರೆದಿದ್ದೇನೆ. ದುಃಖವನ್ನು ಹೇಳಿಕೊಳ್ಳುವಾಗಲೂ ಒಂದು ಸಂಗತಿಯಾಗಿ ನಿರೂಪಿಸಿದ್ದೇನೆ. ನನಗೆ ಕರ್ನಾಟಕದ ಸತ್ಯ ಗೊತ್ತು. 'ಹಿಂದು' 'ಇಂದು' ಎರಡೂ ಗೊತ್ತು. 'ಮುಂದು'? ಇದೇ ನನ್ನನ್ನು ಕಾಡುತ್ತಿರುವುದು.

ಪ್ರಾರ್ಥನೆ

ಓ ದೇವರೇ, ನಾನು ನಿನ್ನ ಭಕ್ತ, ನಿನಗೆ ಶರಣು ಬಂದಿದ್ದೇನೆ. ಭಾರತೀಯ ಸಂಸ್ಕೃತಿಯನ್ನು ಕರ್ನಾಟಕವನ್ನು ಉಳಿಸಿದ ಕ್ಷೇತ್ರ ಪ್ರದೇಶ - ನಿನ್ನ ಸೀಮೆ ಹಂಪಿಯಲ್ಲಿದ್ದೇನೆ. ನನ್ನನ್ನು ಕರೆದುಕೋ. ನನ್ನ ಪ್ರೀತಿಯ ಭಾರತ ಬೆಳೆಯಬೇಕು. ಆಧುನಿಕ ವಿಜ್ಞಾನದಲ್ಲಿ ಹೇಗೋ ಸನಾತನ ಸಂಸ್ಕೃತಿಯ ಶ್ರೇಷ್ಠವಾದುದನ್ನು ಉಳಿಸಿಕೊಂಡು ಮಾರ್ಗದರ್ಶಿಯಾಗಬೇಕು ಕರ್ನಾಟಕ. ಅದು ಇತರ ನಾಡುಗಳಂತೆ ಸ್ವಾಭಿಮಾನದ ಸಂಪತ್ತಿನ ಗೂಡಾಗಿ ವಿಕಾಸ ಹೊಂದಲಿ. ಉದ್ಯಮಶೀಲವಾಗಿ ಬೆಳೆಯಲಿ. ಕರ್ನಾಟಕದಲ್ಲಿ ಉದ್ಯೋಗಗಳು ಅವರಿಗೇ ಸಿಗಲಿ. ಅವರ ಗದ್ದೆಗಳು ಅನ್ಯರ ಪಾಲಾಗದಿರಲಿ. ಮಾತೃಭಾಷಾ ಮಾಧ್ಯಮ ಜಾರಿಗೆ ಬರಲಿ.

ನೀನು ಕೊಟ್ಟ ಪಾತ್ರವನ್ನು ನಾನು ನಿರ್ವಹಿಸಿದ್ದೇನೆ. ಹಲವು ಬಾರಿ ಪ್ರಾರ್ಥಿಸಿದ್ದೇನೆ - "ತಪ್ಪು ಮಾಡಿದರೆ ಶಿಕ್ಷಿಸು, ತಪ್ಪು ಮಾಡಲು ಅವಕಾಶ ಕೊಡಬೇಡ. ತಿದ್ದು" ಎಂದು. ತಪ್ಪುಗಳನ್ನು ಮಾಡಿದ್ದೇನೆ. ಹೇಳಿಕೊಳ್ಳುವ ಅಪರಾಧ ಮಾಡಿಲ್ಲ. ಕಾಯಾ ವಾಚಾ ಮನಸಾ ಶುದ್ಧನಾಗಿರಲು ಯತ್ನಿಸಿದ್ದೇನೆ. ನಿನ್ನ ದರ್ಶನಕ್ಕಾಗಿ ಹಂಬಲಿಸಿದ್ದೇನೆ. ದ್ವೇಷ ಎಂದೂ ಹತ್ತಿರ ಸುಳಿಯದಂತೆ ನೋಡಿಕೊಂಡಿದ್ದೇನೆ. ಬಡವರ, ದೀನರ, ಬಡಮಕ್ಕಳ ಬಗ್ಗೆ ನನ್ನ ಕೈಲಾದ ರೀತಿ ಶ್ರಮಿಸಿದ್ದೇನೆ. ಇದು ನೀನು ಕೊಟ್ಟ ದೇಹ - ತೆಗೆದುಕೋ. ಒಳಗಿನ ಆತ್ಮ ನಿನ್ನ ಭಾಗ - ಸೇರಿಸಿಕೋ. ನಿನ್ನ ಆನಂದ ಲೋಕದಲ್ಲಿ ನನಗೆ ಜಾಗ ಕೊಡು - ಚಿಕ್ಕ ಜಾಗ ಕೊಡು.

ಕರ್ನಾಟಕಕ್ಕೆ ಶುಭವನ್ನು ಕೊಡು, ಭಾರತಕ್ಕೆ ಶುಭವನ್ನು ಕೊಡು. ನಗು ನಗುತ್ತ ನದಿಯನ್ನು ಪ್ರವೇಶಿಸುತ್ತಿದ್ದೇನೆ. ಎಲ್ಲರಿಗೂ ನಮಸ್ಕಾರ.

ಜಯ ಭುವನೇಶ್ವರಿ
ಜಯ ಪಂಪಾಂಬಿಕಾ
ಜಯ ವಿರೂಪಾಕ್ಷ
"ಜಯ ಭಾರತ ಜನನಿಯ ತನುಜಾತೆ
ಜಯ ಹೇ ಕರ್ನಾಟಕ ಮಾತೆ"

ಪ್ರೊ. ಎಲ್.ಎಸ್. ಎಸ್. – ಈ ಪತ್ರ / ಮನವಿ ಅದು ಇರುವಂತೆ ಜನಗಳ ಗಮನಕ್ಕೆ ಹೋಗುವುದು ಅಪೇಕ್ಷಣೀಯ ಎಂದು ಭಾವಿಸಿದ್ದೇನೆ. ಸೂಕ್ತ ಕಂಡ ರೀತಿಯಲ್ಲಿ ಮಾಡಿ. ಇದನ್ನು ನಾಶಪಡಿಸಿದರೂ ಸರಿಯೇ – ಚಿಂತೆ ಮಾಡಲು ಹೇಗೂ ನಾನಿರುವುದಿಲ್ಲ, ಇರುತ್ತೇನೆ, 'ಚಿಂತೆ'ಯ ಸ್ಥಿತಿಯಲ್ಲಲ್ಲ; ಲೋಕ ಶಕ್ತಿಯ ಭಾಗವಾಗಿ.

ಪ್ರೀತಿ ಗೌರವ ಅಭಿಮಾನಗಳಿಂದ
ಎಂ. ಚಿದಾನಂದಮೂರ್ತಿ

ಮೇಲಿನ ಪತ್ರವನ್ನು 23.8.97ರಂದು ಬೆಳಿಗ್ಗೆ ಹಂಪಿಯ ಅಂಚೆ ಕಚೇರಿಯಲ್ಲಿ ನೋಂದಣಿ ಪತ್ರವಾಗಿ ಕಳುಹಿಸಿದ ಮೇಲೆ, ಕೆಳಗಿನ "ಕೆಲವು ಹೊಳಹು"ಗಳನ್ನು ಶೇಷಗಿರಿರಾಯರಿಗೆ ಸಾದಾ ಅಂಚೆಯಲ್ಲಿ ಅದೇ ದಿನ ಕಳುಹಿಸಿದೆ. ಅದರ ಪಾಠ ಹೀಗಿದೆ.

23.8.97 (ಕೆಲವು ಹೊಳಹುಗಳು)

1. ನಿನ್ನೆ ಸಂಜೆ (22.8.97) 6.00 ದೇವಾಲಯ ಕಡೆ ಹೊರಟಿದ್ದೆ. ಆಶ್ರಮದ ಬಾಗಿಲಲ್ಲಿ ರಸ್ತೆ ಪಕ್ಕ (ಕಾಂಪೊಂಡ್ ಗೇಟ್) ಒಂದು ಎರಡೂವರೆ ಅಡಿ ಉದ್ದದ ನಾಗರಹಾವು ಹೆಡೆ ಎತ್ತಿ ನಿಂತದ್ದು, ಹಾಗೇ ಹೊರಟು ಬಲಕ್ಕೆ ತಿರುಗಿ ಮತ್ತೆ ಬಲಕ್ಕೆ ತಿರುಗಿ ಅಡಗಿತು. ಅದನ್ನು ಆಶ್ರಮದ ಮುಂಭಾಗದ ಹೋಟೆಲಿನ ಮೂವರು ಮಕ್ಕಳಿಗೆ ತೋರಿಸಿದೆ. ಹಾಗೇ ಆ ದಾರಿಯಲ್ಲಿ ಬಂದ ಒಂದಿಬ್ಬರು ನೋಡಿದರು.

ನಾನೂ ನೇರವಾಗಿ ಹೋಗಿ ಬಲಕ್ಕೆ ಹೊರಳಿ ಬಲಕ್ಕೆ ಹೊರಳಿದ್ದರೆ ವಿರೂಪಾಕ್ಷನ ದರ್ಶನವಾಗುತ್ತಿತ್ತು. ಆ ಕ್ಷಣ ಏಕೋ ಏನೋ – 'ನಾಗಾಭರಣ' ವಿರೂಪಾಕ್ಷನ ನೆನಪು ಬಂದಿತು. ಆಕಸ್ಮಿಕ?!

ಆಮೇಲೆ ಜ್ಞಾಪಕಕ್ಕೆ ಬಂದಿತು – ಮದುವೆ ಮಾಡಿಕೊಳ್ಳುವ ಬಗ್ಗೆ ತೀವ್ರ ಕ್ಷೋಭೆ ಅನುಭವಿಸುತ್ತಿದ್ದೆ. ಬ್ರಹ್ಮಚರ್ಯವೇ ? ಗಾರ್ಹಸ್ಥ್ಯವೇ? ಶ್ರೀಸಾಯಿಬಾಬಾರ ದರ್ಶನ ಪಡೆದು, ಗೃಹಸ್ಥನಾಗಲು ನಿರ್ಧರಿಸಿ, ಒಂದು ರಾತ್ರಿ ಮೈಸೂರು ಸರಸ್ವತಿಪುರದಲ್ಲಿ ಡಾ. ಜಿ.ಎಸ್. ಎಸ್. ಮತ್ತು ಅವರ ಮನೆಯವರಿಗೆ ತಿಳಿಸಿದೆ. ವಾಪಸ್ ಅಲ್ಲಿಗೆ ಸಮೀಪದ ಮನೆಗೆ ಬಂದು ಬಾಗಿಲು ಚಿಲಕ ಸದ್ದುಮಾಡಿದೆ. ತಂಗಿ ದೀಪ ಹಾಕುತ್ತಿದ್ದಂತೆ ಹಿಸ್ಸೆಂದು ಶಬ್ದವಾಗಿ ಹೆಡೆ ಕಾಣಿಸಿ ಒಂದು ನಾಗರಹಾವು ಸೀಳು ಬೆಳಕಿನಲ್ಲಿ ಹೋಯಿತು. ನನಗೂ ಮುಂಭಾಗದ ಬಾಗಿಲಿಗೂ ಮಧ್ಯೆ ಅದು ಹೆಡೆಯೆತ್ತಿ ನಿಂತಿತ್ತು. ಒಂದು ಕ್ಷಣ ಅವಾಕ್ಕಾದೆ. ಒಳಗೆ ಹೋಗಿ ಅಯ್ಯ ಅವ್ವರಿಗೆ ನನ್ನ ನಿರ್ಧಾರ ತಿಳಿಸಿದೆ. ಅದು ಅವರ ಜೀವನದ ಅತ್ಯಾನಂದದ ದಿನ.

2. ಈ ದಿನ ಬೆಳಿಗ್ಗೆ ಎದ್ದು ಸ್ನಾನಮಾಡಿ, ತಿಂಡಿ ತಿಂದು, ಕ್ಷೌರ ಮಾಡಿಕೊಂಡು, ಬಿಳಿ ಬಟ್ಟೆ ಹಾಕಿಕೊಂಡು, ಶ್ರೀ ಸದಾಶಿವಯೋಗಿಗಳ ಆರೋಗ್ಯ ವಿಚಾರಿಸಿ, ಶ್ರೀ ವಿರೂಪಾಕ್ಷ,

ಪಂಪಾಂಬಿಕೆ, ಭುವನೇಶ್ವರಿ ದರ್ಶನ ಮಾಡಿದೆ. ವಿಶಾಲಾಕ್ಷಿ, ಶೇಷಗಿರಿರಾಯರ ಪತ್ರಗಳನ್ನು ಅಂಚೆ ಕಚೇರಿಗೆ ಕೊಟ್ಟೆ. ಮನಸ್ಸು ಉದ್ವಿಗ್ನವಾಗಿಲ್ಲ. ಯಾವುದೇ ಆಳದ ಅಳುಕು ಇದ್ದರೂ ಸಾವಿನ ಭಯ ಇಲ್ಲ - ಮನಸ್ಸು ಪ್ರಸನ್ನವಾಗಿದೆ. ನಗುನಗುತ್ತ ತೆರಳುತ್ತಿದ್ದೇನೆ - ನನ್ನ ನಾಡಿಗಾಗಿ, ನನ್ನ ಜನರಿಗಾಗಿ.

3. ನಾನು ಬಂದ ದಿನ (15.8.97) ಮಂಟಪ ಮುಳುಗಿಸಿ ನದಿ ಹರಿಯುತ್ತಿತ್ತು. ಆಮೇಲೆ ನೀರು ಕಡಮೆ ಆಯ್ತು. ನನಗೆ ಸ್ವಲ್ಪ ಆತಂಕವಾಗಿತ್ತು. ಈ ದಿನ ಬೆಳಿಗ್ಗೆ ನೋಡುತ್ತೇನೆ - ಸ್ವಲ್ಪ ಪ್ರವಾಹ ಬಂದಿದೆ. ಜಲಪ್ರವೇಶಕ್ಕೆ ಅನುಕೂಲ.

4. ಈ ಪತ್ರ ಬರೆಯುತ್ತಿರುವಂತೆ ಹೊರಗೆ ಒಳ್ಳೆ ಮಳೆ ಬೀಳುತ್ತಿದೆ. ಖುಷಿ.

5. ಪ್ರಾ. ಚಪರಾ ಏಕೆ ಕನ್ನಡ ಶಕ್ತಿ ಕೇಂದ್ರಕ್ಕೆ ಬರಬಾರದು? ಗೊರುಚ / ಸಿ ಎಚ್ ಹ ಇವರು ಒಪ್ಪದಿದ್ದರೆ ಅವರನ್ನು ಅಧ್ಯಕ್ಷರನ್ನಾಗಿ ಮಾಡಬಹುದೇ? ವಯಸ್ಸಿದೆ, ಚೆನ್ನಾಗಿ ಮಾತನಾಡುತ್ತಾರೆ. ವಿಷಯಗ್ರಹಣ ಇದೆ, ಕನ್ನಡದ ಬಗ್ಗೆ ಪ್ರೀತಿ ಇದೆ, ಪ್ರಭಾವ ಇದೆ. ಕನ್ನಡ ಶಕ್ತಿ ಕೇಂದ್ರವಲ್ಲದಿದ್ದರೂ ಬೇರೊಂದು ರಾಜ್ಯಮಟ್ಟದ ಸಂಘಟನೆ ಕಟ್ಟಬಲ್ಲರು. ಅವರಿಂದ ತ್ಯಾಗದ ಕಾರ್ಯ ಆಗಬೇಕು. (ಸುಮ್ಮನೆ ಒಂದು ಹೊಳಹು).

6. ಬೆಳಗಾವಿ ಎಂದೂ ಹೋಗದು; ಕಾಸರಗೋಡಿಗಾಗಿ ನಿರಂತರ ಹೋರಾಟ ನಡೆಯಬೇಕು.

7. ಕನ್ನಡೇತರರನ್ನು ಕೆಲಸಕ್ಕೆ ಯಾರನ್ನು ತೆಗೆದುಕೊಂಡರೂ ಜನತೆ ಸಿಡಿದೇಳಬೇಕು.

8. ಮಾತೃಭಾಷಾ ಮಾಧ್ಯಮ : ಶ್ರೀ ಗೋವಿಂದೇ ಗೌಡರೂ ಶ್ರೀ ನಾಣಯ್ಯನವರೂ ಮನಸ್ಸು ಮಾಡಬೇಕು - ನ್ಯಾ. ರಾಮಾಜೋಯಿಸ್‌ರ ಮಾರ್ಗದರ್ಶನದಂತೆ ನಡೆಯಬೇಕು. ಶ್ರೀ ಚನಾಳರದು (ಹೆಚ್ಚುವರಿ ಕಾನೂನು ಕಾರ್ಯದರ್ಶಿ) ಬಹು ತೇಲು ಮಾತಿನ ವ್ಯಕ್ತಿತ್ವ. ಹೆಚ್ಚು ನಂಬುವಂತಿಲ್ಲ.

9. ಸಿಡಿದೇಳಬೇಕು -ಎಲ್ಲಕ್ಕೂ-

1. ಇಂಗ್ಲೀಷ್ ಶಾಲೆ ವಿರುದ್ಧ
2. ಇಂಗ್ಲಿಷ್ ಫಲಕ ವಿರುದ್ಧ
3. ಇಂಗ್ಲಿಷ್ ಜಾಹಿರಾತು ವಿರುದ್ಧ
4. ಕನ್ನಡ ಬಿಟ್ಟು ಮಾತನಾಡುವವರ ವಿರುದ್ಧ
5. ಇಂಗ್ಲಿಷ್ ಆಹ್ವಾನಪತ್ರ ಇ. ವಿರುದ್ಧ
6. ನಿವೇಶನ, ಗದ್ದೆ ಎಲ್ಲ ಅನ್ಯರ ಪಾಲಾಗುವುದರ ವಿರುದ್ಧ
7. ಉತ್ತರ ಭಾರತ ವ್ಯಾಪಾರಿಗಳ ಕೈಲಿ ನಮ್ಮ ವ್ಯಾಪಾರ ಹೋಗಿರುವುದರ ವಿರುದ್ಧ
8. ಯಾವುದೇ ಅನ್ಯಾಯಗಳ (ಸಾಮಾಜಿಕ / ಶೈಕ್ಷಣಿಕ / ರಾಜಕೀಯ) ವಿರುದ್ಧ

ಸಿಡಿದೇಳುವಂತೆ ಮಾಡುವವರು ಯಾರು ?

ಸ್ವಲ್ಪ 'Militant' ಎನ್ನಿಸಿಕೊಳ್ಳುವಂಥ ಶಿಸ್ತುಬದ್ಧ ತ್ಯಾಗಬುದ್ಧಿಯ ಒಂದು ಸಂಘಟನೆ, 'ಸೇನೆ' ಅಗತ್ಯವೇ? ಹೌದು ಎನ್ನುತ್ತದೆ, ಮನಸ್ಸು.

10. ಕಾವೇರಿ, ಕೃಷ್ಣಾ ನದಿ ನೀರಿನ ನಮ್ಮ ಹಕ್ಕಿನ ಒಂದು ತೊಟ್ಟು ಬಿಡಕೂಡದು. ಪ್ರೀತಿಯ ಜನರೇ, ಎಚ್ಚರ ಮಾಡಿ; ಸದಾ ಎಚ್ಚರವಾಗಿರಿ. ಇದು ನನ್ನ ಹೃದಯಾಂತರಾಳದ ಕೂಗಿನ ಕರೆ.

11. ಕನ್ನಡ ಪರವಾಗಿದ್ದರೂ ನಾನು ಎಂದೂ ಬಡವರ, ಶೋಷಿತರ, ದುಃಖಿತರ ಪರ; ದುಷ್ಟರ, ವಂಚಕರ, ಶ್ರೀಮಂತರ, ದರ್ಪಿಷ್ಠರ ವಿರುದ್ಧ.

ಭಾರತಮಾತೆಗೆ ಜಯವಾಗಲಿ
ಕನ್ನಡಾಂಬೆಗೆ ಜಯವಾಗಲಿ

ಎಲ್ಲಿಗೆ ಹೋಗುತ್ತಿದ್ದೇನೆ? ನನಗೆ ಅನುಮಾನವೇ ಇಲ್ಲ - ಸತ್ಯದ ಕಡೆಗೆ, ಪರಮಾತ್ಮನ ಕಡೆಗೆ, 'ಅಮೃತಾತ್ಮ'ನ ಕಡೆ. ಸಾವು ಎಂದೂ ಅಂಜಿಸದು. ವಾಸ್ತವವಾಗಿ ಸಾವು ಒಂದು ಸ್ಥಿತ್ಯಂತರ. ಪ್ರೇಮಮಯವಾದ ದೈವ ನನ್ನ ಕುಟುಂಬ, ನನ್ನ ಮಗಳ ಕುಟುಂಬ, ಕರ್ನಾಟಕ ಎಲ್ಲರನ್ನೂ ಹರಸಲಿ.

ಎಂ. ಚಿದಾನಂದಮೂರ್ತಿ

ಮೇಲಿನ ಪತ್ರವನ್ನು ಅಂಚೆಗೆ ಹಾಕಿಸಿದ ಮೇಲೆ, ಹಂಪಿಯ ಶ್ರೀ ಸದಾಶಿವ ಯೋಗಿಗಳಿಗೆ ಒಂದು ಪತ್ರ ಬರೆದಿಟ್ಟೆ. ಅವರು ಜ್ವರ, ಮೈನೋವಿನಿಂದ ಆಶ್ರಮದ ಸಮೀಪದ 'ವಸತಿ ಗೃಹ'ದಲ್ಲಿ ವಿಶ್ರಮಿಸುತ್ತಿದ್ದರು. ಆ ಪತ್ರದಲ್ಲಿ ನನ್ನ ಆತ್ಮಬಲಿಗೆ ನಾನೇ ಕಾರಣನೆಂದೂ, ಅದಕ್ಕೆ ಅವರ ಆಶ್ರಮವನ್ನು ಬಳಸಿಕೊಂಡದ್ದಕ್ಕೆ ಕ್ಷಮಿಸಬೇಕೆಂದೂ ಕೇಳಿಕೊಂಡಿದ್ದೆ. ಕೊನೆಯಲ್ಲಿ 1. ನನ್ನ ದೇಹ ಅಕಾಸ್ಮಾತ್ ಸಿಕ್ಕಲ್ಲಿ ಅದರ ಯಾವುದಾದರೂ ಭಾಗ ಬದುಕಿರುವವರ ಉಪಯೋಗಕ್ಕೆ ಬರುವಂತಿದ್ದರೆ ಬಳಸಿಕೊಳ್ಳಬಹುದು. 2. ಅದನ್ನು ಬಳ್ಳಾರಿ ವೈದ್ಯಕೀಯ ಕಾಲೇಜಿನ ವಿದ್ಯಾರ್ಥಿಗಳ ಪ್ರಯೋಗಾಲಯಕ್ಕೆ ಒಪ್ಪಿಸಬಹುದು. 3. ಅದರ ಬಳಿಕೆ ಆಗಿ ಉಳಿದ ಮಾಂಸ, ಚರ್ಮ ಭಾಗವನ್ನು ಹಂಪಿಯ ಸಮೀಪ ಯಾವುದಾದರೂ ಬಂಡೆಗಳ ಮಧ್ಯೆ ಹುಗಿಯಬಹುದು ಅಥವಾ ಸುಡಬಹುದು. 4. ಅಕಾಸ್ಮಾತ್ ನಾನು ಬದುಕುಳಿದರೆ ಸರ್ಕಾರಿ ಆಸ್ಪತ್ರೆಗೆ ಕೊಂಡೊಯ್ಯಬೇಕು. ಹೀಗೆ ಶ್ರೀ ಸ್ವಾಮಿಗಳನ್ನು ಕೇಳಿಕೊಂಡಿದ್ದೆ.

ಅಂತೆಯೇ, ನಾನು ಸಮಾಧಾನ ಚಿತ್ತದಿಂದ ಹೋಗುತ್ತಿದ್ದರೂ ಎರಡು ತೀವ್ರ ದುಃಖಗಳನ್ನು ಕಟ್ಟಿಕೊಂಡೇ ತೆರಳುತ್ತಿರುವುದಾಗಿ ಆ ಪತ್ರದಲ್ಲಿ ತಿಳಿಸಿದ್ದೆ. ಒಂದು, ಈಗಾಗಲೇ ಹೇಳಿರುವ ಕರ್ನಾಟಕದ ದುಃಖ; ಇನ್ನೊಂದು, ಪವಿತ್ರ ಕ್ಷೇತ್ರ ಹಂಪಿಯು ಅಪೀಮು, ಗಾಂಜಾ, ಚರಸ್‌ಗಳಿಗೆ ದಾಸರಾಗಿರುವ ವಿದೇಶೀ ಹಿಪ್ಪಿಗಳಿಂದ ಹಾಳಾಗಿರುವ ದುಃಖ.

ಮಧ್ಯಾಹ್ನ 1.30ಕ್ಕೆ ಆಶ್ರಮಕ್ಕೆ ಊಟ ಬಂದಿತು. ಸ್ವಲ್ಪ ಊಟ ಮಾಡಿ, 2.30 ಕ್ಕೆ ಆಶ್ರಮದ ಹಿಂಭಾಗದಲ್ಲಿ ನದಿ ಒಳಗೆ ಚಾಚಿಕೊಂಡಿದ್ದ ಒಂದು ದೊಡ್ಡ ಬಂಡೆ ಮೇಲಕ್ಕೆ ಹೋದೆ. ಸ್ವಲ್ಪ ದೂರದಲ್ಲಿ ಮೇಲೆ ಸ್ನಾನಘಟ್ಟದಲ್ಲಿ ಕೆಲವರಿದ್ದರು. ಕೆಳಗೆ ಸಮೀಪದ ಸ್ನಾನ ಘಟ್ಟದಲ್ಲಿ ಯಾರೂ ಇರಲಿಲ್ಲ. ವಿರೂಪಾಕ್ಷ ಕರ್ನಾಟಕ ಈ ಎರಡೂ ಹೆಸರುಗಳನ್ನು ಹೇಳುತ್ತ

ಬಂಡೆಯ ಕೆಳಗೆ ಹರಿಯುತ್ತಿದ್ದ ಪ್ರವಾಹಕ್ಕೆ ಜಿಗಿದೆ. ನೀರಲ್ಲಿ ಮುಳುಗಿದೆ. ನೀರಲ್ಲೂ ವಿರೂಪಾಕ್ಷನ ನಾಮಸ್ಮರಣೆ ಮಾಡಿದೆ. ಕರ್ನಾಟಕ ಜ್ಞಾಪಕಕ್ಕೆ ಬಂದಿತು. ಎಲ್ಲೋ ಬಂಡೆ ಮೃದುವಾಗಿ ತಾಕಿತು. ನೀರಿನ ಹರಿವಿಗೆ ನಾನು ಸುಮ್ಮನೆ ಕೊಟ್ಟುಕೊಂಡೆ. ಮುಳುಗಿದೆ. ತೇಲಿದೆ, ಮುಳುಗಿ ನೀರಿನ ಜೊತೆ ಹೋದೆ. ಸುಮಾರು 3-4 ನಿಮಿಷ ಆಗಿರಬಹುದು. ಯಾರೋ ಬಂದು ಹಿಡಿದೆತ್ತಿದಾಗ "ಅಯ್ಯೋ ದೇವರೇ, ಇನ್ನೂ ಬದುಕಬೇಕೆ" ಎಂದು ಯಾತನೆ ಅನುಭವಿಸಿದೆ. ಹರಿಗೋಲಲ್ಲಿ ದಡಕ್ಕೆ ತಂದರು. ಸಂಜೆ ಬಿಕ್ಕಳಿಕೆ, ತೇಗು, ವಾಂತಿ ಹೆಚ್ಚಾಯ್ತು. ರಾತ್ರಿ ಹೊಸಪೇಟೆಯ ಖಾಸಗಿ ಆಸ್ಪತ್ರೆಗೆ ಒಯ್ದರು. ಅಲ್ಲಿ ಇಂಜಕ್ಷನ್ ಕೊಟ್ಟರು, ಡ್ರಿಪ್ಸ್ ಹಾಕಿದರು. ನನ್ನ ಮಗ, ಗೊರುಚ, ಮರುಳಸಿದ್ಧಯ್ಯನವರು ನನ್ನನ್ನು ಕಾರಿನಲ್ಲಿ ಮಾರನೆಯ ದಿನ ಬೆಂಗಳೂರಿಗೆ ಕರೆದೊಯ್ದರು. ಅಸಾಧ್ಯ ನಿಶ್ಯಕ್ತಿ ಕಾಣಿಸಿಕೊಂಡಿತ್ತು. ಜಗತ್ತಿನಿಂದ ಮನಸ್ಸನ್ನೂ ಇಂದ್ರಿಯಗಳನ್ನೂ ಸಂಪೂರ್ಣ ಎಳೆದುಕೊಂಡು ಬಿಟ್ಟದ್ದೆ. ಅವನ್ನು ಮತ್ತೆ ಜಗತ್ತಿನತ್ತ ಹೊರಳಿಸುವುದು ಕಷ್ಟವಾಯಿತು, -ವಾಗಿದೆ. ಅಂಥ ಸಮಯದಲ್ಲಿ ನನ್ನನ್ನು ನಿಜವಾಗಿ ಬದುಕಿಸಿದ್ದು ಮೈಸೂರಿನಲ್ಲಿ ಶ್ರೀ ರಾಮಕೃಷ್ಣಾಶ್ರಮದ ವಾತಾವರಣ ನನಗೆ ಕಲಿಸಿದ್ದ ದೈವ ಧ್ಯಾನ; ಆ ಧ್ಯಾನದ ಕೇಂದ್ರ ವಸ್ತುವಾದ ಭಗವಂತ - ಅವನನ್ನು ನಾನು ವಿರೂಪಾಕ್ಷ ಎಂದು ಗುರುತಿಸಿಕೊಂಡಿದ್ದೇನೆ. (ಹರಿ, ಜಿನ, ಏಸು, ಬುದ್ಧ ಎಲ್ಲರೂ ಅವನೇ).

ಮನೆಗೆ ಸಹಜವಾಗಿಯೇ ಹಲವು ದೂರವಾಣಿಗಳು ಬಂದುವು. ಆತ್ಮೀಯರು ಬಂದರು. ನನ್ನ ಕಾರ್ಯವನ್ನು ವಿಮರ್ಶಿಸಿದರು, ಟೀಕಿಸಿದರು. ತೀವ್ರ ಅಸಮಾಧಾನ ವ್ಯಕ್ತಪಡಿಸಿದರು. ಸಹಜವೇ. ಪತ್ರಿಕೆಗಳಲ್ಲಿ ಸುದ್ದಿ ಆಯ್ತು. ನಾನು ವಾಸ್ತವವಾಗಿ ಏನು ನಡೆಯಿತು ಎಂಬುದರ ಸಂಕ್ಷಿಪ್ತ ವಿವರಣೆಯನ್ನು ಪತ್ರಿಕೆಗಳಿಗೆ ನೀಡುವುದು ಅನಿವಾರ್ಯವಾಯಿತು. ಅವು ಆ ವಿವರಣೆಯನ್ನು ಪ್ರಕಟಿಸಿದುವು. ಆ ಎಲ್ಲ ಗೆಳೆಯರಿಗೆ, ಆತ್ಮೀಯರಿಗೆ, ಪತ್ರಿಕೆಗಳಿಗೆ ನಾನು ಬಹುವಾಗಿ ಚಿರಋಣಿಯಾಗಿದ್ದೇನೆ. ಬಹು ಪ್ರೀತಿಯ ಮಾತುಗಳನ್ನು ಕೇಳಿದ್ದೇನೆ. ಅದಕ್ಕೆ ಪ್ರತಿಯಾಗಿ ನಾನು ಏನು ನೀಡಲೂ ಅಸಮರ್ಥನಾಗಿದ್ದೇನೆ.

ಇನ್ನು ಮೇಲೆ :

ನನ್ನ ಬಳಿಗೆ ಬಂದವರಲ್ಲಿ ಹಲವರು "ಇನ್ನು ಮೇಲೆ..." ಎಂದು ಹೇಳಲು ಆರಂಭಿಸುತ್ತಿದ್ದಂತೆ ಅವರಿಗೆ ನಾನು ಹೇಳಿದ್ದೇನೆ. - "ಜಲಪ್ರವೇಶ" ಒಂದು ಪ್ರತಿಜ್ಞೆಯಾಗಿತ್ತು. ಅದನ್ನು ನಾನು ನೆರವೇರಿಸಲೇಬೇಕಿತ್ತು. ಶ್ರದ್ಧೆಯಿಂದ ನೆರವೇರಿಸಿದೆ. ದೇವರು ಅದನ್ನು ಒಪ್ಪಿಕೊಂಡು ಮತ್ತೆ ನನ್ನನ್ನು ನೆಲದ ಮೇಲೆ ತಂದಿಟ್ಟಿದ್ದಾನೆ. ಇನ್ನೂ ನೀನು ಒಳಗೆ ಬೆಳೆಯಬೇಕಾಗಿದೆ, ನಿನ್ನಿಂದ ಆಗಬೇಕಾದ ಕೆಲಸ ಇನ್ನೂ ಇದೆ ಎಂದು ಸೂಚಿಸಿದ್ದಾನೆಂದೇ ನನ್ನ ಅಂತರಂಗ ಗ್ರಹಿಸಿದೆ."

ನಾನು ಸದ್ಯ ಹೆಚ್ಚು ಹೊರಗೆ ಹೋಗುತ್ತಿಲ್ಲ. ನನ್ನ ಸಮಯದ ಒಂದು ಭಾಗವನ್ನು ಧ್ಯಾನಕ್ಕೆ ಮೀಸಲಿಟ್ಟಿದ್ದೇನೆ. ನನ್ನಿಂದ ಆಗಬೇಕಾದ ಕಾರ್ಯದ ಬಗ್ಗೆ ಮಾರ್ಗದರ್ಶನಕ್ಕೆ ಕಾಯುತ್ತಿದ್ದೇನೆ. ಮುಂದಿನ ಹಾದಿ ಸ್ವಲ್ಪ ಸ್ವಲ್ಪ ಕಾಣುತ್ತಿದೆ. ನಾನು ಮಾಡಬೇಕೆಂದಿದ್ದ ಕನ್ನಡದ ಕೆಲಸವನ್ನು ಮುಂದೆ ಮುಂದುವರಿಸುತ್ತೇನೆ. ಆ ಬಗ್ಗೆ ಎಲ್ಲರ ಕ್ರಿಯಾತ್ಮಕ ಸಹಾನುಭೂತಿ ಇರಲಿ.

ಮೇಲಿನ ಎಲ್ಲವನ್ನೂ ಬಿಚ್ಚಿಡದಿದ್ದರೆ ನನಗೆ ಸಮಾಧಾನವಿರುತ್ತಿರಲಿಲ್ಲ. 'ಜಲಪ್ರವೇಶ'ದ ಬಳಿಕ ನಾನು ದೈಹಿಕಕ್ಕಿಂತ ಮಾನಸಿಕ ಯಾತನೆ ಅನುಭವಿಸಿದ್ದೇನೆ. ಅದಕ್ಕೆ ಜವಾಬ್ದಾರ ನಾನೇ. ಆ ಬಗ್ಗೆ ಪಶ್ಚಾತ್ತಾಪವಿಲ್ಲ. ಆ ಎಲ್ಲ ಯಾತನೆ ನನ್ನ ಕನ್ನಡದ ಕೆಲಸಗಳ ಒಂದು ಭಾಗವೆಂದೇ

ಭಾವಿಸಿದ್ದೇನೆ. ನಾನೇನೂ ಸ್ಥಿತಪ್ರಜ್ಞ ಅಲ್ಲ. ಆ ಸ್ಥಿತಿಯನ್ನು ಪಡೆಯುವ ಆದರ್ಶ ಮಾತ್ರ ನನ್ನದಾಗಿದೆ. ಆರುತ್ತಿದ್ದ ಧೈರ್ಯೋತ್ಸಾಹಗಳನ್ನು ಕೂಡಿಸಿಕೊಳ್ಳಲು ನಿರಂತರ ಪ್ರಯತ್ನವನ್ನೂ ನಡೆಸಿದ್ದೇನೆ. ನನ್ನನ್ನು ನಾನು ಒಳಗಿನ ಎಲ್ಲವನ್ನೂ ಹೇಳಿಕೊಂಡು ಹಗುರವಾಗದಿದ್ದರೆ, ನನಗೆ ಕಷ್ಟವಾಗುತ್ತಿತ್ತು. ಕಾಲ ಕಳೆಯಲು ನನ್ನ ಬದುಕಿನ ಹಿಂದಿನ ನೆನಪುಗಳನ್ನು ಬರೆಯುತ್ತಿದ್ದೇನೆ. ಅಷ್ಟು ಸದ್ಯಕ್ಕೆ ನನ್ನ ವಿಷಯ.

ಇನ್ನು ಈ ಕರಪತ್ರ ಓದುವವರ ಬಗ್ಗೆ. ನೀವು ಮುಖ್ಯವಾಗಿ ಚರ್ಚಿಸಬೇಕಾಗಿರುವುದು ನನ್ನ ವಿಷಯ ಅಲ್ಲ, ನಿಮ್ಮ ವಿಷಯವೆಂಬುದನ್ನು ವಿನಯದಿಂದ ಹೇಳಬಯಸುತ್ತೇನೆ. ನನ್ನ 'ಜಲಪ್ರವೇಶ'ದ ಘಟನೆಗಿಂತ ಮುಖ್ಯವಾದುದು ಅದಕ್ಕೆ ಒದಗಿ ಬಂದ ಸನ್ನಿವೇಶ. ಅದಕ್ಕೆ ಜವಾಬ್ದಾರರು ನೀವು, ಅವರು, ಎಲ್ಲರೂ. ನಿಮ್ಮ ಒಳಗನ್ನು ಪರೀಕ್ಷಿಸಿಕೊಳ್ಳಿ. ನಿಮ್ಮ ಸಮಯ, ಶ್ರಮ, ಆದಾಯದ ಒಂದು ಭಾಗವನ್ನಾದರೂ ಕರ್ನಾಟಕಕ್ಕಾಗಿ ಎಷ್ಟು ವ್ಯಯಿಸುತ್ತಿದ್ದೀರಿ ? ಅಥವಾ ನಿಮ್ಮನ್ನು ಮಾತ್ರ ಹೊರಗಿಟ್ಟುಕೊಂಡು ಸರ್ಕಾರವೂ ಸೇರಿದಂತೆ ಉಳಿದ ಎಲ್ಲರನ್ನೂ ಈಗಿನ ಯಾವುದೇ ವ್ಯವಸ್ಥೆ ಬಗ್ಗೆ, ಕರ್ನಾಟಕದ ದುಸ್ಥಿತಿ ಬಗ್ಗೆ ಟೀಕೆ ಮಾಡುವುದರಲ್ಲಿ ಕಾಲ ಕಳೆದಿದ್ದೀರಿ ! ನಿಮ್ಮದೂ ತಪ್ಪಿಲ್ಲವೇ ? ನಿಮ್ಮದೂ ಕರ್ತವ್ಯ ಇಲ್ಲವೇ ? ನಿಮ್ಮ ಒಳಗನ್ನು ಪರೀಕ್ಷಿಸಿಕೊಳ್ಳಿ.

ನನಗೆ ನಿಮ್ಮ ಪ್ರೀತಿ ಬೇಕು. ಭಗವಂತನ ಪ್ರೀತಿ ಎಂಬುದು ಅಮೂರ್ತ. ಅದು ನಿಮ್ಮ ಪ್ರೀತಿಯ ಮೂಲಕವೇ ವ್ಯಕ್ತವಾಗಬೇಕು. ನನ್ನ ಬಗ್ಗೆ ಪ್ರಾರ್ಥಿಸಿರಿ. ನಾನು ಮುಂದೆ ಕನ್ನಡದ ಕೆಲಸಗಳಲ್ಲಿ ಹೇಗೆ ಹೆಜ್ಜೆ ಇಡಬೇಕೆಂಬುದರ ಬಗ್ಗೆ ಸಲಹೆಗಳಿದ್ದರೆ ಕೊಡಿ. ಅವು ನಾನು ಮುಂದಿನ ಮಾರ್ಗವನ್ನು ಕಂಡುಕೊಳ್ಳಲು ಸಹಾಯವನ್ನೂ ಮಾಡಬಹುದು. ಆ ಮೂಲಕ ನೀವೂ ಒಂದು ರೀತಿಯ ಜವಾಬ್ದಾರಿ ಹೊತ್ತಂತಾಗುತ್ತದೆ. ನಿಮಗೆ ನಾನು ಕನ್ನಡದ ಕೆಲಸಗಳಿಂದ ಸದ್ಯಕ್ಕೆ ನಿವೃತ್ತನಾಗಿರುವಂತೆ ಕಂಡರೆ ಆಶ್ಚರ್ಯವಿಲ್ಲ. ನಾನು ಕನ್ನಡದ ಕೈಯ ಒಂದು ಉಪಕರಣ. ಆ ಉಪಕರಣ ತುಕ್ಕು ಹಿಡಿಯಲು ಬಿಟ್ಟಿಲ್ಲ, ಅದರ ಬದಲು ಮೊನಚಾಗುತ್ತಿದೆ.

ಈ ಪತ್ರವನ್ನು ಪ್ರಕಾಶಪಡಿಸುವಲ್ಲಿ ಯಾವುದೇ ಸಂಕೋಚವನ್ನೂ ನಾನು ಏಕಾದರೂ ಅನುಭವಿಸಬೇಕು ? ಅದರ ಹಿಂದೆ ಅಹಂಕಾರವಂತೂ ಇಲ್ಲವೇ ಇಲ್ಲ, ಇರುವ ಸಂಗತಿಗಳನ್ನು ನಿಮ್ಮ ಮುಂದೆ ಇಟ್ಟಿದ್ದೇನೆ. ಸಾವನ್ನು ಮುಟ್ಟಿ ಬಂದಿರುವ ನನ್ನನ್ನು ಹೊಗಳಿಕೆ, ಹಗುರ ಮಾತುಗಳೆರಡೂ ಮುಟ್ಟಲಾರವು. ಕನ್ನಡಿಗರಲ್ಲಿ ಸಾರ್ವತ್ರಿಕ ಜಾಗೃತಿ ಮೂಡುವುದನ್ನು ನಾನು ನೋಡಲೆಂದೇ ಭಗವಂತ ಉಳಿಸಿದ್ದಾನೆ ಎಂದೂ ನನ್ನ ಮನಸ್ಸು ಹೇಳುತ್ತಿದೆ. ಶುಭಮನಸ್ಸಿನಿಂದ ಅದು ನಿಜವಾಗಲಿ ಎಂದು ನೀವು ಹಾರೈಸಿ.

ಈ ಪತ್ರವನ್ನು ಅದು ಇರುವಂತೆ ಯಾವ ಪತ್ರಿಕೆಯೂ ಪ್ರಕಟಿಸಬಹುದು. ಪ್ರಕಟಿಸುವುದಾದರೆ ಪೂರ್ಣ ಪಾಠ ಪ್ರಕಟಿಸಬೇಕು. ಯಾರಿಗಾದರೂ ಇದು ಇನ್ನೂ ಹೆಚ್ಚು ಜನರ ಗಮನಕ್ಕೆ ಹೋಗುವುದು ಅಗತ್ಯವೆನ್ನಿಸಿದರೆ, ಅವರೂ ಪುನರ್ಮುದ್ರಿಸಬಹುದು. ಕನ್ನಡದ ಕೆಲಸಗಳನ್ನು ನಾನು ಉದ್ದಕ್ಕೂ ಪ್ರೀತಿ ಪ್ರೇಮಗಳನ್ನು ಬೆಳೆಸಿಕೊಳ್ಳುವ ಸಾಧನವೆಂದೇ ಭಾವಿಸಿದ್ದೇನೆ. ತಾವೂ ಭಾವಿಸಿದ್ದೀರಿ ಎಂದು ನಂಬಿದ್ದೇನೆ. ಯಾವುದೇ ಕಾರ್ಯವನ್ನು ಸಂಪೂರ್ಣ ನಿಷ್ಠೆ ಶ್ರದ್ಧೆ ಪ್ರಾಮಾಣಿಕತೆಯಿಂದ ಮಾಡಿದರೆ ಇಂದಲ್ಲ ನಾಳೆ ಫಲವನ್ನು ನೀಡಿಯೇ ನೀಡುವುದೆಂಬ ನಂಬಿಕೆ ನನ್ನದಾಗಿದೆ. ಮತ್ತು ಕನ್ನಡದ ಕೆಲಸಗಳಲ್ಲಿ ಅಪಾರಶ್ರಮ ಪಟ್ಟಿದ್ದೇನೆ, ಹಾಗೂ ಆ

**ಶ್ರಮದಲ್ಲಿ ಸಂತೋಷವನ್ನೂ ಕಂಡಿದ್ದೇನೆ. ನನ್ನ ದೃಢ ಶ್ರದ್ಧೆ ನನ್ನ ಜೀವನವೂ ಹೌದು, ಮರಣವೂ ಹೌದು.**

**ಎಲ್ಲರಿಗೂ ಪ್ರಣಾಮಗಳು.**

**ಎಂ. ಚಿದಾನಂದಮೂರ್ತಿ**

**[ಈ ದೊಡ್ಡ ಕರಪತ್ರ ಅಥವಾ ಕಿರು ಪುಸ್ತಿಕೆಯನ್ನು ಓದಿದವರು ಓದುವ ಆಸಕ್ತಿ ಇರುವವರ ಕೈಗೆ ತಲುಪಿಸಿದರೆ ನಾನು ಕೃತಜ್ಞ.**

**ಇದು ಆದಷ್ಟು ಜನರ ಕೈಗೆ ಹೋಗುವ ಬಯಕೆ ನನ್ನದು. ನನ್ನ ಆರ್ಥಿಕ ಮಿತಿಯಿಂದಾಗಿ ಹೆಚ್ಚು ಸಂಖ್ಯೆಯ ಪ್ರತಿಗಳನ್ನು ಮುದ್ರಿಸಲು ಅಶಕ್ತನಾಗಿದ್ದೇನೆ.]**

* * *

'ಜಲಪ್ರವೇಶ'ದ ಘಟನೆ ನನ್ನ ಮನೆಯವರಿಗೆ ತೀರ ಅನಿರೀಕ್ಷಿತವಾಗಿತ್ತು, ಬಹು ಆಘಾತಕಾರಿ ಸುದ್ದಿಯೂ ಆಗಿತ್ತು. ಜನ ಏನೆಂದುಕೊಂಡಾರೆಂಬ ಭಯವೂ ಸ್ವಾಭಾವಿಕವಾಗಿ ಅವರನ್ನು ಕಾಡಿರುತ್ತದೆ. ನನ್ನ ಬದುಕಿನ ಅನೇಕ ನಿರ್ಧಾರಗಳಂತೆ ಮೇಲಿನ 'ಜಲಪ್ರವೇಶ'ವೂ ನಾನು ಬಹುವಾಗಿ ಚಿಂತಿಸಿ, ನಿರ್ಭಾವದಿಂದ ಸಮಾಧಾನ ಚಿತ್ತದಿಂದ ಕೈಗೊಂಡ ದೃಢ ನಿರ್ಧಾರವಾಗಿತ್ತು. 'ಜಲಪ್ರವೇಶ'ದ ದಿನ ಸಂಜೆ ನನಗೆ ವಾಂತಿ. ಏನೂ ಮಾಡಿದರೂ ನಿಲ್ಲದಾಗ ನನ್ನನ್ನು ಹೊಸಪೇಟೆಯ ಖಾಸಗಿ ಆಸ್ಪತ್ರೆಗೆ ಕರೆದೊಯ್ದರು. ಆಗ ರಾತ್ರಿ ಒಂಬತ್ತು ಗಂಟೆ. ಆಸ್ಪತ್ರೆ ಮುಂದೆ ನಾನಿದ್ದ ವಾಹನ ನಿಲ್ಲಿಸಿ, ಒಳಗೆ ಡಾಕ್ಟರ್‌ಗೆ ಮಧ್ಯಾಹ್ನ ನಡೆದ ಎಲ್ಲ ಘಟನೆಗಳನ್ನು ವಿವರಿಸಿರಬೇಕು. ಹದಿನೈದು ನಿಮಿಷದ ಬಳಿಕ ಬಂದ ಮಹಿಳಾ ವೈದ್ಯರು ವಾಹನದಲ್ಲಿ ಮಲಗಿದ್ದ ನನ್ನ ಕಣ್ಣನ್ನು ತೆರೆಯಲು ಹೇಳಿ ಮುಖದ ಮೇಲೆ ಟಾರ್ಚ್ ಬೆಳಕು ಬಿಟ್ಟಾಗ, ನಾನು ನೇರವಾಗಿ ಅವರನ್ನು ಕೇಳಿದ ಪ್ರಶ್ನೆ ಇದು - "ನನ್ನ ಕಣ್ಣಲ್ಲಿ ಭಯದ ಛಾಯೆ ಇದೆಯೇ?". ನನಗೆ ಭಯವಾಗಿರಲಿಲ್ಲ, ಅದರ ಬದಲು ಬದುಕಿ ಹಿಂದಕ್ಕೆ ಬಂದುದರ ಬಗ್ಗೆ ನನಗೇ ಬೇಸರವಾಗಿ, ಅದೂ ಭಗವಂತನ ಸಂಕಲ್ಪವಿರಬೇಕೆಂದು ಸಮಾಧಾನ ಹೇಳಿಕೊಳ್ಳುತ್ತಿದ್ದೆ. ಹೊಸಪೇಟೆಯ ನಗುಮೊಗದ ವೈದ್ಯರು ಪ್ರೀತಿಯಿಂದ ಆರೈಕೆ ಮಾಡಿದರು. ಕನ್ನಡ ವಿಶ್ವವಿದ್ಯಾಲಯದ ಕೆಲವು ಗೆಳೆಯರೂ ನನ್ನ ಆರೈಕೆ ಮಾಡಿದರು.

ಬೆಂಗಳೂರಿಗೆ ಬಂದು ಈ ಜಗತ್ತಿನ ವ್ಯವಹಾರಗಳಿಗೆ ನಾನು ಹೊಂದಿಕೊಳ್ಳಲು ಮಾಡಿದ ಮಾನಸಿಕ ಪ್ರಯತ್ನವೇ ಒಂದು ಕತೆ. ಅದರ ವಿವರಗಳೂ ಸದ್ಯಕ್ಕೆ ಅಪ್ರಸ್ತುತ. ಹಲವರು ಪೂಜ್ಯರು, ಗಣ್ಯರು, ಮಿತ್ರರು, ಕನ್ನಡ ಕಾರ್ಯಕರ್ತರು ಮನೆಗೆ ಬಂದು ನನಗೆ ಸಮಾಧಾನ ಹೇಳಿದರು. ನೂರಾರು ಜನ ಪತ್ರ ಬರೆದು ತಮ್ಮ ಪ್ರೀತಿಯ ಮಳೆಯನ್ನೇ ನನ್ನ ಮೇಲೆ ಸುರಿಸಿದರು. ಒಬ್ಬರು ತೀರ ಸ್ನೇಹದಿಂದಲೇ "ನೀವು ಒಬ್ಬ ಮನೋವಿಜ್ಞಾನ ತಜ್ಞವೈದ್ಯರಿಂದ ನಿಮ್ಮನ್ನು ಪರೀಕ್ಷೆ ಮಾಡಿಸಿಕೊಳ್ಳಿ" ಎಂದೂ ಸಲಹೆ ಕೊಟ್ಟಿದ್ದರು. ನನಗೆ

ಆ ಪತ್ರ ಓದಿ, "ನೀವೇ ಬಂದು ಪರೀಕ್ಷೆ ಮಾಡಿಸಿ" ಎಂದೂ ಬರೆಯಬೇಕೆನ್ನಿಸಿತ್ತು (ಈಗಲೂ ಅದಕ್ಕೆ ಸಿದ್ಧ). ಆದರೆ ನನ್ನನ್ನು ಆ ಉತ್ಕಟ ಸಮಯದಲ್ಲಿ ಕಾಪಾಡಿದ್ದು ದೈವ, ದೈವದ ಮೇಲಿನ ಅಖಂಡ ಶ್ರದ್ಧೆ, ನನ್ನ ನಿರಂತರ ಧ್ಯಾನ.

ಈ ಮಧ್ಯೆ ಕನ್ನಡ ಕಾರ್ಯಕರ್ತರು ಸಭೆ ಸೇರಿ ನಾನು ಮತ್ತೆ ಕನ್ನಡ ಕಾರ್ಯಕರ್ತನಾಗಿ ಸಕ್ರಿಯ ಪಾತ್ರ ವಹಿಸಬೇಕೆಂದೂ ಕನ್ನಡ ಚಳವಳಿಯಿಂದ ದೂರ ಸರಿಯಬಾರದೆಂದೂ ನಿರ್ಣಯಮಾಡಿ ತಂದೊಪ್ಪಿಸಿದರು. ಎರಡು ಮೂರು ತಿಂಗಳು ನಾನು ನನ್ನ ಮನೆಯಲ್ಲಿಯೇ ಆದಷ್ಟು ಏಕಾಂತವಾಗಿದ್ದು, ಒಳಗೇ ಅನುಭವಿಸಿದ ಯಾತನೆ ನರಕಸದೃಶ. ನಾನು ಮಾನಸಿಕವಾಗಿ ಸಂಪೂರ್ಣ ದೂರ ಸರಿದಿದ್ದ ಒಂದು ಹೊಸ ಪ್ರಪಂಚದ ಜೊತೆ ಸಂಪರ್ಕ ಬೆಳೆಸುವುದು ತೀರ ಕಷ್ಟವೇ ಆಯಿತು.

ನಾನು ನನ್ನ ಮಿತಿಯಲ್ಲೇ ದುಡಿದ ಎರಡು ಕ್ಷೇತ್ರಗಳ ಲೌಕಿಕ ಫಲಗಳನ್ನು ಕಣ್ಣಾರೆ ಕಾಣುವುದಕ್ಕಾಗಿ ಭಗವಂತ ನನ್ನನ್ನು ಉಳಿಸಿರಬೇಕು ಎಂದು ನನಗೇ ಹೇಳಿಕೊಂಡು ವಿನೋದಪಟ್ಟಿದ್ದೇನೆ. ಸಂಶೋಧನೆಯ ಕೆಲಸಗಳಿಗಾಗಿ ಕೇಂದ್ರ ಸಾಹಿತ್ಯ ಅಕಾದೆಮಿ ಪ್ರಶಸ್ತಿಯು ನನ್ನ "ಹೊಸತು ಹೊಸತು" ಕೃತಿಗೆ ಲಭ್ಯವಾಯಿತು. ಅದರ ಪ್ರಕಾಶಕರು ಹಂಪಿಯ ಕನ್ನಡ ವಿಶ್ವವಿದ್ಯಾಲಯ ಎಂಬುದು ಆಕಸ್ಮಿಕವಿರಬಹುದು, ಆದರೆ ನನಗೆ ಅರ್ಥಪೂರ್ಣ. ಅಂತೆಯೇ ಮುಖ್ಯವಾಗಿ ಕನ್ನಡಪರ ಚಟುವಟಿಕೆಗಳಿಗಾಗಿ ಅ.ನ.ಕೃ. ಪ್ರತಿಷ್ಠಾನ ಪ್ರಶಸ್ತಿ ದೊರಕಿದುದು ನನಗೆ ಸಂತೋಷವನ್ನು ತಂದಿತು.* ಅದು ಭಗವಂತ ನನ್ನನ್ನು ಆಶೀರ್ವದಿಸಿ ಸಮಾಧಾನಪಡಿಸಿದ ರೀತಿ. ಆ ಪ್ರಶಸ್ತಿಗಳು ದೊರಕದೇ ಇದ್ದಿದ್ದರೆ ಆ ಬಗ್ಗೆ ಖಂಡಿತ ಚಿಂತೆಯೇ ಇರುತ್ತಿರಲಿಲ್ಲ.

"ಜಲ ಪ್ರವೇಶ"ದಿಂದ ಬದುಕಿ ಬಂದ ಬಳಿಕ ಆ ಹಿಂದೆ ನಿಂತು ಹೋಗಿದ್ದ ಹಲವು ಕೆಲಸಗಳನ್ನು ಪೂರ್ಣಗೊಳಿಸಲು ಸಾಧ್ಯವಾಯಿತು. ತೀ.ನಂ.ಶ್ರೀ. ಪ್ರತಿಮೆ ಸ್ಥಾಪನೆಗಾಗಿ ಆ ಮುಂಚೆ ಹಣ ಸಂಗ್ರಹವಾಗಿದ್ದು ಸಾಕಷ್ಟು ಕೆಲಸದ ಪ್ರಗತಿಯಾಗಿತ್ತು. ನಾನು ಹಂಪಿಯಿಂದ ತೀ.ಶ್ರೀ. ನಾಗಭೂಷಣ ಅವರಿಗೆ ಪತ್ರ ಬರೆದು, ಅದನ್ನು ನನ್ನ ಪರೋಕ್ಷದಲ್ಲಿ ಕೈ ಬಿಡದೆ

---

* 23.8.97ನೇ ತಾರೀಖು ನನ್ನ 'ಜಲಪ್ರವೇಶ'ವಾದ ದಿನ. 23.12.97ರಂದು ನನ್ನ ಮನೆಯ ಮುಂದೆ ತೀರ ಪುಟ್ಟ ಹಾವಿನ ಮರಿ ಕಾಣಿಸಿತು. ಹೊಡೆಯಲು ಮನಸ್ಸಾಗಲಿಲ್ಲ. ಜಲಪ್ರವೇಶದ ಹಿಂದಿನ ದಿನ ನಾಗರಹಾವಿನ ದರ್ಶನವಾದುದು ನೆನಪಿಗೆ ಬಂದಿತು. ಅದೇ ದಿನ (23.12.97) ರಾತ್ರಿ ಪ್ರೊ. ಎಲ್.ಎಲ್. ಶೇಷಗಿರಿರಾವ್ ದೂರವಾಣಿ ಮಾಡಿ "ಹೊಸತು ಹೊಸತು" ಕೃತಿ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿಗೆ ಶಿಫಾರಸಾಗಿರುವ ವಿಷಯ ತಿಳಿಸಿದಾಗ ದಿಗ್ಭ್ರಮೆ, ಆಶ್ಚರ್ಯ, ಸಂತೋಷ ಎಲ್ಲವೂ ಮೂಡಿದುವು. "ದೇವರೇ, ನೀನು ಇರುವುದನ್ನು ತೋರಿಸಿಕೊಳ್ಳುತ್ತಿರುವೆ, ಆಶೀರ್ವದಿಸುತ್ತಿರುವೆ" ಎಂದು ಹೇಳಿಕೊಂಡಾಗ ಕಣ್ಣಲ್ಲಿ ನೀರು ಬಂತು. ಅ.ನ.ಕೃ. ಪ್ರಶಸ್ತಿ ಪ್ರದಾನ ನಡೆದುದೂ 23.5.99ರಂದು. ಹಂಪಿಯಲ್ಲಿ ಮೊದಲ ಸಂಕಲ್ಪ ಮಾಡಿದುದು 23.6.85 (ಈ ತೇದಿ ನನಗೆ ಜಲಪ್ರವೇಶದ ಸಂದರ್ಭದಲ್ಲಿ ಮರೆತುಹೋಗಿತ್ತು). 'ಪಂಪಪ್ರಶಸ್ತಿ' ನನಗೆ ದೊರಕಿದ್ದು 23.12.02 ಪ್ರಕಟವಾಯಿತು. ಎಲ್ಲವೂ ಆಕಸ್ಮಿಕವೆಂದು ಯಾರಾದರೂ ಭಾವಿಸಿದರೆ ನನಗೇನೂ ಯೋಚನೆಯಿಲ್ಲ.

ಮುಂದುವರಿಸಬೇಕೆಂದು ಕೇಳಿಕೊಂಡಿದ್ದೆ. ನನ್ನ ಪ್ರೀತಿಯ ಗುರುಗಳ ಪ್ರತಿಮೆ ಅನಾವರಣಗೊಳ್ಳುವುದನ್ನು ನೋಡುವ ಅವಕಾಶ ದೊರಕಿತು. ಶ್ರೀ ಸರ್ಪಭೂಷಣ ಮಠ ತರಬೇಕೆಂದಿದ್ದ "ಭೂಷಣ" ಎಂಬ ಬೃಹತ್ ಸಂಸ್ಮರಣ ಸಂಪುಟದ ಬಗ್ಗೆ ಸಾಕಷ್ಟು ಕೆಲಸ ನಡೆದಿತ್ತು. ಆ ಬಗ್ಗೆಯೂ ಡಾ. ಸಿ.ಯು. ಮಂಜುನಾಥ್ ಅವರಿಗೆ ಮುಂದುವರಿಸಲು ಕೇಳಿಕೊಂಡು ಪತ್ರ ಬರೆದಿದ್ದೆ. ಅದು ಬಿಡುಗಡೆಯಾಗುವುದನ್ನು ಕಾಣುವ ಭಾಗ್ಯ ನನ್ನದಾಗಿತ್ತು. ಕಿತ್ತೂರು ರಾಣಿ ಚನ್ನಮ್ಮ ಪ್ರತಿಮೆ ಸ್ಥಾಪನೆಗೆ ಸಾಕಷ್ಟು ಪ್ರಯತ್ನವನ್ನು ನಡೆಸಲಾಗಿತ್ತು. ಈಗ ಆ ಪ್ರತಿಮೆಯ ವೇದಿಕೆಯನ್ನು (Pedastal) ಸಿದ್ಧಪಡಿಸುವ ಕಾರ್ಯ ಭರದಿಂದ ಸಾಗಿದ್ದು ಒಂದೆರಡು ತಿಂಗಳಲ್ಲಿ ಅದು ಅನಾವರಣಗೊಳ್ಳಲಿದೆ. ಕೊಡಗಿಗೆ ಹೋಗಿ ಅಲ್ಲಿಯ "ಕೊಡಗು ಪ್ರಜಾವೇದಿಕೆ" ಜೊತೆ ಸೇರಿ, ಅಲ್ಲಿಯ ಬೃಹತ್ ಸಮಾವೇಶಗಳಲ್ಲಿ ಭಾಗವಹಿಸಿ, ಅದರ ನಿಯೋಗಗಳನ್ನು ಬೆಂಗಳೂರಿಗೆ ಬರಮಾಡಿಕೊಂಡು ಆ ನಿಯೋಗಗಳು ಸರ್ಕಾರದೊಡನೆ ಸಮಾಲೋಚಿಸುವ ವ್ಯವಸ್ಥೆ ಮಾಡಿ, ಕೊಡಗು ಪ್ರತ್ಯೇಕತಾವಾದವು ತೀರ ದುರ್ಬಲಗೊಳ್ಳುವಂತೆ ಮಾಡಲಾಗಿದೆ. (ಆ ಎಲ್ಲವನ್ನೂ ಮೇಲೆಯೂ ಸೂಚಿಸಲಾಗಿದೆ). ಸಾಹಿತಿಗಳ ಕಲಾವಿದರ ಬಳಗ ಮತ್ತು ಕನ್ನಡ ಶಕ್ತಿ ಕೇಂದ್ರ ಇವುಗಳ ಇತಿಹಾಸ ಕುರಿತಂತೆ ಎರಡು ಪುಸ್ತಕಗಳು ಪ್ರಕಟಗೊಳ್ಳುವಂತೆ ಮಾಡಲಾಗಿದೆ.

ನನ್ನ ಎರಡು ಪುಸ್ತಕಗಳು (ವಚನಶೋಧ I ಮತ್ತು II) ಪ್ರಕಟಗೊಂಡಿವೆ. ಮುಖ್ಯವಾಗಿ ನನ್ನ ನೆನಪುಗಳನ್ನೊಳಗೊಂಡ ಸುಮಾರು ಆರು ನೂರು ಪುಟಗಳ ಬರಹದ ಹಸ್ತಪ್ರತಿ ಸಿದ್ಧವಾಗಿದೆ. ಅದನ್ನು ಮುಂದುವರಿಸಿ ಮುಗಿಸಲಿದ್ದೇನೆ. ಮುಂದಿನ ಬರಹದ ಭಾಗ ಮುಖ್ಯವಾಗಿ ನನ್ನ ಕನ್ನಡ ಚಳವಳಿಯ ಅನುಭವಗಳನ್ನು ಒಳಗೊಂಡಿರುತ್ತದೆ.

ಎಂದರೆ ಈ ಎರಡು ವರ್ಷಗಳನ್ನು ಸಾಕಷ್ಟು ಕ್ರಿಯಾತ್ಮಕವಾಗಿ ಕಳೆದಿದ್ದೇನೆ. "ಜಲಪ್ರವೇಶ"ದ ಬಗ್ಗೆ ನಾನು ವೈಭವೀಕರಿಸಿ ಮಾತನಾಡಲಂತೂ ಹೋಗಿಲ್ಲ. ಅಂತಹ ಭಾವನೆಯೇನಾದರೂ ಮನಸ್ಸಿನಲ್ಲಿದ್ದರೆ ಭಗವಂತ ನನ್ನನ್ನು ಖಂಡಿತ ಕ್ಷಮಿಸನು. ಅಂತೆಯೇ ಆ ಬಗ್ಗೆ ಏನೋ ದುಡುಕಿನ ತಪ್ಪು ಮಾಡಿದ ಪೇಚಾಟದ ಭಾವನೆಯೂ ನನ್ನಲ್ಲಿಲ್ಲ. ಒಂದು ಪತ್ರಿಕೆ ಎರಡು ಮೂರು ಬಾರಿ ನಾನು ಆತ್ಮಹತ್ಯೆಗೆ ಪ್ರಯತ್ನಪಟ್ಟು ವಿಫಲನಾದ ವ್ಯಕ್ತಿ ಎಂದು ವ್ಯಂಗ್ಯವಾಗಿ ಬರೆದುದನ್ನು ಓದಿ ನಕ್ಕುಬಿಟ್ಟೆ. ಒಂದೆರಡು ಸಭೆಗಳಲ್ಲಿ "ಚಿದಾನಂದಮೂರ್ತಿಯವರು ಮತ್ತೊಮ್ಮೆ ಆತ್ಮಹತ್ಯೆಗೆ ಪ್ರಯತ್ನಿಸಬಾರದು, ಅವರ ಅಗತ್ಯ ನಮಗಿದೆ" ಎಂದು ನನ್ನ ಆತ್ಮೀಯರು ವಿಶ್ವಾಸದಿಂದಲೇ ಹೇಳಿದಾಗ, "ಆತ್ಮಹತ್ಯೆ"ಗೂ "ಆತ್ಮಬಲಿ"ಗೂ ಇರುವ ವ್ಯತ್ಯಾಸವನ್ನು ನಾನು ಸ್ಪಷ್ಟಪಡಿಸುವ ಗೋಜಿಗೆ ಹೋಗಲಿಲ್ಲ. ನನ್ನ "ಆತ್ಮಬಲಿ" ನಾನು ಉದ್ದೇಶಿಸಿದ ಪರಿಣಾಮ ಬೀರಿದೆಯೇ ? ಭಗವದ್ಗೀತೆಯ ನಿಷ್ಕಾಮಕರ್ಮ ತತ್ವವನ್ನು ಓದಿರುವ ನಾನು, ಅಂತರ್ಗತ ಮಾಡಿಕೊಳ್ಳಲು ಯತ್ನಿಸುತ್ತಿರುವ ನಾನು ಆ ಬಗ್ಗೆ ತೀರ ಸಮಾಧಾನದ ಮನಸ್ಥಿತಿಯನ್ನು ಉಳಿಸಿಕೊಂಡಿದ್ದೇನೆ. ನನ್ನ ಕ್ರಿಯೆಯ ಹಿಂದೆ ಒಂದು ನಿರ್ಭೀತ ಉದಾತ್ತ ಧ್ಯೇಯವಿದೆಯೆಂಬ ದೃಢ ವಿಶ್ವಾಸವುಳ್ಳ ನಾನು, ಮತ್ತು

ಭಗವತ್ ಕೃಪೆಯ ಬಗ್ಗೆ ಅನಂತ ವಿಶ್ವಾಸ ಹೊಂದಿರುವ ನಾನು ಫಲಪ್ರಾಪ್ತಿಯ ಬಗ್ಗೆ ಹೆಚ್ಚು ಚಿಂತಿಸಬಾರದು. "ಕಾಲೋಹ್ಯಯಂ ನಿರವಧಿಃ, ವಿಪುಲಾ ಚ ಪೃಥ್ವೀ".

## ಉಪ - ಸಂಹಾರ

ಬೇಕೆಂದೇ ಮೇಲಿನ ಉಪಶೀರ್ಷಿಕೆಯಡಿ ಈ ಭಾಗವನ್ನು ಬರೆಯುತ್ತಿದ್ದೇನೆ (ಇದನ್ನು ವಿಸ್ತರಿಸುವ ಅಗತ್ಯವಿಲ್ಲ). ಅದು ಈಚೆಗೆ ಮನಸ್ಸನ್ನು ಬಹುವಾಗಿ ಕಲಕಿರುವ ಘಟನೆಗಳಿಗೆ ಸಂಬಂಧಿಸಿದ್ದು. ನಾನು ಕನ್ನಡದ ಚಟುವಟಿಕೆಗಳಿಂದ, ಹಿಂದಿನದಕ್ಕೆ ಹೋಲಿಸಿದರೆ ಕ್ರಮೇಣ ದೂರವಾಗುತ್ತ ನಡೆದೆ. ಆದರೂ ಎರಡು ಮೂರು ತಿಂಗಳ ಬಳಿಕ ಪ್ರತಿ ಬುಧವಾರದ ಕಾರ್ಯಕರ್ತರ ಸಭೆಗಳಿಗೆ ಹಾಜರಾದೆ. ನಲವತ್ತು ಐವತ್ತು ಜನ ಸೇರುತ್ತಿದ್ದ ಆ ಸಭೆಗಳಿಗೆ ನಾಲ್ಕು ಐದು ಜನ ಬರುತ್ತಿದ್ದರು. ಕೆಲವು ಅನುಸರಣ ಕಾರ್ಯಗಳತ್ತ ವಿಶೇಷ ಗಮನವನ್ನು ಕೊಟ್ಟೆವು. ಕನ್ನಡ ಚಳವಳಿಯಲ್ಲಿ 1982ರಿಂದ ನಡೆಯದೆ ಇದ್ದ ಕೆಲವು ಅಹಿತಕರ ಘಟನೆಗಳು ಈಚೆಗೆ ನಡೆದು, ಕೆಲವು ಸಂಘಟನೆಗಳ ಬಗ್ಗೆ ನನಗಿದ್ದ ವಿಶ್ವಾಸ ಕುಂದುತ್ತ ಬಂದಿತು.

1. ಮಲ್ಲೇಶ್ವರದ ಕ್ರಿಸ್ತ ದೇವಾಲಯದ ಆವರಣದಲ್ಲಿ ಸಂಜೆಪ್ರಾರ್ಥನೆಗಾಗಿ ಕಿಕ್ಕಿರಿದು ತುಂಬಿದ್ದ ಜನರ ಮೇಲೆ (ಅವರು ಹೆಚ್ಚಾಗಿ ಅನ್ಯಭಾಷಿಕರೇ ಇರಬಹುದು) ಕನ್ನಡ ಸಂಘವೊಂದರ ಕಾರ್ಯಕರ್ತರು ನಮ್ಮ ಮುಂದೆಯೇ ಬೀದಿಯಲ್ಲಿ ನಿಂತು ದೊಡ್ಡ ಕಲ್ಲುಗಳನ್ನು ಎಸೆದುದು (ಆ ಸಮಯದಲ್ಲಿ ಸಾ.ಶಿ. ಮರುಳಯ್ಯನವರೂ ನನ್ನ ಜೊತೆ ಇದ್ದರು) ನನಗೆ ತೀವ್ರ ಆಘಾತವುಂಟುಮಾಡಿತು. ಆ ಕಲ್ಲುಗಳು ಯಾರ ಮೇಲೋ ಬಿದ್ದಿರಬೇಕು. ಬೀಳದೆ ಇದ್ದರೆ ಅದೊಂದು ಪವಾಡವೇ ಸರಿ. ಅದೇ ರಾತ್ರಿ ಪೋಲೀಸ್ ಠಾಣೆಯಲ್ಲಿ ಅದೇ ಸಂಘದ ಕಾರ್ಯಕರ್ತರು ತೀರ ಕ್ಷುಲ್ಲಕ ಕಾರಣಕ್ಕಾಗಿ ಸರ್ಕಲ್ ಇನ್‌ಸ್ಪೆಕ್ಟರ್ ಮುಂಭಾಗದ ಮೇಜಿನ ಮೇಲಿನ ಗ್ಲಾಸನ್ನು ಗುದ್ದಿ ಒಡೆದುದು ಅಶಿಸ್ತಿನ ಪರಮಾವಧಿಯಾಗಿತ್ತು. ಸಂಪೂರ್ಣ ಕನ್ನಡ ಪರವಾಗಿದ್ದ ಆ ಇನ್‌ಸ್ಪೆಕ್ಟರ್ ಅಂದು ಸಂಜೆ ಕನ್ನಡ ಕಾರ್ಯಕರ್ತರ ಮೇಲೆ ಹಲ್ಲೆ ನಡೆಸಿದ ಅನ್ಯಭಾಷಿಕ ಗೂಂಡಾಗಳ ಮೇಲೆ ಮೊಕದ್ದಮೆ ಹೂಡಲು ಒಪ್ಪಿದ್ದರು. ಆ ಪೋಲೀಸ್ ಅಧಿಕಾರಿ ಮೇಲಿನ ಘಟನೆಯಿಂದ ಮೊಕದ್ದಮೆ ಹೂಡದೆ ತಟಸ್ಥರಾಗಿಬಿಟ್ಟರು.

2. ಕೊಡಗಿನ ಸೋಮವಾರ ಪೇಟೆಯಲ್ಲಿ ಕರ್ನಾಟಕ ಪರ ಸಮಾವೇಶ ನಡೆಯಲಿರುವ ವಿಷಯವನ್ನು ತಿಳಿಸಲು ಶಕ್ತಿ ಕೇಂದ್ರ ಕರೆದಿದ್ದ ಪತ್ರಿಕಾಗೋಷ್ಠಿಯಲ್ಲಿ, ಅವರನ್ನು ಕನ್ನಡ ಶಕ್ತಿ ಕೇಂದ್ರ ಕರೆದಿರಲಿಲ್ಲವಾದರೂ ಬೆಂಗಳೂರಿನ ವಾರ ಪತ್ರಿಕೆಯೊಂದರ ಸಂಪಾದಕರು ಹಾಜರಾಗಿ ಒಬ್ಬ ಮಂತ್ರಿಗಳ ಬಗ್ಗೆ ಏಕವಚನ ಬಳಸಿ ತೀರ ಹಗುರವಾಗಿ ಮಾತನಾಡಿ ಪತ್ರಿಕಾಗೋಷ್ಠಿಯ ಗಾಂಭೀರ್ಯವನ್ನೇ ಕಳೆದರು.

3. ಸೋಮವಾರಪೇಟೆಯಲ್ಲಿ ಬೆಂಗಳೂರಿನಿಂದ ಬಂದಿದ್ದ ಒಬ್ಬರು ಕರ್ನಾಟಕ ಪರ ಬೃಹತ್ ಸಭೆಯಲ್ಲಿ ಮಾತನಾಡುತ್ತ "ಕೊಡವ"ರ ಬಗ್ಗೆ ಕೆಟ್ಟ ರೀತಿಯಲ್ಲಿ ಮಾತನಾಡಿ ಎಲ್ಲರಿಗೂ ಬೇಸರ ಉಂಟು ಮಾಡಿದರು. ನನಗಂತೂ ತೀರ ಕಿರಿಕಿರಿ ಆಯ್ತು.

4. ಸೋಮವಾರಪೇಟೆಯಿಂದ ಬೆಂಗಳೂರಿಗೆ ಬಂದಿದ್ದ "ಕೊಡಗು ಪ್ರಜಾವೇದಿಕೆ"ಯ ಜಾಥಾವನ್ನು ಕನ್ನಡ ಶಕ್ತಿ ಕೇಂದ್ರವು ಸ್ವಾಗತಿಸಲು ಹಲವು ಸಂಘಟನೆಗಳ ಸಹಕಾರದೊಡನೆ ಕೃಷ್ಣ ರಾಜೇಂದ್ರ ವೃತ್ತದಲ್ಲಿ ಸಭೆ ಏರ್ಪಡಿಸಿತ್ತು. ತಮ್ಮನ್ನು ಕರೆದಿಲ್ಲವೆಂದು ಕೆಲವು ಸಂಘಟನೆಗಳ ಸದಸ್ಯರು (ಅವರನ್ನು ಕರೆಯದಿದ್ದುದಕ್ಕೆ ಕಾರಣ ಅವರ ಹಿಂದಿನ ನಡವಳಿಕೆಗಳು) ಸಭೆಯಲ್ಲಿ ಕೆಟ್ಟ ರೀತಿಯಲ್ಲಿ ನಡೆದುಕೊಂಡು ನನ್ನ ಬಗ್ಗೆ ಬಹು ಕೆಳ ರೀತಿಯಲ್ಲಿ ಮಾತನಾಡಿದರು.

5. ಬೆಂಗಳೂರು ಮಹಾ ಧರ್ಮಾಧ್ಯಕ್ಷರ ಮನೆ ಮುಂದೆ ರೋಮನ್ ಕ್ಯಾಥೋಲಿಕ ಕ್ರೈಸ್ತರ ಕನ್ನಡ ಸಂಘವು ವ್ಯವಸ್ಥೆಮಾಡಿದ್ದ ಪ್ರತಿಭಟನೆಯ ಧರಣದಲ್ಲಿ ಮಾತನಾಡಿದ ಕೆಲವರು ನನ್ನ ಬಗ್ಗೆ ಅನುಚಿತ ಟೀಕೆಯನ್ನು ಮಾಡಿ, ನನ್ನದು ಮಡಿ ಧೋರಣೆ ಎಂದರು. ಅಂತಹ ಜನಗಳನ್ನಿಟ್ಟುಕೊಂಡು ಮಾಡಿದ ಯಾವುದೇ ಕಾರ್ಯಕ್ರಮವೂ ಸುದ್ದಿಯಾಗಬಹುದೇ ಹೊರತು, ತನ್ನ ಅರ್ಥವಂತಿಕೆ ಕಳೆದುಕೊಂಡು ಏನೂ ಫಲ ನೀಡುವುದಿಲ್ಲವೆಂದೇ ಅವರಿಂದ ನಾನು ದೂರ ಉಳಿಯಲು ಕಾರಣವೆಂಬುದು ಅವರಿಗೆ ಅರ್ಥವಾದೀತು ಹೇಗೆ ? "ನಮ್ಮನ್ನು ಚಿದಾನಂದಮೂರ್ತಿಯವರು ದೂರ ಇಟ್ಟಿದ್ದಾರೆ" ಎಂಬಂತಹ ಮಾತೇ ಆತ್ಮವಿಶ್ವಾಸದ ಕೊರತೆಯ ಲಕ್ಷಣ.

6. ನೈರುತ್ಯ ರೈಲ್ವೆ ವಲಯ ಕೇಂದ್ರವು ಹುಬ್ಬಳ್ಳಿಯಲ್ಲಾಗಬೇಕೇ, ಬೆಂಗಳೂರಿನಲ್ಲಿರಬೇಕೇ ಎಂಬ ವಿಷಯವು ವಿವಾದಕ್ಕೊಳಗಾದಾಗ, ಹುಬ್ಬಳ್ಳಿ ಪರವಾಗಿ ಬೆಂಗಳೂರಿನ ಉತ್ತರ ಕರ್ನಾಟಕ ನಾಗರಿಕರ ವೇದಿಕೆಯು ನಡೆಸಿದ ಸಭೆಗೆ ಮೂವತ್ತು ನಲವತ್ತು ಜನ ಬಂದು ಗಲಾಟೆ ಮಾಡಿ, ಅಸಭ್ಯ ರೀತಿಯಲ್ಲಿ ನಡೆದುಕೊಂಡು ಇಡೀ ಸಭೆ ನಡೆಯದಂತೆ ಮಾಡಿದರು. ಅವರೆಲ್ಲ ಮೇಲೆ ಹೇಳಿದ ಗುಂಪಿನವರೇ ಆಗಿದ್ದರು. ವಿಶೇಷವಾಗಿ ಅಂದಿನ ಸಭೆಯಲ್ಲಿ ನನ್ನ ಬಗ್ಗೆ ಬಹು ಕೆಳಮಟ್ಟದಲ್ಲಿ ನಡೆದುಕೊಂಡರು. ಭಿನ್ನಾಭಿಪ್ರಾಯಗಳನ್ನು ಗೌರವದಿಂದ ಕಾಣುವ ಮತ್ತು ಸಭ್ಯ ರೀತಿಯಲ್ಲಿ ನಡೆದುಕೊಳ್ಳುವ ರೀತಿ ಗೊತ್ತಿರದವರಿಂದ ಯಾವ ಅರ್ಥಪೂರ್ಣ ಕೆಲಸವನ್ನೂ ನಿರೀಕ್ಷಿಸುವುದು ಕಷ್ಟವಾಗುತ್ತದೆ. ಮೂರು ವರ್ಷಗಳ ಹಿಂದೆ (1.3.96) ದೆಹಲಿಯಲ್ಲಿ ನನ್ನ ಬಗ್ಗೆ ಅದೇ ಗುಂಪಿನವರು ಏಕವಚನ ಬಳಸಿದಾಗ ನಾನು ಅದನ್ನು ತೀರ ಹಗುರವಾಗಿ ತೆಗೆದುಕೊಂಡಿದ್ದೆ.

7. ನನಗೆ ಅ.ನ.ಕೃ. ಸ್ಮಾರಕ ಪ್ರತಿಷ್ಠಾನದ ಪ್ರಶಸ್ತಿ ಪ್ರದಾನವಾದ ಸಭೆಗೆ ಮುನ್ನ "ಹುಬ್ಬಳ್ಳಿ - ನೈರುತ್ಯ ರೈಲ್ವೆ ವಲಯ ಕೇಂದ್ರವಾಗಿ" ಎಂಬ ನನ್ನ ಕಿರುಪುಸ್ತಕವನ್ನು ಹಂಚಿಸಿದ್ದಕ್ಕೆ ಆ ಸಭೆಯಲ್ಲಿ ನನಗೆ ಕೆಲವರು ಧಿಕ್ಕಾರ ಹಾಕಿ ಗಲಾಟೆ ಮಾಡಿದರು.

8. ಗೂಂಡಾ ಪ್ರವೃತ್ತಿಯು ಕ್ರಮೇಣ ಕನ್ನಡ ಚಳವಳಿ ಹೆಸರಲ್ಲಿ ತಲೆಯೆತ್ತುತ್ತಿದೆ ಎಂದು ಕನ್ನಡ ಶಕ್ತಿ ಕೇಂದ್ರವು ಪತ್ರಿಕಾಗೋಷ್ಠಿಯಲ್ಲಿ ಪ್ರತಿಪಾದಿಸಿ ತನ್ನ ಆತಂಕವನ್ನು ವ್ಯಕ್ತಪಡಿಸಿತು. ನಾನು ಹಿಂದೆ ಹೇಳಿದ ಸಭೆಗಳಲ್ಲಿ ಗಲಾಟೆ ಮಾಡಿದವರನ್ನು "ಉಗ್ರಗಾಮಿ"ಗಳೆಂದು ಪತ್ರಿಕಾಗೋಷ್ಠಿಯಲ್ಲಿ ಕರೆಯಲಿಲ್ಲ. ಉಗ್ರಗಾಮಿಗಳಿಗೆ, ನಮ್ಮ ದೃಷ್ಟಿಯಿಂದ ತಪ್ಪೋ ಸರಿಯೋ, ಒಂದು ಧ್ಯೇಯವಿರುತ್ತದೆ (ಆ ಧ್ಯೇಯ ತಪ್ಪು

ಮಾರ್ಗದರ್ಶನದಿಂದ ಬಂದಿರಬಹುದು). ಸಭ್ಯವಲ್ಲದ ನಡವಳಿಕೆಯವರನ್ನೆಲ್ಲ ಉಗ್ರಗಾಮಿಗಳೆಂದು ಕರೆಯಲು ಸಾಧ್ಯವೇ ಇಲ್ಲ. ಅವರಿಗೆ ಅಂತಹ ಧ್ಯೇಯವೂ ಇರುವಂತೆ ಕಾಣದು, ಹಾಗೆ ಕರೆದರೆ ಅವರನ್ನು ಮೇಲೇರಿಸಿದಂತೆಯೂ ಆಗುತ್ತಿತ್ತು. ಆದರೂ ಪತ್ರಿಕೆಯೊಂದು ನಾನು ಅವರನ್ನು ಉಗ್ರಗಾಮಿಗಳೆಂದು ಕರೆದೆನೆಂದು ವರದಿ ಮಾಡಿದ ಎರಡು ಮೂರು ದಿನಗಳಲ್ಲೇ ಯಾರೋ ಮಧ್ಯಾಹ್ನ ಫೋನ್ ಮಾಡಿ "ನಿಮ್ಮ ಮನೆಗೆ ಹನ್ನೆರಡು ಜನ ವ್ಯಾನಿನಲ್ಲಿ ಹೊರಟಿದ್ದೇವೆ. ಏಕೆ ಬರುತ್ತಿದ್ದೇವೆ ಎಂದು ಬಂದು ಹೇಳುತ್ತಿದ್ದೇವೆ" ಎಂದು ಬೆದರಿಸಿದರು. ಪೋಲೀಸರಿಗೆ ತಿಳಿಸಿದೆ. ಹೊಯ್ಸಳ ವ್ಯಾನ್ ಮನೆಯ ಮುಂದೆ ಬಂದು ನಿಂತಿತು. ದೂರವಾಣಿ ಮಾಡಿದವರು ಆ ಹೊಯ್ಸಳ ವ್ಯಾನ್ ನೋಡಿಕೊಂಡು ಹಾಗೇ ಹೋದರೋ ಅಥವಾ ಬರಲೇ ಇಲ್ಲವೋ ತಿಳಿಯದು. ನಾನು ಸಭೆಯಲ್ಲಿದ್ದಾಗ ಯಾರೋ ಧಿಕ್ಕಾರ ಹಾಕುವುದು ಬೇರೆ, ಮನೆಗೆ ಬಂದು ಅವರೇ ಧಿಕ್ಕಾರ ಹಾಕುವುದೋ ಕಲ್ಲು ತೂರುವುದೋ ಬೇರೆ. ವೈಯಕ್ತಿಕವಾಗಿ ನನಗೆ ಭಯದ ಪ್ರಶ್ನೆ ಎಂಬುದೇ ಇಲ್ಲ. ಆದರೆ ಮನೆಯಲ್ಲಿ ನಾನಲ್ಲದೆ ನನ್ನನ್ನು ನಂಬಿದವರೂ ಉಂಟು ತಾನೇ! ಅಕ್ಕ ಪಕ್ಕದ ಮನೆಗಳವರು ಏನಂದುಕೊಳ್ಳುವರೋ ಎಂಬ ಅಳುಕು ಅವರಿಗೆ ಇರುವುದು ಸ್ವಾಭಾವಿಕ ತಾನೇ ! ಈ ಸೂಕ್ಷ್ಮಗಳೆಲ್ಲ ಆ ಗಲಾಟೆ ಜನಕ್ಕೆ ತಿಳಿಯುವುದು ಕಷ್ಟ.

9. ಸಾರ್ವಜನಿಕ ಉದ್ಯಮದಿಂದ ತೆಗೆದು ಹಾಕಲ್ಪಟ್ಟ ವ್ಯಕ್ತಿಯೊಬ್ಬರು ರಾತ್ರಿ ಸುಮಾರು ಒಂದು ಗಂಟೆಗೆ ದೂರವಾಣಿ ಮಾಡಿ, ನನ್ನ ಜೊತೆ ಸ್ವಲ್ಪ ಕಠಿಣ ರೀತಿಯಲ್ಲಿ ಮಾತನಾಡಲು ಪ್ರಯತ್ನಿಸಿದರು. ಎರಡೂ ಬಾರಿಯೂ ದೂರವಾಣಿ ತೆಗೆದಿಟ್ಟು ಮಲಗಿಕೊಂಡೆ.

10. ಆ ತಂಡಕ್ಕೆ ಸೇರಿದ "ಜಾಣಗೆರೆ ಪತ್ರಿಕೆ"(16.6.99) ನನ್ನ ಬಗ್ಗೆ ಪ್ರಕಟಿಸಿರುವ ಲೇಖನದಲ್ಲಿ ಬಳಸಿರುವ ಭಾಷೆಯನ್ನು ಓದುಗರ ಗಮನಕ್ಕೆ ತಂದಿದ್ದೇನೆ. (ಅನುಬಂಧ 3 ನೋಡಿ).

11. ಮೈಸೂರಲ್ಲಿ ನಾನು ಸರ್ವಜ್ಞ ತಿರುವಳ್ಳುವರ್ ಪ್ರತಿಮೆಗಳ ಬಗ್ಗೆ ಹೇಳಿದ್ದು "ಸಂಜೆವಾಣಿ" ಪತ್ರಿಕೆಯಲ್ಲಿ ವರದಿಯಾದ ಮಾರನೆಯ ದಿನವೇ ಅದರ ಬಗ್ಗೆ ಸ್ಪಷ್ಟನೆಯನ್ನು ಫ್ಯಾಕ್ಸ್‌ನಲ್ಲಿ ಕಳಿಸಿ ಮನೆಗೆ ಬಂದ ಸ್ವಲ್ಪ ಹೊತ್ತಿನಲ್ಲಿ ತನ್ನ ಹೆಸರು ಹೇಳಿಕೊಂಡ ಒಬ್ಬ ವ್ಯಕ್ತಿ ಫೋನ್ ಮಾಡಿ "ನೀವು ಹಾಗೇ ಹೇಳಿದ್ದೀರಿ. ನಿಮ್ಮ ಮನೆಗೆ ಬರುವ ಪ್ರೋಗ್ರಾಂ ಹಾಕಿ ಕೊಳ್ಳುತ್ತೇವೆ" ಎಂದರು. ಹೀಗಿದೆ ಗೂಂಡಾಗಿರಿ. ನನ್ನ ಸ್ಪಷ್ಟೀಕರಣ ಪ್ರಕಟವಾಯ್ತು. ಆ ವ್ಯಕ್ತಿಯ "ಪ್ರೋಗ್ರಾಂ" ನಡೆಯಲಿಲ್ಲ.

12. ತೀರ ನೋವಿನ ಸಂಗತಿಯೊಂದಿದೆ. ಅದನ್ನೂ ನೇರವಾಗಿ ಹೇಳಿಬಿಡುತ್ತೇನೆ. ಡಾ. ರಾಜಕುಮಾರ್ ಅವರಿಗೆ ಕನ್ನಡ ವಿಶ್ವವಿದ್ಯಾಲಯವು "ನಾಡೋಜ" ಎಂಬ ತನ್ನ ಅತ್ಯುನ್ನತ ಪ್ರಶಸ್ತಿಯನ್ನು ನೀಡಿ ಗೌರವಿಸಿತು. ಕೆಲವು ವರ್ಷಗಳ ಹಿಂದೆ ನಾನು ಆ ವಿಶ್ವವಿದ್ಯಾಲಯದ "ನುಡಿಹಬ್ಬ"ದಲ್ಲಿ ಘಟಿಕೋತ್ಸವ ಭಾಷಣ ಮಾಡಿದೆ. ಆ ದಿನ

"ನಾಡೋಜ" ಪ್ರಶಸ್ತಿ ಸ್ವೀಕರಿಸಿದ ಡಾ. ಶಿವರಾಮ ಕಾರಂತರು ಭಾಷಣ ಮಾಡಲಿಲ್ಲ. ಅದರ ಅರ್ಥ, ಅಲ್ಲಿ ಅದಕ್ಕೆ ಅವಕಾಶ ಇರಲಿಲ್ಲ. ಪದ್ಧತಿ ಹಾಗಿದೆ. ಡಾ. ರಾಜಕುಮಾರ್ "ನಾಡೋಜ" ಪ್ರಶಸ್ತಿ ಸ್ವೀಕರಿಸಿದ ಮೇಲೆ ಅಲ್ಲಿಗೆ ಸಹಜವಾಗಿಯೇ ಹೆಚ್ಚಿನ ಸಂಖ್ಯೆಯಲ್ಲಿ ಬಂದಿದ್ದ ಜನ ಅವರು ಹಾಡಬೇಕೆಂದು ಒತ್ತಾಯಿಸಿದಾಗ, ಕುಲಾಧಿಪತಿಗಳಾಗಿದ್ದ ಜೆ.ಎಚ್. ಪಟೇಲರು ಅದಕ್ಕ ಅವಕಾಶ ಕೊಡದಿದ್ದುದು ಸರಿಯಾಗಿಯೇ ಇತ್ತು. "ಘಟಿಕೋತ್ಸವ"ಕ್ಕೂ "ರಾಜಕುಮಾರ್ ನೈಟ್"ಗೂ ವ್ಯತ್ಯಾಸವಿದೆಯಲ್ಲವೇ? ಅವರಿಗೆ ಹಾಡಲು ಅವಕಾಶ ನೀಡಲಿಲ್ಲವೆಂದು ಬೆಂಗಳೂರಲ್ಲಿ ದೊಡ್ಡ ಪ್ರಮಾಣದಲ್ಲಿ ಡಾ. ರಾಜಕುಮಾರ್ ಅಭಿಮಾನಿಗಳ ಸಂಘದವರು ಪ್ರತಿಭಟಿಸಿದ್ದು ಮಾತ್ರವೇ ಅಲ್ಲದೆ, ಅಂದು ಗಲಾಟೆ ಮಾಡಿ ಸಾರ್ವಜನಿಕ ಶಾಂತಿಯನ್ನು ಹಾಳುಮಾಡಿದರೆಂದು ವರದಿಯಾಯಿತು. ನನಗೆ ನೋವುಂಟು ಮಾಡಿದ್ದು ಅದು ಮಾತ್ರವೇ ಅಲ್ಲ. ಅದಕ್ಕಿಂತ ಹೆಚ್ಚು ನೋವಾದ್ದು ಇದರಿಂದ. ತಮಗೆ ಕನ್ನಡ ವಿಶ್ವವಿದ್ಯಾಲಯ ಅಪಮಾನ ಮಾಡಿಲ್ಲವೆಂದೂ, ಆ ಅಪಮಾನ ಆಯ್ತು ಎಂಬ ಕಾರಣವಿಟ್ಟುಕೊಂಡು ಸಾರ್ವಜನಿಕವಾಗಿ ಪ್ರತಿಭಟಿಸುವುದು ಸರಿಯಲ್ಲವೆಂದೂ ಡಾ.ರಾಜಕುಮಾರ್ ಹೇಳಿಕೆ ಕೊಡಲಿಲ್ಲ. ಈ ಬಗ್ಗೆ ನಾನು ಪತ್ರಿಕೆಗಳಿಗೆ ಪತ್ರ ಬರೆದು ಕಳಿಸಬೇಕೆಂದಿರುವಾಗ ಕೆಲವು ಆಪ್ತಮಿತ್ರರು ಸದ್ಯಕ್ಕೆ ಅದನ್ನು ಕಳಿಸುವುದು ಬೇಡ ಎಂದು ತಡೆದರು.

ಒಬ್ಬ ಪ್ರಾಮಾಣಿಕರೂ ಬೌದ್ಧಿಕರೂ ಆದ ನನ್ನ ಗೆಳೆಯರೊಬ್ಬರು ನನ್ನ ಮುಂದೆ ಒಂದು ಮಾತು ಹೇಳಿದ್ದರು - "ರಾಜಕುಮಾರ್ ಸೇರಿದಂತೆ ಇಬ್ಬರು ಮೂವರ ಬಗ್ಗೆ ಪ್ರಾಮಾಣಿಕವಾದ ಅಭಿಪ್ರಾಯವನ್ನು ಸಾರ್ವಜನಿಕವಾಗಿ ವ್ಯಕ್ತಪಡಿಸಲು ಸಾಧ್ಯವಿಲ್ಲದಂತಹ ವಾತಾವರಣವಿದೆ. ಅವರ ಬಗ್ಗೆ ಪ್ರತಿಯಾಗಿ ಸಾರ್ವಜನಿಕವಾಗಿ ಯಾರೂ ಏನೂ ಹೇಳುವಂತಿಲ್ಲ". ಅವರ ಮಾತು ಬಹುಮಟ್ಟಿಗೆ ಸತ್ಯ. ಡಾ. ರಾಜಕುಮಾರ್ ಅವರಿಗೆ ಫಾಲ್ಕೆ ಚಿತ್ರ ಪ್ರಶಸ್ತಿ ಬಂದಾಗ ನಾವೆಲ್ಲ ಸಂತೋಷಪಟ್ಟಿದ್ದೆವು. ಅದು ಅವರ ಕ್ಷೇತ್ರ. ಅಲ್ಲಿ ಅವರು ನಿಜವಾಗಿಯೂ ಶ್ರಮಿಸಿದ್ದಾರೆ, ತಮ್ಮ ಕಲೆಯನ್ನು ಮೆರೆದಿದ್ದಾರೆ. ಆ ಕಲಾವಿದರನ್ನು ಕೆಲವರು ಕನ್ನಡದ ಅಭಿಮಾನಕ್ಕೆ ಸಂಕೇತವೆಂದು ಎತ್ತಿ ಹಿಡಿಯುತ್ತಿದ್ದಾರೆ. ಡಾ. ರಾಜಕುಮಾರ್ ಕನ್ನಡಕ್ಕಾಗಿ ಏನು ತ್ಯಾಗ ಮಾಡಿದ್ದಾರೆ ಎಂಬ ಪ್ರಶ್ನೆ ಬಹು ಜನರ ಮುಂದಿದೆ. ಸಾರ್ವಜನಿಕವಾಗಿ ಬಾಯಿಬಿಟ್ಟು ಕೇಳುವಂತಿಲ್ಲ. ಒಂದು ಮಾತು ನಿಜ. ಡಾ. ರಾಜಕುಮಾರ್ ಸಾಮಾನ್ಯರಿಗೆ, ಹಳ್ಳಿಗರಿಗೆ ಮನರಂಜನೆಯ ಸಂಕೇತವಾಗಿದ್ದರೆ, ಬೆಂಗಳೂರಿನಂತಹ ನಗರಗಳಲ್ಲಿ ಒಂದು ರೀತಿಯ ಆತಂಕದ ಸಂಕೇತವಾಗಿದ್ದಾರೆ. ಯಾವ ವ್ಯಕ್ತಿ ಕಲೆಯ, ಶಿಸ್ತಿನ, ಸದ್ಭಾವನೆಯ ಸೌಜನ್ಯದ ಸಂಕೇತವಾಗಬಹುದಿತ್ತೋ ಅದಕ್ಕಿಂತ ಬೇರೆಯೇ ಆಗಿ ಅವರ ಹೆಸರು ಪ್ರಚಲಿತವಾಗಿದೆ. (ಈಚಿನ ಬೆಳವಣಿಗೆಗಳು ಅದನ್ನು ದೃಢಪಡಿಸಿವೆ. 12.12.02)

ವೈಯಕ್ತಿಕವಾಗಿ ಅವರು ಅಂತಹ ವ್ಯಕ್ತಿ ಅಲ್ಲದಿರಬಹುದು. ಅವರ ಬಗ್ಗೆ ನನಗೆ ಗೌರವವಿದೆ (ಪು. 463). ಆದರೆ ತಮ್ಮ ಹೆಸರು ದುರುಪಯೋಗವಾಗುವುದನ್ನು ನೋಡಿಯೂ

ಕೇಳಿಯೂ ಮೌನ ವಹಿಸಿದರೆ ಆ ಬಗ್ಗೆ ಸಹಾನುಭೂತಿಯ ಮಾತಾಡುವುದು ಕಷ್ಟವಾಗುತ್ತದೆ. ಕೆಲವು ಅಂಶಗಳಲ್ಲಿ ಅವರು ತೀರ ನಿಸ್ಸಹಾಯಕರೆಂಬ ಮಾತೂ ಕೇಳಿಬಂದಿದೆ.

ಈಚಿನ ದಿನಗಳಲ್ಲಿ ಕನ್ನಡದ ಹೆಸರಲ್ಲಿ ವ್ಯಕ್ತಿಗಳ ಹೆಸರಲ್ಲಿ ಸ್ವಾರ್ಥ, ದೌರ್ಜನ್ಯ, ಬಲವಂತದಿಂದ ಹಣ ಸಂಗ್ರಹ ನಡೆಯುತ್ತಿರುವುದನ್ನು ಜನ ಬಲ್ಲರು. ಅದರಲ್ಲೂ ಹೊರಗಿನಿಂದ ಬಂದು ವ್ಯಾಪಾರ ಮಾಡುತ್ತಿರುವ ಜನರನ್ನು ಹೆದರಿಸಿ ಅವರಿಂದ ಹಣ ಪಡೆಯುವುದು ಹಲವು ಬಡಾವಣೆಗಳಲ್ಲಿ ನಡೆದಿದೆ. ಅವರೂ ಕೇಳಿದ್ದಕ್ಕಿಂತ ಒಂದೆರಡು ನೂರು ರೂಪಾಯಿ ಜಾಸ್ತಿಯೇ ಕೊಡುತ್ತಾರೆ. ಏಕೆಂದರೆ ಅವರ ವಹಿವಾಟು ವರ್ಷವಿಡೀ ನಿರಾತಂಕ. ಅನೇಕರಿಗೆ ಕನ್ನಡವೆಂಬುದು ಅವರು ಸವಾರಿ ಮಾಡುವ ಗಾಡಿಗೆ ಕುದುರೆ ಮಾತ್ರ; ಹೊರುವವರಿಲ್ಲದಿದ್ದರೂ ಕೂರುವ ಪಲ್ಲಕ್ಕಿ (ಇದು ನನ್ನ ಆತ್ಮೀಯರೊಬ್ಬರ ಉದ್ಗಾರ).

ಮೇಲಿನ ಮಾತುಗಳನ್ನು ನಾನು ಪ್ರಜ್ಞಾಪೂರ್ವಕವಾಗಿ ಬರೆದಿದ್ದೇನೆ. ಕನ್ನಡ ಶಕ್ತಿ ಕೇಂದ್ರ (ಸಾಹಿತಿಗಳ ಕಲಾವಿದರ ಬಳಗ) ಕನ್ನಡ ಚಳವಳಿಗೆ ಒಂದು ಅರ್ಥವಂತಿಕೆಯನ್ನೂ ಗಾಂಭೀರ್ಯವನ್ನೂ ತಂದುಕೊಟ್ಟಿತು. ಸಜ್ಜನಿಕೆ, ಶಿಸ್ತು, ತ್ಯಾಗ, ಪ್ರಾಮಾಣಿಕತೆ, ಚಿಂತನೆ, ಪರಾಭಿಪ್ರಾಯ ಮನ್ನಣೆ, ನಿರಂತರ ಕ್ರಿಯಾಶೀಲತೆ, ನಿರ್ಭಯ, ವಿವೇಕದ ನಿರ್ಧಾರ ಇವು ಚಳವಳಿಯ ಸಮಾನಾರ್ಥಕ ಪದಗಳೆಂದು ನಂಬಿದವರು ನಾವು, ಕನ್ನಡ ಶಕ್ತಿ ಕೇಂದ್ರದ ಕಾರ್ಯಕರ್ತರು. ಸಭೆ ಕೂಡಿಸಿ ಮೆರವಣಿಗೆ ಮಾಡಿ ಜಯಘೋಷ ಕೂಗುತ್ತಲೇ ಪೋಲೀಸ್ ವ್ಯಾನ್ ಹತ್ತುತ್ತ ಛಾಯಾಗ್ರಾಹಕರ ಮುಂದೆ ಕೈ ಬೀಸಿ ಅದೆಲ್ಲವನ್ನೂ ಸಮೂಹ ಮಾಧ್ಯಮದಲ್ಲಿ ಕಂಡು, ಹಾಗೆ ದೊರಕುವ ಪ್ರಚಾರದ ಪ್ರಾಮುಖ್ಯದ ಮೇಲೆ ಚಳವಳಿಯ ಸಾರ್ಥಕ್ಯವನ್ನು ಕನ್ನಡ ಶಕ್ತಿ ಕೇಂದ್ರವು ಅಳೆಯಲಿಲ್ಲ. ಅದೆಲ್ಲ ಅನಿವಾರ್ಯವಾಗಿದ್ದರೂ ಅದರಾಚೆ, ಒಳಗೆ ಏನು ಕೆಲಸ ನಡೆಯಬೇಕೋ ಅದು ನಡೆದಿದೆಯೇ ಇಲ್ಲವೇ, ಅದಕ್ಕಾಗಿ ನಿರಂತರ ಪ್ರಯತ್ನ ಆಗಿದೆಯೇ ಇಲ್ಲವೇ ಎಂಬುದೇ ಅದಕ್ಕೆ ಮುಖ್ಯ. ಅಂತಹ ಗಟ್ಟಿ ಫಲಗಳನ್ನು ಕನ್ನಡಕ್ಕೆ ತಂದುಕೊಟ್ಟಿದೆ. ಗಲಾಟೆ ಮಾಡುವ ಸಂಘಟನೆಗಳಿಂದ ಅದು ಆಗಿದೆಯೇ ? ಸಾರ್ವಜನಿಕರು ಹೇಳಬೇಕು. (ಕಾರ್ಖಾನೆ, ಕಚೇರಿಗಳಲ್ಲಿ ಅಲ್ಲಿನ ಕನ್ನಡ ಉದ್ಯೋಗಿಗಳು ಕಟ್ಟಿಕೊಂಡಿರುವ ಕೆಲ ಸಂಘಟನೆಗಳು ಹಲವು ಒಳ್ಳೆಯ ಕೆಲಸ ಮಾಡಿವೆ. ಮೇಲಿನ ನನ್ನ ಪ್ರಶ್ನೆ - ರಾಜ್ಯಮಟ್ಟದವು ಎಂದು ಭಾವಿಸಿಕೊಂಡಿರುವ ಕೆಲವು ಸಂಘಟನೆಗಳಿಗೆ ಸಂಬಂಧಿಸಿದ್ದು).

ನಾನೀಗ ಬಹಿರಂಗದಲ್ಲಿ ಸಕ್ರಿಯ ಕಾರ್ಯಕರ್ತನೆಂದು ಹೇಳಿಕೊಳ್ಳಲಾರೆ. ಬುಧವಾರದ ಸಭೆಗಳು ನಡೆಯುತ್ತಿಲ್ಲ. ಸಾರ್ವತ್ರಿಕ ಚುನಾವಣೆಗಳು ಬಂದು ಮೊದಲೇ ಕದಡಿದ್ದ ಇಡೀ ಸಾಮಾಜಿಕ ಬದುಕನ್ನು ಇನ್ನೂ ಕದಡಿ ಬಿಟ್ಟಿವೆ. ಕರ್ನಾಟಕಕ್ಕೊಂದು ಪ್ರಾದೇಶಿಕ ಪಕ್ಷದ ಅಗತ್ಯವಿದೆಯೆಂದು ಸಾಹಿತಿಗಳ ಕಲಾವಿದರ ಬಳಗವು ಬೆಂಗಳೂರಲ್ಲಿ ಬಹು ಹಿಂದೆ ಒಂದು ಅರ್ಥಪೂರ್ಣ ಸಭೆ ನಡೆಯಿಸಿತು. ಅದರಿಂದ ಪ್ರಚೋದನೆಗೊಂಡು "ಕನ್ನಡ ದೇಶ" ಉದಯವಾಯಿತು. ಆ ಪಕ್ಷದ ಚುನಾವಣಾ ಪ್ರಣಾಳಿಕೆ ಸಿದ್ಧಪಡಿಸಲು ಅದರ ನಾಯಕರ ಜೊತೆ ಹಲವು ಬಾರಿ ವಿಸ್ತಾರವಾಗಿ ಚರ್ಚೆ ನಡೆಸಿದೆವು. ಅದು ಅಸ್ತಿತ್ವಕ್ಕೆ

ಬಂದಾಗ ಮೊದಲೇ ಸ್ಪಷ್ಟಪಡಿಸಿದ್ದಂತೆ ಅದರಿಂದ ದೂರ ನಿಂತು ಹಾರ್ದಿಕ ಶುಭ ಕೋರಿದೆವು. ಸಕ್ರಿಯ ರಾಜಕಾರಣದಲ್ಲಿ ನಮ್ಮ ಸಂಘಟನೆ ತೊಡಗುವಂತಿರಲಿಲ್ಲ. ಆ ಪಕ್ಷ ಕರ್ನಾಟಕದಲ್ಲಿ ಬೇರೂರದಿದ್ದುದು ಒಂದು ನೋವಿನ ಸಂಗತಿ. ಈಗ ಕೆಲವು ಸಂಘಟನೆಗಳು ಸೇರಿ ಚುನಾವಣೆಗಾಗಿ ಒಂದು ಕನ್ನಡ ಪ್ರಾದೇಶಿಕ ಪಕ್ಷವನ್ನೂ ಕಟ್ಟಿವೆ. ಅದು ಯಶಸ್ವಿಯಾಗಲಿ ಎಂದು ಹಾರೈಸೋಣ. ಅದು ನನ್ನ ಪ್ರಾಮಾಣಿಕ ಹಾರೈಕೆ. ಒಳಗಿನ ಕೆಲ ವಾಸ್ತವಗಳೂ ಜನರಿಗೆ ತಿಳಿದಿವೆ. ಹಣ, ಜಾತಿ, ಸ್ವಾರ್ಥ, ಸ್ಥಾನ ಇವುಗಳ ಅಬ್ಬರವು ಚುನಾವಣೆ ಮುಗಿಯುವವರೆಗೆ ಏರುತ್ತಲೇ ಇರುತ್ತದೆ. ಅಲ್ಲಿಯವರೆಗೆ ನಾನು ಬಹುಮಟ್ಟಿಗೆ ನನ್ನ ಬರೆಯುವ ಮೇಜಿಗೆ ಅಂಟಿಕೊಂಡಿರುತ್ತೇನೆ. ಆಮೇಲೆ, ಅದರಿಂದ ಮೇಲೆದ್ದು ಹೊರಬರಬಹುದು ಅಥವಾ ನನ್ನ ಮುಂದಿನ ಸ್ಪಷ್ಟ ದಾರಿಯಲ್ಲಿ ನಿರ್ಭಯವಾಗಿ ಹೆಜ್ಜೆ ಇಡುತ್ತ ಮುನ್ನಡೆಯಬಹುದು; ನನ್ನ ಹೊರಗಿನ "ಕನ್ನಡಾಯಣ"ವು ಬೇರೆ ದಿಕ್ಕು ಹಿಡಿಯಬಹುದು.

ನಾನು ಇತರರನ್ನು ವಿಮರ್ಶಿಸಿದಂತೆ ಇತರರೂ ನನ್ನನ್ನು "ವಿಮರ್ಶಿಸಲು" ಅವಕಾಶವಿದ್ದೇ ಇರುತ್ತದೆ. ವಿಮರ್ಶೆ, ಟೀಕೆ ಇವು ಸೌಜನ್ಯವನ್ನು ಕಳೆದುಕೊಂಡ ತಕ್ಷಣ ತಮಗೆ ತಾವೇ ತಮ್ಮ ಅರ್ಥವನ್ನೂ ಕಳೆದುಕೊಳ್ಳುತ್ತವೆಯೆಂಬುದನ್ನು ನಾವೆಲ್ಲ ತಿಳಿದಿರಬೇಕು. ಒಂದು ಮಾತನ್ನು ಇಲ್ಲಿ ಸಂಕೋಚವಿಲ್ಲದೆ ಹೇಳುತ್ತೇನೆ. ನನ್ನಷ್ಟು ನೇರವಾದ ನಿಂದೆಗೆ, ಅಪಮಾನಕ್ಕೆ, ಬೆದರಿಕೆಗೆ ಗುರಿಯಾದ ವ್ಯಕ್ತಿ ಈಗಿನ ಕನ್ನಡ ಚಳವಳಿ ಕ್ಷೇತ್ರದಲ್ಲಿ ಬಹಳ ಜನ ಇರಲಾರರು (ಸಾಹಿತ್ಯ ಕ್ಷೇತ್ರದಲ್ಲಂತೂ ಖಂಡಿತ ಇಲ್ಲ). ಮೇಲೆ ಕೊಟ್ಟಿರುವ ಉದಾಹರಣೆಗಳಿಗಿಂತ ಹಿಂದೆ ಅಂತಹ ಹಲವು ಘಟನೆಗಳನ್ನು ನಾನು ಎದುರಿಸಿದ್ದೇನೆ. ಅದರ ಜೊತೆ, ಜನತೆ ನನ್ನ ಬಗ್ಗೆ ಅಷ್ಟೇ ಅಭಿಮಾನವನ್ನು ವ್ಯಕ್ತಪಡಿಸಿದೆಯೆಂಬುದನ್ನೂ ಮರೆಯದೆ ಹೇಳಬೇಕು.

ನನ್ನ ಕನ್ನಡ ನಿಷ್ಠೆ, ಜೀವನ ನಿಷ್ಠೆ ಇವು ಪ್ರಶ್ನಾತೀತ. ಭಗವಂತನ ಕರುಣಾಜಲದಲ್ಲಿ ಅದ್ದಿ ಅವನ ನಾಮಸ್ಮರಣೆಯೆಂಬ ಸಾಬೂನು ಹಾಕಿ ತಿಕ್ಕಿದ ಮನಸ್ಸನ್ನು ಹೆಪ್ಪುಗಟ್ಟಿದ ದುಃಖವೆಂಬ ಬಂಡೆಗೆ ಬಡಿದು ಬಡಿದು ಶುಭ್ರಗೊಳಿಸಿದ್ದೇನೆ. ಮತ್ತು ಈ ಮಾತನ್ನು ಹೇಳುವಾಗ ಯಾವುದೇ ಅಹಂಕಾರವೂ ನನ್ನ ಬಳಿ ಸುಳಿಯದಂತೆ ಎಚ್ಚರ ವಹಿಸಿದ್ದೇನೆ. ಈ ಮಾತುಗಳನ್ನು ಗೇಲಿಮಾಡಿಯಾರು ಎಂಬ ಭಯವಂತೂ ಹತ್ತಿರ ಸುಳಿದಿಲ್ಲ. ಹಂಪಿಯ ನನ್ನ ಕಾಲ್ನಡಗೆಯ ಚರಿತ್ರೆ ಹೊರತುಪಡಿಸಿ ಉಳಿದಂತೆ ಈ ಕೃತಿಯ ಕೊನೆಯಲ್ಲಿ ಸೂಚಿತವಾಗಿರುವ ಎಷ್ಟೋ ವಿಷಯಗಳನ್ನು ವಿಸ್ತರಿಸಿ ಅನ್ಯತ್ರ ಬರೆಯಲಿದ್ದೇನೆ. ಬರಹ ನನ್ನನ್ನು ಮುಚ್ಚಿಡುವ ಅಥವಾ ರಂಗೇರಿಸುವ ಸಾಧನ ಅಲ್ಲ. ನನ್ನ ಒಳಗನ್ನು ನಿಸ್ಸಂಕೋಚವಾಗಿ ಬಿಚ್ಚಿಡುವ, ನನ್ನನ್ನು ನಾನು ಉತ್ತಮಪಡಿಸಿಕೊಳ್ಳುವ ಸಾಧನ. ಯಾರ ಬಗ್ಗೆಯೂ ಖಂಡಿತ ದ್ವೇಷ ಇಲ್ಲ. ಅದರ ಬದಲು ಎಲ್ಲರ ಬಗ್ಗೆ ಪ್ರೀತಿಯನ್ನು ಬೆಳೆಸಿಕೊಳ್ಳುವ ನಿರಂತರ ಯತ್ನ ನನ್ನದು. ಹಾಗೆಂದು, ಎಲ್ಲರಿಗೂ ಒಳ್ಳೆಯವನಾಗಿರಬೇಕೆಂಬ ಹಂಬಲವೂ ನನ್ನದಲ್ಲ.

ನನ್ನ ದಿನದ ವಿರಾಮ ವೇಳೆಯಲ್ಲೆಲ್ಲ ಮನಸ್ಸನ್ನು ಭಗವಚ್ಚಿಂತನೆಯ ಕಡೆ ಹರಿಯ ಬಿಡುತ್ತಿದ್ದೇನೆ. ಲೋಕದ ಹಿಂದಿನ ಸತ್ಯವನ್ನು ದರ್ಶಿಸುವ ಹಂಬಲ ತೀವ್ರಗೊಳ್ಳುತ್ತಿದೆ. ಭಗವಂತನ ವಾಸಕ್ಕೆ ಅರ್ಹವಾಗಬೇಕು ನನ್ನ ಮನೋಮಂದಿರ. ಅದರತ್ತ ಇಂದಿನ ನನ್ನ ಮನೋವ್ಯಾಪಾರಗಳೆಲ್ಲ ಚಲಿಸಿವೆ ಎಂದು ಹೇಳಿ ಅಲ್ಲಿಗೆ ನಿಲ್ಲಿಸುತ್ತೇನೆ.

ಇಲ್ಲಿಗೆ "ಕನ್ನಡಾಯಣ" ಮುಗಿಯಿತು.......

* * *

## ಅನುಬಂಧ - 1 (ಪುಟ 582)

(ಕನ್ನಡ ಪ್ರಭ 23.6.85)

ಮಾನ್ಯರೆ,

ತಮ್ಮ ಪತ್ರಿಕೆಯಲ್ಲಿ ಪ್ರಕಟವಾದ ಸುದ್ದಿ (ಕನ್ನಡಪ್ರಭ 11.6.1985) ಮತ್ತು ಆ ಬಗ್ಗೆ ಡಾ. ಕಲ್ಬುರ್ಗಿಯವರು ಕೊಟ್ಟ ಸ್ಪಷ್ಟೀಕರಣದ (ಕನ್ನಡಪ್ರಭ 15.6.1985) ಹಿನ್ನೆಲೆಯಲ್ಲಿ ಇದನ್ನು ಬರೆಯುತ್ತಿದ್ದೇನೆ. ಸಂಶೋಧನೆಯಲ್ಲಿ ಕಲ್ಪನೆಗೆ ಸ್ಥಾನವಿಲ್ಲದಿರುವಾಗ ಶುದ್ಧ ಕಲ್ಪನೆಗಳ ಒಂದು ಸರಣಿಯನ್ನೇ ಕಲ್ಬುರ್ಗಿಯವರು ಸೃಷ್ಟಿಸಿರುವುದು ನನಗೆ ಬಹು ಆಶ್ಚರ್ಯವನ್ನು ತಂದಿದೆ. ಧರ್ಮಪುರದ ಬೆಟ್ಟದಲ್ಲಿ ಜಿನವಲ್ಲಭನು ಬಸದಿ ಜಿನವಿಗ್ರಹಗಳನ್ನು ಮಾಡಿಸಿದ್ದನ್ನು ಕೇಳಿ ಅಲ್ಲಿಯ ಪೂಜೋತ್ಸವಗಳಲ್ಲಿ ಭಾಗಿಗಳಾಗಲು ಹಲವು ಜೈನರೂ, ಮುನಿಗಳೂ ಬಂದರೆಂಧು ಕುರ್ಕ್ಯಾಲ ಶಾಸನದಲ್ಲಿದೆಯೇ ಹೊರತು ಜಿನವಲ್ಲಭನು ಆ ಊರಲ್ಲಿ ಜೈನರು ನೆಲಸುವಂತೆ ಮಾಡಿ ಅವರ ಸಂಖ್ಯೆ ಹೆಚ್ಚುವಂತೆ ಮಾಡಿದನೆಂದಿಲ್ಲ. ಜೈನರ ಬ್ರಾಹ್ಮಣರ ತಿಕ್ಕಾಟಗಳಾದುದಕ್ಕೆ ಎಲ್ಲಿಯೂ ಯಾವುದೇ ಸೂಚನೆಯಿಲ್ಲ. ಅಷ್ಟೇ ಅಲ್ಲ, ಪಂಪ ಭಾರತವನ್ನು ಪಂಪ ಬರೆದ ಕೆಲವು ವರ್ಷಗಳ ಬಳಿಕ ಹುಟ್ಟಿದ ಕುರ್ಕ್ಯಾಲ ಶಾಸನದಲ್ಲಿ ಆ ಊರನ್ನು "ದ್ವಿಜಾವಸಥಗ್ರಾಮ"ವೆಂದು ಕರೆದಿರುವುದನ್ನು ನೋಡಿದರೆ ದ್ವಿಜರ ಬಗ್ಗೆ ಜಿನವಲ್ಲಭನಿಗೆ ಯಾವುದೇ ಅಸಮಾಧಾನವೂ ಇರುವಂತೆ ಕಾಣಿಸುವುದಿಲ್ಲ. ಎರಡು ಮತೀಯ ಗುಂಪುಗಳಿಗೆ ಜಗಳ ಆಗಿ ಊರಿಗೆ ಊರೇ ಹಾಳಾಗಿರುವುದು ತೀರ ವಿರಳ. ಅದರಲ್ಲೂ ಸ್ವಭಾವತಃ ಅಷ್ಟೊಂದು ಉಗ್ರಗಾಮಿಗಳಲ್ಲದ (ನಾನ್ ಮಿಲಿಟೆಂಟ್) ಪಂಗಡಗಳಾದ ಜೈನರಿಗೂ ಬ್ರಾಹ್ಮಣರಿಗೂ (ಇದಕ್ಕೆ ವಿನಾಯ್ತಿಗಳಿರಬಹುದು) ಒಂದು ಊರು ಹಾಳಾಗುವಂತಹ ತಿಕ್ಕಾಟಗಳು ನಡೆದಿವೆಯೆಂಬುದನ್ನು, ಸಮೀಪದ ವೇಮುಲವಾಡದಲ್ಲೋ ಬೋಧನದಲ್ಲೋ ಇದ್ದ ಅರಿಕೇಸರಿ ಅದೆಲ್ಲವನ್ನೂ ನೋಡುತ್ತ ಕಣ್ಣು ಮುಚ್ಚಿ ಕುಳಿತಿದ್ದನೆಂಬುದನ್ನು ನಾನು ಕಲ್ಪಿಸಿಕೊಳ್ಳುವುದು ಕಷ್ಟವಾಗಿದೆ. ಆ ಎರಡು ಮತಗಳ ತಿಕ್ಕಾಟ, ಪಂಪನ ಅಕಾಲಿಕ ಮರಣ ಇವೆರಡನ್ನೂ ಒಟ್ಟಿಗೆ ಇಟ್ಟಾಗ ಬರುವ ಚಿತ್ರವೇನು ? ಪಂಪನನ್ನು ಬ್ರಾಹ್ಮಣರು ಕೊಂದರೆಂದು ಕಲ್ಬುರ್ಗಿ ಬಾಯಿಬಿಟ್ಟು ಹೇಳದಿದ್ದರೂ ಬ್ರಾಹ್ಮಣರು ಕಾರಣವಾಗಿ ಅವನು ಸತ್ತನೆಂದು ಅರ್ಥವಲ್ಲವೇ ? ಒಂದಲ್ಲ ಒಂದು ಬಗೆಯ ಕಲ್ಪನೆಗಳನ್ನು ನಿರಾಧಾರವಾಗಿ ಎಲ್ಲ ದೊಡ್ಡ ಕವಿಗಳ ವಿಷಯದಲ್ಲೂ ಮಾಡಬಹುದು, ಮತ್ತು ಅದಕ್ಕೆ ಕೊನೆಯಿಲ್ಲ. ಏಕೆಂದರೆ, ನಿಜ ಇರುವುದು ಒಂದೇ; ನಿಜವಲ್ಲದ್ದಕ್ಕೆ ಮಿತಿ ಇರುವುದಿಲ್ಲ.

ಧರ್ಮಪುರವು ಹಾಳಾಗಲು ಮತೀಯ ಘರ್ಷಣೆಗಳು ಕಾರಣವಾಗಿದ್ದರೆ ಜಿನವಲ್ಲಭ ಬಂಡೆಯಲ್ಲಿ ಕೆತ್ತಿಸಿದ ವಿಗ್ರಹಗಳೂ ಶಾಸನವೂ ಹಾಳಾಗಬೇಕಿತ್ತು. ಅವನು ಕಟ್ಟಿಸಿದ ಬಸದಿ ಹಾಳಾಗಲು ಕಾರಣ, ಆ ಪ್ರದೇಶದಲ್ಲಿ ಒಟ್ಟಾರೆ ಜೈನಧರ್ಮವು ಕ್ಷೀಣಿಸಿದ್ದೇ ಹೊರತು

ಮತೀಯ ಘರ್ಷಣೆ ಅಲ್ಲ. ಧರ್ಮಪುರ ಹಾಳಾಗಲು ಯಾವುದೋ ನೈಸರ್ಗಿಕ ಕಾರಣವಿರಬಹುದು. ಪಂಪನ ಮರಣದ ಬಳಿಕ ಎಷ್ಟೋ ಕಾಲದ ಮೇಲೆ ಊರು ಹಾಳಾಗಿದೆ; ಏಕೆಂದರೆ, ಧರ್ಮಪುರದ ಹೊಲಗಳಲ್ಲಿ ಪಂಪನಿಗಿಂತ ಬಹು ಈಚಿನ ಶಿಲ್ಪಗಳು ದೊರಕಿವೆ.

- ಎಂ. ಚಿದಾನಂದಮೂರ್ತಿ

## ಅನುಬಂಧ 2 (ಪು. 623)

(ಕನ್ನಡಪ್ರಭ 2.7.85)

**ಪೋಲೀಸ್ ಇಲಾಖೆ ಪುಂಡಾಟ ತಪ್ಪಿಸಲಿ**

ಮಾನ್ಯರೆ,

ಅನ್ಯಾಯಗಳನ್ನು ವಿಚಾರಿಸಲುಹೋದ ಯುವಕರ ಮುಂದೆ ಅನ್ಯಾಯಕ್ಕೆ ಒಳಗಾದ ಹೆಣ್ಣು ತನ್ನ ಸೀರೆ ಎತ್ತಿ ಗುಪ್ತಾಂಗವನ್ನು ತೋರಿಸಲು ಮುಂದಾದ ಸಂಗತಿಯನ್ನು ಯಾರಾದರೂ ಕೇಳಿದ್ದಾರೆಯೇ ? ಆ ಯುವಕ ಗಾಬರಿಯಾದಾಗ, "ಅಣ್ಣ, ಊರಿನ ಗಂಡು ಹೆಣ್ಣೆಲ್ಲ ಅದನ್ನು ನೋಡಿದೆ. ನೀವು ನೋಡಿ ಅದಕ್ಕೆ ಆದ ಗಾಯಗಳನ್ನು" ಎಂದು ಗೋಳಿಡುತ್ತ ಹೇಳಿದ ಹೆಣ್ಣಿನ ನೋವನ್ನು ಮಾತುಗಳಲ್ಲಿ ಹಿಡಿದಿಡಲು ಸಾಧ್ಯವೇ ? ಹೊಸಪೇಟೆಯ ಯುವ ಅಧ್ಯಾಪಕ ಇಟಗಿ ವೀರಣ್ಣ ಅಮಾನುಷ ಕಾರ್ಯವನ್ನು ವರ್ಣಿಸುತ್ತಿದ್ದಂತೆ ಹಂಪೆಯ ತುಂಗಭದ್ರಾ ತೀರದ ಸುಂದರ ಪವಿತ್ರ ವಾತಾವರಣದಲ್ಲಿ, ಸಂಜೆಯ ತಂಪು ಹೊತ್ತಿನಲ್ಲಿ ನನ್ನ ಮೈ ನಡುಗಿ ಬೆವರು ಕಿತ್ತಿತು.

ಯಲಬುರ್ಗಿ ತಾಲ್ಲೂಕಿನ ಕುದುರಿ ಮೋತಿ ಎಂಬ ದೊಡ್ಡ ಗ್ರಾಮದ ಸ್ವಾಮಿಗಳೊಬ್ಬರು ತಮ್ಮ ಮಠಕ್ಕೆ ಸಮೀಪದಲ್ಲಿದ್ದ ಇಬ್ಬರು ವಿವಾಹಿತ ಸ್ತ್ರೀಯರ ಮೇಲೆ ಕಣ್ಣು ಹಾಕಿದರು. ತಮ್ಮ ದುರಾಸೆಯನ್ನು ಇಂಗಿತಗಳ ಮೂಲಕ ವ್ಯಕ್ತಪಡಿಸಿದರು. ಪತ್ರಗಳನ್ನು ಬರೆದರು. ಗಂಡಂದಿರಿಲ್ಲದಾಗ ಮನೆಗಳಿಗೂ ನುಗ್ಗಿದರು. ಸಮಾಜಕ್ಕೆ ಬೆದರಿದ ಆ ಹೆಂಗಸರು ಎಲ್ಲವನ್ನೂ ಸಹಿಸಿಕೊಂಡಾಗ ಸ್ವಾಮಿಗಳ ಕಾಟ ಜಾಸ್ತಿಯಾಯ್ತು. ಹೆಂಗಸರು ಗಂಡಂದಿರಿಗೆ ಹೇಳಿದರು. ಅವರು ಪೋಲೀಸ್ ಇಲಾಖೆಗೆ ಕಂಪ್ಲೇಂಟ್ ಕೊಟ್ಟು ಆ ಎಲ್ಲ ಪತ್ರಗಳನ್ನು ಒಪ್ಪಿಸಿದರು. ಪೋಲೀಸರು ವಿಚಾರಿಸುವಂತೆ ಮಾಡಿದ್ದರು. ಇಷ್ಟರಿಂದ ಕ್ರುದ್ಧರಾದ ಸ್ವಾಮಿಗಳು ಊರಿನ ಜನಕ್ಕೆ ಆ ಹೆಂಗಸರೇ ತಮ್ಮನ್ನು ಪ್ರಚೋದಿಸಿದರು ಎಂಬರ್ಥ ಬರುವಂತೆ ಪ್ರಚಾರ ಮಾಡಿ ಊರು ಬಿಟ್ಟರು. ಊರಿನ ಜನ, ಅದೇ ಊರಿನ ವಿವೇಕಾನಂದ ಯುವಕ ಸಂಘದವರು ಕೆರಳಿ ಸೇಡಿಗೆ ಯೋಜನೆ ತಯಾರಿಸಿದರು. ಹಿಂದಿನ ದಿನ ಸಂಜೆ ಊರಲ್ಲೆಲ್ಲ ಡಂಗುರ ಸಾರಿಸಿ, ಮಾರನೆಯ ದಿನ ನಡೆಯುವ ಘಟನೆಯನ್ನು ನೋಡಲು ಊರಿನ ಎಲ್ಲ ಜನ ಬರಬೇಕೆಂದೂ, ಬರದಿದ್ದರೆ "ಅಲ್ಲಿ ಮಾಡುವುದನ್ನೇ ಎಲ್ಲರಿಗೂ ಮಾಡುವುದಾ"ಗಿಯೂ

ಬೆದರಿಕೆ ಹಾಕಿದರು. ಮಾರನೆಯ ದಿನ ಬೆಳಿಗ್ಗೆ ಅರ್ಧ ಜನ ಕುತೂಹಲಕ್ಕೆ ಅರ್ಧ ಜನ ಹೆದರಿ ಎಲ್ಲರೂ, ಗಂಡಸರು ಹೆಂಗಸರು ಮಕ್ಕಳು ಮುದುಕ ಮುದುಕಿಯರು ಎಲ್ಲರೂ ಘೇರಾಯಿಸಿದರು.

ಕೆಲವರು ಹೋಗಿ ಆ ಇಬ್ಬರು ಹೆಂಗಸರನ್ನು ಎಳೆದುಕೊಂಡು ಬಂದರು. ಸೀರೆ, ರವಕೆ ಎಲ್ಲ ಕಿತ್ತು ಕೆಲವೊಮ್ಮೆ ಚಂಡಿನಂತೆ ಕಾಲಲ್ಲಿ ಒದೆದರು. ಎಲ್ಲರ ಮುಂದೆ ಸ್ತನಗಳನ್ನು ಹಿಂಡಿದರು. ಗುಪ್ತಾಂಗಕ್ಕೆ ಮಣ್ಣು ತುಂಬಿ ಕೋಲಲ್ಲಿ ತಿವಿದರು. ಒಬ್ಬಳ ಗಂಡನನ್ನು ಕಟ್ಟಿ ಹಾಕಿ ಅವನ ಮುಂದೆ ಇಬ್ಬರನ್ನು ಎಂಟು ಹತ್ತು ಜನ ಮೇಲೆ ಬಿದ್ದು ಎಲ್ಲರ ಮುಂದೆ ಸಂಭೋಗಿಸಿದರು. ಒಬ್ಬ ಹೆಂಗಸು "ಆ ಸ್ವಾಮಿ ನನ್ನ ಕೂದಲನ್ನೂ ಕೀಳಲಾರ" ಎಂದಿದ್ದಳಂತೆ ಹಿಂದೆ. ಅದನ್ನು ಜ್ಞಾಪಿಸಿಕೊಂಡ ಜನ ಗುಪ್ತಾಂಗದ ಒಂದೊಂದು ಕೂದಲನ್ನೂ ಕಿತ್ತು ಹಾಕಿದರು. ಅವಾಚ್ಯ ಬೈಗುಳಗಳು. "ನಮ್ಮನ್ನು ಸಾಯಿಸಿ" ಎಂದು ಆ ಹೆಂಗಸರು ಬೇಡಿಕೊಂಡರೂ ಬಿಡಲಿಲ್ಲ. "ಅಯ್ಯೋ ಬಿಡ್ರೆಪ್ಪಾ" ಎಂದು ಗೋಗರೆದ ಒಬ್ಬ ಅಜ್ಜಿಯನ್ನು ಬೀಳುವಂತೆ ದಬ್ಬಿದರು. ಇನ್ನೂ ಏನೆಲ್ಲ ನಡೆಯಿತು. ನಮ್ಮ ಕಲ್ಪನೆಗೂ ಮೀರಿದ ಅಮಾನುಷ ಕೃತ್ಯಗಳು ಅಂದು ನಡೆದು ಹೋದವು. ವೀರಣ್ಣನವರಿಗೆ "ಇದು ನಿಜವೇ, ಊಹೆಯೇ" ಎಂದು ನಾನು ಗಾಬರಿಯಿಂದ ಹತ್ತು ಸಾರಿ ಕೇಳಬೇಕಾಯಿತು. ಗಂಗಾವತಿಯ ಪತ್ರಕರ್ತ ಹನುಮಂತಪ್ಪ ಮತ್ತು ಇತರ ಹಲವು ಜನ ಆ ಊರುಗಳಿಗೆ ಹೋಗಿ ಬಂದವರು ನನ್ನ ಮುಂದೆ ಮೇಲಿನ ಎಲ್ಲ ಘಟನೆಗಳನ್ನೂ ಖಚಿತಪಡಿಸಿದ್ದಾರೆ.

ಸ್ವಾಮಿ ಈಗ ಊರಲ್ಲಿಲ್ಲ. ಪೋಲೀಸರಿಗೆ ವಿಷಯ ಹೋಗಿದೆ. ಕುದುರಿ ಮೋತಿ ಜನ ಬಾಯಿ ಬಿಡುತ್ತಿಲ್ಲ. ಇದು ಅನ್ಯಾಯದ ಪರಮಾವಧಿ ಎಂದು ನೊಂದಿರುವ ವಿವೇಕಿಗಳೂ ಭಯದಿಂದ ಮೌನವಹಿಸಿದ್ದಾರೆ. ಆದರೂ ಆ ಊರಿನ ಕೆಲವರು ಪ್ರತ್ಯಕ್ಷದರ್ಶಿಗಳು ಮೇಲಿನ ಘಟನೆಗಳನ್ನು ಗುಟ್ಟಾಗಿ ಸಮರ್ಥಿಸಿದ್ದಾರೆ. ಬೇರೆ ಊರು ಸೇರಿರುವ ಆ ಹೆಂಗಸರು, ಅವರ ಗಂಡಂದಿರು ಬೆದರಿ ಭೂಮಿಗಿಳಿದಿದ್ದಾರೆ. ಸ್ವಾಮಿಗಳ ಹಿಂದೆ ಪ್ರಭಾವಶಾಲಿ ವ್ಯಕ್ತಿಗಳಿರುವುದರಿಂದ ಪೋಲೀಸ್ ಇಲಾಖೆ ಸಾಕಷ್ಟು ಪ್ರಮಾಣದಲ್ಲಿ ಕ್ರಮ ಕೈಗೊಂಡಿಲ್ಲವೆಂಬ ಭಾವನೆ ಜನರಲ್ಲಿದೆ. ಗಂಗಾವತಿ, ಕೊಪ್ಪಳ, ಹೊಸಪೇಟೆಗಳಲ್ಲಿ ಪ್ರತಿಭಟನಾ ಮೆರವಣಿಗೆಗಳು ನಡೆದಿವೆ. ಆ ಭಾಗದ ಊರಿನಲ್ಲಿ ಪುಂಡರು ಒಗ್ಗಟ್ಟಾಗಿರುವುದರಿಂದ ಕ್ರೌರ್ಯಕ್ಕೆ ಒಳಗಾಗಿರುವ ಹೆಂಗಸರೇ ಕಂಪ್ಲೇಂಟ್ ಕೊಡಲು ಹೆದರಿದ್ದಾರೆ. "ಕಂಪ್ಲೇಂಟು ಬಂದಿಲ್ಲ ನಾವೇನು ಮಾಡಲಿ" ಎಂದು ಪೋಲೀಸ್ ವ್ಯವಸ್ಥೆ ನುಣುಚಿಕೊಳ್ಳಲು ಅವಕಾಶವಿದೆ.

ಮೇಲಿನ ಘಟನೆಗಳ ಬಗ್ಗೆ ನನಗಾಗಿರುವ ತೀವ್ರ ವೇದನೆಯನ್ನು ಮತ್ತು ನನ್ನ ತೀವ್ರ ಪ್ರತಿಭಟನೆಯನ್ನು ವ್ಯಕ್ತಪಡಿಸುತ್ತ ಜನತೆಯ ಮುಂದೆ ಅನ್ಯಾಯಗಳ ಒಂದು ಸಂಕ್ಷಿಪ್ತ ಚಿತ್ರವನ್ನು ಇಟ್ಟಿದ್ದೇನೆ. ಉನ್ನತ ಪೋಲೀಸ್ ಅಧಿಕಾರಿಗಳು ಈ ಮಧ್ಯಯುಗದ ಬರ್ಬರ

ಪುಂಡಾಟಿಕೆಯನ್ನು ಅಡಗಿಸಲು ಮುಂದಾಗಬೇಕೆಂದೂ ಗೃಹಸಚಿವರು ಇದರತ್ತ ತೀವ್ರ ಗಮನವನ್ನು ಹರಿಸಬೇಕೆಂದೂ ನಾನು ಒತ್ತಾಯಿಸುತ್ತೇನೆ.

**– ಎಂ. ಚಿದಾನಂದಮೂರ್ತಿ**

## ಅನುಬಂಧ – 3 (ಪುಟ 660)

'ಜಾಣಗೆರೆ ಪತ್ರಿಕೆ"ಯಲ್ಲಿ (16.6.99) ಪ್ರಕಟವಾದ "ಕನ್ನಡ ಉಗ್ರಗಾಮಿಗಳನ್ನು ಸೃಷ್ಟಿಸಿದ ಉಗ್ರಗಾಮಿ" ಎಂಬ ಲೇಖನದ ಆಯ್ದ ಕೆಲವು ಭಾಗಗಳು.

"ಇತ್ತೀಚೆಗೆ ಕನ್ನಡ ಚಳವಳಿಗಾರರೆಂದು ಹೇಳಿಕೊಳ್ಳುವ ಅದರಲ್ಲೇ ಬೇಳೆ ಬೇಯಿಸಿಕೊಳ್ಳಲು ಸಂಘಟನೆ ಮತ್ತು ರಾಜ್ಯವನ್ನೇ ಒಡೆದಾಳಲು ಹುನ್ನಾರ ನಡೆಸುತ್ತಿರುವ ಚಿದಾನಂದಮೂರ್ತಿ 20ನೇ ಶತಮಾನ ಕಂಡ ಅತ್ಯಂತ ಕ್ರೂರಾತಿ ಕ್ರೂರ ಜಾತಿವಾದಿ, ಕುತಂತ್ರಗಳ ಕರ್ತೃ ಮತ್ತು ಶಕುನಿಯಾಗುತ್ತಿದ್ದಾರೆ"

"....ಇಷ್ಟೆಲ್ಲ ಆಗುತ್ತಿರುವಾಗ ಜಾತಿ ಕೀವು ತುಂಬಿಕೊಂಡ ಚಿ.ಮೂ. ಜ್ಞಾನಭಾರತಿಯಲ್ಲಿ.... ಸಾಧ್ಯವಾದಷ್ಟು ತಮ್ಮವರಿಗೆ ವರದಾನವಾಗುತ್ತಾ ವಿದ್ಯಾರ್ಥಿಗಳ ಮಧ್ಯೆ ಹಾಯಾಗಿರುತ್ತಿದ್ದ ಚಿಮೂಗೆ ಇತಿಹಾಸವೇ ಇದೆ"

"ಎಷ್ಟು ದಿನ ಕತ್ತೆ ದುಡಿದಂತೆ ದುಡಿದರೂ ಹಣ ಬರುತ್ತದೆ ಹೊರತು ದಿಶೆ ದಿಶೆಗೆ ಕೀರ್ತಿ ಹಬ್ಬುವುದಿಲ್ಲವೆಂಬ ಕಾರಣಕ್ಕೋ ಚಳವಳಿಯಿಂದ ಲಾಭ ಮಾಡಿಕೊಳ್ಳಬಹುದೆಂಬ ದುರುದ್ದೇಶಕ್ಕೋ ಅಂತೂ ಕನ್ನಡದ ಹೆಸರು ಹೇಳಿ ಗೋಕಾಕ್ ಚಳವಳಿಯಲ್ಲಿ ಪಾಲ್ಗೊಂಡರು. ಅಲ್ಲೂ ಪವಾಡ ಶಕ್ತಿಯಾಗಿ ಮೆರೆದಿದ್ದು ಡಾ. ರಾಜ್ ಹೊರತು ಈ ಚಿಮೂ ಅಲ್ಲ..."

"ಸಾಧ್ಯವಾದಷ್ಟು ತನ್ನವರು ಚೆನ್ನಾಗಿರಬೇಕು, ಉಳಿದವರು ಚಳವಳಿಗೆ ನಾಲಾಯಕ್ಕು ಅಂತ ಅಂತರ್ಯದಲ್ಲಿ ವಿಷದ ಭಾವನೆ ತುಂಬಿಕೊಂಡಿರುವುದರಿಂದಲೇ ಇಂದು ಯಾವೊಬ್ಬ ಸಂಘಟನೆಕಾರ ಪ್ರೀತಿಸುವುದಿಲ್ಲ. ಅಸಲು ಕಪಟಿ ಈ ವಾಮನನನ್ನು ಹತ್ತಿರ ಬಿಟ್ಟುಕೊಳ್ಳುವುದಿಲ್ಲ..."

"....ವಿಶ್ವವಿದ್ಯಾಲಯದಲ್ಲಿದ್ದಷ್ಟು ಕಾಲ ಜಾತಿ ವಿಷಬೀಜ ಎಳೆ ಹೃದಯದಲ್ಲಿ ಬಿತ್ತಿಯಾದ ಮೇಲೆ ಹೊರ ಬಂದು ಮನೆಯೊಳಗೆ ಕುಳಿತಿರಲಾರದೆ, ಎಂ.ಎಲ್.ಸಿ.ಯೋ ವಿ.ಸಿ.ಯೋ ಆಗಬೇಕೆಂಬ ಕೆಟ್ಟಾಸೆ ಇಟ್ಟುಕೊಂಡು ಚಳುವಳಿಗೆ ಧುಮುಕಿದ್ದು ಗುಟ್ಟಾದ ಸಂಗತಿಯಲ್ಲ..."

"ಉಂಡ ಮನೆಗೆ ಎರಡು ಬಗೆಯುವುದರಲ್ಲಿ ಎತ್ತಿದ ಕೈ.... ಚಿಮೂ"

"ಕನ್ನಡ ಶಕ್ತಿ ಕೇಂದ್ರ ಹೋಗಿ ಸ್ವಜಾತಿ ಕೃಪಾಪೋಷಿತ ಶಕ್ತಿ (ನಾಟಕ) ಕೇಂದ್ರವಾಗಿಸಿರುವ ಇದೇ ಚಿಮೂನನ್ನು ಶಕುನಿ ಎನ್ನುತ್ತೀರೋ ದುಶ್ಯಾಸನ ಎನ್ನುತ್ತೀರೋ ನಿಮಗೇ ಬಿಟ್ಟ ವಿಷಯ."

"ದುಷ್ಟ ಚಿಮೂ ಸತ್ಯ ಚರಿತ್ರೆಯ ಸಣ್ಣ ಫ್ಲಾಶ್ ಬ್ಯಾಕ್ ಇಷ್ಟು ದೊಡ್ಡದಾಗಿದೆ. ಆತನ ಕಿರಾತಕ ವಸೂಲಿಗಳನ್ನು ಹೇಳುತ್ತ ಹೋದರೆ ಬರೆಯುವವರಿಗಿರಲಿ, ಓದುಗರಿಗೂ ಮುಜುಗರವಾಗುತ್ತದೆ".

"ಪೋಲೀಸರೆಂದರೆ ಹೆದರುವ ಸ್ವಜಾತಿ ಬಾಂಧವರನ್ನು ಪ್ರೀತಿಸುವ ಪೋಲೀಸರೆಂದರೆ ಲಂಗೋಟಿಯೊಳಗೆ ಉಚ್ಚೆ ಹೊಯ್ದುಕೊಳ್ಳುವ ಈ ಅಧೀರ ಪುಕ್ಕಲು ನರಪೇತಲ ಕನ್ನಡಿಗರ ನಾಯಕ ಹೇಗಾದಾನು?"

"ಮಂಗನ ಬುದ್ಧಿಯ ಮಂಗ ಮಂತ್ರವನ್ನೆಲ್ಲ ಕೆಡಿಸಲು ಹೊರಟಂತೆ ಇದೇ ಚಿಮೂ ಮತ್ತೊಂದು ಜಾತಿ ಪಕ್ಷವಾದ ಬಿಜೆಪಿಯ ಸೆರಗಿನ ಸುತ್ತ ಸುಂದರ ಸ್ವಪ್ನ ಕಾಣುತ್ತ ಜೊಲ್ಲು ಸುರಿಸುತ್ತ ಅವರು ಹೇಳಿದ್ದೇ ಸರಿ ಅನ್ನುತ್ತ ಓರಾಟ ಮಾಡುತ್ತಿರುವುದು ನೋಡಿದವರಿಗೆ ವಾಕರಿಗೆ ಬರುತ್ತದೆ.... ಈಗಾಗಲೆ ಬಿಜೆಪಿ ಗುಟುರು ಹಾಕಿರುವುದರಿಂದ ಈತ ಅವರ ಬಾಲ ಹಿಡುಕನಾದ್ದರಿಂದ ಹುಬ್ಬಳ್ಳಿಗೆ ರೈಲ್ವೆ ವಲಯ ಹೋಗಲೇಬೇಕು ಅಂತ ಹೆಂಡ ಕುಡಿದ ಹುಂಬನಂತೆ ಚೀರಾಡತೊಡಗಿದರು.... ನಾನು ರಾಜಕೀಯ ವ್ಯಕ್ತಿಯಲ್ಲವೇ ಅಲ್ಲ ಅಂತ ಬೋಳೆ ಬಿಡುವ ಈ ಜಾತಿವಾದಿ ಈ ಹಿಂದೆ ಬಿಜೆಪಿಗೆ ಸೇರಿದ್ದು ಸುಳ್ಳೋ..."

"...ಈಗಲೂ ಕಾಲ ಮಿಂಚಿಲ್ಲ. ತುಂಗೆಯ ಪಾದಕ್ಕೆ ಬಿದ್ದು, ಜಾತಿ ಮತ ಸ್ವಾರ್ಥತೆಯನ್ನು ಮರೆತು ಹೊಸ ಚಿಮೂ ಆಗಲಿ. ಕಲ್ಮಷವಿಲ್ಲದ ಹೃದಯದಿಂದ ಕನ್ನಡ ಚಳವಳಿಗೆ ಮುಂದಾಳತ್ವ ವಹಿಸಲಿ..."

(ಮೇಲಿನ ಸಂಗತಿಗಳನ್ನು ಕೇವಲ ಓದುಗರ ಪರಾಮರ್ಶೆಗಾಗಿ ದಾಖಲಿಸಿದ್ದೇನೆ)

## ಅನುಬಂಧ 4

### 'ಚಿರಂಜೀವಿ' ಅಳ್ಲ

### (ಪ್ರಜಾವಾಣಿ 9.10.98)

ಮಾನ್ಯರೇ,

ಎತ್ತರದ, ಕಪ್ಪು ಬಣ್ಣದ ದೈತ್ಯ ದೇಹ - ಯಾವುದೇ ಕನ್ನಡಪರ ಮೆರವಣಿಗೆ ಆದರೂ ಗರ್ಜಿಸಿ ಘೋಷಣೆ ಹಾಕಿದೊಡನೆ ಜನ ಅವನ ಸುತ್ತಮುತ್ತ ನಿಂತು ಆ ಘೋಷಣೆಗೆ ಪ್ರತಿಸ್ಪಂದಿಸಬೇಕು. ಆ ಜನ ವರ್ತುಲದಲ್ಲಿ ಮೈ ಮೇಲೆ ಬಂದವರಂತೆ ಓಡಾಡಿ ಕುಣಿದು ಕುಪ್ಪಳಿಸಿ ಜಯಕಾರ ಹಾಕಿದಾಗ ನೆರೆದಿದ್ದವರಿಗೆಲ್ಲ ರೋಮಾಂಚನ. ಚಿರಂಜೀವಿ ಅಳ್ಲ

ಭಾಗವಹಿಸದ ಕನ್ನಡದ ಸಭೆ ಇಲ್ಲ. ಅವನು ಇಲ್ಲದ್ದು 'ಚಳವಳಿ' ಅಲ್ಲ. ಆತನ ಕನ್ನಡದ ಪ್ರೀತಿ ಅತ್ಯಂತ ನಿರ್ಮಲ.

ದೇಹ ಎಷ್ಟು ದೊಡ್ಡದೋ ಮನಸ್ಸೂ ಅಷ್ಟೇ ದೊಡ್ಡದು. ಅದು ಚಳವಳಿ ಆಗಲಿ, ಶ್ರೇಷ್ಠರಿಗೆ ಸನ್ಮಾನ ಮಾಡುವ ವಿಷಯವಾಗಲಿ, ಪ್ರತಿಷ್ಠಾನಗಳಾಗಲಿ ಅವುಗಳಿಗೆಲ್ಲ ಬಿಚ್ಚುಗೈ ಕೊಡುಗೆ ಅವನದು. ನಾನು ಚಿರಂಜೀವಿಯನ್ನು ಆಕ್ಷೇಪಿಸಿ, ಅವನು ಕನ್ನಡದ ಕೆಲಸಗಳಿಗೆ ಕೊಟ್ಟಿದ್ದ ಹಣವನ್ನು ಹಲವಾರು ಬಾರಿ ಹಿಂದಕ್ಕೆ ಕೊಡಿಸಿದ್ದುಂಟು. ಅವನು ಈಚೆಗೆ ಕಣ್ಮುಚ್ಚುವ ತನಕ, ಕನ್ನಡದ ಅಥವಾ ಯಾವುದೇ ಒಳ್ಳೆಯ ಕೆಲಸದ ಬಗ್ಗೆ ಹೇಗೋ ತನ್ನ ತಂಗಿಯರ ಬಗ್ಗೆಯೂ ಹಾಗೆಯೇ ಉದಾರವಾಗಿ ನಡೆದುಕೊಂಡ.

ಅವಿವಾಹಿತನಾಗಿದ್ದ ಅವನು ಕೇಂದ್ರ ಅಬಕಾರಿ ಇಲಾಖೆಯಲ್ಲಿ ಲೆಕ್ಕಾಧಿಕಾರಿಯಾಗಿ ನಿವೃತ್ತನಾದಾಗ ಅವನ ಸಹೋದ್ಯೋಗಿಗಳು ಅವನನ್ನು ಆತ್ಮೀಯವಾಗಿ ಬೀಳ್ಕೊಟ್ಟಿದ್ದರು. ಅವನು ಈಚೆಗೆ (4.10.98) ಕಣ್ಮುಚ್ಚಿದಾಗ ಕನ್ನಡ ಕಾರ್ಯಕರ್ತರು, ಅವನ ಬಂಧು ವರ್ಗ, ಸ್ನೇಹಿತ ವರ್ಗ ಹನಿಗಣ್ಣಿಂದ ಅವನ ಆತ್ಮವನ್ನು ಬೀಳ್ಕೊಟ್ಟರು.

ಅವನಿಲ್ಲದ ವಿಚಾರಗೋಷ್ಠಿಗಳೂ ಇಲ್ಲ. ವೇದದ ವಿಷಯವಾಗಲಿ, ಶಾಸನ ಚರಿತ್ರೆ ಆಗಲಿ, ಸಾಹಿತ್ಯ ಆಗಲಿ - ಅಥವಾ ತಮಾಷೆಗೆ ಹೇಳುವುದಾದರೆ ಅಣು ವಿಜ್ಞಾನವೇ ಆಗಲಿ, ಅವನು ಎದ್ದು ನಿಂತು ಪ್ರಶ್ನೆ ಕೇಳಲೇಬೇಕು. ಅವನನ್ನು ಬಲ್ಲ ಯಾರೂ ಅವನನ್ನು ತಪ್ಪು ತಿಳಿಯುತ್ತಿರಲಿಲ್ಲ. ನಿರಂತರ ಅಧ್ಯಯನ ಶೀಲನಾಗಿದ್ದು ನನಗೆ ಬಹಳ ಆತ್ಮೀಯನಾಗಿದ್ದ. ಅವನ ವಿನಯ ನನಗೆ ಎಷ್ಟೋ ಬಾರಿ ಮುಜುಗರ ಉಂಟು ಮಾಡುತ್ತಿತ್ತು. ಆದರೆ ಆ ಅವನ ಗುಣ ತೀರ ಸ್ವಾಭಾವಿಕವಾಗಿತ್ತು ಅವನಿಗೆ. ಅವನದು ಅಕೃತಕ ಅತಿ ವಿನಯವಾಗಿತ್ತು.

ಒಂದೆರಡು ಕ್ಷೇತ್ರ ಕಾರ್ಯಗಳಲ್ಲಿ ಅವನು ನನ್ನ ಜೊತೆ ಬಂದು ನನ್ನ ಸಂಶೋಧನೆಯಲ್ಲಿ ಸಹಕರಿಸಿದ್ದೂ ಉಂಟು. ಅವನ ಬಗ್ಗೆ ಎಲ್ಲರಿಗೂ ಇದ್ದ, ಈಗಲೂ ಇರುವ ಭಾವನೆ ಒಂದೇ - ಅವನೊಬ್ಬ ನಿಷ್ಕಳಂಕ ವ್ಯಕ್ತಿತ್ವದ ಅಪೂರ್ವ ಪ್ರಾಮಾಣಿಕ. ಅವನು ಕಣ್ಮುಚ್ಚಿದ ನಿಜ. ಆದರೆ ಅವನು ಬೆಂಗಳೂರಿನ ಎಲ್ಲ ಕನ್ನಡ ಪರ ಗಣ್ಯರ ಕಾರ್ಯಕರ್ತರ ಹೃದಯದಲ್ಲಿ ಅಕ್ಷರಶಃ 'ಚಿರಂಜೀವಿ'.



ಕನ್ನಡದಲ್ಲಿ ಸಂಶೋಧನೆ ಮಾಡುವವರಿಗೆ ಮಾರ್ಗದರ್ಶಕರೆಂದರೆ ಅವರಿಗಿಂತ ಹಿಂದಿನ ಶ್ರೇಷ್ಠ ಸಂಶೋಧಕರು, ಅವರು ನಡೆದ ದಾರಿ, ಅವರ ನಿಕಟ ಸಂಪರ್ಕ, ಅವರ ಬರಹಗಳು. ಆದರೂ ಕಿರಿಯ ಸಂಶೋಧಕರಿಗೆ ಒಂದು ರೀತಿಯ ಕೈಪಿಡಿಯಂತೆ ಅವರಿಗೆ ಸಂಶೋಧನ ಪ್ರಕ್ರಿಯೆಯ ಪರಿಚಯವನ್ನು ಮಾಡಿಕೊಡುತ್ತದೆ ಈ ಸಂಪುಟದ "ಸಂಶೋಧನೆ" ಹೆಸರಿನ ಕಿರುಕೃತಿ. "ಪಾಂಡಿತ್ಯರಸ"ವು ಸಂಶೋಧಕನೊಬ್ಬ ಹೊಸತನ್ನು ಕಂಡಾಗ ಆಗುವ ಅನುಭವಗಳನ್ನು ಹಿಡಿದಿಡುವ ಒಂದು ಅಪೂರ್ವ ಕೃತಿ; ಯುವ ಸಂಶೋಧಕರಿಗೆ ಉತ್ಸಾಹವನ್ನು ತುಂಬಬಲ್ಲ ಕೃತಿ. ಅಂತೆಯೇ, ಯುವ ಸಂಶೋಧಕರು ಆಸ್ಥೆ ವಹಿಸಿ ಸಂಶೋಧನೆಯಲ್ಲಿ ತಮ್ಮನ್ನು ತಾವು ತೊಡಗಿಸಿಕೊಳ್ಳಲು ಬೆಳೆಸಿಕೊಳ್ಳಬೇಕಾದ ಮನೋಧರ್ಮದಂತಹ ಪ್ರಮುಖ ವಿಷಯದ ಕಡೆ ಗಮನ ಸೆಳೆಯುವ ಹಲವು ಬರಹಗಳು ಇಲ್ಲಿವೆ. ಕನ್ನಡದಲ್ಲಿ ನಡೆದಿರುವ ಸಂಶೋಧನೆಯ ಸಮೀಕ್ಷೆಗಳೂ ಇಲ್ಲಿವೆ. ಸಂಶೋಧನೆಯು ಒಂದು ವಿಷಯವನ್ನು ಒಳಗಿನಿಂದ ಹೊರಗಿನಿಂದ ಬೆಳಗಿಸುವ ಶೋಧನ ದೀಪವಾಗಿ ಪರಿಣಮಿಸುವ ಬರಹಗಳೂ ಇಲ್ಲುಂಟು.

ಲೇಖಕನ ಸ್ವಕೀಯ ಬದುಕಿಗೆ ಸಂಬಂಧಿಸಿದ ಬರಹಗಳೂ ಒಂದು ರೀತಿಯಲ್ಲಿ ಶೋಧನಾತ್ಮಕಗಳೇ. ಅವು ಒಳಗಿನ ಶೋಧಕ್ಕೆ ಸಂಬಂಧಿಸಿವೆ, ಅಷ್ಟೇ. "ಕನ್ನಡಾಯಣ"ವು ಸಿದ್ಧಗಂಗೆಯಿಂದ ಹಂಪಿಯವರೆಗೆ ಲೇಖಕನು ಕೈಗೊಂಡ ಕಾಲ್ನಡಿಗೆಯ ಪ್ರವಾಸ ಕಥನದಂತೆಯೇ ಕರ್ನಾಟಕ ಗ್ರಾಮೀಣ ಜನರ ಒಂದು ಸಂಕ್ಷಿಪ್ತ ಕೋಶವೂ ಆಗಿದೆ; ಕನ್ನಡ ಚಳವಳಿಯ ಒಂದು ಸಂಕ್ಷಿಪ್ತ ಚರಿತ್ರೆಯೂ ಆಗಿದೆ. ಸಾಂಸ್ಕೃತಿಕ ಸಂಶೋಧಕರು ಕ್ಷೇತ್ರಕಾರ್ಯ ಕೈಗೊಳ್ಳಲು ಹಲವು ಉಪಯುಕ್ತ ಸೂಚನೆಗಳನ್ನು ಅಲ್ಲಿಂದ ಪಡೆಯಬಹುದು.

ಸಾಹಿತ್ಯ, ಶಾಸನ, ಜಾನಪದ, ಸಂಸ್ಕೃತಿ, ಭಾಷೆ, ಸಮಾಜ ವಿಜ್ಞಾನ ಇತ್ಯಾದಿ ತೋರಿಕೆಯ ಭಿನ್ನ ಭಿನ್ನ ಶಿಸ್ತುಗಳ ಸಂಶೋಧನ ಕ್ಷೇತ್ರಕ್ಕೆ ಪ್ರವೇಶ ಬಯಸುವ ಯುವ ಸಂಶೋಧಕರಂತೆಯೇ ಸಂಶೋಧನ ಕ್ಷೇತ್ರದಲ್ಲಿ ಕೆಲಸ ಮಾಡುತ್ತಿರುವವರೂ ಅಧ್ಯಯನ ಮಾಡಬೇಕಾದ ಅಪೂರ್ವ ಕೃತಿಯಲ್ಲದೆ ಕನ್ನಡ ಸಂಶೋಧನೆಯ ಅಡಿಪಾಯವನ್ನು ಗಟ್ಟಿಗೊಳಿಸುವ ಬರಹಗಳ ಸಂಕಲನವೂ ಇದಾಗಿದೆ.



ಸಪ್ನ ಬುಕ್ ಹೌಸ್
ತುಂಗಾ ಕಾಂಪ್ಲೆಕ್ಸ್, ಗಾಂಧಿನಗರ
ಬೆಂಗಳೂರು- 560 009, ದೂರವಾಣಿ: 2266088
ISBN: 81-280-0202-3
ಬೆಲೆ ರೂ. 400/-